# ಬಸವತತ್ತ್ವ ರತ್ನಾಕರ

ಗ್ರಂಥಕಾರರು:
ವ್ಯಾಕರಣತೀರ್ಥ
ಚಂದ್ರಶೇಖರಶಾಸ್ತ್ರೀ ಹಿರೇಮಠ

ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ೧೮
1961



ಶ್ರೀ ಭಗವಾನ್ ಬಸವೇಶ್ವರರು

# ಬಸವತತ್ವ ರತ್ನಾಕರ

ಗ್ರಂಥಕಾರರು :

ವ್ಯಾಕರಣತೀರ್ಥ, ವಿದ್ಯಾಲಂಕಾರ, ವಿದ್ಯಾವಾಗೀಶ

**ಚಂದ್ರಶೇಖರಶಾಸ್ತ್ರೀ ಹಿರೇಮಠ**

ಹೊಳಲು (ಬಳ್ಳಾರಿ)

ಪ್ರಿನ್ಸಿಪಾಲ್, ಶಂಕರ ಸಂಸ್ಕೃತ ಕಾಲೇಜ್, ಯಾದಗಿರಿ (ಕಲಬುರ್ಗಿ)

ಪ್ರಕಾಶಕರು :

**ಶಿ. ವಿಶ್ವನಾಥ ಮತ್ತು ಶಿ. ರಾಜಶೇಖರ ಹಿರೇಮಠ ಸಹೋದರರು**

ಹೊಳಲು (ಬಳ್ಳಾರಿ)

ಪ್ರಕಾಶನ ಸ್ಥಳ:

**ನಂ. ೨೨೮/೩, ಥಿಯೋಬಾಲ್ಡ್ ರೋಡ್, ಮೈಸೂರು**



ಶ್ರೀಮನ್ ಮಹೀಶೂರ ಮಹಾರಾಜರೂ
ಮೈಸೂರು ಸಂಸ್ಥಾನದ ರಾಜ್ಯಪಾಲರೂ ಆದ
ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು

## ಅರ್ಪಣ ಪತ್ರಿಕೆ

**ಮೈಸೂರು ರಾಜ್ಯಪಾಲರಾದ**
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್‌ರವರಲ್ಲಿರತಕ್ಕ ಅವರ**
**ಪಂಚಶೀಲಗಳಿಗಾಗಿ ಈ ಗ್ರಂಥವನ್ನು ಅವರಿಗೆ**
**ಕೃತಜ್ಞತೆಯಿಂದ ಸಮರ್ಪಿಸುತ್ತೇನೆ.**

### ಅವರ ಪಂಚಶೀಲಗಳು

೧. ಒಂದು ದೇಶದಲ್ಲಿ ಒಂದೇ ಸರಕಾರ ಇರುವುದು ಯೋಗ್ಯವೆಂದು ಸ್ವಾತಂತ್ರ್ಯಸಿಕ್ಕ ನಂತರ ಎಲ್ಲರಿಗಿಂತಲೂ ಮೊದಲು ಉದ್ಘೋಷಿಸಿ ಕೃತಿಯಲ್ಲಿ ತಂದ ಅವರ ಅಸಾಧಾರಣ ಭಾರತನಿಷ್ಠೆ.

೨. ಜಯಚಾಮರಾಜ ಗ್ರಂಥಮಾಲೆಯನ್ನು ಹೊರಡಿಸಿ ಕನ್ನಡ ಸಾಹಿತ್ಯಕ್ಕೆ ಮಾಡಿದ ಅವರ ಮಹತ್ವದ ಸೇವೆ.

೩. ನಮ್ಮ ಪ್ರಾಚೀನ ಪರಂಪರೆಯಿಂದ ಬಂದ ಸಂಸ್ಕೃತಿಗೆ ಅನುಗುಣವಾದ ಅವರ ಉಪಮಾತೀತ ದೇವತಾ ಭಕ್ತಿ.

೪. ಜಗತ್ತಿನ ಬೇರೆ ಬೇರೆ ವಿಶ್ವವಿದ್ಯಾನಿಲಯಗಳಲ್ಲಿ ಅನೇಕ ಭಾಷಣಗಳನ್ನು ಮಾಡುತ್ತ, ಭಾರತೀಯರ ಸಂಸ್ಕೃತಿ ಪ್ರಸಾರ ಮಾಡುವ ಅಗಾಧ ವಿದ್ವತ್ವ.

೫. ಜಾತಿ, ಮತ, ಪಂಥಗಳ ತೊಡಕಿಗೆ ಸಿಲುಕದೆ, ಸರ್ವರ ಕೂಡ ಸಮಾನತೆಯಿಂದ ನಡೆದುಕೊಳ್ಳುವ ಅವರ ದೂರದೃಷ್ಟಿ.

ಈ ಪಂಚ ಪ್ರಕಾರಗಳಾದ ಶೀಲಗಳನ್ನಳವಡಿಸಿಕೊಂಡಿರುವುದನ್ನು ಅನುಭವ ಮಾಡಿಕೊಂಡು ಈ ಗ್ರಂಥವನ್ನು ಪ್ರೇಮದಿಂದ ಅವರಿಗೆ ಸಮರ್ಪಿಸುತ್ತೇನೆ.

**— ಸರ್ವೇ ಜನಾಃ ಸುಖಿನೋ ಭವಂತು —**

ವಿದ್ವಾಂಸರ ಕಿಂಕರ,
ವ್ಯಾಕರಣತೀರ್ಥ, ವಿದ್ಯಾಲಂಕಾರ, ವಿದ್ಯಾವಾಗೀಶ
**ಚಂದ್ರಶೇಖರಶಾಸ್ತ್ರೀ ಹಿರೇಮಠ,**
ಹೊಳಲು (ಬಳ್ಳಾರಿ ಜಿಲ್ಲಾ).

# UNIVERSITY OF MYSORE

N. A. NIKAM, M.A. (Cantab.)
Vice-Chancellor

MYSORE
*Dated 12-12-1960*

## *Introduction :* BASAVA TATTVA RATNAKARA

*Vyakaranateertha Vidyalankara* Sri. Chandrasekhara Sastry has written, what is undoubtedly, a monumental work on the life and philosophy of Basava, the great reformer of Veerasaivism. The author has profound knowledge of the original texts, in Sanskrit and Kannada, of the sources of the Indian philosophical and religious tradition. Sri. Chandrasekhara Sastry discusses, in Twenty-Eight Chapters, with much erudition, what is perhaps not available in any other treatise, the complex relation between Basava, the *Vedas*, the *Upanishads* and the *Gita*, and of other problems between Veerasaivism and other systems of thought in the Indian philosophic tradition. His writing is terse and lucid. The book enables us to get a full and comprehensive view of the place of Veerasaivism in the long and continuous history of the Indian cultural tradition. The author says that Basava did not teach a religion which was opposed to the *Vedas*. He does not think that Veerasaivas are outside the fold of the Hindu religious tradition. Basava taught a religion which was opposed to the Vedic sacrifices; he repudiated "casteism", but Sri. Chandrasekhara Sastry observes quite candidly that the followers of Basava have not lived up to his ideals by eliminating caste and casteism.

The *Vachanas* or "Sayings" of Sri. Basava have a profundity, simplicity and a universal appeal comparable to the *Upanishads*. The *Vachanas* of Basava have enriched the Kannada language and literature, bringing to the common man illumination and solace of heart through a language which he can easily understand. Their authenticity is, like the *Upanishads*, derived from a basically pure and living experience of the Divine realized in man.

The Indian religious tradition has been very greatly enriched by the contribution which the saintly order of Veerasaivism has made. The most notable document of the religious experience of man at any time or anywhere is the *Anubhava Mantapa*, which is a record of the spiritual autobiography of the saints of Veerasaivism. The *Anubhava Mantapa* has a dialogue and dialectic;

it is paradoxical; it is the record of the mystical experience of the devotees of Veerasaivism in their assent towards the God Head. It is a record of both men and women who shared in the experience of Divine realization. It is a record of their journey to the goal of what they called *Sunyasampadane*, "achievement of nothingness or emptiness". But the conception of emptiness or nothingness in the mystical experience of Veerasaiva saints is distinct from the *Sunya Vada* of Buddhism and the *Nirgunatatva* of *Advaita Vedantism*. Whatever is conceptually nothing is yet something which is positive in its experience. It is the loss of a divisive egoism in man to attain a universal individuality.

This learned book has many other Chapters which deal with the most vital and significant problems of philosophy of religion of Hinduism and Veerasaivism. It is not possible in this Introduction even to refer to them. Scholars will find a study of *The Basava Tattva Ratnakara* amply rewarding. The book is a fine example of what higher research could be. Sri. Chandrasekhara Sastry has made a real contribution to contemporary Indian Philosophical Literature. *The Basava Tattva Ratnakara* deserves to be translated into other Indian languages.

MYSORE,
*December* 12, 1960.

N. A. NIKAM,
(*Professor of Philosophy*),
*Vice-Chancellor,*
*University of Mysore.*

# ಬಸವತತ್ವ ರತ್ನಾಕರದ ಪ್ರಸ್ತಾವನೆ

## (ಆಂಗ್ಲಭಾಷಾ ಪ್ರಸ್ತಾವನೆಯ ಭಾವಾನುವಾದ)

ವ್ಯಾಕರಣತೀರ್ಥ, ವಿದ್ಯಾಲಂಕಾರ ಶ್ರೀ ಚಂದ್ರಶೇಖರ ಶಾಸ್ತ್ರಿಗಳು ರಚಿಸಿರುವ ಈ ಗ್ರಂಥವು ವೀರಶೈವ ಧರ್ಮದ ಮಹಾ ಸುಧಾರಕರಾದ ಬಸವಣ್ಣನವರ ಜೀವನ ಮತ್ತು ದರ್ಶನಗಳನ್ನು ಕುರಿತು ಒಂದು ಶಾಶ್ವತ ಸ್ಮಾರಕವೆಂಬುವುದರಲ್ಲಿ ಸಂದೇಹವೇ ಇರುವುದಿಲ್ಲ. ಗ್ರಂಥಕರ್ತರಿಗೆ ಸಂಸ್ಕೃತ ಮತ್ತು ಕನ್ನಡ ಮೂಲಗ್ರಂಥಗಳ ಹಾಗೂ ಭಾರತೀಯ ಧರ್ಮ ಮತ್ತು ದರ್ಶನಗಳ ಮೂಲನೆಲೆಗಳ ಸುಗಾಢ (ಅಗಾಧ) ಪರಿಜ್ಞಾನವಿರುತ್ತದೆ.

ಶ್ರೀ ಶಾಸ್ತ್ರಿಗಳು ಪ್ರಕೃತ ಗ್ರಂಥದಲ್ಲಿ ಇಪ್ಪತ್ತೆಂಟು ಅಧ್ಯಾಯಗಳಲ್ಲಿ ಬಹುಶಃ ಬೇರಾವ ಗ್ರಂಥದಲ್ಲಿಯೂ ಒತ್ತಟ್ಟಿಗೆ ದೊರೆಯದಿರುವ ಅನೇಕ ವಿಚಾರಗಳನ್ನು ಪ್ರತಿಪಾದಿಸಿರುತ್ತಾರೆ. ಬಸವಣ್ಣನವರ ತತ್ವಗಳಿಗೂ ವೇದ, ಉಪನಿಷತ್ತು, ಗೀತೆಗಳಲ್ಲಿ ಹೇಳಲ್ಪಟ್ಟಿರುವ ವಿಚಾರಗಳಿಗೂ ಇರುವ ಸಂಕೀರ್ಣ ಸಂಬಂಧವನ್ನಲ್ಲದೆ ಭಾರತೀಯ ದರ್ಶನಗಳಿಗೂ, ವೀರಶೈವ ದರ್ಶನಕ್ಕೂ ಇರುವ ಸಂಬಂಧವನ್ನು ಕುರಿತು ಪಾಂಡಿತ್ಯ ಪರಿಪೂರ್ಣವಾಗಿ ನಿರೂಪಿಸಿರುತ್ತಾರೆ. ಇವರ ಬರವಣಿಗೆಯಲ್ಲಿ ಬಿಗುವಿದೆ, ಸ್ಪಷ್ಟತೆ ಇದೆ.

ಸಂತತವೂ, ಸುದೀರ್ಘವೂ ಆದ ಭಾರತೀಯ ಧಾರ್ಮಿಕ ಮತ್ತು ದಾರ್ಶನಿಕ ಇತಿಹಾಸದಲ್ಲಿ ವೀರಶೈವ ಧರ್ಮದ ಸ್ಥಾನವೇನೆಂಬುದರ ಬಗ್ಗೆ ಸಮಗ್ರವೂ, ಸವಿಸ್ತಾರವೂ ಆದ ಪರಿಚಯವನ್ನು ಪಡೆಯಲು ಈ ಗ್ರಂಥದಿಂದ ನಮಗೆ ತುಂಬಾ ಸಹಾಯವಾಗುತ್ತದೆ. ಗ್ರಂಥಕರ್ತರ ಅಭಿಪ್ರಾಯದಂತೆ ಬಸವಣ್ಣನವರು ವೇದ ವಿರುದ್ಧವಾದ ಧರ್ಮವನ್ನು ಬೋಧಿಸಲಿಲ್ಲ. ವೀರಶೈವ ಧರ್ಮವು ಸನಾತನ ಹಿಂದೂ ಧರ್ಮದ ಕಕ್ಷೆಯಿಂದ ಹೊರಗಿನದೆಂಬುವ ಅಭಿಪ್ರಾಯವನ್ನು ಇವರು ಒಪ್ಪುವುದಿಲ್ಲ. ಬಸವಣ್ಣನವರು ವೇದದ ಕರ್ಮಕಾಂಡವನ್ನು ವಿರೋಧಿಸಿ ವರ್ಣವ್ಯವಸ್ಥೆಯನ್ನು ಪ್ರತಿಭಟಿಸಿದರು. ಆದರೆ ಬಸವಣ್ಣನವರ ಅನುಯಾಯಿಗಳು ವರ್ಣವ್ಯವಸ್ಥೆ ಜಾತೀಯತೆಯನ್ನು ತೊಡೆದು ಹಾಕಲಿಲ್ಲ. ಅಣ್ಣನವರ ಆದರ್ಶಗಳನ್ನು ಆಚರಣೆಗೆ ತರಲಿಲ್ಲವೆಂದು ಶಾಸ್ತ್ರಿಗಳು ಬಿಚ್ಚು ಮಾತಿನಲ್ಲಿ ನುಡಿದಿದ್ದಾರೆ.

ಬಸವಣ್ಣನವರ ವಚನಗಳನ್ನು ಅರ್ಥಸಂಪತ್ತು, ಸರಳತೆ, ಲೋಕಪ್ರಿಯತೆಗಳ ದೃಷ್ಟಿಯಿಂದ ಉಪನಿಷತ್ತುಗಳಿಗೆ ಹೋಲಿಸಬಹುದಾಗಿದೆ. ಸಾಮಾನ್ಯ ಮಾನವನಿಗೆ ಸುಲಭವಾಗಿ ತಿಳಿಯುವಂತಹ ತಿಳಿಗನ್ನಡ ಭಾಷೆಯ ಮೂಲಕ ಬೆಳಕನ್ನು ತಂದಿರುತ್ತದೆ. ಅವನ ಹೃದಯಕ್ಕೆ ಶಾಂತಿಯ ತನಿಯೆರೆದ ವಚನಕಾರ ಬಸವಣ್ಣನವರು ಕನ್ನಡಭಾಷಾ ಸಾಹಿತ್ಯಗಳ ಸಿರಿವಂತಿಕೆಯನ್ನು ಹೆಚ್ಚಿಸಿದರು. ವಚನಗಳು ಉಪನಿಷತ್ತುಗಳಂತೆ ಆತ್ಮಸಾಕ್ಷಾತ್ಕಾರವನ್ನು ಪಡೆದವರ ಪರಿಶುದ್ಧವೂ, ಜೀವಂತವೂ ಆದ ಅನುಭವದ ಅಧಿಕಾರವಾಣಿಯಿಂದ ನುಡಿದಂಥವುಗಳಾಗಿವೆ.

ವೀರಶೈವ ಶರಣರು ನೀಡಿರುವ ಈ ಹಿರಿಯ ಕಾಣಿಕೆಯಿಂದ ಭಾರತೀಯ ದಾರ್ಶನಿಕ ಸಂಪತ್ತು ತುಂಬ ಶ್ರೀಮಂತವಾಯಿತು. ಎಲ್ಲ ಕಾಲದ, ಎಲ್ಲ ದೇಶದ

ಮಹಾ ಮಾನವರ ಶಿವಾನುಭವದ ಅತ್ಯಂತ ಗಮನಾರ್ಹವೂ, ಉಲ್ಲೇಖನೀಯವೂ ಆದ ಸ್ಮಾರಕವೆಂದರೆ ವೀರಶೈವ ಶರಣರ ಆಧ್ಯಾತ್ಮಿಕ ಜೀವನದ ಅಧಿಕೃತ ಚಿತ್ರಣವಾದ ಅನುಭವ ಮಂಟಪ.

ಈ ಅನುಭವ ಮಂಟಪದಲ್ಲಿ ಧಾರ್ಮಿಕ ಚರ್ಚೆ ನಡೆಯುತ್ತಲಿತ್ತು. ತರ್ಕಬದ್ಧವಾದ ವಿಚಾರಸರಣಿಯಿತ್ತು. ಮೇಲುನೋಟಕ್ಕೆ ಪರಸ್ಪರ ವಿರುದ್ಧವೆಂದು ತೋರುವ ಆದರೆ ನಿಜವಾಗಿಯೂ ಪರಸ್ಪರ ಅವಿರುದ್ಧ ವಿಚಾರಗಳ ಸಂಗಮವಿತ್ತು. ಪರಮಾತ್ಮನ ದಿವ್ಯ ಸನ್ನಿಧಿಗೆ ಏರುತ್ತಿರುವ ವೀರಶೈವ ಶರಣರ ಶಿವಾನುಭವದ ದಿವ್ಯತೆ ಈ ಅನುಭವ ಮಂಟಪ. ಇಲ್ಲಿ ಶರಣ ಮಾರ್ಗಾನುಯಾಯಿಗಳಾದ ಸ್ತ್ರೀ-ಪುರುಷರಲ್ಲಿ ಅನುಭವದ ಅಡಿಗೆಗಳ ಕೊಡುಕೊಳೆ ನಡೆದಿತ್ತು.

ಶಿವನ ಯಾತ್ರಿಕರಾದ ಶಿವಶರಣರು ಶೂನ್ಯವನ್ನು ಬಚ್ಚಬರಿಯ ಬಯಲಲ್ಲಿ ಅರಸಿಕೊಂಡು ಹೊರಟದ್ದುದರ ದಿವ್ಯ ಮತ್ತು ಭವ್ಯ ಸ್ಮಾರಕವಿದು.

ವೀರಶೈವ ಅನುಭಾವಿಗಳ ಕಲ್ಪನೆಯು ಶೂನ್ಯ ಅಥವಾ ಬಯಲು, ಬೌದ್ಧರ ಶೂನ್ಯವಾದದಿಂದಲೂ ಅದ್ವೈತದ ನಿರ್ಗುಣತ್ವದಿಂದಲೂ ಭಿನ್ನವಾದುದು. ಕಲ್ಪನೆಗೆ ಮೀರಿದ ಶೂನ್ಯವು ಅನುಭಾವ ಲೋಕದಲ್ಲಿ ಅಸ್ತಿತ್ವವುಳ್ಳ ಪೂರ್ಣತೆ. ವಿಶ್ವವ್ಯಕ್ತಿತ್ವವನ್ನು ಸಾಧಿಸುವುದೆಂದರೆ ಶಿವನಿಂದ ಬೇರ್ಪಡಿಸುವಂತಹ ಅಹಂಕಾರವನ್ನು ನೀಗಿಕೊಳ್ಳುವುದಾಗಿರುತ್ತದೆ.

ಈ ಗ್ರಂಥದಲ್ಲಿ ಹಿಂದೂ ಧರ್ಮಕ್ಕೂ, ವೀರಶೈವ ಧರ್ಮಕ್ಕೂ ಸಂಬಂಧಿಸಿದ ಅತ್ಯಂತ ಜೀವಂತವೂ, ಅರ್ಥಪೂರ್ಣವೂ ಆದ ಅನೇಕ ಸೈದ್ಧಾಂತಿಕ ಸಮಸ್ಯೆಗಳ ಬಗ್ಗೆ ವಿದ್ವತ್ಪೂರ್ಣವಾಗಿ ವಿವೇಚನೆ ಮಾಡಲಾಗಿದೆ. ಅವುಗಳ ನಾಮನಿರ್ದೇಶನ ಮಾಡುವುದು ಇಲ್ಲಿ ಸಾಧ್ಯವಲ್ಲ. ಬಸವತತ್ವ ರತ್ನಾಕರದ ಅಭ್ಯಾಸದಿಂದ ವಿದ್ವಾಂಸರಿಗೆ ಬಹಳ ಪ್ರಯೋಜನವುಂಟು. ಉನ್ನತ ಮಟ್ಟದ ಸಂಶೋಧನೆಯೇನು? ಎಂಬುದಕ್ಕೆ ಈ ಕೃತಿಯು ಅತ್ಯುತ್ತಮವಾದ ನಿದರ್ಶನವಾಗಿರುತ್ತದೆ. ಶ್ರೀ ಚಂದ್ರಶೇಖರ ಶಾಸ್ತ್ರಿಗಳು ಆಧುನಿಕ ಭಾರತೀಯ ತತ್ವಶಾಸ್ತ್ರಸಾಹಿತ್ಯಕ್ಕೆ ಅತ್ಯಮೂಲ್ಯವಾದ ಕೊಡಿಗೆ (ಕಾಣಿಕೆ) ಯನ್ನಿತ್ತಿದ್ದಾರೆ.

ಬಸವತತ್ವ ರತ್ನಾಕರವು ಇತರ ಭಾರತೀಯ ಭಾಷೆಗಳಿಗೆ ಅನುವಾದಿಸಲ್ಪಡಲು ತಕ್ಕುದಾಗಿರುತ್ತದೆ.

ಮೈಸೂರು,
ತಾ॥ ೧೨-೧೨-೧೯೬೦.

ಎನ್. ಎ. ನಿಕ್ಕಮ್, ಎಂ.ಎ. (ಕ್ಯಾಂಟಬ್.),
ವೈಸ್-ಛಾನ್ಸಲರ್, ಮೈಸೂರು ವಿಶ್ವವಿದ್ಯಾನಿಲಯ.

# ಆತ್ಮ ನಿವೇದನೆ

ಯದಾ ಕಿಂಚಿಜ್ಞೋಽಹಮ್ ಗಜ ಇವ ಮದಾಂಧಃ ಸಮಭವಮ್ ।
ತದಾ ಸರ್ವಜ್ಞೋಽಸ್ಮೀತ್ಯಭವದವಲಿಪ್ತಂ ಮಮ ಮನಃ ॥
ಯದಾ ಕಿಂಚಿತ್ ಕಿಂಚಿತ್ ಬುಧಜನ ಸಕಾಶಾದವಗತಮ್ ।
ತದಾ ಮೂರ್ಖೋಽಸ್ಮೀತಿ ಜ್ವರ ಇವ ಮದೋ ಮೇ ವ್ಯಪಗತಃ ॥

ಅಂದರೆ ನಾನು ಅಲ್ಪವನ್ನು ತಿಳಿದವನಾಗಿದ್ದಾಗ ಆನೆಯ ಸೊಕ್ಕಿನಂತೆ ಗರ್ವವುಳ್ಳವನಾಗಿದ್ದೆನು. ಯಾವಾಗ ಪಂಡಿತರ ಸಹವಾಸದಿಂದ ಸ್ವಲ್ಪ ಸ್ವಲ್ಪ ತಿಳಿದುಕೊಂಡೆನೋ, ಆಗ ನನ್ನ ಗರ್ವವೆಲ್ಲ ಜ್ವರವು ಇಳಿಯುವಂತೆ ಇಳಿದುಹೋಯಿತು.

## ೧. ಗ್ರಂಥ ನಿರ್ಮಾಣಕ್ಕೆ ಹಿನ್ನೆಲೆ

ವೀರಶೈವ ಮತೋದ್ಧಾರಕರೂ, ಕರ್ಣಾಟಕದ ಪ್ರಖ್ಯಾತ ಧರ್ಮವೀರರೂ ಆದ ಭಗವಾನ್ ಬಸವೇಶ್ವರರ ಜಯಂತಿಯನ್ನು ಕರ್ಣಾಟಕದಲ್ಲಿ ಧಾರವಾಡದ ಮೃತ್ಯುಂಜಯ ನಗರದ ಶ್ರೀ ಶಿವಯೋಗಿ ಶ್ರೀ ಮ. ನಿ. ಮೃತ್ಯುಂಜಯ ಸ್ವಾಮಿಗಳವರು ೧೯೧೩ ನೆಯ ಇಸವಿಯಲ್ಲಿ ಪ್ರಾರಂಭಿಸಿದರು. ಹೈದರಾಬಾದ್ ಕರ್ಣಾಟಕದಲ್ಲಿ ೧೯೫೪ ನೆಯ ಇಸವಿಯ ವರೆಗೆ ಅದರ ಸುಳಿದಾಟವೇ ಇರಲಿಲ್ಲ. ಅದರ ಪ್ರಚಾರ ಮಾಡಿದವರು ಶ್ರೀ ಮ. ನಿ. ಶಾಂತವೀರ ಸ್ವಾಮಿಗಳು ಗುರುಮಠಕಲ್. ೧೯೫೪ ರಲ್ಲಿ ಧರ್ಮವೀರ ಶಂಕರಣ್ಣನವರ ೧೬ ಲಕ್ಷ ರೂಪಾಯಿಗಳ ಉದಾರ ದಾನದಿಂದ ಸ್ಥಾಪಿಸಲ್ಪಟ್ಟ ಶಂಕರ ಸಂಸ್ಕೃತ ಕಾಲೇಜಿಗೆ ಪ್ರಧಾನಾಧ್ಯಾಪಕನಾಗಿ ೧೯೫೪ರಲ್ಲಿಯೇ ಯಾದಗಿರಿಗೆ ಬಂದೆನು. ೧೯೫೬ರಲ್ಲಿ "ಭಗವಾನ್ ಬಸವೇಶ್ವರ ಜಯಂತಿ" ಎಂಬುವ ವಿಸ್ತಾರವಾದ ಒಂದು ಲೇಖನವನ್ನು ಬರೆದು ಲೋಕಮತ, ಮೈಸೂರ್ ಸ್ಟಾರ್, ಕೊಡಗು (ಮಡಿಕೇರಿ) ಪತ್ರಿಕೆಗಳಲ್ಲಿ ಪ್ರಕಟಿಸಿದೆನು. ಈ ಲೇಖನವು ತುಲನಾತ್ಮಕ ದೃಷ್ಟಿಯಿಂದಿದ್ದ ಕಾರಣ ಜನಗಳ ಮನಸ್ಸನ್ನಾಕರ್ಷಿಸಿತು. ಅನೇಕರು ನನಗೆ ಚಿಕ್ಕ ಪುಸ್ತಕವನ್ನು ಪ್ರಕಟಿಸಲು ಸೂಚನೆ ಮಾಡಿದರು.

ಜನಪ್ರಿಯವಾದ ಈ ಲೇಖನವನ್ನು ಮೈಸೂರು ಕ್ರೌನ್ ಪ್ರೆಸ್ಸಿನಲ್ಲಿ ಒಂದು ಸಾವಿರ (೧೦೦೦) ಪ್ರತಿಗಳನ್ನು ಮಾಡಿಸಿದೆನು. ಈ ಲೇಖನದ ಮಹತ್ವವನ್ನು ಚೆನ್ನಾಗಿ ಅರಿತು ಮೈಸೂರಿನಲ್ಲಿರುವ ನಂಜುಂಡಪ್ಪ ಅಂಡ್ ಸನ್ಸ್‌ರವರು ಒಂದು ಸಾವಿರ ಪ್ರತಿಗಳನ್ನು ಮಾಡಿಸಿ ಪ್ರಕಟಿಸಿದರು. ೧೯೫೭ ನೆಯ ಇಸವಿಯಲ್ಲಿ ಸರ್. ಸಿದ್ದಪ್ಪ ಕಂಬಳಿ ಇವರ ಅಧ್ಯಕ್ಷತೆಯಲ್ಲಿ ಹತ್ತನೆಯ ವೀರಶೈವ ಮಹಾಸಭೆಯು ಬೆಂಗಳೂರಿನಲ್ಲಿ ಕೂಡಿದ್ದಿತು. ಆ ಕಾಲಕ್ಕೆ ಟಿ. ಎನ್. ಚನ್ನಪ್ಪನವರು "ವೀರಶೈವ ಕರದರ್ಪಣ"ವೆಂಬುವ ಗ್ರಂಥವನ್ನು ಪ್ರಕಟಿಸಿದರು. ಈ ಲೇಖನದ ಮುಕ್ಕಾಲು ಭಾಗವನ್ನು ಅದರಲ್ಲಿ ಪ್ರಕಟಿಸಿರುತ್ತಾರೆ. ೧೯೫೮ ರಲ್ಲಿ ಇದೇ ಲೇಖನವನ್ನು ವೇ॥ ನಾಯಕಲ್ ಬಸವರಾಜ ಶಾಸ್ತ್ರಿಗಳು ಯಾದಗಿರಿಯಲ್ಲಿರುವ ತಮ್ಮ ಶಂಕರಾನಂದ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಒಂದು ಸಾವಿರ ಪ್ರತಿಗಳನ್ನು ಅಚ್ಚುಮಾಡಿಸಿದರು. ಈ ಲೇಖನವು ಜನಪ್ರಿಯವಾದ ಕಾರಣ ೪–೫ ಸಾರೆ ಅಚ್ಚಿನ ಮನೆಯನ್ನು ಕಂಡಿತು. ಆ ಕಾಲದಿಂದ ಶ್ರೀ ಬಸವೇಶ್ವರರ ಜಯಂತಿಯು ಬಂದಾಗಲೆಲ್ಲ ಲೇಖನಗಳನ್ನು ಬರೆಯುತ್ತ ಬಂದಿರುತ್ತೇನೆ.

ನಾನು ಹುಬ್ಬಳ್ಳಿಯ ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜಿನ ಮುಖ್ಯಾಧ್ಯಾಪಕನಾಗಿದ್ದಾಗ (೧೯೩೧ರಿಂದ ೧೯೩೪) ಬಸವ ಜಯಂತಿಯ ಬಗ್ಗೆ ಸಂಯುಕ್ತ ಕರ್ನಾಟಕದಲ್ಲಿ ಲೇಖನಗಳನ್ನು ಬರೆಯುತ್ತ ಬಂದಿದ್ದೇನೆ. ಅದಕ್ಕೆ ವಿಮರ್ಶಾತ್ಮಕವಾಗಿ ಸಂಪಾದಕರು ಅಗ್ರಲೇಖನಗಳನ್ನು ಅನೇಕ ಸಾರೆ ಬರೆದಿರುತ್ತಾರೆ. ಹುಬ್ಬಳ್ಳಿಯಲ್ಲಿ ನನ್ನ ನೇತೃತ್ವದ ಕೆಳಗೆ ಬಸವ ಜಯಂತಿಯ ವಿಶೇಷ ಸಂಚಿಕೆಯನ್ನು ತರುಣ ಕರ್ಣಾಟಕ ಪತ್ರಿಕೆಯ ಮುಖಾಂತರ ಶ್ರೀ ಜಗದ್ಗುರು ಮೂರು ಸಾವಿರ ಮಠದ ಖರ್ಚಿನಿಂದ ಹೊರಡಿಸಲಾಗಿದ್ದಿತು. ಮೈಸೂರು ಆಕಾಶವಾಣಿಯಲ್ಲಿ ಬಸವ ಜಯಂತಿಯ ದಿನ ೧೯೪೩ನೇ ಇಸವಿಯಲ್ಲಿ ನನಗೆ ಭಾಷಣ ಮಾಡುವ ಅವಕಾಶ ಸಿಕ್ಕಿದ್ದಿತು. ಹೀಗೆ ಬಹಳ ದಿನಗಳಿಂದ ಶ್ರೀ ಬಸವೇಶ್ವರ ಜಯಂತಿಯ ಬಗ್ಗೆ ಕಾರ್ಯಮಾಡುವ ಅವಕಾಶ ಸಿಕ್ಕಿರುತ್ತದೆ.

ನಾನು ಪುನಃ ಯಾದಗಿರಿಗೆ ಬಂದಮೇಲೆ (೧೯೩೪) ಶ್ರೀ ಬಸವೇಶ್ವರರ ಬಗ್ಗೆ ಎಲ್ಲ ವಿಷಯಗಳಿಂದ ಕೂಡಿದ ತುಲನಾತ್ಮಕ ಗ್ರಂಥವನ್ನು ಬರೆಯಬೇಕೆಂದು ನಿಶ್ಚಯ ಮಾಡಿದೆನು. ಗ್ರಂಥವು ಪೂರ್ತಿಯಾಗಿ ೧೨ ವರ್ಷಗಳ ಮೇಲೆ ಆದರೂ ಕಾರಣಾಂತರ ದಿಂದ ಅದು ಪ್ರಕಟವಾಗಲೇ ಇಲ್ಲ. ಯಾವ ಕಾರ್ಯಕ್ಕಾದರೂ ಈಶ್ವರಾನುಗ್ರಹವೂ, ಸಮಯವೂ ಬೇಕಷ್ಟೆ? ಈಗ ಇದನ್ನು ಕನ್ನಡ ನಾಡಿನ ಮಹಾಜನಗಳ ಎದುರಿಗಿಡಲಿಕ್ಕೆ ಅಭೂತಪೂರ್ವವಾದ ಸಂತೋಷವಾಗುತ್ತದೆ. ಇದು ಈಶ್ವರಾನುಗ್ರಹವೆಂದು ಭಾವಿಸಿ ದ್ದೇನೆ.

## ೨. ಬಸವಣ್ಣನವರ ಸಾಹಿತ್ಯ

ಕಳೆದ ೯೦೦ ವರ್ಷಗಳಿಂದ ಹರಿಹರ, ಪಾಲ್ಕುರಿಕೆಯ ಸೋಮನಾರಾಧ್ಯ, ಪಂಡಿತಾರಾಧ್ಯ ಮೊದಲಾದ ಕವಿಪುಂಗವರೂ, ಸ್ವಮತ ಪರಮತದ ಪಂಡಿತ ಪ್ರಕಾಂಡರೂ ಶ್ರೀ ಬಸವೇಶ್ವರರ ಬಗ್ಗೆ ಕನ್ನಡ, ತೆಲುಗು, ಸಂಸ್ಕೃತ ಮೊದಲಾದ ಭಾಷೆಗಳಲ್ಲಿ ಅನೇಕ ದಿವ್ಯರತ್ನಗಳನ್ನು ಶ್ರೀ ಬಸವ ಮಹಾರ್ಣವದಲ್ಲಿ ಮುಳುಗಿ ಹೊರಗೆ ತೆಗೆದಿದ್ದಾರೆ. ಇನ್ನೂ ಅಗಣಿತ ದಿವ್ಯರತ್ನಗಳು ಬಸವ ಸಾಗರದಲ್ಲಿ ಸಿಗುತ್ತಲಿವೆ.

ಇಲ್ಲಿಯವರೆಗೆ ಬರೆದ ಗ್ರಂಥಗಳಲ್ಲಿ ಪವಾಡಗಳೂ, ಶಿವಶರಣರ ಕಥೆಗಳೂ, ಕೆಲವು ಚರಿತ್ರಾಂಶಗಳೂ ಇರುತ್ತವೆ. ಇವುಗಳಲ್ಲಿ ಭೀಮಕವಿಯು ಬರೆದಿರುವ ಬಸವ ಪುರಾಣವು ಉಜ್ವಲ ರತ್ನವಾಗಿರುತ್ತದೆ. ಶ್ರೀ ಬಸವಣ್ಣನವರ ಬಗ್ಗೆ ಅವರ ವಿರೋಧಿಗಳೂ ಕೂಡ ಅನೇಕ ಗ್ರಂಥಗಳನ್ನು ಬರೆದಿರುತ್ತಾರೆ. ಅವುಗಳೆಲ್ಲ ದಾರಿತಪ್ಪಿದವುಗಳಾಗಿರುತ್ತವೆ. ವಿಮರ್ಶಾತ್ಮಕ ದೃಷ್ಟಿಯಿಂದ ಎಲ್ಲ ವಿಷಯಗಳನ್ನೊಳಗೊಂಡ ಒಂದು ಗ್ರಂಥವನ್ನು ಬರೆಯಬೇಕೆಂಬುವ ಮಹತ್ವಾಕಾಂಕ್ಷೆಯಿಂದ "ಬಸವತತ್ವ ರತ್ನಾಕರ" ವನ್ನು ಬರೆದಿದ್ದೇನೆ. ಇದರಲ್ಲಿಯ ಗುಣ ದೋಷಗಳನ್ನಾರಿಸುವ ಅಧಿಕಾರವು ಬುದ್ಧಿಶಾಲಿ ಗಳಾದ ವಾಚಕ ವರ್ಗಕ್ಕೆ ಸೇರಿರುತ್ತದೆ. ಅವರ ಮತವೇ ಕೊನೆಯ ನಿರ್ಣಯ ವಾಗಿರುತ್ತದೆ.

## ೩. ಬಸವೇಶ್ವರರ ಘನತೆ

ಜಗತ್ತಿನ ಧಾರ್ಮಿಕ, ಸಾಮಾಜಿಕ ಮಹಾಪುರುಷರಲ್ಲಿ ಬಸವೇಶ್ವರರಿಗೂ ಒಂದು ಸ್ಥಾನವಿದೆ ಎಂಬುವುದು ಅವರ ತತ್ವ, ನಡೆ, ನುಡಿ ಮತ್ತು ಮಾಡಿದ ಮಹತ್ಕಾರ್ಯ

ಗಳಿಂದಲೇ ಸಿದ್ಧವಾಗುತ್ತದೆ. ಇತ್ತೀಚೆಗೆ ಅವರ ಘನತೆ, ಗೌರವಗಳು ಜನತೆಗೆ ತಿಳಿಯಲಿಕ್ಕೆ ಹತ್ತಿರುವುದು ಸಂತೋಷಜನಕವಾಗಿರುತ್ತದೆ. ಅವರ ಸ್ಥಾನ ಕರ್ಣಾಟಕಕ್ಕೆ ಮಾತ್ರ ಮೀಸಲಾಗಿರದೆ ಜಗತ್ತಿನ ತುಂಬ ವ್ಯಾಪಿಸಲಿಕ್ಕೆ ಯೋಗ್ಯವಾದುದಾಗಿರುತ್ತದೆ. ಜಾಗತಿಕ ಮಹಾಪುರುಷರಲ್ಲಿ ಅವರೊಬ್ಬರಾಗಿದ್ದಾರೆ. ಆ ದೃಷ್ಟಿಯಿಂದ ಬಸವಣ್ಣನವರನ್ನು ನೋಡಬೇಕಾಗಿದೆ. ಬಸವಣ್ಣನವರು ಇಂತಹ ಘನತೆಯನ್ನು ಪಡೆಯಬೇಕಾದರೆ ಅವರ ಧರ್ಮೋದ್ಧಾರ ಕಾರ್ಯವನ್ನು ನಾವು ಆಳವಾಗಿ ಅಧ್ಯಯನ ಮಾಡಿ ಪ್ರಚಂಡ ಪ್ರಚಾರ ಮಾಡಬೇಕು. ಅನೇಕ ಜನ ಶರಣರು ಅವರಿಗೆ ಬೆಂಬಲರಾಗಿ ಅಸಾಧಾರಣ ಕಾರ್ಯವನ್ನು ಮಾಡಿದ್ದಾರೆ. ಆದರೆ ಈ ಪ್ರಚಾರವು ಜಾಗತಿಕ ದೃಷ್ಟಿಯುದಾಗಬೇಕಾಗಿದೆ. ಭಕ್ತಿಯ ಬೆಳವಣಿಗೆಗೆ ಬಸವಣ್ಣ ಕಾರುಣಿಕನೆಂದು ಒಬ್ಬರು ಹೇಳಿದರೆ ಮತ್ತೊಬ್ಬರು "ಶಿವಸಮಯಕ್ಕಾಧಾರವಾದನಯ್ಯ" ಎಂದು ಹೇಳಿದ್ದಾರೆ. ಅವರ ಆಚಾರ ವಿಚಾರಗಳು ಮಹತ್ವವಾದವುಗಳಾಗಿರುತ್ತವೆ. ಅವರು—

"ಗುರುವಿನಲ್ಲಿ ಸದಾಚಾರಿ, ಲಿಂಗದಲ್ಲಿ ಶಿವಾಚಾರಿ, ಜಂಗಮದಲ್ಲಿ
ಸಮಯಾಚಾರಿ, ಪ್ರಸಾದದಲ್ಲಿ ಬ್ರಹ್ಮಚಾರಿ, ಆಚಾರದಲ್ಲಿ ಸುವಿಚಾರಿ"

ಆಗಿದ್ದರೆಂದು ಮುಕ್ತಕಂಠದಿಂದ ಹೊಗಳಿರುತ್ತಾರೆ. ಗಾಳಿಯೂ ಗಂಧವೂ ಕೂಡಿದಂತೆ ಜಗದೊಳಗೆ ಕೀರ್ತಿ ವಾರ್ತೆಗಳನ್ನು ಪಡೆದವರು ಬಸವಣ್ಣನವರಾಗಿರುತ್ತಾರೆ.

ಕಲ್ಯಾಣ ಪಟ್ಟಣವು ಬಸವರಾಜರ ಘನತೆಯಿಂದ ಸತ್ಯದ ಸಾಗರ, ಭಕ್ತಿಯ ತವರುಮನೆ, ಮುಕ್ತಿಗೆ ಮುಖ, ಪುಣ್ಯದ ಪುಂಜ, ಅಭಿನವ ಕೈಲಾಸವಾಯಿತೆಂದು ಮಹಾನುಭಾವರು ವರ್ಣಿಸಿದ್ದಾರೆ.

ಕಲ್ಯಾಣವೆಂಬುವ ಪ್ರಣತೆಯಲ್ಲಿ ಭಕ್ತಿರಸವೆಂಬುವ ತೈಲವನ್ನೆರದು ಆಚಾರವೆಂಬುವ ಬತ್ತಿಯಲ್ಲಿ ಬಸವಣ್ಣನೆಂಬುವ ಜ್ಯೋತಿಯು ಮುಟ್ಟಲು ತೊಳಗಿ ಬೆಳಗುತ್ತಿರ್ದುದಯ್ಯಾ ಶಿವನ ಪ್ರತಾಪ, ಹೀಗೆ ಹೇಳಬೇಕಾದರೆ ಶ್ರೀ ಬಸವೇಶ್ವರರ ಘನತೆಯ ಆಳವನ್ನು ತಿಳಿಯುವುದು ಸುಲಭಸಾಧ್ಯವಲ್ಲ. ಆದ್ದರಿಂದಲೇ—

ಶಿವತಾನೀತ ಮರ್ತ್ಯಲೋಕ ಪಾವನ ಮಾಡಲು
ಗುರುತಾನೀತನೆನಗೆ ಭವರೋಗ ಛೇದಿಸಲು

ಎಂದು ಉಲ್ಲೇಖವು ದೊರೆಯುತ್ತದೆ. 'ಸಂಗನ ಬಸವಣ್ಣನು ಒಂದು ಕಲ್ಯಾಣದಲ್ಲಿ ಮನೆಯ ಕಟ್ಟಿದರೆ ಮರ್ತ್ಯಲೋಕವೆಲ್ಲವೂ ಭಕ್ತಿ ಸಾಮ್ರಾಜ್ಯವಾಯಿತು' ಎಂದು ಹೇಳಬೇಕಾದರೆ ಅವರ ಭಕ್ತಿಯ ಪ್ರಭಾವವೆಷ್ಟಿರಬೇಕು? ಆದ್ದರಿಂದಲೇ ಭಕ್ತಿಬಂಡಾರಿಗಳಾದರು.

## ೪. ಬಸವಣ್ಣನವರೂ, ಅರ್ಥಶಾಸ್ತ್ರವೂ

ಬಸವಣ್ಣನವರು ಮಾಡಿದ ಅನಂತ ಕಾರ್ಯಗಳಲ್ಲಿ ಆರ್ಥಿಕ ವ್ಯವಸ್ಥೆಯು ಸರ್ವೋತ್ಕೃಷ್ಟವಾದುದಾಗಿದೆ. ಈಗಿನ ಅರ್ಥಶಾಸ್ತ್ರಜ್ಞರ ಬುದ್ಧಿಗೆ ನಿಲುಕದಷ್ಟು ಶ್ರೇಷ್ಠವಾದುದೆಂಬುವುದು ಎಲ್ಲರೂ ಒಪ್ಪತಕ್ಕ ಮಾತಾಗಿರುತ್ತದೆ. ಆಧ್ಯಾತ್ಮವಿಚಾರದಲ್ಲಿ ಶಿವಯೋಗಿಗಳಾಗಿದ್ದಾಗ್ಯೂ ರಾಜಕಾರಣದಲ್ಲಿಯೂ, ಅರ್ಥಶಾಸ್ತ್ರ ವಿಚಾರದಲ್ಲಿಯೂ ಶ್ಲಾಘನೀಯವಾದ ಕೆಲಸ ಮಾಡಿದ್ದಾರೆ.

ಕಾರ್ಲ್‌ಮಾರ್ಕ್ಸ್‌ನಿಂದ ಲೆನಿನ್ (೧೯೨೨)ನ ವರೆಗೂ ಸಮಾಜವಾದಿಗಳಿಂದ ಬಗೆಹರಿಯದೆ ಇರತಕ್ಕ ಆರ್ಥಿಕ ಪರಿಸ್ಥಿತಿಯನ್ನು ೮೦೦ ವರ್ಷಗಳ ಕೆಳಗೆ "ಕಾಯಕವೇ ಕೈಲಾಸ"ವೆಂದು ಸಾರಿ ವೀರಶೈವರಲ್ಲಿ ಸ್ವಾವಲಂಬನೆಯ ಮಾರ್ಗವನ್ನು ಹಾಕಿ ಕೊಟ್ಟಿರುತ್ತಾರೆ.

ಚಿಂತಾಮಣಿ ವೈದ್ಯ, ಎಂ.ಎ., ಎಲ್.ಎಲ್.ಬಿ., ಪೂನಾ.—ಇವರು ತಮ್ಮ "ಡೌನ್ ಫಾಲ್ ಆಫ್ ಹಿಂದೂ ಇಂಡಿಯಾ" ಎಂಬುವ ಆಂಗ್ಲ ಭಾಷೆಯ ಗ್ರಂಥದಲ್ಲಿಯೂ ಮತ್ತು "ಹಿಂದೂ ಭಾರತ-ಕಾ ಅಂತ" ಎಂಬುವ ಹಿಂದೀ ಗ್ರಂಥದಲ್ಲಿಯೂ ಬಸವೇಶ್ವರರ ಆರ್ಥಿಕ ಪದ್ಧತಿಯನ್ನು ವಿವರಿಸುತ್ತ ಭಿಕ್ಷೆಯನ್ನು ಬೇಡಬಾರದೆಂದು ಬೋಧಿಸಿ ಕಾಯಕವೇ ಕೈಲಾಸವೆಂದು ಉದ್ಘೋಷಿಸಿ ಜನರನ್ನು ದುಡಿದೇ ಉಣ್ಣಬೇಕೆಂಬುವ ಮಾರ್ಗಕ್ಕೆ ಹಚ್ಚಿದುದರಿಂದ ಬುದ್ಧ ಮಹಾವೀರರಿಗಿಂತಲೂ ಬಸವಣ್ಣನವರೇ ಈ ವಿಷಯದಲ್ಲಿ ಅತ್ಯಂತ ಯಶಸ್ವಿಯಾಗಿರುತ್ತಾರೆಂದು ಬರೆದಿರುತ್ತಾರೆ. ಅವರ ಬರೆಹವು ಯುಕ್ತವಾದುದಾಗಿದೆ. ಬಸವಣ್ಣನವರ ಆರ್ಥಿಕ ಹಂಚಿಕೆಯಲ್ಲಿ ಶ್ರೀಮಂತ ಅಥವಾ ಬಡವರೆಂಬುವ ಪ್ರಶ್ನೆಗೆ ಅಲ್ಲಿ ಅವಕಾಶವೇ ಇರುವುದಿಲ್ಲ. ಎಲ್ಲರೂ ದುಡಿದೇ ಉಣ್ಣಬೇಕು. ದುಡಿದದ್ದರಲ್ಲಿ ಕೆಲವು ಭಾಗ ಸಮಾಜಕ್ಕೆ ಸಲ್ಲಬೇಕು. ಸಮಾಜವು ಅದನ್ನು ಸದ್ವಿನಿಯೋಗ ಮಾಡಬೇಕು.

ಆ ಕಾಲದಲ್ಲಿ ಗುರುಜಂಗಮರಾದರೂ ಪ್ರತಿನಿತ್ಯ ಧಾರ್ಮಿಕ ಬೋಧೆಯ ಕೆಲಸ ಮಾಡಿಯೇ ಪ್ರಸಾದ ಸ್ವೀಕರಿಸಬೇಕಾಗಿದ್ದಿತು. ಅದರಂತೆ ಎಲ್ಲರೂ ನಡೆದುಕೊಳ್ಳುತ್ತಿದ್ದರು. ಹಣದ ಸಂಗ್ರಹವನ್ನು ಯಾರೂ ಮಾಡಬೇಕಾಗಿದ್ದಿಲ್ಲ. ಕೂಡಿ ಹಾಕಿದರೆ ತಂಗಳವಾಗುತ್ತದೆಂಬುವ ಭಾವನೆ ಸರ್ವರಲ್ಲಿಯೂ ನೆಲೆಗೊಂಡಿದ್ದಿತು. ಕೂಡಿಟ್ಟರೆ ದುಡಿಯುವ ರೀತಿಯು ತಪ್ಪಿ ಬಡವರ ಸುಲಿಗೆಗೆ ಆರಂಭವಾಗಿ ಒಳ್ಳೇ ಮಾರ್ಗವು ತಪ್ಪಿ ಹೋಗುತ್ತದೆಂಬುವ ಭೀತಿಯು ಎಲ್ಲರಲ್ಲಿಯೂ ಉಂಟಾಗುತ್ತಿದ್ದಿತು. ಎಲ್ಲರೂ ಉದ್ಯೋಗಿಗಳಾಗಿ ಸ್ವದೇಶ ಅಥವಾ ಸ್ವಸಮಾಜದ ಕಾರ್ಯದಲ್ಲಿ ತೊಡಗಿ ವ್ರತವನ್ನು ಪಾಲಿಸುತ್ತಿದ್ದರು. ಉದ್ಯೋಗಗಳಲ್ಲಿ ಮೇಲು ಕೀಳೆಂಬ ಭಾವನೆಗೆ ಅವಕಾಶವೇ ಇರುತ್ತಿರಲಿಲ್ಲ. ಎಲ್ಲರೂ ದುಡಿದರೆ ಬಡತನವೆಲ್ಲಿಂದ ಬರುತ್ತದೆ? ಬಸವೇಶ್ವರರ ಕಾಲದ ಕಟ್ಟಳೆಗಳು ಬಹಳ ಮೇಲಾಗಿದ್ದವು. ಎಲ್ಲರೂ ನೀತಿಯಿಂದ ನಡೆದುಕೊಂಡರೆ ಅಲ್ಲಿ ತೊಂದರೆಗೆ ಅವಕಾಶವಿರುವುದಿಲ್ಲ. ಬಸವೇಶ್ವರರ ಆರ್ಥಿಕ ವ್ಯವಸ್ಥೆಗೆ ನೀತಿಯು ಮುಖ್ಯ ತಳಹದಿಯಾಗಿದ್ದಿತು. ಸ್ವೇಚ್ಛಾಚಾರಿಯಾದರೆ ಮನುಷ್ಯನಿಗೆ ನೀತಿಮಾರ್ಗದಿಂದ ಹೋಗಲು ಸಾಧ್ಯವಾಗುವುದಿಲ್ಲ. ಬಸವಣ್ಣನವರ ಆರ್ಥಿಕ ವಿವೇಚನೆಯು ಎಲ್ಲರಿಗೂ ಮಹತ್ತರವಾದ ತೃಪ್ತಿಯನ್ನುಂಟುಮಾಡಿತು. ಎಲ್ಲರೂ ಎಲ್ಲರನ್ನು ಕೂಡಿಕೊಂಡು ಹೋಗಬೇಕೆಂಬುವ ಬುದ್ಧಿಯು ಹುಟ್ಟಿದರೆ ಅದೇ ಸರ್ವೋದಯದ ಮಾರ್ಗ. ಬಸವೇಶ್ವರರ ಕಾಲದಲ್ಲಿ ಶರಣರು ಒಬ್ಬರಿಗೊಬ್ಬರು ನಡೆದುಕೊಂಡಿರುವುದನ್ನು ನೋಡಿದರೆ ಸಹಕಾರ ತತ್ವವು ಘನತೆಗೇರಿತ್ತು. ಸುಲಿಗೆಯು ಸಹಕಾರವಾಗಲೀ, ಮೇಲು ಕೀಳೆಂಬ ಭಾವನೆಯಾಗಲೀ ಇರಲಿಲ್ಲ.

ಹೀಗೆ ಬಸವಣ್ಣನವರ ನಡೆನುಡಿ ರೀತಿ ನೀತಿಗಳೆಲ್ಲ ಪ್ರತಿಯೊಬ್ಬರಿಗೂ ಮಾರ್ಗದರ್ಶಕವಾಗಿದ್ದವು. ಆದ್ದರಿಂದಲೇ ಅವರ ಆರ್ಥಿಕ ವಿಭಾಗವು ಸಮಾಜವನ್ನು ಇಬ್ಭಾಗ

ಗೊಳಿಸಲಿಲ್ಲ. ಆ ಕಾಲದ ಸಹಕಾರ, ಸಹಬಾಳ್ವೆ ಮಿಗಿಲಾದುದೂ ಮತ್ತು ಮಾದರಿಯೂ, ಅನುಕರಣೀಯವೂ ಆಗಿರುತ್ತದೆ.

### ೫. ಬಸವೇಶ್ವರರ ಕಾಲದ ಶೈವಪಂಥಗಳು

ಬಸವಣ್ಣನವರ ಕಾಲದಲ್ಲಿ ಕನ್ನಡ ನಾಡಿನಲ್ಲಿ ಅನೇಕ ಶೈವ ಪ್ರಭೇದಗಳು ಪ್ರಬಲವಾಗಿದ್ದವು. ಅವುಗಳಲ್ಲಿ ಪಾಶುಪತ, ಲಕುಲೀಶ, ಕಾಳಾಮುಖ, ಆರಾಧ್ಯ ಪಂಥಗಳೇ ಮೊದಲಾದವುಗಳು ಮುಖ್ಯವಾಗಿದ್ದವು. ಮಠಮಾನ್ಯಗಳನ್ನು ಮಾಡಿಕೊಂಡು ತಮ್ಮ ತಮ್ಮ ಪಂಥದ ತತ್ವಗಳನ್ನು ಪ್ರಚಾರ ಮಾಡುತ್ತಿದ್ದವು. ಶ್ರೀ ಬಸವಣ್ಣನವರ ಪ್ರಚಂಡ ಪ್ರಚಾರಗಳು ಅವರ ಮನಸ್ಸಿನ ಮೇಲೆ ಅತ್ಯಂತ ಪರಿಣಾಮಕಾರಿಯಾಗಿ ಅವರೆಲ್ಲರೂ ಬಸವಣ್ಣನವರ ಧರ್ಮಪ್ರಚಾರ ಕಾರ್ಯದಲ್ಲಿ ಕೂಡಿಕೊಂಡು ಹೋದ ಕಾರಣ ಅವರ ಚಟುವಟಿಕೆಯು ನಿರಂತರ ಶಾಂತಿ ಹೊಂದಿತೆಂದು ಹೇಳಬಹುದು. ಅವರ ಅನೇಕ ಮಠಗಳು ವೀರಶೈವ ಮಠಗಳಾದವು. ಆದರೆ ಆರಾಧ್ಯರೆಂಬುವುದೊಂದು ಪಂಗಡವು ಆಂಧ್ರ ಪ್ರಾಂತದಲ್ಲಿ ಇಂದಿಗೂ ಇರುತ್ತದೆ. ಅವರು ವೀರಶೈವರ ಅನೇಕ ವಿಧಿ ವಿಧಾನಗಳನ್ನು ಅನುಸರಿಸಿ ನಡೆದುಕೊಳ್ಳುತ್ತಿದ್ದರೂ ತಮ್ಮವೇ ಆದ ಕೆಲವು ಆಚರಣೆಗಳನ್ನು ನಡೆಯಿಸಿಕೊಂಡು ಬರುತ್ತಿದ್ದಾರೆ.

೧೯೩೫ನೆಯ ಇಸವಿಯಲ್ಲಿ ಹೈದರಾಬಾದಿನೊಳಗೆ ಪರಳಿ ವೈಜನಾಥ ಲಿಂಗದ ರುದ್ರಾಭಿಷೇಕದ ವಿಷಯದಲ್ಲಿ ಭಿನ್ನಾಭಿಪ್ರಾಯವಾಗಿ ಬ್ರಾಹ್ಮಣ ಲಿಂಗವಂತರೊಳಗೆ ವ್ಯಾಜ್ಯವು ನಡೆದಿದ್ದಿತು. ಈ ವ್ಯಾಜ್ಯದಲ್ಲಿ ಪರಳೀಯ ಬ್ರಾಹ್ಮಣರ ಪರವಾಗಿ ಸಾಕ್ಷಿಯನ್ನು ಹೇಳಲಿಕ್ಕೆ ಬೆಜವಾಡದಿಂದ ಪಾಕಯ್ಯ ಶಾಸ್ತ್ರಿಗಳೆಂಬುವರು ಬಂದಿದ್ದರು. ಪಾಕಯ್ಯ ಶಾಸ್ತ್ರಿಗಳು ವಕೀಲರ ಪ್ರಶ್ನೆಗಳಿಗೆ ಕೆಳಗೆ ಬರೆದಂತೆ ಉತ್ತರ ಹೇಳಿದರು. 'ನೀವು ಯಾರು? ನಾವು ಆರಾಧ್ಯರು. ಆರಾಧ್ಯರೆಂದರೆ ಯಾರು ಎಂದು ಕೇಳಿದುದಕ್ಕೆ ವೀರಶೈವರೆಂದು ಉತ್ತರ ಕೊಟ್ಟರು. ಇವರು ಯಾರು ಎಂದು ಕೇಳಿದ್ದಕ್ಕೆ ಲಿಂಗಾಯತರೆಂದು ಹೇಳಿದರು. ನಿಮ್ಮ ಗುರುಗಳು ಯಾರೆಂದು ಪ್ರಶ್ನೆ ಕೇಳಲಾಗಿ ನಮ್ಮ ಗುರುಗಳು ಪಂಚಾಚಾರ್ಯರೆಂದು ಹೇಳಿದರು. ಪಂಚಾಚಾರ್ಯರು ಈಗ ಯಾರ ಸ್ವಾಧೀನ ಇರುತ್ತಾರೆಂದು ಕೇಳಿದುದಕ್ಕೆ ಲಿಂಗಾಯತರು ನಮ್ಮಿಂದ ಕಸಿದುಕೊಂಡಿರುತ್ತಾರೆಂದು ಹೇಳಿದರು. ಈಗ ನಿಮ್ಮ ಗುರುಗಳು ಯಾರೆಂದು ಕೇಳಲಾಗಿ ಮಂಚಣ್ಣ ಪಂಡಿತಾರಾಧ್ಯರೆಂದು ಹೇಳಿದರು.' ಇದನ್ನೆಲ್ಲ ವಿಚಾರಿಸಿದರೆ ಆರಾಧ್ಯ ಪಂಗಡವು ಆಂಧ್ರ ದೇಶದಲ್ಲಿ ಇರುತ್ತದೆ. ಉಳಿದ ಪಂಗಡಗಳೆಲ್ಲ ವೀರಶೈವರಲ್ಲಿ ಕೂಡಿಹೋಗಿವೆ. ಅವುಗಳ ಅಸ್ತಿತ್ವವೇ ಇರುವುದಿಲ್ಲ.

### ೬. ಬಿಜ್ಜಳನು ಜೈನನೋ, ಶೈವನೋ

ಕರ್ಣಾಟಕದ ಇತಿಹಾಸದಲ್ಲಿ ಕಲಚೂರ್ಯ, ಸಿಂಧ, ಚಾಲುಕ್ಯ ಮೊದಲಾದ ಅನೇಕ ಬಿಜ್ಜಳರಾಗಿ ಹೋಗಿದ್ದಾರೆ. ಶ್ರೀ ಬಸವೇಶ್ವರನ ಕಾಲದ ಬಿಜ್ಜಳನು ಜೈನ ಮತಸ್ಥನೆಂಬುದಾಗಿ ಜೈನ ಗ್ರಂಥಗಳಲ್ಲಿ ಸಾಕಷ್ಟು ಪ್ರಮಾಣಗಳು ಸಿಗುತ್ತವೆ. ವೀರಶೈವ ಧರ್ಮಗ್ರಂಥಗಳಲ್ಲಿಯೂ ಬಿಜ್ಜಳನು ಜೈನನಿದ್ದನೆಂದು ಆಧಾರಗಳು ದೊರೆಯುತ್ತವೆ. ಆದರೆ ಕೆಲವರು ಬಸವಣ್ಣನವರ ಕಾಲದ ಬಿಜ್ಜಳನು ಶೈವನಿದ್ದನೆಂದು ಸಾಧಿಸುತ್ತಾರೆ. ಇದಕ್ಕೆ ಯೋಗ್ಯ ಆಧಾರಗಳಿರುವುದಿಲ್ಲ. ಡಾ॥ ನೀಲಕಂಠ ಶಾಸ್ತ್ರಿಗಳೇ ಮೊದಲಾದವರು

ಧಾರ್ಮಿಕ ಕಾರ್ಯಗಳೆಲ್ಲ ಈ ಐವರ ಹೆಸರಿನಿಂದಲೇ ನಡೆಯುತ್ತವೆ. ಇವರು ಯಾವ ಕಾಲದಲ್ಲಿ ಅವತರಿಸಿದರು? ಐದು ಜನ ಆಚಾರ್ಯರು ಏಕಕಾಲದಲ್ಲಿ ಅವತಾರ ತಾಳಿದರೋ ಬೇರೆಬೇರೆ ಕಾಲದಲ್ಲಿದ್ದರೋ ಎಂಬುವ ಬಗ್ಗೆ ನಿಶ್ಚಿತವಾದ ಇತಿಹಾಸವನ್ನು ಶೋಧಿಸಬೇಕಾಗಿದೆ. ಈ ವಿಷಯಕ್ಕೆ ಇಲ್ಲಿ ಅವಕಾಶ ಕೊಟ್ಟರೆ ನೂರಾರು ಪುಟಗಳಷ್ಟು ವಿಷಯುಗಳ ಸಾಧಕ ಬಾಧಕವನ್ನು ಸಿದ್ಧಗೊಳಿಸಬೇಕಾಗುತ್ತದೆ. ಇದಕ್ಕಾಗಿ ಪ್ರತ್ಯೇಕ ಗ್ರಂಥದ ಆವಶ್ಯಕತೆ ಇರುತ್ತದೆ. ಅದನ್ನು ಬರೆಯುಬೇಕೆಂಬ ಕುತೂಹಲವಿದೆ. ಒಂದೆರಡು ಉದಾಹರಣೆಗಳನ್ನು ಇಲ್ಲಿ ನೋಡುವ—ಶೂನ್ಯ ಸಂಪಾದನೆಯು ವೀರಶೈವ ಶರಣರ ಮಾರ್ಗವನ್ನು ತಿಳಿಸತಕ್ಕ ಶ್ರೇಷ್ಠವಾದ ಗ್ರಂಥವಾಗಿದೆ. ಮತ್ತು ಕನ್ನಡ ಸಾಹಿತ್ಯದಲ್ಲಿ ಅದು ಉಜ್ವಲ ರತ್ನವೂ ಆಗಿರುತ್ತದೆ. ಇದು ಸಾಕ್ರೆಟೀಸ್ ಮತ್ತು ಪ್ಲೇಟೋನ ಸಂವಾದ ಪದ್ಧತಿಯಂತೆ ಇರುವುದರಿಂದ ಓದುಗರ ಮನಸ್ಸನ್ನು ಆಕರ್ಷಿಸುತ್ತದೆ. ಶ್ರೀ ಬಸವಾದಿ ಪ್ರಮಥರ ತತ್ವದ ಗ್ರಂಥವೂ ಆಗಿದೆ. ಶಿವಾನುಭವ ಮಂಟಪದಿಂದ ಉದ್ಭವವಾದ ಹೊತ್ತಿಗೆಯಾಗಿರುತ್ತದೆ.

ಈ ಗ್ರಂಥದ ಆಗನೆಯ ಪುಟದಲ್ಲಿ ರಾಹೂರು ಸಿದ್ಧಲಿಂಗೇಶ್ವರ ಮಠ ಮತ್ತು ಆದವಾನಿ ಕಲ್ಮಠದ ಅಧಿಪತಿಗಳ ಪ್ರಕಟನೆ.

ಶ್ರೀ ಬಸವಣ್ಣನವರ ಬಗ್ಗೆ ಬರೆಯುತ್ತ—

> ಅಖಂಡಾದ್ವಯ, ನಿತ್ಯನಿರವಯ, ನಿಶ್ಶೂನ್ಯವಪ್ಪ ನಿಷ್ಕಲಪರಶಿವನ ಸ್ಥೂಲತತ್ವವೆ ಮರ್ತ್ಯಲೋಕದಲ್ಲಿ ಜಗಹಿತಾರ್ಥವಾಗಿ ಬಸವೇಶ್ವರನ ನಾಮದಿಂದವತರಿಸಿ ಷಡ್‌ದರ್ಶನ, ಷಟ್‌ಸಮಯುಗಳಿಂದ **ವೀರಶೈವ ಸದ್ಭಕ್ತಿ ಮುಸುಳಿಸಿರಲಾ ಶಿವಭಕ್ತಿಯನ್ನುದ್ಧರಿಸಿ** ಸರ್ವಾಚಾರವನಿಂಬುಗೊಂಡು ಕಲ್ಯಾಣ ಪಟ್ಟಣದಲ್ಲಿ ಗುರುಲಿಂಗ ಜಂಗಮ ಭಕ್ತಿಯ ಮಾಡುತ್ತ ನಿತ್ಯ ಎಂಭತ್ತೆಂಟು ಪವಾಡಗಳಂ ಜಯಿಸುತ್ತಿರ್ಪ ಬಸವೇಶ್ವರನೆಂತಾತನೆಂದಡೆ.

ಹೀಗೆಯೇ ಮುಂದೆ ಶ್ರೀ ಬಸವಣ್ಣನವರನ್ನು ಕೊಂಡಾಡಿರುತ್ತಾನೆ.

ಈ ಮೇಲೆ ಬರೆದ ಗದ್ಯದಲ್ಲಿ ಷಡ್‌ದರ್ಶನ, ಷಟ್‌ಸಮಯುಗಳಿಂದ ವೀರಶೈವ ಸದ್ಭಕ್ತಿ ಮುಸುಳಿಸಿರಲಾ ಶಿವಭಕ್ತಿಯನ್ನುದ್ಧರಿಸಿ ಎಂಬುದರಿಂದ ಶ್ರೀ ಬಸವೇಶ್ವರರು ಷಡ್‌ದರ್ಶನಗಳಿಂದ ಮುಸುಳಿಸಿ ಹೋಗಿರುವ ವೀರಶೈವ ಸದ್ಭಕ್ತಿಯನ್ನುದ್ಧರಿಸಿದರೆಂದು ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಇದೇ ಗ್ರಂಥದಲ್ಲಿ ಚನ್ನಬಸವಣ್ಣನವರ ಬಗ್ಗೆ ಬರೆಯುವಾಗಲೂ ಹೀಗೆಯೇ ಉಲ್ಲೇಖವಿರುತ್ತದೆ.

ಶಿವತತ್ವ ರತ್ನಾಕರ ಗ್ರಂಥದಲ್ಲಿ—

> ಅವತೀರ್ಯ ದಯಾವಶ್ಯೋ ಭಗವಾನ್ ಬಸವೇಶ್ವರಃ ।
> ವೀರಶೈವ ಮತಂಸ್ಥಾಪ್ಯ ಪ್ರಕಾಶನಮಕಾರಯತ್ ॥

ಮೇಲಿನ ಶ್ಲೋಕದಲ್ಲಿ ವೀರಶೈವ ಮತವನ್ನು ಸ್ಥಾಪಿಸಿ ಪ್ರಕಾಶನಗೊಳಿಸಿದರು ಎಂದಿದೆ. ಇದೇ ಗ್ರಂಥದ ಮತ್ತೊಂದು ಕಡೆಗೆ ಶ್ರೀ ಜಗದ್ಗುರು ರೇಣುಕಾಚಾರ್ಯರು ಶ್ರೀ ಜಗದ್ಗುರು ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟಿರುತ್ತಾರೆಂದು

ಬರೆದಿದ್ದಾರೆ. ಶಂಕರಾಚಾರ್ಯರು ಚಂದ್ರಮೌಳೀಶ್ವರ ಲಿಂಗ ಪಡೆದ ವಿಷಯ ಬರಬೇಕಾದರೆ ಶ್ರೀ ಶಂಕರಾಚಾರ್ಯರು ಶ್ರೀ ಬಸವೇಶ್ವರರಿಗಿಂತ ಅನೇಕ ಶತಮಾನಗಳ ಮೊದಲು ಇದ್ದವರು ಅಂದಮೇಲೆ ಇದು ಹೇಗೆ ತಾನೇ ಸಮಂಜಸವಾಗುತ್ತದೆ? ಬಸವೇಶ್ವರರು ಸ್ಥಾಪನಗೊಳಿಸಿ ಪ್ರಕಾಶಮಾಡಿದ್ದಾರೆಂಬುವುದರ ಅರ್ಥವೇನು?

ಶ್ರೀ ಬಸವೇಶ್ವರರು ಅತ್ಯದ್ಭುತವಾಗಿ ಉದ್ಧಾರ ಕಾರ್ಯಮಾಡಿ ಈಗಿನ ಸುಸ್ಥಿತಿಗೆ ತಂದಿರುವ ಕಾರಣ ಅವರೇ ಸ್ಥಾಪಕರೆಂಬುವಷ್ಟು ಪ್ರಚಲಿತವಾಗಿದೆ. ಹೀಗಾಗುವುದು ಸಹಜ. ಈಗಿನ ಕಾಲದ ಒಂದು ಉದಾಹರಣೆ ನೋಡಿದರೆ ಇದರ ವಿಷಯ ಸ್ಪಷ್ಟವಾಗುತ್ತದೆ. ಕಾಂಗ್ರೆಸ್ಸನ್ನು ಸ್ಥಾಪಿಸಿದವರು ಯಾರು? ಅದನ್ನು ಪ್ರಚಂಡ ಪ್ರಚಾರಮಾಡಿ ಕಾರ್ಯಸಿದ್ಧಿ ಮಾಡಿಕೊಂಡವರು ಗಾಂಧೀಜಿ. ಆದ್ದರಿಂದ ಲೋಕದಲ್ಲೆಲ್ಲ ಗಾಂಧೀಜಿಯವರೆಂದರೆ ಕಾಂಗ್ರೆಸ್, ಕಾಂಗ್ರೆಸ್ ಎಂದರೆ ಗಾಂಧೀಜಿಯವರದು ಎಂದೇ ಪ್ರಸಿದ್ಧಿಯಾಗಿದೆ. ೧೮೮೫ರಲ್ಲಿ ಕಾಂಗ್ರೆಸ್ ಸ್ಥಾಪಿಸಿದ ಹ್ಯೂಮ್ ಸಾಹೇಬರ ಹೆಸರು ಅಪ್ರಕಾಶಿತವಾಗಿದೆ. ಜನಗಳಲ್ಲಿ ೮೦೦ ವರ್ಷಗಳಿಂದ ಶ್ರೀ ಬಸವೇಶ್ವರರ ಕಾರ್ಯಗಳ ಅವ್ಯಾಹತ ಪ್ರಚಂಡ ಪ್ರಚಾರವಾಗಿ ಸರ್ವರ ಮನಸ್ಸನ್ನಾಕರ್ಷಿಸಿದೆ. ಉದ್ಧಾರಕರೆಂದಾಕ್ಷಣ ಅವರ ಸ್ಥಾನಮಾನಗಳಿಗೆ ಯಾವ ಚ್ಯುತಿಯೂ ಇರುವುದಿಲ್ಲ.

ಯುಗಯುಗಗಳು ಉರುಳಿ ಹೋದರೂ ಈ ಮತೋದ್ಧಾರಕರ ತತ್ವಗಳು ನಡೆ, ನುಡಿ, ರೀತಿ ನೀತಿಗಳು ಜನಸಾಮಾನ್ಯರಿಗೂ ಪ್ರಫುಲ್ಲಿತವಾಗುತ್ತ ಹೋಗತಕ್ಕವುಗಳಾಗಿವೆ. ಸಮಾಜದಲ್ಲಿ ಅಜರಾಮರವಾದ ಸ್ಥಾನವನ್ನು ಪಡೆದಿವೆ, ಪಡೆಯುತ್ತ ಹೋಗುತ್ತಲಿವೆ. ಯಾರು ಏನು ಮಾಡಿದರೂ ಅವು ಮುಂದಕ್ಕೆ ಸಾಗುತ್ತಲೇ ಹೋಗುತ್ತವೆ.

ಇದು ಬಹಳ ಮಹತ್ವದ ವಿಷಯವಾಗಿರುವುದರಿಂದ ಬಹಳ ತಾಳ್ಮೆಯಿಂದಲೂ, ನಿರ್ವಿಕಾರ ಮನಸ್ಸಿನಿಂದಲೂ, ಸಂಶೋಧನಾತ್ಮಕ ದೃಷ್ಟಿಯಿಂದಲೂ, ಪಕ್ಷಪಾತರಹಿತವಾಗಿಯೂ ವಿಚಾರಮಾಡಬೇಕಾಗುತ್ತದೆ. ಇಂತಹ ಪ್ರಾಮುಖ್ಯ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ಶುಭಲಕ್ಷಣವಾದವುಗಳಾಗಿರುವುದಿಲ್ಲ. ಭಿನ್ನಾಭಿಪ್ರಾಯಗಳು ಬಂದರೆ ಪರಸ್ಪರ ವಿಚಾರ ವಿನಿಮಯಮಾಡಿ ನಿರ್ಣಯ ಕೈಕೊಳ್ಳಬೇಕು. ಸಾಧು ಮಾರ್ಗವನ್ನನುಸರಿಸಿ ನಡೆಯುವುದೇ ಬುದ್ಧಿವಂತರ ಲಕ್ಷಣವಾಗಿರುತ್ತದೆ. ವೀರಶೈವ ಗ್ರಂಥಗಳಲ್ಲಿ ಏಕೀಕರಣವಿಲ್ಲ. ಆದರೂ ಅದನ್ನು ಸಮನ್ವಯಮಾಡುವುದು ಮುಖ್ಯ ಕಾರ್ಯವಾಗಿದೆ.

## ೧೦. ಶ್ರೀ ಬಸವೇಶ್ವರರ ಪ್ರಚಾರ

ಕನ್ನಡ ಸಾಹಿತ್ಯದಲ್ಲಿ ಶ್ರೀ ಬಸವೇಶ್ವರರ ಬಗ್ಗೆ ಅನೇಕ ಗ್ರಂಥಗಳಿರುತ್ತವೆ. ಈ ಗ್ರಂಥದ ಕೊನೆಗೆ ಕೊಟ್ಟಿರುವ ಬಸವಣ್ಣನವರೂ—ಕವಿಗಳ ಕಾಣಿಕೆಯೂ ಎಂಬುವ ಪ್ರಕರಣದಲ್ಲಿ ಪ್ರಭುದೇವರೇ ಮೊದಲುಮಾಡಿ ಇಲ್ಲಿಯವರೆಗೆ ಬೇರೆಬೇರೆ ಭಾಷೆಗಳಲ್ಲಿ ಪಂಡಿತರೂ, ತತ್ವಜ್ಞಾನಿಗಳೂ, ಕವಿಗಳೂ, ರಾಜಕಾರಣಿಗಳೇ ಮೊದಲಾದವರು ಸಾಕಷ್ಟು ಪ್ರಶಂಸಿಸಿ ಬರೆದಿರುತ್ತಾರೆ. ಇಂತಿಷ್ಟು ಕವಿಗಳಿಂದ ಹೊಗಳಿಸಿಕೊಳ್ಳುವ ಗೌರವ ಭರತಖಂಡದಲ್ಲಿ ಕೆಲವರಿಗೆ ಮಾತ್ರ ಸಿಕ್ಕಿರುತ್ತದೆಂದು ಹೇಳಬಹುದು ಅಥವಾ ಇಲ್ಲವೇ ಇಲ್ಲವೆಂದರೂ ಸಲ್ಲುವುದು. ಬಸವೇಶ್ವರರು ಜಾತಿ, ಭಾಷೆ, ಪ್ರಾಂತಾದಿಗಳಿಗೆ ಅತೀತರಿರುತ್ತಾರೆ.

ಅವರು ಸಾಮಾನ್ಯ ಜನಗಳ ಹೃದಯವನ್ನೂ ಆಕರ್ಷಿಸಿರುತ್ತಾರೆ. ೨೫ ವರ್ಷಗಳ ಹಿಂದೆ ಶಂಕರ ಸಂಸ್ಕೃತ ಕಾಲೇಜಿನ ಕಟ್ಟಡ ನಡೆದಿತ್ತು. ಗೋಡೆಯ ಮೇಲೆ ಒಬ್ಬ ಮುಸಲ್ಮಾನನು ಕಟ್ಟುತ್ತಲಿದ್ದನು. ನಾನು ಅಲ್ಲಿಯೇ ಕಟ್ಟುವವನ ಕೂಡ ಮಾತನಾಡುತ್ತ ನಿಂತಿದ್ದೆನು. ಮೇಲಿನಿಂದ ಒಂದು ದೊಡ್ಡ ಕಲ್ಲು ನನ್ನ ಸಮೀಪದಲ್ಲಿಯೇ ಕೆಳಗೆ ಬಿದ್ದಿತು. ನಾನು ನೋಡಲಿಲ್ಲ, ಕೂಲಿಯವನು ಅದು ನನ್ನ ಮೇಲೆಯೇ ಬೀಳುವುದೆಂದು ಬಸವ, ಬಸವ ಎಂದು ಎರಡು ಸಾರೆ ಉಚ್ಚರಿಸಿದನು. ಅವನ ಆ ಮಾತು ನನ್ನ ಮೇಲೆ ಬಹಳ ಪರಿಣಾಮವಾಯಿತು. ಹೈದರಾಬಾದಿನಂತಹ ಮುಸಲ್ಮಾನ ಸಂಸ್ಕೃತಿಯ ಪ್ರಭಾವವುಳ್ಳ ಪ್ರದೇಶದಲ್ಲಿ ಒಬ್ಬ ಮುಸಲ್ಮಾನನಿಂದ ಹೀಗೆ ಶಬ್ದಗಳು ಬರಬೇಕಾದರೆ ಶ್ರೀ ಬಸವೇಶ್ವರರ ಪ್ರಭಾವ ದ್ಯೋತಕವಾಗಿದೆ. ಹಳ್ಳಿಗಳ ಮನೆಗಳಲ್ಲಿ ಆಕಸ್ಮಿಕ ಚೇಳನ್ನು ಕಂಡರೆ ಅದನ್ನು ನಿಲ್ಲಿಸಬೇಕೆಂಬುವ ಇಚ್ಛೆಯಿಂದ ಹೆಣ್ಣುಮಕ್ಕಳು ಬಸಪ್ಪನ ಆಣೆ, ಬಸಪ್ಪನ ಆಣೆ ಎಂದು ಅನ್ನುವುದನ್ನು ನಾನು ಅದೆಷ್ಟೋ ಸಾರೆ ನೋಡಿದ್ದೇನೆ, ಕೇಳಿದ್ದೇನೆ ಎಲ್ಲರಿಗೂ ಅನುಭವದ ವಿಷಯ.

## ೧೧. ಉತ್ತರದಲ್ಲಿ ಪ್ರಚಾರವಿಲ್ಲ

ಶ್ರೀ ಬಸವೇಶ್ವರರ ಉದಾತ್ತ ತತ್ವಗಳ ಪ್ರಚಾರವು ಉತ್ತರ ಹಿಂದೂಸ್ಥಾನದಲ್ಲಿ ಆಗಬೇಕಾಗಿರುತ್ತದೆ. ಅಲ್ಲಿಯ ಜನಗಳಿಗೆ ಬಸವಣ್ಣನವರ ಬಗ್ಗೆ ಏನೂ ಗೊತ್ತಿರುವುದಿಲ್ಲ. ಅವರ ಚರಿತ್ರೆಯನ್ನೂ, ತತ್ವಾದಿ ವಿಷಯಗಳನ್ನೂ ಹಿಂದಿ, ಇಂಗ್ಲಿಷ್, ತೆಲುಗು ಮೊದಲಾದ ಭಾಷೆಗಳಲ್ಲಿ ಬರೆಯಿಸಿ, ಜಗತ್ತಿನ ತುಂಬ ಪ್ರಚಾರಮಾಡಬೇಕಾದುದು ಮುಖ್ಯ ಕರ್ತವ್ಯವಾಗಿರುತ್ತದೆ. ಹಾಗೆ ಮಾಡಿದರೆ ಮಾತ್ರ ಎಲ್ಲ ಕಡೆಗೂ ಅವರ ವಿಷಯ ಜನಗಳಿಗೆ ತಿಳಿಯುತ್ತದೆ. ಬುದ್ಧ, ಮಹಾವೀರ ಮೊದಲಾದವರು ಮಾಡಿದ ಕಾರ್ಯ ಮತ್ತು ಪ್ರಚಾರದಿಂದಲೇ ಜಾಗತಿಕ ಪುರುಷರಾಗಿದ್ದಾರೆ. ಅಂತಹ ಪ್ರಚಂಡ ಪ್ರಚಾರದ ಕಾರ್ಯ ಕೈಕೊಳ್ಳಬೇಕು. ಇಂತಹ ಕಾರ್ಯ ಮಾಡಬೇಕಾದರೆ ಲಕ್ಷಾಂತರ ರೂಪಾಯಿಗಳದೊಂದು ಫಂಡು ಬೇಕಾಗುತ್ತದೆ. ಅದರಿಂದ ಬಸವೇಶ್ವರರ ಸಾಹಿತ್ಯ ಸಂಶೋಧನಾಲಯ ಸ್ಥಾಪಿಸಿ ಹಲವಾರು ಭಾಷೆಗಳಲ್ಲಿ ಪ್ರವೀಣರಾದ ವಿದ್ವಾಂಸರನ್ನು ಇಟ್ಟುಕೊಂಡು ಈ ಕೆಲಸ ಮಾಡಿದ್ದಾದರೆ ಅವರ ತತ್ವದ ಪ್ರಚಾರ ಪ್ರಪಂಚದ ತುಂಬ ಆಗುತ್ತದೆ. ಅಂತಹ ಸದ್ಬುದ್ಧಿಯು ವೀರಶೈವರಿಗೆಂದು ಹುಟ್ಟುವುದೋ ಅದೇ ಸುದಿನವೆಂದು ತಿಳಿಯಬೇಕಾಗಿದೆ. ವೀರಶೈವರಲ್ಲಿ ಕೊಡುಗೈ ದೊರೆಗಳಿಗೆ ಕೊರತೆ ಇರುವುದಿಲ್ಲ. ಆದರೆ ಇಂತಹ ಕಾರ್ಯಕ್ಕೆ ಕೊಡುವ ಬುದ್ಧಿಯನ್ನು ನಾವೀಗ ಹುಟ್ಟಿಸಬೇಕಾಗಿದೆ. ಇಲ್ಲಿಯವರೆಗೆ ಶಾಲೆ, ಕಾಲೇಜ್, ಬೋರ್ಡಿಂಗ್ ಮೊದಲಾದ ಕಾರ್ಯಗಳಿಗೆ ಕನ್ನಡ ನಾಡಿನಲ್ಲಿ ಕೋಟಿಗಟ್ಟಲೆ ಕೊಟ್ಟಿರುತ್ತಾರೆ. ಇನ್ನುಮೇಲೆ ದಾನಿಗಳ ಮನಸ್ಸನ್ನು ಇತ್ತಕಡೆಗೆ ಒಲಿಸಬೇಕಾಗಿದೆ. ಇಂತಹ ಕಾರ್ಯ ಮಾಡತಕ್ಕವರು ಬೇಕಾಗಿದ್ದಾರೆ. ಈ ಕಾರ್ಯ ಮಾಡಲಿಕ್ಕೆ ಯಾರು ಮುಂದೆ ಬರುತ್ತಾರೆಯೋ ಅವರ ಕೀರ್ತಿ ಅಜರಾಮರವಾಗುತ್ತದೆ. ಜಗತ್ತಿನ ತುಂಬ ಅವರ ಕೀರ್ತಿಯು ಹಬ್ಬುತ್ತದೆ. ಮೊದಲು ಇದಕ್ಕಾಗಿ ಒಂದು ಲಕ್ಷ ರೂಪಾಯಿ ದಾನ ಬೇಕಾಗಿದೆ. ಮುಂದೆ ಅದನ್ನು ಬೆಳೆಯಿಸಬೇಕು.

## ೧೨. ಅಪ್ಪಟ ಕನ್ನಡಿಗರು

ಶ್ರೀ ಜಗಜ್ಯೋತಿ ಬಸವೇಶ್ವರರು ಕರ್ಣಾಟಕದ ಮಹಾಪುರುಷರಲ್ಲಿ ಅಪ್ಪಟ ಅಪರಂಜಿಯಾಗಿರುತ್ತಾರೆ. ಶ್ರೀ ಬೆನಗಲ್ ರಾಮರಾವ್, ಎಂ.ಎ., ಎಲ್‌ಎಲ್.ಬಿ.— ಇವರು ತಮ್ಮದೊಂದು ಲೇಖನದಲ್ಲಿ ಬಸವೇಶ್ವರರ ಬಗ್ಗೆ ಬರೆಯುತ್ತ ಬಸವಣ್ಣನವರಂತೆ ಹದಿನಾರಾಣೆ ಕನ್ನಡಿಗರಲ್ಲಿ ಯಾವ ಮಹಾಪುರುಷರೂ ಇಲ್ಲವೆಂದು ಬರೆದು ಶ್ರೀ ಶಂಕರಾಚಾರ್ಯರು, ಶ್ರೀ ರಾಮಾನುಜಾಚಾರ್ಯರು, ಶ್ರೀ ಮಧ್ವಾಚಾರ್ಯರು ಇವರುಗಳಿಂದ ಕರ್ಣಾಟಕಕ್ಕೆ ಒಂದಿಲ್ಲೊಂದು ಮಹತ್ತರವಾದ ಉಪಕಾರವಾಗಿದ್ದರೂ, ಇವರಲ್ಲಿ ಯಾರೂ ಬಸವಣ್ಣನವರಂತೆ ಹದಿನಾರಾಣೆ ಕನ್ನಡಿಗರೆಂದು ಹೇಳಲಿಕ್ಕೆ ಬರುವುದಿಲ್ಲ, ಹಾಗೆ ನಾನು ಹೇಳಲಾರೆ. ಒಬ್ಬರು ತುಳು ದೇಶದವರು, ಇನ್ನೊಬ್ಬರು ತಮಿಳರು, ಮತ್ತೊಬ್ಬರು ಮಳೆಯಾಳಿಗಳೆಂದು ಹೇಳಿದ್ದಾರೆ.

ಮುಖ್ಯವಾಗಿ ನಾವು ಇಲ್ಲಿ ತಿಳಿಯತಕ್ಕ ವಿಷಯವೆಂದರೆ ಶ್ರೀ ಬಸವಣ್ಣನವರು ಉದಯಿಸಿದ್ದು ಕರ್ಣಾಟಕ, ಬೆಳೆದದ್ದು ಕರ್ಣಾಟಕ, ಕಾರ್ಯಕ್ಷೇತ್ರ ಕರ್ಣಾಟಕ, ಧರ್ಮಪ್ರಚಾರ ಕನ್ನಡ ಭಾಷೆಯಲ್ಲಿ, ಹೀಗಾಗಿ ಅವರು ಅನೇಕ ವಿಧದಿಂದ ಕರ್ಣಾಟಕವನ್ನೇ ಪವಿತ್ರಗೊಳಿಸಿರುತ್ತಾರೆ. ಧಾರ್ಮಿಕ ಪ್ರಚಾರವನ್ನು ಮಾತೃಭಾಷೆಯಲ್ಲಿ ಮಾಡಿದ ಕಾರಣ ಸಾಮಾನ್ಯ ಜನಗಳ ಮನಸ್ಸು ಆಕರ್ಷಿಸಲ್ಪಟ್ಟಿತು. ಅದು ಅತ್ಯಂತ ಜನಪ್ರಿಯಕರವಾಯಿತು. ಸಂಸ್ಕೃತದಲ್ಲಿಯೇ ಬರೆಯಬೇಕು, ಬೇರೆ ಭಾಷೆಗಳಲ್ಲಿ ಬರೆಯಕೂಡದೆಂಬುವ ಪರಂಪರೆಯನ್ನು ತಪ್ಪಿಸಿದರು. ಧರ್ಮಪ್ರಚಾರದಂತೆ ರಾಜಕೀಯ ಕ್ಷೇತ್ರವೂ ಕೂಡ ಅವರಿಗೆ ಕರ್ಣಾಟಕವೇ ಮುಖ್ಯ ಆಯಿತು. ಅಂದಮೇಲೆ ಕರ್ಣಾಟಕದ ಮೇಲೆ ಅವರ ಪರಿಣಾಮ ವಿಶೇಷವಾಗಿ ಆಯಿತು. ಹೀಗೆ ಮೇಲೆ ಬರೆದಂತೆ ಅವರ ಬಗ್ಗೆ ಹೇಳಿದರೆ ಅನ್ಯರ ನಿಂದೆಯಾಗಲಾರದು. ಆಯಾಯ ವ್ಯಕ್ತಿಗಳ ವಿಷಯಕ್ಕೆ ಹೇಳಿದ್ದುದು. ಅವರಲ್ಲಿದ್ದ ಗುಣಗಾನ ಮಾತ್ರವೆಂದು ತಿಳಿಯತಕ್ಕದ್ದು. ನಿಂದೆಗೆ ಇಲ್ಲಿ ಅವಕಾಶವೇ ಇರುವುದಿಲ್ಲ.

## ೧೩. ವಚನವಾಙ್ಮಯಾಚಾರ್ಯರು

ಶ್ರೀ ಬಸವೇಶ್ವರರು ತಮ್ಮ ಧರ್ಮಪ್ರಚಾರವನ್ನು ಮಾತೃಭಾಷೆಯಿಂದಲೇ ಮಾಡಿದ ಕಾರಣದಿಂದಲೂ, ಅವರ ಅನುಯಾಯಿಗಳಾದ ೩೦೦ ಶಿವಶರಣರು ಅವರ ಮಾರ್ಗವನ್ನೇ ಅನುಸರಿಸಿ ನಡೆದದ್ದರಿಂದಲೂ ಹೊಸದೊಂದು ವಾಙ್ಮಯವೇ ನಿರ್ಮಾಣವಾಗಿ ಬಸವಣ್ಣನವರು ಕನ್ನಡ ಭಾಷಾ ಜನಕರಾದರು. ಈ ವಚನಗಳೆಲ್ಲ ಶಿವಾನುಭವ ಮಂಟಪದಲ್ಲಿ ನಡೆದ ಅನೇಕ ಧಾರ್ಮಿಕ ವಿಷಯಗಳ ಚರ್ಚೆಯಲ್ಲಿ ಆಯಾಯ ಶರಣರ ಸ್ಫೂರ್ತಿಯಿಂದ ಬಂದ ಹೃದಯದ ನುಡಿಗಳು. ಕನ್ನಡ ಸಾಹಿತ್ಯ ಭಂಡಾರವು ಪೂರ್ತಿಯಾಗಿ ಬಸವಣ್ಣನವರು ವಚನ ವಾಙ್ಮಯಾಚಾರ್ಯರಾದರು. ಈ ಗ್ರಂಥದಲ್ಲಿ ಉಪನಿಷತ್ತುಗಳೂ—ವಚನಗಳೂ, ಕನ್ನಡ ಸಾಹಿತ್ಯವೂ—ಬಸವಣ್ಣನವರೂ, ಎಂಬುವ ಪ್ರಕರಣಗಳಲ್ಲಿ ಈ ವಿಷಯದಲ್ಲಿ ವಿಶೇಷ ವಿವೇಚನೆ ಮಾಡಲಾಗಿದೆ. ಅನೇಕರು ವಚನಗಳನ್ನು ಬರೆದರೂ, ಆ ಸಂಘಕ್ಕೆ ಬಸವೇಶ್ವರರೇ ಮುಖ್ಯರಾದುದರಿಂದ ಅವರೇ ಆ ವಾಙ್ಮಯಾಚಾರ್ಯರಾದುದು ಸ್ವಾಭಾವಿಕವಾದುದು.

## ೧೪. ಬಸವಣ್ಣನವರ ಚರಿತ್ರೆ

ದೊಡ್ಡವರ ಚರಿತ್ರೆಗಳೆಲ್ಲ "ಇದಮಿತ್ಥಂ" ಇದು ಹೀಗೆಯೇ ಇದೆ ಎಂದು ಹೇಳಲಿಕ್ಕೆ ಬಾರದೆ ಅನೇಕ ಭಿನ್ನಾಭಿಪ್ರಾಯಗಳಿಂದಲೇ ಕೂಡಿರುತ್ತವೆ. ಇದಕ್ಕೆ ಅಪವಾದಾತ್ಮಕವಾಗಿ ಕೆಲವರ ಚರಿತ್ರೆಗಳು ನಿಶ್ಚಿತರೂಪದಿಂದಲೂ ಇರಬಹುದು. ಬಸವಣ್ಣನವರ ಬಗ್ಗೆ ಅನೇಕ ತರಹದ ಬರೆಹಗಳು ಸಿಗುತ್ತವೆ. ಅವರ ಪ್ರಶಂಸಾಪರವಾಗಿ ಹೇರಳ ಗ್ರಂಥಗಳಿದ್ದರೂ, ವಿರೋಧಪರವಾಗಿಯೂ ಅನೇಕರು ಬರೆದಿರುತ್ತಾರೆ. ಆದರೆ ಇವರು ತಪ್ಪುದಾರಿಯನ್ನು ಹಿಡಿದು ಬರೆದಿರುತ್ತಾರೆ. ಇಲ್ಲಿ ಒಂದು ಮಾತನ್ನು ಹೇಳಲೇ ಬೇಕಾಗಿದೆ. ಬಸವಣ್ಣನವರ ಚರಿತ್ರೆಯನ್ನು ಶೋಧಿಸಬೇಕಾದರೆ ಅವರ ವಚನಗಳಿಂದಲೂ, ಸಮಕಾಲದವರ ಹೇಳಿಕೆಗಳಿಂದಲೂ, ಶಿಲಾಶಾಸನ ಮೊದಲಾದ ಆಧಾರಗಳಿಂದಲೂ, ಆ ಸಮಾಜದ ಅನುಯಾಯಿಗಳ ಆಯಾ ಕಾಲದ ಬರೆಹಗಳಿಂದಲೂ ಸಿದ್ಧಮಾಡಬೇಕಾಗುತ್ತದೆ. ಈ ಸರಳಮಾರ್ಗವನ್ನು ಬಿಟ್ಟು ಅವರ ವಿರೋಧಿಗಳು ಬರೆದಿರುವುದನ್ನು ಮುಂದೆ ಮಾಡಿ ಚರಿತ್ರೆಯನ್ನು ಬರೆಯುವುದು ಸಮಂಜಸವಾಗಲಾರದು. ಶ್ರೀ ಬಸವೇಶ್ವರರ ಬಗ್ಗೆ ಡಾ॥ ಭಾಂಡಾರಕರರಂತಹ ಅನೇಕ ದೊಡ್ಡ ದೊಡ್ಡ ವಿದ್ವಾಂಸರು ದೊಡ್ಡ ದೊಡ್ಡ ತಪ್ಪುಗಳನ್ನೇ ಮಾಡಿದ್ದಾರೆ. ಅವರ ಬಗ್ಗೆ ತಮಗೆ ಸರಿಯಾದ ವಿಷಯ ದೊರಕದಿದ್ದರೆ ಬರೆಯುವುದು ಸಮಂಜಸವಲ್ಲ. ಬರೆಯದಿರುವುದೇ ಮೇಲು. ಶ್ರೀ ಶಂಕರಾಚಾರ್ಯರ ಚರಿತ್ರೆಯನ್ನು ಬರೆಯಬೇಕಾದರೆ ಅವರ ಕೃತಿ, ಅನುಯಾಯಿಗಳ ಹೇಳಿಕೆ ಮೊದಲಾದವುಗಳಿಂದಲೇ ಬರೆಯಬೇಕಲ್ಲದೆ ಮಧ್ವವಿಜಯ, ಮಣಿಮಂಜರಿ ಮೊದಲಾದ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ಬರೆದರೆ ಹೇಗೆ ಸಮಂಜಸವಾದೀತು? ವಿರೋಧಪರ ಇರುವ ಗ್ರಂಥಗಳಿಂದಲೂ ಒಂದೊಂದು ಸಾರಿ ಅನುಕೂಲ ವಿಷಯಗಳು ಸಿಕ್ಕರೂ ಇದು ಸಮಂಜಸವಾದ ಮಾರ್ಗವಲ್ಲ. ಇತಿಹಾಸಕಾರರಾಗಲೀ, ಸಂಶೋಧಕರಾಗಲೀ ಯಾವಾಗಲೂ ನಿಜವಾದ ಸಂಗತಿಗಳಿಗೆ ಅಂಟಿಕೊಂಡಿರಬೇಕು.

## ೧೫. ನೀತಿಯ ನಿಪುಣರು

ಭಗವಾನ್ ಬಸವೇಶ್ವರರು ತತ್ವಸಾಗರರಿರುವಂತೆ ನೀತಿಯನಿಪುಣರೂ ಆಗಿದ್ದರೆಂಬುದಕ್ಕೆ ಅವರ ನಿತ್ಯಾಚರಣೆಗಳೂ, ಹೇಳಿಕೆಗಳೂ, ಕೃತಿಗಳೂ ಪ್ರಮಾಣವಾಗಿವೆ. ತತ್ವದಲ್ಲಿ ಯಾವಾಗಲೂ ನೀತಿಯು ಇದ್ದೇ ಇರುತ್ತದೆ. ನೀತಿಗೆ ಎಲ್ಲರೂ ಬೆಲೆ ಕೊಡುತ್ತಾರೆ. ಆದರೆ ಒಂದೊಂದು ಸಾರಿ ತತ್ವವು ಕೃತಿಗೆ ಬಾರದೆ ಇರಬಹುದು. ನೀತಿಯು ಯಾವಾಗಲೂ ಕೃತಿಯಲ್ಲಿರಬೇಕಾದುದು ಅವಶ್ಯಕ. ಶ್ರೀ ಬಸವೇಶ್ವರರ ಸಾವಿರ ವಚನಗಳೂ ಮುತ್ತಿನಂತಹ ನೀತಿಯಿಂದ ಕೂಡಿರುತ್ತವೆ. ಅವರ ಅನುಯಾಯಿಗಳೂ ಕೂಡ ಅವರ ಮಾರ್ಗದಂತೆ ನಡೆದು ನೀತಿಯನ್ನು ಪಾಲಿಸಿದ ಕಾರಣ ಆ ಕಾಲವು ನೀತಿಯುಕ್ತವಾಗಿ ಇತಿಹಾಸದಲ್ಲಿ ಮೇಲ್ಮೆಯನ್ನು ಪಡೆದಿರುತ್ತದೆ. "ಎನ್ನ ತಪ್ಪು ಅನಂತಕೋಟಿ ತಮ್ಮ ಸೈರಣೆಗೆ ಲೆಖ್ಖವಿಲ್ಲ" ಎಂದು ಬಸವರಾಜದೇವರು ಹೇಳಿದ್ದಾರೆ. ಮನುಷ್ಯನು ತಪ್ಪುಮಾಡಬಹುದು ತಾನು ಮಾಡಿದ್ದು ತಪ್ಪೆಂದು ತಿಳಿದರೂ ಅದನ್ನು ಮುಚ್ಚಲಿಕೆ ಹಲವಾರು ತಪ್ಪುಗಳನ್ನು ಮಾಡುತ್ತಾನೆ. ಇದು ಸರಿಯಾದ ಮಾರ್ಗವಲ್ಲ, ತಪ್ಪೆಂದು ತಿಳಿದಮೇಲೆ ಅದನ್ನು ಒಪ್ಪಿಕೊಳ್ಳುವುದರಲ್ಲಿ ಅವನಿಗೆ ಗೌರವವಿರುತ್ತದೆ. ವ್ಯವಹಾರ

ದಲ್ಲಿ ಅನುಭವವಾದ ಮಾತಾಗಿದೆ. ಸಾಮಾನ್ಯ ಜನಗಳು ಯಾವಾಗಲೂ ತಮ್ಮ ತಪ್ಪನ್ನು ಒಪ್ಪಿಕೊಳ್ಳುವುದೇ ಇಲ್ಲ. ಆದರೆ ಬಸವೇಶ್ವರರು ಎನ್ನ ತಪ್ಪು ಅನಂತಕೋಟಿ ಎಂದು ಅವರು ಸ್ಪಷ್ಟಪಡಿಸಬೇಕಾದರೆ ಅವರ ಹೃದಯದ ವೈಶಾಲ್ಯ ಎದ್ದುಕಾಣುತ್ತದೆ. ಪ್ರಜೆಗಳು ನೀತಿವಿಹೀನರಾದಾಗ ದೊಡ್ಡ ದೊಡ್ಡ ರಾಜ್ಯಗಳೂ ಕೂಡ ಹಾಳಾದುದು ಇತಿಹಾಸದಲ್ಲಿ ಸಿಗುತ್ತದೆ. ನಮ್ಮ ದೇಶದಲ್ಲಿ ಈಗ ನೀತಿಯು ಮಾಯವಾಗಿ ಹೋಗಿರುತ್ತದೆ. ಅದರ ಸುಳಿವೂ ಕೂಡ ಇರುವುದಿಲ್ಲ. ಸ್ವರಾಜ್ಯ ಸಿಕ್ಕಿರುವುದು ಸ್ವೇಚ್ಛಾಚಾರವಾಗಿಬಿಟ್ಟಿರುತ್ತದೆ. ಹೀಗಾಗುವುದು ಶುಭಲಕ್ಷಣವಲ್ಲ, ಅದನ್ನು ತಿದ್ದಿಕೊಳ್ಳಬೇಕು. ಮಾನವನ ಉನ್ನತಿಗೆ ನೀತಿಯು ಬೇಕು. ಶ್ರೀ ಬಸವೇಶ್ವರರಂತಹ ಮಹನೀಯರ ಬೋಧೆಯು ಯಾವಾಗಲೂ ಜನಗಳಿಗೆ ಮಾರ್ಗದರ್ಶಕವಾಗಿರುತ್ತದೆ. ಇಂತಹ ಸಮಯದಲ್ಲಿ ಬಸವೇಶ್ವರ ನೀತಿಯು ಪ್ರಚಂಡ ಪ್ರಚಾರವಾಗಿ ಜನಗಳು ಸನ್ಮಾರ್ಗಕ್ಕೆ ಬರುವಂತೆ ಆಗಬೇಕಾಗಿರುತ್ತದೆ.

## ೧೬. ವೇದೋಪನಿಷತ್ತುಗಳು

ಶ್ರೀ ಬಸವೇಶ್ವರರ ಧರ್ಮಪ್ರಚಾರವೆಂದರೆ ಕೆಲವರು ವೇದೋಪನಿಷತ್ತುಗಳ ವಿರೋಧವಾದುದೆಂದು ತಿಳಿಯುತ್ತಾರೆ. ಹೀಗೆ ತಿಳಿಯತಕ್ಕವರು ಅವರ ತತ್ವಗಳನ್ನು ತಿಳಿಯದೆ ಹೇಳುವ ಮಾತಾಗಿದೆ. ಈ ಗ್ರಂಥದಲ್ಲಿ ಬಸವಣ್ಣನವರೂ–ವೇದಗಳೂ, ವಚನಗಳೂ–ಉಪನಿಷತ್ತುಗಳೂ ಎಂಬುವ ಪ್ರಕರಣಗಳಲ್ಲಿ ಈ ವಿಷಯವನ್ನು ವಿಸ್ತಾರವಾಗಿ ಬರೆದಿರುತ್ತೇನೆ. ಓದುಗರು ಅವಶ್ಯವಾಗಿ ಆ ಪ್ರಕರಣಗಳನ್ನು ಓದಬೇಕು. ಬಸವಣ್ಣನವರು ವರ್ಣಗಳನ್ನು ಖಂಡಿಸಿರುತ್ತಾರೆ. ಜಾತಿಯಿಂದ ವರ್ಣಗಳಿಲ್ಲ, ವೇದಗಳಲ್ಲಿ ಎಲ್ಲಿಯೂ ಜಾತಿಗಳ ವರ್ಣನೆ ಇರುವುದಿಲ್ಲ. ಟೀಕಾತ್ಮಕ ಗ್ರಂಥಗಳಲ್ಲಿ ಜಾತಿಯಿಂದ ವರ್ಣಗಳಾದವು. ಗುಣದಿಂದ ವರ್ಣಗಳು ಮಾಯವಾದವು. ಯಜ್ಞಯಾಗಾದಿಗಳಲ್ಲಿ ಮಾಡತಕ್ಕ ಹಿಂಸೆಯು ಬಸವಣ್ಣನವರಂತಹ ಪವಿತ್ರ ಮೂರ್ತಿಗಳಿಗೆ ಹೇಗೆ ಸಹನವಾದೀತು? ಅದು ಅಶಾಸ್ತ್ರೀಯವಾದುದು. ದಯೆಯೇ ಧರ್ಮಕ್ಕೆ ಮೂಲ ಕಾರಣವಾದುದರಿಂದ ಹಿಂಸೆಗೆ ಅವಕಾಶವಿಲ್ಲವೆಂಬುದು ಅವರ ತತ್ವವಾಗಿರುತ್ತದೆ.

ದೇವರು ಎಲ್ಲಿದ್ದಾನೆ? ಹೇಗೆ ಇದ್ದಾನೆ? ಅವನ ಸ್ವರೂಪವೇನು? ಅವನನ್ನು ಕಾಣಲಿಕ್ಕೆ ಮಾರ್ಗಗಳು ಯಾವುವು? ಮೊದಲಾದ ವಿಷಯಗಳಲ್ಲಿ ಉಪನಿಷತ್ತಿನ ಮಂತ್ರಗಳಿಗೆ ಸರಿಯಾಗಿ ಅವರು ವಚನಗಳನ್ನು ಬೋಧಿಸಿರುತ್ತಾರೆ. ಅವರು ನಿಜವಾದ ಧರ್ಮವನ್ನು ಲೋಕದಲ್ಲಿ ಪ್ರಚಾರಮಾಡಲಿಕ್ಕೆ ಪ್ರಯತ್ನಮಾಡಿದರು. ಅಸತ್ಯಮಾರ್ಗವನ್ನು ಸತ್ಯದಿಂದ ಖಂಡಿಸಿರುತ್ತಾರೆ. ಆದ್ದರಿಂದ ಅವರ ಧರ್ಮಪ್ರಚಾರವು ಅಹಿಂಸಾಮಯವು, ಸತ್ಯದಿಂದ ತುಂಬಿದುದೂ ಆಗಿರುವುದರಿಂದ ವೇದೋಪನಿಷತ್ತುಗಳಿಗೆ ವಿರೋಧವಾದ ಮಾರ್ಗವಾಗಿರುವುದಿಲ್ಲ. ಸ್ಮೃತಿಗಳಲ್ಲೆಲ್ಲ ಮಾಂಸಭಕ್ಷಣೆ ಮಾಡಬೇಕೆಂದು ವಿಸ್ತಾರವಾಗಿ ಹೇಳಲಾಗಿದೆ. ದಯಾಶಾಲಿಗಳಾದ ಬಸವಣ್ಣನವರು ಇಂತಹ ವೇದವಿರುದ್ಧ ಆಚರಣೆಗೆ ಒಪ್ಪುವುದು ಸಾಧ್ಯವಾದ ಮಾತಾಗಿರುವುದಿಲ್ಲ. ಅವರ ಮಾರ್ಗದಂತೆ ದಯಾನಂದ ಸರಸ್ವತಿಯವರೂ ಕೂಡ ವೇದದಲ್ಲಿ ಹಿಂಸೆಗೆ ಆಸ್ಪದವಿಲ್ಲವೆಂದೇ ಹೇಳಿ ಅಂಥವರ ಮಾರ್ಗವನ್ನು ಅವರೂ ಖಂಡಿಸಿರುತ್ತಾರೆ.

## ೧೭. ಬಸವತತ್ತ್ವ ರತ್ನಾಕರ

ಈ ಗ್ರಂಥದಲ್ಲಿ ನಾನು ೨೮ ಪ್ರಕರಣಗಳನ್ನು ಬರೆದಿರುತ್ತೇನೆ. ಮೊದಲನೆಯ ಪ್ರಕರಣದಲ್ಲಿ ಬಸವೇಶ್ವರರ ಸಂಕ್ಷಿಪ್ತ ಚರಿತ್ರೆಯನ್ನು ೨೨ ಪುಟಗಳಲ್ಲಿ ಮುಗಿಸಿರುತ್ತೇನೆ. ಬಸವಣ್ಣನವರ ಚರಿತ್ರೆಯು ಒಂದಲ್ಲೊಂದು ರೀತಿಯಿಂದ ಜನರಿಗೆ ತಿಳಿದದ್ದೇ ಇರುವ ಕಾರಣ ಅದನ್ನು ವಿಸ್ತಾರವಾಗಿ ಬರೆದಿರುವುದಿಲ್ಲ.

ಎರಡನೆಯ ಪ್ರಕರಣದಲ್ಲಿ ಬಸವಣ್ಣನವರೂ—ವೇದಗಳೂ ಎನ್ನುವ ವಿಷಯ ಬರೆಯಲಾಗಿದೆ. ಶ್ರೀ ಬಸವೇಶ್ವರರು ವೇದಗಳಿಗೆ ವಿರೋಧಿಗಳೆಂಬುವುದು ಸಾಮಾನ್ಯವಾಗಿ ತಪ್ಪುತಿಳುವಳಿಕೆ ಉಂಟಾಗಿರುತ್ತದೆ. ಅವರು ವೇದದ ಹಿಂಸೆಯನ್ನು, ವರ್ಣಗಳನ್ನು ಚೆನ್ನಾಗಿ ಖಂಡಿಸಿದ್ದಾರೆ. ಸುಧಾರಕರೆಲ್ಲರೂ ಬಸವಣ್ಣನವರ ಮಾರ್ಗವನ್ನು ಅಪ್ಪಿಕೊಳ್ಳುತ್ತಾರೆ. ಎಷ್ಟೇ ಕಾಲವು ಉರುಳಿಹೋದರೂ ಅವರ ತತ್ತ್ವಗಳು ಮಾತ್ರ ಜೀವಂತವಾಗಿರುತ್ತವೆ. ಬಸವಣ್ಣನವರು ವೇದದ ಉಚ್ಚಾರವನ್ನು ತಮ್ಮ ವಚನಗಳಲ್ಲಿ ಹಲವುಸಾರಿ ಉಪಯೋಗ ಮಾಡಿದ್ದಾರೆ. ಜಾತಿಯ ಪ್ರಶ್ನೆಯಾಗಲೀ, ಯಜ್ಞಯಾಗಾದಿಗಳಲ್ಲಿ ಮೇಕೆಗಳ ಆಹುತಿಯನ್ನು ತೆಗೆದುಕೊಳ್ಳುವ ಪ್ರಸಂಗ ಬಂದಾಗಲೆಲ್ಲ ವೇದಗಳನ್ನು ಖಂಡಿಸಿರುತ್ತಾರೆ. ಅನೇಕ ವಿಷಯಗಳಲ್ಲಿ ವೇದಗಳನ್ನು ಎತ್ತಿಹಿಡಿದಿದ್ದಾರೆ. ಹೀಗೆಂದಿತ್ತು ನಮ್ಮ ವೇದವೆಂತಲೂ ಉಚ್ಚರಿಸಿರುತ್ತಾರೆ.

ಮೂರನೆಯ ಪ್ರಕರಣದಲ್ಲಿ ವಚನಗಳೂ—ಉಪನಿಷತ್ತುಗಳೂ ಎಂಬುವ ವಿಷಯವಿದೆ. ವಚನಗಳಿಗೂ ಉಪನಿಷತ್ತುಗಳಿಗೂ ಇರುವ ಸಾಮ್ಯ, ವೈಷಮ್ಯ, ವೈಶಿಷ್ಟ್ಯವನ್ನು ತೋರಿಸಲಾಗಿದೆ. ಸಾಮ್ಯವೇ ಹೆಚ್ಚಾಗಿರುತ್ತದೆ.

ನಾಲ್ಕನೆಯ ಪ್ರಕರಣದಲ್ಲಿ ಭಗವದ್ಗೀತೆಯೂ—ಬಸವಣ್ಣನವರೂ ಎಂಬುವ ವಿಷಯವಿದ್ದು, ಭಗವದ್ಗೀತೆಯ ತತ್ತ್ವಕ್ಕೂ, ಬಸವಣ್ಣನವರ ತತ್ತ್ವಕ್ಕೂ ಇರುವ ಸಾಮ್ಯ ತೋರಿಸಿ ಗೀತೆಯಲ್ಲಿದ್ದ ವಿಷಯವೆಲ್ಲ ವಚನಗಳಲ್ಲಿ ಬಂದಿರುವುದನ್ನು ಸ್ಪಷ್ಟವಾಗಿ ವಿಮರ್ಶಿಸಿರುತ್ತೇನೆ.

ಐದನೆಯ ಪ್ರಕರಣದಲ್ಲಿ ಬಸವಣ್ಣನವರು ಶಿವಾಗಮಗಳ ಅನುಯಾಯಿಗಳಾಗಿದ್ದು ಕೆಲವು ವಿಷಯಗಳಲ್ಲಿ ತಮ್ಮ ಭಿನ್ನಾಭಿಪ್ರಾಯವನ್ನು ಪ್ರಕಟಿಸಿದ್ದುದು ಉಲ್ಲೇಖ ಮಾಡಲಾಗಿದೆ.

ಆರು—ಏಳು—ಎಂಟು—ಒಂಭತ್ತು ಈ ನಾಲ್ಕು ಪ್ರಕರಣಗಳಲ್ಲಿ ಧ್ಯಾನಯೋಗವೂ—ಬಸವಣ್ಣನವರೂ, ಕ್ರಿಯಾಯೋಗ, ಭಕ್ತಿಯೋಗ, ಜ್ಞಾನಯೋಗ ಈ ನಾಲ್ಕು ಪ್ರಕರಣಗಳಿಗೆ ನೂರಾರು ಪುಟಗಳು ಮೀಸಲಾಗಿರುತ್ತವೆ. ಈ ನಾಲ್ಕು ಯೋಗಗಳಲ್ಲಿ ಬಸವೇಶ್ವರರು ಎಂತಹ ನೈಪುಣ್ಯವನ್ನು ಪಡೆದು ಲೋಕದ ಜನಗಳಿಗೆ ಈ ಯೋಗಗಳನ್ನು ಬೋಧಿಸಿರುವುದನ್ನು ವಿಸ್ತಾರವಾಗಿ ಬರೆದಿರುತ್ತೇನೆ. ನಾಲ್ಕು ಯೋಗಗಳನ್ನು ಸಮನ್ವಯ ಮಾಡಿಕೊಂಡು ತಮ್ಮ ಶ್ರೇಷ್ಠಮಾರ್ಗದಲ್ಲಿ ಮಹಾ ಜನಗಳ ಮನಸ್ಸು ತೊಡಗುವಂತೆ ಮಾಡಿರುತ್ತಾರೆ. ಈ ನಾಲ್ಕು ಪ್ರಕರಣಗಳು ಈ ಗ್ರಂಥದಲ್ಲಿ ಮಹತ್ವದ ಸ್ಥಾನವನ್ನು ಪಡೆಯುವುದರಲ್ಲಿ ಸಂಶಯವಿಲ್ಲ.

ಹತ್ತನೆಯ ಪ್ರಕರಣದಲ್ಲಿ: ಬಸವಣ್ಣನವರ ಲಿಂಗನಿಷ್ಠೆ ಎಂಬುವ ಮಹತ್ವದ ವಿಷಯವನ್ನು ಸಾಧಕಬಾಧಕಗಳ ಮೂಲಕ ವಿಸ್ತಾರವಾಗಿ ಬರೆಯಲಾಗಿದೆ. ಲಿಂಗ

ಪೂಜೆಯು ಜಗತ್ತಿನ ಬೇರೆಬೇರೆ ದೇಶಗಳಲ್ಲಿ, ಬೇರೆಬೇರೆ ರೀತಿಯಲ್ಲಿ ಹೇಗೆ ನಡೆಯುತ್ತ ಬಂದು ಭರತಖಂಡದಲ್ಲಿ ಹೇಗೆ ವಿಕಾಸವನ್ನು ಹೊಂದಿತು? ವೇದಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಲಿಂಗದ ವಿಷಯಕ್ಕೆ ಇರುವ ಮಂತ್ರಗಳನ್ನು ತೋರಿಸಿ ಲಿಂಗ ಪುರಾಣವೇ ಮೊದಲಾದ ವ್ಯಾಸೋಕ್ತ ಗ್ರಂಥಗಳಲ್ಲಿ ಅದರ ಬೆಳವಣಿಗೆಯು ಹೇಗೆ ಆಗುತ್ತ ಬಂದಿದೆಯೆಂಬುವುದನ್ನು ವಿವರಿಸಿ ಲಿಂಗಕ್ಕೆ ಇರುವ ಬೇರೆಬೇರೆ ಅರ್ಥಗಳನ್ನು ವೀರಶೈವಾಚಾರ್ಯರು ವೇದಮಂತ್ರಗಳಿಗೆ ಬರೆದ ಅರ್ಥವನ್ನೂ ತೋರಿಸಿ ಶರಣರು ಹೇಗೆ ಭೂಲೋಕದಲ್ಲಿ ಪ್ರಚಂಡತರವಾಗಿ ಪ್ರಚಾರಮಾಡಿದರೆಂಬುವುದನ್ನು ವಿಸ್ತಾರ ವಾಗಿ ಅನೇಕ ಆಧಾರಗಳನ್ನು ಕೊಟ್ಟು ಲಿಂಗದ ಮೇಲ್ಮೆಯ ಮೇಲೆಯೇ ವೀರಶೈವತ್ವವು ಅವಲಂಬಿಸಿರುವುದರಿಂದ ಈ ಗ್ರಂಥದಲ್ಲಿ ಈ ಪ್ರಕರಣಕ್ಕೆ ಹೆಚ್ಚಿನ ಮಹತ್ವದ ಸ್ಥಾನವಿದೆ. ಶ್ರೀಕರ–ಶ್ರೀಕಂಠಾದಿ ಆಚಾರ್ಯರು ತಮ್ಮ ಭಾಷ್ಯಗಳಲ್ಲಿ ಲಿಂಗದ ಬಗ್ಗೆ ಉಲ್ಲೇಖ ಮಾಡಿರುವ ವಿಷಯ ವಿವೇಚಿಸಿ ಶ್ರೀ ವಿದ್ಯಾರಣ್ಯರ ಅಭಿಪ್ರಾಯವನ್ನು ಬರೆದಿರುತ್ತೇನೆ. ಲಿಂಗ ಉಳಿದರೆ ವೀರಶೈವತ್ವದ ಅಸ್ತಿತ್ವ ಅಳಿದರೆ ನಾಶವೆಂಬುವುದು ಸ್ಫುಟವಾದುದ ರಿಂದಲೂ, ಲಿಂಗಕ್ಕಾಧಾರವಿಲ್ಲವೆಂದು ಬಸವಣ್ಣನವರು ಭೂಲೋಕದಲ್ಲಿ ಅವತರಿಸಿ ಶಿವಭಕ್ತಿಯನ್ನು ಅದರಲ್ಲಿಯೂ ಲಿಂಗಪೂಜೆಯ ಮಹತ್ವವನ್ನು ಜನಗಳಿಗೆ ಬೋಧಿಸಿ ಅದರ ಬಗ್ಗೆ ಸಾವಿರ ವರ್ಷಗಳಿಂದ ಯಾರೂ ಮಾಡದೆ ಇರತಕ್ಕ ಅಸಾಧಾರಣ ಪ್ರಯತ್ನ ಮಾಡಿದ್ದುದು ಸರ್ವವೇದ್ಯವಾಗಿರುತ್ತದೆ. ಆದ್ದರಿಂದ ಲಿಂಗದ ಪ್ರತಿಷ್ಠೆಯೇ ವೀರಶೈವತ್ವದ ಪ್ರತಿಷ್ಠೆಯಾಗಿದೆ.

ಹನ್ನೊಂದನೆಯ ಪ್ರಕರಣದಲ್ಲಿ ಜಂಗಮಪ್ರೇಮ ಎಂಬುವ ವಿಷಯವಿದೆ. ಬಸವಣ್ಣನವರು ಜಂಗಮಪ್ರಾಣಿಗಳಾದ ಕಾರಣ ಅವರು ಜಂಗಮದ ಬಗ್ಗೆ ಎಂತಹ ಪ್ರಚಂಡತರವಾದ ಭಕ್ತಿಯನ್ನು ಆಚರಿಸಿದ್ದಾರೆಂಬುವುದು ವ್ಯಕ್ತವಾಗುತ್ತದೆ.

ಹನ್ನೆರಡು–ಹದಿಮೂರನೆಯ ಪ್ರಕರಣಗಳಲ್ಲಿ: ಹನ್ನೆರಡನೆಯ ಪ್ರಕರಣದಲ್ಲಿ ಜಾತಿವಾದವೂ, ಹದಿಮೂರನೆಯ ಪ್ರಕರಣದಲ್ಲಿ ಅಸ್ಪೃಶ್ಯೋದ್ಧಾರದ ವಿಷಯಗಳೂ ಇರುತ್ತವೆ. ಈ ಎರಡು ವಿಷಯಗಳೂ ಹಿಂದೂಧರ್ಮವನ್ನು ಹಾಳುಮಾಡತಕ್ಕವು ಗಳಾಗಿರುವುದರಿಂದ ಬಸವಣ್ಣನವರು ಯಾರ ಲಕ್ಷ್ಯವನ್ನೂ ಮಾಡದೆ ಈಗಿನ ಕಾಲ ದಲ್ಲಿಯೂ ಕೂಡ ಯಾರಿಂದಲೂ ಸಾಧ್ಯವಾಗದೆ ಇರತಕ್ಕ ಕಾರ್ಯವನ್ನು ಮಾಡಿರು ತ್ತಾರೆ. ಅವರ ತತ್ವಗಳಲ್ಲಿ ಈ ಎರಡು ವಿಷಯಗಳು ಮಹತ್ವದ ಸ್ಥಾನವನ್ನು ಪಡೆದಿರು ತ್ತವೆ. ಅವರ ಚರಿತ್ರೆಯಲ್ಲಿ ಈ ಎರಡು ವಿಷಯಗಳು ಭಯಂಕರ ಕ್ರಾಂತಿಕಾರಕ ಗಳಾಗಿರುತ್ತವೆ. ಬಸವಣ್ಣನವರ ಕ್ರಾಂತಿಯು ಲೆನಿನ್ನಾದಿಗಳಂತೆ ಹಿಂಸೆಯುಕ್ತವಾದು ದಲ್ಲ. ಶಾಂತಿಯಿಂದಲೇ ಇವರ ಕ್ರಾಂತಿಯ ಬೆಳವಣಿಗೆ ಆಗಿರುತ್ತದೆ. ಕೊನೆಗೊಮ್ಮೆ ಕ್ರಾಂತಿಯಾಗಿ ಬಸವಣ್ಣನವರು ಕಲ್ಯಾಣಪಟ್ಟಣವನ್ನು ಬಿಡಬೇಕಾಯಿತು. ದೊಡ್ಡವರ ವಿಷಯದಲ್ಲಿ ಇಂತಹ ವಿಷಯಗಳು ಅನಿವಾರ್ಯವಾಗಿರುತ್ತವೆ. ಶ್ರೀ ಬಸವಣ್ಣನವರು ಅಜಾತಶತೃಗಳು. ಶಾಂತಿಯಿಂದಲೂ, ಭಕ್ತಿಯ ಪ್ರಭಾವದಿಂದಲೂ, ಅವರು ತಮ್ಮ ಕಾರ್ಯವನ್ನು ಮಾಡುತ್ತ ಮೃದುವಚನಂಗಳೇ ಸಕಲಜಪಂಗಳಯ್ಯ ಎಂದು ಹೇಳಿದ ಶ್ರೀ ಬಸವೇಶ್ವರರಿಗೂ ವಿರೋಧಿಗಳೇಕೆ? ಎಂಬುವ ಪ್ರಶ್ನೆಯು ಬರುತ್ತದೆ. ಲೋಕದಲ್ಲಿ ಇದು ಅನಿವಾರ್ಯವಾದುದಾಗಿದೆ. ಧರ್ಮರಾಜನು ಮಹಾಶಾಂತಿಪುರುಷ, ಸತ್ಯವಾದಿ,

ಅಜಾತಶತ್ರು ಆದರೂ ಕೊನೆಗೊಮ್ಮೆ ಕೌರವರ ಕೂಡ ಯುದ್ಧ ಮಾಡಬೇಕಾಯಿತು. ಶ್ರೀ ಬಸವಣ್ಣನವರು ಹಾಗೇನೂ ಮಾಡಲಿಲ್ಲ. ಆ ಸ್ಥಳವನ್ನೇ ಬಿಟ್ಟು ಹೋದರು. ಪರಮಾಮೂರ್ತಿಗಳಾದ ಬಸವಣ್ಣನವರಿಗೆ ಅದು ಯೋಗ್ಯವೇ ಆದುದಾಗಿರುತ್ತದೆ. ಅಲ್ಲದೆ ಇವೆರಡು ವಿಷಯಗಳೂ ಜನಗಳನ್ನು ಕೇಳಕತಕ್ಕವುಗಳಾಗಿರುತ್ತವೆ. ಇದು ಭಗವಾನ್ ಬಸವೇಶ್ವರರ ತತ್ವವಾಗಿದೆ. ಅವರ ಅವತಾರದ ಪ್ರಧಾನಕಾರ್ಯವೂ ಆಗಿರುತ್ತದೆ.

ಮುಂದೆ ಬಸವಣ್ಣನವರೂ–ಕನ್ನಡ ಸಾಹಿತ್ಯವೂ, ಶಿವಾನುಭವ ಮಂಟಪವೂ–ಬಸವಣ್ಣನವರೂ, ಬಸವಣ್ಣನವರೂ–ಸ್ತ್ರೀಯರ ಮನ್ನಣೆಯೂ. ಬಸವಣ್ಣನವರೂ–ಪವಾಡಗಳೂ, ಬಸವಣ್ಣನವರೂ–ಪ್ರತಿಜ್ಞೆಗಳೂ, ಬಸವಣ್ಣನವರೂ–ಏಕೇಶ್ವರವಾದವೂ, ಬಸವಣ್ಣನವರೂ–ಟೀಕಾಕಾರರೂ, ರಾಜಕಾರಣ, ಶಿಲಾಶಾಸನ, ಷಟ್‌ಸ್ಥಲಗಳೂ–ಬಸವಣ್ಣನವರೂ ಮೊದಲಾದ ಪ್ರಕರಣಗಳನ್ನು ಕೊಟ್ಟಿರುತ್ತೇನೆ.

ಬಸವೇಶ್ವರರ ಬಗ್ಗೆ ಪ್ರಭುದೇವರೇ ಮೊದಲು ಮಾಡಿ ಇಲ್ಲಿಯವರೆಗೆ ಬರೆದ ನೂರಾರು ಕವಿಗಳ ಮತ್ತು ಪಂಡಿತರ, ರಾಜಕಾರಣಿಗಳ, ಸಮಕಾಲದವರ ಹೇಳಿಕೆಗಳನ್ನೂ ಅಥವಾ ಕಾಣಿಕೆಗಳನ್ನೂ ಈ ಪ್ರಕರಣದಲ್ಲಿ ವಿಸ್ತಾರವಾಗಿ ಶತ ಶತಮಾನಗಳಿಂದ ಬಸವಣ್ಣನವರ ಬಗ್ಗೆ ಏನು ಏನು ಗೌರವ ಸಲ್ಲಿಸಿರುತ್ತಾರೆಂಬುದನ್ನು ಅವರವರ ಗ್ರಂಥಗಳಿಂದ ಆರಿಸಿ ತೆಗೆದು ಪ್ರಕಟಿಸಿರುತ್ತೇವೆ. ಇಂತಹ ಕವಿಗಳಲ್ಲಿ ಕನ್ನಡ ದೇಶದವರೂ, ಆಂಧ್ರ ಕವಿಗಳೂ, ಸಂಸ್ಕೃತ ಕವಿಗಳೂ, ಮರಾಠಿಯ ವಿದ್ವಾಂಸರೂ, ತಮಿಳರೂ, ಆಂಗ್ಲ ವಿದ್ಯಾವಿಭೂಷಿತರೂ ಇರುತ್ತಾರೆ. ಈ ಪ್ರಕರಣವು ಬಹಳ ದೊಡ್ಡದಾಗಿರುತ್ತದೆ. ಇಂತಿಷ್ಟು ಕವಿಗಳಿಂದ ಅಥವಾ ಪಂಡಿತರಿಂದ ತಮ್ಮ ಗ್ರಂಥಾರಂಭದಲ್ಲಿ ಸ್ತುತಿಸಿಕೊಳ್ಳತಕ್ಕ ಗೌರವ ಹಿಂದೂಸ್ಥಾನದಲ್ಲಿ ಇಲ್ಲಿಯವರೆಗೆ ಯಾರಿಗೂ ಲಭ್ಯವಾಗಿರುವುದಿಲ್ಲವೆಂದು ಬರೆದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಶ್ರೀ ಬಸವಣ್ಣನವರು ಇಂತಹ ಗೌರವ ಪಡೆಯಬೇಕಾದರೆ ಅವರ ಅತ್ಯದ್ಭುತಗಳಾದ ಅನೇಕ ಮಹತ್ವದ ಕಾರ್ಯಗಳೇ ಕಾರಣಗಳಾಗಿರುತ್ತವೆ. ೯೦೦ ವರ್ಷಗಳಿಂದ ಇಂತಹ ಗೌರವದಾಯಕವಾದ ಸ್ಥಾನವು ಯಾರಿಗೂ ದೊರೆತಿರುವುದಿಲ್ಲ. ಬರೆವವುಗಳಲ್ಲಿ ಮರಾಠಿ, ತಮಿಳು ಕವಿಗಳು ಬರೆದವುಗಳು ಅಚ್ಚಾಗದೆ ಉಳಿದಿರುತ್ತವೆ. ಅವುಗಳನ್ನೆಲ್ಲ ಪರಿಶಿಷ್ಟದಲ್ಲಿ ಕೊಡುತ್ತೇನೆ. ನಾನು ೨೦೦ ಜನ ಕವಿ–ಶರಣ ಪಂಡಿತರ ಅಭಿಪ್ರಾಯಗಳನ್ನು ಹಾಕಿದ್ದೇನೆ.

ಬಸವಣ್ಣನವರಂತಹ ದ್ವಿತೀಯ ಶಂಭುವಿಗೆ ಈ ಜನಗಳ ಸರ್ಟಿಫಿಕೇಟು ಏತಕ್ಕೆ ಬೇಕೆಂಬುವ ಪ್ರಶ್ನೆಯು ಉಪಸ್ಥಿತವಾಗುತ್ತದೆ. ಆದರೆ ವಿಚಾರವಂತರಿಗೆ ಈ ವಿಷಯ ಬೇಕಾದುದಿಲ್ಲ. ಸಾಮಾನ್ಯ ಜನಗಳೇ ಹೆಚ್ಚಾಗಿರುವ ಸಮುದಾಯದಲ್ಲಿ ಇಂತಹ ಹೇಳಿಕೆಗಳಿಂದ ಬಸವಣ್ಣನವರ ಪ್ರಭಾವವು ಆ ಜನಗಳಲ್ಲಿ ಹೆಚ್ಚಾಗುವುದು ಸ್ವಾಭಾವಿಕವಾದುದಾಗಿದೆ. ಅವರು ಎಂತಹ ಸಚ್ಚರಿತ್ರಶೀಲರೆಂಬುವ ವಿಷಯ ಪ್ರಚಾರವಾಗುವುದು. ಇದರಿಂದ ಜನಸಾಮಾನ್ಯರಲ್ಲಿ ಅವರ ಬಗ್ಗೆ ಉತ್ತಮವಾದ ತಿಳುವಳಿಕೆಯುಂಟಾಗುವುದಲ್ಲದೆ ಬಸವಣ್ಣನವರ ವಿಶ್ವವ್ಯಾಪಕತೆಯೂ ಗೊತ್ತಾಗುತ್ತದೆ.

ಬಸವಣ್ಣನವರು ಸದ್ಭಕ್ತಿಯ ಮೂರ್ತಿಗಳಾದುದರಿಂದ ಅವರ ಅಸಾಧಾರಣವಾದ ಶಿವಭಕ್ತಿಯು ಅವರನ್ನು ಅಂತಹ ಮೇಲ್ಮಟ್ಟದ ಸ್ಥಾನಕ್ಕೆ ಮುಟ್ಟುವಂತೆ ಮಾಡಿತು.

ಪ್ರತಿಯೊಬ್ಬ ಲಿಂಗಾಂಗಿಯಲ್ಲಿ ಅವರ ಬಗ್ಗೆ ಭಕ್ತಿಭಾವನೆಯು ತಲೆದೋರಿ ಕಿಂಕುರ್ವಾಣತೆಯಿಂದ ನಡೆಯಲಿಕ್ಕೆ ಹಚ್ಚಿತು.

## ೧೮. ಶರಣರಲ್ಲಿ ಬಸವಣ್ಣನವರು ಅಗ್ರಗಣ್ಯರು

ಹನ್ನೆರಡನೆಯ ಶತಮಾನದ ಕ್ರಾಂತಿಯು ವೀರಶೈವ ಸಮಾಜದ ಉದ್ಧಾರದ ಮಾರ್ಗವಾಗಿದ್ದಿತು. ಆ ಕಾಲದ ಇತಿಹಾಸವು ಬಹಳ ಮನೋರಂಜಕವೂ, ವಿಸ್ಮಯ ಕಾರಕವೂ ಆಗಿರುತ್ತದೆ. ಶರಣರ ಸಮುದಾಯದಲ್ಲಿ ಬಸವಣ್ಣನವರಿಗೆ ಅದ್ವಿತೀಯ ವಾದ ಸ್ಥಾನವಿದ್ದಿತು. ಈ ಕ್ರಾಂತಿಗೆ ಅವರೇ ಮೂಲಪುರುಷರು ಅಥವಾ ಅಧಿನಾಯಕರು. ಅವರಿಗೆ ಸಹಾಯಕರಾಗಿ ಬೇರೆ ಬೇರೆ ಜಾತಿಗಳಲ್ಲಿ ಅನೇಕ ಜನ ಶರಣರು ಜನಿಸಿ ಲಿಂಗಧಾರಿಗಳಾಗಿ ಎಲ್ಲರೂ ಕಲ್ಯಾಣದಲ್ಲಿ ಸಂಘಟನೆ ಮಾಡಿದರು.

ಕೆಲವರು ಬಸವಣ್ಣನವರಿಗಿಂತ ಹೆಚ್ಚಿಗೆ ಶಕ್ತಿಯನ್ನು ಪಡೆದವರು ಇಬ್ಬರು ಮೂವರು ಬಸವಣ್ಣನವರ ಗುಂಪಿನಲ್ಲಿದ್ದರೆಂದು ಬರೆದಿರುತ್ತಾರೆ. ಇದು ಒಪ್ಪತಕ್ಕ ಮಾತಲ್ಲ. ಬಸವಣ್ಣನವರ ಶಕ್ತಿಯ ಆಳತೆಯನ್ನು ಅಳೆಯುವುದು ಸಾಧ್ಯವಲ್ಲ. ಅವರ ಶಕ್ತಿಯೇ ಎಲ್ಲರಿಗಿಂತಲೂ ಮಿಗಿಲಾದುದು. ಅವರಿಗೇ ಪ್ರಥಮ ಸ್ಥಾನ, ಅವರೇ ಆ ಕ್ರಾಂತಿಯ ಮೂಲನಾಯಕರು. ಶ್ರೀ ಅಲ್ಲಮಪ್ರಭುದೇವರು ಮಹಾ ಶಿವಯೋಗಿ ಗಳೂ, ಶ್ರೀ ಬಸವೇಶ್ವರರ ಗುರುಗಳೂ ಆಗಿದ್ದಾರೆ. ಈ ಮಹನೀಯರು ಬಸವಣ ನವರ ಬಗ್ಗೆ ಶ್ರೇಷ್ಠತರಗಳಾದ ಉದ್ಗಾರಗಳನ್ನು ಮಾಡಿದ್ದಾರೆ. ಅಂತಹ ಶ್ರೇಷ್ಠ ಯತಿವರೇಣ್ಯರೂ ಕೂಡ 'ಎನ್ನ ಪರಮಾರಾಧ್ಯ ಸಂಗನ ಬಸವಣ್ಣ' ನೆಂದು ಕೊಂಡಾ ಡಿರುತ್ತಾರೆ. ಶರಣರಲ್ಲಿ ಹೆಚ್ಚಿನವರು ಕಡಿಮೆಯವರು ಎಂಬುವ ವಾದಕ್ಕೆ ಸ್ಥಾನವಿಲ್ಲ. ಕೆಲವರು ಆ ವಾದ ಎಬ್ಬಿಸಿಸಿದ್ದುದಕ್ಕೆ ಕೊಂಚ ಉತ್ತರ ಬರೆಯಬೇಕಾಯಿತು. ಶರಣರಲ್ಲಿ ಯಾರಿಗಿಂತಲೂ ಯಾರೂ ಹೆಚ್ಚಿನವರಿಲ್ಲ, ಯಾರಿಗಿಂತಲೂ ಯಾರೂ ಕಡಿಮೆಯವರಲ್ಲ. ಅವರು ವೀರಶೈವ ಸರ್ವೋದಯ ಮಾರ್ಗದಲ್ಲಿ ಪ್ರವೃತ್ತರಾದವರು. ಆದ್ದರಿಂದ ಭೇದ ಭಾವನೆಗಳಿಗೆ ಅಲ್ಲಿ ಅವಕಾಶವಿಲ್ಲ. ಆದರೆ ಬಸವಣ್ಣನವರೇ ಆ ಸಂಘದೊಡೆಯರೂ—ಸಂಚಾಲಕರೂ ಆಗಿದ್ದುದು ನಿರ್ವಿವಾದವಾದುದು. ಅವರು ರಾಜರಾಗಿರದೆ ರಾಜರನ್ನು ಮಾಡತಕ್ಕ ಶಕ್ತಿಯುಳ್ಳ ಮಹಾಪುರುಷರು ಆಗಿದ್ದರು. ಅಂತಹ ದೂರದರ್ಶಿಗಳು ಇತಿಹಾಸದಲ್ಲಿ ಕೈಬೆರಳಿನಿಂದ ಎಣಿಸುವಷ್ಟು ಜನರು ಮಾತ್ರ ಸಿಗುತ್ತಾರೆ. ಇತಿಹಾಸವು ಅವರ ಮೇಲ್ಮೆಯನ್ನು ಚೆನ್ನಾಗಿ ಕೊಂಡಾಡಿರುತ್ತದೆ.

## ೧೯. ಬಸವಣ್ಣನವರು ಭಕ್ತರೇ?

ಷಟ್‌ಸ್ಥಲಗಳಲ್ಲಿ ಭಕ್ತಿಯ ಸ್ಥಲವು ಉಳಿದ ಐದು ಸ್ಥಲಗಳಿಗೆ ಆಧಾರಸ್ತಂಭ ವಾಗಿರುತ್ತದೆ. ಶ್ರೀ ಬಸವೇಶ್ವರರು ಭಕ್ತಿಯನ್ನು ಕೈಕೊಂಡು ಲೋಕದಲ್ಲಿ ಶಿವಭಕ್ತಿ ಯನ್ನು ಪ್ರಸಾರಮಾಡಿ ಭಕ್ತಿಭಂಡಾರಿಗಳಾಗಿ ಮೆರೆದರು. ಆದ್ದರಿಂದಲೇ ಭಕ್ತಸ್ಥಲ ಬಸವಣ್ಣನಿಗಾಯಿತು ಎಂದು ಶರಣರು ಹೇಳಿದ್ದಾರೆ. ಅವರು ಭಕ್ತಸ್ಥಲವನ್ನು ಕೈಕೊಂಡರೂ ವೀರಶೈವನಿರ್ಣಯ ಪರಮಾವತಾರ, ಶಿವಾಚಾರ ಚಕ್ರವರ್ತಿ, ಶಿವಸಮಯ ಪ್ರತಿಷ್ಠಾಚಾರ್ಯರೆಂದೆನ್ನಿಸಿಕೊಂಡರು. ಇಂತಹ ಸಾವಿರಾರು ವಿಶೇಷಣಗಳನ್ನು ಶರಣರೂ, ಪಂಡಿತರೂ, ಅನುಭಾವಿಗಳೂ, ಕವಿಗಳೂ ಅವರಿಗೆ ಜೋಡಿಸಿದ್ದಾರೆ.

"ಶಿವಶಕ್ತಿಗಳುದಯವಾಗದಮುನ್ನಬಸವಣ್ಣನೇ ಭಕ್ತನು" ಎಂದು ಶಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ. "ಭಕ್ತಿಯು ಬೆಳವಿಗೆಗೆ ಬಸವಣ್ಣ ಕಾರಣಿಕನು" ಎಂದು ಶ್ರೀ ಚನ್ನಬಸವಣ್ಣನವರು ಅಪ್ಪಣೆ ಮಾಡಿದ್ದಾರೆ. "ತನುವ ದಾಸೋಹಕ್ಕೆ ಸವೆಸಿ ಮನವ ಲಿಂಗ ಧ್ಯಾನದಲ್ಲಿ ಸವೆಸಿ ಧನವ ಜಂಗಮದಲ್ಲಿ ಸವೆಸಿ ಗೆಲಬಲ್ಲರೆ ಸಂಗನ ಬಸವಣ್ಣನಲ್ಲದೆ ಮತ್ತಾರನು ಕಾಣೆನು ನಿಮ್ಮ ಶರಣ ಸಂಗನ ಬಸವಣ್ಣಂಗೆ ನಮೋ ನಮಃ ಎನುತಿರ್ದೆನು" ಎಂದು ಪ್ರಭುದೇವರ ವಚನವಿದೆ.

ಆದರೆ ಅಯ್ಯೋ ಬಸವಣ್ಣನು ಭಕ್ತನೆಂದು ಹಾಸ್ಯಸೂಚಕ ಮಾತುಗಳನ್ನು ಕೆಲವರು ಹೇಳುವುದು ಕಂಡುಬರುತ್ತದೆ. ಆದರೆ ಬಸವಣ್ಣನು ಇವರು ತಿಳಿದುಕೊಂಡಂತಹ ಭಕ್ತನಲ್ಲ—ಹಾಗಾದರೆ ಎಂತಹ ಭಕ್ತನು?

ಯತಿ ತತಿ ಚಕ್ರವರ್ತಿಗಳಾದ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಬಸವಣ್ಣನವರ ಭಕ್ತತನವನ್ನು ಕೆಳಗೆ ಬರೆದಂತೆ ಕೊಂಡಾಡಿದ್ದಾರೆ. ಅಂತಹ ಭಕ್ತರೇ ಬಸವಣ್ಣನವರು.

**ಸಿದ್ಧೇಶ್ವರ ವಚನ—ಪುಟ ೧೬೧**

> "ಕಾಯಕ್ಕಾಧಾರ ಭಕ್ತ, ಜೀವಕ್ಕಾಧಾರ ಭಕ್ತ, ಶರಣಂಗಾಧಾರ ಭಕ್ತ, ಲಿಂಗಕ್ಕಾಧಾರ ಭಕ್ತ, ಜಂಗಮಕ್ಕಾಧಾರ ಭಕ್ತ, ಪ್ರಸಾದಕ್ಕಾಧಾರ ಭಕ್ತ, ಶಕ್ತಿಗಾಧಾರ ಭಕ್ತ, ಭಕ್ತಿಗಾಧಾರ ಭಕ್ತ, ಎನಗಾಧಾರ ಭಕ್ತ, ನಿನಗಾಧಾರ ಭಕ್ತ, ನಾನು ನೀನು ಎನ್ನದ ನಿರವಯ ನಿರ್ಮಾಯನಯ ಭಕ್ತನು ಇಂತಪ್ಪ ಭಕ್ತ ಸಂಗನ ಬಸವಣ್ಣನ ಶ್ರೀಪಾದಪದ್ಮದಲ್ಲಿ ಭ್ರಮರನಾಗಿರಿಸಯ್ಯ ಮಹಾಲಿಂಗ ಗುರು ಸಿದ್ಧೇಶ್ವರ ಪ್ರಭುವೇ."

ಈ ವಚನದಲ್ಲಿ ಬಸವಣ್ಣನವರು ಎಂತಹ ಭಕ್ತರೆಂಬುವುದು ಬಹಳ ನಿಚ್ಚಳವಾಗಿದೆ. ಈ ವಚನವನ್ನು ಪುನಃ ಪುನಃ ಓದಿ ಮನನಮಾಡಿಕೊಳ್ಳಬೇಕು. ಅನಾದಿ ಭಕ್ತನಿಂದಲೇ ವೀರಶೈವ ಮತ ಸ್ಥಾಪಸೆಯಾಗಿದೆ ಎಂದು ಕೆಲವರು ಹೇಳುತ್ತಾರೆ. ವೀರಶೈವ ತತ್ತ್ವ ಪ್ರಕಾಶಿಕಾ ಗ್ರಂಥದಲ್ಲಿಯ ಮೊದಲನೆಯ ಲೇಖನವನ್ನು ಓದಿ ನೋಡಿರಿ. ಅನಾದಿ ಭಕ್ತನು ಬಸವೇಶ್ವರರೆಂದು ಅಲ್ಲಲ್ಲಿ ಉಲ್ಲೇಖಗಳು ಸಿಗುತ್ತವೆ.

ಆದ್ದರಿಂದಲೇ ಮಹಾಕವಿ ಷಡಕ್ಷರಿಯು ಕೆಳಗೆ ಬರೆದಂತೆ ಹೇಳಿದ್ದಾನೆ:

> ಗುರುರೂಪಂ ಲಿಂಗರೂಪಂ ಪರತರಚರರೂಪಂ ಪ್ರಸಾದಸ್ವರೂಪಂ।
> ಹರಪಾದಾಂಭಃ ಸ್ವರೂಪಂ ಭಸಿತಲಸಿತರೂಪಂ ಸುರುದ್ರಾಕ್ಷರೂಪಂ।
> ವರಷಡ್ವರ್ಣಸ್ವರೂಪಂ ಪರಮಶಿವಮಯಾನಾದಿ ಭಕ್ತಸ್ವರೂಪಂ।
> ಪರಚಿಚ್ಛಕ್ತಿಸ್ವರೂಪಂ ಬಸವನ ಸದ್ರುಶಾನಂದ ಸತ್ಯಸ್ವರೂಪಂ॥

೯೦೦ ವರ್ಷಗಳಿಂದ ಸಾವಿರಾರು ಕವಿಗಳೂ, ಪಂಡಿತರೂ, ತತ್ವಜ್ಞಾನಿಗಳೂ ಹೇಳಿರುವ ವಿಷಯಗಳನ್ನೋದಿ ತಿಳಿದುಕೊಳ್ಳುವುದು ಭೂಷಣವು. ತತ್ವವನ್ನು ಬಿಟ್ಟು ಅಡ್ಡಹಾದಿ ಹಿಡಿದರೆ ಯಾರ ಮೇಲಾದರೂ ಟೀಕಿಸಲಿಕ್ಕೆ ಬರುತ್ತದೆ. ಅಂತಹ ಮಾರ್ಗಾನುಯಾಯಿಗಳಿಗೆ ಸಮಾಜದಲ್ಲಿ ಬೆಲೆ ಸಿಗಲಾರದು.

## ೨೦. ಸತ್ಯಾಗ್ರಹವೂ ಶರಣರೂ

ಶ್ರೀ ಬಸವಾದಿ ಶರಣರು ಕಾಯಕಗಳ ಮೂಲಕ ಸತ್ಯಾಗ್ರಹ ಪ್ರಾರಂಭ ಮಾಡಿರುವುದನ್ನು ನೋಡಿದರೆ ಭರತಖಂಡದ ಯಾವ ಭಾಗದಲ್ಲಿಯೂ ಇವರ ಹೊರತು ಸತ್ಯಾಗ್ರಹ ಮಾಡಿದವರು ಹಿಂದಿನ ಇತಿಹಾಸದಲ್ಲಿ ಎಲ್ಲಿಯೂ ಸಿಗುವುದಿಲ್ಲ. ಇದೊಂದು ಹೊಸ ವಿಷಯ ಶರಣರ ಕಾಲದಿಂದ ಪ್ರಾರಂಭವಾದುದು ಎಂದು ಎಲ್ಲರೂ ಒಪ್ಪತಕ್ಕ ಮಾತಾಗಿರುತ್ತದೆ. ಕಾಯಕಗಳೆಂದರೆ ಕೇವಲ ಹೊಟ್ಟೆಯನ್ನು ತುಂಬಿಸಿಕೊಳ್ಳುವುದು ಮಾತ್ರವಲ್ಲ. ಕಾಯಕದಲ್ಲಿ ಬಂದದ್ದರೊಳಗೆ ಕೆಲವು ಅಂಶವನ್ನು ಸಮಾಜಕ್ಕೆ ಅರ್ಪಿಸಿ ಉಳಿದ ಭಾಗದಿಂದ ತನ್ನ ಸಂಸಾರ ನಡೆಯಿಸಬೇಕಾಗಿದ್ದಿತು. ಅದರಲ್ಲಿ ಯಾರಿಗೂ ಅತೃಪ್ತಿ ಇರಲಿಲ್ಲ. ಸೋಮಾರಿಗಳಾಗಿ ದುಡಿಯದೆ ಯಾರೂ ಊಟವನ್ನು ಮಾಡಲಿಕ್ಕೆ ಆಸ್ಪದವಿರಲಿಲ್ಲ. ಸಮಾಜದ ಕಟ್ಟಳೆ ಹಾಗೆ ಇದ್ದಿತು. ಒಬ್ಬೊಬ್ಬರು ಒಂದೊಂದು ಕಾರ್ಯವನ್ನು ಕೈಕೊಂಡು ದೇಶದ ತುಂಬ ಪ್ರಚಾರ ಮಾಡುತ್ತಿದ್ದರು. ಸತ್ಯಾಗ್ರಹದಲ್ಲಿ ಅನೇಕ ಭೇದಗಳಿದ್ದವು. ಅದರಲ್ಲಿ ಮುಳ್ಳುಗಾವಿಯ ಕಾಯಕ ರೋಮಾಂಚಕಾರಿಯಾಗಿರುತ್ತದೆ. ದೇಶದಲ್ಲಿ ಯಾವುದಾದರೊಂದು ಕಡೆಗೆ ಅನಾಚಾರವಾಗಲೀ, ಅತ್ಯಾಚಾರವಾಗಲೀ ಆದರೆ ಈ ಕಾಯಕದವರ ದೃಷ್ಟಿಗೆ ಜನಗಳು ತಂದುಕೊಟ್ಟ ಕೂಡಲೇ ಆ ಊರಿಗೆ ಹೋಗಿ ಒಂದು ಮನೆಯವರು ಅತ್ಯಾಚಾರ ಮಾಡಿದ್ದರೆ, ಆ ಮನೆಯ ಮುಂದೆಯೂ, ಒಂದು ಓಣಿಯವರು ಕೆಟ್ಟ ಕೃತ್ಯ ಮಾಡಿದ್ದಾದರೆ ಆ ಓಣಿಯ ಮಧ್ಯಭಾಗದಲ್ಲಿಯೂ ಮುಳ್ಳಿನಂತೆ ಹರಿತವಾದ ಮೊನೆಗಳುಳ್ಳ ನೂರಾರು ಮೊಳೆಗಳ ಮೇಲೆ ನಿಂತುಕೊಂಡು ಊಟ ಉಪಚಾರಾದಿಗಳಿಲ್ಲದೆ ಆ ಮನೆಯವರು ಅಥವಾ ಆ ಬೀದಿಯವರು ಮಾಡಿದ ಅನಾಚಾರವನ್ನು ಇನ್ನುಮೇಲೆ ಮಾಡುವುದಿಲ್ಲವೆಂದು ಹೇಳಿದಮೇಲೆ ಅವರು ಅದರಿಂದ ಕೆಳಗೆ ಇಳಿದು ಬಂದು ತಮ್ಮ ಶಿವಾರ್ಚನೆ ತೀರಿಸಿಕೊಂಡು ಮುಂದೆ ಪ್ರಯಾಣ ಮಾಡುತ್ತಿದ್ದರು. ತಮ್ಮ ಕಾರ್ಯ ಸಾಧಿಸುವವರೆಗೆ ಈ ಸತ್ಯಾಗ್ರಹ ನಡೆಯುತ್ತಲೇ ಇರುತ್ತಿತ್ತು. ಇದು ಬಹಳ ಮಹತ್ವದ ಕಾರ್ಯವಾಗಿರುತ್ತದೆ.

ಇದರ ಮುಖ್ಯ ಗುರಿಯು ಎರಡನೆಯವರು ಮಾಡಿದ ತಪ್ಪಿಗಾಗಿ ತಾನು ಪ್ರಾಯಶ್ಚಿತ್ತ ತೆಗೆದುಕೊಂಡು ಅದರ ಪರಿಹಾರ ಮಾಡುವುದೆಂದರೆ ಸಾಮಾನ್ಯವಾದುದಲ್ಲ. ನಮ್ಮ ಪ್ರಾಚೀನ ಸುಭಾಷಿತಕಾರರು ಸಜ್ಜನರನ್ನು ವರ್ಣಿಸುವ ಕಾಲಕ್ಕೆ "ಸಜ್ಜನಸ್ಯ ಹೃದಯಂ ನವನೀತಂ ಯದ್ವದಂತಿ ಕವಯಸ್ತದಲೀಕಂ" ಅಂದರೆ ಕವಿಗಳು ಸಜ್ಜನರ ಹೃದಯ ಬೆಣ್ಣೆಯಂತೆ ಮೃದುವಾದುದೆಂದು ಹೇಳುತ್ತಾರೆ. ಈ ಮಾತು ನಿಜವಲ್ಲ. ಬೆಣ್ಣೆಯು ತನಗೆ ತಾಪವಾದರೆ ಕರಗುತ್ತದೆ. ಸಜ್ಜನರು ಎರಡನೆಯವರ ಕಷ್ಟವನ್ನು ನೋಡಿ ಕನಿಕರಪಡುತ್ತಾರೆ. ಅಂದರೆ ಬೆಣ್ಣೆಗಿಂತಲೂ ವಿಲಕ್ಷಣವಾದ ಸ್ವಭಾವ ಸಜ್ಜನರದು.

ಈ ಶಿವಶರಣರ ಸತ್ಯಾಗ್ರಹದಂತೆಯೇ ಮಹಾತ್ಮಾಜಿಯವರು ಪ್ರಾರಂಭಿಸಿದ ಸತ್ಯಾಗ್ರಹವಿರುತ್ತದೆ.

ಒಂದು ಸಾರಿ ಸಬರಮತೀಯ ಆಶ್ರಮದಲ್ಲಿ ಹುಡುಗರೂ ಹುಡುಗಿಯರೂ ಕೂಡಿಯೇ ಅಭ್ಯಾಸಮಾಡುತ್ತಿದ್ದಾಗ ಒಬ್ಬ ಹುಡುಗನ ಅತ್ಯಾಚಾರದಿಂದ ಒಂದು ಹುಡುಗಿಯು ಗರ್ಭಿಣಿಯಾದಳು. ಆಗ ಮಹಾತ್ಮಾಜಿಯವರು ೫ ದಿನ ಉಪವಾಸ

ಮಾಡಿದರು. ಎಲ್ಲರೂ ತಮ್ಮ ತಪ್ಪನ್ನು ಒಪ್ಪಿಕೊಂಡು ಇನ್ನುಮೇಲೆ ಇಂತಹ ಅತ್ಯಾಚಾರವಾಗದಂತೆ ನಡೆದುಕೊಳ್ಳುತ್ತೇವೆಂದು ಹೇಳಿದಮೇಲೆ ಮಹಾತ್ಮಾಜಿಯವರು ತಮ್ಮ ಉಪವಾಸ ಮುರಿದರು. ಇಂತಹ ಸತ್ಯಾಗ್ರಹ ಶಿವಶರಣರಿಂದ ೯೦೦ ವರ್ಷಗಳ ಹಿಂದೆ ಪ್ರಾರಂಭಿಸಿದ್ದವುಗಳೇ ಈಗಿನ ಸತ್ಯಾಗ್ರಹಕ್ಕೆ ಆಧಾರವಾಗಿವೆ.

## ೨೧. ಧನಸಹಾಯ ಮಾಡಿದ ಮಹನೀಯರು

ಬಸವತತ್ವ ರತ್ನಾಕರವು ಅಚ್ಚಾಗಿ ಮಹಾಜನಗಳ ಕೈಸೇರುವ ಪ್ರಸಂಗ ತಂದು ಕೊಟ್ಟ ದಾನಿಗಳ ಗುಣಗಾನವನ್ನೆಷ್ಟು ಮಾಡಿದರೂ ಅಲ್ಪವೇ ಸರಿ. ಅವರು ಉದಾರ ಮನಸ್ಕರಾಗಿ ಸಹಾಯ ಮಾಡದಿದ್ದರೆ ನಾನೆಷ್ಟು ಶ್ರಮವಹಿಸಿ ಬರೆದರೂ ಈ ಗ್ರಂಥ ಬೆಳಕಿಗೆ ಬರುತ್ತಿದ್ದಿಲ್ಲ. ದೇವರು ಈ ಮಹನೀಯರಿಗೆಲ್ಲ ಸರ್ವತೋಭಿವೃದ್ಧಿಯನ್ನು ಕೊಡಲೆಂದು ಹಾರೈಸುತ್ತೇನೆ. ಶ್ರೀಮನ್ನಿರಂಜನ ಜಗದ್ಗುರು ಜಯದೇವ ಮುರುಘ ರಾಜೇಂದ್ರ ಮಹಾಸ್ವಾಮಿಗಳು, ಚಿತ್ರದುರ್ಗ—ಹಲವು ವರ್ಷಗಳ ಹಿಂದೆಯೇ ನನ್ನನ್ನು ಚಿತ್ರದುರ್ಗಕ್ಕೆ ಬರಮಾಡಿಕೊಂಡು ಒಂದು ದಿನ ಬೆಳಗಿನ ಸಮಯದಲ್ಲಿ ಒಂದು ಗಂಟೆಯ ವರೆಗೆ ಓದಿಸಿ ಆನಂದಹೃದಯರಾಗಿ ಇದು ಅಭೂತಪೂರ್ವ ಗ್ರಂಥವೆಂದು ಅಪ್ಪಣೆ ಮಾಡಿದರು. ತಾವು ಅಪ್ಪಣೆ ಕೊಡಿಸುವ ಈ ಮಾತು ನನ್ನ ತೃಪ್ತಿಗಾಗಿಯೋ ಅಥವಾ ತಮ್ಮಂತರಾತ್ಮನಿಂದ ಬಂದುದೋ ಎಂದು ಪ್ರಶ್ನಿಸಿದೆನು. ನಿಶ್ಚಯವಾಗಿ ಹೃದಯದಿಂದ ಬಂದ ಮಾತಿದೆಂದು ಸಂತೋಷಿಸಿ, ಪ್ರಿಂಟಿಗಾಗಿ ೧೦೦೧ (ಒಂದು ಸಾವಿರದ ಒಂದು) ರೂಪಾಯಿಯನ್ನು ಆಶೀರ್ವದಿಸಿ ಬೇಗನೆ ಅಚ್ಚಾಗಬೇಕೆಂದು ಒಂದು ಪತ್ರವನ್ನು ತಾವೇ ಬರೆದುಕೊಟ್ಟಿದ್ದರು. ಕಾರಣಾಂತರದಿಂದ ಅಚ್ಚಾಗುವುದು ತಡವಾದ ಕಾರಣ ಅವರು ಈ ಗ್ರಂಥವನ್ನು ನೋಡದೆ ಲಿಂಗೈಕ್ಯರಾದುದು ನನಗೆ ತುಂಬಾ ಸಂತಾಪವನ್ನುಂಟು ಮಾಡಿದೆ. ದೈವಲೀಲೆಗೆ ಯಾರು ಹೊಣೆಗಾರರು?

ವೀರಶೈವ ಸಮಾಜದಲ್ಲಿ ಸಂಸ್ಕೃತಿಯ ಪರಂಪರೆಯನ್ನು ಸಂರಕ್ಷಿಸುತ್ತಿರುವ ಶರಣ ಬಸವೇಶ್ವರ ಸಂಸ್ಥಾನದ ಮಾಲಿಕರಾದ ಶ್ರೀ ದೊಡ್ಡಪ್ಪ ಯಜಮಾನರನ್ನು ಒಂದು ದಿವಸ ಕಂಡು ಇಂತಹ ಗ್ರಂಥವನ್ನು ಬರೆದಿದ್ದೇನೆ, ಶರಣರ ಕೃಪೆಯಾಗಬೇಕೆಂದು ನನ್ನ ಬಾಯಿಂದ ಶಬ್ದ ಬರುವುದರೊಳಗೆ ೫೦೦ ಎಂದು ಥಟ್ಟನೆ ಉತ್ತರ ಬಂದಿತು. ಆಚಾರ ನಿಷ್ಠರೂ, ಶಿವಕಲಾಧುರೀಣರೂ ಆದ ಯಜಮಾನರು ನನ್ನ ಬಗ್ಗೆ ಅದೆಷ್ಟು ಪ್ರೇಮ ದಿಂದಿರುವರೆಂಬುದನ್ನು ವರ್ಣಿಸಲಾರೆನು. ಶ್ರೀಮಾನ್ ಎನ್. ರುದ್ರಪ್ಪ ವಕೀಲರು, ಯಾದಗಿರಿ ರೂ. ೨೫೦, ದಾವಣಗೆರೆಯ ಮಹಾದಾನಿಗಳಾಗಿದ್ದ ಚಿಗಟೇರಿ ಮುರಿಗೆಪ್ಪ ನವರ ಸುಪುತ್ರರಾದ ವೀರಭದ್ರಪ್ಪ ಮತ್ತು ಜಯಣ್ಣನವರು ರೂ. ೨೫೦, ಶ್ರೀಮ ನ್ನಿರಂಜನ ಸಂಸ್ಥಾನ ಮಠದ ದುರದುಂಡೇಶ್ವರ ಮಹಾಸ್ವಾಮಿಗಳವರು ರೂ. ೨೦೦, ಹಾಲಕೇರಿ ಅನ್ನದಾನ ಶ್ರೀ ಶಿವಯೋಗಿಗಳು ರೂ. ೨೦೦, ಹಾನಗಲ್ ಸದಾಶಿವ ಸ್ವಾಮಿಗಳವರು ರೂ. ೨೦೦, ಉರವಕೊಂಡೆ ಶ್ರೀ ಜಗದ್ಗುರು ಕರಿಬಸವ ಸ್ವಾಮಿಗಳು ರೂ. ೧೬೦, ಜಯದೇವಮ್ಮ ಲಿಂಗಾಡೆ ಸೊಲ್ಲಾಪುರ ರೂ. ೧೫೦ ಸಹಾಯ ಮಾಡಿದ್ದಾರೆ.

ಕೆಳಗೆ ಬರೆದವರು ಒಂದೊಂದು ನೂರು ರೂಪಾಯಿ ಕೊಟ್ಟು ಸಹಾಯ ಮಾಡಿದ್ದಾರೆ. ಶ್ರೀಮನ್ನಿರಂಜನ ಮೃತ್ಯುಂಜಯ ಮಹಾಸ್ವಾಮಿಗಳವರು, ಮುರುಘಾಮಠ, ಧಾರವಾಡ,

ಶ್ರೀಮನ್ನಿರಂಜನ ಶಿವಾನಂದ ಸ್ವಾಮಿಗಳವರ ಸಂಸ್ಥಾನ, ಅರಭಾವಿ ಮಠ, ಶ್ರೀಮನ್ನಿರಂಜನ ಗುರುಶಾಂತ ಸ್ವಾಮಿಗಳವರು, ಕೊಲ್ಹಾಪುರ, ಶ್ರೀಮನ್ನಿರಂಜನ ಸಿದ್ಧರಾಮ ಸ್ವಾಮಿಗಳು, ಯಕ್ಕುಂಡಿ ಮುರುಘಾಮಠ (ಈಗ ಸಾವಳಗಿ ಸಂಸ್ಥಾನಾಧೀಶ್ವರರು), ಶ್ರೀಮನ್ನಿರಂಜನ ಚನ್ನವೀರ ಸ್ವಾಮಿಗಳು, ಲಿಂಗನಾಯಕನ ಹಳ್ಳಿ, ಶ್ರೀಮನ್ನಿರಂಜನ ಶಿವಮೂರ್ತಿ ಸ್ವಾಮಿಗಳು, ಕಲ್ಬುರ್ಗಿ ಮಠ, ಹುಬ್ಬಳ್ಳಿ, ಬಸಪ್ಪ ಗುಡಗೂರು, ಹೊಳಲು, ಫಕ್ಕೀರಪ್ಪನವರು, ಬೆಳಗಾವಿ, ಹೊಳಲು, ಸೋಮಣ್ಣ ಯಲಗಚ್ಚಿನ, ಹೊಳಲು, ಚಂದ್ರಶೇಖರ ದೇವರು, ಜಗದ್ಗುರು ತೋಂಟದಾರ್ಯ ಮಠ, ಗದಗ, ಲಿಂಗಯ್ಯನವರು ಬಣ್ಣದ ಮಠ, ಗದಗ, ಮಹಂತಪ್ಪನವರು ಜವಳಿ, ಗದಗ, ವೀರಪ್ಪನವರು ಬಸರಿಗಿಡದ, ಗದಗ, ಬಸವಂತರಾಯರು ಕುಂಬಾರೆ, ಸೊಲ್ಲಾಪುರ, ಗುರುಶಾಂತಪ್ಪನವರು ಉಮ್ರಾರ್ಜಿ, ಸೊಲ್ಲಾಪುರ, ದಾನಪ್ಪನವರು ಕಬ್ಬೂರು, ಬ್ಯಾಡ್ಗಿ, ಚಂಬಣ್ಣನವರು ಮಾಗಾಂವಿ, ಹಾವೇರಿ, ಮುರಿಗೆಪ್ಪ ಶೆಟ್ಟರು, ಬ್ಯಾಡ್ಗಿ, ಚಚಡಿ ದೇಸಾಯರು, ಬೆಳಗಾವಿ, ದುಂಡಪ್ಪ, ಕೊಲ್ಹಾಪುರ, ಶಿವಬಸಪ್ಪನವರು ಬಾಗಲಕೋಟೆ, ಸೊಲ್ಲಾಪುರ, ಶ್ರೀ ಶಾಂಗಲಿಂಗಸ್ವಾಮಿಗಳು, ಜೇವರಿಗಿ ಷಣ್ಮುಖಸ್ವಾಮಿ ಮಠ, ನಾಗಪ್ಪನವರು ಕಾಡಾದಿ ರೂ. ೭೫. ಕೆಳಗೆ ಬರೆದಿರುವವರು ಐವತ್ತು ರೂಪಾಯಿಗಳನ್ನು ಕೊಟ್ಟಿರುತ್ತಾರೆ. ಶ್ರೀ ಶಿವಪ್ಪನವರು, ಮಾನ್ವಿ, ಗದಗ, ಶಾಂತಪ್ಪನವರು ಯಳಮಲಿ, ಗದಗ, ಕೆ. ಪಿ. ಗದಗ, ಚನ್ನಬಸಪ್ಪನವರು ಅಂಗಡಿ, ಗದಗ, ಸಿದ್ಧಲಿಂಗಪ್ಪ ಬುಳ್ಳಾ, ಗದಗ, ತೋಟಪ್ಪನವರು ಕೋಟಿ, ಬಿ.ಎ., ಎಲ್‌ಎಲ್.ಬಿ., ಗದಗ, ಗಂಗಾಧರ ದೇವರು, ಮೈಸೂರುಮಠ, ಎಂ. ಪಿ. ವಾಲಿ, ಬೆಳಗಾವಿ, ನಾಗಯ್ಯನವರು ಶಿವಪ್ಪಯ್ಯನಮಠ, ಗದಗ.

## ೨೨. ಮೈಸೂರು ಸರಕಾರದ ಸಹಾಯ

ಬಸವತತ್ವ ರತ್ನಾಕರದ ಪ್ರಿಂಟಿಂಗಿನ ಸಹಾಯಕ್ಕೆ ಮೈಸೂರು ಸರಕಾರದವರು ೨೮೮ ಪುಟ ಪ್ರಿಂಟಾದದ್ದನ್ನು ನೋಡಿ ಈ ಗ್ರಂಥದ ಮಹತ್ವವನ್ನರಿತು ೨,೫೦೦ ರೂಪಾಯಿಗಳನ್ನು ಸಹಾಯ ಮಾಡಿದುದಕ್ಕೆ ನಮ್ಮ ಸರಕಾರದವರನ್ನು ತುಂಬಾ ಅಭಿನಂದಿಸುತ್ತೇನೆ. ವಿದ್ಯಾಖಾತೆಯ ಮಂತ್ರಿಗಳಾದ ಅಣ್ಣಾರಾವ್ ಗಣಮುಖಿಯವರೇ ಇದಕ್ಕೆ ಮೂಲ ಕಾರಣರೆಂದು ತಿಳಿಸಲಿಕ್ಕೆ ಬಹಳ ಸಂತೋಷವಾಗುತ್ತದೆ.

## ೨೩. ಗ್ರಂಥಕ್ಕೆ ಕೆಲವರಿಂದಾದ ಸಹಾಯ

ಈ ಗ್ರಂಥವನ್ನು ಬರೆಯುವ ಕಾಲಕ್ಕೆ ಅನೇಕ ಮಹನೀಯರು ಪ್ರಕಟಿಸಿದ ಗ್ರಂಥಗಳಿಂದ ನನಗೆ ಬಹಳ ಸಹಾಯವಾಗಿದೆ. ಅವರ ಉಪಕಾರ ಸ್ಮರಣೆ ಮಾಡುವುದು ನನ್ನ ಪ್ರಾಥಮಿಕ ಕಾರ್ಯವಾಗಿರುತ್ತದೆ. ಬಸವಣ್ಣನವರೂ—ಕವಿಗಳ ಕಾಣಿಕೆಯೂ ಎಂಬುವ ಪ್ರಕರಣದಲ್ಲಿ ಅನೇಕ ಜನರ ಗ್ರಂಥಗಳಲ್ಲಿಯ ವಿಷಯಗಳನ್ನು ಆರಿಸಿ ತೆಗೆದುಕೊಂಡಿದ್ದೇನೆ. ಈ ಗ್ರಂಥದಲ್ಲಿ ಬಸವಣ್ಣನವರೂ—ಆಂಧ್ರಕವಿಗಳ ಕಾಣಿಕೆಯೂ ಎನ್ನುವ ವಿಷಯ ಸಂಪೂರ್ಣವಾಗಿ ಟಿ. ಹೆಚ್. ಎಂ. ಸದಾಶಿವಯ್ಯ, ರಿಟೈರ್ಡ್ ಜಡ್ಜ್ ಇವರು ಅನೇಕ ಕವಿಗಳ ವಿಷಯ ಹುಡುಕಿ ಸಿದ್ಧಮಾಡಿಕೊಟ್ಟಿರುತ್ತಾರೆ. ಶಿಲಾಶಾಸನವೂ—ಬಸವಣ್ಣನವರೂ ಎಂಬುವ ವಿಷಯ ರಾಷ್ಟ್ರಕವಿ ಮಂಜೇಶ್ವರದ ಗೋವಿಂದ ಪೈ ಇವರು ಎಲ್ಲ ಶಾಸನಗಳನ್ನೂ ಹುಡುಕಿ ಎಷ್ಟೋ ವರ್ಷಗಳ ಹಿಂದೆಯೇ ಸಿದ್ಧಮಾಡಿಕೊಟ್ಟಿರುತ್ತಾರೆ.

ಬಸವಣ್ಣನವರೂ—ಶಿವಾನುಭವಮಂಟಪವೂ ಎಂಬುವ ವಿಷಯದಲ್ಲಿ ಚನ್ನಪ್ಪನವರು ಉತ್ತಂಗಿ ಇವರು ಬರೆದ ಶಿವಾನುಭವಮಂಟಪ ಎಂಬುವ ಗ್ರಂಥದಿಂದ ಇದಕ್ಕಿದ್ದ ಹಾಗೆ ಕೆಲವು ವಿಷಯ ಎತ್ತಿ ಬರೆದಿದ್ದೇನೆ. ಅದೇ ಪ್ರಕಾರ ಅ. ನ. ಕೃಷ್ಣರಾಯರು ಬರೆದಿದ್ದುದನ್ನು ಕೂಡ ಎತ್ತಿ ತೆಗೆದುಕೊಂಡಿದ್ದೇನೆ. ಹೀಗೆಯೇ ಸಾಹಿತ್ಯದ ಪ್ರಕರಣದಲ್ಲಿಯೂ ಕೆಲವರ ವಿಷಯ ತೆಗೆದುಕೊಂಡು ಬರೆದಿದ್ದೇನೆ. ಒಟ್ಟಿನ ಮೇಲೆ ನಾನು ಯಾರಯಾರ ಗ್ರಂಥದಿಂದ ತೆಗೆದುಕೊಂಡಿರುತ್ತೇನೆಯೋ ಅವರಿಗೆಲ್ಲ ಕೃತಜ್ಞನಾಗಿರುತ್ತೇನೆ. ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿ ೫೦ ಗ್ರಂಥಗಳು ಸಿಕ್ಕಿ ನನಗೆ ಸಹಾಯವಾಗಿದೆ. ಅವರಿಗೆ ನನ್ನ ವಂದನೆಗಳನ್ನು ಕೃತಜ್ಞತೆಯಿಂದ ಸಲ್ಲಿಸದೆ ಇರಲಾರೆನು.

## ೨೪. ಮೈಸೂರಿನ ರಾಜ್ಯಪಾಲರು

ಮೈಸೂರು ರಾಜ್ಯದ ರಾಜ್ಯಪಾಲರಾಗಿರುವ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್‌ರವರಿಗೆ ಬಸವತತ್ವ ರತ್ನಾಕರ ಗ್ರಂಥವನ್ನು ಸಮರ್ಪಿಸುವ ಸುಪ್ರಸಂಗ ಬಂದುದಕ್ಕೆ ನನಗೆ ತುಂಬಾ ಸಂತೋಷವಾಗಿದೆ. ಶ್ರೀ ಜಯಚಾಮರಾಜ ಒಡೆಯರವರು ಈ ಗ್ರಂಥವನ್ನು ಓದಿ ಸಂತೋಷಪಟ್ಟು ಅರ್ಪಿಸಲಿಕ್ಕೆ ಅಪ್ಪಣೆ ಮಾಡಿದುದಕ್ಕೆ ಕೃತಜ್ಞನಾಗಿರುತ್ತೇನೆ. ಕರ್ಣಾಟಕದ ರತ್ನಸಿಂಹಾಸನಾಧಿಪತಿಗಳಾದ ಇವರು ಗ್ಳಳಗನೆಯ ಇಸವಿಯಲ್ಲಿ ಅರಮನೆಯ ಅಂಬಾವಿಲಾಸದಲ್ಲಿ ನನಗೆ ಭೇಟಿಯನ್ನು ದಯಪಾಲಿಸಿ ಅರ್ಧ ಗಂಟೆಯವರೆಗೆ ಮಾತನಾಡಿ ನೀವು ವ್ಯಾಕರಣತೀರ್ಥರಾದರೂ ಹೀಗೆ ಕೆಲಸ ಮಾಡುತ್ತಿರುವುದನ್ನು ನೋಡಿ ನಮಗೆ ತುಂಬಾ ಅಭಿಮಾನವಾಗುತ್ತದೆಂದು ಅಪ್ಪಣೆ ಕೊಡಿಸಿದ ವಿಷಯವನ್ನು ನಾನೆಂದೂ ಮರೆಯುವಂತಿಲ್ಲ. ಆಗ ನಾನು ೨೪ ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷನಿದ್ದ ಕಾರಣ ನನ್ನ ಪರಮ ಸ್ನೇಹಿತರೂ, ಕನ್ನಡ ನಾಡಿನ ಸಾಹಿತ್ಯ ಪುರುಷರಲ್ಲಿ ಅಗ್ರಗಣ್ಯರೂ ಆಗಿದ್ದ ಬಿ. ಎಂ. ಶ್ರೀಕಂಠಯ್ಯನವರ ಮೂಲಕ ಈ ಭೇಟಿಯ ಸುಸಮಯ ಒದಗಿದ್ದಿತು. ಶ್ರೀಕಂಠಯ್ಯನವರೂ ನೀವೂ ಒಳ್ಳೇ ಸ್ನೇಹಿತರೇ ಎಂದು ಶ್ರೀಮನ್ಮಹಾರಾಜರು ಮುಗುಳ್ನಗೆ ಬೀರುತ್ತ ನನ್ನನ್ನು ಕೇಳಿದ್ದರು.

ಮೈಸೂರರಮನೆ, ಮೈಸೂರು ಸರಕಾರಗಳ ೩೦೦ ವರ್ಷಗಳ ಇತಿಹಾಸವನ್ನವ ಲೋಕಿಸಿದರೆ ನಮ್ಮ ಕರ್ಣಾಟಕಕ್ಕೆ ಅಪಾರ ಉಪಕಾರವಾಗಿದೆ. ಅನೇಕ ಜನ ರಾಜರು ಕವಿಗಳಾಗಿ, ಪಂಡಿತರಾಗಿ ಗ್ರಂಥನಿರ್ಮಾಣ ಕರ್ತರಿಗೆ ಆಶ್ರಯದಾತರಾಗಿ ಕನ್ನಡ ಸಾಹಿತ್ಯಾಭಿವೃದ್ಧಿಗೆ ನೆರವಾಗಿದ್ದಾರೆ. ಕನ್ನಡಿಗರೆಂದಿಗೂ ಇದನ್ನು ಮರೆಯುವಂತಿಲ್ಲ. ಜಯಚಾಮರಾಜೇಂದ್ರ ಗ್ರಂಥಮಾಲೆಯನ್ನು ಹೊರಡಿಸಿ ರಾಜ್ಯಪಾಲರು ಬಹಳ ಹಣವನ್ನು ಖರ್ಚುಮಾಡಿ ಕನ್ನಡ ಸಾಹಿತ್ಯವು ಪರಿಪುಷ್ಟವಾಗುವಂತೆ ಮಾಡಿದ್ದಾ. ಇವರ ದೇವತಾನಿಷ್ಠೆ ಅಗಾಧವಾದುದು. ಒಂದು ದೇಶಕ್ಕೆ ಒಂದೇ ಸರಕಾರವೆಂದ ಉಗ್ಘಡಿಸಿ ೬೬೦ ಸಂಸ್ಥಾನದ ರಾಜರುಗಳಲ್ಲಿ ಎಲ್ಲರಿಗಿಂತಲೂ ಮೊದಲು ತಮ್ಮ ರಾಜ್ಯವನ್ನು ಹಿಂದೂಸ್ಥಾನ ಸರಕಾರಕ್ಕೆ ಒಪ್ಪಿಸಿ ರಾಜ್ಯಪಾಲರಾಗಿ ಅವರು ಎಲ್ಲರ ಕೂಡ ನಡೆದುಕೊಳ್ಳುವುದನ್ನು ನೋಡಿದರೆ ವಿಸ್ಮಯವಾಗುತ್ತದೆ. ಇಂತಹ ಗುಣಗಳು ಬರುವುದು ಬಹಳ ಕಷ್ಟಕರವಾದುದು. ಮೇಲಿನ ಕುರ್ಚಿಯಲ್ಲಿ ಕುಳಿತ ನಮ್ಮನ್ನು ಕೆಳಗಿನ ಕುರ್ಚಿಗೆ ಕರೆದರೆ ಮನಸ್ಸು ಅಲ್ಲೋಲ ಕಲ್ಲೋಲವಾಗಿ ಚಡಪಡಿಸುವುದು

ಸ್ವಾನುಭವದ ಮಾತಾಗಿದೆ. ಶ್ರೀ ರಾಜ್ಯಪಾಲರ ಈ ಗುಣವು ಅನುಕರಣೀಯವೂ, ಅಭಿನಂದನೀಯವೂ ಆಗಿರುತ್ತದೆ.

ಇವರಲ್ಲಿರುವ ಈ ಶ್ರೇಷ್ಠ ಗುಣಗಳಿಗಾಗಿ ಈ ಗ್ರಂಥವನ್ನರ್ಪಿಸಬೇಕೆಂಬುವ ನನ್ನ ಅನೇಕ ವರ್ಷದ ಸಂಕಲ್ಪ ನೆರವೇರಿದುದಕ್ಕೆ ಸಂತೋಷಿಸುತ್ತೇನೆ. ಶ್ರೀ ಭಗವಾನ್ ಬಸವೇಶ್ವರರು ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರಿಗೆ ಆಯುರಾರೋಗ್ಯಭಾಗ್ಯ ಕೀರ್ತ್ಯಾದಿ ಸಕಲ ಸನ್ಮಂಗಳವನ್ನೀಯಲೆಂದು ಹಾರೈಸುತ್ತೇನೆ.

## ೨೫. ಉಪಯೋಗಿಸಿದ ಗ್ರಂಥಗಳು

ಈ ಗ್ರಂಥದ ಬೇರೆ ಬೇರೆ ಪ್ರಕರಣಗಳನ್ನು ಬರೆಯುವಾಗ ಅನೇಕ ಸಂಸ್ಕೃತ, ಕನ್ನಡ, ತೆಲುಗು, ಇಂಗ್ಲೀಷ್ ಮೊದಲಾದ ಭಾಷೆಯ ಗ್ರಂಥಗಳ ಉಪಯೋಗವನ್ನು ಪಡೆಯಲಾಗಿದೆ. ಕೇವಲ ಬಸವಣ್ಣನವರೂ—ಕವಿಗಳ ಕಾಣಿಕೆಯೂ ಎಂಬುವ ಪ್ರಕರಣದಲ್ಲಿ ೨೦೦ ಜನ ಕವಿಗಳ ಅಥವಾ ವಿದ್ವಾಂಸರ ಅಭಿಪ್ರಾಯಗಳನ್ನು ಹಾಕಿರುತ್ತದೆ. ಹೀಗಾಗಿ ಸುಮಾರು ೪೦೦ ಗ್ರಂಥಗಳನ್ನು ಉಪಯೋಗಿಸಲಾಗಿದೆ. ಅವುಗಳ ಯಾದಿಯು ದೊಡ್ಡದಾದುದರಿಂದ ಕೊಟ್ಟಿರುವುದಿಲ್ಲ.

## ಬರೆದು ಅಚ್ಚಾಗದೆ ಇರತಕ್ಕ ಪ್ರಕರಣಗಳು

೧. ಬಸವಣ್ಣನವರೂ— ಇಂಗ್ಲೀಷ್ ಪಂಡಿತರ ಹೇಳಿಕೆಗಳೂ ಇದರಂತೆ ಮಹಾರಾಷ್ಟ್ರ ಮತ್ತು ತಮಿಳು ಪಂಡಿತರ ಅಭಿಪ್ರಾಯಗಳೂ.

೨. ಬಸವಣ್ಣನವರೂ—ಜಗತ್ತಿನ ಮಹಾತ್ಮರೂ.

೩. ಬಸವಣ್ಣನವರೂ—ಕಾಲಜ್ಞಾನವೂ.

೪. ಪಂಚಾಚಾರಗಳೂ—ಬಸವಣ್ಣನವರೂ.

೫. ಉದ್ಧರಣಿಗಳೂ—ಬಸವಣ್ಣನವರೂ.

ಇವುಗಳಲ್ಲದೆ ಇನ್ನೂ ಕೆಲವು ವಿಷಯಗಳಿರುತ್ತವೆ. ಯೋಗ್ಯ ಸಂದರ್ಭದಲ್ಲಿ ಅವುಗಳು ಬೆಳಕನ್ನು ಕಾಣುತ್ತವೆ. ಇನ್ನೊಂದು ಸಂಪುಟವಾಗಬಹುದೆಂದು ತಿಳಿದಿದ್ದೇನೆ.

## ಮುನ್ನುಡಿಕಾರರ ಅಭಿನಂದನೆ

ಮೈಸೂರು ವಿಶ್ವವಿದ್ಯಾನಿಲಯದ ವೈಸ್-ಛಾನ್ಸಲರ್ ಎನ್. ಎ. ನಿಕಾಮ ಸಾಹೇಬರು, ಎಂ.ಎ. (ಕ್ಯಾಂಟಬ್.), ಇವರು ಬಸವತತ್ವರತ್ನಾಕರ ಗ್ರಂಥಕ್ಕೆ ಮುನ್ನುಡಿಯನ್ನು ಬರೆದುಕೊಟ್ಟಿರುತ್ತಾರೆ. ಉಪಕುಲಪತಿಗಳಿಗೆ ಬಿಡುವಿಲ್ಲದೆ ಕಾರ್ಯಗಳಿದ್ದರೂ ಸಮಯ ಕಲ್ಪಿಸಿ ಬರೆದುಕೊಟ್ಟುದುದಕ್ಕೆ ಅವರಿಗೆ ಉಪಕೃತನಾಗಿದ್ದೇನೆ. ದೇವರು ಇವರಿಗೆ ಇನ್ನೂ ಹೆಚ್ಚಿನ ಸ್ಥಾನಮಾನಗಳನ್ನು ಕೊಟ್ಟು ದೀರ್ಘಾಯುಗಳನ್ನು ಮಾಡಲೆಂದು ಹಾರೈಸುತ್ತೇನೆ.

## ೨೬. ಕೊನೆಯ ಪ್ರಾರ್ಥನೆ

ಈಗಿನ ಕಾಲದಲ್ಲಿ ಜಗತ್ತೆಲ್ಲ ಒಂದೇ ರಾಷ್ಟ್ರ, ಒಂದೇ ಧರ್ಮ, ಒಂದೇ ಸರಕಾರವಾಗಬೇಕೆಂಬುವ ಮಹತ್ವಾಕಾಂಕ್ಷೆ ಅನೇಕರಲ್ಲಿ ಉತ್ಪನ್ನವಾಗಿದೆ. ಅದು ಯಶಸ್ವಿ ಆಗಲಿ ಬಿಡಲಿ ಜನಗಳ ಪ್ರವೃತ್ತಿ ಮಾತ್ರ ಅತ್ತಕಡೆಗೆ ಹೊರಳಿರುತ್ತದೆ. ಸದ್ಯಕ್ಕೆ

ನೂರಾರು ರಾಷ್ಟ್ರಗಳು ಕೂಡಿ ಒಂದು ಸಭೆಯನ್ನು ನಡೆಸುತ್ತಿರುವುದು ಆ ಮಾರ್ಗದಲ್ಲಿ ಪ್ರಥಮ ಹೆಜ್ಜೆಯಾಗಿದೆ. ಭಾರತೀಯರಾದ ನಾವು ಜಾತಿ, ಪ್ರಾಂತ, ಮೊದಲಾದ ವಿಷಯಗಳಲ್ಲಿ ಬಹಳ ಜಾಗರೂಕತೆಯಿಂದ ನಡೆಯಬೇಕಾಗಿದೆ. ನೆರೆ ಧರ್ಮಗಳ ಬಗ್ಗೆ ಶಾಂತಿಯಿಂದ ನಡೆದುಕೊಳ್ಳುವ ಬುದ್ಧಿಯನ್ನು ನಾವು ಕಲಿಯಬೇಕಾಗಿದೆ. ಪರಧರ್ಮಗಳ ಆಕ್ರಮಣ ನಮ್ಮ ಧರ್ಮದ ಮೇಲೆ ಆಗುವುದೂ ನಿಲ್ಲಬೇಕಾಗಿದೆ. ತಮ್ಮ ತಮ್ಮ ಧರ್ಮ, ಸಂಸ್ಕೃತಿ ಮೊದಲಾದವುಗಳನ್ನು ಉಳಿಸಿಕೊಳ್ಳಲಿಕ್ಕೆ ಸರ್ವರಿಗೂ ಸ್ವಾತಂತ್ರ್ಯವಿದೆ. ನಮ್ಮದು ಒಳ್ಳೆಯದೆಂದು ಹೇಳುವ ಕಾಲಕ್ಕೆ ನಾವು ಎರಡನೆಯವರನ್ನು ನಿಂದಿಸಿ ಫಲವೇನು? ಇದೇ ದೃಷ್ಟಿಯಿಂದ ಈ ಗ್ರಂಥದ ವಿಷಯಗಳನ್ನು ಬರೆಯುವ ಕಾಲಕ್ಕೆ ಅನುಸರಿಸಿದ್ದೇನೆ. ಯಾರಿಗಾದರೂ ಮನನೋಯುವಂತಹ ವಿಷಯ ಎಲ್ಲಿಯಾದರೂ ಬಂದಿದ್ದರೆ ಅವರು ನನ್ನನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ. ಅಂತಹ ವಿಷಯಗಳನ್ನು ನನ್ನ ದೃಷ್ಟಿಗೆ ತಂದುಕೊಟ್ಟರೆ ಮುಂದಿನ ಆವೃತ್ತಿಯಲ್ಲಿ ಸರಿಪಡಿಸುತ್ತೇನೆ. ತಾತ್ವಿಕ ದೃಷ್ಟಿಯಿಂದ ಇಂತಹ ವಿಷಯಗಳ ಭಿನ್ನಾಭಿಪ್ರಾಯ ಬರುವುದು ಸಹಜ. ಅವು ದೋಷದಾಯಕವಾಗಲಾರವು.

## ೨೭. ಎನ್ನ ತಪ್ಪು ಅನಂತಕೋಟಿ

ಶ್ರೀ ಬಸವೇಶ್ವರರು ಹೇಳಿದಂತೆ ಮನುಷ್ಯನು ತಪ್ಪುಮಾಡುವುದುಂಟು. ನಡೆಯತಕ್ಕ ಮನುಷ್ಯನು ಎಡವಲೇಬೇಕು. ಎಡವಿ ಬಿದ್ದವನನ್ನು ನೋಡಿ ಕೆಲವರು ನಗುತ್ತಾರೆ. ಕೆಲವರು ಸಹಾನುಭೂತಿಯನ್ನು ತೋರಿಸುತ್ತಾರೆ. "ನಡೆವರೆಡಹುವರು ಕುಳಿತವರು ಎಡಹುವರೇ" ಎಂದು ಕವಿ ರಾಘವಾಂಕನು ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಹೇಳಿದ್ದಾನೆ. ಈ ಗ್ರಂಥದಲ್ಲಿ ನಾನು ಎಲ್ಲಿ ತಪ್ಪಿದ್ದೇನೆಂಬುವುದನ್ನು ತೋರಿಸಿಕೊಟ್ಟರೆ ಅದನ್ನು ತಿದ್ದಿಕೊಳ್ಳುವೆನು. ವಿಮರ್ಶೆ ಮಾಡತಕ್ಕ ಮಹನೀಯರು ಗ್ರಂಥವು ದೊಡ್ಡದೆಂದು ಯಾವುದಾದರೊಂದು ಪ್ರಕರಣ ಓದಿ ವಿಮರ್ಶೆ ಮಾಡಲಿಕ್ಕೆ ಹೋಗಬಾರದೆಂದು ನನ್ನ ಪ್ರಾರ್ಥನೆ. ಎಲ್ಲ ಬಲ್ಲವರಿಲ್ಲವೆಂದು ಹೇಳುವ ಸರ್ವಜ್ಞನ ಮಾತು ಸರಿಯಾಗಿದೆ. ಅಕಿಂಜಜ್ಞರಿಂದ ತಪ್ಪಾಗುವುದು ಸಹಜ, ನಾನೊಬ್ಬ ಅಕಿಂಜಜ್ಞ. ಕನ್ನಡನಾಡಿನ ಮಹಾಜನಗಳು ಬಸವತತ್ವ ರತ್ನಾಕರಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಟ್ಟು ಬೇಗನೆ ಈ ಗ್ರಂಥವು ಎರಡನೆಯ ಮುದ್ರಣಕ್ಕೆ ಸಿದ್ಧವಾಗುವಂತೆ ಮಾಡುವರೆಂದು ನಾನು ನಂಬಿದ್ದೇನೆ. ಹೀಗೆ ವಾಚಕರು ನನಗೆ ಪ್ರೋತ್ಸಾಹ ಕೊಟ್ಟರೆ ಹಿಂದಿ, ಇಂಗ್ಲೀಷ್ ಮೊದಲಾದ ಭಾಷೆಗಳಲ್ಲಿ ಇದನ್ನು ಅಚ್ಚುಮಾಡಿಸುವ ಪ್ರಯತ್ನ ಮಾಡಬೇಕೆಂದಿರುತ್ತೇನೆ. ಬೆಂಗಳೂರಿನಲ್ಲಿರುವ ಬೆಂಗಳೂರು ಪ್ರೆಸ್‌ನವರು ಈ ಗ್ರಂಥವನ್ನು ಸುಂದರವಾಗಿ ಮುದ್ರಣ ಮಾಡಿಕೊಟ್ಟಿದುದಕ್ಕೆ ಅದರ ಸೂಪರಿಂಟೆಂಡೆಂಟ್‌ರವರಿಗೆ ತುಂಬಾ ಕೃತಜ್ಞನಾಗಿರುತ್ತೇನೆ.

**— ಜಯ ಬಸವೇಶ್ವರ —**

ವಿದ್ವಜ್ಜನ ವಿಧೇಯ,
**ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರೀ,**
**ಹಿರೇಮಠ,** ಹೊಳಲು (ಬಳ್ಳಾರಿ).

# ಬಸವತತ್ವ ರತ್ನಾಕರದಲ್ಲಿಯ ಪ್ರಕರಣಗಳು

## ಅಮೃತವರ್ಷಿಣೀ ಗ್ರಂಥಮಾಲಾ

**೫೫೮, ಥಿಯೋಬಾಲ್ಡ್ ರೋಡ್**

**ಮೈಸೂರು**

| | | ರೂ. | ನ.ಪೈ. |
|---|---|---|---|
| ೧. | ಬಸವತತ್ವ ರತ್ನಾಕರ .. .. .. | ೧೫ | ೦೦ |
| ೨. | ಶಬರ ಶಂಕರ—ಪಾರ್ಥಪೌರುಷ .. .. | ೧ | ೨೫ |
| ೩. | ಪಂಡಿತ ಮದನಮೋಹನ ಮಾಲವೀಯರವರ ಚರಿತ್ರೆ .. | ೧ | ೫೦ |
| ೪. | ಕವಿ ಸಾರ್ವಭೌಮ ಕಾಳಿದಾಸನ ಕೃತಿಗಳು (ವಿಮರ್ಶಾತ್ಮಕ) .. | (ಅಚ್ಚಿನಲ್ಲಿದೆ) | |

# ಬಸವತತ್ವ ರತ್ನಾಕರ

## ಒಂದನೆಯ ಪ್ರಕರಣ

### ಬಸವಣ್ಣನವರ ಸಂಕ್ಷಿಪ್ತ ಚರಿತ್ರೆ

**ಸರ್ವಾರಂಭೇಷು ಮಾಂಗಲ್ಯಂ । ತನೋತು ಶ್ರೀ ಶಿವಾಧವಃ ।**
**ಶ್ರೀಕಂಠಪ್ರಮುಖೈರ್ದೇವೈ । ರರ್ಚಮಾನ ಪದಾಂಬುಜಃ ॥**

ಒಂದು ಸಾವಿರ ವರ್ಷಗಳಿಂದ ಭೂಲೋಕದಲ್ಲಿ ಶಿವಭಕ್ತಿಯನ್ನು ಪ್ರಸಾರಮಾಡಿದವರಲ್ಲಿ ಬಸವಣ್ಣನವರಿಗೆ ಅಗ್ರಸ್ಥಾನವು ಮುಡುಪಾಗಿರುವದು. ಭರತಖಂಡದ ಜೀವಜ್ಜ್ಯೋತಿಗಳಲ್ಲಿ ಶ್ರೀ ಬಸವಣ್ಣನವರು ತೇಜಃಪುಂಜರಾದ ಮಹಾವ್ಯಕ್ತಿಗಳಾಗಿರುತ್ತಾರೆ. ಜಗತ್ತಿನ ಧರ್ಮಸ್ಥಾಪಕರ ಅಥವಾ ಧರ್ಮೋದ್ಧಾರಕರಲ್ಲಿ ಅವರಿಗೂ ಒಂದು ಗಣ್ಯವಾದ ಸ್ಥಾನವಿದೆ.

ಇವರು ಅಷ್ಟಾವರಣಗಳಲ್ಲಿ ಚೈತನ್ಯವನ್ನು ಹುಟ್ಟಿಸಿ, ಷಟ್‌ಸ್ಥಲಗಳ ಪ್ರಚಾರವನ್ನು ಮಾಡಿಸಿ, ಪಂಚಾಚಾರಗಳನ್ನಳವಡಿಸಿ, ಅಹಿಂಸಾ ತತ್ವವನ್ನು ಪ್ರಸರಿಸಿ, ಕನ್ನಡ ಭಾಷೆಯನ್ನುದ್ಧರಿಸಿ, ಸತ್ಯಸಾಮ್ರಾಜ್ಯದ ಸಾರ್ವಭೌಮನೆನಿಸಿ, ನೀತಿಯ ನೆಲೆಗಟ್ಟನ್ನು ಸ್ಥಿರಗೊಳಿಸಿ, ಕಾಯಕಗಳನ್ನು ಪ್ರಸಾರಮಾಡಿಸಿ, ನುಡಿಯಂತೆ ನಡೆಯುತಕ್ಕವರಲ್ಲಿ ಅಗ್ರೇಸರನೆನಿಸಿ, ಧರ್ಮ ಮತ್ತು ರಾಜಕಾರಣಗಳೆರಡರಲ್ಲಿಯೂ ಪಟುತ್ವವನ್ನು ತೋರಿಸಿ, ಸಾಮಾಜಿಕ ಕ್ರಾಂತಿಯ ಅಡಿಗಲ್ಲನ್ನಿರಿಸಿ, ಸಾಮ್ಯವಾದವನ್ನು ವೀರಶೈವರಲ್ಲಿ ದೃಢಪಡಿಸಿ, ಬೇಡಿದವರಿಗೆ ಬೇಡಿದ ಪದಾರ್ಥಗಳನ್ನು ಕೊಟ್ಟು ಇಲ್ಲೆನ್ನದಚಳರೆನಿಸಿ, ಐತಿಹಾಸಿಕ ರಾಜಕೀಯ, ಧಾರ್ಮಿಕ ಮಹಾಪುರುಷರೆನಿಸಿಕೊಂಡರೋ ಅಂತಹ ಬಸವಣ್ಣನವರಲ್ಲಿ ಜನಕ ಮಹಾರಾಜನ ವೈರಾಗ್ಯವನ್ನೂ, ಶ್ರೀರಾಮನ ನ್ಯಾಯನಿಷ್ಠೆಯನ್ನೂ, ಸಾಕ್ರೇಟೀಸನ ಸತ್ಯಪ್ರೇಮವನ್ನೂ, ಗೌತಮಬುದ್ಧನ ದಯಾಗುಣವನ್ನೂ, ಶ್ರೀ ವರ್ಧಮಾನಸ್ವಾಮಿಯ ಅಹಿಂಸಾಪ್ರೇಮವನ್ನೂ, ಏಸುಕ್ರಿಸ್ತನ ದೀನವಾತ್ಸಲ್ಯವನ್ನೂ, ಶ್ರೀ ಕೃಷ್ಣನ ಅನಾಸಕ್ತಿಯೋಗವನ್ನೂ, ಶ್ರೀ ಶಂಕರಾಚಾರ್ಯರ ಆತ್ಮಜ್ಞಾನಸಂಪನ್ನತೆಯನ್ನೂ, ಕರ್ಣ, ದಧೀಚಿ, ಶಿಬಿಗಳ ದಾನಗುಣವನ್ನೂ ನಾವು ಕಾಣಬಹುದು. ಇಂತಹ ಮಹಾಪುರುಷರು ಕರ್ಣಾಟಕದಲ್ಲಿ ಅವತರಿಸಿ ಕನ್ನಡ ನಾಡಿನಲ್ಲಿಯೇ ಮಹತ್ಕಾರ್ಯಗಳನ್ನೆಸಗಿ, ಕರ್ಣಾಟಕದಲ್ಲಿಯೇ ಬಯಲಾಗಿರುವದು ಕನ್ನಡಿಗರೆಲ್ಲರೂ ಹೆಮ್ಮೆಪಡತಕ್ಕ ಕಾರ್ಯವಾಗಿದೆ.

ಇವರು ಮಾಡಿರುವ ಶ್ರೇಷ್ಠ ಕಾರ್ಯಗಳೆಲ್ಲ ಈ ಗ್ರಂಥದ ಬೇರೆ ಬೇರೆ ಪ್ರಕರಣಗಳಲ್ಲಿ ವಿಶದವಾಗಿ ವಿವೇಚಿಸಲ್ಪಟ್ಟಿರುತ್ತವೆ. ಭಗವಾನ್ ಬಸವೇಶ್ವರರ ಚರಿತ್ರೆಯನ್ನು ಚೆನ್ನಾಗಿ ತಿಳಿಸತಕ್ಕ ಅನೇಕ ಗ್ರಂಥಗಳು— ಕನ್ನಡ, ತೆಲುಗು, ಸಂಸ್ಕೃತ, ಮರಾಠಿ ಮೊದಲಾದ ಭಾಷೆಗಳಲ್ಲಿವೆ. ಇವುಗಳಲ್ಲಿ ಬಸವಣ್ಣನವರ ವಚನಗಳೂ, ಅವರು ಬರೆದ

ಇನ್ನಿತರ ಗ್ರಂಥಗಳೂ, ಕೆಲವು ಶಿಲಾ ಶಾಸನಗಳೂ, ನೂರಾರು ಕವಿಗಳು ಇವರ ಬಗ್ಗೆ ಗೌರವದಿಂದ ಬರೆದಿರುವ ಸ್ತೋತ್ರಗಳೂ ಮುಖ್ಯ ಸಾಧನಗಳಾಗಿರುತ್ತವೆ.

ಎರಡನೆಯ ಸಾಧನಗಳೆಂದರೆ:—(೧) ಹಂಪೆಯ ಹರಿಹರನ ಬಸವರಾಜದೇವರ ರಗಳೆ. (೨) ಪಾಲ್ಕುರಿಕೆಯ ಸೋಮನಾರಾಧ್ಯರ ತೆಲುಗು ಬಸವ ಪುರಾಣಮು, ಬಸವ ಶತಕ, ಬಸವೋದಾಹರಣ ಗದ್ಯ. (೩) ಸಿಂಗಿರಾಜ ಪುರಾಣ. (೪) ಭೀಮ ಕವಿಯ ಕನ್ನಡ ಬಸವ ಪುರಾಣ. (೫) ಕಂಚಿಯ ಶಂಕರಾರಾಧ್ಯರಿಂದ ರಚಿಸಲ್ಪಟ್ಟ ೪,೭೧೫ ಶ್ಲೋಕಗಳಿಂದ ಕೂಡಿದ ಬಸವೇಶ ವಿಜಯ. (೬) ಉಭಯ ಭಾಷಾ ವಿಶಾರದನಾದ ಷಡಕ್ಷರದೇವನಿಂದ ವಿರಚಿತವಾದ ವೃಷಭೇಂದ್ರ ವಿಜಯವೆಂಬ ಮಹಾಚಂಪೂ ಗ್ರಂಥ. (೭) ಲಕ್ಕಣ್ಣ ದಂಡೇಶನ ಶಿವತತ್ವ ಚೂಡಾಮಣಿ. (೮) ಶಂಕರ ಕವಿಯ ಚೋರ ಬಸವ ಚರಿತ್ರೆ. (೯) ಸಂಸ್ಕೃತ ಬಸವ ಪುರಾಣ. (೧೦) ಪಿಡುಪರ್ತಿಸೋಮನ ಬಸವ ಪುರಾಣಮು. (೧೧) ನಾಗಭೂಷಣ ಕವಿಯ ಚಂಪೂಶೈಲಿಯ ಬಸವೇಶ ವಿಜಯ. (೧೨) ಕೆಳದಿಯ ಬಸವರಾಜರ ಶಿವತತ್ವ ರತ್ನಾಕರ. (೧೩) ಚೆನ್ನಪ್ಪ ಕವಿಯ ಶರಣಲೀಲಾಮೃತ. (೧೪) ವೀರಸಂಗಯ್ಯನವರ ನಂದಿ ಆಗಮ. (೧೫) ಶಿವಪ್ರಕಾಶ ಸ್ವಾಮಿಗಳ ತಮಿಳಿನ ಬಸವ ಪುರಾಣ. (೧೬) ಬಾಲಚಂದ್ರ ನಗರದ ಶಿವ ಕವಿಯೊಬ್ಬನು ಬರೆದಿರುವ ವಸ್ತುಕ ಬಸವ ಪುರಾಣ. (೧೭) ಶೂನ್ಯ ಸಂಪಾದನೆ. (೧೮) ಮಲಯ ಬಸವ ಚರಿತ್ರೆ. (೧೯) ಬಸವೇಶ್ವರ ಕಾಲನಿರ್ಣಯ–ಚನ್ನಮಲ್ಲಿಕಾರ್ಜುನರಿಂದ.

ಶ್ರೀ ಬಸವಣ್ಣನವರ ವಿಷಯದಲ್ಲಿ ಇತ್ತೀಚೆಗೆ ಅನೇಕರು ಗ್ರಂಥಗಳನ್ನು ಬರೆದಿರುತ್ತಾರೆ. ಅವುಗಳಲ್ಲಿ (೧) ಎಂ. ಆರ್. ಶ್ರೀನಿವಾಸಮೂರ್ತಿಗಳ ಭಕ್ತಿಭಂಡಾರಿ ಬಸವಣ್ಣನವರು, (೨) ಸಿಂದಗಿ ಸಿದ್ದಪ್ಪನವರು, ಬಳ್ಳಾರಿ, ಇವರ ಬಸವಚರಿತ್ರೆ, (೩) ಹರ್ಡೀಕರ್ ಮಂಜಪ್ಪನವರ ಬಸವ ಚರಿತ್ರೆ, (೪) ಪಾವಟೆ ಸಿದ್ಧರಾಮಪ್ಪನವರ ಬಸವಭಾನು, (೫) ಹಳಪೇಟೆ ಚಿಂತಾಮಣಿಯವರು, ಧಾರವಾಡ, ಇವರ ಯುಗ ಪ್ರವರ್ತಕ ಬಸವಣ್ಣ, (೬) ಅ. ನ. ಕೃಷ್ಣರಾಯರ ಬಸವಣ್ಣನವರ ಅಮೃತವಾಣಿ, (೭) ಕೆ. ಗಲಗಲಿಯವರ ಕ್ರಾಂತಿಕಾರಕ ಬಸವ, (೮) ಶಿಂಪಿ ಲಿಂಗಣ್ಣನವರ ಬಸವ ಚರಿತ್ರೆ ಮೊದಲಾದ ಗ್ರಂಥಗಳು ಪ್ರಾಮುಖ್ಯವಾಗಿರುತ್ತವೆ.

ಬಸವಣ್ಣನವರಿಗೆ ವಿರೋಧವಾಗಿಯೂ ಅನೇಕರು ಗ್ರಂಥಗಳನ್ನು ಬರೆದಿರುತ್ತಾರೆ. ಇವುಗಳಲ್ಲಿ ಕೆಲವು ಜೈನ ಗ್ರಂಥಗಳೂ, ಡಾ॥ ಭಾಂಡಾರಕರ ಮೊದಲಾದವರು ಆಂಗ್ಲ ಭಾಷೆಯಲ್ಲಿ ಬರೆದವುಗಳೂ ಮುಖ್ಯವಾಗಿರುತ್ತವೆ. ಇವುಗಳಿಂದಲೂ ಬಸವಣ್ಣನವರ ಚರಿತ್ರೆಯ ಮೇಲೆ ಬೆಳಕು ಬೀಳುತ್ತದೆ.

ಕನ್ನಡ ಸಾಹಿತ್ಯದಲ್ಲಿ ಬಸವಣ್ಣನವರ ವಿಷಯ ಒಂದಿಲ್ಲೊಂದು ರೀತಿಯಿಂದ ಹೇರಳವಾಗಿ ದೊರೆಯುತ್ತದೆ. ಬಸವಣ್ಣನವರ ನಿಜವಾದ ವ್ಯಕ್ತಿತ್ವವನ್ನು ತೋರಿಸುವ ಗ್ರಂಥಗಳ ಸಂಖ್ಯೆ ಕಡಿಮೆ ಇರುತ್ತದೆ. ಅವರಲ್ಲಿರುವ ಭಕ್ತಿಯಿಂದ ಬರೆದ ಗ್ರಂಥಗಳೇ ಹೆಚ್ಚಾಗಿರುತ್ತವೆ. ಬಸವಣ್ಣನವರು ಕೇವಲ ಧಾರ್ಮಿಕ ಪುರುಷರಲ್ಲ, ಐತಿಹಾಸಿಕ ಮಹಾವ್ಯಕ್ತಿಗಳೂ, ರಾಜಕಾರಣ ಧುರಂಧರರೂ, ಶಾಂತಿಯಿಂದ ಸಾಮಾಜಿಕ ಕ್ರಾಂತಿ ಮಾಡಿದ ಮಹಾ ವ್ಯಕ್ತಿಗಳೂ ಆಗಿರುತ್ತಾರೆ. ಆದ್ದರಿಂದ ನಾವು ಕೇವಲ ಧಾರ್ಮಿಕ ದೃಷ್ಟಿಯಿಂದ ಬಸವಣ್ಣನವರ ಚರಿತ್ರೆಯನ್ನು ನೋಡಲು ಬರುವದಿಲ್ಲ.

ಇಂತಹ ದಿವ್ಯಪುರುಷರ ಉದಯವಾಗಬೇಕಾದರೆ ಮಹಾಕಾರ್ಯಗಳಿರಲೇಬೇಕು. ಅವರು ಕಾರಣಪುರುಷರಾಗಿ ಭೂಲೋಕದಲ್ಲಿ ಅವತರಿಸಿದರು. ನೂರಾರು ಕವಿಗಳು ಅವರಿಗೆ ಕೊಟ್ಟಿರುವ ವಿಶೇಷಣಗಳನ್ನವಲೋಕಿಸಿದರೆ ಭರತಖಂಡದಲ್ಲಿ ಇಂತಹ ಪ್ರಾಶಸ್ತ್ಯವು ಕೆಲವರಿಗೆ ಮಾತ್ರ ದೊರಕಿರುವದು.

ಭಕ್ತಿಭಂಡಾರಿ, ಸತ್ಯಸಾಮ್ರಾಜ್ಯದ ಸಾರ್ವಭೌಮ, ಭಕ್ತಕುಲತಿಲಕ, ದ್ವಿತೀಯ ಶಂಭು, ಸದ್ಭಕ್ತಿ ಸೂರೆಗಾರ, ಪ್ರಮಥ ಪ್ರಥಮಾಚಾರ್ಯ, ಅದ್ವಿತೀಯ ಶಂಭು, ದಂಡನಾಥ ಚೂಡಾಮಣಿ, ಮಂತ್ರಮೂರ್ತಿ, ಅಷ್ಟಾವರಣಸ್ವರೂಪ, ಕನ್ನಡಭಾಷಾ ಜನಕ, ವಚನ ವಾಙ್ಮಯಾಚಾರ್ಯ, ನೀತಿಯ ನಿಪುಣ, ತತ್ವಸಾಗರ, ವೀರಶೈವ ಮತೋದ್ಧಾರಕ, ವೀರಶೈವ ಮತ ಸಾರ್ವಭೌಮ, ಮಂತ್ರಿಶ್ರೇಷ್ಠ, ವೃಷಭಾವತಾರ, ದುರ್ಜನಗಿರಿ ವಜ್ರಾಘಾತಂ, ಭಕ್ತಕುಲಚಕ್ಷು, ಜಂಗಮಪ್ರಾಣಿ, ಪರಮಗುರು, ಶಿವಾಚಾರ ಚಕ್ರವರ್ತಿ, ಸರ್ವಾಚಾರ ಸಂಪನ್ನ, ಸರ್ವಾಂಗ ಲಿಂಗಮೂರ್ತಿ, ಶಿವ ಸಮಯ ಪ್ರತಿಷ್ಠಾಪನಾಚಾರ್ಯ, ವೀರಶೈವ ನಿರ್ಣಯ ಪರಮಾವತಾರ.

ಹೀಗೆಯೇ ಅನಂತ ರೀತಿಯಿಂದ ಅವರನ್ನು ಪ್ರಶಂಸಿಸಿರುತ್ತಾರೆ. ಶ್ರೀ ಬಸವಣ್ಣ ನವರ ಸಹಸ್ರನಾಮಾವಳಿಯನ್ನು ಗುರುಸಾರ್ವಭೌಮರಾದ ಪಾಲ್ಕುರಿಕೆಯ ಸೋಮ ನಾರಾಧ್ಯರು ರಚಿಸಿರುತ್ತಾರೆ.

ಬಸವಣ್ಣವನರು ೧೧೩೧ರಲ್ಲಿ ಇಂಗಳೇಶ್ವರ ಬಾಗೇವಾಡಿಯಲ್ಲಿ ಶಿವಭಕ್ತರಾಗಿದ್ದ ಮಾದರಸ, ಮಾದಲಾಂಬಿಕೆಯರಲ್ಲಿ ಜನಿಸಿದರು. ಇವರು ಸಾಕ್ಷಾತ್ ನಂದಿಕೇಶ್ವರನ ಅಪರಾವತಾರಿಗಳಾದಕಾರಣ ಅಯೋನಿಜರಾಗಿ ಜನಿಸಿದರೆಂತಲೂ, ಪರಮಾತ್ಮನೇ ಜಂಗಮರೂಪಿಯಾಗಿ ಶಿಶುವಿಗೆ ಲಿಂಗಧಾರಣಮಾಡಿದನೆಂತಲೂ ಕೆಲವು ಗ್ರಂಥಗಳಲ್ಲಿ ಪ್ರಮಾಣಗಳು ಸಿಗುತ್ತವೆ. ಮತ್ತೆ ಕೆಲವು ಗ್ರಂಥಗಳಲ್ಲಿ ಜಾತವೇದ ಮುನಿಗಳು ಅಥವಾ ಈಶಾನ್ಯ ಗುರುಗಳು ಇವರಿಗೆ ಲಿಂಗಧಾರಣಮಾಡಿದರೆಂತಲೂ ವರ್ಣಿಸಲ್ಪಟ್ಟಿರು ತ್ತದೆ. ಹರಿಹರದೇವನ ಬಸವರಾಜದೇವರ ರಗಳೆಯಲ್ಲಿ ಬಸವಣ್ಣನವರಿಗೆ ವಯಸ್ಸಾದ ಮೇಲೆ ಲಿಂಗಧಾರಣವಾಯಿತೆಂತಲೂ ಹೇಳಲಾಗಿದೆ.

ಬಸವಣ್ಣನವರು ವೈಶಾಖ ಶುದ್ಧ ತದಿಗೆ ರೋಹಿಣಿ ನಕ್ಷತ್ರದಲ್ಲಿ ಉದಯ ರಾದರೆಂದು ಅಂದಿನ ದಿನ ಕರ್ಣಾಟಕ, ಆಂಧ್ರ, ಮರಾಠಿಯ ದೇಶಗಳಲ್ಲಿ ಮಹಾ ಜನಗಳು ಅವರ ಜಯಂತಿಯನ್ನು ಆಚರಿಸುತ್ತಲಿದ್ದಾರೆ. ಕೆಲವರು ಇದನ್ನು ಒಪ್ಪು ವದಿಲ್ಲ. ಈ ವಾದವು ಬಹಳ ದಿನಗಳವರೆಗೆ ನಡೆಯಿತು. ಅಘಟಿತ ಘಟನಾಶಕ್ತಿಯುಳ್ಳ ಮಹಾಪುರುಷರ ಬಗ್ಗೆ ಲೋಕದಲ್ಲಿ ಭಿನ್ನಾಭಿಪ್ರಾಯಗಳಿರುವದು ಅನಿವಾರ್ಯವೆಂದು ಅನೇಕ ದೃಷ್ಟಾಂತಗಳಿಂದ ಸಿದ್ಧಮಾಡಲು ಸಾಧ್ಯವಿದೆ. ಇಂತಹ ಮಹಾನುಭಾವರ ವಿಷಯಕ್ಕೆ ನಾವು ಲಕ್ಷ್ಯದಲ್ಲಿಡತಕ್ಕ ಸಂಗತಿಯೇನಂದರೆ ಅವರವರ ಮಹತ್ಕಾರ್ಯಗಳೇ ಅವರ ಚರಿತ್ರೆಗೆ ಒರೆಗಲ್ಲಾಗುತ್ತವೆ. ಹೀಗೆ ಬರೆಯುವದರಿಂದ ಐತಿಹಾಸಿಕ ನಿಜಸಂಗತಿ ಗಳು ಬೇಡವೆಂದು ಹೇಳಿದಂತಾಗಲಿಲ್ಲ. ಶ್ರೀ ಬಸವಣ್ಣನವರು ರೋಹಿಣಿ ನಕ್ಷತ್ರದಲ್ಲಿಯೇ ಅವತರಿಸಿರಲಿ ಅಥವಾ ಕೃತ್ತಿಕಾ ನಕ್ಷತ್ರದಲ್ಲಿಯೇ ಜನಿಸಿರಲಿ ಅದು ಅವರ ಚರಿತ್ರೆಗೆ ಮೇಲ್ಮೆ ಯನ್ನು ತರಲಾರದು. ಅವರು ಮಾಡಿರತಕ್ಕ ಅದ್ಭುತ ಶಿವಭಕ್ತಿ ಪ್ರಸಾರ, ಅಹಿಂಸೆ, ಸತ್ಯ, ಜನಸೇವೆ ಮೊದಲಾದ ಕಾರ್ಯಗಳೇ ಅವರ ಚರಿತ್ರೆಯನ್ನು ಹೆಚ್ಚಳಮಾಡಿರುತ್ತವೆ.

ಈ ಪ್ರಕರಣದಲ್ಲಿ ಕೆಲವು ಕವಿಗಳ ಉದಾಹರಣೆಯನ್ನು ತೆಗೆದುಕೊಂಡಿದ್ದೇನೆ. ಅವು ಗಳಲ್ಲಿ ಭಿನ್ನಾಭಿಪ್ರಾಯಗಳೂ ಇರುತ್ತವೆ. ಐತಿಹಾಸಿಕ ದೃಷ್ಟಿಯಿಂದ ಖಂಡನಾ ಮತ್ತು ಮಂಡನೆ ಮಾಡಬೇಕಾದರೆ ಅದೊಂದು ದೊಡ್ಡ ಗ್ರಂಥವೇ ಆಗುತ್ತದೆ. ಆದ್ದರಿಂದ ಸಂಕ್ಷೇಪವಾಗಿ ಈ ಪ್ರಕರಣವನ್ನು ಬರೆದು ಅವರ ತತ್ವಗಳಿಗಾಗಿಯೇ ಈ ಗ್ರಂಥವು ಮಾಸಲಾಗಿರುತ್ತದೆಂದು ಹೇಳಬಯಸುತ್ತೇನೆ. ಬೇರೆ ಬೇರೆ ದೃಷ್ಟಿಯಿಂದ ಮಹಾ ಜನಗಳು ಬಸವಣ್ಣನವರನ್ನು ನೋಡುತ್ತಲಿದ್ದಾರೆ. ಇದಕ್ಕೆ ಅಲಂಕಾರ ಶಾಸ್ತ್ರದಲ್ಲಿ— ಉಲ್ಲೇಖಾಲಂಕಾರವೆಂದು— ಹೆಸರಿರುತ್ತದೆ.

ಪ್ರಿಯ ಇತಿಗೋಪವಧೂಭಿಃ । ಶಿಶುರಿತಿವೃದ್ಧೈರಧೀಶ ಇತಿ ದೇವೈಃ ।
ನಾರಾಯಣ ಇತಿಭಕ್ತೈಃ । ಬ್ರಹ್ಮೇತ್ಯಗ್ರಾಹಿಯೋಗಿಭಿರ್ದೇವಃ ॥

ಗೋಪಿಕಾಸ್ತ್ರೀಯರು ಪ್ರಿಯನೆಂತಲೂ, ವೃದ್ಧರು ಶಿಶುವೆಂತಲೂ, ದೇವತೆಗಳು ಸ್ವಾಮಿ ಎಂತಲೂ, ಭಕ್ತರು ನಾರಾಯಣನೆಂತಲೂ, ಯೋಗಿಗಳು ಬ್ರಹ್ಮನೆಂತಲೂ, ಒಬ್ಬ ಶ್ರೀ ಕೃಷ್ಣನನ್ನು ತಮ್ಮ ತಮ್ಮ ರುಚಿಗನುಸಾರವಾಗಿ ಕರೆಯುವಂತೆ, ಶ್ರೀ ಬಸವಣ್ಣ ನವರಿಗೂ ವೀರಶೈವ ಮಹಾಜನಗಳು ಸಾಕ್ಷಾತ್ ನಂದಿಕೇಶ್ವರನ ಅವತಾರಮೂರ್ತಿ ಯೆಂತಲೂ, ಕನ್ನಡಿಗರು ಕನ್ನಡ ಭಾಷಾ ಜನಕನೆಂತಲೂ, ಸಮಾಜ ಸುಧಾರಕರು ದಕ್ಷಿಣ ಹಿಂದುಸ್ಥಾನದ ಲೂಥರನೆಂತಲೂ, ಭಕ್ತರು ಭಕ್ತಿ ಭಂಡಾರಿಯೆಂತಲೂ, ಅಹಿಂಸಾವಾದಿಗಳು ದಯಾಮೂರ್ತಿಯೆಂತಲೂ, ಶಿವಾನುಭವಿಗಳು ವಚನವಾಙ್ಮಯಾ ಚಾರ್ಯನೆಂತಲೂ, ಭಿಕ್ಷುಕರು ಮಹಾದಾನಿಯೆಂತಲೂ, ಇವರಂತೆಯೇ ಬೇರೆ ಬೇರೆ ಜನಗಳು ತಮ್ಮ ತಮ್ಮ ಅಭೀಷ್ಟದಂತೆ ಬಸವಣ್ಣನವರನ್ನು ಕರೆಯುತ್ತಲಿರುವರು.

ಬಸವಣ್ಣನವರು ಅವತರಿಸುವ ಸಮಯವು ಬಿಕ್ಕಟ್ಟಿನದಾಗಿದ್ದಿತು. ದೇವಗಿರಿ ಅರಸರು ರಾಜ್ಯವನ್ನು ಕಳೆದುಕೊಂಡಿದ್ದರು. ಉತ್ತರ ಹಿಂದುಸ್ಥಾನದಲ್ಲಿ ಮುಸಲ್ಮಾನರು ಮೆಲ್ಲ ಮೆಲ್ಲನೆ ಪ್ರವೇಶಿಸುತ್ತಲಿದ್ದರು. ಎಲ್ಲಿ ನೋಡಿದರಲ್ಲಿ ಹಿಂಸಾಪ್ರಚಾರವು ಪ್ರಬಲ ವಾಗಿದ್ದಿತು. ಮೇಲುಕೀಳುಗಳೆಂಬ ಕೊಳೆಯು ದೇಶದ ತುಂಬ ವ್ಯಾಪಿಸಿದ್ದಿತು. ಯಜ್ಞಯಾಗಾದಿಗಳ ನೆವದಿಂದ ಉತ್ತಮ ವರ್ಗದವರೂ ಕೂಡ ಮಾಂಸಭಕ್ಷಣೆಯಲ್ಲಿ ನಿರತರಾಗಿದ್ದರು. ಶಿವಭಕ್ತಿಯು ಭೂಲೋಕದಿಂದ ಮೆಲ್ಲ ಮೆಲ್ಲನೆ ನುಸುಳಿಹೋಗ ಲಾರಂಭಿಸಿದ್ದಿತು. ಸತ್ಯ ಸದಾಚಾರಗಳಿಗೆ ಸ್ಥಾನವಿರಲಿಲ್ಲ. ಎಲ್ಲಾ ದೃಷ್ಟಿಯಿಂದಲೂ ವೀರಶೈವ ಸಮಾಜವು ಕ್ಷೀಣವಾಗಿದ್ದಿತು. ಧರ್ಮದಲ್ಲಿ ದಯೆ ಇರಲಿಲ್ಲ. ನುಡಿಯಂತೆ ನಡೆಯುವದು ಇರಲೇ ಇಲ್ಲ. ದುರಾಚಾರ ದುರ್ಗುಣಗಳೇ ಹೆಚ್ಚಾಗಿದ್ದವು.

ಬಸವಣ್ಣನವರ ಚರಿತ್ರೆಯನ್ನು ತೋರಿಸುವ ಅನೇಕ ಗ್ರಂಥಗಳ ಹೆಸರುಗಳನ್ನು ಹಿಂದೆ ಹೇಳಿದ್ದೇನೆ. ಇವುಗಳಲ್ಲಿ ಶ್ರೀ ಕೆಳದಿ ಬಸವರಾಜರಿಂದ ವಿರಚಿತವಾದ ಶಿವತತ್ವ ರತ್ನಾಕರ ಗ್ರಂಥದ ಕೆಲವು ವಿಷಯುಗಳನ್ನು ಇಲ್ಲಿ ಉಪಯೋಗಿಸಿದೆ.

**ಶಿವತತ್ವ ರತ್ನಾಕರ—ಕಲ್ಲೋಲ ೪, ತರಂಗ ೮**

ಧರ್ಮಪ್ರವೃತ್ತಿಂ ಶಿಥಿಲಾಂ । ವಿಲೋಕ್ಯ ಚ ಸಮಂತತಃ ।
ಅವತೀರ್ಯದಯಾವಸ್ಯೋ । ಭಗವಾನ್ ಬಸವೇಶ್ವರ ॥
ಧರ್ಮಂ ಸಂಸ್ಥಾಪಯಾಮಾಸ । ಸರ್ವಮೇವ ಧರಾತಲೇ ।
ವೀರಶೈವಮತಂ ಸ್ಥಾಪ್ಯ । ಪ್ರಕಾಶನಮಕಾರಯತ್ ॥

ಅಂದರೆ, ಎಲ್ಲಾ ಕಡೆಗೂ ಧರ್ಮವು ಶಿಥಿಲವಾದುದನ್ನು ನೋಡಿ ದಯಾಶಾಲಿಯಾದ ಭಗವಾನ್ ಬಸವೇಶ್ವರನು ಈ ಭೂಮಿಯಲ್ಲಿ ಅವತರಿಸಿ ಧರ್ಮವನ್ನು ಸ್ಥಾಪನೆ ಮಾಡಿದನು. ವೀರಶೈವ ಮತವನ್ನು ಸ್ಥಾಪಿಸಿ ಪ್ರಕಾಶಗೊಳಿಸಿದನು. ಶಿವತತ್ವ ರತ್ನಾಕರದ ಎಂಟನೆಯ ತರಂಗ ಮುಗಿಯುವವರೆಗೆ ನಂದಿಕೇಶ್ವರನು ಹೇಗೆ ಅವತಾರ ತಾಳಿದನೆಂಬುವದನ್ನು ವಿಶದವಾಗಿ ವರ್ಣಿಸಿರುತ್ತಾನೆ. ಈ ಶಿವತತ್ವ ರತ್ನಾಕರ ಗ್ರಂಥವು ವೀರಶೈವ ಜನಗಳಿಗಷ್ಟೇ ಅಲ್ಲ, ಸಂಸ್ಕೃತ ಬಲ್ಲವರೆಲ್ಲರಿಂದಲೂ ಮನ್ನಣೆ ಪಡೆದಿರುತ್ತದೆ. ಎಲ್ಲಾ ಪಕ್ಷ ಪಂಗಡದವರೂ ಪ್ರಶಂಸಿಸಿರುತ್ತಾರೆ. ಆದುದರಿಂದ ಇಲ್ಲಿ ಈ ಗ್ರಂಥದ ಉದಾಹರಣೆ ಕೊಟ್ಟದೆ.

ಶಿಲಾದ ಮಹರ್ಷಿಯು ಅನೇಕ ಸಂವತ್ಸರಗಳವರೆಗೆ ಪರಮಾತ್ಮನನ್ನು ಕುರಿತು ತಪಸ್ಸುಮಾಡಿದನೆಂತಲೂ, ಅವನ ತಪಸ್ಸಿಗೆ ಸಂತುಷ್ಟನಾದ ಪರಮಾತ್ಮನು ಅವನಿಗೆ ವರವನ್ನು ಕೊಡಲು ಸಿದ್ಧನಾದನು.

**ಶಿವತತ್ವ ರತ್ನಾಕರ—ಕಲ್ಲೋಲ ೪, ತರಂಗ ೯**

ತಸ್ಯೈವ ನಂದಿನೋಭೂಮೌ । ಬಸವೇಶ್ವರ ರೂಪತಃ ।
ಆವಿರ್ಭಾವೋಸ್ತಿಯಸ್ತಂತೆ । ಸಮಾಸಾದ್ವರ್ಣಯೇ ಶೃಣು ॥

ಆ ನಂದಿಕೇಶ್ವರನೇ ಭೂಮಿಯಲ್ಲಿ ಬಸವೇಶ್ವರನಾಗಿ ಹೇಗೆ ಜನಿಸಿದನೆಂಬುವದನ್ನು ವರ್ಣಿಸುತ್ತೇನೆ ಕೇಳು ಎಂದು ಹೇಳುತ್ತಲಿದ್ದಾನೆ. ಅನೇಕ ವಿಷಯಗಳನ್ನು ಹೇಳಿದ ನಂತರ ನಂದಿಕೇಶ್ವರನು—

**ಶಿವತತ್ವ ರತ್ನಾಕರ—ಕಲ್ಲೋಲ ೪, ತರಂಗ ೯, ಶ್ಲೋಕ ೯**

ದೇಶಂ ಸಮುತ್ಸೃಜ್ಯತದಲ್ಪಭಕ್ತಿಂ ಪ್ರವಿಶ್ಯಕರ್ಣಾಟಮಹೀವಿಭಾಗಂ ।
ತತ್ರಾಪಿ ದೃಷ್ಟ್ವಾ ಶಿವಭಕ್ತಿದೂರಾನ್ ತತ್ರಾಸಚೇತಸ್ತರಸಾ ಮದೀಯಂ ॥
ಪುನಃಪುನರ್ದುರ್ಮತದರ್ಶನಾನಿ ಭವೇಯುರಿತ್ಯೇವ ವಿಶಂಕಮಾನಃ ।
ಮಹೀತಲಾಲೋಕನಮಂದಹರ್ಷಃ ಸಭಾಮಿಮಾಂಸಾಂಪ್ರತಮಾಗತೋಸ್ಮಿ ॥

ಕರ್ಣಾಟಕ ದೇಶವು ಅಲ್ಪಭಕ್ತಿಯುಳ್ಳದ್ದಾಗಿದೆ, ಅದರಲ್ಲಿಯೂ ಶಿವಭಕ್ತಿ ರಹಿತವಾದುದಾಗಿದೆ. ಆದ್ದರಿಂದ ಇಂತಹ ದೇಶವನ್ನು ಕುರಿತು ಹೋಗಲಿಕ್ಕೆ ನನ್ನ ಮನಸ್ಸು ಹಿಂಜರಿಯುತ್ತಲಿದೆ. ಭೂಲೋಕದರ್ಶನದಲ್ಲಿ ಮಂದಹರ್ಷವುಳ್ಳವನಾಗಿ ಈ ಸಭೆಗೆ ಬಂದಿರುತ್ತೇನೆಂದು ಹೇಳಿದನು. ಆದರೂ ಶಂಕರನ ಅಪ್ಪಣೆಯಂತೆ ನಡೆದುಕೊಳ್ಳಲೇಬೇಕಷ್ಟೆ.

**ಶಿವತತ್ವ ರತ್ನಾಕರ—ಕಲ್ಲೋಲ ೪, ತರಂಗ ೯, ಶ್ಲೋಕ ೧೩**

ನಂದಿಕೇಶ್ವರನು—

ದ್ವಿತೀಯ ಶಂಭುಸ್ಸವೃಷೇಶ್ವರೋಪಿ ಬದ್ಧಾಂಜಲಿರ್ಭೋಥಮಯೋಮಹಾತ್ಮಾ ।
ಸ್ಥಿತ್ವಾಪುರಃ ಕಿಂಕರಣೀಯಮಾಜ್ಞಾ ವಿಧೀಯತಾಮಿತ್ಯವದದ್ವಿಧಿಜ್ಞಃ ॥

ದ್ವಿತೀಯ ಶಂಭುವಾದ ನಂದಿಕೇಶ್ವರನು ಕೈಗಳನ್ನು ಜೋಡಿಸಿಕೊಂಡು ಎದುರಿಗೆ ನಿಂತು ತಮ್ಮ ಯಾವ ಅಪ್ಪಣೆಯನ್ನು ಈಗ ನಾನು ಪಾಲಿಸಬೇಕೆಂದು ಬೇಡಿಕೊಂಡನು.

**ಶಿವತತ್ವ ರತ್ನಾಕರ—ಕಲ್ಲೋಲ ೪, ತರಂಗ ೯, ಶ್ಲೋಕ ೧೪**

ಆಜ್ಞಾಪಯಾಮಾಸತಮಂಬಿಕಾಯಾಃ ಪತಿಸ್ತ್ವಯಾಶಾಸನಮುಸ್ಮದೀಯಂ ।
ಪ್ರಕಾಶನೀಯಂ ಪ್ರಕಟಪ್ರದಾನೈರ್ವಿಜಿತ್ಯಭೂಮೌ ವಿಮತಾನಶೇಷಾನ್ ॥

ಅಂಬಿಕಾಪತಿಯಾದ ಶಂಕರನು ನಮ್ಮ ಶಾಸನವನ್ನು ನೀನು ಭೂಲೋಕದಲ್ಲಿ ಪ್ರಕಾಶಗೊಳಿಸಿ ನಿನ್ನ ಪ್ರಚಾರಕಾರ್ಯಗಳಿಂದ ಜಯವನ್ನು ಸಂಪಾದಿಸು ಎಂದು ಹೇಳಿದನು.

**ಶಿವತತ್ವ ರತ್ನಾಕರ—ಕಲ್ಲೋಲ ೪, ತರಂಗ ೯, ಶ್ಲೋಕ ೧೫-೧೬**

ಮಹೀಸುರಃಕಶ್ಚನಮಾಧವಾಖ್ಯೋ ಮಹೀತಲೇ ಸಂಪ್ರತಿ ಪುತ್ರಕಾಂಕ್ಷತಿ ।
ತಪಸ್ಯತೇ ತದ್ವ್ರತಮಸ್ಯಪತ್ನೀ ತನೋತಿ ಚ ತ್ವದ್ಗತಚಿತ್ತವೃತ್ತಿಃ ॥
ಪುತ್ರತ್ವಮಾಸಾದ್ಯತಯೋಃ ಪೃಥಿವ್ಯಾಂ ಶ್ರೀ ವೀರಮಾಹೇಶ್ವರತಂತ್ರದಾರ್ಢ್ಯಂ ।
ವಿಧೇಹಿವಿದ್ವನ್ ವಿವಿಧೈರ್ವಿಹಾರೈಃ ಪ್ರಹೃತ್ಯಪಾಷಂಡಮತಪ್ರವೃತ್ತಾನ್ ॥

ಭೂತಲದಲ್ಲಿ ಮಾಧವನೆಂಬುವ ಬ್ರಾಹ್ಮಣನು ಪುತ್ರಕಾಂಕ್ಷಿಯಾಗಿದ್ದಾನೆ. ಅವನ ಪತ್ನಿಯು ನಂದಿಯ ವ್ರತವನ್ನು ಮಾಡುತ್ತಲಿದ್ದಾಳೆ. ಅವರಿಗೆ ನೀನು ಪುತ್ರನಾಗಿ ವೀರಮಾಹೇಶ್ವರ ತಂತ್ರಗಳಿಂದ ದೃಢವಾಗಿರುವ ಆ ಭೂಮಿಯಲ್ಲಿ ಅನೇಕ ರೀತಿಯಿಂದ ಸಂಚರಿಸಿ ಪಾಷಂಡಮತಪ್ರವೃತ್ತರಾದವರನ್ನು ನಾಶಮಾಡು.

**ಶಿವತತ್ವ ರತ್ನಾಕರ—ಕಲ್ಲೋಲ ೪, ತರಂಗ ೯, ಶ್ಲೋಕ ೧೭**

ವೀರೇಶ್ವರಾದ್ಯಾಃ ಪ್ರಮಥೇಶ್ವರಾಶ್ಚ ಕ್ಷಿತೌಕ್ರಮೇಣೈವ ಕೃತಾವತಾರಾಃ ।
ಪ್ರತ್ಯಕ್ಷಸಿದ್ಧೈರತುಲಪ್ರಭಾವೈಃ ಸ್ಥಿರೀಕರಿಷ್ಯಂತಿ ಸದಾಮಮಾಜ್ಞಾಂ ॥

ವೀರೇಶನೇ ಮೊದಲಾದ ಪ್ರಮಥ ಶ್ರೇಷ್ಠರೆಲ್ಲ ಭೂಮಿಯಲ್ಲಿ ಕ್ರಮವಾಗಿ ಅವತಾರವನ್ನು ತಾಳುವರು. ತಮ್ಮ ಪ್ರತ್ಯಕ್ಷ ಸಿದ್ಧಕೃತಿಗಳಿಂದ ನನ್ನ ಆಜ್ಞೆಯನ್ನು ಭೂಲೋಕದಲ್ಲಿ ಸ್ಥಿರವಾಗಿ ಮಾಡುವರು. ನಂದಿಕೇಶ್ವರನಿಗೆ ಹೀಗೆಯೇ ಅನೇಕ ರೀತಿಯಿಂದ ಶಂಕರನು ಉಪದೇಶ ಮಾಡಿದ್ದಾನೆ.

ಪಾರ್ವತಿಯನ್ನು ಕುರಿತು—

**ಶಿವತತ್ವ ರತ್ನಾಕರ—ಕಲ್ಲೋಲ ೪, ತರಂಗ ೯, ಶ್ಲೋಕ ೩೨**

ಶಿವಾಗಮಾನಾಂ ಚ ಪರಂ ರಹಸ್ಯಂ ಅಹಂ ಯಥಾವೇದ್ಮಿ ತಥೈವವೇತ್ತಿ ।
ತಸ್ಮಾದಮುಷ್ಯಾಪಿ ಮಮಾಪಿದೇವಿ ಭೇದಸ್ತುನಾಮ್ನಾ ನ ಮಹಾಮಹಿಮ್ನಾ ॥

ಎಲೌ ದೇವಿಯೆ! ಶಿವಾಗಮಗಳ ರಹಸ್ಯವನ್ನು ನಾನು ಹೇಗೆ ತಿಳಿಯುತ್ತೇನೆಯೋ ಹಾಗೆಯೇ ಈ ನಂದಿಕೇಶ್ವರನಾದರೂ ತಿಳಿಯುತ್ತಾನೆ. ಆದ್ದರಿಂದ ನನಗೂ ಈ ನಂದಿಕೇಶ್ವರನಿಗೂ ಹೆಸರಿನಿಂದ ಭೇದವಿರುವದಲ್ಲದೆ ಮಹಿಮೆಗಳಲ್ಲಿ ವ್ಯತ್ಯಾಸವಿರುವದಿಲ್ಲ.

**ಶಿವತತ್ವ ರತ್ನಾಕರ—ಕಲ್ಲೋಲ ೪, ತರಂಗ ೯, ಶ್ಲೋಕ ೩೩ ರಿಂದ ೩೪**

ಆದ್ಯಾವತಾರೇ ವೃಷಭಸ್ಯನಾಮ ಭೂಯಾದಮುಷ್ಮಿನ್ ಬಸವಃ ಕಿಲೇತಿ ।
ಯಸ್ಯಾನನಾಬ್ಜೇ ಬಸವೇತಿ ಶಬ್ದಃ ಪ್ರವರ್ತತೇ ತತ್ರ ವಸಾಮಿಗೌರಿ ॥ ೩೩ ॥
ಕಿಂಚಾಹಮಸ್ಯಾನುಸರನ್ನಶೇಷಂ ಆತ್ಮೀಕರಿಷ್ಯಾಮ್ಯನುಬಂಧವಸ್ತು ।
ಲಿಂಗಾತ್ಮಕೋऽಸೂನ್ವಸುಜಂಗಮಾತ್ಮಾ ದೇಹಂ ಪುನರ್ದರ್ಶಿತ ರೂಪಗೂಢಃ ॥ ೩೪ ॥

ಕಲ್ಪೇಸಖಾಸರ್ಗವಿಧೌಸಹಾಯಃ ಗಣಾಗ್ರಣೀರ್ವರ್ೇತ್ರ ಭೃದಗ್ರಯಾಯಿಾ ।
ಆಸಾವಧಿಷ್ಠಾನ ಮನೇಕವೃತ್ಯಾ ಕರೋತಿಶೇವಾಂ ಮಮಕಾಮರೂಪಃ ॥ ೩೫ ॥

ಸೋಯಂ ಮದಂಶಸ್ಸುಮುಖಸ್ತ್ವಯಾಪಿ ಸಂಭಾವನೀಯಃ ಕಿಮುತೇ ತರೇಣ ।
ಕುರ್ಯಾತ್ತತಸ್ತಾಮಸಹಾಯಗಂಗೆ ಶಂಕಾವಿಮಾಂ ಶಕ್ವರರಾಜಸೇವಾಂ ॥ ೩೬ ॥

ಇತ್ಥಂ ಪ್ರಶಂಸನ್ ವೃಷಭೇಶಮಿಾಶಃ ಪ್ರಯುಜ್ಯತಾಂ ಪ್ರಸ್ತುತಕಾರ್ಯಸಿದ್ಧೌ ।
ವಿಲೋಕಯಂತೀಂ ವೃಷಭಂ ವಿಶೇಷಾತ್ ಸಭಾಮವೈಶಿಷ್ಟಸುದಾಂಶುಮೌಳಿಃ ॥ ೩೭ ॥

ಅಥಝುಡಿತಿಶಿವಾಜ್ಞಾಂ ಕರ್ತುಮುತ್ಯುಚ್ಚನೀಚೇಷ್ವಪಿ ಜನನಮವಾಪುಶ್ಶಂಭುಭೃತ್ಯಾಃ ಕುಲೇಷು।
ಮಣಯ ಇವ ಮಹಾರ್ಘಾರೋಹಣಾಂ ಬೋಧಿಶುಕ್ತಿ ಷ್ವಪಹತ ಪರಿಪಂಥಿಧ್ವಾಂತ ವೃಂದಾ
ಮಹೋಭಿಃ ॥ ೩೮ ॥

ಎಲೌ ಗೌರಿಯೆ! ಈ ಆದ್ಯಾವತಾರದಲ್ಲಿ ವೃಷಭೇಶ್ವರನ ಹೆಸರು ಬಸವ ಎಂಬುವದಾಗಿ ಆಗುವದು. ಯಾವಾತನ ಮುಖದಲ್ಲಿ ಬಸವ ಎಂಬುವ ಶಬ್ದವಿರುತ್ತದೆಯೋ ಅಲ್ಲಿಯೇ ನಾನು ವಾಸವಾಗಿರುತ್ತೇನೆ. ಇವನು ಪ್ರಳಯಕಾಲದಲ್ಲಿ ಮಿತ್ರನು, ಸೃಷ್ಟಿಯ ವಿಧಾನದಲ್ಲಿ ಸಹಾಯಕನು, ಪ್ರಮಥರಲ್ಲಿ ಅಗ್ರೇಸರನು, ಎಲೌ ಗಂಗೆಯೆ! ಇವನು ನನ್ನ ಅಂಶವನ್ನು ಹೊಂದಿರುತ್ತಾನೆ. ನೀನೂ ಕೂಡ ಇವನಿಗೆ ಸನ್ಮಾನವನ್ನು ಮಾಡು. ಇವನು ರಾಜನ ಕಾರ್ಯವನ್ನು ಮಾಡಲಿ. ಅದರಲ್ಲಿ ಸಂಶಯಬೇಡವೆಂದು ಹೇಳಿದನು. ಪ್ರಸ್ತುತ ಕಾರ್ಯಸಿದ್ಧಿಗೋಸ್ಕರ ನನ್ನ ಅನೇಕ ಸೇವಕರು ಉಚ್ಚ, ನೀಚ ಕುಲದಲ್ಲಿ ಜನಿಸುವರು. ಹೇಗೆ ರತ್ನಗಳು ಉನ್ನತಗಳಾದ ಗಿರಿಗಳಲ್ಲಿಯೂ, ಸಮುದ್ರಗಳಲ್ಲಿಯೂ, ಕಪ್ಪೆಯ ಚಿಪ್ಪಿನಲ್ಲಿಯೂ ಹುಟ್ಟಿ ಕತ್ತಲೆಯನ್ನು ನಾಶಮಾಡುತ್ತವೆಯೋ ಅದರಂತೆಯೇ ಶರಣರು ಹುಟ್ಟುವರು.

ಸಾಕ್ಷಾತ್ ಪರಮೇಶ್ವರನ ಅಪ್ಪಣೆಯ ಪ್ರಕಾರ ನಂದಿಕೇಶ್ವರನು ಮಾದರಸ ಮಾದಲಾಂಬಿಕೆಯರ ಗರ್ಭದಲ್ಲಿ ಲೌಕಿಕ ರೂಢಿಗನುಸರಿಸಿ ಜನಿಸಿದನು. ಆ ದಂಪತಿಗಳ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ಶಿಶುವಿನ ಜನನವಾದ ಕೂಡಲೇ ಗುರುರೂಪ ಧಾರಿಯಾದ ಶಂಕರನು—

**ಶಿವತತ್ವ ರತ್ನಾಕರ—ಕಲ್ಲೋಲ ೪, ತರಂಗ ೯**

ಪ್ರಣಮಂತಮಿವಾಚಾರ್ಯಂ ಶಿರೋವಿರಚಿತಾಂಜಲಿಂ ।
ಅರ್ಧೋದಯೇ ತಸ್ಯಕಂಠೆ ಬಧ್ವಾಲಿಂಗಾತ್ಮಕಂ ಶಿವಂ ॥

ಆ ಬಾಲಕನ ಮಸ್ತಕದಲ್ಲಿ ಹಸ್ತವನ್ನಿಟ್ಟು ಅವನ ಕಂಠದಲ್ಲಿ ಲಿಂಗವನ್ನು ಧರಿಸಿದನು.

**ಶಿವತತ್ವ ರತ್ನಾಕರ—ಕಲ್ಲೋಲ ೪, ತರಂಗ ೯, ಶ್ಲೋಕ ೬೭**

ಅಯಂ ಬಸವರಾಜಾಖ್ಯೋ ಭಕ್ತಿಭಾಂಡ ಗೃಹಂ ಭವೇತ್ ।
ಅಪ್ರಸಾದೀಕೃತಂಚಾಸ್ಮೈ ನಪ್ರಮೇಯಂ ಕದಾಚನ ॥

ಈ ಬಸವರಾಜನು ಭಕ್ತಿಭಂಡಾರಿಯಾಗುವನು. ಪ್ರಸಾದವಲ್ಲದ ಯಾವ ಪದಾರ್ಥವನ್ನೂ ಇವನಿಗೆ ಕೊಡಕೂಡದೆಂದು ಹೇಳಿ ದೇವರ ದೇವನಾದ ಶಂಕರನು ಬಯಲಾದನು.

ಶ್ರೀ ವೃಷಭೇಶ್ವರನು ಬಸವನಾಮದಿಂದ ಅವತರಿಸುವ ಕಾಲಕ್ಕೆ—

**ಶಿವತತ್ವ ರತ್ನಾಕರ—ಕಲ್ಲೋಲ ೪, ತರಂಗ ೯, ಶ್ಲೋಕ ೬೪**

ವೃಷೇಂದ್ರೇ ಸಂಜಾತೇ ಬಸವ ಇತಿ ನಾಮ್ನಾ ಶಿವಕಥಾ ।
ಸುಧಾಸಾಂದ್ರೇ ಚಂದ್ರೇ ಮಧುರಮಧುರೈಸ್ತೈರ್ಗುಣಗಣೈಃ ॥
ಸಪಾತೋರ್ವ್ಯಾಂ ಕಲ್ಪದ್ರುಮಕುಸುಮವೃಷ್ಟಿಃ ಪರಿಣತಾ ।
ಪ್ರಸಾದಂ ಪ್ರಾಪಾಶಾವಲಯಮಪಿಚಿತ್ತೈ ಸಹಸತಾಂ ॥

ಹೀಗೆ ವೃಷಭನು ಬಸವ ಎಂಬುವ ಅಭಿದಾನದಿಂದುದಯನಾದನು. ಇವನ ಕಥೆಗಳೆಂಬ ಅಮೃತಕ್ಕೆ ಚಂದ್ರಪ್ರಾಯನೂ, ಅತ್ಯಂತ ಮೃದು ಮಧುರಗಳಾದ ಗುಣಗಳಿಂದ ಸುಶೋಭಿತನೂ ಆದ ಬಸವೇಶ್ವರನು ಉದಯವಾಗಲು ಭೂಲೋಕದಲ್ಲಿ ಕಲ್ಪದ್ರುಮಗಳ ಪುಷ್ಪವೃಷ್ಟಿಯಾಯಿತು. ಸತ್ಪುರುಷರ ಚಿತ್ತಗಳೊಡನೆ ದಿಗಂತವೆಲ್ಲ ಸ್ವಚ್ಛವಾಯಿತು. ದೊಡ್ಡವರ ಜನನದ ವರ್ಣನೆಯನ್ನು ಹೀಗೆ ಮಾಡುವದು ಕವಿಸಮಯಖ್ಯಾತವಾಗಿರುವದು.

ಮಹಾಕವಿ ಕಾಳಿದಾಸನು ಕುಮಾರಸಂಭವದಲ್ಲಿ ಪಾರ್ವತಿಯ ಜನನದ ವರ್ಣನೆಯನ್ನು ಕೆಳಗೆ ಬರೆದಂತೆ ವರ್ಣಿಸಿರುತ್ತಾನೆ.

**ಕುಮಾರಸಂಭವ—ಸರ್ಗ ೧, ಶ್ಲೋಕ ೨೩**

ಪ್ರಸನ್ನದಿಕ್ಪಾಂಶು ವಿವಿಕ್ತವಾತಂ ಶಂಖಸ್ವನಾನಂತರ ಪುಷ್ಪವೃಷ್ಟಿ ।
ಶರೀರಿಣಾಂ ಸ್ಥಾವರಜಂಗಮಾನಾಂ ಸುಖಾಯ ತಜ್ಜನ್ಮದಿನಂ ಬಭೂವ ॥

ಪಾರ್ವತಿಯು ಹುಟ್ಟಿದ ದಿವಸದಲ್ಲಿ ದಿಕ್ಕುಗಳು ನಿರ್ಮಲಗಳಾದವು. ಧೂಳಿ ಇಲ್ಲದ ಗಾಳಿಯು ಬೀಸಿತು. ಮೊದಲು ಶಂಖ ಧ್ವನಿಯು, ಅನಂತರ ಪುಷ್ಪವೃಷ್ಟಿಯಾಯಿತು. ಸ್ಥಾವರಜಂಗಮಾತ್ಮಕ ವರ್ಗಗಳಿಗೆಲ್ಲ ಅವಳ ಜನ್ಮದಿನವು ಸುಖಕರವಾಯಿತು.

ಶ್ರೀ ಬಸವಣ್ಣನವರ ಅವತಾರದ ವಿಷಯವನ್ನು ಹರಿಹರ ಮಹಾಕವಿಯು ತನ್ನ ಬಸವರಾಜದೇವರ ರಗಳೆಯಲ್ಲಿ ಬಹಳ ಮನೋಹರವಾಗಿ ವರ್ಣಿಸಿರುತ್ತಾನೆ—

ಇಳೆಗೆ ಶಿವಭಕ್ತಿಯಂತೀವಲ್ ಮನಂಗೊಂಡು ಚಿಪ್ಪಿನೊಳ್ ಮುತ್ತು ।
ಕಾಸಾರದೊಳ್ ಪಂಕಜಂ ಅಪ್ಪಿನಿಂತಪ್ಪು ಮಲಯಾದ್ರಿಯಿಂ ಮಲಯಜಂ ॥
ಕೇತಕೀ ಕುಸುಮದಿಂರುಚಿರತರಪರಿಮಳಂ ಶೀತಕರನಿಂ ಸಾಂದ್ರತರ ।
ಕೌಮುದೋಜ್ವಳಂ ಪುಟ್ಟುವಂತಿರೆ ಪುಟ್ಟಿದಂ ಶಿವನ ಶಿಶುವಲ್ಲಿ ಪುಟ್ಟಿದಂ ॥
ಸಂಸಾರಸುಖದ ಲೀಲೆಯಿನಲ್ಲಿ ಸುಮುಹೂರ್ತವೇ ಗಂಡು ರೂಪಾದ ತೆರನಾಗೆ ।
ಅನುಮ ಕಾರುಣಿಕ ಶಿಶು ಜನಿಯಿಸಿದನನುವಾಗೆ ॥

ಇಲ್ಲಿ ಹರಿಹರನು ಬಸವಣ್ಣನವರಿಗೆ "ಶಿವನ ಶಿಶು, ಕಾರುಣಿಕ ಶಿಶು" ಎಂದು ಪ್ರಯೋಗಿಸಿರುತ್ತಾನೆ.

ದೇವಲೋಕದಿಂದ ಬಂದು ಮಾನವರಾಗಿ ಜನಿಸಿ ಮನುಷ್ಯತ್ವವನ್ನು ಪಡೆದ ಬಸವಣ್ಣನವರ ಬಾಲಲೀಲೆಯಲ್ಲಿ ಅನೇಕ ಮಹತ್ಕೃತಿಗಳು ನಡೆದಿರುತ್ತವೆ. ದೊಡ್ಡವರ ಚರಿತ್ರೆಯಲ್ಲಿ ಅವರ ಕೀರ್ತಿಗೆ ಒರೆಗಲ್ಲಾಗಿ ಅಂತಹ ಸಂಗತಿಗಳು ನಡೆಯುವದು ಸ್ವಾಭಾವಿಕವಾದುದು. ವಿಶ್ವದ ಜನರಿಗೆ ಅನೇಕ ರೀತಿಯಿಂದ ಉಪಕಾರಗಳನ್ನು ಮಾಡುವದು ಅವರ ಜನ್ಮದ ಗುರಿಯಾಗಿರುತ್ತದೆ.

ಒಂದು ದಿನ ಬಸವ ಬಾಲಕನು ತನ್ನ ಸಂಗಡಿಗರಾದ ಕೆಲವು ಹುಡುಗರೊಂದಿಗೆ ಬಾಲಕ್ರೀಡೆಗಳನ್ನು ಆಡುತ್ತಾಡುತ್ತಾ ಒಂದು ಬಾವಿಯ ಹತ್ತಿರ ಹೋದಾಗ್ಗೆ ಕೃಷ್ಣ ನೆಂಬೋರ್ವ ಬಾಲಕನು ಕಾಲುಜಾರಿ ಬಾವಿಯಲ್ಲಿ ಬಿದ್ದನು. ಆಗ ಅಲ್ಲಿ ಅನೇಕ ಜನಗಳು ಸೇರಿದರು. ಬಾಲಕನಾದ ಬಸವನೇ ಕೃಷ್ಣನನ್ನು ಬಾವಿಯಲ್ಲಿ ದಬ್ಬಿರಬಹುದೆಂದು ಕೆಲವರು ತರ್ಕವಿತರ್ಕಗಳನ್ನು ಮಾಡುತ್ತ ನಿಂತರು. ಕೃಷ್ಣನ ತಂದೆ ತಾಯಿಗಳು ಬಾಲಕ ನನ್ನು ಸ್ಮರಿಸುತ್ತ ಬಿಕ್ಕಿಬಿಕ್ಕಿ ಅಳಲು ಪ್ರಾರಂಭಿಸಿದರು. ಆಗ ಬಸವ ಬಾಲಕನು ತನ್ನ ಮೇಲೆ ಜನಗಳು ಆಪಾದಿಸಿರುವ ಅಪವಾದವನ್ನು ಸಹಿಸಲಾರದೆ ಅನ್ಯಾಯವಾಗಿ ಈ ಜನಗಳು ನನ್ನಮೇಲೆ ಅಪವಾದವನ್ನು ಕೊಟ್ಟಿರುತ್ತಾರೆ. ನಾನು ಸಂಗಮೇಶ್ವರನ ಸಾಕ್ಷಿಯಾಗಿ ನಿರಪರಾಧಿಯಾಗಿದ್ದೇನೆ. ಕೃಷ್ಣನನ್ನು ಬಾವಿಯಲ್ಲಿ ನಾನು ಕೆಡವಿರುವದಿಲ್ಲ. ನಮ್ಮ ತಂದೆಯಾದ ಸಂಗಮೇಶ್ವರನೇ ಇದಕ್ಕೆ ಸಾಕ್ಷಿ ಎಂದನ್ನುತ್ತ ತನ್ನ ಕೈಗಳನ್ನು ಮೇಲಕ್ಕೆತ್ತಿ ಗುರುವರ ಸಂಗನ ಬಸವ ಕಾಪಾಡು, ಕಾಪಾಡು ಎಂದು ಸಂಗಮೇಶ್ವರನನ್ನು ಮನಸ್ಸಿನಲ್ಲಿ ಎಡೆಬಿಡದೆ ಧ್ಯಾನಿಸುತ್ತ ಜನಾರ್ದನ ಪ್ರಭುಗಳ ಪುತ್ರನಾದ ಬಾಲಕ ಕೃಷ್ಣನನ್ನು ನಾನು ಬಾವಿಯಲ್ಲಿ ಕೆಡವಿರುವದಿಲ್ಲ. ಯಾರು ಕೆಡವಿದರೆಂಬುದನ್ನು ಎಲೌ ಕೃಷ್ಣನೇ ನೀನೇ ಬಂದು ಈ ಜನಗಳಿಗೆ ನಿಜವಾದ ಸಂಗತಿಯನ್ನು ಹೇಳು ಎನಲು ನೀರಿನೊಳಗೆ ಬಿದ್ದಿದ್ದ ಕೃಷ್ಣನು ಮೇಲಕ್ಕೆ ಬಂದು ಅಲ್ಲಿ ನೆರೆದಿದ್ದ ಜನಗಳಿಗೆ ನಾನೇ ಬಾವಿಯಲ್ಲಿ ಕಾಲುಜಾರಿ ಬಿದ್ದೆನು. ಬಸವನು ನನ್ನನ್ನು ಕೆಡವಿರುವದಿಲ್ಲ ಎಂದು ಹೇಳಿ, ಬಾಲಕ ಬಸವನಿಗೆ ಕೈಮುಗಿದನು. ಬಾಲಕ ಬಸವನ ಈ ಚಮತ್ಕಾರ ಕೃತಿಯನ್ನು ಅಲ್ಲಿ ಕೂಡಿದ್ದ ಜನಗಳು ಪ್ರಶಂಸಿಸುತ್ತ ತಮ್ಮತಮ್ಮ ಗೃಹಗಳಿಗೆ ತೆರಳಿದರು.

ಕೆಲವರು ಇದು ಬಸವನ ಬಾಲಲೀಲೆಯ ಪ್ರಥಮ ಸೋಪಾನವೆಂದು ಆಶ್ಚರ್ಯ ಚಕಿತರಾದರು. ಮತ್ತೆ ಕೆಲವರು ಈ ಚಿಕ್ಕ ಬಾಲಕನ ಸೌಜನ್ಯ, ಸೌಹಾರ್ದ್ರಗಳನ್ನು ನೆನೆನೆನೆದು ಪ್ರಶಂಸೆಯನ್ನು ಮಾಡಿದರು. ಚಿಕ್ಕ ಬಾಲಕನಲ್ಲಿ ಇಂತಹ ಶ್ರೇಷ್ಠಗುಣ ಗಳಿರುವದರಿಂದ ಇವನೊಬ್ಬ ಮಹಾಪುರುಷನಾಗುತ್ತಾನೆಂದು ಮಾತನಾಡಿದರು. ಬಾಲಕನಾದ ಬಸವನು ತನ್ನ ಅನಂತ ಅಮಾನುಷಲೀಲೆಗಳಿಂದ ಜನಗಳನ್ನು ಸಂತೋಷಸಾಗರದಲ್ಲಿ ಮುಳುಗಿಸುತ್ತಲಿದ್ದನು.

ಶ್ರೀ ಬಸವಣ್ಣನವರು ತಮ್ಮ ಗುರುಗಳಾದ ಜಾತವೇದ ಮುನಿಗಳಲ್ಲಿಯೇ ಅಧ್ಯಯನ ಮಾಡಿದರು. ಅವರ ಅಧ್ಯಯನಕಾಲದ ವಿಶೇಷ ಸಂಗತಿಗಳು ಸ್ಪಷ್ಟವಾಗಿ ತಿಳಿದುಬಂದಿರುವದಿಲ್ಲ. ಆದರೂ ಅವರೊಬ್ಬ ದಾರ್ಶನಿಕರಿದ್ದರೆಂಬುವದರಲ್ಲಿ ಸಂಶಯವೇ ಇರುವದಿಲ್ಲ.

ಶ್ರೀ ಚಿಂತಾಮಣಿ ವಿನಾಯಕ ವೈದ್ಯ, ಎಂ.ಎ., ಎಲ್‌ಎಲ್.ಬಿ., ಭಾರತೇತಿಹಾಸ ಮಂಡಲ, ಪುಣೆ—ಇವರು ತಮ್ಮ—"Downfall of Hindu India" ಈ ಇಂಗ್ಲೀಷ್ ಗ್ರಂಥದಲ್ಲಿಯೂ, "ಹಿಂದೂ ಭಾರತಕ ಅಂತ" ಎಂಬುವ ಹಿಂದೀ ಗ್ರಂಥದ ೬೪೩ ನೆಯ ಪುಟದಲ್ಲಿ—

ಬಸವಣ್ಣನವರು ದೊಡ್ಡ ದಾರ್ಶನಿಕರಿದ್ದರು. ಮತ್ತು ಧರ್ಮ ಸುಧಾರಕರು, ಎಂದು ಬರೆಯುತ್ತ ಇವರ ವಿಷಯಕ್ಕೆ ಅನೇಕ ಮಾತುಗಳನ್ನು ಹೇಳಿದ್ದಾರೆ. ಅದನ್ನು ಬೇರೊಂದು ಪ್ರಕರಣದಲ್ಲಿ ವಿಸ್ತಾರವಾಗಿ ಬರೆಯಲಾಗಿದೆ.

ಮುಂದೆ ಸ್ವಲ್ಪೇ ದಿನಗಳಲ್ಲಿ ಕಲ್ಯಾಣಕ್ಕೆ ಹೋಗಿ ರಾಜಕಾರಣದಲ್ಲಿ. ತಮ್ಮ ನೈಪುಣ್ಯವನ್ನು ತೋರಿಸಿದರು. ವೀರಶೈವ ಧರ್ಮೋದ್ಧಾರದ ಕಾರ್ಯಗಳನ್ನು ಬಹಳ ಸುಸಂಘಟಿತ ರೀತಿಯಿಂದ ಪ್ರಚಂಡತರವಾಗಿ ಪ್ರಾರಂಭಿಸಿ, ಮತಮತಾಂತರಗಳನ್ನೆಲ್ಲ ಖಂಡಿಸಿ ತಮ್ಮ ಸಿದ್ಧಾಂತವನ್ನು ಸ್ಪಷ್ಟವಾಗಿ ಮಂಡಿಸಿರುತ್ತಾರೆ. ಎಲ್ಲಾ ದರ್ಶನಗಳ ಜ್ಞಾನವಿಲ್ಲದೆ ಹೀಗೆ ಮಾಡಲು ಶಕ್ಯವೇ ಇರುವದಿಲ್ಲ. ಆದ್ದರಿಂದ ಚಿಂತಾಮಣಿ ವಿನಾಯಕ ವೈದ್ಯರು ಹೇಳಿದಂತೆ ಅವರೊಬ್ಬ ದಾರ್ಶನಿಕರಿದ್ದರೆಂಬುವದು ಸರಿಯಾದುದು.

ಬಸವಣ್ಣನವರು ವಿದ್ಯಾಭ್ಯಯನಮಾಡುವಾಗಲೇ ಅವರಿಗೆ ಸಂಗಮೇಶ್ವರನಲ್ಲಿ ಅಸಾಧಾರಣವಾದ ಭಕ್ತಿಯು ಬೇರೂರಿತ್ತು. ಭೂಲೋಕದಲ್ಲಿ ಶಿವಭಕ್ತಿಯನ್ನುದ್ಧಾರ ಮಾಡುವ ಕಾರ್ಯವೇ ಅವರ ಅವತಾರದ ಮೂಲಕಾರಣವಾಗಿದ್ದಿತು.

ಸಂಸ್ಕೃತ ಸಾಹಿತ್ಯಪ್ರಪಂಚದಲ್ಲಿ ಸುಪ್ರಸಿದ್ಧನಾದ ಬಾಣಕವಿಯು ತನ್ನ ಹರ್ಷ ಚರಿತ್ರೆಯಲ್ಲಿ ಹರ್ಷನ ಗುಣವರ್ಣನೆಮಾಡಿರುವದು ಅಕ್ಷರಶಃ ಬಸವಣ್ಣನವರಿಗೆ ಸರಿಹೋಗುತ್ತದೆ.

**ಹರ್ಷಚರಿತ್ರೆ—ಪುಟ ೨೭೬**

> "ನಿಸರ್ಗ ಸ್ವೈರಿಣೀ ಸ್ವರುಚ್ಯನುರೋಧಿನೀ ಚ ಭವತಿಹಿಮಹತಾಂ ಮತಿಃ ಯತಃ ಸತ್ಯ ಕೇನಚಿತ್ ಅನುಪದಿಷ್ಟಾ ಸಹಜೈವ ಶೈಶವಾದಾರಭ್ಯ ಅನ್ಯದೇವತಾ ವಿಮುಖೀ ಭಗವತಿ, ಭಕ್ತಿಸುಲಭೆ, ಭುವನಭೃತಿ ಭೂತ ಭಾವನೆ, ಭವಚ್ಛಿದಿ, ಭವೇ ಭೂಯಸೀ ಭಕ್ತಿರಭೂತ್. ಅಕೃತ ವೃಷಧ್ವಜ ಪೂಜಾವಿಧಿಃ, ನ ಸ್ವಪ್ನೇಪಿ ಆಹಾರವಿಧಿಂ ಅಕರೋತ್, ಅಜಂ, ಅಮರ ಗುರುಂ, ಅಮರಂ, ಅಸುರಪುರರಿಪುಂ, ಅಪರಿಮಿತ ಗಣಪತಿಂ, ಅಚಲ ದುಹಿತೃಪತಿಂ, ಅಖಿಲಭುವನಕೃತ ಚರಣನತಿಂ, ಪಶುಪತಿಂ, ಪ್ರಸನ್ನಃ ಅನ್ಯದೇವತಾ ಶೂನ್ಯಂ ಅಮನ್ಯತ ತ್ರೈಲೋಕ್ಯಂ."

ಅಂದರೆ—ದೊಡ್ಡವರ ಬುದ್ಧಿಯು ಸ್ವಾಭಾವಿಕವಾಗಿ ಸ್ವಚ್ಛಂದ ವೃತ್ತಿಯುಳ್ಳದ್ದು. ಅವರಿಗೆ ಉಪದೇಶಮಾಡತಕ್ಕವರಿರುವದಿಲ್ಲ. ಸಹಜವಾಗಿಯೇ ಬಾಲ್ಯಾದಾರಭ್ಯ ಅನ್ಯದೇವತೆಗಳಿಂದ ನಿವೃತ್ತಿಹೊಂದಿದವನಾಗಿದ್ದನು. ಶಿವನಲ್ಲಿ ಅಧಿಕ ಭಕ್ತಿಯುಂಟಾ ಯಿತು. ಶಿವನ ಪೂಜೆಮಾಡದೆ ಸ್ವಪ್ನದಲ್ಲಿಯೂ ಕೂಡ ಆಹಾರವನ್ನು ಸ್ವೀಕರಿಸುತ್ತಿರಲಿಲ್ಲ. ತ್ರೈಲೋಕ್ಯದಲ್ಲಿ ಶಿವನಲ್ಲದನ್ಯದೈವಂಗಳಿಲ್ಲವೆಂದು ತಿಳಿದನು.

ಮೇಲಿನ ವಾಕ್ಯಗಳಂತೆ ಬಸವಣ್ಣನವರಿದ್ದರು. ಶಿವನೇ ಸರ್ವೋತ್ತಮನು ಉಳಿದವ ರೆಲ್ಲರೂ ಅವನ ಪರಿವಾರದವರೆಂದು ಅವರ ತತ್ವವು.

ಬಾಲಕರಾದ ಬಸವಣ್ಣನವರು ತಮಗೆ ಕಷ್ಟಗಳು ಬಂದಾಗಲೆಲ್ಲ ತಮ್ಮ ತಂದೆ ಯಾದ ಸಂಗಮೇಶ್ವರನನ್ನು ಧ್ಯಾನಿಸುತ್ತ ಅದನ್ನು ಪರಿಹರಿಸಿಕೊಳ್ಳುತ್ತಿದ್ದರು. ತನ್ನ ವರ ಪುತ್ರನಾದ ಬಸವನಲ್ಲಿ ಸಂಗನು ಯಾವಾಗಲೂ ಕೃಪಾದೃಷ್ಟಿಯಿಂದ ನೋಡುತ್ತಿದ್ದನು.

ಎಂಟನೆಯ ವರ್ಷದಲ್ಲಿ ತಂದೆಯು ಉಪನಯನವನ್ನು ಮಾಡಿಸುತ್ತೇನೆಂದು ಹೇಳಲು ಶ್ರೀ ಬಸವಣ್ಣನವರು—ನನಗೆ ಜನನವಾದ ಕೂಡಲೇ ಸಾಕ್ಷಾತ್ ಸಂಗಮೇ ಶ್ವರನು ಲಿಂಗಧಾರಣ ದೀಕ್ಷೆಯನ್ನು ಮಾಡಿರುತ್ತಾನೆಂದು ತಿರಸ್ಕರಿಸಿದರು.

**ಶಿವತತ್ವ ರತ್ನಾಕರ—ಕಲ್ಲೋಲ ೪, ತರಂಗ ೯, ಶ್ಲೋಕ ೭೦-೭೨**

ಉಪನೇತುಮುಮುಂ ಪುತ್ರಂ ಆಯತೇತಾಂ ಮಹೋತ್ಸವೈಃ ।
ತದಾಯಂ ಪಿತರೌ ದೃಷ್ಟ್ವಾ ಚಚಕ್ಷೇತಾದೃಶೋದ್ಯಮೌ ॥ ೭೦ ॥

ಶೃಣುತಾಂ ಪಿತರೌ ಪ್ರೇಮ್ಣಾ ಸಂಗಮೇಶೋ ಗುರುರ್ಮಮ ।
ಲಿಂಗಸ್ಯಧಾರಣಂ ವೀರಶೈವ ದೀಕ್ಷಾಂ ಚ ಕಾರಯನ್ ॥ ೭೧ ॥

ಅನ್ವಗೃಹ್ಣಾತ್ತತೋನಾರ್ಹಂ ಮಮೋಪನಯನಾದಿಕಂ ।
ಇತ್ಯನಂತರಮುನ್ಮುಚ್ಯ ತತ್ ಕ್ಷಣಾತ್ಪೂರ್ವಮಾಶ್ರಯಂ ॥ ೭೨ ॥

ಪುತ್ರನ ಉಪನಯನವನ್ನು ಉತ್ಸವದಿಂದ ಮಾಡಬೇಕೆಂದು ತಂದೆ ತಾಯಿಗಳು ಪ್ರಯತ್ನಿಸಿದ್ದುದನ್ನು ನೋಡಿ ಬಾಲಕನು ಅವರಿಗೆ ಕೆಳಗಿನ ಮಾತುಗಳನ್ನು ಹೇಳಿದನು.

ತಂದೆ ತಾಯಿಗಳಿರಾ! ನನ್ನ ಮಾತನ್ನು ಪ್ರೇಮದಿಂದ ಕೇಳಿರಿ. ನನ್ನ ಗುರುವಾದ ಸಂಗಮೇಶನು ನನಗೆ ಲಿಂಗಧಾರಣಮಾಡಿದ್ದಾನೆ. ಆದ್ದರಿಂದ ಈ ಪ್ರಾಕೃತಕರ್ಮದ ಆವಶ್ಯಕತೆಯು ನನಗಿರುವದಿಲ್ಲವೆಂದು ತಂದೆಗೆ ಹೇಳಲು, ತಂದೆಯು ಮಗನ ಅದರಲ್ಲಿಯೂ ಎಂಟು ವರ್ಷದ ಬಾಲಕನ ಈ ಮಾತುಗಳನ್ನು ಕೇಳಿ ದಿಗ್ಭ್ರಾಂತನಾಗಿ ಮಗನನ್ನು ಹೇಗಾದರೂ ಮಾಡಿ ಸಮ್ಮತಿಪಡಿಸಿ ಉಪನಯನವನ್ನು ಮಾಡಿಸಲೇಬೇಕೆಂದು ಅನೇಕ ಜನ ಪ್ರಕಾಂಡ ಪಂಡಿತರನ್ನು ಕರೆಯಿಸಿದನು. ಪಂಡಿತರು ಬಾಲಕನಾದ ಬಸವನ ಮನಸ್ಸನ್ನು ಹೇಗಾದರೂಮಾಡಿ ತಿರುಗಿಸಬೇಕೆಂದು ಬಹಳ ಪ್ರಯತ್ನಮಾಡಿದರು. ಬಸವಣ್ಣನವರು ಒಪ್ಪಿಕೊಳ್ಳಲಿಲ್ಲ. ಪಂಡಿತರ ಪ್ರಶ್ನೆಗಳಿಗೆಲ್ಲ ಬಾಲಕನು ಸರಿಯಾದ ಉತ್ತರವನ್ನು ಹೇಳಲು ಅವರು ಗಾಬರಿಯಾಗಿ ಈ ಬಾಲಕನು ಸಾಮಾನ್ಯನಲ್ಲ. ಈತನ ಕೂಡ ವಾದಮಾಡುವದು ತಮಗೆ ಸಾಧ್ಯವಾದುದಲ್ಲವೆಂದು ಹೇಳಿ ಬಂದ ದಾರೀ ಹಿಡಿದು ಹೊರಟುಹೋದರು.

ಎಂಟುವರ್ಷದ ಬಾಲಕನು ತಂದೆಯನ್ನೂ, ಶಾಸ್ತ್ರಾರ್ಥಮಾಡಲಿಕ್ಕೆ ಬಂದ ಪಂಡಿತರನ್ನೂ ಮುಖಭಂಗಿತ ಮಾಡಿದುದು ಸಾಮಾನ್ಯವಾದ ಮಾತಲ್ಲ. ಸಂಗಮೇಶ್ವರನ ವರಪುತ್ರನಾದ ಬಸವನಿಗೆ ಯಾರ ಹಂಗೂ ಇರಲಿಲ್ಲ. ದೊಡ್ಡವರಿಗೆ ಇರಬೇಕಾದುದೂ ಅಲ್ಲ; ಅಂಥವರಿಗೆ ಇರುವುದೂ ಇಲ್ಲ.

ಬಾಲಕನಾದ ಬಸವನು ಎಂಟು ವರ್ಷದವನು. ಇಂತಹ ಚಿಕ್ಕ ಬಾಲಕನು ಪಂಡಿತರಕೂಡ ವಾದಮಾಡುವದು ಶಕ್ಯವೇ? ಎಂಬುವ ಸಂಶಯ ಕೆಲವರಿಗೆ ಬರುವದು ಸಹಜವಾದುದು. ಬಸವಣ್ಣನವರಂತಹ ವಿಭೂತಿಗಳಿಗೆ ಯಾವುದು ತಾನೇ ಅಸಾಧ್ಯವಾದುದು? ಲೋಕದಲ್ಲಿ ಮೇಲ್ಮೆಯನ್ನು ಪಡೆದ ಅನೇಕ ಮಹಾ ಪುರುಷರ ಚರಿತ್ರೆಗಳಲ್ಲಿ ಇಂತಹ ಬಹಳ ಉದಾಹರಣೆಗಳನ್ನು ನಾವು ಕಾಣಬಹುದು.

**"ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ ನ ಚ ವಯಃ"**

ಅವರವರ ಗುಣಗಳೇ ಅವರವರಿಗೆ ಪೂಜಾಸ್ಥಾನವನ್ನು ದೊರಕಿಸಿಕೊಡುತ್ತವೆ. ವಯಸ್ಸು ಮೊದಲಾದುವುಗಳು ಕಾರಣವಲ್ಲ.

ಶ್ರೀ ಶಂಕರಾಚಾರ್ಯರು ಜಗತ್ಪ್ರಸಿದ್ಧ ವಿದ್ವಾಂಸರೆಂಬುವದು ಎಲ್ಲರಿಗೂ ತಿಳಿದ ವಿಷಯ—

**ಶಂಕರ ದಿಗ್ವಿಜಯ—ಪುಟ ೧೪೦, ಸರ್ಗ ೫, ಶ್ಲೋಕ ೧**

" ಇತಿ ಸಪ್ತಮಹಾಯಾನೇಖಿಲಶೃತಿ ಪಾರಂಗತತಾಂ ಗತೋ ವಟುಃ "

ಅಂದರೆ—ಈ ಬ್ರಹ್ಮಚಾರಿಯು ತನ್ನ ಏಳನೆಯ ವಯಸ್ಸಿನಲ್ಲಿ ಎಲ್ಲಾ ವೇದಗಳಲ್ಲಿ ಪಾರಂಗತನಾದನು.

ಏಳು ವರ್ಷದ ಚೇಲಾಳನು ಎಂತಹ ಮಹತ್ಕಾರ್ಯವನ್ನು ಮಾಡಿದನೆಂಬುವದು ಅವನ ಚರಿತ್ರೆಯನ್ನು ಓದಿದವರಿಗೆ ತಿಳಿದ ಮಾತಾಗಿದೆ. ಅಕ್ಕಮಹಾದೇವಿಯವರು ಐತಿಹಾಸಿಕ ಸುಪ್ರಸಿದ್ಧ ಶಿವಾನುಭವ ಮಂಟಪದ ಚರ್ಚೆಯಲ್ಲಿ ಭಾಗವನ್ನು ವಹಿಸಿದ್ದಾಗ ಅವರ ವಯಸ್ಸು ಕೇವಲ ೧೩ ಇತ್ತೆಂಬುವದು ಇತಿಹಾಸದಿಂದ ತಿಳಿದುಬಂದಿರುತ್ತದೆ. ಇಂತಹ ನೂರಾರು ಉದಾಹರಣೆಗಳನ್ನು ಕೊಡುವದು ಸಾಧ್ಯವಿರುತ್ತದೆ. ಉಪನಿಷತ್ತಿನಲ್ಲಿಯ ನಚಿಕೇತನು ೬ ವರ್ಷದವನು.

ಈ ತರಹದ ಕೃತಿಗಳು ಸುಳ್ಳೆಂದು ಹೇಳಲು ಬರುವದಿಲ್ಲ. ಪರಮಾತ್ಮನು ಒಂದೊಂದು ವ್ಯಕ್ತಿಯಲ್ಲಿ ಒಂದೊಂದು ಅಮಾನುಷ ಶಕ್ತಿಯನ್ನು ಕೊಟ್ಟಿರುತ್ತಾನೆ. ಅದನ್ನು ಕಂಡುಹಿಡಿಯಲು ಯಾರಿಗೂ ಸಾಧ್ಯವಾದುದಲ್ಲ.

ಶ್ರೀ ಬಸವಣ್ಣನವರು ತಮ್ಮ ಎಂಟನೆಯ ವಯಸ್ಸಿನಲ್ಲಿ ತಂದೆ ತಾಯಿಗಳನ್ನಷ್ಟೇ ಅಲ್ಲ, ಪಂಡಿತ ಮಂಡಲಕ್ಕೂ ದಿಗ್ಭ್ರಾಂತಿಯಾಗುವಂತೆ ಮಾಡಿದುದು ಅವರ ಚರಿತ್ರೆಯಲ್ಲಿ ಮಹತ್ವದ ಘಟನೆಯಾಗಿರುತ್ತದೆ. ಅಂದಿನಿಂದಲೇ ಅವರ ಕೀರ್ತಿಯು ಎಲ್ಲ ಕಡೆಗೂ ಪ್ರಸಾರವಾಯಿತು. ಇದು ವೀರಶೈವ ಧರ್ಮ ಪ್ರಸಾರದ ಹೆಗ್ಗುರುತಿನ ಚಿನ್ಹವಾಗಿರುತ್ತವೆಂದು ಬಾಲಕ ಬಸವನ ಈ ಕೃತಿಯು ಅನೇಕರಿಗೆ ಉತ್ಸಾಹವನ್ನುಂಟುಮಾಡಿತು. ಕೆಲವರು ಈ ಕೃತಿಯನ್ನು ನೋಡಿ ಬೆರಗಾದರು. ಹಲವರು ಹಲವು ರೀತಿಯಿಂದ ಮಾತನಾಡಲು ಪ್ರಾರಂಭಿಸಿದರು. ಇನ್ನುಳಿದವರು ಲೋಕದಲ್ಲಿಯೇ ಇದೊಂದು ಹೊಸ ಸಂಗತಿಯೆಂದು ತಮ್ಮ ತಮ್ಮೊಳಗೆ ಮಾತನಾಡಿದರು. ಜಗತ್ತಿನಲ್ಲಿ ಯಾವದಾದರೊಂದು ಹೊಸ ವಿಷಯವಾದರೆ ಅನಂತ ಜನಗಳು ಬೇರೆ ಬೇರೆ ರೀತಿಯಿಂದ ಮಾತನಾಡುವದು ಸ್ವಾಭಾವಿಕವಾಗಿರುತ್ತದೆ.

ಶ್ರೀ ಬಸವಣ್ಣನವರಲ್ಲಿ ಜನಗಳ ಭಕ್ತಿಯು ಮೆಲ್ಲ ಮೆಲ್ಲನೆ ಪ್ರಾರಂಭವಾಯಿತು. ಉಪನಯನಕ್ಕೆ ಒಪ್ಪದಿದ್ದುದರಿಂದ ಅವರು ತಂದೆ ತಾಯಿಗಳನ್ನು ಬಿಟ್ಟು ಹೊರಡಬೇಕಾಯಿತು. ಇದು ಸಾಮಾನ್ಯವಾದ ಕಾರ್ಯವಲ್ಲ. ಲೋಕೋತ್ತರವಾದುದೆಂದು ಜನಗಳಿಗೆ ಮನದಟ್ಟಾಯಿತು. ಈ ಬಾಲಕನು ನಂದಿಕೇಶ್ವರನ ಅವತಾರಿಯು; ಆದ್ದರಿಂದ ಇಂತಹ ಕೃತಿಗಳನ್ನು ಮಾಡುತ್ತಾನೆಂದು ಅವರಿಗೆ ನಿಶ್ಚಯವಾಯಿತು. ಇದು ವೀರಶೈವ ಧರ್ಮೋದ್ಧಾರದ ಮೊದಲನೆಯ ಮೆಟ್ಟಲಾಗಿರುತ್ತದೆಂದು ವೀರಶೈವ ಮಹಾಜನಗಳು ಬಹಳ ಆನಂದಭರಿತರಾದರು. ಆದ್ದರಿಂದಲೇ ವೀರಶೈವ ಕವಿಗಳು "ಲಿಂಗಕ್ಕಾಧಾರವಿಲ್ಲವೆಂದು ಬಸವಣ್ಣನವರು ಭೂಲೋಕಕ್ಕೆ ಬಂದರೆಂದು" ಹೇಳಿರುತ್ತಾರೆ. ಶ್ರೀ ಬಸವಣ್ಣನವರು ಲಿಂಗಧಾರಣ ಸಿದ್ಧಾಂತವು ಲೋಕದಲ್ಲಿ ಶ್ರೇಷ್ಠವಾದುದೆಂದು ಸಿದ್ಧಾಂತಗೊಳಿಸಿ ತಂದೆ, ತಾಯಿ, ಬಂಧು, ಬಳಗ ಮೊದಲಾದವರನ್ನೆಲ್ಲ ಬಿಟ್ಟು ಕಪ್ಪಡಿಯ ಸಂಗಮಕ್ಕೆ ಬಂದರು. ಅಲ್ಲಿ ತಮ್ಮ ಗುರುಗಳಲ್ಲಿ ಅನೇಕ ವಿಷಯಗಳ

ಅನುಭವ ಮಾಡಿಕೊಂಡರು. ಸಂಗಮೇಶ್ವರನಲ್ಲಿ ಅತ್ಯಂತ ಭಕ್ತಿಯುಕ್ತರಾಗಿ ಶಿವ ಭಕ್ತಿಯ ಪ್ರಸಾರವನ್ನು ಮಾಡಲು ಪ್ರಾರಂಭಿಸಿದರು. ಅವರು ಕಪ್ಪಡಿಯ ಸಂಗಮ ದಲ್ಲಿರತಕ್ಕ ಶಂಕರಾಲಯವನ್ನು ಕಂಡು—

> "ಪೂರ್ವಸ್ಮರಣೆ ಕೈಗೂಡಿ, ಕಣ್ ಬಂದಂತೆ ಉಸಿರ್ ಬಂದಂತೆ
> ಪರಿತಂದು ರಂಗಮಂಟಪದೊಳು ಧೊಪ್ಪನೆ ಬಿದ್ದು"

ಆಮೇಲೆ ಎದ್ದು ನಿಂತು—

> "ದೇವದೇವ ಅನಾಥನಾಥ ಅನಿಮಿತ್ತ ಬಂಧುವೆ ತಾಯ್ತಂದೆ
> ಬಂಧು ಬಳಗವೆ ಕುಲವೆ ಬಲವೆ ಛಲವೆ ತವರೆ ಕಣ್ಣೆ ಗತಿಯೆ ಮತಿಯೆ
> ಪುಣ್ಯವೆ ಪ್ರಾಣವೆ ಕಾವುದು ಕಾವುದು—"

ಎನ್ನುತ್ತ ಸಂಗಮೇಶ್ವರನ ಸ್ತೋತ್ರವನ್ನು ಮನದಣಿಯುವಂತೆ ಮಾಡಿದರು. ಆ ಕಾಲದ ಅವರ ದೃಶ್ಯವು ಜನಗಳ ಮನಸ್ಸನ್ನು ಕಲಕಿಸಿಬಿಡುವಂಥಾದ್ದಾಗಿದ್ದಿತು. ಇನ್ನೂ ಚಿಕ್ಕ ವಯಸ್ಸು, ತಂದೆ ತಾಯಿಗಳನ್ನು ಬಿಟ್ಟುಬಂದಿದ್ದರು. ಇಂತಹ ಪರಿಸ್ಥಿತಿ ಯಲ್ಲಿ ತನ್ನ ಸರ್ವಸ್ವವೂ ಸಂಗನೇ ಎಂದು ಭಯಭಕ್ತಿಯಿಂದ ಸಂಗನನ್ನು ಶರಣು ಹೊಕ್ಕರು.

ಶಿವಪೂಜೆಯಲ್ಲಿ ಮಗ್ನರಾಗಿ ಬಸವಣ್ಣನವರು—

> ನಿತ್ಯನಿರ್ಮಳನೆ ನಿಃಕಳನೆ ಕೂಡಲಸಂಗ ।
> ನಿತ್ಯನಿರ್ಭಯನೆ ನಿರುಪಮನೆ ಕೂಡಲಸಂಗ ॥
> ಹೊಗಳ್ವವೇದಾಳಿಗತಿಗೂಢ ಕೂಡಲಸಂಗ ।
> ಸೊಗಯಿಸುವ ಘನವೃಷಾರೂಢ ಕೂಡಲಸಂಗ ॥
> ಎನ್ನನತಿ ಕರುಣದಿಂ ನೋಡು ಕೂಡಲಸಂಗ ।
> ಎನ್ನಮನದಕ್ಕರೊಳು ಕೂಡು ಕೂಡಲಸಂಗ ॥
> ಎನ್ನಕಣ್ಣೊಳಗೆ ಪರಿದಾಡು ಕೂಡಲಸಂಗ ।
> ಎನ್ನಮನದೊಳಗೆ ಕುಣಿದಾಡು ಕೂಡಲಸಂಗ ॥

ಹೀಗೆ—ಸಂಗಮೇಶ್ವರನ ಮನಸ್ಸು ಕರಗುವಂತೆ ಬಸವಣ್ಣನವರು ಸ್ತೋತ್ರವನ್ನು ಮಾಡುತ್ತಲಿದ್ದರು. ಮತ್ತು ದಿನದಿನಕ್ಕೆ ಅವರ ನಿತ್ಯ ನೇಮಗಳು ಬೆಳೆಯುತ್ತ ಭಕ್ತಿಯು ಹೆಚ್ಚಾಗುತ್ತ—

> ಸಂಗನನಾಮಂಗಳಂ ಪುರಜನಕೆ ಕಲಿಸುತಂ ।
> ಸಂಗಶರಣೆಂದವರ ಪದತಳಕ್ಕೆರಗುತಂ ॥
> ನಡೆವಲ್ಲಿ ನುಡಿವಲ್ಲಿ ಸಂಗಶರಣೆಂದೆನುತೆ ।
> ಉಡುವಲ್ಲಿ ಉಂಬಲ್ಲಿ ಸಂಗಶರಣೆಂದೆನುತೆ ॥
> ಕೊಡುವಲ್ಲಿ ಕೊಂಬಲ್ಲಿ ಸಂಗಶರಣೆಂದೆನುತೆ ।
> ತೊಡುವಲ್ಲಿ ಪೊದೆವಲ್ಲಿ ಸಂಗಶರಣೆಂದೆನುತೆ ॥

ಶ್ರೀ ಬಸವಣ್ಣನವರು ಸಂಗನಲ್ಲಿ ಅಭೇದಬುದ್ಧಿಯಿಂದ ಹಗಲಿರುಳು ಭಕ್ತಿಯನ್ನು ಕೈಕೊಂಡು ಜನಗಳಲ್ಲಿ ಶಿವಭಕ್ತಿಯನ್ನು ಪ್ರಸಾರಮಾಡಲು ಅಣಿಯಾದರು. ಬಸವಣ್ಣ ನವರ ಅಸಾಧಾರಣವಾದ ನಿಷ್ಠೆಯು ಅವರನ್ನು ಶಿವಸ್ವರೂಪಿಗಳನ್ನಾಗಿ ಮಾಡಿತು.

ಹರಿಹರ ಮಹಾ ಕವಿಯು—

ಸಂಗಂ ಬಸವನೊ ಬಸವಂ
ಸಂಗನೊ ತಮ್ಮಿರ್ಬರೊರ್ಬರಂತೋರ್ಬರ್ ಮೇಣ್ ।
ಸಂಗಂ ಬಸವನೊ ಬಸವಂ
ಸಂಗನೊ ಎನಿಪೊಂದಭೇದಭಾವದೊಳಿರ್ದರ್ ॥

ಹೀಗೆಯೇ ಕೆಲವು ದಿನಗಳು ಸಂಗನ ಅನುಷ್ಠಾನದಲ್ಲಿಯೂ, ಶಿವಭಕ್ತಿಯ ಪ್ರಚಾರ ದಲ್ಲಿಯೂ ಕಳೆದುಹೋದುವು. ಒಂದು ದಿವಸ ಬಸವಣ್ಣನವರ ಕನಸಿನಲ್ಲಿ—

"ಎಲೆ ಮಗನೆ ಬಸವಣ್ಣ, ಬಸವ, ಬಸವಿದೇವ, ನಿನ್ನಂ ಮಹೀತಳ ದೊಳು ಮೆರೆದಪೆವು ನೀಂ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗು"

ಎಂದು ಹೇಳಲು ಬಸವಣ್ಣನವರು ಹರ್ಷಪುಲಕಿತರಾಗಿ ಸಂತೋಷಸಾಗರದಲ್ಲಿ ಮುಳುಗಿ ತನ್ನ ಗುರುವಾದ ಸಂಗಮೇಶ್ವರನನ್ನು ಸ್ತುತಿಸುತ್ತ—

"ಸಂಗಂ ಪತಿಯಾಗಿ ಬಸವಂ ಸತಿಯಾಗಿ ಪಂಚಾಕ್ಷರಿಯೆ ಗತಿ ಯಾಗಿ ಸದ್ಭಕ್ತಿಯೆ ಮತಿಯಾಗಿ ಸಂಗನ ಬಸವಂ ಗುರುಲಿಂಗ ಶ್ರೀ ಚರಣ ನಖಮಯೂಖ ಚಂದ್ರಿಕಾ ಚಕೋರಾಯಮಾನಂ ಶೈವಾನುರಾಗಸಂಪತ್ ಸುಖತರಂಗಿಣೀ ನಿಮಗ್ನಚಿತ್ತಂ"

ಇರುತ್ತಿರಲು ಬಿಜ್ಜಳನ ರಾಜಧಾನಿಗೆ ಹೋಗಬೇಕೆಂದು ಪ್ರಯಾಣ ಸಿದ್ಧತೆಯನ್ನು ಮಾಡಿ ತಮ್ಮ ಅಕ್ಕನವರಾದ ನಾಗಲಾಂಬಿಕೆಯವರನ್ನು ತಮ್ಮ ಕೂಡ ಕರೆದುಕೊಂಡು ಕಲ್ಯಾಣಕ್ಕೆ ಪ್ರಯಾಣ ಬೆಳೆಯಿಸಿದರು. ಅಲ್ಲಿಗೆ ಹೋದಮೇಲೆ ಸ್ವಲ್ಪೇ ದಿನಗಳಲ್ಲಿ ಬಿಜ್ಜಳ ರಾಜನ ಪ್ರಧಾನರಾಗಿದ್ದ ಬಲದೇವ ಮಂತ್ರಿಗಳು ಬಸವಣ್ಣನವರು ಬಂದ ವಾರ್ತೆಯನ್ನು ಕೇಳಿ, ಬಹಳ ಸಂತೋಷಪಟ್ಟರಲ್ಲದೆ ಕೆಲವು ದಿನಗಳಲ್ಲಿ ತಮ್ಮ ಪುತ್ರಿ ಯಾದ ಗಂಗಾಂಬಿಕೆಯನ್ನು ಅವರಿಗೆ ಕೊಟ್ಟು ವಿವಾಹಮಾಡಿದರು.

ಶ್ರೀ ಬಸವಣ್ಣನವರು ಬಿಜ್ಜಳ ಭೂಪಾಲನ ಅರಮನೆಯಲ್ಲಿ ಮೊದಲು ಕರಣಿಕರಾಗಿ ಕೆಲಸಮಾಡುತ್ತ ತಮ್ಮ ಶ್ರೇಷ್ಠತರವಾದ ಬುದ್ಧಿಯ ಸಾಮರ್ಥ್ಯದಿಂದಲೂ, ಕಾರ್ಯ ದಕ್ಷತೆಯಿಂದಲೂ ಅರಮನೆಯಲ್ಲಿ ಪ್ರಖ್ಯಾತರಾದರು.

ಶ್ರೀ ಬಿಜ್ಜಳ ರಾಜನ ಅರಮನೆಯಲ್ಲಿ ಒಂದು ಶಿಲಾಲಿಪಿಯು ಸಿಕ್ಕಿತು. ಅದು ಹೇಗೆ ಸಿಕ್ಕಿತೆಂಬುವ ಬಗ್ಗೆ ಬೇರೆಬೇರೆ ಕವಿಗಳು ಬೇರೆಬೇರೆ ತರಹದಿಂದ ವರ್ಣನೆ ಮಾಡಿದ್ದಾರೆ. ಆ ಲಿಪಿಯನ್ನು ಓದುವದು ಅರಮನೆಯಲ್ಲಿರತಕ್ಕ ಎಲ್ಲಾ ಪಂಡಿತರಿಗೂ ಸಾಧ್ಯವಾಗಲಿಲ್ಲ. ಅದನ್ನು ಮಾನ್ಯರಾದ ಬಸವಣ್ಣನವರು ಓದಬೇಕೆಂಬುವ ಕುತೂಹಲ ದಿಂದ ಸಭೆಗೆ ಹೋದರು. ಸಭೆಯಲ್ಲಿದ್ದ ಮಹಾನ್ ಮಹಾನ್ ಪಂಡಿತರೆಲ್ಲರಿಗೂ ಓದಲಿಕ್ಕಾಗದೆ ಭ್ರಾಂತಿಗೊಂಡಿದ್ದರು. ಎಲ್ಲರೂ ಮುಖಭಂಗಿತರಾಗಿ ತಲೆಯನ್ನು ತುರಿಸಿ ಕೊಳ್ಳಲು ಪ್ರಾರಂಭಿಸಿದರು. ಬಸವಣ್ಣನವರು ನಾವು ಓದುತ್ತೇವೆಂದು ಮುಂದೆಬರಲು ಪಂಡಿತರೆಲ್ಲರೂ ನಕ್ಕರು. ಹೀಗೆ ಹಾಸ್ಯಮಾಡುವದು ಲೋಕದಲ್ಲಿ ರೂಢಿಯಾಗಿದೆ. ಏತಕ್ಕೆಂದರೆ—ಕೆಲವು ಪಂಡಿತರು ತಮಗೆ ತಿಳಿಯದಿದ್ದುದು ಜಗತ್ತಿನಲ್ಲಿ ಯಾರಿಗೂ ತಿಳಿಯುವದಿಲ್ಲನೆಂಬುವ ಕಲ್ಪನೆಯುಳ್ಳವರಾಗಿರುತ್ತಾರೆ. ಕೆಲವು ವಿದ್ಯಾವಂತರಲ್ಲಿ ಇದೊಂದು ಅಹಂಕಾರವು ಯಾವಾಗಲೂ ವಾಸಮಾಡಿಕೊಂಡಿರುತ್ತದೆ.

ಮನುಷ್ಯನು ತಾನು ಎಷ್ಟೇ ಬುದ್ಧಿವಂತನಾದರೂ ಸಾಗರದಲ್ಲಿಯ ಒಂದು ಹನಿಗೆ ಸಮಾನನೆಂಬುವ ಭಾವನೆಯು ಅವನಲ್ಲಿರಬೇಕು. ಹಾಗಿದ್ದರೆ ಅವನಿಗೆ ಲೋಕದಲ್ಲಿ ಅನೇಕರು ಸ್ನೇಹಿತರಾಗಿ ಅವನ ಕೀರ್ತಿಯು ಬೆಳೆಯುತ್ತದೆ. ಅಹಂಕಾರವು ಮನುಷ್ಯನ ಹೃದಯದಲ್ಲಿರತಕ್ಕ ಷಡ್ರಿಪುಗಳಲ್ಲಿ ಒಂದಾಗಿರುತ್ತದೆ. ಲೋಕದಲ್ಲಿ ಯಾವನು ಅಹಂಕಾರಿಯಾಗಿರುತ್ತಾನೆಯೋ ಅವನಿಗೆ ಶತೃಗಳು ಹುಟ್ಟುತ್ತಾರೆ. ಆ ಕಾಲದಲ್ಲಿ ಪಂಡಿತರು ಬಸವಣ್ಣನವರನ್ನು ಕುರಿತು ಹಾಸ್ಯಮಾಡಿ ನಕ್ಕದ್ದು ಅವರ ಸ್ವಭಾವಕ್ಕನು ಗುಣವಾಗಿದ್ದಿತು.

ಸೀತಾ ಸ್ವಯಂವರ ಕಾಲದಲ್ಲಿ ಬಾಲಕನಾದ ರಾಮನನ್ನು ನೋಡಿ ಅದೆಷ್ಟು ಜನ ಹಾಸ್ಯಮಾಡಲಿಲ್ಲ? ದ್ರೌಪದಿಯ ಸ್ವಯಂವರ ಕಾಲದಲ್ಲಿ ಅರ್ಜುನನು ಮುಂದೆ ಬಂದದ್ದನ್ನು ನೋಡಿ ಎಷ್ಟೋ ಜನರು ಚಪ್ಪಾಳೆಯನ್ನು ಬಾರಿಸಿ ನಗಲಿಲ್ಲವೇ?

ಆ ಲಿಪಿಯ ಲಕ್ಷಣವನ್ನು ಶಿಂಗಿರಾಜ ಕವಿಗಳು ಬಹಳ ಹೃದಯಂಗಮವಾಗಿ ವರ್ಣನೆ ಮಾಡಿರುತ್ತಾರೆ.

> "ಬಿಜ್ಜಳ ಮಹಾರಾಜನು ಎಲ್ಲ ಮಂತ್ರಿಗಳಿಂದ ಕೂಡಿಕೊಂಡು ಸಭೆಯಲ್ಲಿರಲು ಸಿಂಹಾಸನದ ಮುಂದೆ ಬಂದು ಶಿಲಾಲಿಪಿಯು ಬಿದ್ದಿತು. ಆಗ ಬಿಜ್ಜಳನು ಆ ಲಿಪಿಯನ್ನು ನೋಡಿ ಆಶ್ಚರ್ಯಚಕಿತನಾಗಿ ಮಂತ್ರಿಗಳ ಕೈಯಲ್ಲಿ ಕೊಟ್ಟನು. ಮಂತ್ರಿಗಳಾದರೂ ತುಟಿಯನ್ನು ಮಿಸುಕದೆ ಸುಮ್ಮನೆ ಕುಳಿತುಕೊಂಡರು. ಗಣಕರನ್ನು ತಿರಸ್ಕರಿಸಿತು. ಲೇಖಕರನ್ನು ಮೀರಿತು. ಮೂಹೂರ್ತಿಕರನ್ನು ಒಂಸಿಸಿತು. ವಿದ್ವಾಂಸರನ್ನು ಗೋಳಾಡಿಸಿತು. ಆಗಮಿಕರನ್ನು ಯೋಚನೆಗೆ ಗುರಿಮಾಡಿತು. ಕವಿ, ಗಮಕಿ, ವಾದಿ, ವಾಗ್ಮಿಗಳಿಗೆ ಭ್ರಮೆಯನ್ನು ಹುಟ್ಟಿಸಿತು. ತಾರ್ಕಿಕರನ್ನು ದುಃಖಕ್ಕೆ ಗುರಿ ಮಾಡಿತು. ಲಿಪಿಯ ಜ್ಞಾನದಲ್ಲಿ ವಿಚಕ್ಷಣರಾದವರನ್ನು ಓಡಾಡಿಸಿತು."

ಈ ವರ್ಣನೆಯಿಂದ ತಿಳಿದುಬರುವದೇನಂದರೆ ಆ ಲಿಪಿಯನ್ನು ಯಾರಿಗೂ ಓದುವದಾಗಲಿಲ್ಲ. ಅದನ್ನು ಬಸವಣ್ಣನವರು ತಮ್ಮ ಕೈಯಲ್ಲಿ ತೆಗೆದುಕೊಂಡು ಸಂಗಮೇಶ್ವರನ ಸ್ಮರಣೆಯನ್ನು ಮಾಡುತ್ತ ಓದಿದರು.

**ಬಸವ ಪುರಾಣ—ಸಂ. ೧೫—೫೭**

ನನ್ನಿಯನೆ ಪೇಳುವೆನರಸಕೇಳ್
　　ನಿನ್ನ ಚಾಳುಕ್ಯಾನ್ವಯದವರು ।
ಮುನ್ನ ನಿಕ್ಷೇಪಿಸಿದದೆಂಭತ್ತೆಂಟುಕೋಟಿ ಧನ
　　ನಿನ್ನ ಸಿಂಹಾಸನದ ಕೆಳಗಿದೆ ॥

ಇದನ್ನು ಕೇಳಿ ಬಿಜ್ಜಳರಾಜನ ಆನಂದಕ್ಕೆ ಅಳತೆಯಿಲ್ಲದಾಯಿತು. ಪೂರ್ವಕಾಲದಲ್ಲಿ ಹೂಳಿಟ್ಟ ಬಹಳ ದ್ರವ್ಯವು ಅವನಿಗೆ ಸಿಕ್ಕಿತು. ಆಗ ಬಿಜ್ಜಳನು ಶ್ರೀ ಬಸವಣ್ಣನವರ ಪಾಂಡಿತ್ಯಕ್ಕೆ ತಲೆದೂಗಿದನು. ತನ್ನ ಹದಿನೆಂಟು ಜನ ಮಂತ್ರಿಗಳಲ್ಲಿ ಬಸವಣ್ಣನವರನ್ನು ಮುಖ್ಯರನ್ನಾಗಿ ಮಾಡಿದನು. ಇದು ಸ್ವಾಭಾವಿಕವಾದುದು. ಬಸವಣ್ಣನವರ ಉಪಕಾರಕ್ಕೆ ಬಿಜ್ಜಳನು ಪ್ರತ್ಯುಪಕಾರ ಮಾಡಿದನು. ಬಿಜ್ಜಳನಂತಹ ಕೀರ್ತಿಶಾಲಿ ರಾಜನಿಗೆ ಇದು ಭೂಷಣವೂ ಆಗಿದ್ದಿತು. ಆಗ ಬಿಜ್ಜಳನು ಸಂತೋಷಸಾಗರದಲ್ಲಿ ಮುಳುಗಿ—

ಪತಿಯುಂ ಪಿತಂ ಸುತಂ ಬಸವಣ್ಣ ನೀನೆನಗೆ ।
ಗತಿಮತಿ ಮಹಾಭಕ್ತಿ ಬಸವಣ್ಣ ನೀನೆನಗೆ ।
ಬದುಕಿದೆಂ ಬದುಕಿದೆನೆನುತ್ತ ಹಾರೈಸುತಿರೆ ।
ಮುದದಿಂದ ಬಂದುದೆನ್ನಯಪುಣ್ಯವೆನುತಮಿರೆ ।
ತನ್ನ ಧನಧಾನ್ಯಕ್ಕೆ ಬಸವನೇ ಪತಿಯಾಗಿ ।
ತನ್ನ ಸಂಪದ ಭರಕೆ ಬಸವನೇ ಗತಿಯಾಗಿ ।
ಬಿಜ್ಜಳ ಕ್ಷಿತಿಪನರಮನೆಗೆ ಸಿರಿಕರವಾಗಿ ।
ರತ್ನರಾಶಿಗಳೆಮ್ಮ ಬಸವಿದೇವನ ಮುಂದೆ ।
ನಿನ್ನ ಬರವಿಂದ ಭಂಡಾರ ವೊದಗಿತು ಬಸವ ।
ನಿನ್ನ ಬರವಿಂದ ಪ್ರತಾಪ ವೊದಗಿತು ಬಸವ ।

ಅನೇಕ ತರಹದಿಂದ ಬಿಜ್ಜಳನು ಬಸವಣ್ಣನವರನ್ನು ಸ್ತುತಿಸಿರುವದನ್ನು ಹರಿಹರ ಕವಿಯು ಸರಸವಾಗಿ ವರ್ಣಿಸಿರುತ್ತಾನೆ. ಬಸವಣ್ಣನವರಂತಹ ಪ್ರಖ್ಯಾತ ಪುರುಷರು ಬಿಜ್ಜಳ ರಾಜನಿಗೆ ಮುಖ್ಯಮಂತ್ರಿಯಾಗಿ ದೊರೆತಿದ್ದುದು ಅಪೂರ್ವ ಯೋಗವೆಂದೇ ಹೇಳಬೇಕಾಗಿ ರುತ್ತದೆ. ಮುಖ್ಯ ಮಂತ್ರಿಗಳಾದಮೇಲೆ ನೀಲಾಂಬಿಕೆಯವರನ್ನು ಲಗ್ನವಾದರು. ಬಸವಣ್ಣನವರು ಮುಖ್ಯ ಮಂತ್ರಿಗಳಾದಮೇಲೆ ಅವರ ಕೀರ್ತಿಯು ದೇಶದ ತುಂಬೆಲ್ಲ ಹಬ್ಬಿತು. ಅತ್ತ ರಾಜಕಾರಣದಲ್ಲಿ ಅವರು ಅಗ್ರೇಸರರಾದಂತೆ ಇತ್ತ ದಿನದಿನಕ್ಕೆ ವೀರಶೈವ ಧರ್ಮದ ಅಭೂತಪೂರ್ವವಾದ ಪ್ರಚಂಡತರ ಸಂಘಟನೆಯು ನಡೆಯಿತು. ಧರ್ಮ, ರಾಜಕಾರಣಗಳೆರಡರಲ್ಲಿಯೂ ಬಸವಣ್ಣನವರು ಉಪಮಾತೀತರಾಗಿ ಕಾರ್ಯ ವನ್ನು ಮಾಡಲಿಕ್ಕೆ ಹತ್ತಿದರು. ಕಲ್ಯಾಣ ಪಟ್ಟಣವು ಹಿಂದೂಸ್ಥಾನದಲ್ಲಿ ಶಿವಭಕ್ತಿ ಪ್ರಸಾರದ ಕೇಂದ್ರಸ್ಥಾನವಾಯಿತು. ಹಿಂದೂಸ್ಥಾನದ ಮೂಲೆಮೂಲೆಗಳಿಂದ ಬಸವಣ್ಣ ನವರ ಮೇಲ್ಮೆಯನ್ನು ಕೇಳಿ ಧಾರ್ಮಿಕ ಜನರು ಧಾವಿಸಿ ಕಲ್ಯಾಣ ಪಟ್ಟಣಕ್ಕೆ ಬಂದರು. ಧರ್ಮಕಾರ್ಯವು ಪ್ರಚಂಡತರವಾಗಿ ನಡೆಯಲಿಕ್ಕೆ ಹತ್ತಿತು. ಎಲ್ಲಿ ನೋಡಿದರೂ, ಲಿಂಗಾಂಗ ಸಾಮರಸ್ಯದ ಚರ್ಚೆ, ಅಷ್ಟಾವರಣಗಳ ಹೆಚ್ಚಳ, ಶಿವಾನುಭವ ವಿಚಾರಣೆ ಮೊದಲಾದ ಕಾರ್ಯಗಳು ಸಾಗಿದವು. ಲಕ್ಷದ ಮೇಲೆ ತೊಂಭತ್ತಾರು ಸಾವಿರ ವೀರ ಜಂಗಮರು ಕಲ್ಯಾಣದಲ್ಲಿ ಬಂದು ನೆಲೆಸಿದರು. ಶಿವಾನುಭವ ಮಂಟಪದಲ್ಲಿ ಆದ ನಿರ್ಣಯಗಳನ್ನು ಎಲ್ಲ ಕಡೆಗೆ ಸಂಚರಿಸಿ ಸತ್ಯಾಗ್ರಹದ ಮೂಲಕ ಜನರಿಗೆ ಬೋಧೆಯನ್ನು ಮಾಡಲು ಪ್ರಾರಂಭಿಸಿದರು. ಶಿವಭಕ್ತಿಯ ಪ್ರಸಾರಣೆಯ ಆಧಿಕ್ಯದಿಂದ ಹಿಂಸಾ ಕಾರ್ಯಗಳು ಮೂಲೆಗುಂಪಾದವು. ಮದ್ಯಪಾನ, ಮಾಂಸಭಕ್ಷಣ ಮೊದಲಾದ ದುಷ್ಕೃತ್ಯಗಳು ದೂರಾಗಲಿಕ್ಕೆ ಹತ್ತಿದವು. ಯಜ್ಞಯಾಗಾದಿಗಳ ನೆವದಿಂದ ಮಾಂಸ ಭಕ್ಷಣ ಮಾಡುವದು ತಿರಸ್ಕರಿಸಲ್ಪಟ್ಟಿತು. ಅಂತೂ ಎಲ್ಲಿ ನೋಡಿದರೂ ಸಾತ್ವಿಕ ಭಕ್ತಿಯ ಕ್ರಾಂತಿಯು ತಲೆದೋರಿತು. ಹಿಂದೂಸ್ಥಾನದಲ್ಲಿ ನಡೆದ ಧಾರ್ಮಿಕ ಕ್ರಾಂತಿ ಗಳಲ್ಲಿ ಇದು ಅಗ್ರಸ್ಥಾನವನ್ನು ಪಡೆಯಿತು. ಕಾಯಕವೇ ಕೈಲಾಸವೆಂಬುವ ಕ್ರಿಯಾ ಯೋಗವು ಪ್ರತಿಯೊಂದು ಜನಾಂಗದ ಮನಸ್ಸನ್ನೂ ಆಕರ್ಷಿಸಿತು. ಯಾವ ವರ್ಣ ದವನೇ ಇರಲಿ ಸದಾಚಾರ, ಸದ್ಭಕ್ತಿ ಮೊದಲಾದ ಗುಣಗಳಿದ್ದವನಿಗೆ ಲಿಂಗದೀಕ್ಷೆಯು ಎಲ್ಲೆಡೆಯಲ್ಲಿಯೂ ಭರದಿಂದ ನಡೆಯಿತು. ಆ ಕಾಲದಲ್ಲಿ ಬ್ರಾಹ್ಮಣ ಮೊದಲು ಅಂತ್ಯಜ ಕಡೆಯಾಗಿ ಎಲ್ಲ ವರ್ಗದವರೂ ವೀರಶೈವ ಧರ್ಮದೀಕ್ಷೆಯನ್ನು ತೆಗೆದು ಕೊಂಡರು. ಇವರಲ್ಲಿ ರಾಜರೂ, ಪಂಡಿತರೂ, ಆಚಾರ್ಯರೂ, ಕವಿಗಳೂ, ಗಮಕಿಗಳೂ,

ಲೇಖಕರೂ ಮೊದಲಾದವರಿರುತ್ತಾರೆ. ಇತಿಹಾಸಪ್ರಸಿದ್ಧವಾದ ಶಿವಾನುಭವ ಗೋಷ್ಠಿಯು ಸರ್ವಜನಗಳ ಮನಸ್ಸನ್ನು ಆಕರ್ಷಿಸಿತು. ದಿಗ್ದಂತಿಗಳಂತಿದ್ದ ಪ್ರಭುದೇವ, ಚನ್ನಬಸವ, ಸಿದ್ಧರಾಮ, ಮಾಚಿದೇವ, ಅಕ್ಕಮಹಾದೇವಿ, ಬಾಚರಸ ಮೊದಲಾದವರು ಆ ಕಾರ್ಯದಲ್ಲಿ ಮಗ್ನರಾಗಿದ್ದರು. ಅಲ್ಲಿ ನಿರ್ಣಯವಾಗಿ ಸಭಾಮುದ್ರೆಯು ಬಿದ್ದಮೇಲೆ ಅಧ್ಯಕ್ಷರಾದ ಪ್ರಭುದೇವರ ಹಸ್ತಾಕ್ಷರವಾಗಿ ಆ ನಿರ್ಣಯಗಳು ಸತ್ಯಾಗ್ರಹಿಗಳಾದ ಶರಣರ ಕೈ ಸೇರುತ್ತಿದ್ದವು. ಅವುಗಳನ್ನು ಅವರು ಕಾರ್ಯರೂಪದಲ್ಲಿ ತರುತ್ತಿದ್ದರು. ಸಾಮಾನ್ಯ ಜನಗಳಲ್ಲಿ ಧರ್ಮದ ಪ್ರಚಾರವಾಗಬೇಕಾದರೆ ಅವರ ಮಾತೃಭಾಷೆಯಿಂದಲೇ ಆಗಬೇಕಾದುದು ಅತ್ಯವಶ್ಯವಾದಕಾರಣ ಬಸವಣ್ಣನವರು ತಮ್ಮ ಧರ್ಮಪ್ರಚಾರ ಕಾರ್ಯವನ್ನು ಕೈಕೊಂಡು ಉಪನಿಷತ್ತುಗಳಿಗೆ ಸಮಾನಗಳಾದ ತಮ್ಮ ಸಾವಿರಾರು ವಚನಗಳನ್ನು ಕನ್ನಡದಲ್ಲಿಯೇ ರಚಿಸಿ ವಚನ ವಾಂಙ್ಮಯಾಚಾರ್ಯರಾದರು. ಅವರ ಅನುಕರಣವನ್ನು ಅವರ ಅನುಯಾಯಿಗಳಾದ ಶರಣರೆಲ್ಲ ಮಾಡಿ ಶ್ರೇಷ್ಠ ತರಗತಿಯ ಒಂದು ವಾಙ್ಮಯವನ್ನೇ ರಚಿಸಿದರು. ಜಗತ್ತಿನ ಯಾವ ಭಾಷೆಗಳಲ್ಲಿಯೂ ಇಲ್ಲದಂತಹ ಒಂದು ಶ್ರೇಷ್ಠ ವಾಙ್ಮಯವು ದೊರೆತದ್ದು ಕನ್ನಡ ಭಾಷೆಯ ಸುದೈವವೆಂದೇ ಹೇಳಬೇಕಾಗುತ್ತದೆ. ಇಂತಹ ಮಹತ್ಕಾರ್ಯದ ಮೂಲಪುರುಷರಾದ ಬಸವ ಮಹಾನುಭಾವರನ್ನು ಕನ್ನಡ ಸಾಹಿತ್ಯವು ಅಸ್ತಿತ್ವದಲ್ಲಿರುವವರೆಗೆ ಕನ್ನಡಿಗರು ಮರೆಯುವಂತಿರುವದಿಲ್ಲ. ಬುದ್ಧನ ತರುವಾಯದ ಇತಿಹಾಸದಲ್ಲಿಯೇ ಇದೊಂದು ಹೊಸ ಕಾರ್ಯವಾಗಿ ಪರಿಣಮಿಸಿತು. ಮತ್ತು ಬಸವಣ್ಣನವರ ಈ ತರಹದ ಲೋಕೋತ್ತರ ಕೃತಿಗಳಿಂದ ವೀರಶೈವ ಸಮಾಜದಲ್ಲಿ ಸ್ವಾವಲಂಬನೆಯ ಮಾರ್ಗವು ಬೇರೂರಿತು. ಸೋಮಾರಿಗಳಿಗೂ, ಭಿಕ್ಷುಕರಿಗೂ ಆಶ್ರಯವಿಲ್ಲದಾಯಿತು. ಕಾಯಕದಲ್ಲಿ ಬಂದದ್ದರೊಳಗೆ ತೃಪ್ತಿಯಾಗಿ ಗುರುಲಿಂಗ ಜಂಗಮಾರ್ಚನೆಯು ನಡೆಯುವದು ರೂಢಿಯಲ್ಲಿ ಬಂದಿತು. ಈಗಿನ ಕಾಲದಂತೆ ರೈಲ್ವೆ, ತಂತಿ, ವೈರ್‌ಲೆಸ್, ರೇಡಿಯೋ ಮೊದಲಾದ ಸಾಮಗ್ರಿಗಳಿಲ್ಲದಿದ್ದರೂ ಬಸವಣ್ಣನವರ ಈ ಧಾರ್ಮಿಕ ಕಾರ್ಯ ಎಲ್ಲ ಕಡೆಗೆ ವ್ಯಾಪಿಸಿತು. ಬಸವಣ್ಣನವರು ಲೋಕದಲ್ಲಿ ಶಿವಭಕ್ತಿಯನ್ನು ಪ್ರಸಾರಣೆ ಮಾಡಿದವರಲ್ಲಿ ಅತ್ಯಂತ ಶ್ರೇಷ್ಠ ಸಂಘಟಕರೆಂಬುವ ಬಿರುದನ್ನು ಹೊಂದಿದರು. ಒಂದೊಂದು ಊರಿನಲ್ಲಿ ಅನೇಕ ಶಿವಾನುಭವ ಚರ್ಚೆಯ ಕೂಟಗಳು ನಡೆದು ವೀರಶೈವ ಆಚಾರ ಮಾರ್ಗಗಳನ್ನು ಜನರಲ್ಲಿ ಪ್ರಸಾರಣೆ ಮಾಡಲಿಕ್ಕೆ ಸಹಾಯಕಗಳಾದವು. ಹುಮನಾಬಾದ್ ಒಂದು ಊರಿನಲ್ಲಿಯೇ ೧೧೧ ಚೌಕಿಗಳಿದ್ದವೆಂತಲೂ ಪ್ರತಿನಿತ್ಯ ಈ ಎಲ್ಲ ಮಠಗಳಲ್ಲಿ ಶಿವಾನುಭವ ಬೋಧೆ ನಡೆಯುತ್ತಿತ್ತೆಂತಲೂ ಜನಗಳು ಪರಂಪರವಾಗಿ ಹೇಳುತ್ತಲಿದ್ದಾರೆ. ಈ ಧರ್ಮಪ್ರಸಾರಣೆಯಲ್ಲಿ ಇವರು ಸಣ್ಣವರು ಇವರು ದೊಡ್ಡವರು, ಸ್ತ್ರೀಯರು ಪುರುಷರು, ಉಚ್ಚರು ನೀಚರು ಎಂಬುವ ಭೇದಭಾವನೆಗಳು ಎಷ್ಟೂ ಇರಲಿಲ್ಲ. ಎಲ್ಲರೂ ಎಲ್ಲರಿಗಿಂತ ತಾವು ಕಿರಿಯರೆಂಬುವ ಭಾವನೆಯುಳ್ಳವರಾಗಿಯೇ ಈ ಕಾರ್ಯದಲ್ಲಿ ಪ್ರವೃತ್ತಿಯುಳ್ಳವರಾಗಿದ್ದರು. ಇತ್ತ ವೀರಶೈವ ಧರ್ಮದ ಹೆಚ್ಚಳವು ಹೆಚ್ಚಾದಂತೆ ಕೆಲವು ನೆರೆಧರ್ಮದವರು ಗಾಬರಿಯಾಗಲಿಕ್ಕೆ ಹತ್ತಿದರು. ಬಸವಣ್ಣನವರೇ ಮುಖ್ಯ ಮಂತ್ರಿಗಳಾದುದರಿಂದ ರಾಜಕಾರಣದಲ್ಲಿಯೂ ಇವರಿಗೇನೇ ಆಧಿಕ್ಯವಿದ್ದಿತು. ಧರ್ಮದ ಪ್ರಸಾರವಂತೂ ಹೆಚ್ಚಾಗಿ ನಡೆಯಿತು. ಇದನ್ನು ನೋಡಿ ಮುಂದೇನು

ಮಾಡಬೇಕೆಂದು ಯುಕ್ತಿಗಳನ್ನು ಹುಡುಕಲಿಕ್ಕೆ ಪ್ರಾರಂಭಿಸಿದರು. ಬಸವಣ್ಣನವರು ರಾಜ್ಯಕಾರಭಾರದಲ್ಲಿ ಅತ್ಯಂತ ಶ್ರೇಷ್ಠ ಮುತ್ಸದ್ದಿಗಳಾದುದರಿಂದ ಬಿಜ್ಜಳನ ರಾಜ್ಯದ ವ್ಯವಸ್ಥೆಯು ಸುಸ್ಥಿತಿಯಲ್ಲಿದ್ದಿತು. ಜನಗಳೆಲ್ಲ ತಮ್ಮ ತಮ್ಮ ಕಾರ್ಯದಲ್ಲಿ ಪ್ರವೃತ್ತರಾಗಿದ್ದರು. ಧರ್ಮ ಮತ್ತು ರಾಜಕಾರಣಗಳೆರಡರಲ್ಲಿಯೂ ಬಸವಣ್ಣನವರು ಮಿಗಿಲಾದ ಪುರುಷರಾಗಿದ್ದರು. ಕೆಲವರು ಬಿಜ್ಜಳ ಭೂಪಾಲನಲ್ಲಿಗೆ ಹೋಗಿ ಧಾರ್ಮಿಕ ವಿಷಯವನ್ನು ಮುಂದೆಮಾಡಿ ಬಸವಣ್ಣನವರ ವಿಷಯಕ್ಕೆ ಅನೇಕ ಅಪಪ್ರಚಾರವನ್ನು ಮಾಡಲಿಕ್ಕೆ ಹತ್ತಿದರು. ಲೋಕದಲ್ಲಿ ಚಾಡಿಯ ಮಾತುಗಳಿಗೆ ಒಳಗಾಗದವರ ಸಂಖ್ಯೆ ಬಹಳ ಕಡಿಮೆಯೆಂದು ಐತಿಹಾಸಿಕ ಅನೇಕ ಸಂಗತಿಗಳಿಂದ ತಿಳಿದುಬರುತ್ತದೆ. ಒಬ್ಬರ ಕೀರ್ತಿ ಗೌರವಗಳು ಹೆಚ್ಚಾದ ಹಾಗೆ ಉಳಿದವರು ನಾವು ಮುಖಭಂಗಿತರಾಗುವೆವು ಎಂಬುವ ಭಯದಿಂದ ಯಾವದಾದರೊಂದು ಆಟವನ್ನು ಹೂಡದೆ ಬಿಡುವದಿಲ್ಲ. ಇದು ಪ್ರಪಂಚದ ಎಲ್ಲ ಭಾಗದ ಜನಾಂಗಗಳಲ್ಲಿಯೂ, ರಾಜಕಾರಣಿಗಳಲ್ಲಿಯೂ, ಸಾಮಾಜಿಕ ಮಹಾ ಪುರುಷರಲ್ಲಿಯೂ ಇರುವದನ್ನು ನೋಡುತ್ತೇವೆ. ಮುಂದೆ ಹೋದ ಮಹಾನುಭಾವರನ್ನು ಹಿಂದೆಳೆಯುವದಕ್ಕೆ ಪ್ರಯತ್ನಿಸಿ ಅವರಿಗೆ ಅನಂತ ತರಹದ ತೊಂದರೆಗಳನ್ನುಂಟುಮಾಡಲು ಪ್ರಯತ್ನಿಸುತ್ತಾರೆ. ದೊಡ್ಡವರ ಕೀರ್ತಿಯು ಪ್ರಜ್ವಲಾಯಮಾನವಾಗಲಿಕ್ಕೆ ಇಂಥವರೂ ಕೂಡ ಕಾರಣರಾಗುತ್ತಾರೆ. ಕ್ರಿಸ್ತ, ಬುದ್ಧ ಮೊದಲಾದ ಮಹಾನುಭಾವರಿಗೆ ಅವರ ಜೀವಿತಕಾಲದಲ್ಲಿ ಉಂಟಾದ ಸಂಗತಿಗಳನ್ನು ನೆನಪಿಗೆ ತಂದುಕೊಂಡರೆ ಬಸವಣ್ಣನವರಿಗೆ ಚಾಡಿಖೋರರು ಮಾಡಿದ್ದು ದು ಹೊಸದೆನಿಸುವದಿಲ್ಲ. ಬಿಜ್ಜಳನ ಮನಸ್ಸನ್ನು ಕೆಡಿಸಲಿಕ್ಕೆ ಬಸವಣ್ಣನವರು ವೀರಶೈವ ಧರ್ಮಪ್ರಚಾರಕ್ಕಾಗಿ ಬೇಡಿದವರಿಗೆ ಬೇಡಿದಷ್ಟು ಹಣವನ್ನು ಕೊಡುತ್ತಾರೆ. ಹೀಗೆಯೇ ಮಾಡುತ್ತ ಹೋದರೆ ತಮ್ಮ ರಾಜ್ಯವು ಹಾಳಾಗಿಹೋಗುವದೆಂತಲೂ, ರಾಜಕಾರಣದಲ್ಲಿ ಬಸವಣ್ಣನವರು ಉಳಿದವರನ್ನು ಕೇಳುವದೇ ಇಲ್ಲವೆಂತಲೂ ಅನೇಕ ತರಹದ ಅಸತ್ಯ ಸಂಗತಿಗಳನ್ನು ಹೇಳಲು ಪ್ರಾರಂಭಿಸಿದರು. ಬಿಜ್ಜಳನು ಜನಗಳ ಮಾತಿಗೆ ವಿಕಾರವಶನಾಗಿ ಬಸವಣ್ಣನವರನ್ನು ಕರೆದು ಕೇಳಲು ಅವರು ನಿಜಸಂಗತಿಗಳನ್ನು ಹೇಳಲು ಸಂತೋಷಭರಿತನಾಗುತ್ತಿದ್ದನು. ದೊರೆಗಳೇ ತಮ್ಮ ಬೊಕ್ಕಸದ ಹಣವು ಹಾಳಾಗಿಹೋಗುತ್ತದೆ. ತಾವು ಬಸವಣ್ಣನವರಿಗೆ ಒಂದು ಸಾವಿರ ಹೊನ್ನುಗಳನ್ನು ಕೊಡುತ್ತಿರುವಿರಿ. ಅವರು ಒಂದು ಲಕ್ಷದ ಎಂಭತ್ತಾರುಸಾವಿರ ಜಂಗಮ ದಾಸೋಹ ಮೊದಲಾದುವುಗಳನ್ನು ಮಾಡುವದನ್ನು ನೋಡಿದರೆ ತಾವು ಕೊಡುವ ಹಣವು ಒಂದು ದಿವಸಕ್ಕಾದರೂ ಸಾಲುವದಿಲ್ಲ. ಉಳಿದ ಹಣ ಎಲ್ಲಿಂದ ಬರುತ್ತದೆ. ತಮ್ಮ ಬೊಕ್ಕಸದ ಹಣವಲ್ಲದೆ ಬೇರಿಲ್ಲ. ಹೀಗೆ ಹೇಳುವದನ್ನು ಕೇಳುವಾಗ ಚಾಡಿಖೋರರು ಹೇಳುವ ಮಾತಿನಲ್ಲಿ ವಿಶ್ವಾಸವುಳ್ಳವನಾಗುತ್ತಿದ್ದನು. ಇದೇ ಅವನ ಸರ್ವನಾಶಕ್ಕೂ ಕಾರಣವಾಯಿತು. ಇಲ್ಲಿ ಒಂದು ಮಾತನ್ನು ಲಕ್ಷ್ಯದಲ್ಲಿಡಬೇಕಾಗುತ್ತದೆ. ಬಸವಣ್ಣನವರಂತಹ ಮಹಾಪುರುಷರು ಈ ತರಹದ ಅನ್ಯಾಯಗಳನ್ನು ಮಾಡಲು ಶಕ್ಯವಿಲ್ಲ. ಬಸವಣ್ಣನವರ ತಮ್ಮ ಅನೇಕ ವಚನದಲ್ಲಿ ಪರಧನ, ಪರಸ್ತ್ರೀ ಮೊದಲಾದ ವಿಷಯಗಳಲ್ಲಿ ಬಹಳ ತಿರಸ್ಕಾರದಿಂದ ಹೇಳಿರುತ್ತಾರೆ. ಲೋಕದಲ್ಲಿ ನೀತಿಯ ಸಾಮ್ರಾಜ್ಯ ಧುರಂಧರರು ಬಸವಣ್ಣನವರೆಂದು ಅವರ ನಡೆನುಡಿಗಳಿಂದ ತಿಳಿಯಬಹುದು. ಒಂದು ದಿನ ಬಸವಣ್ಣನವರು ಭಂಡಾರ

ಗೃಹಕ್ಕೆ ಬಿಜ್ಜಳದೊರೆಯನ್ನು ಕರೆದುಕೊಂಡು ಹೋಗಿ ತೋರಿಸಿದಾಗ ಎಲ್ಲವೂ ಸರಿಯಿರಲು ಎಲೌ ರಾಜನೇ ಕೇಳು. "ಸರ್ವಭಂಡಾರ ಸಾರ್ವಭೌಮನೆನಿಸಿದ ಶ್ರೀ ಸಂಗಮೇಶ್ವರಲಿಂಗದಂಘ್ರಿಯಂ ಮಹಾಪದವಿಗಳು ಬಂದು ಬಿಡದೋಲಗಿಸುತ್ತಿಪ್ಪಲ್ಲಿ ಸಂಪದದೊಳೆಳ್ಳನಿತಂ ಕುಡೆ ಕುಬೇರನಾದಂ" ಶಿವನ ಕೃಪೆಯಾದರೆ ಯಾವದು ತಾನೇ ಅಸಾಧ್ಯವಾಗುವದು? ಎಂದು ಎಲ್ಲವನ್ನೂ ತಿಳಿಸಲು ಬಿಜ್ಜಳಂ ಧರೆಗಿಳಿದು ಜೀವನ್ಮೃತಕನಾಗಿ ಬಸವನ ಮುಂದೆ ಬಿದ್ದು "ಮುಂದರಿಯದ ಮೂರ್ಖಂಗೆ, ಶರಣನರಿಯದ ಸರ್ವಾಪರಾಧಿಗೆ ಕರುಣಿಸುವುದು" ಎಂದು ಪನ್ನಿಚ್ಛಾಸಿರಲಕ್ಷವಸ್ತುವಂ ಚರಣದ ಮೇಲೆ ಸುರಿದು ದಣ್ಣಾಯಕರಿಂ ಮನ್ನಣೆಪಡೆದು ಅವರಂ ಮಹಾ ಮನೆಗೆ ಬಿಜಯಂಗೈಸಿ ತಾನೂ ಕೂಡ ತನ್ನರಮನೆಗೆ ಹೋಗಿ ಬಸವನ ಸತ್ಯ ಗುಣವನ್ನು ಕೊಂಡಾಡುತ್ತಿದ್ದನು. ಹೀಗೆ ಅನಂತ ವಿಷಯಗಳು ನಡೆಯುತ್ತಲೇ ಇದ್ದವು. ಶ್ರೀ ಬಸವಣ್ಣನವರೂ ಬಿಜ್ಜಳ ಮಹಾರಾಜರೂ ಅನ್ಯೋನ್ಯಾನುರಾಗದಿಂದ ಇರುವವರೆಗೆ ಅವನ ರಾಜ್ಯದ ಸ್ಥಿತಿಯು ಗೌರವದಾಯಕವಾಗಿದ್ದಿತು. ಬಿಜ್ಜಳ ಭೂಪತಿಗಾದರೂ ಒಳ್ಳೇ ಗೌರವವಿದ್ದಿತು. ರಾಜನಿಗೆ ಉತ್ಕೃಷ್ಟ ಮಂತ್ರಿಗಳಿದ್ದರೆ ಅವನ ರಾಜ್ಯದ ಸ್ಥಿತಿಯು ಚೆನ್ನಾಗಿರುತ್ತದೆ. ರಾಜನ ಗುಣಗಳನ್ನು ತಿಳಿದುಕೊಂಡು ಅನರಂತೆ ನಡೆಯುವ ಮಂತ್ರಿಗಳಿಲ್ಲದಿದ್ದರೂ ಆ ರಾಜ್ಯದ ಸ್ಥಿತಿಯು ಸರಿಯಾಗಿ ನಡೆಯುವದಿಲ್ಲ. ಕಡೆಯವರೆಗೂ ಬಿಜ್ಜಳನು ಚಾಡಿಖೋರರ ಮಾತಿಗೆ ಬೆಲೆಯನ್ನು ಕೊಟ್ಟದ್ದರಿಂದಲೇ ಅವನ ರಾಜ್ಯದಲ್ಲಿ ಅನವಸ್ಥಾಪ್ರಸಂಗವುಂಟಾಯಿತೆಂದು ಹೇಳಬಹುದು. ಈ ಸಮಯಕ್ಕೆ ಬಸವಣ್ಣನವರ ಕೀರ್ತಿಯು ಪರಿಪೂರ್ಣಾವಸ್ಥೆಗೆ ಬಂದು ವೀರಶೈವ ಧರ್ಮದ ಧ್ವಜವು ಎಲ್ಲ ಕಡೆಗೂ ಮೆರೆಯಲಿಕ್ಕೆ ಹತ್ತಿತು. ಕಲ್ಯಾಣ ಪ್ರಾಂತದಲ್ಲಿಯೇ ಅಲ್ಲ ಸಮಸ್ತ ಭರತಖಂಡದ ತುಂಬ ಬಸವಣ್ಣನವರ ಗೌರವವು ಹಬ್ಬಿತು. ಆಚಾರನಿಷ್ಠರಾದ ಎಲ್ಲ ಮತದ ಜನಗಳು ವೀರಶೈವ ದೀಕ್ಷೆಯನ್ನು ತೆಗೆದುಕೊಳ್ಳಲಿಕ್ಕೆ ಹತ್ತಿದರು. ಬಸವಣ್ಣನವರ ಪವಿತ್ರವಾದ ನಾಮವು ಪ್ರತಿಯೊಬ್ಬರ ನಾಲಿಗೆ ತುದಿಯಲ್ಲಿ ನಲಿದಾಡಲಿಕ್ಕೆ ಹತ್ತಿತು. ಹರಳಯ್ಯನವರಂತಹ ಅಂತ್ಯಜರಾದ ಶಿವಶರಣರಿಗೂ ಮಧುವಯ್ಯಗಳಂತಹ ಬ್ರಾಹ್ಮಣರಿಗೂ ಲಿಂಗಧಾರಣವಾಗಿ ವಿವಾಹವು ಜರುಗಿತು. ಈ ವಿಷಯವು ಆ ಕಾಲದ ಅಲ್ಲಿಯ ಜನಗಳ ಮನಸ್ಸನ್ನು ಕೆರಳಿಸಿತು. ಬಿಜ್ಜಳನು ಈ ಸುದ್ದಿಯನ್ನು ಕೇಳಿ ಕಿಡಿ ಕಿಡಿಯಾದನು. ಕಲ್ಯಾಣಪಟ್ಟಣದಲ್ಲಿ ಈ ವಿಷಯವು ಕೋಲಾಹಲವನ್ನುಂಟುಮಾಡಿತು. ಬಸವಣ್ಣನವರ ಅವತಾರದ ಕೊನೆಯ ಕಾರ್ಯವಿದು, ಇದರಿಂದ ಬಿಜ್ಜಳನು ಬಸವಣ್ಣನವರ ವಿಷಯಕ್ಕೆ ತಪ್ಪು ತಿಳುವಳಿಕೆಯನ್ನು ಮಾಡಿಕೊಂಡನು. ತಮ್ಮ ಶಿವಭಕ್ತಿಯ ಪ್ರಸಾರದ ಕಾರ್ಯವನ್ನು ಮಾಡಿದರು. ಎಲ್ಲವೂ ಶಿವನ ಲೀಲೆಯೆಂದು ಅವರು ತಿಳಿಯುತ್ತಿದ್ದರು. ಅವರು ತಮ್ಮ ನಿತ್ಯಸದಾಚಾರದಿಂದ ಕದಲಲಿಲ್ಲ. ಅವರಿಗೆ ಧರ್ಮೋದ್ಧಾರದ ಕಾರ್ಯವೇ ಪ್ರಾಮುಖ್ಯವಾಗಿದ್ದಿತಲ್ಲದೆ ಮಂತ್ರಿಯ ಪದವಿಯು ಪ್ರಿಯಕರವಾಗಿರಲಿಲ್ಲ. ಈ ಕಾರ್ಯದಲ್ಲಿ ಬಿಜ್ಜಳ ಮಹಾರಾಜನು ಅವರನ್ನು ಎಷ್ಟೇ ವಿರೋಧಿಸಿದರೂ ಅವರು ತಮ್ಮ ಕಾರ್ಯದಿಂದ ಸ್ವಲ್ಪಾದರೂ ಚಲಿಸಲಿಲ್ಲ. ಇದು ಮಹಾತ್ಮರ ನಿಜವಾದ ಮಾರ್ಗವಾಗಿರುವದು. "ಪ್ರಾರಬ್ಧಮುತ್ತಮಗುಣಾಃ ನಪರಿತ್ಯಜಂತಿ" ದೊಡ್ಡವರು ತಾವು ಪ್ರಾರಂಭಮಾಡಿದ ಕಾರ್ಯದಲ್ಲಿ ಎಷ್ಟೇ ವಿಘ್ನ

ಗಳುಂಟಾದರೂ ಅವುಗಳನ್ನು ಕೊನೆಗಾಣಿಸದೇ ಬಿಡುವದಿಲ್ಲ. ಹೀಗೆ ಮಾಡುವದ ರಿಂದಲೇ ಅವರಿಗೆ ಶಾಶ್ವತವಾದ ಕೀರ್ತಿಯು ದೊರೆಯುತ್ತದೆ. ಬಸವಣ್ಣನವರು ಪ್ರಾರಂಭಿಸಿದ ವೀರಶೈವ ಮತೋದ್ಧಾರದ ಕಾರ್ಯವು ಹತ್ತು ವರ್ಷಗಳವರೆಗೆ ಅವ್ಯಾಹತವಾಗಿ ನಡೆಯಿತು. ಅವರು ಕಲ್ಯಾಣ ಪಟ್ಟಣದಲ್ಲಿ ಹತ್ತೇವರ್ಷ ಈ ಕಾರ್ಯ ಮಾಡಿದರೂ ೮೦೦ ವರ್ಷಗಳಿಂದ ಅವರ ಕೀರ್ತಿಯು ಉಳಿದು ಪ್ರಫುಲ್ಲಿತವಾಗಿರುವದಲ್ಲದೆ ಜಗತ್ತಿನ ಧಾರ್ಮಿಕ ಕ್ರಾಂತಿಯ ಮಹಾಪುರುಷರಲ್ಲಿ ಅವರು ಇಂದಿಗೂ ಅಗ್ರೇಸರ ರೆನ್ನಿಸಿಕೊಳ್ಳುತ್ತಾರೆ. ಜನಸಾಮಾನ್ಯರಲ್ಲಿ ಬೆರೆತು ಅವರ ಹೃದಯ ಭೇದಿಸಿ ಭಕ್ತಿಯ ಭಾಂಡಾರವನ್ನು ಸೂರೆಮಾಡಿ ಅವರ ಮನಸ್ಸನ್ನಾಕರ್ಷಿಸಿ ವೀರಶೈವ ತತ್ವವನ್ನು ಬೋಧಿಸಿ ಲಿಂಗವಂತ ಮತವು ಜೀವವುಳ್ಳ ಸಮಾಜವೆಂಬುವದನ್ನು ಲೋಕಕ್ಕೆ ತೋರಿಸಿ ಕೊಟ್ಟರು. ಸಾಮಾಜಿಕ, ಆರ್ಥಿಕ, ರಾಜಕೀಯ ವ್ಯತ್ಯಾಸಗಳು ಸುಲಭವಾದವುಗಳು ಆದರೆ ಧರ್ಮದ ವ್ಯತ್ಯಾಸವು ಸುಸಾಧ್ಯವಾದುದಲ್ಲ. ಇಂತಹ ಮಹಾಮಹಿಮರಾದ ಬಸವಣ್ಣನವರು ಇನ್ನುಮೇಲೆ ಕಲ್ಯಾಣ ಪಟ್ಟಣದಲ್ಲಿರುವದು ಸರಿಯಲ್ಲವೆಂದು ತಿಳಿದು ಕಲ್ಯಾಣ ಪಟ್ಟಣವನ್ನು ಬಿಡುವ ಕಾಲಕ್ಕೆ ಅಲ್ಲಿ ಅನೇಕ ಹೃದಯದ್ರಾವಕ ಸಂಗತಿಗಳು ನಡೆದವು. ಯಾಕಂದರೆ ಹರಳಯ್ಯ ಮಧುವಯ್ಯಗಳ ವಿವಾಹದಿಂದ ಕ್ರುದ್ಧನಾದ ಬಿಜ್ಜಳನು ಅವರಿಬ್ಬರ ಕಣ್ಣುಗಳನ್ನು ಕೀಳಿಸಿ ಎಳೆಹೂಟೆಯನ್ನು ಕಟ್ಟಿ ಹೊಡಿಸಿದಾಗ ಅಲ್ಲಿ ಎಂತಹ ಅಲ್ಲೋಲ ಕಲ್ಲೋಲ ಸ್ಥಿತಿಯು ಉಂಟಾಗಿರಬಹುದೆಂಬುವದನ್ನು ಬರೆಯುವದಕ್ಕಿಂತಲೂ ಊಹಿಸುವದೇ ಮೇಲಾಗಿರುತ್ತದೆ. ಈ ವಿಷಯವು ಎಲ್ಲಾ ಕಡೆಗೂ ಹಬ್ಬಿದಾಗ ಮಡಿವಾಳಮಾಚಿ ದೇವರಂತಹ ವೀರಾಗ್ರಣಿಗಳ ಕಣ್ಣುಗಳು ಕೆಂಪ ಗಾದವು. ಜಗದೇವ ಬೊಮ್ಮಿಮಲ್ಲರಂತಹ ವೀರಾಧಿವೀರರು ಭುಜಗಳನ್ನು ಛಪ್ಪರಿಸಲಿಕ್ಕೆ ಹತ್ತಿದರು. ಎಲ್ಲಿ ನೋಡಿದರೂ ಈ ಘೋರಕೃತ್ಯದ ದೃಶ್ಯಗಳು ಭೀಕರವಾಗಿ ಕಲ್ಯಾಣ ಪಟ್ಟಣದ ಸ್ಥಿತಿಯು ಏನಾಗುವದೋ ಎಂಬುವ ಹಾಹಾಕಾರದ ಕೋಲಾಹಲಕ್ಕೆ ಕಾರಣವಾಯಿತು. ಇನ್ನು ಕಲ್ಯಾಣ ಪಟ್ಟಣದ ಅಳಿಗಾಲವು ಸಮಿಾಪಿಸಿತೆಂದು ಜನಗಳು ಗುಜುಗುಜು ಮಾತನಾಡಲಿಕ್ಕೆ ಹತ್ತಿದರು. ಇದನ್ನೆಲ್ಲ ಪರಿಶೀಲಿಸಿನೋಡುತ್ತಿದ್ದ ದಯಾ ಮೂರ್ತಿಗಳಾದ ಬಸವಣ್ಣನವರ ಮನಸ್ಸು ಸಮುದ್ರದಂತೆ ಶಾಂತವೂ ಗಂಭೀರವೂ ಆಗಿದ್ದುದು ಎದ್ದು ಕಾಣುತ್ತಿದ್ದಿತು. ದ್ರೌಪದಿಯ ಶೀರೆಯನ್ನು ದುಶ್ಶಾಸನನು ಭೀಷ್ಮ, ದ್ರೋಣ, ಕೃಪಾಚಾರ್ಯರಂತಹ ದಿವ್ಯ ಪುರುಷರ ಎದುರಿಗೆ ಕೆಳೆಯುವಾಗ ಧರ್ಮರಾಜನು ಏನು ಮಾಡಿದನು. ಇನ್ನು ಮೇಲೆ ಕಲ್ಯಾಣ ಪಟ್ಟಣದಲ್ಲಿ ಶಾಂತತೆಯು ನೆಲೆಗೊಳ್ಳ ಲಾರದೆಂದು ಈಶ್ವರ ಸಂಕೇತವಿದ್ದಂತೆ ಕಾಣುತ್ತದೆಂದು ಮನಸ್ಸಿನಲ್ಲಿಯೇ ಮರುಗಿ ಕಪ್ಪಡಿಯ ಸಂಗಮದ ಕಡೆಗೆ ಹೊರಟರು. ಹೊರಡುವ ಕಾಲಕ್ಕೆ—

> "ಅಸಂಖ್ಯಾತ ಮಹಾಗಣಂಗಳ ಕೈಯಲು ಬೀಳ್ಕೊಂಡು ತಮ್ಮ ಗೃಹೋಪಕರಣಂಗಳಂ ಲಿಂಗ ಜಂಗಮಕ್ಕೆ ಸೂರೆಗೊಟ್ಟು ಏಳನೂರೆಪ್ಪತ್ತು ಮಹಾಗಣಂಗಳಿಗೆ ನಿಜಪದ ಪ್ರಾಪ್ತಿಯ ನಿರೂಪಿಸಿ ಕಳುಹಿಸಿ ತಮ್ಮ ಸಮಯಾಚಾರದ ಮೂವತ್ತಾರು ಸಾವಿರ ಜಂಗಮಮಂ ಚಿಕ್ಕ ದಣ್ಣಾಯಕರ ಕೈಯಲ್ಲಿ ಕೊಟ್ಟು ಸಕಲಶರಣರಗೂಡಿ ಕಟಕಮಂ ಪೊರಮಟ್ಟು ಕಪ್ಪಡಿಯ ಸಂಗಮೇಶ್ವರಂಗೆ ಎಯ್ದಿ ಪೋಗಲು ಆಗಳೇ ಬಿಜ್ಜಳನೈಶ್ವರ್ಯಹಾನಿಯಾಗೆ

> ಕಟಕದ ಭಾಗ್ಯವಳಿಯಿತ್ತು ಧಾರುಣಿನಡಗಿತ್ತು ಕಾಗೆಗಳಿರುಳು ಅರಚಿದವು ಹಗಲು ನರಿಗಳೂರೋಳ್ ಪೊಕ್ಕವು ನಕ್ಷತ್ರಬಿದ್ದವು ಕಲ್ಮಳೆಸುರಿಯಿತು. ಮಹಾಚಂಡವಾಯು ಬೀಸಿತ್ತು ಕೆಂಧೂಳಿದ್ದು ಹಗಲು ಮುಸುಕ ಮಂಜಿನ ಕತ್ತಲೆಯಾಗಿ ಗಗನದೊಳು ಭೀಕರವಾಗಿ ಬಿಜ್ಜಳನು ಶಿರವಿಲ್ಲದ ಹೆಣನಕಂಡ ಪ್ರತಿಸೂರ್ಯಮೂಡಿದನು ಇದರ ಮೇಲೇನಹುದೊ ಎನುತ್ತ ಜನಗಳು ಹೆದರಿ ಸಂವಾದಿಸುತ್ತಿರೆ.''

ಹೀಗೆ ಅನಂತ ಉತ್ಪಾತಗಳು ಆದವು. ಯಾವದಾದರೊಂದು ಭಯಂಕರ ಹಾನಿಯಾಗುವ ಕಾಲಕ್ಕೆ ಇಂತಹ ಅನಿಷ್ಟ ಸಂಗತಿಗಳು ನಡೆಯುವದು ಸ್ವಾಭಾವಿಕವಾದುದು.

ಶ್ರೀ ಬಸವಣ್ಣನವರು ಕೊನೆಯಸಾರೆ ತಾವು ಮಂತ್ರಿಯ ಸ್ಥಾನದಿಂದ ನಿವೃತ್ತರಾಗುವ ಕಾಲಕ್ಕೆ ಬಿಜ್ಜಳನಿಗೆ ಪರಿಪರಿಯಾಗಿ ಹೇಳಿದರೂ ಕೇಳಲಿಲ್ಲ. ಮುಂದೆ ವಿನಾಶವು ಒದಗುವ ಸಂಭವವಿದ್ದರೆ ಮನುಷ್ಯನ ಬುದ್ಧಿಯು ಮಂದವಾಗುತ್ತದೆ. ಶ್ರೀರಾಮಚಂದ್ರನನ್ನು ವಂಚಿಸಬೇಕೆಂದು ಮಾರೀಚನು ಬಂಗಾರವರ್ಣದ ಚಿಗುರೆಯಾಗಿ ಬರಲು ಅದನ್ನು ಬೆನ್ನಟ್ಟಿಹೋದಕಾರಣ ಮುಂದೆ ಎಂತಹ ವಿಪತ್ತುಗಳನ್ನು ಅನುಭವಿಸಬೇಕಾಯಿತು? ಶ್ರೀರಾಮಚಂದ್ರನಿಗೆ ಲೋಕದಲ್ಲಿ ಬಂಗಾರವರ್ಣದ ಚಿಗುರೆಗಳಿರುವದಿಲ್ಲವೆಂಬುವದು ಗೊತ್ತಿರಲಿಲ್ಲವೆ? ವಿನಾಶಕಾಲದಲ್ಲಿ ಮನುಷ್ಯನ ಬುದ್ಧಿಯು ವಿಪರೀತವಾಗುವದು ಸಹಜವಾದುದು.

> ಅಸಂಭವಂ ಹೇಮಮೃಗಸ್ಯ ಜನ್ಮತಥಾಪಿರಾಮೋ ಲುಲುಭೇಮೃಗಾಯ ।
> ಪ್ರಾಯಃ ಸಮಾಪನ್ನವಿಪತ್ತಿಕಾಲೇ ಧೀಯೋಪಿಪುಂಸಾಮಲಿನೀ ಭವಂತಿ ॥

ಬಸವಣ್ಣನವರು ಕಲ್ಯಾಣ ಪಟ್ಟಣವನ್ನು ಬಿಟ್ಟುಹೋದಮೇಲೆ ಅಲ್ಲಿಯ ಸ್ಥಿತಿಯು ಹೇಗಾಗಿರಬಹುದು? ಸೇನಾಪತಿ ಇಲ್ಲದ ಸೈನಿಕರಂತೆ ಕಲ್ಯಾಣ ಪಟ್ಟಣದ ಸ್ಥಿತಿಯೇ ಬೇರೆ ಆಯಿತು. ಜನಗಳು ತಾಳ್ಮೆ ತಪ್ಪಿದರು. ಬಸವಣ್ಣನವರಿದ್ದರೆ ಅವರನ್ನೆಲ್ಲ ಶಾಂತಗೊಳಿಸುತ್ತಿದ್ದರು. ಬಸವಣ್ಣನವರು ಇರುವಾಗಲೇ ಅನೇಕ ಅಮಾನುಷ ಕೃತ್ಯಗಳು ಕಲ್ಯಾಣ ಪಟ್ಟಣದಲ್ಲಿ ನಡೆದವು. ಬಸವಣ್ಣನವರ ಅಪ್ಪಣೆಯಿಂದ ಜನಗಳೆಲ್ಲ ತಾಳ್ಮೆಯಿಂದ ಇದ್ದರು. ಸಭೆಯಲ್ಲಿ ದ್ರೌಪದಿಯ ಶೀರೆಯನ್ನು ದುಶ್ಶಾಸನನು ಬಿಚ್ಚುವಾಗ ಭೀಮಾರ್ಜುನರ ಸ್ಥಿತಿಯು ಹೇಗಾಗಿರಬೇಕು? ಅಣ್ಣನಾದ ಯುಧಿಷ್ಠಿರನ ತಾಳ್ಮೆಯಿಂದ ಅವರು ಏನೂ ಮಾಡಲು ಅಸಮರ್ಥರಾದರು. ಬಸವಣ್ಣನವರ ಆಜ್ಞೆಯನ್ನು ಪಾಲಿಸುವದು ಎಲ್ಲರ ಕರ್ತವ್ಯವಾದುದರಿಂದ ಅವರು ಅಲ್ಲಿರುವವರೆಗೆ ಯಾವ ಗಲಭೆಗಳೂ ಏಳಲಿಲ್ಲ. ಬಸವಣ್ಣನವರು ಆಸ್ಥಾನವನ್ನು ಬಿಟ್ಟುಹೋದಮೇಲೆ ಅಲ್ಲಿಯ ಜನಗಳ ಸ್ಥಿತಿಯು ಬಹಳ ಭಯಂಕರವಾಗಿ ಯಾರ ಹಿಡಿತದಲ್ಲಿಯೂ ಉಳಿಯಲಿಲ್ಲ. ಒಬ್ಬ ನಾಯಕನಿಗೆ ಲಕ್ಷಾಂತರ ಜನಗಳು ವಿಧೇಯರಾಗಿರುತ್ತಾರೆ. ಆದರೆ ಆ ನಾಯಕನ ಗುಣಗಳೆಲ್ಲ ಅವರಲ್ಲಿರುವದಿಲ್ಲ. ಕೆಲವರು ಅಂಧಶ್ರದ್ಧೆಯಿಂದ ಆ ನಾಯಕನನ್ನು ಅನುಸರಿಸಿದರೆ ಮತ್ತೆ ಕೆಲವರು ತಮ್ಮ ಕಾರ್ಯಸಾಧನೆಗಾಗಿ ಕೂಡಿದವರಾಗಿರುತ್ತಾರೆ. ನಾಯಕನಿಲ್ಲದ ಸಮಯದಲ್ಲಿ ಅವರ ರೀತಿ ನೀತಿಗಳು ಬಯಲಿಗೆ ಬರುತ್ತವೆ. ಬಸವಣ್ಣನವರು ಕಲ್ಯಾಣ ಪಟ್ಟಣವನ್ನು ಬಿಟ್ಟುಹೋದ ಕೆಲವು ದಿನಗಳಲ್ಲಿಯೇ ಕಲ್ಯಾಣದಲ್ಲಿ ಅರಾಜಕತೆಯುಂಟಾಗಿ ಬಿಜ್ಜಳರಾಜನ ಅಂತ್ಯವಾದದ್ದು ತಿಳಿದುಬರುತ್ತವೆ. ಬಿಜ್ಜಳ

ರಾಜನಾದರೂ ಬಹಳ ವೀರನೂ, ಸದ್ಗುಣ ಮಂಡಿತನೂ ಆಗಿದ್ದನು. ಆದರೆ ಕಾಲಗತಿಯು ಯಾರನ್ನೂ ಬಿಟ್ಟಿರುವದಿಲ್ಲವಷ್ಟೆ? ಕೆಲವರು ಬಸವಣ್ಣನವರೇ ಬಿಜ್ಜಳನನ್ನು ಕೊಲ್ಲಿಸಿದರೆಂದು ಬರೆದಿರುತ್ತಾರೆ. ಇದು ಐತಿಹಾಸಿಕ ಸಂಗತಿಯ ವಿಪರ್ಯಾಸವೆಂದು ಹೇಳಬಹುದು. ಯಾಕೆಂದರೆ ದಯಾಮೂರ್ತಿಗಳೂ, ಅಹಿಂಸಾವಾದಿಗಳೂ ಆದ ಬಸವಣ್ಣನವರು "ಯತ್ರ ಜೀವಃ ತತ್ರಃ ಶಿವಃ" ಎಂದು ಹೇಳುವವರು ಇಂತಹ ಕಾರ್ಯವನ್ನು ಮಾಡಲು ಶಕ್ಯವೇ ಇರುವದಿಲ್ಲ. ಅವರು ವೀರಶೈವರ ಪಂಚಾಚಾರಗಳಲ್ಲಿ ಒಂದಾದ ಗಣಾಚಾರದ ಪ್ರಕಾರ ಆ ಸ್ಥಳವನ್ನು ಬಿಟ್ಟುಹೋದರು. ಇತ್ತ ಬಿಜ್ಜಳನ ಕೊಲೆ ಆದಾಗ್ಗೆ ಬಸವಣ್ಣನವರು ಕಪ್ಪಡಿಯ ಸಂಗಮದಲ್ಲಿದ್ದರು. ಇಲ್ಲಿಗೆ ಕಲ್ಯಾಣ ಪಟ್ಟಣದ ಆ ಕಾಲದ ಉಜ್ವಲವಾದ ಇತಿಹಾಸದ ಸಮಾಪ್ತಿಯಾಯಿತೆನ್ನಬಹುದು. ಬಸವಣ್ಣನವರು ಮೇಲೆ ಬರೆದಂತೆ ಕೆಲವೇ ವರ್ಷ ಕೆಲಸಮಾಡಿದರೂ ಅವರ ಧಾರ್ಮಿಕ ಪ್ರಭಾವವು ಪ್ರಚಂಡತರವಾಗಿ ಹಬ್ಬಿತು. ಕರ್ಣಾಟಕದಲ್ಲಿ ಜನಿಸಿ ಕರ್ಣಾಟಕದಲ್ಲಿಯೇ ಧರ್ಮ ಮತ್ತು ರಾಜಕಾರಣಗಳೆರಡನ್ನೂ ಸಮಾನತೆಯಿಂದ ನಡೆಯಿಸಿ ಕರ್ಣಾಟಕದ ಕೀರ್ತಿಯು ಯಾವಾಗಲೂ ದೇದೀಪ್ಯಮಾನವಾಗುವಂತೆ ಮಾಡಿ ಬಯಲಾದ ಬಸವಣ್ಣನವರ ಅಜರಾಮರವಾದ ಕೀರ್ತಿಯನ್ನು ಕನ್ನಡಿಗರೆಲ್ಲರೂ ಕೊಂಡಾಡುತ್ತಿರುವದು ಯೋಗ್ಯವಾಗಿಯೇ ಇರುತ್ತದೆ.

# ಎರಡನೆಯ ಪ್ರಕರಣ

## ವೇದಗಳೂ ಬಸವಣ್ಣನವರೂ

ಮುಂದಿನ ನಾಲ್ಕು ಪ್ರಕರಣಗಳಲ್ಲಿ ವೇದಾಗಮೋಪನಿಷದ್ಭಗವದ್ಗೀತೆಗಳ ವಿಷಯದಲ್ಲಿ ಶ್ರೀ ಬಸವೇಶ್ವರರ ವಚನಗಳಿಂದ ಸಾಮ್ಯ–ವೈಷಮ್ಯ–ವೈಶಿಷ್ಟ್ಯಾದಿಗಳೇನು? ಎಂಬುವದನ್ನು ವಿಚಾರಿಸಲಾಗಿದೆ. ಸಾಮ್ಯವೆಂದಕೂಡಲೇ ಅವುಗಳಲ್ಲಿದ್ದ ವಿಷಯಗಳನ್ನೇ ಬಸವಣ್ಣನವರು ಕನ್ನಡ ಭಾಷೆಯಲ್ಲಿ ವಚನ ರೂಪದಿಂದ ಹೇಳಿರುತ್ತಾರೆಂಬುವ ಕಲ್ಪನೆಗೆ ಅವಕಾಶವೇ ಇರುವದಿಲ್ಲ. ಅಲ್ಲಲ್ಲಿ ತಮಗೆ ಸರಿಕಾಣದ ವಿಷಯಗಳನ್ನು ಖಂಡಿಸಿ ತಮ್ಮ ಅಭಿಪ್ರಾಯವನ್ನು ಸ್ಪಷ್ಟೀಕರಿಸಿದ್ದಾರೆ. ತಮ್ಮದೇ ಆದ ವೈಶಿಷ್ಟ್ಯವನ್ನು ತೋರಿಸಿ ಪ್ರಚಾರಮಾಡಿದರು. ವೇದಾಗಮೋಪನಿಷತ್ತುಗಳು ಪ್ರಾಚೀನತಮಗಳಾದ ಗ್ರಂಥಗಳು. ಅವುಗಳಲ್ಲಿ ಹೇಳಿದ ವಿಷಯಗಳೆಲ್ಲ ನಿಜವಾದವುಗಳೆಂದು ಎಷ್ಟೋ ಜನಗಳು ದಾಕ್ಷಿಣ್ಯಕ್ಕೊಳಗಾಗಿ ತಮ್ಮ ಮನಸ್ಸಿಗೆ ಒಪ್ಪಿಗೆ ಇಲ್ಲದಿದ್ದರೂ ಅವುಗಳಿಗೆ ತಲೆದೂಗುವ ಪದ್ಧತಿಯು ಪರಂಪರ ರೂಢಿಯಾಗಿರುತ್ತದೆ.

ಶ್ರೀ ಬಸವಣ್ಣನವರು ನಿರ್ದಾಕ್ಷಿಣ್ಯವಾಗಿ ಖಂಡಿಸಿ ತಮ್ಮ ವಿಶಾಲ ಭಾವನೆಯನ್ನು ತೋರಿಸಿದ್ದಾರೆ. "ಅನುಭವಿಯ ಅನುಭವವೇ ವೇದವೆಂದು" ಶ್ರೀ ಪ್ರಭುದೇವರು ಹೇಳಿದ ವಚನನಾದರೂ ಇದನ್ನೇ ಸಮರ್ಥಿಸುತ್ತದೆ. ಅವರು ಯಾವ ಯಾವ ಸಂದರ್ಭಗಳಲ್ಲಿ ವೇದಾದಿಗಳನ್ನು ಖಂಡಿಸಿರುತ್ತಾರೆ, ಯಾವ ಪ್ರಸಂಗವಲ್ಲಿ ಅವುಗಳನ್ನು ಎತ್ತಿ ಹಿಡಿದಿದಾರೆಂಬುವದನ್ನು ಈ ಪ್ರಕರಣಗಳಲ್ಲಿ ತೋರಿಸಲಾಗಿದೆ.

ವೇದಗಳ ವಿಷಯದಲ್ಲಿ ಬಸವಣ್ಣನವರ ಅಭಿಪ್ರಾಯವೇನೆಂಬುವದನ್ನು ಈ ಪ್ರಕರಣದಲ್ಲಿ ವಿವೇಚಿಸಲಾಗಿದೆ. ವೇದಗಳನ್ನು ಬಸವಣ್ಣನವರು ತಮ್ಮ ವಚನಗಳಲ್ಲಿ ಕೆಲವು ಕಡೆಗೆ ಖಂಡಿಸಿರುವುದೂ, ಕೆಲವು ವಚನಗಳಲ್ಲಿ ವೇದ ಪ್ರಾಮಾಣ್ಯವನ್ನು ಕೊಟ್ಟಿರುವುದೂ ಕಂಡುಬರುತ್ತದೆ. ಆದ್ದರಿಂದ ಬಸವಣ್ಣನವರು ವೇದ ವಿರೋಧಿಗಳೋ ಅಥವಾ ವೇದಾನುಯಾಯಿಗಳೋ ಎಂಬುವ ವಿಷಯವು ಅನೇಕ ಜನರಿಗೆ ಸಂಶಯಾಸ್ಪದವಾದುದಾಗಿದೆ.

ಶ್ರೀ ಬಸವಣ್ಣನವರು ವೇದದ ಒಂದು ಭಾಗವಾದ ಕರ್ಮಕಾಂಡವನ್ನು ಖಂಡಿಸಿರುವರು. ಆ ಭಾಗದಲ್ಲಿ ಹಿಂಸೆ ಉಕ್ತವಾಗಿರುವದರಿಂದ ಅಹಿಂಸಾಪಾಲಕರೂ, ಧರ್ಮ ಮತ್ತು ದಯಾಮೂರ್ತಿಗಳೂ ಆದ ಬಸವಣ್ಣನವರಿಗೆ ಹಿಂಸೆ ಸರಿಹೋಗದಿರುವದು ಸಹಜವಾದುದು. ವೇದ ಎಷ್ಟೇ ಪುರಾತನ ಗ್ರಂಥವಾದರೂ ಆ ಭಾಗವನ್ನು ಮಾತ್ರ ಖಂಡಿಸಿರುವರು. ವೇದಗಳಲ್ಲಿರುವ ವರ್ಣಗಳು ಮೊದಲು ಗುಣವಾಚಕಗಳಾಗಿದ್ದು ಬರಬರುತ್ತ ಜಾತಿವಾಚಕಗಳಾಗಿ ಮೇಲು ಕೀಳೆಂಬ ಕೊಳಚೆಯನ್ನು ಹೆಚ್ಚಿಸತಕ್ಕವುಗಳಾಗಿರುವದರಿಂದ ಜಾತಿವಾಚಕಗಳಾದ ವರ್ಣಗಳನ್ನು ಕೂಡ ಅವರು ವಿರೋಧಿಸಿರುವರು. ನಿಜವಾಗಿ ವೇದಗಳಲ್ಲಿ ಎಲ್ಲಿಯೂ ಜಾತಿಭೇದವು ಕಾಣುವದಿಲ್ಲ. ಟೀಕಾತ್ಮಕಗಳಾದ ಗ್ರಂಥಗಳಿಂದಲೂ ಕೆಲವು ಸ್ಮೃತಿಕಾರರ ಮಾತುಗಳಿಂದಲೂ ಜಾತಿಗಳಾಗಿ ಮಾನವನ ಸಮಾನ ತತ್ವಕ್ಕೆ ದೊಡ್ಡ ಕಲಂಕಪ್ರಾಯವಾಗಿರುತ್ತದೆ. ಇತ್ತೀಚೆಗೆ

ಶ್ರೀ ದಯಾನಂದ ಸರಸ್ವತಿಯವರು ತಮ್ಮ ಸತ್ಯಾರ್ಥ ಪ್ರಕಾಶಿಕೆಯಲ್ಲಿ ಹಿಂಸಾಯುಕ್ತ ಗಳಾದ ವೇದಮಂತ್ರಗಳನ್ನೆಲ್ಲ ಖಂಡಿಸಿ ಅವುಗಳಿಗೆ ಬೇರೆ ಬೇರೆ ಅರ್ಥಗಳನ್ನು ಮಾಡಿರು ತ್ತಾರೆ. ಇಂಥವರು ಬಸವಣ್ಣನವರ ಕಾಲಕ್ಕಿದ್ದರೆ ಅವರು ಹಿಗ್ಗುತ್ತಿದ್ದರು.

ಪರಬ್ರಹ್ಮ ಸ್ವರೂಪವಾದ ಪರಶಿವಲಿಂಗವನ್ನು ಷಡಧ್ವಶೋಧನಾ ಪೂರ್ವಕವಾಗಿ ಗುರುವಿನಿಂದ ಧರಿಸಿಕೊಂಡಮೇಲೆ ಜಾತಿಯ ಯತ್ಕಿಂಚಿತ ಸ್ಪರ್ಶನಕ್ಕೂ ಕೂಡ ಅವಕಾಶ ವಿಲ್ಲವೆಂದು ಅವರು ವಿಶ್ವಪ್ರಯತ್ನ ಮಾಡಿರುವದು ಸುಪ್ರಸಿದ್ಧವಾದುದಾಗಿರುತ್ತದೆ.

ಇಲ್ಲಿ ವೇದಗಳ ಬಗ್ಗೆ ವಾಚಕರ ತಿಳುವಳಿಕೆಗಾಗಿ ಕೆಲವು ವಿಷಯಗಳನ್ನು ಬರೆಯುವೆನು. ವೇದವಾಙ್ಮಯ ಅತಿ ಪ್ರಾಚೀನತಮವಾದುದಾಗಿದೆ. ಜಗತ್ತಿನ ಎಲ್ಲ ವಾಙ್ಮಯಗಳಲ್ಲಿ ಇದಕ್ಕೆ ಹೆಚ್ಚಿನ ಪ್ರಾಶಸ್ತ್ಯೆಯು ಇರುತ್ತದೆ. ಮಾನವನ ಬುದ್ಧಿಗೆ ನಿಲುಕದಷ್ಟು ಪುರಾತನ ಕಾಲದ್ದಾಗಿರುತ್ತದೆಂಬುವದಕ್ಕೆ ಅನೇಕ ಪ್ರಮಾಣಗಳಿರುತ್ತವೆ. ಬೇರೆ ಬೇರೆ ಪಂಡಿತರು ವೇದಗಳಿಗೆ ವಿವಿಧ ರೀತಿಯಿಂದ ತಮ್ಮ ತಮ್ಮ ಬುದ್ಧಿಯ ಸಾಮರ್ಥ್ಯಕ್ಕನುಗುಣವಾಗಿ ಟೀಕೆಗಳನ್ನು ಬರೆದಿರುತ್ತಾರೆ.

೧. "ವಿದಂತಿ ಜ್ಞಾನಾಜ್ಞಾನಾನಿತಿವೇದಾಃ"

ಜ್ಞಾನ ಮತ್ತು ಅಜ್ಞಾನಗಳನ್ನು ತಿಳಿಸುವದೇ ವೇದವು. ವಿದ್, ಜ್ಞಾನೆ ಎಂಬುವ ಧಾತುವಿನಿಂದ ಸಿದ್ಧವಾಗಿರುತ್ತದೆ. ವೇದಗಳೆಂದರೆ ತಿಳುವಳಿಕೆಯ ರಾಶಿಗಳೆಂದು ಕೆಲವರು ಅರ್ಥವನ್ನು ಮಾಡಿರುತ್ತಾರೆ.

೨. "ತಪಃ ಸಂಪ್ರಾಪ್ತ ದಿವ್ಯಜ್ಞಾನೇನ ಸ್ಮೃತಾಃ ವೇದಾಃ"

ತಪಸ್ಸಿನ ದಿವ್ಯಜ್ಞಾನದಿಂದ ಸ್ಮರಿಸಲ್ಪಟ್ಟವುಗಳೇ ವೇದಗಳು.

೩. ಪರಾಶರನು—

ಕಶ್ಚಿದ್ವೇದ ಕರ್ತಾಸ್ತಿ ವೇದಸ್ಮರ್ತಾ ಚತುರ್ಮುಖಃ"

ಒಬ್ಬನು ವೇದಗಳ ಕರ್ತೃ ಇರುತ್ತಾನೆ. ವೇದಗಳನ್ನು ಸ್ಮರಿಸಿದವನು ಮಾತ್ರ ಬ್ರಹ್ಮ ನಾಗಿರುತ್ತಾನೆ. ಮೊದಲು ಅಖಂಡವಾದ ವೇದವೊಂದೇ ಇದ್ದಿತು. ಅದು ಅಲ್ಪಜ್ಞರಿಗೆ ತಿಳಿಯಲು ಅಶಕ್ಯವಾದುದರಿಂದ ವ್ಯಾಸ ಮಹರ್ಷಿಗಳು ಅದನ್ನು ನಾಲ್ಕು ಭಾಗಗಳನ್ನಾಗಿ ಮಾಡಿದರು.

೪. ಭಾಗವತದಲ್ಲಿ—

"ವೃಥಧಾತ್ ಯಜ್ಞಸಂತತ್ಯೈರ್ವೇದಮೇಕಂ ಚತುರ್ವಿಧಂ।"

ಒಂದೇ ವೇದವು ಯಜ್ಞಸಂತತಿಗಳಿಗೋಸ್ಕರ ನಾಲ್ಕು ಭಾಗಗಳಾಗಿ ವಿಭಾಗಿಸಲ್ಪಟ್ಟಿತು.

೫. ವೇದಾಂತಕಾರರ ಮತದಲ್ಲಿ—

"ಮಾನಶರೀರಾವಚ್ಛಿನ್ನ ಭಗವದ್ವಾಕ್ಯಂ"

ಎಂತಲೂ,

೬. ನ್ಯಾಯಶಾಸ್ತ್ರಕಾರರು—

"ಬ್ರಹ್ಮಣೊ ಮುಖಾದ್ಬಹಿರ್ಭೂತೊ ಧರ್ಮವಕ್ತೃಶಾಸ್ತ್ರಮ್"

ಬ್ರಹ್ಮನ ಮುಖದಿಂದ ಹೊರಗೆ ಬಂದ ಧರ್ಮಶಾಸ್ತ್ರವು.

ಈ ನಾಲ್ಕು ವೇದಗಳಿಗೆ ಮೊದಲು ಭಾಷ್ಯವನ್ನು ಬರೆದವರು ಅಚ್ಚಕನ್ನಡಿಗರಾದ ಸಾಯಣರು, ಅವರು—

೭. "ಏನಾಭೀಷ್ಟಲಾಭೋ ಅನಿಷ್ಟಪರಿಹಾರಃ ಏವಂ ಧರ್ಮಾದಿಖ್ಯಾಪಕೋ ವೇದಃ ।" ಇಚ್ಛಿತ ಫಲವನ್ನು ಕೊಟ್ಟು ಅನಿಷ್ಟವನ್ನು ಪರಿಹಾರಮಾಡಿ ಧರ್ಮಾಧರ್ಮಾದಿಗಳನ್ನು ಬೋಧಿಸುವದೇ ವೇದವು.

ಈ ವೇದಗಳಿಗೆ ಅನೇಕ ಪರ್ಯಾಯ ನಾಮಗಳಿರುತ್ತವೆ. ಅವುಗಳಲ್ಲಿ ಶೃತಿ, ಆಮ್ನಾಯ, ಸ್ವಾಧ್ಯಾಯ, ಛಂದಸ್ಸು, ನಿಗಮ ಇವೇ ಹೆಸರುಗಳು ಪ್ರಾಮುಖ್ಯವಾಗಿರುತ್ತವೆ.

ಋಗ್ವೇದ ಪದ್ಯಮಯವಾಗಿಯೂ, ಯಜುರ್ವೇದ ಗದ್ಯಪದ್ಯಮಯವಾಗಿಯೂ, ಸಾಮವೇದ ಗಾನಮಯವಾಗಿಯೂ ಇರುತ್ತವೆ. ಈ ವೇದಗಳಲ್ಲಿ ಮಂತ್ರಭಾಗ, ಬ್ರಾಹ್ಮಣಭಾಗಗಳೆಂದು ಎರಡು ಪ್ರಕಾರಗಳಾಗಿರುತ್ತವೆ. ಮಂತ್ರಭಾಗಕ್ಕೆ ಸಂಹಿತೆಗಳೆಂತಲೂ ಅನ್ನುತ್ತಾರೆ. ವೇದಗಳಲ್ಲಿ ಅನೇಕ ಋಕ್ಕುಗಳೂ, ಕಾಂಡಗಳೇ ಮೊದಲಾದವುಗಳಿರುತ್ತವೆ. ಅವುಗಳನ್ನೆಲ್ಲ ಇಲ್ಲಿ ವಿಸ್ತಾರವಾಗಿ ಹೇಳಲು ಸಾಧ್ಯವಿಲ್ಲ. ಈ ವಾಙ್ಮಯವು ಅಪಾರವೂ ಅನೇಕ ವಿಷಯಗಳನ್ನೊಳಗೊಂಡದ್ದೂ ಆಗಿರುತ್ತದೆ.

ಇಂತಹ ವೇದಗಳ ಕಾಲನಿರ್ಣಯವನ್ನು ಇಲ್ಲಿಯವರೆಗೂ ಬೇರೆ ಬೇರೆ ದೇಶಗಳ ಪಂಡಿತರು ಅನೇಕ ತರಹದಿಂದ ಮಾಡಿರುತ್ತಾರೆ. ಯಾವದೊಂದು ನಿಶ್ಚಿತ ಕಾಲವನ್ನು ಕಂಡುಹಿಡಿಯಲು ಯಾರಿಗೂ ಸಾಧ್ಯವಾಗಿರುವದಿಲ್ಲ. ಈ ವೇದಗಳ ಕಾಲನಿರ್ಣಯದ ಸಲುವಾಗಿ ಮೊದಲು ಪರಿಶ್ರಮಪಟ್ಟವರು ಜರ್ಮನ್ ದೇಶದ ಸುಪ್ರಸಿದ್ಧ ಪಂಡಿತರಾದ ಮ್ಯಾಕ್ಸ್ ಮುಲ್ಲರರು. ಇವರು ಕ್ರಿಸ್ತಶಕಕ್ಕಿಂತಲೂ ಪೂರ್ವದಲ್ಲಿ ೨,೦೦೦ ವರ್ಷಗಳ ಪೂರ್ವದಲ್ಲಿ ವೇದಗಳ ಉತ್ಪತ್ತಿಯಾಯಿತೆಂದು ಬರೆದಿರುತ್ತಾರೆ. ಮತ್ತೆ ಕೆಲವರು ಕ್ರಿಸ್ತಪೂರ್ವ ೧,೫೦೦ ವರ್ಷ ಇರಬಹುದೆಂದು ತರ್ಕಿಸಿರುತ್ತಾರೆ. ಇಂಗ್ಲಂಡಿನಲ್ಲಿಯ ಸುಪ್ರಸಿದ್ಧ ಪಂಡಿತರಾದ ಮೆಕ್ಡಾನೆಲ್ಡ ಮತ್ತು ಕೀತ್ ಇವರು ಮುಖ್ಯರಿರುತ್ತಾರೆ. ಕೆಲವು ಜ್ಯೋತಿಷ್ಯದ ವಾಕ್ಯಗಳಿಂದ ಲೆಖ್ಖವನ್ನು ಮಾಡಿ ಹೌಗ್ ಎಂಬುವ ಪಂಡಿತನು ಕ್ರಿಸ್ತಶಕ ೨,೪೦೦ ರಿಂದ ೨,೦೦೦ ಇರಬಹುದೆಂದು ಬರೆದಿರುತ್ತಾನೆ. ಯಾಕೋಬಿ ಎಂಬುವ ವಿದ್ವಾಂಸನು ೪,೫೦೦ ವರ್ಷದ ಹಿಂದೆ ಇದ್ದವೆಂತಲೂ ಲೋಕಮಾನ್ಯ ಬಾಲಗಂಗಾಧರ ತಿಲಕರವರು ಕ್ರಿಸ್ತಶಕಕ್ಕಿಂತಲೂ ಪೂರ್ವದಲ್ಲಿ ೬,೦೦೦ ವರ್ಷಗಳ ಹಿಂದೆ ಇವುಗಳ ಕಾಲವೆಂತಲೂ, ಗ್ರಂಥಗಳನ್ನು ಬರೆದಿರುತ್ತಾರೆ. ಬೂಲರ್ ಎಂಬುವ ಪಂಡಿತನಾದರೋ ಶಾಸನಗಳನ್ನು ಪರೀಕ್ಷಿಸಿ ದಕ್ಷಿಣ ದೇಶಕ್ಕೆ ಆರ್ಯರು ಬಂದುದು ಕ್ರಿಸ್ತಪೂರ್ವ ಮೂರನೆಯ ಶತಮಾನವಾದರೂ, ಕ್ರಿಸ್ತಶಕೆಯ ೭–೮ ಶತಮಾನದ ವೇಳೆಗೆ ಆರ್ಯಧರ್ಮದ ಗಾಳಿಯು ದಕ್ಷಿಣಕ್ಕೂ ಬಂದಿದ್ದಿತ್ತೆಂಬುವದು ತಿಳಿಯುವದರಿಂದ ಇದಕ್ಕಿಂತ ಬಹಳ ಮುಂಚೆ ಅಂದರೆ ಸುಮಾರು ೭೦೦ ವರ್ಷಗಳ ಮುಂಚೆ ವೇದದ ಸಂಪೂರ್ಣ ಸ್ಥಿತಿ ಇದ್ದಿರಬೇಕೆಂದು ಊಹಿಸಿರುತ್ತಾರೆ. ಏಷ್ಯಾ ಮೈನರಿನಲ್ಲಿರುವ ಜೋಗಾಸ್ ಕೋಯಿ ಎಂಬುವಲ್ಲಿ ಕೆಲವು ಮಣ್ಣಿನ ಹಲಗೆಗಳು ಸಿಕ್ಕಿರುವವು. ಅವುಗಳಲ್ಲಿ ಹಿಟ್ಟೈಟ್ ಜನರ ದೇವತೆಗಳ ಹೆಸರುಗಳಲ್ಲದೆ ವೇದದ ದೇವತೆಗಳಾದ ಮಿತ್ರ, ವರುಣ, ಇಂದ್ರ, ನಾಸತ್ಯ (ಅಶ್ವಿನೀ ದೇವತೆಗಳು) ಮುಂತಾದ ಹೆಸರುಗಳು

ಕಂಡುಬರುತ್ತವೆ. ಬೋಗಾಸ್ ಕೋಯಿ ಸಂಶೋಧನೆಗಳು ಕ್ರಿಸ್ತಪೂರ್ವ ೧೪ನೆಯ ಶತಮಾನದ ಆದಿಭಾಗಕ್ಕೆ ಸಂಬಂಧಿಸಿದವು. ಆದುದರಿಂದ ವೇದದ ರಚನೆ ಕ್ರಿಸ್ತಪೂರ್ವದಲ್ಲಿ ೧೪ನೆಯ ಶತಮಾನಕ್ಕಿಂತ ಬಹಳ ಮುಂಚೆಯೇ ಆಗಿದ್ದಿರಬೇಕೆಂದು ಇನ್ನೊಂದು ಅಭಿಪ್ರಾಯವುಂಟು. ಅಂತೂ ವೇದಗಳ ರಚನೆಯ ಕಾಲವು ಇಂಥಾದ್ದೇ ಎಂದು ನಿರ್ದಿಷ್ಟವಾಗಿ ಯಾರೂ ಇವತ್ತಿನವರೆಗೆ ಹೇಳಿರುವದಿಲ್ಲ. ಎಲ್ಲರೂ ತಮ್ಮ ತಮ್ಮ ಬುದ್ಧಿಗೆ ತೋಚಿದಂತೆ ತರ್ಕವನ್ನು ಮಾಡಿರುತ್ತಾರೆ. ಮುಂದಾದರೂ ಇವುಗಳ ನಿಶ್ಚಿತಕಾಲ ದೊರೆಯುವದೊ ಇಲ್ಲವೋ ಹೇಳಲಿಕ್ಕೆ ಬಾರದಾಗಿರುತ್ತದೆ. ಕ್ರಿಸ್ತಶಕಕ್ಕಿಂತ ೧,೫೦೦ ಅಥವಾ ೨,೦೦೦ ವರ್ಷಗಳ ಹಿಂದೆ ವೇದದ ರಚನೆಯಾಗಿರಬೇಕೆಂಬುವ ಸಾಮಾನ್ಯ ನಿರ್ಣಯಕ್ಕೆ ಬರಬಹುದಾಗಿರುತ್ತದೆ.

ಹಿಂದೂಧರ್ಮಾಭಿಮಾನವುಳ್ಳವರೆಲ್ಲ ಒಂದಿಲ್ಲೊಂದರೀತಿಯಿಂದ ಅವುಗಳಿಗೆ ಮನ್ನಣೆ ಕೊಡುತ್ತಾರೆ. ಅವುಗಳಲ್ಲಿ ತಮ ತಮಗೆ ಬೇಕಾದ ಮಂತ್ರಗಳನ್ನು ತೆಗೆದು ಕೊಂಡು ವೇದಗಳಲ್ಲಿ ತಮ್ಮ ಧರ್ಮದ ಪ್ರತಿಪಾದನೆ ಇರುತ್ತದೆಂದು ಹೇಳಿರುತ್ತಾರೆ. ವೇದಗಳಾದರೂ ಸರ್ವರಿಗೂ ಅನುಕೂಲವಾದ ಅರ್ಥಗಳನ್ನು ಕೊಡತಕ್ಕವುಗಳಾಗಿರುತ್ತವೆ. ಒಂದೊಂದು ಮಂತ್ರಕ್ಕೆ ಬೇರೆ ಬೇರೆ ಮತಗಳ ಆಚಾರ್ಯರು ಹತ್ತೆಂಟು ತರಹದ ಅರ್ಥಗಳನ್ನು ಮಾಡಿರುತ್ತಾರೆ. ಎಲ್ಲರೂ ತಮ್ಮ ತಮ್ಮ ಅರ್ಥಗಳೇ ಸರಿಯೆಂತಲೂ ಉಳಿದವರ ಅರ್ಥಗಳು ಯೋಗ್ಯವಾದವುಗಳಲ್ಲವೆಂತಲೂ ಪ್ರತಿಪಾದಿಸಿರುತ್ತಾರೆ. ಜಗತ್ತಿನ ದಿವ್ಯ ವಾಙ್ಮಯಗಳಲ್ಲಿ ವೇದವಾಙ್ಮಯ ಮೊದಲನೆಯ ಸ್ಥಾನವನ್ನು ಪಡೆದು ಯಾವಾಗಲೂ ನಶ್ವರವಾಗದ ಕೀರ್ತಿಯನ್ನು ಗಳಿಸಿರುತ್ತದೆಂದು ಜಗತ್ತಿನ ಪಂಡಿತರು ಬರೆದ ಗ್ರಂಥಗಳಿಂದಲೇ ಸಿದ್ಧವಾಗುತ್ತದೆ. ಈ ವೇದಗಳು ಅಪೌರುಷೇಯವಾದವುಗಳೆಂದು ಹೇಳಲಾಗುತ್ತದೆ. ಕ್ರಿಶ್ಚಿಯನ್ ಮತ್ತು ಮುಸಲ್ಮಾನ ಧರ್ಮದವರೂ ಕೂಡ ತಮ್ಮ ತಮ್ಮ ಧರ್ಮ ಗ್ರಂಥಗಳು ದೇವರಿಂದ ಬಂದವುಗಳೆಂದೇ ತಿಳಿಯುತ್ತಾರೆ. ಋಷಿಗಳ ತಪಸ್ಸಿನ ಸಾಮರ್ಥ್ಯದಿಂದ ವೇದಗಳು ಪರಮಾತ್ಮನಿಂದ ಪಡೆದವುಗಳೆಂದು ಹೇಳಬಹುದು. ಪಾಣಿನಿಯ ವ್ಯಾಕರಣ ಸೂತ್ರಗಳಿಗೆ ಮಾಹೇಶ್ವರ ಸೂತ್ರಗಳೆಂದು ಹೇಳಲಾಗುತ್ತದೆ. ಅವುಗಳಿಗೆ ಅನೇಕ ಜನ ವಿದ್ವಾಂಸರು ಟೀಕೆಯನ್ನು ಬರೆಯುವ ಕಾಲಕ್ಕೆ "ಪಾಣಿನೀಯಾಃ" ಪಾಣಿನಿನಾ ಪ್ರೋಕ್ತಾಃ ಪಾಣಿನೀಯಾಃ ಮಹೇಶ್ವರ ಪ್ರಸಾದಾತ್ ಪಾಣಿನಿನಾ ಲಬ್ಧಾಃ ಅಂದರೆ ಮಾಹೇಶ್ವರನ ಪ್ರಸಾದದಿಂದ ಪಾಣಿನಿಯವರಿಗೆ ದೊರೆತವುಗಳೆಂದು ಅರ್ಥಮಾಡಿದ್ದಾರೆ. ಪಾಣಿನಿಯ ಮಹರ್ಷಿಗಳು ಅನೇಕ ಸಂವತ್ಸರಗಳವರೆಗೆ ಪರಮಾತ್ಮನನ್ನು ಕುರಿತು ತಪಸ್ಸುಮಾಡಿದರೆಂತಲೂ ಪರಮಾತ್ಮನು ಪ್ರತ್ಯಕ್ಷನಾಗಿ ಅವರಿಗೆ ವ್ಯಾಕರಣಸೂತ್ರಗಳನ್ನು ಕೊಟ್ಟನೆಂದೂ ಹೇಳುತ್ತಾರೆ. ಬ್ರಹ್ಮನು ಉಸುರಿದ ಈ ಜ್ಞಾನವನ್ನು ಕೇಳಿ ಋಷಿಗಳು ಅವರು ತಮ್ಮ ಶಿಷ್ಯರಿಗೂ ಹೀಗೆ ಪರಂಪರೆಯಿಂದ ಕೇಳಿಕೊಳ್ಳುತ್ತ ಬಂದುದರಿಂದ ಶ್ರುತಿಗಳೆಂತಲೂ, ನಿಷ್ಕೃಷ್ಟವಾದ ಜ್ಞಾನವನ್ನು ಕೊಡುವದರಿಂದ ನಿಗಮಗಳೆಂತಲೂ, ಪರಬ್ರಹ್ಮ ವಿಷಯ ಚಿಂತನೆಗೆ ಸಾಧನವಾದ ಜ್ಞಾನಸಮುದಾಯದಿಂದ ಕೂಡಿರುವದರಿಂದ ಆಮ್ನಾಯವೆಂತಲೂ. ವೇದಗಳಿಗೆ ಮೇಲೆ ಹೇಳಿದಂತೆ ಬೇರೆ ಬೇರೆ ಹೆಸರುಗಳಿರುತ್ತವೆ. ಈ ವೇದಗಳಲ್ಲಿ ಸ್ಥೂಲರೀತಿಯಿಂದ ಜ್ಞಾನಕಾಂಡ, ಕರ್ಮಕಾಂಡ, ಉಪಾಸನಾಕಾಂಡಗಳೆಂದು ಮೂರುಪ್ರಕಾರ ಇರುತ್ತವೆ.

ಇವುಗಳಲ್ಲಿ ಕರ್ಮಕಾಂಡದೊಳಗೆ ಕೇವಲ ಯಜ್ಞ ಯಾಗಾದಿಗಳನ್ನು ಹೇಳಿರುತ್ತದೆ. ಆ ಯಜ್ಞದ ಅರ್ಥಗಳನ್ನು ಬರಬರುತ್ತ ಬೇರೆಬೇರೆ ರೀತಿಯಿಂದ ಮಾಡಿ ಪಶುಗಳ ವಧೆಯನ್ನು ಮಾಡಲಿಕ್ಕೆ ಪ್ರಾರಂಭಿಸಿದರು. ಯಜ್ಞಗಳಲ್ಲಿ ಪಶುಗಳನ್ನು ಕೊಂದದ್ದಾದರೆ ದೋಷವಿಲ್ಲವೆಂದು "ಮಾಹಿಂಸ್ಯಾತ್ಸರ್ವಭೂತಾನಿ" ಎಂಬುವ ಸಾಮಾನ್ಯ ಶಾಸ್ತ್ರಕ್ಕೆ ಯಜ್ಞದಲ್ಲಿ ಪಶುಗಳನ್ನು ಕೊಂದರೆ ದೋಷವಿಲ್ಲ ಎಂಬುವ ವಿಶೇಷ ಶಾಸ್ತ್ರವನ್ನು ಮಾಡಿದರು. ಇಂತಹ ವೇದಪ್ರಮಾಣವನ್ನು ಕೊಟ್ಟು ಹಿಂಸೆಯನ್ನು ಎಲ್ಲೆಡೆಯಲ್ಲಿಯೂ ಮಾಡಲು ಪ್ರವೃತ್ತರಾದರು. ಹಿಂಸೆಯನ್ನು ಹೇಳತಕ್ಕವು ವೇದಗಳಾದರೂ ಸರಿ ಅವು ತ್ಯಾಜ್ಯವಾದವುಗಳೆಂದು ದಯಾಶಾಲಿಗಳಾದ ಬಸವಣ್ಣನವರು ಅಂತಹ ವೇದಗಳ ವಿರುದ್ಧ ದಕ್ಷಿಣ ಹಿಂದೂಸ್ಥಾನದಲ್ಲಿ ದೊಡ್ಡ ಬಂಡಾಯವನ್ನೆಬ್ಬಿಸಿದರು. ಹಿಂಸೆಯನ್ನು ಹೇಳತಕ್ಕ ವೇದಭಾಗವು ತ್ಯಾಜ್ಯವೆಂದು ಲೋಕದಲ್ಲಿ ಸಾರಿಸಾರಿ ಹೇಳಿದರು. ಮೂಲ ಗ್ರಂಥಗಳಲ್ಲಿದ್ದ ವಿಷಯದ ಸ್ವರೂಪವು ಬೇರೆಬೇರೆ ಜನಗಳ ರೀತಿನೀತಿಗಳಿಂದ ಬದಲಾಗಿ ಹೋಯಿತು. ವೇದಗಳಲ್ಲಿ ನಾಲ್ಕು ವರ್ಣಗಳನ್ನು ಹೇಳಿದ್ದರೂ ಅವು ಗುಣಕರ್ಮಗಳಿಂದ ಇರತಕ್ಕವುಗಳೆಂದು ಸಿದ್ಧಪಡಿಸಲಾಗಿದೆ. ಅವುಗಳು ಕಾಲಕ್ರಮದಿಂದ ಜಾತಿಯ ವಾಚಕಗಳಾದವು. ಹೀಗೆ ಮೇಲು ಕೀಳುಗಳನ್ನು ಹೇಳತಕ್ಕ ವೇದಗಳು ಎಷ್ಟೇ ಹಿರಿಯ ಗ್ರಂಥಗಳಾದರೂ ಮಹಾ ಬುದ್ಧಿಶಾಲಿಗಳಾದ ಬಸವಣ್ಣನವರು ನಿರ್ದಾಕ್ಷಿಣ್ಯವಾಗಿ ಅವುಗಳನ್ನು ಖಂಡಿಸಿದರು.

ವೇದದ ವಿರುದ್ಧ ಯಾರಾದರೂ ಕೆಲವು ಮಾತುಗಳನ್ನು ಭಿನ್ನಾಭಿಪ್ರಾಯದಿಂದ ಹೇಳಿದರಾಯಿತು "ಅಬ್ರಹ್ಮಣ್ಯಂ"ವೇದವಿರೋಧವೆಂದು ಕೆಲವರು ಗುತ್ತಿಗೆಯನ್ನು ತೆಗೆದುಕೊಂಡಂತೆ ಮಾತನಾಡುವದು ನಮ್ಮ ದೇಶದ ಜನಗಳಲ್ಲಿ ರೂಢಿಯೇ ಆಗಿಬಿಟ್ಟಿರುತ್ತದೆ. ವೇದಗಳು ಸಾಮಾನ್ಯವಾಗಿ ಜನಗಳಿಗೆ ವಿಷಯಗಳನ್ನು ಬೋಧಿಸತಕ್ಕವುಗಳಾಗಿವೆ. ಟೀಕಾತ್ಮಕಗಳಾದ ಗ್ರಂಥಗಳಿಂದಲೇ ವಿಶೇಷಾಚರಣೆ ತಿಳಿಯುತ್ತಲಿದೆ. ಆಯಾಯ ಮತಗಳ ಪಂಡಿತರು ತಮ್ಮ ತಮ್ಮ ಶಾಸ್ತ್ರಗಳಲ್ಲಿ ತಮಗೆ ಇಷ್ಟವಾದ ಅರ್ಥವನ್ನು ಮಾಡಿ ತಮ್ಮ ಆಚರಣೆಗೆ ಬೇಕಾದಂತ ಮಂತ್ರಗಳನ್ನು ಜಗ್ಗಿ ಜಗ್ಗಿ ಅರ್ಥಮಾಡಿರುತ್ತಾರೆ. ಆಯಾಯ ಸಂಪ್ರದಾಯದ ಗ್ರಂಥಗಳಿಂದ ಇದು ಸಿದ್ಧವಾಗುತ್ತದೆ. ವೇದಗಳಲ್ಲಿ ಯಾರಿಗೆ ಎಷ್ಟು ಬೇಕೋ ಅಷ್ಟಷ್ಟೇ ತೆಗೆದು ಆಚರಣೆ ಮಾಡುವದು ತಿಳಿದುಬರುತ್ತದೆ. ಯಾವ ಸಂಪ್ರದಾಯದವರಾದರೂ ವೇದದಲ್ಲಿ ಹೇಳಿದ ಸಂಪೂರ್ಣ ವಿಷಯಗಳನ್ನು ಅನುಸರಿಸುವದು ಕಂಡುಬರುವದಿಲ್ಲ. ವೇದಗಳಲ್ಲಿರತಕ್ಕ ವಿಷಯಗಳಲ್ಲಿ ನೂರರಲ್ಲಿ ಒಂದಂಶವನ್ನಾದರೂ ಆಚರಿಸುವದು ಲೋಕದ ಜನಗಳಲ್ಲಿ ರೂಢಿಯು ಇರುವದೋ ಇಲ್ಲವೋ ಹೇಳುವದು ಕಷ್ಟದಾಯಕ ಕಾರ್ಯವಾಗಿರುತ್ತದೆ.

ಯಾವ ಯಾವ ಸಂದರ್ಭಗಳಲ್ಲಿ ಬಸವಣ್ಣನವರು ವೇದಗಳನ್ನು ಖಂಡಿಸಿರುತ್ತಾರೆ, ಯಾವ ಸಂದರ್ಭಗಳಲ್ಲಿ ಆಧಾರ ತೆಗೆದುಕೊಂಡಿರುತ್ತಾರೆಂಬುವದನ್ನು ಇಲ್ಲಿ ನೋಡೋಣ.

೧

"ಓಂ ನಮಶ್ಶಿವಾಯ ಎಂಬುವ ಮಂತ್ರವ ಮೀರಲಮ್ಮದೆ ನಿಂದುವು
ವೇದ ಓಂ ನಮಃ ಶಿವಾಯ ಎಂಬುವ ಮಂತ್ರವ ಮೀರಲಮ್ಮದೆ ನಿಂದುವು
ಶಾಸ್ತ್ರ ಓಂ ನಮಃ ಶಿವಾಯ ಎಂಬುವ ಮಂತ್ರವ ಮೀರಲಮ್ಮದೆ ನಿಂದುವು

ತರ್ಕ ಭಯಂಕರ ಭ್ರಮೆಗೊಂಡಿತ್ತು ಮಂತ್ರತಂತ್ರ ಶಿವನಂ ತಾವನರಿಯದೆ ಚಿಂತಿಸುತ್ತಿದ್ದಿತು ಲೋಕ, ಕೂಡಲಸಂಗಮದೇವ ಶ್ವಪಚಮೆರೆದರೆ ಜಾತಿ ಭೇದವಮಾಡಲಮ್ಮವು"

ಈ ವಚನದಲ್ಲಿ ಪಂಚಾಕ್ಷರಿ ಮಂತ್ರದ ಪ್ರಭಾವವಿದ್ದು ವೇದಾಗಮತರ್ಕಶಾಸ್ತ್ರಗಳಿಗೆ ಶಿವನ ಮಹಿಮೆಯು ನಿಲುಕದೆಂದು ಹೇಳಲಾಗಿದೆ. ಇದರಲ್ಲಿ ವೇದಗಳ ನಿಂದೆಯು ಇರುವದಿಲ್ಲ. ಸುಪ್ರಸಿದ್ಧ ಶಿವಮಹಿಮ್ನ ಸ್ತೋತ್ರಕಾರರೂ ಕೂಡ "ಚಕಿತಮಭಿಧತ್ತೇ ಶೃತಿರಪಿ" ಅಂದರೆ ಶಿವನ ಮಹಿಮೆಯನ್ನು ಹೇಳಲಿಕ್ಕೆ ವೇದವೂ ಕೂಡ ಚಕಿತವಾಗುತ್ತದೆ ಎಂದು ಅಭಿಪ್ರಾಯಪಟ್ಟಿರುತ್ತಾರೆ.

ಶ್ರೀ ಬಸವಣ್ಣನವರ ಸಾವಿರಾರು ವಚನಗಳಲ್ಲಿ ೩೭ ಸಾರೆ ಮಾತ್ರ ವೇದದ ಉಚ್ಚಾರವು ಬಂದಿರುತ್ತದೆ.

೨

"ನಾದಪ್ರಿಯ ಶಿವನೆಂಬುವರು ನಾದಪ್ರಿಯಶಿವನಲ್ಲವಯ್ಯ ವೇದ ಪ್ರಿಯ ಶಿವನೆಂಬುವರು ವೇದಪ್ರಿಯ ಶಿವನಲ್ಲವಯ್ಯ ನಾದವಮಾಡಿದ ರಾವಣಂಗೆ ಅರೆಯಾಯುಷ್ಯವಾಯಿತ್ತು ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು ನಾದಪ್ರಿಯನೂ ಅಲ್ಲ ವೇದಪ್ರಿಯನೂ ಅಲ್ಲ ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವಾ"

ಇದರಲ್ಲಿಯೂ ಕೂಡ ವೇದದ ನಿಂದೆಯು ಇರದೆ ಭಕ್ತಿಪ್ರಿಯನು ಶಿವನೆಂಬುವದನ್ನು ಈ ವಚನವು ಹೇಳುತ್ತಲಿದೆ. ಲೋಕದಲ್ಲಿ ಪರಮಾತ್ಮನು ಭಕ್ತಿಗೆ ಮೆಚ್ಚಿದಂತೆ ಉಳಿದ ವಿಷಯಗಳಿಗೆ ಮೆಚ್ಚಿದ ಉದಾಹರಣೆಗಳು ಸಿಕ್ಕರೂ ವಿರಳ.

೩

"ಸುಪಥಮಂತ್ರದುಪದೇಶವಕಲಿತು ಯುಕ್ತಿಗೆಟ್ಟು ನಡೆವಿರಯ್ಯ ತತ್ವಮಸಿ ಎಂಬುದನರಿದು ಕತ್ತಲೆದೊಡೆವಿರಯ್ಯ ವೇದವಿಪ್ರ ವಿಚಾರಿಸಿ ನೋಡಲು ಉಪದೇಶಪರೀಕ್ಷೆ ನಾಯಕನರಕವೆಂದುದು ಕೂಡಲಸಂಗನ ವಚನದ ಸೂಚನೆ"

ಒಳ್ಳೇ ಮಂತ್ರದ ಉಪದೇಶವನ್ನು ಹೊಂದಿ ಅದರಂತೆ ನಡೆಯದೆ ಯುಕ್ತಿಗೆಟ್ಟು ನಡೆಯುತ್ತಿರುವಿರಿ. ತತ್ವಮಸಿ ಎಂಬುವ ಮಹಾ ವಾಕ್ಯದ ಅರ್ಥವನ್ನು ತಿಳಿದೂ ಕೂಡ ಅಡ್ಡದಾರಿ ಹಿಡಿದು ನಡೆಯುತ್ತಿರುವಿರಿ. ಹಾಗೆ ಕತ್ತಲೆಯ ದಾರಿಯನ್ನು ಹಿಡಿಯಬೇಡಿರಿ. ಚತುರ್ವೇದಗಳನ್ನು ಕಲಿತು ಬುದ್ಧಿವಂತರಾದವರೂ ಕೂಡ ಉಪದೇಶವನ್ನು ಹೊಂದಿ ಸರಿಯಾದ ಮಾರ್ಗಕ್ಕೆ ಬಾರದಿದ್ದರೆ ನರಕ ತಪ್ಪುವದಿಲ್ಲವೆಂದೇ ಈ ವಚನದ ಸಾರಾಂಶವಾಗಿರುತ್ತದೆ.

ಇಲ್ಲಿ ಉಪದೇಶವೆಂದರೆ ತ್ರಿವಿಧಾಂಗಗಳಲ್ಲಿ ತ್ರಿವಿಧ ಲಿಂಗಗಳನ್ನು ಸ್ವಾಯತವ ಮಾಡಿಕೊಳ್ಳುವದೇ ಎಂಬುವದಾಗಿರುತ್ತದೆ.

೪

"ಶಾಸ್ತ್ರಘನವೆಂಬೆನೆ? ಕರ್ಮವ ಭಜಿಸುತ್ತಿದೆ. ವೇದಘನವೆಂಬೆನೆ? ಪ್ರಾಣವಧೆಯ ಹೇಳುತ್ತಿದೆ. ಸ್ಮೃತಿಘನವೆಂಬೆನೆ? ಮುಂದಿಟ್ಟರಸುತ್ತಿದೆ.

ಅಲ್ಲೆಲ್ಲಿಯೂ ನೀವಿಲ್ಲದ ಕಾರಣ ತ್ರಿವಿಧ ದಾಸೋಹದಲಲ್ಲದೆ ಕಾಣಬಾರದು ಕೂಡಲಸಂಗಮದೇವನ"

ಇಲ್ಲಿ ಬಸವಣ್ಣನವರು ಹಿಂಸೆಯ ವಿಷಯಕ್ಕೆ ವೇದದ ಮೇಲೆ ದೋಷಾರೋಪಣೆಯನ್ನು ಮಾಡಿರುತ್ತಾರೆ. ವೇದವು ಪ್ರಾಣವಧೆಯನ್ನು ಹೇಳುವದರಿಂದ ಅದು ಘನವಾದುದೆಂದು ನಾನು ಅನ್ನಲಾರೆನು.

೫

"ವೇದದಂತುಟಲ್ಲ ಶಾಸ್ತ್ರದಂತುಟಲ್ಲ ಗೀತವಾತಿನಂತುಟಲ್ಲ ಕೇಳಯ್ಯ ಮಾತಿನ ಮಾಲೆಯು ಕೌಳುಗೋಲ— ಈ ವಚನ ಇನ್ನೂ ದೊಡ್ಡದಿರುತ್ತದೆ."

೬

"ಶೃತಿಗಗಮ್ಯ ದ್ವಾದಶಾಂತ್ಯ ನಪ್ರತಿಮಮಹಿಮಂಗೆ ಪ್ರತಿಯುಂಟೆ? ಸೋಮಃಪವತೇ ಎಂಬ ಶೃತಿಯನರಿದು ಶಿವನೇಕೋ ದೇವರುದ್ರ ನದ್ವಿತೀಯನೆಂದು ನಂಬುವುದು ಕಾಣಿರಣ್ಣಾ ಕೂಡಲಸಂಗಮದೇವನಲ್ಲದೆ ಇಲ್ಲವೆಂದು ಎತ್ತಿದೆಬಿರುದ ಜಗವೆಲ್ಲರಿಯಲು"

ಈ ವಚನದಲ್ಲಿ ಬಸವಣ್ಣನವರು ಶೃತಿಗೆ ಅಗಮ್ಯನು ಪರಮಾತ್ಮನೆಂದು ಹೇಳುತ್ತ ಸೋಮಃಪವತೇ ಎಂಬುವ ವೇದವನ್ನು ತಿಳಿದು ಶಿವನೊಬ್ಬನೇ ದೇವನಲ್ಲದೆ ಬೇರೊಬ್ಬರಿಲ್ಲವೆಂದು ಹೇಳಿರುತ್ತಾರೆ. ವೇದದ ಪ್ರಮಾಣದಂತೆ ಸಂಗನೊಬ್ಬನೇ ದೇವರೆಂದು ಹೇಳಿರುತ್ತಾರೆ.

೭

"ಉಪ್ಪರಗುಡಿ ನಂದಿವಾಹನ ಸದ್ಯೋಜಾತನ ಬಾಗಿಲಮುಂದೆ ಸಾರುತ್ತಿದ್ದಾವೆ ನೋಡಾ ಶೃತಿಗಳು ಹುಸಿಯದೆ ಭರ್ಗೋದೇವಸ್ಯ ಧೀಮಹಿ ಎಂದುದಾಗಿ ಕೂಡಲಸಂಗನಲ್ಲದಿಲ್ಲೆಂದುದು ವೇದ"

ಇಲ್ಲಿ ಸಂಪೂರ್ಣ ಪ್ರಮಾಣವನ್ನಂಗೀಕರಿಸಿರುತ್ತಾರೆ.

೮

"ವೇದ ಸ್ವಯಂಭುವೆಂಬ ವಾದಿನೀ ಕೇಳೆಲವೋ ಏಕೋದೇವ ರುದ್ರನ ದ್ವಿತೀಯನೆಂದು ನಂಬುವುದು ಕಾಣಿರಣ್ಣಾ ಚಕಿತಮಭಿಧತ್ತೇ ಎಂದು ಶೃತಿ ಸಾರುತ್ತಿದ್ದಾವೆ. ಜಗದ ಕರ್ತ ಕೂಡಲಸಂಗಮದೇವನೊಬ್ಬ ಕಾಣಿರಣ್ಣಾ"

೯

"ಶೃತಿತತಿ ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನ ನಾನೇನೆಂಬೆನಯ್ಯಾ? ಘನಕ್ಕೆ ಘನಮಹಿಮನ ಮನಕ್ಕಗೋಚರನ ಅಣೋರಣೀಯಾನ್ ಮಹತೋ ಮಹೀಯಾನ್ ಮಹದಾನಿ ಕೂಡಲಸಂಗಮದೇವಾ"

೧೦

"ಸಕಲನಿಷ್ಕಳವ ಕೂಡಿಕೊಂಡಿಪ್ಪೆಯಾಗಿ ಸಕಳ ನೀನೇ ನಿಷ್ಕಳ ನೀನೇ ಕಂಡಯ್ಯ ವಿಶ್ವತೋಚಕ್ಷು ನೀನೇ ದೇವ ವಿಶ್ವತೋಮುಖ ನೀನೇ ದೇವ ವಿಶ್ವತೋಬಾಹು ನೀನೇ ದೇವ ವಿಶ್ವತೋಪಾದ ನೀನೇ ದೇವ ಕೂಡಲ ಸಂಗಮದೇವಾ"

೧೧

"ವಿಶ್ವಾಧಿಕೋರುದ್ರನ ಹೊಗಳುವ ಶೃತಿಗಳು ವಿಶ್ವರೂಪಾಯವೈ ನಮಃ ಪರಮರೂಪಿಣೇ ನಮಃ ಪರತತ್ವಾತ್ಮನೇ ನಮಃ ಆವ್ಯಾರೂಢ ಭಯಂಕರನೇ ನಮಃ ಹರಿಯನು ಹರಿಸಿದನೆಂದು ಶೃತಿ ಸಾರುತಿರಲು ಸಂಹಾರಕಾರಣನೇ ನಮಃ ನಮ್ಮ ಕೂಡಲಸಂಗಮದೇವರ ಮಹಾ ಮಹದ್ಭ್ಯೋ ನಮಃ"

ಮೇಲೆ ಬರೆದ ಆರೂ ವಚನಗಳಲ್ಲಿ ವೇದದ ಪ್ರಮಾಣವನ್ನು ಬಸವಣ್ಣನವರು ಅಂಗೀಕರಿಸಿದ್ದು ಸ್ಪಷ್ಟವಾಗುತ್ತಲಿದೆ.

೧೨

"ವಿಷ್ಣು ಕರ್ಮಿ ರುದ್ರನಿಷ್ಕರ್ಮಿ ಕ್ರಮವನರಿಯದೆ ನುಡಿವಿರಿ ಭೋ ವೇದಶೃತಿಗಳ ತಿಳಿಯಲರಿಯದೆ ವಾದವ ಮಾಡುವರೆಲ್ಲ ವಿಷ್ಣು ನಾನಾ ಯೋನಿಯಲ್ಲಿ ಬಾರದ ಭವಂಗಳಲ್ಲಿ ಬರುತಿರ್ಪ ರುದ್ರನಾವ ಯೋನಿ ಯಲ್ಲಿ ಬಂದನೆಂಬುದ ನೀವು ಹೇಳಿರೋ"

ಈ ವಚನದಲ್ಲಿ ಬಸವಣ್ಣನವರು ಶಿವನ ಆಧಿಕ್ಯವನ್ನು ಹೇಳಿ ಶೃತಿಗಳ ಪ್ರಮಾಣವನ್ನು ತಿಳಿಯದೆ ವಾದಿಸುವಿರೆಂದು ಹೇಳಿರುತ್ತಾರೆ.

೧೩

"ಇಬ್ಬರು ಮೂವರು ದೇವರೆಂದುಬ್ಬುಬ್ಬಿ ಮಾತನಾಡಬೇಡ ದೇವ ನೊಬ್ಬನೇ ಕಾಣಿರೋ ಇಬ್ಬರೆಂಬುದು ಹುಸಿ ನೋಡಾ ಕೂಡಲಸಂಗಮ ದೇವನಲ್ಲದೆ ಇಲ್ಲೆಂದಿತ್ತು ವೇದ"

ಇಲ್ಲಿ ಬಸವಣ್ಣನವರು ಒಬ್ಬನೇ ದೇವನಿದ್ದಾನೆಂಬುವದಕ್ಕೆ ವೇದದ ಪ್ರಮಾಣವನ್ನು ಕೊಟ್ಟಿರುತ್ತಾರೆ.

೧೪

"ವಿಷ್ಣು ಬಲ್ಲಿದನೆಂಬೆನೆ? ದಶಾವತಾರದಲ್ಲಿ ಭಂಗಬಿಟ್ಟುದಕ್ಕೆ ಕಡೆಯಿಲ್ಲ. ಬ್ರಹ್ಮ ಬಲ್ಲಿದನೆಂಬೆನೆ? ಶಿರಹೋಗಿ ನಾನಾ ವಿಧಿಯಾದ ವೇದ ಬಲ್ಲಿತ್ತೆಂಬೆನೆ? ನಾನಾ ಮುಖದಲ್ಲಿ ಸ್ತುತಿಯಿಸಿತಲ್ಲದೆ ಲಿಂಗದ ನಿಲುಕಡೆಯ ಕಾಣದು ಶಾಸ್ತ್ರ ಬಲ್ಲಿತ್ತೆಂಬೆನೆ? ಶಬ್ದಕ್ರೀ ಪುರಾಣ ಬಲ್ಲಿತ್ತೆಂಬೆನೆ? ಪೂರ್ವಕ್ರಿ ಆಗಮ ಬಲ್ಲಿತ್ತೆಂಬೆನೆ ವಾಯು ಹೊಂದಿತ್ತು ಇದುಕಾರಣ ಕೂಡಲಸಂಗಮದೇವನೇ ನಿತ್ಯ ಉಳಿದ ದೈವವೆಲ್ಲ ಅನಿತ್ಯ ಕಾಣಿಭೋ"

ಈ ವಚನದಲ್ಲಿ ಬಸವಣ್ಣನವರು ವೇದದ ಹೆಸರನ್ನು ತೆಗೆದುಕೊಂಡು ಲಿಂಗದ ನಿಲುಕಡೆಯನ್ನು ಕಾಣಲಿಲ್ಲವೆಂದಿಷ್ಟೇ ಹೇಳಿ ಕೂಡಲಸಂಗನೇ ಸತ್ಯ ಅವನೇ ಶ್ರೇಷ್ಠ ಉಳಿದ ಹರಿ ಅಜಾದಿಗಳು ಅಸಿತ್ಯವೆಂದು ಸಾರಿದ್ದಾರೆ.

೧೫

"ಆದಿಪುರಾಣ ಅಸುರರಿಗೆ ಮಾರಿ, ವೇದಪುರಾಣ ಹೋತಿಂಗೆ ಮಾರಿ, ರಾಮಪುರಾಣ ರಕ್ಕಸರಿಗೆ ಮಾರಿ, ಭಾರತಪುರಾಣ ಗೋತ್ರಕ್ಕೆ ಮಾರಿ, ಇವೆಲ್ಲ ಪುರಾಣ ಕರ್ಮಕ್ಕೆ ಮೊದಲು ನಿಮ್ಮ ಪುರಾಣಕ್ಕೆ ಸರಿಯಿಲ್ಲ ಕೂಡಲಸಂಗಮದೇವಾ"

೧೬

"ನಿಮ್ಮ ವಚನವೆನ್ನ ಪುಣ್ಯವೆಂಬುದು ಹುಸಿಯಾಯಿತ್ತು ನೋಡಾ ಶಾಸ್ತ್ರದ ವಚನ ಹೋತಿಂಗೆ ಮಾರಿ ಎಂತು ನಂಬುವೆನಯ್ಯ? ನಾನು ಕೊಲ್ಲೆನು ನೇಣು ಕೊಂದಿತ್ತೆಂಬ ಸೊನೆಗಾರರನೇನೆಂಬೆನಯ್ಯ? ಕೂಡಲ ಸಂಗಮದೇವಾ"

೧೭

"ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು ಎಲಹೋತೇ ಅಳುಕಂಡಾ ವೇದವನೋದಿದವರ ಮುಂದೆ ಅಳುಕಂಡಾ ಶಾಸ್ತ್ರವ ಕೇಳಿದವರ ಮುಂದೆ ಅಳುಕಂಡಾ ನೀನತ್ತುದಕ್ಕೆ ತಕ್ಕುದನಾಡುವ ಕೂಡಲ ಸಂಗಮದೇವಾ"

೧೮

"ಹೊಲೆಯೊಳಗೆ ಹುಟ್ಟಿ ಕುಲವನರಸುವೆ ಎಲವೋ ಮಾತಂಗಿಯ ಮಗ ನೀನು ಸತ್ತುದನೆಳೆವ ನೆತ್ತಣ ಹೊಲೆಯ? ಹೋತು ತಂದು ನೀವು ಕೊಲುವಿರಿ ಶಾಸ್ತ್ರವೆಂಬುದು ಹೋತಿಂಗೆ ಮಾರಿ ವೇದವೆಂಬುದು ನಿಮಗೆ ತಿಳಿಯದು ನಮ್ಮ ಕೂಡಲಸಂಗಮದೇವನ ಶರಣರು ಕರ್ಮವಿರಹಿತರು ಶರಣ ಸನ್ನಿಹಿತರು ಅನುಪಮ ಚರಿತ್ರರು ಅವರಿಗೆ ತೋರಲು ಪ್ರತಿಯಿಲ್ಲವೋ"

೧೯

"ಇಟ್ಟಿಯ ಹಣ್ಣನರಿತಿಂದು ಸೃಷ್ಟಿತಿರುಗಿತೆಂಬಂತೆ ಮಟ್ಟಿಯನಿಟ್ಟ ದ್ವಿಜರ ಮಾತದೇಕೆ? ಹಗಲು ಕಾಣದ ಗೂಗೆ ಇರುಳಾಯಿತೆಂದರೆ ಜಗಕ್ಕೆ ಇರುಳಪ್ಪುದೇ? ಮರುಳೇ ಹೋಮದ ನೆವದಿಂದ ಹೋತನ ಕೊಂದು ತಿಂಬ ಅನಾಮಿಕರೊಡನಾಡಿ ಗೆಲುವುದೇನು ಕೂಡಲಸಂಗಮದೇವಾ"

೨೦

"ನರಜನ್ಮದಲ್ಲಿ ಹುಟ್ಟಿ ಲಿಂಗಮುಖವನರಿಯದೆ ಉದುಮದಸೊಕ್ಕಿ ತಲೆಗೇರಿತ್ತೆ? ಅಯ್ಯ 'ಜೀವಃಜೀವೇನ ಭಕ್ಷ್ಯತೆ' ಕರ್ಮ ಕರ್ಮ ವಲಿಪ್ಪೆಯಯ್ಯ? ಅಂದೊಮ್ಮೆ ದಕ್ಷನು ಹೋತನ ಕೊಂದಲ್ಲಿ ಘೋಳಿಡಲ

ತಂದಿಕ್ಕಹೇಳಿತ್ತೆ ವೇದಶಾಸ್ತ್ರಂಗಳ ಮೂರುತಿಗೊಂಡಲ್ಲಿ ಚತುರ್ವೇದಿಗಳಿ ಗೊಮ್ಮೆ ಅಕ್ಕಿತ್ತೆ ಅಯ್ಯ? ನಮ್ಮ ಕೂಡಲಸಂಗಮದೇವನನರಿಯದ ಕಾರಣ ನಾಯಕ ನರಕದಲ್ಲಿಕ್ಕಿತ್ತೆ ಅಯ್ಯ"

ಮೇಲೆ ಬರೆದ ಐದು ವಚನಗಳನ್ನು ಪರಿಶೀಲಿಸಿದರೆ,

"ವೇದಪುರಾಣ ಹೋತಿಂಗೆ ಮಾರಿ ಶಾಸ್ತ್ರದ ವಚನ ಹೋತಿಂಗೆ ಮಾರಿ ಎಲೆ ಹೋತೇ ವೇದವನೋದಿದವರ ಮುಂದೆ ಅಳುಕಂಡಾ ವೇದ ವೆಂಬುವದು ನಿಮಗೆ ತಿಳಿಯದು ಹೋಮದ ನೆವದಿಂದ ಹೋತನ್ನು ತಿನ್ನು ವವರು"

ಎಂಬುವ ವಾಕ್ಯಗಳು ಸಿಗುತ್ತವೆ. ಹೋಮದಲ್ಲಿ ಆಡು ಕುರಿ ಮೊದಲಾದವುಗಳನ್ನು ಕೊಂದು ತಿನ್ನತಕ್ಕವರನ್ನು ಬಹಳ ಹೀಯಾಳಿಸಿ ವೇದವೆಂಬುದೇ ಅವರಿಗೆ ಗೊತ್ತಿಲ್ಲ ವೆಂತಲೂ ಹೇಳಿರುತ್ತಾರೆ.

೨೧

"ಎನಿಸ ಓದಿದರೇನು? ಎನಿಸ ಕೇಳಿದರೇನು? ಚತುರ್ವೇದ ಪಾಠ ತೀಪ್ರವಾದರೇನು? ಲಿಂಗಾರ್ಚನೆ ಹೀನನಾದರೆ ಶಿವ ಶಿವ ಬ್ರಾಹ್ಮಣ ನೆಂಬೆನೆ? ಎನಲಾಗದು. 'ಜನ್ಮನಾ ಜಾಯತೇ ಶೂದ್ರಃ ಕ್ರಿಯಯಾ ದ್ವಿಜ ಉಚ್ಯತೆ ಶೃತೇನ ಶ್ರೋತ್ರಿಯಶ್ಚೈವ ಬ್ರಹ್ಮ ಜಾನಾತಿ ಬ್ರಾಹ್ಮಣಃ' ಎಂದು ದಾಗಿ ಬ್ರಹ್ಮನಾಸ್ತಿ ಸ್ವಪಚನರ ಧರ್ಮರೆಂಬುದಾಗಿ ಇದು ಕಾರಣ ಕೂಡಲ ಸಂಗಮದೇವಾ"

೨೨

"ಪ್ರಣವನುಚ್ಚರಿಸುವ ಅಪ್ರಮಾಣಿಕರೆಲ್ಲರು ಪ್ರಣವಮಂತ್ರಾರ್ಥವ ನೋದಿ ಮಂತ್ರಾರ್ಥವನರಿಯರು ಪ್ರಣವ–ಓಂ ನಮಶ್ಶಿವಾಯ ಪ್ರಣವ ಓಂ ನಮಶ್ಶಿವಾಯ ಪ್ರಣವ ಓಂ ನಮಶ್ಶಿವಾಯ"

ಎಂದುವು ಶೃತಿಗಳೆಲ್ಲ ಕೂಡಲಸಂಗಯ್ಯನನರಿಯದ ದ್ವಿಜರೆಲ್ಲ ಭ್ರಮಿತರು.

೨೩

"ವೇದವನೋದಿದರೇನು? ಶಾಸ್ತ್ರವ ಕೇಳಿದರೇನು? ಜಪವ ಮಾಡಿದರೇನು? ತಪವ ಮಾಡಿದರೇನು? ಏನು ಮಾಡಿದರೇನು? ನಮ್ಮ ಕೂಡಲಸಂಗಯ್ಯನ ಮನಮುಟ್ಟುದನ್ನಕ್ಕ?"

೨೪

"ನೀವು ಹಿರಿಯರೆಂಬಿರಿ ಕರ್ಮಿಗಳು ನೀವು ಕೇಳಿರಿ ನಿಮ್ಮ ವೇದ ಶಾಸ್ತ್ರಂಗಳು ಆರ ಹೊಗಳುತಿರ್ದವು? ಓಂ ದ್ಯಾವಾಭೂಮಿಜನಯನ್ ದೇವ ಏಕ ಏವದೇವೋ ನ ದ್ವಿತೀಯಃ" ನೆಂದು ಶೃತಿಗಳು ಸಾರುತಿರ್ದಾವೆ.

"ವರ್ಣಾನಾಂ ಬ್ರಾಹ್ಮಣೋ ಗುರುಃ ಎಂಬುದು ಹುಸಿ ವರ್ಣಾನಾಂ ಗುರು ನಮ್ಮ ಕೂಡಲಸಂಗನ ಶರಣರು"

ಈ ಮೂರು ವಚನಗಳ ಅರ್ಥವನ್ನು ನೋಡಿದರೆ ಕೂಡಲಸಂಗನ ಹೊರತು ಬೇರೆ ದೇವರಿಲ್ಲ; ಅವರನ್ನು ತಿಳಿಯುವದೇ ಸತ್ಯ ಸಿದ್ಧಾಂತವು; ವರ್ಣಗಳಿಗೆ ಬ್ರಾಹ್ಮಣ ಗುರು ಎಂಬುವದು ಹುಸಿ ವರ್ಣಗಳಿಗೆ ಕೂಡಲಸಂಗನ ಶರಣರೇ ಗುರುಗಳು. ಲೋಕದೊಳಗೆ ಲಿಂಗಧಾರಣ ಸಿದ್ಧಾಂತವೇ ಶ್ರೇಷ್ಠವಾದುದು. ಶಿವನೇ ಸರ್ವೋತ್ತಮನೆಂದು ಇವುಗಳ ತಾತ್ಪರ್ಯವಾಗಿರುತ್ತದೆ.

೨೫

"ನಿಜಭಾವ ಲಕ್ಷ್ಮಿ ಸರಸ್ವತಿಯೊಲಿದರೆ ಕುಲವನರಸಲದೇಕೆ? ಆ ದೇವನೊಲಿದ ಭಕ್ತಂಗೆ ಇನ್ನಾವ ಮಂತ್ರವದೇಕೆಯೋ? ಕಾಮಧೇನು ಮನೆಯಲಿರಲು ಬೇರೆ ಹಯನವನರಸಲದೇಕೆ? ಮೋಹವುಳ್ಳ ಠಾವಿನಲ್ಲಿ ಲಜ್ಜೆಯನು ಅರಸಲೇಕೆಯೋ ಮಹಾದಾಸಿ ಕೂಡಲಸಂಗಯ್ಯನೊಲಿದು ಮಾದರ ಚೆನ್ನಯ್ಯನ ಮನೆಯಲುಂಡ ವೇದವನೋದಿದವರು, ಲಿಂಗವ ನೊಲಿಸಿ ತೋರಿರೋ"

ಕೂಡಲಸಂಗನಂತಹ ದೇವರಿರಲು ಬೇರೆ ದೇವರನ್ನು ಏಕೆ ಅರಚುತ್ತೀರಿ? ಕಾಮಧೇನು ವಿದ್ದಾಗ್ಗೆ ಬೇರೆ ಆಕಳ ಹಂಗೇಕೆ? ಮಾದರ ಚೆನ್ನಗೆ ಶಿವನು ಒಲಿದು ಅವರ ಮನೆಯಲ್ಲಿ ಉಂಡನು. ವೇದಗಳನ್ನು ಓದಿದ ನೀವು ಲಿಂಗವನ್ನು ಒಲಿಸಿ ತೋರಿಸಿರಿ ಎಂದು ಬಸವಣ್ಣನವರು ಹೇಳಿರುತ್ತಾರೆ.

೨೬

"ಚತುರ್ವೇದಿಯಾದರೇನು? ಲಿಂಗವಿಲ್ಲದವನೇ ಹೊಲೆಯ ಶ್ವಪಚ ನಾದರೇನು? ಲಿಂಗವಿದ್ದವನೇ ವಾರಣಾಶಿ ಆತನ ನುಡಿಗಡಣೆವೇ ಲೇಸು, ಆತ ಜಗಕ್ಕೆ ಪಾವನ ಆತನ ಪ್ರಸಾದವೆನಗಮೃತಶೇವನೆ ನಮೇಪ್ರಿಯಶ್ಚತು ರ್ವೇದಿ ಮದ್ಭಕ್ತಃ ಶ್ವಪಚೋಪಿಸನ್ ತತ್ಪ್ರಸಾದಾತ್ತತೋಗ್ರಾಹ್ಯಃ ಸ ಚ ಪೂಜ್ಯೋ ಯಥಾಸ್ವಯಂ ಕೂಡಲಸಂಗಮದೇವನನರಿತು ಪೂಜಿಸಿದಾತ ಷಡುದರ್ಶನಕ್ಕಧಿಕ ಜಗಕ್ಕೆ ಪಾವನ ನೋಡಾ"

೨೭

"ಅಶ್ವಮೇಧಯಾಗವಂತಿರಲಿ ಅಜಪೆಯುದೇಶಸಮಾಧಿಯಂತಿರಲಿ ಹೋಮನೇಮ–ಗಾಯತ್ರಿಯ ಜಪವಂತಿರಲಿ ಜನಮೋಹನ ಮಂತ್ರ ವಂತಿರಲಿ ಕೂಡಲಸಂಗನ ಶರಣರ ನುಡಿಯ ಗಡಣೆ ಎಲ್ಲಕ್ಕಧಿಕ ನೋಡಾ"

೨೮

"ವೇದಶಾಸ್ತ್ರದವರ ಹಿರಿಯರೆನ್ನೆ ಮಾಯಾಭ್ರಾಂತಿ ಕವಿದ ಗೀತಜ್ಞರ ಹಿರಿಯರೆನ್ನೆ ಇವರು ಹಿರಿಯರುಗಳೇ? ಯಾಗನಟ್ಟುವಿಗೆ ಪ್ರಾಣರು. ಇವರಿಂದಧಿಕವ ಸಾಧಿಸುವರೇನು ಕಿರಿಯರೇ? ಇಂತು ವಿದ್ಯಾಗುಣ ಜ್ಞಾನ ಧರ್ಮ ವಿಚಾರ ಶೀಲಂಗಳ ನಮ್ಮ ಕೂಡಲಸಂಗಮದೇವನ ಶರಣರು ಸಾಧಿಸಿದ ಸಾಧನೆಯನೇ ಸಾಧಿಸುವುದು".

ಮೇಲಿನ ಮೂರು ವಚನಗಳಲ್ಲಿಯೂ ವೇದದ ವಿಷಯವನ್ನು ತೆಗೆದುಕೊಂಡು ಲಿಂಗ ವಿದ್ದವನೇ ಶ್ರೇಷ್ಠ; ಅವನು ಚತುರ್ವೇದಗಳನ್ನು ಓದಿದರೂ ಲಿಂಗವಿಲ್ಲದಿದ್ದರೆ ಶ್ರೇಷ್ಠ

ನಾಗಲಾರನು. ಅಶ್ವಮೇಧಯಾಗ, ಅಜಪಯಾಗ, ಹೋಮನೇಮ ಗಾಯತ್ರೀ ಜಪ ಗಳಿಗಿಂತಲೂ ಲಿಂಗಪೂಜೆಯೇ ಶ್ರೇಷ್ಠ. ತ್ರೈಲೋಕ್ಯದಲ್ಲಿ ಲಿಂಗಪೂಜಕನಿಗಿಂತಲೂ ಶ್ರೇಷ್ಠರಾರೂ ಇಲ್ಲವೆಂದು ಬಸವಣ್ಣನವರು ಅಭಿಪ್ರಾಯಪಟ್ಟಿರುತ್ತಾರೆ.

೨೯

"ವೇದಕ್ಕೆ ಒರೆಯುಕಟ್ಟುವೆನು, ಶಾಸ್ತ್ರಕ್ಕೆ ನಿಗಳವನಿಕ್ಕುವೆನು, ತರ್ಕದ ಬೆನ್ನಬಾರನೆತ್ತುವೆನು, ಆಗಮದ ಮೂಗ ಕೊಯ್ವೆ ನೋಡಯ್ಯ ಮಹಾದಾನಿ ಕೂಡಲಸಂಗಮದೇವ ಮಾದರ ಚೆನ್ನಯ್ಯನ ಮನೆಯ ಮಗ ನಾನಯ್ಯ"

ಈ ವಚನದಲ್ಲಿ ವೇದಕ್ಕೆ ಒರೆಯ ಕಟ್ಟುವೆನು ಎಂದು ಹೇಳಿರುವದನ್ನು ವಿಚಾರಿಸಬೇಕಾ ಗಿರುತ್ತದೆ. ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಯಾದಂಥ ಶಿವಶರಣರು ಗಳಲ್ಲಿ ಜಾತಿವಿಜಾತಿಯನುಂಟುಮಾಡದ ಹಾಗೆ ಬಂಧಿಸಿಬಿಡುವೆನು. ಇದರಂತೆಯೇ ಶಾಸ್ತ್ರ ಆಗಮ ತರ್ಕಗಳ ವಿಷಯವನ್ನೂ ಮಾಡುವೆನು. ಅಂದರೆ ಜಾತಿ ಭೇದಗಳಿಲ್ಲ ದಂತೆ ಶರಣರು ಆಚರಿಸತಕ್ಕದ್ದಾಗಿರುತ್ತದೆ. ಇದೇ ನಿಜವಾದ ಧರ್ಮ. ಕದಾಚಿತ್ ವೇದಾದಿಗಳು ಜಾತಿಗಳುಂಟೆಂದು ಹೇಳಿದರೆ ಇಲ್ಲವೆಂದು ಅವುಗಳ ಗಂಟಲ ಕಟ್ಟಸುವೆನು.

೩೦

"ಈಶ್ವರಸದ್ಭಾವೇ ಕಿಂಪ್ರಮಾಣಮೆಂಬ ಮೀಮಾಂಸಕನ ಮೂಗಿನ ಕೊನೆಯನ್ನು 'ವಿಶ್ವತಶ್ಚಕ್ಷು ವಿಶ್ವತೋಮುಖ ವಿಶ್ವತೋಬಾಹುರುತವಿಶ್ವತಃ ಪಾತ್ ಸಂಬಾಹುಭ್ಯಾಂ ದಮತಿ ಸಂಪತತ್ತ್ರೈವ ದ್ಯಾವಾಭೂಮೀ ಜನಯನ್ ದೇವ ಏಕಃ' ಎಂಬ ಸುರಗಿಯಲಿ ಅರೆದು ವೈಶೇಷಿಕ ಎಂಬ ಇಟ್ಟಿಗೆಯಲೊರಸಿ ಕೂಡಲಸಂಗಯ್ಯನೆಂಬ ಕನ್ನಡಿಯ ತೋರುವೆನು"

ಇಲ್ಲಿ ದೇವರಿದ್ದಾನೆಂಬುವದಕ್ಕೆ ಬಸವಣ್ಣನವರು ವೇದದ ಪ್ರಮಾಣವನ್ನು ತೆಗೆದು ಕೊಂಡಿರುತ್ತಾರೆ.

೩೧

"ವೇದನಡನಡುಗಿತ್ತು ಶಾಸ್ತ್ರವಗಲಿ ಕೆಲಕ್ಕೆ ಸಾರಿದ್ದಿತಯ್ಯ ತರ್ಕ ತರ್ಕಿಸಲರಿಯದೆ ಮೂಗುವಟ್ಟಿತ್ತಿದ್ದಿತಯ್ಯ ಆಗಮ ಹೊರತೊಲಗಿ ಅಗಲಿದ್ದಿತಯ್ಯ ನಮ್ಮ ಕೂಡಲಸಂಗಯ್ಯನು ಚೆನ್ನಯ್ಯನ ಮನೆಯಲುಂಡ ಕಾರಣ"

ವೇದಾದಿಗಳು ನಡುಗಿಹೋದವು. ಶಿವಶರಣರಲ್ಲಿ ನಾವು ಜಾತಿಭೇದವನ್ನು ಮಾಡಿದರೆ ಶಿವನು ನಮಗೆ ಏನು ಶಿಕ್ಷೆಯನ್ನು ಮಾಡುವನೋ ಎಂದು ವೇದಾದಿಗಳು ನಡುಗುತ್ತ ಏನನ್ನೂ ಅನ್ನಲಾರದೆ ಹೋದವು.

೩೨

"ಸುನಾದ ಬಿಂದುಪ್ರಣವ ಮಂತ್ರ ಅಗ್ರದ ಕೊನೆಯಲ್ಲೈದುವುದೇ ಸೋಹಂ ಸೋಹಂ ಎಂದೆನುತಿದ್ದಿತು. ಕೋಹಂ ಎಂಬುದ ಕಳೆದು ಬ್ರಹ್ಮ

ರಂಧ್ರದೊಳಗೆ 'ಯತೋವಾಚೋನಿವರ್ತಂತೇ ಅಪ್ರಾಪ್ಯ ಮನಸಾಸಹ ಆನಂದಂ ಬ್ರಹ್ಮಣೋ ವಿದ್ವಾನ್‌ನಭಿಭೇತಿ ಕದಾಚನ' ಇಂತೆಂದುದಾಗಿ ಅಗಮ್ಯ ಕೂಡಲಸಂಗಮದೇವನಲ್ಲದೆ ಮತ್ತಾರೂ ಇಲ್ಲ"

ಈ ವಚನದಲ್ಲಿ ವೇದಪ್ರಾಮಾಣ್ಯವನ್ನು ಅಂಗೀಕರಿಸಿರುತ್ತಾರೆ.

೩೩

"ಲೋಹ ಪರುಷವ ಮುಟ್ಟುವುದಲ್ಲದೆ ಪರುಷ ಪರುಷವ ಮುಟ್ಟುವದೇ ಅಯ್ಯ ಅಂಗವಿಡಿದಂಗೆ ಪ್ರಸಾದವಲ್ಲದೆ ಲಿಂಗವಿಡಿಯದಂಗೆ ಪ್ರಸಾದವೆಲ್ಲಿಯದೋ ಅಣೋರಣೀಯಾನ್ ಮಹತೋ ಮಹೀಯಾನ್ ಹಿರಿದಕ್ಕೆ ಹಿರಿದು ಕಿರಿದಕ್ಕೆ ಕಿರಿದು ವಾಙ್ಮನಕ್ಕಗೋಚರ ಕೂಡಲಸಂಗಮದೇವ ಸ್ವರೂಪು ಪ್ರಸಾದ ನಿರೂಪು ಲಿಂಗೈಕ್ಯ" ಇಲ್ಲಿಯೂ ವೇದದ ಪ್ರಮಾಣವಿರುತ್ತದೆ.

೩೪

"ಭೂತೋಯ ಪಾವಕಸಮೀರಣ ಅಂಬರಾದಿಗಳೆಲ್ಲ ಆದಿಯಾಧಾರದ ಪರಮಾತ್ಮಲಿಂಗದಲ್ಲಿ ಆದಿಮಧ್ಯಾವಸಾನವನರಿಯದ ಅಗಮ್ಯ ವೇದಾದಿ ಸಕಲ ಶಾಸ್ತ್ರ ಪ್ರಮಾಣರು ಅದನಂತಿಂತೆಂದುಪಮಿಸಲಿಲ್ಲಾ ಮಹಾಂತ ಕೂಡಲಸಂಗಮದೇವ"

೩೫

"ವೇದ ವೇಧಿಸಲರಿಯದೆ ಅಭೇದ್ಯಲಿಂಗವೆಂದು ನಡುನಡುಗಿತ್ತು ಶಾಸ್ತ್ರ ಸಾಧಿಸಲರಿಯದೆ ಅಸಾಧ್ಯ ಲಿಂಗವೆಂದು ಸಾರುತ್ತಿದಾವೆ. ತರ್ಕ ತರ್ಕಿಸಲರಿಯದೆ ಅತರ್ಕ್ಯಲಿಂಗವೆಂದು ಮನಂಗೊಳ್ಳವು. ಆಗಮ ಅಗಮ್ಯ ಲಿಂಗವೆಂದು ಗಮಿಸಲರಿಯದೆ ಹೋದುವು ನರರೂ ಸುರರೂ ಅಂತುವ ಕಾಣರು ನಮ್ಮ ಕೂಡಲಸಂಗಮದೇವನ ಪ್ರಮಾಣವ ಶರಣಬಲ್ಲ"

೩೬

"ವೇದಾತೀತ ಷಡ್ವರ್ಣರಹಿತ ಅಷ್ಟತ್ರಿಂಶತ್ ಕಳಾತೀತ ವ್ಯೋಮಾತೀತ ಕೂಡಲಸಂಗಮದೇವಾ"

೩೭

"ವಿಶ್ವಜಿತನು, ಧನುರ್ಜಿತನು, ಸರ್ವಜಿತನು, ಸ್ವರ್ಜಿತನು, ಸೂತ್ರಾಮರ್ಜಿತನು, ನೃಜಿತನು, ಉರ್ವರಾಜಿತನು, ಅಶ್ವಜಿತನು, ಗೋಜಿತನು, ಸುಸಂವೇದ್ಯನು, ವೇದನಾದಾತೀತನು, ತುರೀಯ ಪರಮಾನಂದನು, ನಿರವಯ ಸೂರ್ಯಕೋಟಿಪ್ರಭೆಯ ಬೆಳಗಿನ ಸಹಸ್ರಕಿರಣದ ಅಗ್ರಪಟಲದ ಬೆಳಗು ಕೂಡಲಸಂಗಯ್ಯನು"

೩೮

"ಸಹಸ್ರಶೀರ್ಷನಾದಿ ಪುರುಷನು ವೇದಪುರುಷನೊಬ್ಬ ಪುರುಷನು ಜ್ಯೋತಿಪುರುಷನೊಬ್ಬ ಪುರುಷನು ತ್ರಿಪಾದೂರ್ಧ್ವಪುರುಷನೊಬ್ಬ ಪುರುಷನು

ಉದನ್ಮುಖನೊಬ್ಬ ಪುರುಷನು ಉದಯಪುರುಷನೊಬ್ಬ ಪುರುಷನು ವಿರಾಟ
ಜನನನೊಬ್ಬ ಪುರುಷನು ವಿರಾಜಪುರುಷನೊಬ್ಬನು ಆದಿಪುರುಷನೊಬ್ಬ
ಪುರುಷನು ವಿಯತ್ಪುರುಷನೊಬ್ಬ ಪುರುಷನು ತದ್ವಿಯತ್ಪುರುಷಾತ್ ಪುರುಷ
ರಿಲ್ಲದ ಪ್ರಭೆಯ ನೋಡಿರೇ ವೇದನಾದಾತೀತತುರೀಯ ಪರಪೂನಂದ
ನಿರವಯ ಷಟ್‌ತ್ರಿಂಶತ್ ಪ್ರಭಾಪಟಲದ ಪ್ರಭೆಯ ಬೆಳಗಿದೆ ನೋಡಿರೆ
ಬೆಳಗಿನೊಳಗಣ ಮಹಾಬೆಳಗಿನ ಬೆಳಗ ಕೂಡಲಸಂಗಮದೇವಯ್ಯ''

ಮೊದಲಿನ ವಚನದಲ್ಲಿ ಆದಿಗೆ ಆಧಾರವಾಗಿರುವ ಪರಮಾತ್ಮಲಿಂಗದಲ್ಲಿ ಪಂಚಭೂತಗಳು ಅಡಗಿರುತ್ತವೆ. ಶಿವಲಿಂಗದ ಆದಿಮಧ್ಯಾಂತಗಳನ್ನು ಅರಿಯದ ವೇದಾದಿ ಸಕಲಶಾಸ್ತ್ರಗಳು ಶಿವಲಿಂಗವು ಹೀಗೆಯೇ ಇರುತ್ತದೆಂದು ಹೇಳಲಸಮರ್ಥವಾದವುಗಳಾಗಿರುತ್ತವೆ. ಎರಡನೆಯ ವಚನದಲ್ಲಿ ವೇದವು ಲಿಂಗದ ವರ್ಣನೆಯನ್ನು ಮಾಡುವದು ಅಸಾಧ್ಯವೆಂದು ತಿಳಿದು ನಡನಡುಗಿತ್ತು. ಇಂತಹ ಲಿಂಗದ ವರ್ಣನೆಯನ್ನು ಮಾಡುವದು ನಮ್ಮಿಂದ ಶಕ್ಯವಿಲ್ಲೆಂದು ವೇದಶಾಸ್ತ್ರ ಆಗಮಾದಿಗಳೆಲ್ಲ ಲಿಂಗದ ಮಹಿಮೆಯನ್ನು ತಿಳಿಯದೆ ಹೋದವು.

ಮೂರನೆಯ ವಚನವು ಕೂಡಲಸಂಗಮನು ವೇದಾತೀತನೆಂದು ಮಾತ್ರ ಹೇಳಲಾಗಿದೆ.

ನಾಲ್ಕನೆಯ ವಚನದಲ್ಲಿ ಲಿಂಗದ ಮಹಿಮೆಯು ಬಹಳ ಚೆನ್ನಾಗಿ ವರ್ಣಿಸಲ್ಪಟ್ಟಿರುತ್ತದೆ. ಕಡೆಯ ವಚನದಲ್ಲಿಯಾದರೂ ಕೂಡಲಸಂಗನ ರೂಪವನ್ನು ಚೆನ್ನಾಗಿ ಚಿತ್ರಿಸಲಾಗಿದೆ.

ಇಲ್ಲಿಯವರೆಗೆ ಶ್ರೀ ಬಸವಣ್ಣನವರು ೩೭ ವಚನದಲ್ಲಿ ವೇದಗಳ ಹೆಸರನ್ನು ಒಂದಿಲ್ಲೊಂದು ರೀತಿಯಿಂದ ತಂದಿರುವದನ್ನೂ ತೋರಿಸಿರುತ್ತೇವೆ.

ಇಲ್ಲಿ ವೇದಗಳ ಬಗ್ಗೆ ಬಸವಣ್ಣನವರ ವಚನಗಳನ್ನು ಮೂರು ರೀತಿಯಿಂದ ವಿಂಗಡಿಸಬಹುದಾಗಿದೆ. ಮೊದಲನೆಯ ವರ್ಗದ ವಚನಗಳಲ್ಲಿ ಬಸವಣ್ಣನವರು ದೇವರ ಸ್ವರೂಪವನ್ನು ಹೇಳುವಾಗ ಕೇವಲ ವೇದ ಪ್ರಮಾಣವನ್ನು ತೆಗೆದುಕೊಂಡಿರುತ್ತಾರೆ. ಎರಡನೆಯ ವರ್ಗದಲ್ಲಿ ಹಿಂಸಾವಿಷಯಕ ವೇದವನ್ನು ಸಂಪೂರ್ಣವಾಗಿ ಖಂಡಿಸಿರುತ್ತಾರೆ. ಮೂರನೆಯ ವರ್ಗದ ವಚನಗಳಲ್ಲಿ ವೇದದ ಹೆಸರನ್ನು ತೆಗೆದುಕೊಂಡು ವೇದಗಳಿಗೆ ಲಿಂಗದ ಸ್ವರೂಪವು ತಿಳಿದಿಲ್ಲವೆಂದು ಹೇಳುತ್ತ—''ಚಕಿತಮಭಿಧತ್ತೇ ಶೃತಿರಪಿ'' ಎಂಬುವ ಮಹಿಮ್ನದ ವಾಕ್ಯವನ್ನು ಎತ್ತಿಹಿಡಿದಿರುತ್ತಾರೆ.

ಕೆಲವು ವಚನಗಳಲ್ಲಿ— ಯಜ್ಞದೊಳಗೆ ಆಡು ಕುರಿ ಮೊದಲಾದ ಪ್ರಾಣಿಗಳನ್ನು ಕೊಲ್ಲತಕ್ಕವರಿಗೆ ಅನಾಮಿಕರೆಂದು ಕರೆದಿದ್ದಾರೆ. ವೇದವೆಂಬುವದು ನಿಮಗೆ ತಿಳಿದೇ ಇಲ್ಲವೆಂತಲೂ ಹೇಳಿರುತ್ತಾರೆ. ಈ ಮಾತು ವಿಚಾರಣೀಯವಾಗಿರುತ್ತದೆ. ಬಸವಣ್ಣನವರ ಕಾಲದಲ್ಲಿ ಯಜ್ಞದ ನೆವದಿಂದ ಸಹಿಸಲಸಾಧ್ಯವಾದ ಹಿಂಸೆಯು ಆಗುತ್ತಿದ್ದುದನ್ನು ಕಂಡು ಅವರ ಮನಸ್ಸು ಬಹಳ ದುಃಖಿತವಾಗಿರಬೇಕು. ಆದ್ದರಿಂದಲೇ ಅವರು ಹಾಗೆ ಖಂಡಿಸಿದ್ದುದು ತಿಳಿದುಬರುತ್ತಲಿದೆ. ಈಗಿನ ಕಾಲದಲ್ಲಿ ಬಹಳ ಜನಗಳು ಯಜ್ಞದಲ್ಲಿ ಹಿಂಸೆಯು ಪಾಪಕೃತ್ಯವೆಂದು ತಿಳಿದು ಹಿಟ್ಟಿನ ಪಶುವನ್ನು ಮಾಡಿ ಯಜ್ಞಯಾಗಾದಿಗಳನ್ನು ಸಮಾಪ್ತಿಗೊಳಿಸುತ್ತಾರೆ. ಇದು ಬಸವಣ್ಣನವರ ನೈತಿಕ ವಿಜಯವೇ ಸರಿ.

ಹೀಗೆ ಬಸವಣ್ಣನವರ ಕಾಲಕ್ಕೆ ಆಗಿದ್ದರೆ ಅವರು ಹಿರಿಹಿರಿ ಹಿಗ್ಗುತ್ತಿದ್ದರೆನ್ನುವದರಲ್ಲಿ ಸಂಶಯವಿಲ್ಲ. ಪ್ರಾಣಿವಧೆಯ ಬಗ್ಗೆ ಅವರು ಖಂಡಿಸುವ ಪ್ರಸಂಗವೇ ಬರುತ್ತಿರಲಿಲ್ಲ. ಕೆಲವು ಕಾಲ ಹೋದಮೇಲೆ ಜನಗಳ ಆಚಾರ ವಿಚಾರಗಳಲ್ಲಿ ಪರಿವರ್ತನೆಯಾಗಿ ಮೂಲ ಧಾರ್ಮಿಕ ಗ್ರಂಥಗಳಲ್ಲಿರತಕ್ಕ ವಿಷಯಗಳಲ್ಲಿ ವ್ಯತ್ಯಾಸವಾಗುವದು ಸಹಜವೂ, ಸ್ವಾಭಾವಿಕವೂ ಆಗಿರುತ್ತದೆ. ಜನಗಳು ದಾರಿತಪ್ಪಿ ನಡೆಯುವ ಪ್ರಸಂಗವು ಉತ್ಕಟಾವಸ್ಥೆಯನ್ನು ಹೊಂದಿದಕಾಲಕ್ಕೆ ದೊಡ್ಡವರ ಉದಯವಾಗುವದು ಸೃಷ್ಟಿಯ ನಿಯಮಕ್ಕೆ ಸರಿಯಾಗಿರುತ್ತದೆ. ಶ್ರೀ ದಯಾನಂದ ಸರಸ್ವತಿಯಂಥವರು ವೇದದಲ್ಲಿ ಹಿಂಸೆಗೆ ಆಸ್ಪದವಿಲ್ಲ, ಆ ಮಂತ್ರಗಳ ಅರ್ಥವು ಹಿಂಸೆಯನ್ನು ಹೇಳುವದಿಲ್ಲವೆಂಬುವದನ್ನು ಬಸವಣ್ಣನವರಿಗೆ ಮನಗಾಣಿಸಿಕೊಟ್ಟಿದ್ದರೆ ವಿಷಯವೇ ಬೇರೆಯಾಗುತ್ತಿತ್ತು. ಆದರೆ ಆ ಕಾಲದಲ್ಲಿ ಸನಾತನಿಗಳೆಂದು ಹೇಳಿಸಿಕೊಳ್ಳುವ ಕರ್ಮಠರು ಪ್ರಾಣಿಗಳ ವಧೆ ಆಗದೆ ಯಜ್ಞವು ಪೂರ್ತಿಯಾಗಲಾರದೆಂದು ವಾದವನ್ನು ಹೂಡುತ್ತಿದ್ದುದೇ ಇದಕ್ಕೆ ಕಾರಣವಾಗಿರುತ್ತದೆ. ಆ ವಿಚಾರಗಳು ಬಸವಣ್ಣನವರನ್ನು ಕೆರಳಿಸಿದವೆಂದು ಧಾರಾಳವಾಗಿ ಹೇಳಬಹುದಾಗಿದೆ.

ಶ್ರೀ ಬಸವಣ್ಣನವರು ವೇದದ ಹೆಸರನ್ನು ತೆಗೆದುಕೊಂಡಿರುವದು ಜಾತಿಯ ವಾದದಲ್ಲಿ. ಗುರುಕರುಣದಿಂದ ಷಡಧ್ವಶೋಧನಪೂರ್ವಕ ಲಿಂಗಧಾರಣವಾದ ಮೇಲೆ ಅವನಿಗೆ ಪೂರ್ವಜಾತಿಯು ಅಳಿದುಹೋಗುವದು. ಇಂತಹ ಶಿವಭಕ್ತರಲ್ಲಿ ಜಾತಿಭೇದಗಳಿಲ್ಲವೆಂದು ಬಸವಣ್ಣನವರ ಅಭಿಪ್ರಾಯವಾಗಿರುತ್ತದೆ. ಈ ವಿಷಯದಲ್ಲಿ ಬಸವಣ್ಣನವರ ನೂರಾರು ವಚನಗಳಿರುತ್ತವೆ. ಈ ಗ್ರಂಥದ ಬೇರೆ ಬೇರೆ ಪ್ರಕರಣಗಳಲ್ಲಿ ಒಂದಿಲ್ಲೊಂದು ರೀತಿಯಿಂದ ಬಂದಿರುತ್ತವೆ. ಆದ್ದರಿಂದ ಅವುಗಳನ್ನು ಇಲ್ಲಿ ಹೇಳಿರುವದಿಲ್ಲ.

ಸೂಕ್ಷ್ಮಾಗಮ, ಪಾರಮೇಶ್ವರಾಗಮ, ವಾತುಲಾಗಮ, ವೀರಾಗಮಗಳೆಲ್ಲ ಶಿವಭಕ್ತರಲ್ಲಿ ಜಾತಿಭೇದಗಳಿಲ್ಲವೆಂಬುವದನ್ನು ಬಹಳ ಚೆನ್ನಾಗಿ ವರ್ಣಿಸಿರುತ್ತವೆ. ಈ ವಿಷಯದಲ್ಲಿ ಮೂಲವೇದ ಮತ್ತು ಆಗಮತತ್ವಗಳಂತೆಯೇ ಬಸವಣ್ಣನವರ ತತ್ವವಿರುತ್ತದೆ. ಇದು ವೀರಶೈವ ಧರ್ಮದಲ್ಲಿ ಪ್ರಾಮುಖ್ಯವಾಗಿರುವದಲ್ಲದೆ ವೀರಶೈವ ಧರ್ಮದ ವಿಶಾಲ ಹೃದಯವನ್ನು ತೋರಿಸತಕ್ಕದ್ದಾಗಿರುತ್ತದೆ. ಪಂಡಿತ ಪಾಮರರಿಗೆಲ್ಲ ತಿಳಿಯುವಂತೆ ಲಿಂಗತತ್ವವನ್ನು ಬೋಧಿಸಿ ಸಮಾನತೆಯನ್ನು ಸಾಧಿಸಿ ಜಾತಿಯ ಮೇಲು ಕೀಳೆಂಬುವ ಕೊಳಚೆಯನ್ನು ತೆಗೆದುಹಾಕುವ ಕಾರ್ಯದಲ್ಲಿ, ಲೋಕೈಕವೀರರಂತೆ ಅಸಮ ಸಾಹಸಮಾಡಿದವರು ಬಸವಣ್ಣನವರು.

ಇಲ್ಲಿ ಒಂದು ವಿಷಯವನ್ನು ವಾಚಕರ ಗಮನಕ್ಕೆ ತರಬೇಕಾಗಿರುತ್ತದೆ. ಮೂಲವೇದಗಳಲ್ಲಿ ಎಲ್ಲಿಯೂ ಜಾತಿಭೇದವು ಕಂಡುಬರುವದಿಲ್ಲ. ಟೀಕಾತ್ಮಕ ಗ್ರಂಥಕಾರರು ಜಾತಿಯ ವಾದವನ್ನು ಎತ್ತಿ ಹಿಡಿದಿರುತ್ತಾರೆ. ಹಾಗಾದರೆ ವರ್ಣಗಳು ವೇದಗಳಲ್ಲಿ ಹೇಳಿಲ್ಲವೇ? ಎಂಬುವ ಪ್ರಶ್ನೆಯು ಮುಂದೆ ಬಂದು ನಿಲ್ಲುತ್ತದೆ. ವೇದಗಳಲ್ಲಿ ವರ್ಣಗಳನ್ನು ಹೇಳಿದಾಗ್ಯೂ ಅವು ಗುಣದಿಂದ ಇರತಕ್ಕವುಗಳಾಗಿರುತ್ತವಲ್ಲದೆ ಜಾತಿಯಿಂದ ಇರುವದಿಲ್ಲ. ಹೀಗೆ ಗುಣಪ್ರಾಧಾನ್ಯಗಳಾದ ವರ್ಣಗಳು ಕಾಲಕ್ರಮದಿಂದ ಜಾತಿಭೇದಗಳಾಗಿ ಮಾರ್ಪಾಟನ್ನು ಹೊಂದಿರುತ್ತವೆ. ಹುಟ್ಟಿದ ಕೂಡಲೇ ಇವನು ಶ್ರೇಷ್ಠ, ಇವನು ಕನಿಷ್ಠನೆಂದು ಹೇಳುವದು ಯಾರಿಗೂ ಶಕ್ಯವಿಲ್ಲ. ದೇವರಿಂದ ಬಂದ ಗ್ರಂಥಗಳೆಂದು

ಹೀಗೆ ಉಚ್ಚ–ನೀಚ ಕಲ್ಪನೆಗಳನ್ನು ಮಾಡಿ ಕೆಲವರು ತಾವು ಎಂತಹ ನೀಚಕೃತ್ಯಗಳನ್ನು ಮಾಡುತ್ತಿದ್ದರೂ ಶ್ರೇಷ್ಠರೆಂದು ಹೇಳಿಕೊಳ್ಳುವರು. ಮತ್ತು ವೇದಗಳನ್ನು ತೆಕ್ಕೆ ಬಿದ್ದು ಸಂರಕ್ಷಣೆಮಾಡಿಕೊಳ್ಳುವರು. ಇದು ಶಾಸ್ತ್ರದ ಕೊಲೆಯಲ್ಲದೆ ಬೇರೆ ಏನೂ ಇರುವದಿಲ್ಲ. ಹೀಗೆ ಮೇಲು–ಕೀಳುಗಳನ್ನು ಯಾವ ಗ್ರಂಥಗಳೇ ಹೇಳಲಿ ಬಸವಣ್ಣನವರು ಅಂತಹ ಗ್ರಂಥಗಳಿಗೆ ಸ್ವಲ್ಪಾದರೂ ಬೆಲೆ ಕೊಟ್ಟಿರುವದಿಲ್ಲ.

ಶ್ರೀ ಬಸವಣ್ಣನವರು ವೇದಾಗಮೋಪನಿಷತ್ತುಗಳಲ್ಲಿ ಉತ್ಕೃಷ್ಟಗಳಾದ ಕೆಲವು ವಿಷಯಗಳನ್ನು ಆಯ್ದುಕೊಂಡು ಸುಂದರವಾದ ಮತ್ತು ನಿರಂತರ ಜೀವಂತವಾಗಿರುವ ಸಮಾಜವನ್ನುದ್ಧರಿಸಿದರು. ಲೋಕದೊಳಗೆ ಲಿಂಗದೇವನೇ ಶ್ರೇಷ್ಠನು. ಲಿಂಗದೇವರ ಹೊರತು ಅನ್ಯದೇವರೆಂಬುವದು ಹುಸಿಯಾದ ಮಾತು ಎಂಬುವ ಸಿದ್ಧಾಂತಕ್ಕೆ ಬಂದರು. ಆದ್ದರಿಂದ ಆಗಮುಗಳಲ್ಲಿಯೂ ಕೂಡ "ನ ವೀರಶೈವ ಮತ ಸದೃಶಮಸ್ತಿ ಜಗತ್ರಯೇ" ಎಂದು ಹೇಳಲಾಗಿದೆ.

ವೇದಮಂತ್ರಗಳಿಗೆ ಒಬ್ಬೊಬ್ಬರು ಒಂದೊಂದು ತರಹದ ಅರ್ಥವನ್ನು ಮಾಡಿರುವರೆಂದು ಈ ಮೊದಲೇ ಹೇಳಿರುತ್ತೇವೆ. ಹೀಗೆ ಇರುವದರಿಂದ ವೇದದ ಆಚರಣೆಯು ಹೀಗೆಯೇ ಇರುತ್ತದೆಂದು ಯಾರಿಗೂ ಹೇಳಲು ಶಕ್ಯವಿರುವದಿಲ್ಲ.

ಯಜುರ್ವೇದದಲ್ಲಿ ಸಂಪೂರ್ಣವಾಗಿ ಯಜ್ಞಭಾಗವೇ ಹೆಚ್ಚಾಗಿರುವದು. ಹಿಂಸಾಯುಕ್ತಗಳಾದ ಯಜ್ಞಗಳು ತ್ಯಾಜ್ಯವೆಂದು ಬಸವಣ್ಣನವರು ಹೇಳಿದರೂ ವೀರಶೈವರಲ್ಲಿಯೂ ಪಂಚಯಜ್ಞಗಳುಂಟೆಂದು ಆಗಮುಗಳಲ್ಲಿ ಹೇಳಲಾಗಿದೆ. ಅವುಗಳಲ್ಲಿ ಜಪಯಜ್ಞವೇ ಶ್ರೇಷ್ಠವಾದುದಾಗಿದೆ. ಯಜ್ಞಶಬ್ದವು—"ಯಜ ದೇವಪೂಜಾ ಸಂಗತಿಕರಣ ದಾನೇಷು", ಯಜ ಧಾತುವಿಗೆ ಸಿದ್ಧಾಂತ ಕೌಮುದಿಯ ರೀತಿಯಿಂದ ಮೂರು ಅರ್ಥಗಳಿರುತ್ತವೆ. ದೇವಪೂಜಾ, ಸಂಗತಿಕರಣ, ದಾನ ಈ ಮೂರು ಅರ್ಥಗಳನ್ನು ಬಸವಾದಿ ಪ್ರಮಥರೂ ಆಗಮುಗಳೂ ಒಪ್ಪುತ್ತವೆ. ಇದರಲ್ಲಿ ಹಿಂಸಾರ್ಥವು ಹೊರಡಲಾರದು. ಟೀಕಾತ್ಮಕ ಗ್ರಂಥಗಳಲ್ಲಿ ಜಗ್ಗಿ ಜಗ್ಗಿ ಅರ್ಥವನ್ನು ಮಾಡಿ ವೇದಮಂತ್ರಗಳನ್ನು ಅನರ್ಥಕ್ಕೆ ಗುರಿಮಾಡಿರುತ್ತಾರೆ.

ಕೆಲವರು ಬಸವಣ್ಣನವರು ವೇದವಿರುದ್ಧವಾದ ಒಂದು ಧರ್ಮವನ್ನೇ ಪ್ರಚಾರಗೊಳಿಸಿದರೆಂದು ಹೇಳುವದುಂಟು. ಮೇಲಿನ ವಿವೇಚನೆಗಳಿಂದ ಬಸವಣ್ಣನವರು ವೇದವಿರುದ್ಧವಾದ ಧರ್ಮಪ್ರಚಾರಮಾಡದೆ ಹಿಂಸೆಯೂ, ವರ್ಣಗಳೂ ಇಲ್ಲದ ಪವಿತ್ರತಮವಾದ ಒಂದು ಮತವನ್ನು ಪ್ರಚಂಡ ಪ್ರಚಾರವಾಗುವಂತೆ ಮಾಡಿದರು. ಹಿಂಸೆಗೆ ಆಸ್ಪದಕೊಡದೆ ದಯೆಗೆ ಸ್ಥಾನವನ್ನು ಕೊಟ್ಟರು. ಬಸವಣ್ಣನವರು ಮಾಡಿದ ಮಹತ್ಕಾರ್ಯಗಳಲ್ಲಿ ಇದು ಮಿಗಿಲಾದುದಾಗಿರುತ್ತದೆ.

ಮತ್ತೆ ಹಲವರು—ಬಸವಣ್ಣನವರು ದ್ರಾವಿಡ ಧರ್ಮವನ್ನು ಎತ್ತಿ ಹಿಡಿದಿರುತ್ತಾರೆ. ಶಿವನು ಅನಾರ್ಯದೇವನು ಅಂದಮೇಲೆ ಲಿಂಗವಂತಧರ್ಮವು ದ್ರಾವಿಡ ಪಂಥಕ್ಕೆ ಸೇರಿದುದಾಗಿರುತ್ತದೆ. ವೇದಧರ್ಮವನ್ನು ಅನುಸರಿಸಿದರೆ ವರ್ಣಧರ್ಮವನ್ನು ಹಿಡಿಯಬೇಕಾಗುತ್ತದೆ. ಇವೆಲ್ಲ ಕಾರಣಗಳ ಮೂಲಕ ವೀರಶೈವ ಧರ್ಮವು ಸ್ವತಂತ್ರವಾದುದು. ಹಿಂದೂ ಧರ್ಮಕ್ಕೂ ವೀರಶೈವ ಧರ್ಮಕ್ಕೂ ಯಾವ ಸಂಬಂಧವೂ ಇಲ್ಲ. ವರ್ಣಸಂಕೋಲೆಯನ್ನು ಬಸವಣ್ಣನವರು ಪುಡಿ ಪುಡಿ ಮಾಡಿಬಿಟ್ಟಿರುತ್ತಾರೆ, ಆದ್ದರಿಂದ

ವೀರಶೈವರು ಹಿಂದುಗಳೇ ಅಲ್ಲವೆಂಬುವದೇ ಇವರ ವಾದದ ತಳಹದಿಯಾಗಿದೆ. ಇದನ್ನು ಇಲ್ಲಿ ವಿಚಾರಿಸಬೇಕಾಗಿರುತ್ತದೆ. ಬಸವಣ್ಣನವರು ವರ್ಣೋಚ್ಚಾಟನೆಮಾಡಿರುವದು ನಿಜವಿದ್ದರೂ ಆಗಮ ಧರ್ಮಕ್ಕೆ ಸರಿಯಾಗಿ ಅವರ ಧರ್ಮವು ಇರುತ್ತದೆ. ಆಗಮಗಳಲ್ಲಿಯೂ ವರ್ಣಗಳ ಖಂಡನೆ ಅನೇಕ ಕಡೆ ಸಿಗುತ್ತದೆ. ಆಗಮಗಳು ವೀರಶೈವ ತತ್ವವನ್ನು ಬೋಧಿಸುವಾಗ—

**ಪಾರಮೇಶ್ವರ ತಂತ್ರ—ಪುಟ ೧೫೬**

ನಬ್ರಹ್ಮವೃತ್ತ್ಯಾ ನಕ್ಷತ್ರವೃತ್ತ್ಯಾ ನೋವೈಶ್ಯವೃತ್ತಿತಃ ।
ನಶೂದ್ರವೃತ್ತ್ಯಾ ಜೀವೇತ ಯದಿಲಿಂಗೇ ಹತೇ ಸುಖಂ ॥
ನವೈ ಪ್ರತಿಗ್ರಹೇದ್ದಾನಂ ನ ಋಣಂ ನಾತಿಸಂಗ್ರಹಂ ।
ಯದ್ಯಸ್ತಿಭುಕ್ತಿಃ ಸಸುಖಂ ನೋಚೇದ್ಭಿಕ್ಷಾಟನಂ ಚರೇತ್ ॥
ಪಕ್ವಂಚೇಲ್ಲಿಂಗಿನಾಮೇವ ನಾನ್ನಾದಿಕಮಲಿಂಗಿನಾಂ ।
ಗೃಹ್ಣೀಯಾದ್ದೇವಿ ಯತ್ನೇನ ಹ್ಯಪಕ್ವಂ ಸರ್ವಜಾತಿಷು ॥

ವೀರಶೈವನಾದವನು ಬ್ರಾಹ್ಮಣ ವೃತ್ತಿಯಿಂದಾಗಲೀ ಕ್ಷತ್ರಿಯ ಅಥವಾ ವೈಶ್ಯ ವೃತ್ತಿಯಿಂದಾಗಲೀ ಶೂದ್ರವೃತ್ತಿಯಿಂದಾಗಲೀ ಜೀವಿಸಬಾರದು. ದಾನವನ್ನು ತೆಗೆದುಕೊಳ್ಳ ಕೂಡದು— ಅಂದರೆ ಭಿಕ್ಷಾಟನೆಯನ್ನು ಮಾಡಬಾರದು. ಹೀಗೆಯೇ ಇನ್ನೂ ಅನೇಕ ಕಡೆಗೆ ವರ್ಣಧರ್ಮಾಚರಣೆಯನ್ನು ವೀರಶೈವನೆಂದಿಗೂ ಅನುಸರಿಸಲಾಗದೆಂದು ಹೇಳಲಾಗಿದೆ. ವೇದಾದಿಗಳಲ್ಲಿ ಲಿಂಗಧರ್ಮವು ಅವಕ್ತ ಸ್ವರೂಪದಲ್ಲಿರುತ್ತದೆ. ಅನೇಕ ವೇದ ಮಂತ್ರಗಳಿಗೆ ಲಿಂಗಧಾರಣಪರ ಅರ್ಥವನ್ನು ಬೇರೆಬೇರೆ ಪಂಡಿತರು ಬರೆದಿರುತ್ತಾರೆ. ಆಗಮಗಳಲ್ಲಿ ವೀರಶೈವಧರ್ಮವು ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿರುತ್ತದೆ. ಆಗಮ ಗ್ರಂಥಗಳು ಹಿಂದೂಧರ್ಮಕ್ಕೆ ಸಂಬಂಧಪಟ್ಟವುಗಳಾಗಿರುವದಿಲ್ಲವೇ? ವೀರಶೈವರು ಜಪಿಸತಕ್ಕ ಪಂಚಾಕ್ಷರಿ ಅಥವಾ ಷಡಕ್ಷರಿ ಮಂತ್ರಗಳು ವೇದೋಕ್ತಗಳಾಗಿಯೇ ಇರುತ್ತವೆ.

**ಪಾರಮೇಶ್ವರಾಗಮ—ಏಕಾದಶಪಟಲ, ಪುಟ ೧೮೦**

"ವೇದೇಚ ವೇದಶೀರ್ಷೇಚಾಪ್ಯುಭಯತ್ರ ಷಡಕ್ಷರಃ" ಮತ್ತು
"ತದಲ್ಪಂ ವೇದಸಾರಾಖ್ಯಂ ಭುಕ್ತಿದಂಚವಿಮುಕ್ತಿದಂ"

ಇತ್ಯಾದಿ ಅನೇಕ ಪ್ರಮಾಣಗಳಿರುತ್ತವೆ. ವೀರಶೈವರು ಧರಿಸತಕ್ಕ ಭಸ್ಮ ರುದ್ರಾಕ್ಷಿಗಳಾದರೂ ಉಪನಿಷತ್ತುಗಳಲ್ಲಿ ಉಕ್ತವಾದವುಗಳಾಗಿವೆ. ಇವು ದ್ರಾವಿಡರ ಲಕ್ಷಣಗಳು; ಇವು ಆರ್ಯರ ಚಿನ್ಹಗಳೆಂದು ಪ್ರತ್ಯೇಕವಾಗಿ ಹೇಳಲು ಸಾಧ್ಯವಿರುವದಿಲ್ಲ. ಅವೆರಡೂ ಧರ್ಮಗಳು ಪುರಾತನಕಾಲದಲ್ಲಿ ಭಿನ್ನಭಿನ್ನಗಳಾಗಿ ಬೇಕಾದಷ್ಟು ಬಡೆದಾಡಿದರೂ ಕೂಡ ಬರಬರುತ್ತ ಎರಡೂ ಧರ್ಮಗಳ ಸಂಗಮವಾಗಿರುತ್ತದೆ. ವೀರಶೈವರ ಸಂಸ್ಕೃತಿ, ಪರಂಪರೆ, ಆಚಾರ ವಿಚಾರಗಳನ್ನು ನೋಡಿದರೆ ಇವರು ಹಿಂದೂಧರ್ಮದವರಲ್ಲವೆಂದು ಹೇಳಲು ಸಾಧ್ಯವಿರುವದಿಲ್ಲ. ಹಿಂದೂಧರ್ಮ ನಿಷ್ಠಾವಂತರಲ್ಲಿ ಇವರು ಅಗ್ರಗಣ್ಯರೆಂದು ಹೇಳಲು ಅನೇಕಾನೇಕ ಆಧಾರಗಳಿರುತ್ತವೆ.

ವರ್ಣಗಳು ವೇದದಲ್ಲಿ ಗುಣಕರ್ಮಾನುಸಾರವಾಗಿ ಹೇಳಿದ್ದರೂ ಬರಬರುತ್ತ ಅವೇ ಜಾತಿಗಳಾಗಿರುತ್ತವೆಂದು ಈ ಮೊದಲೇ ಹೇಳಿದ್ದಾಗಿದೆ. ವೀರಶೈವರು ಅತಿವರ್ಣಾಶ್ರಮಿ

ಗಳಿರುತ್ತಾರೆಂದು ಬೇಕಾದಷ್ಟು ಪ್ರಮಾಣಗಳಿರುತ್ತವೆ. ವೇದಾನುಯಾಯಿಗಳಲ್ಲಿ ಏಕಸೂತ್ರತೆ ಇರುವದಿಲ್ಲ. ದ್ವೈತಿಗಳ ಮತದಲ್ಲಿ ಹರಿಯೇ ಸರ್ವೋತ್ತಮನೆಂದು ಹೇಳಿದರೆ ಅದ್ವೈತಮತ ಪ್ರತಿಷ್ಠಾಪನಾಚಾರ್ಯರಾದ ಶ್ರೀ ಶಂಕರಾಚಾರ್ಯರು ಶಿವನೇ ಸರ್ವಶ್ರೇಷ್ಠನು, ಉಳಿದ ದೇವತೆಗಳು ಆತನ ಶಿಷ್ಯ ಪ್ರಶಿಷ್ಯಕೋಟಿಗೆ ಸೇರಿದವರೆಂದು ಹೇಳಿರುತ್ತಾರೆ. ಆರ್ಯ ಸಮಾಜದ ಸಂಸ್ಥಾಪಕರಾದ ಶ್ರೀ ದಯಾನಂದ ಸರಸ್ವತಿ ಯವರು ಮೇಲೆ ಬರೆದ ದ್ವೈತಾದ್ವೈತ ವಿಶಿಷ್ಟಾದ್ವೈತ ಮತಗಳನ್ನೆಲ್ಲ ಖಂಡಿಸಿರುತ್ತಾರೆ. ಬಸವಣ್ಣನವರ ದೃಷ್ಟಿಯಲ್ಲಿ ಲೋಕದಲ್ಲಿ ಲಿಂಗದೇವನೇ ಶ್ರೇಷ್ಠನು. ಅವನಿಗೆ ಹೆಚ್ಚಿನವ ರಾಗಲೀ ಸಮಾನರಾದವರಾಗಲೀ ಸಿಗುವದು ಶಕ್ಯವಿಲ್ಲ. ತ್ರೈಲೋಕ್ಯದಲ್ಲಿ ಶಿವನಲ್ಲದನ್ಯ ದೈವವಿಲ್ಲೆಂದು ತಮ್ಮ ಸಿದ್ಧಾಂತವನ್ನು ಪ್ರಚಾರಗೊಳಿಸಿರುತ್ತಾರೆ. ಆದ್ದರಿಂದ ಆಗಮ ಗಳಲ್ಲಿ "ತಸ್ಮಾಲ್ಲಿಂಗಂ ಪರಬ್ರಹ್ಮ ಸಚ್ಚಿದಾನಂದ ಲಕ್ಷಣಂ" ಎಂದು ಲಿಂಗವೇ ಪರಬ್ರಹ್ಮವೆಂದು ಸಿದ್ಧಾಂತಪಡಿಸಲಾಗಿದೆ. ಇಲ್ಲಿ ನಾವು ಕೊಂಚ ವಿಶಾಲ ಹೃದಯದಿಂದ ವಿಚಾರಿಸಿದರೆ ಅವರವರ ಧರ್ಮಗಳು ಅವರವರಿಗೆ ಶ್ರೇಷ್ಠಗಳಾಗುವದು ಸಹಜವಾದು ದಾಗಿರುತ್ತದೆ. ತನ್ನ ಧರ್ಮವು ಕನಿಷ್ಠವಾದುದೆಂದು ಯಾರೂ ತಿಳಿಯಲು ಶಕ್ಯವಿರು ವದಿಲ್ಲ. ವಿಚಾರಮಾಡುತ್ತ ಹೋದರೆ ವೀರಶೈವ ಧರ್ಮವು ಹಿಂದೂ ಧಾರ್ಮಿಕ ಅಂಗ ಗಳಲ್ಲಿ ಒಂದಾಗಿರುತ್ತದೆ. ಇವರು ಅತ್ಯಂತ ಶ್ರೇಷ್ಠ ತರಗತಿಯ ಹಿಂದುಗಳಾಗಿರು ತ್ತಾರೆಂದು ಇವರ ಆಚರಣೆ, ಸಂಸ್ಕೃತಿ ಪರಂಪರೆ, ಸಾಮಾಜಿಕ ಪದ್ಧತಿಗಳಿಂದ ಅತ್ಯಂತ ಸ್ಪಷ್ಟವಾಗಿ ತಿಳಿದುಬರುತ್ತದೆ.

ಬಸವಣ್ಣನವರ ಕಾಲದಲ್ಲಿ ವರ್ಣಗಳೆಲ್ಲ ಜಾತಿಗಳಾಗಿ ಮಾರ್ಪಡಿಸಿ ಕೆಲವರು ಮಾತ್ರ ಶ್ರೇಷ್ಠರೆಂದೂ ಉಳಿದವರು ಅತ್ಯಂತ ನಿಕೃಷ್ಟರೆಂಬುವ ಭ್ರಾಂತಿಯು ಹುಟ್ಟಿದ್ದುದ ರಿಂದಲೇ ಬಸವಣ್ಣನವರಂತಹ ಮಹಿಮಾಶಾಲಿಗಳು ಆವಿರ್ಭವಿಸಿ ಅಡ್ಡಹಾದಿಯನ್ನು ಹಿಡಿದ ಜನಗಳನ್ನು ಸನ್ಮಾರ್ಗಕ್ಕೆ ತರಲು ಪ್ರಯತ್ನಿಸಿದರು. ಬಸವಣ್ಣನವರ ತರುವಾಯ ಸ್ವಾಮಿ ದಯಾನಂದರೇ ಮೊದಲಾದವರು ಈ ಕಾರ್ಯವನ್ನು ಮುಂದೆ ಸಾಗಿಸಿದರು. ಹಿಂದೂಧರ್ಮದಲ್ಲಿರತಕ್ಕ ಕೊಳೆಯನ್ನು ಹೊಗಲಾಡಿಸಲಿಕ್ಕೆ ಸರ್ವರೂ ಪ್ರಯತ್ನಿಸ ಬೇಕಾಗಿರುತ್ತದೆ. ಉಳಿದ ಸಮಾಜಗಳು ಮುಂದೆ ಬರಲು ಪ್ರಚಂಡ ಪ್ರಚಾರವನ್ನು ಮಾಡುತ್ತಿರುವಾಗ ಹಿಂದೂಧರ್ಮದಲ್ಲಿ ಈ ತರಹದ ಕೊಳೆಯು ಇರುವದು ಬಹಳ ಹಾನಿಕಾರಕವಾದುದು. ಹಿಂದೂಧರ್ಮದ ಜನಗಳು ತಮ್ಮ ಸಂಸ್ಕೃತಿ ಪರಂಪರೆಯನ್ನು ಕಾಯ್ದುಕೊಂಡು ಹೋಗಲೇಬೇಕು. ರಾಜಕೀಯ ದೃಷ್ಟಿಯಿಂದಲೂ, ಧಾರ್ಮಿಕ ದೃಷ್ಟಿಯಿಂದಲೂ ಹಿಂದೂಧರ್ಮಕ್ಕೆ ಅಪಾರವಾದ ಹಾನಿಯಾಗುತ್ತಲಿವೆ.

**ಮನುಸ್ಮೃತಿ—ಅ. ೪, ಶ್ಲೋಕ ೬೧**

**ನ ಶೂದ್ರರಾಜ್ಯೇ ನಿವಸೇತ್ ನಾಧಾರ್ಮಿಕ ಜನಾವೃತೇ ।**
**ನ ಪಾಷಂಡಿ ಗಣಾಕ್ರಾಂತೇ ನೋಪಸೃಷ್ಟೇ ತ್ಯಜೈಃ ನೃಭಿಃ ॥**

ಅಂದರೆ ಶೂದ್ರರಾಜನು ಯಾವ ದೇಶದಲ್ಲಿರುತ್ತಾನೆಯೋ ಆ ದೇಶದಲ್ಲಿ ವಾಸವನ್ನು ಮಾಡತಕ್ಕದ್ದಲ್ಲ. ಅಧಾರ್ಮಿಕ ಜನರಿದ್ದಲ್ಲಿಯೂ ವಾಸವನ್ನು ಮಾಡಲಾಗದು. ಪಾಷಂಡಿ ಗಳಿಂದ ಕೂಡಿದ ದೇಶದಲ್ಲಿರಲಾಗದು. ಅಂತ್ಯಜರು ರಾಜರಿದ್ದ ದೇಶದಲ್ಲಿಯೂ ವಾಸಿಸ ಲಾಗದು—

**ಮನುಸ್ಮೃತಿ—ಅ. ೫, ಶ್ಲೋಕ ೩೯**

ಯಜ್ಞಾರ್ಥಂ ಪಶವಃ ಸೃಷ್ಟಾಃ ಸ್ವಯಮೇವ ಸ್ವಯಂಭುವಾ ।
ಯಜ್ಞಸ್ಯಭೂತ್ಯೈಸರ್ವಸ್ಯ ತಸ್ಮಾದ್ಯಜ್ಞೇ ವಧೋಽವಧಃ ॥

ಬ್ರಹ್ಮನು ಯಜ್ಞದ ಸಲುವಾಗಿ ಪಶುಗಳನ್ನು ಸೃಷ್ಟಿಸಿದನು, ಯಜ್ಞದಲ್ಲಿ ಪಶುಗಳನ್ನು ಕೊಂದರೆ ದೋಷವಿಲ್ಲ. ಮುಸಲ್ಮಾನ್, ಕ್ರಿಶ್ಚಿಯನ್ ಧರ್ಮದವರಾದರೂ "ಜೀವೇನ ಜೀವೋ ಭಕ್ಷ್ಯತೆ" ಅಂದರೆ ಪ್ರಾಣಿಗಳಿಂದಲೇ ಪ್ರಾಣಿಗಳು ಬದುಕುತ್ತವೆ ಎಂದು ಹೇಳುತ್ತಾರೆ. ಅವರು ಹೇಳುವದಕ್ಕೂ ಇದಕ್ಕೂ ಇರುವ ವ್ಯತ್ಯಾಸವೇನು?

ಈಗಿನ ಕಾಲದಲ್ಲಿ ಶೃತಿಸ್ಮೃತ್ಯಾದಿಗಳಲ್ಲಿ ಎಷ್ಟೋ ವಿಷಯಗಳು ವ್ಯತ್ಯಾಸವಾಗಿ ಅವ್ಯವಹಾರ್ಯಗಳಾಗಿರುತ್ತವೆ. ಹಿಂದೂಸ್ಥಾನ ಸರ್ಕಾರದವರು ಅನೇಕ ಹೊಸ ಹೊಸ ಕಾಯದೆಗಳನ್ನು ಮಾಡುತ್ತ ಹೋಗುತ್ತಲಿದ್ದಾರೆ. ಹೀಗೆ ಮಾಡುವದರಿಂದ ಸ್ಮೃತ್ಯಾದಿಗಳಲ್ಲಿರತಕ್ಕವುಗಳಿಗೆ ವ್ಯತ್ಯಾಸವಾಗುವದು ಸಹಜವಾದುದು— ಈಗಿನ ಕಾಯದೆಯಲ್ಲಿ ಹೆಣ್ಣುಮಕ್ಕಳು ೧೮ ವರ್ಷದವರಾಗುವವರೆಗೆ ಲಗ್ನವನ್ನು ಮಾಡಬಾರದೆಂತಲೂ ಲಗ್ನವಾದರೆ ತಂದೆ ತಾಯಿಗಳಿಗೂ ಪುರೋಹಿತರಿಗೂ ಶಿಕ್ಷೆಯನ್ನು ವಿಧಿಸಲಾಗಿದೆ. ಈಗಿನ ಕಾಲದಲ್ಲಿ ಎಷ್ಟೋ ಹೆಣ್ಣು ಹುಡಿಗೆಯರು ೧೧ ಅಥವಾ ೧೨ ವರ್ಷಗಳ ವಯಸ್ಸಿನಲ್ಲಿ ಋತುವಾಗುತ್ತಾರೆ. ಲಗ್ನವಾಗದೆ ಋತುವಾದ ಕನ್ಯೆಯರನ್ನು ನೋಡಿದರೆ ತಂದೆ ತಾಯಿಗಳಿಗೆ ನರಕಪ್ರಾಪ್ತಿಯೆಂದು ಸ್ಮೃತಿಗಳಲ್ಲಿ ಹೇಳಿದೆ.

**ಪಾರಾಶರ ಸ್ಮೃತಿಃ**

ಪ್ರಾಪ್ತೇತು ದ್ವಾದಶೇವರ್ಷೇ ಯಃ ಕನ್ಯಾಂ ನ ಪ್ರಯಚ್ಛತಿ ।
ಮಾಸಿಮಾಸಿರಜಃ ತಸ್ಯಾ ಪಿಬಂತಿ ಪಿತರೋಽನಿಶಂ ।
ಮಾತಾಚೈವ ಪಿತಾಚೈವ ಜ್ಯೇಷ್ಠಭ್ರಾತಾ ತಥೈವ ಚ ।
ತ್ರಯಸ್ತೇ ನರಕಂ ಯಾಂತಿ ದೃಷ್ಟ್ವಾ ಕನ್ಯಾಂ ರಜಸ್ವಲಾಂ ।
ಯಸ್ತಾಂ ಸಮುದ್ವಹೇತ್ಕನ್ಯಾಂ ಬ್ರಾಹ್ಮಣೋ ಮದನೋಹಿತಃ ।
ಅಸಂಭಾಷ್ಯಃ ಅಪಾಂಕ್ತೇಯಃ ಸ ವಿಪ್ರೋ ವೃಷಲೀಪತಿಃ ।

ಅಂದರೆ ಹನ್ನೆರಡು ವರ್ಷಗಳಾದ ಮೇಲೆ ಯಾವಾತನು ಕನ್ಯೆಯನ್ನು ಲಗ್ನಮಾಡಿ ಕೊಡುವದಿಲ್ಲವೊ ಪ್ರತಿ ತಿಂಗಳು ಋತುವಾದಾಗ್ಗೆ ತಂದೆ ತಾಯಿಗಳು ಅವಳ ರಜಸ್ಸನ್ನು ಪಾನಮಾಡಿದಂತಾಗುತ್ತದೆ—ತಂದೆ ತಾಯಿ ಮತ್ತು ಹಿರಿಯ ಸಹೋದರನು ಈ ಮೂರು ಜನಗಳು ರಜಸ್ವಲೆಯಾದ ಕನ್ಯೆಯನ್ನು ನೋಡಿ ನರಕವನ್ನು ಹೊಂದುತ್ತಾರೆ. ಇಂತಹ ಕನ್ನಿಕೆಯನ್ನು ಮದನೋಹಿತನಾದ ಬ್ರಾಹ್ಮಣನು ಲಗ್ನವಾದರೆ ಅವನು ಮಾತನಾಡಲಿಕ್ಕೆ ಅಯೋಗ್ಯನಾಗುವನಲ್ಲದೆ ಪಂಕ್ತಿಯಲ್ಲಿ ಬಾಹಿರನಾಗುತ್ತಾನೆ—ಈ ತರಹದ ಅಸಂಗತಗಳಾದ ಅನೇಕ ಉದಾಹರಣೆಗಳನ್ನು ನಾವಿಲ್ಲಿ ಕೊಡಬಹುದು. ಇದರಿಂದ ತಿಳಿದು ಬರುವದೇನೆಂದರೆ ಶೃತಿಸ್ಮೃತ್ಯಾದಿಗಳಲ್ಲಿ ಹೇಳಿದ ವಿಷಯಗಳಲ್ಲಿ ಅನೇಕ ವಿಷಯಗಳು ವ್ಯವಹಾರದಲ್ಲಿ ಅಪ್ರಯೋಜನಕಾರಿಗಳಾಗಿವೆ.

ವೇದಗಳಲ್ಲಿ ಗುಣದಿಂದಲೇ ವರ್ಣಗಳನ್ನು ಹೇಳಲಾಗಿದೆ. ಈ ವಿಷಯವನ್ನು ಈ ಮೊದಲೇ ಹೇಳಿದ್ದೇವೆ. ಗೀತೆಯಲ್ಲಿಯೂ ಕೂಡ—

ಶಮೋದಮಸ್ತಪಶ್ಶೌಚಂ ಕ್ಷಾಂತಿರಾರ್ಜವಮೇವಚ ।
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಂ ।

ಶೌರ್ಯಂ ತೇಜೋಧೃತಿರ್ದಾಕ್ಷ್ಯಂ ಯುದ್ಧೇಚಾಪ್ಯಪಲಾಪನಂ ।
ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಂ ॥
ಕೃಷಿ ಗೋರಕ್ಷ ವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಂ ।
ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಂ ॥

ಅವರವರ ಗುಣಸ್ವಭಾವದಿಂದಲೇ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರಾಗುತ್ತಾರೆ. ಶಮ, ದಮ, ಸತ್ಯ, ಶಾಂತಿ, ಶೌಚ, ಸರಳತನ, ಜ್ಞಾನ, ವಿಜ್ಞಾನ, ಆಸ್ತಿಕ್ಯ ಮೊದಲಾದ ಗುಣಗಳಿರುವದು ಬ್ರಾಹ್ಮಣನ ಲಕ್ಷಣವಾಗಿರುತ್ತದೆ. ಪರಾಕ್ರಮ, ತೇಜಸ್ಸು, ಧೈರ್ಯ, ಕೌಶಲ್ಯತನ, ಯುದ್ಧದಲ್ಲಿ ಪರಾಂಙ್ಮುಖವಾಗದಿರುವಿಕೆ, ದಾನ, ಔದಾರ್ಯ, ಈಶ್ವರ ಭಾವ, ನಿಯಮನ ಇತ್ಯಾದಿ ಗುಣಗಳು ಕ್ಷತ್ರಿಯನಿಗಿರತಕ್ಕದ್ದು. ಈ ಗುಣಗಳುಳ್ಳವನೇ ಕ್ಷತ್ರಿಯನು. ಕೃಷಿ, ಗೋರಕ್ಷ, ವಾಣಿಜ್ಯ ಇವುಗಳು ವೈಶ್ಯಕರ್ಮಗಳು. ಈ ಮೂರು ವರ್ಗಗಳ ಸೇವೆಯನ್ನು ಮಾಡುವದು ಶೂದ್ರನ ಕೆಲಸಗಳೆಂದು ಹೇಳಲಾಗಿದೆ. ಈಗಿನ ಕಾಲದಲ್ಲಿ ಎಲ್ಲರೂ ಎಲ್ಲ ಕರ್ಮಗಳನ್ನು ಮಾಡತಕ್ಕವರಾಗಿರುವದರಿಂದ ಇವರು ಇದೇ ವರ್ಣದವರೆಂದು ಹೇಳುವದು ಅಶಕ್ಯವಾದ ಮಾತಾಗಿರುತ್ತದೆ. ಈಗಿನ ಯುದ್ಧಗಳಲ್ಲಿ ಎಲ್ಲ ಜಾತಿಯವರೂ ವಿವಿಧ ಕಾರ್ಯಗಳಲ್ಲಿ ಭಾಗವನ್ನು ವಹಿಸುತ್ತಾರೆ. ಅವರೆಲ್ಲರೂ ಯಾವ ವರ್ಣದವರಾಗುತ್ತಾರೆ? ಶೂದ್ರರ ರಾಜ್ಯದಲ್ಲಿ ವಾಸಮಾಡಬಾರದೆಂದು ಮನುವು ಹೇಳಿರುತ್ತಾನೆ. ೧೫೦ ವರ್ಷಗಳಿಂದ ಹಿಂದೂಸ್ಥಾನದಲ್ಲಿ ಯಾವ ವರ್ಣದವರ ರಾಜ್ಯ ವಿತ್ತು? ಆ ರಾಜ್ಯದಲ್ಲಿ ಇದ್ದವರು ಯಾವ ಪ್ರಾಯಶ್ಚಿತ್ತವನ್ನು ತೆಗೆದುಕೊಂಡಿರುತ್ತಾರೆ? ಅಸಂಗತ ಪರಂಪರೆಗಳೇ ನಮ್ಮ ಮುಂದೆ ನಿಲ್ಲುತ್ತವೆ. ಸರಕಾರಿ ನೌಕರಿ ವೃತ್ತಿಯು ಸೇವಾವರ್ಗದಲ್ಲಿ ಸೇರುತ್ತದೆ. ಇಂತಹ ಅನವಸ್ಥೆಯು ಬರುತ್ತದೆಂದು ಬಸವಣ್ಣನವರು ವರ್ಣಗಳನ್ನು ಚೆನ್ನಾಗಿ ಖಂಡಿಸಿರುತ್ತಾರೆ. "ಕಾಶಿ ಕಮ್ಮಾರನಾದ ಬೀಸಿ ಮಡಿವಳನಾದ ವೇದವನೋದಿ ಹಾರುವನಾದ"ನೆಂದು ಹೇಳಿರುತ್ತಾರೆ. ದ್ವಿಜನಾದವನು ವೇದಗಳನ್ನು ಕಲಿಯಬೇಕೆಂದು ಹೇಳಿರುತ್ತದೆ. ಅವನು ಕದಾಚಿತ್ ಕಲಿಯದಿದ್ದರೆ—

**ಮನುಸ್ಮೃತಿ—ಅಧ್ಯಾಯ ೨–೧೬೮**

ಯೋನಧೀತ್ಯದ್ವಿಜೋವೇದಂ ಅನ್ಯತ್ರ ಕುರುತೇ ಶ್ರಮಂ ।
ಸಜೀವನ್ನೇವ ಶೂದ್ರತ್ವಂ ಆಶುಗಚ್ಛತಿ ಸಾನ್ವಯಂ ॥

ಯಾವಾತನು ವೇದಗಳನ್ನೋದದೆ ಬೇರೆ ವಿಷಯಗಳಲ್ಲಿ ಶ್ರಮವನ್ನು ಪಡುತ್ತಾನೆಯೋ ಅವನು ಜೀವಂತನಿರುವಾಗಲೇ ವಂಶಪರಂಪರಾಗತವಾಗಿ ಶೂದ್ರತ್ವವನ್ನು ಹೊಂದು ತ್ತಾನೆ. ಅಂದರೆ ಈಗಿನ ಕಾಲದಲ್ಲಿ ಎಷ್ಟು ಜನ ವೇದಗಳನ್ನೋದುತ್ತಾರೆ? ಓದದೆ ಇರತಕ್ಕವರು ಶೂದ್ರರಾಗಿರುವರೊ? ಅವರ ಪುತ್ರ ಪೌತ್ರಾದಿಗಳೆಲ್ಲ ಶೂದ್ರರಾದರೆ ಮುಂದೆ ಅವರು ಶೂದ್ರರಾಗಿ ಉಳಿಯುವರೊ? ಅಥವಾ ಅವರು ಮುಂದೆ ವೇದಗಳ ನ್ನೋದಿದರೆ ದ್ವಿಜರಾಗುವರೊ? ಒಳ್ಳೇದು, ವೇದವನ್ನು ಓದದೆ ಇದ್ದವನು ಶೂದ್ರನಾದರೆ ಶೂದ್ರನಾದವನು ವೇದಗಳನ್ನು ಓದಿದರೆ ದ್ವಿಜನೇಕೆ ಆಗಲಾರನು? ಮೇಲಿದ್ದವನು ಕೆಳಗೆ ಬಿದ್ದರೆ ಕೆಳಗಿದ್ದವನು ಮೇಲಕ್ಕೆ ಹೋಗುವದು ಸ್ವಾಭಾವಿಕವಾದುವಾಗುತ್ತದೆ. ಇಂತಹ ವಿಷಯಗಳಲ್ಲಿ ಬಸವಣ್ಣನವರು ವೇದದ ವಿರುದ್ಧ ನಿಂತು ಲೋಕೈಕವೀರರಂತೆ ಪ್ರತಿಭಟಿಸಿದರು.

ಕೆಲವು ಜನಗಳ ಈ ತರಹದ ಧೋರಣದಿಂದ ಹಿಂದೂ ಸಮಾಜವು ಮೇಲು ಕೀಳುಗಳ ಕೊಳಚೆಯಲ್ಲಿ ಸಿಕ್ಕಿ ನಡುಗುತ್ತಲಿದೆ, ಆದ್ದರಿಂದ ಉಳಿದ ಸಮಾಜಗಳ ಹೊಡತಕ್ಕೆ ತಾಳಲಾರದಷ್ಟು ದುರ್ಬಲವಾಗಿರುತ್ತದೆ. ಇದಕ್ಕೆ ಅನೇಕ ಐತಿಹಾಸಿಕ ಸಂಗತಿಗಳ ಉದಾಹರಣೆಗಳನ್ನು ನಾವು ಇಲ್ಲಿ ಕೊಡಬಹುದಾಗಿದೆ. ಇಲ್ಲಿ ಒಂದು ಉದಾಹರಣೆಯನ್ನು ನೋಡೋಣ—ಕಾಶ್ಮೀರ ದೇಶದಲ್ಲಿ ಮೊದಲು ಶಿಕಂದರನೆಂಬುವನು ಆಳುತ್ತಿದ್ದನು. ಇವನು ಹಿಂದೂ ಅಥವಾ ಮುಸಲ್ಮಾನ ಧರ್ಮದವನಾಗಿರಲಿಲ್ಲ. ಶಕಜಾತಿಯವನಾಗಿದ್ದನು. ಆದರೆ ಹಿಂದೂ ಧರ್ಮದ ಮೇಲೆ ಅವನ ಪ್ರೇಮವಿದ್ದಿತು. ಮತ್ತು ಅತ್ತ ಕಡೆಗೆ ಅವನ ಲಕ್ಷ್ಯವಿದ್ದಿತು. ಅವನು ಒಂದು ದಿನ ಕಾಶ್ಮೀರದ ಒಬ್ಬ ಪಂಡಿತನನ್ನು ಕರೆದು ಈ ಸಮಾಚಾರವನ್ನು ವಿಚಾರಿಸಿದನು. ಅಂದರೆ ನನ್ನನ್ನು ಹಿಂದೂ ಧರ್ಮದಲ್ಲಿ ತೆಗೆದುಕೊಳ್ಳಿರಿಯೆಂದು ಹೇಳಿದನು. ಅದಕ್ಕೆ ಆ ಪಂಡಿತನು "ಸ್ವಧರ್ಮೇ ನಿಧನಂ ಶ್ರೇಯಃ", ಅಂದರೆ ತನ್ನ ಧರ್ಮದಲ್ಲಿ ತಾನಿದ್ದು ಸಾಯುವದು ಶ್ರೇಯಸ್ಕರವಾದುದು; ಪರಧರ್ಮವು ಭಯವನ್ನುಂಟುಮಾಡತಕ್ಕದೆಂತಲೂ ಹೇಳಿದನು. ಪಂಡಿತನ ಮಾತನ್ನು ಕೇಳಿ ರಾಜನು ವ್ಯಾಕುಲಚಿತ್ತನಾಗಿ ತನ್ನ ಕಾರ್ಯವು ಕೈಗೂಡ ಲಿಲ್ಲವೆಂದು ವ್ಯಸನಪಟ್ಟನು. ಕೆಲವು ದಿನಗಳು ಹೋದಮೇಲೆ ಪುನಃ ಮತ್ತೊಬ್ಬ ಪಂಡಿತನನ್ನು ಕೇಳಲಾಗಿ ಆತನು ಹೀಗೆಯೇ ಉತ್ತರವನ್ನು ಹೇಳಿದನು. ಆಗ ರಾಜನು ನಿರಾಶಕನಾಗಿ ಒಂದು ನಿಶ್ಚಯವನ್ನು ತನ್ನ ಮನಸ್ಸಿನಲ್ಲಿ ಮಾಡಿಕೊಂಡನು. ನಾಳಿನ ದಿನ ಪ್ರಾತಃಕಾಲದಲ್ಲಿ ಮೊದಲು ಯಾವ ಮನುಷ್ಯನ ಭೆಟ್ಟಿಯಾಗುತ್ತದೆಯೋ ಆ ಮನುಷ್ಯನ ಧರ್ಮವನ್ನೇ ನಾನು ಸ್ವೀಕರಿಸುತ್ತೇನೆ. ಅದರಂತೆ ಪ್ರಾತಃಕಾಲದಲ್ಲಿ ದರ್ಬಾರದೊಳಗಿನಿಂದ ಹೊರಗೆ ಹೊರಡಲು ಒಬ್ಬ ಮನುಷ್ಯನ ಭೆಟ್ಟಿಯಾಯಿತು. ಆಗ ಶಿಕಂದರನು ನಿನ್ನ ಹೆಸರೇನೆಂದು ಕೇಳಲು ಅವನು ತನ್ನ ಹೆಸರನ್ನು ಹೇಳಿದನು. ಆಮೇಲೆ ನೀನು ಯಾವ ಜಾತಿಯವನೆಂದು ವಿಚಾರಿಸಲಾಗಿ ನಾನು ಮುಸಲ್ಮಾನನೆಂದುತ್ತರ ಕೊಟ್ಟನು. ಹಾಗಾದರೆ ನನ್ನನ್ನು ನಿಮ್ಮ ಧರ್ಮದೊಳಗೆ ಸೇರಿಸಿಕೊಳ್ಳುತ್ತೀಯಾ ಎಂದು ಕೇಳಲು ಆ ಮುಸಲ್ಮಾನನು ಕುಲುಕುಲು ನಗುತ್ತ, ಅವಶ್ಯವಾಗಿ ನಾನು ನಿಮ್ಮನ್ನು ನಮ್ಮ ಧರ್ಮದೊಳಗೆ ತೆಗೆದುಕೊಳ್ಳುತ್ತೇನೆ. ಇದಕ್ಕಿಂತಲೂ ಹೆಚ್ಚಿಗೆ ಸೌಭಾಗ್ಯವು ನನಗೆ ಬೇರೊಂದು ದೊರೆಯಲಾರದು ಎಂದು ಹೇಳಲು ಅದರಂತೆಯೇ ಕಾಶ್ಮೀರದ ರಾಜನು ಮುಸಲ್ಮಾನ ಧರ್ಮವನ್ನು ಸ್ವೀಕರಿಸಿದನು. ಅಲ್ಲಿ ಮುಸಲ್ಮಾನರ ಸಂಖ್ಯೆಯು ವಿಪರೀತ ಬೆಳೆಯಿತು. ಮುಂದಿನ ಅದರ ಇತಿಹಾಸವು ಬೇರೆಯೇ ಇರುವದು.

ಅಕ್ಬರನ ಕಾಲದಲ್ಲಿಯೂ ಒಂದು ಸಾರೆ ಇಂತಹ ಪ್ರಸಂಗವು ಬಂದಿತ್ತಂತೆ. ಅಕ್ಬರನು ಬೀರಬಲ್ಲನ ಸಮಕ್ಷಮ ಹಿಂದೂ ಪಂಡಿತರನ್ನು ಕರೆಯಿಸಿ ತಾನು ಹಿಂದೂ ಧರ್ಮವನ್ನು ಸ್ವೀಕರಿಸಬೇಕೆಂದು ಮಾಡಿರುತ್ತೇನೆಂದು ಕೇಳಲು ಕತ್ತೆಯು ಕುದುರೆಯಾಗ ಲಾರದು ಕುದುರೆಯು ಕತ್ತೆಯಾಗಲಾರದೆಂದು ವ್ಯವಹಾರದಲ್ಲಿ ಅನಭಿಜ್ಞರಾದ ಪಂಡಿತರು ಹೇಳಿದರಂತೆ. ಆ ಕಾಲದಲ್ಲಿ ಅಕ್ಬರ ಬಾದಶಹನ ಇಚ್ಛೆಯಂತೆ ಆ ಪಂಡಿತರು ಅವನನ್ನು ಹಿಂದೂ ಧರ್ಮದಲ್ಲಿ ತೆಗೆದುಕೊಂಡಿದ್ದರೆ ಹಿಂದೂ ಧರ್ಮದ ಇತಿಹಾಸವೇ ಬದಲಾಯಿಸಿಹೋಗುತ್ತಿತ್ತು. ಈಗ ಪಾಕಿಸ್ಥಾನವನ್ನು ಕೊಡುವ ಪ್ರಸಂಗ ಬರುತ್ತಿರಲಿಲ್ಲ. ಇಂತಹ ಅನಂತ ಉದಾಹರಣೆಗಳು ಇತಿಹಾಸದಲ್ಲಿ ಸಿಗುತ್ತವೆ.

ಹಿಂದೂ ಧಾರ್ಮಿಕ ಗ್ರಂಥಗಳಾದ ವೇದೋಪನಿಷತ್ತುಗಳು ಸಂಸ್ಕೃತದಲ್ಲಿರುವದರಿಂದಲೂ ಆ ಭಾಷೆಯನ್ನು ಸ್ತ್ರೀ ಶೂದ್ರಾದಿಗಳು ಓದಬಾರದೆಂತಲೂ ಕಟ್ಟನ್ನು ಮಾಡಿದರು. ಕ್ಷತ್ರಿಯರೂ ವೈಶ್ಯರೂ ಆ ಗೊಡವೆಗೆ ಹೋಗಲಿಲ್ಲ. ಒಂದೇ ವರ್ಗದವರು ವೇದಾದಿಗಳನ್ನೋದಿ ತಮ್ಮಿಚ್ಛೆಯಂತೆ ಅನೇಕ ಟೀಕಾತ್ಮಕ ಗ್ರಂಥಗಳನ್ನು ಬರೆದರು. ಎಷ್ಟೋ ಕೋಟಿ ಜನಗಳನ್ನು ಧಾರ್ಮಿಕ ಗ್ರಂಥಗಳಿಂದ ದೂರಿಟ್ಟರು. ಹಿಂದೂ ಧರ್ಮದ ಟೀಕಾತ್ಮಕ ಗ್ರಂಥಗಳೆಲ್ಲ ಸ್ವಾರ್ಥಪರಾಯಣರ ಕೈಯ್ಯಲ್ಲಿ ಸಿಕ್ಕಿ ಮೂಲಗ್ರಂಥಗಳು ಬೇರೆ ಬೇರೆ ಆಕಾರಗಳನ್ನು ತಾಳುತ್ತ ಬಂದವು. ಉಳಿದವರು ವೇದಾದಿಗಳನ್ನು ಓದಿದರೆ ನರಕವಾಗುತ್ತದಂತೆ. ಒಂದೇ ಗ್ರಂಥವನ್ನು ಓದಿದರೆ ಒಬ್ಬರಿಗೆ ಪುಣ್ಯ, ಮತ್ತೊಬ್ಬರಿಗೆ ಪಾಪವೆಂದು ಹೇಳುವದು ಲೋಕದಲ್ಲಿ ಅಪಹಾಸ್ಯದ ಮಾತಾಗಿರುತ್ತದೆ. ಜ್ಞಾನಾಜ್ಞಾನಾದಿಗಳನ್ನು ತಿಳಿಸತಕ್ಕದ್ದೇ ವೇದದ ಮುಖ್ಯ ತಾತ್ಪರ್ಯವಾಗಿರುತ್ತದೆಂದು ಅನೇಕ ಪಂಡಿತರು ಸಿದ್ಧಾಂತಮಾಡಿರುತ್ತಾರೆ. ಹೀಗಿರುವಾಗ ಜ್ಞಾನ ಸಂಪಾದನೆಯನ್ನು ಮಾಡಬಾರದೆಂದು ಹೇಳುವ ಮಾತು ಪಾಪದಿಂದ ಪ್ರಪೂರಿತವಾದುದಾಗಿರುತ್ತದೆ. ಇಲ್ಲಿ ನಾನು ಹೀಗೆ ಬರೆಯುವ ಉದ್ದೇಶವು ಯಾವದಾದರೊಂದು ವರ್ಗದ ದೂಷಣೆಗಾಗಿ ಅಲ್ಲ. ಹಿಂದೂ ಧರ್ಮದ ಮುಖ್ಯ ತತ್ವವು "ಸರ್ವೇಜನಾಃ ಸುಖಿನೋ ಭವಂತು" ಎಂಬುವದಾಗಿದೆಯೆಂದು ಹೇಳುವದೇ ಮುಖ್ಯೋದ್ದೇಶವಾಗಿರುತ್ತದೆ. ಅನ್ಯಮತಗಳ ನಿಂದೆಗಾಗಿ ಅಲ್ಲ. ಎಲ್ಲ ಮತಗಳ ಗುರಿಯೂ ಒಂದೇ ಆಗಿರುತ್ತದೆ.

ಸತ್ಯಧರ್ಮವನ್ನು ಕಂಡುಹಿಡಿದು ಅದನ್ನು ಲೋಕದ ಮುಂದಿಡುವದು ಬಸವಣ್ಣನವರ ಕಾರ್ಯವಾಗಿದ್ದು ಸ್ತ್ರೀ ಶೂದ್ರಾದಿಗಳನ್ನು ಮೂಲೆಗುಂಪುಮಾಡುವದು ನ್ಯಾಯದೃಷ್ಟಿಯಿಂದಲೂ ಸತ್ಯದ ದೃಷ್ಟಿಯಿಂದಲೂ ಸರಿಯಾಗಿರುವದಿಲ್ಲವೆಂದು ಅವರು ತಿಳಿದು ವರ್ಣಗಳನ್ನು ಜಾತೀಯತ್ವವನ್ನೂ ಖಂಡಿಸಿದರು—ಉಳಿದ ವಿಷಯಗಳಲ್ಲಿ ಅವರು ವೇದಗಳಲ್ಲಿ ಅನೇಕ ವಿಷಯಗಳನ್ನು ಆಯ್ದುಕೊಂಡಿರುತ್ತಾರೆಂದು ಈ ಮೊದಲೇ ಹೇಳಿದ್ದೇವೆ. ಅಂತೂ ಬಸವಣ್ಣನವರು ಸತ್ಯಮಾರ್ಗದಲ್ಲಿ ಯಾರ ಹಂಗಿಗೂ ಒಳಗಾಗದೆ ಇದ್ದುದೇ ಅವರ ನಿಜ ವ್ಯಕ್ತಿತ್ವವನ್ನು ಜಗತ್ತಿನ ಮುಂದೆ ಸ್ಪಷ್ಟವಾಗಿ ತೋರಿಸುತ್ತಲಿದೆ.

# ಮೂರನೆಯ ಪ್ರಕರಣ

## ಉಪನಿಷತ್ತುಗಳೂ ಬಸವಣ್ಣನವರೂ

ಕನ್ನಡ ಭಾಷೆಯಲ್ಲಿ ಬಸವಾದಿ ಪ್ರಮುಥರ ವಚನಗಳು ಒಳ್ಳೇ ಮೇಲ್ಮೆಯನ್ನು ಹೊಂದಿರುತ್ತವೆಯಷ್ಟೆ. ಆಧುನಿಕ ಪೌರ್ವಾತ್ಯ ಪಾಶ್ಚಾತ್ಯ ಶಾಸ್ತ್ರಗಳಲ್ಲಿ ಪಾರಂಗತರಾದ ಕನ್ನಡನಾಡಿನ ಪಂಡಿತರೆಲ್ಲ ಮುಕ್ತಕಂಠದಿಂದ ವಚನ ವಾಙ್ಮಯವನ್ನು ಪ್ರಶಂಸಿಸುತ್ತಿರುವರಲ್ಲದೆ, ಈ ವಚನಗಳೆಂದರೆ ಕನ್ನಡ ಉಪನಿಷತ್ತುಗಳೆಂದೇ ಸರ್ವರ ಏಕಾಭಿಪ್ರಾಯವಾಗಿರುತ್ತದೆ. ಕನ್ನಡ ಭಾಷೆಗೆ ಅತ್ಯಂತ ಶ್ರೇಷ್ಠವಾದ ಸೇವೆಯನ್ನು ಸಲ್ಲಿಸಿ ಮೂರು ಕವಿಚರಿತ್ರೆಗಳನ್ನು ಬರೆದಿರುವ ಪ್ರಾಕ್ತನ ವಿಮರ್ಶನ ವಿಚಕ್ಷಣ, ರಾವ್‌ಬಹದ್ದೂರ್ ಶ್ರೀಮಾನ್ ನರಸಿಂಹಾಚಾರ್ಯರು, ಎಂ.ಎ., ಮಹಾಮಹೋಪಾಧ್ಯಾಯ ಇವರು ತಮ್ಮ ಕವಿ ಚರಿತ್ರೆಯಲ್ಲಿ ಈ ವಚನಗಳ ಬಗ್ಗೆ—

"ಈ ವಚನಗಳು ಕನ್ನಡ ಸಾಹಿತ್ಯದಲ್ಲಿ ಪೂಜ್ಯಸ್ಥಾನವನ್ನು ಪಡೆಯಲು ಅರ್ಹವಾಗಿವೆ. ಇವು ಗೂಢವಾದ ವೇದಾಂತ ವಿಷಯಗಳನ್ನು ಸುಲಭವಾದ ಮಾತುಗಳಿಂದ ಬಿಗಿಯಾದ ಶೈಲಿಯಲ್ಲಿ ಮನಮುಟ್ಟುವಂತೆ ಬೋಧಿಸುತ್ತವೆ. ಇವನ್ನು ಕನ್ನಡ ಉಪನಿಷತ್ತುಗಳೆಂದು ಕರೆಯಬಹುದು". ಶ್ರೀಮಾನ್ ನರಸಿಂಹಾಚಾರ್ಯರು ಹೀಗೆ ಬರೆದಿರುವದು ನಿಜವಾದ ವಿಷಯವನ್ನು ಜನತೆಯ ಎದುರಿಗೆ ಇಟ್ಟಂತಾಗಿರುತ್ತದೆ. ಇದ್ದ ಸಂಗತಿಯನ್ನು ಸ್ಪಷ್ಟವಾಗಿ ಜನತೆಯ ಎದುರಿಗೆ ಇಟ್ಟಿದ್ದಕ್ಕಾಗಿ ಶ್ರೀಮಾನ್ ಆಚಾರ್ಯರವರಿಗೆ ಅನಂತ ಧನ್ಯವಾದಗಳನ್ನರ್ಪಿಸಬೇಕಾಗಿದೆ.

ಆದರೆ ಆಚಾರ್ಯರವರ ಕಾಲಕ್ಕಿಂತಲೂ ಇತ್ತೀಚೆಗೆ ಕನ್ನಡ ಸಾಹಿತ್ಯದಲ್ಲಿ ವಚನಗಳು ಹೆಚ್ಚಿನ ಸ್ಥಾನವನ್ನು ಪಡೆದಿರುವದು ಸಂತೋಷದ ಸಂಗತಿಯಾಗಿರುತ್ತದೆ. ಇಂತಹ ವಚನಗಳಿಗೂ, ಉಪನಿಷತ್ತುಗಳಿಗೂ ಇರುವ ಸಾಮ್ಯವೇನು? ವೈಷಮ್ಯ ಉಂಟೆ? ವೈಶಿಷ್ಟ್ಯವೇನು? ಮೊದಲಾದ ವಿಷಯಗಳನ್ನು ಈ ಪ್ರಕರಣದಲ್ಲಿ ಕೂಲಂಕಷವಾಗಿ ವಿವೇಚನೆಯನ್ನು ಮಾಡಬೇಕಾಗಿರುತ್ತದೆ. ಕನ್ನಡ ಭಾಷೆಯಲ್ಲಿರತಕ್ಕ ವಚನ ವಾಙ್ಮಯದಂತಹ ವಾಙ್ಮಯವು ಜಗತ್ತಿನ ಯಾವ ಭಾಷೆಗಳಲ್ಲಿಯೂ ಇಲ್ಲವೆಂದು ದೊಡ್ಡದೊಡ್ಡ ಪಂಡಿತರು ಹೇಳುತ್ತಾರೆ. ಅದರಲ್ಲೇನಾದರೂ ಸತ್ಯಾಂಶವುಂಟೆ? ಎಂಬುವದನ್ನು ಒರೆಗಲ್ಲಿಗೆ ಹಚ್ಚಿ ನೋಡಬೇಕಾಗಿರುವದು ಅತ್ಯಂತ ಮಹತ್ವದ್ದಾಗಿರುತ್ತದೆ. ಅದೇ ದೃಷ್ಟಿಯಿಂದ ಉಪನಿಷತ್ತುಗಳಿಗೂ ವಚನಗಳಿಗೂ ತುಲನೆಯನ್ನು ನೋಡಬೇಕಾಗಿರುತ್ತದೆ. ವೇದಗಳ ಕಾಲವೆಂತಲೂ, ಉಪನಿಷತ್ ಕಾಲವೆಂತಲೂ, ಆಗಮ (ತಂತ್ರ) ಪುರಾಣಾದಿಗಳ ಕಾಲವೆಂತಲೂ ಸಾಮಾನ್ಯವಾಗಿ ಹಿಂದೂ ಧಾರ್ಮಿಕ ಇತಿಹಾಸದ ಕಾಲವನ್ನು ಮೂರು ಭಾಗಗಳನ್ನಾಗಿ ಮಾಡಬಹುದು. ಇವುಗಳಲ್ಲಿ ಉಪನಿಷತ್ ಕಾಲಕ್ಕೆ ಬಹಳೇ ಮಹತ್ವವಿರುತ್ತದೆ. ಈ ಉಪನಿಷತ್ತುಗಳು ಬೋಧಿಸುವ ವೇದಾಂತದ ತತ್ವಗಳನ್ನು ನೋಡಿ ಜಗತ್ತಿನ ಎಲ್ಲಾ ತತ್ವಜ್ಞಾನಿಗಳಾದ ಪಂಡಿತರು ತಲೆದೂಗುತ್ತಲಿದ್ದಾರೆ. ಈ ಉಪಸನಿಷತ್ತುಗಳ ಬಗ್ಗೆ ಜಗತ್ತಿನ ಬೇರೆ ಬೇರೆ ಭಾಗದ ಪಂಡಿತರು ಇಲ್ಲಿಯವರೆಗೆ ಬರೆದ ಗ್ರಂಥಗಳೇ ಸಾಕ್ಷಿಯಾಗಿರುತ್ತವೆ. ಹಿಂದೂ

ವೇದಾಂತದ ತಿರುಳೇ ಈ ಉಪನಿಷತ್ತುಗಳಾಗಿರುತ್ತವೆ. ಉಪನಿಷತ್ತುಗಳ ಸಂಖ್ಯೆಯು ಬಹಳ ಇರುವದಾದರೂ ಅವುಗಳಲ್ಲಿ ೧೦೮ ಉಪನಿಷತ್ತುಗಳೇ ಪ್ರಚಲಿತ ಕಾಲದಲ್ಲಿ ರೂಢಿಗೆ ಬಂದಿರುತ್ತವೆ. ಈ ಉಪನಿಷತ್ತುಗಳಲ್ಲಿ ದಶೋಪನಿಷತ್ತುಗಳೇ ಪ್ರಧಾನತಮ ವಾಗಿರುತ್ತವೆ. ಈಶ, ಕೇನ, ಕಠ, ಮಾಂಡುಕ್ಯ, ಛಾಂದೋಗ್ಯ, ಬೃಹದಾರಣ್ಯಕ, ತೈತ್ತರೀಯ, ಮುಂಡಕ, ಐತರೇಯ, ಶ್ವೇತಾಶ್ವತರ, ಕೈವಲ್ಯ ಮೊದಲಾದವುಗಳು ಪ್ರಾಚೀನಕಾಲದವೂ, ಮಹತ್ವವಾದವುಗಳೂ ಆಗಿರುತ್ತವೆ. ೧೦೮ ಉಪನಿಷತ್ತುಗಳಲ್ಲಿ ಕೆಲವು ಅತಿ ಚಿಕ್ಕವುಗಳೂ, ನಿರರ್ಥಕವಾದವುಗಳೂ ಇರುತ್ತವೆ. ಇವುಗಳಲ್ಲಿ ಕೃಷ್ಣೋಪನಿಷತ್, ಹಯಗ್ರೀವೋಪನಿಷತ್, ಸೂರ್ಯ, ದತ್ತಾತ್ರೇಯ, ಕಲಿಸಂತರಣ, ಮಹಾವಾಕ್ಯೋಪನಿಷತ್ ಮೊದಲಾದವುಗಳು ಕನಿಷ್ಠವರ್ಗದಲ್ಲಿ ಬರತಕ್ಕವುಗಳಾಗಿರುತ್ತವೆ. ಕೆಲವು ಉಪನಿಷತ್ತುಗಳು ವೇದದ ಭಾಗಗಳಾಗಿಯೂ ಇರುತ್ತವೆ.

ಮುಕ್ತಿಕೋಪನಿಷತ್ತಿನಲ್ಲಿ ಮಾರುತಿಯು ಶ್ರೀರಾಮನನ್ನು ಕುರಿತು ಕೈವಲ್ಯ ಮುಕ್ತಿಯು ಹೇಗೆ ದೊರೆಯುತ್ತದೆಂದು ಕೇಳಲು, ಮುಮುಕ್ಷುಗಳ ಮುಕ್ತಿಗೋಸ್ಕರ ಮಾಂಡೂಕ್ಯೋಪನಿಷತ್ ಒಂದೇ ಸಾಕು. ಅದನ್ನೊಂದು ಓದಿದರೆ ಅವರಿಗೆ ಮುಕ್ತಿಯು ಲಭಿಸುವದು. "ತಥಾಪ್ಯಸಿದ್ಧಂಚೇತ್ ಜ್ಞಾನಂ ದಶೋಪನಿಷದಂ ಪಠ ಜ್ಞಾನಂ ಲಬ್ಧ್ವಾಚಿರಾದೇವ ಮಾಮಕಂ ಧಾಮಯಾಸ್ಯಸಿ", ಮಾಂಡೂಕ್ಯದಿಂದ ಇಷ್ಟ ಪೂರ್ತಿಯಾಗದಿದ್ದರೆ ದಶೋಪನಿಷತ್ತುಗಳನ್ನು ಓದು; ಅಂದರೆ ನಿನಗೆ ಜ್ಞಾನವಾಗಿ ನನ್ನ ಸ್ಥಾನವನ್ನು ಹೊಂದುವಿ. ಇವುಗಳಿಂದಲೂ ನಿನಗೆ ದೃಢವಾದ ಜ್ಞಾನವಾಗದಿದ್ದರೆ ೩೨ ಉಪನಿಷತ್ತುಗಳನ್ನು ಓದು. ಮತ್ತು ವಿದೇಹ ಮುಕ್ತಿಯನ್ನು ಇಚ್ಛಿಸಿದ್ದೇ ಆದರೆ ೧೦೮ ಉಪನಿಷತ್ತುಗಳನ್ನು ಅಧ್ಯಯನಮಾಡು ಎಂದು ಶ್ರೀರಾಮನು ಅಪ್ಪಣೆ ಕೊಡಿಸಿರುತ್ತಾನೆ. ಅಂತೂ "ಸರ್ವೋಪನಿಷದಾಂ ಮಧ್ಯೇ ಸಾರಮಷ್ಟೋತ್ತರಂ ಶತಂ" ಎಂದು ಹೇಳಿರುವದರಿಂದ ೧೦೮ ಉಪನಿಷತ್ತುಗಳಿಗಿಂತಲೂ ಹೆಚ್ಚಿಗೆ ಇರುತ್ತವೆಂಬುವದು ನಿರ್ವಿವಾದ ವಿಷಯವಾಗಿರುತ್ತದೆ. ೨೨೦ ಉಪನಿಷತ್ತುಗಳು ಈಗ ಸಿಕ್ಕಿವೆ.

ಉಪನಿಷತ್ತುಗಳ ರಚನೆಯು ಹೇಗೆ ಆಯಿತು? ಎಂಬುವ ವಿಷಯ ಬಹಳ ಮಹತ್ವದ್ದಾಗಿರುತ್ತದೆ. ಉಪನಿಷತ್ತುಗಳಲ್ಲಿ ಅನೇಕ ವಿಷಯಗಳ ವಿವೇಚನೆಯು ಆಗಿರುತ್ತದೆ. ಅವುಗಳಲ್ಲಿ ಸತ್ಯ, ಶಾಂತಿ, ದಾಂತಿ, ಬ್ರಹ್ಮಚರ್ಯಪರಿಪಾಲನೆ ಮೊದಲಾದವುಗಳು ಇದ್ದರೂ ಮುಖ್ಯ ವಿಷಯವೆಂದರೆ ಆತ್ಮಜ್ಞಾನ. ಆತ್ಮವೆಂದರೆ ಯಾರು? ಆತನನ್ನು ಕಂಡುಹಿಡಿಯುವದು ಹೇಗೆ? ಇದೇ ವಿಷಯವೇ ಪ್ರಾಧಾನ್ಯವಾಗಿರುತ್ತದೆ. ಮುಖ್ಯವಾಗಿ ಬ್ರಹ್ಮಚಿಂತನವೇ ಎಲ್ಲ ಉಪನಿಷತ್ತುಗಳ ಅಂತಿಮ ಧ್ಯೇಯವಾಗಿರುತ್ತದೆ. ಬೇರೆ ಬೇರೆ ಋಷಿಗಳು ಬೇರೆ ಬೇರೆ ತರಹದಿಂದ ಸಿದ್ಧಾಂತಪಡಿಸಿರುತ್ತಾರೆ. ಸತ್ಯಾನ್ವೇಷಿಗಳಾದ ಋಷಿಗಳ ಅಂತಸ್ಸ್ಫೂರ್ತಿಯಿಂದ ಆಯಾಯ ಕಾಲಕ್ಕೆ ಹೊರಟವುಗಳೇ ಉಪನಿಷತ್ತುಗಳಾಗಿರುತ್ತವೆ. ಈ ಉಪನಿಷತ್ತುಗಳು ಯಾವುದಾದರೊಂದು ಧರ್ಮದ ಗ್ರಂಥಗಳಾಗಿರದೆ ಸಾಮಾನ್ಯವಾಗಿ ವೇದಾಂತವನ್ನು ಬೋಧಿಸತಕ್ಕವುಗಳಾಗಿವೆ. ವೇದದ ಕೊನೆಯಲ್ಲಿರುವದರಿಂದ ಇವು ಮಿಗಿಲಾದ ಗ್ರಂಥಗಳಾಗಿರುತ್ತವೆ. ಈ ಉಪನಿಷತ್ ಶಬ್ದಕ್ಕೆ ಬೇರೆ ಬೇರೆ ತತ್ವಜ್ಞಾನಿಗಳು ಅನೇಕ ತರಹದ ಅರ್ಥವನ್ನು ಮಾಡಿದರೂ, "ವೇದಾಂತೋನಾಮ ಉಪನಿಷತ್‌ಪ್ರಮಾಣಂ" ಎಂಬುವದು ಪ್ರಸಿದ್ಧವಾಗಿರುತ್ತದೆ.

ನಾವು ಯಾವದಾದರೊಂದು ಉಪನಿಷತ್ತನ್ನು ತೆಗೆದುಕೊಂಡು ನೋಡಿದರೂ ಪ್ರಾರಂಭದಲ್ಲಿ ಪರಬ್ರಹ್ಮಚಿಂತನವೇ ಕಾಣುವದು. ಜಾಬಾಲೋಪನಿಷತ್ತಿನಲ್ಲಿ:—ಜಾಬಾಲಋಷಿಯನ್ನು ಪೈಪ್ಪಲಾದಿ ಪ್ರಶ್ನೆಯನ್ನು ಮಾಡುತ್ತಾನೆ.

"ಭಗವನ್ ಮೇ ಬ್ರೂಹಿ ಪರಮತತ್ವರಹಸ್ಯಂ ಕಿಂ ತತ್ವಂ, ಕೋಜೀವಃ, ಕಃ ಪಶುಃ, ಕಃ ಈಶಃ, ಕೋಮೋಕ್ಷೋಪಾಯಃ" ಎಲೌ ಪೂಜ್ಯನೇ ಪರಮತತ್ವ ರಹಸ್ಯವನ್ನು ನನಗೆ ಹೇಳು. ತತ್ವವೆಂದರೇನು? ಯಾವನು ಜೀವನು? ಪಶು ಯಾರು? ಈಶನು ಯಾರು? ಮೋಕ್ಷೋಪಾಯವೇನು? ಎಂದು ಕೇಳುತ್ತಾನೆ. ಹೀಗೆಯೇ ಸಾಮಾನ್ಯವಾಗಿ ಎಲ್ಲಾ ಉಪನಿಷತ್ತುಗಳಲ್ಲಿಯೂ ಹೇಳಲಾಗುತ್ತದೆ. ಉಪನಿಷತ್ತುಗಳು ಸಾಮಾನ್ಯವಾದ ತತ್ವವನ್ನು ಬೋಧಿಸತಕ್ಕವುಗಳಾದರೂ ಅನೇಕ ಜನ ಆಚಾರ್ಯರು ತಮ್ಮ ಪಾಂಡಿತ್ಯದ ಬಲದಿಂದ—ದ್ವೈತ-ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ ಮೊದಲಾದ ಮತಗಳ ಪರ ಅರ್ಥವನ್ನು ಮಾಡಿರುತ್ತಾರೆ. ಅನೇಕ ಮತಗಳಿಗೆ ಸಮನ್ವಯವಾಗತಕ್ಕ ತತ್ವಾರ್ಥಗಳನ್ನು ಬೋಧಿಸುವ ಉಪನಿಷತ್ತುಗಳ ಗೌರವವು ಜಗತ್ತಿನಲ್ಲಿ ಹಬ್ಬಿ ನಮ್ಮ ಧಾರ್ಮಿಕ ಸಂಸ್ಕೃತಿಯ ಬೆಳಕನ್ನು ಎಲ್ಲೆಡೆಯಲ್ಲಿಯೂ ಹಬ್ಬಿಸಿದ ಕೀರ್ತಿಯು ಅವಿಚ್ಛಿನ್ನವಾಗಿ ಇಂದಿಗೂ ಅವುಗಳಿಗೆ ಇರುತ್ತದೆ. ಬೇರೆ ಯಾವ ಗ್ರಂಥಗಳಿಗೂ ಇಷ್ಟು ಗೌರವವು ಇರುವದಿಲ್ಲ. ಸಂಸ್ಕೃತ ಸಾಹಿತ್ಯದಲ್ಲಿಯೂ ಉಪನಿಷತ್ತುಗಳಿಗೆ ಬಹಳ ದೊಡ್ಡ ಸ್ಥಾನವಿದೆ. ಇಂತಹ ಉಪನಿಷತ್ತುಗಳಿಗೂ, ಶ್ರೀ ಬಸವಾದಿ ಶರಣರ ವಚನಗಳಿಗೂ ತುಲನೆಯನ್ನು ಮಾಡಬೇಕಾಗಿದೆ. ಉಪನಿಷತ್ತುಗಳು ಸಂಸ್ಕೃತ ಭಾಷೆಯಲ್ಲಿರುವದರಿಂದ ಜಗತ್ತಿನ ತುಂಬೆಲ್ಲ ಅವುಗಳಿಗೆ ಮರ್ಯಾದೆಯು ಇದೆ. ವಚನಗಳಾದರೊ, ಒಂದು ಪ್ರಾಂತಿಕ ಭಾಷೆಯಲ್ಲಿರುತ್ತವೆ. ಹೀಗಿದ್ದರೂ ವಿಷಯಗಳ ದೃಷ್ಟಿಯಿಂದ ಅವುಗಳು ಉಪನಿಷತ್ತುಗಳಿಗೆ ಸಮಾನಗಳಾಗಿಯೂ, ಒಂದೊಂದು ಸಂದರ್ಭದಲ್ಲಿ ಅವುಗಳಿಗೆ ಮೀರಿದವುಗಳೂ ಆಗಿವೆ.

ಉಪನಿಷತ್‌ಕಾರರ ಸಂಖ್ಯೆಯಂತೆ ಶರಣರ ಸಂಖ್ಯೆಯಾದರೂ ದೊಡ್ಡದಿದೆ. ಇಲ್ಲಿಯವರೆಗೆ ದೊರೆತ ವಚನಕಾರರ ಸಂಖ್ಯೆ ೩೦೦ ಎಂದು ಗೊತ್ತಾಗಿರುತ್ತದೆ. ಎರಡೆಂಭತ್ತುಕೋಟಿ ವಚನಗಳನ್ನು ಶರಣರು ರಚಿಸಿರುವರೆಂದು ಪ್ರಮಾಣವಿದ್ದರೂ, ಇದು ಅತಿಶಯೋಕ್ತಿಯೆಂದು ತಿಳಿದರೂ ವಚನಗಳ ಸಂಖ್ಯೆಯೂ ಬಹಳ ಇರುತ್ತದೆ. ಉಪನಿಷತ್‌ಕಾರರು ಬೇರೆ ಬೇರೆ ಕಾಲಗಳಲ್ಲಿದ್ದಂತೆ ಶರಣರಾದರೂ ಬೇರೆ ಬೇರೆ ಕಾಲಗಳಲ್ಲಿ ವಚನಗಳ ರಚನೆಯನ್ನು ಮಾಡಿರುತ್ತಾರೆ. ಶಿವಶರಣರ ಹೃದಯದಿಂದ ಆಯಾಯ ಸಮಯಕ್ಕನುಸರಿಸಿ ಸ್ಫೂರ್ತಿಯಿಂದ ಬಂದವುಗಳೇ ವಚನಗಳು. ಇವು ಧಾರಾಪ್ರವಾಹದಂತೆ ನಿರರ್ಗಳವಾಗಿ ಹರಿದು ಕನ್ನಡ ನುಡಿಯನ್ನು ಪವಿತ್ರಗೊಳಿಸಿರುತ್ತವೆ. ಋಷಿ ಶಬ್ದದ ಅರ್ಥವು ಸಂಸ್ಕೃತದಲ್ಲಿ ಗಂಭೀರವಾಗಿರುವಂತೆ ಶರಣ ಶಬ್ದದ ಅರ್ಥವಾದರೂ ಬಹಳ ಮೇಲ್ಮೆ ಹೊಂದಿದ್ದಾಗಿರುತ್ತದೆ. ಇಬ್ಬರ ಮಾರ್ಗವೂ ಒಂದೇ ಆಗಿರುತ್ತದೆ. ವಿವೇಚನಾಪದ್ಧತಿಯು ಮಾತ್ರ ಭಿನ್ನವಾಗಿದೆ. ತತ್ವಗಳ ಸಿದ್ಧಾಂತವು ಒಂದೇ ತರಹದ್ದಾಗಿರುತ್ತದೆ. ಮೇಲೆ ಹೇಳಿದಂತೆ ಉಪನಿಷತ್ತುಗಳು ಸಂಸ್ಕೃತ ಭಾಷೆಯಲ್ಲಿರುವದರಿಂದ ಜಗತ್ತಿನ ಮಹಾ ಮಹಾ ಜ್ಞಾನಿಗಳ ಹೃದಯವನ್ನು ಭೇದಿಸಿ ಕೀರ್ತಿಶಾಲಿಗಳಾಗಿರುತ್ತವೆ. ವಚನಗಳು ಕನ್ನಡ ಭಾಷೆಯಲ್ಲಿರುವದರಿಂದ ಅಂತಹ

ಸೌಲಭ್ಯವು ಇವುಗಳಿಗೆ ಸಿಕ್ಕಿರುವದಿಲ್ಲ. ಇದೊಂದು ವಿಷಯುವನ್ನು ಬಿಟ್ಟರೆ ಯಾವ ವಿಷಯದಲ್ಲಿಯೂ ವಚನಗಳು ಉಪನಿಷತ್ತುಗಳಿಗಿಂತ ಕಡಿಮೆಯಾಗಿರುವದಿಲ್ಲ. ಪವಿತ್ರ ವಾದ ಆತ್ಮ, ನಿಷ್ಕಲಂಕವಾದ ಮನಸ್ಸು, ಸತ್ಯತನದ ನಡೆನುಡಿಗಳು, ನಿಷ್ಕಾಮ ಭಕ್ತಿ, ನಿಷ್ಕಾಮ ಕ್ರಿಯಾ, ಬ್ರಹ್ಮಚರ್ಯಪರಿಪಾಲನೆ, ಪರಸ್ತ್ರೀ ಪರದ್ರವ್ಯ ಪರನಿಂದೆಗಳ ನಿರಾಕರಣೆ ಮೊದಲಾದ ಅಸಂಖ್ಯಾತ ಗುಣಗಳಲ್ಲಿ—ಇಬ್ಬರೂ ಪಳಗಿದ ಕೈವುಳ್ಳವ ರಾಗಿರುತ್ತಾರೆ. ಅಂದರೆ ಶುದ್ಧ ಅಪರಂಜಿಯಂತಿರುತ್ತಾರೆ. ಉಭಯರ ತತ್ವಗಳನ್ನು ಒರೆ ಹಚ್ಚಿ ನೋಡಿದರೆ ಸಂಶಯುಗಳೆಲ್ಲ ದೂರಾಗಿ ಹೋಗುವವು. ಉಪನಿಷತ್ತುಗಳ ಭಾಷೆಯು ಕಾವ್ಯದ ಭಾಷೆಗಿಂತ ಕ್ಲಿಷ್ಟವಾಗಿರುವದು. ವಚನಗಳ ಕನ್ನಡ ಭಾಷೆಯು ಸುಲಭವಾಗಿಯೂ, ಲಲಿತವಾಗಿಯೂ ಇದ್ದು ಓದುವವರ ಮೇಲೆ ಭಾಷೆಯ ಪರಿಣಾಮವಾಗದಿರದಾಗಿರುತ್ತದೆ. ಕೆಲವು ವಚನಗಳಾದರೂ ಬಹಳ ಕಠಿಣವಿದ್ದು ಉಕ್ಕಿನ ಮುಂಡಿಗೆಯಂತಿರುತ್ತವೆ. ಅನೇಕ ಶರಣರು ಬೆಡಗಿನ ವಚನಗಳನ್ನು ರಚಿಸಿರು ತ್ತಾರೆ. ಅವು ಸಾಮಾನ್ಯ ಜನಗಳಿಗೆ ಟೀಕೆಯಿಲ್ಲದೆ ಅರ್ಥವಾಗುವದಿಲ್ಲ. ಶ್ರೀ ಬಸವಣ್ಣ ನವರು ವಚನ ವಾಙ್ಮಯದ ಆಚಾರ್ಯಪುರುಷರಾದುದರಿಂದ ಮುಖ್ಯವಾಗಿ ಅವರ ವಚನಗಳನ್ನೇ ಇಲ್ಲಿ ಹೆಚ್ಚಾಗಿ ಉಪನಿಷತ್ತುಗಳಿಗೆ ಹೋಲಿಸಿ ನೋಡುವೆವು. ಪುಷ್ಟಿ ಗಾಗಿ ಉಳಿದ ಶರಣರ ವಚನಗಳನ್ನೂ ಉದಾಹರಿಸಲಾಗುತ್ತದೆ. ಉಪನಿಷತ್ತುಗಳಲ್ಲಿ ದೊಡ್ಡ ದೊಡ್ಡ ಮಂತ್ರಗಳನ್ನು ಬಿಟ್ಟರೂ ಅನೇಕ ಚಿಕ್ಕ ಚಿಕ್ಕ ವಾಕ್ಯಗಳು ಉದ್ಬೋಧಕ ಗಳಾಗಿರುತ್ತವೆ. ವಚನಗಳಲ್ಲಿಯೂ ಆ ತರಹದ ಅನೇಕ ವಾಕ್ಯಗಳನ್ನು ನಾವು ಕಾಣ ಬಹುದು. ಗುರುಗಳಾದವರು ಅಧ್ಯಯನವನ್ನು ಮಾಡಿಸಿ ಶಿಷ್ಯರು ತಮ್ಮ ಸ್ವಗ್ರಾಮಕ್ಕೆ ಹೋಗತಕ್ಕ ಸಮಯದಲ್ಲಿ ಯಾವ ತರಹದ ಬೋಧೆಯನ್ನು ಮಾಡಬೇಕೆಂಬುವದು— ತೈತ್ತರೀಯೋಪನಿಷತ್ತಿನ ಏಕಾದಶೋನುವಾಕದಲ್ಲಿ ಕೆಳಗಿನ ವಾಕ್ಯಗಳಿರುತ್ತವೆ.—

> "ಸತ್ಯಂ ವದ, ಧರ್ಮಂ ಚರ, ಸ್ವಾಧ್ಯಾಯಾನ್ಮಾಪ್ರಮದಃ ಆಚಾರ್ಯಾಯ ಪ್ರಿಯಂಧನಂ ಆಹೃತ್ಯ ಪ್ರಜಾತಂತುಂ ಮಾ ವ್ಯವ ಚ್ಛೇತ್ಸೀಃ" ಸತ್ಯಾನ್ನಪ್ರಮದಿತವ್ಯಂ, ಧರ್ಮಾನ್ನಪ್ರಮದಿತವ್ಯಂ, ಕುಶಲಾನ್ನಪ್ರಮದಿತವ್ಯಂ, ದೇವಪಿತೃ ಕಾರ್ಯಾಭ್ಯಾಂ ನ ಪ್ರಮದಿತವ್ಯಂ, ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ, ಅತಿಥಿ ದೇವೋಭವ, ಯಾನಿ ಅನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ, ನೋ ಇತರಾಣಿ, ಯಾನಿ ಅಸ್ಮಾಕಂ ಸುಚರಿತಾನಿ ತಾನಿ ತ್ವಯೋಪಸ್ಯಾನಿ, ಶ್ರದ್ಧಯಾದೇಯಂ, ಅಶ್ರದ್ಧಯಾದೇಯಂ, ಶ್ರಿಯಾದೇಯಂ, ಭಿಯಾ ದೇಯಂ,

ಅಂದರೆ—ಸತ್ಯವನ್ನು ಹೇಳು, ಧರ್ಮವನ್ನಾಚರಿಸು, ಅಧ್ಯಯನದಿಂದ ತಪ್ಪಬೇಡ, ಗುರುವಿಗೋಸ್ಕರ ಪ್ರಿಯಕರವಾದ ದ್ರವ್ಯವನ್ನು ತಂದುಕೊಡು, ಸತ್ಯದಿಂದ ತಪ್ಪಬೇಡ. ಧರ್ಮದಿಂದ ತಪ್ಪಬಾರದು, ಕುಶಲತೆಯಿಂದ ತಪ್ಪಬಾರದು, ಐಶ್ವರ್ಯಕ್ಕೋಸ್ಕರ ತಪ್ಪಬಾರದು, ಅಧ್ಯಯನ ಪ್ರವಚನಗಳಿಂದ ತಪ್ಪಬಾರದು, ದೇವತೆಗಳ ಮತ್ತು ಪಿತೃಗಳ ಕಾರ್ಯಗಳಿಂದ ತಪ್ಪಬಾರದು, ತಾಯಿಯನ್ನು ದೇವರೆಂದು ತಿಳಿ, ತಂದೆಯನ್ನು ದೇವರೆಂದು ಭಾವಿಸು, ಗುರುಗಳನ್ನು ದೇವರ ಸಮಾನವೆಂದು ತಿಳಿ, ಅತಿಥಿಗಳನ್ನು

ಸತ್ಕರಿಸು, ಅನಿಷಿದ್ಧಗಳಾದ ಕಾರ್ಯಗಳನ್ನು ಮಾಡು, ಕೆಟ್ಟಕೆಲಸಗಳನ್ನು ಮಾಡಬೇಡ, ನಮ್ಮ ಉತ್ತಮ ಚರಿತ್ರೆಗಳ ಪ್ರಚಾರಮಾಡು, ಶ್ರದ್ಧೆಯಿಂದ ಕೊಡು. ಇನ್ನೂ ಇದೇ ತರಹದ ಸಣ್ಣ ಸಣ ವಾಕ್ಯಗಳನ್ನು ಎಲ್ಲಾ ಉಪನಿಷತ್ತುಗಳಲ್ಲಿಯೂ ಕಾಣಬಹುದು.

ಮೇಲೆ ಬರೆದ ಉಪನಿಷತ್ತುಗಳ ವಾಕ್ಯಗಳಂತೆಯೇ ವಚನಗಳಲ್ಲಿ ಸಾವಿರಾರು ಶ್ರೇಷ್ಠ ತರಗತಿಯ ವಾಕ್ಯಗಳನ್ನು ಕಾಣಬಹುದು. ಅವು ಉಪನಿಷತ್ತುಗಳ ವಾಕ್ಯಗಳಿಗಿಂತಲೂ ಅತ್ಯಂತ ಮನೋವೇಧಕಗಳಾಗಿರುತ್ತವೆ. ಇಲ್ಲಿ ಕೆಲವುಗಳನ್ನು ನೋಡೋಣ.

ಶ್ರೀ ಬಸವಣ್ಣನವರ ವಚನಗಳಲ್ಲಿ—

ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ, ಆಶೆಯಾಮಿಷ, ತಾಮಸ, ಹುಸಿ, ವಿಷಯ, ಕುಟಿಲ, ಕುಹಕ, ಕ್ಷುದ್ರ, ಕ್ರೋಧ, ಮಿಥ್ಯೆ, ಇವನೆನ್ನ ನಾಲಿಗೆಯ ಮೇಲಿಂದತ್ತ ತೆಗೆಯಯ್ಯ, ಪಶು ನಾನು ಪಶುಪತಿ ನೀನು, ಅಯ್ಯಾ ಅಯ್ಯಾ ಎಂದು ಒರಲುತ್ತಿದ್ದೇನೆ. ಓ ಎನ್ನಲಾಗದೆ ಅಯ್ಯ, ನೀನೊಲಿದರೆ ಕೊರಡು ಕೊನರುವದಯ್ಯ, ನೀನೊಲಿದರೆ ವಿಷ ಅಮೃತವಯ್ಯ, ಸಾಧುಗುಣನರಸುವದೇ ಅಪಗುಣಿಯಲ್ಲಿ? ಓಡೆತ್ತಬಲ್ಲುದು ಅವಲಕ್ಕಿಯ ಸವಿಯ, ಎನಿಸು ಕಾಲಕಲ್ಲು ನೀರೊಳಗಿರ್ದು ಮೃದುವಾಗಬಲ್ಲುದೇ? ಅಳಿದ ಮನಂಗೆ ಶಿವದೀಕ್ಷೆ ಕೊಟ್ಟರೆ ಭಕ್ತಿ ಎಂತಹುದೋ, ಕಂಗಳಿಚ್ಛೆಗೆ ಪರ ವಧುವನೆರೆವರು, ಹಂದೆಯ ಕೈಯಲ್ಲಿ ಚಂದ್ರಾಯುಧವಿದ್ದು ಫಲವೇನು? ಅಘೋರ ತಪವ ಮಾಡಿದರೇನು? ಅಂತರಂಗ ಶುದ್ಧವಿಲ್ಲದನ್ನಕ್ಕ? ಹಸಿದು ಎಕ್ಕೆಯ ಕಾಯ ಮೆಲಬಹುದೆ? ಏತ ತಲೆವಾಗಿದರೇನು ಗುರುಭಕ್ತನಾಗಬಲ್ಲುದೇ? ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ? ಸಾರಸಜ್ಜನರ ಸಂಗ ಲೇಸು ಕಂಡಯ್ಯ? ಶಿವಭಕ್ತನಿದ್ದ ಠಾವೇ ದೇವಲೋಕ, ಹೇಗೆ ಮನ ಹಾಗೆ ಘನ, ಕಾಯಕವೇ ಕೈಲಾಸ, ಹಾವಿನ ಡೊಂಕು ಹುತ್ತಕ್ಕೆ ಸಸಿನ, ಲಿಂಗವ ನೆರೆನಂಬಿದಾತ ಜಾಣನು. ಲೇಸೆನಿಸಿಕೊಂಡು ೨ ದಿನ ಬದುಕಿದರೇನು? ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ, ನೀರಬೊಬ್ಬುಳಿಗೆ ಕಬ್ಬಿಣದ ಕಟ್ಟು ಕೊಟ್ಟು ಸುರಕ್ಷಿತವಮಾಡುವ ಭರವ ನೋಡಾ, ಸಂಸಾರವೆಂಬುವದೊಂದು ಗಾಳಿಯ ಸೊಡರು, ಹರನೀವ ಕಾಲಕ್ಕೆ ಶಿರಿಯು ಬೆನ್ನಲಿಬಕ್ಕು ಉಂಬ ಜಂಗಮ ಬಂದರೆ ನಡೆ ಎಂಬರು, ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬುವರು, ವೇದಘನವೆಂಬೆನೆ ಪ್ರಾಣವಧೆಯ ಹೇಳುತ್ತದೆ. ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ, ಹರಸಿಮಾಡುವದು ಹರಿಕೆಯ ದಂಡ, ಇದ್ದುದ ವಂಚನೆಯ ಮಾಡದಿದ್ದರೆ ಅದು ನೇಮ, ನಡೆದು ತಪ್ಪದಿದ್ದರೆ ಅದು ನೇಮ, ನುಡಿದು ಹುಸಿಯದಿದ್ದರೆ ಅದು ನೇಮ. ದಿಟವ ನುಡಿವುದು ನುಡಿದಂತೆ ನಡೆವುದು, ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ, ಆಚಾರವೇ ಸ್ವರ್ಗ, ಅನಾಚಾರವೇ ನರಕ, ಅಯ್ಯಾ ಎಂದೊಡೆ ಸ್ವರ್ಗ, ಎಲವೋ ಎಂದಡೆ ನರಕ, ಜಯ

ಜೀಯ ಎಂಬ ನುಡಿಯೊಳಗೆ ಕೈಲಾಸವುಂಟು. ಏನಿ ಬಂದಿರಿ ಹದುಳವಿದ್ದಿರೆಂದರೆ ನಿಮ್ಮ ಮೈಸಿರಿ ಹಾರಿ ಹೋಹುದೇ? ಮೃದುವಚನವೇ ಸಕಲ ಜಪಂಗಳಯ್ಯ, ದಯವಿಲ್ಲದ ಧರ್ಮವು ಆವುದಯ್ಯ? ಮತಿ ಇಲ್ಲದ ಮರುಳ ನಾನಯ್ಯ, ಭಕ್ತಿಯಿಲ್ಲದ ಬಡವ ನಾನಯ್ಯ, ಕುದರನೇಸು ತೊಳೆದರೆಯು ಕೆಸರು ಮಾಬುದೇ? ದುರ್ವ್ಯಸನಿ ದುರಾಚಾರಿ ಎಂದೆನಿಸದಿರಯ್ಯ, ಲಿಂಗ ವೆಸನಿ ಜಂಗಮಪ್ರೇಮಿ ಎಂದೆನಿಸಯ್ಯ? ಕಾಣಬಹುದೇ ಪರುಷದ ಗಿರಿ ಅಂಧಕಂಗೆ? ದೆಶೆದೆಶೆಗೆ ಹಂಬಲಿಸದಿರಾಮನವೇ? ಬೇಡಿದವರಿಗೆ ಇಲ್ಲೆನ್ನದಿರಾಮನವೇ? ಹೊತ್ತಿಗೊಂದು ಪರಿಗೋಸುಂಬೆಯಂತೆ ಎನ್ನಮನ, ಮೂಗ ಕಂಡ ಕನಸಿನಂತಾಯಿತ್ತಯ್ಯ ಎನ್ನ ಭಕ್ತಿ, ಕಾಂಚನವೆಂಬ ನಾಯನೆಚ್ಚಿ ನಿಮ್ಮ ನಾನು ಮರೆದೆ, ಹಗೆಯಲ್ಲಿ ಬಿದ್ದವರಿಗೆ ಒರಳ ನೂಂಕುವರೇ? ಮನೆನೋಡಾ ಬಡವರು ಮನನೋಡಾ ಘನ, ತತ್ವದಂತೆ ನಡೆಯುವವರಿಗೆ ತೊತ್ತಾಗಿ ನಡೆವೆ, ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ, ಭಕ್ತಿಯಿಲ್ಲದ ಬಡುವ ನಾನಯ್ಯ, ಬಳಿದೊತ್ತು ಬಳಗದೊತ್ತು ವಂಶದೊತ್ತು ನಾನಯ್ಯ? ಎನಗೆ ನಮ್ಮ ಕೂಡಲಸಂಗಮನ ನೆನೆವ ಚಿಂತೆ, ಸೂರ್ಯನುದಯ ತಾವರೆಗೆ ಜೀವಾಳ, ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತೆನ್ನ ಭಕ್ತಿ, ಆತ್ಮಸ್ತುತಿ ಪರನಿಂದೆ ಕೇಳಿಸದಿರಯ್ಯ, ಗುರುವಿನ ಗುರು ಜಂಗಮ, ಓಡುವಾತ ಲೆಂಕನಲ್ಲ ಬೇಡುವಾತ ಭಕ್ತನಲ್ಲ, ಪರಧನ ಪರಸ್ತ್ರೀ ಎಂಬ ಜೂಬಿಗಂಜುವೆ, ಆವನಾದಡೇನು ಶ್ರೀ ಮಹಾದೇವನ ನೆನೆವನ ಬಾಯ ತಂಬುಲವ ಮೆಲುವೆ, ನೀ ಒಲಿಯಿತ್ತೆ ಪುಣ್ಯ, ನೀ ವಲ್ಲುದೇ ಪಾಪ, ಸತಿಯಾನು ಪತಿ ನೀನಯ್ಯ, ದೇವ ಒಬ್ಬನೇ ಕಾಣಿರೋ, ಕೂಡಲಸಂಗಮದೇವನೇ ನಿತ್ಯ ಉಳಿದದೈವವೆಲ್ಲ ಅನಿತ್ಯ, ವರಗುರುವಿಶ್ವಕ್ಕೆಲ್ಲ ಗಿರಿಜಾಮನೋವಲ್ಲಭ ಪರಮಕಾರುಣಿಕ, ಹೊಲೆಯೊಳಗೆ ಹುಟ್ಟಿ ಕುಲವನರಸುವೆ, ಕೊಲ್ಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ ದೇವನೊಬ್ಬ ನಾಮ ಹಲವು, ಕಂಗಳು ತಪ್ಪಿ ನೋಡಿದರೆ ಮಾರಿ, ಮಾತಿನಂತೆ ಮನವಿಲ್ಲದ ಜಾತಿ ಡೊಂಬರ ನೋಡಿ ನಗುವನಯ್ಯ, ಮರಣವೇ ಮಹಾನವಮಿ, ಲಿಂಗಕ್ಕಲ್ಲದೆ ಮಾಡೆನೀ ಮನವನು, ಯತ್ರ ಜೀವಃ ತತ್ರ ಶಿವಃ, ಸರ್ವಜೀವದಯಾಪಾರಿಯಾದರೆ ಕೂಡಲಸಂಗಮದೇವನು ಕೈಲಾಸದಿಂದ ಬಂದು ಎತ್ತಿಕೊಳ್ಳನೇ? ಲಿಂಗಕ್ಕೆ ತನ್ನ ಮನವೇ ಭಾಜನ, ಕುಲ ಒಂದೇ ತನ್ನ ತಾನರಿದವಂಗೆ,

ಹೀಗೆಯೇ ಬೇಕಾದಷ್ಟು ನೀತಿಯ ಮಾತುಗಳನ್ನು ಕೊಡಬಹುದು. ಉಪನಿಷತ್ತುಗಳಲ್ಲಿ ಆತ್ಮತತ್ವದ ಹೊರತು ಸತ್ಯ ಬ್ರಹ್ಮಚರ್ಯ ಮೊದಲಾದ ವಿಷಯಗಳನ್ನು ನಿರೂಪಿಸುವಾಗ ವಿದ್ಯೆ, ಅವಿದ್ಯೆ (ಕ್ಷರಾ-ಅಕ್ಷರಾ) ಓಂಕಾರದ ಮಹತ್ವಗಳನ್ನು ನಿರೂಪಿಸುತ್ತ ಜ್ಞಾನ ಮತ್ತು ಕರ್ಮಗಳ ವಿವೇಚನೆಯನ್ನು ಮಾಡುತ್ತಾರೆ. ಕೆಲವು ಉಪನಿಷತ್ತುಗಳು ಜ್ಞಾನಕ್ಕೆ ಪ್ರಾಧಾನ್ಯವನ್ನು ಕೊಡುತ್ತವೆ; ಮತ್ತೆ ಕೆಲವು ಉಪನಿಷತ್ತುಗಳು ಕರ್ಮಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟವೆ. ಇನ್ನುಳಿದ ಉಪನಿಷತ್ತುಗಳು ಜ್ಞಾನ ಕರ್ಮಗಳೆರಡನ್ನೂ ಪ್ರತಿಪಾದಿಸುತ್ತಲಿವೆ. ಬಸವಾದಿ ಪ್ರಮಥರೂ ಕೂಡ ಕೇವಲ

ಜ್ಞಾನವನ್ನಾಗಲಿ ಕೇವಲ ಕ್ರಿಯೆಯನ್ನಾಗಲಿ ಒಪ್ಪುವದಿಲ್ಲ. ಜ್ಞಾನ ಕ್ರಿಯೆಗಳೆರಡನ್ನೂ ಸಮರ್ಥಿಸಿ ಅನೇಕ ವಚನಗಳನ್ನು ಹೇಳಿರುತ್ತಾರೆ. ಬಸವಣ್ಣನವರ ಕ್ರಿಯಾಯೋಗ ಎಂಬುವ ಪ್ರಕರಣದಲ್ಲಿ ಇದನ್ನು ವಿಸ್ತಾರವಾಗಿ ವಿವೇಚನೆ ಮಾಡಿರುವದರಿಂದ ಇಲ್ಲಿ ಹೆಚ್ಚಿಗೆ ಹೇಳುವದಿಲ್ಲ.

ಶ್ರೀ ಬಸವಣ್ಣನವರು ಪ್ರಭುದೇವರನ್ನು ಸ್ತುತಿಸುವ ಕಾಲಕ್ಕೆ ಅವರ ಅಲೌಕಿಕ ಶಕ್ತಿಯನ್ನು ವ್ಯಕ್ತಗೊಳಿಸಿ ಪ್ರಭುವು ಜಗತ್ತಿನಲ್ಲಿ ಬಾಹ್ಯೇಂದ್ರಿಯ ನಿರಪೇಕ್ಷನಾಗಿ ವ್ಯವಹರಿಸುತ್ತಿರುವದನ್ನು ಕೆಳಗಿನ ವಚನದಿಂದ ನಿರೂಪಿಸುತ್ತಾರೆ. ಅರ್ಥಾತ್ ದೇವರು ಹೇಗಿದ್ದಾನೆ? ಎಲ್ಲಿರುತ್ತಾನೆ? ಮೊದಲಾದ ವಿಷಯಗಳಲ್ಲಿ ಉಪನಿಷತ್ತುಗಳಿಗೂ, ಬಸವಣ್ಣನವರ ವಚನಗಳಿಗೂ ಸಾಮ್ಯವಿರುತ್ತದೆ—

೩೯

**ಶೂನ್ಯಸಂಪಾದನೆ—ಪುಟ ೧೪**

"ಕಾಲಿಲ್ಲದೆ ನಡೆವನು ಕೈಯಿಲ್ಲದೆ ಹಿಡಿವನು ಕಣ್ಣಿಲ್ಲದೆ ನೋಡುವನು ಸಹಜವಾಗಿ ಮೈಯಿಲ್ಲದ ಬಣ್ಣ ಮಥನವಿಲ್ಲದ ಕೂಟ, ಅಲ್ಲಿ ಸ್ವೈರೆರಗಾಗಿ ಶಿಲೆಯ ಮೇಲಿಹ ವಡಲು ತನ್ನ ತಾನರಿಯದೆ ಬಿಡದೆ ಎಲ್ಲಾ ಬೆಂಬತ್ತಿ ಬಂದ ಪರಿಯ ನೋಡಾ, ಜಡವಿಡಿದ ಎನ್ನ ಕಾಯದ ಕಳವಳವ ತಿಳುಹಲೆಂದು ಅಡಿಗಡಿಗೆ ಅನುಭಾವವ ತೋರುತ್ತಿದ್ದಾನೆ. ಕುಳ್ಳಿಡೆಯಲ್ಲಿ ಕುಂಟನಿದ್ದೆಡೆಯಲ್ಲಿ ಹೆಳವ ಎಲ್ಲಿ ನೋಡಿದಡಲ್ಲಿ ಪರಿಪೂರ್ಣನು ಮೆಲ್ಲಮೆಲ್ಲನೆ ಒಳಗೆ ನೊರೆದು ತೋರುತ್ತಿದ್ದಾನೆ. ಬಲ್ಲವರೆಲ್ಲ ಬದುಕಿ ಎಂದು ಝಲ್ಲರಿಯ ಮೇಲೊಂದು ಬೆಳಗೊಡೆಯ ಹಿಡಿಯನು ಬಲ್ಲಿದನಾನೆಯ ತಡೆದು ನಿಲ್ಲಿಸ ಬಲ್ಲನು. ಕೂಡಲಸಂಗನುದೇವರ ಮಹಾಮನೆಯಲ್ಲಿ ಪ್ರಭುದೇವರ ಮರೆಹೊಕ್ಕು ಬದುಕಿದೆನು ನಾನು"

ಈ ವಚನಕ್ಕೆ ಸರಿಯಾಗಿ ಬೇರೆ ಬೇರೆ ಉಪನಿಷತ್ತುಗಳ ಮಂತ್ರಗಳು ಕೆಳಗೆ ಬರೆದ ಪ್ರಕಾರ ಇರುತ್ತವೆ.

**(೧) ಶ್ವೇತಾಶ್ವತರೋಪನಿಷತ್—ಅಧ್ಯಾಯ ೩, ಶ್ಲೋಕ ೧೯**

ಅಪಾಣಿಪಾದೋ ಜವನೋಗ್ರಹೀತಾ ಪಶ್ಯತ್ಯಚಕ್ಷುಃ ಸಶೃಣೋತ್ಯಕರ್ಣಃ ।
ಸವೇತ್ತಿವೇದ್ಯಂ ನಚತಸ್ಯಾಸ್ತಿವೇತ್ತಾ ತಮಾಹುರಗ್ರ್ಯಂ ಪುರುಷಂ ಮಹಾಂತಂ ।

**(೨) ಕೈವಲ್ಯೋಪನಿಷತ್—ದ್ವಿತೀಯ ಖಂಡ, ಶ್ಲೋಕ ೨**

ಅಪಾಣಿಪಾದೋಹಮಚಿಂತ್ಯಶಕ್ತಿಃ ಪಶ್ಯಾಮ್ಯಚಕ್ಷುಃ ಸಶೃಣೋತ್ಯಕರ್ಣಃ ।
ಅಹಂ ವಿಜಾನಾಮಿ ವಿವಿಕ್ತರೂಪೋ ನ ಚಾಸ್ತಿವೇತ್ತಾ ಮಮಚಿತ್ ಸದಾಹಂ ॥

**(೩) ಕಠೋಪನಿಷತ್—ಪ್ರಥಮಾಧ್ಯಾಯ, ತೃತೀಯ ವಲ್ಲಿ**

ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾರಸಂ ನಿತ್ಯಮಗಂಧವಚ್ಚಯತ್ ।
ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತನ್ಮೃತ್ಯು ಮುಖಾತ್ ।
ಪ್ರಮುಚ್ಯತೇ ॥

(೪) ಮುಂಡಕೋಪನಿಷತ್—ಪ್ರಥಮ ಮುಂಡಕ, ಶ್ಲೋಕ ೭

ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃ ।
ಶ್ರೋತ್ರಂ ತದಪಾಣಿಪಾದಂ ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ॥

(೫) ಮಾಂಡೂಕ್ಯೋಪನಿಷತ್—ಶ್ಲೋಕ ೬

ನಾಂತಃಪ್ರಜ್ಞಂ ನ ಬಹಿಃ ಪ್ರಜ್ಞಂ ನೋಭಯತಃ ಪ್ರಜ್ಞಂ ನ ಪ್ರಜ್ಞಾನ ಘನಂ
ನ ಪ್ರಜ್ಞಂ ನಾ ಪ್ರಜ್ಞಂ ಅದೃಷ್ಟಮವ್ಯವಹಾರ್ಯಮಗ್ರಾಹ್ಯಮಲಕ್ಷಣಂ ।
ಅಚಿಂತ್ಯಮವ್ಯಪದೇಶ್ಯಮೇಕಾತ್ಮ ಪ್ರತ್ಯಯಸಾರಂ ಪ್ರಪಂಚೋಪಶಮಂ
ಶಾಂತಂ ಶಿವಂ ಅದ್ವೈತಂ ಚತುರ್ಥಂ ಸ ಆತ್ಮಾಸವಿಜ್ಞೇಯಃ ॥

(೬) ಕೇನೋಪನಿಷತ್—ಪ್ರಥಮಖಂಡ, ೩ ಶ್ಲೋಕಗಳಿಂದ

ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ ನ ಮನೋ ನ ವಿದ್ಮೋ ನ ವಿಜಾನೀಮೋ
ಯಥೈತದನುಶಿಷ್ಯಾದನ್ಯದೇವ ತದ್ವಿದಿತಾದಥೋ ಅವಿದಿತಾದಧಿ ॥
ಇತಿ ಶುಶ್ರುಮ ಪೂರ್ವೇಷಾಂ ಯೇನಸ್ತದ್ವ್ಯಾಚಚಕ್ಷಿರೇ ॥ ೩ ॥

ಯದ್ವಾಚಾನಭ್ಯುದಿತಂ ಯೇನವಾಗಭ್ಯುದ್ಯತೇ ।
ತದೇವ ಬ್ರಹ್ಮತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ೪ ॥

ಯನ್ಮನಸಾನಮನುತೆ ಯೇನಾಹುರ್ಮನೋ ಮತಮ್ ।
ತದೇವ ಬ್ರಹ್ಮತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ೫ ॥

ಯಚ್ಚಕ್ಷುಷಾ ನ ಪಶ್ಯತಿ ಯೇನಚಕ್ಷೂಂಷಿ ಪಶ್ಯತಿ ।
ತದೇವ ಬ್ರಹ್ಮತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ೬ ॥

ಯಚ್ಛ್ರೋತ್ರೇಣ ನ ಶೃಣೋತಿ ಯೇನಶ್ರೋತ್ರಮಿದಗ್ಂ ಶ್ರುತಂ ।
ತದೇವ ಬ್ರಹ್ಮತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ೭ ॥

ಯತ್ಪ್ರಾಣೇನ ನ ಪ್ರಾಣಿತಿ ಯೇನಪ್ರಾಣಃ ಪ್ರಣೀಯತೇ ।
ತದೇವ ಬ್ರಹ್ಮತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ೮ ॥

ಈ ಉಪನಿಷತ್ತುಗಳ ಅರ್ಥವು ಮೇಲಿನ ವಚನಕ್ಕೆ ಸರಿಯಾಗಿದೆ. ಹೀಗೆ ಆರು ಉಪನಿಷತ್ತುಗಳಲ್ಲಿಯೂ ಒಂದೇ ರೀತಿ ಇರುತ್ತದೆ. ಬಸವಣ್ಣನವರು ದೇವರ ಸ್ವರೂಪವನ್ನು ಹೇಳುವ ಕಾಲಕ್ಕೆ—

೪೦

"ಶ್ರುತಿತತಿ ಶಿರದಮೇಲೆ ಅತ್ಯತಿಷ್ಠದ್ದಶಾಂಗುಲನ ನಾನೇನೆಂಬೆನಯ್ಯ
ಘನಕ್ಕೆ ಘನ ಮಹಿಮನ ಮನಕ್ಕಗೋಚರನ? ಅಣೋರಣೀಯಾನ್
ಮಹತೋಮಹೀಯಾನ್ ಮಹಾದಾನಿ ಕೂಡಲಸಂಗಮದೇವ"

ಇನ್ನೊಂದು ವಚನದಲ್ಲಿ—

೪೧

"ಹಿರಿದಕ್ಕೆ ಹಿರಿದು ಕಿರಿದಕ್ಕೆ ಕಿರಿದು ವಾಙ್ಮನಕ್ಕಗೋಚರ ಕೂಡಲ
ಸಂಗಮದೇವಾ"

ಈ ವಚನಕ್ಕೆ ಸರಿಯಾಗಿ ಬೇರೆ ಬೇರೆ ಉಪನಿಷತ್ತುಗಳಲ್ಲಿ—

(೧) ಕಠೋಪನಿಷತ್—ಪ್ರಥಮಾಧ್ಯಾಯ, ದ್ವಿತೀಯ ವಲ್ಲಿ, ಶ್ಲೋಕ ೨೦

ಅಣೋರಣೀಯಾನ್ ಮಹತೋಮಹೀಯಾನಾತ್ಮಾಸ್ಯ ಜಂತೋರ್ನಿಹಿತೋ ಗುಹಾಯಾಮ್
ತಮಕ್ರತುಃ ಪಶ್ಯತಿ ವೀತಶೋಕೋ ಧಾತುಃ ಪ್ರಸಾದಾನ್ಮಹಿಮಾನಮಾತ್ಮನಃ ॥

(೨) ಶ್ವೇತಾಶ್ವತರೋಪನಿಷತ್–ಮೂರನೆಯ ಅಧ್ಯಾಯ, ಶ್ಲೋಕ ೨೦

ಅಣೋರಣೀಯಾನ್ ಮಹತೋಮಹೀಯಾನಾತ್ಮಾಗುಹಾಯಾಂ ನಿಹಿತೋಸ್ಯ ಜಂತೋಃ ।
ತಮಕ್ರತುಂ ಪಶ್ಯತಿ ವೀತಶೋಕೋ ಧಾತುಃ ಪ್ರಸಾದಾನ್ಮಹಿಮಾನಮೀಶಂ ॥

(೩) ಕೈವಲ್ಯೋಪನಿಷತ್–ಪ್ರಥಮಾಧ್ಯಾಯ, ೨ನೇ ಖಂಡ

ಅಣೋರಣೀಯಾನಹಮೇವ ತದ್ವನ್ಮಹಾನಹಂ ವಿಶ್ವಮಹಂ ವಿಚಿತ್ರಂ ।
ಪುರಾತನೋಹಂ ಪುರುಷೋಹಮೀಶೋ ಹಿರಣ್ಮಯೋಹಂ ಶಿವರೂಪಮಸ್ಮಿ ॥

(೪) ನಾರಾಯಣೋಪನಿಷತ್

ಅಣೋರಣೀಯಾನ್ ಮಹತೋಮಹೀಯಾನ್ ಆತ್ಮಾಗುಹಾಯಾಂ ನಿಹಿತೋಸ್ಯ ಜಂತೋಃ ।
ತಮಕ್ರತುಂ ಪಶ್ಯತಿ ವೀತಶೋಕಃ ಧಾತುಃ ಪ್ರಸಾದಾನ್ಮಹಿಮಾನಮೀಶಂ ॥

ಈ ಉಪನಿಷತ್ತಿನ ವಾಕ್ಯಗಳಿಗೂ, ಮೇಲೆ ಬರೆದ ಬಸವಣ್ಣನವರ ವಚನಕ್ಕೂ ಏನೂ ವ್ಯತ್ಯಾಸವಿರುವದಿಲ್ಲ.

೪೨

ಸ್ವತಂತ್ರಸಿದ್ಧಲಿಂಗೇಶ್ವರ ದೇವರು—

"ಅಣುವಿಂಗೆ ಅಣು ಮಹತ್ತಿಂಗೆ ಮಹತ್ತಾಗಿ ಎಣಿಸಬಾರದ ಬಹುಳ ಬ್ರಹ್ಮಕ್ಕೆ ಎಣಿಯಾವುದು ಹೇಳಾ? ಅಗಣಿತನಕ್ಷಯ ಸರ್ವಜೀವ ಮನಃ ಪ್ರೇರಕ ಸರ್ವಜ್ಞ ಏಕೋದೇವ ಸಂವಿತ್ಪ್ರಕಾಶ ಪರಮೇಶ್ವರನ ಮನವೆಂಬ ದರ್ಪಣದೊಳಗೆ ಬಿಂದ್ವಾಕಾಶ ರೂಪನಾಗಿ ಬೆಳಗಿ ತೋರುವ ಶಿವನ ಅಂದವ ತಿಳಿದು ನೋಡಿ ಕೂಡಬಲ್ಲಾತನೇ ಪರಶಿವಯೋಗಿ, ಆತ ಜನನ ಮರಣ ವಿರಹಿತ, ಆತನೇ ಸರ್ವಜ್ಞನು, ಆತನು ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನು ತಾನೆ."

ಈ ವಚನವು ಮೇಲಿನ ಉಪನಿಷತ್ತುಗಳಿಗೆ ಸರಿಯಾಗಿದೆ.

೪೩

ಶ್ರೀ ಬಸವಣ್ಣನವರು ದೇವರನ್ನು ಹೇಗೆ ಪೂಜಿಸಬೇಕೆಂಬ ವಿಷಯದಲ್ಲಿ—

"ಲಿಂಗವ ಪೂಜಿಸಿ ಫಲವೇನಯ್ಯ ಸಮರತಿಕಳೆ ಸಮಸುಖವರಿಯದನ್ನಕ್ಕ? ಲಿಂಗವ ಪೂಜಿಸಿ ಫಲವೇನಯ್ಯಾ? ಕೂಡಲಸಂಗಮದೇವರ ಪೂಜಿಸಿ ನದಿಯೊಳಗೆ ನದಿಯ ಬೆರಸಿದಂತಾಗದನ್ನಕ್ಕ?"

ಇದಕ್ಕೆ ಸರಿಯಾಗಿ—

(೧) ಪ್ರಶ್ನೋಪನಿಷತ್–ಆರನೆಯ ಪ್ರಶ್ನ, ಶ್ಲೋಕ ೫

ಸಯಥೆಮಾನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಂ ಪ್ರಾಪ್ಯಾಸ್ತಂ
ಗಚ್ಛಂತಿ ಭಿದ್ಯೇತೇ ಚಾಸಾಂ ನಾಮರೂಪೇ ಸಮುದ್ರ ಇತ್ಯೇವಂ ಪ್ರೋಚ್ಯತೇ ।
ಏವಮೇವಾಸ್ಯಪರಿ ದ್ರಷ್ಟುರಿಮಾಃ ಷೋಡಶಕಲಾಃ ಪುರುಷಾಯಣಾಃ ॥
ಪುರುಷಂ ಪ್ರಾಪ್ಯಾಃ ತಂ ಗಚ್ಛಂತಿ ಭಿದ್ಯೇತೇ ತಾಸಾಂ ನಾಮರೂಪೇ ಪುರುಷ ಇತ್ಯೇವಂ
ಪ್ರೋಚ್ಯತೇ ಸ ಏಷಃ ಅಕಲಃ ಅಮೃತಃ ಭವತಿ ತದೇಷ ಶ್ಲೋಕಃ ॥

ಹೇಗೆ ನದಿಗಳು ಸಮುದ್ರಾಭಿಮುಖವಾಗಿ ಹರಿದು ಸಮುದ್ರವನ್ನು ಕೂಡಿ ಅದರೊಳಗೆ ಬೆರೆತುಹೋಗುತ್ತವೆಯೋ ಹಾಗೆ ಅವುಗಳ ನಾಮರೂಪಗಳೂ ಅಳಿದು ಸಮುದ್ರವೇ

ಎಂದು ಹೇಳಲ್ಪಡುತ್ತವೆ. ಅದರಂತೆಯೇ ಸೋಡಶ ಕಲೆಗಳು ಪುರುಷನನ್ನು ಹೊಂದಿ ಪುರುಷನೇ ಆಗುತ್ತಾನೆ. ಅವನೇ ಕಲಾರಹಿತ, ಅಖಂಡ, ಅಮೃತ.

**(೨) ಮುಂಡಕೋಪನಿಷತ್—ತೃತೀಯ ಮುಂಡಕ, ಶ್ಲೋಕ ೮**

ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇ ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ ।
ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ ॥

ಈ ಮಂತ್ರದ ಅರ್ಥವಾದರೂ ಮೇಲಿನ ಮಂತ್ರದ ಅರ್ಥದಂತೆಯೇ ಇರುತ್ತದೆ.

**(೩) ಕಠೋಪನಿಷತ್—ಅಧ್ಯಾಯ ೨, ಶ್ಲೋಕ ೧೫**

ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ।
ಏವಂ ಮುನೇರ್ವಿಜಾನತಃ ಆತ್ಮಾ ಭವತಿ ಗೌತಮ ॥

ಅಂದರೆ ಶುದ್ಧೋದಕದಲ್ಲಿ ಶುದ್ಧೋದಕವನ್ನು ಕೂಡಿಸಿದರೆ ಅದು ತದ್ರೂಪವಾಗುವಂತೆ ಜ್ಞಾನಿಯ ಆತ್ಮವಾದರೂ ತದ್ರೂಪ ಅಂದರೆ ಪರಬ್ರಹ್ಮಸ್ವರೂಪವನ್ನು ಹೊಂದುವದು.

**೪೪**

"ಗುರುಶಿಷ್ಯ ಸಂಬಂಧವಾದುದಕ್ಕೆ ಇದು ಚಿನ್ಹ ಹಿಂದಬಿಟ್ಟು ಮುಂದೆ ಹಿಡಿಯಲೇಬೇಕು. ಕೂಡಲಸಂಗಮದೇವ ಕೇಳಯ್ಯ ಕಿಚ್ಚಿನೊಳಗೆ ಕೋಲ ಬಯಚಿಟ್ಟಂತಿರಬೇಕು."

ದೇವರನ್ನು ಹೇಗೆ ಪೂಜಿಸಬೇಕೆಂಬುವದನ್ನು ಇಲ್ಲಿಯವರೆಗೆ ಹೇಳಿದ್ದಾಯಿತು. ಆದರೆ ಬಸವಣ್ಣನವರು ತಾವು ಹೇಗೆ ಪೂಜಿಸುತ್ತಿದ್ದರೆಂಬುವದನ್ನೂ ಕೂಡ ಒಂದು ವಚನದಲ್ಲಿ ಹೇಳಿರುತ್ತಾರೆ.

**೪೫**

"ದಶದಿಕ್ಕು ಧರೆ ಗಗನವೆಂಬುದ ನಾನರಿಯೆನಯ್ಯಾ, 'ಲಿಂಗಮಧ್ಯೇ ಜಗತ್ಸರ್ವಂ' ಎಂಬುದ ನಾನರಿಯೆನಯ್ಯಾ, ಲಿಂಗ ಸೋಂಕಿನ ಸುಖದೊಳಗೆ ಶಿವಶಿವ ಎನುತಿರ್ದೆನಯ್ಯ, ಅಂಬುಧಿಯೊಳಗೆ ಬಿದ್ದ ವಾರಿಕಲ್ಲಿನಂತೆ ಭಿನ್ನ ಭಾವವರಿಯದೆ ಶಿವಶಿವ ಎನುತಿರ್ದೆನು ಕಾಣಾ ಕೂಡಲಸಂಗಮದೇವಾ."

ಬೇರೆಬೇರೆ ಶರಣರೂ ಕೂಡ ದೇವರನ್ನು ಹೇಗೆ ಪೂಜಿಸಬೇಕೆಂದು ಅನೇಕ ಸೊಗಸಾದ ವಚನಗಳನ್ನು ಹೇಳಿರುತ್ತಾರೆ. ಅವುಗಳಲ್ಲಿ ಕೆಲವುಗಳನ್ನು ಇಲ್ಲಿ ನೋಡೋಣ.

**೪೬**

ಸಿದ್ಧೇಶ್ವರದೇವರು—

"ಚಿನ್ನದಿಂದಲಾದ ಹಲವು ಬಂಗಾರವಳಿದು ಕರಗಿದರೆ ಚಿನ್ನವೇ ಆದಂತೆ ಉದಕದಿಂದಾದ ವಾರಿಕಲ್ಲು ಕರಗಿ ಮುನ್ನಿನ ಉದಕವೇ ಆದಂತೆ ಚಿನ್ಮಯ ವಸ್ತುವಿನಿಂದ ಉದಯವಾದ ಚಿತ್ಸ್ವರೂಪನಾದ ಶರಣನು ಆಚಿನ್ಮಯ ಪರವಸ್ತುವನೆ ಬೆರಸಿ ಘನ್ನು ಶಿವಯೋಗಿಯಾದನಯ್ಯ ಮಹಾಲಿಂಗ ಗುರುಸಿದ್ಧೇಶ್ವರಾ."

೪೭

ಅಖಂಡೇಶ್ವರದೇವರು—

"ಆಕಾಶದಲ್ಲಿ ತೋರುವ ಇಂದ್ರಚಾಪವಡಗುವದಕ್ಕೆ ಆಕಾಶವೇ ಆಶ್ರಯವಲ್ಲದೆ ಬೇರೆ ಮತ್ತೆ ಆಶ್ರಯವುಂಟೆ ಅಯ್ಯ? ಅಗ್ನಿಯಲ್ಲಿ ತೋರಿದ ಕಿಡಿಗಳಡಗುವದಕ್ಕೆ ಅಗ್ನಿಯೇ ಆಶ್ರಯವಲ್ಲದೆ ಬೇರೆ ಮತ್ತೆ ಆಶ್ರಯವುಂಟೆ ಅಯ್ಯ? ಆದಿ ಅನಾದಿಯಿಂದತ್ತತ್ತಲಾದ ಪರವಸ್ತುವಿನಲ್ಲಿ ರೂಪಿಸಿ ತೋರಿದ ನಿಜೈಕ್ಯವಡಗುವದಕ್ಕೆ ಆ ಪರವಸ್ತು ಆಶ್ರಯವಲ್ಲದೆ ಬೇರೆ ಮತ್ತೆ ಆಶ್ರಯವುಂಟೆ? ಅಖಂಡೇಶ್ವರ."

೪೮

ಪ್ರಭುದೇವರು—

"ಅಯ್ಯಾ ಚಂದ್ರನಿಂದಾದ ಕಲೆ ಚಂದ್ರನ ಬೆರಸಿ ಚಂದ್ರನಾದಂತೆ, ಸೂರ್ಯನಿಂದಾದ ಕಿರಣ ಸೂರ್ಯನ ಬೆರಸಿ ಸೂರ್ಯನಾದಂತೆ, ಅಗ್ನಿಯಿಂದಾದ ಕಾಂತಿ ಅಗ್ನಿಯ ಬೆರಸಿ ಅಗ್ನಿಯಾದಂತೆ, ದೀಪದಿಂದಾದ ಬೆಳಕು ದೀಪವ ಬೆರಸಿ ದೀಪವಾದಂತೆ, ಸಮುದ್ರದಿಂದಾದ ನದಿ ಸಮುದ್ರವ ಬೆರಸಿ ಸಮುದ್ರವೇ ಆದಂತೆ, ಪರಶಿವ ನಿರವಯಶೂನ್ಯಮೂರ್ತಿ ಸಂಗನ ಬಸವಣ್ಣನ ಚಿದ್ರೂಪರುಚಿ ತೃಪ್ತಿಯೊಳಗೆ ಶುದ್ಧ ಸಿದ್ಧ ಪ್ರಸಿದ್ಧವಾಗಿ ಜನಿಸಿ ಮತ್ತೆಂದಿನಂತೆ ಗುಹೇಶ್ವರ ಲಿಂಗಪ್ರಭು ಎಂಬ ಉಭಯ ನಾಮವಳಿದು ಸತ್ತುಚಿತ್ತಾನಂದ ನಿತ್ಯಪರಿಪೂರ್ಣ ಅವಿರಳ ಪರಶಿವ ನಿರವಯಶೂನ್ಯ ಮೂರ್ತಿ ಸಂಗನ ಬಸವಣ್ಣನ ಚಿದ್ರೂಪುರುಚಿ ತೃಪ್ತಿ ಪಾದೋದಕ ಪ್ರಸಾದವಪ್ಪುದು ತಪ್ಪದು ನೋಡಾ ಚನ್ನಬಸವಣ್ಣ."

೪೯

ಸಿದ್ಧೇಶ್ವರದೇವರು—

"ಕ್ಷುತ್ಪಿಪಾಸೆ, ಶೋಕ, ಮೋಹ, ಮದ, ಮತ್ಸರನೆಂಬ ಷಡ್ವರ್ಗಂಗಳು ಇಲ್ಲದೆ ಇರುತಿರ್ಪನು. ನಾಹಂ, ಕೋಹಂ, ಸೋಹಂ ಎಂಬ ಭಾವ ವಿರಹಿತನಾಗಿಪ್ಪನು. ಅಷ್ಟವಿಧಾರ್ಚನೆ ಷೋಡಶೋಪಚಾರ ವಿರಹಿತನಾಗಿರ್ಪನು. ಕರ್ಪೂರ ಅಗ್ನಿಸಂಯೋಗವಾಗಿ ಕರ್ಪೂರದ ಗುಣವಳಿದು ಅಗ್ನಿಯಾದಂತೆ ಲಿಂಗವ ನೆನೆನೆನೆದು ಲಿಂಗವೇ ತಾನಾಗಿಪ್ಪುದೀಗ ನಿಜೈಕ್ಯಸ್ಥಲವೆಂದೆಂಬೆನಯ್ಯ ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ."

೫೦

ಸ್ವತಂತ್ರಸಿದ್ಧಲಿಂಗದೇವರು—

"ನಾನು ನಾನೆಂಬ ಅಹಂಕಾರ ಭಾವವಳಿದು ಜ್ಞಾನಾನಂದಮಯ ತಾನಾದ ಬಳಿಕ ತನ್ನಿಂದನ್ಯವಾದುದೊಂದಿಲ್ಲವಾಗಿ, ಕಾಣಲೊಂದಿಲ್ಲ, ಕೇಳಲೊಂದಿಲ್ಲ, ಅರಿಯಲೊಂದಿಲ್ಲ ಅನಾದಿ ಅವಿದ್ಯಾಮೂಲ ಮಾಯಾಜಾಲ ಚರಾಚರ ನಾಸ್ತಿಯಾಯಿತ್ತು. ಇನ್ನೇನ ಹೇಳಲುಂಟೀ ನಿಜೈಕ್ಯಂಗೆ?

ವಿಷಯ ವಿಷಯಿಗಳೆಂಬ ಉಭಯ ಭಾವವಡಗಿ ನಿಜಗುರು ಸ್ವತಂತ್ರಸಿದ್ಧ ಲಿಂಗೇಶ್ವರನೇ ತಾನಾಗಿಹನು."

ಉಪನಿಷತ್ತುಗಳಲ್ಲಿ—

" ದೇಹೋ ದೇವಾಲಯಃ ಪ್ರೋಕ್ತೋ ಜೀವೋಯಂ ಶಂಕರಸ್ಮೃತಃ "

ಈ ವಾಕ್ಯಕ್ಕೆ ಸರಿಯಾಗಿ ಬಸವಣ್ಣನವರೇ ಮೊದಲಾದವರು ವಚನಗಳನ್ನು ಹೇಳಿರುತ್ತಾರೆ.

೫೧

" ಉಳ್ಳವರು ಶಿವಾಲಯ ಮಾಡುವರು ನಾನೇನು ಮಾಡುವೆನಯ್ಯ? ಬಡವಯ್ಯ ಎನ್ನ ಕಾಲೇ ಕಂಭ, ದೇಹವೇ ದೇಗುಲ, ಶಿರ ಹೊನ್ನಕಳಸವಯ್ಯ ನೋಡಯ್ಯ ಕೂಡಲಸಂಗಮದೇವಯ್ಯ, ಕೇಳಯ್ಯ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ."

೫೨

" ದೇಹವೆಂಬ ದೇಗುಲದೊಳಗೆ ಭಾವಸಿಂಹಾಸನವನ್ನು ಮಾಡಿ ಜೀವದೊಡೆಯನ ಪೂಜಿಸಬಲ್ಲ ದೇವರಿಗೆದೇವನೆಂಬೆನಯ್ಯ ಅಖಂಡೇಶ್ವರಾ."

೫೩

" ಎನ್ನ ಪಾದವೇ ಪಾದಶಿಲೆಯಾಗಿ, ಎನ್ನ ಕಾಲೇ ಕಡಹದ ಕಂಭಗಳಾಗಿ, ಎನ್ನ ತೋಳೇ ನಾಗವೇದಿಯಾಗಿ, ಎನ್ನ ಅಸ್ಥಿಯೇ ಸುತ್ತಳ ಜಂತೆಯಾಗಿ, ಎನ್ನ ಅಧರವೇ ಬಳ್ಳಿಹ ಬಾಗಿಲಾಗಿ, ಎನ್ನ ಗುರುಕರುಣವೇ ಲಿಂಗವಾಗಿ, ಎನ್ನ ಅಂಗವೇ ರಂಗಮಧ್ಯವಾಗಿ, ಎನ್ನ ಹೃದಯಕಮಲವೇ ಪೂಜೆಯಾಗಿ, ಎನ್ನ ಕಿವಿಗಳೇ ಕೀರ್ತಿಮುಖವಾಗಿ, ಎನ್ನ ನೆನೆವ ನಾಲಿಗೆಯೇ ಗಂಟೆಯಾಗಿ, ಎನ್ನ ಶಿರವೇ ಸುವರ್ಣ ಕಲಶವಾಗಿ, ಎನ್ನ ನಯನವೇ ಕುಂದದ ಜ್ಯೋತಿಯಾಗಿ, ಎನ್ನ ಚರ್ಮವೇ ನಿರ್ಮಲ ಹೊದಿಕೆಯಾಗಿ, ಎನ್ನ ನೆನಹೇ ನಿನಗೆ ಉಪಹಾರವಾಗಿ, ಗುರುಪುರದಮಲ್ಲಯ್ಯ ನಿಂದನಾಗಿ."

೫೪

ಸಿದ್ಧೇಶ್ವರರು—

" ದೇಹವೇ ದೇಗುಲ, ಕಾಲೇ ಕಂಭ, ಶಿರಸ್ಸೇ ಶಿಖರ ನೋಡಾ ಹೃದಯಕಮಲ ಕರ್ಣಿಕಾ ವಾಸವೇ ಸಿಂಹಾಸನ, ಮಹಾಘನ ಪರತತ್ವವೆಂಬ ಪ್ರಾಣಲಿಂಗ ಮೂರ್ತಿಗೊಳಿಸಿ, ಪರಮಾನಂದಾಮೃತ ಜಲದಿಂದ ಮಜ್ಜನಕ್ಕೆರೆದು, ಮಹಾದಳ ಪದ್ಮದಲ್ಲಿ ಪೂಜಿಸಿ, ಪರಮ ಪರಿಣಾಮವೆಂಬ ನೈವೇದ್ಯವ ಗಡಣಿಸಿ, ಪ್ರಾಣಲಿಂಗಕ್ಕೆ ಪ್ರಾಣ ಸಂಬಂಧವಾದ ಪೂಜೆಯ ಮಾಡುತಿರ್ದೆನು ಕಾಣಾ ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ."

**ಶ್ವೇತಾಶ್ವತರೋಪನಿಷತ್—ತೃತೀಯ ಅಧ್ಯಾಯ, ಶ್ಲೋಕ ೩**

" ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ ವಿಶ್ವತೋ ಬಾಹುರುತ ವಿಶ್ವತಸ್ಪಾತ್ "

**ನಾರಾಯಣೋಪನಿಷತ್—ಮೊದಲನೆಯ ಅಧ್ಯಾಯ, ಮಂತ್ರ ೩**

ಸವಿಜಾಯಮಾನಃ ಸಜನಿಷ್ಯಮಾಣಃ ಪ್ರತ್ಯಙ್ಮುಖಾಃ ತಿಷ್ಠತಿ ।
ವಿಶ್ವತೋಮುಖಃ ವಿಶ್ವತಶ್ಚಕ್ಷುರುತ ವಿಶ್ವತೋಮುಖಃ
ವಿಶ್ವತೋಹಸ್ತಃ ಉತವಿಶ್ವತಸ್ಪಾತ್ ।
ಸಂಬಾಹುಭ್ಯಾಂ ನಮತಿ ಸಂಪತತ್ರೈರ್ದ್ಯಾವಾ ಪೃಥಿವೀ ಜನಯನ್ ದೇವ ಏಕಃ ॥

ಪರಮಾತ್ಮನ ವಿಶ್ವವ್ಯಾಪ್ತಿಯನ್ನು ಹೇಳುವ ವಚನವಿದು.

೫೫

"ಎತ್ತೆತ್ತ ನೋಡಿದಡತ್ತತ್ತ ನೀನೇ ದೇವ, ಸಕಲ ವಿಸ್ತಾರದ ರೂಹು ನೀನೇ ದೇವ, ವಿಶ್ವತೋಚಕ್ಷು ನೀನೇ ದೇವ, ವಿಶ್ವತೋಮುಖ ನೀನೇ ದೇವ, ವಿಶ್ವತೋಬಾಹು ನೀನೇ ದೇವ, ವಿಶ್ವತೋಪಾದ ನೀನೇ ದೇವ, ಕೂಡಲಸಂಗಮದೇವಾ."

ಮೇಲಿನ ಉಪನಿಷದ್ವಾಕ್ಯವನ್ನು ಇದ್ದಕ್ಕಿದ್ದಂತೆ ಉಪಯೋಗಿಸಿರುತ್ತಾರೆ.

**ಈಶಾವಾಸ್ಯೋಪನಿಷತ್—ಪ್ರಾರಂಭದ ಮಂತ್ರದಲ್ಲಿ**

"ಈಶಾವಾಸ್ಯಮಿದಗ್ಂ ಸರ್ವಂ ಯತ್ಕಿಂಚಿತ್ ಜಗತ್ಯಾಂ ಜಗತ್"

ಎಂದು ಪರಮಾತ್ಮನು ವಿಶ್ವವ್ಯಾಪಿ ಎಂಬುವದನ್ನು ಉಪನಿಷತ್‌ಕಾರರು ತೋರಿಸಿ ಕೊಟ್ಟಿರುತ್ತಾರೆ. ಇದಕ್ಕೆ ಸರಿಯಾಗಿ

೫೬

ಸ್ವತಂತ್ರಸಿದ್ಧಲಿಂಗದೇವರು—

"ಎಲ್ಲೆಲ್ಲಿ ನೋಡಿದಡಲ್ಲಿ ನೀನೇ ದೇವ, ಪಿಂಡಾಂಡಗಳೊಳಗೆಲ್ಲ ನೀನೇ ದೇವ, ಮಹದಾಕಾಶರೂಪ ನಿರುಪಾಧಿಕ ಪರಂಜ್ಯೋತಿ ನೀನೇ ದೇವ, ಉಪಮಾತೀತ ವಾಙ್ಮನಕ್ಕಗೋಚರ ನೀನೇ ದೇವ, ಸ್ವಾನುಭೂತಿ ಸ್ವರೂಪಶರಣ ಜನ ಮನೋವಲ್ಲಭ ನೀನೇ ದೇವ, ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ."

ಮೇಲೆ ಬರೆದ ಮಂತ್ರದ ಎರಡನೆಯ ಚರಣ—

"ತೇನತ್ಯಕ್ತೇನ ಭುಂಜೀಥಾ ಮಾಗೃಧಃ ಕಸ್ಯಚಿದ್ಧನಮ್"

ಎಂದು ಮುಗಿದಿರುವದು. ತೇನತ್ಯಕ್ತೇನ ಭುಂಜೀಥಾ, ಎನ್ನುವ ವಾಕ್ಯವಂತೂ ಬಸವಾದಿ ಪ್ರಮಥರಿಗೆ ಬಹು ಪ್ರಿಯಕರವಾಗಿರುವದು. ಪರಮಾತ್ಮನು ಕೊಟ್ಟದ್ದನ್ನು ಪ್ರಸಾದರೂಪದಿಂದ ಸ್ವೀಕರಿಸಬೇಕೆಂದು ಬಸವಣ್ಣನವರು ಅನೇಕ ವಚನಗಳನ್ನು ಹೇಳಿರುತ್ತಾರೆ.

**ಮುಂಡಕೋಪನಿಷತ್—ಎರಡನೆಯ ಮುಂಡಕ, ಪ್ರಥಮ ಖಂಡ, ಶ್ಲೋಕ ೧೦**

ಪುರುಷ ಏ ವೇದಂ ವಿಶ್ವಂ ಕರ್ಮತಪೋಬ್ರಹ್ಮ ಪರಾಮೃತಮ್ ।
ಏತದ್ಯೋವೇದನಿಹಿತಂ ಗುಹಾಯಾಂ ಸೋ ಅವಿದ್ಯಾಗ್ರಂಥಿಂ ವಿಕಿರತೀಹಸೌಮ್ಯ ॥

ಅಂದರೆ ವಿಶ್ವವೆಲ್ಲವೂ ಆ ಪುರುಷನೇ; ಕರ್ಮ, ತಪಸ್ಸು, ಬ್ರಹ್ಮ, ಶ್ರೇಷ್ಠವಾದ ಅಮೃತ ವಾದರೂ ಅವನೇ ಆಗಿರುತ್ತಾನೆ. ಈ ಅಂತಃಕರಣದ ಸತ್ಯವನ್ನು ಯಾವನು ತಿಳಿಯು

ತ್ತಾನೆಯೋ ಅವನು ಮುಕ್ತನಾಗುವನು. "ಮಾಗೃಧಃ ಕಶ್ಚಿದ್ಧನಮ್" ಅಂದರೆ ಯಾರ ದ್ರವ್ಯವನ್ನೂ ಮುಟ್ಟಬೇಡ.

೫೭

ಶ್ರೀ ಬಸವಣ್ಣನವರು—

"ಛಲಬೇಕು ಶರಣಂಗೆ ಪರಧನವ ನೊಲ್ಲೆಂಬ" "ಪರಸ್ತ್ರೀ ಪರಧನ ವೆಂಬುವ ಜೂಬಿಗಂಜುವೆ" "ಪರಧನದಾಮಿಷವ ತೊರೆಯಿಂಭೋ" "ಊರ ಮುಂದೆ ಹಾಲಹಳ್ಳ ಹರಿಯುತ್ತಿರಲು ಓರೆಯಾವಿನ ಬೆನ್ನಲಿ-ಹರಿಯಲದೇಕಯ್ಯ ಲಜ್ಜೆಗೆಡಲೇಕೆ? ನಾಣುಗೆಡಲೇಕೆ? ಕೂಡಲಸಂಗಮ ದೇವಯ್ಯನುಳ್ಳನ್ನಕ್ಕ ಬಿಜ್ಜಳನ ಭಂಡಾರವೆನಗೇಕಯ್ಯ?" "ಪರಧನಕ್ಕಳು ಪಿದವರ ಹಿಡಿಖಂಡವ ಕೊಯ್ಯನೇ? ಬಾರದು ಬಾರದು ಭಕ್ತಂಗೆ ಪರಧನ ಪರಸತಿ" "ಧನದಲ್ಲಿ ಶುಚಿ ಪ್ರಾಣದಲ್ಲಿ ನಿರ್ಭಯ ಇದಾವಂಗಳವಡು ವುದಯ್ಯಾ ನಿಧಾನ ತಪ್ಪಿ ಬಂದರೆ ಒಲ್ಲೆನೆಂಬುವರಿಲ್ಲ, ಪ್ರಮಾದವಶ ಬಂದರೆ ಹುಸಿಯೆನೆಂಬುವರಿಲ್ಲ, ನಿರಾಶ ನಿರ್ಭಯ ಕೂಡಲಸಂಗಮದೇವ ನೀನೊಲಿದ ಶರಣಂಗಲ್ಲದಿಲ್ಲ."

ಇವೇ ಮೊದಲಾದ ವಚನಗಳಿಂದ ಬಸವಣ್ಣನವರು ಪರಧನವನ್ನು ಅತ್ಯಂತ ಹೇಯ ಬುದ್ಧಿಯಿಂದ ಹಳಿದಿರುತ್ತಾರೆ.

ದೇವರು ಬೇರೆ ಬೇರೆ ವಸ್ತುಗಳಲ್ಲಿ ಹೇಗೆ ಅಡಗಿರುತ್ತಾನೆಂಬುವದಕ್ಕೆ ಉಪನಿಷತ್ತುಗಳಲ್ಲಿ—

**ಶ್ವೇತಾಶ್ವತರೋಪನಿಷತ್—ಮೊದಲನೆಯ ಅಧ್ಯಾಯ, ಶ್ಲೋಕ ೧೫-೧೬**

**ತಿಲೇಷು ತೈಲಂ ದಧೀನೀವಸರ್ಪಿಃ ಆಪಃಸ್ರೋತಸ್ಸ್ವರಣೀಷು ಚಾಗ್ನಿಃ ।**
**ಏವಮಾತ್ಮಾತ್ಮನಿ ಗೃಹ್ಯತೇಸೌ ಸತ್ಯೇನೈನಂ ತಪಸಾಯೋನು ಪಶ್ಯತಿಃ ॥**
**ಸರ್ವವ್ಯಾಪಿನಮಾತ್ಮಾನಂ ಕ್ಷೀರೇಸರ್ಪಿರಿವಾರ್ಪಿತಮ್ ।**
**ಆತ್ಮವಿದ್ಯಾ ತಪೋ ಮೂಲಂ ತದ್ಬ್ರಹ್ಮೋಪನಿಷತ್ ಪರಂ ॥**

ಅಂದರೆ ಎಳ್ಳಿನಲ್ಲಿ ಎಣ್ಣೆ, ಮೊಸರಿನಲ್ಲಿ ತುಪ್ಪ, ಪ್ರವಾಹದಲ್ಲಿ ನೀರು, ಕಟ್ಟಿಗೆಯಲ್ಲಿ ಅಗ್ನಿ, ಕ್ಷೀರದಲ್ಲಿ ತುಪ್ಪ ಇರುವಂತೆ ದೇವರು ಎಲ್ಲ ವಸ್ತುಗಳಲ್ಲಿಯೂ ತುಂಬಿ ಕೊಂಡಿರುವನು.

೫೮

ಚನ್ನಬಸವಣ್ಣನವರು—

"ಮರೀಚಿಯೊಳಗಣ ಬಿಸಿಲಿನಂತೆ ಇದ್ದಿತ್ತು, ಕ್ಷೀರದೊಳಗಣ ತುಪ್ಪ ದಂತೆ ಇದ್ದಿತ್ತು, ಚಿತ್ರಿಕನೊಳಡಗಿದ ಚಿತ್ರದಂತೆ ಇದ್ದಿತ್ತು, ನುಡಿಯೊಳಡಗಿದ ಅರ್ಥದಂತೆ ಇದ್ದಿತ್ತು. ಆಲಿಯೊಳಡಗಿದ ತೇಜದಂತೆ ಇದ್ದಿತ್ತು ಕೂಡಲ ಚನ್ನಸಂಗಯ್ಯ ನಿಮ್ಮ ನಿಲವು."

೫೯

ಪ್ರಭುದೇವರು—

"ನೆಲದ ಮರೆಯ ನಿಧಾನದಂತೆ ಮುಗಿಲ ಮರೆಯಲ್ಲಡಗಿರ್ದ ಮಿಂಚಿನಂತೆ ಬಯಲ ಮರೆಯಲ್ಲಡಗಿರ್ದ ಮರೀಚಿಯಂತೆ ಕಂಗಳ ಮರೆಯಲ್ಲಡಗಿರ್ದ ಬೆಳಗಿನಂತೆ ಗುಹೇಶ್ವರ ನಿಮ್ಮ ನಿಲವು"

೬೦

ಜೇಡರ ದಾಸೀಮಾರ್ಯರು—

"ಹೂವಿನೊಳಗಣ ಕಂಪ ಹೊರಸೂಸಿ ಸುಳಿವ ಅನಿಲನಂತೆ ಅಮೃತದೊಳಗಣ ರುಚಿಯು ನಾಲಗೆಯ ತುದಿಯಲ್ಲಿ ಅರಿವನ ಚೇತನದಂತೆ ನೆಲವಿಲ್ಲದ ರೂಪ ಕಳೆಯಲ್ಲಿ ವೇಧಿಸುವ ಪರಿ ರಾಮನಾಥಾ."

**ಶ್ವೇತಾಶ್ವತರೋಪನಿಷತ್—ಮೂರನೆಯ ಅಧ್ಯಾಯ, ಶ್ಲೋಕ ೧೪–೧೫**

**ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।**
**ಸಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಂ ॥**
**ಪುರುಷ ಏ ವೇದಗ್ಂ ಸರ್ವಂ ಯದ್ಭೂತಂ ಯಚ್ಚಭವ್ಯಂ ।**
**ಉತಾ ಮೃತತ್ವಸ್ಯೇಶಾನೋ ಯದನ್ನೇ ನಾತಿರೋಹತಿ ॥ ೧೫ ॥**

ಈ ಮಂತ್ರದ ಅರ್ಥವು ಬಹಳ ವಿಸ್ತಾರವಾಗಿರುತ್ತದೆ. ಈ ಮಂತ್ರವು ಯಜುರ್ವೇದದ ಪುರುಷಸೂಕ್ತದಲ್ಲಿಯೂ ಉಕ್ತವಾಗಿದೆ.

ಸಾವಿರ ತಲೆಗಳುಳ್ಳಾತನು, ಸಾವಿರ ಕಣ್ಣುಗಳುಳ್ಳಾತನು, ಸಾವಿರ ಪಾದಗಳುಳ್ಳಾತನು, ವಿಶ್ವವನ್ನೆಲ್ಲ ವ್ಯಾಪಿಸಿಗೊಂಡಿರತಕ್ಕವನೂ ಆಗಿರುತ್ತಾನೆ. "ಅತ್ಯತಿಷ್ಠದ್ದಶಾಂಗುಲಂ" ಎಂದರೆ ಏನು ಎಂಬುವದನ್ನು ಇಲ್ಲಿ ಚೆನ್ನಾಗಿ ವಿವರಿಸಬೇಕಾಗುತ್ತದೆ. ವ್ಯಷ್ಟಿ ಮತ್ತು ಸಮಷ್ಟಿ ಹೀಗೆ ಚೈತನ್ಯವು ಎರಡು ಪ್ರಕಾರವಾಗಿರುತ್ತದೆ. ವ್ಯಷ್ಟಿ ಚೈತನ್ಯವು ಸಮಷ್ಟಿ ಚೈತನ್ಯದ ಒಂದು ಅಂಶಮಾತ್ರವಾಗಿರುತ್ತದೆ. ಸೃಷ್ಟಿಯ ಪ್ರಾಣಿಗಳೆಲ್ಲ ವ್ಯಷ್ಟಿ ಚೈತನ್ಯಗಳಾಗಿರುತ್ತವೆ. ವಿರಾಟ್ ಪುರುಷನಿಗೆ ಮಾತ್ರ ಸಮಷ್ಟಿ ಚೈತನ್ಯವೆಂದು ಹೇಳಲಾಗುತ್ತದೆ. ಪ್ರಾಣಿಗಳ ಅತೀತ ಅನಾಗತ ಭೇದಗಳು ಅಸಂಖ್ಯಾತಗಳಾಗಿರುತ್ತವೆ. ಪ್ರಾಣಿಗಳ ಮಸ್ತಕಾದಿಗಳೂ ಕೂಡ ಅಗಣಿತಗಳಾಗಿವೆ. ಸಮಷ್ಟಿ ಪ್ರಾಣಿಗಳೆಂದರೂ ಹೀಗೆಯೇ ವಿರಾಟ್ ಸ್ವರೂಪವಾಗುತ್ತದೆ. ಆದ್ದರಿಂದ ಅಸಂಖ್ಯಾತಗಳಾದ ಶಿರಸ್ಸುಗಳು, ನೇತ್ರಗಳು ಮತ್ತು ಚರಣಗಳಿಂದ ಕೂಡಿದ ಪುರುಷನ ವರ್ಣನೆ ಮಾಡಲಾಗಿದೆ. ಪೂರ್ವವೇ ಮೊದಲಾದ ಹತ್ತು ದಿಕ್ಕುಗಳು ಪರಮಾತ್ಮನ ಹತ್ತು ಅಂಗುಲ ಸದೃಶಗಳಾಗಿವೆ. ಯಾಕೆಂದರೆ ಲೋಕದಲ್ಲಿ ಅಂಗುಲಿದ್ವಾರವೇ ಮೇಲಿನ ದಿಕ್ಕೆಂದು ಕಲ್ಪನೆಮಾಡಲಾಗಿದೆ. ನಿಜವಾಗಿ ವಿಚಾರಮಾಡಿ ನೋಡಿದರೆ ಎಲ್ಲವೂ ಶೂನ್ಯವಾಗಿರುತ್ತದೆ. ಆದ್ದರಿಂದ ಅಂಗುಲಿ ನಿರ್ದಿಷ್ಟವಾದ ದಶದಿಕ್ ಪದಾರ್ಥವು ಬುದ್ಧಿಯ ಕಲ್ಪನಾಮಾತ್ರವಾಗಿರುತ್ತದೆ. ಹೀಗೆ ಕಲ್ಪನೆಯನ್ನು ಮಾಡಿದುದಕ್ಕೆ ದಶಾಂಗುಲವೆಂದು ಹೇಳಲಾಗುತ್ತದೆ. ಈ ಅರ್ಥದಿಂದ ಮೂಲ ಅಜ್ಞಾನ ಅಥವಾ ಮಾಯಾ ದಶಾಂಗುಲಶಬ್ದದಿಂದ ಹೇಳಲಾಗಿದೆ. ವಿರಾಟ್ ಸ್ವರೂಪನಾದ ಆತ್ಮನು ಈ ಮಾಯೆಯ ಅತಿಕ್ರಮಣಪೂರ್ವಕ ಅರ್ಥಾತ್ ಜೀವನ ಅಧೀನನಾಗದೆ

ಮಾಯೆಯನ್ನು ತನ್ನ ಅಧೀನಮಾಡಿಕೊಂಡು ಮಾಯಿಾ ಮತ್ತು ಮಹೇಶ್ವರನಾಗಿದ್ದಾನೆ. ಸಾಯಣಾಚಾರ್ಯರು ದಶಾಂಗುಲಕ್ಕೆ ಉಪಲಕ್ಷಣಮಾಡಿಕೊಂಡು ಸಮಸ್ತಬ್ರಹ್ಮಾಂಡದ ಅರ್ಥವನ್ನು ಮಾಡಿರುತ್ತಾರೆ. ಅಂದರೆ ದೇವರು ಬ್ರಹ್ಮಾಂಡದ ಹೊರಗೂ ಇರುತ್ತಾನೆ. ಅಥವಾ ದಶಾಂಗುಲದಿಂದ ಪರಿಮಾಣದ ಅರ್ಥವಿದೆ. ಎಲ್ಲ ಪರಿಮಾಣವು ದಶಾಂಗುಲ ದಿಂದ ಕಲ್ಪಿತವಾಗುತ್ತದೆ. ಪರಿಮಿತಿಯ ಸ್ಥಾನವು ಬ್ರಹ್ಮಾಂಡವನ್ನು ಅತಿಕ್ರಮಿಸಿ ಇರುತ್ತಲಿದೆ. ಎಲ್ಲ ರೀತಿಯಿಂದಲೂ ಬ್ರಹ್ಮಾಂಡಗೋಲಕದಲ್ಲಿ ವ್ಯಾಪಿಸಿ ಅದರ ಹೊರಗೂ ವ್ಯಾಪ್ತವಾಗಿರುತ್ತದೆ. ಪಕ್ಷಾಂತರದಲ್ಲಿ ಯಾವುದಕ್ಕೆ ದಶಾಂಗುಲಗಳಿವೆಯೋ ಅದನ್ನು ವ್ಯಾಪಿಸಿಗೊಂಡಿರುತ್ತದೆ. ದಶಾಂಗುಲಶಬ್ದದಿಂದ ಕೈಕಾಲುಗಳ ಅರ್ಥನಾಗುತ್ತದೆ. ಪರಮಾತ್ಮನು ನಮ್ಮ ಕೈಕಾಲುಗಳ ಹೊರಗೂ ವ್ಯಾಪಿಸಿದವನಾಗಿರುತ್ತಾನೆ. ಇಲ್ಲಿ ಮುಖ್ಯವಾಗಿ ತಿಳಿಯಬೇಕಾದ ವಿಷಯವೇನೆಂದರೆ ಹೊರಗೂ ಪರಮಾತ್ಮನು ವ್ಯಾಪಿಸಿರು ವದರಿಂದ ಅರ್ಚನ ಮತ್ತು ಸುಕ್ಷೇತ್ರಗಮನ ರೂಪಕ್ರಿಯೆಯಿಂದಲೂ ಅದನ್ನು ಧಾರಣಮಾಡಲಿಕ್ಕೆ ಅಸಮರ್ಥನಾಗಿರುತ್ತಾನೆ. ಅಥವಾ ಪರಿಮಾಣದ ಅತಿಕ್ರಮಣ ಮಾಡಿ ಇರತಕ್ಕವನಾಗಿರುತ್ತಾನೆ. ಎಷ್ಟು ಬ್ರಹ್ಮಾಂಡವಿದೆಯೋ ಅಷ್ಟೇ ಈತನ ಶರೀರ ವಿರುತ್ತದೆ. ಕೇವಲ ಹೀಗೆಯೇ ಅಲ್ಲ; ಆದರೆ ಬಹ್ಮಾಂಡವನ್ನು ವ್ಯಾಪಿಸಿ ಆ ಬ್ರಹ್ಮಾಂಡದ ಪರಿಮಾಣವನ್ನು ಮಿಾರಿ ಬ್ರಹ್ಮಾಂಡದ ಹೊರಗೂ ವ್ಯಾಪ್ತನಾಗಿರುತ್ತಾನೆ. ಅತ್ಯತಿಷ್ಠ ದ್ದಶಾಂಗುಲವೆಂದರೆ ಪರಮಾತ್ಮನು ಸೃಷ್ಟಿಯ ಒಳಗೂ ಹೊರಗೂ ತುಂಬಾ ವ್ಯಾಪಿಸಿ ಕೊಂಡು ವಿರಾಟ್ ಸ್ವರೂಪವನ್ನು ಹೊಂದಿದವನಾಗಿದ್ದಾನೆ. ಈ ಸಹಸ್ರಶೀರ್ಷಾ ಎಂಬುವ ಶೃತಿಯ ಮಂತ್ರಕ್ಕೆ ಸರಿಯಾಗಿ ಬಸವ ಮಹಾನುಭಾವನು—

೬೧

"ರುದ್ರಮುಖದಲ್ಲಿ, ವಿಷ್ಣು ಭುಜದಲ್ಲಿ, ಜಂಘೆಯಲ್ಲಿ ಅಜನ ಜನನವು, ಇಂದ್ರಪಾದದಲ್ಲಿ ಚಂದ್ರಮನದಲ್ಲಿ ಚಕ್ಷುವಿನಲ್ಲಿ ಸೂರ್ಯನ ಜನನ, ಮುಖದಲ್ಲಿ ಅಗ್ನಿ, ಪ್ರಾಣದಲ್ಲಿ ವಾಯು, ನಾಭಿಯಲ್ಲಿ ಅಂತರಿಕ್ಷ ಶಿರದಲುದಯವು ತೆತ್ತೀಸಕೋಟಿದೇವರ್ಕಳು, ಪಾದತಳದಲ್ಲಿ ಭೂಮಿಯ ಜನನವು. ಶ್ರೋತ್ರದಲ್ಲಿ ದಶದಿಕ್ಕುಗಳು, ಜಗವ ನಿಕ್ಷೇಪಿಸಿದ ಕುಕ್ಷೆಯಲ್ಲಿ ಅಕ್ಷಯನಗಣಿತನು. ಸಾಸಿರತಲೆ, ಸಾಸಿರಕಣ್ಣು, ಸಾಸಿರಕೈ, ಸಾಸಿರಪಾದ, ಸಾಸಿರಸನ್ನಿಹಿತ ನಮ್ಮ ಕೂಡಲಸಂಗಮದೇವ."

೬೨

ಮತ್ತು—

"ವಿಶ್ವಾಧಿಕೋ ರುದ್ರನ ಹೊಗಳುವ ಶೃತಿಗಳು ವಿಶ್ವರೂಪಾಯವೈ ನಮಃ ಪರಮರೂಪಿಣೇ ನಮಃ ಪರತತ್ವಾತ್ಮನೇ ನಮಃ ಆದಿಯಾರೂಢ ಭಯಂಕರನೇ ನಮಃ ಹರಿಯನು ಹರಿಸಿದನೆಂದು ಶೃತಿಸಾರುತಿರಲು ಸಂಹಾರ ಕಾರಣನೇ ನಮಃ ನಮ್ಮ ಕೂಡಲಸಂಗಮದೇವರ ಮಹಾಮಹಧ್ಭ್ಯೋ ನಮಃ ಅತ್ಯತಿಷ್ಠದ್ದಶಾಂಗುಲಮ್"

ಎಂದರೆ ಬ್ರಹ್ಮಾಂಡದ ಹೊರಗೂ ಒಳಗೂ ವ್ಯಾಪಿಸಿರತಕ್ಕವನೆಂದು ಅರ್ಥವನ್ನು ಮಾಡಿರುತ್ತಾರಷ್ಟೆ?

೬೩

"ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮಕುಟ ಅಗಮ್ಯ ಅಪ್ರಮಾಣ, ಅಗೋಚರ. ಅಪ್ರತಿಮ ಲಿಂಗವೇ ಕೂಡಲಸಂಗಮದೇವಯ್ಯ ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ"

ಎಂದು ಬಸವಣ್ಣನವರು ಬಹಳ ಸೊಗಸಾಗಿಯೂ ಸುಂದರವಾಗಿಯೂ ಇರುವ ವಚನವನ್ನು ಹೇಳಿರುತ್ತಾರೆ. "ಶೃತಿತತಿ ಶಿರದಮೇಲೆ ಅತ್ಯತಿಷ್ಠದ್ದಶಾಂಗುಲನನೇ ನೆಂಬೆನಯ್ಯ" ಇದರಲ್ಲಿ ಅತ್ಯತಿಷ್ಠದ್ದಶಾಂಗುಲಂ ಎಂದು ಇದ್ದಕ್ಕಿದ್ದ ಹಾಗೆಯೇ ಉಚ್ಚಾರಮಾಡಿರುತ್ತಾರೆ. ಬಸವಣ್ಣನವರು ದೇವರ ವಿಶ್ವವ್ಯಾಪ್ತಿಯ ಬಗ್ಗೆ ಅನೇಕ ವಚನಗಳನ್ನು ಹೇಳಿರುತ್ತಾರೆ. ಬೇರೆ ಬೇರೆ ಉಪನಿಷತ್ತುಗಳು ಒಂದೇ ತರಹದಿಂದ ಹೇಳುವಂತೆ ಬೇರೆ ಬೇರೆ ಶರಣರಾದರೂ ಒಂದೇ ವಿಷಯದಲ್ಲಿ ಬೇರೆ ಬೇರೆ ತರಹದಿಂದ ವಿವೇಚನೆ ಮಾಡಿರುತ್ತಾರೆ.

೬೪

ಶ್ರೀ ಬಸವಣ್ಣನವರು—

"ಸಹಸ್ರ ಶೀರ್ಷಾನಾದಿ ಪುರುಷನು ವೇದಪುರುಷನೊಬ್ಬ ಪುರುಷನು ಜ್ಯೋತಿಪುರುಷನೊಬ್ಬ ಪುರುಷನು ತ್ರಿಪಾದೂರ್ಧ್ವಪುರುಷನೊಬ್ಬ ಪುರುಷನು ಉದನ್ಮುಖಪುರುಷನೊಬ್ಬ ಪುರುಷನು ಉದಯಮುಖನೊಬ್ಬ ಪುರುಷನು ವಿರಾಟಜನನನೊಬ್ಬ ಪುರುಷನು ವಿರಾಜಪುರುಷನೊಬ್ಬ ಪುರುಷನು ಆದಿಪುರುಷನೊಬ್ಬ ಪುರುಷನು ವಿಯತ್ಪುರಷನೊಬ್ಬ ಪುರುಷನು ತದ್ವಿಯತ್ ಪುರುಷ ಪುರುಷರಿಲ್ಲದ ಪ್ರಭೆಯ ನೋಡಿರೇ ವೇದನಾದಾತೀತ ತುರೀಯ ಪರಮಾನಂದ ನಿರವಯಂ ಷಟ್‌ತ್ರಿಂಶತ್ ಪ್ರಭಾಪಟಲದ ಬೆಳಗಿದೆ ನೋಡಿರೊ ಬೆಳಗಿನೊಳಗಿನ ಮಹಾಬೆಳಗಿನ ಬೆಳಗು ನಮ್ಮ ಕೂಡಲ ಸಂಗಮದೇವಯ್ಯ"

೬೫

ಆದಯ್ಯನವರು—

"ಪಾತಾಳದಿಂ ಕೆಳಗೆ ಪಾದ, ಸುವರ್ಲೋಕದಿಂ ಮೇಲೆ ಉತ್ತಮಾಂಗ ಬ್ರಹ್ಮಾಂಡವೇ ಮಕುಟ, ಗಗನವೇ ಮುಖ, ಚಂದ್ರಾರ್ಕಾಗ್ನಿಗಳೇ ನೇತ್ರ, ದಶದಿಕ್ಕುಗಳೇ ಬಾಹುಗಳು, ಮಹದಾಕಾಶವೇ ಶರೀರ, ತರುಗಳೇ ತನೂರುಹ, ಶೂನ್ಯವೇ ಕರಸ್ಥಲದ ಲಿಂಗ, ನಕ್ಷತ್ರಗಳೇ ಪುಷ್ಪ, ನಿತ್ಯವೇ ಪೂಜೆ, ಮೇಘವೇ ಜಡೆ, ಬೆಳದಿಂಗಳೇ ವಿಭೂತಿ, ಪರ್ವತಗಳೇ ರುದ್ರಾಕ್ಷಿ, ಪಂಚಬ್ರಹ್ಮವೇ ಪಂಚಾಕ್ಷರ, ತತ್ವಂಗಳೇ ಜಪಮಾಲೆ, ಮೇರುವೇ ದಂಡ, ಜಗವೇ ಕಂಥಾ, ಅನಂತನೇ ಕೌಪೀನ ತ್ರಿಗುಣ ಒಂದಾದುದೇ ಕರ್ಪೂರ, ಚತುರ್ಯುಗಂಗಳೇ ಗಮನ, ಮಿಂಚೇ ಅಂಗರುಚಿ, ಸಿಡಿಲೇ ಧ್ವನಿ, ವೇದಾಗಮವೇ ವಾಕ್ಯ, ಜ್ಞಾನಮುದ್ರೆಯೇ ಉಪದೇಶ, ಪೃಥ್ವಿಯೇ

ಸಿಂಹಾಸನ, ದಿವಾರಾತ್ರಿಯೇ ಅರಮನೆ, ಶಿವಜ್ಞಾನವೇ ಐಶ್ವರ್ಯ, ನಿರಾಳವೇ ತೃಪ್ತಿ ಇಂಥಾ ಚೈತನ್ಯ ಜಂಗಮಕ್ಕೆ ನಾನು ನಮೋ ನಮೋ ಎನುತಿರ್ದೆನಯ್ಯ ಸೌರಾಷ್ಟ್ರ ಸೋಮೇಶ್ವರ.''

೬೬

ಸೊಡ್ಡಳಬಾಚರಸ—

''ನೆಲದೀಪದೊಡೆಯನು ಜಲತಂಪಿನೊಡೆಯನು, ಹಿರಿಯಪೆಂಪಿನೊಡೆಯನು, ಅಗ್ನಿ ಉಷ್ಣದೊಡೆಯನು, ಚಂದ್ರಕಾಂತದೊಡೆಯನು, ಸೂರ್ಯಕಾಂತದೊಡೆಯನು, ಸಕಲ ದೈವಂಗಳಿಗೆ ಆಯುಷ್ಯಭಾಷೆಯ ಕೊಟ್ಟ ಭೋಗದೊಡೆಯನು ಜಗತ್ಪ್ರಭು ಸೊಡ್ಡಳಾ''

**ಶ್ವೇತಾಶ್ವತರೋಪನಿಷತ್—ಎರಡನೆಯ ಅಧ್ಯಾಯ, ಶ್ಲೋಕ ೧೭**

**''ಯೋದೇವೋऽಗ್ನೌ ಯೋऽಪ್ಸುಯೋವಿಶ್ವಂಭುವನಮಾವಿವೇಶ, ಯಃ ಓಷಧೀಷು ಯೋವನಸ್ಪತಿಷು ತಸ್ಮೈದೇವಾಯ ನಮೋ ನಮಃ''**

೬೭

ಇದಕ್ಕೆ ಸರಿಯಾಗಿ ಅಕ್ಕಮಹಾದೇವಿಯವರು—

''ವನವೆಲ್ಲ ನೀವೇ ವನದೊಳಗಣ ದೇವತರುವೆಲ್ಲ ನೀವೇ ತರುವಿನೊಳಗಾಡುವ ಮೃಗವೆಲ್ಲ ನೀವೇ ಚನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರಾ''

ಯಾವ ದೇವನು ಅಗ್ನಿಯಲ್ಲಿಯೂ, ನೀರಿನಲ್ಲಿಯೂ ಇರುವವನಾಗಿ ಸರ್ವ ಜಗತ್ತನ್ನು ವ್ಯಾಪಿಸಿರುವನು ಮತ್ತು ಔಷಧಿಗಳಲ್ಲಿಯೂ, ವನಸ್ಪತಿಗಳಲ್ಲಿಯೂ ವಾಸವಾಗಿರುವನು. ಮೇಲೆ ಬರೆದ ಉಪನಿಷತ್ತಿನ ಅರ್ಥದಂತೆಯೇ ವನವೆಲ್ಲ ನೀವೇ ದೇವ ವನದಲ್ಲಿರತಕ್ಕ ವೃಕ್ಷಗಳು ನೀವೇ. ಆ ವೃಕ್ಷದೊಳಗಾಡುವ ಮೃಗಗಳೆಲ್ಲ ನೀವೇ ಎಂದು ಅಕ್ಕಮಹಾದೇವಿಯವರು ಹೇಳಿದ ವಚನದ ಅರ್ಥವಾದರೂ ಇರುತ್ತದೆ.

ದೇವರ ವಿಶ್ವವ್ಯಾಪ್ತಿಯ ಬಗ್ಗೆ ಶ್ವೇತಾಶ್ವತರೋಪನಿಷತ್ತಿನಲ್ಲಿ ಅನೇಕ ಮಂತ್ರಗಳಿರುತ್ತವೆ.

**ಶ್ವೇತಾಶ್ವತರೋಪನಿಷತ್—ಅಧ್ಯಾಯ ೩, ಶ್ಲೋಕ ೪**

''ಯೋದೇವಾನಾಂ ಪ್ರಭವಶ್ಚೋದ್ಭವಶ್ಚ ವಿಶ್ವಾಧಿಪೋ ರುದ್ರೋ ಮಹರ್ಷಿಃ
ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ ಸನೋಬುದ್ಧ್ಯಾ ಶುಭಯಾಸಂಯುನಕ್ತು''

ಯಾವಾತನು ದೇವತೆಗಳಿಗೆ ಕಾರಣಕರ್ತನೊ, ವಿಶ್ವಾಧಿಪತಿಯೊ ಮತ್ತು ಬ್ರಹ್ಮನ ಉತ್ಪತ್ತಿಗೆ ಕಾರಣಕರ್ತನೊ ಅಂತಹ ದೇವನು ನಮಗೆ ಶುಭವನ್ನು ಕೊಡಲಿ.

**ಶ್ವೇತಾಶ್ವತರೋಪನಿಷತ್—ಅಧ್ಯಾಯ ೩, ಶ್ಲೋಕ ೧೧**

ಸರ್ವಾನನ ಶಿರೋಗ್ರೀವಃ ಸರ್ವಭೂತ ಗುಹಾಶಯಃ ।
ಸರ್ವವ್ಯಾಪೀ ಸಭಗವಾನ್ ತಸ್ಮಾತ್ಸರ್ವಗತಃ ಶಿವಃ ॥

ಎಲ್ಲ ಕಡೆಗೂ ಮುಖ ಕಂಠಗಳುಳ್ಳವನೂ, ಎಲ್ಲ ಪ್ರಾಣಿಗಳ ಹೃದಯದಲ್ಲಿ ವಾಸಿಸುವವನೂ, ಎಲ್ಲವನ್ನೂ ವ್ಯಾಪಿಸಿಕೊಂಡಿರುವದರಿಂದ ಶಿವನು ಸರ್ವಗತನಾಗಿರುವನು.

ಶ್ವೇತಾಶ್ವತರೋಪನಿಷತ್—ಅಧ್ಯಾಯ ೪, ಶ್ಲೋಕ ೧೦

ಮಾಯಾಂತು ಪ್ರಕೃತಿಂ ವಿದ್ಯಾತ್ ಮಾಯಿನಂತು ಮಹೇಶ್ವರಮ್ ।
ತಸ್ಯಾವಯವ ಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್ ॥

ಪ್ರಕೃತಿಯೇ ಮಾಯೆ; ಮಾಯೆಯುಳ್ಳವನೇ ಮಹೇಶ್ವರ; ಅವನ ಅವಯವಗಳಿಂದಲೇ ಈ ಜಗತ್ತು ವ್ಯಾಪಿಸಿರುವದು.

ಶ್ವೇತಾಶ್ವತರೋಪನಿಷತ್—ಅಧ್ಯಾಯ ೫, ಶ್ಲೋಕ ೪

"ಸರ್ವಾದಿಶಃ ಊರ್ಧ್ವಮಧಶ್ಚತಿರ್ಯಕ್ ಪ್ರಕಾಶಯನ್ ಭ್ರಾಜತೇಯದ್ವನಡ್ವಾನ್ ।
ಏವಂ ಸದೇವೋ ಭಗವಾನ್‌ವರೇಣ್ಯೋ ಯೋನಿಸ್ವಭಾವಾನಧಿತಿಷ್ಠತ್ಯೇಕಃ"

ಇದೇ ಉಪನಿಷತ್ತಿನ—

ಅಧ್ಯಾಯ ೬, ಶ್ಲೋಕ ೭ರಿಂದ

ತಮೀಶ್ವರಾಣಾಂ ಪರಮಂಮಹೇಶ್ವರಂ ತಂ ದೇವತಾನಾಂ ಪರಮಂ ಚ ದೈವತಂ ।
ಪತಿಂ ಪತೀನಾಂ ಪರಮಂ ಪರಸ್ತಾದ್ವಿದಾಮದೇವಂ ಭುವನೇಶಮೀಢ್ಯಂ ॥ ೭ ॥
ನತಸ್ಯಕಾರ್ಯಂ ಕರಣಂ ಚ ವಿದ್ಯತೇ ನತತ್ ಸಮಶ್ಚಾಭ್ಯಧಿಕಶ್ಚ ದೃಶ್ಯತೇ ।
ಪರಾಸ್ಯಶಕ್ತಿರ್ವಿವಿಧೈವಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ॥ ೮ ॥
ನತಸ್ಯ ಕಶ್ಚಿತ್ ಪತಿರಸ್ತಿಲೋಕೇ ನಚೇಶಿತಾನೈವ ಚ ತಸ್ಯಲಿಂಗಂ ।
ಸಕಾರಣಂ ಕರಣಾಧಿಪಾಧಿಪೋ ನಚಾಸ್ತಿಕಶ್ಚಿಜ್ಜನಿತಾನಚಾಧಿಪಃ ॥ ೯ ॥

ಒಬ್ಬನೇ ಆದ ಪರಮಾತ್ಮನು ಎಲ್ಲ ದಿಕ್ಕು ವಿದಿಕ್ಕುಗಳನ್ನೂ ವ್ಯಾಪಿಸಿ ಪ್ರಕಾಶಮಾನವಾದ ವೃಷಭನಂತೆ ಹೊಳೆಯುತ್ತಲಿದ್ದಾನೆ. ಅವನು ಈಶ್ವರರುಗಳಿಗೆ ಈಶ್ವರನಾಗಿಯೂ, ದೇವತೆಗಳಿಗೆ ಪರಮಮಹೇಶ್ವರನಾಗಿಯೂ, ಪತಿಗಳಿಗೆ ಪತಿಯಾಗಿಯೂ ಇರತಕ್ಕ ದೇವನನ್ನು ಭುವನಗಳಿಗೆ ಒಡೆಯನನ್ನಾಗಿ ತಿಳಿಯುತ್ತೇನೆ. ಅವನಿಗೆ ಕಾರ್ಯಕಾರಣಗಳಿಲ್ಲ. ಅವನಿಗೆ ಸಮಾನರಾಗಲೀ, ಅಧಿಕರಾಗಲೀ ಇರುವದಿಲ್ಲ. ಶ್ರೇಷ್ಠವಾದ ಇವನ ಶಕ್ತಿಯು ಎರಡು ಪ್ರಕಾರವಾಗಿರುತ್ತದೆ. ಸ್ವಾಭಾವಿಕವಾದುದೂ, ಜ್ಞಾನಬಲಕ್ರಿಯೆಗಳಿಂದ ಕೂಡಿದುದೂ ಆಗಿರುತ್ತದೆ. ಲೋಕದಲ್ಲಿ ಅವನಿಗೆ ಯಾರೂ ಒಡೆಯರಿಲ್ಲ; ಅವನನ್ನು ಆಳತಕ್ಕವರಾಗಲೀ ಅವನಿಗೆ ಅಧಿಪತಿಗಳಾಗಲೀ ಇರುವದಿಲ್ಲ.

೬೮

ಮೇಲಿನ ಉಪನಿಷನ್ಮಂತ್ರಗಳಿಗೆ ಸರಿಯಾಗಿ ಬಸವಣ್ಣನವರು—

"ಸಕಲನಿಷ್ಕಲವ ಕೂಡಿಕೊಂಡಿಪ್ಪೆಯಾಗಿ ಸಕಲ ನೀನೇ. ನಿಷ್ಕಲ ನೀನೇ ಕಂಡಯ್ಯ ವಿಶ್ವತೋಚಕ್ಷು ನೀನೇ ದೇವ ವಿಶ್ವತೋಮುಖ ನೀನೇ ದೇವ ಕೂಡಲಸಂಗಮದೇವ"

೬೯

ಷಣ್ಮುಖದೇವರು ತಮ್ಮ ಅಖಂಡೇಶ್ವರ ವಚನದಲ್ಲಿ—

"ವಿಶ್ವದೊಳಗೆಲ್ಲ ನೀನೇ ದೇವ ವಿಶ್ವಭರಿತನು ನೀನೇ ದೇವ ವಿಶ್ವರೂಪನು ನೀನೇ ದೇವ ವಿಶ್ವಪತಿ ನೀನೇ ದೇವ ವಿಶ್ವಾತೀತನು ನೀನೇ ದೇವ ಅಖಂಡೇಶ್ವರ"

೭೦

ಪ್ರಭುದೇವರು—

"ಗಿರಿಗಳ ಗುಹೆಗಳ ಕಂದರದಲ್ಲಿ ನೆಲಹೊಲವಲ್ಲಿ ಇಪ್ಪೆ ದೇವ ಎಲ್ಲಿ ನೋಡಿದಡಲ್ಲಿ ಇಪ್ಪೆ ದೇವ ಮನಕ್ಕಗವ್ಯ ಅಗೋಚರನಾಗಿ ಅಲ್ಲಲ್ಲಿ ಎಲ್ಲಿಯೂ ನೀನೇ ಇಪ್ಪೆಯಯ್ಯ ಗುಹೇಶ್ವರ"

೭೧

ಸಿದ್ಧರಾಮ ಶಿವಯೋಗಿಗಳು—

"ನಿಮ್ಮ ನಿಜದಂತ್ಯವನು ಯಾರು ಬಲ್ಲರಯ್ಯ? ಚತುರ್ದಶ ಭುವನಂಗಳೆಲ್ಲ ನಿಮ್ಮಾಧೀನವಯ್ಯ ನಿಮಗೆಣೆಯಪ್ಪ ದೇವರುಂಟೆ? ಕಪಿಲಸಿದ್ಧ ಮಲ್ಲಿಕಾರ್ಜುನ"

೭೨

ಮತ್ತೊಬ್ಬ ಶರಣರು—

"ಬ್ರಹ್ಮವಿಷ್ಣ್ವಾದಿಗಳು ತಾನಿರ್ದಲ್ಲಿ, ರುದ್ರ ಈಶ್ವರರು ತಾನಿರ್ದಲ್ಲಿ, ಪಂಚಮುಖ ದಶಭುಜಗಳುಳ್ಳ ಸದಾಶಿವರು ತಾನಿರ್ದಲ್ಲಿ, ನಾಲ್ವತ್ತೆಂಟು ಸಾವಿರ ಮುನಿಗಳು ತಾನಿರ್ದಲ್ಲಿ, ಮೂವತ್ತುಮೂರುಕೋಟಿ ದೇವತೆಗಳು ತಾನಿರ್ದಲ್ಲಿ, ತಾನೇ ಅಖಂಡ ಪರಿಪೂರ್ಣವಾಗಿ ಮಹಾಘನವಲ್ಲದೆ ತನ್ನಿಂದಧಿಕವಪ್ಪ ಘನವಿಲ್ಲ ನೋಡಾ ಅಪ್ರಮಾಣ ಕೂಡಲಸಂಗಮದೇವ"

ಮೇಲಿನ ಉಪನಿಷನ್ಮಂತ್ರಗಳಿಗೆ ಈ ವಚನಗಳು ಸರಿಯಾಗಿರುತ್ತವೆ.

ಬ್ರಹ್ಮಜ್ಞಾನಬಲ್ಲವನು ಬ್ರಹ್ಮನೇ ಆಗುತ್ತಾನೆ—

**ಮುಂಡಕೋಪನಿಷತ್—ತೃತೀಯ ಮುಂಡಕ—ದ್ವಿತೀಯ ಖಂಡ, ಶ್ಲೋಕ ೯**

**"ಸಯೋಹವೈತತ್ಪರಮಂ ಬ್ರಹ್ಮವೇದಬ್ರಹ್ಮೈವ ಭವತಿ ನಾಸ್ಯಾ ಬ್ರಹ್ಮವಿತ್ ಕುಲೇ ಭವತಿ ತರತಿಶೋಕಂ ತರತಿಪಾಪ್ಮಾನಂ ಗುಹಾಗ್ರಂಥಿಭ್ಯೋ ವಿಮುಕ್ತೋ ಅಮೃತೋ ಭವತಿ"**

ಪರಬ್ರಹ್ಮನನ್ನು ಅರಿತವನು ತಾನೇ ಬ್ರಹ್ಮನಾಗುವನು; ಅವನ ಕುಲದಲ್ಲಿ ಬ್ರಹ್ಮಜ್ಞಾನ ವಿಲ್ಲದವನು ಯಾವನೂ ಹುಟ್ಟುವದಿಲ್ಲ. ಅವನು ಶೋಕ. ಪಾಪಗಳನ್ನು ದಾಟ ಹೋಗುವನು. ಮಹಾಸಂಶಯುಗಳಿಂದ ಮುಕ್ತನಾಗಿ ಅಮೃತನಾಗುವನು.

ಈ ಮಂತ್ರಕ್ಕೆ ಸರಿಯಾಗಿ—

"ತನರಿದಡೆ ತಾನೇ ಗುರು" "ತಾನೆಂದರಿಗಡೆ ತಾನೇ ದೇವ" "ತನ್ನ ತಾನರಿದು ತಾನಾರೆಂದು ತಿಳಿದರೆ ತಾನೇ ದೇವ ನೋಡಾ" ಈ ಮೊದಲಾದ ವಾಕ್ಯಗಳಿರುತ್ತವೆ.

೭೩

ಮತ್ತೊಬ್ಬ ಶರಣರು—

"ಆಧಾರ, ಸ್ವಾಧಿಷ್ಠಾನ, ಮಣಿಪೂರಕ ಅನಾಹತ, ವಿಶುದ್ಧಿ, ಆಜ್ಞೆ ಎಂಬ ಷಡಚಕ್ರದೊಳಗಿನ ದಳ್ತವರ್ಣ, ಅಕ್ಷರ, ಅಧಿದೇವತೆ, ಶಕ್ತಿ, ಭಕ್ತಿ

ಸಾದಾಖ್ಯಂಗಳ ದೇವರೆಂಬರು ಅಲ್ಲಲ್ಲನೋಡಾ ವಾಚಾತೀತ, ಮನೋ ತೀತ, ವರ್ಣಾತೀತ, ಅಕ್ಷರಾತೀತವಾಗಿ ಪರಶಿವತತ್ವ ತಾನೆಂದರಿದಡೆ ತಾನೇ ದೇವ ನೋಡಾ ಅಪ್ರಮಾಣ ಕೂಡಲಸಂಗಮದೇವಾ"

೭೪

"ಕಲ್ಲದೇವರು ದೇವರಲ್ಲ ಮಣ್ಣದೇವರು ದೇವರಲ್ಲ ಮರದೇವರು ದೇವರಲ್ಲ ಪಂಚಲೋಹದಲ್ಲಿ ಮಾಡುವ ದೇವರು ದೇವರಲ್ಲ. ಸೇತುಬಂಧ, ರಾಮೇಶ್ವರ, ಗೋಕರ್ಣ, ಕಾಶಿ, ಕೇದಾರ ಮುಂತಾದ ಅಷ್ಟಷಷ್ಟಿ ಪುಣ್ಯ ತೀರ್ಥಂಗಳಲ್ಲಿಹ ದೇವರು ದೇವರಲ್ಲ ತನ್ನ ತಾನರಿದು ತಾನಾರೆಂದು ತಿಳಿದಡೆ ತಾನೇ ದೇವ ನೋಡಾ ಅಪ್ರಮಾಣ ಕೂಡಲಸಂಗಮದೇವಾ"

೭೫

"ಅಯ್ಯ ತನ್ನ ತಾನರಿದು ತನ್ನ ಅಜ್ಞಾನ, ಆಶಾಪಾಶ, ಅನಾಚಾರ, ಅಸತ್ಯನಡೆನುಡಿಗಳ ತಾನರಿದು ತನ್ನ ದುರ್ಗುಣಗಳ ನೀಗಿ ನಿಜದಲ್ಲಿ ನಿಂದಡೆ, ತಾನೇ ಮಾಯಾತೀತ, ತಾನೇ ಗುಣಾತೀತ, ತಾನೇ ಸಗುಣ ನಿರ್ಗುಣಕ್ಕಾಧಾರಮೂರ್ತಿ ತಾನೇ ಸಾಕಾರ ನಿರಾಕಾರಕ್ಕೆ ಚೈತನ್ಯಮೂರ್ತಿ, ನಿಜವಸ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ"

೭೬

ಸಿದ್ಧೇಶ್ವರದೇವರು—

"ಸ್ವಯಂಲಿಂಗದನುಭಾವ ತನಗೆ ದೊರಕೊಂಡ ಬಳಿಕ ದೇವಲೋಕ ವೆಂಬುದೇನೋ ಮೃತ್ಯುಲೋಕವೆಂಬುದೇನೋ ಆವುದರಲ್ಲಿ ಭೇದವೇನಯ್ಯ? ಕೂಡಲಸಂಗಮದೇವಾ ಸರ್ವವೂ ನಿವಾದ ಬಳಿಕ ಆಲಸ್ಯವುಂಟೆ? ಆಚಾರ ಅನಾಚಾರ ಎಂಬುದು ಇಲ್ಲ, ಸೀಮೆ ನಿಸ್ಸೀಮೆ ಎಂಬುದು ಇಲ್ಲ, ಗಮನ ನಿರ್ಗಮನವೆಂಬುದಿಲ್ಲವಯ್ಯ; ಕರ್ಮ, ಧರ್ಮ, ಸುಖ, ದುಃಖ, ಪುಣ್ಯ, ಪಾಪ, ಭವಮೋಹ, ಇಹಪರ ಎಂಬ ಉಭಯ ಸಂದೇಹ ಇಲ್ಲವಯ್ಯ ಏನೂ ಇಲ್ಲದ ಪರಮ ನಿರ್ವಾಣ ನಿರ್ವಯವೇ ಶರಣಲಿಂಗ ಸಮರಸವಯ್ಯ ಮಹಾಲಿಂಗ ಗುರು ಸಿದ್ಧೇಶ್ವರ ಪ್ರಭುವೇ"

೭೭

"ಅಯ್ಯಾ ತನ್ನತಾನರಿದಡೆ ತಾನೇ ಚಿನ್ಮಯನಾದ ಪರಬ್ರಹ್ಮ ನೋಡಾ, ತಾನೇ ಚಿನ್ನಾದ ಚಿದ್ಬಿಂದು ಚಿತ್ಕಳಾಮೂರ್ತಿ ನೋಡಾ ತಾನೇ ಸಕಲ ಚೈತನ್ಯ ಚಿತ್ಸೂತ್ರಧಾರಿ ತನ್ನಿಂದಧಿಕ ಪರದೈವವಿಲ್ಲ ನೋಡಾ ತಾನೇ ಸಚ್ಚಿದಾನಂದಸ್ವರೂಪನಾದ ಚಿದ್ಘನಲಿಂಗ ನೋಡಾ ಅಪ್ರಮಾಣ ಕೂಡಲಸಂಗಮದೇವಾ"

ಉಪನಿಷತ್ತುಗಳಲ್ಲಿ ಮೇಲಿನ ವಚನಕ್ಕೆ ಸರಿಯಾಗಿ

"ಅರೇ ಆತ್ಮಾದ್ರಷ್ಟವ್ಯಃ ಮಂತ್ರವ್ಯಃ ನಿಧಿಧ್ಯಾಸಿತವ್ಯಃ" ಎಂದು ಹೇಳಲಾಗಿದೆ.

5

## ದೇವರು ಎಲ್ಲಿದ್ದಾನೆ

**ಶ್ವೇತಾಶ್ವತರೋಪನಿಷತ್–ತೃತೀಯ ಅಧ್ಯಾಯ, ಶ್ಲೋಕ ೧೩**

"ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ । ಹೃದಾಮನೀಷೀ ಮನಸಾಭಿಕ್ಲೃಪ್ತೋಯ ಏತದ್ವಿದುರಮೃತಾಸ್ತೇ ಭವಂತಿ"

ಅಂಗುಷ್ಠಮಾತ್ರನಾದ ಪುರುಷನು ಸದಾ ಜನಗಳ ಹೃದಯದಲ್ಲಿ ಇರತಕ್ಕವನಾಗಿರುತ್ತಾನೆ. ಯಾವ ಬುದ್ಧಿವಂತನು ಇವನನ್ನು ತಿಳಿಯುತ್ತಾನೆಯೋ ಅವನು ಅಮರನಾಗುತ್ತಾನೆ.

**ಶ್ವೇತಾಶ್ವತರೋಪನಿಷತ್–ಅಧ್ಯಾಯ ೪, ಶ್ಲೋಕ ೧೭**

"ಏಷವೇದೋ ವಿಶ್ವಕರ್ಮಾ ಮಹಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ । ಹೃದಾಮನೀಷೀ ಮನಸಾಭಿಕ್ಲೃಪ್ತಃ ಯ ಏತದ್ವಿದುರಮೃತಾಸ್ತೇ ಭವಂತಿ"

ಮಹಾತ್ಮನಾದ ವಿಶ್ವಕರ್ಮನು ಜನರ ಹೃದಯದಲ್ಲಿ ಯಾವಾಗಲೂ ಇರತಕ್ಕವನಾಗಿರುತ್ತಾನೆ. ಇವನನ್ನು ತಿಳಿದ ಜನಗಳು ಅಮೃತರು ಅಂದರೆ ಅಮರರಾಗುತ್ತಾರೆ.

**ಕಠೋಪನಿಷತ್–ದ್ವಿತೀಯ ಅಧ್ಯಾಯ, ಚತುರ್ಥ ವಲ್ಲಿ, ಶ್ಲೋಕ ೧೨–೧೩**

**ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ।**
**ಈಶಾನೋ ಭೂತಭವ್ಯಸ್ಯ ನ ತತೋ ವಿಜಗುಪ್ಸತೇ ಏತದ್ವೈತತ್ ॥**
**ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ ।**
**ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉಶ್ವ ಏತದ್ವೈತತ್ ॥**

ಮನುಷ್ಯನ ಅಂತಃಕರಣದಲ್ಲಿ ಅಂಗುಷ್ಠ ಪರಿಮಾಣವುಳ್ಳ ಪುರುಷನಿರುವನು. ಅವನು ಭೂತ ಭವಿಷ್ಯತ್ ಕಾಲಗಳಿಗೆ ಒಡೆಯನು. ಇವನನ್ನು ತಿಳಿದವನಿಗೆ ಭಯವಿಲ್ಲ. ಅಂಗುಷ್ಠ ದಳತೆಯಲ್ಲಿರತಕ್ಕ ಈ ಪುರುಷನು ನಿರ್ಧೂಮ ಜ್ಯೋತಿಯಂತಿರುವನು. ಮತ್ತು "ಅಂಗುಷ್ಠಮಾತ್ರೋ ರವಿತುಲ್ಯರೂಪಃ ಸಂಕಲ್ಪಾಹಂಕಾರ ಸಮನ್ವಿತೋಯಃ ಮಧ್ಯ ಆತ್ಮ ನಿತಿಷ್ಠತಿ" ಇತ್ಯಾದಿ ವಾಕ್ಯಗಳುಂಟು.

**ಶ್ರೀಕಂಠಭಾಷ್ಯ–ಪುಟ ೪೫೦**

ಪರಮೇಶ್ವರ ಏವ ಅಂಗುಷ್ಠಮಾತ್ರ ಇತ್ಯುಕ್ತಂ ಈಶಾನೋ ಭೂತಭವ್ಯಸ್ಯ ।
ಇತ್ಯಾದಿ ಪರಮೇಶ್ವರಲಿಂಗಶಬ್ದಾತ್ ಸರ್ವೈಶ್ವರ್ಯಸಂಪನ್ನಃ ॥
ಸರ್ವೇಶ್ವರಃ ಶಂಭುರಾಕಾಶಮಧ್ಯೇ ಇತಿ ತಸ್ಯೈವ ಸರ್ವೇಶ್ವರತ್ವ ಶ್ರವಣಾತ್"

ಇಲ್ಲಿ ಜಗದ್ವ್ಯಾಪಿಯಾದ ಪರಮಾತ್ಮನು ಅಂಗುಷ್ಠಮಾತ್ರನು ಹೇಗೆ ಆಗುತ್ತಾನೆ? ಇದರಿಂದ ಅವನ ಅಪರಿಚ್ಛಿನ್ನತ್ವಕ್ಕೆ ಹಾನಿಯಾಗುವದಿಲ್ಲವೇ? ಎಂಬುವ ಸಂಶಯ ಬರುತ್ತದೆ.

ಇದಕ್ಕೆ ಶ್ರೀಕಂಠಭಾಷ್ಯಕಾರರು—

"ಹೃದ್ಯಪೇಕ್ಷಯಾ ಮನುಷ್ಯಾಧಿಕಾರತ್ವಾತ್" ಎಂಬುವ ಸೂತ್ರಕ್ಕೆ ವ್ಯಾಖ್ಯಾನವನ್ನು ಮಾಡುವ ಕಾಲಕ್ಕೆ "ಅಪರಿಚ್ಛಿನ್ನಾಪಿ ಪರಮೇಶ್ವರಸ್ಯ ಅಂಗುಷ್ಠಮಾತ್ರತ್ವಂ ಉಪಾಸಕಹೃದಯಾಪೇಕ್ಷಯಾ ಮನುಷ್ಯಾಧಿ

ಕಾರತ್ವಾತ್ ಉಪಾಸನಾಶಾಸ್ತ್ರವಿಧೇಃ ಮನುಷ್ಯಾಣಾಂ ಹೃದಯಂ ಯಾವತ್‌ಪ್ರಮಾಣಂ ತದವಚ್ಛಿನ್ನಂ ರೂಪಂ ಪರಮೇಶ್ವರಃ ಪರಮ ಕಾರುಣಿಕಃ ಪರಿಗೃಹ್ಣಾತಿ ತದುಪಾಸನಸಿದ್ಧಯೇ ತತಃ ಪರಮೇಶ್ವರೋ ಜ್ಯೋತಿರ್ಮಯಃ ಲಿಂಗರೂಪತಯಾ ಉಪಾಸಕಾನಾಂ ಹೃದಯಮಧ್ಯೇ ತಿಷ್ಠತೀತಿ ನಿರ್ಣಯಃ"

ಅಂದರೆ ಪರಮೇಶ್ವರನು ಅಪರಿಚ್ಛಿನ್ನನಾದರೂ ಅಂಗುಷ್ಠಮಾತ್ರತ್ವವು ಉಪಾಸಕನ ಹೃದಯದ ಅಪೇಕ್ಷೆಯಿಂದ ಮನುಷ್ಯನ ಹೃದಯವು ಎಷ್ಟು ಪ್ರಮಾಣವೊ ಪರಮೇಶ್ವರನು ಅಷ್ಟೇ ಪ್ರಮಾಣವುಳ್ಳವನಾಗಿರುತ್ತಾನೆ. ಪರಮಕಾರುಣಿಕನಾದ ಪರಮಾತ್ಮನು ಅವನ ಉಪಾಸನಾಸಿದ್ಧಿಗೋಸ್ಕರ ಅಷ್ಟೇ ಪ್ರಮಾಣನಾಗುತ್ತಾನೆ. ಇಂತಹ ಪರಮೇಶ್ವರನು ಜ್ಯೋತಿರ್ಮಯ ಲಿಂಗರೂಪದಿಂದ ಉಪಾಸಕರ ಹೃದಯ ದಲ್ಲಿರುತ್ತಾನೆ.

ಇದಕ್ಕೆ ಟೀಕೆಯನ್ನು ಬರೆಯುವ ಕಾಲಕ್ಕೆ ಶ್ರೀ ಅಪ್ಪಯ್ಯದೀಕ್ಷಿತರು—

"ಅಂಗುಷ್ಠ ಸಮಾನಾಕಾರತ್ವಂ ಲಿಂಗಭಾವ ಏವ ಸಂಭವತಿ ಪ್ರಸಿದ್ಧಂ ಚ ಪುರಾಣಾಗಮೇಷು ಶಿವಸ್ಯ ಲಿಂಗರೂಪೇಣ ಇತಿ ಸನ್ನಿಧಾನಂ"

ಅತಃ ಲಿಂಗರೂಪ ಏವ ಅತ್ರ ವಿವಕ್ಷಿತಃ

ಅಂದರೆ ಅಂಗುಷ್ಠ ಸಮಾನಾಕಾರವು ಲಿಂಗರೂಪದಿಂದಲೇ ಇರುವದರಿಂದ ಇದು ಪುರಾಣಾಗಮಾದಿಗಳಲ್ಲಿ ಶಿವನು ಲಿಂಗರೂಪದಿಂದ ಇರುವನೆಂಬುವದು ಸುಪ್ರಸಿದ್ಧವಿದೆ. ಆದ್ದರಿಂದ ಶಿವನು ಲಿಂಗರೂಪನಾಗಿಯೇ ಇರುವನು.

## ೭೮

ಈ ಮೇಲಿನ ಉಪನಿಷತ್ತುಗಳ ಮಂತ್ರಗಳಿಗೆ ಸರಿಯಾಗಿ ಬಸವಣ್ಣನವರ ವಚನ—

"ಸಮುದ್ರ ಘನವೆಂಬೆನೆ ಧರೆಯಮೇಲಡಗಿತ್ತು, ಧರೆ ಘನವೆಂಬೆನೆ ನಾಗೇಂದ್ರನ ಫಣಾಮಣಿಯಲ್ಲಡಗಿತ್ತು, ನಾಗೇಂದ್ರ ಘನವೆಂಬೆನೆ ಪಾರ್ವತಿಯ ಕಿರುಕುಣಿಯ ಮುದ್ರಿಕೆಯಾಯಿತ್ತು, ಅಂಥ ಪಾರ್ವತಿ ಘನವೆಂಬೆನೆ ಪರಮೇಶ್ವರನ ಅರ್ಧಾಂಗಿಯಾದಳು, ಅಂಥ ಪರಮೇಶ್ವರ ಘನವೆಂಬೆನೆ ನಮ್ಮ ಕೂಡಲಸಂಗನ ಶರಣರ ಮನದಕೊನೆಯ ಮನೆಯ ಮೇಲೆ ಅಡಗಿದನು."

## ೭೯

ಮಡಿವಾಳ ಮಾಚಿದೇವರು—

"ಅಣುರೇಣು ಮಹಾತ್ಮನೆಂಬರು ಅಣುರೇಣು ತೃಣಕಾಷ್ಠದೊಳ ಗಿಪ್ಪನೆಂಬರು ಅಮ್ಮೆನಯ್ಯ ನಾನೆನಲಮ್ಮೆನಯ್ಯ ಶರಣಸನ್ನಿಹಿತನು ಭಕ್ತಕಾಯ ಮಮಕಾಯನು ದಾಸೋಹಪರಿಪೂರ್ಣನು ಸಮಹೃದಯದಲ್ಲಿ ಸಿಂಹಾಸನನಾಗಿ ಅಗಲದಿಪ್ಪನು ಕಲಿದೇವಯ್ಯನು"

೮೦

ಅಖಂಡೇಶ್ವರ ದೇವರು—

"ಸಕಲಪಿಸ್ತಾರದ ರೂಹು ನಿಮ್ಮೊಳಡಗಿರ್ಪುದು ಎನ್ನಮನದಲ್ಲಡಗಿರ್ಪಿರಿ ಅದೆಂತೆಂದೊಡೆ ಕರಿ ಕನ್ನಡಿಯೊಳಡಗಿರ್ಪಂತೆ ನೀನು ಭಕ್ತಜನ ಮನೋವಲ್ಲಭನಾದಕಾರಣ ಎನ್ನಮನದ ಕೊನೆಯಲ್ಲಡಗಿರ್ಪೆಯಯ್ಯಾ ಅಖಂಡೇಶ್ವರಾ"

೮೧

ಮಹಾದೇವಿ—

"ಮಣ್ಣನಿತ್ತು ಕಂಡಿಹೆನೆಂದರೆ ಜಗಭರಿತ ನೀನು ಹೊನ್ನನಿತ್ತು ಕಂಡಿಹೆನೆಂದರೆ ಹಿರಣ್ಯಮೂರ್ತಿ ನೀನು ಹೆಣ್ಣನಿತ್ತು ಕಂಡಿಹೆನೆಂದರೆ ತ್ರಿವಿಧಶಕ್ತಿ ಮೂರ್ತಿ ನೀನು ಎನಗೇನು ನಿನಗಿತ್ತ ಕಾಂಬಕಾಣಿಕೆ? ನೀನು ಶಿಕ್ಕುವುದಕ್ಕೆ ಕ್ರಿಯೆಯಲ್ಲಿ ನಿರತ ಸದ್ಭಾವದಲ್ಲಿ ಶುದ್ಧ ಹಿಡಿದುದ ಬಿಡದೆ ಬಿಟ್ಟುದ ಹಿಡಿಯದೆ ನಿಶ್ಚಯವಾದ ನಿಜಜ್ಞಾನದಲ್ಲಿ ಬೆಚ್ಚದಂತಿದ್ದರೆ ಅಲ್ಲಿ ನೀನು ತಪ್ಪದಿಪ್ಪೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ವಿಶ್ವಾಸವೆಲ್ಲಿಪ್ಪುದು ಅಲ್ಲಿ ತಪ್ಪದಿಪ್ಪನು."

೮೨

ಸ್ವತಂತ್ರಸಿದ್ಧಲಿಂಗದೇವರು—

"ಭಕ್ತನ ಕಾಯವೇ ಶಿವನ ಕಾಯ ಶಿವನ ಕಾಯವೇ ಭಕ್ತನ ಕಾಯ ಶಿವಶಿವ ಭಕ್ತ ಬೇರೆಯೇ ಶಿವ ಬೇರೆಯೆ ಒಂದೇ ಕಾಣಿರಣ್ಣಾ ಅದೆಂತೆಂದೊಡೆ ಭಕ್ತ ದೇಹಿಕದೇವ ದೇಹಿಭಕ್ತನೆಂಬ ಶೃತಿಪೊಗಳುವಕಾರಣ ಭಕ್ತಂಗೂ ದೇವಂಗೂ ಕಾಯ ಒಂದೇ ಪ್ರಾಣ ಒಂದೇ ಎರಡೆಂಬ ಪರಿಭಾವಿಯ ನುಡಿಯಲಾಗದು ನಿಜಭಕ್ತರಾದವರು ನಿಜಗುರುಸ್ವತಂತ್ರಸಿದ್ಧ ಲಿಂಗೇಶ್ವರಾ"

## ಸತಿಪತಿ ಭಾವ

### ಬೃಹದಾರಣ್ಯಕೋಪನಿಷತ್

"ತದ್ಯಥಾ ಪ್ರಿಯಯಾ ಸ್ತ್ರಿಯಾ ಸಂಪರಿಷ್ವಕ್ತಃ ನ ಬಾಹ್ಯಂ ಕಿಂಚನ ವೇದನಾಂತರಂ ಏವಮೇವಾಯಂ ಪುರುಷಃ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನವೇದನಾಂತರಂ ತದ್ವಾ ಅಸ್ಯ ಏತದಾಪ್ತ ಕಾಮಂ ಆತ್ಮಕಾಮಂ ಅಕಾಮಂ ರೂಪಂ"

ಪುರುಷನು ತನ್ನ ಪ್ರೇಮದ ಹೆಂಡತಿಯನ್ನು ಕಾಮಿಸಿ ಆಲಿಂಗನಮಾಡಿಕೊಂಡಿರುವಾಗ ಒಳಹೊರಗಿನ ಯಾವ ವಿಷಯದ ಜ್ಞಾನವೂ ಅವನಿಗಿರುವದಿಲ್ಲ. ಪ್ರಾಜ್ಞನಾದ ಆತ್ಮನ ಕೂಡ ಅಂದರೆ ಪರಮಾತ್ಮನ ಕೂಡ ಬೆರೆತ ಪುರುಷನ ಸ್ಥಿತಿಯಾದರೂ ಹೀಗೆಯೇ ಇರುತ್ತದೆ. ಇದು ಆತ್ಮಕಾಮ ಅಂದರೆ ತೃಪ್ತಿಯಾಗುವಂತೆ ಎಲ್ಲ ಇಚ್ಛಿತಗಳನ್ನು ದೊರಕಿಸಿದ ಆತ್ಮಕಾಮ ಅಂದರೆ ಆತ್ಮನನ್ನೇ ದೊರಕಿಸಲು ಇಚ್ಛಿಸುವ ಹಾಗೂ ಅಕಾಮ ಅಂದರೆ ಕಾಮನಾರಹಿತ ಪುರುಷನ ಸ್ಥಿತಿಯು ಮೇಲಿನ ಶ್ಲೋಕಗಳ ಅರ್ಥದಂತೆಯೇ

ಇರುತ್ತದೆ. ಪರಮಾತ್ಮನೇ ಪತಿ; ಆತನನ್ನು ಉಪಾಸಿಸುವ ಪುರುಷನೇ ಸತಿ. ಹೀಗೆ ದೇವರಕೂಡ ಸತಿಪತಿನ್ಯಾಯದಂತೆ ನಡೆದುಕೊಳ್ಳಬೇಕೆಂಬುವದೇ ಉಪನಿಷತ್ಕಾರರ ಅಭಿಪ್ರಾಯವಾಗಿರುತ್ತದೆ. ಹೀಗೆ ಶರಣರಾದರೂ ಲಿಂಗವೇ ಪತಿ ತಾನೇ ಸತಿ ಎಂದು ಅನೇಕ ವಚನಗಳನ್ನು ಮೇಲಿನ ಉಪನಿಷತ್ತಿನ ವಾಕ್ಯಕ್ಕೆ ಸರಿಯಾಗಿಯೂ ಬಹಳ ಸೊಗಸಾಗಿಯೂ ಹೇಳಿರುತ್ತಾರೆ.

೮೩

ಶ್ರೀ ಬಸವಣ್ಣನವರು—

"ಸಂಸಾರವೆಂಬ ಶ್ವಾನನಟ್ಟಿ ಮಿಾಸಲಬೀಸರ ಮಾಡದಿರಯ್ಯಾ ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯಾ ನೀವಲ್ಲದೆ ಮತ್ತೇನನೂ ಅರಿಯೆನು ಕನ್ಯೆಯಲ್ಲಿ ಕೈವಿಡಿದೆನು ನಿಮ್ಮಲ್ಲಿ ನೆರೆದೆನು ಮನ್ನಿಸುಕಂಡಾ ಮಹಾಲಿಂಗವೇ ಸತಿಯಾನು ಪತಿ ನೀನು ಮನೆಯೊಡೆಯ ಮನೆಯ ಕಾಯ್ದಿಪ್ಪಂತೆ ನೀವೆನ್ನ ಮನೆಯ ಕಾಯ್ದಿಪ್ಪ ಗಂಡನು ನಿನಗೋತ ಮನವನನ್ಯಕ್ಕೆ ಹರಿಸಿದರೆ ನಿಮ್ಮಭಿಮಾನ ಹಾನಿ ಕೂಡಲಸಂಗಮದೇವಾ"

೮೪

"ಮನಕ್ಕೆ ಮನೋಹರವಲ್ಲದ ಗಂಡರು ಮನಕ್ಕೆ ಬಾರರು ಕೇಳವ್ವ ಕೆಳದಿಪನ್ನಗಭೂಷಣರಲ್ಲದ ಗಂಡರು ಇನ್ನೆನಗಾಗದ ಮೊರೆ ನೋಡವ್ವ ಕನ್ಯೆಯಂದಿನ ಕೂಟ ಚಿಕ್ಕಂದಿನ ಬಾಳುವೆ ನಿಮ್ಮಾಣೆಯಯ್ಯಾ ಕೂಡಲಸಂಗಮದೇವಾ"

೮೫

"ಜಗವೆಲ್ಲ ಅರಿಯಲು ಎನಗೊಬ್ಬ ಗಂಡನುಂಟು ಆನುಮುತ್ತೈದೆ ಆನುನಿಟ್ಟೈದೆ ಕೂಡಲಸಂಗಯ್ಯನಂತಪ್ಪ ಎನಗೊಬ್ಬ ಗಂಡನುಂಟು"

ಸತಿಪತಿ ನ್ಯಾಯದಂತೆ ಮೇಲೆ ಬರೆದ ಮೂರು ವಚನಗಳು ಬಸವಣ್ಣನವರವೇ ಆಗಿರುತ್ತವೆ.

ಇನ್ನು ಬೇರೆಬೇರೆ ಶರಣರೂ ಕೂಡ ಈ ವಿಷಯದಲ್ಲಿ ಅನೇಕ ವಚನಗಳನ್ನು ಹೇಳಿರುತ್ತಾರೆ.

೮೬

ಅಖಂಡೇಶ್ವರದೇವರು—

"ಕೇಳುಕೇಳಿರೆ, ಕೇಳಿರಿ ಎಲ್ಲರು ಮನಕ್ಕೆ ಮನೋಹರವಾದ ಕಂಗಳಿಗೆ ಮಂಗಳವಾದ ಶೃಂಗಾರದ ನಲ್ಲ ಬಂದು ಎನ್ನ ತನ್ನೊಳಗೆ ಮಾಡಿಕೊಂಡ ಅಂದು ವಿಪರೀತವ ಹೇಳುವೆ ಮನ ಒಲಿದು ಆಲಿಸಿರವ್ವ ಎನ್ನ ತನುವಿನೊಳಗೆ ತನ್ನ ತನುವನಿಟ್ಟು ಮಹಾತನುವ ಮಾಡಿದ ಎನ್ನ ಮನದೊಳಗೆ ತನ್ನ ಮನವನಿಟ್ಟು ಘನಾಘನವ ಮಾಡಿದ ಎನ್ನ ಪ್ರಾಣದೊಳಗೆ ತನ್ನ ಪ್ರಾಣವನಿಟ್ಟು ಚಿತ್ಪ್ರಾಣವ ಮಾಡಿದ ಎನ್ನ ಜೀವದೊಳಗೆ ತನ್ನ ಜೀವವನಿಟ್ಟು ಸದ್ಭಾವವ ಮಾಡಿದ ಎನ್ನ ಕರಣಂಗಳೊಳಗೆ ತನ್ನ ಕರಣಂಗಳನಿಟ್ಟು

ಚಿತ್ಕರಣಂಗಳ ಮಾಡಿದ ಎನ್ನಿಂದ್ರಿಯಂಗಳೊಳಗೆ ತನ್ನಿಂದ್ರಿಯಂಗಳನಿಟ್ಟು ತನ್ನಿಂದ್ರಿಯಂಗಳ ಮಾಡಿದ ಎನ್ನ ವಿಷಯಂಗಳೊಳಗೆ ತನ್ನ ವಿಷಯಂಗಳ ನಿಟ್ಟು ನಿರ್ವಿಷಯಂಗಳ ಮಾಡಿದನು. ಆ ಅಖಂಡೇಶ್ವರನೆಂಬ ನಲ್ಲನೊಳಗೆ ಉರಿಯ ಪುರುಷನನಪ್ಪಿ ತಾಳಿದಂತಾದೆನವ್ವ ಕೇಳಿರವ್ವ"

೮೭

ಉರಿಲಿಂಗಪೆದ್ದಿಗಳು—

"ಆರ ಪರಿಯಲ್ಲಿ ನಮ್ಮ ನಲ್ಲನು ವಿಶ್ವವೆಲ್ಲ ಸತಿಯರು ಚೋದ್ಯದ ಪುರುಷನು ಅವರವರ ಪರಿಯಲ್ಲಿ ಅವರವರ ನೆರೆವನು ಅವರವರಿಗೆ ಅವರವ ರಂತೆ ಸುಖಮಯನು ನೋಡಾ ಅವರೆಲ್ಲರ ವಂಚಿಸಿ ಎನ್ನನಗಲದ ಪರಿಯ ಹೇಳಾ ಕೆಳದಿನೀನೊಳ್ಳಿದಳಾದರೆ ಮಹಾ ಮಂತ್ರವ ಜಪಿಸಲು ಎನ್ನನಗಲ ನಿನ್ನಾಣೆ ಉರಿಲಿಂಗದೇವ ತನ್ನಾಣೆ"

೮೮

"ನಲ್ಲನ ರೂಪೆನ್ನ ನೇತ್ರವ ತುಂಬಿತ್ತು ನಲ್ಲನ ನುಡಿ ಎನ್ನ ಶ್ರೋತ್ರವ ತುಂಬಿತ್ತು ನಲ್ಲನ ಸುಗಂಧವೆನ್ನ ಪ್ರಾಣವ ತುಂಬಿತ್ತು ನಲ್ಲನ ಚುಂಬನವೆನ್ನ ಜಿಹ್ವೆಯ ತುಂಬಿತ್ತು ನಲ್ಲನನಾಲಿಂಗನವೆನ್ನ ಸರ್ವಾಂಗವ ತುಂಬಿತ್ತು ನಲ್ಲನ ಪ್ರೇಮವೆನ್ನ ಮನವ ತುಂಬಿತ್ತು ನಲ್ಲನು ಅಂತರಂಗ ಬಹಿರಂಗದಲ್ಲಿ ಸುಖಿ ಯಾದೆ ಉರಿಲಿಂಗದೇವಾ"

ಅಕ್ಕಮಹಾದೇವಿಯವರು ಈ ತರಹದ ಅನೇಕ ವಚನಗಳನ್ನು ಹೇಳಿರುತ್ತಾರೆ.

೮೯

"ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಸಿದ್ದೆ ನೋಡಾ ಹಸೆಯಮೇಲಣಮಾತ ಬೆಸಗೊಳಲಟ್ಟದರೆ ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮವರು ಭಸ್ಮವನೆ ಹೂಸಿ ಕಂಕಣವನೇ ಕಟ್ಟಿದರು ಚನ್ನ ಮಲ್ಲಿಕಾರ್ಜುನಯ್ಯ ನನಗೆ ನೀನಾಗಬೇಕೆಂದು"

೯೦

"ಮಂಗಳವೇ ಮಜ್ಜನವೆನಗೆ ವಿಭೂತಿಯೇ ಒಳಗುಂದದ ಅರಿಸಿನ ವೆನಗೆ ದಿಗಂಬರವೇ ದಿವ್ಯಾಂಬರವೆನಗೆ ಶಿವಪಾದರೇಣುವೇ ಅನುಲೇಪನ ವೆನಗೆ ರುದ್ರಾಕ್ಷಿಯೇ ಮೈದೊಡಿಗೆ ಎನಗೆ ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ ಚನ್ನಮಲ್ಲಿಕಾರ್ಜುನನೇ ಗಂಡನೆನಗೆ ಆನು ಚನ್ನಮಲ್ಲಿ ಕಾರ್ಜುನಂಗೆ ಮದುವಳಿಗೆ ಎನಗೆ ಬೇರೆ ಶೃಂಗಾರವೇಕೆ ಹೇಳಿರವ್ವ"

## ದೇವರು ಒಬ್ಬನೇ ಇರುತ್ತಾನೆ

ಈ ವಿಷಯದಲ್ಲಿ ಉಪನಿಷತ್ಕಾರರಿಗೂ ವಚನಕಾರರಿಗೂ ಕೊಂಚವಾದರೂ ವ್ಯತ್ಯಾಸ ಇರುವದಿಲ್ಲ; ಇಬ್ಬರ ಮಾರ್ಗಗಳೂ ಒಂದೇ ಆಗಿರುತ್ತವೆ. ಉಪನಿಷತ್ಕಾರ ರಲ್ಲಿ ಕೆಲವರು ಅಲ್ಲಲ್ಲಿ ಹಲವು ದೇವರನ್ನು ಕುರಿತು ರಕ್ಷಿಸಬೇಕೆಂದು ಪ್ರಾರ್ಥಿಸಿರು

ತ್ತಾರೆಯಾದರೂ ಪರಾತ್ಪರವಾದ ಆ ವಸ್ತುವು ಒಂದೇ ಎಂದು ಒಪ್ಪಿಕೊಂಡಿರುತ್ತಾರೆ. ಶರಣರಾದರೂ ಪರಮಾತ್ಮನ ಹೊರತು ಕಿರುಕುಳ ದೇವರುಗಳನ್ನೆಲ್ಲ ಖಂಡಿಸಿರುತ್ತಾರೆ. ಆದರೆ ಆ ಪರಾತ್ಪರವಾದ ವಸ್ತುವನ್ನೇ ತಮ್ಮ ಇಷ್ಟದೇವರೆಂದು ಬೇರೆಬೇರೆ ಅಂಕಿತ ಗಳಿಂದ ವಚನಗಳನ್ನು ಹೇಳಿರುತ್ತಾರೆ.

**ಈಶಾವಾಸ್ಯೋಪನಿಷತ್—ಮಂತ್ರ ೪**

ಅನೇಜದೇಕಂ ಮನಸೋ ಜವೀಯೋನೈನದ್ದೇವಾ ಆಪ್ನುವನ್ ಪೂರ್ವಮರ್ಶತ್ ।
ತದ್ಧಾವತೋಽನ್ಯಾನತ್ಯೇತಿ ತಿಷ್ಠತ್ತಸ್ಮಿನ್ನಪೋ ಮಾತರಿಶ್ವಾದಧಾತಿ ॥

ಅಂದರೆ ಆತ್ಮವು ಅಚಲವಾದುದು ಮತ್ತು ಒಂದೇ ಆದುದು. ಮನಸ್ಸಿಗಿಂತ ವೇಗವತ್ತರ ವಾದುದು. ದೇವತೆಗಳಿಗೆ ಸಹ ಪ್ರಾಪ್ತವಾಗದೆ ತಾನು ನಿಂತಲ್ಲಿಯೇ ನಿಂತು ಓಡುತ್ತಿರುವ ಮಿಕ್ಕವಸ್ತುಗಳನ್ನು ದಾಟಿಹೋಗುವದು. ಆ ಪರವಸ್ತುವಿನಲ್ಲಿ ವಾಯುವು ಜಲ ಮೊದಲಾದವುಗಳಿವೆ. ಸರ್ವಶಕ್ತಿಯುಳ್ಳ ಪರಮೇಶ್ವರನೊಬ್ಬನೆ.

**ಶ್ವೇತಾಶ್ವತರೋಪನಿಷತ್—ತೃತೀಯ ಅಧ್ಯಾಯ, ಶ್ಲೋಕ ೧**

ಯ ಏಕೋ ಜಾಲವಾನೀಶತ ಈಶನೀಭಿಃ ಸರ್ವಾಗ್ಂ ಲೋಕಾನೀಶತ ಈಶನೀಭಿಃ ।
ಯ ಏವೈಕ ಉದ್ಭವೇ ಸಂಭವೇಚ ಯ ಏತದ್ವಿದುರಮೃತಾಸ್ತೇ ಭವಂತಿ ।
ಏಕೋಹಿರುದ್ರೋನದ್ವಿತೀಯಾಯತುಸ್ಥುರ್ಯಃ ಇಮಾನ್ ಲೋಕಾನೀಶತ ಈಶನೀಭಿಃ ॥

ಮತ್ತು—

**ಅಧ್ಯಾಯ ೪, ಶ್ಲೋಕ ೧೬**

ವಿಶ್ವಸ್ಯೈಕಂ ಪರಿವೇಷ್ಟಿತಾರಂ ಜ್ಞಾತ್ವಾದೇವಂ ಮುಚ್ಯತೇ ಸರ್ವಪಾಶೈಃ ।

**ಅಧ್ಯಾಯ ೬, ಶ್ಲೋಕ ೧೦ ರಿಂದ**

ಯಸ್ತೂರ್ಣನಾಭ ಇವ ತಂತುಭಿಃ ಪ್ರಧಾನಜೈಃ ಸ್ವಭಾವತಃ ದೇವ ಏಕಃ ।
ಸ್ವಮಾವೃಣೋತಿ ಸನೋದಧಾತು ಬ್ರಹ್ಮಾವ್ಯಯಮ್ ॥ ೧೦ ॥
ಏಕೋದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ।
ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀಚೇತಾ ಕೇವಲೋ ನಿರ್ಗುಣಶ್ಚ ॥ ೧೧ ॥
ಏಕೋವಶೀ ನಿಷ್ಕ್ರಿಯಾಣಾಂ ಬಹೂನಾಂ ಏಕಂ ಬೀಜಂ ಬಹುಧಾ ಯಃ ಕರೋತಿ ।
ತಮಾತ್ಮಸ್ಥಂ ಯೇ ಅನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ ॥೧೨॥
ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ ಏಕೋಬಹೂನಾಂ ಯೋವಿದಧಾತಿ ।
ಕಾಮಾನ್‌ತತ್‌ಕಾರಣಂ ಸಾಂಖ್ಯಯೋಗಾಧಿಗಮ್ಯಂ ಜ್ಞಾತ್ವಾ ದೇವಂ
ಮುಚ್ಯತೇ ಸರ್ವಪಾಶೈಃ ॥ ೧೩ ॥

ಅಂದರೆ ಎಲ್ಲ ಲೋಕಗಳನ್ನು ರಕ್ಷಿಸುವಂಥ ಒಬ್ಬವನೇ ಆದ ಪರಮಾತ್ಮನನ್ನು ಯಾರು ತಿಳಿಯುತ್ತಾರೆಯೋ ಅವರು ಅಮೃತರಾಗುತ್ತಾರೆ. ಸರ್ವಲೋಕಗಳನ್ನು ಸುತ್ತುಹಾಕಿರುವ ಪರಮಾತ್ಮನನ್ನು ತಿಳಿದರೆ ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ. ಹೇಗೆ ಜೇಡರ ಹುಳವು ಪ್ರಧಾನಗಳಾದ ತಂತುಗಳಿಂದ ಎಲ್ಲ ಕಡೆಗೂ ಸುತ್ತುಹಾಕು ತ್ತದೆಯೋ ಹಾಗೆಯೇ ಒಬ್ಬ ದೇವನೇ ಎಲ್ಲಾ ವಸ್ತುಗಳನ್ನು ವ್ಯಾಪಿಸಿಕೊಂಡಿರುತ್ತಾನೆ. ಅಂತಹ ದೇವನು ನಾಶರಹಿತವಾದ ನಿತ್ಯಸುಖವನ್ನು ಕೊಡಲಿ. ಒಬ್ಬನೇ ದೇವನು ಎಲ್ಲ ಪ್ರಾಣಿಗಳಲ್ಲಿ ಹೇಗೆ ಗೂಢನಾಗಿರುತ್ತಾನೆಯೋ, ಸರ್ವವ್ಯಾಪಿಯೋ, ಸರ್ವ

ಪ್ರಾಣಿಗಳ ಅಂತರಾತ್ಮನಲ್ಲಿರುತ್ತಾನೆಯೋ, ಕರ್ಮಾಧ್ಯಕ್ಷನೋ, ಸಾಕ್ಷಿಭೂತನೋ ಮತ್ತು ನಿರ್ಗುಣ ಸ್ವರೂಪನೋ, ಒಬ್ಬನೇ ಶಾಸಕನೋ, ಎಲ್ಲ ಪ್ರಾಣಿಗಳಿಗೆ ಕಾರಣ ನಾಗಿರುತ್ತಾನೆಯೋ ಮತ್ತು ಆತ್ಮನಲ್ಲಿರತಕ್ಕ ಆತನನ್ನು ಯಾರು ನೋಡುತ್ತಾರೆಯೋ ಅವರಿಗೆ ಶಾಶ್ವತವಾದ ಸುಖವು ಸಿಗುತ್ತದೆ. ನಿತ್ಯರಿಗೆ ನಿತ್ಯನೂ, ಚೇತನ ಉಳ್ಳವರಿಗೆ ಚೇತನ ಉಳ್ಳವನೂ, ಬೇಡಿದವರಿಗೆ ಬೇಡಿದಿಷ್ಟಾರ್ಥಗಳನ್ನು ಕೊಡುತ್ತಾನೆಯೋ ಇಂತಹ ದೇವನನ್ನು ತಿಳಿದು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ. ಇಂತಹ ದೇವನು ಒಬ್ಬನೇ ಇರುತ್ತಾನೆ.

**ನಾರಾಯಣೋಪನಿಷತ್—ಅಧ್ಯಾಯ ೧, ಶ್ಲೋಕ ೧**

"ಯದೇಕಮವ್ಯಕ್ತಮನಂತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್"

ಅಂದರೆ ಒಬ್ಬನು ಅವ್ಯಕ್ತನು, ಅನಂತರೂಪನು, ಪ್ರಾಚೀನನು, ತಮೋಗುಣಾತೀತನು. ಹೀಗೆಯೇ ಎಲ್ಲ ಉಪನಿಷತ್ತುಗಳಲ್ಲಿ ಒಬ್ಬ ದೇವನನ್ನೇ ಪ್ರತಿಪಾದಿಸಿದ್ದುದು ಕಂಡು ಬರುತ್ತದೆ.

೯೧

ಈ ಎಲ್ಲ ಉಪನಿಷತ್ತುಗಳ ಮಂತ್ರಗಳಿಗೆ ಸರಿಯಾಗಿ ಶ್ರೀ ಬಸವಣ್ಣನವರು—

"ದೇವನೊಬ್ಬ ನಾಮ ಹಲವು ಪರಮ ಪತಿವ್ರತೆಗೆ ಗಂಡನೊಬ್ಬ ಮತ್ತೊಂದಕ್ಕೆರಗಿದರೆ ಕಿವಿಮೂಗ ಕೊಯ್ವನು ಹಲವು ದೈವದ ಎಂಜಲ ತಿಂಬವರನೇನೆಂಬೆ ಕೂಡಲಸಂಗಮದೇವಾ"

೯೨

"ನಂಬಿದ ಹೆಂಡತಿಗೆ ಗಂಡನೊಬ್ಬ ಕಾಣಿರೋ ನಂಬಬಲ್ಲ ಭಕ್ತಂಗೆ ದೇವನೊಬ್ಬ ಕಾಣಿರೋ ಬೇಡಬೇಡ ಅನ್ಯದೈವದ ಸಂಗ ಹೊಲ್ಲ. ಬೇಡ ಬೇಡ ಅನ್ಯದೈವವೆಂಬುದು ಹಾದರ ಕಾಣಿರೋ ಕೂಡಲಸಂಗಮದೇವ ಕಂಡರೆ ಮೂಗಕೊಯ್ವ ಕಾಣಿರೋ" ಮತ್ತು "ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ ದೇವನೊಬ್ಬ ಕಾಣಿರೋ ಇಬ್ಬ ರೆಂಬುದು ಹುಸಿನೋಡಾ ಕೂಡಲಸಂಗಮದೇವನೊಬ್ಬನೇ ಅಲ್ಲದೆ ಇಬ್ಬರಿಲ್ಲ ವೆಂದಿತ್ತುದಾವೇದ"

೯೩

ಸ್ವತಂತ್ರ ಸಿದ್ಧಲಿಂಗದೇವರು—

"ಇಬ್ಬರು ಮೂವರು ದೇವರೆಂದು ತಬ್ಬುಬ್ಬಿಕೊಂಡು ನುಡಿಯಬೇಡ ಒಬ್ಬನೇ ದೇವ ಕಾಣಿರಣ್ಣ ಶಿವ ಏಕೋದೇವನೆಂದು ಸಾರುತ್ತಿವೆ ಶೃತಿ ಪುರಾಣಂಗಳು ಇದುಕಾರಣ ಶಿವನಲ್ಲದೆ ದೈವವಿಲ್ಲೆಂದರಿದ ಮಹೇಶ್ವರನ ಹೃದಯವಾಗಿಪ್ಪ ನಮ್ಮ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನು"

೯೪

ತೋಂಟದ ಸಿದ್ಧಲಿಂಗದೇವರು—

"ಶಿವನಲ್ಲದ ದೇವರಿಲ್ಲ ನೋಡಾ ಎನಗೆ ಶಿವಮಂತ್ರವಲ್ಲದೆ ಬೇರೆ ಮಂತ್ರವಿಲ್ಲ ನೋಡಾ ಎನಗೆ ಇದು ಕಾರಣ ಓಂ ನಮಃ ಶಿವಾಯ

ಓಂ ನಮಃ ಶಿವಾಯ ಎಂಬ ಷಡಕ್ಷರ ಮಂತ್ರವನೆ ಜಪಿಸುತಿರ್ದೆನು ಕಾಣಾ ಮಹಲಿಂಗ ಗುರುಸಿದ್ಧೇಶ್ವರಪ್ರಭುವೇ"

೯೫

ಶ್ರೀ ಬಸವೇಶ್ವರರು—

"ಶೃತಿಗಗಮ್ಯ ದ್ವಾದಶಾಂತ್ಯನಪ್ರತಿಮ ಮಹಿಮಂಗೆ ಪ್ರತಿಯುಂಟೆ? 'ಸೋಮಃಪವತೆ' ಎಂಬ ಶೃತಿಯನರಿದು 'ಶಿವನೇಕೋದೇವಃ' ರುದ್ರನದ್ವಿತೀಯನೆಂದು ನಂಬುವುದು ಕಾಣಿರಣ್ಣ ಕೂಡಲಸಂಗಮ ದೇವನಲ್ಲದೆ ಇಲ್ಲವೆಂದು ಎತ್ತಿದೆ ಬಿರುದ ಜಗವೆಲ್ಲರಿಯಲು ಶಿವನೇ ಜಗತ್ರಯಕ್ಕೊಡೆಯನೆಂದುದು ವೇದ ಉತ್ಪತ್ತಿ ಸ್ಥಿತಿ ಲಯ ಕಾರಣ ನೆಂದುದು ವೇದ 'ಈಶ್ವರಸ್ಸರ್ವಜಗತ್ಪ್ರಭುಃ'" ಎಂಬ ಶೃತಿ ಇದು ಕಾರಣ ಕೂಡಲಸಂಗಮನೊಬ್ಬನೇ ದೇವನು.

**ತೈತ್ತರೀಯೋಪನಿಷತ್—ಭೃಗು ವಲ್ಲಿ**

**" ಯತೋವಾ ಇಮಾನಿ ಭೂತಾನಿ ಜಾಯಂತೆ ಯೇನ ಜಾತಾನಿ**
**ಜೀವಂತಿ ಯತ್ಪ್ರಯಂತ್ಯಭಿಸಂ ವಿಶಂತಿ—"**

ಎಂದು ಹೇಳಿದೆ. ಉತ್ಪತ್ತಿ ಸ್ಥಿತಿ ಲಯಗಳಿಗೆ ಕಾರಣಕರ್ತನೆಂದು ಹೇಳುವ ಮೇಲಿನ ಬಸವಣ್ಣನವರ ವಚನವು ಇದನ್ನೇ ಬೋಧಿಸುತ್ತದೆ.

೯೬

ಶ್ರೀ ಬಸವಣ್ಣನವರು—

"ವೇದಸ್ವಯಂಭುವೆಂಬ ವಾದಿನೀ ಕೇಳೆಲವೊ ಏಕೋರುದ್ರನ ದ್ವಿತೀಯನೆಂದು ನಂಬುವದು ಕಾಣಿರಣ್ಣ 'ಓಂ ದ್ಯಾವಾ ಭೂಮಿಾ ಜನಯನ್ ದೇವ ಏಕಃ' ರುದ್ರನ ದ್ವಿತೀಯವೆಂಬುದು ಕಾಣಿರಣ್ಣ ಚಕಿತಮಭಿದತ್ತೇ ಎಂದು ಶೃತಿ ಸಾರುತ್ತಿದೆ ಜಗದ ಕರ್ತ ಕೂಡಲಸಂಗನೊಬ್ಬನೇ ಕಾಣಿರೋ"

೯೭

ಶ್ರೀ ಅಖಂಡೇಶ್ವರ ದೇವರು—

"ಕುಂಭಸಹಸ್ರ ಉದಕದೊಳಗೆ ಬಿಂಬಿಸಿತೋರುವ ಸೂರ್ಯನೊಬ್ಬ ನಲ್ಲದೆ ಮತ್ತೆ ಹಲಬರುಂಟೇನಯ್ಯ? ಸಕಲದೇಹಗಳೊಳಗೆ ಭ್ರಮಿಸಿ ತುಂಬಿಪ್ಪ ಪರವಸ್ತು ನೀನೊಬ್ಬನಲ್ಲದೆ ಮತ್ತಾರನೂ ಕಾಣೆನಯ್ಯಾ ಅಖಂಡೇಶ್ವರಾ"

೯೮

ಚಂದಿಮರಸರು—

"ಆ ನಿಜವಸ್ತು ಒಂದೇ ತನ್ನ ಲೀಲೆಯವೆರಡಾಗಬಲ್ಲುದದೊಂದೆ ತನ್ನ ಮರೆಯಬಲ್ಲುದದೊಂದೇ ತಾನಲ್ಲವನ್ಯವಿಲ್ಲೆಂದರಿವು ತಾನೇ ಶಿಮ್ಮಲಿಗೆಯ ಚನ್ನರಾಮಾ"

೯೯

ಪ್ರಭುದೇವರು—

"ಆದಿ ಅನಾದಿ ಇಲ್ಲದಂದು ಹಮ್ಮು ಬಮ್ಮುಗಳಿಲ್ಲದಂದು ಸುರಾಳ ನಿರಾಳವಿಲ್ಲದಂದು ಶೂನ್ಯ ನಿಃಶೂನ್ಯವಿಲ್ಲದಂದು, ಸಚರಾಚರವೆಲ್ಲ ರಚನೆಗೆ ಬಾರದಂದು ಗುಹೇಶ್ವರನೊಬ್ಬನೇ ಇದ್ದಿಯಲ್ಲ ಇಲ್ಲದಂತೆ"

೧೦೦

ಶ್ರೀ ಬಸವೇಶ್ವರದೇವರು—

"ಜಾಗ್ರಸ್ವಪ್ನಸುಷುಪ್ತಿಯಲ್ಲಿ ಮತ್ತೊಂದ ನೆನೆದರೆ ತಲೆದಂಡ ತಲೆದಂಡ ಹುಸಿಯಾದರೆ ದೇವ ತಲೆದಂಡ ಕೂಡಲಸಂಗಮದೇವ ನೀವಲ್ಲದೆ ಅನ್ಯವ ನೆನೆದರೆ ತಲೆದಂಡ ತಲೆದಂಡ"

ಹೀಗೆಯೇ ಒಬ್ಬನೇ ದೇವರೆಂಬುವದನ್ನು ಶ್ರೀ ಬಸವಣ್ಣನವರು ಬಹಳ ಚನ್ನಾಗಿ ಪ್ರತಿಪಾದಿಸಿರುತ್ತಾರೆ. "ಏಕೇಶ್ವರವಾದ" ಎಂಬುವ ಪ್ರಕರಣದಲ್ಲಿ ವಿಸ್ತಾರವಾಗಿ ಈ ವಿಷಯವನ್ನು ವಿವೇಚನೆ ಮಾಡಿದುದಾಗಿರುತ್ತದೆ.

## ಕರ್ಮ ಮತ್ತು ಜ್ಞಾನ

ಕರ್ಮವನ್ನು ಮಾಡಬೇಕೆಂದು ಉಪನಿಷತ್ತುಗಳಲ್ಲಿ ಚನ್ನಾಗಿ ಪ್ರತಿಪಾದನೆ ಇರುತ್ತದೆ. ಕೆಲವು ಉಪನಿಷತ್ತುಗಳು ಜ್ಞಾನಬೋಧಕಗಳಾಗಿಯೂ ಇರುತ್ತವಲ್ಲದೆ ಕೆಲವು ಜ್ಞಾನ ಮತ್ತು ಕರ್ಮಗಳೆರಡನ್ನೂ ಬೋಧಿಸುತ್ತವೆ. ಶರಣರಾದರೂ ಕೇವಲ ಜ್ಞಾನವನ್ನಾಗಲೀ ಕೇವಲ ಕರ್ಮವನ್ನಾಗಲೀ ಪ್ರತಿಪಾದಿಸುವದಿಲ್ಲ. ಮಾನವನು ತನ್ನ ಅಂತಿಮ ಧ್ಯೇಯವಾದ ಮುಕ್ತಿಯನ್ನು ಸಾಧಿಸಲಿಕ್ಕೆ ಜ್ಞಾನ ಕರ್ಮಗಳೆರಡರ ಅವಶ್ಯಕತೆ ಉಂಟೆಂದೇ ಹೇಳಿರುತ್ತಾರೆ. ಕ್ರಿಯಾಯೋಗ ಮತ್ತು ಜ್ಞಾನಯೋಗಗಳೆಂಬ ಪ್ರಕರಣ ಗಳಲ್ಲಿ ಈ ವಿಷಯವನ್ನು ವಿಸ್ತಾರವಾಗಿ ಬರೆದಿರುತ್ತದೆ.

ಇಲ್ಲಿ ಕರ್ಮದ ಬಗ್ಗೆ ಒಂದೆರಡು ಉಪನಿಷತ್ತಿನ ಮಂತ್ರಗಳನ್ನು ಉದಾಹರಿಸಿ ಅವುಗಳಿಗೆ ಸರಿಯಾದ ಬಸವಣ್ಣನವರ ವಚನಗಳನ್ನು ಕೊಡಲಾಗಿದೆ—

**ಈಶಾವಾಸ್ಯೋಪನಿಷತ್—ಮಂತ್ರ ೨**

ಕುರ್ವನ್ನೇವೇಹಕರ್ಮಾಣಿ ಜಿಜೀವಿಷೇಚ್ಛತ ಸಮಾಃ ।
ಏವಂ ತ್ವಯಿ ನಾನ್ಯಥೇ ತೋಽಸ್ತಿ ನ ಕರ್ಮಲಿಪ್ಯತೇ ನರೇ ॥

ಅಂದರೆ—ಜಗತ್ತಿನಲ್ಲಿ ಕರ್ಮಪರಾಯಣನಾಗಿಯೇ ಒಂದು ನೂರು ವರ್ಷಗಳವರೆಗೆ ಬದುಕುವ ಆಶೆಯುಳ್ಳವನಾಗಿರಬೇಕು; ಇದೇ ನಿನ್ನ ಮಾರ್ಗವು. ಇದರಿಂದ ಪಾರಾಗ ಲಿಕ್ಕೆ ಬೇರೆ ಮಾರ್ಗವೇ ಇರುವದಿಲ್ಲ. ಹೀಗೆ ಮಾಡಿದರೆ ಮನುಷ್ಯನಿಗೆ ಕರ್ಮಲೋಪ ವಾಗುವದಿಲ್ಲ.

೧೦೧

ಪ್ರಭುದೇವರು—

"ಕ್ರಿಯಾಮಥನವಿಲ್ಲದೆ ಕಾಣಬಂದುದೇ ಇಕ್ಷುವಿನೊಳಗಣ ಮಧುರ? ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕಾಷ್ಠದೊಳಗಣ ಅಗ್ನಿ? ಕ್ರಿಯಾ

ಮಥನವಿಲ್ಲದೆ ಕಾಣಬಂದುದೇ ಕ್ಷೀರದೊಳಗಣ ತುಪ್ಪ? ಇದುಕಾರಣ ಗುಹೇಶ್ವರ ಲಿಂಗವ ತನ್ನೊಳರಿದೆನೆಂಬ ಮಹಾಂತರಿಗೆ ಸತ್ಕ್ರಿಯಾಚರಣೆಯೆ ಸಾಧನೆ ಕಾಣಿರೋ"

೧೦೨

ಶ್ರೀ ಬಸವಣ್ಣನವರು—

"ಅಂತರಂಗದಲ್ಲಿ ಅರಿವಾದಡೇನು? ಬಹಿರಂಗದಲ್ಲಿ ಕ್ರಿಯೆ ಇಲ್ಲದನ್ನಕ್ಕ ದೇಹವಿಲ್ಲದಿರ್ದಡೆ ಪ್ರಾಣಕ್ಕಾಶ್ರಯವುಂಟೆ? ಕನ್ನಡಿ ಇಲ್ಲದಿದ್ದರೆ ತನ್ನ ಮುಖಕ್ಕೆ ಆಶ್ರಯವುಂಟೆ? ಸಾಕಾರ ನಿರಾಕಾರ ಏಕೋದೇವ ನಮ್ಮ ಕೂಡಲಸಂಗಮದೇವ"

ಸತ್ಕರ್ಮದ ಬಗ್ಗೆ ಬೇಕಾದಷ್ಟು ವಚನಗಳಿರುತ್ತವೆ.

### ಬೃಹದಾರಣ್ಯಕೋಪನಿಷತ್

ಸಾಧುಕಾರಿ ಸಾಧುಃ ಭವತಿ ಪಾಪಕಾರಿ ಪಾಪೋ ಭವತಿ ।
ಪುಣ್ಯಃ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ ॥

ಉತ್ತಮ ಕಾರ್ಯಗಳನ್ನು ಮಾಡತಕ್ಕವನು ಉತ್ತಮನೇ ಆಗುತ್ತಾನೆ. ಪಾಪದ ಕಾರ್ಯ ಮಾಡತಕ್ಕವನು ಪಾಪಿಯೇ ಆಗುತ್ತಾನೆ. ಪುಣ್ಯಕರ್ಮದಿಂದ ಪುಣ್ಯವೂ, ಪಾಪಕರ್ಮದಿಂದ ಪಾಪವೂ ಉಂಟಾಗುತ್ತದೆ.

ಶ್ರೀ ಬಸವಣ್ಣನವರಾದರೋ ಇದಕ್ಕೆ ವೈಧರ್ಮದಿಂದ ಸಾಮ್ಯವನ್ನು ಕೊಡುತ್ತಾರೆ.

೧೦೩

"ಸುಖ ಬಂದರೆ ಪುಣ್ಯದ ಫಲವೆನ್ನೆನು ದುಃಖ ಬಂದರೆ ಪಾಪದ ಫಲವೆನ್ನೆನು ನೀ ಮಾಡಿದೊಡಾಯಿತ್ತೆಂದೆನ್ನೆನು ಕರ್ಮಕ್ಕೆ ಕರ್ತೃವೇ ಕಡೆಯೆಂದೆನ್ನೆನು ಉದಾಸೀನವಿಡಿದು ಶರಣೆಂದೆನ್ನೆನು ಕೂಡಲಸಂಗಮದೇವಾ ನೀ ಮಾಡಿದುಪದೇಶವು ಎನಗೀ ಪರಿಯಲಿ ಸಂಸಾರದ ಸವಿಯ ಬಳಸುವೆನು"

ಇನ್ನು ಶರಣರು ಆಶಾರಹಿತರು ಅಥವಾ ನಿರಾಶಾಭರಿತರು. ಅವರು ಲೋಭಿಯಾದ ಮಾನವನನ್ನು ಮತ್ತು ಆಶಾಬುರುಕರನ್ನು ಬಹಳ ತಿರಸ್ಕಾರಬುದ್ಧಿಯಿಂದ ಕಂಡದ್ದು ಅವರ ಅನಂತ ವಚನಗಳಿಂದ ತಿಳಿಯುತ್ತಲಿದೆ. ಋಷಿಗಳಾದರೂ ಆಶೆಯಿಲ್ಲದವರು. ಆದ್ದರಿಂದಲೇ ನಚಿಕೇತನಂತಹ ಆರು ವರ್ಷದ ಬಾಲಕನು ಯಮಧರ್ಮನು ಬೇಡಿದ ಇಷ್ಟಾರ್ಥಗಳನ್ನು ಕೊಡಲು ಪ್ರತ್ಯಕ್ಷನಾಗಿದ್ದಾಗ ಆ ಬಾಲಕನು ಅದನ್ನು ತಿರಸ್ಕರಿಸಿ ಬಿಟ್ಟನು.

### ಕಠೋಪನಿಷತ್

ಯಮನು—

ಯೇ ಯೇ ಕಾಮಾದುರ್ಲಭಾ ಮರ್ತ್ಯಲೋಕೇ ಸರ್ವಾನ್ ಕಾಮಾನ್ ಛಂದತಃ ।
ಪ್ರಾರ್ಥಯಸ್ವ ಇಮಾರಾಮಾಃ ಸರಥಾಃ ಸತೂರ್ಯಾನಹೀ ದೃಶಾಲಂಭನೀ ।
ಯಾ ಮನುಷ್ಯೈಃ ಆಭಿಃಮತ್ಪ್ರತ್ತಾಭಿಃ ಪರಿಚಾರಯಸ್ವ ನಚಿಕೇತೋ ಮರಣಂ
ಮಾನುಪ್ರಾಕ್ಷೀಃ ॥ ೨೫ ॥

ಮಾನವಲೋಕದಲ್ಲಿ ದುರ್ಲಭಗಳಾದ ಎಲ್ಲ ವಸ್ತುಗಳನ್ನು ಬೇಡು. ರಥಗಳಿಂದಲೂ, ವಾದ್ಯಗಳಿಂದಲೂ ಕೂಡಿದ ಈ ಸುಂದರ ಸ್ತ್ರೀಯರು ಮಾನವರಿಗೆ ದುರ್ಲಭರು. ನಾನು ಕಳಿಸುವ ಈ ಸ್ತ್ರೀಯರ ಸೇವೆಯನ್ನು ಸ್ವೀಕರಿಸು. ನಚಿಕೇತನೇ ಆ ಮರಣ ವಿಷಯದ ಪ್ರಶ್ನೆಗಳನ್ನು ಬಿಡು. ಯಮಧರ್ಮನ ಈ ಮಾತಿಗೆ ನಚಿಕೇತನ ಉತ್ತರ—

**ಶ್ಲೋಕ ೨೬**

**ಶೋಭಾವಾಮರ್ತ್ಯಸ್ಯ ಯದಂತಕೈತತ್ ಸರ್ವೇಂದ್ರಿಯಾಣಾಂ ಜರಯಂತಿ ತೇಜಃ ।**
**ಅಪಿಸರ್ವಂ ಜೀವಿತಮಲ್ಪಮೇವ ತವೈವವಾಹಾಸ್ತವ ನೃತ್ತಗೀತೇ ॥**

ಯಮಧರ್ಮನೇ ಇವೆಲ್ಲ ಕ್ಷಣಿಕವಾದವುಗಳು; ಇಂದ್ರಿಯ ಬಲವನ್ನು ಕ್ಷೀಣಗೊಳಿಸಿ ಬಿಡುವವು. ಈ ಜೀವನವಾದರೂ ಸ್ವಲ್ಪಕಾಲ ಬದುಕುವದು; ಮನುಷ್ಯನು ಸತ್ತಮೇಲೆ ಈ ವಾಹನಗಳೂ ನಿನ್ನವೆ. ಹೀಗೆಯೇ ವಾದವಿವಾದ ನಡೆದು ಕಡೆಗೆ ಯಮನೇ ನಚಿಕೇತನ ಇಚ್ಛೆಯಂತೆ ನಡೆಯಬೇಕಾಯಿತು.

ಶರಣರಲ್ಲಿಯೂ ಇಂತಹ ಅನೇಕ ಸಂದರ್ಭಗಳು ನಡೆದಿರುತ್ತವೆ.

**೧೦೪**

ಜೇಡರ ದಾಸೀಮಾರ್ಯರು—

"ಕರಿಯನಿತ್ತಡೆ ಒಲ್ಲೆ ಸಿರಿಯನಿತ್ತಡೆ ಒಲ್ಲೆ ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ ನಿಮ್ಮ ಶರಣರ ಸೂಳ್ನುಡಿಯ ಒಂದರಘಳಿಗೆ ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥ"

ಶರಣರ ವಚನಗಳಿಂದಲೇ ಮೋಕ್ಷಸಂಪತ್ತು ಸಿಗುವದು. ನಶ್ವರವಾದ ವಸ್ತುಗಳಿಂದ ಆವ ಪ್ರಯೋಜನವೂ ಇರುವದಿಲ್ಲ. ಉಪನಿಷತ್ ಕಾಲವು ಬಹಳ ಶ್ರೇಷ್ಠವಾದುದೆಂದು ಮೇಲೆ ಹೇಳಿರುತ್ತೇನೆಯಷ್ಟೆ? ಆ ಕಾಲದಲ್ಲಿ ಮೇಲು ಕೀಳುಗಳಿಗೆ ಆಶ್ರಯವಿರಲಿಲ್ಲ; ಹೆಣ್ಣುಗಂಡುಗಳೆಂಬ ಭೇದವಿರಲಿಲ್ಲ. ಸಣ್ಣವರು ದೊಡ್ಡವರು ಎಂಬುವ ತರತಮ ಭಾವಕ್ಕೆ ಆಸ್ಪದವಿರಲಿಲ್ಲ. ಬ್ರಾಹ್ಮಣ ಅಥವಾ ಕ್ಷತ್ರಿಯರೆಂಬ ಭೇದಭಾವನೆಗಳಿರಲಿಲ್ಲ. ಬ್ರಹ್ಮಜ್ಞಾನವನ್ನು ಮಾಡಿಕೊಳ್ಳಲಿಕ್ಕೆ ಸರ್ವರಿಗೂ ಮುಕ್ತದ್ವಾರವಿದ್ದಿತು. ಜಾತಿಭೇದಗಳ ಗೊಂದಲವಿಲ್ಲದ್ದರಿಂದಲೇ ಆ ಕಾಲವು ಎಲ್ಲರಿಗೂ ವೇದಾಂತ ವಿದ್ಯೆಯ ರಹಸ್ಯವನ್ನು ತಿಳಿಸಿತು. ಯಾವ ಅಧಿಕಾರವೂ ಇಲ್ಲೆಂದು ಹೇಳುವ ಸ್ತ್ರೀಯರಿಗೆ ವೇದಾಧ್ಯಯನ, ಬ್ರಹ್ಮಜಿಜ್ಞಾಸೆ ಮೊದಲಾದ ಕಾರ್ಯಗಳಲ್ಲಿ ಯೋಗ್ಯಸ್ಥಾನವು ದೊರೆತು ಗಾರ್ಗೆಯಿ, ಮೈತ್ರೇಯಿ ಮೊದಲಾದ ಸ್ತ್ರೀಯರು ವೇದಾಂತ ಚರ್ಚೆಯಲ್ಲಿ ಭಾಗವನ್ನು ವಹಿಸಿದ್ದರು. ಯಾಜ್ಞವಲ್ಕರಂತಹ ಶ್ರೇಷ್ಠ ಋಷಿಗಳೂ ಕೂಡ ವಾದವಿವಾದವನ್ನು ಮಾಡಿದರು. ಜನಕನಂತಹ ಕ್ಷತ್ರಿಯನ ಪಾದದ ಕೆಳಗೆ ಎಷ್ಟೋ ಜನ ಶ್ರೇಷ್ಠ ಬ್ರಾಹ್ಮಣರು ಶಿಷ್ಯತ್ವವನ್ನು ವಹಿಸಿದರು. ಮಹಾಭಾರತದಲ್ಲಿ ಹೇಳಿದಂತೆ ಆ ಕಾಲದ ಋಷಿಗಳಲ್ಲಿ ಅನೇಕರು ಕೀಳುಜಾತಿಯವರಿದ್ದರು.

ಇಲ್ಲಿ ಶುಕ್ರನೀತಿಯೊಳಗಿನ ಕೆಲವು ಶ್ಲೋಕಗಳನ್ನು ನೋಡಿದರೆ ಇವರ ನಿಜ ಸಂಗತಿಯು ಗೊತ್ತಾಗುವದು—

**ಶುಕ್ರನೀತಿ—೪—೪—೩೮**

ವಿಶ್ವಾಮಿತ್ರೋವಶಿಷ್ಠಶ್ಚ ಮತಂಗೋನಾರದಾದಯಃ ।
ತಪೋವಿಶೇಷೈಃ ಸಂಪ್ರಾಪ್ತಾ ಉತ್ತಮತ್ವಂ ನ ಜಾತಿತಃ ॥

ವಿಶ್ವಾಮಿತ್ರ, ವಶಿಷ್ಠ, ಮತಂಗ, ನಾರದ ಮೊದಲಾದವರು ತಮ್ಮ ತಪೋಬಲದಿಂದಲೇ ಶ್ರೇಷ್ಠತೆಯನ್ನು ಹೊಂದಿದರಲ್ಲದೆ ಜಾತಿಯಿಂದಲ್ಲ.

**ಶುಕ್ರನೀತಿ—ಅಧ್ಯಾಯ ೧, ಶ್ಲೋಕ ೩೮**

ನಜಾತ್ಯಾ ಬ್ರಾಹ್ಮಣಶ್ಚಾತ್ರ ಕ್ಷತ್ರಿಯೋವೈಶ್ಯಯೇವ ಚ ।
ನ ಶೂದ್ರೋ ನ ಚವೈಮ್ಲೇಂಛೋ ಭೇದಿತಾ ಗುಣಕರ್ಮಭಿಃ ॥

ಅಂದರೆ ಜಾತಿಯಿಂದ ಯಾರೂ ಬ್ರಾಹ್ಮಣರಿಲ್ಲ, ಕ್ಷತ್ರಿಯರಿಲ್ಲ, ವೈಶ್ಯರಿಲ್ಲ, ಶೂದ್ರರಿಲ್ಲ. ಈ ಭೇದಗಳುಂಟಾದುದು ಗುಣಕರ್ಮದಿಂದ. ಇದೇ ಸಿದ್ಧಾಂತವನ್ನು ಮಹಾಭಾರತವು ಎತ್ತಿಹಿಡಿಯುತ್ತದೆ.

**ಅನುಶಾಸನಪರ್ವ—ಅಧ್ಯಾಯ ೧೪೭**

ನಯೋನಿರ್ನಾಪಿಸಂಸ್ಕಾರೋ ನ ಶೃತಂ ನ ಚ ಸಂತತಿಃ ।
ಕಾರಣಾನಿ ದ್ವಿಜತ್ವಸ್ಯ ವೃತ್ತಮೇವತು ಕಾರಣಂ ।
ವೃತ್ತೇಸ್ಥಿತಶ್ಚ ಶೂದ್ರೋಪಿ ಬ್ರಾಹ್ಮಣತ್ವಂ ಸ ಗಚ್ಛತಿ ॥

ಅಂದರೆ ದ್ವಿಜತ್ವಕ್ಕೆ ಕಾರಣವು ಯೋನಿಯಲ್ಲ, ಸಂಸ್ಕಾರವಲ್ಲ, ಅಧ್ಯಯನವಲ್ಲ; ಆದರೆ ಆಚಾರವೇ ಕಾರಣ. ಸದಾಚಾರಿಯಾಗಿದ್ದವನು ಶೂದ್ರನಾಗಿದ್ದರೂ ಬ್ರಾಹ್ಮಣತ್ವವನ್ನು ಹೊಂದುತ್ತಾನೆ.

**ಅರಣ್ಯಪರ್ವ—ಅಧ್ಯಾಯ ೨೧೬**

ಯಸ್ತುಶೂದ್ರೋದಯೇ ಸತ್ಯೇ ಧರ್ಮೇಚ ಸತತಂ ಸ್ಥಿತಃ ।
ತಂ ಬ್ರಾಹ್ಮಣಮಹಂಮನ್ಯೇ ವೃತ್ತೇನ ಹಿ ಭವೇದ್ವಿಜಃ ॥

ಅಂದರೆ ಯಾವನು ಶೂದ್ರನೆನಿಸಿಕೊಂಡಿದ್ದರೂ ದಯೆ, ಸತ್ಯ, ಧರ್ಮಗಳಲ್ಲಿ ಸದಾ ನಿರತನಾಗಿರುತ್ತಾನೆಯೋ ಅವನನ್ನು ನಾನು ಬ್ರಾಹ್ಮಣನೆಂದೇ ತಿಳಿಯುತ್ತೇನೆ.

ಶ್ರೀ ಸಿದ್ಧರಾಮದೇವರು—

ತಪಸಾ ಬ್ರಾಹ್ಮಣೋ ಜಾತಃ ವಿಶ್ವಾಮಿತ್ರೋ ಮಹಾಮುನಿಃ ।
ತಪಸಾ ಬ್ರಾಹ್ಮಣೋ ಜಾತಃ ಅಗಸ್ತ್ಯೋತ್ರ ಮಹಾಮುನಿಃ ॥
ತಪಸಾ ಬ್ರಾಹ್ಮಣೋ ಜಾತಃ ಪರಾಶರ ಮಹಾಮುನಿಃ ।
ತಪಸಾ ಬ್ರಾಹ್ಮಣೋ ಜಾತಃ ಭೃಗುರ್ವಾಸೋಹಿ ಮಾಂಡವ್ಯಃ ॥

ಎಲ್ಲ ಋಷಿಗಳೂ ತಮ್ಮ ತಮ್ಮ ಶ್ರೇಷ್ಠಗುಣಗಳಿಂದಲೇ ಲೋಕಪೂಜ್ಯರಾಗಿ ಹೋಗಿರುವರು. ಇಂತಹ ಋಷಿಗಳಿಂದ ಬರೆಯಲ್ಪಟ್ಟ ಉಪನಿಷತ್ತುಗಳಲ್ಲಿ ಬ್ರಹ್ಮಜಿಜ್ಞಾಸೆ, ಬ್ರಹ್ಮಚಿಂತನೆ, ಬ್ರಹ್ಮಚಿಕಿತ್ಸೆ ಮೊದಲಾದ ಆತ್ಮತತ್ವದ ವಿಷಯಗಳೇ ಇರುತ್ತವೆ.

ಉಪನಿಷತ್ತುಗಳ ಕಾಲವು ಹಿಂದೂ ಧಾರ್ಮಿಕ ಇತಿಹಾಸದಲ್ಲಿ ಹೇಗೆ ಮಿಗಿಲಾದದ್ದೋ ಅದರಂತೆಯೇ ೧೨ನೆಯ ಶತಮಾನದಲ್ಲಿ ಆಗಿಹೋದ ಬಸವಾದಿ ಶರಣರ ಕಾಲವಾದರೂ ಬಹಳ ಮಿಗಿಲಾದದ್ದೂ, ಐತಿಹಾಸಿಕ ಅತ್ಯದ್ಭುತಕಾರ್ಯಗಳಿಂದ

ಕೂಡಿದ್ದೂ ಆಗಿರುತ್ತದೆ. ಶಿವಶರಣರ ಧಾರ್ಮಿಕ ಕ್ರಾಂತಿಯು ಭರತ ಖಂಡದ ತುಂಬ ವ್ಯಾಪಿಸಿತು. ಎಲ್ಲಿ ನೋಡಿದಡಲ್ಲಿ ಶರಣರ ಅಹಿಂಸಾ, ದಯಾ, ಸತ್ಯ, ಕಾಯಕ ಮೊದಲಾದ ನೂರಾರು ಗುಣಗಳ ಶ್ರೇಷ್ಠತೆಯು ಕಂಡುಬರುತ್ತಲಿದೆ. ೧೨ನೆಯ ಶತಮಾನವು ಧಾರ್ಮಿಕ ಕ್ರಾಂತಿಯ ಕಾಲವು. ಅಲ್ಲಿಯವರೆಗೆ ಆದ ಧಾರ್ಮಿಕ ಕ್ರಾಂತಿಗಳನ್ನೆಲ್ಲ ಮೀರಿದುದಾಗಿರುತ್ತದೆ. ಬಸವ, ಚನ್ನಬಸವ, ಅಲ್ಲಮಪ್ರಭು, ಸಿದ್ಧರಾಮ ಮೊದಲಾದ ಯೋಗಿವರೇಣ್ಯರೇ ಇದರಲ್ಲಿ ಪ್ರಧಾನ ಪಾತ್ರವನ್ನು ವಹಿಸಿದ್ದರಲ್ಲದೆ ನೂರಾರು ಶರಣರು ಇವರ ಕಾರ್ಯದಲ್ಲಿ ಸಹಾಯಕರಾಗಿದ್ದರು. ಇವರ ಧಾರ್ಮಿಕ ಚರ್ಚೆಯು ಎಲ್ಲೆಡೆಯಲ್ಲಿಯೂ ಹಬ್ಬಿತು. ಅನೇಕರು ಬೇರೆ ಬೇರೆ ಸ್ಥಾನಗಳಿಂದ ಕಲ್ಯಾಣ ಪಟ್ಟಣಕ್ಕೆ ಧಾವಿಸಿ ಬಂದರು. ಆ ಕಾಲಕ್ಕೆ ಇಂತಹ ೩೦೦ ಜನ ಶಿವಶರಣರು ಎರಡೆಂಭತ್ತುಕೋಟಿ ವಚನಗಳನ್ನು ರಚಿಸಿದರು. ಈ ವಚನಗಳು ಉಪನಿಷತ್ತುಗಳಿಗೆ ಸಮಾನವಾದವುಗಳೆಂದು ತಿಳಿಯಲ್ಪಟ್ಟಿತು. ಉಪನಿಷತ್ತುಗಳು ೧೦೮ ಇದ್ದರೂ ಈಗ ಅವುಗಳ ಸಂಖ್ಯೆ ೨೨೦ ಆಗಿರುತ್ತದೆ. ಶರಣರ ಸಂಖ್ಯೆಯು ಅವರಿಗಿಂತಲೂ ಹೆಚ್ಚಾಗಿ ಇರುತ್ತದೆ. ಉಪನಿಷತ್ತುಗಳಂತೆ ಇವುಗಳನ್ನೂ ಕೂಡ ಬೇರೆ ಬೇರೆ ವಚನಗಳಲ್ಲಿ ವಿಂಗಡಿಸಬಹುದು. ಅಂತೂ ಇದೊಂದು ತತ್ವಪ್ರಚಾರದ ಪ್ರಚಂಡ ಸಂಘಟನೆಯ ಮಹತ್ವದ ಕಾಲವೆಂದು ಹೇಳಬಹುದು. ತಾಯಿಯ ನುಡಿಯಲ್ಲಿ ಇಂತಹ ಶ್ರೇಷ್ಠವಾದ ಧಾರ್ಮಿಕ ವಾಙ್ಮಯವನ್ನು ರಚಿಸಿದ್ದುದು ಜಗತ್ತಿನ ಸಾಹಿತ್ಯದಲ್ಲಿ ಎಲ್ಲಿಯೂ ಸಿಗುವದಿಲ್ಲ. ಇದು ಒಳ್ಳೆ ಹೊಸ ಕಾರ್ಯವೆಂದು ಆ ಕಾಲದಲ್ಲಿ ಪ್ರಸಿದ್ಧಿಯನ್ನು ಹೊಂದಿತಲ್ಲದೆ ಈಗಿನ ಕಾಲದ ಪಂಡಿತರನ್ನು ತಲೆದೂಗಿಸುತ್ತಲಿದೆ. ಹೀಗೆಯೇ ಸಾಮ್ಯವನ್ನು ಕೊಡುತ್ತ ಹೋದರೆ ಇದೊಂದು ಪ್ರಕರಣವೇ, ಒಂದು ಮಹತ್ತರವಾದ ಗ್ರಂಥವೇ ಆಗುವದು. ಆದ್ದರಿಂದ ಇನ್ನು ಕೆಲವು ವಿಷಯಗಳನ್ನು ಸಂಕ್ಷೇಪವಾಗಿ ಹೇಳುತ್ತೇವೆ. ಉಪನಿಷತ್‌ಕಾರರು ಯಾವದಕ್ಕೆ ಬ್ರಹ್ಮ, ನಿತ್ಯ, ವಿಶ್ವವ್ಯಾಪಿ, ಅಜ್ಞೇಯ ಮೊದಲಾದ ಶಬ್ದಗಳಿಂದ ಹೇಳುತ್ತಾರೆಯೋ ಅದಕ್ಕೆ ಶರಣರು ಲಿಂಗವೆಂದು ಕರೆಯುತ್ತಾರೆ. "ತಸ್ಮಾಲ್ಲಿಂಗಂ ಪರಂಬ್ರಹ್ಮ ಸಚ್ಚಿದಾನಂದಲಕ್ಷಣಂ" ಸಚ್ಚಿದಾನಂದ ಸ್ವರೂಪವಾದ ಆ ಪರಬ್ರಹ್ಮ ಪರವಸ್ತುವಿಗೇನೇ ಲಿಂಗವೆಂದು ಕರೆಯುತ್ತಾರೆ.

ಶರಣರ ದೃಷ್ಟಿಯಲ್ಲಿ ಲಿಂಗವು ಪರಬ್ರಹ್ಮ ಸ್ವರೂಪವಾದುದಲ್ಲದೆ ಜಗದ್ವ್ಯಾಪಿ. ಪಿಂಡಾಂಡ ಬ್ರಹ್ಮಾಂಡಗಳೆಲ್ಲ ಲಿಂಗದಲ್ಲಿ ಅಡಗಿ ಲಿಂಗದಲ್ಲಿ ಲಯಹೊಂದತಕ್ಕವುಗಳಾಗಿವೆ. ಲಿಂಗಕ್ಕೇನೇ ವಚನಕಾರರು "ಅತ್ಯತಿಷ್ಠದ್ದಶಾಂಗುಲಂ" ಎಂದು ಕರೆಯುತ್ತಾರೆ. ಎಷ್ಟೋ ಉಪನಿಷತ್ತುಗಳ ಶಬ್ದವನ್ನು ಶರಣರು ಇದ್ದಕ್ಕಿದ್ದಹಾಗೆ ಉಪಯೋಗಿಸಿಕೊಂಡರೂ ತಮ್ಮ ವೈಶಿಷ್ಟ್ಯವನ್ನು ತೋರಿಸಿ ಉಪನಿಷತ್ತುಗಳಿಗಿಂತಲೂ ಕೆಲವು ವಿಷಯಗಳಲ್ಲಿ ಮುಂದೆ ಹೋಗಿರುತ್ತಾರೆ. ಶ್ವೇತಾಶ್ವತರ, ಕೈವಲ್ಯ, ಜಾಬಾಲ, ನಾರಾಯಣೋಪನಿಷತ್ ಮೊದಲಾದವುಗಳಂತೂ ವಚನಕಾರರ ವಚನಗಳಿಗೆ ಶಬ್ದಶಃ ಹೋಲತಕ್ಕವುಗಳಾಗಿರುತ್ತವೆ. ಇಂತಹ ಕ್ಲಿಷ್ಟಗಳಾದ ಉಪನಿಷತ್ತುಗಳ ವೇದಾಂತದ ತಿರುಳನ್ನು ಸುಲಭವಾಗಿ ಕನ್ನಡ ನುಡಿಯಲ್ಲಿ ಒಂದು ಪ್ರತ್ಯೇಕವಾದ ಧರ್ಮಕ್ಕೆ ಅನ್ವಯಿಸಿ ಹೇಳುವದು ಸಾಮಾನ್ಯವಾದುದಲ್ಲ. ಆದುದರಿಂದಲೇ ಶರಣರಿಗೆ ಲೋಕೋತ್ತರವಾದ ಕೀರ್ತಿಯು ಪ್ರಾಪ್ತಿಯಾಗಿರುವದಲ್ಲದೆ ಕನ್ನಡ ಭಾಷೆಯು ಅಸ್ತಿತ್ವದಲ್ಲಿರುವವರೆಗೆ

ಅವರ ಕೀರ್ತಿಯು ತೇಜಃಪುಂಜವಾಗಿ ಮೆರೆಯುವದರಲ್ಲಿ ತಿಲಮಾತ್ರವಾದರೂ ಸಂಶಯವಿರುವದಿಲ್ಲ. ಉಪನಿಷತ್ತುಗಳನ್ನು ಅವರು ನಿಂದಿಸಿದ್ದುದು ಎಲ್ಲಿಯೂ ಕಂಡು ಬರುವದಿಲ್ಲ. ಉಪನಿಷತ್ತುಗಳು ಸಾಮಾನ್ಯವಾಗಿ ಜನಗಳಿಗೆ ಆತ್ಮತತ್ವವನ್ನು ಬೋಧಿಸ ತಕ್ಕವುಗಳಾಗಿದ್ದರೂ ಅನೇಕ ಮತಸ್ಥಾಪನಾಚಾರ್ಯರು ಅವುಗಳ ಅರ್ಥವನ್ನು ಜಗಿ ತಮ್ಮ ಪಾಂಡಿತ್ಯದ ಬಲದಿಂದ ತಮ್ಮ ತಮ್ಮ ಮತಪರಸಿದ್ಧಾಂತಗಳನ್ನು ಸ್ಥಾಪಿಸಿ ತಾವು ಬರೆದ ಅರ್ಥವೇ ಶ್ರೇಷ್ಠವಾದುದೆಂದು ಎಲ್ಲರೂ ಹೇಳುತ್ತಲಿದ್ದಾರೆ. ವೀರಶೈವ ಸಮಾಜದ ಪಂಡಿತರೂ ಕೂಡ ದಶೋಪನಿಷತ್ತುಗಳಲ್ಲಿ ಕೆಲವುಗಳಿಗೆ ಲಿಂಗಧಾರಣ ಪರಸಿದ್ಧಾಂತವನ್ನು ಮಾಡಿ ಬರೆದಿರುತ್ತಾರೆ. ಅಂತೂ ಬಸವಾದಿ ಶರಣರಿಗೆ ಉಪನಿಷ ದ್ವಾಕ್ಯಗಳು ನಿಷೇಧಪರವಾದವುಗಳಾದದ್ದು ಎಲ್ಲಿಯೂ ಕಂಡುಬರುವದಿಲ್ಲ. ಇತ್ತೀಚಿನ ಟೀಕೆಗಳನ್ನು ಅವರು ಒಪ್ಪುವದಿಲ್ಲ. ಶರಣರು ಕೇವಲ ಸೃಷ್ಟಿ, ಜೀವ, ಜಗತ್ತು, ಆತ್ಮತತ್ವ ಮೊದಲಾದವುಗಳನ್ನು ಹೇಳದೆ ಅಷ್ಟಾವರಣ, ಪಂಚಾಚಾರ, ಷಟಸ್ಥಲ. ಮೊದಲಾದ ಅನೇಕ ವಿಷಯುಗಳನ್ನು ಹೇಳಿರುತ್ತಾರೆ. ವಿಷಯುಗಳ ಗಾಂಭೀರ್ಯದಲ್ಲಿ ಉಪನಿಷತ್ತುಗಳಿಗಿಂತಲೂ ಕೆಲವು ಸಂದರ್ಭಗಳಲ್ಲಿ ಶರಣರು ಮುಂದೆ ಹೋಗಿರುತ್ತಾರೆ. ಕೆಲವು ಉಪನಿಷತ್ತುಗಳಲ್ಲಿ ರುದ್ರಾಕ್ಷಿ ಮತ್ತು ಭಸ್ಮಗಳ ಪ್ರಶಂಸೆಯು ಚನ್ನಾಗಿ ವರ್ಣಿಸ ಲ್ಪಟ್ಟಿರುತ್ತದೆ. ಆ ಉಪನಿಷತ್ತುಗಳಿಗೆ ಸರಿಯಾಗಿಯೂ, ಕೆಲವು ಪ್ರಸಂಗಗಳಲ್ಲಿ ವಿಶೇಷ ರೀತಿಯಿಂದಲೂ ಬಸವಣ್ಣನವರು ಅನೇಕ ವಚನಗಳನ್ನು ಹೇಳಿರುತ್ತಾರೆ.

ಉಪನಿಷತ್‌ಕಾರರು—

**ನಿರ್ಗುಣ ಬ್ರಹ್ಮಸ್ವರೂಪ**

**ಸರ್ವೇಂದ್ರಿಯ ಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಂ ।**
**ಸರ್ವಸ್ಯ ಪ್ರಭುಮೀಶಾನಂ ಸರ್ವತ್ರ ಶರಣಂ ಬೃಹತ್ ॥**

ಅಂದರೆ ಎಲ್ಲ ಚಕ್ಷುರಾದಿ ಇಂದ್ರಿಯಂಗಳ ಗುಣಗಳಾದ ಆಕಾರಾದಿಗಳಲ್ಲಿ ಆಯಾಯ ಆಕಾರದಿಂದ ಹೊಳೆಯತಕ್ಕ ಮತ್ತು ನೋಡತಕ್ಕವನಾಗಿದ್ದರೂ ಎಲ್ಲಾ ಇಂದ್ರಿಯಗಳಿಲ್ಲ ದವನೆಂದೂ ವಿರೋಧಾಭಾಸದಿಂದ ವರ್ಣಿಸಿರುತ್ತಾರೆ. ಎಷ್ಟೋ ಕಡೆ ಸಗುಣ ಬ್ರಹ್ಮದ ವರ್ಣನೆಯೂ ಬಂದಿರುತ್ತದೆ. ಶರಣರಾದರೂ ಕೇವಲ ಸಾಕಾರವನ್ನಾಗಲೀ ನಿರಾಕಾರವನ್ನಾಗಲೀ ನಂಬುವದಿಲ್ಲ. ನಿರ್ಗುಣ ಸ್ವರೂಪನಾದ ದೇವನನ್ನು ವಚನ ಕಾರರು ಅನಂತರೀತಿಯಿಂದ ಪ್ರಶಂಸಿಸಿದರೂ ಸಗುಣ ಬ್ರಹ್ಮನನ್ನು ಅವರು ಬಿಟ್ಟಿರುವ ದಿಲ್ಲ. ಮೊದಲು ಸಗುಣ ಆಮೇಲೆ ನಿರ್ಗುಣನೆಂದೇ ಅವರ ಸಿದ್ಧಾಂತವು. ವಚನ ಕಾರರಿಗೂ ಉಪನಿಷತ್‌ಕಾರರಿಗೂ ಕೆಲವು ವಿಷಯುಗಳಲ್ಲಿ ಮಾತ್ರ ವ್ಯತ್ಯಾಸವಿರುವ ದಲ್ಲದೆ ಉಳಿದ ಕಡೆ ಏಕಾಭಿಪ್ರಾಯವಾಗಿರುತ್ತದೆ.

ಒಂದು ಉಪನಿಷತ್ತಿನಲ್ಲಿ ಹೇಳಿದ ವಿಷಯವೇ ಬೇರೆಬೇರೆ ಉಪನಿಷತ್ತುಗಳಲ್ಲಿ ಅನೇಕ ಸಾರಿ ಬಂದಿರುತ್ತದೆ. "ಅಪಾಣಿಪಾದೋ ಜವನೋ ಗೃಹೀತಾ" ಎನ್ನುವ ಮಂತ್ರವು ಆರೇಳು ಉಪನಿಷತ್ತುಗಳಲ್ಲಿಯೂ ಬಂದಿರುತ್ತದೆ. ಅದರಲ್ಲಿ ಕೆಲವು ಶಬ್ದಗಳ ವ್ಯತ್ಯಾಸ ಮಾತ್ರ ಇರುತ್ತದೆ. ಶರಣರಲ್ಲಿಯೂ ಒಬ್ಬರು ಹೇಳಿದ್ದನ್ನೇ ಉಳಿದವರೂ ಕೂಡ ಹೇಳಿದ್ದುದು ಕಂಡುಬರುತ್ತದೆ. ಉಪನಿಷತ್ತುಗಳಲ್ಲಿ ಮೊದಲನೆಯ ವರ್ಗದಲ್ಲಿ ಕೆಲವು ಬರುತ್ತದೆ. ಶರಣರಲ್ಲಿಯೂ ಬಸವ, ಚನ್ನಬಸವ, ಪ್ರಭುದೇವ, ಅಕ್ಕಮಹಾ

ದೇವಿ, ಸಿದ್ಧರಾಮ ಮೊದಲಾದ ಕೆಲವು ಶರಣರ ವಚನಗಳು ಮೊದಲನೆಯ ವರ್ಗದಲ್ಲಿ ಬರುತ್ತವಲ್ಲದೆ ಉಳಿದ ವಚನಗಳು ಎರಡನೆಯ ವರ್ಗಕ್ಕೆ ಸೇರುತ್ತವೆ. ಉಪನಿಷತ್ತುಗಳಲ್ಲಿ ದಶೋಪನಿಷತ್ತುಗಳನ್ನು ಬಿಟ್ಟರೆ ಉಳಿದ ಎಷ್ಟೋ ಉಪನಿಷತ್ತುಗಳು ಎರಡನೆಯ ವರ್ಗಕ್ಕೂ ಮೂರನೆಯ ವರ್ಗಕ್ಕೂ ಸೇರತಕ್ಕವುಗಳಾಗಿವೆ. ಉಪನಿಷತ್ತುಗಳು ಸಂಸ್ಕೃತ ಭಾಷೆಯಲ್ಲಿರುವದರಿಂದ ಜಗತ್ತಿನ ಮೂಲೆಮೂಲೆಗಳಲ್ಲಿರತಕ್ಕ ಎಲ್ಲ ಪಂಡಿತರಿಗೂ ಅವುಗಳ ಸಾರವು ಎಷ್ಟರಮಟ್ಟಿಗಿರುತ್ತದೆಂದು ತಿಳಿದಿರುತ್ತದೆ. ಜಗತ್ತಿನ ಪ್ರಸಿದ್ಧ ಭಾಷೆಗಳಲ್ಲೆಲ್ಲ ಉಪನಿಷತ್ತುಗಳ ಅಚ್ಚಾಗಿರುತ್ತವೆ. ಆದರೆ ವಚನಗಳಿಗೆ ಈ ಪ್ರಾಶಸ್ತ್ಯವು ದೊರೆತಿಲ್ಲ. ಕೇವಲ ಕನ್ನಡ ಭಾಷೆಯಲ್ಲಿರುವದರಿಂದ ಭರತಖಂಡದ ಅಥವಾ ಜಗತ್ತಿನ ಪಂಡಿತರ ಮಾತು ಒತ್ತಟ್ಟಿಗಿರಲಿ ನಮ್ಮ ನೆರೆಪ್ರಾಂತದ ಭಾಷೆಗಳ ಜನಗಳಿಗೂ ಕೂಡ ಅವುಗಳ ತಿರುಳು ತಿಳಿಯಲು ಸಾಧ್ಯವಿಲ್ಲ; ಅಂದಮೇಲೆ ಅವುಗಳಲ್ಲಿರತಕ್ಕ ಶ್ರೇಷ್ಠಗುಣಗಳು ಕನ್ನಡಿಗರ ಹೊರತು ಇಲ್ಲಿಯವರೆಗೆ ಅನ್ಯರಿಗೆ ತಿಳಿದಿರುವದಿಲ್ಲ. ಈ ಕಾರ್ಯದ ಭಾರವು ವೀರಶೈವ ಸಮಾಜದ ಮೇಲಿರುತ್ತದೆ. ಸುಪ್ರಸಿದ್ಧ ಭರತಖಂಡದ ಭಾಷೆಗಳಲ್ಲಿ ಮೊದಲು ಅಚ್ಚಾಗಬೇಕು; ಅಂದರೆ ಅವುಗಳ ಮೇಲ್ಮೆಯು ಅಖಂಡ ಭೂಮಂಡಲದಲ್ಲಿ ಹಬ್ಬಲಿಕ್ಕೆ ಸಾಧನವಾಗುತ್ತದೆ. ಈ ವಚನಗಳು ಸಂಸ್ಕೃತ ಭಾಷೆಯಲ್ಲಿದ್ದರೆ ಅವುಗಳ ಗೌರವವು ಇಂದಿಗೆ ಜಗತ್ತಿನ ತುಂಬ ಹಬ್ಬುತ್ತಿದ್ದಿತು.

ಜಾಬಾಲೋಪನಿಷತ್ತಿನ ಪ್ರಾರಂಭದಲ್ಲಿ—

> "ಕಿಂ ತತ್ವಂ ಕೋ ಜೀವಃ ಕಃ ಪಶುಃ ಕಃ ಈಶಃ ಕೋ ಮೋಕ್ಷೋಪಾಯ ಇತಿ—ಪಶುಪತಿಃ ಅಹಂಕಾರಾವಿಷ್ಟಃ ಸಂಸಾರೀಜೀವಃ ಸ ಯೇವ ಪಶುಃ ಸರ್ವಜ್ಞಃ ಪಂಚಕೃತ್ಯ ಸಂಪನ್ನಃ ಸರ್ವೇಶ್ವರಃ ಈಶಃ ಪಶುಪತಿಃ ಕೇ ಪಶವಃ ಇತಿ—ಪುನಃ ಸ ತಮುವಾಚ ಜೀವಾಃ ಪಶವಃ ಉಕ್ತಾಃ ತತ್ಪತಿತ್ವಾತ್ ಪಶುಪತಿಃ ಸ ಪುನಃ ತಂ ಹೋವಾಚ ಕಥಂ ಜೀವಾಃ ಪಶವಃ ಇತಿ ಕಥಂ ತತ್ಪತಿರಿತಿ ಸಃ ತಂ ಉವಾಚ ಯಥಾ ತೃಣಾಶಿನೋ ವಿವೇಕಹೀನಾಃ ಪರಪ್ರೇಷ್ಯಾಃ ಕೃಷ್ಯಾದಿಕರ್ಮಸು ನಿಯುಕ್ತಾಃ ಸಕಲದುಃಖಸಹಾಃ ಸ್ವಸ್ವಾಮಿಬಧ್ಯಮಾನಾಃ ಗವಾದಯಃ ಪಶವಃ ಯಥಾತತ್ ಸ್ವಾಮಿನ ಇವ ಸರ್ವಜ್ಞಃ ಈಶಃ ಪಶುಪತಿಃ"

ಅಂದರೆ—ತತ್ವವೆಂದರೇನು? ಜೀವನು ಯಾರು? ಯಾವನು ಪಶು? ಈಶನು ಯಾರು? ಮೋಕ್ಷವನ್ನು ಹೊಂದಲಿಕ್ಕೆ ಮಾಡತಕ್ಕ ಉಪಾಯವೇನು? ಅಹಂಕಾರದಿಂದ ಕೂಡಿದ ಸಂಸಾರಿಯಾದ ಜೀವನೇ ಪಶು. ಸರ್ವಜ್ಞನು ಪಂಚಕೃತ್ಯಗಳಿಂದ ಕೂಡಿದವನೂ ಸರ್ವೇಶ್ವರನಾದ ಈಶ್ವರನೇ ಪಶುಪತಿಯು. ಪಶುಗಳೆಂದರೆ ಯಾರು ಎಂದು ಪುನಃ ಪ್ರಶ್ನೆಯನ್ನು ಮಾಡಲು ಜೀವರೇ ಪಶುಗಳೆಂದು ಹೇಳಲಾಗಿದೆ. ಅವುಗಳಿಗೆ ಒಡೆಯನಾದುದರಿಂದ ಪಶುಪತಿಯೆಂದು ಹೆಸರು. ಜೀವರುಗಳು ಹೇಗೆ ಪಶುಗಳಾಗುತ್ತಾರೆಂದು ಪುನಃ ಪ್ರಶ್ನಿಸಲು ಉತ್ತರವನ್ನು ಹೇಳುತ್ತಾನೆ. ಹುಲ್ಲುಗಳನ್ನು ತಿನ್ನತಕ್ಕ, ವಿವೇಕಶೂನ್ಯಗಳಾದ, ಅನ್ಯರಿಂದ ಕೃಷ್ಯಾದಿ ಕಾರ್ಯಗಳಲ್ಲಿ ಪ್ರೇರಿಸಲ್ಪಟ್ಟ ಎಲ್ಲ ದುಃಖಗಳನ್ನು ಸಹಿಸತಕ್ಕಂಥ, ತಮ್ಮ ಯಜಮಾನರಿಂದ ಕಟ್ಟಿಸಿಕೊಳ್ಳತಕ್ಕಂಥ ಎತ್ತುಗಳೇ ಮೊದಲಾದ ಪಶುಗಳಿಗೆ ಅವುಗಳ ಒಡೆಯನು ಹೇಗೆ ಸ್ವಾಮಿಯಾಗುತ್ತಾನೆಯೋ ಹಾಗೆಯೇ

ಸರ್ವಜ್ಞನಾದ ಪರಮಾತ್ಮನು ಸಂಸಾರದಲ್ಲಿ ತೊಳಲಿ ಬಳಲುವ ಜೀವರುಗಳಿಗೆ ಪಶುಪತಿಯಾಗುತ್ತಾನೆ.

೧೦೫

ಇದಕ್ಕೆ ಸರಿಯಾಗಿ ಸ್ವತಂತ್ರಸಿದ್ಧಲಿಂಗದೇವರು—

"ಮಹಾಕರ್ತನು ತನ್ನ ಶಕ್ತಿಯ ವಿನೋದಕ್ಕೆ ಜಗವ ನಿರ್ಮಿಸಿದ ನಲ್ಲದೆ ಅನಂತಲೋಕಗಳನ್ನೂ, ಚಂದ್ರ ಸೂರ್ಯ ನಕ್ಷತ್ರ ಮಿಂಚುಗಳನ್ನು ಕಾಲ ಕರ್ಮ ಪ್ರಳಯುಗಳನ್ನು ಹೆಣ್ಣು ಗಂಡು ಜಾತಿವಿಜಾತೀಯುಗಳಾದ ನರಸುರ ತಿರ್ಯಗ್ಜಾತಿ ಸ್ಥಲಭೋಗ ಆಯುಷ್ಯ ನಿದ್ರೆ ಮೊದಲಾದ ಸಮಸ್ತ ಪ್ರಪಂಚಗಳನ್ನು ಎಂಭತ್ತುನಾಲ್ಕು ಜೀವರಾಶಿಗಳನ್ನು ಹುಟ್ಟಿಸಿದ ತನ್ನ ವಿನೋದಕ್ಕೆ ಯಂತ್ರವಾಹಕನು ಮಾಡಿದ ಕಟ್ಟಳೆಯದಾರಿಗೂ ತಿಳಿಯ ಬಾರದು ನೋಡಾ ಸರ್ವ ಆತ್ಮರು ಮಲಪಾಶದಿಂದ ಬಂಧಿಸಿಕೊಂಬ ಪಶುಗಳಾದರು ತಾ ಪಶುಪತಿಯಾದ ನಮ್ಮ ನಿಜಗುರು ಸ್ವತಂತ್ರಸಿದ್ಧ ಲಿಂಗೇಶ್ವರನು." ಬಸವಣ್ಣನವರು—"ಆನು ಪಶು ನೀನು ಪಶುಪತಿ ಯಯ್ಯ" ಎಂದು ಹೇಳಿರುತ್ತಾರೆ.

**ಮುಂಡಕೋಪನಿಷತ್—ದ್ವಿತೀಯ ಮುಂಡಕ, ದ್ವಿತೀಯ ಖಂಡ, ಶ್ಲೋಕ ೨**

ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂಶರಂ ಹ್ಯುಪಾಸಾನಿ ನಿಶಿತಂ ಸಂಧಯೀತ ।
ಆಯಮ್ಯತದ್ಭಾವಗತೇನ ಚೇತಸಾ ಲಕ್ಷ್ಯಂತದೇವಾಕ್ಷರಂ ಸೌಮ್ಯವಿದ್ಧಿ ॥
ಪ್ರಣವೋಧನುಃ ಶರೋಹ್ಯಾತ್ಮಾ ಬ್ರಹ್ಮತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ಬೋದ್ಧವ್ಯಂ ಶರವತ್ ತನ್ಮಯೋ ಭವೇತ್ ॥ ೪ ॥

ಮಹಾ ಅಸ್ತ್ರವಾದ ಉಪನಿಷತ್ತೆಂಬ ಬಿಲ್ಲನ್ನು ಎತ್ತಿ ಉಪಾಸನೆಯಿಂದ ತೀಕ್ಷ್ಣವಾದ ಮನವೆಂಬ ಬಾಣವನ್ನು ಅದಕ್ಕೆ ಹೂಡು. ಚಿತ್ತವನ್ನು ಪರಮಾತ್ಮನಲ್ಲಿ ಏಕೀಕೃತ ವಾದುದನ್ನಾಗಿ ಮಾಡಿ ಆ ಅಕ್ಷರವನ್ನೇ ಲಕ್ಷ್ಯವಾಗಿಟ್ಟುಕೊಂಡು ನಿನ್ನ ಬಾಣವನ್ನು ಬಿಡು. ಮತ್ತು ತತ್ಸ್ವರೂಪವನ್ನು ಹೊಂದು. ಓಂಕಾರವು ಧನಸ್ಸು, ನಿನ್ನ ಆತ್ಮವೇ ಬಾಣ, ಬ್ರಹ್ಮವೇ ಲಕ್ಷ್ಯ; ತಪ್ಪದೇ ವೇಧಿಸಿ ಬಾಣದಂತೆ ತನ್ಮಯನಾಗು.

ಆಗಮಗಳಲ್ಲಿಯೂ ಈ ವಿಷಯವು ವಿಸ್ತಾರವಾಗಿಯೇ ಹೇಳಲ್ಪಟ್ಟಿರುತ್ತದೆ.

**ಪಾರಮೇಶ್ವರಾಗಮ—ಪುಟ ೧೯೧**

ಬ್ರಹ್ಮಾದ್ಯಾಃ ಸ್ಥಾವರಾಂತಾಶ್ಚ ದೇವದೇವಸ್ಯ ಶೂಲಿನಃ ।
ಪಶವಃ ಪರಿಕೀರ್ತ್ಯಂತೇ ಸಂಸಾರ ಪರಿವರ್ತಿನಃ ।
ತೇಷಾಂ ಪತಿತ್ವಾದ್ದೇವೇಶಿ ಹ್ಯಯಂ ಪಶುಪತಿಃ ಸ್ಮೃತಃ ॥
ಮಲಮಾಯಾದಿಭಿಃ ಪಾಶೈರ್ಬಧ್ನಾತಿ ಸ ಪಶೂನ್ಪತಿಃ ।
ಸಯೇವ ಮೋಚಕಸ್ತೇಷಾಂ ಭಕ್ತ್ಯಾ ಸಮ್ಯಗುಪಾಸಿತಃ ॥
ಚತುರ್ವಿಂಶತಿ ತತ್ವಾನಿ ಮಾಯಾ ಕರ್ಮ ಗುಣಾ ಅಪಿ ।
ವಿಷಯಾ ಇತಿ ಕಥ್ಯಂತೇ ಪಾಶಜೀವ ನಿಬಂಧನಾತ್ ॥
ಬ್ರಹ್ಮಾದಿ ಸ್ತಂಭಪರ್ಯಂತಾನ್ ಪಶೂನ್‌ಬಧ್ವಾ ಮಹೇಶ್ವರಿ ।
ಪಾಶೈರೇತೈಃ ಪತಿಶ್ವಾಹಂ ಕಾರ್ಯಂ ಕಾರಯತಿಸ್ವಕಮ್ ॥
ಇಂದ್ರಿಯಾಣ್ಯಪಿ ತಸ್ಯೈವ ಮದಾಜ್ಞಾ ವಶಗಾನಿತು ।
ಕಾರಯಂತಿ ನರಂ ಕಾರ್ಯಂ ವಶಂ ಚ ಸ್ವೇಚ್ಛಯಾಪಶೂನ್ ॥

> ತಸ್ಮಾತ್ಪಶುಪತಿಂ ಮಾಂತು ಜ್ಞಾತ್ವಾ ಲಿಂಗಾರ್ಚಕಃ ಶಿವೇ ।
> ಚ್ಛಿತ್ವಾಪಾಶಾನವಿದ್ಯೋತ್ಥಾನ್ ಪರಂ ನಿರ್ವಾಣಮೃಚ್ಛತಿ ॥
> ಭುಕ್ತಿಮುಕ್ತಿ ಪ್ರದೋದೇವಿ ಪಶುತ್ವವಿನಿವರ್ತಕಃ ।
> ಪೂಜನೀಯಃ ಸದಾಚಾಹಂ ಯಥಾ ಶ್ರದ್ಧಾ ಯಥಾ ವಿಧಿಃ ॥

ಪರಮಾತ್ಮನು ಹೇಗೆ ಪಶುಪತಿಯಾದ, ಬ್ರಹ್ಮಾದಿ ದೇವತೆಗಳು ಹೇಗೆ ಪಶುಗಳಾದರೆಂಬುವದನ್ನು ಈ ಶ್ಲೋಕಗಳು ಪ್ರತಿಪಾದಿಸುತ್ತವೆ. ಬ್ರಹ್ಮನೇ ಮೊದಲುಮಾಡಿ ಸ್ಥಾವರ ಪರ್ಯಂತರವಾಗಿ ಎಲ್ಲ ಪ್ರಾಣಿಗಳು ದೇವರದೇವನಾದ ಶಂಕರನ ಪಶುಗಳೆಂದು ಕರೆಯಲ್ಪಡುತ್ತಾರೆ. ಅವರುಗಳಿಗೆ ನಾನು ಸ್ವಾಮಿಯಾದ ಕಾರಣ ನಾನು ಪಶುಪತಿ ಎಂದು ಹೇಳಿಸಿಕೊಳ್ಳುತ್ತೇನೆ. ಪತಿಯಾದವನು ಆ ಪಶುಗಳನ್ನು ಮಲಮಾಯಾದಿ ಪಾಶಗಳಿಂದ ಕಟ್ಟುತ್ತಾನೆ. ಭಕ್ತಿಯಿಂದ ಚನ್ನಾಗಿ ಉಪಾಸನೆಯನ್ನು ಮಾಡಿದರೆ ಅವನೇ ಅವುಗಳ ಮೋಚಕನಾಗುತ್ತಾನೆ. ಇಪ್ಪತ್ತುನಾಲ್ಕು ತತ್ವಗಳು ಮಾಯಾ ಮತ್ತು ಕರ್ಮಗುಣಗಳೂ ವಿಷಯಗಳೆಂದು ಹೇಳಿಸಿಕೊಳ್ಳುತ್ತವೆ. ಎಲೌ ಪಾರ್ವತಿಯೆ ಬ್ರಹ್ಮಾದಿ ಸ್ತಂಭ ಪರ್ಯಂತರವಾಗಿ ಎಲ್ಲ ಪಶುಗಳನ್ನು ಪಾಶಜೀವ ನಿಬಂಧನೆಯಿಂದ ಬಂಧಿಸಿ ಪತಿಯಾದ ನಾನು ಕಾರ್ಯಗಳನ್ನು ಮಾಡಿಸಿಕೊಳ್ಳುತ್ತೇನೆ. ಬ್ರಹ್ಮಾದಿ ಪಶುಗಳ ಇಂದ್ರಿಯಗಳಾದರೂ ನನ್ನ ವಶವಾದವುಗಳು. ಸ್ವೇಚ್ಛೆಯಿಂದ ಆ ಪಶುಗಳನ್ನು ವಶಮಾಡಿಕೊಳ್ಳುತ್ತೇನೆ. ಆದ್ದರಿಂದ ಎಲೌ ಪಾರ್ವತಿಯೆ ಲಿಂಗಾರ್ಚಕನಾದವನು ನನ್ನನ್ನು ಪಶುಪತಿಯೆಂದು ತಿಳಿದುಕೊಳ್ಳಬೇಕು. ಅವಿದ್ಯೆಗಳಿಂದ ಉತ್ಪನ್ನಗಳಾದ ಪಾಶಗಳನ್ನು ಛೇದಿಸಿ ಶ್ರೇಷ್ಠವಾದ ಮೋಕ್ಷವನ್ನು ಹೊಂದುತ್ತಾನೆ. ಭುಕ್ತಿ ಮುಕ್ತಿಪ್ರದನಾದ ಮತ್ತು ಪಶುತ್ವವನ್ನು ಹೋಗಲಾಡಿಸತಕ್ಕ ನನ್ನನ್ನು ಶ್ರದ್ಧೆಯಿಂದ ಯಾವಾಗಲೂ ಅರ್ಚಿಸತಕ್ಕದ್ದು.

**ಸೂಕ್ಷ್ಮಾಗಮ—ಪಟಲ ೨೦, ಶ್ಲೋಕ ೨೧**

> ಬ್ರಹ್ಮಾದಿ ಸ್ತಂಭಪರ್ಯಂತಂ ಪಶವಃ ಪರಿಕೀರ್ತಿತಾಃ ।
> ಪತಿಃ ಶಿವ ಇತಿ ಪ್ರೋಕ್ತಃ ಪಾಶಃ ಕರ್ಮ ಮಲಾದಿಕಮ್ ।
> ಅತಃ ಪಶುರಸೌಸರ್ವಃ ಪಾಶಮುಕ್ತಃ ಪತಿರ್ಬಲಾತ್ ॥

ಬ್ರಹ್ಮಾದಿ ಸ್ತಂಭಪರ್ಯಂತವಾಗಿ ಪಶುಗಳೆಂದು ಹೇಳಿಸಿಕೊಳ್ಳುತ್ತವೆ. ಪತಿಯು ಶಿವನೆಂಬುದಾಗಿಯೂ ಹೇಳಲ್ಪಟ್ಟಿರುತ್ತದೆ. ಉಳಿದ ಪ್ರಾಣಿಗಳು ಪಾಶದಿಂದ ಬದ್ಧರಾಗಿರುತ್ತಾರೆ. ಇವನು ಪಾಶಮುಕ್ತನಾದ ಕಾರಣ ಎಲ್ಲ ಪ್ರಾಣಿಗಳಿಗೂ ಪತಿಯೆಂದು ಹೇಳಿಸಿಕೊಳ್ಳುತ್ತಾನೆ.

ಈ ಉಪನಿಷನ್ಮಂತ್ರಕ್ಕೆ ಸರಿಯಾಗಿ ಘನಲಿಂಗಿಯ ವಚನ— ವಿರಕ್ತನಾದವನು ಹೇಗಿರಬೇಕೆಂಬುವದನ್ನು ಹೇಳುತ್ತ—

೧೦೬

"ಬಿಲ್ಲುಕೋಲ ಹಿಡಿದು ಮನಬಂದ ಪರಿಯಲ್ಲಿ ಎಚ್ಚಾಡುವಾತ ಅರ್ಥಿಕಾರನಲ್ಲದೆ ಬಿಲ್ಲುಕಾರನಲ್ಲವಯ್ಯ, ಹೊನ್ನು ಹೆಣ್ಣು ಮಣ್ಣು ಬಿಟ್ಟು ಚನ್ನಾಗಿ ಮಂಡೆಯ ಬೋಳಿಸಿಕೊಂಡು ಹಾಡಿದ ವಚನಂಗಳನೆ ಹಾಡಿಕೊಂಡು ಮುಂದೆ ವಸ್ತುವ ಸಾಧಿಸಿಕೊಳ್ಳದೆ ಹಸಿದರೆ ತಿರಿದುಂಡು ಮಾತಿನ ಮಾಲೆಯನು ಕಲಿತಾತ ವಿರಕ್ತನೆಂಬ ನಾಮಕ್ಕರುಹನಲ್ಲದೆ ಸಂಧಾನಕ್ಕರುಹ

ನಲ್ಲ ಅದೇನು ಕಾರಣವೆಂದರೆ—ಮುಕ್ತಿಯೆಂಬ ಬಿಲ್ಲಹಿಡಿದು ಸಮ್ಯಜ್ಞಾನ ವೆಂಬ ಹೆದೆಯನೇರಿಸಿ, ಲಿಂಗನೈಷ್ಠೆಯೆಂಬ ಬಾಣವ ತೊಟ್ಟು ಆಕಾಶದ ಮೇಲಣ ಮುಪ್ಪುರದ ಮಧ್ಯದ ಮಾಣಿಕದ ಕಂಭ ಮುಳುಗಲೆಚ್ಚೆದು ಮಾಯಾಬಲೆಯ ಗೆಲಿದ ಶರಣನೀಗ ಲಿಂಗಸಂಧಾನಿಯಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ"

ಮೇಲಿನ ಉಪನಿಷತ್ತಿನ ವಾಕ್ಯಕ್ಕೂ ಈ ವಚನಕ್ಕೂ ಬಹಳ ಸಾಮ್ಯವಿರುತ್ತದೆ. ರೂಪಕಾಲಂಕಾರದಿಂದ ಉಪನಿಷತ್ಕಾರರು ಹೇಳಿದಂತೆ ವಚನಕಾರರಾದರೂ ರೂಪಕಾ ಲಂಕಾರದಿಂದಲೇ ಅತ್ಯುತ್ತಮ ರೀತಿಯಿಂದ ಹೇಳಿರುವದು ಶರಣರ ಅನುಭಾವದ ಹಿರಿಮೆ ಯನ್ನು ವ್ಯಕ್ತಗೊಳಿಸುತ್ತಲಿದೆ.

### ಕೇನೋಪನಿಷತ್—ಮೊದಲನೆಯ ಅಧ್ಯಾಯ

ಓಂ ಕೇನೇಷಿತಂ ಪತತಿಪ್ರೇಷಿತಂ ಮನಃ ।
ಕೇನ ಪ್ರಾಣಃ ಪ್ರಥಮಃ ಪ್ರೈತಿಯುಕ್ತಃ ।
ಕೇನೇಷಿತಾಂ ವಾಚಮಿಮಾಂ ವದಂತಿ ಚಕ್ಷುಃ ಶ್ರೋತ್ರಂಕ ಉದೇವೋಯುನಕ್ತಿ ।
ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋಯತ್ ।
ವಾಚೋಹವಾಚಂ ಸ ಉಪ್ರಾಣಸ್ಯ ಪ್ರಾಣಃ ।
ಚಕ್ಷುಷಶ್ಚಕ್ಷುರತಿಮುಚ್ಯ ಧೀರಾಃ ಪ್ರೇತ್ಯಾಸ್ಮಾಲ್ಲೋಕಾತ್ ಅಮೃತಾ ಭವಂತಿ ।
ಯತ್ಪ್ರಾಣೇನ ನ ಪ್ರಾಣಿತಿ ಯೇನ ಪ್ರಾಣಃ ಪ್ರಣೀಯತೇ ।
ತದೇವಬ್ರಹ್ಮತ್ವಂ ವಿದ್ಧಿನೇದಂ ಯದಿದಮುಪಾಸತೇ ॥

ಯಾರ ಇಚ್ಛೆಗೆ ಅನುಸರಿಸಿ ಯಾರ ಪ್ರೇರಣೆಯಿಂದ ಈ ಮನಸ್ಸು ತನ್ನ ವಿಷಯಗಳಲ್ಲಿ ತೊಡಗುತ್ತದೆಯೋ, ಪ್ರಾಣವು ಮೊಟ್ಟಮೊದಲು ಯಾರ ಅಪ್ಪಣೆಯಿಂದ ತನ್ನ ಕರ್ಮವನ್ನು ಆರಂಭಿಸುತ್ತದೆಯೋ, ಯಾರ ಇಚ್ಛೆಯಿಂದ ಜನರು ಈ ವಾಣಿಯಿಂದ ನುಡಿಯು ತ್ತಾರೆಯೋ ಮತ್ತು ಕಣ್ಣು ಕಿವಿಗಳಿಗೆ ಆಜ್ಞೆಯನ್ನು ಮಾಡುವ ದೇವರು ಯಾರು? ಇದಕ್ಕೆ ಉತ್ತರವೆಂದರೆ ಯಾವದು ಕಿವಿಗಳ ಕಿವಿಯೋ, ಮನಸ್ಸಿನ ಮನಸ್ಸೋ, ವಾಣಿಯ ವಾಣಿಯೋ ಅದು ಪ್ರಾಣದ ಪ್ರಾಣವು ಕಣ್ಣುಗಳ ಕಣ್ಣು. ಧೀರರು ಇವುಗಳಾಚೆಗೆ ಹೋಗುವರು, ಹಾಗು ಈ ಲೋಕದಿಂದ ತೆರಳಿ ಅಮೃತ ಪದವಿಯನ್ನು ಪಡೆಯುವರು. ಅಂದರೆ ಯಾವದು ಮನಸ್ಸು, ಪ್ರಾಣ, ಮಾತು ಇವುಗಳಿಗೆ ಪ್ರೇರಕವಾಗಿದ್ದು ಅವು ಗಳಿಂದ ಕೆಲಸಮಾಡಿಸಿಕೊಳ್ಳುತ್ತದೆಯೋ, ಕಣ್ಣು ಕಿವಿಗಳಿಗೆ ಯಾವುದು ಆಜ್ಞೆ ಮಾಡು ತ್ತದೆಯೋ ಅದೇ ಪರಬ್ರಹ್ಮ; ಅದೇ ಪ್ರಾಣಕ್ಕೆ ಪ್ರಾಣ; ಕಿವಿಗೆ ಕಿವಿ; ಕಣ್ಣಿಗೆ ಕಣ್ಣು. ಇದಕ್ಕೆ ಸರಿಯಾಗಿ ವಚನಗಳು—

೧೦೭

ಸ್ವತಂತ್ರಸಿದ್ಧಲಿಂಗೇದೇವರು—

"ತನುವಿಂಗೆ ತನುರೂಪಾಗಿ ತನುವಿಂಗಾಧಾರವಾದೆ ಮನಕ್ಕೆ ಮನ ರೂಪಾಗಿ ಮನಕ್ಕೆ ನೆನಹಿನ ಶಕ್ತಿಯನಿತ್ತು ಮನಕ್ಕಾಧಾರವಾದೆ ಪ್ರಾಣಕ್ಕೆ ಪ್ರಾಣರೂಪಾಗಿ ಪ್ರಾಣಕ್ಕಾಧಾರವಾದೆ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ"

೧೦೮

ಬಸವಣ್ಣನವರು—

"ಕಣ್ಣೊಳಗೆ ಕಣ್ಣಿದ್ದೂ ಕಾಣಲರಿಯರಯ್ಯಾ? ಕಿವಿಯೊಳಗೆ ಕಿವಿಯಿದ್ದೂ ಕೇಳಲರಿಯರಯ್ಯಾ? ಘ್ರಾಣದೊಳಗೆ ಘ್ರಾಣವಿದ್ದೂ ಘ್ರಾಣಿಸಲರಿಯರಯ್ಯಾ? ಜಿಹ್ವೆಯೊಳಗೆ ಜಿಹ್ವೆ ಇದ್ದೂ ರುಚಿಸಲೇಕರಿಯರಯ್ಯಾ? ತ್ವಕ್ಕಿನೊಳಗೆ ತ್ವಕ್ಕಿರ್ದು ಸ್ಪರ್ಶನವ ಮಾಡಲರಿಯರಯ್ಯಾ? ಪ್ರಾಣದೊಳಗೆ ಪ್ರಾಣವಿದ್ದೂ ನೆನೆಯಲೇಕರಿಯರಯ್ಯಾ? ಕಾಯದೊಳಗೆ ಕಾಯವಿದ್ದೂ ಬಿಡದು ಬೇರಾಗದು ಕೂಡಲಸಂಗಮದೇವಾ ನೀವಿಕ್ಕಿದ ಅಣಕದ ತೊಡಕಿನ ಭೇದವ ಭೇದಿಸಬಾರದಯ್ಯಾ ಕೂಡಲಸಂಗಮದೇವಾ"

ಈ ಎರಡೂ ವಚನಗಳು ಮೇಲಿನ ಉಪನಿಷತ್ತಿನ ಶ್ಲೋಕಕ್ಕೆ ಶಬ್ದಶಃ ಹೋಲುತ್ತವೆ.

**ಕಠೋಪನಿಷತ್–ದ್ವಿತೀಯ ಅಧ್ಯಾಯ, ಆರನೆಯ ವಲ್ಲಿ, ಶ್ಲೋಕ ೨**

**ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ ।**
**ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ ॥**

೧೦೯

ಸೊಡ್ಡಳಬಾಚರಸರು—

"ನೆಲದೀಪದೊಡೆಯನು ಜಲತಂಪಿನೊಡೆಯನು ಹಿರಿಯ ಪೆಂಪಿನೊಡೆಯನು ಅಗ್ನಿ ಉಷ್ಣದೊಡೆಯನು ಚಂದ್ರಕಾಂತದೊಡೆಯನು ಸೂರ್ಯಕಾಂತದೊಡೆಯನು ಸಕಲ ದೈವಂಗಳಿಗೆ ಆಯುಷ್ಯ ಭಾಷೆಯ ಕೊಟ್ಟು ಭೋಗದೊಡೆಯನು ಜಗತ್ಪ್ರಭು ಸೊಡ್ಡಳಾ"

**ಕಠೋಪನಿಷತ್–ಪ್ರಥಮಾಧ್ಯಾಯ, ದ್ವಿತೀಯ ವಲ್ಲಿ**

**ನಾವಿರತೋದುಶ್ಚರಿತಾ ನಾಶಾಂತೋ ನಾಸಮಾಹಿತಃ ।**
**ನಾಶಾಂತ ಮಾನಸೋ ವಾಪಿ ಪ್ರಜ್ಞಾನೇ ನೈನಮಾಪ್ನುಯಾತ್ ॥**

ಯಾವನು ದುಷ್ಕರ್ಮಂಗಳನು ಬಿಟ್ಟಿಲ್ಲವೊ, ಯಾವನು ಅಶಾಂತನೊ, ಯಾವನು ಏಕಾಗ್ರ ಚಿತ್ತವಿಲ್ಲದವನೊ, ಯಾವಾತನ ಮನಸ್ಸಿನಲ್ಲಿ ಶಾಂತಿಯು ನೆಲೆಗೊಂಡಿರುವದಿಲ್ಲವೊ ಅವನಿಗೆ ಆತ್ಮಜ್ಞಾನವಾದರೂ ಆತ್ಮ ಸಾಕ್ಷಾತ್ಕಾರವಾಗಲಾರದು.

೧೧೦

"ಬ್ರಹ್ಮದ ಮಾತನಾಡಿ ಕನ್ಯೆಯರ ಕಾಲದೆಸೆಯಲ್ಲಿ ಕುಳಿತಲ್ಲಿ ಬ್ರಹ್ಮದ ಮಾತು ಅಲ್ಲಿಲ್ಲೆಂದ ಅಂಬಿಗರ ಚೌಡಯ್ಯ"

೧೧೧

ಶ್ರೀ ಬಸವಣ್ಣನವರು—

"ಶರಣಸನ್ಮತವಪ್ಪ ನಿಜಗುಣಭರಿತನಪ್ಪಡೆ ಸತ್ವರಜತಮೋಕ್ರೋಧ ಬಿಡದನ್ನಕ್ಕ ಅನುಭಾವವೆಲ್ಲಿಯದೊ ಆತ್ಮಸ್ತುತಿ ಪರನಿಂದೆಯ ಬಿಡದನ್ನಕ್ಕ ಅರಿಷಡ್ವರ್ಗ ದಶವಾಯು ಬೆರಸಿರ್ಪ ಕಳಂಕವಪ್ಪ ತನುಬಿಡದನ್ನಕ್ಕ? ಸಂಸಾರವಮಾಣ್ದಲ್ಲದೆ ಶರಣಸಜ್ಜನಿಕೆ ಸಮಯಾಚಾರ ನಿಜವ್ರತವು ದುರಾಚಾರಿಗಳಿಗಳವಡದು ನಮ್ಮ ಕೂಡಲಸಂಗನ ಶರಣರಿಗಲ್ಲದೆ"

**ಕಠೋಪನಿಷತ್—ದ್ವಿತೀಯ ಅಧ್ಯಾಯ, ತೃತೀಯ ವಲ್ಲಿ, ಶ್ಲೋಕ ೧೪—೧೫**

ಯದಾಸರ್ವೇ ಪ್ರಮುಚ್ಯಂತೇ ಕಾಮಯೇಽಸ್ಯ ಹೃದಿಶ್ರಿತಾಃ ।
ಅಥಮರ್ತ್ಯೋಽಮೃತೋಭವತ್ಯತ್ರ ಬ್ರಹ್ಮಸಮಶ್ನುತೇ ॥
ಯದಾಸರ್ವೇ ಪ್ರಭಿದ್ಯಂತೇ ಹೃದಯಸ್ಯೇಹಗ್ರಂಥಯಃ ।
ಅಥಮರ್ತ್ಯೋಽಮೃತೋಭವತ್ಯೇತಾವದನುಶಾಸನಮ್ ।
ಹೃದಾಮನೀಷೀ ಮನಸಾಭಿಕ್ಲೃಪ್ತೋಯ ಏತದ್ವಿದುರಮೃತಾಸ್ತೇ ಭವಂತಿ ॥

ಅಂದರೆ ಮನುಷ್ಯನ ಅಂತಃಕರಣದಲ್ಲಿರುವ ಕಾಮನೆಗಳು ಅಳಿದುಹೋದವೆಂದರೆ ಅವನು ಅಮೃತನಾಗುವನು. ಇಲ್ಲಿಯೇ ಬ್ರಹ್ಮಪದವಿಯನ್ನು ಪಡೆಯುವನು. ಅಂತಃಕರಣದಲ್ಲಿ ಮನೆಮಾಡಿರುವ ಎಲ್ಲ ಮಿಥ್ಯ ಬಂಧನಗಳು ನಷ್ಟವಾದವೆಂದರೆ ಮರ್ತ್ಯನಾದ ಮನುಷ್ಯನು ಅಮೃತನಾಗುವನು.

೧೧೨

ಇದಕ್ಕೆ ಸರಿಯಾಗಿ ಆದಯ್ಯನವರು—

"ಮನಸ್ಸು ಬಹಿರ್ಮುಖವಾದರೆ ಮಾಯಾಪ್ರಪಂಚ ಮನಸ್ಸು ಅಂತರ್ಮುಖವಾದರೆ ಅವಿರಳಜ್ಞಾನಿ ಮನ ಮಹದಲ್ಲಿ ನಿಂದರೆ ಮುಕ್ತ ಮನೋಲಯವಾದರೆ ಸೌರಾಷ್ಟ್ರ ಸೋಮೇಶ್ವರಲಿಂಗದಲ್ಲಿ ಅಭೇದ್ಯ"

೧೧೩

ಪ್ರಭುದೇವರು—

"ಧ್ಯಾನ ಆಧ್ಯಾತ್ಮಿಕದಲ್ಲಿ ಕಂಡೆನೆಂಬುದು ಜೀವವಲ್ಲದೆ ಪರಮನಲ್ಲ ಜಪತಪನೇಮನಿತ್ಯಗಳಿಂದ ಕಂಡೆನೆಂಬುದು ಪ್ರಕೃತಿಯಲ್ಲದೆ ಚಿತ್ತವಲ್ಲ ಭಾವದಿಂದ ಪ್ರಮಾಣಿಸುವುದೇ ಏಕರೂಪ ಗುಹೇಶ್ವರಲಿಂಗವು ತಾನೆ"

ಈ ಲೋಕದಲ್ಲಿ ಇದ್ದಾಗಲೇ ಮುಕ್ತಿಯನ್ನು ಗಳಿಸಬೇಕಲ್ಲದೆ ಪರಲೋಕದಲ್ಲಿ ಮುಕ್ತಿಯನ್ನು ಗಳಿಸುತ್ತೇನೆಂದರೆ ಅಲ್ಲೇನೂ ದೊರೆಯಲಾರದು ಎಂದು ಶರಣರ ವಾದವಿರುವದು. ಉಪನಿಷತ್ತುಗಳೂ ಕೂಡ ಇದನ್ನೇ ಬೋಧಿಸುತ್ತವೆ.

**ಕೇನೋಪನಿಷತ್—ಖಂಡ ೨, ಶ್ಲೋಕ ೪**

ಇಹಚೇದವೇದೀದಥ ಸತ್ಯಮಸ್ತಿ ನಚೇದಿಹಾವೇದೀನ್ಮಹತೀವಿನಷ್ಟಿಃ ॥

ಅಂದರೆ ಇದನ್ನು ಈ ಲೋಕದಲ್ಲಿಯೇ ಅರಿತುಕೊಂಡರೆ ಅದು ಸತ್ಯಜ್ಞಾನವು. ಈ ಜ್ಞಾನವನ್ನು ಇಲ್ಲಿಯೇ ಅರಿತುಕೊಳ್ಳದಿದ್ದರೆ ಮಹಾನಷ್ಟಕ್ಕೆ ಗುರಿಯಾಗುವಿರಿ.

**ಕಠೋಪನಿಷತ್—ಆರನೇ ವಲ್ಲಿ, ಶ್ಲೋಕ ೪**

ಇಹಚೇದಶಕದ್ಬೋದ್ಧುಂ ಪ್ರಾಕ್‌ಶರೀರಸ್ಯ ವಿಸ್ರಸಃ ತತಃ ।
ಸರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ ॥

ಅಂದರೆ ಈ ಶರೀರವು ಪತನವಾಗುವದಕ್ಕಿಂತಲೂ ಮೊದಲು ಜ್ಞಾನಮಾಡಿಕೊಳ್ಳುವದು ಮೇಲು. ಇಲ್ಲದಿದ್ದರೆ ಸೃಷ್ಟಿಯಲ್ಲಿ ಬೇರೆಬೇರೆ ಲೋಕಗಳಲ್ಲಿ ಜನ್ಮವನ್ನು ಹೊಂದ ಬೇಕಾಗುತ್ತದೆ.

೧೧೪

ಪ್ರಭುದೇವರು—

"ಸತ್ತ ಬಳಿಕ ಮುಕ್ತಿಯ ಹಡೆದಿಹೆನೆಂದು ಪೂಜಿಸಹೋದರೆ ಆ ದೇವರೇನ ಕೊಡುವರೊ ಸಾಯದೆ ನೋಯದೆ ಸ್ವತಂತ್ರವಾಗಿ ಸಂದುಭೇದವಿಲ್ಲದಿರ್ಪ ಗುಹೇಶ್ವರಾ ನಿಮ್ಮ ಶರಣ"

೧೧೫

"ತತ್ವವೆಂಬುದ ನೀನೆತ್ತ ಬಲ್ಲೆಯೋ? ಸತ್ತು ಮುಂದೆ ನೀನೇನ ಕಾಂಬೆಯೋ ಗುಹೇಶ್ವರನ ಕೂಡಿದ ಕೂಟ ಇಂದು ಸುಖ ಮುಂದೆ ಲೇಸು"

೧೧೬

ಶ್ರೀ ಬಸವಣ್ಣನವರು—

"ಹೊತ್ತಾರೆ ಎದ್ದು ಅಗ್ಘವಣಿ ಪತ್ರೆಯ ತಂದು ಹೊತ್ತುಹೋಗದ ಮುನ್ನ ಪೂಜಿಸು ಲಿಂಗವ ಹೊತ್ತುಹೋದ ಬಳಿಕ ನಿನ್ನನಾರುಬಲ್ಲರು? ಹೊತ್ತುಹೋಗದ ಮುನ್ನ ಮೃತ್ಯುವೊಯ್ಯದ ಮುನ್ನ ತೊತ್ತುಗೆಲಸವ ಮಾಡು ಕೂಡಲಸಂಗನ" ಮತ್ತು "ಅಂದು ಇಂದು ಮತ್ತೊಂದೆನಬೇಡ ದಿನ ಒಂದೇ ಶಿವ ಶರಣೆಂಬುವಂಗೆ ದಿನ ಒಂದೇ ನಮ್ಮ ಕೂಡಲಸಂಗನ ಮಾಣದೆ ನೆನೆವಂಗೆ"

## ಓಂಕಾರದ ಮಹಾತ್ಮ್ಯೆಯು

ನಾರಾಯಣೋಪನಿಷತ್ತಿನಲ್ಲಿ—

"ಓಮಿತ್ಯೇಕಾಕ್ಷರಂ ಬ್ರಹ್ಮ" ಓಂ ಎಂಬುದು ಒಂದೇ ಅಕ್ಷರದ ಬ್ರಹ್ಮ.

ತೈತ್ತರೀಯೋಪನಿಷತ್ ಎಂಟನೆಯ ಅನುವಾಕದಲ್ಲಿ—

"ಓಮಿತಿ ಬ್ರಹ್ಮ, ಓಮಿತಿದಗ್ಂ ಸರ್ವಂ, ಓಮಿತ್ಯೇದನುಕೃತಿ ಹಸ್ಮವಾ ಅಪ್ಯೋಂ ಶ್ರಾವಯೇತ್ಯಾ ಶ್ರಾವಯಂತಿ, ಓಮಿತಿ ಸಾಮಾನಿ ಗಾಯಂತಿ, ಓಮಿತಿ ಶಾಸ್ತ್ರಾಣಿ ಶಂಸಂತಿ, ಓಮಿತ್ಯಧ್ವರ್ಯುಃ ಪ್ರತಿನರಂ ಪ್ರತಿಗೃಹ್ಣಾತಿ, ಓಮಿತಿ ಬ್ರಹ್ಮಾ ಪ್ರಸೌತಿ, ಓಮಿತ್ಯಗ್ನಿಹೋತ್ರ ಮನು ಜಾನಾತಿ, ಓಮಿತಿ ಬ್ರಾಹ್ಮಣಃ ಪ್ರವಕ್ಷ್ಯನ್ ಆಹ ಬ್ರಹ್ಮೋ ಪ್ರಾಪ್ನ ವಾನೀತಿ, ಬ್ರಹ್ಮೈವೋ ಪ್ರಾಪ್ನೋತಿ"

ಅಂದರೆ ಓಂ ಎಂಬುದು ಬ್ರಹ್ಮ. ಓಂ ಎಂಬುವದಿದೆಲ್ಲವು ಓಂ ಎಂದು ಅನುಕರಣ ಮಾಡುತ್ತಾರೆ. ಅಥವಾ ಓಂ ಕೇಳಿರೆಂದು ಹೇಳುತ್ತಾರೆ. ಓಂ ಎಂದು ಸಾಮಗಳನ್ನು ಹಾಡುತ್ತಾರೆ. ಓಂ, ಓಂ, ಶೋಮ್ ಎಂದು ಶಸ್ತ್ರವೆಂಬ ಮಂತ್ರಗಳನ್ನು ಹೇಳುತ್ತಾರೆ. ಓಂ ಎಂದು ಯಜ್ಞದ ಋತ್ವಿಜನು ಪ್ರಶ್ನೆಗಳಿಗೆ ಉತ್ತರವನ್ನು ಕೊಡುತ್ತಾನೆ. ಓಂ ಎಂದು ಋತ್ವಿಜನು ಅನುಜ್ಞೆಗಳನ್ನೀಯುತ್ತಾನೆ. ಓಂ ಎಂದು ಆಹುತಿಯನ್ನು ಕೊಡಲಿಕ್ಕೆ ಅನುಮತಿಸುತ್ತಾನೆ. ಓಂ ಎನ್ನುತ್ತ ಬ್ರಾಹ್ಮಣರು ಬ್ರಹ್ಮನನ್ನು ಸಂಪಾದಿಸು

ವವರಾಗಿರೆಂದು ಹೇಳುತ್ತಾನೆ. ಬ್ರಹ್ಮನನ್ನು ಅವನು ಸಂಪಾದಿಸುತ್ತಾನೆ. ಓಂಕಾರದ ಮಹಾತ್ಮೆಯು ವೀರಶೈವ ಧರ್ಮಗ್ರಂಥಗಳಲ್ಲಿ ವಿವಿಧರೀತಿಯಿಂದ ಪ್ರಶಂಸಿಸಲ್ಪಟ್ಟಿರುತ್ತದೆ.

"ಓಂಕಾರವೆಂಬ ಪ್ರಣಮದಲ್ಲಿ ಅಕಾರ ಉಕಾರ ಮಕಾರ ಈ ಮೂರು ಬೀಜಾಕ್ಷರ ಅಕಾರವೇ ನಾದ ಉಕಾರವೇ ಬಿಂದು ಮಕಾರವೇ ಕಳೆ, ಮತ್ತಂ ಅಕಾರವೇ ರುದ್ರ, ಉಕಾರವೇ ಈಶ್ವರ, ಮಕಾರವೇ ಸದಾಶಿವ, ಇಂತೀ ಅಕಾರ ಉಕಾರ ಮಕಾರಕ್ಕೆ ನಾದಬಿಂದು ಕಳೆಯೇ ಆಧಾರ, ಆ ನಾದಬಿಂದು ಕಳೆಗೆ ಪ್ರಕೃತಿಯೇ ಆಧಾರ ಆ ಪ್ರಕೃತಿಗೆ ಪ್ರಾಣವೇ ಆಧಾರ ಆ ಪ್ರಾಣಕ್ಕೆ ಲಿಂಗವೇ ಆಧಾರ, ಅ ಎಂದಡೆ ಅನಾಹತ ಉ ಎಂದಡೆ ನಾದ ಉಳಿಯಿತ್ತು ಮ ಎಂದಲ್ಲಿ ಬಿಂದು ಕೂಡಲು ಶಿವಶಕ್ತಿಯಾಗುತ್ತ ಇಂತಹ ಓಂಕಾರವಾಯಿತ್ತು"

"ಅಕಾರವೆಂಬ ಪ್ರಣಮದಲ್ಲಿ ಅಗ್ನಿಶ್ಚ ರುಗ್ವೇದಸ್ತಥಾ ಅಕಾರೇ ಚ ಲಯಂ ಯಾತಿ ಪ್ರಥಮೇ ಪ್ರಣವಾಂಶಿಕೇ, ಉಕಾರವೆಂಬ ಪ್ರಣಮದಲ್ಲಿ ಅಂತರೀಕ್ಷೆ ಯಜುರ್ವೇದೋ ಭವೇತ್ ಓಂ ಈಶ್ವರೋ ದೇವತಾಃ ಉಕಾರೇ ಚ ಲಯಂ ಯಾತಿ ಪ್ರಥಮೇ ಪ್ರಣವಾಂಶಿಕೇ, ಮಕಾರವೆಂಬ ಪ್ರಣಮದಲ್ಲಿ ವಿದ್ಯೇಷು ಸಾಮವೇದೋ ಭವೇತ್ ಓಂ ಸದಾಶಿವೋ ದೇವತಾಃ ಮಕಾರೇ ಚ ಲಯಂ ಯಾತಿ ತೃತೀಯೇ ಪ್ರಣವಾಂಶಿಕೇ, ಅಕಾರೇ ಚ ಉಕಾರೇ ಚ ಮಕಾರೇ ಚ ತೃತೀಯಕೇ, ಇದಮೇಕಂ ಸಮುತ್ಪನ್ನಂ, ಓಮಿತಿ ಜ್ಯೋತಿರೂಪಕಂ ಓಂಕಾರ ಪ್ರಭವಾವೇದಂ, ಓಂಕಾರಾತೇಭವಾಸ್ವರಂ ಓಂಕಾರಾತ್ಪ್ರಭವಂ ಸರ್ವಂ, ತ್ರೈಲೋಕ್ಯಂ ಸಚರಾಚರಂ ಸರ್ವವ್ಯಾಪಕ ಮೋಂಕಾರಂ ಮಂತ್ರೋಽನ್ಯತ್ರ ನ ಶೋಭಯೇತ್, ಪ್ರಣವೋಹಿ ಪರಬ್ರಹ್ಮ ಪ್ರಣವಂ ಪರಮಂ ಪದಂ ಓಂಕಾರಂ ನಾದರೂಪಂ ಚ ಓಂಕಾರಂ ಬಿಂದು ರೂಪಕಂ ಓಂಕಾರಂ ವಾಪಿ ಸರ್ವತ್ರ, ಓಂಕಾರಂ ಗೋಪ್ಯಮಾನಸಂ, ಎಂದಿದು ಪ್ರಣಮದುತ್ಪತ್ತಿ"

ಉಪನಿಷತ್ತುಗಳಲ್ಲಿ ಹೇಳಿದಂತೆ ಓಂಕಾರವೇ ಪರಬ್ರಹ್ಮ ಸ್ವರೂಪವಾಗಿರುವದು ಎಂಬುವದು ಮೇಲೆ ಬರೆದ ವಚನದಿಂದ ಅತ್ಯಂತ ಸ್ಫುಟವಾಗುತ್ತದೆ. ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಓಂಕಾರವೇ ಕಾರಣವಾಗಿರುವದು. ಅದು ನಾದಬಿಂದು ಕಲಾ ಸ್ವರೂಪವಾದುದು. ತ್ರೈಲೋಕವೆಲ್ಲ ಓಂಕಾರದಿಂದಲೇ ಉತ್ಪತ್ತಿಯಾದುದೆಂದೂ ಶರಣರ ಸಿದ್ಧಾಂತವಾಗಿರುವದು. ಮತ್ತು ಶಿವಾಗಮಗಳಲ್ಲಿಯೂ ಓಂಕಾರದ ವಿಷಯ ದಲ್ಲಿ "ಓಮಿತ್ಯೇಕಾಕ್ಷರಂ ಬ್ರಹ್ಮ ವದಂತಿ ಶಿವಯೋಗಿನಃ" ಹೀಗೆಯೇ ಅನೇಕ ತರಹದಿಂದ ಓಂಕಾರದ ವರ್ಣನೆಯು ಉಪನಿಷತ್ತುಗಳಲ್ಲಿ ಬಂದಿರುವಂತೆ ವಚನಕಾರರ ವಚನಗಳಲ್ಲಿಯೂ ಬರುತ್ತದೆ.

"ಅಕಾರವೆಂಬ ಪ್ರಣಮವು ಉಕಾರವೆಂಬ ಪ್ರಣಮವು ಮಕಾರ ವೆಂಬ ಪ್ರಣಮವು ಈ ತ್ರಿವಿಧ ಪ್ರಣಮಂಗಳು ಒಂದೇಯಾಗಿ ಸ್ವಯಂ ಜ್ಯೋತಿಸ್ವರೂಪವಾದ ಓಂ ಓಂ ಎಂಬ ಊರ್ಧ್ವ ಸ್ವರೂಪವನುಳ್ಳ ಷಟ್ ಕೃತಿಗಳು ಸಂಪೂರ್ಣವಾದ ಸಾಕಲ್ಯ ಪ್ರಣಮವು. ಈ ಪ್ರಣವದತ್ತಣಿಂದೇ

ನಾಲ್ಕು ವೇದಂಗಳು, ನಾಲ್ಕು ಉಪವೇದಂಗಳು, ಮತ್ತಂತುಮಲ್ಲದೆ ನೂರೊಂದು ವೇದ ಹದಿನಾರು ಸಾವಿರ ಶಾಸ್ತ್ರ ಮುಂತಾದ ಸಕಲ ನಿಗಮಂಗಳು ಉತ್ಪತ್ತಿಯಾದವು. ಸಪ್ತಸ್ವರಂಗಳು ನಾಲ್ಕು ವೇದಂಗಳನೋದುವ ಸ್ವರಂಗಳು ೮೪ ಲಕ್ಷ ಪ್ರಕಾರವಾದ ಸ್ವರಭೇದಂಗಳು ಉತ್ಪತ್ತಿಯಾದವು. ಸಚರಾಚರ ಮೂರು ಭವನಂಗಳು ಸಪ್ತಭುವನಗಳುತ್ಪತ್ತಿಯಾದವು. ಅಕಾರ ಪ್ರಣಮದಿಂದ ಸ್ವರಾಕ್ಷರ ಹದಿನಾರು, ಉಕಾರ ಪ್ರಣಮದಿಂದ ವಿಪಲಾಕ್ಷರ ಇಪ್ಪತ್ತುನಾಲ್ಕು, ಮಕಾರ ಪ್ರಣಮದಲ್ಲಿ ಹುಟ್ಟಿದ ವ್ಯಾಪಕಾಕ್ಷರ ಹನ್ನೊಂದು ಇಂತೀ ಐವತ್ತೆರಡಕ್ಷರಗಳಿಂದಾದ ಸಕಲ ವೇದಶಾಸ್ತ್ರ ಪುರಾಣಶಾಸ್ತ್ರಗಳು ಅನೇಕ ಬ್ರಹ್ಮಾಂಡಗಳ ನಂತರ ಮೂರ್ತಿಗಳು ಷಡಧ್ವ ಷಡ್ಗುಣ ವಸ್ತುತತ್ವಪಂಚಕವು. ಸೃಷ್ಟಿಯಾಗುತ್ತಿರ್ದ ಕಾರಣ ಈ ಮೂರು ಕಾರಣ ಸ್ವರೂಪವಾದ ಪ್ರಣಮಂಗಳು ಉತ್ಪತ್ತಿಯಾದವು"

೧೧೭

ಶ್ರೀ ಬಸವಣ್ಣನವರು—

"ಎನ್ನ ಮನದಲ್ಲಿ ಮತ್ತೊಂದನರಿಯೆನಯ್ಯಾ ಓಂ ನಮಃ ಶಿವಾಯ ಓಂ ನಮಶ್ಶಿವಾಯ ಎನುತಿರ್ದೆನಯ್ಯ ಎನಗಿದೇ ಮಂತ್ರ ಎನಗಿದೇ ತಂತ್ರ ಎನಗಿದೇ ಜಪ ಕೂಡಲಸಂಗಮದೇವ ನೀನೇ ಬಲ್ಲೆ ಎಲೆ ಲಿಂಗವೆ"

೧೧೮

"ಓಂ ನಮಶ್ಶಿವಾಯ ಎಂಬ ಮಂತ್ರವ ಮೀರಲಮ್ಮದೆ ನಿಂದುವು ವೇದ ಓಂ ನಮಃ ಶಿವಾಯ ಎಂಬ ಮಂತ್ರವ ಮೀರಲಮ್ಮದೆ ನಿಂದುವು ಶಾಸ್ತ್ರ ಓಂ ನಮಃ ಶಿವಾಯ ಎಂಬ ಮಂತ್ರವ ಮೀರಲಮ್ಮದೆ ನಿಂದುವು ತರ್ಕ ಭಯಂಕರ ಭ್ರಮೆಗೊಂಡಿತ್ತು ಮಂತ್ರ ತಂತ್ರ ಶಿವನಂತುವನರಿಯದೆ ಚಿಂತಿಸುತ್ತಿದ್ದಿತು ಲೋಕ ಕೂಡಲಸಂಗಮದೇವ ಶ್ವಪಚ ಮೆರೆದರೆ ಜಾತಿ ಭೇದವ ಮಾಡಲಮ್ಮವು"

ಈ ಮೊದಲು ಓಂಕಾರದ ಮಹತ್ವದ ಬಗ್ಗೆ ಎರಡು ಉಪನಿಷತ್ತುಗಳ ಉದಾಹರಣೆಯನ್ನು ಕೊಡಲಾಗಿದೆಯಷ್ಟೆ? ಇನ್ನೂ ಕೆಲವು ಮಂತ್ರಗಳನ್ನು ಇಲ್ಲಿ ನೋಡೋಣ— ಉಪನಿಷತ್ತುಗಳಲ್ಲಿ ಕೆಲವು ಕಡೆಗೆ "ಓಂ ತತ್‌ಸತ್" ಎಂಬುವ ವಾಕ್ಯವು ಬಂದಿರುತ್ತದೆ. ಓಂ ಎಂದರೆ ಬ್ರಹ್ಮ, ತತ್ ಎಂದರೆ ಬ್ರಹ್ಮ, ಸತ್ ಅಂದರೆ ಬ್ರಹ್ಮ ಹೀಗೆ ಅರ್ಥ ಮಾಡಿರುತ್ತಾರೆ. ಅರ್ಥಾತ್ ಓಂಕಾರವು ಸರ್ವ ಶಾಸ್ತ್ರಕಾರರ ದೃಷ್ಟಿಯಿಂದಲೂ ಮಹತ್ವದ್ದಾಗಿರುತ್ತದೆ.

**ಕಠೋಪನಿಷತ್—ಪ್ರಥಮ ಅಧ್ಯಾಯ, ದ್ವಿತೀಯ ವಲ್ಲಿ, ಶ್ಲೋಕ ೧೫**

ಸರ್ವೇ ವೇದಾಃ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇಪದಗ್ಂ ಸಂಗ್ರಹೇಣ ಬ್ರವೀಮ್ಯೋ ಮಿತ್ಯೇತತ್ ॥

ಸಕಲ ವೇದಗಳು ಯಾವ ಪರಮಪದವನ್ನು ಪ್ರತಿಪಾದಿಸುವವೊ, ಯಾವುದನ್ನು ತಮ್ಮ ಧ್ಯೇಯವೆಂದು ಎಲ್ಲ ತಪಸ್ಸುಗಳು ಇಟ್ಟುಕೊಂಡಿರುವವೊ, ಯಾವ ಪದದ ಅಪೇಕ್ಷೆ

ಯಿಂದ ಜನರು ಬ್ರಹ್ಮಚರ್ಯವ್ರತವನ್ನು ಪಾಲಿಸುವರೊ ಆ ಪರಮಗತಿಯ ವಿಷಯಕ್ಕೆ ನಾನು ಸಂಕ್ಷೇಪದಿಂದ ಹೇಳುವೆನು; ಓಂ ಎಂಬುದೇ ಅದು. ಮತ್ತು—

ಏತದೇವಾಕ್ಷರಂ ಬ್ರಹ್ಮ ಏತದೇವಾಕ್ಷರಂ ಪರಂ ।
ಏತದೇವಾಕ್ಷರಂ ಜ್ಞಾತ್ವಾ ಯೋಯದಿಚ್ಛತಿ ತಸ್ಯತತ್ ॥ ೧೬ ॥

ಇದಕ್ಕೆ ಬ್ರಹ್ಮವೆಂದು ಹೆಸರು. ಶ್ರೇಷ್ಠವಾದ ಅಕ್ಷರವಾದರೂ ಇದೇ ಆಗಿರುತ್ತದೆ. ಈ ಅಕ್ಷರದ ಜ್ಞಾನವನ್ನು ಪಡೆದವನು ತನ್ನ ಮನಸ್ಸಿನ ಇಚ್ಛಿತ ಪದವಿಯನ್ನು ಹೊಂದುವನು.

ಇಲ್ಲಿಯವರೆಗೆ ಉಪನಿಷತ್ತುಗಳಿಗೂ ವಚನಗಳಿಗೂ ಅನೇಕ ವಿಷಯಗಳಲ್ಲಿ ಸಾಮ್ಯವನ್ನು ತೋರಿಸಿದ್ದಾಯಿತು. ಹೀಗೆಯೇ ಇನ್ನೂ ಅನೇಕ ವಿಷಯಗಳಲ್ಲಿ ಇದರಂತೆ ತೋರಿಸಲು ಶಕ್ಯವಿದೆ. ಮುಖ್ಯವಾಗಿ ಉಪನಿಷತ್ತುಗಳಲ್ಲಿ ಪ್ರಧಾನವಾಗಿ ಹೇಳಿದ ವಿಷಯಗಳಿಗೆಲ್ಲ ವಚನಗಳ ಸಾಮ್ಯವನ್ನು ತೋರಿಸಿದ್ದೇವೆ. ಕೆಲವು ವಿಷಯ ಗಳಲ್ಲಿ ಉಪನಿಷತ್ತುಗಳಿಗಿಂತಲೂ ಶರಣರು ಮುಂದೆ ಹೋಗಿರುತ್ತಾರೆ. ವೈಶಿಷ್ಟ್ಯವೂ ಅಲ್ಲಲ್ಲಿ ಕಂಡುಬರುತ್ತದೆ. ಉಪನಿಷತ್ಕಾರರು ಹೇಳುವ ಬ್ರಹ್ಮಕ್ಕೆ ಬಸವಣ್ಣನವರೇ ಮೊದಲಾದ ಶರಣರು ಲಿಂಗವೆಂದು ಕರೆಯುತ್ತಾರೆ. ಶ್ರೀಮಾನ್ ರಾವ್‌ಬಹದ್ದೂರ್ ನರಸಿಂಹಾಚಾರ್ಯರು ವಚನಗಳನ್ನು ಕನ್ನಡ ಉಪನಿಷತ್ತುಗಳೆಂದು ಹೇಳಬಹುದೆಂದು ಬರೆದಿರುವ ಮಾತು ಸತ್ಯವಾಗಿರುತ್ತದೆ. ಅದನ್ನೇ ನಾವಿಲ್ಲಿ ಸಿದ್ಧಮಾಡಿ ತೋರಿಸಿದ್ದಾಗಿ ರುತ್ತದೆ. ಇದೊಂದು ಕನ್ನಡಿಗರಿಗೆ ಹೆಮ್ಮೆಯ ವಿಷಯವಾಗಿರುತ್ತದೆ. ನಮ್ಮ ಭಾಷೆಯಲ್ಲಿ ಇಂತಹ ವಾಙ್ಮಯವಿರುವದು ನಿಜವಾಗಿಯೂ ಅಭಿಮಾನಪಡತಕ್ಕ ಸಂಗತಿ ಯಾಗಿರುತ್ತದೆ. ಇಂತಹ ವಾಙ್ಮಯಕ್ಕೆ ಆಚಾರ್ಯ ಪುರುಷರಾದ ಬಸವಣ್ಣನವರು ಎಂತಹ ದೂರದರ್ಶಿಗಳೆಂಬುವದು ಸ್ಪಷ್ಟವಾಗಿ ತಿಳಿಯುತ್ತದೆ.

ಉಪನಿಷತ್ತುಗಳಿಗೆ ಸರಿಯಾಗಿ ವಚನಗಳನ್ನು ಬರೆದು ಬಸವಾದಿ ಶರಣರು ಕನ್ನಡ ಸಾಹಿತ್ಯದಲ್ಲಿ ಅದ್ಭುತತಮವಾದ ಕ್ರಾಂತಿಯನ್ನು ಮಾಡಿದರು. ಆದ್ದರಿಂದಲೇ ಕನ್ನಡ ನಾಡಿನ ಪಂಡಿತರೆಲ್ಲ ಬಸವಣ್ಣನವರಿಗೆ ಕನ್ನಡ ಭಾಷಾ ಜನಕನೆಂದು ಸಂಬೋಧಿಸುತ್ತಾರೆ. ಉಪನಿಷತ್ತುಗಳೆಂದರೆ ಈ ಮೊದಲು ಬರೆದಂತೆ ತತ್ವಜ್ಞಾನದಲ್ಲಿ ಜಗತ್ತಿನೊಳಗೆ ಶ್ರೇಷ್ಠ ಗಳಾಗಿರುತ್ತವೆ. ಅಂತಹ ಉಪನಿಷತ್ತುಗಳಿಗಿಂತಲೂ ಗೂಢವಾದ ವಿಷಯಗಳನ್ನು ತಿಳಿಗನ್ನಡದಲ್ಲಿ ಬರೆದಿರುವದು ಶ್ರೇಷ್ಠವಾದ ಮಾರ್ಗವಾಗಿರುತ್ತದೆ.

## ನಾಲ್ಕನೆಯ ಪ್ರಕರಣ

## ಭಗವದ್ಗೀತೆಯೂ ಬಸವಣ್ಣನವರೂ

ಈ ಮೊದಲು ಉಪನಿಷತ್ತುಗಳಿಗೂ, ಬಸವಾದಿ ಪ್ರಮಥರ ವಚನಗಳಿಗೂ ತುಲನೆಯನ್ನು ಮಾಡಲಾಗಿದೆ. ಈಗ ಭಗವದ್ಗೀತೆಗೂ ಬಸವಗೀತೆಗೂ ಸಾದೃಶ್ಯವನ್ನು ಈ ಪ್ರಕರಣದಲ್ಲಿ ನೋಡಬೇಕಾಗಿರುತ್ತದೆ. ಹಿಂದೂ ಧಾರ್ಮಿಕ ಗ್ರಂಥಗಳಲ್ಲಿ ವೇದೋಪನಿಷತ್ತುಗಳನ್ನು ಬಿಟ್ಟರೆ ಸಂಸ್ಕೃತ ವಾಙ್ಮಯದಲ್ಲಿ ಭಗವದ್ಗೀತೆಯಷ್ಟು ಸುಪ್ರಸಿದ್ಧವಾದ ಗ್ರಂಥವು ಮತ್ತೊಂದಿಲ್ಲವೆಂದು ಧಾರಾಳವಾಗಿ ಹೇಳಬಹುದು. ಹಿಂದುಸ್ಥಾನದಲ್ಲಿ ಪ್ರಸಿದ್ಧಗಳಾದ ಮತದ ಪಂಡಿತರೆಲ್ಲ ಭಗವದ್ಗೀತೆಗೆ ತಮ್ಮತಮ್ಮ ಮತಸಿದ್ಧಾಂತಗಳ ಪರ ಅರ್ಥವನ್ನು ಬರೆದಿರುತ್ತಾರೆ. ಭಗವದ್ಗೀತೆಯು ಪ್ರಪಂಚದ ಎಲ್ಲ ಪ್ರಸಿದ್ಧ ಭಾಷೆಗಳಲ್ಲಿಯೂ ಭಾಷಾಂತರವಾಗಿ ಅಚ್ಚಾಗಿದೆ. ಈ ಗ್ರಂಥದ ಗೌರವವು ಜಗತ್ತಿನಲ್ಲೆಲ್ಲ ಹಬ್ಬಿರುವದೆಂದು ಹೇಳಿದರೆ ತಪ್ಪಾಗಲಾರದು. ಹಿಂದೂಮತದಲ್ಲಿ ಭಗವದ್ಗೀತೆ, ಉಪನಿಷತ್ತುಗಳು, ವ್ಯಾಸ ಸೂತ್ರಗಳು, ಈ ಮೂರಕ್ಕೆ ಪ್ರಸ್ಥಾನತ್ರಯವೆಂದು ಹೆಸರು. ಗೀತೆಯು ಎಲ್ಲಾ ಕಡೆಗೂ ಬಳಕೆಯಲ್ಲಿ ಬಂದಿರುವ ಗ್ರಂಥವಾಗಿರುತ್ತದೆ. ನಮ್ಮ ದೇಶದ ಪ್ರಾಂತಿಕ ಭಾಷೆಗಳಲ್ಲಿ ಭಗವದ್ಗೀತೆಗೆ ಅನೇಕ ಜನ ಪಂಡಿತರು ಬೇರೆ ಬೇರೆ ಟೀಕೆಗಳನ್ನು ಬರೆದಿರುತ್ತಾರೆ. ಇವುಗಳಲ್ಲಿ ಲೋಕಮಾನ್ಯ ಬಾಲಗಂಗಾಧರ ತಿಲಕರವರು ಬರೆದ ಗೀತಾರಹಸ್ಯವೂ ಸುಪ್ರಸಿದ್ಧವಾಗಿರುತ್ತದೆ. ಇವರಂತೆಯೇ ಅನೇಕರು ಗೀತೆಗೆ ವ್ಯಾಖ್ಯಾನಗಳನ್ನು ಬರೆದಿರುತ್ತಾರೆ. ಈ ಗ್ರಂಥವು ಜನಪ್ರಿಯವಾಗಲಿಕ್ಕೆ ಅದರಲ್ಲಡಗಿದ ತತ್ವಗಳೇ ಕಾರಣಗಳಾಗಿವೆ. ಅವುಗಳು ತ್ರಿಕಾಲಾಬಾಧಿತವಾಗಿ ಇರುವದರಿಂದ ಸರ್ವಜನಗಳ ಲಕ್ಷ್ಯವನ್ನು ಈ ಗ್ರಂಥವು ಎಳೆದಿರುವದೆಂದು ಹೇಳಬಹುದು. ಗೀತೆಯನ್ನು ಪುನಃ ಪುನಃ ಓದಿದರೂ ಮತ್ತೆ ಓದಬೇಕೆಂದು ಮನಸ್ಸಾಗುತ್ತದೆ. ಇದೇ ರಮಣೀಯತ್ವದ ಲಕ್ಷಣವಾಗಿರುತ್ತದೆ. ವ್ಯಾಸ ಮಹರ್ಷಿಗಳ ಬರೆಹವು ಅಷ್ಟು ಸುಂದರವಾದುದು; ಅದರಲ್ಲಿಯೂ ಭಗವದ್ಗೀತೆಯಲ್ಲಿ ಅವರ ಪಾಂಡಿತ್ಯ ಪ್ರದರ್ಶನವು ಜನಮನಾಕರ್ಷಿಸಿದೆ. ಗೀತೆಯ ಕಾಲವು ಮಹಾಭಾರತದ ಕಾಲವೆಂದು ಹೇಳುವದು ಸರಿಯಾದುದಾಗಿರುತ್ತದೆ. ಮಹಾಭಾರತದ ಕಾಲವು ಇಂತಹ ಸಂವತ್ಸರವೆಂದು ಹೇಳದೆ ಇದ್ದರೂ ಕ್ರಿಸ್ತನಿಗಿಂತ ಒಂದೆರಡು ಶತಮಾನ ಮೊದಲಿನದೆಂದು ಅನೇಕ ವಿದ್ವಾಂಸರ ಅಭಿಪ್ರಾಯವಾಗಿರುತ್ತದೆ.

ಶ್ರೀ ಬುದ್ಧದೇವನ ತರುವಾಯ ಒಂದೆರಡು ಶತಮಾನಗಳಾದನಂತರ ಗೀತೆಯು ಹುಟ್ಟಿರಬಹುದೆಂದು ಪಂಡಿತರ ತರ್ಕವಿರುತ್ತದೆ. ಗೀತೆಯು ಶ್ರೀ ಕೃಷ್ಣನಿಂದ ಅರ್ಜುನನಿಗೆ ಬೋಧಿಸಲ್ಪಟ್ಟಿರುವದರಿಂದಲೂ ಅದಕ್ಕೆ ಹೆಚ್ಚು ಬೆಲೆ ಬಂದಿರುವ ಕಾರಣಗಳಲ್ಲಿ ಒಂದಾಗಿರುತ್ತದೆ. ಗೀತೆಯಲ್ಲಿ ೧೮ ಅಧ್ಯಾಯಗಳಿದ್ದು ಶ್ಲೋಕಗಳ ಸಂಖ್ಯೆ ೭೦೦ ಮಾತ್ರ ಇರುತ್ತದೆ. ಶ್ಲೋಕಗಳ ಸಂಖ್ಯೆಯು ಇಷ್ಟೇ ಇದ್ದರೂ ಅವುಗಳ ಮೇಲೆ ಬರೆದ ಟೀಕಾತ್ಮಕ ಗ್ರಂಥಗಳು ಸಾವಿರಾರು ಪುಟಗಳಿಂದ ಕೂಡಿರುತ್ತವೆ. ಭಗವದ್ಗೀತೆಯಂತೆ ಶಿವಗೀತೆ, ರಾಮಗೀತೆ, ಗೋವಿಂದಗೀತೆ ಮೊದಲಾದ ಅನೇಕ ಗೀತೆಗಳಿದ್ದರೂ ಭಗವದ್ಗೀತೆಯಷ್ಟು ಪ್ರಸಿದ್ಧಿಯನ್ನು ಅವುಗಳು ಪಡೆದಿರುವದಿಲ್ಲ. ಕೌರವ ಪಾಂಡವ

ರಿಬ್ಬರೂ ಯುದ್ಧಕ್ಕೆ ಸನ್ನದ್ಧರಾಗಿ ತಮ್ಮತಮ್ಮ ಸೇನೆಗಳನ್ನು ಸಿದ್ಧಪಡಿಸಿಕೊಂಡು ನಿಂತಿರುವಾಗ ಅರ್ಜುನನು ರಥದಲ್ಲಿ ಕುಳಿತುಕೊಂಡು ಕೌರವಸೇನೆಯನ್ನು ನೋಡಿ ದಾಕ್ಷಿಣ ಗುರುಗಳನ್ನೂ, ಬಂಧುಗಳನ್ನೂ, ಹಿರಿಯರನ್ನೂ ಕೊಂದು ನಾವು ರಾಜ್ಯವಾಳ ಬೇಕೆ? ಎಂಬುವ ಕರ್ತವ್ಯಚ್ಯುತಿಯು ಅವನನ್ನು ವ್ಯಾಪಿಸಿ ಭ್ರಾಂತನನ್ನಾಗಿ ಮಾಡಿತು. ಆವಾಗ ಶ್ರೀ ಕೃಷ್ಣನು ಗೀತೆಯನ್ನು ಬೋಧಿಸಿ ನಿವೃತ್ತಿ ಮಾರ್ಗವನ್ನು ಹಿಡಿದಿದ್ದ ಅರ್ಜುನನನ್ನು ಪ್ರವೃತ್ತಿಮಾರ್ಗಕ್ಕೆ ಹಚ್ಚಿದುದೇ ಗೀತೆಯ ಸಾರಾಂಶವಾಗಿರುತ್ತದೆ. ಯುದ್ಧಕಾಲದಲ್ಲಿ ಅದರಲ್ಲಿಯೂ ಶತ್ರುಸೈನ್ಯವು ಯುದ್ಧಕ್ಕೆ ಸಿದ್ಧವಾಗಿ ಸಿಂಹನಾದವನ್ನು ಮಾಡುವ ಕಾಲಕ್ಕೆ ಇಂತಹ ಗೀತೆಯನ್ನು ಉಪದೇಶಮಾಡಲು ಸಾಧ್ಯವೇ? ಎಂಬುವ ಪ್ರಶ್ನೆಯು ಹೊರಡುತ್ತದೆ. ಅದು ಅಷ್ಟು ಮಹತ್ವವಾಗಿರುವದಿಲ್ಲ. ಮುಖ್ಯವಾಗಿ ಯುದ್ಧಮಾಡಲು ಭಯಚಕಿತನಾದ ಅರ್ಜುನನನ್ನು ಧೀರೋದಾತ್ತನನ್ನಾಗಿ ಮಾಡಿ ಹುರಿದುಂಬಿಸಿ ಯುದ್ಧಮಾಡಲು ಉದ್ಯುಕ್ತನನ್ನಾಗಿ ಮಾಡಿದುದು ಅತ್ಯಂತ ಮಹತ್ವದ ಕಾರ್ಯವಾಗಿರುತ್ತದೆ. ಹಿಂದೂ ಧರ್ಮದಲ್ಲಿ ಅನೇಕ ಶ್ರೇಷ್ಠತರಗತಿಯ ಧಾರ್ಮಿಕ ಗ್ರಂಥಗಳಿದ್ದರೂ ನಿವೃತ್ತಿ ಮಾರ್ಗವನ್ನು ಬೋಧಿಸತಕ್ಕವುಗಳೇ ಹೆಚ್ಚಾಗಿರುತ್ತವೆ. ಭಗವದ್ಗೀತೆಯು ಮುಖ್ಯವಾಗಿ ಪ್ರವೃತ್ತಿ ಮಾರ್ಗವನ್ನು ಹೇಳತಕ್ಕ ಗ್ರಂಥವಾಗಿರುವದ ರಿಂದ ಅದಕ್ಕೆ ಹೆಚ್ಚಿನ ಪ್ರಾಶಸ್ತ್ಯವಿರುತ್ತದೆ. ಈ ಗೀತೆಯು ಸಾಮಾನ್ಯವಾಗಿ ಯಾವು ದಾದರೊಂದು ಜಾತಿಯನ್ನು ಎತ್ತಿ ಹಿಡಿಯತಕ್ಕ ಗ್ರಂಥವಾಗಿರುವದಿಲ್ಲ. ಅದು ತತ್ವಗಳನ್ನು ಹೇಳುತ್ತಲಿದೆ. ಅನೇಕ ಮತಾಚಾರ್ಯರುಗಳು ಇದಕ್ಕೆ ತಮ್ಮತಮ್ಮ ಧರ್ಮಪರವಾದ ಅರ್ಥವನ್ನು ಬರೆದಿರುತ್ತಾರೆ. ಇದರಲ್ಲಿ ಭಕ್ತಿ, ಕರ್ಮ, ಜ್ಞಾನ, ಧ್ಯಾನ ಮೊದಲಾದ ಮಾರ್ಗಗಳಿರುತ್ತವೆ. ಆತ್ಮ ಪರಮಾತ್ಮ ಮೊದಲಾದ ತತ್ವಗಳ ವಿವೇಚನೆಯೂ ಚನ್ನಾಗಿ ಪ್ರತಿಪಾದಿತವಾಗಿರುತ್ತದೆ. ಇಂತಹ ಗೀತೆಯಲ್ಲಿ ಹೇಳಿದ ತತ್ವಗಳಿಗೂ ಬಸವಗೀತೆಗೂ ಸಾಮ್ಯ, ವೈಷಮ್ಯ, ವೈಶಿಷ್ಟ್ಯ ಮೊದಲಾದವುಗಳನ್ನು ತುಲನೆಮಾಡಿ ನೋಡಬೇಕಾಗಿರುತ್ತದೆ. ಸಂಸ್ಕೃತದಲ್ಲಿದ್ದರೆ ಬೆಲೆ ಹೆಚ್ಚು, ಕನ್ನಡದಲ್ಲಿದ್ದರೆ ಬೆಲೆ ಕಡಿಮೆಯೆಂದು ಯಾರೂ ಅಧೈರ್ಯಪಡುವ ಕಾರಣವಿಲ್ಲ. ಜೊಳ್ಳು ವಿಷಯ ಗಳು ಸಂಸ್ಕೃತದಲ್ಲಿದ್ದರೂ ಅಷ್ಟೆ? ಉಳಿದ ಭಾಷೆಗಳಲ್ಲಿದ್ದರೂ ಅಷ್ಟೆ? ಸಂಸ್ಕೃತದಲ್ಲಿ ಬರೆದುದೆಲ್ಲ ಉತ್ಕೃಷ್ಟವಾದುದೆಂದು ಹೇಳಲು ಬರುವದಿಲ್ಲ. ಪ್ರಾಂತಿಕ ಭಾಷೆಯಲ್ಲಿ ಶ್ರೇಷ್ಠ ವಿಷಯಗಳು ಉಕ್ತವಾಗಿದ್ದರೆ ಅವು ಕನಿಷ್ಠವಾದವುಗಳೆಂದು ತಿಳಿಯಲೂ ಬರುವದಿಲ್ಲ. ಕೇವಲ ಭಾಷಾಭೇದದಿಂದ ಅವುಗಳಲ್ಲಿ ತರತಮಭಾವಗಳನ್ನು ಕಲ್ಪಿಸಲು ಬರುವದಿಲ್ಲ. ಮತ್ತು ಅದು ಒಪ್ಪತಕ್ಕ ಮಾತಾಗಿರುವದಿಲ್ಲ. ಸಂಸ್ಕೃತ ಭಾಷೆಯಲ್ಲಿದ್ದರೆ ಜಗತ್ತಿನ ತುಂಬ ಇರತಕ್ಕ ಪಂಡಿತರಿಗೆ ಓದಲು ಯೋಗ್ಯವಾಗುವದು. ಕನ್ನಡದ ಮಾತು ಹಾಗಿರದೆ ನಮ್ಮ ಪ್ರಾಂತದ ಮಟ್ಟಿಗೆ ಮಾತ್ರ ಅದರ ಪರಿಮಿತಿಯಾಗಿ ಆ ಪ್ರಾಂತದ ಜನಸಾಮಾನ್ಯರಿಗೂ ಕೂಡ ಉಪಯೋಗ ಬೀಳುವದು. ಬಸವಣ್ಣನವರ ವಚನಗಳಿಗೆ ಕೆಲವು ಕವಿಗಳು ಮಾತ್ರ ಅಲ್ಲಲ್ಲಿ ಬಸವನ ಗೀತೆಗಳೆಂದು ಪ್ರಯೋಗಮಾಡಿದ್ದುದು ಕಂಡುಬರುತ್ತದೆ.

ಶ್ರೀ ಕೃಷ್ಣನು ಅರ್ಜುನನಿಗೆ ಬೋಧಿಸಿದುದು ಯುದ್ಧ ಸಮಯದಲ್ಲಿ. ಆದರೆ ಬಸವಣ್ಣನವರು ಯಾವದಾದರೊಂದು ಸಮಯದಲ್ಲಿ ಈ ವಚನಗಳನ್ನು ಬರೆದಿರುವದಿಲ್ಲ

ತಮಗೆ ಸ್ಫೂರ್ತಿ ಬಂದಾಗ್ಗೆ ಆಯಾಯ ವಚನಗಳನ್ನು ಹೇಳಿರುತ್ತಾರೆ. ಅವುಗಳೆಲ್ಲ ಷಟ್‌ಸ್ಥಲ ಮತ್ತು ಅಷ್ಟಾವರಣಗಳನ್ನು ಹೊಂದಿಕೊಂಡಿದ್ದರೂ ಕ್ರಿಯಾಮಾರ್ಗ, ಧ್ಯಾನ ಮಾರ್ಗ, ಭಕ್ತಿ ಮತ್ತು ಜ್ಞಾನಮಾರ್ಗಗಳು ಇವರ ವಚನಗಳಲ್ಲಿ ಅಡಗಿದ್ದು—ದೇವರು ಹೇಗಿದ್ದಾನೆ? ಎಲ್ಲಿರುತ್ತಾನೆ? ಹೇಗೆ ದೊರೆಯುತ್ತಾನೆ? ಮನುಷ್ಯನು ಸದ್ಗತಿಯನ್ನು ಹೊಂದಬೇಕಾದರೆ ಅವನ ಆಚರಣೆಗಳು ಹೇಗಿರಬೇಕು? ನಡೆನುಡಿಗಳು ಹೇಗಿದ್ದರೆ ಆ ಮನುಷ್ಯನು ಇಹಲೋಕದಲ್ಲಿ ಸುಖವನ್ನೂ, ಪರದಲ್ಲಿ ಸದ್ಗತಿಯನ್ನೂ ಹೊಂದುವನು? ಇವೇ ಮೊದಲಾದ ವಿಷಯಗಳು ಅವರ ಸಾವಿರಾರು ವಚನಗಳಲ್ಲಿ ಅಡಕವಾಗಿರುತ್ತವೆ. ಗೀತೆಯಲ್ಲಿಯೂ ೧೮ ಅಧ್ಯಾಯಗಳಿದ್ದರೂ ಬೇರೆಬೇರೆ ವಿಷಯಗಳು ಅದರಲ್ಲಿ ಪ್ರತಿಪಾದಿತಗಳಾಗಿವೆ. ಮೊದಲು ತತ್ವಜ್ಞಾನದ ವಿಷಯವನ್ನು ತೆಗೆದುಕೊಂಡು ಬಸವಣ್ಣನವರ ವಚನಗಳಿಗೂ, ಭಗವದ್ಗೀತೆಗೂ ಸಾಮ್ಯವನ್ನು ನೋಡೋಣ. ಭಗವದ್ಗೀತೆಯ ೧೩ನೆಯ ಅಧ್ಯಾಯದಲ್ಲಿ ತತ್ವಜ್ಞಾನವನ್ನು ಹೇಳಲಾಗಿದೆ.

ಆರಂಭದಲ್ಲಿ—ಭೋಗಕ್ಕೆ ಸ್ಥಾನವಾದ ಶರೀರವು ಕ್ಷೇತ್ರವೆಂತಲೂ, ಅದನ್ನು ತಿಳಿದವನಿಗೆ ಕ್ಷೇತ್ರಜ್ಞನೆಂತಲೂ, ಲೌಕಿಕ ಸಂಸಾರಿಗಳ ಉದಾಹರಣೆಯನ್ನು ಹೇಳಿ, ಮುಂದೆ ಪಾರಮಾರ್ಥಿಕ ಸಂಸಾರದ ಸ್ವರೂಪವನ್ನು ವರ್ಣಿಸಿರುತ್ತಾನೆ. "ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ" ಎಲ್ಲ ಕ್ಷೇತ್ರಗಳಲ್ಲಿಯೂ ಇರತಕ್ಕವನು ನಾನೇ ಎಂದು ತಿಳಿ. ಯಾಕಂದರೆ "ತತ್ವಮಸಿ" ಇತ್ಯಾದಿ ಶೃತಿಗಳಿಂದ ಹೇಳಲ್ಪಟ್ಟ ಚಿದಂಶವು ನನ್ನ ಸ್ವರೂಪವನ್ನೇ ಹೇಳುವದರಿಂದ ಕ್ಷೇತ್ರಕ್ಷೇತ್ರಜ್ಞರ ಜ್ಞಾನವೆಂದರೆ ನನ್ನ ಸ್ವರೂಪವನ್ನು ತಿಳಿಯುವದೇ ಆಗಿರುತ್ತದೆ. ಮೋಕ್ಷಕ್ಕೆ ಅದೇ ಕಾರಣವಾಗುವದರಿಂದ ನನ್ನ ಜ್ಞಾನವೆಂದು ತಿಳಿಯತಕ್ಕದ್ದು.

ಕ್ಷೇತ್ರಜ್ಞನ ಜ್ಞಾನಸಾಧನೆಗಳನ್ನು ಈಗ ಹೇಳುತ್ತಾನೆ. ಅದಕ್ಕಾಗಿ ಗೀತೆಯಲ್ಲಿ ೫ ಶ್ಲೋಕಗಳು ಮೀಸಲಾಗಿರುತ್ತವೆ.

**ಅಧ್ಯಾಯ ೧೩, ಶ್ಲೋಕ ೭ ರಿಂದ**

**ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥**
**ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।**
**ಜನ್ಮಮೃತ್ಯು ಜರಾವ್ಯಾಧಿ ದುಃಖದೋಷಾನು ದರ್ಶನಮ್ ॥**
**ಅಸಕ್ತಿರನಭಿಷ್ವಂಗಃ ಪುತ್ರದಾರ ಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥**
**ಮಯಿಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನ ಸಂಸದಿ ॥**
**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ವಜ್ಞಾನಾರ್ಥ ದರ್ಶನಮ್ ।**
**ಏತಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋನ್ಯಥಾ ॥**

ಈ ಐದು ಶ್ಲೋಕಗಳಿಂದ ೨೦ ಗುಣಗಳು ಹೊರಡುತ್ತವೆ. ತನ್ನನ್ನು ತಾನೇ ಹೊಗಳಿಕೊಳ್ಳದಿರುವಿಕೆ, ಡಂಭಾಚಾರ ಮಾಡದೆ ಇರುವದು, ಅಹಿಂಸಾ, ಸಹನಶೀಲತಾ, ಸರಳತನ, ಸದ್ಗುರುಸೇವಾ, ಬಾಹ್ಯಾಭ್ಯಂತರಗಳ ಶೌಚ, ಬಾಹ್ಯಶೌಚಗಳೆಂದರೆ ಸ್ನಾನಾದಿಗಳನ್ನು ಮಾಡುವದು, ಅಂತರ ಶೌಚವೆಂದರೆ ರಾಗಾದಿಮಲಗಳ ಕ್ಷಾಲನೆ

ಮಾಡುವದು, ಸ್ಥೈರ್ಯ, ಶರೀರಸಂಯಮ, ವಿಷಯಾದಿಗಳಲ್ಲಿ ವೈರಾಗ್ಯ, ಅಹಂಕಾರ ಇಲ್ಲದಿರುವಿಕೆ, ಜನ್ಮ, ಮೃತ್ಯು, ಜರಾ, ವ್ಯಾಧಿ, ದುಃಖ, ದೋಷ ಇವುಗಳ ಬಗ್ಗೆ ಆಲೋಚನೆ ಮಾಡದಿರುವಿಕೆ, ಪುತ್ರದಾರಾದಿಗಳಲ್ಲಿ ಪ್ರೀತಿತ್ಯಾಗ, ಪುತ್ರದಾರಾದಿಗಳಿಗೆ ಸುಖಬಂದರೆ ನಾನೇ ಸುಖಿ ಎನ್ನುವದು, ಅವರಿಗೆ ದುಃಖ ಬಂದರೆ ನಾನೇ ದುಃಖಿ ಯೆಂದು ಹೇಳದೇ ಇರುವದು, ಇಷ್ಟಾನಿಷ್ಟ ವಸ್ತುಗಳಲ್ಲಿ ಸಮಾನವಾದ ಚಿತ್ತ, ಪರಮೇಶ್ವರನಲ್ಲಿ ಅನನ್ಯವಾದ ಭಕ್ತಿಯಿಂದಿರುವಿಕೆ, ಜನರಹಿತವಾದ ಸ್ಥಾನದಲ್ಲಿ ವಾಸಮಾಡುವದು, ಪ್ರಾಕೃತ ಜನಗಳ ಸಭೆಯಲ್ಲಿ ಪ್ರೇಮ ಇಲ್ಲದೆ ಇರುವದು, ಆಧ್ಯಾತ್ಮ ಜ್ಞಾನದಲ್ಲಿ ನಿತ್ಯತ್ವವು, ಮೋಕ್ಷದ ಆಲೋಚನೆ ಈ ಇಪ್ಪತ್ತು ಗುಣಗಳೇ ಕ್ಷೇತ್ರಜ್ಞನಿಗೆ ಸಾಧಕಗಳಾಗಿರುತ್ತವೆ. ಇಲ್ಲಿ ಈ ಗುಣಗಳಿಗೆ ಶ್ರೀ ಬಸವಣ್ಣನವರ ವಚನಗಳನ್ನು ನೋಡೋಣ.

೧. ತನ್ನನ್ನು ತಾನೇ ಹೊಗಳಿಕೊಳ್ಳದಿರುವಿಕೆ—ಇದಕ್ಕೆ ಸರಿಯಾಗಿ ಬಸವಣ್ಣ ನವರು ತಮ್ಮದೊಂದು ವಚನದಲ್ಲಿ—

"ತನ್ನ ಬಣ್ಣಿಸಬೇಡ, ಮತ್ತೊಂದು ವಚನದಲ್ಲಿ ಆತ್ಮಸ್ತುತಿ ಪರ ನಿಂದೆಯ ಕೇಳಿಸದಿರಯ್ಯ" ಎಂತಲೂ ಹೇಳಿರುವರು.

೧೧೯

೨. ಡಂಭಾಚಾರ ಮಾಡಬೇಡ—

"ಎನ್ನ ನಡೆಯೊಂದು ಪರಿ ಎನ್ನ ನುಡಿಯೊಂದುಪರಿ ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯ, ನುಡಿಗೆ ತಕ್ಕ ನಡೆ ಕಂಡರೆ ಕೂಡಲಸಂಗಮದೇವ ನೊಳಗಿರ್ಪನಯ್ಯಾ"

೧೨೦

"ಎರದೆಲೆಯಂತೆ ಒಳಗೊಂದು ಹೊರಗೊಂದಾದರೆ ಮೆಚ್ಚುವನೇ ಶಿವನು? ಬಾರದ ಭವಂಗಳಲ್ಲಿ ಬರಿಸುವನಲ್ಲದೆ ಮೆಚ್ಚುವನೇ? ಅಘೋರ ನರಕವನುಣಿಸುವನಲ್ಲದೆ ಮೆಚ್ಚುವನೇ? ಉಡುಹಿನ ನಾಲಿಗೆಯಂತೆ ಎರಡಾದರೆ ಕೂಡಲಸಂಗಯ್ಯ ಮೆಚ್ಚುವನೇ?"

೧೨೧

೩. ಅಹಿಂಸಾ—

"ದಯವಿಲ್ಲದ ಧರ್ಮವದಾವುದಯ್ಯ? ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ ದಯವೇ ಧರ್ಮದ ಮೂಲವಯ್ಯ ಕೂಡಲಸಂಗಮ ದೇವ ನಂತಲ್ಲದೊಲ್ಲನಯ್ಯ" ಮತ್ತೊಂದು ವಚನದಲ್ಲಿ "ಕೊಲ್ಲೆನಯ್ಯ ಪ್ರಾಣಿಗಳ" ಎಂದು ಅಂದಿರುವರು.

೧೨೨

೪. ಸಹನಶೀಲತಾ—

"ಹೊಯಿದವರೆನ್ನ ಹೊರೆದವರೆಂಬೆನು. ಬೈದವರೆನ್ನ ಬಂಧು ಗಳೆಂಬೆನು. ನಿಂದಿಸಿದವರೆನ್ನ ತಾಯಿತಂದೆಗಳೆಂಬೆ. ಅಳಿಗೊಂಡವರು ಆಳ್ದರೆಂಬೆ. ಜರಿದವರೆನ್ನ ಜನ್ಮಬಂಧುಗಳೆಂಬೆ. ಕೊಂಡಾಡಿದವರೆನ್ನ

ಹೊನ್ನ ಶೂಲದಲ್ಲಿಕ್ಕಿದವರು ಕೂಡಲಸಂಗಮದೇವಾ" ಮತ್ತು "ಇರಿಸಿಕೊಂಡು ಭಕ್ತರಾದರೆಮ್ಮವರು ತರಿಸಿಕೊಂಡು ಭಕ್ತರಾದರೆಮ್ಮವರು ಕೊರೆಯಿಸಿಕೊಂಡು ಭಕ್ತರಾದರೆಮ್ಮವರು ಜರೆಯಿಸಿಕೊಂಡು ಭಕ್ತರಾದರೆಮ್ಮವರು ಕೂಡಲಸಂಗನ ಶರಣರಿಗೆ ಮುಳಿಸತಾಳಿ ಎನ್ನಭಕ್ತಿ ಅರೆಯಾಯಿತ್ತು"

ಸಹನಶೀಲತೆಯ ಬಗ್ಗೆ ಶ್ರೀ ಸಿದ್ಧರಾಮದೇವರು ಒಂದು ಸುಂದರವಾದ ವಚನವನ್ನು ಹೇಳಿರುತ್ತಾರೆ.

೧೨೩

"ಆರೇನೆಂದರೂ ಓರಂತಿಪ್ಪುದೇ ಸಮತೆ ಆರು ಜರಿದರೂ ಅವರೆನ್ನ ಮನದ ಕಾಳಿಕೆಯ ಕಳಿದರೆಂಬುದೇ ಸಮತೆ ಆರು ಸ್ತೋತ್ರವ ಮಾಡಿದರೆನ್ನ ಜನ್ಮದ ಹಗೆಗಳೆಂಬುದೇ ಸಮತೆ ಇಂತಿದು ಗುರುಕಾರುಣ್ಯ ಮನವಚನ ಕಾಯದಲ್ಲಿ ಅಹಿತವಿಲ್ಲದೆ ಕಪಿಲಸಿದ್ಧಮಲ್ಲಿಕಾರ್ಜುನಯ್ಯ ನಿನ್ನವರ ನೀ ಎಂಬುದೇ ಸಮತೆ"

೧೨೪

೫. ಸರಳತನ—

"ಹುತ್ತವ ಬಡಿದರೆ ಹಾವು ಸಾಯಬಲ್ಲುದೇ ಅಯ್ಯ? ಅಘೋರ ತಪವ ಮಾಡಿದರೇನು? ಅಂತರಂಗ ಆತ್ಮಶುದ್ಧಿಯಿಲ್ಲವವರನೆಂತು ನಂಬುವನಯ್ಯ ಕೂಡಲಸಂಗಮದೇವ"

೧೨೫

೬. ಸದ್ಗುರು ಸೇವಾ—

"ನಾನು ಆರಂಭಮಾಡುವೆನಯ್ಯ ಗುರುಪೂಜೆಗೆಂದು–ವ್ಯವಹಾರ ಮಾಡುವೆನಯ್ಯ ಲಿಂಗಾರ್ಚನೆಗೆಂದು"

ಸದ್ಗುರುಗಳ ಸೇವೆಯನ್ನು ಬಸವಣ್ಣನವರು ಮಾಡಿದಷ್ಟನ್ನು ಈ ಲೋಕದಲ್ಲಿ ಯಾರೂ ಮಾಡಿರಲಿಕ್ಕಿಲ್ಲ. ಲಕ್ಷಾಂತರ ಜಂಗಮರಿಗೆ ಪ್ರತಿನಿತ್ಯ ಭಕ್ತಿಯಿಂದ ಅವರ ಸೇವೆಯನ್ನು ಮಾಡುತ್ತ ತಮ್ಮ ದ್ರವ್ಯವನ್ನೆಲ್ಲ ಅವರ ಸೇವೆಗೆ ಸಲ್ಲಿಸಿರುತ್ತಾರೆ.

೭. ಶೌಚ—ಶೌಚದಲ್ಲಿ ಬಾಹ್ಯಾಭ್ಯಂತರ ಶೌಚಗಳೆಂದು ಎರಡು ಪ್ರಕಾರಗಳಾಗಿವೆ. ಬಾಹ್ಯದಲ್ಲಿಯೂ, ಆಂತರಿಕದಲ್ಲಿಯೂ ಬಸವಣ್ಣನವರು ಶೌಚದ ಬಗ್ಗೆ ಅನೇಕ ವಚನಗಳನ್ನು ಹೇಳಿರುತ್ತಾರೆ—

೧೨೬

"ಆಚಾರವೇ ಸ್ವರ್ಗ ಅನಾಚಾರವೇ ನರಕ, ಲಾಂಛನಕ್ಕೆ ತಕ್ಕ ಆಚರಣೆ ಇಲ್ಲದಿದ್ದರೆ ನೀ ಸಾಕ್ಷಿಯಾಗಿ ಛೀ ಎಂಬೆ"

ಪ್ರಾತಃಕಾಲದಲ್ಲಿ ಸೂರ್ಯೋದಯಕ್ಕಿಂತಲೂ ಮೊದಲು ಎದ್ದು ಶೌಚಾಚಮನಾದಿಗಳನ್ನು ಮಾಡಿ ಸ್ನಾನ ಶಿವಾರ್ಚನೆಗಳನ್ನು ಮಾಡದವನ ಜನ್ಮವು ವ್ಯರ್ಥವಾದುದೆಂದು ಅನೇಕ ವಚನಗಳಲ್ಲಿ ಹೇಳಿರುವರು.

೧೨೭

"ಹೊತ್ತಾರೆ ಎದ್ದು ಶಿವಲಿಂಗದೇವನ ದೃಷ್ಟಿಯಾರೆ ನೋಡದವನ ಸಂಸಾರವೇನವನ? ಬಾಳುವೆಣನ, ಬೀಳುವೆಣನ, ನಡೆವೆಣನ, ನುಡಿವೆಣನ, ಸಂಸಾರವೇನವನ ಕರ್ತು ಕೂಡಲಸಂಗಮದೇವ ನಿಮ್ಮ ತೊತ್ತುಗೆಲಸವ ಮಾಡದವನ ಸಂಸಾರವೇನವನ"

ಬಸವಣ್ಣನವರು ಅಂತರಂಗ ಶುದ್ಧಿಯ ಮೂರ್ತಿಗಳಾಗಿದ್ದರು. ಅವರು ಅಂತರಂಗ ಶುದ್ಧಿಯ ಬಗ್ಗೆ ಅನೇಕ ವಚನಗಳನ್ನು ಹೇಳಿರುವರು.

೧೨೮

"ಚೀಳಿಂಗೆ ಬಸುರಾಯಿತ್ತೆ ಕಡೆ ಬಾಳಿಗೆ ಫಲವಾಯಿತ್ತೆ ಕಡೆ ನೋಡಾ ರಣರಂಗದಲ್ಲಿ ಕಾದುವ ಓಲೆಕಾರಂಗೆ ಓಸರಿಸಿತ್ತೆ ಕಡೆ ಮಾಡುವ ಭಕ್ತಂಗೆ ಮನಹೀನವಾದರೆ ಅದೇ ಕಡೆ ಕೂಡಲಸಂಗಮದೇವಾ"

ಅಂತರಂಗ ಶುದ್ಧಿಯಿಲ್ಲದಿದ್ದರೆ ಯಾವ ಕಾರ್ಯವೂ ಆಗಲಾರದೆಂದು ಬಸವಣ್ಣನವರ ಮೇಲಿನ ವಚನದ ತಿರುಳಾಗಿರುತ್ತದೆ. ಬೇರೆ ಬೇರೆ ಶರಣರ ವಚನಗಳನ್ನು ನೋಡೋಣ.

೧೨೯

ಸ್ವತಂತ್ರಸಿದ್ಧಲಿಂಗದೇವರು—

"ಅಂತರಂಗ ಶುದ್ಧವಿಲ್ಲದವರು ಬಹಿರಂಗದಲ್ಲಿ ಸದಾಚಾರ ಸತ್ಕ್ರಿಯೆಯ ಸರ್ವಜನ ಮೆಚ್ಚ್ಕ ಮಾಡುತ್ತಿದ್ದರೇನು? ಅದು ಲೋಕದ ರಂಜನೆಯಲ್ಲದೆ ಶಿವ ಮೆಚ್ಚ ಶಿವಶರಣರು ಮೆಚ್ಚರು ಬಿತ್ತಿದ ಬೆಳೆಯ: ನುಂಬಂತೆ ಮಾಡಿದ ಸತ್ಕರ್ಮ ಫಲವನುಂಬ ಕೈ ಕೂಲಿಕಾರಂಗೆ ಮುಕ್ತಿ ಯುಂಟೇ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ"

೧೩೦

"ಅಂತರಂಗ ಶುದ್ಧವಿಲ್ಲದವರೊಳಗು ಅತ್ತಿಯ ಹಣ್ಣಿನಂತೆ ಕ್ಷುದ್ರ ಬಿಡದು ನೋಡಯ್ಯ ಅಂತರಂಗ ಶುದ್ಧವುಳ್ಳವರೊಳಗೆ ಬಾಳೆಯ ಹಣ್ಣಿನಂತೆ ಸುಗುಣ ತೋರುವದು ನೋಡಯ್ಯ ಇದುಕಾರಣ ಅಂತರಂಗ ಶುದ್ಧವಿಲ್ಲದವರ ಸಂಗದಲ್ಲಿ ಇರಬಾರದು ಶರಣರು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ"

೧೩೧

ಹಾವಿನ ಹಾಳಕಲ್ಲಯ್ಯನವರು—

"ಪರಮ ಪವಿತ್ರ ನಿರ್ಮಲಲಿಂಗ ತನ್ನಂಗದಮೇಲೆ ಇರುತಿರಲು ಅಂಗಶುದ್ಧ ಸೌಕರ್ಯ ಇಲ್ಲದವರ ಮುಖವ ನೋಡಲಾಗದು ಅವನ ಮುಟ್ಟಲೆಂತೂ ಆಗದು ಮನದ ಮಲಿನವ ಕಳೆದು ಪ್ರಾಣಲಿಂಗವ ಧರಿಸಬೇಕು ತನುವಿನ ಮಲವ ಕಳೆದು ಇಷ್ಟಲಿಂಗವ ಧರಿಸಬೇಕು ಜೀವತ್ರಯಂಗಳ ಮಲವ ಕಳೆದು ಪ್ರಸಾದವ ಧರಿಸಬೇಕು ಮನದ ಮಲಿನವಾವುದೆಂದಡೆ ತನುಗುಣವ್ಯಾಪ್ತಿ ತನುತ್ರಯದ ಮಲಿನವಾವುದೆಂದಡೆ ಮನವ್ಯಾಕುಲ

ತನುವಿನ ಮಲಿನವಾವುದೆಂದಡೆ ಈಕ್ಷಣತ್ರಯ ಜೀವತ್ರಯದ ಮಲಿನ ವಾವುದೆಂದಡೆ ಅವಸ್ಥಾತ್ರಯ ಕರಣಂಗಳ ಮಲಿನವಾವುದೆಂದಡೆ ಸಂಕಲ್ಪ ವಿಕಲ್ಪ, ಅಸತ್ಯ, ನಿಂದೆ, ಮಿಥ್ಯೆವಾದ ಮಾಡುವದು ಲಿಂಗವಿಪ್ಪ ಸುಕ್ಷೇತ್ರ ಕಾಯದ ಮಲಿನವ ಕಳೆದು ಪ್ರಸಾದವ ಧರಿಸದಿರ್ದಡೆ ಭವಮಾಲೆ ಹಿಂಗದು ನರಕತಪ್ಪದಯ್ಯ ಮಹಾಲಿಂಗ ಕಲ್ಲೇಶ್ವರಾ"

೧೩೨

ಶ್ರೀ ಬಸವಣ್ಣನವರು—

"ಸದಾಚಾರ ಸದ್ಭಕ್ತಿ ಇಲ್ಲದವರನೊಲ್ಲನಯ್ಯ ಅವರಾರಾಧನೆ ದಂಡ ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲನಯ್ಯ— ಕೂಡಲಸಂಗಮದೇವಾ ಭೂಮಿ ಭಾರಕರಾ"

ಇದು ಬಹಿರಂಗ ಶುದ್ಧಿಯ ವಚನವು— ಇನ್ನು ಅಂತರಂಗ ಶುದ್ಧಿಯ ವಚನ—

೧೩೩

"ನೂರ ನೋದಿ ನೂರ ಕೇಳಿದರೇನು? ಆಶೆ ಹರಿಯದು ರೋಷ ಬಿಡದು ಮಜ್ಜನಕ್ಕೆರೆದು ಫಲವೇನು? ಮಾತಿನಂತೆ ಮನವಿಲ್ಲದ ಜಾತಿ ಡೊಂಬರ ನೋಡಿ ನಗುವ ನಮ್ಮ ಕೂಡಲಸಂಗಮದೇವಾ"

೮. ಸ್ಥೈರ್ಯ—ಈ ಗುಣವಿಲ್ಲದಿದ್ದರೆ ಮಾನವನು ಯಾವ ಮಹತ್ಕಾರ್ಯವನ್ನೂ ಮಾಡಲಾರನು.

೧೩೪

ಶ್ರೀ ಬಸವಣ್ಣನವರು—

"ಅಂಜಿದರಾಗದು ಅಳುಕಿದರಾಗದು ವಜ್ರ ಪಂಜರದೊಳಗಿದ್ದರೆ ಆಗದು ತಪ್ಪದೆಲವೋ ಲಲಾಟಲಿಖಿತ ಕಕ್ಕುಲತೆಗೆ ಬಂದರಾಗದು ನೋಡಾ ಧೃತಿಗೆಟ್ಟು ಮನಧಾತುಗೆಟ್ಟರೆ ಅಪ್ಪುದು ತಪ್ಪದು ಕೂಡಲಸಂಗಮ ದೇವಾ" ಮತ್ತು

೧೩೫

"ಆಯುಷ್ಯ ತೀರಿದಲ್ಲದೆ ಮರಣವಿಲ್ಲ ಭಾಷೆ ತೀರಿದಲ್ಲದೆ ದಾರಿದ್ರ್ಯವಿಲ್ಲ ಅಂಜಲದೇಕೋ ಲೋಕ ಪಿಗುರ್ಬಣೆಗೆ ಅಂಜಲೇಕೋ ಕೂಡಲಸಂಗಮದೇವಾ ನಿಮ್ಮಾಳಾಗಿ?"

೧೩೬

"ಮನಕ್ಕೆ ಮನವೊಂದಾಗಿ ಧನಕ್ಕೆ ಧನವೊಂದಾಗಿ ನಚ್ಚಿದ ಮಚ್ಚು ಅಚ್ಚೊತ್ತಿದಂತೆ ಇರಬೇಕು ಪ್ರಾಣಕ್ಕೆ ಪ್ರಾಣವೊಂದಾಗಿ ಶುಭಸೂಚನೆ ಯೊಂದಾಗಿರದ ನಚ್ಚು ಮೆಚ್ಚು ಪಾರವೈವುದೇ ಸಿರ ಪರಿದರೇನು? ಕರುಳು ಕುಪ್ಪಳಿಸಿದರೇನು? ಇಂತಪ್ಪ ಸಮಸ್ತ ವಸ್ತುವೂ ಹೋದರೇನು? ಚಿತ್ತ ಮನ ಬುದ್ಧಿಯೊಂದಾದ ಮಚ್ಚು ಬಿಚ್ಚಿ ಬೇರಾಗದಿದ್ದರೆ ಮೆಚ್ಚುವ ನಮ್ಮ ಕೂಡಲಸಂಗಮದೇವಾ"

೧೩೭

"ಹುಟ್ಟಿದ ಬಳಿಕ ಕೊಟ್ಟ ಭೋಗಂಗಳ ತಪ್ಪಿಸಿಹೆನೆಂದರೆ ತಪ್ಪದು ನೋಡಯ್ಯ ಎನಗಿನ್ನೆಂತೋ ಎನಗಿನ್ನೆಂತೋ ಎಂದೆನ್ನಬೇಡ. 'ನಾಭುಂಕ್ತೇ ಕ್ಷೀಯತೇ ಕರ್ಮ' ಇಂತೆಂಬ ಶೃತಿ ತಪ್ಪದು ಕೂಡಲ ಸಂಗಮದೇವಾ"

೧೩೮

"ಲಿಂಗ ವಶದಿಂದ ಬಂದ ನಡೆಗಳು ಲಿಂಗ ವಶದಿಂದ ಬಂದ ನುಡಿಗಳು ಲಿಂಗವಂತರು ತಾವು ಅಂಜಲೇಕೆ? ಲಿಂಗವಿರಿಸಿದಂತೆ ಇಪ್ಪುದಲ್ಲದೆ ಕೂಡಲಸಂಗಮದೇವ ಭಕ್ತರಭಿಮಾನ ತನ್ನದೆಂಬನಾಗಿ"

ಈ ಐದು ವಚನಗಳು ಬಸವಣ್ಣನವರ ಸ್ಥೈರ್ಯವನ್ನು ಕೊಂಡಾಡತಕ್ಕವುಗಳಾಗಿರುತ್ತವೆ. ಇದಕ್ಕಿಂತಲೂ ಹೆಚ್ಚಿನ ಸ್ಥೈರ್ಯಗುಣವು ಬೇರೆ ಯಾವುದುಂಟು?

೯. ಶರೀರಸಂಯಮನ—ಶ್ರೀ ಬಸವಣ್ಣನವರು ಧ್ಯಾನಯೋಗಿಗಳೂ, ಕರ್ಮಯೋಗಿಗಳೂ, ಭಕ್ತಿ–ಜ್ಞಾನ ಯೋಗಿಗಳೂ ಆಗಿರುವದರಿಂದ ಅವರ ಸಂಯಮನವು ಲೋಕದಲ್ಲಿ ಉಪಮಾತೀತವಾಗಿರುತ್ತದೆ. ಪರಮಾತ್ಮನೇ ಶ್ರೇಷ್ಠನು, ಆತನ ಹೊರತು ಉಳಿದ ಪದಾರ್ಥಗಳೆಲ್ಲ ತುಚ್ಛ ಎಂಬುವ ಭಾವನೆಯಿಂದ ಯಾವಾಗಲೂ ಇದ್ದುಕೊಂಡು ಕಾಮಕ್ರೋಧಾದಿಗಳನ್ನು ತ್ಯಜಿಸಿದವನಾಗಿ ಪರಮಾತ್ಮಧ್ಯಾನದಲ್ಲಿ ಸತ್ಕಾರ್ಯಗಳನ್ನು ಮಾಡುತ್ತ ಮಗ್ನನಾಗಿರತಕ್ಕದ್ದು. ಆತ್ಮಸಂಯಮನವೆಂದರೆ ಅನೇಕ ವಿಷಯಗಳಲ್ಲಿ ನಿಗ್ರಹಮಾಡಬೇಕಾಗುತ್ತದೆ.

೧೩೯

ಶ್ರೀ ಬಸವಣ್ಣನವರು—

"ಒಡಲ ಕಳವಳಕ್ಕೆ ಬಾಯಸವಿಗೆ ಬಯಸಿ ಉಂಡೆನಾದರೆ ನಿಮ್ಮ ತೊತ್ತಿನ ಮಗನಲ್ಲಾ ಬೇಡೆ ಬೇಡೆ ನಿಮ್ಮ ನಂಬಿದ ಸದ್ಭಕ್ತರ ಅವರೊಕ್ಕುದ ಉಂಬೆ ಅವರೆಂದಂತೆ ಎಂಬೆ ಎನ್ನೊಡೆಯ ಕೂಡಲಸಂಗಮದೇವ ನೀನೊಲ್ಲದವರ ಹಿಡಿದೆನಾದರೆ ನಿಮ್ಮ ಪಾದದಾಣೆ"

೧೪೦

ಬಸವಣ್ಣನವರು ಆತ್ಮಸಂಯಮಿಗಳಾಗಿರುವರು—

"ಲಿಂಗಮುಖದಿಂದ ಬಂದ ಪ್ರಸಾದವಲ್ಲದೆ ಕೊಂಡೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ಲಿಂಗಾರ್ಪಿತವಲ್ಲದೆ ಹುಲ್ಲುಕಡ್ಡಿಯ ಕೊಂಡರೆ ಬಲ್ಲೆ ಮುಂದೆ ಭವಘೋರ ನರಕವೆಂಬುದ ಲಿಂಗಾರ್ಪಿತವಲ್ಲದೆ ಉದಕವ ಮುಕ್ಕುಳಿಸಿದೆನಾದರೆ ಸಲ್ಲೆನು ನಿಮ್ಮ ಗಣಾಚಾರಕ್ಕಯ್ಯ ನಿಮಗೆತ್ತಿದ ಕರದಲ್ಲಿ ಮತ್ತೊಂದಕ್ಕೆ ಕೈಯಾನೆನು ಅಳವರಿಯದೆ ನುಡಿದೆನು ಕಡೆಮುಟ್ಟ ಸಲೀಸದಿದ್ದಡೆ ತಲೆದಂಡ ತಲೆದಂಡ ಕೂಡಲಸಂಗಮದೇವ"

ಪರಸ್ತ್ರೀ, ಪರಧನ, ಪರನಿಂದೆ ಮೊದಲಾದ ಎಲ್ಲ ವಿಷಯಗಳಲ್ಲಿ ಸಂಯಮಿಗಳು ತಮ್ಮ ಪತ್ನಿಯ ಆಭರಣಗಳನ್ನು ಕದಿಯಲಿಕ್ಕೆ ಕಳ್ಳನು ಬಂದರೆ ಪತ್ನಿಯನ್ನೇ ಬೈದವರೆಂದಮೇಲೆ ಇದಕ್ಕಿಂತಲೂ ಆತ್ಮಸಂಯಮನವು ಬೇರೊಂದು ದೊರೆಯಲಾರದು.

೧೦. ಭೋಗಗಳಲ್ಲಿ ವೈರಾಗ್ಯ—ವೈರಾಗ್ಯವು ಮುಖ್ಯವಾಗಿ ಸ್ರಕ್‌ಚಂದನ ವನಿತಾದಿಗಳಲ್ಲಿರುವದು. ಈ ವೈರಾಗ್ಯವು ಮೊದಲು ಅಂಕುರವಾದರೆ ಉಳಿದ ವೈರಾಗ್ಯಗಳೆಲ್ಲ ಬರುತ್ತವೆ. ತ್ರಿಕಾಲದಲ್ಲಿ ಶಿವಾರ್ಚನೆಯಲ್ಲಿ ನಿಷ್ಠನಾಗಿ ಸತ್ಯ ಸದಾಚಾರಗಳಲ್ಲಿ ತೊಡಗಿದವರಿಗೆ ಸ್ರಕ್‌ಚಂದನ ವನಿತಾದಿಗಳಲ್ಲಿ ವೈರಾಗ್ಯ ಹುಟ್ಟುವದು ಸಹಜವೂ, ಸ್ವಾಭಾವಿಕವೂ ಆದುದಾಗಿರುತ್ತದೆ.

೧೪೧

ಬಸವಣ್ಣನವರು—

"ಸಂಸಾರವೆಂಬ ಸರ್ಪ ಮುಟ್ಟಲು ಪಂಚೇಂದ್ರಿಯ ವಿಷಯವೆಂಬ ವಿಷದಿಂದೆ ಆನು ಮುಂದುಗೆಟ್ಟೆನಯ್ಯ ಆನು ಹೊರಳಿ ಬೀಳುತ್ತಿರ್ದೆನಯ್ಯ ಓಂ ನಮಃ ಶಿವಾಯ ಎಂಬ ಮಂತ್ರವ ಜಪಿಸುತ್ತಿರ್ದೆನಯ್ಯ" ಮತ್ತು "ಕಾಮವೇಕೋ ಲಿಂಗಪ್ರೇಮಿ ಎನಿಸುವಂಗೆ? ಕ್ರೋಧವೇಕೋ ಶರಣ ವೇದ್ಯನೆನಿಸುವಂಗೆ? ಲೋಭವೇಕೋ ಭಕ್ತಿಯ ಲಾಭ ಬಯಸುವಂಗೆ? ಮೋಹವೇಕೋ ಪ್ರಸಾದ ವೇದ್ಯನೆನಿಸುವಂಗೆ? ಮದ ಮತ್ಸರವುಳ್ಳವಂಗೆ ಹೃದಯ ಶುದ್ಧವೆಲ್ಲಿಹುದೊ? ಹದುಳಿಗಾದವರಲ್ಲಿಪ್ಪ ಕೂಡಲಸಂಗಮ ದೇವ"

"ಸಂಸಾರವೆಂಬುವದೊಂದು ಗಾಳಿಯ ಸೊಡರೆಂದು" ಹೇಳಿ ವಿಷಯಗಳಿಗೆ ಮೂಲಭೂತವಾದ ಸಂಸಾರವನ್ನೇ ಅಲ್ಲಗಳೆದಿರುವರು.

೧೪೨

ಚಂದಿಮರಸು—

"ಸಾವು ತಡವಿಲ್ಲ ನರಕ ದೂರವಿಲ್ಲ ದೇಹದಿಚ್ಛೆಗೆ ಹರಿದು ಕೆಮ್ಮನೆ ಕೆಡಬೇಡ ದುರ್ವಿಷಯವ ಬಿಡು ಬೇಗ ಗುರುಪದವ ನಂಬು ನಮ್ಮ ಸಿಮ್ಮಲಿಗೆಯ ಚನ್ನರಾಯನಲ್ಲಿ ನೀನು ಸುಖಿಯಪ್ಪೆ ಮರುಳೇ?"

ಅನೇಕ ಶರಣರು ವಿಷಯ ವೈರಾಗ್ಯದ ವಿಷಯದಲ್ಲಿ ಬೇಕಾದಷ್ಟು ವಚನಗಳನ್ನು ಹೇಳಿರುತ್ತಾರೆ.

೧೧. ಅನಹಂಕಾರ—ಅಂದರೆ ಅಹಂಕಾರವಿಲ್ಲದಿರುವಿಕೆ—ನಾನು ಮಾಡುತ್ತೇನೆ, ಅಥವಾ ಮಾಡಿದ್ದೇನೆ, ಎಂಬ ಇವೇ ಮೊದಲಾದ ಕರ್ತೃತ್ವಾದಿಗಳು ತನ್ನದಲ್ಲವೆಂದು ನಿಶ್ಚಯವಾಗಿ ತಿಳಿದುಕೊಳ್ಳುವಿಕೆಯೇ ಅನಹಂಕಾರವು. ಸಾಮಾನ್ಯ ಜನಗಳಲ್ಲಿ ಈ ಗುಣವು ಬಹಳ ಮನೆಮಾಡಿಕೊಂಡಿರುತ್ತದೆ.

೧೪೩

ಶ್ರೀ ಬಸವಣ್ಣನವರು—

"ಅನವರತ ಮಾಡಿಹೆನೆಂದು ಉಪ್ಪರ ಗುಡಿಯ ಕಟ್ಟಿ ಮಾಡುವ ಭಕ್ತನ ಮನೆಯದು ಅಂದಣಗಿತ್ತಿಯ ಮನೆ. ಸರ್ವಜೀವ ದಯಾಪಾರಿ ಎಂದು ಭೂತದಯಕ್ಕಿಕ್ಕುವಾತನ ಮನೆ ಸುಯಿಧಾನದ ಕೇಡು ಸೂಳೆಯ ಮಗ ಮಾಳವ ಮಾಡಿದರೆ ತಾಯ ಹೆಸರಾಯಿತ್ತು ತಂದೆಯ ಹೆಸರಿಲ್ಲ ಕೂಡಲಸಂಗಮದೇವಾ"

೧೪೪

"ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ ಮಾಡಿದೆನೆನ್ನದಿರಾಲಿಂಗಕ್ಕೆ ಮಾಡಿದೆನೆನ್ನದಿರಾಜಂಗಮಕ್ಕೆ ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ ಬೇಡಿದ್ದನ್ನೀವ ಕೂಡಲಸಂಗಮದೇವ"

೧೨. ಜನ್ಮ ಮರಣಾದಿಗಳಲ್ಲಿ ಆಸಕ್ತಿ ಇಲ್ಲದಿರುವಿಕೆ—ಅಂದರೆ ಪ್ರಾಣಿಯು ತಾಯಿಯ ಗರ್ಭದಲ್ಲಿರುವಾಗ್ಗೆ ಅಲ್ಲಿ ಮಲಮೂತ್ರಗಳಿಂದ ಕೂಡಿರುವ ಇಕ್ಕಟ್ಟಾದ ಸ್ಥಲದಲ್ಲಿ ವಾಸವನ್ನು ೯ ತಿಂಗಳವರೆಗೆ ಮಾಡಿ ಆ ಗರ್ಭಕೋಶದಲ್ಲಿರುವ ಕ್ರಿಮಿಗಳ ಬಾಧೆಯನ್ನು ಸಹಿಸಿ ತಾಯಿಯು ಊಟಮಾಡಿದ ಷಡ್ರಸಗಳ ಸಂಬಂಧದಿಂದುಂಟಾದ ದುಃಖ, ಪ್ರಸವಕಾಲದಲ್ಲಿ ಆಗತಕ್ಕ ಅನೇಕ ತರಹದ ಯಾತನೆ ಇವುಗಳೆಲ್ಲ ಜನ್ಮದೋಷಗಳಾಗುತ್ತವೆ. ಮರಣಕಾಲದಲ್ಲಿ ಯಮದೂತರು ಬಂದು ಪಾಶವನ್ನು ಹಾಕಿ ಶೆಳೆಯುವಾಗ ಸತಿಸುತಾದಿಗಳನ್ನು ಅಗಲಿಹೋಗಲಾರದೆ ಪ್ರಾಣಹೋಗುವ ಕಾಲಕ್ಕೆ ತಾನು ಅನುಭವಿಸುವ ಹೇಳಲಸಾಧ್ಯವಾದ ದುಃಖವೇ ಮೃತ್ಯುದೋಷವೆಂದೆನ್ನಿಸಿಕೊಳ್ಳುವದು. ಕೈಕಾಲುಗಳಲ್ಲಿ ಶಕ್ತಿಗುಂದಿ ಅನೇಕ ಕಷ್ಟಗಳನ್ನು ಅನುಭವಿಸುವದೇ ಮುಪ್ಪಿನ ದೋಷವು. ವ್ಯಾಧಿಗಳು ಮನುಷ್ಯನನ್ನು ಹೇಗೆ ಪೀಡಿಸುತ್ತವೆಯೆಂಬುವದನ್ನು ಎಲ್ಲರೂ ಬಲ್ಲರು. ಜ್ಞಾನಾಭಿಲಾಷಿಯಾದ ಮಾನವನು ಈ ವಿಷಯಗಳ ಕಡೆಗೆ ಲಕ್ಷ್ಯವನ್ನು ಕೊಡಕೂಡದು.

೧೪೫

ಶ್ರೀ ಬಸವಣ್ಣನವರು—

"ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ ಮೋಹಕ್ಕೆ ಮಗುವಾಗಿ ಹುಟ್ಟಿದಳು ಮಾಯೆ ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ ಇದಾವ ಪರಿಯಲ್ಲಿ ಕಾಡಿತು ಮಾಯೆ ಈ ಮಾಯೆಯ ಕಳೆವೊಡೆ ಎನ್ನಳವಲ್ಲ ನೀವೇ ಬಲ್ಲಿರಿ ಕೂಡಲಸಂಗಮದೇವಾ"

೧೪೬

"ಅರಿಯದೆ ಜನನಿಯ ಜಠರದಲ್ಲಿಬಾರದ ಭವಂಗಳಲ್ಲಿ ಬರಿಸಿದೆ ತಂದೆ ಹುಟ್ಟಿತ್ತೆ ತಪ್ಪಾಯಿತ್ತೆ? ಎಲೆ ಲಿಂಗವೇ ಮುನ್ನ ಹುಟ್ಟಿದುದಕ್ಕೆ ಕೃಪೆಮಾಡು ಎಲೆ ಲಿಂಗವೇ ಇನ್ನು ಹುಟ್ಟಿದೆನಾದೊಡೆ ಕೂಡಲಸಂಗಮದೇವ ನಿಮ್ಮಾಣೆ"

೧೪೭

"ನಾಳೆ ಬಪ್ಪುದು ನಮಗಿಂದೇ ಬರಲಿ ಇಂದು ಬಪ್ಪುದು ನಮಗೀಗಲೇ ಬರಲಿ ಇದಕಂಜುವರಾರು? ಇದಕಳಕುವರಾರು? 'ಜಾತಸ್ಯ ಮರಣಂ ಧ್ರುವಂ' ಎಂಬುದಾಗಿ ನಮ್ಮ ಕೂಡಲಸಂಗಮದೇವರು ಬರೆದ ಬರೆಹವ ತಪ್ಪಿಸುವರೆ ಹರಿಬ್ರಹ್ಮಾದಿಗಳಿಗಳವಲ್ಲಾ ಕಾಯದ ಕಳವಳಕ್ಕಂಜಿ ಕಾಯಯ್ಯಾ ಎನ್ನೆನು ಜೀವನೋಪಾಯಕ್ಕಂಜಿ ಈಯಯ್ಯಾ ಎನ್ನೆನು ಯದ್ಭಾವಂ ತದ್ಭವತಿ ಉರಿಬರಲಿ ಶಿರಿಬರಲಿ ಬೇಕುಬೇಡೆನ್ನೆನು ಮಾನವರ ಬೇಡೆನು ಆಣೆ ನಿಮ್ಮಾಣೆ ಕೂಡಲಸಂಗಮದೇವಾ"

ಹೀಗೆಯೇ ಬಸವಣ್ಣನವರು ಜನನ—ಮರಣಾದಿಗಳಿಗಾಗಲಿ, ಸುಖ—ದುಃಖಗಳಿಗಾಗಲಿ ಅವರು ಕಿಂಚಿತ್ತಾದರೂ ಆಲೋಚನೆ ಮಾಡುತ್ತಿರಲಿಲ್ಲ. ಎಲ್ಲವೂ ಶಿವಕೃಪೆ, ಇಂದು ಏಕೆ ಈಗಲೇ ಮರಣ ಬರಲಿ ಎಂದು ಸ್ಪಷ್ಟವಾಗಿ ನುಡಿದಿರುತ್ತಾರೆ.

೧೩. ಅಸಕ್ತಿ—ಪುತ್ರಾದಿಗಳಲ್ಲಿ ಪ್ರೀತಿತ್ಯಾಗವು—ಬಸವಣ್ಣನವರು—

"ಹೊತ್ತಾರೆಯೆದ್ದು ಕಣ್ಣ ಹೊಸೆಯುತ್ತ ಎನ್ನ ಒಡಲಿಂಗೆ ಒಡವೆಗೆ ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ"

ಎಂದು ಪುತ್ರ ದಾರಾದಿಗಳ ಸಲುವಾಗಿ ಅವರು ನಿರ್ದಾಕ್ಷಿಣ್ಯವಾಗಿ ಅಂದಿರುವರು.

೧೪. ಅನಭಿಷ್ವಂಗ— ಅಂದರೆ ತನ್ನ ಬಂಧು ಬಳಗದವರಲ್ಲಿ ಯಾರಿಗಾದರೂ ಕಷ್ಟ ಪ್ರಾಪ್ತವಾದರೆ ಅದು ತನಗೇ ಬಂದಿತೆಂದು ತಿಳಿಯದೆ ಇರುವದಕ್ಕೆ ಅನಭಿಷ್ವಂಗ ಎಂದು ಹೆಸರು. ಶ್ರೀ ಬಸವಾದಿ ಪ್ರಮಥರು ಈ ತರದ ವ್ಯವಹಾರವನ್ನು ಎಂದೂ ಮಾಡಿರುವದಿಲ್ಲ. ಇವರು ನಮ್ಮವರು, ಇವರು ಅನ್ಯರು ಎಂಬುವ ಭಾವನೆಯನ್ನು ಸಮೂಲವಾಗಿ ಶರಣರು ನಾಶಮಾಡಿರುತ್ತಾರೆ. ಯಾರು ಷಟ್‌ಸ್ಥಲಗಳನ್ನು ಚನ್ನಾಗಿ ಆಚರಣೆಯಲ್ಲಿ ತರುತ್ತಾರೆಯೋ ಅವರನ್ನೆಲ್ಲ ಅಪ್ಪಿಗೊಂಡಿರುತ್ತಾರೆ. ಅವರು ಸಂಸಾರಿಗಳಾಗಿದ್ದಾಗ್ಯೂ ನಿರ್ಲಿಪ್ತರಾಗಿ ಈ ಲೋಕದ ವ್ಯವಹಾರವನ್ನು ಸಾಗಿಸಿಕೊಂಡು ಹೋದದ್ದು ತಿಳಿದುಬರುತ್ತದೆ.

೧೪೮

ಶ್ರೀ ಬಸವಣ್ಣನವರು—

"ಅತ್ತಲಿತ್ತಲು ಹೋಗದಂತೆ ಹೆಳವನ ಮಾಡಯ್ಯಾ ತಂದೆ ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯಾ ತಂದೆ ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಇರಿಸು ಕೂಡಲಸಂಗಮದೇವಾ"

ಹೀಗೆ ಇರತಕ್ಕ ಬಸವಾದಿ ಶರಣರು ಪುತ್ರ ದಾರಾದಿಗಳ ಸುಖ ದುಃಖವನ್ನು ತಮ್ಮದೆಂದು ತಿಳಿಯಲು ಸಾಧ್ಯವೇ ಇರುವದಿಲ್ಲ.

೧೫. ಇಷ್ಟಾನಿಷ್ಟ ವಸ್ತುಗಳಲ್ಲಿ ಸಮಚಿತ್ತತ್ವ—ಅಂದರೆ ಸುಖ ಬಂದರೆ ಹಿಗ್ಗುವದು ದುಃಖ ಬಂದರೆ ಕುಗ್ಗುವದನ್ನು ಮಾಡದೆ ಯಾವಾಗಲೂ ಪ್ರಸನ್ನತೆಯಿಂದ ಇರುವದಕ್ಕೆ ಸಮಚಿತ್ತತ್ವವೆಂದು ಹೆಸರು. ಶ್ರೀ ಬಸವಣ್ಣನವರು ಯಾವಾಗಲೂ ಸಮಾನವಾದ ಮನಸ್ಸಿನಿಂದ ಇರತಕ್ಕವರು. ಒಂದುಸಾರೆ ಅವರ ಆಕಳ ಹಿಂಡಿಗೆ ಕಳ್ಳರು ಬಿದ್ದು ಕೆಲವು ಆಕಳುಗಳನ್ನು ತೆಗೆದುಕೊಂಡುಹೋದರು. ಆಗ ಅವರ ಸೇವಕರು ಗದ್ದಲ ಮಾಡಲು ಬಸವಣ್ಣನವರು—

೧೪೯

"ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂಭೋ ನಿಮ್ಮ ಧರ್ಮ, ಬೊಬ್ಬಿಡಿದಿರಿಂಭೋ ನಿಮ್ಮ ಧರ್ಮ, ಆರಡದಿರಿಂಭೋ ನಿಮ್ಮ ಧರ್ಮ ಅಲ್ಲಿ ಉಂಬರೆ ಸಂಗ ಇಲ್ಲಿ ಉಂಬರೆ ಸಂಗ ಕೂಡಲಸಂಗಮದೇವನೇಕೊ ಭಾವ ಕಾಣಿರೊ"

ತೆಗೆದುಕೊಂಡು ಹೋದಿರೆಂದು ವ್ಯಸನಪಡುವ ಕಾರಣವಿಲ್ಲ. ಅಲ್ಲಿಯೂ ಸಂಗನೇ ಉಣ್ಣುವನು, ಇಲ್ಲಿಯೂ ಸಂಗನೇ ಉಣ್ಣುವನು ಎಂದು ಹೇಳಿರುವ ಅವರ ಮಾತುಗಳು ಮಾನವರಿಗೆ ಅಮೃತಪ್ರಾಯವಾಗಿವೆ. ಇಂತಹ ಸಮಾಧಾನದ ಗುಣವು ಲೋಕದಲ್ಲಿ ಬೇರೊಬ್ಬರಿಗೆ ಬರುವದು ಶಕ್ಯವಿರುವದಿಲ್ಲ. ತಮ್ಮ ವಸ್ತುವು ನಷ್ಟವಾದಾಗ್ಗೆ ಕಳವಳ ಪಡುವದು ಸ್ವಾಭಾವಿಕ. ಆದರೆ ಇಂತಹ ಸಮಯದಲ್ಲಿ ಸಮಚಿತ್ತವಿರುವದು ಬಹು ಶ್ರೇಷ್ಠವಾದುದಾಗಿರುತ್ತದೆ.

೧೬. ಪರಮೇಶ್ವರನಲ್ಲಿ ಅನನ್ಯವಾದ ಭಕ್ತಿ—ಭಕ್ತಿಸಾಮ್ರಾಜ್ಯವೈಭವಧುರೀಣ ರಾದ ಬಸವಣ್ಣನವರ ವಚನಗಳಲ್ಲಿ ಬಹಳ ವಚನಗಳು ಭಕ್ತಿಯ ಪ್ರಚಾರಾರ್ಥವಾಗಿಯೇ ಇರುತ್ತವೆ.

೧೫೦

"ಎನಗೆ ನಿಮ್ಮ ನೆನಹಾದಾಗಲೇ ಉದಯ ಎನಗೆ ನಿಮ್ಮ ಮರ ಹಾದಾಗಲೇ ಅಸ್ತಮಾನ ಎನಗೆ ನಿಮ್ಮ ನೆನಹವೇ ಜೀವನ ಎನಗೆ ನಿಮ್ಮ ನೆನಹವೇ ಪ್ರಾಣ ಕಾಣಾ ತಂದೆ ಸ್ವಾಮಿ ಎನ್ನ ಹೃದಯದಲ್ಲಿ ನಿಮ್ಮ ಚರಣ ದುಂಡಿಗೆಯನೊತ್ತಯ್ಯ ವದನದಲ್ಲಿ ಷಡಕ್ಷರಿಯ ಬರೆಯಯ್ಯಾ ಕೂಡಲ ಸಂಗಮದೇವ"

೧೫೧

"ಎನ್ನ ಕಾಯವ ದಂಡಿಗೆಯ ಮಾಡಯ್ಯಾ ಎನ್ನ ಶಿರವ ಸೋರೆಯ ಮಾಡಯ್ಯಾ ಎನ್ನ ನರವ ತಂತಿಯ ಮಾಡಯ್ಯಾ ಎನ್ನ ಬೆರಳ ಕಡ್ಡಿಯ ಮಾಡಯ್ಯಾ ಬತ್ತೀಸರಾಗವ ಹಾಡಯ್ಯಾ ಉರದಲೊತ್ತಿ ಬಾರಿಸು ಕೂಡಲ ಸಂಗಮದೇವಾ"

೧೭. ವಿವಿಕ್ತ ದೇಶ ಸೇವಿತ್ವಂ—ಅಂದರೆ ಜನರಹಿತವಾದ ಸ್ಥಾನದಲ್ಲಿರುವದು. ಏಕಾಂತವಾಸಿಯಾಗಿದ್ದರೆ ಅವನ ಹೃದಯವು ಪವಿತ್ರವಾಗಿ ಜ್ಞಾನೋದಯಕ್ಕೆ ಸಾಧನವಾಗುವದು. ಆದ್ದರಿಂದಲೇ ಬಸವಣ್ಣನವರು ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಕಪ್ಪಡಿಸಂಗಮಕ್ಕೆ ಹೋಗಿ ಅಲ್ಲಿ ತನ್ನ ಸ್ವಾಮಿಯಾದ ಕೂಡಲಸಂಗನಲ್ಲಿ ವಾಸವಾಗಿದ್ದರು.

೧೮. ಅರತಿರ್ಜನ ಸಂಸದಿ—ಪ್ರಾಕೃತಗಳಾದ ಜನಗಳ ಗುಂಪಿನಲ್ಲಿ ಸೇರದಿರುವಿಕೆ. ಆದ್ದರಿಂದ ಬಸವಣ್ಣನವರು "ನಡೆವುದು ನುಡಿವುದ ಶಿವಭಕ್ತರಕೂಡ" ಎಂದು ಒಂದು ಕಡೆಗೆ ಹೇಳಿರುವರು.

೧೫೨

"ಸಾರಸಜ್ಜನರ ಸಂಗ ಲೇಸು ಕಂಡಯ್ಯಾ ದೂರ ದುರ್ಜನರ ಸಂಗವದು ಭಂಗವಯ್ಯಾ ಸಂಗವೆರಡುಂಟು ಒಂದು ಬಿಡು ಒಂದು ಹಿಡಿ ಮಂಗಳಮೂರ್ತಿ ನಮ್ಮ ಕೂಡಲಸಂಗಮದೇವರ"

೧೯. ಆಧ್ಯಾತ್ಮಜ್ಞಾನ—ಅಂದರೆ ಆತ್ಮನಾತ್ಮ ವಿವೇಚನೆಯಲ್ಲಿಯೇ ನಿರಂತರವೂ ಮನಸ್ಸನ್ನು ಸ್ಥಿರಗೊಳಿಸಿ ತತ್ಪದಾರ್ಥವಾಚ್ಯನಾದ ಪರಮಾತ್ಮನನ್ನೇ ನಿರಂತರವೂ

ಅವಿಚ್ಛಿನ್ನವಾದ ಭಾವನೆಯಿಂದ ಚಿಂತಿಸುತ್ತ ಆತನೊಬ್ಬನೇ ನಿತ್ಯ; ಉಳಿದವುಗಳೆಲ್ಲ ಅನಿತ್ಯವೆಂಬುವ ಭಾವನೆಯಿಂದ ತಿಳಿಯುವದೇ ತತ್ವಜ್ಞಾನ.

೧೫೩

ಶ್ರೀ ಬಸವಣ್ಣನವರು—

"ವರಗುರುವಿಶ್ವಕ್ಕೆಲ್ಲ ಗಿರಿಜಾ ಮನೋವಲ್ಲಭ ಪರಮಕಾರುಣಿಕ ನಮ್ಮ ಕೂಡಲಸಂಗಮದೇವ" ಮತ್ತು "ಕೂಡಲಸಂಗಮದೇವನೇ ನಿತ್ಯ ಉಳಿದ ದೈವವೆಲ್ಲ ಅನಿತ್ಯಕಾಣಿಭೋ"

೨೦. ತತ್ವಜ್ಞಾನಾರ್ಥ ಚಿಂತನಂ—ಅಂದರೆ ಮೋಕ್ಷವೇ ಪರಮಪುರುಷಾರ್ಥ ವೆಂತಲೂ ಅಂತಹ ಮೋಕ್ಷ ಸಂಪಾದನೆಗೆ ಸಾಧನವೆನಿಸಿದ ನರಜನ್ಮವು ತಾನು ಹಿಂದೆ ಮಾಡಿದ ಸುಕೃತ ವಿಶೇಷದಿಂದ ದೊರೆತಿದ್ದರೂ ತಾನು ಅಂತಹ ನಿಶ್ರೇಯಲಾಭಕ್ಕೆ ಪ್ರಯತ್ನಮಾಡದಿದ್ದರೆ ತನಗೆ ಆತ್ಮಹತ್ಯವು ಪ್ರಾಪ್ತವಾಗುವಕಾರಣ ಆ ಮೋಕ್ಷ ಸಾಮ್ರಾಜ್ಯವನ್ನು ತಾನು ಪಡೆಯಬೇಕೆಂಬ ದೃಢಸಂಕಲ್ಪನಾಗಿ ತತ್ವಗಳನ್ನು ತಿಳಿದು ಸಚ್ಚಿದಾನಂದ ಸ್ವರೂಪನಾದ ಆ ಪರಮಾತ್ಮನೇ ತಾನೆಂಬುದಾಗಿ ನಿರಂತರವೂ ಮನನ ಮಾಡುವಿಕೆಯೇ ತತ್ವಜ್ಞಾನಾರ್ಥ ಚಿಂತನವೆನಿಸಿಕೊಳ್ಳುವದು. ಶ್ರೀ ಬಸವಣ್ಣನವರು ಯಾವಾಗಲೂ ಪರಮಾತ್ಮ ಧ್ಯಾನದಲ್ಲಿ ಅಭೇದ ಭಾವನೆಯನ್ನು ತಾಳಿ ಸಂಗನನ್ನು ಕೂಡಬೇಕೆಂಬ ಹಂಬಲವುಳ್ಳವರಾಗಿದ್ದರು.

೧೫೪

"ಸುರರು ಕಿನ್ನರರು ಕಿಂಪುರುಷರೆಂಬವರನಾರು ಬಲ್ಲರು? ಎನ್ನ ಚಿತ್ತವು ನಿಮ್ಮಮೇಲೆ ಲಿಂಗಯ್ಯಾ ಎನ್ನ ಭಾವವು ನಿಮ್ಮಮೇಲೆ ಸಂಗಯ್ಯಾ ಕೂಡಲಸಂಗಮದೇವಾ ನಾನನ್ಯವೆಂಬುದನರಿಯೆನಯ್ಯಾ"

೧೫೫

ನಿಜಗುರು ಸ್ವತಂತ್ರಸಿದ್ದಲಿಂಗದೇವರು—

"ಶಿವಕಥೆಗಳ ಕೇಳಿ ಕೇಳಿ ಸಂತೋಷಿಸಿ ಶಿವಕೀರ್ತನೆಗಳ ಮಾಡಿ ಮಾಡಿ ದಣುವಿಲ್ಲದೆ ಶಿವನ ನೆನೆನೆನೆದು ಶಿವಸೇವೆಯ ಮಾಡುತ್ತ ಶಿವಪೂಜೆಯ ನೋಜೆಯಲ್ಲಿ ವಿಸ್ತರಿಸಿ ಶಿವಶರಣೆಂದು ಶಿವನೊಡವೆಯ ಶಿವನವರಿಗೆ ಅರ್ಪಿಸಿ ಶಿವನೇತಾನಾದ ಭವರಹಿತ ಭಕ್ತನ ನೋಡಾ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ"

ಕ್ಷೇತ್ರಜ್ಞನ ಜ್ಞಾನಕ್ಕೆ ಕಾರಣಗಳಾದ ಗೀತೆಯ ೨೦ ಮಾತುಗಳಿಗೆ ಬಸವಣ್ಣನವರ ಸರಿಯಾದ ವಚನಗಳನ್ನು ಇಲ್ಲಿಯವರೆಗೆ ಹೇಳಿದುದಾಯಿತು. ಈ ಇಪ್ಪತ್ತು ಗುಣಗಳು ಜ್ಞಾನಕ್ಕೆ ಕಾರಣವಾದವುಗಳೆಂದು ಗೀತೆಯಲ್ಲಿ ಪ್ರತಿಪಾದಿಸಲ್ಪಟ್ಟಿರುತ್ತದೆ. ಈ ಇಪ್ಪತ್ತು ಗುಣಗಳ ಬಗ್ಗೆ ಬಹಳ ಶ್ರೇಷ್ಠಗಳಾದ ಸಾವಿರಾರು ವಚನಗಳನ್ನು ಬಸವಾದಿ ಶರಣರು ಉತ್ತಮರೀತಿಯಿಂದ ಗೀತೆಗಿಂತಲೂ ಸರಸವಾಗಿ ಮಾನವನ ಜ್ಞಾನಕ್ಕೆ ಸಾಧಕಗಳಾದವು ಗಳೆಂಬುದಾಗಿ ಹೇಳಿರುತ್ತಾರೆ.

ಇಲ್ಲಿಯವರೆಗೆ ಹೇಳಿದ ಸಾಧನೆಗಳಿಂದ ತಿಳಿಯತಕ್ಕದ್ದೇನಂದರೆ—

**ಭ॥ ಗೀತೆ—ಅಧ್ಯಾಯ ೧೩, ಶ್ಲೋಕ ೧೨**

ಜ್ಞೇಯಮ್ ಯತ್ತತ್ಪ್ರವಕ್ಷ್ಯಾಮಿ ಯಜ್ಞಾತ್ವಾಮೃತಮಶ್ನುತೇ ।
ಅನಾದಿಮತ್ಪರಮ್ ಬ್ರಹ್ಮ ನಸತ್ತಾನ್ನಾಸದುಚ್ಯತೇ ॥

ತಿಳಿಯಬೇಕಾದ ವಸ್ತುವನ್ನು ಹೇಳುವೆನು. ಯಾವ ವಸ್ತುವನ್ನು ತಿಳಿದು ಅಮೃತವನ್ನು ಊಟಮಾಡುವರೊ ಅದಕ್ಕೆ ಅನಾದಿ ಪರಬ್ರಹ್ಮವೆಂದು ಹೆಸರು. ಕಾರ್ಯರೂಪವೆನಿಸಿದ ಸತ್ಪದಾರ್ಥವೂ ಅಲ್ಲ; ಕಾರಣರೂಪವೆನಿಸಿದ ಅಸತ್ಪದಾರ್ಥವೂ ಅಲ್ಲ. ಅರ್ಥಾತ್ ಪರಬ್ರಹ್ಮವಸ್ತುವು.

ಹಾಗಾದರೆ ಆ ಪರಬ್ರಹ್ಮನ ಸ್ವರೂಪವೇನಂದರೆ—

**ಗೀತೆ—ಅಧ್ಯಾಯ ೧೩, ಶ್ಲೋಕ ೧೩**

ಸರ್ವತಃ ಪಾಣಿಪಾದಂ ತತ್ಸರ್ವತೋಕ್ಷಿ ಶಿರೋಮುಖಂ ।
ಸರ್ವತಃ ಶೃತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥

ಆತನಿಗೆ ಎಲ್ಲ ಕಡೆಗೆ ಕೈ ಕಾಲುಗಳೂ, ಎಲ್ಲ ಕಡೆಗೂ ಕಣ್ಣು ತಲೆಗಳೂ, ಎಲ್ಲ ಕಡೆಗೆ ಕಿವಿಗಳೂ ಇದ್ದು ಎಲ್ಲವನ್ನೂ ವ್ಯಾಪಿಸಿಕೊಂಡಿರುತ್ತಾನೆ. ಮೇಲಿನ ಶ್ಲೋಕವು ಶ್ವೇತಾಶ್ವತರೋಪನಿಷತ್ತಿನಲ್ಲಿಯೂ ಇರುತ್ತದೆ.

೧೫೬

ಶ್ರೀ ಬಸವಣ್ಣನವರು—

"ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ ಸಕಲವಿಸ್ತಾರದ ರೂಹು ನೀನೇ ದೇವಾ, ವಿಶ್ವತಶ್ಚಕ್ಷು ನೀನೇ ದೇವಾ ವಿಶ್ವತೋಮುಖ ನೀನೇ ದೇವಾ ವಿಶ್ವತೋಬಾಹು ನೀನೇ ದೇವಾ, ವಿಶ್ವತೋಪಾದ ನೀನೇ ದೇವಾ ಕೂಡಲ ಸಂಗಮದೇವಾ"

ಶ್ರೀ ಭಗವದ್ಗೀತೆಯ ಶ್ಲೋಕಕ್ಕೂ, ಬಸವಣ್ಣನವರ ವಚನಕ್ಕೂ ಕಿಂಚಿತ್ತಾದರೂ ವ್ಯತ್ಯಾಸ ಇರುವದಿಲ್ಲ; ಶಬ್ದಶಃ ಒಂದೇ ಆಗಿರುತ್ತದೆ.

**ಗೀತೆ—ಅಧ್ಯಾಯ ೧೩, ಶ್ಲೋಕ ೧೪**

ಸರ್ವೇಂದ್ರಿಯ ಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಂ ।
ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃಚ ॥

ಈ ಶ್ಲೋಕದ ಎರಡನೆಯ ಚರಣವು ಶ್ವೇತಾಶ್ವತರೋಪನಿಷತ್ತಿನಲ್ಲಿಯೂ ಇರುತ್ತದೆ. ಅವನಿಗೆ ಜ್ಞಾನೇಂದ್ರಿಯಗಳಾಗಲೀ ಮತ್ತು ಕರ್ಮೇಂದ್ರಿಯಗಳಾಗಲೀ ಇರುವದಿಲ್ಲ. ಹೀಗಿದ್ದರೂ ಇಂದ್ರಿಯಗಳೂ ಅವುಗಳ ಗುಣಗಳೂ ಇರುವಂತೆ ತೋರುತ್ತದೆ. ಸಂಗ ಶೂನ್ಯನಾದರೂ ಎಲ್ಲವನ್ನೂ ಧರಿಸಿರುತ್ತಾನೆ. ಸತ್ವಾದಿ ಗುಣರಹಿತನಾದರೂ ಅವುಗಳ ಭೋಕ್ತೃವಾಗಿರುತ್ತಾನೆ. ಆದ್ದರಿಂದಲೇ ವೇದದಲ್ಲಿ—

"ಅಪಾಣಿಪಾದೋ ಜವನೋಽಗ್ರಹೀತಾ ಪಶ್ಯತ್ಯಚಕ್ಷುಃ ಸಶೃಣೋತ್ಯಕರ್ಣಃ"

ಈ ಶೃತಿಗೆ ಸರಿಯಾಗಿ ಬಸವಣ್ಣನವರು—

"ಕಾಲಿಲ್ಲದೆ ನಡೆವನು ಕಣ್ಣಿಲ್ಲದೆ ನೋಡುವನು ಕಿವಿಯಿಲ್ಲದೆ ಕೇಳುವನು"

ಎಂಬುವ ವಚನವನ್ನು ಹೇಳಿರುವರು. ಇದೇ ವಿಷಯದಲ್ಲಿ ಶ್ರೀ ಪ್ರಭುದೇವರು ಸರಸವಾದ ಒಂದು ವಚನವನ್ನು ಹೇಳಿರುವರು.

೧೫೭

"ಕಣ್ಗೆ ಕಾಂಬಡೆ ರೂಪಿಲ್ಲ ಕೈಗೆ ಶಿಲುಕುವಡೆ ದೇಹಿಯಲ್ಲ ನಡೆದಡೆ ಗಮನಿಯಲ್ಲ ನುಡಿದಡೆ ವಾಚಾಳನಲ್ಲ ನಿಂದಿಸಿದವಗೆ ಹಗೆಯಲ್ಲ ಹೊಗಳಿದವರಿಗೆ ಕೆಳೆಯಲ್ಲ ಗುಹೇಶ್ವರನ ನಿಲವು ಮಾತಿನ ಮಾಲೆಗೆ ಶಿಲುಕುವುದೆ? ಸಿದ್ಧರಾಮಯ್ಯ ನೀನು ಮರುಳಾದೆಯಲ್ಲ"

**ಗೀತೆ–ಅಧ್ಯಾಯ ೧೩, ಶ್ಲೋಕ ೧೫**

**ಬಹಿರಂತಶ್ಚಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇಚತತ್ ॥**

ಅಂದರೆ—ಸಮುದ್ರದ ತೆರೆಗಳು ನೀರಲ್ಲದೆ ಬೇರೆಯಲ್ಲವೋ, ಭಂಗಾರದ ಆಭರಣಗಳು ಬಂಗಾರವಲ್ಲದೆ ಬೇರೆಯಲ್ಲವೋ ಹೀಗೆಯೇ ಸಕಲಭೂತಗಳಲ್ಲಿಯೂ ಆತನೇ ಒಳಗೂ ಹೊರಗೂ ನೆಲಸಿರುವಕಾರಣ ಕಂಗೊಳಿಸುತ್ತಿರುವನು; ಅಂದರೆ ಚರಾಚರಾತ್ಮಕಗಳಾದ ಎಲ್ಲ ಪ್ರಾಣಿಗಳಲ್ಲಿಯೂ ಕಂಗೊಳಿಸುತ್ತಿರುವನು. ಆತನೇ ಸೃಷ್ಟಿಗಿಂತ ಪೂರ್ವದಲ್ಲಿ ಸೂಕ್ಷ್ಮನಾಗಿರುವ ಕಾರಣ ದೃಷ್ಟಿಗೆ ಗೋಚರನಾಗುವದಿಲ್ಲ. ಆ ವಸ್ತುವು ದೂರದಲ್ಲಿಯೂ ಹತ್ತಿರದಲ್ಲಿಯೂ ಇರತಕ್ಕದ್ದಾಗಿದೆ. ಅಂತೂ ಎಲ್ಲ ವಸ್ತುಗಳ ಹೊರಗೂ ಒಳಗೂ ವ್ಯಾಪಿಸಿರುತ್ತದೆ. ಇದಕ್ಕೆ ಪ್ರಮಾಣವು ಶೃತಿಯಲ್ಲಿಯೂ ಕೂಡ ಇರುತ್ತದೆ.

**"ತದೇಜತಿ ತನ್ನೈಜತಿ ತದ್ದೂರೇ ತದ್ವದಂತಿಕೇ ತದಂತರಸ್ಯ ಸರ್ವಸ್ಯ ತದ್ ಸರ್ವಸ್ಯಾಸ್ಯಬ್ಯಾಹ್ಯತಃ"**

ಅಂದರೆ—ಆ ವಸ್ತುವು ಚಲಿಸುತ್ತದೆ. ಅದು ಚಲಿಸುತ್ತಿದ್ದರೂ ಇಂದ್ರಿಯ ಶಕ್ತಿರಹಿತವಾದುದು. ಅದು ದೂರದಲ್ಲಿಯೂ ಹತ್ತಿರದಲ್ಲಿಯೂ ಇರತಕ್ಕದ್ದಾಗಿದೆ. ಅದು ಎಲ್ಲ ವಸ್ತುಗಳ ಒಳಗೂ ಹೊರಗೂ ವ್ಯಾಪಿಸಿಕೊಂಡಿರುವುದು. ಮೇಲಿನ ಭಗವದ್ಗೀತೆಯ ಶ್ಲೋಕವೂ, ಈ ವೇದ ವಾಕ್ಯವೂ ಸಮಾನಗಳಾಗಿರುತ್ತವೆ.

೧೫೮

ಚಂದಿಮರಸು—

"ಘನಗಂಭೀರ ಮಹಾವಾರಿಧಿಯಲ್ಲಿ ಫೇನತರಂಗ ಬುದ್ಬುದಗಳುದಯವಲ್ಲದೆ ಬೇರಾಗಬಲ್ಲವೇ? ಆತ್ಮನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡ ಕೋಟಿಗಳಾದವಲ್ಲದೆ ಬೇರಾಗಬಲ್ಲವೇ? ಇದು ಬೇರೆಂಬ ಅರೆಮರುಳುಗಳನೇನೆಂಬೆ ವಿಶ್ವವನರಿದು ನೋಡಲು ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗವು ಬೇರೆಯಲ್ಲ"

೧೫೯

ಸಿದ್ಧೇಶ್ವರರು—

"ಚಿನ್ನದಿಂದಲಾದ ಹಲವು ಬಂಗಾರವಳಿದು ಕರಗಿದರೆ ಚಿನ್ನವೇ ಆದಂತೆ ಉದಕದಿಂದಲಾದ ವಾರಿಕಲ್ಲು ಕರಗಿ ಮುನ್ನಿನ ಉದಕವೇ ಆದಂತೆ, ಚಿನ್ಮಯವಸ್ತುವಿನಿಂದ ಉದಯವಾದ ಚಿತ್ಸ್ವರೂಪನಾದ ಶರಣನು ಆ ಚಿನ್ಮಯ ಪರವಸ್ತುವನೇ ಬೆರಸಿ ಪರಮ ಶಿವಯೋಗಿಯಾದನಯ್ಯ ಮಹಾಲಿಂಗಗುರು ಸಿದ್ಧೇಶ್ವರ ಪ್ರಭುವೇ"

**ಗೀತೆ—ಅಧ್ಯಾಯ ೧೩, ಶ್ಲೋಕ ೧೬**

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ ।**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥**

೧೬೦

ಉರಿಲಿಂಗಪೆದ್ದಿಗಳು—

"ಶಿವ ತನ್ನ ವಿನೋದಕ್ಕೆ ರಚಿಸಿದನು ಅನಂತವಿಶ್ವವನು ರಚಿಸಿದವನು ವಿಶ್ವಕ್ಕೆ ಹೊರಗಾಗಿದ್ದನೇ ಇಲ್ಲ ವಿಶ್ವಮಯ ತಾನಾದನು. ವಿಶ್ವವೆಲ್ಲವೂ ತಾನೆಂದೊಡೆ ವಿಶ್ವದುತ್ಪತ್ತಿ ಸ್ಥಿತಿ ಲಯಕ್ಕೊಳಗಾದನೇ ಇಲ್ಲ ಅದೇನು ಕಾರಣವೆಂದರೆ ಅಜಾತನಾಗಿ ಉತ್ಪತ್ತಿಯಿಲ್ಲ ಕರ್ಮರಹಿತನಾಗಿ ಸ್ಥಿತಿಗೊಳಗಾಗಿಲ್ಲ ಮರಣರಹಿತನಾಗಿ ಲಯಕ್ಕೊಳಗಲ್ಲ ಇಂತೀ ಗುಣತ್ರಯಂಗಳ ಹೊದ್ದಲರಿಯ ತಾನಲ್ಲದೆ ವಿಶ್ವಕ್ಕಾಧಾರ ಎಲ್ಲಾಗಿ ದೂರಸ್ಥನಲ್ಲ ತನ್ನಲ್ಲಿ ತಾನಲ್ಲದೆ ಅನ್ಯವು ತೋರಲರಿಯದಾಗಿ ಇದಿರಿಲ್ಲ ಇದಿರಿಲ್ಲಾಗಿ ವಿಶ್ವಮಯ ತಾನಾದುದೇ ಸತ್ಯ ಅರಸು ಕಾಲಾಳಾಗಬಲ್ಲ ತನ್ನ ವಿನೋದಕ್ಕೆ ಮರಳಿ ಅರಸಾಗಬಲ್ಲ ನಮ್ಮ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರನು ಜಗವಾಗಲೂ ಬಲ್ಲ ಆಗದಿರಲೂ ಬಲ್ಲನಯ್ಯ"

ಆ ವಸ್ತುವು ಚರಾಚರ ಭೂತಗಳಿಂದ ವಿಭಾಗವನ್ನು ಪಡೆಯದೆ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುತ್ತದೆ. ಕಾರ್ಯರೂಪದಿಂದ ವಿಭಾಗವನ್ನು ಪಡೆದಂತೆ ತೋರುತ್ತದೆ. ವ್ಯಾವಹಾರಿಕ ದೆಶೆಯಲ್ಲಿ ನಿಖಿಲಚರಾಚರ ಭೂತಗಳಿಗೆ ಸೃಷ್ಟಿಸ್ಥಿತಿಲಯಗಳನ್ನುಂಟು ಮಾಡುತ್ತದೆ. ಇದಕ್ಕೆ ಸರಿಯಾಗಿ ಶರಣರು ಹೇಳುವದೇನಂದರೆ—

೧೬೧

"ಶಿವ ಜಗವಾಗಲೂ ಬಲ್ಲ ಶಿವ ಜಗವಾಗದಿರಲೂ ಬಲ್ಲ ಶಿವ ರೂಪಾಗಲೂ ಬಲ್ಲ ರೂಪಾಗದಿರಲೂ ಬಲ್ಲ ಶಿವ ಅಜಾಂಡ ಕೋಟಿಗಳ ಮಾಡಬಲ್ಲ ಮಾಡದಿರಲೂ ಬಲ್ಲ"

೧೬೨

ಶ್ರೀ ಬಸವಣ್ಣನವರು—

"ಶಿವನೇ ಜಗತ್ರಯಕ್ಕೊಡೆಯನೆಂದುದು ವೇದ ಉತ್ಪತ್ತಿ ಸ್ಥಿತಿ ಲಯಕ್ಕೆ ಕಾರಣನೆಂದುದು ವೇದ ಈಶ್ವರಸ್ಸರ್ವಜಗತ್ಪ್ರಭುಃ"

**ಗೀತಾ—ಅಧ್ಯಾಯ ೧೩, ಶ್ಲೋಕ ೧೭**

**ಜ್ಯೋತಿಷಾಮಪಿತಜ್ಯೋತಿಸ್ತಮಸಃ ಪರಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿಸರ್ವಸ್ಯ ವಿಷ್ಠಿತಮ್ ॥**

ಅಂದರೆ— ಲೋಕದಲ್ಲಿ ಪ್ರಕಾಶಮಾನಗಳಾದ ಚಂದ್ರಸೂರ್ಯರಿಗಿಂತಲೂ ಈ ಪರಮಾತ್ಮವಸ್ತುವು ಅತ್ಯಂತ ಪ್ರಕಾಶಮಯವಾದುದು; ಈ ವಸ್ತುವಿಗಿಂತಲೂ ಅಧಿಕ ತೇಜಸ್ಸುಳ್ಳ ಅಥವಾ ಅದಕ್ಕೆ ಸಮಾನವಾದುದು ಮತ್ತೊಂದಿರುವದಿಲ್ಲ. ಆದ್ದರಿಂದಲೇ ವೇದದಲ್ಲಿಯೂ ಕೂಡ—

**"ಯೇನಸೂರ್ಯಸ್ತಪತಿ ತೇಜಸೇದ್ಧಃ ನ ತತ್ರ ಸೂರ್ಯೋಭಾತಿ ನ ಚಂದ್ರ ತಾರಕಂ ನೇಮಾವಿದ್ಯುತೋಭಾಂತಿ ಕುತೋಯಮಗ್ನಿಃ ತಮೇವ ಭಾಂತಮನು ಭಾಂತಿ ಸರ್ವಂ ತಸ್ಯ ಭಾಸಾಸರ್ವಮಿದಂ ವಿಭಾತಿ"**

ಇವೇ ಮೊದಲಾದ ವೇದವಾಕ್ಯಗಳಿಂದ ಆ ಪರಮಾತ್ಮನ ತೇಜಸ್ಸಿನ ಒಂದು ಅಂಶದಿಂದ ಸೂರ್ಯನು ಪ್ರಕಾಶಿಸುತ್ತಾನೆ. ಮತ್ತು ಆತನ ಬಳಿಯಲ್ಲಿ ಸೂರ್ಯ, ಚಂದ್ರ, ನಕ್ಷತ್ರ, ಮಿಂಚುಗಳು ಮೊದಲಾದುವುಗಳು ಪ್ರಕಾಶಿಸಲಾರವು. ಅಗ್ನಿಯ ವಿಷಯಕ್ಕೆ ಹೇಳುವದೇನು? ಅರ್ಥಾತ್ ಆತನ ತೇಜಸ್ಸಿನಿಂದಲೇ ಇವುಗಳೆಲ್ಲವೂ ಬೆಳಗುತ್ತಿರುವವು. ಆ ವಸ್ತುವಿಗೆ ಅಜ್ಞಾನವೆಂಬುವ ಕತ್ತಲೆಯ ಸಂಪರ್ಕವು ಲವಲೇಶವಾದರೂ ಇರುವದಿಲ್ಲ. ಇಂತಹ ಅಜ್ಞಾನಾಂಧಕಾರವನ್ನು ಅವನು ತನ್ನ ಜ್ಞಾನವೆಂಬುವ ದೀಪದಿಂದ ನಾಶಪಡಿಸಿದಬಳಿಕ ಕೋಟಿ ಸೂರ್ಯರಂತೆ ಪ್ರಕಾಶಿಸುವನು. ಆದ್ದರಿಂದಲೇ ವೇದವೂ ಕೂಡ—"ಆದಿತ್ಯವರ್ಣಂ ತಮಸಃ ಪರಸ್ತಾತ್" ಎಂದು ಹೇಳುತ್ತಲಿದೆ. ಬುದ್ಧಿವೃತ್ತಿಯಲ್ಲಿ ಹೊಳೆಯುವ ಜ್ಞಾನವೆಂಬುವ ಪದಾರ್ಥವೂ ಆ ವಸ್ತುವೇ ಆಗಿರುವದು. ಅದನ್ನು ತಿಳಿಯಲಿಕ್ಕೆ ಎಲ್ಲ ವಿಜ್ಞಾನಿಗಳೂ ಪ್ರಯತ್ನಪಡುತ್ತಲಿದ್ದಾರೆ.

೧೬೩

ಸ್ವತಂತ್ರಸಿದ್ಧಲಿಂಗೇಶ್ವರ—

"ಮಹಾಕರ್ತನು ತನ್ನ ಶಕ್ತಿಯ ವಿನೋದಕ್ಕೆ ಜಗವ ನಿರ್ಮಿಸಿದ ಅನಂತ ಲೋಕಗಳನ್ನು ಚಂದ್ರ ಸೂರ್ಯ ನಕ್ಷತ್ರ ಸಿಡಿಲು ಮಿಂಚುಗಳನ್ನು ಕಾಲಕರ್ಮ ಪ್ರಳಯಂಗಳನು ಹೆಣ್ಣು ಗಂಡು ಜಾತಿ ವಿಜಾತಿಗಳನ್ನು ಎಂಭತ್ತುನಾಲ್ಕು ಲಕ್ಷ ಜೀವರಾಶಿಗಳನ್ನು ಹುಟ್ಟಿಸಿ ತನ್ನ ವಿನೋದಕ್ಕೆ ಯಂತ್ರವಾಹಕನು ಮಾಡಿದ ಕಟ್ಟಣೆಯದಾರಿಗೂ ತಿಳಿಯಬಾರದು ನೋಡಾ ಸರ್ವ ಆತ್ಮರು ಮಲಪಾಶದಿಂದ ಬಂಧಿಸಿಕೊಂಬ ಪಶುಗಳಾದರು ತಾ ಪಶುಪತಿಯಾದ ನಮ್ಮ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನು"

ಭಗವದ್ಗೀತೆಯ ೧೩ನೆಯ ಅಧ್ಯಾಯವು ಸಂಪೂರ್ಣವಾಗಿ ಆತ್ಮ ಪರಮಾತ್ಮ ತತ್ವವನ್ನು ಬೋಧಿಸುತ್ತದೆ. ಈ ಅಧ್ಯಾಯದ ಪ್ರತಿಯೊಂದು ಶ್ಲೋಕಕ್ಕೂ ಸರಿಯಾಗಿ ವಚನಗಳನ್ನು ಹೇಳಲು ಶಕ್ಯವಿರುತ್ತದೆ. ಹೀಗೆ ಹೇಳಿಕೊಳ್ಳುತ್ತ ಹೋದರೆ ಈ ಪ್ರಕರಣವೇ ಒಂದು ಗ್ರಂಥವಾಗುವದೆಂಬುವದನ್ನು ತಿಳಿದು ಮುಖ್ಯ ವಿಷಯಗಳನ್ನು ಮಾತ್ರ ಒರೆಹಚ್ಚಿ ನೋಡುವದು ಸರಿಯಾಗಿರುವದು. ಆದುದರಿಂದ ಗೀತೆಯ ಉಳಿದ ಅಧ್ಯಾಯಗಳ ವಿಷಯವನ್ನು ಮುಂದೆ ಕೊಡುತ್ತೇನೆ.

## ಗೀತೆ—೧೬ನೆಯ ಅಧ್ಯಾಯ

ಈ ಅಧ್ಯಾಯದಲ್ಲಿ ಸಂಪೂರ್ಣವಾಗಿ ಆಸುರೀ ಸಂಪತ್ತು ಮತ್ತು ದೈವೀ ಸಂಪತ್ತಿನ ವಿಷಯಗಳನ್ನೇ ಹೇಳಲಾಗಿದೆ.

### ಗೀತೆಯಲ್ಲಿಹೇಳಿದ ದೈವೀ ಸಂಪತ್ತು

ಅಭಯಂ ಸತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥
ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಮ್ ।
ದಯಾಭೂತೇಷ್ವಲೋಲುಪ್ತ್ವಂ ಮಾರ್ದವಂಹ್ರೀರಚಾಪಲಮ್ ॥
ತೇಜಃ ಕ್ಷಮಾ ಧೃತಿಶ್ಶೌಚಮದ್ರೋಹೋನಾತಿಮಾನಿತಾ ।
ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥

ಎಲೌ ಅರ್ಜುನನೇ—ಭಯವಿಲ್ಲದಿರುವಿಕೆ, ಚಿತ್ತಸಂಶುದ್ಧಿಯು, ಆತ್ಮಜ್ಞಾನಮಾಡಿಕೊಳ್ಳುವ ವ್ಯವಸ್ಥೆಯು, ದಾನಮಾಡುವಿಕೆ, ಬಾಹ್ಯೇಂದ್ರಿಯಗಳ ಸಂಯಮನ, ಯಜ್ಞ, ಸ್ವಾಧ್ಯಾಯ, ತಪೋಯಜ್ಞ, ಜಪಯಜ್ಞ, ಸರಳತನ, ಅಹಿಂಸಾ, ಸತ್ಯ, ಅಕ್ರೋಧ, ಅಂದರೆ ಒಬ್ಬರು ಹೊಡಿದರೂ ಕೂಡ ಮನಸ್ಸಿನಲ್ಲಿ ಕ್ರೋಧೆಯಾಗದಿರುವಿಕೆ, ಔದಾರ್ಯ, ಶಾಂತಿ, ಚಾಡಿ ಹೇಳದಿರುವಿಕೆ, ದೀನರಲ್ಲಿ ದಯಾ, ಲೋಭ ಇಲ್ಲದಿರುವಿಕೆ, ಕ್ರೂರತನ ಇಲ್ಲದಿರುವಿಕೆ, ಕೆಟ್ಟಕಾರ್ಯದಲ್ಲಿ ಜನರಿಗೆ ನಾಚುವಿಕೆ, ವ್ಯರ್ಥಗಳಾದ ಕಾರ್ಯಗಳನ್ನು ಮಾಡದಿರುವಿಕೆ, ತೇಜಸ್ಸು ಅಂದರೆ ಪ್ರಾಗಲ್ಭ್ಯ, ಕ್ಷಮಾ, ದುಃಖಾದಿಗಳಿಂದ ನಷ್ಟವಾಗತಕ್ಕ ಮನಸ್ಸಿನ ಸ್ಥಿರೀಕರಣವು, ಶೌಚ, ದ್ರೋಹಮಾಡದಿರುವಿಕೆ, ತಾನು ಒಳ್ಳೇ ಪೂಜ್ಯವಂತನೆಂಬುವ ಅಭಿಮಾನ ಇಲ್ಲದಿರುವಿಕೆ, ಈ ಇಪ್ಪತ್ತಾರು ಲಕ್ಷಣಗಳು ದೈವೀ ಸಂಪತ್ತಿನ ಗುಣಗಳಾಗಿವೆ. ದೇವಯೋಗ್ಯವಾದ ಸಾತ್ವಿಕ ಸಂಪತ್ತಿಗೇನೇ ದೈವೀ ಸಂಪತ್ತೆಂದು ಹೆಸರು.

ಈ ದೈವೀ ಸಂಪತ್ತಿನಲ್ಲಿ ಶರಣರಷ್ಟು ಮುಂದೆ ಹೋದವರು ಶಿಗುವದು ದುರ್ಲಭವೆಂಬುವದು ಅವರ ನಡೆನುಡಿ ರೀತಿನೀತಿಗಳಿಂದ ಸ್ಪಷ್ಟವಾಗಿ ತಿಳಿದು ಬರುತ್ತದೆ. ದೈವೀ ಸಂಪತ್ತಿನ ಬಗ್ಗೆ ಶರಣರ ಸಾವಿರಾರು ವಚನಗಳಿರುತ್ತವೆ. ೪–೫ ವಚನಗಳನ್ನು ಮಾತ್ರ ಇಲ್ಲಿ ದೈವೀ ಸಂಪತ್ತಿನ ೨೬ ಗುಣಗಳಿಗೆ ಹೋಲಿಸಿ ತೋರಿಸುತ್ತೇವೆ.

೧೬೪

“ಹುಸಿಯ ನುಡಿಯನು ಭಕ್ತ ವೆಸನಕ್ಕೆಳಸನು ಭಕ್ತ, ವಿಷಯಂಗಳಾತಂಗೆ ತೃಣವು ನೋಡಾ, ಬಯಸುವವಲ್ಲ ಭಕ್ತ, ದಯವೆಂಬುದು ತನ್ನ ಕೈಯ್ಯಲ್ಲಿ, ಸೈರಣೆಯೆಂಬುದು ತನಗೆ ತೊತ್ತಾಗಿರ್ಪುದು, ಕೋಪವೆಂತಹದೆಂದರಿಯ, ತಾಪತ್ರಯಂಗಳು ಮುಟ್ಟಲಮ್ಮವು, ವ್ಯಾಪ್ತಿಗಳಡಗಿದವು, ಲಿಂಗವನೊಳಕೊಂಡ ಪರಿಣಾಮಿ ಆತನ ಪಥ ಲೋಕಕ್ಕೆ ಹೊಸತು ಲೋಕದ ಪಥವಾತಂಗೆ ಹೊಸತು, ತನಗೊಮ್ಮೆಯೂ ಲಿಂಗಧ್ಯಾನ, ಲಿಂಗಕ್ಕೊಮ್ಮೆಯೂ ತನ್ನ ಧ್ಯಾನ, ಆತನ ಘನ ಮಹಿಮೆಯ ಹೊಗಳಲೆನ್ನಳವೇ ಪನ್ನಗಧರ ಕೇಳಯ್ಯ ಚನ್ನಹಂಪೆಯ ವಿರುಪಯ್ಯ ನಿಮ್ಮ ನಂಬಿದ ಸತ್ಯಶರಣ ಪರಿಣಾಮಿ”

೧೬೫

ಸ್ವತಂತ್ರಸಿದ್ಧಲಿಂಗೇಶ್ವರ—

"ಶಮೆ, ದಮೆ, ವಿವೇಕ, ವೈರಾಗ್ಯ, ಪರಿಪೂರ್ಣಭಾವ, ಶಾಂತಿ, ಕಾರುಣ್ಯ, ಶ್ರದ್ಧೆ, ಸತ್ಯ, ಸದ್ಭಕ್ತಿ, ಶಿವಜ್ಞಾನ, ಶಿವಾನಂದ ಉದಯ ವಾದ ಮಹಾ ಭಕ್ತನ ಹೃದಯದಲ್ಲಿ ಶಿವನಿಪ್ಪ ಆತನ ದರ್ಶನ, ಸ್ಪರ್ಶನ, ಸಂಭಾಷಣೆಯಿಂದ ಕೇವಲ ಮುಕ್ತಿಯಪ್ಪುದು ತಪ್ಪದಯ್ಯ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ"

೧೬೬

ಉರಿಲಿಂಗಪೆದ್ದಿಗಳು—

"ಶಿವನೇ ದೈವ, ಕೊಲ್ಲದಿಪ್ಪುದೇ ಧರ್ಮ, ಅಧರ್ಮದಿಂದ ಬಂದುದ ನೊಲ್ಲದಿಪ್ಪುದೇ ನೇಮ, ಆಶೆಯಿಲ್ಲದಿಪ್ಪುದೇ ತಪ, ರೋಷವಿಲ್ಲದಿಪ್ಪುದೇ ಜಪ, ವಂಚನೆಯಿಲ್ಲದಿಪ್ಪುದೇ ಭಕ್ತಿ, ಹೆಚ್ಚು ಕುಂದಿಲ್ಲದಿಪ್ಪುದೇ ಸಮಯಾಚಾರ, ಇದು ಸತ್ಯ ಶಿವಬಲ್ಲ ಶಿವನಾಣೆ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ"

೧೬೭

ಚನ್ನಬಸವಣ್ಣನವರು—

"ಹೊರಗನೇ ಕೊಯ್ದು ಹೊರಗನೇ ಪೂಜಿಸಿದಡೆ ಪರಿಣಾಮವಿಲ್ಲ ಪ್ರಯೋಜನವಿಲ್ಲ ಸುಖದೊರಕೊಳ್ಳದು ನೋಡಾ ಅದೆಂತೆಂದೊಡೆ ಸರ್ವ ಜೀವಂಗಳಲ್ಲಿ ಹಿಂಸೆಯ ಮಾಡದಿಪ್ಪುದೇ ಪ್ರಥಮಪುಷ್ಪ ಸರ್ವೇಂದ್ರಿ ಯಂಗಳ ನಿಗ್ರಹಿಸಿಕೊಂಡಿರಬಲ್ಲಡೆ ದ್ವಿತೀಯಪುಷ್ಪ ಸರ್ವಾಹಂಕಾರವರಿತು ಶಾಂತನಾಗಿರಬಲ್ಲಡೆ ತೃತೀಯ ಪುಷ್ಪ ಸರ್ವವ್ಯಾಪಾರವಳಿದು ನಿರ್ವ್ಯಾಪಾರಿ ಯಾಗಿರಬಲ್ಲಡೆ ಚತುಃಪುಷ್ಪ ದುರ್ಭಾವಪ್ರಕೃತಿಯಳಿದು ಸದ್ಭಾವ ಎಡೆ ಗೊಂಡಿರಬಲ್ಲಡೆ ಪಂಚಮಪುಷ್ಪ ಉಂಡು ಉಪವಾಸಿ ಬಳಸಿದ ಬ್ರಹ್ಮಚಾರಿ ಇರಬಲ್ಲಡೆ ಷಷ್ಟಪುಷ್ಪ, ಅನೃತವ ಮರೆದು ಸತ್ಯವ ನುಡಿಯಬಲ್ಲಡೆ ಸಪ್ತಮ ಪುಷ್ಪ, ಸಕಲ ಪ್ರಪಂಚವಳಿದು ಶಿವಜ್ಞಾನ ಸಂಪನ್ನವಾಗಿರಬಲ್ಲಡೆ ಅಷ್ಟಮಪುಷ್ಪ ಇಂತೀ ಅಷ್ಟದಳ ಕುಸುಮದಲ್ಲಿ ಸಹಸ್ರಪೂಜೆಯ ಮಾಡಬಲ್ಲ ಶರಣರು ನಿಮ್ಮ ಪ್ರತಿಬಿಂಬದಂತಿಪ್ಪರು ಕಾಣಾ ಕೂಡಲಚನ್ನಸಂಗಮ ದೇವಾ"

೧೬೮

ಸಿದ್ಧರಾಮದೇವರು—

"ಜ್ಞಾನಿಗಳು ತಾವಾದಬಳಿಕ ಮುಕುರದ ಬಿಂಬದಂತಿರಬೇಕು, ಜ್ಞಾನಿಗಳು ತಾವಾದಬಳಿಕ ಜ್ಞಾನದಲ್ಲಿ ಕನಕದಂತಿರಬೇಕು, ಜ್ಞಾನಿಗಳು ತಾವಾದಬಳಿಕ ಸಂಶಯರಹಿತನಾಗಿರಬೇಕು, ಜ್ಞಾನಿಗಳು ತಾವಾದಬಳಿಕ ಪರಿಪೂರ್ಣ ಜಗತ್ತೆಂದು ಅರಿಯಬೇಕು, ಜ್ಞಾನಿಗಳು ತಾವಾದಬಳಿಕ ಪಾಪ ನಾಸನೆ ತೋರದಿರಬೇಕು, ಜ್ಞಾನಿಗಳು ತಾವಾದಬಳಿಕ ಅನ್ಯರ ನುಡಿಗೆ

ಒಳಗಾಗಬಾರದು, ಜ್ಞಾನಿಗಳು ತಾವಾದಬಳಿಕ ಅನ್ಯರ ನಿಂದೆಗೆ ಒಳಗಾಗ ಬಾರದು, ಜ್ಞಾನಿಗಳು ತಾವಾದಬಳಿಕ ಗುರು ಹಿರಿಯರಿಗಂಜಿ ನಡೆಯ ಬೇಕು, ಜ್ಞಾನಿಗಳು ತಾವಾದಬಳಿಕ ವಿಶ್ವಾಸಘಾತವ ಮಾಡಬಾರದು, ಜ್ಞಾನಿಗಳು ತಾವಾದಬಳಿಕ ಅನ್ಯರ ದೂಷಣೆಮಾಡಬಾರದು, ಜ್ಞಾನಿಗಳು ತಾವಾದಬಳಿಕ ಪರದ್ರವ್ಯವ ಅಪಹರಿಸಬಾರದು, ಜ್ಞಾನಿಗಳು ತಾವಾದಬಳಿಕ ಲಿಂಗಪೂಜೆ ಜಂಗಮದಾಸೋಹವ ಬಿಡಬಾರದು, ಜ್ಞಾನಿಗಳು ತಾವಾದ ಬಳಿಕ ಕೊಟ್ಟ ನುಡಿಗೆ ತಪ್ಪಬಾರದು, ಜ್ಞಾನಿಗಳು ತಾವಾದಬಳಿಕ ಅನ್ಯರ ಹಂಗಿನೊಳಗಾಗಬಾರದು, ಜ್ಞಾನಿಗಳು ತಾವಾದಬಳಿಕ ವಚನವ ಕೊಡ ಬಾರದು, ಜ್ಞಾನಿಗಳು ತಾವಾದಬಳಿಕ ಅಸತ್ಯವ ನುಡಿಯಬಾರದು, ಜ್ಞಾನಿ ಗಳು ತಾವಾದಬಳಿಕ ರಾಜರ ಮುಂದೆ ಅಸತ್ಯಸಾಕ್ಷಿಯ ನುಡಿಯಬಾರದು, ಜ್ಞಾನಿಗಳು ತಾವಾದಬಳಿಕ ಜನರಪವಾದಕ್ಕೆ ಒಳಗಾಗಬಾರದು, ಜ್ಞಾನಿ ಗಳು ತಾವಾದಬಳಿಕ ಮತಾಭಿಮಾನವ ತೋರಬಾರದು, ಜ್ಞಾನಿಗಳು ತಾವಾದಬಳಿಕ ಕಪಿಲಸಿದ್ಧ ಮಲ್ಲಿಕಾರ್ಜುನಗೆ ಆವ ಮಾರ್ಗದಿಂ ಚ್ಯುತನಾಗ ಬಾರದು, ಇದರಂತೆ ವರ್ತಿಸಬೇಕು ಕೇಳಾ ”

೧೬೯

ಷಣ್ಮುಖಸ್ವಾಮಿಗಳು—

“ಶರಣಸ್ಥಲದ ಕುರುಹಿನ ಮಾರ್ಗವನರಿಯದೆ ನಾನು ಶರಣ ತಾನು ಶರಣ ಎಂದು ನುಡಿವ ಕರ್ಮಜೀವಿಗಳ ಮುಖವ ನೋಡಲಾಗದು ; ಅದೇನು ಕಾರಣವೆಂದೊಡೆ ತಾವು ಶರಣರಾದೊಡೆ ತಮ್ಮ ಚಿತ್ತದ ಕೊನೆಯಲ್ಲಿ ಮುಸುಕಿದ ಕತ್ತಲೆಯನೆಲ್ಲ ಕಳೆಯಬೇಕು. ತಾವು ಶರಣ ರಾದೊಡೆ ತಮ್ಮ ಆತ್ಮನ ಸುತ್ತಿದ ಅಷ್ಟಮದಂಗಳ ಕತ್ತಲೆಯ ಕಡಿಯ ಬೇಕು. ತಾವು ಶರಣರಾದೊಡೆ ಅತ್ತಿತ್ತ ಹರಿದಾಡುವ ತಮ್ಮ ಮನವ ಹಿಡಿತಂದು ಲಿಂಗದಲ್ಲಿ ನಿಕ್ಷೇಪಮಾಡಬೇಕು. ತಾವು ಶರಣರಾದೊಡೆ ನಿತ್ಯಾನಿತ್ಯವನರಿದು ತತ್ವಾತತ್ವಂಗಳ ವ್ಯತೀಕರಿಸಿ ಮಹಾಜ್ಞಾನ ಮೊತ್ತದಲ್ಲಿ ಸುಳಿಯಬೇಕು. ಇಂತೀ ಭೇದವನರಿಯದೆ ತುತ್ತು ಸವಿದುಂಡು ಮರ್ತ್ಯದ ವಿಷಯ ಪ್ರಪಂಚಸುಖದಲ್ಲಿ ವ್ಯವಹರಿಸಿ ಅಜ್ಞಾನದ ಕತ್ತಲೆಯಲ್ಲಿ ಸೆರೆಯಸಿಕ್ಕಿ ಮುಂದುಗಾಣದೆ ಮುಕ್ತಿಯ ಪೊಲಬು ತಪ್ಪಿಹೋಗುವ ವ್ಯರ್ಥಪ್ರಾಣಿಗಳ ಕಂಡು ನಗುತಿರ್ದನು ನೋಡಾ ನಮ್ಮ ಅಖಂಡೇಶ್ವರಾ”

**ಗೀತೆಯಲ್ಲಿ ಹೇಳಿದ ಆಸುರೀ ಸಂಪತ್ತು**

ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।
ಅಜ್ಞಾನಂಚಾಭಿಜಾತಸ್ಯ ಪಾರ್ಥಸಂಪದಮಾಸುರೀಂ ॥
ಪ್ರವೃತ್ತಿಂ ಚ ನಿವೃತ್ತಿಂ ಚ ಜನಾನವಿದುರಾಸುರಾಃ ।
ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥
ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।
ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಂ ॥

ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥
ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ ।
ಮೋಹಾದ್ಗೃಹೀತ್ವಾ ಸದ್ಗ್ರಾಹಾನ್ ಪ್ರವರ್ತಂತೇ ಶುಚಿವ್ರತಾಃ ॥
ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ ।
ಕಾಮೋಪಭೋಗಪರಮಾ ಏತಾವದಿತಿನಿಶ್ಚಿತಾಃ ॥
ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।
ಈಹಂತೇ ಕಾಮಭೋಗಾರ್ಥಂ ಅನ್ಯಾಯೇನಾರ್ಥ ಸಂಚಯಾನ್ ॥
ಇದಮದ್ಯ ಮಯಾಲಬ್ಧಮಿದಂ ಪ್ರಾಪ್ಸ್ಯೇ ಮನೋರಥಮ್ ।
ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ॥
ಅಸೌಮಯಾಹತಃ ಶತ್ರುರ್ಹನಿಷ್ಯೇ ಚಾಪರಾನಪಿ ।
ಈಶ್ವರೋಹಮಹಂ ಭೋಗೀ ಸಿದ್ಧೋಹಂ ಬಲವಾನ್ಸುಖೀ ॥
ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।
ಯಕ್ಷ್ಯೇದಾಸ್ಯಾಮಿ ಮೋದಿಷ್ಯೇ ಇತ್ಯಜ್ಞಾನ ವಿಮೋಹಿತಾಃ ॥
ಅನೇಕಚಿತ್ತವಿಭ್ರಾಂತಾ ಮೋಹಜಾಲ ಸಮಾವೃತಾಃ ।
ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥

ಅಂದರೆ—ಇತರರು ನನ್ನನ್ನು ಮಹಾಧಾರ್ಮಿಕನೆಂದು ತಿಳಿಯಲೆಂಬುವ ಉದ್ದೇಶದಿಂದ ಧರ್ಮವನ್ನಾಚರಿಸುವದೇ ದಂಭವೆಂದೆನ್ನಿಸಿಕೊಳ್ಳುವದು. ದರ್ಪ, ಅಭಿಮಾನ, ಕ್ರೋಧ, ಕಾಠಿಣ್ಯ, ಅಜ್ಞಾನ, ಧರ್ಮದಲ್ಲಿ ಪ್ರವೃತ್ತಿ, ಅಧರ್ಮದಲ್ಲಿ ಅಪ್ರವೃತ್ತಿಯನ್ನು ಆಸುರೀ ಸ್ವಭಾವದ ಜನರು ತಿಳಿಯುವದಿಲ್ಲ. ಆದ್ದರಿಂದ ಶೌಚ, ಆಚಾರ, ಸತ್ಯ ಮೊದಲಾದುವುಗಳು ಅವರಲ್ಲಿರುವದಿಲ್ಲ. ಜಗತ್ತು ಅಸತ್ಯವಾದುದು. ಧರ್ಮಾಧರ್ಮಗಳಿಲ್ಲದ್ದೆಂದು ಹೇಳುತ್ತಾರೆ. ಈ ಜಗತ್ತು ಸ್ತ್ರೀಪುರುಷರ ಮಿಥುನದಿಂದಾದುದು. ಇದಕ್ಕೆ ಬೇರೆ ಯಾವ ಕಾರಣವೂ ಇರುವದಿಲ್ಲ. ಈ ತರಹದ ದೃಷ್ಟಿಯಿಂದ ಮಲಿನಚಿತ್ತವುಳ್ಳವರಾಗುವರು. ಅಲ್ಪಬುದ್ಧಿಯುಳ್ಳವರೂ, ಉಗ್ರಕರ್ಮಗಳನ್ನು ಮಾಡತಕ್ಕವರೂ ಆಗಿ ಲೋಕದ ಕ್ಷಯಕ್ಕೆ ಕಾರಣರಾಗುವರು. ಅತಿಶಯವಾದ ಕಾಮವನ್ನಾಶ್ರಯಿಸಿ ದಂಭಾದಿ ಗುಣಗಳಿಂದ ಕೂಡಿದವರಾಗಿ ಕ್ಷುದ್ರದೇವತೆಗಳ ಆರಾಧನೆಯಲ್ಲಿ ತೊಡಗುತ್ತಾರೆ. ಈ ಮಂತ್ರಗಳಿಂದ ಈ ದೇವತೆಯನ್ನು ಆರಾಧಿಸಿದರೆ ನಿಧಿನಿಕ್ಷೇಪಗಳು ಸಿಗುತ್ತವೆ. ಇತ್ಯಾದಿ ದುರಾಗ್ರಹವುಳ್ಳವರಾಗಿ ಮೋಹವನ್ನು ಹೊಂದಿದವರಾಗುತ್ತಾರೆ. ಮದ್ಯ ಮಾಂಸಾದಿಗಳೇ ಅವರ ವ್ರತಗಳಾಗುತ್ತವೆ. ನಿತ್ಯದಲ್ಲಿಯೂ ಚಿಂತಾಪರಾಯಣರಾಗಿ ಕಾಮೋಪಭೋಗವೇ ಮಹಾ ಪುರುಷಾರ್ಥವೆಂಬುವದಾಗಿಯೂ ತಿಳಿಯುತ್ತಾರೆ. ಆಶೆಗಳೆಂಬ ಪಾಶಗಳಿಂದ ಕಟ್ಟಿದವರಾಗಿ ಕಾಮಕ್ರೋಧಾದಿಗಳಲ್ಲಿ ತೊಡಗಿ ಕಳ್ಳತನವೇ ಮೊದಲಾದವುಗಳಿಂದ ದುಡ್ಡಿನ ರಾಶಿಯನ್ನು ಅಪೇಕ್ಷಿಸುತ್ತಾರೆ. ಇದನ್ನು ನಾನು ಪಡೆದಿದ್ದೇನೆ. ಮತ್ತು ಈ ಮನೋರಥವನ್ನು ಹೊಂದುವೆನು. ಇದು ನನಗೆ ಇದೆ, ಇದು ನನಗೆ ಆಗುವದು ಎಂಬುವ ಅಜ್ಞಾನದಲ್ಲಿ ತೊಡಗಿ ನರಕವನ್ನು ಹೊಂದುತ್ತಾರೆ. ಇವನನ್ನು ಕೊಂದಿರುತ್ತೇನೆ. ಇವನನ್ನಾದರೂ ಕೊಲ್ಲುವೆನು. ನಾನೇ ಸ್ವಾಮಿ, ನಾನೇ ಭೋಗೀ. ನಾನು ಸಿದ್ಧನೂ, ಬಲವಂತನೂ, ಸುಖಿಯೂ ಆಗಿರುತ್ತೇನೆ. ನಾನು ಧನಾದಿ ಸಂಪನ್ನನು, ಉತ್ತಮ ಕುಲದಲ್ಲಿ ಹುಟ್ಟಿದವನು. ಯಜ್ಞಮಾಡುವೆನು. ಎಲ್ಲರಿಂದ ಅಗ್ರತಾಂಬೂಲ ಹೊಂದುವೆನು. ಕೊಡುವೆನು. ಹರ್ಷವನ್ನು ಹೊಂದುವೆನು.

ಅಜ್ಞಾನದಿಂದ ಮೂಢರಾಗಿ ಹೀಗೆ ಮಾತನಾಡುವರು. ಅನೇಕ ಮನೋರಥಗಳಲ್ಲಿ ಚಿತ್ತಭ್ರಾಂತರಾಗಿ ಮೋಹವೆಂಬ ಬಲೆಯಲ್ಲಿ ಹಿಡಿಯಲ್ಪಟ್ಟವರಾಗಿ ಕಾಮುಭೋಗಗಳಲ್ಲಿ ಪ್ರವೃತ್ತಿಯುಳ್ಳವರಾಗಿ ನರಕದಲ್ಲಿ ಬೀಳುತ್ತಾರೆ. ತಮ್ಮಿಂದಲೇ ತಾವು ಸನ್ಮಾನಿತರಾಗಿ ನಮ್ರತೆಶೂನ್ಯರಾಗಿ ಧನಮಾನ ಮದಗಳಿಂದ ಕೂಡಿದವರಾಗಿ ದಂಭದಿಂದ ಯಾವದಾದ ರೊಂದು ವಿಧಿಯಿಲ್ಲದೆ ಯಜ್ಞವನ್ನು ಮಾಡುವರು.

ಇನ್ನು ಶರಣರ ನಡೆನುಡಿಗಳು ಶುದ್ಧವಾಗಿರುವವು. ಅವರ ಆಚರಣೆಯಲ್ಲಿ ಆಸುರೀ ಸಂಪತ್ತಿನ ಒಂದಾದರೂ ಉದಾಹರಣೆಗಳು ಸಿಗುವದು ಶಕ್ಯವೇ ಇರುವದಿಲ್ಲ. ಮೇಲೆ ಶರಣರ ದೈವೀ ಸಂಪತ್ತಿನ ಕೆಲವು ವಚನಗಳನ್ನು ಕೊಟ್ಟಿರುತ್ತೇನೆ. ಆ ವಚನ ಗಳನ್ನು ಪರಿಶೀಲಿಸಿದರೆ ಬಸವಣ್ಣನವರ ದೈವೀ ಸಂಪತ್ತು ಮಿಗಿಲಾದುದಾಗಿರುತ್ತದೆ. ಆಸುರೀ ಸಂಪತ್ತೆಂಬುವದು ಬಸವಾದಿ ಪ್ರಮಥರ ಸಮೀಪಕ್ಕೆ ಬರಲು ಶಕ್ಯವಿಲ್ಲ. ಆಸುರೀ ಸಂಪತ್ತಿನ ಗುಣಗಳನ್ನು ಶರಣರು ನಾನಾ ಪ್ರಕಾರವಾಗಿ ಹಳಿದಿರುತ್ತಾರೆ.

**ಗೀತೆಯು ಈ ಅಧ್ಯಾಯದ ಕೊನೆಗೆ**

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।
ಕಾಮುಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥

ಕಾಮು, ಕ್ರೋಧ, ಲೋಭ ಈ ಮೂರುಗಳು ನರಕದ್ವಾರಗಳಾಗಿರುತ್ತವೆ. ಜ್ಞಾನಿ ಯಾದವನು ಇವುಗಳನ್ನು ತ್ಯಜಿಸಬೇಕು.

೧೭೦

ಶ್ರೀ ಬಸವಣ್ಣನವರು—

"ಕಾಮುವೇಕೋ ಲಿಂಗಪ್ರೇಮಿಯೆನಿಸುವಂಗೆ? ಕ್ರೋಧವೇಕೋ ಶರಣವೇದ್ಯನೆನಿಸುವಂಗೆ? ಲೋಭವೇಕೋ ಭಕ್ತಿಲಾಭವನರಸುವಂಗೆ? ಮದಮತ್ಸರ ಉಳ್ಳವರಿಗೆ ಹೃದಯಶುದ್ಧವೆಲ್ಲಿಯದೋ? ಹದುಳಿಗರಾದಲ್ಲಿಪ್ಪ ಕೂಡಲಸಂಗಮದೇವಾ"

೧೮ನೆಯ ಅಧ್ಯಾಯ—ಈ ಅಧ್ಯಾಯದಲ್ಲಿ ೭೮ ಶ್ಲೋಕಗಳಿದ್ದು ಇದೇ ಗೀತೆಯಲ್ಲಿ ದೊಡ್ಡ ಅಧ್ಯಾಯ. ಆರಂಭದಲ್ಲಿ ಕಾಮ್ಯಕರ್ಮಗಳ ಮತ್ತು ಸರ್ವಕರ್ಮ ಫಲತ್ಯಾಗ ಗಳನ್ನು ಹೇಳಿ—

ತ್ಯಾಜ್ಯಂ ದೋಷವದಿತ್ಯೇಕೇ ಕರ್ಮಪ್ರಾಹುರ್ಮನೀಷಿಣಃ ।
ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥

ಅಂದರೆ—ಹಿಂಸೆಯಿಂದ ಕೂಡಿದ ಎಲ್ಲಾ ಕಾರ್ಯಗಳನ್ನು ಬಿಡಬೇಕೆಂದು ಕೆಲವರ ಅಭಿಪ್ರಾಯವಾಗಿದ್ದರೆ— ಯಜ್ಞ, ದಾನ, ತಪಸ್ಸು ಈ ಕಾರ್ಯಗಳನ್ನು ಬಿಡಬಾರದು. ಎಲ್ಲ ಕರ್ಮಗಳನ್ನೂ ಬಿಡಬೇಕೆಂದು ಸಾಂಖ್ಯಶಾಸ್ತ್ರಕಾರರು ಹೇಳುತ್ತಾರೆ. ಅವರ ಅಭಿಪ್ರಾಯವಿಷ್ಟೆ ಇರುವದು. "ಮಾ ಹಿಂಸ್ಯಾತ್ ಸರ್ವಭೂತಾನಿ" ಯಾವ ಪ್ರಾಣಿ ಗಳನ್ನೂ ಹಿಂಸಿಸಬಾರದೆಂದು ಶಾಸ್ತ್ರವು ಇರುವದರಿಂದ ಹಿಂಸೆಯು ಪುರುಷನಿಗೆ ಅನರ್ಥ ವನ್ನುಂಟುಮಾಡತಕ್ಕದ್ದಾಗಿರುತ್ತದೆ. ಆದರೆ ಕರ್ಮದಲ್ಲಿ ನಿಷ್ಠರಾದ ಮೀಮಾಂಸಕರು— "ಮಾ ಹಿಂಸ್ಯಾತ್ಸರ್ವಭೂತಾನಿ" ಎಂಬುವ ವಾಕ್ಯ ಸಾಮಾನ್ಯವಾದುದು. ಸಾಮಾನ್ಯ

ಶಾಸ್ತ್ರಕ್ಕೆ ವಿಶೇಷ ಶಾಸ್ತ್ರದಿಂದ ಬಾಧೆಯು ಬರುವದರಿಂದ "ಅಗ್ನೀಷೋಮೀಯಮ್ ಪಶುಮಾಲಭೇತ" ಎಂಬುವ ವಿಶೇಷ ಶಾಸ್ತ್ರವೇ ಪ್ರಬಲವಾದುದು. ಈ ವಿಶೇಷ ಶಾಸ್ತ್ರವು ಯಜ್ಞದಲ್ಲಿ ಪಶುಗಳನ್ನು ಕೊಂದದ್ದೇ ಆದರೆ ದೋಷವಿಲ್ಲವೆಂದೇ ಹೇಳುವ ಕಾರಣ ಮನುಷ್ಯನು ತನ್ನ ಕರ್ಮ ಬಿಡಬಾರದು. ಆದ್ದರಿಂದ ಯಜ್ಞದಾನ ತಪೋರೂಪವಾದ ಕರ್ಮವು ಶಾಸ್ತ್ರವಿಹಿತವಾಗಿರುವದರಿಂದ ಅವುಗಳನ್ನು ಮಾಡಲೇಬೇಕೆಂದು ಅವರು ಹೇಳುತ್ತಾರೆ.

ಶರಣರಾದರೂ—ಕರ್ಮಗಳು ಯಾವಾಗಲೂ ಮನುಷ್ಯನನ್ನು ಬಿಡುವದಿಲ್ಲ. ಆದರೆ ಸತ್ಕರ್ಮಂಗಳನ್ನು ಮಾತ್ರ ಮಾಡಬೇಕು. ಯಾಕಂದರೆ ಕರ್ಮಗಳನ್ನು ಮಾಡಬೇಕಾದರೆ ನಿರ್ಮಲಜ್ಞಾನಿಯಾಗಿರಬೇಕು.

೧೭೧

ಸ್ವತಂತ್ರಸಿದ್ಧಲಿಂಗೇಶ್ವರ—

"ಸಂಚಿತ, ಪ್ರಾರಬ್ಧ, ಆಗಾಮಿ, ಕರ್ಮಂಗಳು ಬೆನ್ನಬಿಡವು ನೋಡಾ ಆರನಾದರೂ ಮೂಗರಮಾಡಿ ಕಾಡಿ ಕೊಲ್ಲುತ್ತಿಹವು ನೋಡಾ, ಹೀಂಗೆಮಾಡಿದ ಕರ್ಮಬಿಡೆಂದರೆ ಬಿಡುವದೇ? ಮುಂದೆ ಉಂಡಲ್ಲದೆ ತೀರದು ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನು ಕಡೆಗಣ್ಣಲಿ ನೋಡುವನ್ನಕ್ಕ ಉಂಡು ತೀರದು ಕರ್ಮ"

೧೭೨

ಈ ಕರ್ಮಗಳನ್ನು ಹೇಗೆ ನಾಶಮಾಡಬೇಕೆನ್ನುವ ಬಗ್ಗೆ—

"ಶಿವಭಕ್ತಿ ತತ್ಪರನಾದ ಮಹಿಮನು ವಿಷಯಭ್ರಮೆ ಪುರುಷ ಪ್ರಯತ್ನವನ್ನು ಬಿಟ್ಟಾಗಳೇ ಆಗಾಮಿ ಕರ್ಮ ನಾಶವಾಯಿತ್ತು. ಸಂಚಿತ ಕರ್ಮ ವಿಷಯಾಸಕ್ತಂಗೆ ಪ್ರಾರಬ್ಧವೆನಿಸುವದು. ಶಿವಧ್ಯಾನೈಕಚಿತ್ತಂಗೆ ಸಂಚಿತ ಕರ್ಮವಿಲ್ಲ ಅದೇನು ಕಾರಣವೆಂದಡೆ ಶಿವಜ್ಞಾನಾಗ್ನಿಯಿಂದ ಅದು ಬೆಂದುಹೊಹುದಾಗಿ ಇಚ್ಛಾಪ್ರಾರಬ್ಧವೆಂದೂ ಅನಿಚ್ಛಾಪ್ರಾರಬ್ಧವೆಂದೂ ಪ್ರಾರಬ್ಧವೆರಡಾಗಿಹುದು. ಪ್ರಾರಬ್ಧ ಕರ್ಮವು ಭೋಗಾದಿಗಳಿಂದ ಕ್ಷಯ ಹೊಂದುವದಾಗಿ ಅದು ಭೋಗಿಸದಲ್ಲದೆ ತೀರದು. ಅನಿಚ್ಛಾಪ್ರಾರಬ್ಧ ದಿಂದ ಮುಂದೆ ಸುಖವಹುದು. ಇಚ್ಛಾಪ್ರಾರಬ್ಧದಿಂದ ದುಃಖವಹುದಾಗಿ ಆ ದುಃಖದಿಂದ ಸಂಸಾರವೃಕ್ಷ ಬೇರುವರಿವುದು ಸಂಸಾರ ವಿರಕ್ತಂಗೆ ಹುರಿದ ಬೀಜದಂತೆ ಅಂಕುರ ನಷ್ಟವಾಗಿಹುದು. ಆ ಶಿವನೊಡನೆ ಕೂಡಿ ಭೋಗಿಸುವನಾಗಿ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನೆಂಬ ನಿಜವನೈದುವನು"

ಹೀಗೆ ಕರ್ಮವಿಚ್ಛೇದನ ಮಾಡುವದನ್ನು ಹೇಳುತ್ತ ಸತ್ಕರ್ಮಂಗಳನ್ನು ಮಾತ್ರ ಮಾಡುತ್ತಲೇ ಇರಬೇಕೆಂದು ಬಸವಾದಿ ಪ್ರಮಥರು ಪ್ರತಿಪಾದಿಸಿರುವರು. ಕರ್ಮ ಬಿಡದೆಂಬುವ ಬಗ್ಗೆ ಬಸವಣ್ಣನವರು—

೧೭೩

"ಪಂಡಿತನಾಗಲಿ, ಮೂರ್ಖನಾಗಲಿ, ಸಂಚಿತ ಕರ್ಮ ಉಂಡಲ್ಲದೆ ಬಿಡದು ಪ್ರಾರಬ್ಧ ಕರ್ಮ ಭೋಗಿಸಿದಲ್ಲದೆ ಹೋಗದೆಂದು ಶೃತಿ ಸಾರುತೈದಾವೆ ನೋಡಾ ತಾನಾವ ಲೋಕದೊಳಗಿದ್ದಡೆಯೂ ಬಿಡದು ಕರ್ಮ ಫಲಗೂಡಿ ಕೂಡಲಸಂಗಮದೇವಂಗೆ ಆತ್ಮನೈವೇದ್ಯವ ಮಾಡಿದವನೇ ಧನ್ಯನು"

೧೭೪

ಸತ್ಕರ್ಮ ಮಾಡಬೇಕೆನ್ನುವದಕ್ಕೆ ಸಿದ್ಧರಾಮದೇವರು—

"ದುಷ್ಕರ್ಮಂಗಳ ಮಾಡುವವರನಂತರುಂಟು ಸತ್ಕರ್ಮಂಗಳ ಮಾಡುವವರೊಬ್ಬರೂ ಇಲ್ಲ ನೋಡಯ್ಯಾ ದುಷ್ಕರ್ಮಗಳೆಂದರೆ ವಿಷಯ ವಾಸನೆ ಸತ್ಕರ್ಮಗಳೆಂದರೆ ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡುವ ವಾಸನೆ"

೧೭೫

ಶ್ರೀ ಬಸವಣ್ಣನವರು—

"ಮರ್ತ್ಯಲೋಕವೆಂಬುವದೊಂದು ಕರ್ತಾರನ ಕಮ್ಮಟವಯ್ಯಾ ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ ಕೂಡಲಸಂಗಮದೇವ"

ಅಂದರೆ ಸತ್ಕರ್ಮಂಗಳನ್ನು ಮಾಡಿದ ಮಾನವನು ಮಾತ್ರ ದೇವರ ಪ್ರೇರಣೆಗೆ ಅರ್ಹನಾಗುತ್ತಾನೆಂದೇ ಬಸವಣ್ಣನವರ ಅಭಿಪ್ರಾಯವಾಗಿರುವದು.

೧೭೬

ಸಿದ್ಧರಾಮದೇವರು—

"ವೇದವೇದಾಂತವನೋದಿದರೇನು? ಮನಸೂತಕವಳಿಯದನ್ನಕ್ಕ?
ಸಿದ್ಧ ಸಿದ್ಧಾಂತವ ಶ್ರಮಪಟ್ಟರೇನು? ಸಾಧಿಸಿ ಕೀರ್ತಿಯ ಹಡೆಯದನ್ನಕ್ಕ?
ಇವೆಲ್ಲ ಹೊರಗಣ ಮಾತು ಮಾತೊಂದೇ ನಮ್ಮ ಕಪಿಲಸಿದ್ಧಮಲ್ಲೇಶನಲ್ಲಿ
ಸದಾಚರಣ ಸನ್ಮಾರ್ಗವಯ್ಯ"

ಇಲ್ಲಿ ಮುಖ್ಯವಾಗಿ ತಿಳಿಯತಕ್ಕ ಮಾತೇನಂದರೆ—ಸಾಂಖ್ಯರು ಯಾವ ಕರ್ಮಗಳನ್ನೂ ಮಾಡಬಾರದು. ಆ ಕರ್ಮಗಳಲ್ಲಿ ಹಿಂಸೆಯು ಕೂಡಿರುತ್ತದೆಂದು ಹೇಳಿದರೆ ಮೀಮಾಂಸಕರು ಯಜ್ಞದಲ್ಲಿ ಪಶುಗಳನ್ನು ಕೊಂದರೂ ದೋಷವಿಲ್ಲವಾದುದರಿಂದ ಯಜ್ಞ ತಪಸ್ಸು ದಾನ ಇವುಗಳನ್ನು ಬಿಡಬಾರದೆಂದು ಹೇಳುತ್ತಾರೆ. ಆದರೆ ಗೀತಾಕಾರರು ಯಜ್ಞ ತಪಸ್ಸು ದಾನ ಇವುಗಳನ್ನು ನಿಷ್ಕಾಮಬುದ್ಧಿಯಿಂದ ಮಾಡಬೇಕೆಂದು ಹೇಳಿರುತ್ತಾರೆ.

ಶರಣರಾದರೂ ಯಾವಾಗಲೂ ನಿಷ್ಕಾಮಕರ್ಮದ ಪ್ರತಿಪಾದನೆಯನ್ನು ಮಾಡಿರುತ್ತಾರೆ. ಬಸವಣ್ಣನವರ ಕ್ರಿಯಾಯೋಗ ಎಂಬುವ ಪ್ರಕರಣದಲ್ಲಿ ಈ ವಿಷಯದ ವಿವೇಚನೆಯನ್ನು ವಿಸ್ತಾರವಾಗಿ ಮಾಡಲಾಗಿದೆ.

ಯಜ್ಞ ದಾನ ತಪಸ್ಸುಗಳನ್ನು ಮಾಡಬೇಕೆಂದು ಹೇಳಿದ ಮಾತಿಗೆ ಶರಣರ ಒಪ್ಪಿಗೆ ಇದ್ದರೂ ಯಜ್ಞವೆಂದರೆ ಪಶುಗಳನ್ನು ಕೊಂದೇ ಮಾಡಬೇಕೆಂದು ಅರ್ಥ ವಾಗುವದಿಲ್ಲ. ಈ ಮಾರ್ಗವನ್ನು ಶರಣರು ಒಪ್ಪುವದಿಲ್ಲ. ಗೀತೆಯಲ್ಲಿಯೂ ಯಜ್ಞದಲ್ಲಿ ಪಶುಗಳನ್ನು ಕೊಲ್ಲಬೇಕೆಂದು ಹೇಳಿಲ್ಲ. ಯಜ ಧಾತುವಿನಿಂದ ಯಜ್ಞ ವಾಗಿದೆ. ಯಜ ಧಾತುವಿನ ಅರ್ಥ—ಯಜ—ದೇವಪೂಜಾ, ಸಂಗತಿಕರಣ, ದಾನೇಷು. ಯಜ ಧಾತುವಿಗೆ ಮೂರು ಅರ್ಥಗಳಿದ್ದು ಅದರಲ್ಲಿ ಮೊದಲನೆಯ ಅರ್ಥವು ದೇವಪೂಜೆಯೆಂದಿರುತ್ತದೆ. ಯಜ್ಞವೆಂದರೆ ದೇವಪೂಜೆಯೆಂದೇ ಅರ್ಥ ವಾಗುವದು. ಮುಂದೆ ದಾನ ಎಂಬುವ ಪದವೂ ಇರುತ್ತದೆ. ಹೀಗೆ ಸತ್ಕರ್ಮಂ ಗಳನ್ನು ಬಿಡಬಾರದೆಂದು ಹೇಳಿ ಕರ್ಮತ್ಯಾಗವು ಗೀತೆಯಲ್ಲಿ ಮೂರು ವಿಧವಾಗಿ ಕಲ್ಪಿಸಲ್ಪಟ್ಟಿರುತ್ತದೆ. ಕಾಮ್ಯಕರ್ಮಗಳು ಮನುಷ್ಯನಿಗೆ ಬಂಧಕವಾಗುವದರಿಂದ ಅವುಗಳನ್ನು ಬಿಡತಕ್ಕದ್ದು ಯೋಗ್ಯವಾಗಿರುವದು. ನಿತ್ಯಕರ್ಮಗಳು ಅವಶ್ಯ ಮಾಡ ತಕ್ಕವುಗಳಾದುದರಿಂದ ಮೋಹದಿಂದ ಅವುಗಳನ್ನು ಬಿಟ್ಟರೆ ತಾಮಸವೆಂದು ಹೇಳಿಸಿ ಕೊಳ್ಳುವದು. ಈ ಕಾರ್ಯವನ್ನು ಮಾಡುವದು ಕಷ್ಟದಾಯಕವಾದುದೆಂದು ತಿಳಿದುಬಿಟ್ಟದ್ದೇ ಆದರೆ ಅದಕ್ಕೆ ರಾಜಸ ತ್ಯಾಗವೆಂತಲೂ ಹೇಳುವರು. ವೀರಶೈವ ನಾದವನಿಗೆ ನಿತ್ಯಕರ್ಮಗಳಾದ ಶಿವಪೂಜಾದಿಗಳನ್ನು ಬಿಡಲಿಕ್ಕೆ ಬರುವದಿಲ್ಲ; ಬಿಟ್ಟರೆ ಪತಿತನಾಗುವನು.

**ಗೀತಾ—ಅಧ್ಯಾಯ ೧೮, ಶ್ಲೋಕ ೧೧**

**ನಹಿದೇಹಭೃತಾ ಶಕ್ಯಂತ್ಯಕ್ತುಂ ಕರ್ಮಾಣ್ಯ ಶೇಷತಃ ।**
**ಯಸ್ತುಕರ್ಮಫಲತ್ಯಾಗೀ ಸತ್ಯಾಗೀತ್ಯಭಿಧೀಯತೇ ॥**

ಅಂದರೆ ದೇಹವನ್ನು ಧರಿಸಿರುವ ಮನುಷ್ಯನಿಗೆ ಎಲ್ಲ ಕರ್ಮಗಳನ್ನು ಬಿಡಲು ಶಕ್ಯವಿಲ್ಲ. ಶೃತಿಯಲ್ಲಿಯೂ ಕೂಡ—"ನಹಿ ಕಶ್ಚಿತ್ಕ್ಷಣಮಪಿ ಜಾತುತಿಷ್ಠತ್ಯಕರ್ಮಕೃತ್" ಕರ್ಮ ವಿಲ್ಲದೆ ಯಾವಾತನಾದರೂ ಕ್ಷಣಹೊತ್ತು ಇರಲಾರನು. ಯಾವನು ಕರ್ಮಗಳನ್ನು ಮಾಡುತ್ತ ಕರ್ಮಫಲತ್ಯಾಗಿಯೋ ಅವನೇ ಮುಖ್ಯತ್ಯಾಗಿಯೆಂದು ತಿಳಿಯತಕ್ಕದ್ದು. ಕರ್ಮಪ್ರವರ್ತನೆಯು ಜ್ಞಾನ, ಜ್ಞೇಯ, ಪರಿಜ್ಞಾತೃಗಳೆಂಬ ಭೇದದಿಂದ ಮೂರು ಬಗೆ ಯಾಗಿರುವದು: ಕರಣ, ಕರ್ತ, ಕರ್ಮ ಇವುಗಳೇ ಕರ್ಮಕ್ಕೆ ಆಶ್ರಯಗಳಾಗಿರುವವು. ಮುಂದೆ ಜ್ಞಾನದಲ್ಲಿ ಸಾತ್ವಿಕ, ರಾಜಸ, ತಾಮಸವೆಂದು ಮೂರು ಪ್ರಕಾರ ಗೀತೆಯಲ್ಲಿ ಹೇಳಿದೆ.

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಾಗೇಷು ತಜ್ಞಾನಂ ವಿದ್ಧಿಸಾತ್ವಿಕಮ್ ॥**

ಎಲ್ಲ ಪ್ರಾಣಿಗಳಲ್ಲಿಯೂ ಒಬ್ಬನೇ ದೇವನಿದ್ದಾನೆಂದು ಅರ್ಥಾತ್ ವಿಭಾಗಗಳಾದ ಸಕಲ ಪ್ರಾಣಿಗಳಲ್ಲಿಯೂ ಏಕರೂಪನಾದ ದೇವನನ್ನು ಕಾಣುವದು. ಶ್ರೀ ಬಸವಣ್ಣನವರು— "ಯತ್ರ ಜೀವಃ ತತ್ರ ಶಿವಃ" ಎಂದು ಹೇಳಿರುವರು. ಅಂದಮೇಲೆ ಇವರ ಸಾತ್ವಿಕ ಜ್ಞಾನವು ಉಪಮಾತೀತವಾಗಿರುವದು.

೧೭೭

ದಾಸೀಮಾರ್ಯರು—

"ಮಣಿಗಳ ಸೂತ್ರದಂತೆ ತ್ರಿನಯನೇ ನೀನಿಪ್ಪೆಯಯ್ಯ ಎಣಿಸುವಡೆ ತನುಭಿನ್ನ ಆತ್ಮನೊಬ್ಬನೇ ಅಣುರೇಣು ಮಧ್ಯದಲ್ಲಿ ಗುಣಭರಿತ ನೀನೆಂದು ಮಣಿವುತಿರ್ಪೆನಯ್ಯ ರಾಮನಾಥ"

ದಾಸೀಮಾರ್ಯರು—

"ಅಡಗನೊಳಗಣ ಹಾಲು ಅಡಗಿಪ್ಪ ಭೇದವನು ಬೆಡಗಪ್ಪ ತುಪ್ಪದ ಕಂಪಿನ ಪರಿಯಂತೆ ಎಲೆ ಮೃಡನೇ ನೀನು ಪ್ರಾಣಪ್ರಕೃತಿಗಳೊಳಗೆ ಅಡಗಿಹ ಭೇದವ ಲೋಕದ ಜಡರೆತ್ತ ಬಲ್ಲರೈ ರಾಮನಾಥ"

೧೭೮

ಚನ್ನಬಸವಣ್ಣನವರು—

"ಮರೀಚಿಯೊಳಗಣ ಬಿಸಿಲಿನಂತೆ ಇದ್ದಿತ್ತು ಕ್ಷೀರದೊಳಗಣ ತುಪ್ಪದಂತೆ ಇದ್ದಿತ್ತು ಚಿತ್ರಕನೊಳಡಗಿದ ಚಿತ್ರದಂತೆ ಇದ್ದಿತ್ತು ಆಲಯೊಳಡಗಿದ ತೇಜದಂತೆ ಇದ್ದಿತ್ತು ನುಡಿಯೊಳಡಗಿದ ಅರ್ಥದಂತೆ ಇದ್ದಿತ್ತು ಕೂಡಲಚನ್ನಸಂಗಯ್ಯ ನಿಮ್ಮ ನಿಲವು"

ರಾಜಸ ಜ್ಞಾನವೆಂದರೆ ಅಧಿಕಾರಿಯು ಪ್ರತಿ ಶರೀರದಲ್ಲಿಯೂ ಬೇರೆ ಬೇರೆಯಾಗಿರುವ ಜೀವರನ್ನು ಪರಸ್ಪರ ಭೇದಯುಕ್ತರನ್ನಾಗಿಯೂ, ನಾನಾವಿಧ ಲಕ್ಷಣ ಸಂಪನ್ನರನ್ನಾಗಿಯೂ ತಿಳಿಯುವದಕ್ಕೆ ರಾಜಸ ಜ್ಞಾನವೆಂದು ಹೆಸರು.

ಇನ್ನು ತಾಮಸ ಜ್ಞಾನವೆಂದರೆ ಪ್ರಾಣಿಗಳ ಶರೀರವು ಎಷ್ಟು ಪರಿಮಾಣಯುಕ್ತವಾದುದೋ ಜೀವನೂ ಕೂಡ ಆ ದೇಹಕ್ಕೆ ತಕ್ಕಂತೆ ಅದೇ ಪ್ರಮಾಣಯುಕ್ತನಾಗಿ ಆಯಾಯ ದೇಹಗಳಲ್ಲಿ ಕಂಗೊಳಿಸುವನು. ಈ ಮಾತು ಯುಕ್ತಿರಹಿತವಾದುದರಿಂದ ನಿರುಪಪತ್ತಿಕವೆನಿಸಿ ತತ್ವಾರ್ಥ ವಿಷಯರಹಿತವಾಗಿಯೂ, ಅಲ್ಪವೂ, ಅಲ್ಪಫಲವುಳ್ಳದ್ದೂ ಆಗಿರುವದು. ಆದ್ದರಿಂದ ಇದಕ್ಕೆ ತಾಮಸ ಜ್ಞಾನವೆಂದು ಹೆಸರು.

ಈ ಎರಡೂ ತರಹದ ಜ್ಞಾನಗಳನ್ನು ಬಸವಾದಿ ಶರಣರು ಒಪ್ಪಿರುವದಿಲ್ಲವೆಂಬುವದು ಅವರು ಸಾತ್ವಿಕ ಜ್ಞಾನದ ಬಗ್ಗೆ ಹೇಳಿದ ವಚನಗಳೇ ಸಾಕ್ಷಿಯಾಗಿರುತ್ತವೆ. ಕರ್ಮಗಳಲ್ಲಿಯೂ ಸಾತ್ವಿಕ, ರಾಜಸ, ತಾಮಸವೆಂದು ಇರುತ್ತವೆ.

### ಗೀತೆಯ ಸಾತ್ವಿಕ ಕರ್ಮ

ನಿಯತಂ ಸಂಗರಹಿತಂ ಅರಾಗದ್ವೇಷತಃ ಕೃತಂ ।
ಅಫಲಪ್ರೇಪ್ಸುನಾಕರ್ಮ ಯತ್ತತ್ಸಾತ್ವಿಕಮುಚ್ಯತೇ ॥

ಅಂದರೆ ಯಾವಾಗಲೂ ನಿತ್ಯಕರ್ಮಗಳನ್ನು ಕರ್ತೃತ್ವ ಭೋಕ್ತೃತ್ವಗಳಾದ ಅಭಿನಿವೇಶಗಳನ್ನು ಬಿಟ್ಟು ರಾಗ ದ್ವೇಷ ಶೂನ್ಯನೆನಿಸಿ ಅಂದರೆ ಪುತ್ರಾದಿಗಳಲ್ಲಿ ಪ್ರೀತಿ ಶತೃಗಳಲ್ಲಿ ದ್ವೇಷವನ್ನು ಬಿಟ್ಟು ಫಲಾಪೇಕ್ಷೆಯಿಲ್ಲದೆ ಮಾಡುವ ಕರ್ಮಕ್ಕೆ ಸಾತ್ವಿಕವೆಂದು ಹೇಳಬೇಕು.

೧೭೯

ಶ್ರೀ ಬಸವಾದಿ ಪ್ರಮಥ ಪುಂಗವರು ಸಾತ್ವಿಕ ಕರ್ಮಗಳ ವಿಷಯಕ್ಕೆ—

"ಹರಸಿ ಮಾಡುವದು ಹರಕೆಯ ದಂಡ ನೆರಹಿ ಮಾಡುವದು ಡಂಭಿನ ಭಕ್ತಿ ಹರಸಬೇಡ ನೆರಹಬೇಡ ಬಂದ ಬರವನರಿದಡೆ ಕೂಡಿ ಕೊಂಡಿಪ್ಪ ನಮ್ಮ ಕೂಡಲಸಂಗಮದೇವಾ"

೧೮೦

ಷಣ್ಮುಖಸ್ವಾಮಿಗಳು—

"ಫಲಪದದ ಆಶೆ ಮಾಡಲಾಗದು ನಿನ್ನ ಕ್ರಿಯೆಯಲ್ಲಿ ಅದೇನು ಕಾರಣವೆಂದಡೆ ಬಯಕೆಯ ಭಕ್ತಿಯ ಪೂರ್ವ ಪುರಾತನರು ಮೆಚ್ಚರು ನಮ್ಮ ಅಖಂಡೇಶ್ವರದೇವರು ಹಂಗಿನ ಭಕ್ತರನೊಲ್ಲ ನೋಡಾ"

೧೮೧

ಬಸವೇಶ್ವರರು—

"ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ ಮಾಡಿದೆನೆನ್ನದಿರಾಲಿಂಗಕ್ಕೆ ಮಾಡಿದೆನೆನ್ನದಿರಾಜಂಗಮಕ್ಕೆ ಮಾಡಿದೆನೆಂಬುವದು ಮನದಲ್ಲಿ ಇಲ್ಲದಿರ್ದಡೆ ಬೇಡಿದ್ದನೀವ ನಮ್ಮ ಕೂಡಲಸಂಗಮದೇವಾ"

೧೮೨

ಷಣ್ಮುಖಸ್ವಾಮಿಗಳು—

"ಲಿಂಗ ಜಂಗಮಕ್ಕೆ ಮಾಡಿದ ಭಕ್ತಿ ಮನಕ್ಕೆ ಮನಸ್ಸಾಕ್ಷಿಯಾಗಿರ ಬೇಕಲ್ಲದೆ ಇದಿರಿಟ್ಟು ನುಡಿಯಲಾಗದು ಅದೇನು ಕಾರಣವೆಂದರೆ ಬಡವನಿಗೆ ಭಾಗ್ಯ ದೊರಕೊಂಡಂತಿರಬೇಕಲ್ಲದೆ ಎನ್ನ ಪದಾರ್ಥವ ನಾನು ಮಾಡಿದೆನು. ಅವರು ಕೈಕೊಂಡಲೆಂದು ತನ್ನ ಖ್ಯಾತಿಭಕ್ತಿಯನು ಮನಹಿಗ್ಗಿ ಅನ್ಯರೊಡನೆ ಹೇಳಿಕೊಂಡರೆ ಶಿವನೊಪ್ಪುಗೊಳ್ಳನು. ಪುರಾತನರು ಮೆಚ್ಚರು ಅಂತಪ್ಪ ಖ್ಯಾತಿಭಕ್ತಿ ಎಂತಾಯಿತ್ತೆಂದರೆ ಹಾವಸೆಗಲ್ಲ ಮೆಟ್ಟಿ ಜಾರಿಬಿದ್ದು ಕೊಡ ನೊಡದಂತಾಯಿತ್ತು ಕಾಣಾ ಅಖಂಡೇಶ್ವರಾ"

ವೀರಶೈವನಿಗೆ ತ್ರಿಕಾಲದಲ್ಲಿ ಶಿವಾರ್ಚನೆಯೂ ಮುತ್ತು ಜಂಗಮಾರ್ಚನೆಯೂ ನಿತ್ಯಕರ್ಮ ಗಳಾಗಿರುತ್ತವೆ. ಆದ್ದರಿಂದ,

೧೮೩

ಬಸವಣ್ಣನವರು—

"ಹೊತ್ತಾರೆ ಎದ್ದು ಅಗ್ಘವಣಿ ಪತ್ರೆಯ ತಂದು ಹೊತ್ತುಹೋಗದ ಮುನ್ನ ಪೂಜಿಸು ಲಿಂಗವ ಹೊತ್ತುಹೋದಬಳಿಕ ನಿನ್ನನಾರು ಬಲ್ಲರು? ಹೊತ್ತುಹೋಗದ ಮುನ್ನ ಮೃತ್ಯುವೊಯ್ಯದ ಮುನ್ನ ತೊತ್ತುಗೆಲಸವ ಮಾಡು ಕೂಡಲಸಂಗಮದೇವನ"

೧೮೪

"ಸುಪ್ರಭಾತ ಸಮಯದಲ್ಲಿ ಅರ್ತಿಯಲ್ಲಿ ಶಿವಲಿಂಗವ ನೆನೆದರೆ ತಪ್ಪುವುವು ಅಪಮೃತ್ಯು ಕಾಲಕರ್ಮಂಗಳಯ್ಯಾ ದೇವಪೂಜೆಯ ಮಾಟ ದುರಿತ ಬಂಧನದೋಟ ಶಂಭು ನಿಮ್ಮಯ ನೋಟ ಹೆರೆಹಿಂಗದ ಕಣ್ಬೇಟ ಸದಾ ಸನ್ನಿಹಿತನಾಗಿ ಶರಣೆಂಬುವದು ನಂಬುವುದು ಜಂಗಮಾರ್ಚನೆಯ ಮಾಟ ಕೂಡಲಸಂಗಯ್ಯನ ಕೂಟ"

ಫಲಾಪೇಕ್ಷೆಯಿಂದಲೂ, ಅಹಂಕಾರದಿಂದಲೂ ಮಾಡುವ ಕ್ಲೇಶದಾಯಕ ಕರ್ಮಕ್ಕೆ ರಾಜಸವೆಂದು ಹೆಸರು. ಮುಂದೆ ಆಗತಕ್ಕ ಶುಭಾಶುಭವನ್ನು ವಿಚಾರಿಸದೆ ವಿತ್ತವ್ಯಯ ದಿಂದಲೂ, ಹಿಂಸೆಯಿಂದಲೂ, ಸ್ವಸಾಮರ್ಥ್ಯವನ್ನು ವಿಚಾರಮಾಡದೆ ಕೇವಲ ಮೋಹ ದಿಂದಲೂ ಮಾಡುವ ಕರ್ಮಕ್ಕೆ ತಾಮಸವೆಂದು ಹೇಳಬೇಕು.

ಈ ಎರಡೂ ಕಾರ್ಯಗಳನ್ನು ಶಿವಶರಣರು ಬಹಳ ದೂಷಿಸಿರುತ್ತಾರೆ.

೧೮೫

ಸೊಡ್ಡಳಬಾಚರಸರು—

"ಈ ಸತ್ಕ್ರಿಯೆಗೆ ಈ ಫಲ ಈ ಪುಷ್ಪಕ್ಕೀ ಫಲ ಎಂಬ ಕೈಕೂಲಿ ಕಾರರು ಅವರೆಲ್ಲ ಕರ್ಮಿಗಳಯ್ಯಾ ಪುಣ್ಯಪಾಪವನುಂಬ ಕರ್ಮಿಗಳಯ್ಯ ಸ್ವರ್ಗನರಕವನುಂಬ ಕರ್ಮಿಗಳಯ್ಯ ಒಡಲೊಡವೆ ಪಡೆದರ್ಥ ಮೃಡದೇವ ಸೊಡ್ಡಳನಿಗೆಂಬಾತ ಬೆಡಗಿನ ಶಿವಪುತ್ರ ಉಳಿದವರೆಲ್ಲ ಜಗದ ಮಿತ್ರರು"

೧೮೬

ಶ್ರೀ ಬಸವಣ್ಣನವರ ನಿಷ್ಕಾಮಭಕ್ತಿ—

"ತನುವ ಬೇಡಿದಡೀವೆ, ಮನವ ಬೇಡಿದಡೀವೆ, ಧನವ ಬೇಡಿದಡೀವೆ, ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ ನಿಮ್ಮ ಶರಣರಿಗೆ ಎನಗೆ ಬೇಕೆಂಬ ಭಾವ ಮನದಲ್ಲಿ ಹೊಳೆದರೆ ಘನಮಹಿಮ ನಿಮ್ಮ ಶರಣರ ಪಾದದಾಣೆ ಮನವಚನ ಕಾಯದಲ್ಲಿ ನೀವಲ್ಲದೆ ಮತ್ತೊಂದನರಿದಡೆ ಕೂಡಲಸಂಗಮದೇವ ಮತ್ತೆ ಮರಳಿ ಭವವೆಂಬ ಘೋರದಲ್ಲಿಕ್ಕಯ್ಯ"

ತಾಮಸಕರ್ಮವನ್ನು ಶರಣರೆಂದಿಗೂ ಒಪ್ಪುವದಿಲ್ಲ. ಗೀತೆಯಲ್ಲಿ ತ್ರಿವಿಧ ಕರ್ತೃಗಳ ವಿಷಯಕ್ಕೆ—

ಮುಕ್ತಸಂಗೋ ಅನಹಂವಾದಿ ಧೃತ್ಯುತ್ಸಾಹ ಸಮನ್ವಿತಃ ।
ಸಿದ್ಧ್ಯಸಿದ್ಧ್ಯೋ ನಿರ್ವಿಕಾರಃ ಕರ್ತಾ ಸಾತ್ವಿಕ ಉಚ್ಯತೇ ॥

ಅಂದರೆ ನಾನು ಕರ್ತೃವು ಎಂಬುವ ಅಭಿನಿವೇಶಶೂನ್ಯನಾಗಿ ಗರ್ವಯುಕ್ತಗಳಾದ ಮಾತುಗಳನ್ನಾಡದೆ ಸಕಲ ಕಾರ್ಯಗಳಲ್ಲಿಯೂ ಮತ್ತಷ್ಟು ಆಸಕ್ತಿಯನ್ನು ವೃದ್ಧಿ ಗೊಳಿಸುವ ಸಂತೋಷ, ಧೈರ್ಯ, ಉತ್ಸಾಹಗಳಿಂದ ಕೂಡಿ ಕಾರ್ಯ ಕೈಗೂಡಿದರೆ ಹಿಗ್ಗದೆ ಕಾರ್ಯಕೆಟ್ಟರೆ ಕುಗ್ಗದೆ ಯಾವಾಗಲೂ ಸಂತೋಷದಿಂದ ಕಾರ್ಯಮಾಡು ವವನಿಗೆ ಸಾತ್ವಿಕ ಕರ್ತೃವು ಎಂದು ಹೇಳಬೇಕು.

೧೮೭

ಆಯ್ದಕ್ಕಿಮಾರಯ್ಯ—

"ಕಂಗಳ ಮುಂದಣ ಗೊತ್ತುಹರಿಯದು ಕಾಮ್ಯದ ಮುಂದಣ ಚಿತ್ತ ಹರಿಯದು ಮಾಡಿಹೆನೆಂಬ ಮಾಟ ಕೂಟದ ಚಿತ್ತ ನಿಂದಲ್ಲದೆ ಸ್ವಸ್ಥವಿಲ್ಲ ಹಾಗಲ್ಲದೆ ಲಿಂಗವ ಕಾಣಬಾರದು ಆಯ್ದಕ್ಕಿಮಾರಯ್ಯ"

ಇದು ಮುಕ್ತಸಂಗಕ್ಕೆ ಅಂದರೆ ಅಭಿನಿವೇಶ ಅಹಂಕಾರಶೂನ್ಯತೆಗೆ ಉದಾಹರಣೆಯಾಗಿದೆ.

ಅಹಂಕಾರಶೂನ್ಯತೆಗೆ ಬಸವಣ್ಣನವರು—"ಮೃದು ವಚನಂಗಳೇ ಸಕಲ ಜಪಂಗಳಯ್ಯ ಮೃದು ವಚನವೇ ತಪಂಗಳಯ್ಯ" ಎಂಬುವ ಶ್ರೇಷ್ಠವಚನವನ್ನು ಅವರು ಹೇಳಿರುವರು. "ಉರಿಬರಲಿ ಸಿರಿಬರಲಿ ನಾನು ಧೃತಿಗೆಡೆನಯ್ಯ" ಎಂದೆನ್ನುತ್ತಾರೆ. ಮತ್ತು "ನಮಗಿಂದೇ ಮರಣ ಬರಲಿ ಈಗಲೇ ಬಂದರೂ ಅಡ್ಡಿಯಿಲ್ಲ ಇದಕ್ಕೆ ಅಂಜುವದಿಲ್ಲ ಅಳುಕುವದಿಲ್ಲ" ವೆಂದು ಹೇಳುವ ಧೈರ್ಯವು ಬರುವದು ಎಲ್ಲರಿಗೂ ಶಕ್ಯವಾದುದಲ್ಲ.

೧೮೮

"ನೀನಿರಿಸಿದ ಮನದಲ್ಲಿ ನಾನಂಜೆನಯ್ಯಾ ಮನವು ಮಹಾಘನಕ್ಕೆ ಶರಣಾಗತಿವೊಕ್ಕುದಾಗಿ ನೀನಿರಿಸಿದ ಧನದಲ್ಲಿ ನಾನಂಜೆನಯ್ಯ ಧನವು ಸತಿ ಸುತ ಮಾತಾಪಿತರಿಗೆ ಹೋಗದಾಗಿ ನೀನಿರಿಸಿದ ತನುವಿನಲ್ಲಿ ನಾನಂಜೆನಯ್ಯ ತನುವು ಸರ್ವಾರ್ಪಿತದಲ್ಲಿ ನಿಯತಪ್ರಸಾದ ಭೋಗಿಯಾಗಿ ಇದು ಕಾರಣ ವೀರಧೀರ ಸಮುಗ್ರಾಹಕನಾಗಿ ನಿಮಗಾನಂಜೆ, ಕೂಡಲಸಂಗಮದೇವಾ"

ಈ ವಚನದಲ್ಲಿ ಧೃತಿ, ಉತ್ಸಾಹ, ಫಲಾಪೇಕ್ಷೆ ಶೂನ್ಯತೆ ಮೊದಲಾದ ಗುಣಗಳು ಚನ್ನಾಗಿ ಅಡಕವಾಗಿರುತ್ತವೆ. ಮತ್ತು ಬೇರೆ ಬೇರೆ ವಚನಗಳಲ್ಲಿ "ಅಹಂಕಾರವೆಂಬ ಮದಗಜವನೇರಿ ವಿಧಿಗೆ ಗುರಿಯಾಗಿ ನೀವು ಹೋದಿರಲ್ಲ" ಆರಂಭಮಾಡುವೆನಯ್ಯಾ ಗುರುಪೂಜೆಗೆಂದು "ಹೊತ್ತಾರೆ ಎದ್ದು ಕಣ್ಣು ಹೊಸೆಯುತ್ತ–ನನ್ನ ಮಡದಿಮಕ್ಕಳಿಗೆ ಕುದಿಯುವದಿಲ್ಲ" ಮೊದಲಾದ ಮಾತುಗಳನ್ನು ಹೇಳಿರುತ್ತಾರೆ. ಕಾರ್ಯವನ್ನು ಮಾಡುವ ಕಾಲಕ್ಕೆ ಹೆದರಬಾರದೆಂಬುವ ಬಗ್ಗೆ—

೧೮೯

ದೇವರದಾಸೀಮಾರ್ಯರು—

"ಹರ ತನ್ನ ಭಕ್ತರ ತಿರಿವಂತೆ ಮಾಡುವ, ಒರೆದು ನೋಡುವ ಸುವರ್ಣದ ಚಿನ್ನದಂತೆ, ಅರೆದು ನೋಡುವ ಚಂದನದಂತೆ, ಅರಿದು ನೋಡುವ ಕಬ್ಬಿನ ಕೋಲಿನಂತೆ, ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದು ಎತ್ತಿಕೊಂಬ ನಮ್ಮ ರಾಮನಾಥನು"

೧೯೦

ಅಹಂಕಾರವನ್ನು ಜರೆದು ಬಸವಣ್ಣನವರು—

"ಶೆಟ್ಟಿ ಎಂಬೆನೆ ಶಿರಿಯಾಳನ? ಮಡಿವಾಳಯ್ಯನೆಂಬೆನೆ ಮಾಚಯ್ಯನ? ಡೋಹರನೆಂಬೆನೆ ಕಕ್ಕಯ್ಯನ? ಮಾದರನೆಂಬೆನೆ ಚನ್ನಯ್ಯನ? ಆನು ಹಾರುವನೆಂಪಡೆ ಕೂಡಲಸಂಗಯ್ಯ ನಗುವನಯ್ಯಾ"

೧೯೧

ಸಕಲೇಶಮಾದರಸ—

"ಬಲೀಂದ್ರನ ಸಿರಿಯಿಂದಧಿಕರ ನಾನಾರನೂ ಕಾಣೆ, ಅಂತಹ ಸಂಪತ್ತು ಮೂರಡಿಗೈದಡೆ ಹೋಯಿತ್ತು ಕೆಡುವಂತಿದ್ದಿತೇ ಕೌರವನ ರಾಜ್ಯ? ಮಡಿವಂತಿದ್ದಿತೇ ರಾವಣನ ಬಲ್ಲಾಳಿಕೆ? ಪರಸ್ತ್ರೀ ಲಕ್ಷ್ಮೀದೇವಿಗೊಲಿದು ಒಂದು ನಿಮಿಷದಲ್ಲಿ ಮಡಿದ ಇದು ಸತ್ಯ ಇದು ಸತ್ಯ ಸಿರಿ ಸೌಕರ್ಯ ವೆಂಬುದು ಆಕಾಶರಚನೆ, ಇದನರಿದು ದೇಹದಿಚ್ಛೆಯನತಿಗಳೆದು ನಮ್ಮ ಸಕಲೇಶದೇವರಿಗೋತು ನಾನೆಂಬ ಭ್ರಮೆಯನಳಿಯಾ ಮರುಳೇ"

ಇನ್ನು ರಾಜಸ ಮತ್ತು ತಾಮಸ ಕಾರ್ಯಗಳನ್ನು ಮಾಡುವ ಅಧಿಕಾರಿಯ ಗುಣ ಗಳನ್ನು ವಿವರಿಸುತ್ತಾನೆ. ಪುತ್ರಾದಿಗಳಲ್ಲಿ ಪ್ರೀತಿಯುಳ್ಳವನಾಗಿಯೂ, ಕರ್ಮ ಫಲ ವನ್ನಪೇಕ್ಷಿಸುವನಾಗಿಯೂ, ಪರದ್ರವ್ಯಾಪಹರಣದಲ್ಲಿ ಮನಸ್ಸುಳ್ಳವನಾಗಿಯೂ, ಹಿಂಸೆ ಯನ್ನು ಮಾಡುವನಾಗಿಯೂ, ಬಾಹ್ಯಾಭ್ಯಂತರ ಶೌಚಶೂನ್ಯನಾಗಿಯೂ, ಲಾಭ ವಾದರೆ ಹರ್ಷವುಳ್ಳವನಾಗಿಯೂ, ಅಲಾಭದಲ್ಲಿ ದುಃಖಿಯಾಗಿಯೂ ಇರತಕ್ಕವನು ರಾಜಸ ಕರ್ತೃವೆಂದೆನ್ನಿಸಿಕೊಳ್ಳುತ್ತಾನೆ. ಯೋಗ್ಯನಾಗದೆ ಇರುವಿಕೆ, ವಿವೇಕಶೂನ್ಯ, ನಮ್ರತೆ ಇಲ್ಲದಿರುವವನು, ದುಷ್ಟ, ಎರಡನೆಯವರಿಗೆ ಅವಮಾನ ಮಾಡತಕ್ಕವನು. ಉದ್ಯೋಗರಹಿತ, ಶೋಕಶೀಲ, ಇಂದು ಮಾಡತಕ್ಕ ಕೆಲಸವನ್ನು ಒಂದು ತಿಂಗ ಳಾದರೂ ಮಾಡದಿರುವಿಕೆ ಇಂಥವನಿಗೆ ತಾಮಸ ಕರ್ತೃವೆಂದು ಹೇಳಬೇಕು. ಇವರಿಬ್ಬರ ಗುಣಗಳನ್ನು ಶರಣರು ಅನಂತ ವಚನಗಳಿಂದ ಖಂಡಿಸಿರುತ್ತಾರೆ.

ಬುದ್ಧಿತ್ರಯ—ಸಾತ್ವಿಕೀ ಬುದ್ಧಿ–ಧರ್ಮದಲ್ಲಿ ಪ್ರವೃತ್ತಿ ಅಧರ್ಮದಲ್ಲಿ ಅಪ್ರವೃತ್ತಿ ಕಾರ್ಯಾಕಾರ್ಯಗಳ ಮತ್ತು ಭಯಾಭಯಗಳನ್ನು ವಿಚಾರಮಾಡುವಿಕೆ, ಬಂಧ ಮೋಕ್ಷಗಳ ಪರಿಶೀಲನೆಮಾಡುವಿಕೆ ಇವುಗಳಿಗೆ ಸಾತ್ವಿಕ ಬುದ್ಧಿಯೆಂದು ಹೆಸರು. ರಾಜಸೀ—ಧರ್ಮವನ್ನು ಅಧರ್ಮವನ್ನಾಗಿಯೂ, ಕಾರ್ಯವನ್ನು ಅಕಾರ್ಯವನ್ನಾಗಿ ಮತ್ತು ಸಂದೇಹಾಸ್ಪದವಾಗಿಯೂ ತಿಳಿಯುವ ಬುದ್ಧಿಗೆ ರಾಜಸವೆಂದು ಹೆಸರು. ತಾಮಸೀ —ಅಧರ್ಮವನ್ನು ಧರ್ಮವನ್ನಾಗಿಯೂ, ಮತ್ತು ಎಲ್ಲ ವಿಷಯಗಳಿಗೂ ವಿಪರೀತವಾದ ಅರ್ಥವನ್ನು ಮಾಡುವ ಬುದ್ಧಿಗೆ ತಾಮಸ ಬುದ್ಧಿಯೆಂದು ಹೆಸರು.

ಧೃತಿತ್ರಯ—ಸಾತ್ವಿಕ ಧೃತಿ—ಮನುಷ್ಯನು ಚಿತ್ತೈಕಾಗ್ರತೆಯನ್ನು ಹೊಂದಿ ನಿರಂತರವೂ ಯೋಗಸಮಾಧಿಯನ್ನಗಲದೆ ಸ್ಥಿರವಾದ ಧೈರ್ಯದಿಂದ ಕೂಡಿಕೊಂಡು ಮನಸ್ಸು, ಪ್ರಾಣ, ಇಂದ್ರಿಯಗಳ ವ್ಯಾಪಾರ ನಿರೋಧವನ್ನು ಮಾಡಿ ಕೇವಲ ಆತ್ಮ ಪುತ್ತು ಮನದಲ್ಲಿಯೇ ತತ್ಪರವಾಗಿರುತ್ತದೆಯೋ ಅದಕ್ಕೆ ಸಾತ್ವಿಕ ಧೃತಿಯೆಂದು ಹೆಸರು. ಹೀಗೆಯೇ ಇನ್ನೂ ಕೆಲವು ವಿಷಯಗಳನ್ನು ಈ ಅಧ್ಯಾಯದಲ್ಲಿ ಹೇಳುತ್ತ—

"ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ"

ಎಲೌ ಅರ್ಜುನನೇ ಈಶ್ವರನು ಎಲ್ಲ ಪ್ರಾಣಿಗಳ ಹೃದಯದಲ್ಲಿರುತ್ತಾನೆ.

**ಶ್ವೇತಾಶ್ವತರೋಪನಿಷತ್**

ಏಕೋದೇವಃ ಸರ್ವಭೂತೇಷುಗೂಢಃ ಸರ್ವವ್ಯಾಪಿ ಸರ್ವಭೂತಾಂತರಾತ್ಮಾ ।
ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀಚೇತಾ ಕೇವಲೋನಿರ್ಗುಣಶ್ಚ ॥

ಎಂದು ಹೇಳಲಾಗಿದೆ. ಅಂದರೆ ಒಬ್ಬನೇ ದೇವರು; ಎಲ್ಲರ ಹೃದಯದಲ್ಲಿ ಗೂಢವಾಗಿ ವಾಸಿಸಿರುತ್ತಾನೆ. ಈ ವಿಷಯವನ್ನು ಉಪನಿಷತ್ತುಗಳೂ—ಬಸವಣ್ಣನವರೂ ಎಂಬುವ ಪ್ರಕರಣದಲ್ಲಿ ವಿಸ್ತಾರವಾಗಿ ವರ್ಣಿಸಲಾಗಿರುತ್ತದೆ. ಮೇಲಿನ ಗೀತಾವಾಕ್ಯಕ್ಕೆ ಸರಿಯಾಗಿ ಶರಣರಲ್ಲಿ ಅನೇಕರು ಪರಮಾತ್ಮನು ಸತ್ಪುರುಷರ ಹೃದಯದಲ್ಲಿ ವಾಸವಾಗಿರುತ್ತಾನೆಂದು ಹೇಳಿರುತ್ತಾರೆ. ಇಲ್ಲಿ ಒಂದು ವಚನ ಮಾತ್ರ ಕೊಡುತ್ತೇವೆ.

೧೯೨

"ಸಕಲ ವಿಸ್ತಾರದ ರೂಹು ನಿಮ್ಮೊಳಡಗಿರ್ಪುದು, ನೀವು ಎನ್ನ ಮನದಲ್ಲಿ ಅಡಗಿರ್ಪಿರಿ, ಅದೆಂತೆಂದೊಡೆ ಕರಿ ಕನ್ನಡಿಯೊಳಡಗಿರ್ಪಂತೆ ನೀನು ಭಕ್ತಜನಮನೋವಲ್ಲಭನಾದಕಾರಣ ಎನ್ನ ಮನದ ಕೊನೆಯಲ್ಲಿ ಅಡಗಿರ್ಪೆಯಯ್ಯಾ ಅಖಂಡೇಶ್ವರಾ"

ಗೀತೆಯಲ್ಲಿಯೂ ಸರ್ವಾರ್ಪಣಾಭಾವವನ್ನು ಕೆಳಗಿನ ಶ್ಲೋಕಗಳು ತಿಳಿಸುತ್ತವೆ—

ತಮೇವ ಶರಣಂಗಚ್ಛ ಸರ್ವಭಾವೇನ ಭಾರತ ।
ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ॥
ಮನ್ಮನಾಭವಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಸತ್ಯಂತೇ ಪ್ರತಿಜಾನೇ ಪ್ರಿಯೋಸಿಮೇ ॥
ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ ।
ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥

ಅತಿಗಂಭೀರವಾದ ಈ ಗೀತಾ ಶಾಸ್ತ್ರವನ್ನು ಸಂಪೂರ್ಣವಾಗಿ ಓದಲು ಅಶಕ್ತರಾದವರು ಗೀತೆಯ ಸಾರವಾದ ಈ ಮೂರು ಶ್ಲೋಕಗಳನ್ನಾದರೂ ಓದಬೇಕು. ಅರ್ಥಾತ್ ಈ ಮೂರು ಶ್ಲೋಕಗಳು ಗೀತೆಯ ಮುಖ್ಯ ತತ್ವವನ್ನು ಬೋಧಿಸತಕ್ಕವುಗಳಾಗಿರುತ್ತವೆ. ಹೀಗೆ ಸಕಲ ಪ್ರಾಣಿಗಳೂ ಕೂಡ ಆ ಪರಮಾತ್ಮನ ಶಕ್ತಿಗೆ ಒಳಪಟ್ಟಿರುವ ಕಾರಣ ಈ ಲೋಕದಲ್ಲಿ ಆತನನ್ನು ಬಿಟ್ಟು ಬೇರೆ ಯಾರೂ ಸ್ವತಂತ್ರರಿರುವದಿಲ್ಲ. ಆದುದರಿಂದ ಇಂತಹ ಪಾರತಂತ್ರ್ಯವನ್ನು ನೀಗಿಕೊಂಡು ಸ್ವತಂತ್ರರಾಗಬೇಕಾದರೆ ಸಕಲ ಪ್ರಾಣಿಗಳಿಗೂ ಆಶ್ರಯಭೂತನೆನಿಸಿದವನೂ, ಸರ್ವಾಂತರ್ಯಾಮಿಯೂ, ಸಕಲಶಕ್ತಿ ಪರಿಪೂರ್ಣನೂ, ನಿರ್ವಿಕಾರನೂ ಎನಿಸಿದ ಮತ್ತು ಸರ್ವಗುಣಗಳಿಂದ ಅಲಂಕೃತನಾದ ಆ ಪರಮಾತ್ಮನನ್ನೇ ಸರ್ವಭಾವನೆಯಿಂದಲೂ ಮರೆಹೋಗಬೇಕು. ಹೀಗೆ ನೀನು ಮರೆಹೊಕ್ಕರೆ ಆತನು ನಿನಗೆ ಅನುಗ್ರಹಮಾಡುವನು. ಆಮೇಲೆ ಶ್ರೇಷ್ಠವಾದ ಶಾಂತಿಯನ್ನು ಪಡೆದು ಸರ್ವದಾ ಆನಂದಸ್ವರೂಪನಾಗಿರುವಕಾರಣ ಎಂದಿಗೂ ನಾಶವಾಗದ ಆ ಪರಮಾತ್ಮನ ಸ್ಥಾನವನ್ನೇ ನೀನು ಪಡೆಯುವಿ. "ಬ್ರಹ್ಮವಿದ್ಬ್ರಹ್ಮೈವ ಭವತಿ" ಎಂಬುವ ವೇದಪ್ರಮಾಣದಂತೆ ನೀನೂ ಆ ಪರಮಾತ್ಮನೇ ಆಗುವಿ. ನಿರಂತರದಲ್ಲಿಯೂ ನನ್ನಲ್ಲಿಯೇ ಮನಸ್ಸನ್ನಿಟ್ಟು ಸರ್ವದಾ ನನ್ನನ್ನೇ ಧ್ಯಾನಿಸು. ನನ್ನಲ್ಲಿಯೇ ದೃಢವಾದ ಭಕ್ತಿಯನ್ನಿರಿಸು. ನೀನುಮಾಡಿದ ಕರ್ಮದ ಫಲವನ್ನೂ ಕೂಡ ನನಗೇ ಅರ್ಪಿಸು. ನನಗೋಸ್ಕರ ಯಜ್ಞಯಾಗಾದಿಗಳನ್ನು ಮಾಡು. ನನಗಿಂತ ಬೇರೆ ವಸ್ತುವಿಲ್ಲವೆಂದು ತಿಳಿದು ನನ್ನನ್ನೇ ನಮಸ್ಕರಿಸು. ಸರ್ವವೂ ನಾನೇ ಎಂದು ತಿಳಿದು ಆಚರಿಸು, ಮನುಷ್ಯನು ಯಾವ ದೇವರನ್ನು

ಪೂಜಿಸುತ್ತಾನೆಯೋ ಅವನು ಆ ದೇವರ ಸ್ವರೂಪವನ್ನು ಹೊಂದುತ್ತಾನೆ. ನೀನೂ ಕಡೆಗೆ ನನ್ನನ್ನೇ ಹೊಂದಿ ನನ್ನ ಸ್ವರೂಪವನ್ನು ಪಡೆಯುವಿ. ನಾನು ನಿನಗೆ ಸುಳ್ಳನ್ನು ಹೇಳದೆ ಸತ್ಯವಾಗಿ ಹೇಳುತ್ತೇನೆ. ನೀನು ನನಗೆ ಅತ್ಯಂತಪ್ರಿಯಕರನಾಗಿರುವಿ. ಎಲ್ಲ ಧರ್ಮಗಳನ್ನು ಬಿಟ್ಟು ನನ್ನನ್ನೇ ಶರಣಾಗತನಾಗು. ನಾನು ನಿನ್ನನ್ನು ಎಲ್ಲ ಪಾಪಗಳಿಂದ ಮುಕ್ತನನ್ನುಮಾಡಿ ನಿನಗೆ ಮೋಕ್ಷವನ್ನು ಕೊಡುವೆನು.

ಶರಣರು ಈ ಸರ್ವಾರ್ಪಣಾಭಾವವನ್ನು ಗೀತೆಗಿಂತಲೂ ಚನ್ನಾಗಿ ವರ್ಣಿಸಿರುತ್ತಾರೆ. ಈ ಸರ್ವಾರ್ಪಣಾಭಾವವೇ ಮುಂದೆ ಲಿಂಗಾಂಗ ಸಾಮರಸ್ಯವಾಗಿ ಪರಿಣಮಿಸುತ್ತದೆ. ಇದಕ್ಕೆ ಜೀವ-ಪರಮರ ಐಕ್ಯವೆಂತಲೂ ಹೇಳುವರು. ಈ ವಿಷಯವು ಬಹಳ ಮಹತ್ವದ್ದಾಗಿರುತ್ತದೆ.

೧೯೩

ಶ್ರೀ ಬಸವಣ್ಣನವರು—

"ದಶದಿಕ್ಕು ಧರೆ, ಗಗನವೆಂಬುದ ನಾನರಿಯೆನಯ್ಯಾ 'ಲಿಂಗ ಮಧ್ಯೇ ಜಗತ್ಸರ್ವಂ' ಎಂಬುದ ನಾನರಿಯೆನಯ್ಯಾ, ಲಿಂಗಸೋಂಕಿನ ಸುಖದೊಳಗೆ ಕೂಡಲಸಂಗಮದೇವಯ್ಯ ಅಂಬುಧಿಯೊಳಗೆ ಬಿದ್ದ ಆಲಿಕಲ್ಲಿನಂತೆ ಭಿನ್ನಭಾವ ವರಿಯದೆ ಶಿವಶಿವ ಎನುತ್ತಿದ್ದೆ ನಾನು"

ಮೇಲೆ ಹೇಳಿದ ಗೀತೆಯ ಮೂರು ಶ್ಲೋಕಗಳು ಇದನ್ನೇ ಬೋಧಿಸುತ್ತವೆ. ಶ್ರೀ ಕೃಷ್ಣನು ಅರ್ಜುನನಿಗೆ ನನ್ನನ್ನೇ ಹೊಂದು ಬೇರೆ ಏನೂ ತಿಳಿಯಬೇಡ; ಹಾಗಾದರೆ ನನ್ನ ಸ್ವರೂಪವನ್ನು ಹೊಂದುವಿ. ಎಂದು ಹೇಳಿದಂತೆ ಬಸವಣ್ಣನವರು—ಸಾಗರದೊಳಗೆ ಬಿದ್ದ ಆಣೆಯಕಲ್ಲು ಹೇಗೆ ಕರಗಿ ಕೊನೆಯಲ್ಲಿ ಸಮುದ್ರದ ಸ್ವರೂಪವನ್ನು ಹೊಂದುತ್ತದೆಯೋ ಅರ್ಥಾತ್ ಸಾಗರದ ನೀರಿನ ಕೂಡ ತಾದಾತ್ಮ್ಯವನ್ನು ಹೊಂದುವಂತೆ ನಾನು ಶಿವನಲ್ಲಿ ಭಿನ್ನಭೇದವನ್ನು ತಿಳಿಯದೆ ಆ ಶಿವನಲ್ಲಿ ಕೂಡುವೆನೆಂದು ಹೇಳುವ ಬಸವಣ್ಣನವರ ವಚನವು ಅನರ್ಘ್ಯರತ್ನದಂತಿರುತ್ತದೆ. ಈ ವಚನವು ಭಗವದ್ಗೀತೆಯ ಸಾರವಾಗಿರುತ್ತದೆಂದು ಪ್ರಾಜ್ಞರೆಲ್ಲರೂ ಒಪ್ಪದಿರಲಾರರು.

೧೯೪

"ಏನೆಂಬೆನೇನೆಂಬೆ ಒಂದೆರಡಾದುದ? ಏನೆಂಬೆನೇನೆಂಬೆ ಎರಡೊಂದಾದುದ? ಏನೆಂಬೆನೇನೆಂಬೆನವಿರಳಘನವ ಮಹದಾನಿ ಕೂಡಲಸಂಗಮದೇವಯ್ಯ ತಾನೇ ಬಲ್ಲ?"

ಇದು ವೀರಶೈವ ತತ್ವದ ಭೇದಾಭೇದವನ್ನು ಹೇಳುತ್ತದೆ. ಮತ್ತು ಐಕ್ಯವನ್ನು ಬೋಧಿಸತಕ್ಕ ವಚನವಾಗಿರುತ್ತದೆ. ಮತ್ತು—

೧೯೫

"ಸ್ವಯಲಿಂಗದನುಭಾವ ತನಗೆ ದೊರೆಕೊಂಡ ಬಳಿಕ ದೇವಲೋಕವೆಂಬುವದೇನೋ, ಮರ್ತ್ಯಲೋಕವೆಂಬುವದೇನೋ ಆವುದರಲ್ಲಿಯೂ ಭೇದವೇನಯ್ಯಾ? ಕೂಡಲಸಂಗಮದೇವ ಬಳಿಕ ಆಲಸ್ಯವುಂಟೆ?

ದೇವರಲ್ಲಿ ಸುಮರಸವಾದಬಳಿಕ ಆ ಲೋಕ ಈ ಲೋಕವೆಂಬುದಿಲ್ಲ; ಲಿಂಗದೊಳಗೆ ಬೆರತವನು ಲಿಂಗಸ್ವರೂಪನೇ ಆಗುವನು.

೧೯೬

ಸ್ವತಂತ್ರಸಿದ್ಧಲಿಂಗೇಶ್ವರ—

"ಆತ್ಮ ಪರಮಾತ್ಮಯೋಗವನರಿದೆನೆಂಬುವ ಮಾತಿನ ಮೊದಲು ಜ್ಯೋತಿಯೊಳಗೆ ಆತ್ಮಜ್ಯೋತಿಯನರಿದು ಮಾತಿನೊಳಗಣ ಪರಮಾತ್ಮನನರಿದಂಗಲ್ಲದೆ ಆತ್ಮ ಪರಮಾತ್ಮಯೋಗವನರಿಯಬಾರದು ಆತ್ಮ ಪರಮಾತ್ಮಯೋಗವನರಿದಂಗಲ್ಲದೆ ಅರಿವೆಮರವೆಗಳು ನಷ್ಟವಾಗವು. ಅರಿವುಮರವೆಗಳು ನಷ್ಟವಾದಲ್ಲದೆ ಮಾಯೆ ಹಿಂಗದು ಮಾಯೆ ಹಿಂಗಿದಲ್ಲದೆ ಹಮ್ಮು ನಷ್ಟವಾಗದು ಹಮ್ಮು ನಷ್ಟವಾದಲ್ಲದೆ ಮಾಯೆ ಹಿಂಗದು ಮಾಯೆ ಹಿಂಗಿದಲ್ಲದೆ ಹಮ್ಮು ನಷ್ಟವಾದಲ್ಲದೆ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನಲ್ಲಿ ಅದೇ ಜೀವ ಪರವೈಕ್ಯವು"

ಐಕ್ಯವಾಗುವದು ಹೇಗೆಂಬುವದನ್ನು ತಿಳಿದುಕೊಂಡು ಅಹಂಕಾರವನ್ನು ನಾಶಮಾಡಿದರೆ ಜೀವ ಶಿವೈಕ್ಯವು ಸಾಧಿಸಬಲ್ಲುದು. ಗೀತೆಯಲ್ಲಿಯೂ ಮೊದಲು ಸಾತ್ವಿಕ ಕರ್ತೃವಿನ ಗುಣಗಳನ್ನು ಹೇಳಿ ಅದರಂತೆ ನಡೆದುಕೊಂಡು ಕೇವಲ ಭಕ್ತಿಯಿಂದ ನನ್ನನ್ನು ಹೊಂದಬೇಕೆಂದು ಅರ್ಜುನನಿಗೆ ಬೋಧಿಸಿರುತ್ತಾನೆ. ಈ ವಚನದಲ್ಲಿ ಅವನು ಐಕ್ಯವನ್ನು ಹೊಂದಿದರೆ ಸಾಕ್ಷಾತ್ ದೇವನಾಗುತ್ತಾನೆಂಬುದು ಮೊದಲನೆಯ ಮೆಟ್ಟಲಾಗಿದೆ.

೧೯೭

ಚನ್ನಬಸವೇಶ್ವರ—

"ತನು ನಿಮ್ಮನಪ್ಪಿ ಮಹಾತನುವಾದಬಳಿಕ ತನುವೆಂಬುವದು ಮತ್ತೆಲ್ಲಿಯದು? ಮನ ನಿಮ್ಮನಪ್ಪಿ ಘನಮನವಾದಬಳಿಕ ಮನವೆಂಬುವದು ಮತ್ತೆಲ್ಲಿಯದು? ಭಾವ ನಿಮ್ಮನಪ್ಪಿ ನಿರ್ಭಾವವಾದಬಳಿಕ ಭಾವವೆಂಬುವದು ಮತ್ತೆಲ್ಲಿಯದು? ಇಂತೀತ್ರಿವಿಧವು ಲಿಂಗದಲ್ಲಿ ನಿರ್ಲೇಪವಾಗಿ ವೈದೋರದಿರುವ ಕೂಡಲಚನ್ನಸಂಗಯ್ಯ ತಾನೇ ಬಲ್ಲ"

೧೯೮

ಆದಯ್ಯನವರು—

"ಹರಣವಿದ್ದು ಹರಣವಿಲ್ಲ ಹರಣ ಲಿಂಗದಲ್ಲಿ ನಿರಿಯಾಣವಾಯಿತ್ತಾಗಿ ಮನವಿದ್ದು ಮನವಿಲ್ಲ ಮನವು ಮಹದಲ್ಲಿ ಲೀಯವನೆಯ್ದಿತ್ತಾಗಿ ಜೀವವಿದ್ದು ಜೀವವಿಲ್ಲ ಜೀವವು ಸಜೀವವಾಯಿತ್ತಾಗಿ ಕರಣಂಗಳಿದ್ದು ಕರಣಂಗಳಿಲ್ಲ ಲಿಂಗಕರಣಂಗಳಾಗಿ ಇಂತೀಸರ್ವವೂ ಇದ್ದು ಸರ್ವವೂ ಇಲ್ಲ ಇದುಕಾರಣ ಸೌರಾಷ್ಟ್ರ ಸೋಮೇಶ್ವರಾ ನಿಜಶರಣರು ಉಂಡು ಉಪವಾಸಿಗಳು ಬಳಸಿ ಬ್ರಹ್ಮಚಾರಿಗಳು"

೧೯೯

ಉರಿಲಿಂಗಪೆದ್ದಿಗಳು—

"ನಲ್ಲನ ರೂಪೆನ್ನ ನೇತ್ರವ ತುಂಬಿತ್ತು ನಲ್ಲನ ನುಡಿಯೆನ್ನ ಶ್ರೋತ್ರವ ತುಂಬಿತ್ತು ನಲ್ಲನ ಸುಗಂಧವೆನ್ನ ಘ್ರಾಣವ ತುಂಬಿತ್ತು. ನಲ್ಲನ ಚುಂಬನ ವೆನ್ನ ಜಿಹ್ವೆಯ ತುಂಬಿತ್ತು ನಲ್ಲನಾಲಿಂಗನವೆನ್ನ ಸರ್ವಾಂಗವ ತುಂಬಿತ್ತು ನಲ್ಲನ ಅಂತರಂಗ ಬಹಿರಂಗದಲ್ಲಿ ಕೂಡಿ ಸುಖಿಯಾದೆ ಉರಿಲಿಂಗದೇವಾ"

೨೦೦

ಸ್ವತಂತ್ರಸಿದ್ಧಲಿಂಗೇಶ್ವರ—

"ಅಯ್ಯಾ ನಿಮಗೆ ಪತ್ರಪುಷ್ಪದಲ್ಲಿ ಪೂಜೆಯ ಮಾಡುತ್ತಿದ್ದರೇನು? ಸರ್ವೇಂದ್ರಿಯಂಗಳು ಸೋಂಕಿದವೆಲ್ಲ ನಿಮ್ಮ ಪೂಜೆಯಾಗಿ ಮಾಡದನ್ನಕ್ಕರ? ಅಯ್ಯಾ ನಿಮ್ಮ ನೆನವುತ್ತಿದ್ದರೇನು? ನೆನೆವ ಮನದಲ್ಲಿ ನಿಮ್ಮ ನೆಲೆಗೊಳಿಸಿ ಮನ ನಿಮ್ಮಲ್ಲಿ ಲೀಯವಾಗದನ್ನಕ್ಕರ? ಅಯ್ಯಾ ನಿಮಗೆ ಸಕಲ ಸುಯಿ ಧಾನವನರ್ಪಿಸುತ್ತಿದ್ದರೇನು? ಅರ್ಪಣದೊಳಗೆ ತನ್ನ ನಿಮ್ಮಲ್ಲಿ ಅರ್ಪಿಸಿ ನಿಮ್ಮೊಳಗಾಗದನ್ನಕ್ಕರ? ಅದುಕಾರಣ ತನುಗುಣವಿಡಿದು ಲಿಂಗವ ಮುಟ್ಟಿ ಪೂಜೆಯ ಮಾಡಿದವರೆಲ್ಲ ನಿಮಗೆ ಮುನ್ನವೇ ದೂರಾದರು ನಾನಿದನರಿದು ಅವಿರಳಲಿಂಗಾರ್ಚನೆಯ ಮಾಡಿ ನಿಮ್ಮೊಳಗಾದೆನಯ್ಯ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ"

೨೦೧

ಬಸವಣ್ಣನವರು—

"ಅನ್ಯವಿಚಾರವ ಮರೆದು ನಿಮ್ಮ ವಿಚಾರ ಎಡೆಗೊಂಡಿತ್ತಾಗಿ ಪ್ರಾಣದ ನೆಲೆಗಟ್ಟಿತ್ತಯ್ಯ ದಶವಾಯುಗಳ ಸಂಚು ತಪ್ಪಿತ್ತಯ್ಯ ಕರಣಂಗಳ ಲಿಂಗದ ಕಿರಣಂಗಳು ನುಂಗಿದವಯ್ಯ ಒಳಗೆ ಕರತಳಾಮಳೋಕ್ಯಗೊಂಡೆ ನಯ್ಯ ಹೊರಗನೆಂದರಿಯದೆ ನೀನೇ ಗತಿಯೆಂದಿರ್ದೆ ಕೂಡಲಸಂಗಮ ದೇವಾ"

೨೦೨

"ತನು ನಿಮ್ಮದೆಂದಬಳಿಕ ಎನಗೆ ಬೇರೆ ತನುವಿಲ್ಲ ಮನ ನಿಮ್ಮದೆಂದ ಬಳಿಕ ಎನಗೆ ಬೇರೆ ಮನವಿಲ್ಲ ಧನ ನಿಮ್ಮದೆಂದಬಳಿಕ ಎನಗೆ ಬೇರೆ ಧನವಿಲ್ಲ ಇಂತೀತ್ರಿವಿಧವೂ ನಿಮ್ಮದೆಂದಬಳಿಕ ಎನಗೆ ಬೇರೆ ವಿಚಾರವುಂಟೆ? ಕೂಡಲ ಸಂಗಮದೇವಾ"

೨೦೩

ಪ್ರಭುದೇವರು—

"ಕರಣಾದಿಗುಣಂಗಳಳಿದು ನವಚಕ್ರಂಗಳು ಭಿನ್ನವಾದಬಳಿಕ ಇನ್ನೇನೋ ಇನ್ನೇನೋ ಸ್ವರ್ಗವಿಲ್ಲ ನರಕವಿಲ್ಲ ಇನ್ನೇನೋ ಇನ್ನೇನೋ ಗುಹೇಶ್ವರಲಿಂಗವೇಧಿಸಿ ಸುಖಿಯಾದಬಳಿಕ ಇನ್ನೇನೋ ಇನ್ನೇನೋ"

೨೦೪

"ಎನ್ನ ವಾಮಕ್ಷೇಮ ನಿಮ್ಮದಯ್ಯ ಎನ್ನ ಹಾನಿ ವೃದ್ಧಿ ನಿಮ್ಮದಯ್ಯ ಎನ್ನ ಮಾನಾಪಮಾನ ನಿಮ್ಮದಯ್ಯ ಬಳ್ಳಿಗೆ ಕಾಯಿದಿಮ್ಮಿತ್ತೆ? ಕೂಡಲ ಸಂಗಮದೇವಾ"

ಈ ಮೇಲಿನ ವಚನಗಳನ್ನು ಓದುಗರು ಧ್ಯಾನದೃಷ್ಟಿಯಿಂದ ಓದಿನೋಡಿದರೆ ಗೀತೆಯ ಬೋಧೆಗಿಂತಲೂ ಶರಣರ ಬೋಧೆಯು ಮುಂದೆ ಹೋಗಿದೆನ್ನಬಹುದು. ಶ್ರೀ ಬಸವಣ್ಣನವರು ದೇವರಿಗೆ ಎನ್ನ ವಾಮಕ್ಷೇಮ ಹಾನಿ ವೃದ್ಧಿಗಳು ಮಾನಾಪಮಾನಗಳೆಲ್ಲ ನಿಮ್ಮವೇ ಆಗಿರುತ್ತವೆಂದು ಹೇಳಿದ್ದಾರೆ. ಶ್ರೀ ಕೃಷ್ಣನಾದರೂ ಅರ್ಜುನನಿಗೆ ನಿನ್ನ ಯೋಗಕ್ಷೇಮವನ್ನು ನಾನು ವಹಿಸುತ್ತೇನೆಂದು ಹೇಳಿರುತ್ತಾನೆ. ಶ್ರೀ ಬಸವಣ್ಣನವರು ತಾವು ಮಹಾ ಭಕ್ತರಾಗಿ ಅನನ್ಯಭಾವನೆಯಿಂದ ದೇವರನ್ನು ಅಂಗಲಾಚಿ ಬೇಡಿಕೊಂಡಿರುತ್ತಾರೆ. ಇಲ್ಲಿ ಗೀತೆಗೂ ಬಸವಣ್ಣನವರಿಗೂ ಇರುವ ತಾರತಮ್ಯವಿಷ್ಟೇಯಾಗಿದೆ.

ಈ ಅಧ್ಯಾಯದ ಕೊನೆಗೆ ಸುಖತ್ರಯಂಗಳನ್ನು ಹೇಳಿ ಸಹಜವಾದ ಅಥವಾ ಕ್ರಮವಾಗಿ ಬಂದ ಕಾರ್ಯವನ್ನು ಮಾಡುವದು ದೋಷವಲ್ಲವೆಂದು—

**ಸಹಜಂ ಕರ್ಮಕೌಂತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಂಭೋಹಿದೋಷೇಣ ಧೂಮೇನಾಗ್ನಿರಿವಾವೃತಃ ॥**

ಅಂದರೆ ಎಲೌ ಅರ್ಜುನನೇ ಸಹಜವಾದ ಕರ್ಮವು ದೋಷದಿಂದ ಕೂಡಿರುವದಾದರೂ ಅದನ್ನು ಬಿಡಬಾರದು. ಕಾರ್ಯಗಳೆಲ್ಲ ಯಾವದಾದರೊಂದು ದೋಷದಿಂದಲೇ ಕೂಡಿರುತ್ತವೆ. ಹೇಗಂದರೆ ಸಹಜವಾದ ಧೂಮದಿಂದ ಅಗ್ನಿಯು ಹೇಗೆ ವ್ಯಾಪಿಸಲ್ಪಟ್ಟಿರುತ್ತದೆಯೋ ಅದರಂತೆಯೇ ಎಲ್ಲ ಕಾರ್ಯಗಳನ್ನೂ ತಿಳಿ. ಧೂಮರೂಪದೋಷವನ್ನು ಬಿಟ್ಟು ಅಗ್ನಿಯು ಹೇಗೆ ಕತ್ತಲೆ ಶೀತ ಮೊದಲಾದುವುಗಳನ್ನು ನಿವೃತ್ತಿಮಾಡುವದಕ್ಕೋಸ್ಕರ ಉಪಯೋಗಿಸಲ್ಪಡುತ್ತದೆಯೋ ಹಾಗೆಯೇ ಮಾನವನು ತನ್ನ ಕುಲಕ್ರಮವಾಗಿ ಬಂದ ಕಾರ್ಯಗಳು ದೋಷದಿಂದ ಕೂಡಿದವುಗಳಿದ್ದರೂ ಅವುಗಳನ್ನು ಬಿಡಬಾರದು— ಅರ್ಜುನನು ಕ್ಷತ್ರಿಯನಾಗಿರುವದರಿಂದ ಅವನ ಸಹಜವಾದ ಕಾರ್ಯ ಯುದ್ಧಮಾಡುವದೇ ಆಗಿದ್ದಿತು. ಈ ಕರ್ಮದ ವಿಷಯದಲ್ಲಿ ಶರಣರು ಬಹಳ ಮುಂದೆ ಹೋಗಿರುತ್ತಾರೆ. ಕಾಯಕವೇ ಕೈಲಾಸವೆಂದು ಅವರು ಸಾರಿಸಾರಿ ಹೇಳಿ ಅದರಂತೆಯೇ ಆಚರಿಸಿ ಕೃತಿಗಿಳಿಸಿದರು. ವೀರಶೈವನಾದವನು ಬೇಕಾದ ಕಾಯಕಗಳನ್ನು ಕೈಕೊಳ್ಳಬಹುದು; ಅವುಗಳಲ್ಲಿ ಮೇಲು ಕೀಳುಗಳೆಂಬುವದಿಲ್ಲ. ಆ ಕಾಯಕದಲ್ಲಿ ವಂಚನೆಯಿಲ್ಲದೆ ಗುರುಲಿಂಗ ಜಂಗಮರಿಗೆ ತನುಮನಧನಗಳನ್ನು ಅರ್ಪಿಸಬೇಕು. ಕ್ರಿಯಾಯೋಗ ಎಂಬುವ ಪ್ರಕರಣದಲ್ಲಿ ಈ ವಿಷಯವನ್ನು ಹೆಚ್ಚಿಗೆ ವಿವೇಚನೆ ಮಾಡಲಾಗಿದೆ.

## ಗೀತೆಯ ಹನ್ನೆರಡನೆಯ ಅಧ್ಯಾಯ

ಈ ಅಧ್ಯಾಯದಲ್ಲಿ ಕೇವಲ ೨೦ ಶ್ಲೋಕಗಳು ಮಾತ್ರ ಇರುತ್ತವೆ. ಇದರಲ್ಲಿ ಸಗುಣಬ್ರಹ್ಮೋಪಾಸನೆಯನ್ನೂ ಮತ್ತು ನಿರ್ಗುಣಬ್ರಹ್ಮೋಪಾಸನೆಯನ್ನೂ ಹೇಳಲಾಗಿದೆ. ಈ ಎರಡರಲ್ಲಿ ಯಾವದು ಶ್ರೇಷ್ಠವಾದುದೆಂದು ನಿರ್ಣಯಮಾಡುವದೇ ಈ ಅಧ್ಯಾಯದ ಸಾರಾಂಶವಾಗಿದೆ. ಗೀತೆಯಲ್ಲಿ ಇದಕ್ಕೆ ಭಕ್ತಿಯ ಯೋಗದ ಅಧ್ಯಾಯ

ವೆಂದು ಹೇಳುತ್ತಾರೆ. ಮೊದಲಿನ ಹತ್ತು ಶ್ಲೋಕಗಳ ಸಾರಾಂಶವು ಕೆಳಗೆ ಬರೆದಂತೆ ಇರುತ್ತದೆ.

ಪರಮೇಶ್ವರನಾದ ನನ್ನಲ್ಲಿ ಮನಸ್ಸನ್ನಿರಿಸಿ ಏಕಾಗ್ರಚಿತ್ತನಾಗಿ ಶ್ರದ್ಧೆಯಿಂದ ನನ್ನನ್ನು ಆರಾಧಿಸಿದವನು ನನಗೆ ಸಮ್ಮತನಾಗುವನು. ಯಾವಾಗಲೂ ನಿಷ್ಕಾಮ ಬುದ್ಧಿಯಿಂದ ಕರ್ಮಗಳನ್ನಾಚರಿಸಿ ಅನನ್ಯಭಕ್ತಿಯಿಂದ ನನ್ನನ್ನೇ ಭಜಿಸುತ್ತ ಸಗುಣೋಪಾಸಕರೆನಿಸಿಕೊಂಡಿರುವರು. ಮತ್ತೆ ಕೆಲವರು ಸರ್ವ ಉಪಾಧಿಗಳಿಂದ ಬಿಡುಗಡೆಯನ್ನು ಹೊಂದಿದವರಾದುದರಿಂದ ಶಾಶ್ವತವಾಗಿಯೂ ಗುಣಶೂನ್ಯರಾಗಿರುವವರಿಂದಲೇ ಸರ್ವೇಂದ್ರಿಯಗಳಿಗೆ ಅಗೋಚರವಾಗಿಯೂ ಇರುವ ಪರತತ್ವವನ್ನು ಧ್ಯಾನಿಸುತ್ತ ನಿರ್ಗುಣೋಪಾಸಕರೆಂದೆನ್ನಿಸಿಕೊಂಡಿರುವರು. ಇವರಲ್ಲಿ ಯಾರು ಅತಿಶಯವಾದ ಯೋಗವನ್ನು ತಿಳಿದಿರುವರು? ಹೇಳು ಎಂದು ಅರ್ಜುನನು ಕೇಳಲು, ಶ್ರೀ ಕೃಷ್ಣನು ಇಂದ್ರಿಯಗಳಿಗೆ ಗೋಚರವಾಗದೆ ಇರತಕ್ಕ ರೂಪಾದಿಗಳಿಲ್ಲದೆ ಇರುವ, ಸರ್ವವ್ಯಾಪಿಯಾದ, ಅಚಿಂತ್ಯನಾದ ಶಬ್ದದಿಂದ ತೋರಿಸಲಶಕ್ಯನಾದ, ಮಾಯಾಪ್ರಪಂಚದಲ್ಲಿರತಕ್ಕ, ವೃದ್ಧ್ಯಾದಿರಹಿತನಾದ, ನಿತ್ಯನಾದ, ಇಂದ್ರಿಯಗಳ ಸಮುದಾಯವನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡು ಎಲ್ಲ ಕಡೆಗೂ ಸಮಾನವಾದ ಬುದ್ಧಿಯುಳ್ಳವನಾಗಿಯೂ, ಸರ್ವಪ್ರಾಣಿಗಳಿಗೂ ಹಿತಮಾಡುವರಾಗಿಯೂ, ಇರತಕ್ಕವರೇ ನನ್ನನ್ನು ಹೊಂದುತ್ತಾರೆ.

ಇದೆಲ್ಲ ನಿರ್ಗುಣೋಪಾಸಕರನ್ನು ಕುರಿತು ಹೇಳಲಾಗಿದೆ. ನಿರ್ಗುಣೋಪಾಸನೆಯನ್ನು ಮಾಡುವವರಿಗೆ ಕ್ಲೇಶವು ಅಧಿಕವಾಗಿರುತ್ತದೆ. ಯಾಕಂದರೆ ರೂಪಾದಿಹೀನವಾದ ವಿಷಯೈಕನಿಷ್ಠೆಯು ದೇಹಾಭಿಮಾನಿಗಳಿಂದ ದುಃಖದಿಂದ ಕೂಡೋಣ ಹೇಗೋ ಹಾಗೆ ಹೊಂದೋಣವಾಗುತ್ತದೆ. ಆದ್ದರಿಂದ ಈ ಮಾರ್ಗವು ಕ್ಲೇಶಕರವಾದುದು.

ಯಾರು ಸರ್ವಕರ್ಮಗಳನ್ನೂ ನನ್ನಲ್ಲಿಟ್ಟು ನನ್ನ ಪರವಾಗಿ ಏಕಾಂತವಾದ ಭಕ್ತಿಯೋಗದಿಂದ ನನ್ನ ಉಪಾಸನೆಯನ್ನು ಮಾಡುತ್ತಾರೆಯೋ ಅವರನ್ನು ನಾನು ಮೃತ್ಯುಸಾಗರದಿಂದ ಉದ್ಧರಿಸುತ್ತೇನೆ. ಆದ್ದರಿಂದ ನೀನು ನನ್ನಲ್ಲಿಯೇ ಮನಸ್ಸನ್ನಿಡು. ಅಧ್ಯವಸಾಯಾತ್ಮಕ ಬುದ್ಧಿಯನ್ನೂ ನನ್ನಲ್ಲಿಡು. ಹೀಗೆ ಮಾಡಿದರೆ ಮರಣಾನಂತರದಲ್ಲಿ, ನನ್ನ ಪ್ರಸಾದದಿಂದ ಜ್ಞಾನವನ್ನು ಪಡೆದು ನನ್ನಲ್ಲಿಯೇ ವಾಸಮಾಡುವಿ; ಇದರಲ್ಲಿ ಸಂಶಯವಿಲ್ಲ.

ಶೃತಿಯೂ ಕೂಡ ಇದನ್ನೇ ಬೋಧಿಸುತ್ತದೆ. "ದೇಹಾಂತೇದೇವಃ ತಾರಕಂ ಪರಬ್ರಹ್ಮವ್ಯಾಚಷ್ಟೆ" ಎಂದು ಹೇಳುತ್ತಲಿದೆ. ಮೇಲೆ ಹೇಳಿದ ಕ್ರಮದಂತೆ ಆಚರಿಸಲಿಕ್ಕಾಗದಿದ್ದವರು ಅಭ್ಯಾಸಯೋಗದಿಂದ ನನ್ನನ್ನು ಕೂಡುವದಕ್ಕೋಸ್ಕರ ಪ್ರಯತ್ನಿಸಬೇಕು. ಅದರಲ್ಲಿಯೂ ಅಶಕ್ತನಾದರೆ "ಮತ್ಕರ್ಮ ಪರಮೋಭವ" ನನ್ನ ಪ್ರೀತಿ ವಿಷಯಕಗಳಾದ ಉಪಾಸನೆಗಳನ್ನಾದರೂ ಮಾಡು. ಅಂದರೆ ಮೋಕ್ಷವನ್ನು ಹೊಂದುವಿ. ಇದನ್ನೂ ಮಾಡಲಿಕ್ಕೆ ಅಶಕ್ತನಾದರೆ ನನ್ನನ್ನೇ ಶರಣಾಗತಿಕನೆಂದು ತಿಳಿ. ಸರ್ವಕರ್ಮಫಲಾಸಕ್ತಿಯನ್ನು ಬಿಟ್ಟು ಕೃತಕೃತ್ಯನಾಗುವಿ. ಅಭ್ಯಾಸಕ್ಕಿಂತಲೂ ಜ್ಞಾನವು ಶ್ರೇಷ್ಠವಾದುದು. ಇದಕ್ಕಿಂತಲೂ ಧ್ಯಾನವು ಅಧಿಕವಾದುದು. ಇದಕ್ಕಿಂತಲೂ ಕರ್ಮಫಲ ಅಧಿಕವಾದುದು. ಆಮೇಲೆ ಶಾಂತಿಯುಂಟಾಗುವದು.

**ಗೀತೆ—ಅಧ್ಯಾಯ ೧೨, ಶ್ಲೋಕ ೧೩ರ ರಿಂದ**

ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣಯೇವ ಚ ।
ನಿರ್ಮಮೋ ನಿರಹಂಕಾರಃ ಸಮದುಃಖ ಸುಖಃ ಕ್ಷಮೀ ॥
ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।
ಮಯ್ಯರ್ಪಿತ ಮನೋಬುದ್ಧಿರ್ಯೋಮದ್ಭಕ್ತಃ ಸ ಮೇ ಪ್ರಿಯಃ ॥
ಯಸ್ಮಾನ್ನೋ ದ್ವಿಜತೇಲೋಕೋ ಲೋಕಾನ್ನೋದ್ವಿಜತೇ ಚ ಯಃ ।
ಹರ್ಷಾಮರ್ಷಭಯೋದ್ವೇಗೈರ್ಮುಕ್ತೋಯಃ ಸ ಚ ಮೇ ಪ್ರಿಯಃ ॥
ಅನಪೇಕ್ಷಃ ಶುಚಿರ್ದಕ್ಷಃ ಉದಾಸೀನೋಗತವ್ಯಥಃ ।
ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥
ಯೋನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।
ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥
ಸಮಃ ಶತ್ರೌಚ ಮಿತ್ರೇಚ ತಥಾ ಮಾನಾಪಮಾನಯೋಃ ।
ಶೀತೋಷ್ಣಸಮದುಃಖೇಷು ಸಮಃ ಸಂಗವಿವರ್ಜಿತಃ ॥
ತುಲ್ಯನಿಂದಾಸ್ತುತಿರ್ಮಾನೀ ಸಂತುಷ್ಟೋ ಏನಕೇನಚಿತ್ ।
ಅನಿಕೇತಃ ಸ್ಥಿರಮತಿಃ ಭಕ್ತಿಮಾನ್ ಮೇ ಪ್ರಿಯೋ ನರಃ ॥

ಅಂದರೆ ಸರ್ವಪ್ರಾಣಿಗಳನ್ನು ದ್ವೇಷಿಸದೆ ಇರತಕ್ಕವನು, ಉತ್ತಮರಲ್ಲಿ ದ್ವೇಷಶೂನ್ಯನು, ತನಗೆ ಸಮಾನರಾದವರಲ್ಲಿ ಮಿತ್ರತ್ವವನ್ನು ಮಾಡತಕ್ಕವನು, ಬಡವರಲ್ಲಿ ದಯೆಯುಳ್ಳವನು, ಮಮಕಾರಶೂನ್ಯನು, ಗರ್ವರಹಿತನು, ಸುಖದುಃಖಗಳಲ್ಲಿ ಸಮಾನಬುದ್ಧಿಯುಳ್ಳವನು, ಕ್ಷಮಾಶೀಲನು, ಲಾಭಾಲಾಭಗಳಲ್ಲಿ ಸಂತುಷ್ಟನು, ಇಂದ್ರಿಯನಿಗ್ರಹವುಳ್ಳವನು, ಪರಮಾತ್ಮನಲ್ಲಿ ದೃಢವಾದ ಭಕ್ತಿಯುಳ್ಳವನು, ನನ್ನಲ್ಲಿರಿಸಲ್ಪಟ್ಟ ಬುದ್ಧಿಯುಳ್ಳವನು, ಯಾವಾತನಿಂದ ಜನರು ಭಯಗೊಳ್ಳುವದಿಲ್ಲವೊ, ಜನರಿಂದ ಯಾವಾತನು ಭಯಪಡುವದಿಲ್ಲವೊ, ಇಷ್ಟಾರ್ಥಲಾಭದಲ್ಲಿ ಉತ್ಸಾಹ, ಪರರ ಲಾಭದಲ್ಲಿ ಅಸಹನ, ಭಯಗಳಿಂದ ಉತ್ಪನ್ನವಾದ ಚಿತ್ತಕ್ಷೋಭ, ಈ ಮೂರು ಗುಣಗಳಿಲ್ಲದಾತನು, ತನ್ನಷ್ಟಕ್ಕೆ ತಾನೇ ಬಂದ ಪದಾರ್ಥಗಳಲ್ಲಿಯೂ ಆಶಾರಹಿತನು, ಬಾಹ್ಯಾಭ್ಯಂತರ ಶೌಚ ಸಂಪನ್ನನು, ಆಲಸ್ಯ ಇಲ್ಲದವನು, ಪಕ್ಷಪಾತರಹಿತನು, ಮಾನಸಿಕ ವ್ಯಥೆಯಿಂದ ಶೂನ್ಯನು. ಇಹಲೋಕ ಪರಲೋಕ ಫಲವನ್ನು ಕೊಡತಕ್ಕ ಕರ್ಮಗಳನ್ನು ಮಾಡದಿರುವಿಕೆ, ಪ್ರಿಯಕರಗಳಾದ ವಸ್ತುಗಳನ್ನಪೇಕ್ಷಿಸಿ ಯಾವಾತನು ಸಂತೋಷಪಡುವದಿಲ್ಲವೊ, ಅಪ್ರಿಯನಾಗಿ ಯಾವಾತನು ದ್ವೇಷಿಸುವದಿಲ್ಲವೊ, ಇಷ್ಟಾರ್ಥ ನಾಶವಾದರೂ ವ್ಯಸನಪಡದೆ ಇರುವವನು, ಪ್ರಾಪ್ತವಾಗದೆ ಇರತಕ್ಕ ವಸ್ತುವನ್ನು ಯಾವಾತನು ಅಪೇಕ್ಷಿಸುವದಿಲ್ಲವೊ, ಸುಖದುಃಖ ಸಾಧನಗಳಾದ ಶುಭಾಶುಭ ಕರ್ಮಗಳನ್ನು ಮಾಡದಿರುವವನು, ಶತೃಮಿತ್ರರಲ್ಲಿ ಸಮಾನ ಬುದ್ಧಿಯುಳ್ಳವನು, ಮಾನಾಪಮಾನಗಳಲ್ಲಿಯೂ ಸಮಾನತೆಯುಳ್ಳವನು ಅಂದರೆ ಹರ್ಷ ವಿಷಾದ ಶೂನ್ಯನು, ಶೀತೋಷ್ಣ ಸುಖದುಃಖಗಳಲ್ಲಿ ಸಮಾನನು, ಯಾವದರಲ್ಲಿಯೂ ಆಸಕ್ತಿ ಇರದೆ ಇರತಕ್ಕವನು, ನಿಂದಾಸ್ತುತಿಗಳಲ್ಲಿ ಸಮಾನನು, ಮೌನಿ, ನಿಯತವಾಸ ಶೂನ್ಯನು. ಸ್ಥಿರವಾದ ಬುದ್ಧಿಯುಳ್ಳವನು, ಇಂತಿಷ್ಟು ಗುಣಗಳುಳ್ಳ ಭಕ್ತಿವಂತನೇ ನನಗೆ ಪ್ರಿಯಕರನು.

ಮೇಲೆ ಹೇಳಿದ ಗುಣಗಳಿಂದ ಕೂಡಿದವನೇ ನನಗೆ ಪ್ರಿಯಕರನೆಂದು ಗೀತೆಯು ಹೇಳುತ್ತದೆ. ಕರ್ಮ, ಧ್ಯಾನ, ಜ್ಞಾನ, ಯೋಗಗಳನ್ನು ಬಿಡದೆ ಅವುಗಳಿಂದ ಕೂಡಿದ

ಭಕ್ತಿಯ ಮಾರ್ಗವನ್ನು ಶ್ರೀ ಬಸವಣ್ಣನವರು ಬೋಧಿಸಿ ಲೋಕದಲ್ಲಿ ಭಕ್ತಿಯ ಭಂಡಾರಿ ಗಳೆಂಬುವ ಹೆಸರನ್ನು ಹೊಂದಿದರು. ಶ್ರೀ ಬಸವಣ್ಣನವರ ಅವತಾರದ ಮುಖ್ಯೋ ದ್ದೇಶವಾದರೂ ಭೂಲೋಕದಲ್ಲಿ ಶಿವಭಕ್ತಿಯನ್ನು ಪ್ರಸಾರಗೊಳಿಸುವದೇ ಆಗಿರುತ್ತದೆ. ಶ್ರೀ ಬಸವಣ್ಣನವರು ಮೇಲೆ ಹೇಳಿದ ಗೀತೆಯ ಪ್ರತಿಯೊಂದು ವಾಕ್ಯಕ್ಕೂ ಸಮಾನ ಗಳಾದ ಅನೇಕ ವಚನಗಳನ್ನು ಹೇಳಿರುತ್ತಾರೆ. ತಮ್ಮ ನಡೆನುಡಿಗಳಿಂದ ಲಕ್ಷಾಂತರ ಜನರನ್ನು ತಮ್ಮ ಮಾರ್ಗಗಾಮಿಗಳನ್ನಾಗಿ ಮಾಡಿಕೊಂಡಿರುತ್ತಾರೆ. ಮೇಲೆ ಬರೆದ ಗೀತೆಯ ಪ್ರತಿಯೊಂದು ಮಾತಿಗೂ ಬಸವಣ್ಣನವರ ವಚನಗಳನ್ನು ನೋಡೋಣ— "ಅದ್ವೇಷ್ಟಾ ಸರ್ವಭೂತಾನಾಂ" ಯಾರನ್ನೂ, ದ್ವೇಷಿಸಬೇಡ. ಬಸವಾದಿ ಪ್ರಥಮ ಪುಂಗವರು ಎಲ್ಲ ಪ್ರಾಣಿಗಳನ್ನೂ ಸಮಾನತೆಯಿಂದ ಕಂಡವರಾಗಿರುತ್ತಾರೆ. ಮನುಷ್ಯನು ಎರಡನೆಯವರ ಕೂಡ ನಡೆಯಬೇಕಾದರೆ ದ್ವೇಷದಿಂದ ದ್ವೇಷವೂ ಪ್ರೇಮದಿಂದ ಪ್ರೇಮವೂ ಹುಟ್ಟುತ್ತದೆಂಬುವದನ್ನು ತಿಳಿದಿರಬೇಕು.

೨೦೫

ಶ್ರೀ ಅಖಂಡೇಶ್ವರದೇವರು—

"ತಾನು ಒಳ್ಳೆಯವನಾಗಿದ್ದರೆ ತನಗೆ ಎಲ್ಲರೂ ಒಳ್ಳೆಯವರಾಗಿ ರ್ಪರು, ತಾನು ಹೀನನಾದರೆ ತನಗೆ ಸರ್ವರೂ ಹೀನರಾಗಿರ್ಪರು. ತಾನು ಒಳ್ಳೆಯವನಾಗಿ ತನಗೆ ಸರ್ವರೂ ಹೀನರಾದರೆ ಅದು ತನ್ನ ಪೂರ್ವದ ಕರ್ಮ, ತಾ ಹೀನನಾಗಿ ತನಗೆ ಸರ್ವರೂ ಒಳ್ಳೆಯವರಾದರೆ ಅದು ತನ್ನ ದೈವದ ಬಲವು ನೋಡಾ ಅಖಂಡೇಶ್ವರಾ"

೨೦೬

ಪ್ರಭುದೇವರು—

"ನಾನು ಘನ ತಾನು ಘನವೆಂಬ ಹಿರಿಯರುಂಟೆ? ಜಗದೊಳಗೆ ಹಿರಿಯರ ಹಿರಿಯತನದಿಂದೇನಾಯಿತ್ತು ಹಿರಿದುಕಿರಿದೆಂಬ ಶಬ್ದವಡಗಿದರೆ ಆತನೇ ಶರಣ ಗುಹೇಶ್ವರಾ"

ಎಂದು ಶ್ರೀ ಪ್ರಭುದೇವರು ಸಮಾನತ್ವವನ್ನು ಬೋಧಿಸಿರುತ್ತಾರೆ.

೨೦೭

ದಸರಯ್ಯ—

"ಸರ್ವವನರಿದಲ್ಲಿ ಸರ್ವಜ್ಞನಾದಲ್ಲಿ ಇದಿರೆಲ್ಲ ತನ್ನಲ್ಲಿ ತಾನೆಲ್ಲ ಇದಿರಲ್ಲಿ ತನ್ನ ಭಿನ್ನಭಾವ ಅನ್ಯರಲ್ಲಿ ತೋರಿ ಆ ಗುಣ ತನಗೆ ಅನ್ಯವೆನಿಸು ವುದು ತನ್ನಯ ಶಾಂತಿ ಅನ್ಯರಲ್ಲಿ ತೋರಿ ಅಲ್ಲಿ ಭಿನ್ನಭಾವವಿಲ್ಲದಿರೆ ಅವರನ್ಯರಲ್ಲ ಎಮ್ಮವರೆಂಬರು ಅದು ತನ್ನ ಗುಣ ಅನ್ಯವಿಲ್ಲವೆಂಬುದನರಿದು ತಾನೊಪ್ಪದರ್ಪಣದಲ್ಲಿ ತೋರುವಂತೆ ಇದಕ್ಕೆ ಕರ್ಕಶವಿಲ್ಲ ದಸರೇಶ್ವರಲಿಂಗ ನರಿವುದಕ್ಕೆ"

ಈ ವಚನದ ಸೊಬಗು ಹೇಳಲಸಾಧ್ಯವಾಗಿರುತ್ತದೆ. ಇದರ ಅರ್ಥವು ಕೊಂಚ ಕ್ಲಿಷ್ಟ ವಾದುದಾಗಿರುತ್ತದೆ. ಸರ್ವವೂ ಶಿವಸ್ವರೂಪವೆಂದು ತಿಳಿದು ಮತ್ತು ತಾನು ಜ್ಞಾನಿ

ಯಾಗಿ ಪರರ ಆತ್ಮಗಳಲ್ಲಿಯೂ ಮತ್ತು ತನ್ನ ಆತ್ಮನಲ್ಲಿಯೂ ಭಿನ್ನವಿಲ್ಲೆಂದು ತಿಳಿದು ಅರ್ಥಾತ್ ಅವರು ಬೇರೆ ತಾ ಬೇರೆಯಲ್ಲವೆಂಬುವದು ತನ್ನ ನಿಶ್ಚಯವಾದ ಭಾವನೆಯಾಗಿರಬೇಕು. ಆತ್ಮರುಗಳಲ್ಲಿ ಕಾಣಿಸಿದ ಖಂಡಿತ ಭಾವವು ತನ್ನನ್ನೇ ಛಿನ್ನವೆನಿಸುವದು. ತನ್ನ ಕ್ಷಮಾಗುಣವು ಆ ಆತ್ಮರುಗಳಲ್ಲಿ ಕಾಣಿಸಿ ಆ ಆತ್ಮರುಗಳಲ್ಲಿ ಖಂಡಿತ ಭಾವ ತನಗಿಲ್ಲದಿರಲು ಆ ಆತ್ಮರುಗಳು ತನಗೆ ಪರರಲ್ಲ ಎಮಗೆ ಹಿತವಹರು. ಶತ್ರುಗರು ಆಪ್ತರೆಂದೇ ಭಾವಿಸಬೇಕು. ಅದು ತನ್ನ ಶಾಂತಿ ಗುಣವು. ಅವರಿಗೂ ತನಗೂ ಭಿನ್ನವಿಲ್ಲದೆಂಬುವದನ್ನು ತಿಳಿದು ತನ್ನ ಒಳ್ಳೆ ಮತ್ತು ಕುರೂಪಗಳು ಕನ್ನಡಿಯನ್ನು ನೋಡಿದರೆ ಸುರೂಪಿಯಾದರೆ ಸುರೂಪಿಯಾಗಿ ಕುರೂಪಿಯಾದರೆ ಕುರೂಪಿಯಾಗಿ ಕಾಣಿಸುವದು ಎಂಬ ಹಾಗೆ ತನ್ನಲ್ಲಿ ಭಿನ್ನಭಾವ ತೋರಿದರೆ ಅವರಲ್ಲಿ ಭಿನ್ನಭಾವ ತೋರುವದು. ತನ್ನಲ್ಲಿ ಸಮರಸಭಾವ ತೋರಿದರೆ ಅವರಲ್ಲಿ ಸಮರಸಭಾವ ತೋರುವದು. ಇದಕ್ಕೆ ಕರಣಮಥನ ಕರ್ಕಶಬೇಡ. ಲಿಂಗದ ಕರುಣವ ಪಡೆಯುವದಕ್ಕೆ ಸರ್ವಜೀವ ದಯವೇ ಕಾರಣ. ಸರ್ವರುಗಳನ್ನು ಸಮಾನತೆಯಿಂದ ಕಾಣುವದೇ ಮುಖ್ಯ ಮಾರ್ಗವಾಗಿರುವದು. ಹೀಗೆ ಸಮಾನತೆಯಿಂದ ಎಲ್ಲರನ್ನೂ ಕಂಡರೆ ದ್ವೇಷವೆಲ್ಲಿಂದ ಬರುವದು? ಅದಕ್ಕೆ ಸ್ಥಾನವೇ ಸಿಕ್ಕುವದಿಲ್ಲ.

೨೦೮

"ಒಂದನಹುದೆನಬೇಡ ಒಂದನಲ್ಲ ಎನಬೇಡ ಉಭಯ ಉಳ್ಳನ್ನಕ್ಕ ಬಹು ದುಃಖದೊಡಲು ಅಮೃತವ ಕುಡಿಯಕೊಟ್ಟು, ವಿಷವ ಕುಡಿದೆನೆನ ಬೇಡ ವಿಷವ ಕುಡಿಯಕೊಟ್ಟು ಅಮೃತವ ಕುಡಿದೆನೆನಬೇಡ ಆ ಗುಣ ತಮ್ಮಲ್ಲಿಯೇ ದೃಷ್ಟವಾಗಿ ಶವವನಿರಿದು ಹಗೆಯ ಹೊರಬೇಡ ಇಂತೀಗುಣವ ನಿನ್ನ ನೀ ಕೇಳಿ ತಿಳಿದಡೆ ನಿನಗದು ಅನ್ಯಭಿನ್ನವಿಲ್ಲ ಅದು ತನ್ಮಯ ಮೂರ್ತಿ ದಸರೇಶ್ವರಲಿಂಗವು"

"ಯಾರಿಗಾದರೂ ಇವರು ಸನ್ಮಾರ್ಗವುಳ್ಳವರು, ಇವರು ದುರ್ಮಾರ್ಗವುಳ್ಳವರು ಎಂದು ಅನ್ನಬೇಡ. ಇವರು ಸದಾಚಾರಿಗಳು ಇವರು ದುರಾಚಾರಿಗಳು ಎಂಬುವ ಎರಡು ಭಾವ ಉಂಟಾಗಿರುವ ಪರ್ಯಂತರ ಬಹಳವಾದ ಧಾವತಿಗೊಳವು. ಊಟ ಮಾಡಲಿಕ್ಕೆ ಅನ್ನ ಹೊದೆಯುವದಕ್ಕೆ ವಸ್ತ್ರ ತೊಡುವುದಕ್ಕೆ ಆಭರಣಗಳನ್ನು ಕೊಟ್ಟು ಸುಖದಲ್ಲಿಟ್ಟುಕೊಂಡಿದ್ದರೆ ಮುಂದೆ ಇದರಿಂದ ಕಂಟಕ ಬಂದಿತ್ತೆನಬೇಡ, ಒಬ್ಬರನ್ನು ಕೊಂದು ಅವರ ದೇಶ ಕೋಶಗಳನ್ನು ತೆಗೆದುಕೊಂಡು ಉಂಡುಟ್ಟು ಸುಖದಿಂದಿದ್ದೆನೆನಬೇಡ, ಆ ದುರ್ಗುಣವು ತನ್ನಲ್ಲಿ ತಾರ್ಕಣೆಯಾಗಿ ಸತ್ತವನ ನಿಂದು ದೂರ ಹೊರಬೇಡ ಎಂಬ ಹಾಗೆ ರಾಜಭಯ, ಚೋರಭಯಗಳಿಂದ ಐಶ್ವರ್ಯವೆಲ್ಲ ಹೋಗಿ ದರಿದ್ರರಾದವರನ್ನು ಕಂಡು ಹಾಗೆ ಆದದ್ದು ನೆಟ್ಟಗಾಯಿತೆಂದು ಕೆಟ್ಟನುಡಿಯನ್ನು ನುಡಿಯಬೇಡ. ಇಂತೀ ದುರ್ಗುಣಗಳನ್ನು ಬಲ್ಲವರಿಂದ ಕಲಿತು ಬಿಟ್ಟಡೆ ನಿನಗೂ ಅವರಿಗೂ ಭಿನ್ನಭೇದವಿಲ್ಲ. ಆತ್ಮಕರ್ತೃವಾದ ಲಿಂಗವು ಅವರಲ್ಲಿ ತನ್ನಲ್ಲಿ ಪೂರ್ಣವಾಗಿ ಕಾರಣವಾಗಿರ್ಪುದು"

ಈ ವಚನಗಳಿಂದ ಮುಖ್ಯವಾಗಿ ತಿಳಿದುಬರುವದೇನಂದರೆ ಮಾನವನು ಯಾರಿಗೂ ಭಿನ್ನಭೇದಗಳನ್ನು ಮಾಡದೆ ಸರ್ವರಕೂಡ ಸಮಾನವಾಗಿ ವರ್ತಿಸತಕ್ಕದ್ದು. ಇದನ್ನು ಶರಣರು ತಮ್ಮ ವಚನಗಳಲ್ಲಿ ಬಹಳ ಅತ್ಯುತ್ತಮ ರೀತಿಯಿಂದ ಮಂಡಿಸಿರುತ್ತಾರೆ.

ಬಸವಣ್ಣನವರು—"ಯತ್ರ ಜೀವಃ ತತ್ರ ಶಿವಃ" ಎಂದು ಹೇಳಿ ಎಲ್ಲ ಪ್ರಾಣಿಗಳಲ್ಲಿ ಶಿವನಿದ್ದಾನೆ. ನಾವು ಯಾವದಾದರೊಂದು ಪ್ರಾಣಿಗೆ ದ್ವೇಷಮಾಡಿದರೆ ಅಲ್ಲಿ ಶಿವನನ್ನೇ ದ್ವೇಷಿಸಿದಂತೆ ಆಗುತ್ತದೆಂದು ಬಹಳ ಹೃದಯಂಗಮವಾಗಿ ಈ ವಿಷಯವನ್ನು ವರ್ಣಿಸಿರುತ್ತಾರೆ. ಯಾರನ್ನೂ ದ್ವೇಷಿಸಬಾರದೆಂಬುವದಕ್ಕೆ ಬಸವಣ್ಣನವರ ಒಂದು ವಚನವನ್ನು ಮಾತ್ರ ಇಲ್ಲಿ ಕೊಡುತ್ತೇವೆ.

೨೦೯

"ಅರಿದರಿದು ಸಮಗಾಣಿಸಬಾರದು ತ್ರಾಸಿನ ಕಟ್ಟಳೆಯಂತಿನಿತಿನಿತು ವೆಗ್ಗಳವಾದರೆ ಈಶ್ವರನು ಒಡೆ ಇಕ್ಕದೆ ಮಾಣುವನೆ? ಪಾತ್ರಾಪಾತ್ರವೆಂದು ಕಂಡರೆ ಶಿವನೆಂತು ಮೆಚ್ಚುವನು? ಜೀವಜೀವಾತ್ಮನ ಸರಿಯೆಂದು ಕಂಡರೆ ಸಮವೇದಿಸದಿಪ್ಪನೇ ಶಿವನು? ತನ್ನ ಮನದಲ್ಲಿ ಯತ್ರ ಜೀವಸ್ತತ್ರ ಶಿವನೆಂದು ಸರ್ವಜೀವದಯಾಪಾರಿಯಾದರೆ ಕೂಡಲಸಂಗಮದೇವನು ಕೈಲಾಸದಿಂದ ಬಂದು ಎತ್ತಿಕೊಳ್ಳದಿಪ್ಪನೇ?"

ಮೈತ್ರ—ಅಂಪರೆ ಉತ್ತಮರ ಕೂಡ ದ್ವೇಷ ಇಲ್ಲದಿರುವಿಕೆ, ತನಗೆ ಸಮಾನರಾದವರಲ್ಲಿ ಸ್ನೇಹದಿಂದಿರುವಿಕೆಯು.

೨೧೦

ಬಸವಣ್ಣನವರು—

"ಸಾರ ಸಜ್ಜನರ ಸಂಗ ಲೇಸು ಕಂಡಯ್ಯ ದುರುಳ ದುರ್ಜನರ ಸಂಗವದು ಭಂಗವಯ್ಯ ಸಂಗವೆರಡುಂಟು ಒಂದು ಬಿಡುವದು ಹಿಡಿ ಮಂಗಳಮೂರ್ತಿ ನಮ್ಮ ಕೂಡಲಸಂಗನ ಶರಣರ"

(ಕರುಣಿಸಿ ಹೀನರಲ್ಲಿ ದಯಾತೋರುವದು) ಬಸವಣ್ಣನವರು—"ದಯವೇಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ" ಎಂದು ಕೃಪೆಯನ್ನು ಪ್ರಾಣಿಗಳಲ್ಲಿ ತೋರಿಸಿರುತ್ತಾರೆ. ನಿರ್ಮಮ—ನನ್ನದಲ್ಲವೆಂಬುದನ್ನು ಬಿಡುವದು. ನಿರಹಂಕಾರ—ಅಹಂಕಾರ ಇಲ್ಲದಿರುವಿಕೆ. ಬಸವಾದಿ ಪ್ರಮಥರು ಮಹಾ ಸಾತ್ವಿಕಗುಣಸಂಪನ್ನರು. ಆದ್ದರಿಂದಲೇ ಇವರು ಅಹಂಕಾರ ಮಮಕಾರಗಳನ್ನು ಬಹಳವಾಗಿ ಜರಿದು ಖಂಡಿಸಿರುತ್ತಾರೆ. ಎನಗಿಂತ ಕಿರಿಯರಿಲ್ಲವೆಂದು ಹೇಳುವ ಬಸವಣ್ಣನವರಿಗೆ ಅಹಂಕಾರ ಮಮಕಾರಗಳು ಬರಲು ಕಾರಣವೇ ಇರುವದಿಲ್ಲ. ಅವರು ಅವುಗಳನ್ನು ಖಂಡಿಸಿರುತ್ತಾರೆ.

೨೧೧

ಸಿದ್ಧರಾಮದೇವರು—

"ಸೋಹಂ ಎಂಬುವದು ಅಂತರಂಗದ ಮದ ನೋಡಯ್ಯ, ಶಿವೋಹಂ ಎಂಬುವದು ಬಹಿರಂಗ ಮದ ನೋಡಯ್ಯ, ಈ ಪ್ರಪಂಚವನಳಿದು ದಾಸೋಹಂವೆಂದೆನಿಸಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ"

ಎಂದು ಹೇಳಿರುವರು. "ಸಮದುಃಖಸುಖ"—ಸುಖದುಃಖದಲ್ಲಿ ಸಮಾಧಾನಿಯಾಗಿರುವದು. ಈ ವಿಷಯಕ್ಕೆ ಬಸವಣ್ಣನವರು—

"ಉರಿಬರಲಿ ಶಿರಿಬರಲಿ ಬೇಡಬೇಕು ಎಂದೆನು"

ಅಂದರೆ ಬೇಕಾದದ್ದು ಬಂದರೂ ಬರಲಿ ಅದಕ್ಕೆ ಅಂಜಲಾರೆನೆಂದು ಹೇಳುತ್ತಾರೆ.

೨೧೨

ಜೇಡರ ದಾಸೀಮಾರ್ಯರು—

"ಇಂದಿಂಗೆಂದು ನಾಳಿಂಗೆಂದು ಚಿಂತಿಸಲೇಕೆ ತಂದಿಕ್ಕುವ ಶಿವಂಗೆ ಬಡತನವೇ ರಾಮನಾಥ"

೨೧೩

ಸಿದ್ಧರಾಮದೇವರು—

"ಸಿರಿಯಾಯಿತ್ತೆಂದು ಉಚ್ಚಹದಿಂದುಬ್ಬದೆ ಕೆಟ್ಟಿತೆಂದು ಮನ ನೊಂದು ಭಿನ್ನನಾದಂತಿರಬೇಡ ಹಿರಿಯರ ಮನವಿಸ್ಕಂದವಾಗದೊಂದೀಯಂದವಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾಗುಣ ಎನ್ನನೆಂದು ಬಂದು ಪೊಂದಿರ್ಪುದು ಹೇಳಾ ಕಪಿಲಸಿದ್ಧಮಲ್ಲಿಕಾರ್ಜುನಾ"

ಅಂದರೆ ಸಂಪತ್ತು ಬಂದರೆ ಹಿಗ್ಗಬೇಡ; ಅದು ಹೋದರೆ ಕುಗ್ಗಬೇಡ. ಸುಖದುಃಖಗಳಲ್ಲಿ ಸಮತಾಭಾವನೆಯಿದ್ದರೆ ಅವನು ಶ್ರೇಷ್ಠನಾಗುವನು. ಅಂತಹ ಗುಣವು ನನಗೆ ಎಂದಿಗೆ ಬರುತ್ತದೆಂದು ಶ್ರೀ ಸಿದ್ಧರಾಮದೇವರು ಬೇಡಿಕೊಂಡಿರುತ್ತಾರೆ.

೨೧೪

ಸ್ವತಂತ್ರಸಿದ್ಧಲಿಂಗದೇವರು—

"ಸುಖದುಃಖ ಮೋಹದೊಡಲುಗೊಂಡು ಹುಟ್ಟಿತೀಜಗವೆಲ್ಲ ಆ ಜಗದಂತೆ ಭಕ್ತನಾದಡೆ ಅವರ ಕುಂದೇನು? ತನ್ನ ಹೆಚ್ಚೇನು? ಜಗವು ಮಾಯೆಯಂತೆ ಅದ ಬೇರುಮಾಡಿ ತಾ ಶಿವನಂತೆ ಇದ್ದವನ ಇರವು ಶುದ್ಧ ಜಗದೀಶನು ಅವರೊಳಗೆ ತೆರಹಿಲ್ಲದಿಪ್ಪನು ಇದು ಸತ್ಯ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ"

ಕ್ಷಮಾ—ಅಂದರೆ ಸಹನಶೀಲತೆ ಇದನ್ನೂ ಕೂಡ ಬಸವಾದಿ ಪ್ರಮಥರು ಬಹಳ ಕೊಂಡಾಡಿರುತ್ತಾರೆ.

೨೧೫

ಬಸವಣ್ಣನವರು—

"ತನಗೆ ಮುನಿದರಿಗೆ ತಾ ಮುನಿಯಲೇಕಯ್ಯಾ? ತನಗಾದ ಆಗೇನು ಅವರಿಗಾದ ಚೇಗೇನು? ತನುವಿನ ಕೋಪ ತನ್ನ ಹಿರಿಯತನದ ಕೇಡು ಮನದ ಕೋಪ ತನ್ನ ಅರುಹಿನ ಕೇಡು ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ ನೆರೆಮನೆಯ ಸುಡದು ಕೂಡಲಸಂಗಮದೇವಾ"

೨೧೬

ಅಕ್ಕಮಹಾದೇವಿಯವರು—

"ಬೆಟ್ಟದ ಮೇಲೊಂದು ಮನೆಯಮಾಡಿ ಮೃಗಂಗಳಿಗಂಜಿದಡೆಂತಯ್ಯ, ಸಂತೆಯೊಳಗೊಂದು ಮನೆಯಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ ಸಮುದ್ರದೊಳಗೊಂದು ಮನೆಯಮಾಡಿ ನೊರೆತೆರೆಗಳಿಗಂಜಿದಡೆಂತಯ್ಯ ಚನ್ನಮಲ್ಲಿಕಾರ್ಜುನಯ್ಯ ಕೇಳಯ್ಯ ಲೋಕದೊಳಗೆ ಹುಟ್ಟಿದಬಳಿಕ ಸ್ತುತಿ ನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು"

ಸಂತುಷ್ಟಃ ಸತತಂ ಯೋಗೀ—ಯೋಗಿಗಳಾದವರು ಯಾವಾಗಲೂ ಸಂತೋಷವುಳ್ಳವರಾಗಿರಬೇಕು.

೨೧೭

ಬಸವಣ್ಣನವರು—

"ಹೊಯಿದವರೆನ್ನ ಹೊರೆದವರೆಂಬೆನು ಬೈದವರೆನ್ನ ಬಂಧುಗಳೆಂಬೆನು ನಿಂದಿಸಿದವರೆನ್ನ ತಂದೆತಾಯಿಗಳೆಂಬೆ ಅಳಿಗೊಂಡವರು ಆಳ್ದರೆಂಬೆ ಜರಿದವರೆನ್ನ ಜನ್ಮಬಂಧುಗಳೆಂಬೆ ಕೊಂಡಾಡಿದವರೆನ್ನ ಹೊನ್ನ ಶೂಲದಲ್ಲಿಕ್ಕಿದರು ಕೂಡಲಸಂಗಮದೇವಾ"

ಯತಾತ್ಮಾ ದೃಢನಿಶ್ಚಯಃ—ಜಿತೇಂದ್ರಿಯನಾಗಿಯೂ, ದೃಢನಿಶ್ಚಯ ಉಳ್ಳವನಾಗಿಯೂ ಇರಬೇಕು.

೨೧೮

ಬಸವಣ್ಣನವರು—

"ಹಸಿವು ತೃಷೆ ನಿದ್ರೆ ವಿಷಯಂಗಳ ಮರೆದೆ ನೀವು ಕಾರಣ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಂಗಳ ಮರೆದೆ ನೀವು ಕಾರಣ ಪಂಚೇಂದ್ರಿಯ, ಸಪ್ತಧಾತು ಅಷ್ಟಮದಂಗಳ ಮರೆದೆ ನೀವು ಕಾರಣ ಕೂಡಲಸಂಗಮದೇವಯ್ಯಾ ನಿಮ್ಮ ಶರಣರಿಗೆ ಆಪ್ಯಾಯನವಾದರೆ ಎನಗೆ ತೃಪ್ತಿಯಾಯಿತ್ತು"

೨೧೯

ಬಸವಣ್ಣನವರ ದೃಢನಿಶ್ಚಯ—

"ಲಿಂಗವಶದಿಂದಬಂದ ನಡೆಗಳು ಲಿಂಗವಶದಿಂದಬಂದ ನುಡಿಗಳು ಲಿಂಗವಂತರು ತಾವು ಅಂಜಲೇಕೆ? ಲಿಂಗವಿರಿಸಿದಂತೆ ಇಪ್ಪುದಲ್ಲದೆ ಕೂಡಲಸಂಗಮದೇವಾ ಭಕ್ತರಭಿಮಾನ ತನ್ನದೆಂಬನಾಗಿ"

ಮಯ್ಯರ್ಪಿತ ಮನೋಬುದ್ಧಿಃ—ನನ್ನಲ್ಲಿ ಅರ್ಪಿಸಿದ ಮನೋಬುದ್ಧಿಯುಳ್ಳ ಭಕ್ತನೇ ನನಗೆ ಪ್ರಿಯನೆಂದು ಗೀತೆಯು ಹೇಳುತ್ತದೆ. ಇಲ್ಲಿ ಗೀತೆಯ ವಾಕ್ಯಕ್ಕೂ ಶರಣರಿಗೂ ಇರುವ ಭೇದವೇನಂದರೆ ಗೀತೆಯಲ್ಲಿ ಶ್ರೀ ಕೃಷ್ಣನು ನಾನೇ ಪರಮಾತ್ಮನು, ನನ್ನಲ್ಲಿಯೇ ಭಕ್ತಿಯನ್ನಿಡಬೇಕೆಂದು ಅರ್ಜುನನಿಗೆ ಬೋಧಿಸಿರುತ್ತಾನೆ. ಬಸವಣ್ಣನವರಾದರೋ ತಾವು ಭಕ್ತರಾಗಿ ಪರಮಾತ್ಮನಿಗೆ ಮೊರೆಹೋಗಿದ್ದಾರೆ. ಸರ್ವಾರ್ಪಣಭಾವದಲ್ಲಿ

ಅನೇಕ ವಚನಗಳನ್ನು ಈ ಬಗ್ಗೆ ಹೇಳಿರುತೇವೆ. "ಯಸ್ಮಾನ್ನೋ ದ್ವಿಜತೇ ಲೋಕೋ ಲೋಕಾನ್ನೋ ದ್ವಿಜತೇ ಚ ಯಃ" "ಯಾವನನ್ನು ನೋಡಿ ಲೋಕದ ಜನರು ಭಯ ಗೊಳ್ಳುವದಿಲ್ಲವೋ, ಯಾವಾತನು ಲೋಕದಿಂದ ಭಯಗೊಳ್ಳುವದಿಲ್ಲವೋ ಅಂದರೆ ಸದಾಚಾರಿಯಾಗಿ ಸತ್ಕಾರ್ಯದಲ್ಲಿ ತೊಡಗಿದ ಯೋಗಿಯನ್ನು ಕಂಡರೆ ಯಾರಿಗೂ ಭಯ ವಾಗಲಾರದು ಮತ್ತು ಇಂತಹ ಸತ್ಕಾರ್ಯಗಳನ್ನೇ ಮಾಡುವ ಯೋಗಿಯು ಜನರಿಗೂ ಅಂಜಲಾರನು. ಶರಣರೂ ಕೂಡ ಕ್ರೂರ ಕರ್ಮಗಳನ್ನು ಮಾಡತಕ್ಕ ಮಾನವರನ್ನು ಅನೇಕ ತರಹದಿಂದ ಖಂಡಿಸಿ ಅವರ ಮಾರ್ಗವು ನರಕಸಮಾನವಾದುದೆಂದು ನಿಂದಿಸಿರು ತ್ತಾರೆ. "ಹರ್ಷಾಮರ್ಷ ಭಯೋದ್ವೇಗೈರ್ಮುಕ್ತಃ" ಆನಂದ, ಈರ್ಷ್ಯಾ, ಭಯ ಇವುಗಳಿಂದ ಮುಕ್ತನಾಗಿರಬೇಕು. ಶರಣರು ಯಾವಾಗಲೂ ಈರ್ಷ್ಯಾದಿಗಳಿಂದ ಮುಕ್ತರು.

ಅನಪೇಕ್ಷಃ—ತನ್ನಷ್ಟಕ್ಕೆ ತಾನೇ ಬಂದ ಅರ್ಥದಲ್ಲಿಯೂ ಆಶಾರಹಿತ, ಶರಣರು ಈ ವಿಷಯದಲ್ಲಿ ಅನೇಕ ಸೊಗಸಾದ ವಚನಗಳನ್ನು ಹೇಳಿರುತ್ತಾರೆ.

೨೨೦

ಉರಿಲಿಂಗಪೆದ್ದಿಗಳು—

"ಆಶೆಯುಳ್ಳನ್ನಕ್ಕ ಒಬ್ಬರ ಆಶ್ರಯಿಸುವದು ಆಶ್ರಯದಾಶೆ ಕಷ್ಟ ಕಾಣಿರಯ್ಯಾ ಆಶೆಯೇ ದಾಸತ್ವ ನಿರಾಶೆಯೇ ಈಶತ್ವ ದಾಸತ್ವದ ಈಶತ್ವದ ಈ ಅನುವ ವಿಚಾರಿಸಿ ನಿರಾಶೆಯಾಗಿಪ್ಪುದೇ ಈಶಪದವಯ್ಯ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ"

೨೨೧

ಸ್ವತಂತ್ರಸಿದ್ಧಲಿಂಗೇಶ್ವರ—

"ಆಶೆಯೆಂಬ ಸ್ತ್ರೀಗೆ ಮನಸೋತವರೆಲ್ಲ ಕೆಟ್ಟ ಕೇಡನೇನೆಂಬೆನಯ್ಯ? ಯತಿಗಳಾಗಲಿ, ವೇದಾಧ್ಯಾಯಿಗಳಾಗಲಿ, ವ್ರತಿಗಳಾಗಲಿ, ಸರ್ವವಿದ್ಯಾ ಕಲಾವಂತರಾಗಲಿ ನರರೊಳಗಾಗಲಿ, ಸುರರೊಳಗಾಗಲಿ ಇವರೆಲ್ಲರೂ ಧನವುಳ್ಳವರ ಬಾಗಿಲ ಕಾಯಿಸಿದಳು ನೋಡಾ ಇವಳಿಗಾರೂ ಮರುಳಾಗರು ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ ಶರಣರಲ್ಲದವರ ಕಿವಿಯಹಿಡಿದು ಕುಣಿಸಿದಳು ನೋಡಾ"

೨೨೨

ಬಸವಣ್ಣನವರು—

"ಆಶೆಗೆ ಹುಟ್ಟಿದ ಪ್ರಾಣಿ ಆಶಯನೆ ಕಲಿತು ಪುಣ್ಯಪದವಿಯ ಬಯಸಿದರೆ ಭವಮಾಲೆಯ ಬರವು ತಪ್ಪದು. ಬೇಡಲು ಹುಟ್ಟಿದ ಪ್ರಾಣಿಗೆ ಬೇಡಲು ವಿಧಿಯೇ ಸೂಳೆಗೆ ಹುಟ್ಟಿದ ಪ್ರಾಣಿಗೆ ನಿಜಗುಣಸಜ್ಜನವಪ್ಪುದೆ? ಲಿಂಗ–ಉಪಯು, ಶರಣವಿಸ್ತಾರವು ಬಯಸಿದರೊಳವೆ ಕೂಡಲಸಂಗಮ ದೇವಾ"

೨೨೩

ಮತ್ತೊಂದು ಕಡೆಗೆ ಬಸವಣ್ಣನವರು—

"ನೂರನೋದಿ ನೂರ ಕೇಳಿದರೇನು? ಆಶೆ ಹರಿಯದು ರೋಷ ಬಿಡದು ಮಜ ನಕ್ಕೆರೆದು ಫಲವೇನು? ಮಾತಿನಂತೆ ಮನವಿಲ್ಲದ ಜಾತಿ ಡೊಂಬರ ನೋಡಿ ನಗುವ ನಮ್ಮ ಕೂಡಲಸಂಗಮದೇವಾ"

ಶುಚಿಃ—ಇದರ ಬಗ್ಗೆ ಈ ಮೊದಲೇ ಬಸವಣ್ಣನವರ ಕೆಲವು ವಚನಗಳನ್ನು ಹೇಳಲಾಗಿದೆ.

೨೨೪

ಯತಾತ್ಮಾ—ಬಸವಣ್ಣನವರು—

"ಕಾಮವೇಕೋ ಲಿಂಗಪ್ರೇಮಿಯೆನಿಸುವಂಗೆ ಕ್ರೋಧವೇಕೋ ಶರಣವೇದ್ಯನೆನಿಸುವಂಗೆ? ಲೋಭವೇಕೋ ಭಕ್ತಿಯ ಲಾಭವ ಬಯಸುವಂಗೆ? ಮೋಹವೇಕೋ ಪ್ರಸಾದವೇದ್ಯನೆನಿಸುವಂಗೆ? ಮದಮತ್ಸರವುಳ್ಳವಂಗೆ ಹೃದಯಶುದ್ಧವೆಲ್ಲಿಯದೊ? ಹದುಳಿಗರಾದಲ್ಲಿಪ್ಪ ಕೂಡಲಸಂಗಮದೇವಾ"

೨೨೫

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ, ಇದೇ ನಮ್ಮ ಕೂಡಲಸಂಗನನೊಲಿಸುವ ಪರಿ"

ದಕ್ಷಃ—ಆಲಸ್ಯರಹಿತನು—ಆಲಸ್ಯರಾದವರನ್ನು ಬಸವಣ್ಣನವರು ಬಹಳ ವಚನಗಳಲ್ಲಿ ಜರಿದಿರುತ್ತಾರೆ.

ಲಿಂಗಕ್ಕಾದರೂ ಕಾಯಕದಿಂದಲೇ ಮುಕ್ತಿಯೆಂದು ಒಂದು ಕಡೆಗೆ ಹೇಳಿದ್ದಾರೆ. ಇದರಿಂದ ತಿಳಿಯುವದೇನಂದರೆ ಆಲಸ್ಯಕ್ಕೆ ಎಡೆಯಿಲ್ಲದೆ ಮಾನವನು ತನ್ನ ಕಾಯಕದಲ್ಲಿ ದುಡಿಯಬೇಕು.

ಯೇತುಧರ್ಮಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।
ಶ್ರದ್ಧಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥

ಯಾರು ಈ ಧರ್ಮಾಮೃತವನ್ನು ಯಥೇಚ್ಛವಾಗಿ ಪಾನಮಾಡುತ್ತಾರೆಯೋ ಅವರೇ ನನಗೆ ಪ್ರಿಯರಾದ ಭಕ್ತರಾಗುವರು. ಇಲ್ಲಿಗೆ ಹನ್ನೆರಡನೆಯ ಅಧ್ಯಾಯವು ಮುಗಿದಿರುತ್ತದೆ.

## ಭಗವದ್ಗೀತೆ—೧೦, ೧೧ ನೆಯ ಅಧ್ಯಾಯಗಳು

ಈ ಎರಡು ಅಧ್ಯಾಯಗಳಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ದೇವರ ವಿರಾಟ್ ಸ್ವರೂಪವನ್ನು ವರ್ಣಿಸಿರುತ್ತಾನೆ. ಹತ್ತನೆಯ ಅಧ್ಯಾಯದಲ್ಲಿ ೪೨ ಶ್ಲೋಕಗಳೂ, ೧೧ ನೆಯ ಅಧ್ಯಾಯದಲ್ಲಿ ೫೫ ಶ್ಲೋಕಗಳೂ ಇರುತ್ತವೆ.

ನಾನು ವೇದಗಳಲ್ಲಿ ಸಾಮವೇದ, ದೇವತೆಗಳಲ್ಲಿ ಇಂದ್ರ, ರುದ್ರರಲ್ಲಿ ಶಂಕರ, ವೃಕ್ಷಗಳಲ್ಲಿ ಅಶ್ವತ್ಥ, ದೇವತೆಗಳಲ್ಲಿ ನಾರದ, ಮಹರ್ಷಿಗಳಲ್ಲಿ ಭೃಗು, ಗಂಧರ್ವರಲ್ಲಿ ಚೈತ್ರರಥ, ಅಕ್ಷರಗಳಲ್ಲಿ ಅಕಾರ—ಇರುತ್ತೇನೆ. ಹೀಗೆಂದು ದೇವರ ವರ್ಣನೆಯಲ್ಲಿಯೇ ಹತ್ತನೆಯ ಅಧ್ಯಾಯವು ಮುಗಿದಿರುತ್ತದೆ.

ದ್ಯಾವಾ ಪೃಥಿವ್ಯೋರಿದಮಂತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚಸರ್ವಾಃ ।
ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥

ಅಂದರೆ ಆಕಾಶ ಪೃಥ್ವಿಗಳು ನಿನ್ನೊಬ್ಬನಿಂದಲೇ ವ್ಯಾಪಿಸಲ್ಪಟ್ಟಿರುತ್ತವೆ. ಎಲ್ಲ ದಿಕ್ಕುಗಳನ್ನೂ ನೀನೊಬ್ಬನೇ ವ್ಯಾಪಿಸಿರುವೆ. ನಿನ್ನ ಅದ್ಭುತವಾದ ರೂಪವನ್ನು ನೋಡಿ ಲೋಕತ್ರಯಂಗಳು ಭಯಭೀತವಾಗಿರುತ್ತವೆ.

ಶ್ರೀ ಬಸವಣ್ಣನವರು ದೇವರ ವಿರಾಟ್ ಸ್ವರೂಪವನ್ನು ಅನೇಕ ವಚನಗಳಲ್ಲಿ ವರ್ಣಿಸಿರುತ್ತಾರೆ. ಒಂದೆರಡು ವಚನಗಳನ್ನು ಮಾತ್ರ ಇಲ್ಲಿ ಕೊಡಬೇಕಾಗಿದೆ.

೨೨೬

ಒಂದು ಸಾರಿ ಪ್ರಭುದೇವರು ಭೋಜನಕ್ಕೆ ಕುಳಿತಾಗ ಬಸವಣ್ಣನವರು—

"ದೇವ ದೇವ ಮಹಾಪ್ರಸಾದ ಅವಧರಿಸಯ್ಯ ಎನ್ನ ಬಿನ್ನಪವ ಅತಳ, ವಿತಳ, ಸುತಳ, ತಳಾತಳ, ರಸಾತಳ, ಮಹೀತಳ, ಪಾತಾಳಾದಿ ಲೋಕದಿಂದತ್ತತ್ತ ನಿಮ್ಮ ಶ್ರೀ ಚರಣ ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹಾಲೋಕ, ಜನಲೋಕ, ತಪೋಲೋಕ, ಸತ್ಯಲೋಕ ದಿಂದತ್ತತ್ತ ನಿಮ್ಮುತ್ತಮಾಂಗ ತನುವಿನೊಳಗೆ ಅನಲಭರಿತವಾಗಿರ್ದು ಮಥನದಿಂ ತೋರಿ ಆಹುತಿಗೊಂಬಂತೆ ಸರ್ವಕರ್ತ ನಿತ್ಯಾನಂದಮಯನೆ ಭಕ್ತಲೀಲಾವಿನೋದನೆ ಕೂಡಲಸಂಗಮದೇವಾ ಸುಚಿತ್ತದಲ್ಲಿ ಮನವಿಾಸಲ ಬೋನವನಾರೋಗಿಸಯ್ಯಾ" "ಸ್ವಾಮಿ ನೀನು ಶಾಶ್ವತ ನೀನು ಎತ್ತಿದೆ ಬಿರುದ ಜಗವೆಲ್ಲರಿಯಲು ಮಹಾದೇವ ಮಹಾದೇವ ಇಲ್ಲಿಂದ ಮುಂದೆ ಶಬ್ದವಿಲ್ಲ ಪಶುಪತಿ ಜಗಕ್ಕೇಕೋದೇವ ಸ್ವರ್ಗ ಮರ್ತ್ಯ ಪಾತಾಳದೊಳಗೆ ಒಬ್ಬನೇ ದೇವ ಕೂಡಲಸಂಗಮದೇವ"

ಅನೇಕ ಬಾಹೂದರ ವಕ್ತ್ರನೇತ್ರಂ ಪಶ್ಯಾಮಿ ತ್ವಾಂ ಸರ್ವತೋನಂತರೂಪಂ ।
ನಾಂತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪಂ ॥

ಅಂದರೆ ಅನೇಕ ಭುಜಗಳು, ಅನೇಕ ಹೊಟ್ಟೆಗಳು, ಮುಖಗಳು, ನೇತ್ರಗಳುಳ್ಳ ಆದ್ಯಂತ ಶೂನ್ಯವಾದ ವಿಶ್ವರೂಪನಾದ ವಿಶ್ವೇಶ್ವರನೇ ನಿನ್ನನ್ನು ನೋಡುತ್ತೇನೆ.

ಇದಕ್ಕೆ ಸರಿಯಾಗಿ ಬಸವಣ್ಣನವರು—ಸಾಸಿರ ಭುಜ, ಸಾಸಿರ ತಲೆ, ಸಾಸಿರ ನೇತ್ರಗಳೆಂದು ಹೇಳಿದ್ದಾರೆ. ಶ್ರೀ ಕೃಷ್ಣನು ಅರ್ಜುನನಿಗೆ ನಾನೇ ದೇವರೆಂದು ಹೇಳುವಂತೆ ಅರ್ಥಾತ್ ದೇವರ ಗುಣಗಳನ್ನು ವರ್ಣನೆ ಮಾಡಿದಂತೆಯೆ ಬಸವಣ್ಣನವರು ಶಿವನೇ ಇಂತಹ ವಿರಾಟ್ ಸ್ವರೂಪನೆಂದು ಹೇಳಿ ಆ ಶಿವನೇ ಲಿಂಗವೆಂದು ಅವರ ಪ್ರತಿಪಾದನೆ ಇರುತ್ತದೆ. ಈ ಎರಡು ಅಧ್ಯಾಯಗಳಲ್ಲಿಯ ಪ್ರತಿಯೊಂದು ಶ್ಲೋಕಕ್ಕೂ ಬಸವಣ್ಣನವರ ವಚನಗಳಿರುತ್ತವೆ.

೯ನೆಯ ಅಧ್ಯಾಯದಲ್ಲಿ ೩೪ ಶ್ಲೋಕಗಳಿದ್ದು ದೇವರ ಐಶ್ವರ್ಯದ ವರ್ಣನೆ ಇರುತ್ತದೆ.

ಮಯಾತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।
ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥

ಅತೀಂದ್ರಿಯ ಸ್ವರೂಪನಾದ ನನ್ನಿಂದ ಈ ಜಗತ್ತು ವ್ಯಾಪಿಸಲ್ಪಟ್ಟಿರುತ್ತದೆ. ನನ್ನಲ್ಲಿಯೇ ಚರಾಚರಾತ್ಮಕಗಳಾದ ಪ್ರಾಣಿಗಳೆಲ್ಲ ಇರುತ್ತವೆ. ನಾನು ಮಾತ್ರ ಅವುಗಳಲ್ಲಿರುವದಿಲ್ಲ.

೨೨೭

"ವಿಶ್ವದೊಳಗೆಲ್ಲ ನೀನೇ ದೇವ, ವಿಶ್ವಭರಿತನು ನೀನೇ ದೇವ, ವಿಶ್ವಪತಿ ನೀನೇ ದೇವ, ವಿಶ್ವಾತೀತನು ನೀನೇ ದೇವ"

ಬಸವಾದಿ ಶಿವಶರಣರು ಮುಕ್ತಿಯ ಹೊರತು ಬೇರೆ ಯಾವ ಸುಖವನ್ನೂ ಬೇಡ ತಕ್ಕವರಲ್ಲ. ಸುಖಗಳಲ್ಲಿ ಹೆಚ್ಚಿನ ಸುಖವೆಂದೆನ್ನಿಸಿಕೊಳ್ಳುವ ಸ್ವರ್ಗಸುಖವನ್ನೂ ಕೂಡ ಬಹಳ ಜರೆದಿರುತ್ತಾರೆ. ಸಕಾಮಿಗಳಾಗಿ ಉತ್ಕೃಷ್ಟಗಳಾದ ಯಜನಾದಿ ಕಾರ್ಯಗಳನ್ನು ಮಾಡಿದರೆ ಸ್ವರ್ಗಾದಿಸುಖಗಳು ಸಿಗುತ್ತವೆಯಷ್ಟೆ? ಆದರೆ ಇವುಗಳು ಸ್ಥಿರವಾದ ಸುಖ ಗಳಲ್ಲ. ಇವುಗಳ ಬೆನ್ನುಹತ್ತಿದರೆ ಪರಮಾತ್ಮನ ನಿಜಸ್ವರೂಪವಾದ ಮೋಕ್ಷವೆಂದಿಗೂ ಸಿಗಲಾರದೆಂದು ಹೇಳಿರುತ್ತಾರೆ. ಈ ವಿಷಯದಲ್ಲಿ ಗೀತೆಯು ಬಸವಣ್ಣನವರ ಮಾರ್ಗ ಕ್ಕಿಂತ ಯತ್ಕಿಂಚಿತ್ತಾದರೂ ಭಿನ್ನವಾಗಿರುವದಿಲ್ಲ.

ತ್ರೈವಿದ್ಯಾಮಾಂ ಸೋಮಪಾಃ ಪೂತಪಾಪಾ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।
ತೇ ಪುಣ್ಯಮಾಸಾದ್ಯ ಸುರೇಂದ್ರಲೋಕಮಶ್ನಂತಿ ದಿವ್ಯಾನ್ದಿವಿ ದೇವಭೋಗಾನ್ ॥
ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇಪುಣ್ಯೇ ಮರ್ತ್ಯಲೋಕಂ ವಿಶಂತಿ ॥
ಏವಂ ತ್ರಯೀ ಧರ್ಮ ಮನುಪ್ರಪನ್ನಾ ಗತಾಗತಂ ಕಾಮ ಕಾಮಾ ಲಭಂತೇ ॥

ಅಂದರೆ ವೇದತ್ರಯಗಳಲ್ಲಿ ಹೇಳಲ್ಪಟ್ಟಂತಹ ಕರ್ಮದಲ್ಲಿ ತತ್ಪರರಾದವರು ಸೋಮ ರಸಾದಿಗಳನ್ನು ಪಾನಮಾಡಿ ಪವಿತ್ರರಾಗಿ ಸ್ವರ್ಗವನ್ನು ಹೊಂದುತ್ತಾರೆ. ಅವರು ಸ್ವರ್ಗದ ಸುಖವನ್ನು ವಿಪುಲವಾಗಿ ಭೋಗಿಸಿ ಪುಣ್ಯ ತೀರಿದಮೇಲೆ ಮರ್ತ್ಯಲೋಕಕ್ಕೆ ಬರುತ್ತಾರೆ. ಮತ್ತು ಪುಣ್ಯಕಾರ್ಯಗಳನ್ನು ಮಾಡಿ ಪುನಃ ಸ್ವರ್ಗಕ್ಕೂ ಸ್ವರ್ಗದಿಂದ ಮರ್ತ್ಯಕ್ಕೂ ಗಮನಾಗಮನಾದಿಗಳನ್ನು ಮಾಡುತ್ತಲೇ ಇರುತ್ತಾರೆ.

೨೨೮

ಪ್ರಭುದೇವರು—

"ಅನ್ನವನಿಕ್ಕಿ ಸನ್ನಿಯ ನುಡಿದು ಅರವಟ್ಟಿಗೆಯನಿಕ್ಕಿ ಕೆರೆಯ ಕಟ್ಟಿಸಿದರೆ ಮರಣದಿಂದ ಮೇಲೆ ಸ್ವರ್ಗವುಂಟಲ್ಲದೆ ಶಿವನ ನಿಜವು ಸಾಧ್ಯ ವಾಗಲಾರದು ಗುಹೇಶ್ವರನ ಅರಿದ ಶರಣಂಗೆ ಆವ ಫಲವೂ ಇಲ್ಲ"

೨೨೯

"ಕೆರೆ ದೇಗುಲಂಗಳೆಲ್ಲವೂ ಹಿಂದಣ ಅಡಿವಜ್ಜೆಗೊಳಗು ಕರ್ಮ ಕಾಂಡ ಯೋಗಂಗಳೆಲ್ಲವೂ ಭವದ ತೆಕ್ಕೆಗೆ ಒಳಗು ಹಿಂದಣ ಮುಂದಣ ಸಂದನಳಿದು ಗುಹೇಶ್ವರಲಿಂಗದಲ್ಲಿ ಸಂದಿರಬೇಕು ಸಿದ್ಧರಾಮಯ್ಯ"

೨೩೦

ಮೋಳಿಗೆಯ ಮಾರಯ್ಯ—

"ಕಾಯ ಸಮಾಧಿಯನೊಲ್ಲೆ ಜೀವನೆನಹು ಸಮಾಧಿಯನೊಲ್ಲೆ ಕೈಲಾಸವೆಂಬ ಭವಸಾಗರವನೊಲ್ಲೆ ನೀ ಎನ್ನ ಅಲ್ಲಿಗೆ ಇಲ್ಲಿಗೆ ಎಳೆಯದೆ ನಿನ್ನಲ್ಲಿ ಕೂಟಸ್ಥಾನ ಮಾಡಾ ನಿಃಕಳಂಕ ಮಲ್ಲಿಕಾರ್ಜುನಾ"

೨೩೧

ಬಾಚರಸರು—

"ಈ ಕ್ರಿಯೆಗೆ ಈ ಫಲ ಈ ಪುಷ್ಪಕ್ಕೀ ಫಲ ಎಂಬ ಕೈಕೂಲಿಕಾರರು ಅವರೆಲ್ಲ ಕರ್ಮಿಗಳಯ್ಯ ಪುಣ್ಯಪಾಪಗಳನುಂಬ ಕರ್ಮಿಗಳಯ್ಯ ಒಡಲೊಡವೆ ಪಡೆವರ್ಥ ಮೃಡದೇವಸೊಡ್ಡಳನಿಗೆ ಎಂಬಾತ ಬೆಡಗಿನ ಶಿವಪುತ್ರ ಉಳಿದವ ರೆಲ್ಲರು ಜಗದ ಮಿತ್ರರು ಸ್ವರ್ಗನರಕವನುಂಬ ಕರ್ಮಿಗಳಯ್ಯ"

ಈ ನಾಲ್ಕು ವಚನಗಳನ್ನು ವಿಚಾರಪೂರ್ವಕ ಓದಿ ನೋಡಿದರೆ ಕೆರೆ, ದೇಗುಲ, ಅನ್ನ ಛತ್ರ, ಅರವಟ್ಟಿಗೆ ಮೊದಲಾದ ಪುಣ್ಯಕರ್ಮಗಳನ್ನು ಮಾಡಿದವರಿಗೆ ಸ್ವರ್ಗಸುಖವಾಗುತ್ತದೆ. ಶಿವನ ನಿಜವಾದ ಸಾನ್ನಿಧ್ಯವು ಆಗಲಾರದು. ಪರಮಾತ್ಮನ ನಿಜಸ್ವರೂಪವನ್ನು ತಿಳಿದ ಶರಣನಿಗೆ ಯಾವ ಫಲವೂ ಆಗಲಾರದು. ಆದ್ದರಿಂದ ಗುಹೇಶ್ವರಲಿಂಗದಲ್ಲಿ ಕೂಡಿಕೊಂಡಿರಬೇಕು. ಈ ಕಾರ್ಯವನ್ನು ಮಾಡಿದರೆ ಇಷ್ಟು ಫಲ ಆ ಕಾರ್ಯವನ್ನು ಮಾಡಿದರೆ ಅಷ್ಟು ಫಲ. ಈ ಪುಷ್ಪವನ್ನು ದೇವರಿಗೆ ಅರ್ಪಿಸಿದರೆ ಇಷ್ಟು ಫಲವೆಂದು ಹೇಳುವವರೆಲ್ಲ ಪುಣ್ಯಪಾಪಗಳನ್ನುಣ್ಣುವ ಕರ್ಮಿಗಳು ಮತ್ತು ಸ್ವರ್ಗನರಕಗಳನ್ನು ಉಣ್ಣತಕ್ಕವರು. ಆದ್ದರಿಂದ ಶರಣರು ಕಾಯಸಮಾಧಿ ಒಲ್ಲೆ ಜೀವಸಮಾಧಿ ಒಲ್ಲೆ ಕೈಲಾಸದ ಹಂಗೂ ನಮಗೆ ಬೇಡ ಅಲ್ಲಿಗೂ ಇಲ್ಲಿಗೂ ಕಳಿಸದೆ ಇರತಕ್ಕ ನಿನ್ನಲ್ಲಿ ಕೂಡಿಸಿಕೊಳ್ಳು ಎಂದು ಹೇಳುತ್ತಾರೆ. ಕ್ಷಣಿಕ ಸುಖಗಳಾದ ಸ್ವರ್ಗಾದಿ ಫಲಗಳು ಅವರಿಗೆ ಎಷ್ಟೂ ಬೇಕಾಗಿರುವದಿಲ್ಲ. ಪರಮಾತ್ಮನ ಸಾನ್ನಿಧ್ಯವನ್ನು ಹೊಂದುವದೇ ಅವರ ಜೀವನದ ಗುರಿ.

ಸೂಕ್ಷ್ಮಾಗಮದಲ್ಲಿಯೂ ಕೂಡ—"ಕೈಲಾಸಾದಿ ಪದಾಕಾಂಕ್ಷಾಂ ತ್ಯಜೇಲ್ಲಿಂಗಾಂಗ ಯೋಗಭಾಕ್" ಎಂದು ಹೇಳಿದೆ. ಲಿಂಗಾಂಗ ಸಾಮರಸ್ಯವನ್ನು ಹೊಂದಬೇಕೆಂಬುವವನು ಕೈಲಾಸಾದಿ ಪದವಿಗಳ ಅಪೇಕ್ಷೆಯನ್ನು ಮಾಡಬಾರದು.

೨೩೨

ಪ್ರಭುದೇವರು—

"ಸತ್ತು ಹುಟ್ಟಿ ಕೆಟ್ಟವರೆಲ್ಲರೂ ದೇವಲೋಕಕ್ಕೆ ಹೋದರೆಂಬ ಬಾಲ ಭಾಷೆಯ ಕೇಳಲಾಗದು ಸಾಯದ ಮುನ್ನ ಸ್ವಯವನರಿದಡೆ ದೇವನೊಲಿವ ನಮ್ಮ ಗುಹೇಶ್ವರನು"

೨೩೩

"ಸತ್ತಬಳಿಕ ಮುಕ್ತಿಯ ಹಡೆದಿಹೆನೆಂದು ಪೂಜಿಸಹೋದರೆ ಆ ದೇವರೇನ ಕೊಡುವನೋ? ಸಾಯದೆ ನೋಯದೆ ಸ್ವತಂತ್ರನಾಗಿ ಸಂದುಭೇದವಿಲ್ಲದಿರ್ಪ ಗುಹೇಶ್ವರಾ ನಿಮ್ಮ ಶರಣ"

ಈ ಎರಡು ವಚನಗಳಲ್ಲಿ ಪ್ರಭುದೇವರು ಹೇಳುವದೇನಂದರೆ—ಸತ್ತಮೇಲೆ ಪುಣ್ಯ ಲೋಕಗಳು ದೊರೆಯುತ್ತವೆಂದು ತಿಳಿದು ಕಾರ್ಯವನ್ನು ಮಾಡತಕ್ಕವರೇ ಬಹಳ. ಆದರೆ ಮನುಷ್ಯನು ಆ ಹುಚ್ಚುತನಕ್ಕೆ ಹೋಗದೆ ಜೀವಂತನಿದ್ದಾಗ ಜ್ಞಾನವನ್ನು ಪಡೆದು ಐಕ್ಯದ ಅನುಭವವನ್ನು ಮಾಡಿಕೊಂಡು ಜೀವನ್ಮುಕ್ತನಾಗಬೇಕು.

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥**

ಅನನ್ಯಮನಸ್ಕನಾಗಿ ಯಾವಾತನು ನನ್ನ ಚಿಂತನೆಯನ್ನು ಮಾಡುತ್ತ ಉಪಾಸನೆಯನ್ನು ಮಾಡುತ್ತಾನೆಯೋ ಆತನ ಕ್ಷೇಮಲಾಭಗಳನ್ನು ನಾನು ವಹಿಸುತ್ತೇನೆ.

ಅನನ್ಯಮನಸ್ಕನಾಗಿ ಯಾವಾತನು ಪರಮಾತ್ಮ ಧ್ಯಾನವನ್ನು ಮಾಡುತ್ತಾನೆಯೋ ಆತನಿಗೆ ಯಾರ ಹಂಗೂ ಇರುವದಿಲ್ಲವೆಂಬುವ ಬಗ್ಗೆ—

**೨೩೪**

ಪ್ರಭುದೇವರು—

"ಪುಣ್ಯಪಾಪವಿಲ್ಲವಾಗಿ ಯಮನ ಹಂಗಿಲ್ಲ ಬಂದುದನುಂಬನಾಗಿ ಮಾನವರ ಹಂಗಿಲ್ಲ ಭವಗೆಟ್ಟನಾಗಿ ದೈವದ ಹಂಗಿಲ್ಲ ಸತ್ಯಜ್ಞಾನಾನಂದವೇ ತಾನಾಗಿ ಇನ್ನಾರ ಹಂಗಿಲ್ಲ ಇನ್ನಾರ ಹಂಗಿಲ್ಲದಾತ ಗುಹೇಶ್ವರ ನಲ್ಲಯ್ಯ ನೊಬ್ಬನೇ"

**೨೩೫**

"ಕರಣಾದಿ ಗುಣಂಗಳಳಿದು ನವಚಕ್ರಂಗಳು ಭಿನ್ನವಾದಬಳಿಕ ಇನ್ನೇನೋ ಇನ್ನೇನೋ ಸ್ವರ್ಗವಿಲ್ಲ ನರಕವಿಲ್ಲ ಇನ್ನೇನೋ ಇನ್ನೇನೋ ಪುಣ್ಯವಿಲ್ಲ ಪಾಪವಿಲ್ಲ ಇನ್ನೇನೋ ಇನ್ನೇನೋ ಗುಹೇಶ್ವರ ಲಿಂಗವೇಧಿಸಿ ಸುಖಿಯಾದಬಳಿಕ ಇನ್ನೇನೋ ಇನ್ನೇನೋ?"

ಹೀಗೆಯೇ ಸ್ವಾರಸ್ಯವಾಗಿ ಅನೇಕ ವಚನಗಳನ್ನು ಹೇಳಿರುತ್ತಾರೆ.

**ಗೀತೆ—ಅಧ್ಯಾಯ ೯, ಶ್ಲೋಕ ೨೬**

ಪತ್ರಂ ಪುಷ್ಪಂ ಫಲಂತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥

ಅಂದರೆ ಒಂದು ಪತ್ರೆಯನ್ನೇ ಆಗಲಿ ಪುಷ್ಪ ಫಲ ನೀರನ್ನೇ ಆಗಲಿ ಯಾರು ನನಗೆ ಭಕ್ತಿಯಿಂದ ಅರ್ಪಿಸುತ್ತಾರೆಯೋ ಅದನ್ನು ನಾನು ಪ್ರೇಮದಿಂದ ಸ್ವೀಕರಿಸುತ್ತೇನೆ.

**೨೩೬**

ಬಸವಣ್ಣನವರು—

"ಒಲವಿಲ್ಲದ ಪೂಜೆ ನೇಹವಿಲ್ಲದ ಮಾಟ ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣ ಚಿತ್ರದ ಕಬ್ಬು ಕಾಣಿರಣ್ಣ, ಅಪ್ಪಿದರೆ ಸುಖವಿಲ್ಲ ಮೆಲಿದರೆ ಸವಿಯಿಲ್ಲ ಕೂಡಲಸಂಗಮದೇವ ನಿಜವಿಲ್ಲದವನ ಭಕ್ತಿ"

೨೩೭

"ಗೀತವ ಹಾಡಿದರೇನು ? ಶಾಸ್ತ್ರಪುರಾಣಗಳ ಕೇಳಿದರೇನು ? ವೇದ ವೇದಾಂತವನೋದಿದರೇನು ? ಮನವೊಲಿದು ಲಿಂಗಜಂಗಮ ಪೂಜಿಸಲರಿಯದವರು ಎಲ್ಲರಲ್ಲಿ ಅನುಭಾವಿಗಳಾದರೇನು ? ಭಕ್ತಿಯಿಲ್ಲದವರನೊಲ್ಲ ನಮ್ಮ ಕೂಡಲಸಂಗಮದೇವ"

ಗೀತೆ

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್ ।
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ ॥

ಅರ್ಜುನನೇ ನೀನು ಯಾವುದನ್ನು ಮಾಡುವಿ, ತಿನ್ನುವಿ, ತಪಸ್ಸನ್ನು ಮಾಡುವಿ ಅವೆಲ್ಲವುಗಳನ್ನೂ ನನಗೆ ಅರ್ಪಿಸು.

ಬಸವೇಶ್ವರಾದಿ ಮಹಾ ಶಿವಶರಣರೆಲ್ಲರೂ ಶಿವನಿಗರ್ಪಿತವಾಗದ ಯಾವ ಪದಾರ್ಥಗಳನ್ನೂ ಮುಟ್ಟಲಾರರು.

೨೩೮

ಬಸವಣ್ಣನವರು—

"ಲಿಂಗಮುಖದಿಂದ ಬಂದ ಪ್ರಸಾದವಲ್ಲದೆ ಕೊಂಡೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ, ಲಿಂಗಾರ್ಪಿತವಲ್ಲದೆ ಉದಕವ ಮುಕ್ಕುಳಿಸಿದರೆ ಸಲ್ಲೆನು ನಿಮ್ಮ ಗಣಾಚಾರಕ್ಕಯ್ಯ, ಲಿಂಗಾರ್ಪಿತವಲ್ಲದೆ ಹಲ್ಲುಕಡ್ಡಿಯ ಕೊಂಡರೆ ಬಲ್ಲೆ ಮುಂದೆ ಭವಘೋರ ನರಕವೆಂಬುದ ನಿಮಗೆತ್ತಿದ ಕರದಲ್ಲಿ ಮತ್ತೊಂದಕ್ಕೆ ಕೈಯಾನೆನು ಅಳವನರಿಯದೆ ನುಡಿದೆನು. ಕಡೆಮುಟ್ಟ ಸಲಿಸದಿದ್ದಡೆ ತಲೆದಂಡ ತಲೆದಂಡ ಕೂಡಲಸಂಗಮದೇವ"

ಶ್ರೀ ಕೃಷ್ಣನು ನೀನು ಮಾಡಿದ್ದನ್ನು ನನಗೆ ಅರ್ಪಿಸು ಎಂದು ಹೇಳಿದರೆ ಶ್ರೀ ಬಸವಣ್ಣನವರು ನಾನು ಮಾಡಿದ್ದನ್ನು ನಿನಗೆ (ದೇವರಿಗೆ) ಅರ್ಪಿಸದಿದ್ದರೆ ನನ್ನ ಮನವು ನಾಚುನದೆಂದು ದೇವರಿಗೆ ಬೇಡಿಕೊಳ್ಳುತ್ತಾರೆ.

೨೩೯

"ಒಡೆಯರಿಗೊಡವೆಯವೊಪ್ಪಿಸಲಾರದೆ ಮೊರೆ ಇಡುವ ಮಾನವ ನಾನೇನೆಂಬೆ? ನೆತ್ತಿಯಲ್ಲಿ ಅಲಗತಿರುಹುವಂತಪ್ಪ ವೇದನೆಯಹುದೆನಗೆ ಕೊಯ್ದ ಮೂಗಿಂಗೆ ಕನ್ನಡಿಯ ತೋರಿದಂತಪ್ಪ ವೇದನೆಯಹುದೆನಗೆ ಬೆಂದ ಹುಣ್ಣ ಕಂಬಿಯಲ್ಲಿ ಕೀಸುವಂತಪ್ಪ ವೇದನೆಯಹುದೆನಗೆ ಕೂಡಲಸಂಗಮದೇವ ಮಾಡಿಸೋಡುವ ಹಗರಣವ ನಾ ಮಾಡಿಹೆನೆಂದರೆ ಮನಕ್ಕೆ ಮನ ನಾಚದೇ ಅಯ್ಯ"

ಒಡೆಯರ ಪದಾರ್ಥವನ್ನು ಒಡೆಯರಿಗೆ ಒಪ್ಪಿಸದಿದ್ದ ಮನುಷ್ಯರಿಗೆ ನಾನೇನೆಂದುಹೇಳಲಿ. ನೆತ್ತಿಯಲ್ಲಿ ಅಲಗನ್ನು ಚುಚ್ಚಿ ತಿರುವಿದರೆ ಆಗುವಷ್ಟು ನೋವು ನನಗಾಗುತ್ತದೆ. ಮೂಗನ್ನು ಕೊಯ್ದು ಕನ್ನಡಿಯನ್ನು ಕೊಟ್ಟರೆ ಅವನಿಗೆಷ್ಟು ವ್ಯಥೆಯಾಗುತ್ತದೆಯೋ ಅಷ್ಟೇ ನೊವು ಒಡೆಯರ ಒಡವೆಯನ್ನು ಒಪ್ಪಿಸದಿದ್ದರೆ ನನಗೆ ವ್ಯಥೆಯಾಗುತ್ತದೆಂದು

ಬಸವಣ್ಣನವರು ಕಳವಳಗೊಂಡಿರುತ್ತಾರೆ. ಪರಮಾತ್ಮನ ವಿಷಯದಲ್ಲಿ ಅವರಿಗೆ ಅದೆಷ್ಟು ದೃಢತರವಾದ ಪ್ರೇಮವಿರಬಹುದೆಂಬುವದನ್ನು ತೋರಿಸಿಕೊಡುತ್ತದೆ.

ಪದಾರ್ಥಗಳನ್ನು ಪರಮಾತ್ಮನಿಗೆ ಹೇಗೆ ಅರ್ಪಿಸಿ ತಾನು ಭೋಗಮಾಡಬೇಕೆಂಬುವ ವಿಷಯದಲ್ಲಿ ಶರಣರ ವಚನಗಳು ಮನಕರಗುವಂತಿರುತ್ತವೆ.

೨೪೦

ಉರಿಲಿಂಗಪೆದ್ದಿಗಳು—

"ಹೊನ್ನು ಹೆಣ್ಣು ಮಣ್ಣು ಅನ್ನ ಉದಕ ದ್ರವ್ಯಂಗಳು ಧರ್ಮ ದಾಸ್ಯಕಾರಣ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ, ಪಾಶೆಕಾರಣ ಪಂಚಮಹಾಪಾತಕಂಗಳಮಾಡಿದ ದೋಷಂಗಳ ಕಾರಣ ಆಧಿಕಾರಣ, ವ್ಯಾಧಿಕಾರಣ, ಕೀರ್ತಿಕಾರಣ, ವಾರ್ತೆಕಾರಣ, ಸರ್ವವನು ನಿರಂತರ ಕೊಡುವರು, ನಿಷ್ಕಾರಣವಾಗಿ ನಿರುಪಾಧಿಕರಾಗಿ ನಿರಾಶ್ರಿತರಾಗಿ, ಶ್ರೀ ಗುರುಕರುಣವಾಗಿ, ಲಿಂಗಕಾರಣವಾಗಿ, ಜಂಗಮಕಾರಣವಾಗಿ, ಪ್ರಸಾದಕಾರಣವಾಗಿ ಈ ನಾಲ್ಕನು ಒಂದುಮಾಡಿ ಸದ್ಭಕ್ತಿಯಿಂದ ದ್ವಿವಿಧವು ಪರಿಣಮಿಸುವಂತೆ ಕ್ಷಣಮಾತ್ರದಲ್ಲಿ ಅಣುಮಾತ್ರ ದ್ರವ್ಯವ ಕೊಡುವವರಾರನು ಕಾಣೆ ನಿರ್ವಂಚಕರಾಗಿ ಆನು ವಂಚಕನು ಎನಗೆ ಭಕ್ತಿಯಿಲ್ಲ ಶಿವಶಿವ ಸಂಗನ ಬಸವಣ್ಣ ನಿರ್ವಂಚಕನು, ನಿರಾಶಾಭರಿತನು ಸುಚರಿತ್ರನು ಸದ್ಭಕ್ತಿ ಪುರುಷನು, ಮಹಾಪುರುಷನು ಎನಗೆ ಮಹಾ ಶ್ರೀ ಗುರುಲಿಂಗ ಜಂಗಮ ಪ್ರಸಾದ ಈ ಚತುರ್ವಿಧವು ಬಸವಣ್ಣನು ಈ ಬಸವಣ್ಣನ ಭೃತ್ಯರ ಭೃತ್ಯನಾಗಿ ಎನ್ನನಿರಿಸಯ್ಯಾ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ"

ವಂಚನೆಯಿಲ್ಲದೆ ಭಕ್ತಿಯಿಂದ ದೇವರಿಗೆ ಬಸವಣ್ಣನವರ ಹೊರತು ಅರ್ಪಿಸುವವರಾರನೂ ಕಾಣೆನು. ಆದ್ದರಿಂದ ನನ್ನನ್ನು ಬಸವಣ್ಣನವರ ಭೃತ್ಯರ ಭೃತ್ಯರನ್ನಾಗಿರಿಸೆಂದು ತನ್ನ ಇಷ್ಟಲಿಂಗಸ್ವಾಮಿಗೆ ಬೇಡಿಕೊಳ್ಳುತ್ತಾನೆ.

೨೪೧

ಪ್ರಭುದೇವರು—

"ಹಸಿವಾಯಿತ್ತೆಂದು ಹಸಿದು ಮಜ್ಜನಕ್ಕೆರೆವರಯ್ಯ ತೃಷೆಯಾಯಿತ್ತೆಂದು ಅರ್ಪಿತವ ಮಾಡುವರಯ್ಯ ಇದೆಂತು ಭಕ್ತಿ ಸಂಬಂಧ ಕಾರಣವಿಲ್ಲದ ಭಕ್ತಿಯ ಕಂಡಡೆ ಹೊರಗೆ ನೂಕುವನು ಮಹೇಶ್ವರಾ"

ಯಾವದಾದರೊಂದು ಪದಾರ್ಥವನ್ನು ಭಕ್ತಿಯಿಂದ ಅರ್ಪಿಸಬೇಕೆಂಬುವದೇ ಈ ವಚನದ ತಾತ್ಪರ್ಯ.

ಗೀತೆ

ಅಪಿಚೇತ್ಸುದುರಾಚಾರೋ ಭಜತೇಮಾಮನನ್ಯಭಾಕ್ ।
ಸಾಧುರೇವಸಮಂತವ್ಯಃ ಸಮ್ಯಗ್ವ್ಯವಸಿತೋಹಿ ಸಃ ॥
ಮಾಂಹಿ ಪಾರ್ಥವ್ಯಪಾಶ್ರಿತ್ಯಯೇಽಪಿಸ್ಯುಃ ಪಾಪಯೋನಯಃ ।
ಸ್ತ್ರಿಯೋವೈಶ್ಯಾಸ್ತಥಾ ಶೂದ್ರಾಸ್ತೇಽಪಿಯಾಂತಿ ಪರಾಂಗತಿಂ ॥

ಅಂದರೆ ದುರಾಚಾರಿಯಾದವನೂ ಕೂಡ ನನ್ನನ್ನು ಅನನ್ಯಭಕ್ತಿಯಿಂದ ಭಜಿಸಿದರೆ ಅವನು ಸಾಧುವೆಂದೇ ತಿಳಿಯಬೇಕು. ಪಾಪಯೋನಿಗಳಲ್ಲಿ ಜನಿಸಿದವರಾಗಲಿ, ಸ್ತ್ರೀಯರಾಗಲಿ, ಶೂದ್ರರಾಗಲಿ, ವೇಶ್ಯಾಸ್ತ್ರೀಯರೇ ಇರಲಿ ನನ್ನನ್ನು ಸೇವಿಸಿದರೆ ಅವರು ಶ್ರೇಷ್ಠವಾದ ಸ್ಥಾನವನ್ನು ಅಂದರೆ ಮೋಕ್ಷವನ್ನು ಹೊಂದುತ್ತಾರೆ.

ಈ ಗೀತೆಯ ಮುತ್ತಿನಂತಹ ಮಾತು ಲೋಕದೊಳಗೆ ಬಸವಣ್ಣನವರ ಹೊರತು ಬೇರೆ ಯಾರಲ್ಲಿಯೂ ಕೃತಿಯಲ್ಲಿ ಬಂದಿರುವದಿಲ್ಲವೆಂದು ಧಾರಾಳವಾಗಿ ಹೇಳಬಹುದು. ಶರಣರು ಜಗತ್ತಿನ ಮಾನವರಿಗೆ ಈ ವಿಷಯದಲ್ಲಿ ಉತ್ತಮವಾದ ಮಾರ್ಗವನ್ನು ಹಾಕಿ ಕೊಟ್ಟಿದ್ದಾರೆ. ಯಾವ ಜಾತಿಯವನೇ ಇರಲಿ ಅವನು ಶಿವಭಕ್ತಿ ಸಂಪನ್ನನಾಗಿದ್ದರೆ ಅವನು ಶ್ರೇಷ್ಠ ಸ್ಥಾನವನ್ನು ಹೊಂದುತ್ತಾನೆಂದು ಹೇಳಿ ಕೃತಿಯಲ್ಲಿಯೂ ತಂದಿರುತ್ತಾರೆ. ಗೀತೆಯ ಅನುಯಾಯಿಗಳಲ್ಲಿ ಗೀತೆಯ ಈ ಮಾತು ಕೃತಿಯಲ್ಲಿ ಬಂದಿದ್ದರೆ ಆರು ಕೋಟಿ ಅಸ್ಪೃಶ್ಯರು ಇಂದಿಗೆ ಕೊಳೆಯುತ್ತ ಇರುತ್ತಿರಲಿಲ್ಲ. ಬಸವಣ್ಣನವರು ವೀರಶೈವ ಸಮಾಜ ವನ್ನು ಈ ವಿಷಯದಲ್ಲಿ ಜೀವಂತ ಸಮಾಜವನ್ನು ಮಾಡಿರುತ್ತಾರೆ. ನುಡಿಯಂತೆ ನಡೆ ಇದ್ದ ಸಮಾಜವೇ ಜೀವಂತ ಸಮಾಜವೆಂದು ಹೇಳಬಹುದು.

೨೪೨

ಬಸವಣ್ಣನವರು—

"ಎಡದ ಕೈಯಲ್ಲಿ ಕತ್ತಿ ಬಲದ ಕೈಯಲ್ಲಿ ಮಾಂಸ ಬಾಯಲಿ
ಸುರೆಯಗಡಿಗೆ ಕೊರಳಲಿ ದೇವರಿರಲು ಅವರ ಲಿಂಗವೆಂಬೆ ಸಂಗನೆಂಬೆ
ಕೂಡಲಸಂಗಮದೇವ ಅವರ ಮುಖಲಿಂಗಿಗಳೆಂಬೆನು"

ಇದರ ಅರ್ಥವೇನಂದರೆ ಎಂತಹ ದುರಾಚಾರಿಯೇ ಇರಲಿ ಅವನು ಲಿಂಗಧಾರಣಮಾಡಿ ಕೊಂಡರೆ ಅವನಿಗೆ ನಾನು ಸಂಗನೆಂದು ತಿಳಿಯುತ್ತೇನೆಂದು ಬಸವಣ್ಣನವರು ಹೇಳು ತ್ತಾರೆ. ದುರಾಚಾರಿಗಳನ್ನು ಅನೇಕ ತರಹದಿಂದ ಖಂಡಿಸಿದ ಬಸವಣ್ಣನವರು ಹೀಗೇಕೆ ಹೇಳುತ್ತಾರೆಂದು ಕೆಲವರು ಕೇಳಬಹುದು. ದುರಾಚಾರಿಯಾಗಿದ್ದವನು ಸದಾಚಾರಿ ಯಾಗಿ ಸದ್ಭಕ್ತಿಯಿಂದ ಕೂಡಿಕೊಂಡರೆ ಅವನ ದುರಾಚಾರಗಳೆಲ್ಲ ನಾಶವಾಗಿಹೋಗು ತ್ತವೆ. ಸ್ತ್ರೀಯರಾಗಲಿ, ಪಾಪಯೋನಿಗಳಲ್ಲಿ ಜನಿಸಿದವರಾಗಲಿ, ಶೂದ್ರರಾಗಲಿ ನನ್ನನ್ನು ಭಜಿಸಿದರೆ ಉತ್ತಮ ಗತಿಯನ್ನು ಹೊಂದುತ್ತಾರೆಂದು ಗೀತೆಯು ಹೇಳಿದರೆ ಶರಣರು ಬಹಳ ಮುಂದೆ ಹೋಗಿ ಈ ಕಾರ್ಯವನ್ನು ಯಶಸ್ವಿಯನ್ನಾಗಿ ಮಾಡಿರುತ್ತಾರೆ.

ವೀರಶೈವರಲ್ಲಿ ಸ್ತ್ರೀ ಪುರುಷರೆಂಬುವ ಭೇದವಂತೂ ಮೊದಲೇ ಇರುವದಿಲ್ಲ. ಹುಟ್ಟಿದ ಕೂಡಲೇ ಸ್ತ್ರೀಯರಿಗೂ ಕೂಡ ಲಿಂಗದೀಕ್ಷಾ ಸಂಸ್ಕಾರವಾಗುತ್ತದೆ. ಶೂದ್ರ ರಾಗಲಿ ಅಥವಾ ಯಾವ ಜಾತಿಯವನೇ ಆಗಲಿ ಸದಾಚಾರಿಯಾಗಿದ್ದರೆ ಅವನು ಶಿವ ದೀಕ್ಷೆಗೆ ಯೋಗ್ಯನಾಗುತ್ತಾನೆಂಬುವದಕ್ಕೆ ಮಧುವಯ್ಯನೆಂಬುವ ಬ್ರಾಹ್ಮಣನಿಗೂ, ಹರಳಯ್ಯನೆಂಬುವ ಮೊಚ್ಚೆಗಾರನಿಗೂ ಶಿವಲಿಂಗದೀಕ್ಷೆಯನ್ನುಮಾಡಿ ಅವರಲ್ಲಿ ಬೀಗತನ ವನ್ನು ಮಾಡಿಸಿದ ಕಾರ್ಯವೇ ಬಸವಣ್ಣನವರ ನುಡಿಯಂತೆ ನಡೆಗೆ ಒರೆಗಲ್ಲಾಗಿ ಇರುತ್ತವೆ. "ಆವ ಕುಲದವನಾದರೇನು? ಶಿವಲಿಂಗವಿದ್ದವನೇ ಕುಲಜನೆಂದು" ಹೇಳಿರುವರು.

**ಸೂಕ್ಷ್ಮಾಗಮ—ಪುಟ ೭೨, ಪಟಲ ೩**

ಏವಂ ಸಮರಸಾದ್ಭಾವಾದಂಗಷಟ್ಸ್ಥಲಯೋಗತಃ ॥ ೬೮ ॥
ಯಃ ಪೂಜಯತಿ ಮಾಂ ದೇವಿ ವೀರಶೈವಃ ಸ ಉಚ್ಯತೇ ।
ತಸ್ಮಾಲಿಂಗಾರ್ಚನಂಕುರ್ಯಾದ್ವ್ಯಥಾಯೋಗಮತಂದ್ರಿತಃ ॥
ಲಿಂಗೇಸಂಪೂಜಿತೇ ತಸ್ಮಿನ್ಸೂಜಿತಾಃ ಸರ್ವದೇವತಾಃ ।
ಕೃತ್ವಾ ಷೋಡಶದಾನಾನಿ ಯತ್ಫಲಂ ಪ್ರತಿಪದ್ಯತೇ ॥
ತತ್ಫಲಂ ಸಮವಾಪ್ನೋತಿ ಲಿಂಗಸ್ಯೈಕಪುಷ್ಪಕಃ ।
ಮಹಾಪಾತಕಯುಕ್ತೋವಾ ಯುಕ್ತೋವಾ ಸರ್ವಪಾತಕೈಃ ॥
ಜಪನ್ಪಂಚಾಕ್ಷರಂ ಮಂತ್ರಂ ಲಿಂಗಂ ಸ್ಪೃಷ್ಟ್ವಾ ವಿಮುಚ್ಯತೇ ।
ದರ್ಶನಾತ್ಸರ್ವಪಾಪಘ್ನಂ ಸ್ಪರ್ಶನಾದಖಿಲಾರ್ಥದಂ ॥

ಅಂದರೆ ಸಮರಸಭಾವನೆಯಿಂದ ಲಿಂಗವನ್ನು ಷಟ್‌ಸ್ಥಲಕ್ಕನುಸರಿಸಿ ಯಾವನು ಪೂಜೆಯನ್ನು ಮಾಡುತ್ತಾನೆಯೋ ಅವನಿಗೆ ವೀರಶೈವನೆಂದು ಹೆಸರು. ಆದ್ದರಿಂದ ಆಲಸ್ಯವಿಲ್ಲದೆ ಲಿಂಗವನ್ನು ಪೂಜಿಸಬೇಕು. ಹಾಗೆ ಪೂಜಿಸಿದರೆ ಎಲ್ಲ ದೇವತೆಗಳನ್ನೂ ಪೂಜಿಸಿದಂತೆ ಆಗುತ್ತದೆ. ಲಿಂಗಕ್ಕೆ ಒಂದು ಪುಷ್ಪವನ್ನು ಧರಿಸಿದರೆ ಷೋಡಶದಾನಗಳನ್ನು ಮಾಡಿದ ಫಲವು ಬರುತ್ತದೆ. ಮಹಾಪಾತಕ ಅಥವಾ ಸರ್ವಪಾತಕಗಳಿಂದ ಕೂಡಿದ್ದರೂ ಅವನು ಲಿಂಗವನ್ನು ಪೂಜಿಸಿದರೆ ಆ ಪಾತಕಗಳಿಂದ ಬಿಡುಗಡೆ ಹೊಂದಿ ಮೋಕ್ಷವನ್ನು ಸಂಪಾದಿಸುತ್ತಾನೆ.

**ಗೀತೆ—೧, ೨ನೆಯ ಅಧ್ಯಾಯಗಳು**

ಭಗವದ್ಗೀತೆಯ ಮೊದಲನೆಯ ಅಧ್ಯಾಯದಲ್ಲಿ ವಿಶೇಷ ಸಂಗತಿಗಳೇನೂ ಇರುವದಿಲ್ಲ. ಉಭಯ ಸೈನ್ಯಗಳನ್ನು ನೋಡಿ ಬಂಧು ಬಾಂಧವರನ್ನೂ, ಗುರುಹಿರಿಯರನ್ನೂ ಕೊಂದು ನಾನು ರಾಜ್ಯಪಡೆಯಬೇಕೆ? ಎಂದು ಭಯಂಚಕಿತನಾಗಿ ಅರ್ಜುನನು ತನ್ನ ರಥದಲ್ಲಿ ಶಸ್ತ್ರಾಸ್ತ್ರಗಳನ್ನು ಬಿಟ್ಟು ಸುಮ್ಮನೇ ಕುಳಿತುಕೊಳ್ಳುತ್ತಾನೆ.

ಎರಡನೆಯ ಅಧ್ಯಾಯದಲ್ಲಿ—ಆತ್ಮತತ್ವವನ್ನು ಶ್ರೀ ಕೃಷ್ಣನು ಅರ್ಜುನನಿಗೆ ಬೋಧಿಸುತ್ತ ಆತ್ಮವು ಅಮರವಾದುದು.

ನ ಜಾಯತೇ ನ ಮ್ರಿಯತೇ ಕದಾಚಿನ್ನಾಯಂ ಭೂತ್ವಾಭವಿತಾ ವಾ ನ ಭೂಯಃ ।
ಅಜೋ ನಿತ್ಯೋ ಶಾಶ್ವತೋಽಯಮ್ ಪುರಾಣೋನಹನ್ಯಮಾನೇ ಶರೀರೇ ॥

ಆತ್ಮನು ಹುಟ್ಟುವದಿಲ್ಲ, ಸಾಯುವದಿಲ್ಲ, ಅಜನು, ನಿತ್ಯನು, ಶಾಶ್ವತನು ಎಂದು ಹೇಳುತ್ತ ಈ ಅಧ್ಯಾಯದ ಕೊನೆಯಲ್ಲಿ—ಹುಟ್ಟಿದ ಮನುಷ್ಯನು ಸಾಯುವದೂ ಸತ್ತ ಮನುಷ್ಯನು ಹುಟ್ಟುವದೂ ನಿಶ್ಚಯವಾದುದು. ಅದರಿಂದ ಅಪರಿಹಾರ್ಯವಾದ ಈ ಕಾರ್ಯದಲ್ಲಿ ನೀನು ವ್ಯಸನಪಡಬಾರದು. ಮನುಷ್ಯನು ಹಳೆಯ ಬಟ್ಟೆಗಳನ್ನು ಬಿಟ್ಟು ಹೊಸ ಬಟ್ಟೆಗಳನ್ನು ಹೇಗೆ ಧರಿಸುತ್ತಾನೆಯೋ ಹಾಗೆಯೇ ಆತ್ಮನು ಹಳೆಯ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಪ್ರವೇಶಿಸುತ್ತಾನೆ. ಇವನನ್ನು ಶಸ್ತ್ರಗಳು ಭೇದಿಸುವದಿಲ್ಲ, ಅಗ್ನಿಯು ಸುಡುವದಿಲ್ಲ, ನೀರು ಕ್ಲೇಶಗೊಳಿಸುವದಿಲ್ಲ, ಗಾಳಿಯು ಒಣಗಿಸುವದಿಲ್ಲ. ಧರ್ಮಕ್ಕಿಂತ ಯುದ್ಧವು ಶ್ರೇಷ್ಠವಾದುದು. ಕ್ಷತ್ರಿಯನಿಗೆ ಇದಕ್ಕಿಂತಲೂ ಹೆಚ್ಚಿನ ವಿಷಯ ಯಾವದೂ ಇರುವದಿಲ್ಲ. ಈ ಧಾರ್ಮಿಕ ಯುದ್ಧವನ್ನು ನೀನು ಮಾಡದೆ

ಇದ್ದರೆ ಪಾಪವನ್ನು ಹೊಂದುವಿ. ಸತ್ತರೆ ಸ್ವರ್ಗ ಸಿಗುವದು; ಗೆದ್ದರೆ ಪೃಥ್ವಿಯನ್ನಾಳುವಿ. ಆದ್ದರಿಂದ ಅರ್ಜುನನೇ ಯುದ್ಧಕ್ಕೆ ಸಿದ್ಧನಾಗು. ಹರ್ಷವಿಷಾದಗಳಿಂದ ಶೂನ್ಯನಾಗಿ ಈ ಕಾರ್ಯವನ್ನು ಮಾಡಬೇಕೆಂದು ಹೇಳುತ್ತ ಅರ್ಜುನನಿಗೆ ಕರ್ಮಯೋಗಿಯಾಗು ಎಂದು ಉಪದೇಶಿಸುತ್ತಾನೆ. ಮತ್ತು ಫಲಾಪೇಕ್ಷೆಯಿಲ್ಲದೆ ಕರ್ಮಗಳನ್ನು ಮಾಡಲು ಹೇಳುತ್ತಾನೆ.

ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ ।
ಮಾಕರ್ಮಫಲಹೇತುರ್ಮಾತೇ ಸಂಗೋಽಸ್ತ್ವಕರ್ಮಣಿ ॥

ನಿನಗೆ ಕೆಲಸವನ್ನು ಮಾತ್ರ ಮಾಡಲಿಕ್ಕೆ ಅಧಿಕಾರವಿರುತ್ತದೆ. ಫಲವನ್ನು ಮಾತ್ರ ಎಂದೂ ಆಶಿಸಬೇಡ; ಅದನ್ನಪೇಕ್ಷಿಸಿದರೆ ಬದ್ಧನಾಗುವಿ.

ಯೋಗಸ್ಥಃ ಕುರುಕರ್ಮಾಣಿ ಸಂಗಂತ್ಯಕ್ತ್ವಾ ಧನಂಜಯ ।
ಸಿಧ್ಯಸಿಧ್ಯೋಃ ಸಮೋಭೂತ್ವಾ ಸಮತ್ವಂ ಯೋಗ ಉಚ್ಯತೇ ॥

ಪರಮೇಶ್ವರನಲ್ಲಿ ನಿಷ್ಠಾವಂತನಾಗಿ ಕರ್ಮವನ್ನು ಮಾಡು. ಸಿಧ್ಯಸಿದ್ಧಿಗಳಲ್ಲಿ ಸಮಾನ ವಾದ ಮನಸ್ಸುಳ್ಳವನಾಗಿ ಕರ್ಮವನ್ನು ಮಾಡು. ಇದಕ್ಕೆ ಯೋಗವೆಂದು ಹೆಸರು. ಇಂತಹ ಕರ್ಮಯೋಗವನ್ನಾಚರಿಸು. "ಯೋಗಃ ಕರ್ಮಸು ಕೌಶಲಂ" ಕೇವಲ ಈಶ್ವರನ ಸಲುವಾಗಿ ಕರ್ಮವನ್ನು ಮಾಡತಕ್ಕ ಬುದ್ಧಿವಂತರು ಸರ್ವೋಪದ್ರವರಹಿತ ವಾದ ಮೋಕ್ಷವನ್ನು ಹೊಂದುತ್ತಾರೆ. ನೀನು ಈ ಮೋಹಮಯವಾದ ಮಾರ್ಗವನ್ನು ಬಿಟ್ಟರೆ ವೈರಾಗ್ಯವನ್ನು ಹೊಂದುವಿ. ಆಗ ಅರ್ಜುನನು ಕೊಂಚ ಚೇತರಿಸಿಕೊಂಡು ಸ್ಥಿತಪ್ರಜ್ಞನ ಲಕ್ಷಣಗಳೇನೆಂದು ಕೇಳುತ್ತಾನೆ.

ಪ್ರಜಹಾತಿ ಯದಾಕಾಮಾನ್ಸರ್ವಾನ್ ಪಾರ್ಥಮನೋಗತಾನ್ ।
ಆತ್ಮನ್ಯೇವಾತ್ಮನಾತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥
ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।
ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥
ಯಃ ಸರ್ವತ್ರಾನಭಿಸ್ನೇಹಸ್ತತ್ತ್ಪ್ರಾಪ್ಯ ಶುಭಾಶುಭವಮ್ ।
ನಾಭಿನಂದತಿ ನದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥
ಯದಾ ಸಂಹರತೇಚಾಯಂ ಕೂರ್ಮಾಂಗಾನೀವಸರ್ವಶಃ ।
ಇಂದ್ರಿಯಾಣಿಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥

ಯಾವಾತನು ಮನಸ್ಸಿನಲ್ಲಿರತಕ್ಕ ಇಚ್ಛೆಗಳನ್ನೆಲ್ಲ ಬಿಟ್ಟು ತನ್ನಾತ್ಮನಲ್ಲಿ ತಾನು ಸಂತುಷ್ಟ ನಾಗಿರುತ್ತಾನೆಯೋ, ದುಃಖದಲ್ಲಿ ಉದ್ವಿಗ್ನಮನಸ್ಕನಾಗದೆ ಸುಖದಲ್ಲಿ ಆಶಾರಹಿತನಾಗಿ, ರಾಗಭಯ ಕ್ರೋಧಾದಿಗಳಿಲ್ಲದೆ ಯಾವಾತನು ಇರುತ್ತಾನೆಯೋ ಪುತ್ರಮಿತ್ರಾದಿಗಳಲ್ಲಿ ಸ್ನೇಹಶೂನ್ಯನಾಗಿಯೂ, ಶುಭವಾದರೆ ಹಿಗ್ಗದೆ ಅಶುಭವಾದರೆ ಕುಗ್ಗದೆ—ಆಮೆಯು ತನ್ನ ಅವಯವಗಳನ್ನು ಹೇಗೆ ಸೂಕ್ಷ್ಮವಾಗಿ ಒಳಗೆ ಎಳೆದುಕೊಳ್ಳುತ್ತದೆಯೋ, ಶಬ್ದ, ರೂಪ, ರಸ, ಗಂಧ ಮೊದಲಾದ ವಿಷಯಗಳಿಗೆ ತನ್ನ ಇಂದ್ರಿಯಗಳನ್ನು ಬಿಡದೆ ತನ್ನಾಧೀನ ದಲ್ಲಿಟ್ಟುಕೊಳ್ಳುವವನಿಗೆ ಸ್ಥಿತಪ್ರಜ್ಞನೆಂದು ಹೆಸರು. ಇಂದ್ರಿಯಗಳ ಸಂಯಮನ ವಿಲ್ಲದೆ ಸ್ಥಿತಪ್ರತಿಜ್ಞತೆಯು ಸಂಭವಿಸುವದಿಲ್ಲ. ಸಾಧಕಾವಸ್ಥೆಯಲ್ಲಿ ಬಹಳ ಪ್ರಯತ್ನ ವನ್ನು ಮಾಡಬೇಕಾಗುತ್ತದೆ. ಪ್ರಯತ್ನಮಾಡಿದರೂ ಕೂಡ ಇಂದ್ರಿಯಗಳು ಬಲಾ ತ್ಕಾರವಾಗಿ ಮನಸ್ಸನ್ನು ಹರಣಮಾಡುತ್ತವೆ. ಆ ಇಂದ್ರಿಯಗಳ ಸಂಯಮನ ಮಾಡಿ

ಕೊಂಡು ನನ್ನ ಧ್ಯಾನಾಸಕ್ತನಾಗಬೇಕು. ಇಂದ್ರಿಯಗಳು ವಶವಾದವನ ಬುದ್ಧಿಯು ಸ್ಥಿರವಾಗಿರುವದು. ವಿಷಯಗಳನ್ನು ಧ್ಯಾನಿಸತಕ್ಕ ಪುರುಷನಿಗೆ ಆ ವಿಷಯಗಳ ಸಹವಾಸವಾಗುತ್ತದೆ. ವಿಷಯಗಳ ಸಂಗದಿಂದ ಕಾಮವೂ, ಕಾಮದಿಂದ ಕ್ರೋಧವೂ, ಕ್ರೋಧದಿಂದ ಕಾರ್ಯಾ ಕಾರ್ಯಗಳ ವಿವೇಕದ ಅಭಾವವೂ ಇದರಿಂದ ಸ್ಮೃತಿ ಭ್ರಂಶವೂ, ಸ್ಮೃತಿಭ್ರಂಶದಿಂದ ಬುದ್ಧಿನಷ್ಟವೂ, ಇದರಿಂದ ಕೊನೆಗೆ ನಾಶವೂ ಸಂಭವಿಸುತ್ತದೆ. ಮನುಷ್ಯನು ಪ್ರಶಾಂತಚಿತ್ತನಾಗಿದ್ದರೆ ಅವನ ಬುದ್ಧಿಯು ಚನ್ನಾಗಿರುತ್ತದೆ. ಮಾನವನು ಅಶಾಂತನಾದರೆ ಅವನಿಗೆ ಸುಖವೇ ಸಿಗುವದಿಲ್ಲ.

> ವಿಹಾಯಕಾಮಾನ್ ಯಃ ಸರ್ವಾನ್ ಪುಮಾನ್ಶ್ಚರತಿನಿಸ್ಪೃಹಃ ।
> ನಿರ್ಮಮೋ ನಿರಹಂಕಾರಃ ಸಶಾಂತಿಮಧಿಗಚ್ಛತಿ ॥

ಯಾವಾತನು ಎಲ್ಲ ವಿಷಯಗಳನ್ನು ಬಿಟ್ಟು ಆಶಾರಹಿತನಾಗಿ ಮಮಕಾರ ಅಹಂಕಾರಗಳನ್ನು ತ್ಯಜಿಸಿರುತ್ತಾನೆಯೋ ಅವನಿಗೆ ಶಾಂತಿಯು ಸಿಗುತ್ತದೆ. ಇನ್ನು ಮೂರನೇ ಮತ್ತು ನಾಲ್ಕನೆಯ ಅಧ್ಯಾಯಗಳೂ ಕೂಡ ಕರ್ಮಯೋಗವನ್ನೇ ಪ್ರತಿಪಾದಿಸುತ್ತವೆ. ೨-೩-೪ ಈ ಮೂರು ಅಧ್ಯಾಯಗಳು ಕರ್ಮಯೋಗ ಪ್ರತಿಪಾದಕಗಳಾಗಿರುತ್ತವೆ. ೩-೪ ಅಧ್ಯಾಯಗಳ ವಿಷಯವನ್ನು ಕೆಲಮಟ್ಟಿಗೆ ಇಲ್ಲಿ ವಿವರಿಸಿ ೨-೩-೪ ಈ ಅಧ್ಯಾಯಗಳ ಬಗ್ಗೆ ಶರಣರ ಅಭಿಪ್ರಾಯಗಳನ್ನು ವಿವರಿಸುತ್ತೇನೆ.

### ಗೀತೆ-ಅಧ್ಯಾಯ ೩, ಶ್ಲೋಕ ೫

> ನಹಿ ಕಶ್ಚಿಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।
> ಕಾರ್ಯತೇಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥

ಅಂದರೆ ಯಾವನೇ ಆಗಲಿ ಕರ್ಮವಿಲ್ಲದಲೆ ಕ್ಷಣಹೊತ್ತಾದರೂ ಇರಲಾರನು. ಸ್ವಭಾವಸಿದ್ಧಗಳಾದ ಗುಣಗಳಿಂದ ಎಲ್ಲರೂ ಕರ್ಮದಲ್ಲಿ ಪ್ರವೃತ್ತರಾಗುತ್ತಾರೆ. ಕರ್ಮವನ್ನು ಮಾಡದೆ ಇರುವದಕ್ಕಿಂತ ಕರ್ಮ ಮಾಡುವದೇ ಮೇಲಾದುದು. ಕರ್ಮಶೂನ್ಯನಾದರೆ ನಿನ್ನ ಶರೀರದ ಕಾರ್ಯ ನಿರ್ವಹಣವೇ ಆಗುವದಿಲ್ಲ. ಕರ್ಮವನ್ನು ಫಲಸಂಗರಹಿತವಾಗಿ ಮಾಡು. ಕರ್ಮದಿಂದಲೇ ಜನಕಾದಿಗಳು ಸಿದ್ಧಿಯನ್ನು ಹೊಂದಿರುತ್ತಾರೆ. ಒಟ್ಟನಮೇಲೆ ಈ ಮೂರು ಅಧ್ಯಾಯಗಳಲ್ಲಿ ಕರ್ಮಯೋಗದ ಪ್ರತಿಪಾದನವೇ ಇರುತ್ತದೆ. ಆದರೆ ನಾಲ್ಕನೆಯ ಅಧ್ಯಾಯದ ಕೊನೆಯಲ್ಲಿ ಕೆಲವು ಶ್ಲೋಕಗಳು ಮಾತ್ರ ಜ್ಞಾನಯಜ್ಞ ಪ್ರತಿಪಾದಕಗಳಾಗಿರುತ್ತವೆ.

ಈ ಮೂರು ಅಧ್ಯಾಯಗಳ ಸಾರಾಂಶವು— ಯಾವಾಗಲೂ ಕರ್ಮವನ್ನು ಮಾಡಬೇಕು, ಫಲಸಂಗರಹಿತನಾಗಿರಬೇಕು, ಮಾಡಿದ ಕರ್ಮವನ್ನು ಪರಮಾತ್ಮನಿಗೆ ಅರ್ಪಿಸಬೇಕು, ಸುಖದುಃಖಗಳಲ್ಲಿ ಸಮಾನನಾಗಿರಬೇಕು.

"ಶ್ರೀ ಬಸವಣ್ಣನವರೂ ಕ್ರಿಯಾಯೋಗವೂ" ಎಂಬುವ ಪ್ರಕರಣದಲ್ಲಿ ಈ ವಿಷಯದ ಬಗ್ಗೆ ಹೆಚ್ಚಿಗೆ ವಿವೇಚನೆ ಮಾಡಲಾಗಿದೆ. ಕೆಲವು ವಚನಗಳನ್ನು ಮಾತ್ರ ಇಲ್ಲಿ ಕೊಡಬೇಕಾಗಿದೆ. ಗೀತೆಯ ಕರ್ಮಯೋಗಕ್ಕೆ ಸರಿಯಾಗಿ ವೀರಶೈವರ ಪ್ರಸಾದಿಸ್ಥಲವನ್ನು ಹೇಳಬಹುದು.

೨೪೩

ಚನ್ನಬಸವಣ್ಣನವರು—

"ಅಂತರಂಗದಲ್ಲಿ ಅರಿವಾದಡೇನಯ್ಯ ಬಹಿರಂಗದಲ್ಲಿ ಕ್ರಿಯೆ ಇಲ್ಲದನ್ನಕ್ಕರ? ದೇಹವಿಲ್ಲದಿದ್ದರೆ ಪ್ರಾಣಕ್ಕೆ ಆಶ್ರಯ ಉಂಟೆ? ಕನ್ನಡಿ ಇಲ್ಲ ದಿದ್ದರೆ ತನ್ನ ಮುಖವು ಕಾಣಬಹುದೆ? ಸಾಕಾರ ನಿರಾಕಾರ ಏಕೋ ದೇವ ನಮ್ಮ ಕೂಡಲಚನ್ನಸಂಗಯ್ಯ"

೨೪೪

ಬಸವಣ್ಣನವರು—

"ಮಾಡುವಲ್ಲಿ ಎನ್ನ ನಾನರಿದು ಮಾಡಿದೆನಾದಡೆ ನೀಡುವಲ್ಲಿ ಎನ್ನ ನಾನರಿದು ನೀಡಿದನಾದಡೆ ನೀಡುವಲ್ಲಿ ರುಚಿಗೆ ಮನವೆಳಸಿ ಹಾರೈಸಿದೆನಾದಡೆ ನಿಮಗಂದೇ ದ್ರೋಹವಯ್ಯ ಮಾಡುವಲ್ಲಿ ನೀಡುವಲ್ಲಿ ಶುದ್ಧನಲ್ಲದಿರ್ದಡೆ ನೀನಂದೇ ಮೂಗ ಕೊಯ್ಯ ಕೂಡಲಸಂಗಮದೇವಾ"

೨೪೫

"ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ ಮಾಡಿದೆನೆನ್ನದಿರಾಲಿಂಗಕ್ಕೆ ಮಾಡಿದೆನೆನ್ನದಿರಾಜಂಗಮಕ್ಕೆ ಮಾಡಿದೆನೆಂಬುದು ಮನದಲ್ಲಿಲ್ಲದಿರ್ದಡೆ ಬೇಡಿದ್ದನೀವ ನಮ್ಮ ಕೂಡಲ ಸಂಗಮದೇವಾ"

ಪರಮಾತ್ಮನ ಸಲುವಾಗಿ ಕಾರ್ಯವನ್ನು ಮಾಡೆಂದು ಗೀತೆಯು ಹೇಳಿದರೆ,

೨೪೬

ಬಸವಣ್ಣನವರು—

"ಲಿಂಗಕ್ಕೆಂದೇ ನೆನೆವೆ ಲಿಂಗಕ್ಕೆಂದೇ ಮಾಡುವೆ ಲಿಂಗಕ್ಕೆಂದೇ ಕೂಡುವೆನು ನಾನಯ್ಯ ಸಕಲ ಪದಾರ್ಥಂಗಳ ಲಿಂಗಕ್ಕೆಂದೇ ಭಾವಿಸುವೆ ಅಂಗಗುಣಂಗಳನರಿಯೆನಯ್ಯ ಲಿಂಗಕ್ಕೆಂದೇ ಕಾಸಿಸುವೆನು ನಿಃಕಾಮಿ ಯಾಗಿ ಎನ್ನ ದೇಹೇಂದ್ರಿಯ ಮನ ಪ್ರಾಣಾದಿಗಳು ಲಿಂಗದ ಸತಿಯರಾಗಿ ಲಿಂಗಕ್ಕೆಂದೇ ಬಯಸಿ ಲಿಂಗಪ್ರಾಣಿಗಳಾದಕಾರಣ ಲಿಂಗಕ್ಕೆಂದೇ ಕೈಕೊಂಬೆನು ಅನರ್ಪಿತವನರಿಯೆ ಕೂಡಲಸಂಗಮದೇವಾ"

೨೪೭

ಮರುಳುಶಂಕರದೇವರು—

"ಇಷ್ಟಲಿಂಗಕ್ಕೆ ಅಂಗವನರ್ಪಿತವ ಮಾಡಬೇಕು ಪ್ರಾಣಲಿಂಗಕ್ಕೆ ಮನವ ಸಮರ್ಪಿಸಬೇಕು ಭಾವಲಿಂಗಕ್ಕೆ ತೃಪ್ತಿಯನರ್ಪಿತವ ಮಾಡಬೇಕು ಈ ಮರ್ಮವನರಿಯಬಲ್ಲಡೆ ಪ್ರಸಾದಿ ಅದೆಂತೆಂದೊಡೆ 'ಇಷ್ಟಲಿಂಗಾರ್ಪಿತಂ ಅಂಗಂ ಪ್ರಾಣಲಿಂಗಾರ್ಪಿತಂ ಮನಃ ಭಾವಲಿಂಗಾರ್ಪಿತಂ ತೃಪ್ತಿರ್ಯಿತಿ

ಭೇದಂ ವರಾನನೇ' ಎಂಬುದಾಗಿ ಲಿಂಗಕ್ಕೆಯೂ ತನಗೆಯೂ ಎಡೆತೆರ ಹಿಲ್ಲದೆ ಲಿಂಗಸಹಿತವಾಗಿಯೇ ಕೇಳುವ, ಲಿಂಗಸಹಿತವಾಗಿಯೇ ಘ್ರಾಣಿಸುವ, ಲಿಂಗಸಹಿತವಾಗಿಯೇ ರುಚಿಸುವ ಲಿಂಗಸಹಿತವಾಗಿಯೇ ನೋಡುವ ಲಿಂಗಸಹಿತವಾಗಿಯೇ ತೊಳಗುವ, ಇಂತಪ್ಪ ಮಹಾಮಹಿಮ ಸದ್ಭಕ್ತನ ಅಂಗವೆಲ್ಲವೂ ಲಿಂಗ ಲಿಂಗವೆಲ್ಲವೂ ಅಂಗ ಅಂಗಸಂಗವೆಲ್ಲವೂ ಲಿಂಗಸಂಗ ವಾದಕಾರಣ ಅಂಗಕ್ರಿಯೆಗಳೆಲ್ಲ ಲಿಂಗಕ್ರಿಯೆಗಳಾದಕಾರಣ ಅಂಗಭೋಗ ವೆಲ್ಲವೂ ಲಿಂಗಭೋಗವಾದಕಾರಣ ಇಂತಪ್ಪ ಮಹಾಮಹಿಮ ಸದ್ಭಕ್ತನ ಶ್ರೀ ಚರಣಕ್ಕೆ ಎನ್ನ ಶಿರವನರ್ಪಿಸಿ ಪೂಜಿಸುವೆಕಾರಣ ಶುದ್ಧ ಸಿದ್ಧ ಪ್ರಸಿದ್ಧ ಪ್ರಭುವೆ ಶಾಂತ ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಸದ್ಭಕ್ತನ ನಿಲವಿನ ಪರಿ ನೀವೇ ಬಲ್ಲಿದರಲ್ಲದೆ ನಾನೆತ್ತ ಬಲ್ಲೆನಯ್ಯ ನಿಮ್ಮ ಧರ್ಮ ನಿಮ್ಮ ಧರ್ಮ ನಿಮ್ಮ ಧರ್ಮ"

ಈ ವಚನವು ಬಹಳ ದೊಡ್ಡದಾಗಿರುತ್ತದೆ, ಅದರ ತಾತ್ಪರ್ಯವಿಷ್ಟೆ. ಭಕ್ತನು ತನ್ನ ಶರೀರ, ಮನಸ್ಸು, ತೃಪ್ತಿಗಳನ್ನು ಅನನ್ಯಭಾವನೆಯಿಂದ ಅರ್ಪಿಸಬೇಕೆಂಬುವದೇ ಆಗಿರುವದು. ಇಂತಹ ಅಭೇದ ಭಾವನೆಯ ಅರ್ಪಣವು ವೀರಶೈವಶರಣರಲ್ಲಿ ಅತ್ಯಂತ ಕೊನೆಯ ಮಟ್ಟವನ್ನು ಮುಟ್ಟದೆ ಎಂದು ಹೇಳಲು ಯಾವ ಅಭ್ಯಂತರವೂ ಇರುವದಿಲ್ಲ. ಹೀಗೆ ಅರ್ಪಣಮಾಡತಕ್ಕ ಸದ್ಭಕ್ತನೇ ಶ್ರೇಷ್ಠನು. ಅರ್ಥಾತ್ ಆತನು ದೇವರ ಸ್ವರೂಪ ನಾಗುವನು. ಗೀತೆಯಲ್ಲಾದರೂ ಅನನ್ಯಭಾವನೆಯಿಂದ ಕರ್ಮವನ್ನೆಸಗುವ ಭಕ್ತನು ತನ್ನ ಸ್ವರೂಪನಾಗುತ್ತಾನೆಂದು ಶ್ರೀ ಕೃಷ್ಣನು ಹೇಳಿರುವನು. ಕರ್ಮವನ್ನು ಮಾಡದೆ ಇರತಕ್ಕ ಮನುಷ್ಯನು ಕ್ಷಣಮಾತ್ರವಾದರೂ ನಿಲ್ಲಲಾರನೆಂತಲೂ, ಸ್ವಾಭಾವಿಕಗಳಾದ ಕರ್ಮಗಳು ತಮ್ಮಿಷ್ಟಕ್ಕೆ ತಾವೇ ಬರುತ್ತವೆಂತಲೂ ಗೀತೆಯಲ್ಲಿ ಹೇಳಿದೆ.

೨೪೮

ಸ್ವತಂತ್ರಸಿದ್ಧಲಿಂಗದೇವರು—

"ಸಂಚಿತ, ಪ್ರಾರಬ್ಧ, ಆಗಾಮಿ, ಕರ್ಮಗಳು ಬೆನ್ನಬಿಡವು ನೋಡಾ ಆರನಾದರೂ ಮೂಗರಮಾಡಿ ಕಾಡಿ ಕೊಲ್ಲುತ್ತಿಹವು ನೋಡಾ ಹಿಂದೆ ಮಾಡಿದ ಕರ್ಮ ಬಿಡೆಂದರೆ ಬಿಡುವುದೇ? ಮುಂದೆ ಉಂಡಲ್ಲದೆ ತೀರದು ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನು ಕಡೆಗಣ್ಣಿಲಿ ನೋಡುವನ್ನಕ್ಕ ಉಂಡು ತೀರದು ಕರ್ಮ"

೨೪೯

"ಮನೋವಾಕ್ಕಾಯದಿಂದ ಹುಟ್ಟಿದ ಕರ್ಮ ತೊಟ್ಟನೆ ತೊಳಲಿಸಿ ಬಳಲಿಸಿದಲ್ಲದೆ ಬಿಡದು ಕರ್ಮವ ಮೀರಿ ನಡೆವ ಬಲ್ಲಿದರನಾರನೂ ಕಾಣೆ ಬೊಮ್ಮಾದಿಗಳೆಲ್ಲ ಕರ್ಮಕ್ಕೀಡಾದರು. ಕರ್ಮವು ಅಜಹರಿಗಳ ಭಾರದ ಭವದಲ್ಲಿ ಬರಿಸಿತ್ತು ಕಾಣದ ದುಃಖವ ಕಾಣಿಸಿತ್ತು ಇನ್ನುಳಿದವರ ಹೇಳಲೇನುಂಟು? ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನ ಅಧೀನವಿಡಿದು ಕಾಣುವ ಕರ್ಮದ ಬಲುಹ ನೋಡಾ"

೨೫೦

ಬಸವಣ್ಣನವರು—

"ಪಂಡಿತನಾಗಲಿ ಮೂರ್ಖನಾಗಲಿ ಸಂಚಿತಕರ್ಮ ಉಂಡಲ್ಲದೆ ಬಿಡದು ಪ್ರಾರಬ್ಧಕರ್ಮ ಭೋಗಿಸಿದಲ್ಲದೆ ಹೋಗದೆಂದು ಶೃತಿ ಸಾರುತ್ತೈದಾವೆ ನೋಡಾ, ತಾನಾವ ಲೋಕದೊಳಗೆ ಇದ್ದಡೆಯೂ ಬಿಡದು, ಕರ್ಮಫಲಗೂಡಿ ಕೂಡಲಸಂಗಮದೇವಂಗೆ ಆತ್ಮನೈವೇದ್ಯವ ಮಾಡಿದಾತನೇ ಧನ್ಯನು"

ಗೀತೆಯು ೫ ನೆಯ ಅಧ್ಯಾಯದಲ್ಲಿ ಮುಕ್ತಿಯ ವಿಷಯವೇ ಹೆಚ್ಚಾಗಿ ಪ್ರತಿಪಾದಿಸಲ್ಪಟ್ಟಿರುತ್ತದೆ. ಆರಂಭದಲ್ಲಿ ಕರ್ಮದ ಬಗ್ಗೆ ಕೆಲವು ಶ್ಲೋಕಗಳಿವೆ. ಕರ್ಮವನ್ನು ಮಾಡಿದಾಗ್ಯೂ ಅದರಿಂದ ನಿರ್ಲಿಪ್ತನಾಗುತ್ತಾನೆಂಬುವದು ವಿರೋಧವಾಗುವದೆಂದು ಸಂಶಯಗೊಂಡು ಕರ್ತೃತ್ವಾಭಿಮಾನ ಇಲ್ಲದೆ ಇರುವದರಿಂದ ವಿರೋಧವಾಗಲಾರದೆಂದು

ನೈವಕಿಂಚಿತ್ಕರೋಮೀತಿ ಯುಕ್ತೋಮನ್ಯೇತ ತತ್ವವಿತ್ ।
ಪಶ್ಯನ್ಶೃಣ್ವನ್ ಸ್ಪೃಶನ್‌ಜಿಘ್ರನ್ನಶ್ನನ್ ಗಚ್ಛನ್ ಶ್ವಪನ್‌ಶ್ವಸನ್ ॥
ಪ್ರಲಪನ್‌ವಿಸೃಜನ್ ಗೃಣ್ಹನ್ ಉನ್ಮಿಷನ್ನಿಮಿಷನ್ನಪಿ ।
ಇಂದ್ರಿಯಾಣಿಂದ್ರಿಯಾರ್ಥೇಷು ವರ್ತಂತೇ ಇತಿ ಧಾರಯನ್ ॥

ಅಂದರೆ ಕರ್ಮಯೋಗದಿಂದ ಮುಕ್ತನಾದರೂ ದರ್ಶನ, ಭಾಷಣ, ಶ್ರವಣಾದಿಗಳನ್ನು ಮಾಡತಕ್ಕವನಾದರೂ ಕೂಡ ಅಭಿಮಾನವಿಲ್ಲದೆ ಇರುವದರಿಂದ ಕರ್ಮಬದ್ಧನಾಗುವದಿಲ್ಲ. ಪರಮೇಶ್ವರನಲ್ಲಿ ತಾನು ಮಾಡತಕ್ಕ ಕರ್ಮವನ್ನು ಅರ್ಪಿಸಿ ಮಾಡಿದರೆ ನೀರಿನಲ್ಲಿರತಕ್ಕ ಪದ್ಮಪತ್ರದಂತೆ ದೋಷಯುಕ್ತನಾಗುವದಿಲ್ಲ.

ವಿದ್ಯಾ ವಿನಯಸಂಪನ್ನೇ ಬ್ರಾಹ್ಮಣೇ ಗವಿಹಸ್ತಿನಿ ।
ಶುನಿಚೈವಶ್ವಪಾಕೇಚ ಪಂಡಿತಾಃ ಸಮದರ್ಶಿನಃ ॥
ಇಹೈವತೈರ್ಜಿತಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥

ವಿದ್ಯಾ ವಿನಯಸಂಪನ್ನನಾದ ಬ್ರಾಹ್ಮಣನಲ್ಲಿ ಆಕಳು, ನಾಯಿ, ಆನೆ, ನಾಯಿಯ ಪಾಕಮಾಡತಕ್ಕ ಮನುಷ್ಯನಲ್ಲಿ ಅರ್ಥಾತ್ ಅತ್ಯಂತ ನೀಚಾತ್ಮನಾದವನಲ್ಲಿ ಪಂಡಿತರಾದವರು ಅಂದರೆ ಜ್ಞಾನಿಗಳಾದವರು ಸಮಾನಬುದ್ಧಿಯಿಂದ ಕಾಣುತ್ತಾರೆ. ಯಾರ ಮನಸ್ಸು ಸರ್ವಪ್ರಾಣಿಗಳಲ್ಲಿ ಸಮಾನಭಾವನೆಯುಳ್ಳದ್ದಾಗಿರುತ್ತದೆಯೋ ಅವರು ಇದೇ ಲೋಕದಲ್ಲಿ ಸಂಸಾರವನ್ನು ಗೆದ್ದವರೆಂದೆನ್ನಿಸಿಕೊಳ್ಳುತ್ತಾರೆ. ಅವರೇ ಬ್ರಹ್ಮಭಾವವನ್ನು ಹೊಂದಿದವರೆಂದೆನ್ನಿಸಿಕೊಳ್ಳುತ್ತಾರೆ.

ಬಸವಣ್ಣನವರು ಅನೇಕ ವಚನಗಳಲ್ಲಿ ಸಮಾನಭಾವನೆಯನ್ನು ತೋರಿಸಿರುತ್ತಾರೆ—"ಶೆಟ್ಟಿಯೆಂಬೆನೆ ಶಿರಿಯಾಳನ? ಮಾದರನೆಂಬೆನೆ ಚನ್ನಯ್ಯನ? ಆನು ಹಾರುವನೆಂದರೆ ಕೂಡಲಸಂಗಮ ನಗುವ" ನೆಂದು ಹೇಳಿರುತ್ತಾರೆ.

೨೫೧

ದೇವರ ದಾಸೀಮಾರ್ಯರು—

"ಮಡದಿಯ ಪ್ರಾಣಕ್ಕೆ ಮೊಲೆ ಮುಡಿ ಇದ್ದಿತ್ತೇ? ಒಡೆಯನ ಪ್ರಾಣಕ್ಕೆ ಇದ್ದಿತ್ತೇ ಯಜ್ಞೋಪವೀತ ಕಡೆಯಲ್ಲಿದ ಅಂತ್ಯಜನು ಹಿಡಿ

ದಿದ್ದನೇ ಪ್ರಾಣದಲ್ಲಿ ಹಿಡಿಗೋಲ ನೀ ತೊಡಕಿಕ್ಕಿದ ತೊಡಕನೀಲೋಕದ
ಜನರೆತ್ತ ಬಲ್ಲರೈ ರಾಮನಾಥ"

ಅಂದರೆ ಸ್ತ್ರೀಯಳ ಶರೀರದಲ್ಲಿ ಕೂದಲು ಮೊಲೆಗಳಿದ್ದಂತೆ ಅವಳ ಪ್ರಾಣಲಿಂಗಕ್ಕೆ ಕಚ ಕುಚಗಳುಂಟೆ? ಇಲ್ಲ ವಿಪ್ರನ ಶರೀರದಲ್ಲಿ ಶಿಖಾ ಯಜ್ಞೋಪಗಳಿದ್ದಹಾಗೆ ಅವನ ಪ್ರಾಣದಲ್ಲಿ ಶಿಖಾ ಯಜ್ಞೋಪವೀತಗಳುಂಟೆ? ಇಲ್ಲ ಊರಿಂದ ಹೊರಗಿರ್ದ ಹೊಲೆಯನು ಕೈಯ್ಯಲ್ಲಿ ಒಂದಾಯುಧವ ಹಿಡಿದಹಾಗೆ ಆತ್ಮನಲ್ಲಿ ಹಿಡಿದಿಪ್ಪನೇ? ಇಲ್ಲ ಪರಶಿವನು ತನ್ನಂಶವಾದ ಆತ್ಮಂಗೆ ಶರೀರಸಂಬಂಧವ ಮಾಡಲು ಹೆಣ್ಣೆಂದು, ಗಂಡೆಂದು, ವಿಪ್ರನೆಂದು, ಹೊಲೆಯನೆಂದು ನೂರೊಂದು ಕುಲ ಹದಿನೆಂಟು ಜಾತಿಯನ್ನುಂಟು ಮಾಡಿ ಒಬ್ಬರಿಗೊಬ್ಬರು ಹೋರಾಡುವ ಬಂಧನವ ಈಜಡ ಅಚೇತನವಾದ ಜೀವರೆತ್ತ ಬಲ್ಲರು? ಅಂದರೆ ತಿಳಿಯಲಾರರು. ಇದಕ್ಕಿಂತಲೂ ಹೆಚ್ಚಿನ ಸಾಮ್ಯವಾದ ಲೋಕದಲ್ಲಿ ದೊರೆಯಲಾರದು.

ಗೀತೆಯ ೬ನೆಯ ಅಧ್ಯಾಯದಲ್ಲಿ ಧ್ಯಾನಯೋಗವು ಪ್ರಾಧಾನ್ಯವಾಗಿರುತ್ತದೆ. ಕರ್ಮಫಲವನ್ನಪೇಕ್ಷಿಸದೆ ನಾನು ಮಾಡತಕ್ಕ ಕರ್ತವ್ಯವೆಂದು ತಿಳಿದು ಮಾಡತಕ್ಕವನೇ ಸನ್ಯಾಸಿ ಅಥವಾ ಯೋಗಿ. ಇಂತಹ ಯೋಗಿಯಾದವನು ಶಾಂತಚಿತ್ತನಾಗಿಯೂ, ಇಂದ್ರಿಯಗಳಿಗೆ ಭೋಗ್ಯಗಳಾದ ಶಬ್ದರೂಪರಸಗಂಧಾದಿಗಳಲ್ಲಿ ಆಸಕ್ತಿಯನ್ನು ಮಾಡದೆ ಇರತಕ್ಕವನಾಗಿಯೂ ಇರುವವನಿಗೆ ಯೋಗಾರೂಢನೆಂದು ಹೆಸರು. ನಿರ್ವಿಕಾರ ಚಿತ್ತನಾಗಿ ಮೃತ್ಪಿಂಡ, ಪಾಷಾಣ, ಸುವರ್ಣಾದಿಗಳಲ್ಲಿ ಸಮಾನಬುದ್ಧಿಯುಳ್ಳವನಾಗಿರ ಬೇಕು. ಸದಾಚಾರಿ ಮತ್ತು ದುರಾಚಾರಿಗಳಲ್ಲಿಯೂ ಸಮಾನತೆ ತೋರಿಸಬೇಕು. ಭಯರಹಿತನಾಗಿ, ಬ್ರಹ್ಮಚಾರಿಯಾಗಿ, ಮನಸ್ಸನ್ನು ಸಂಯಮನಮಾಡಿ ನನ್ನಲ್ಲಿ ಧ್ಯಾನಾ ಸಕ್ತನಾಗಿರಬೇಕು. ವಾತರಹಿತಸ್ಥಾನದಲ್ಲಿದ್ದ ದೀಪದಂತೆ ನಿಶ್ಚಲನಾಗಿರತಕ್ಕವನೇ ಯೋಗಿ ಎಂದೆನ್ನಿಸಿಕೊಳ್ಳುತ್ತಾನೆ. ಮನಸ್ಸು ಮಾನವನ ಸ್ವಾಧೀನದಲ್ಲಿರುವದು ಬಹಳ ಕ್ಲೇಶಕರವಾದ ಕಾರ್ಯವಾಗಿರುವದರಿಂದ ಅದನ್ನು ಅಭ್ಯಾಸದಿಂದಲೂ, ವೈರಾಗ್ಯ ದಿಂದಲೂ ಸ್ವಾಧೀನದಲ್ಲಿಟ್ಟುಕೊಳ್ಳಬೇಕು. "ನಹಿ ಕಲ್ಯಾಣಕೃತ್ಕಶ್ಚಿತ್ ದುರ್ಗತಿಂ ತಾತ ಗಚ್ಛತಿ" ಶುಭ ಕಾರ್ಯಗಳನ್ನು ಮಾಡತಕ್ಕವನಿಗೆ ಎಂದಿಗೂ ದುರ್ಗತಿಯು ಬರಲಾರದು—ಹೀಗೆ ೬ನೆಯ ಅಧ್ಯಾಯ ಮುಗಿದಿದೆ.

"ಬಸವಣ್ಣನವರೂ ಧ್ಯಾನಯೋಗವೂ" ಎಂಬುವ ಪ್ರಕರಣದಲ್ಲಿ ಬಸವಣ್ಣನವರ ಧ್ಯಾನಯೋಗದ ಹಿರಿಮೆಯನ್ನು ಹೇಳಲಾಗಿದೆ. ಒಂದೆರಡು ವಚನಗಳನ್ನು ಇಲ್ಲಿ ನೋಡೋಣ.

೨೫೨

ಸ್ವತಂತ್ರಸಿದ್ಧಲಿಂಗದೇವರು—

"ಹರಿವ ಮನವಾಯುವನೊಂದು ಹುರಿಮಾಡಿ ಮನವ ಸ್ಥಿರಗೊಳಿಸಿ ಸಗುಣಧ್ಯಾನದಲ್ಲಿ ಮನವ ಸವಿದು ನಿರ್ಗುಣದಲ್ಲಿ ನಿಂದು ಆ ನಿರ್ಗುಣ ಧ್ಯಾನ ಬಲಿದು ಸಗುಣ ನಿರ್ಗುಣದಲ್ಲಿ ಅಡಗಿ ಆ ನಿರ್ಗುಣವಿಂದ ನಿಜದಲ್ಲಿ ಮನೋಲಯವಾದುದೇ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನ ಪರಮ ರಾಜಯೋಗ"

೨೫೩

ಬಸವಣ್ಣನವರು—

"ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯಾ ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯಾ, ಜಗಕ್ಕೆ ಬಲ್ಲಿದ ನೀನು ನಿನಗೆ ಬಲ್ಲಿದ ನಾನು ಕಂಡಯ್ಯ ಜಗವು ನಿನ್ನೊಳಗೆ ನೀನು ಎನ್ನೊಳಗೆ ಕರಿಯು ಕನ್ನಡಿಯೊಳಗೆ ಅಡಗಿದಂತಯ್ಯಾ ನೀನೆನ್ನೊಳಗಡಗಿದೆ ಕೂಡಲಸಂಗಮದೇವಾ"

ಈ ಅಧ್ಯಾಯದ ಕೊನೆಯಲ್ಲಿ—"ನಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ" ಉತ್ತಮ ಕೆಲಸಮಾಡುವವನಿಗೆ ದುರ್ಗತಿಯು ಬರಲಾರದು.

೨೫೪

ಬಸವಣ್ಣನವರು—

"ಕೆಡೆ ನಡೆಯದೆ ಕೆಡೆ ನುಡಿಯದೆ ಅನ್ಯರ ಪ್ರತಿಪಾದಿಸದಿದ್ದರೆ ಏನ ಮಾಡನಯ್ಯ ಲಿಂಗವು ಏನ ಕೊಡನಯ್ಯ ಲಿಂಗವು? ತಾನೇನ ಬೇಡಿದನೀವ ನಾಗಿ ನಂಬಿಕೆಯುಳ್ಳ ಶಿವಭಕ್ತಂಗೆ ಇದೇ ದಿವ್ಯ ಕೂಡಲಸಂಗಮದೇವಾ"

ಸಾಧಾರಣವಾಗಿ ಇಲ್ಲಿಯವರೆಗೆ ಗೀತೆಯ ಒಂದೊಂದೇ ಅಧ್ಯಾಯದಲ್ಲಿ ವಿಷಯಗಳನ್ನು ತೆಗೆದುಕೊಂಡು ಬಸವಣ್ಣನವರ ವಚನಗಳನ್ನು ಹೋಲಿಸಿ ನೋಡಿದ್ದಾಯಿತು. ಆದರೆ ಗೀತೆಯಲ್ಲಿದ್ದ ಎಲ್ಲ ವಿಷಯಗಳೂ ಬಸವಣ್ಣನವರ ವಚನಗಳಲ್ಲಿ ಬಂದಿರುತ್ತವೆ. ಗೀತೆಗೂ ಬಸವಣ್ಣನವರ ವಚನಗಳಿಗೂ ಇನ್ನೂ ಹೆಚ್ಚಿನ ಸಾಮ್ಯವನ್ನು ಒರೆಹಚ್ಚಿ ನೋಡ ಬಹುದಾಗಿದ್ದಿತು. ಇದೊಂದೇ ಪ್ರಕರಣವು ಒಂದು ದೊಡ್ಡ ಹೊತ್ತಿಗೆ ಆಗಬಹು ದೆಂದು ತಿಳಿದು ಸಂಕ್ಷೇಪಗೊಳಿಸಿರುತ್ತೇನೆ. ಗೀತೆಯ ಎಲ್ಲ ಶ್ಲೋಕಗಳಿಗೂ ಶರಣರ ಬೇಕಾದಷ್ಟು ವಚನಗಳು ಸಿಗುತ್ತವೆ. ಭಗವದ್ಗೀತೆಗೆ ಸ್ವತಂತ್ರರೀತಿಯಿಂದ ವೀರಶೈವಪರ ಒಂದು ಗ್ರಂಥವನ್ನೇ ಬರೆಯಲಿಕ್ಕೆ ಶಕ್ಯವಿದೆ. ಆದರೆ ಇಲ್ಲಿ ಮುಖ್ಯವಾಗಿ ಗೀತೆಯ ವಿಷಯಗಳನ್ನು ಶರಣರು ಎಷ್ಟು ಹೃದಯಂಗಮವಾಗಿ ಮನಕರಗುವಂತೆ ಪ್ರತಿಪಾದಿ ಸಿರುತ್ತಾರೆ.

ಶರಣರ ತತ್ವಗಳು ಎಷ್ಟು ಮನೋಹರವಾಗಿವೆಯೆಂಬುವದನ್ನು ತೋರಿಸುವದೇ ಈ ಪ್ರಕರಣದ ಉದ್ದೇಶವಾಗಿರುತ್ತದೆ. ಕೆಲವರು ಶರಣರ ವಚನಗಳ ಮಹತ್ವವನ್ನು ಅರಿತಿರುವದಿಲ್ಲ. ಅಂಥವರು ಓದಿ ಕೃತಾರ್ಥರಾಗಲೆಂದೇ ಭಗವದ್ಗೀತೆಗೆ ಹೋಲಿಸಿ ಬರೆಯಬೇಕಾಯಿತು.

# ಐದನೆಯ ಪ್ರಕರಣ

## ಶ್ರೀ ಬಸವಣ್ಣನವರೂ ಶಿವಾಗಮುಗಳೂ

ಶಿವಾಗಮುಗಳೂ ಶರಣರ ವಚನಗಳೂ ವೀರಶೈವರಿಗೆ ಪವಿತ್ರಗಳಾದ ಧಾರ್ಮಿಕ ಗ್ರಂಥಗಳಾಗಿರುತ್ತವೆ. ಇಲ್ಲಿ ಬಸವಣ್ಣನವರ ತತ್ವಗಳಿಗೂ ಶಿವಾಗಮುಗಳ ತತ್ವಗಳಿಗೂ ಹೋಲಿಕೆಯನ್ನು ತೋರಿಸುತ್ತೇವೆ. ಶಿವಾಗಮುಗಳು ವೇದಗಳಂತೆ ಪವಿತ್ರವಾದವುಗಳೆಂದು ನಂಬುತ್ತಾರೆ. ಆಗಮುಗಳೆಂದರೇನು? ಅವುಗಳ ಕಾಲ ಯಾವದು? ಅವುಗಳಿಗೂ ವೀರಶೈವ ಮತಕ್ಕೂ ಇರುವ ಸಂಬಂಧವೇನು? ಆಗಮುಗಳೆಷ್ಟು? ಅವುಗಳಲ್ಲಿರತಕ್ಕ ಪರಸ್ಪರ ಭೇದಗಳೇನು? ಮೊದಲಾದ ವಿಷಯುಗಳ ವಿವೇಚನೆಮಾಡಿ ಮೊದಲು ನೋಡುವದು ಮಹತ್ವದ ಕಾರ್ಯವಾಗಿರುತ್ತದೆ. ವೇದಗಳು ಅಪೌರುಷೇಯವಾದವುಗಳೆಂದು ಕೆಲವರು ಹೇಳುವಂತೆ ಆಗಮುಗಳೂ ಅಪೌರುಷೇಯವಾದವುಗಳೆಂತಲೂ ಶಿವನ ವಚನಗಳೆಂತಲೂ ಹೇಳಲಾಗುತ್ತದೆ. ಈ ಎರಡರ ವಿಷಯದಲ್ಲಿಯೂ ಹಿಂದೂಸ್ಥಾನದ ಪಂಡಿತರುಗಳಲ್ಲಿ ಇಲ್ಲಿಯವರೆಗೆ ಏಕಾಭಿಪ್ರಾಯವಾಗಿರುವದಿಲ್ಲ. ಆಗಮುಗಳು ಪ್ರಾಚೀನ ಕಾಲದವುಗಳಾಗಿರುತ್ತವೆ. ಆದರೆ ಅವುಗಳ ಕಾಲನಿರ್ಣಯವನ್ನು ಇಲ್ಲಿಯವರೆಗೆ ಯಾವ ಪಂಡಿತರೂ ನಿಶ್ಚಯವಾಗಿ ಇಂತಹ ಕಾಲವೆಂದು ಹೇಳಿರದಿದ್ದರೂ ಅನೇಕ ತತ್ವಶಾಸ್ತ್ರವೇತ್ತರುಗಳು ೨೦೦೦ ವರ್ಷಕ್ಕಿಂತಲೂ ಮೊದಲಿನವುಗಳೆಂದು ಹೇಳಿರುತ್ತಾರೆ. ಇದಕ್ಕೆ ವಿರೋಧವಾಗಿ ಕೆಲವರು ಆಗಮುಗಳ ಭಾಷಾಸರಣಿಯನ್ನು ನೋಡಿ ಆಗಮುಗಳು ಪ್ರಾಚೀನ ಕಾಲದವುಗಳಲ್ಲ, ಅರ್ವಾಚೀನವೆಂದು ವಾದಿಸುತ್ತಾರೆ. ಕೇವಲ ಭಾಷೆಯೊಂದರಿಂದಲೇ ಹಾಗೆ ಹೇಳಲು ಬರುವದಿಲ್ಲ. ಒಬ್ಬೊಬ್ಬ ಪಂಡಿತರೇ ಸಂಸ್ಕೃತ ಭಾಷೆಯಲ್ಲಿ ಬೇರೆಬೇರೆ ಪ್ರಸಂಗಗಳಲ್ಲಿ ಬೇರೆಬೇರೆ ತರಹದ ಭಾಷೆಗಳನ್ನುಪಯೋಗಿಸಿದ್ದುದು ಕಂಡುಬಂದಿರುತ್ತದೆ. ವ್ಯಾಸಮಹರ್ಷಿಗಳು ತಮ್ಮ ಹದಿನೆಂಟು ಪುರಾಣಗಳಲ್ಲಿ ಉಪಯೋಗಿಸಿದ ಭಾಷೆಗೂ, ಬ್ರಹ್ಮಸೂತ್ರಗಳನ್ನು ರಚಿಸಿದಾಗ ಉಪಯೋಗಿಸಿದ ಭಾಷೆಗೂ ಮಹದಂತರವಿರುತ್ತದೆ. ಬ್ರಹ್ಮಸೂತ್ರಗಳು ಉಕ್ಕಿನ ಕಡಲೆಯಷ್ಟು ಕಠಿಣವಾಗಿಯೂ, ಪುರಾಣಗಳು ಅರಳಹಿಟ್ಟಿನಂತೆ ಮೃದುಭಾಷೆಯುಳ್ಳವುಗಳೂ ಆಗಿರುತ್ತವೆ. ನಿಗಮಾಗಮುಗಳು ಎಂಬ ಉಕ್ತಿಯು ರೂಢಿಯಲ್ಲಿರುವದರಿಂದ ವೇದಗಳ ತರುವಾಯ ಆಗಮುಗಳ ಹೆಸರೇ ಉಲ್ಲೇಖವಾಗಿರುತ್ತದೆ. ಆಗಮುಗಳಲ್ಲಿ ಜೈನ, ಬೌದ್ಧ, ಚಾರ್ವಾಕ ಮತಗಳ ಉಲ್ಲೇಖವಿರುವದರಿಂದ ಬೌದ್ಧಮತದ ತರುವಾಯ ಆಗಮುಗಳ ಉತ್ಪತ್ತಿಯಾಗಿರಲಿಕ್ಕೇಬೇಕೆಂದು ಊಹಿಸುವದು ತಪ್ಪಾಗಲಾರದು. ಆಗಮುವೆಂದರೇನು? ಆಗಮುವೆಂದರೆ ಶಾಸ್ತ್ರ ಮತ್ತು ಬಂದದ್ದು ಆಜ. ಉಪಸರ್ಗಪೂರ್ವಕ ಗಮುಧಾತುವಿನಿಂದ ಸಿದ್ಧವಾಗಿರುತ್ತದೆ. ಆಗಮುಗಳಿಗೆ ತಂತ್ರಗಳೆಂಬುವ ಹೆಸರೂ ಉಂಟು. ತಂತ್ರ ಶಬ್ದದ ವ್ಯಾಖ್ಯಾನವನ್ನು—

> "ತನೋತಿ ವಿಪುಲಾನರ್ಥಾನ್ ಮಂತ್ರತಂತ್ರಪ್ರಕಾಶಕಾನ್ ।
> ತ್ರಾಣನಂ ಕುರುತೇ ಪುಂಸಾಂ ತಂತ್ರಮಿತ್ಯಭಿಧೀಯತೇ ॥

ಇದು ಸುಪ್ರಭೇದಾಗಮುದಲ್ಲಿ ಹೇಳಿರುತ್ತದೆ. ಅಂದರೆ ಮಂತ್ರತಂತ್ರಗಳ ವಿಪುಲಗಳಾದ ಅರ್ಥಗಳನ್ನು ಪ್ರಕಾಶಪಡಿಸಿ, ನಿರ್ದೋಷಗಳಾದ ಅರ್ಥಗಳನ್ನು ಸ್ಪಷ್ಟಪಡಿಸಿ,

ಮಾನವರುಗಳನ್ನು ರಕ್ಷಿಸತಕ್ಕವುಗಳಾಗಿರುವದರಿಂದ ಇವುಗಳಿಗೆ ತಂತ್ರಗಳೆಂದು ಹೆಸರು.

ಆಗತಂ ಶಿವವಕ್ತ್ರೇಭ್ಯೋ ಗತಂ ಚ ಗಿರಿಜಾಶ್ರುತೌ ।
ಮತಂ ಚ ವಾಸುದೇವಸ್ಯ ತಸ್ಮಾದಾಗಮ ಉಚ್ಯತೇ ॥

ಶಿವನ ಮುಖಗಳಿಂದ ಬಂದವುಗಳೂ, ಪಾರ್ವತಿಯ ಶ್ರವಣಗಳನ್ನು ಹೊಂದಿದವುಗಳೂ, ಇದರಲ್ಲಿ ವಾಸುದೇವನ ಮತವೂ ಕೂಡ ಇರುವದರಿಂದ ಇವುಗಳಿಗೆ ಆಗಮಗಳೆಂದು ಹೆಸರು. ಮತ್ತು ಇವುಗಳ ಅರ್ಥದ ಬಗ್ಗೆ—

"ಆಗಮಾರ್ಥಾನುಸಂಧಾನಾತ್ ರಾಗದ್ವೇಷ ವಿಭಂಜನಾತ್ ಧ್ಯಾನಜ್ಞಾನ ದ್ವಯಾನ್ನಿತ್ಯಂ ಆರಾಧ್ಯ ಇತಿ ಕಥ್ಯತೇ"

ಆಗಮಗಳ ಅರ್ಥವನ್ನು ಅನುಸಂಧಾನಮಾಡುವದರಿಂದ ಜ್ಞಾನ ಮತ್ತು ಧ್ಯಾನಗಳಿಂದ ಅವನು ಪೂಜ್ಯನಾಗುತ್ತಾನೆ. ಶ್ರೀಯುತ ಸಿದ್ಧರಾಮಪ್ಪ ಪಾವಟೆ, ಬಿ.ಎ., ಎಲ್‌ಎಲ್.ಬಿ., ಇವರು ಶಿವಾಗಮಂಗಳ ಅರ್ಥವನ್ನು "ವೀರಶೈವ ತತ್ವ ಪ್ರಕಾಶಿಕಾ" ಎಂಬುವ ಗ್ರಂಥದ ಪುಟ ೨೮ ರಲ್ಲಿ—

ಶಿವಾಗಮಂಗಳು ತಮ್ಮ ಧ್ಯೇಯ ಪದಾರ್ಥವನ್ನು ಶಿವನೆಂದು ಕರೆದುವು. ಮತ್ತು ಆ ಧ್ಯೇಯ ವಸ್ತುವನ್ನು ಗೋಚರಿಸಲು ಬೇಕಾದ ವಿಶಿಷ್ಟವಾದ ನಡತೆಯನ್ನು ಶಿವಧರ್ಮವೆಂದು ಕರೆದುವು. ಆಗಮವೆಂದರೇನು? ಒಂದೊಂದು ಶಬ್ದದ ಎಲ್ಲ ತಿರುಳನ್ನರಿಯಲು ಆ ಶಬ್ದದ ವ್ಯಾಕರಣಾನುಸಾರವಾದ ವ್ಯುತ್ಪತ್ತಿಯಾವದು? ಆ ಶಬ್ದ ಪ್ರಯೋಗವನ್ನು ಅದನ್ನಾವ ಅರ್ಥದಲ್ಲಿ ಬಳಸಿದರು? ಎಂಬುವದನ್ನು ತಿಳಿಯಬೇಕಾಗಿದೆ. ಆಗಮ ಶಬ್ದದಲ್ಲಿ 'ಆ' ಎಂಬುವ ಉಪಸರ್ಗವೂ 'ಗಮ' ಎಂಬುವ ಧಾತುವೂ ಆ ಧಾತುವಿಗೆ 'ಅ' ಎಂಬುವ ಪ್ರತ್ಯಯು ಸೇರಿ ಆಗಿರುತ್ತದೆ. ಅಂದರೆ 'ಆ' ಎಂಬುವ ಉಪಸರ್ಗವು ವ್ಯಾಪ್ತಿಯಲ್ಲಿಯೂ, ಸೂಕ್ಷ್ಮ ಎಂಬುವ ಅರ್ಥದಲ್ಲಿಯೂ, ಮರ್ಯಾದೆಯಲ್ಲಿಯೂ ವರ್ತಿಸುತ್ತದೆ. ಆದುದರಿಂದ ಶಿವಾಗಮವೆಂದರೆ ಪೃಥ್ವಿ ಮೊದಲುಗೊಂಡು ಶಿವತತ್ವದವರೆಗೆ ಎಲ್ಲವನ್ನೂ ವ್ಯಾಪಿಸಿ ತಿಳಿಸುವ ಶಾಸ್ತ್ರವೆಂದರ್ಥ. ಈ ಶಿವಾಗಮಗಳ ಕರ್ತೃವಾರು? ಅವು ಎಂದಿನಿಂದ ಬಳಕೆಯಾದವು? ಎಂಬುವ ವಿಚಾರವೂ ಇಲ್ಲಿ ತಲೆಯೆತ್ತುವುದು. ಶಿವಜ್ಞಾನ ಚಿಂತಕರು ಈ ಶಿವಾಗಮಗಳು ಶಿವನಿಂದಲೇ ಸೃಷ್ಟಿ ಕಾರ್ಯದಲ್ಲಿ ಇವುಗಳ ಪ್ರವೃತ್ತಿಯೆಂದು ಹೇಳುವರು.

ಆಗಮಶಬ್ದಕ್ಕೆ ಅನೇಕ ಅರ್ಥಗಳಾಗುತ್ತವೆ. ಆಗಮವೆಂದರೆ ಶಾಸ್ತ್ರ ಮತ್ತು ಬಂದನ್ನು ಗತ್ಯರ್ಥಕಧಾತುಗಳು ಗಮನಾರ್ಥಕವಾಗುವದರಿಂದಲೂ, ಆಜ ಎಂಬುವ ಉಪಸರ್ಗವಿರುವದರಿಂದಲೂ, ಆಗಮವೆಂದರೆ ಜ್ಞಾನಬೋಧಕ ಅಥವಾ ತತ್ವ ಪ್ರತಿಪಾದಕ ಶಾಸ್ತ್ರವೆಂದೂ ಅರ್ಥವಾಗುತ್ತದೆ. ಆಗಮವೆಂದರೆ ಶಿವಶಕ್ತಿಗಳನ್ನು ಪೂಜಿಸುವ ತಂತ್ರ—ಹೀಗೆ ಅನೇಕ ಅರ್ಥಗಳಾಗುತ್ತವೆ. ಒಟ್ಟಿನ ಮೇಲೆ ಆಗಮಗಳೆಂದರೆ ತತ್ವ ಪ್ರತಿಪಾದಕಗಳಾದ ಗ್ರಂಥರಾಶಿಯೆಂದು ಹೇಳಬಹುದು. ಅಥವಾ ಬ್ರಹ್ಮ ಎಂಬುವ ಪುಷ್ಪದಿಂದ ಮಕರಂದವನ್ನು ತೆಗೆದುಕೊಂಡು ಪ್ರಣವದ್ವಾರದಿಂದ ಸಾಧಕರಿಗೆ ಕೊಡಲ್ಪಡೋಣವಾಗುತ್ತದೆಯೋ ಆದಕ್ಕೆ ಆಗಮಶಾಸ್ತ್ರವೆನ್ನುತ್ತಾರೆ. ವಾಚಸ್ಪತಿಯ ಮತದಲ್ಲಿ—ಭೋಗ ಮೋಕ್ಷಗಳೆರಡನ್ನೂ ಕೊಡುವ ಶಾಸ್ತ್ರಕ್ಕೆ ಆಗಮವೆಂದು ಹೆಸರು.

ಅಂದರೆ ಮೋಕ್ಷಸುಖ ವ್ಯವಹಾರಸುಖಗಳೆರಡೂ ಆಗಮಗಳಿಂದ ದೊರೆಯುತ್ತವೆಂದು ವಾಚಸ್ಪತಿಯ ಅಭಿಪ್ರಾಯವಾಗಿರುವದು.

ವಚನಶಾಸ್ತ್ರಸಾರ—ಪುಟ ೨೮೮—ಆಗಮ ಸಂಸ್ಕೃತ ಶಬ್ದದ ಅರ್ಥವು ಬರು ಎಂದಾಗುತ್ತದೆ. ಇಲ್ಲಿ ಆಗಮ ಗ್ರಂಥಗಳೆಂದರೆ ಪರಂಪರೆಯಿಂದ ಬಂದ ಶಾಸ್ತ್ರಗಳೆಂದು ಅರ್ಥವಾಗುತ್ತದೆ. 'ಗಮ' ಧಾತುವು ಗತ್ಯರ್ಥಕವಿರುವದರಿಂದ ಅದು ಸಂಸ್ಕೃತ ವ್ಯಾಕರಣದ ನಿಯಮದ ಪ್ರಕಾರ ಜ್ಞಾನ ಎಂಬುವ ಅರ್ಥವನ್ನು ಕೊಡುತ್ತದೆ. 'ಆ' ಎಂಬುವ ಉಪಸರ್ಗವು ಹತ್ತಿದರೆ ಪೂರ್ಣಜ್ಞಾನವೆಂಬರ್ಥವು. "ಆಪ್ತೋಕ್ತಿರಾಗಮಸ್ಸೋಽಪಿ" ಆಪ್ತನ ಉಕ್ತಿಯೇ ಆಗಮವೆಂದು ಪೌಷ್ಕರ ಸಂಹಿತೆಯು ಹೇಳುತ್ತದೆ. ಇಲ್ಲಿ ಆಪ್ತ ಎಂದರೆ ಪರಶಿವ ಎಂದರ್ಥವಾಗುತ್ತದೆ. ಇದು ಮೃಗೇಂದ್ರಾಗಮದ ಪ್ರಸ್ತಾವನೆಯಲ್ಲಿಯೂ ಇರುತ್ತದೆ. ಈ ಆಗಮಗಳಲ್ಲಿ ಅನೇಕ ಭೇದಗಳುಂಟು. ಕೆಲವು ವೈದಿಕ; ಕೆಲವು ಅವೈದಿಕ. ವಾಮಾಚಾರಗಳನ್ನು ಹೇಳುವ ಆಗಮಗಳಿಗೆ ಅವೈದಿಕವೆಂದು ಹೆಸರು. ಇವುಗಳಲ್ಲಿ ವೈಷ್ಣವಾಗಮಗಳೂ, ಶೈವಾಗಮಗಳೂ ಇರುತ್ತವೆ.

### ಕೂರ್ಮಪುರಾಣ—೧೫ ನೆಯ ಅಧ್ಯಾಯ

ಕಾಪಾಲ, ವಾಕುಲ, ವಾಮ, ಭೈರವ, ಪೂರ್ವ, ಪಶ್ಚಿಮ, ಪಾಂಚರಾತ್ರ, ಪಾಶುಪತ, ಇತ್ಯಾದಿ ಆಗಮಗಳು ಅವೈದಿಕವೆಂದು ಹೇಳಲ್ಪಟ್ಟಿವೆ. ಅರ್ಥಾತ್ ಕ್ರೂರಗಳಾದ ನಡವಳಿಕೆಗಳನ್ನು ಹೇಳುವ ಆಗಮಗಳನ್ನು ಆ ವರ್ಗದಲ್ಲಿ ಸೇರಿಸಿದ್ದಾರೆ.

### ವಾಯುವೀಯ ಸಂಹಿತೆ—೨೮ ನೆಯ ಅಧ್ಯಾಯ

ಶೈವಾಗಮೋಽಪಿ ದ್ವಿವಿಧಃ ಶ್ರೌತೋಽಶ್ರೌತಶ್ಚ ಸಂಸ್ಕೃತಃ ।
ಶ್ರುತಿಸಾರಮಯಃ ಶ್ರೌತಃ ಸ್ವತಂತ್ರಸ್ತ್ವಿತರೋಮತಃ ॥

ಶೈವಾಗಮಗಳಲ್ಲಿ ೨೮ ಮುಖ್ಯವಾಗಿರುತ್ತವೆ.

### ಶಿವತತ್ವ ರತ್ನಾಕರ—ಸುಪ್ರಭೇದಾಗಮತಂತ್ರಾವತಾರ, ಪಟಲ ೩–೬

ಕಾಮಿಕಂ ಯೋಗಜಂ ಕಾರಣಂ ಅಜಿತಂ ತಥಾ ।
ದೀಪ್ತಂ ಸೂಕ್ಷ್ಮಂ ಸಹಸ್ರಂ ಚ ಅಂಶುಮಾನ್ಸು ಸುಪ್ರಭೇದಕಂ ।
ವಿಜಯಂಚ್ಚೈವನಿಶ್ವಾಸಂ ಸ್ವಯಂಭೂಮತಾನಲಂ ಲಲಿತಂ ತಥಾ ।
ಸಿದ್ಧಂ ಸಂತಾನ ಸರ್ವೋಕ್ತಂ ಪಾರಮೇಶ್ವರಮೇವ ಚ ।
ಕಿರಣಂ ವಾತುಲಂಚ್ಚೈವ ಅಷ್ಟಾವಿಂಶತಿ ಸಂಹಿತಾಃ ॥

ಆಗಮಗಳ ಸಂಖ್ಯೆಯು ಅಪರಿಮಿತವಾಗಿರುತ್ತದೆ.

"ಸಪ್ತಸಪ್ತಸಹಸ್ರಾಣಿ ಸಂಖ್ಯಾತಾನಿಮುನೀಷಿಭಿಃ" ಹದಿನಾಲ್ಕು ಸಾವಿರ ಆಗಮಗಳುಂಟೆಂದು ಪ್ರಮಾಣಗಳು ಸಿಗುತ್ತವೆ. ಒಂದು ಕೋಟಿ ಸಂಖ್ಯೆಯುಳ್ಳ ಆಗಮಗಳೂ ಕೂಡ ಕೆಲವು ಇರುತ್ತದೆಂದು ತಿಳಿದುಬಂದಿದೆ. ಆದರೆ ಈ ಆಗಮಗಳೆಲ್ಲ ಅಚ್ಚಾಗಿರುವದಿಲ್ಲ. ಸಂಪೂರ್ಣ ಎಲ್ಲಿಯೂ ದೊರೆತಂತೆ ಕಾಣುವದಿಲ್ಲ. ದಕ್ಷಿಣ ದೇಶದಲ್ಲಿಯೇ ಇವುಗಳ ಪ್ರಚಾರವುಂಟು. ತಮಿಳು ಲಿಪಿಯಲ್ಲಿ ಕೆಲವು ಆಗಮಗಳು ಅಚ್ಚಾದದ್ದು ಕಂಡು ಬರುತ್ತದೆ. ಆದರೂ ಪೂರ್ತಿಯಾಗಿ ಯಾವ ಆಗಮವೂ ದೊರೆತು ಅಚ್ಚಾಗಿರುವದಿಲ್ಲ. ವೀರಶೈವ ಮತವನ್ನು ಬೋಧಿಸುವ ಆಗಮಗಳ ಸಂಖ್ಯೆಯಂತೂ ಅತ್ಯಲ್ಪ ಅಚ್ಚಾಗಿವೆ,

ಈ ಆಗಮಗಳಲ್ಲಿ ಪ್ರಾರಂಭಕ್ಕೆ ಸಪ್ತವಿಧಶೈವವನ್ನು ಬೋಧಿಸಿದ್ದು ಕೊನೆಗೆ ಕೊಂಚ ವೀರಶೈವ ಮತ ಪ್ರಬೋಧೆಯನ್ನು ಮಾಡುತ್ತವೆ. ವೇದಗಳ ತರುವಾಯ ಹಿಂದೂ ಸಂಸ್ಕೃತಿಯನ್ನು ಪರಿಪೂರ್ಣವಾಗಿ ಹೇಳತಕ್ಕ ಈ ಗ್ರಂಥಗಳ ವಿಷಯಕ್ಕೆ ಇಷ್ಟರವುಟ್ಟಿಗೆ ಅನಾಸ್ಥಾ ಬುದ್ಧಿಯು ಹುಟ್ಟಿರುವದು ಬಹಳ ಶೋಚನೀಯವಾದ ವಿಷಯವಾಗಿರುತ್ತದೆ.

ಶೈವಾಗಮಗಳಲ್ಲಿರತಕ್ಕ ಎಷ್ಟೋ ಶ್ಲೋಕಗಳು ಭಗವದ್ಗೀತೆಯಲ್ಲಿ ಸಿಗುತ್ತವೆ. ಆದ್ದರಿಂದಲೇ ಪಾವಟೆ ಸಿದ್ಧರಾಮಪ್ಪನವರು ಭಗವದ್ಗೀತೆಗೆ ಶೈವಾಗಮಗಳೇ ಮೂಲ ಕಾರಣವೆಂದು ಒಂದು ಗ್ರಂಥವನ್ನು ಬರೆದಿರುತ್ತಾರೆ. ಈ ಆಗಮಗಳ ಬಗ್ಗೆ ಶ್ರೀಕಂಠ ಶಿವಾಚಾರ್ಯರು ತಮ್ಮ ಶ್ರೀಕಂಠಭಾಷ್ಯದಲ್ಲಿ ಚೆನ್ನಾಗಿ ಪ್ರತಿಪಾದಿಸಿರುತ್ತಾರೆ.

**ಶ್ರೀಕಂಠಭಾಷ್ಯ—ಪುಟ ೧೯೯, ಅಧ್ಯಾಯ ೨, ಪಟಲ ೨, ಸೂತ್ರ ೩೮**

ಶಕ್ತಿಃ ಪ್ರಥಮಸಂಭೂತಾ ಶಾಂತ್ಯತೀತ ಪದೋತ್ತರಾ ।
ತತೋ ಮಾಯಾ ತತೋಽವ್ಯಕ್ತಂ ಶಿವಾಚ್ಛಕ್ತಿಮತಃ ಪ್ರಭೋಃ ।
ಶಾಂತ್ಯತೀತ ಪದಂ ಜಜ್ಞೇ ತತಃ ಶಾಂತಿಪದಂ ಕ್ರಮಾತ್ ॥

ಇತ್ಯಾದಿನಾಮಾಯಾದಿ ಪ್ರಪಂಚೇ ಶಕ್ತಿಮತಃ ಶಿವಶ್ಚೈವ ಉಪಾದಾನತ್ವಂ ಅವಗಮ್ಯತೇ ವಾಯುಸಂಹಿತಾಯಾಂ ಪುನಃ—

ಶಕ್ತ್ಯಾದಿ ಪೃಥಿವ್ಯಂತಂ ಶಿವತತ್ವ ಸಮುದ್ಭವಂ ।
ತೇನೈಕೇನತು ತದ್ವ್ಯಾಪ್ತಂ ಮೃದಾ ಕುಂಭಾದಿಕಂ ಯಥಾ ॥

ಇತ್ಯಾದಿನಾ ತತ್ರೈವ ಇತ್ಯಾದ್ಯಾಗಮಪ್ರಮಾಣಾತ್ ಎಂದು ಆಗಮದ ಪ್ರಮಾಣವನ್ನು ಅಂಗೀಕರಿಸಿ ಮುಂದೆ—

**೨೫೫**

"ವಯಂ ತು ವೇದಶಿವಾಗಮಯೋರ್ಭೇದಂ ನ ಪಶ್ಯಾಮಃ ವೇದೇಪಿ ಶಿವಾಗಮ ಇತಿ ವ್ಯವಹಾರೋಯುಕ್ತಃ ತಸ್ಯ ತತ್ ಕರ್ತೃತ್ವಾತ್"— ಮತ್ತು "ಪಂಚಬ್ರಹ್ಮ ಪ್ರಣವಪಂಚಾಕ್ಷರೀ ಪ್ರಾಸಾದಾದಿ ಮಂತ್ರಾಣಾಂ ಪಶುಪತಿಪಾಶಾದಿ ವಸ್ತುವ್ಯವಹಾರಾಣಾಂ, ಭಸ್ಮೋದ್ಧೂಲನ ತ್ರಿಪುಂಡ್ರ ಧಾರಣ ಲಿಂಗಾರ್ಚನ ರುದ್ರಾಕ್ಷಧಾರಣಾದಿ ಪರಧರ್ಮಾಣಾಂ ಅನ್ಯೇಷಾಂ ಚ ಸರ್ವೇಷಾಂ ವ್ಯವಹಾರಾಣಾಂ ಉಭಯತ್ರಾಪಿ ಸಮಮೇವ ದರ್ಶನಾತ್ ಉಭಾವಪಿ ಪ್ರಮಾಣಭೂತೌ ವೇದಾಗಮೌ"

ಹೀಗೆ ಆಗಮ ಪ್ರಮಾಣವನ್ನು ಸ್ವೀಕರಿಸಿ ನಾವು ವೇದ ಶಿವಾಗಮಗಳಲ್ಲಿ ಭೇದವನ್ನು ಕಾಣುವದಿಲ್ಲ. ವೇದದಲ್ಲಿಯೂ ಶಿವಾಗಮಗಳಂತೆ ವ್ಯವಹಾರವು ಯುಕ್ತವಾಗಿರುವದು. ಒಬ್ಬನೇ ಕರ್ತನಾಗಿರುತ್ತಾನೆ. ಪಂಚಬ್ರಹ್ಮ ಪ್ರಣಮಪಂಚಾಕ್ಷರೀ ಮಂತ್ರಗಳ ಮತ್ತು ಪಶು, ಪತಿ, ಪಾಶಾದಿ ವಸ್ತುವ್ಯವಹಾರಗಳ ಭಸ್ಮೋದ್ಧೂಳನ, ತ್ರಿಪುಂಡ್ರಧಾರಣ, ಲಿಂಗಾರ್ಚನ, ರುದ್ರಾಕ್ಷಧಾರಣಾದಿ ಅನ್ಯಧರ್ಮಗಳ ಉಳಿದವರ ಎಲ್ಲಾ ವ್ಯವಹಾರ ಗಳನ್ನು ಎರಡೂ ಕಡೆಗೆ ಸಮಾನವಾಗಿಯೇ ಕಾಣಬಹುದು. ಈ ವೇದಾಗಮಗಳೆರಡೂ ಪ್ರಮಾಣಭೂತಗಳಾದ ಗ್ರಂಥಗಳಾಗಿರುತ್ತವೆ.

ಹೀಗೆ ಶ್ರೀಕಂಠಶಿವಾಚಾರ್ಯರು ತಮ್ಮ ಭಾಷ್ಯೆಯಲ್ಲಿ ಶಿವಾಗಮಗಳನ್ನು ಮುಕ್ತ ಕಂಠದಿಂದ ಹೊಗಳಿರುತ್ತಾರೆ. ಆಗಮ ಪ್ರಾಮಾಣ್ಯವನ್ನಂಗೀಕರಿಸಿರುತ್ತಾರೆ. ಪ್ರಕಾಂಡ ಪಂಡಿತರೂ, ಪರಮಶೈವರೂ, ನೂರಾರು ಶೈವಗ್ರಂಥಗಳನ್ನು ಬರೆದವರೂ ಆದ ಶ್ರೀ ಅಪ್ಪಯ್ಯದೀಕ್ಷಿತರು ತಮ್ಮ "ಶಿವಾರ್ಕಮಣಿದೀಪಿಕೆ" ಎಂಬುವ ಟೀಕೆಯಲ್ಲಿ ಆಗಮ ಪ್ರಾಮಾಣ್ಯವನ್ನು ಚನ್ನಾಗಿ ಅಂಗೀಕರಿಸಿರುತ್ತಾರೆ. ಈ ಶಿವಾಗಮಗಳೂ ಕೂಡ ಶಿವನ ಈಶಾನ್ಯ ಮುಖದಲ್ಲಿ ಹುಟ್ಟಿರುತ್ತವೆಂದು ಕೆಲವು ಕಡೆಗೆ ಪ್ರಮಾಣವು ಶಿಕ್ಕರೂ ಶಿವನ ಮುಖದಿಂದಲೇ ಇವುಗಳ ಉದ್ಭವವಾಯಿತೆಂದು ಅನೇಕ ಕಡೆಗೆ ಹೇಳಲಾಗಿದೆ. ಸೂತಸಂಹಿತೆಯಲ್ಲಿ—

"ಅಷ್ಟಾದಶ ಪುರಾಣಾನಾಂ ಕರ್ತಾ ಸತ್ಯವತೀ ಸುತಃ ಕಾಮಿಕಾದಿ ಪ್ರಭೇದಾನಾಂ ಯಥಾ ದೇವೋ ಮಹೇಶ್ವರಃ"

ವೇದವ್ಯಾಸನೇ ಕರ್ತನೆಂದು ಕಾಮಿಕಾದಿ ಆಗಮಗಳಿಗೆ ಹೇಗೆ ಶಿವನು ಕರ್ತನೋ ಹಾಗೆಯೇ ವ್ಯಾಸನೂ ಕೂಡ ೧೮ ಪುರಾಣಗಳಿಗೆ ಕರ್ತನೆಂದು ಹೇಳಲಾಗಿದೆ.

**ಶಿವರಹಸ್ಯ—ಪುಟ ೫೧೮**

ಶೈವಾಗಮೋದಿತೋ ಧರ್ಮೋ ವರಿಷ್ಠೋ ನೈವ ಸಂಶಯಃ ।
ಶೈವಾಗಮೋದಿತೋ ಧರ್ಮೋ ದ್ವಿಧಾಪೂರ್ವಮುದೀರಿತಃ ।
ಅಧಃಶ್ರೋತೋದ್ಭವಸ್ತ್ವೇಕಃ ಊರ್ಧ್ವಶ್ರೋತೋದ್ಭವಃ ಪರಃ ।
ಅಧಃಶ್ರೋತೋದ್ಭವಾದ್ಧರ್ಮಾತ್ ಊರ್ಧ್ವಶ್ರೋತೋದ್ಭವೋ ಪರಃ ।
ಕಾಮಿಕಾದಿ ಪ್ರಭೇದೇನ ಸ ಭಿನ್ನೋಽನೇಕಧಾದಿಜಾಃ ॥

ಅಂದರೆ ಶೈವಾಗಮಗಳಲ್ಲಿ ಹೇಳಿದ ಧರ್ಮವು ಶ್ರೇಷ್ಠವಾದುದು. ಇದರಲ್ಲಿ ತಿಲಮಾತ್ರ ಸಂಶಯವಿಲ್ಲ. ಮತ್ತು ಶೈವಾಗಮಗಳಲ್ಲಿ ಹೇಳಿದ ಧರ್ಮವು ಎರಡು ಪ್ರಕಾರವಾಗಿರುವ ದೆಂದು ಈ ಮೊದಲೇ ಹೇಳಲಾಗಿದೆ. ಅಧಃಶ್ರೋತೋದ್ಭವವೆಂತಲೂ, ಊರ್ಧ್ವ ಶ್ರೋತೋದ್ಭವವೆಂತಲೂ ಎರಡು ಪ್ರಕಾರವಾಗಿರುವದು. ಅಧಃಶ್ರೋತೋದ್ಭವ ಕ್ಕಿಂತಲೂ ಊರ್ಧ್ವಶ್ರೋತೋದ್ಭವ ಧರ್ಮವೇ ಶ್ರೇಷ್ಠವಾದುದು. ಕಾಮಿಕಾದಿ ಭೇದ ದಿಂದ ಊರ್ಧ್ವಶ್ರೋತೋದ್ಭವವು ಅನೇಕ ಪ್ರಕಾರವಾಗಿರುವದು. ಆದ್ದರಿಂದಲೇ ಸೂತ ಸಂಹಿತೆಯ ಟೀಕೆಯನ್ನು ಬರೆಯುವ ಕಾಲಕ್ಕೆ ವಿದ್ಯಾರಣ್ಯರು—ಉಕ್ತಂ ಚ ಆಗಮಿಕೈಃ ಎಂದು ಅನ್ಯತ್ರ—

ಸದ್ಯೋಜಾತಮುಖಾಜ್ಜಾತಾಃ ಪಂಚಾದ್ಯಾಃ ಕಾಮಿಕಾದಯಃ ।
ವಾಮದೇವಮುಖಾಜ್ಜಾತಾಃ ದೀಪ್ತಾದ್ಯಾಃ ಪಂಚಸಂಹಿತಾಃ ।
ಅಘೋರವಕ್ತ್ರಾದುದ್ಭೂತಾಃ ಪಂಚಾಪ್ತಿ ವಿಜಯಾದಯಃ ।
ಪುಂವಕ್ತ್ರಾದಪಿ ಚೋದ್ಭೂತಾಃ ಪಂಚವೈ ರೌರವಾದಯಃ ।
ಈಶಾನವದನಾಜ್ಜಾತಾಃ ಪ್ರೋದ್ಗೀತಾದ್ಯಷ್ಟ ಸಂಹಿತಾಃ ॥

ಸದ್ಯೋಜಾತಮುಖದಿಂದ— ಕಾಮಿಕಾದಿ ಆಗಮಗಳು ಜನಿಸಿದವು. ವಾಮದೇವ ಮುಖದಿಂದ ದೀಪ್ತವೇ ಮೊದಲಾದ ಪಂಚಸಂಹಿತೆಗಳು ಹುಟ್ಟಿದವು. ಅಘೋರ ಮುಖದಿಂದ ವಿಜಯ ಮೊದಲಾದ ಐದರ ಉತ್ಪತ್ತಿಯಾಯಿತು. ರೌರವಾದಿಗಳು ತತ್ಪುರುಷಮುಖದಿಂದಲೂ ಈಶಾನ್ಯಮುಖದಿಂದ ಪ್ರೋದ್ಗೀತ ಮೊದಲಾದವುಗಳ ಉತ್ಪತ್ತಿಯಾಯಿತು.

ಅಧಃ ಶ್ರೋತೋದ್ಭವೋಽಪಿ ಧರ್ಮಃ ।
ಕಾಪಾಲಾದಿ ಮತಭೇದೇನ ಬಹುಧಾ ಭೇದಿತಃ ॥

ಅಧಃ ಶ್ರೋತೋದ್ಭವ ಧರ್ಮವಾದರೂ ಕಾಪಾಲಾದಿ ಮತಭೇದದಿಂದ ಅನೇಕ ಪ್ರಕಾರವಾಗಿರುತ್ತದೆ.

**ಶ್ರೀಕರಭಾಷ್ಯ–ಪುಟ ೯೪**

**ಕಾಮಿಕಾದಿ ಶಿವಾಗಮಾನಾಂ ವೇದವತ್ಪ್ರಮಾಣವತ್ವಾತ್ ತದುಭಯಪ್ರತಿಪಾದ್ಯತ್ವೇನ ಶೈವಮತಂ ವೈದಿಕಮೇವ—ತದುಕ್ತಂ—ಸಿದ್ಧಾಂತಾಗಮೇ**

ಸಾಂಖ್ಯಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ ।
ಏತಾನಿಮಾನಭೂತಾನಿ ನೋಪಹನ್ಯಾನಿ ಯುಕ್ತಿಭಿಃ ।
ವೇದಃ ಪ್ರಧಾನಂ ಸರ್ವೇಷಾಂ ಸಾಂಖ್ಯಾದೀನಾಂ ಮಹಾಮುನೇ ।
ವೇದಾನುಸರಣಾದೇಷಾಂ ಪ್ರಾಮಾಣ್ಯಮಿತಿ ನಿಶ್ಚಿತಂ ॥
ಪಾಂಚರಾತ್ರಸ್ಯ ಸಾಂಖ್ಯಸ್ಯ ಯೋಗಸ್ಯ ಚ ಮಹಾಮುನೇ ।
ವೇದೈಕ ದೇಶವರ್ತಿತ್ವಂ ಶೈವಂ ವೇದಮಯಂ ಮತಂ ।
ವೇದೈಕ ದೇಶವರ್ತಿಭ್ಯೋ ಸಾಂಖ್ಯಾದಿಭ್ಯೋ ಮಹಾಮುನೇ ।
ಸರ್ವವೇದಾನುಸಾರಿತ್ವಾತ್ ಶೈವತಂತ್ರಂ ವಿಶಿಷ್ಯತೇ ।
ಸರ್ವವೇದಾನುಸಾರಿತ್ವಾತ್ ಪ್ರಮಾಣಂ ವೇದವತ್ಸದಾ ॥

ಅಂದರೆ ಕಾಮಿಕಾದಿ ಶಿವಾಗಮಗಳು ವೇದದಂತೆ ಪ್ರಾಮಾಣಿಕ ಗ್ರಂಥಗಳಾಗಿರುವದರಿಂದಲೂ ಮತ್ತು ವೇದಾಗಮಪ್ರತಿಪಾದಕವಾದುದರಿಂದಲೂ ಶೈವಮತವು ವೈದಿಕವಾಗಿರುತ್ತದೆ. ಆದ್ದರಿಂದ ಸಿದ್ಧಾಂತಾಗಮದಲ್ಲಿ—ಸಾಂಖ್ಯ, ಯೋಗ, ಪಾಂಚರಾತ್ರ, ಪಾಶುಪತ ಪ್ರಮಾಣ ಭೂತಗಳಾದಂಥವುಗಳಾದುದರಿಂದ ಯುಕ್ತಿಗಳಿಂದ ಖಂಡಿಸಲು ಬರುವದಿಲ್ಲ. ಇವುಗಳಿಗೆಲ್ಲ ವೇದವೇ ಪ್ರಾಮಾಣಿಕ ಗ್ರಂಥವಾಗಿರುತ್ತದೆ. ವೇದಾನುಸರಣವನ್ನು ಇವುಗಳು ಮಾಡುವದರಿಂದ ವೇದಗಳಂತೆ ಪ್ರಾಮಾಣ್ಯವೆಂಬುದಾಗಿ ತಿಳಿಯಬೇಕಾಗುತ್ತದೆ. ಪಾಂಚರಾತ್ರ, ಸಾಂಖ್ಯ, ಯೋಗ ಇವುಗಳು ವೇದದ ಒಂದು ಭಾಗದಲ್ಲಿ ಹೇಳಿರುವದರಿಂದಲೂ, ಶೈವವಾದರೂ ವೇದಮಯವಾಗಿರುವದರಿಂದೂ ಇದು ಶ್ರೇಷ್ಠವೆನಿಸಿಕೊಳ್ಳುತ್ತದೆ. ಎಲ್ಲ ವೇದಗಳನ್ನು ಅನುಸರಿಸುವದರಿಂದ ವೇದಗಳಂತೆ ಸದಾ ಪ್ರಾಮಾಣ್ಯ ಗ್ರಂಥವಾಗಿರುತ್ತದೆ.

**ಅಪಿ ಚ—ಸೂತ ಸಂಹಿತಾಯಾಂ—**

ದ್ವಿಪದಾರ್ಥಂ ಚತುಷ್ಪಾದಂ ಮಹಾತಂತ್ರಂ ಜಗತ್ಪತಿಃ ।
ಪ್ರೋಕ್ತವಾನ್ಹಿಮವತ್ಪುತ್ರ್ಯೈಃ ಧರ್ಮಮೋಕ್ಷೈಕ ಸಾಧನಮ್ ॥

ಜಗತ್ಪತಿಯಾದ ಶಂಕರನು ಮಹಾತಂತ್ರವನ್ನು ಹಿಮವಂತನ ಮಗಳಾದ ಪಾರ್ವತಿಗೆ ಹೇಳಿದನು. ಈ ತಂತ್ರವು ಧರ್ಮ ಮತ್ತು ಮೋಕ್ಷಗಳಿಗೆ ಮುಖ್ಯ ಸಾಧನವಾಗಿರುವದು. (ಇತಿ ಶಿವಾಗಮಾನಾಂ ಧರ್ಮಬ್ರಹ್ಮ ಸಾಧನತ್ವಂ ನಿರ್ದಿಷ್ಟಂ) ಹೀಗೆ ಶಿವಾಗಮಗಳಿಗೆ ಧರ್ಮರೂಪಿ ಬ್ರಹ್ಮನ ಸಾಧನತ್ವವು ನಿರ್ದಿಷ್ಟಗೊಳಿಸಲಾಗಿದೆ.

ಅಪಿ ಚ ವೇದ ವೇದಾಂತವತ್ ಕೇಚನ ಶಿವಾಗಮಾಃ ।
ಪತಿ, ಪಾಶ ಪಶುರೂಪ ತತ್ವತ್ರಯ ಪ್ರತಿಪಾದಕಾಃ ।
ಕೇಚನ ಪಂಚಬ್ರಹ್ಮ ಪ್ರತಿಪಾದನಪರಾಃ ।

**ಕೇಚನ ಜ್ಯೋತಿಷ್ಟೋಮಾದ್ಯಾಗ ಕುಂಡಮಂಟಪ ವಿಧಾಯಕಾಃ ।**
**ಕೇಚನ ಶಿವಪೂಜಾ ಪ್ರತಿಪಾದಕಾಃ ।**
**ಕೇಚನ ಭಸ್ಮ ರುದ್ರಾಕ್ಷ ಶಿವಲಿಂಗಧಾರಣ ಪ್ರತಿಪಾದಕಾಃ ।**
**ಕೇಚನ ಆಲಯೋತ್ಸವಪ್ರತಿಷ್ಠಾ ಪ್ರತಿಪಾದಕಾಃ ॥**

ಅಂದರೆ ಕೆಲವು ಶಿವಾಗಮಗಳು ವೇದವೇದಾಂತಗಳಂತೆ ಪತಿ, ಪಾಶ, ಪಶುರೂಪ ತತ್ವತ್ರಯ ಪ್ರತಿಪಾದಕಗಳಾಗಿರುತ್ತವೆ. ಹಲವು ಪಂಚಬ್ರಹ್ಮ ಪ್ರತಿಪಾದಕಗಳಾಗಿವೆ. ಕೆಲವುಗಳು ಜ್ಯೋತಿಷ್ಟೋಮಾದಿ ಯಜ್ಞಗಳಿಗೆ ಅಂಗಭೂತಗಳಾದ ಕುಂಡಮಂಟಪ ವಿಧಾಯಕಗಳಾಗಿರುತ್ತವೆ. ಕೆಲವುಗಳು ಶಿವಪೂಜೆಯನ್ನು ಹೇಳುತ್ತವೆ. ಕೆಲವು ಭಸ್ಮ–ರುದ್ರಾಕ್ಷಿ ಲಿಂಗಧಾರಣಪರವಾದವುಗಳಿವೆ. ಕೆಲವು ಆಲಯ ಮತ್ತು ಉತ್ಸವಾದಿಗಳನ್ನು ಹೇಳುತ್ತವೆ.

ಏತಾವಂತೋ ವೈ ಪಶವಃ ತದ್ವಿಸಾದಶ್ಚತುಷ್ಪಾದ ಇತಿ ಏಷಾಂಮಿಶೋಪತಿಃ ।
ಪಶೂನಾಂ ಚತುಷ್ಪದಾಮುತ ದ್ವಿಪದಾಮಿತಿ ।
ತಸ್ಮಾದ್ರುದ್ರಃ ಪಶೂನಾಮಧಿಪತಿಃ ಜ್ಞಾತ್ವಾ ದೇವಂ ಸರ್ವಪಾಶಾಪಹಾನಿಃ ।
ಧ್ಯಾನನಿರ್ಮಥನಾಭ್ಯಾಸಾತ್ ಪಾಶಂ ದಹತಿ ಪಂಡಿತಃ ಇತ್ಯಾದಿ ವಾಕ್ಯಾನಾಂ ।
ಪ್ರಾತ್ಯಕ್ಷಿತ ವೇದವೇದಾಂತೇಷು ದರ್ಶನಾತ್ ಪತಿಪಾಶ ಪಶುಪದಾರ್ಥತ್ರಯಂ ।
ಪ್ರತಿಪಾದಕಾನಾಂ ಶೈವಾಗಮಾನಾಂ ವೈದಿಕತ್ವಂ ಘಂಟಾಘೋಷಃ ॥

**ಶ್ರೀಕರಭಾಷ್ಯ—ಪುಟ ೩೭**

**ಅಷ್ಟಾದಶಾನಾಂ ಏತಾಸಾಂ ವಿದ್ಯಾನಾಂ ಬ್ರಹ್ಮವರ್ತ್ಮನಾಂ**
**ಆದಿಕರ್ತಾ ಶಿವಸ್ಸಾಕ್ಷಾತ್ ಶೂಲಪಾಣಿರಿತಿ ಶ್ರುತಿಃ**

**ಸದ್ಯೋಜಾತೇನ ಋಗ್ವೇದಂ ವಾಮದೇವೇನ ಯಾಜುಷಂ ।**
**ಅಘೋರೇಣ ತಥಾ ಸಾಮ ಪುರುಷೇಣತ್ವಥರ್ವಣಂ ।**
**ಈಶಾನೇನ ಮುಖೇನೈವ ಕಾಮಿಕಾದ್ಯಾಗಮಸ್ತಥಾ ।**
**ಜನಯಾಮಾಸ ವಿಶ್ವೇಶಸ್ಸರ್ವಸಿದ್ಧಿಪ್ರದಾಯಕಃ ।**
**ವಿಮರ್ಶರೂಪಿಣೀ ಶಕ್ತಿಶ್ಶಿವಸ್ಯ ಪರಮಾತ್ಮನಃ ।**
**ನಿಗಮಾಗಮರೂಪಸ್ಯಾತ್ ಸರ್ವತತ್ವಪ್ರಕಾಶಿನೀ ।**
**ತಸ್ಮಾದ್ವೇದಾಗಮಾರ್ಥೇಷು ಯಃ ಕುರ್ಯಾದ್ಭೇದಭಾವನಂ ।**
**ಸ ಸಹಸ್ರಕುಲಂ ಘೋರೇನರಕೇ ಪತತಿ ಧ್ರುವಂ ।**
**ಇತಿ ಪರಮೇಶ್ವರಸ್ಯ ನಿಗಮಾದಿ ಸರ್ವವಿದ್ಯಾ ಕರ್ತೃತ್ವ ಪ್ರತಿಪಾದನಾತ್ ।**
**ಸೃಷ್ಟೇಃ ಪ್ರಾಕ್ ಸ್ವಾತ್ಮವಿಲೀನಭೂತ ಸ್ವಶಕ್ತ್ಯಾತ್ಮಕ ವೇದಾಗಮಾದೀನ್ನಿಶ್ವಸಿತ ।**
**ವದಯತ್ನೇನ ಪೂರ್ವಾನುಪೂರ್ವ ವರ್ಣರೂಪ ರಚನಯಾ ಬಹಿರಾವಿಷ್ಕರೋತಿ ।**
**ತಸ್ಮಾನ್ನಿಗಮಾದೀನಾಂ ಅಪೌರುಷೇಯತ್ವಂ ಈಶ್ವರಕಾರ್ಯತ್ವಂ ಚ ಯುಕ್ತಮೇವ ॥**

ಅಂದರೆ—ಹದಿನೆಂಟು ವಿದ್ಯೆಗಳಿಗೆ ಸಾಕ್ಷಾತ್ ಶೂಲಪಾಣಿಯು ಆದಿಕರ್ತನು. ಸದ್ಯೋಜಾತಮುಖದಿಂದ ಋಗ್ವೇದವೂ, ವಾಮದೇವಮುಖದಿಂದ ಯಜುರ್ವೇದವೂ, ಅಘೋರಮುಖದಿಂದ ಸಾಮವೇದವೂ, ತತ್ಪುರುಷಮುಖದಿಂದ ಅಥರ್ವಣವೇದವೂ, ಈಶಾನಮುಖದಿಂದ ಕಾಮಿಕಾದ್ಯಾಗಮಗಳೂ ಹುಟ್ಟಿದವು. ಶಿವನ ವಿಮರ್ಶರೂಪಿಣೀ ಶಕ್ತಿಯು ನಿಗಮಾಗಮರೂಪವಾಗಿ ಸರ್ವತತ್ವಗಳನ್ನು ಪ್ರಕಾಶಪಡಿಸತಕ್ಕದ್ದಾಗಿರುತ್ತದೆ. ಆದ್ದರಿಂದ ವೇದಾಗಮಾರ್ಥಗಳಲ್ಲಿ ಯಾವನು ಭೇದಭಾವನವನ್ನು ಮಾಡುತ್ತಾನೆಯೋ ಅವನು ಸಾವಿರ ವರ್ಷಗಳವರೆಗೆ ಘೋರವಾದ ನರಕದಲ್ಲಿ ಬೀಳುತ್ತಾನೆ. ಹೀಗೆ

ಪರಮೇಶ್ವರನಿಗೆ ನಿಗಮಾಗಮಾದಿ ಸರ್ವ ವಿದ್ಯೆಗಳ ಕರ್ತೃತ್ವವಿರುವದರಿಂದ—ಸೃಷ್ಟಿಗಿಂತ ಪೂರ್ವದಲ್ಲಿ ತನ್ನಲ್ಲಡಗಿದ ಮತ್ತು ತನ್ನ ಶಕ್ತ್ಯಾತ್ಮಕವಾದ ವೇದಾಗಮಾದಿಗಳನ್ನು ನಿಶ್ವಾಸದಂತೆ ಪ್ರಯತ್ನವಿಲ್ಲದಲೆ ಪೂರ್ವಾನುಪೂರ್ವ ವರ್ಣರೂಪ ರಚನೆಯಿಂದ ಹೊರಗೆ ಆವಿಷ್ಕಾರಮಾಡುತ್ತಾನೆ. ಆದ್ದರಿಂದ ನಿಗಮಾಗಮಾದಿಗಳಿಗೆ ಅಪೌರುಷೇಯತ್ವವೂ, ಈಶ್ವರಕಾರ್ಯತ್ವವೂ ಸಿದ್ಧಿಸುವದು.

**ಸಿದ್ಧಾಂತ ಶಿಖಾಮಣಿ**

**ವೇದಸಿದ್ಧಾಂತಯೋರೈಕ್ಯಂ ಏಕಾರ್ಥ ಪ್ರತಿಪಾದನಾತ್ ।**
**ಪ್ರಾಮಾಣ್ಯಂ ಸದೃಶಂ ಜ್ಞೇಯಂ ಪಂಡಿತೈರೇತಯೋಃ ಸದಾ ॥**

ವೇದಾಗಮಗಳು ಏಕಾರ್ಥ ಪ್ರತಿಪಾದಕಗಳಾಗಿರುವದರಿಂದ ಸಮಾನವಾಗಿ ಪ್ರಾಮಾಣ್ಯ ಉಳ್ಳವುಗಳೆಂದು ತಿಳಿಯಬೇಕು.

**ಕ್ರಿಯಾಸಾರ**

**ಶಿವನಿಶ್ವಾಸಶೃತಿಭ್ಯಸ್ತೇ ಶಿವಾಗಮಾಃ ।**
**ಅಧಿಕಾ ಶಿವವಕ್ತ್ರೇಭ್ಯೋ ಸಾಕ್ಷಾದೇವ ವಿನಿರ್ಗತಾಃ ।**
**ಪರಸ್ಪರಾ ವಿರುದ್ಧಾರ್ಥಾಃ ಶಿವೋಕ್ತಾ ನಿಗಮಾಗಮಾಃ ।**
**ಅಲ್ಪಬುದ್ಧಿಭಿರನ್ಯೋನ್ಯಂ ವಿರೋಧಃ ಪರಿಕಲ್ಪ್ಯತೇ ।**
**ನಿಗಮಾನಾಗಮಾನಾಂ ಪರಮಾಪ್ತೋಪದೇಶತಃ ।**
**ಪ್ರಾಮಾಣ್ಯಂ ಅವಿಶೇಷೇಣ ಜ್ಞಾತವ್ಯಂ ತತ್ವದರ್ಶಿಭಿಃ ॥**

ವೇದಗಳು ಶಿವನ ನಿಶ್ವಾಸಗಳು; ಸಾಕ್ಷಾತ್ ಶಿವನ ಮುಖದಿಂದ ಆಗಮಗಳು ಹುಟ್ಟಿರುವ ಕಾರಣ ಹೆಚ್ಚಿನ ಪ್ರಾಮಾಣ್ಯಗಳುಳ್ಳವುಗಳಾಗಿರುತ್ತವೆ. ವೇದಾಗಮಗಳು ಪರಸ್ಪರ ವಿರುದ್ಧಗಳಾಗದೆ ಇರುವ ಅರ್ಥವುಳ್ಳವುಗಳಾಗಿರುತ್ತವೆ. ನಿಗಮಾಗಮಗಳನ್ನು ಶ್ರೇಷ್ಠವಾದ ಆಪ್ತೋಪದೇಶದಿಂದ ಪ್ರಾಮಾಣ್ಯವುಳ್ಳವುಗಳೆಂದು ತತ್ವದರ್ಶಿಗಳು ತಿಳಿಯಬೇಕು. ಅನೇಕ ಗ್ರಂಥಗಳಲ್ಲಿ ನಿಗಮಾಗಮಗಳೆರಡೂ ಸಮಾನವಾದ ಪ್ರಮಾಣ್ಯ ಗ್ರಂಥಗಳಾಗಿರುತ್ತವೆ.

ಆಗಮಗಳಲ್ಲಿಯೇ ವೀರಶೈವ ಮತವು ಹೇಳಲ್ಪಟ್ಟಿರುವದೆಂದರೆ—ಶ್ರೀ ಬಸವಣ್ಣನವರು ಏಕೆ ಅವತಾರ ತಾಳಿ ವೀರಶೈವ ಮತವನ್ನುದ್ಧರಿಸಬೇಕಾಯಿತೆಂಬುವ ಪ್ರಶ್ನೆಯು ಹೊರಡುವದಿಲ್ಲ. ವೇದಗಳಲ್ಲಿಯೇ ಎಲ್ಲ ಧರ್ಮಗಳೂ ಅಡಕವಾಗಿದ್ದ ಕಾರಣ ಶ್ರೀ ಶಂಕರಾಚಾರ್ಯರೂ, ಶ್ರೀ ರಾಮಾನುಜಾಚಾರ್ಯರೂ, ಶ್ರೀ ಮಧ್ವಾಚಾರ್ಯರೂ ಬೇರೆ ಬೇರೆ ಮತಗಳನ್ನು ಪ್ರಚಾರಮಾಡಲು ಏಕೆ ಬೇಕಾಗಿದ್ದಿತು? ವೇದಾಗಮಗಳಲ್ಲಿ ಸಾಮಾನ್ಯ ತತ್ವಗಳಿದ್ದರೂ ಬೇರೆ ಬೇರೆ ತರಹದಿಂದ ಟೀಕಾತ್ಮಕ ಗ್ರಂಥಗಳನ್ನು ಬರೆದು ತಮ್ಮ ತಮ್ಮ ಬುದ್ಧಿಗೆ ಹೊಳೆದಂತೆ ಆಚಾರ ವಿಚಾರಗಳ ನಿರೂಪಣೆಮಾಡಿ ತಮ್ಮ ತಮ್ಮ ಮತಗಳನ್ನು ಸಿದ್ಧಾಂತಪಡಿಸಿದರು. ಆಗಮಧರ್ಮವೆಲ್ಲ ನಶಿಸಿಹೋಗಿತ್ತು. ಶಿವಭಕ್ತಿಯು ಅಳಿದುಹೋಗಿತ್ತು. ಕಾರಣ ಪುರುಷರು ಬರಲೇಬೇಕಾಗಿದ್ದಿತು. ಆದ್ದರಿಂದ ಬಸವಣ್ಣನವರು ಆಗಮೋಕ್ತಿಗಳಿಗೆ ವಿರುದ್ಧವಾಗದೆ, ತಮ್ಮ ಧರ್ಮೋದ್ಧಾರದ ಕಾರ್ಯವನ್ನು ಹೊಸ ಪದ್ಧತಿಯಿಂದ ಪ್ರಾರಂಭಿಸಿದರು. ತಮ್ಮದೇ ಆದ ರೀತಿಯಿಂದ ಅವರ ಕಾರ್ಯ ಪ್ರಾರಂಭವಾಯಿತು. ಬಸವಣ್ಣನವರ ಧರ್ಮವು ಆಗಮೋಕ್ತಧರ್ಮವೇ

ಆಗಿರುವದಲ್ಲದೆ ಅದರಲ್ಲಿ ಕಾಲಕ್ಕೆ ತಕ್ಕಂತೆ ಕೆಲವು ವಿಷಯಗಳಲ್ಲಿ ಮಾತ್ರ ಕೊಂಚ ಭಿನ್ನವಾಗಿರುವದು ಕಂಡುಬರುತ್ತದೆ. ವೇದಾಗಮಗಳಿಗೂ ಬಸವಣ್ಣನವರ ಧರ್ಮಕ್ಕೂ ಸಂಬಂಧವೇ ಇಲ್ಲವೆಂದು ಕೆಲವರ ವಾದ. ಆದರೆ ಇದು ಸರಿಯಾದುದಾಗಿರುವದಿಲ್ಲ. ಷಟ್‌ಸ್ಥಲ, ಪಂಚಾಚಾರ, ಅಷ್ಟಾವರಣಗಳೆಲ್ಲ ಆಗಮದಲ್ಲಿ ಹೇಳಿದವುಗಳೇ ಇರುತ್ತವೆ. ಒಂದೆರಡು ಕಡೆಯಲ್ಲಿ ಬಸವಣ್ಣನವರು ಆಗಮಗಳನ್ನು ತಮ್ಮ ವಚನದಲ್ಲಿ ಹಳಿದದ್ದು ಕಂಡುಬರುತ್ತದೆ.

ಮತ್ತು ಆಗಮಗಳು ಅನೇಕ ಪ್ರಕಾರ ಇರುತ್ತವೆ. ಕೆಲವು ಅವೈದಿಕಗಳೆಂದು ಹೇಳಿಸಿಕೊಳ್ಳುತ್ತವೆ. ಮತ್ತೆ ಕೆಲವು ಆಗಮಗಳಲ್ಲಿ ಕ್ರೂರಕರ್ಮಗಳ ವರ್ಣನೆಯು ಬಂದಿರುತ್ತದೆ. ಕ್ಷುದ್ರದೇವತೆಗಳನ್ನು ಪೂಜಿಸುವದೂ, ಕುಕರ್ಮಗಳನ್ನು ಮಾಡುವದೂ, ಮದ್ಯಮಾಂಸಾದಿಗಳನ್ನು ಸೇವಿಸುವುದೂ ಹೇಳಲಾಗಿರುತ್ತದೆ. ಇಂಥವುಗಳನ್ನು ಖಂಡಿಸಿರುವದು ಸ್ವಾಭಾವಿಕವಾದುದಾಗಿದೆ. ಆಗಮಗಳಲ್ಲಿ ಅನೇಕ ಧರ್ಮಗಳ ವಿಷಯ ಬಂದಿರುವದರಿಂದ ಶುದ್ಧ ವೀರಶೈವ ಧರ್ಮತತ್ವಗಳ ತಳಹದಿಯಮೇಲೆ ಅವರು ವಚನಗಳನ್ನು ರಚಿಸಿದರು.

ಆಗಮಗಳಲ್ಲಿ ಹೋಮ ಹವನಾದಿಗಳ ವಿಷಯ ಅಲ್ಲಲ್ಲಿ ಬರುತ್ತವೆ. ಬಸವಾದಿ ಪ್ರಮಥರು ತಮ್ಮ ವಚನಗಳಲ್ಲಾಗಲೀ, ನಡೆನುಡಿಗಳಲ್ಲಾಗಲೀ ಅವುಗಳಿಗೆ ಸ್ಥಾನವನ್ನು ಕೊಟ್ಟಿರುವದಿಲ್ಲ. ಲಿಂಗ ಹೋದರೆ ಪ್ರಾಣಹತ್ಯಮಾಡಿಕೊಳ್ಳಬೇಕೆಂದು ಕೆಲವು ಆಗಮಗಳಲ್ಲಿ ಹೇಳಿದೆ. ಬಸವಾದಿ ಶರಣರು ಅದನ್ನು ಅಲ್ಲಗಳೆದಿರುವರು. ಪ್ರಾಣಹತ್ಯ ಮಾಡಿಕೊಳ್ಳಕೂಡದೆಂದೇ ಪ್ರತಿಪಾದಿಸಿರುವರು. ವೀರಾಗಮ, ಸೂಕ್ಷ್ಮಾಗಮ, ಪಾರಮೇಶ್ವರಾಗಮ ಮೊದಲಾದವುಗಳಲ್ಲಿ ಷಡಧ್ವಶೋಧನಾಪೂರ್ವಕವಾಗಿ ಲಿಂಗ ಧಾರಣವು ಗುರುವಿನಿಂದ ಆದಮೇಲೆ ಅವನ ಪೂರ್ವ ಜಾತ್ಯಾದಿಗಳು ನಷ್ಟವಾಗಿ ಅವನು ಶ್ರೇಷ್ಠತೆಯನ್ನು ಹೊಂದುವನೆಂದು ಹೇಳಿದೆ. ಶ್ರೀ ಬಸವಣ್ಣನವರು ಪ್ರಚಾರಮಾಡಿದ ತತ್ವಗಳಲ್ಲಿ ಇದು ಬಹಳ ಪ್ರಾಮುಖ್ಯವಾಗಿರುತ್ತದೆ. ಆಗಮಧರ್ಮವು ನಶಿಸಿಹೋಗಿತ್ತು. ಈ ತತ್ವವು ಕೃತಿಯಲ್ಲಿ ಬರಲು ಬಸವಣ್ಣನವರ ಅತ್ಯದ್ಭುತವಾದ ಸಾಹಸವೇ ಕಾರಣವಾಗಿರುವದು. ವೀರಶೈವರ ರೀತಿನೀತಿಗಳು ಆಗಮಗಳಲ್ಲಿ ಬಹಳ ಚನ್ನಾಗಿ ವರ್ಣಿಸಲ್ಪಟ್ಟಿದೆ. ಆದರೆ ಅತ್ಯಲ್ಪವಾಗಿರುತ್ತದೆ.

### ಸೂಕ್ಷ್ಮತಂತ್ರ—ಪುಟ ೯೦

ಷಟ್ಸ್ಥಲ ಜ್ಞಾನಸಂಪನ್ನಃ ಷಡಂಗಾಂಗ ಸಮಾಧಿಮಾನ್ ।
ಆತ್ಮವತ್ಪರಿದ್ರಷ್ಟಾ ಚ ಸ ಯೋ ವಾಹಂ ನ ಸಂಶಯಃ ॥ ೯೪ ॥
ವೀರಶೈವ ಪರೋಯಸ್ತು ಯತ್ರ ತಿಷ್ಠತಿ ಪಾರ್ವತಿ ।
ತತ್ತೀರ್ಥಂ ತತ್ತಪಃ ಶಾಂತಿಸ್ತತ್ರ ತಿಷ್ಠಾಮಿ ಸರ್ವದಾ ॥ ೯೫ ॥
ತೀರ್ಥಯಾತ್ರಾದಿಕಂ ತೇಷಾಂ ನಾಸ್ತಿಚಾನ್ಯತ್ರ ಪಾರ್ವತಿ ।
ಕೈಲಾಸಾದಿ ಪದಾಕಾಂಕ್ಷಾಂ ತ್ಯಜೇಲ್ಲಿಂಗಾಂಗ ಯೋಗಭಾಕ್ ॥ ೯೬ ॥
ಯತ್ರಾನ್ಯದೇವತಾಪೂಜಾ ತತ್ಸ್ಥಾನಂ ಪರಿವರ್ಜಯೇತ್ ।
ಶಿವಭಕ್ತಿ ವಿಹೀನಂ ಚ ಜನಂ ನೈವ ಸಮಾಶ್ರಯೇತ್ ॥ ೯೭ ॥
ನ ತಿಥಿರ್ನ ಚ ನಕ್ಷತ್ರಂ ನ ಯೋಗ ಕರಣಾದಿಕಂ ।
ಸಾಮುದ್ರಿಕಂ ಚ ಭಕ್ತಾನಾಂ ನಾಸ್ತಿ ಲಿಂಗಾಂಗ ಸಂಗಿನಾಂ ॥ ೯೮ ॥

ಸರ್ವಂ ಶಿವಮಯಂ ಪಶ್ಯೇದನ್ಯಭಾವೋ ನ ವಿದ್ಯತೇ ।
ಲಿಂಗಾಂಗ ಸಂಬಂಧ ಪದಾರ್ಥ ಜ್ಞಾನಂ ಮೋಕ್ಷಸಾಧನಂ ॥ ೯೯ ॥

ಷಟ್‌ಸ್ಥಲ ಜ್ಞಾನಸಂಪನ್ನನೂ, ಷಡಂಗಾಂಗಗಳನ್ನು ತಿಳಿದವನೂ, ತನ್ನಂತೆ ಪರರನ್ನು ನೋಡತಕ್ಕವನೂ ಆದವನು ನನ್ನ ಸ್ವರೂಪನಾಗುವನು. ನಾನೇ ಅವನೆಂದು ತಿಳಿಯಬೇಕು. ಇದರಲ್ಲಿ ಯತ್ಕಿಂಚಿತ್ತೂ ಸಂಶಯವಿಲ್ಲ. ವೀರಶೈವ ಧರ್ಮಪರಾಯಣನಾದವನು ಎಲ್ಲಿ ವಾಸಮಾಡುತ್ತಾನೆಯೋ ಎಲೌ ಪಾರ್ವತಿಯೇ! ಅದೇ ತೀರ್ಥವೆಂದು ತಿಳಿಯಬೇಕು ಮತ್ತು ಅದೇ ತಪಸ್ಸು, ಅದೇ ಅವನಿಗೆ ಶಾಂತಿಯ ಸ್ಥಾನವು. ಲಿಂಗಾಂಗ ಸಾಮರಸ್ಯವನ್ನು ಹೊಂದಿದ ಮನುಷ್ಯನು ಕೈಲಾಸಾದಿ ಪದಗಳ ಆಕಾಂಕ್ಷೆಯನ್ನು ಮಾಡಕೂಡದು. ಎಲ್ಲಿ ಅನ್ಯದೇವತೆಗಳ ಪೂಜೆಯು ನಡೆಯುತ್ತದೆಯೋ ಅಲ್ಲಿ ಕ್ಷಣಕಾಲವಾದರೂ ಲಿಂಗಾಂಗಿಯು ವಾಸವನ್ನು ಮಾಡಕೂಡದು. ಶಿವಭಕ್ತಿವಿಹೀನರಾದ ಜನಗಳ ಸಂಗವನ್ನು ಮಾಡಕೂಡದು. ಹಾಗೆ ಮಾಡುವದು ಬಹು ದೂಷಿತ ಕಾರ್ಯವೆಂದು ಗಣಿಸಲ್ಪಟ್ಟಿರುತ್ತದೆ. ಯೋಗ, ತಿಥಿ, ನಕ್ಷತ್ರ, ಕರಣಾದಿಗಳು ಮತ್ತು ಸಾಮುದ್ರಿಕ ಶಾಸ್ತ್ರವು ಲಿಂಗಾಂಗಿಗಳಿಗಿರುವದಿಲ್ಲ. ಅವನು ಎಲ್ಲವನ್ನೂ ಶಿವಮಯವಾಗಿಯೇ ಕಾಣಬೇಕು. ಲಿಂಗಾಂಗ ಸಾಮರಸ್ಯವೇ ಅವನಿಗೆ ಮೋಕ್ಷವೆಂದು ತಿಳಿಯಬೇಕು. ಆದ್ದರಿಂದ ಯಾವಾಗಲೂ ಲಿಂಗಾರ್ಚನೆಯನ್ನು ಮಾಡತಕ್ಕದ್ದು. ಲಿಂಗಾರ್ಚನೆಯು ಎಲ್ಲ ಧರ್ಮಗಳಿಗಿಂತಲೂ ಶ್ರೇಷ್ಠವಾದ ಧರ್ಮವಾಗಿರುತ್ತದೆ. ಇಂದ್ರಿಯಗಳಲ್ಲಿ ಸಾಮರ್ಥ್ಯ ಇರುವವರೆಗೆ ಮುಪ್ಪಿನಲ್ಲಿಯೂ ಕೂಡ ಮನಸ್ಸಿನಿಂದ ಸ್ಮರಣೆಯನ್ನು ಮಾಡತಕ್ಕದ್ದು. ಲಿಂಗಾಂಗ ಸಾಮರಸ್ಯ ಜ್ಞಾನವು ಮೋಕ್ಷಕ್ಕೆ ಕಾರಣವಾಗಿರುತ್ತದೆ. ಸೂರ್ಯ ಚಂದ್ರರುಗಳು ಯಾವಾಗಲೂ ಜನಗಳ ಆಯುಷ್ಯವನ್ನು ನಾಶಮಾಡತಕ್ಕವರಾದುದರಿಂದ ಲಿಂಗಾರ್ಚನೆಯನ್ನು ನಿತ್ಯವೂ ಆಲಸ್ಯವಿಲ್ಲದೆ ಮಾಡತಕ್ಕವನಾಗು. ಉತ್ತರಕ್ಷಣದಲ್ಲಿ ಮಾನವನು ಬದುಕುತ್ತಾನೆಯೋ ಇಲ್ಲವೊ ಹೇಳಲಿಕ್ಕೆ ಬರುವದಿಲ್ಲ ಲಿಂಗಪೂಜೆಯು ಎಲ್ಲಾ ಧರ್ಮಗಳಿಗಿಂತ ಉತ್ತಮವಾದುದು.

೨೫೬

ಬಸವಣ್ಣನವರು—

"ಹೊತ್ತಾರೆಯೆದ್ದು ಅಗ್ಘವಣಿ ಪತ್ರೆಯ ತಂದು ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ ಹೊತ್ತು ಹೋದಬಳಿಕ ನಿನ್ನನಾರು ಬಲ್ಲರು? ಹೊತ್ತು ಹೋಗದ ಮುನ್ನ ಮೃತ್ಯುವೊಯ್ಯದ ಮುನ್ನ ತೊತ್ತುಗೆಲಸವ ಮಾಡು ಕೂಡಲಸಂಗಮದೇವನ"

**ಪಾರಮೇಶ್ವರಾಗಮ**

ವೀರಶೈವಮತಂ ಪ್ರಾಪ್ಯ ಯೋ ಬುದ್ಧ್ಯಾ ವಿಷಯಾತುರಃ ।
ಶ್ವಾನಯೋನಿ ಶತಂ ಗತ್ವಾ ಚಂಡಾಲೋ ಭುವಿ ಜಾಯತೇ ॥
ವೀರಶೈವಮತಂ ಪ್ರಾಪ್ಯ ಯಃ ಕುರ್ಯಾತ್ಪ್ರಾಣಿಹಿಂಸನಂ ।
ಕರ್ಮಣಾ ಮನಸಾ ವಾಚಾ ಸ ವಸೇದ್ರೌರವೇ ಚಿರಂ ॥
ವೀರಶೈವಮತಂ ಪ್ರಾಪ್ಯ ಯಃ ಕುರ್ಯಾತ್ಪರಪೀಡನಂ ।
ಭೋಗಾರ್ಥಂ ಸಂಗ್ರಹಂ ಮದ್ಯಂ ಮಾಂಸಂ ಸ್ತ್ರೀಂ ಚ ಖಲಂ ಜನಂ ॥

ಸ್ವರ್ಣಸ್ತೇಯಾಂ ದಿವಾ ನಿದ್ರಾಂ ಸರ್ವದೈಕಾನ್ನ ಭೋಜನಮ್ ।
ಪ್ರಾಕೃತೈಃ ಸಹಸಂಗಂ ಚ ಸಂಗತ್ಯಾಗಂ ಚ ಲಿಂಗಿನಾಂ ।
ಸ ಕೋಟಜನ್ಮಸು ಶ್ವಾನಃ ಚಂಡಾಲೋ ಭುವಿ ಜಾಯತೇ ॥

ಅಂದರೆ–ವೀರಶೈವ ಮತವನ್ನು ಹೊಂದಿ ಯಾವಾತನು ವಿಷಯಾತುರನಾಗುತ್ತಾನೆಯೋ ನೂರು ಜನ್ಮದಲ್ಲಿ ಶ್ವಾನನಾಗಿ ಆಮೇಲೆ ಚಂಡಾಲನಾಗುತ್ತಾನೆ. ವೀರಶೈವ ಮತವನ್ನು ಹೊಂದಿ ಯಾವಾತನು ಪ್ರಾಣಿಗಳ ಹಿಂಸೆಯನ್ನು ಮಾಡುತ್ತಾನೆಯೋ ಅವನು ಕಾರ್ಯ ದಿಂದಲೂ, ಮನಸ್ಸಿನಿಂದಲೂ, ಶರೀರದಿಂದಲೂ ಸೂರ್ಯ ಚಂದ್ರಾದಿಗಳಿರುವವರೆಗೆ ನರಕವನ್ನು ಹೊಂದುತ್ತಾನೆ. ವೀರಶೈವ ಮತವನ್ನು ಹೊಂದಿ ಯಾವಾತನು ಪರಪೀಡೆಯನ್ನು ಮಾಡುತ್ತಾನೆಯೋ ಮತ್ತು ಭೋಗದ ಸಲುವಾಗಿ ಮದ್ಯ, ಮಾಂಸ, ಸ್ತ್ರೀ, ದುಷ್ಟ ಜನಗಳ ಸಂಗ್ರಹ, ಸ್ವರ್ಣಸ್ತೇಯಾ, ದಿವಾನಿದ್ರಾ, ಏಕಾನ್ನಭೋಜನ, ಪ್ರಾಕೃತ ಜನಗಳ ಸಹವಾಸ, ಲಿಂಗಿಗಳ ಸಂಗತ್ಯಾಗ ಮಾಡುವನೋ ಅವನು ಅನೇಕ ಸಂವತ್ಸರಗಳವರೆಗೆ ಚಂಡಾಲನಾಗಿ ಭೂಮಿಯಲ್ಲಿ ಜನ್ಮವನ್ನು ತಾಳುವನು. ಮತ್ತು ಯಾವಾತನು ಷಟ್‌ಸ್ಥಲ ಜ್ಞಾನಸಂಪನ್ನನಾಗಿರುತ್ತಾನೆಯೋ ಅವನು ಶಿವನಿಗೆ ಸಮಾನ ನಾದವನು. ಅಂದರೆ ಶಿವನು ತಾನೇ ಅಲ್ಲದೆ ಬೇರೆಯಲ್ಲ.

೨೫೭

ಈ ವಿಷಯದಲ್ಲಿ ಶ್ರೀ ಸಿದ್ಧೇಶ್ವರರು—

"ಪರಶಿವನ ಚಿಚ್ಛಕ್ತಿ ತಾನೆ ಎರಡು ತೆರನಾಯಿತ್ತು ಅಂಗಸ್ಥಲವ ನಾಶ್ರಯಿಸಿ ಶಕ್ತಿ ಎನಿಸಿತ್ತು ಲಿಂಗಸ್ಥಲವನಾಶ್ರಯಿಸಿ ಭಕ್ತಿ ಎನಿಸಿತ್ತು ಶಕ್ತಿಯೇ ಪ್ರವೃತ್ತಿ ಎನಿಸಿತ್ತು ಭಕ್ತಿಯೇ ನಿವೃತ್ತಿ ಎನಿಸಿತ್ತು ಶಕ್ತಿ ಭಕ್ತಿ ಯೆಂದು ಎರಡು ಪ್ರಕಾರವಾಗಿತ್ತು ಮತ್ತು ಶಿವನ ಲಿಂಗ ಆರು ತೆರ ನಾಯಿತ್ತು ಅಂಗವಾರು ತೆರನಾಯಿತ್ತು ಶಕ್ತಿ ಆರು ತೆರನಾಯಿತ್ತು ಭಕ್ತಿ ಆರು ತೆರನಾಯಿತ್ತು ಅದು ಹೇಗಂದಡೆ ಮೊದಲಲ್ಲಿ ಲಿಂಗ ಮೂರು ತೆರ ನಾಯಿತ್ತು ಅದು ಹೇಗಂದಡೆ ಭಾವಲಿಂಗವೆಂದು ಪ್ರಾಣಲಿಂಗವೆಂದು ಇಷ್ಟಲಿಂಗವೆಂದು ಮೂರು ತೆರನಾಯಿತ್ತು ಆ ಭಾವಲಿಂಗ ಪ್ರಾಣಲಿಂಗ ಇಷ್ಟಲಿಂಗವೆಂಬ ಅಂಗತ್ರಯವು ಒಂದೊಂದು ಲಿಂಗ ಎರಡೆರಡಾಗಿ ಆರು ತೆರನಾಯಿತ್ತು ಅದು ಹೇಗಂದರೆ ಭಾವಲಿಂಗವು ಮಹಾಲಿಂಗ ಪ್ರಸಾದ ಲಿಂಗವೆಂದು ಎರಡು ತೆರನಾಯಿತ್ತು ಪ್ರಾಣಲಿಂಗವು ಜಂಗಮಲಿಂಗವೆಂದು ಶಿವಲಿಂಗವೆಂದು ಎರಡು ತೆರನಾಯಿತ್ತು ಇಷ್ಟಲಿಂಗವು ಗುರುಲಿಂಗ ಆಚಾರ ಲಿಂಗವೆಂದು ಎರಡು ತೆರನಾಯಿತ್ತು ಹೀಗೆ ಒಬ್ಬ ಶಿವನು ಆರು ತೆರನಾದನು. ಇನ್ನು ಒಂದಂಗ ಮೂರು ತೆರನಾಯಿತ್ತು ಅದು ಹೇಗಂದರೆ ಯೋಗಾಂಗ ಭೋಗಾಂಗ ತ್ಯಾಗಾಂಗವೆಂದು ಮೂರು ಪ್ರಕಾರವಾಯಿತ್ತು ಈ ತ್ರಿಯಂಗವೇ ಒಂದೊಂದು ಎರಡಾಗಿ ಆರು ತೆರನಾಯಿತ್ತು ಅದು ಹೇಗಂದರೆ ಯೋಗಾಂಗವೇ ಐಕ್ಯವೆಂದು ಶರಣನೆಂದು ಎರಡು ತೆರನಾಯಿತ್ತು ಭೋಗಾಂಗವೇ ಪ್ರಾಣಲಿಂಗಿ ಪ್ರಸಾದಿಯೆಂದು ಎರಡು ತೆರನಾಯಿತ್ತು ತ್ಯಾಗಾಂಗವೇ ಮಾಹೇಶ್ವರನೆಂದು ಭಕ್ತನೆಂದು ಎರಡು ತೆರನಾಯಿತ್ತು

ಹೀಗೆ ಒಬ್ಬ ಶರಣ ಆರು ತೆರನಾದನು. ಅಂಗವೆಂದಡೆ ಶರಣ ಶಿವಶರಣಂಗೆ ಆ ಲಿಂಗವು ಯಾವಾಗಲೂ ಪ್ರಾಣವು ಆ ಲಿಂಗಕ್ಕೆ ಆ ಶರಣನು ಯಾವಾಗಲೂ ಅಂಗವು ಈ ಶರಣ ಲಿಂಗವೆರಡಕ್ಕೂ ಬೀಜವೃಕ್ಷದ ನ್ಯಾಯದ ಹಾಗಲ್ಲದೆ ಭಿನ್ನವಿಲ್ಲ ಇದುಕಾರಣ ಅನಾದಿಯಿಂದಲೂ ಶರಣನೆಂದರೆ ಲಿಂಗ ಲಿಂಗವೆಂದರೆ ಶರಣ ಈ ಎರಡಕ್ಕೂ ಭೇದವಿಲ್ಲೆಂಬುದನ್ನು ಸ್ವಾನುಭವ ವಿವೇಕದಿಂದ ಅರಿದುದು ಅರುಹಲ್ಲದೆ ಆಗಮಯುಕ್ತಿಯಿಂದ ಅರಿದುದು ಅರುಹಲ್ಲ ಅದೇನು ಕಾರಣವೆಂದಡೆ ಇದು ಶಿವಾದ್ವೈತ ಮಾರ್ಗವಾದ ಕಾರಣ ಈ ಲಿಂಗಾಂಗ ಸಂಬಂಧ ಸಮರಸೈಕ್ಯವ ತಿಳಿದಬಳಿಕ ಬೊಮ್ಮ ಪರಬೊಮ್ಮವೆಂದು ಬೇರುಂಟೆ? ತಾನಲ್ಲದೆ ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ''

ಶಿವಭಕ್ತನಿದ್ದ ಸ್ಥಲದಲ್ಲಿ ವಾಸಿಸುತ್ತೇನೆಂದು ಆಗಮಗಳಲ್ಲಿ ಹೇಳಿದೆ—ಇಲ್ಲಿ ಬಸವಣ್ಣನವರ ಅಥವಾ ಶರಣರ ವಚನಗಳಿಗೂ ಆಗಮಗಳಿಗೂ ತುಲನೆಯನ್ನು ಮಾಡಿ ನೋಡುವ ಕಾರಣವೇ ಇರುವದಿಲ್ಲ. ಯಾಕೆಂದರೆ ಆಗಮಗಳಲ್ಲಿರತಕ್ಕ ವಿಷಯಗಳನ್ನೇ ಶರಣರು ವಚನಗಳನ್ನು ರಚಿಸಿ ಪ್ರಚಾರ ಮಾಡಿರುತ್ತಾರೆ. ಕೆಲವು ವಿಷಯಗಳಲ್ಲಿ ಭಿನ್ನಾಭಿಪ್ರಾಯವಿರುವದನ್ನು ಈ ಮೊದಲೇ ಬರೆದಿರುತ್ತೇನೆ. ಇನ್ನೂ ಕೆಲವು ಭಿನ್ನಾಭಿಪ್ರಾಯಗಳನ್ನು ಮುಂದೆ ತೋರಿಸಲಾಗುವದು. ಇಲ್ಲಿ ಬಸವಣ್ಣನವರ ಒಂದೆರಡು ವಚನಗಳನ್ನು ನೋಡೋಣ.

೨೫೮

''ಶಿವಭಕ್ತನಿದ್ದ ಠಾವೇ ದೇವಲೋಕ ಭಕ್ತನಂಗಣವೇ ವಾರಣಾಶಿ ಕಾಯಕವೇ ಕೈಲಾಸ ಇದು ಸತ್ಯ ಶಿವನಾಣೆ ಕೂಡಲಸಂಗಮದೇವಾ''

ಶಿವಭಕ್ತರಿಗೆ ತೀರ್ಥಯಾತ್ರಾದಿಗಳಿಲ್ಲವೆಂದು ಆಗಮಗಳಲ್ಲಿ ಹೇಳಿದ್ದನ್ನು ಮೇಲೆ ಕೊಟ್ಟಿರುತ್ತೇನೆ.

೨೫೯

ಬಸವಣ್ಣನವರು—

''ನೀರ ಕಂಡಲ್ಲಿ ಮುಳುಗುವರಯ್ಯಾ ಮರನ ಕಂಡಲ್ಲಿ ಸುತ್ತುವರಯ್ಯ ಬತ್ತುವ ಜಲವ ಒಣಗುವ ಮರನ ಮಚ್ಚಿದವರು ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವಾ''

೨೬೦

ಸಿದ್ಧರಾಮದೇವರು—

''ಒಬ್ಬರ ಮನವನೋಯಿಸಿ ಒಬ್ಬರ ಮನೆಯ ಘಾತವ ಮಾಡಿ ಗಂಗೆಯಲ್ಲಿ ಮುಳುಗಿದರೆ ಆಗುವದೇನಯ್ಯ? ಚಂದ್ರನು ಗಂಗೆಯ ತಡಿಯಲ್ಲಿದ್ದರೇನು? ಕಲಂಕ ಬಿಡದಾಯಿತಯ್ಯ? ಅದುಕಾರಣ ಮನವ ನೋಯಿಸದವನೇ ಘಾತವ ಮಾಡದವನೇ ಪರಮಪಾವನ ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನಯ್ಯ''

೨೬೧

"ಗಂಗೆಯಲ್ಲಿ ಮುಳುಗಿ ಬಂದವರೆಲ್ಲ ಪಾಪವಮಾಡಿಸತ್ತರೆ ಅವರಿಗೆ ಪುಣ್ಯದ ಪದವಿಯುಂಟಾದರೆ ಗಂಗೆ ಘನವೆಂಬೆನು. ಅಲ್ಲದೆ ಮುಳುಗಿ ಪಾಪವಮಾಡದೆ ಸತ್ತುಹೋದರೆ ಪುಣ್ಯದ ಪದವಿ ಅವರಿಗುಂಟಾದರೆ ಗಂಗೆ ಘನವೆಂಬೆನು. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ"

೨೬೨

ಸಿದ್ಧೇಶ್ವರರು—

"ಅವುಟು ಕೋಟಿ ತೀರ್ಥವ ಮಿಂದರಿಲ್ಲ ಕಾಣಿರಣ್ಣ ಲಕ್ಷಾಲಕ್ಷ ಕೋಟಿ ಜಪವನೆಣಿಸಿ ಧ್ಯಾನ, ಮೌನ, ಹೋಮ, ನೇಮ ಅನುಷ್ಠಾನವ ಮಾಡಿದರಿಲ್ಲ ಕಾಣಿರಣ್ಣ ನೂರಿಪ್ಪತ್ತುಸಾರೆ ಭೂಪ್ರದಕ್ಷಿಣೆಯ ಮಾಡಿದರಿಲ್ಲ ಕಾಣಿರಣ್ಣ ಕಾಶಿ, ಕೇದಾರ, ಶ್ರೀಶೈಲ ಶಿವಗಂಗೆಗೆ ಹೋದರಿಲ್ಲ ಕಾಣಿರಣ್ಣ ಇವು ಎಲ್ಲ ಬರಿಯ ಭ್ರಾಂತಿ ಕೇಳಿರಣ್ಣ ಇಪ್ಪ ಠಾವು ಹೇಳಿಹೆ ಕೇಳಿರಣ್ಣ ಶ್ರೀ ಗುರುಕರುಣದಿಂದ ಬಿಜಯಂಗೈಸಿಕೊಟ್ಟ ಪರಮಲಿಂಗ ತನ್ನ ಕರದಲ್ಲಿ ತುಂಬಿಪ್ಪುದಯ್ಯಾ ಹಲವು ಕಡೆಗೆ ಹೋಹ ಮನವ ಧ್ಯಾನವೆಂಬ ಹಸ್ತದಲ್ಲಿ ಹಿಡಿದು ಆ ಲಿಂಗದ ಗೊತ್ತಿನಲ್ಲಿ ಕಟ್ಟಿ ನೆರೆಯ ಬಲ್ಲರೆ ಅಲ್ಲಿಪ್ಪನು ಶಂಭು ಪರಮೇಶ್ವರು ಇದೇ ನಿಶ್ಚಯ ಉಳಿದುದೆಲ್ಲ ಹುಸಿ ಕಂಡೆಯಾ ಮಹಾ ಲಿಂಗಗುರು ಸಿದ್ಧೇಶ್ವರಪ್ರಭುವೇ"

೨೬೩

ದಾಸೀಮಾರ್ಯರು—

"ಜಂಬುದ್ವೀಪವತಿರುಗಿದಡೇನು? ಜಂಬುಕಶಂಭುಧ್ಯಾನದಲ್ಲಿ ಸೈವೆರ ಗಪ್ಪುದೆ? ಕುಂಭಿನಿಯ ತಿರುಗಿ ಕೋಟಿ ತೀರ್ಥವ ಮಿಂದಡೇನು? ಶಂಭು ನಿಮ್ಮಲ್ಲಿ ಸ್ವಯವಾಗದವನು ಕುಂಭಿನಿಯ ತಿರುಗಿದ ಡೊಂಬನಂತೆ ಕಾಣಾ ರಾಮನಾಥ"

೨೬೪

ಪ್ರಭುದೇವರು ಈ ಬಗ್ಗೆ ಒಂದು ಸುಂದರವಾದ ವಚನವನ್ನು ಹೇಳಿರುತ್ತಾರೆ—

"ಸುತ್ತಿ ಸುತ್ತಿ ಬಂದಡಿಲ್ಲ ಲಕ್ಷಗಂಗೆಯ ಮಿಂದಡಿಲ್ಲ ತುಟ್ಟತುದಿಯ ಮೇರುಗಿರಿಯ ಮೆಟ್ಟಿ ಕೂಗಿದಡಿಲ್ಲ ನಿತ್ಯನೇಮದಿಂದ ತನು ಮುಟ್ಟಿಕೊಂಡ ಡಿಲ್ಲ ನಿಚ್ಚಕ್ಕೆ ಮನವನಂದಂದಿಗೆ ಅತ್ತಿತ್ತ ಹರಿಯಲೀಯದೆ ಚಿತ್ತದಲ್ಲಿ ಧರಿಸಬಲ್ಲಡೆ ಬಚ್ಚಬರಿಯ ಬೆಳಗು ಗುಹೇಶ್ವರಲಿಂಗವು.

"ಅನ್ಯದೇವತೆಗಳನ್ನು ಪೂಜಿಸಬೇಡ"—

೨೬೫

"ಈಶ ನಿಮ್ಮ ಪೂಜಿಸಿದಮೇಲೆ ಅನ್ಯದೈವಂಗಳಿಗೆ ಹೇಸಿರಬೇಕು ಹೇಸಡೆ ಅನ್ಯದೈವಕ್ಕಾಶೆಮಾಡಿದರೆ ಅವ ನಮ್ಮ ಗುಹೇಶ್ವರಂಗೆ ಹೊರತು ದೋಷರಹಿತಭಕ್ತರು ಅವಂಗೆ ಕುಲವೆಂದು ಕೂಸಕೊಟ್ಟು ಕೂಡುಂಡರೆ ವಿಪಾಸಲ ಜೋನಸಾಯಿ ಮುಟ್ಟಿದಂತೆ ಕಾಣಾ ರಾಮನಾಥ"

೨೬೬

"ಕರಸ್ಥಲದಲ್ಲಿದ್ದ ಲಿಂಗವ ಬಿಟ್ಟು ಧರೆಯ ಮೇಲಣ ಪ್ರತಿಮೆಗೆ ಎರಗುವ ನಾಯಕ ನರಕಿಗಳನೇನೆಂಬೆನಯ್ಯ ಪರಮಗುರು ಶಾಂತಮಲ್ಲಿಕಾರ್ಜುನಾ"

೨೬೭

ಬಸವಣ್ಣನವರು—

"ಜಾಗ್ರತ್ಸ್ವಪ್ನ ಸುಷುಪ್ತಿಯಲ್ಲಿ ಮತ್ತೊಂದ ನೆನೆದೊಡೆ ತಲೆದಂಡ ತಲೆದಂಡ ಹುಸಿಯಾದರೆ ದೇವಾ ತಲೆದಂಡ ತಲೆದಂಡ ಕೂಡಲಸಂಗಮದೇವಾ ನೀವಲ್ಲದನ್ಯವ ನೆನೆದೊಡೆ ತಲೆದಂಡ ತಲೆದಂಡ"

೨೬೮

"ಭಕ್ತರ ಕಂಡರೆ ಬೋಳರಪ್ಪಿರಯ್ಯ ಶ್ರವಣರ ಕಂಡರೆ ಬತ್ತಲೆಯಪ್ಪಿರಯ್ಯ ಹಾರುವರ ಕಂಡರೆ ಹರಿನಾಮವೆಂಬಿರಯ್ಯ ಅವರವರ ಕಂಡರೆ ಅವರವರಂತೆ ಸೂಳೆಗೆ ಹುಟ್ಟಿದವರ ತೋರದಿರಯ್ಯ ಕೂಡಲಸಂಗಮದೇವರ ಪೂಜಿಸಿ ಅನ್ಯದೈವಂಗಳಿಗೆರಗಿ ಭಕ್ತರೆನಿಸಿಕೊಂಬ ಅಜ್ಞಾನಿಗಳ ನಾನೇನೆಂಬೆನಯ್ಯ"

೨೬೯

"ಶಿವಜನ್ಮದಲ್ಲಿ ಹುಟ್ಟಿ ಲಿಂಗೈಕ್ಯರಾಗಿ ತಮ್ಮಂಗದ ಮೇಲೆ ಲಿಂಗವಿರಲು ಅನ್ಯರನೆ ಹಾಡಿ ಅನ್ಯರನೆ ಹೊಗಳಿ ಅನ್ಯರ ವಚನವ ಕೊಂಡಾಡಲು ಕರ್ಮ ಬಿಡದು ಭವಬಂಧನ ಶ್ವಾನಯೋನಿಯಲ್ಲಿ ಬಪ್ಪುದು ತಪ್ಪದು ಇದು ಕಾರಣ ಕೂಡಲಸಂಗಮದೇವಾ ನಿಮ್ಮ ನಂಬಿಯೂ ನಂಬದ ಡಂಭಕರಿಗೆ ಮಳಲಗೋಡೆಯನಿಕ್ಕಿ ನೀರಲ್ಲಿ ತೊಳೆದಂತಾಯಿತ್ತು"

೨೭೦

"ಶಿವಭಕ್ತಿವಿಹೀನರ ಸಂಗವನ್ನು ಮಾಡಬೇಡ"—

"ದೂಷಕನವನೊಬ್ಬ ದೇಶವ ಕೊಟ್ಟರೆ ಆಶೆಮಾಡಿ ಅವನ ಹೊರೆಯಲಿರಬೇಡ ಮಾದರ ಶಿವಭಕ್ತನಾದರೆ ಆತನ ಹೊರೆಯಲ್ಲಿ ಭೃತ್ಯನಾಗಿರ್ಪುದು ಕರಲೇಸಯ್ಯ ತೊತ್ತಾಗಿರ್ಪುದು ಕರಲೇಸಯ್ಯ ಕಾಡಸೊಪ್ಪ ತಂದು ಓಡಿನಲ್ಲಿ ಹುರಿದಿಟ್ಟು ಕೂಡಿಕೊಂಡಿಪ್ಪುದು ನಮ್ಮ ಕೂಡಲಸಂಗನ ಶರಣರ"

೨೭೧

"ಬೇವಿನ ಬೀಜವ ಬಿತ್ತಿ ಬೆಲ್ಲದ ಕಟ್ಟೆಯ ಕಟ್ಟಿ, ಆಕಳ ಹಾಲನೆರೆದು ಜೇನುತುಪ್ಪವ ಹೊಯ್ದರೆ ಸಿಹಿಯಾಗಬಲ್ಲುದೆ? ಕಹಿಯಾಗಬಹುದಲ್ಲದೆ? ಶಿವಭಕ್ತರಲ್ಲದವರ ಕೂಡೆ ನುಡಿಯಲಾಗದು ಕೂಡಲಸಂಗಮದೇವಾ"

## ೨೭೨

"ನಕ್ಷತ್ರ, ಯೋಗ, ಕರಣ, ಸಾಮುದ್ರಿಕೆಗಳನ್ನು ನೋಡಬಾರದು."—

"ಶ್ರೀಮತು ಸಜ್ಜನಶುದ್ಧ ಶಿವಾಚಾರವಾಗಿ ಅಷ್ಟಾವರಣವೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿ ಬಸವೇಶ್ವರ ದೇವರ ಸಂಪ್ರದಾಯಕರೆಂದು ನುಡಿದು ನಡೆಯಬಲ್ಲಿರೆ? ಭಕ್ತರೆಂಬೆ ಪುರಾತನರೆಂಬೆ ಅಂತಪ್ಪ ಭಕ್ತಂಗೆ ಈ ಮೂಜಗವೆಲ್ಲ ಸರಿಯಲ್ಲವೆಂಬೆ ಆ ಭಕ್ತಗೆ ಇವನ ಗದ್ದುಗೆಯೇ ಕೈಲಾಸವಾಗಿಪ್ಪುದು ನೋಡಾ ಈ ಶಿವಾಚಾರದ ಪಥವನರಿಯದೆ ಇರುಳು ಹಗಲು ಅನಂತಸೂತಕ ಪಾತಕಂಗಳೊಳಗೆ ಮುಳುಗಾಡಿ ಮತಿಗೆಟ್ಟು ಪಂಚಾಂಗವ ಹೇಳುವವರ ಮಾತು ಅಂತಿರಲಿ ಪಂಚಾಂಗವ ಕೇಳಿದ ದಕ್ಷಬ್ರಹ್ಮನ ತಲೆ ಏಕೆ ಹೋಯಿತು? ಪಂಚಾಂಗವ ಕೇಳಿದ ಪಂಚಪಾಂಡವರು ದೇಶಭ್ರಷ್ಟರಾದರೇಕೆ? ಪಂಚಾಂಗವ ಕೇಳಿ ಇಂದ್ರನ ಶರೀರವೆಲ್ಲ ಯೋನಿಮಂಡಲವೇಕಾಯಿತು? ಪಂಚಾಂಗವ ಕೇಳಿದ ಸರಸ್ವತಿಯ ಮೂಗು ಹೋಯಿತೇಕೆ? ಪಂಚಾಂಗವ ಕೇಳಿದ ಕಾಮನು ಸುಟ್ಟು ಭಸ್ಮನಾದನೇಕೆ? ಪಂಚಾಂಗವಕೇಳಿದ ಬ್ರಹ್ಮ ವಿಷ್ಣು ಇಂದ್ರ ಮೊದಲಾದ ಮೂವತ್ತು ಮೂರುಕೋಟಿ ದೇವರ್ಕಳು ತಾರಕಾಸುರನಿಂದ ಬಾಧೆಹೊಂದಿ ಕಂಗೆಟ್ಟು ಪ್ರಭುವಿನ ಮೊರೆಹೊಕ್ಕರೇಕೆ? ಕುರುಡ, ಕುಂಟ, ಹಲ್ಲುಮುರಕ, ಗುರುತಲ್ಪಕನ ಬಲವನೇ ಕೇಳಲಾಗದು ಶುಭದಿನ ಶುಭಲಗ್ನ ಶುಭವೇಳೆ ಶುಭ ಮುಹೂರ್ತ ವ್ಯತೀಪಾತ ದಗ್ಧವಾರವೆಂದು ಸಂಕಲ್ಪಿಸಿ ಹೇಳುವವರ ಮಾತು ಕೇಳಲಾಗದು. ಗುರುವಿನಾಜ್ಞೆಯ ಮೀರಿ ಸತ್ತರೆ ಹೊಲೆ ಹಡೆದರೆ ಹೊಲೆ ಮುಟ್ಟಾದರೆ ಹೊಲೆ ಎಂದು ಸಂಕಲ್ಪಿಸಿಕೊಂಡು ನಿಮ್ಮ ಮನೆ ಹೊಲೆಯಾದರೆ ನಿಮ್ಮ ಗುರುವು ಕೊಟ್ಟ ಇಷ್ಟಲಿಂಗವೇನಾಯಿತೋ? ವಿಭೂತಿಯೇನಾಯಿತೋ? ರುದ್ರಾಕ್ಷಿಯೇನಾಯಿತೋ? ಮಂತ್ರವೇನಾಯಿತೋ? ಪಾದೋದಕವೇನಾಯಿತೋ? ನಿಮ್ಮ ಶಿವಾಚಾರವೇನಾಯಿತೋ? ಮನೆಯೊಳಗಿನ ಬೋನ ಪದಾರ್ಥವೇನಾಯಿತೋ? ನೀವೇನಾದಿರೀ ಹೇಳಿರಣ್ಣ ಅರಿಯದಿದ್ದರೆ ಕೇಳಿರಣ್ಣ ನಿಮ್ಮ ಲಿಂಗವು ಪೀತಲಿಂಗವು ನೀವು ಭೂತಪ್ರಾಣಿಗಳು ನಿಮ್ಮ ಮನೆಯೊಳಗಿನ ಪದಾರ್ಥವೆಲ್ಲ ಹೆಂಡಭಾಂಡ ಅವು ಶುದ್ಧ ಕಿಲ್ಮಿಷವೆನಿಸಿತು. ಇನು ಕಂಡು ನಾಚವೆ ಮತ್ತೆ ಮತ್ತೆ ಶುಭ ಲಗ್ನವ ಕೇಳಿ ಮದುವೆಯಾದ ಅನಂತ ಜನರ ಹೆಂಡಿರು ಮುಂಡೆಯರಾದ ದೃಷ್ಟಾಂತವ ಕಂಡು ಪಂಚಾಂಗವ ಕೇಳಿದವರಿಗೆ ನಾಯಿ ಮಲವಹಂದಿ ಕಿತ್ತುಕೊಂಡು ತಿಂದಂತಾಯಿತ್ತು ಕಾಣಾ ನಿಸ್ಸಂಗ ನಿರಾಳ ಪ್ರಭುವೇ?"

## ೨೭೩

"ಸೋಮವಾರ ಮಂಗಳವಾರವೆಂದು ಮಾಡುವ ಭಕ್ತನ ಲಿಂಗ ಭಕ್ತಂಗೆಂತು ಸರಿಯೆಂಬೆನಯ್ಯ ದಿನ ಶ್ರೇಷ್ಠವೋ ಲಿಂಗ ಶ್ರೇಷ್ಠವೋ ದಿನ ಶ್ರೇಷ್ಠವೆಂದು ಮಾಡುವವರ ಮುಖವ ನೋಡಲಾಗದು ಆತ ದಿನವೇ ಘನ

ವೆಂದು ದಿನವೇ ದೈವವೆಂದು ಮಾಡುವನಾಗಿ ಆತ ದಿನದ ಭಕ್ತನು. ಲಿಂಗ ಭಕ್ತನು ಲಿಂಗವೇ ಘನವೆಂದು ಲಿಂಗವೇ ದೈವವೆಂದು ಮಾಡುವನಾಗಿ ಆತ ಲಿಂಗಭಕ್ತನು ಅಂತಹ ದಿನದ ಭಕ್ತಂಗೆಯೂ ಲಿಂಗಭಕ್ತಂಗೆಯೂ ಸಮವೆಂಪಡೆ ಪಂಚಮಹಾಪಾತಕ ತಪ್ಪದು ಅದೆಂತೆಂದೊಡೆ 'ಭೌಮೇ ಸೌಮೇ ವ್ಯತೀಪಾತೇ ಸಂಕ್ರಾಂತೇ ಶಿವರಾತ್ರೌ, ಏಕಭುಕ್ತ್ಯೋಪವಾಸೇನ ನರಕೇ ಕಾಲಮಕ್ಷಯಂ' ಇದುಕಾರಣ ದಿನ ವಾರಗಳು ಶ್ರೇಷ್ಠವೆಂದು ಏಕಭುಕ್ತ್ಯೋಪವಾಸಂಗಳಂ ಮಾಡುವ ಭಕ್ತಂಗೆ ಕುಂಭೀಪಾತಕ ನಾಯಕ ನರಕ ತಪ್ಪದು ಕೂಡಲಸಂಗಮದೇವಾ"

ಮಾರಿ ಮಸಣಿ ಶಕುನಾದಿಗಳನ್ನು ಆಗಮಗಳು ತಿರಸ್ಕರಿಸಿರುವಂತೆ

೨೭೪

ಬಸವಣ್ಣನವರು—

"ಮಾರಿ ಮಸಣಿ ಎಂಬುವು ಬೇರಿಲ್ಲ ಕಾಣಿರೋ ಮಾರಿ ಎಂಬುದೇನು? ಕಂಗಳು ತಪ್ಪಿ ನೋಡಿದರೆ ಮಾರಿ ನಾಲಿಗೆ ತಪ್ಪಿ ನುಡಿದರೆ ಮಾರಿ ನಮ್ಮ ಕೂಡಲಸಂಗಮದೇವರ ನೆನಹು ಮರೆದರೆ ಮಾರಿ"

೨೭೫

ಸಿದ್ಧೇಶ್ವರದೇವರು—

"ಮನಸ್ಸಿನ ಸಂಶಯ ಕನಸಿನ ಭೂತವಾಗಿ ಕಾಣುವದು ನೋಡಾ ಮನಸಿನ ಸಂಶಯವಳಿದರೆ ಕನಸಿನ ಕಾಟ ಬಿಟ್ಟೋಡಿತ್ತು ನೋಡಾ ಮಹಾ ಲಿಂಗ ಗುರುಸಿದ್ಧೇಶ್ವರಪ್ರಭುವೇ"

೨೭೬

ಬಸವಣ್ಣನವರು ಶಕುನದ ಬಗ್ಗೆ—

"ಹಾವಡಿಗನು ಮೂಕೊರತಿಯು ತನ್ನ ಕೈಯ್ಯಲ್ಲಿ ಹಾವು ಮಗನ ಮದುವೆಗೆ ಶಕುನವ ನೋಡ ಹೋಹಾಗ ಇದಿರಲೊಬ್ಬ ಮೂಕೊರತಿಯ ಹಾವಾಡಿಗನ ಕಂಡು ಶಕುನ ಹೊಲ್ಲೆಂಬ ಚದುರನ ನೋಡಾ, ತನ್ನ ಸತಿ ಮೂಕೊರತಿ ತನ್ನ ಕೈಯಲ್ಲಿ ಹಾವು ತನ್ನ ಭಿನ್ನವನರಿಯದೆ ಅನ್ಯರನೆಂಬ ಕುನ್ನಿಯನೇನೆಂಬೆ ಕೂಡಲಸಂಗಮದೇವಾ"

೨೭೭

ಎಲೇಶ್ವರದ ಕೇತಯ್ಯ—

"ಒಡೆಯರು ಭಕ್ತರು ತಾವೆಂದು ಅಡಿಮೆಟ್ಟಿ ಹೋಹಲ್ಲಿ ತಡೆಯಿತ್ತು ಶಕುನವೆಂದುಳಿದರೆ ಕಾಗೆ, ವಿಹಂಗ, ಮಾರ್ಜಾಲ, ಮರವಕ್ಕಿ, ಗಾರ್ದಭ, ಶೇಷಶಂಕೆಗಳು ಮೊದಲಾದ ಸಂಕಲ್ಪಕ್ಕೊಳಗಾದಲ್ಲಿ ವ್ರತಕ್ಕೆ ಭಂಗ ಆಚಾರಕ್ಕೆ ದೂರ ಅದೆಂತೆಂದೊಡೆ ಅಂಗಕ್ಕಾಚಾರವ ಸಂಬಂಧಿಸಿ ಮನಕ್ಕೆ ಅರಿವು ಅರಿವಿಂಗೆ ವ್ರತವ ಮಾಡಿದಲ್ಲಿ ಬೇರೊಂದು ಪರಿಹರಿಸುವ ನಿಮಿತ್ತ್ಯ ವುಂಟೆ? ಇಂತೀ ಸತ್ಕ್ರಿಯಾವಂತಂಗೆ ಕಷ್ಟಜೀವನದ ಲಕ್ಷಣದಲ್ಲಿ ಚಿತ್ತು ಬೇಹನ್ನಕ್ಕ ಆತನು ಆಚಾರಭ್ರಷ್ಟ ಎಲೇಶ್ವರಲಿಂಗಕ್ಕೆ ದೂರ"

ಅರ್ಥಾತ್ ಸರ್ವವೂ ಶಿವಮಯವೆಂದು ಆಗಮಗಳು ಹೇಳುವಂತೆ ಶ್ರೀ ಬಸವಣ್ಣನವರಾದರೂ "ಕೂಡಲಸಂಗಮನೇ ನಿತ್ಯ ಉಳಿದ ದೈವಗಳೆಲ್ಲ ಅನಿತ್ಯ"ವೆಂದು ಹೇಳಿರುತ್ತಾರೆ.

ಕೆಲವು ಕಡೆಗೆ ಬಸವಣ್ಣನವರು ಆಗಮಗಳನ್ನು ಜರಿದು ಮಾತನಾಡಿದ ವಾಕ್ಯಗಳು ಸಿಗುತ್ತವೆ.

೨೭೮

"ಆಗಮದ ಮೂಗ ಕೊಯ್ಯುವೆ ಆಗಮ ಹೊರತೊಗಲಿ ಅಗಲಿರ್ದಿ ತಯ್ಯ"

ಆದ್ದರಿಂದ ಕೆಲವರಿಗೆ ಬಸವಣ್ಣನವರು ಆಗಮಧರ್ಮವಿರೋಧಿಗಳೆಂದು ತಪ್ಪು ತಿಳಿದುಕೊಳ್ಳುವ ಸಂಭವವಿರುತ್ತದೆ. ನಿಜವಾದ ಸಂಗತಿಯು ಹಾಗಿರುವದಿಲ್ಲ.

೨೭೯

"ವೇದಕ್ಕೆ ಒರೆಯ ಕಟ್ಟುವೆ ಶಾಸ್ತ್ರಕ್ಕೆ ನಿಗಳವನಿಕ್ಕುವೆನು ತರ್ಕದ
ಬೆನ್ನಬಾರನೆತ್ತುವೆನು ಆಗಮದ ಮೂಗ ಕೊಯ್ವೆ ನೋಡಯ್ಯ ಮಹದಾನಿ
ಕೂಡಲಸಂಗಮದೇವ ಮಾದಾರ ಚನ್ನಯ್ಯನ ಮನೆ ಮಗ ನಾನಯ್ಯ"

ಕೆಳಗಿನ ಜನಗಳ ಉದ್ಧಾರವೂ ಬಸವಣ್ಣನವರ ಅವತಾರಕಾರ್ಯಗಳಲ್ಲಿ ಒಂದಾಗಿದ್ದಿತು. ಅಂತಹ ಕಾರ್ಯವು ಅವರಿಗೆ ಬಹಳ ಪ್ರಿಯಕರವಾಗಿದ್ದಿತು. ಆ ಕಾರ್ಯವನ್ನು ನಾನು ಮಾಡುತ್ತೇನೆ, ಅದಕ್ಕೆ ವೇದಾಗಮಗಳು ವಿರೋಧಿಸಿದರೂ ನಾನು ಲೆಕ್ಕಿಸೆನು. ಎನ್ನುವ ಸಂದರ್ಭದಲ್ಲಿ ಹೇಳಿದುದಾಗಿರುತ್ತದೆ.

ಆಗಮಗಳಲ್ಲಿ ಪರಸ್ಪರ ವಿರುದ್ಧಗಳಾದ ಅನೇಕ ಸಂಗತಿಗಳು ಸಿಗುತ್ತಲಿವೆ. ಆದ್ದರಿಂದ—

**ಸೂಕ್ಷ್ಮಾಗಮ—ಪುಟ ೫೨**

**ವಿವಿಧಾನಿ ಚ ಶಾಸ್ತ್ರಾಣಿ ಶ್ರುತಾನಿ ಬಹುಧಾ ಮಯಾ ।**
**ತಥಾಪಿ ಚಂಚಲಂ ಚಿತ್ತಂ ಬಹುಶ್ರವಣ ಕಾರಣಾತ್ ॥**
**ತಸ್ಮಾತ್ಸಂಗೃಹ್ಯ ಸಾರಾಂಶಂ ಮೋಕ್ಷಮಾರ್ಗೈಕಕಾರಣಂ ।**
**ಸಮ್ಯಕ್ತತ್ವಂ ವಿನಿಶ್ಚಿತ್ಯ ಕಾರುಣ್ಯಾದ್ವದ ಮೇ ಪ್ರಭೋ ॥**

ಪಾರ್ವತಿಯು—ಅನೇಕ ಪ್ರಕಾರಗಳಾದ ಶಾಸ್ತ್ರಗಳನ್ನು ಕೇಳಿದಕಾರಣ ಚಿತ್ತವು ಚಂಚಲವಾಗಿರುತ್ತದೆ. ಆದ್ದರಿಂದ ಎಲ್ಲವುಗಳ ಸಾರವನ್ನು ಸಂಗ್ರಹಿಸಿ ಹೇಳೆಂದು ಪರಮಾತ್ಮನನ್ನು ಕೇಳಲು—

**ಸತ್ಯಮೇತನ್ಮಹಾದೇವಿ ತ್ವದುಕ್ತಂ ಸರ್ವಸಾಧನಂ ।**
**ಅನಂತಾಃ ನಿಗಮಾಃ ಪ್ರೋಕ್ತಾಃ ಶಾಸ್ತ್ರಾಣಿ ವಿವಿಧಾನಿ ಚ ॥**
**ಅಮಿತಾನಿ ಪುರಾಣಾನಿ ವಿರುದ್ಧಾನಿ ಪರಸ್ಪರಮ್ ।**
**ಆಗಮಾಃ ಬಹುಧಾಃ ಪ್ರೋಕ್ತಾಃ ಸಮಸ್ತಾರ್ಥಾವಬೋಧಕಾಃ ॥**
**ಏತೈರನ್ಯೋನ್ಯಭಿನ್ನೈಶ್ಚ ಜ್ಞಾನಂ ಸಮ್ಯಂಙ್ನಜಾಯತೇ ।**

ಎಲೌ ಪಾರ್ವತಿಯೆ! ನಿನ್ನ ಮಾತು ಸತ್ಯವಾದುದು ಅನಂತಾಗಮಗಳೂ, ಶಾಸ್ತ್ರಗಳೂ, ಅಮಿತಗಳಾದ ಪುರಾಣಗಳೂ, ಪರಸ್ಪರ ವಿರುದ್ಧಗಳಾಗಿರುತ್ತವೆ. ಪರಸ್ಪರ ವಿರುದ್ಧಗಳಾದ ಇವುಗಳಿಂದ ಚನ್ನಾಗಿ ಜ್ಞಾನವಾಗುವದಿಲ್ಲ. ಆದ್ದರಿಂದ ಸೂಕ್ಷ್ಮಾಗಮವನ್ನು

ದೇವತ್ರೇನೆಂದು ಪರಮಾತ್ಮನು ಕೇಳುತ್ತಾನೆ. ಇದರಿಂದ ತಿಳಿದುಬರುವುದೇನೆಂದರೆ ಆಗಮಗಳಲ್ಲಿಯೂ ಪರಸ್ಪರ ವಿರುದ್ಧಗಳಾದ ಅನೇಕ ವಿಷಯಗಳಿರುತ್ತವೆ. ಈ ಮೊದಲು ಲಿಂಗ ಹೋದರೆ ಆತ್ಮಹತ್ಯವಾಡಿಕೊಳ್ಳಬೇಕೆಂದು ಆಗಮಗಳೂ, ಮಾಡಿಕೊಳ್ಳಕೂಡದೆಂದು ಶರಣರೂ ಹೇಳುತ್ತಾರೆಂದು ಹೇಳಿದೆಯಷ್ಟೆ?

**ಆಗಮಗಳಲ್ಲಿ—ವಾತುಲತಂತ್ರ, ಪುಟ ೫೧**

ಸ್ವೀಕರೋತಿ ಯದಾ ಲಿಂಗಂ ಗುರುಣಾ ದೀಕ್ಷಯಾಣುನಾ ।
ತದಾಪ್ರಭೃತಿಲಿಂಗೈಕ್ಯಮವಿನಾ ಭಾವಯೋಗತಃ ॥
ದೇಹಂ ಪ್ರಾಣೇನ ಸಂಸ್ಥಾಪ್ಯ ಪ್ರಾಣಂ ಲಿಂಗೇನ ನಿಕ್ಷಿಪೇತ್ ।
ಪ್ರಾಣೇನ ನಿಕ್ಷಿಪೇಲ್ಲಿಂಗಂ ಪೃಥಗ್ಭಾವಂ ನ ಕಾರಯೇತ್ ॥
ಪ್ರಾಣಲಿಂಗೇ ಮೃತೇ ಲುಪ್ತೇ ಹಸ್ತ ಖಡ್ಗಾದವಂಚಯನ್ ।
ಮುಖಂ ಪಂಕಜವಚ್ಛಿಂದ್ಯಾದ್ವೀರಭೃತ್ಯಸ್ಯ ಲಕ್ಷಣಂ ॥

ಅಂದರೆ—ಗುರುವಿನಿಂದ ಲಿಂಗವನ್ನು ದೀಕ್ಷಾಪೂರ್ವಕ ಸ್ವೀಕರಿಸಿದಮೇಲೆ ಲಿಂಗೈಕ್ಯವಾಗುವ ಪರ್ಯಂತರ ಅದನ್ನು ಅವಿಚ್ಛಿನ್ನವಾಗಿ ದೇಹದಲ್ಲಿ ಪ್ರಾಣದಂತೆ ಧರಿಸಿರಬೇಕು. ಕದಾಚಿತ್ ಲುಪ್ತವಾದರೆ ತನ್ನ ಶರೀರವನ್ನು ನಾಶಮಾಡಬೇಕು.

**ಸೂಕ್ಷ್ಮತಂತ್ರ—ಪಂಚಮಪಟಲು, ಪುಟ ೭೭**

ದತ್ತಂ ಲಿಂಗಮಿದಂ ವತ್ಸ ನ ಕದಾಚಿದ್ವಿಯೋಜಯ ।
ಪ್ರಾಣವದ್ರಕ್ಷಣೀಯಂ ಹಿ ಪ್ರಾಣಲಿಂಗಮಿದಂ ತವ ॥
ಉತ್ತಮಾಂಗೇ ಗಲೇ ಕಕ್ಷೇ ತಥಾ ವಕ್ಷಸ್ಥಲೇಪಿ ವಾ ।
ಕರಸ್ಥಲೇಪಿ ವಾ ನಿತ್ಯಂ ಸಾವಧಾನೇನ ಧಾರಯ ॥
ಪ್ರಮಾದಾತ್ಪತಿತೇ ಲಿಂಗೇ ಭಿನ್ನೇ ಚೋರಾದಿಭಿರ್ಹೃತೇ ।
ಪೀಠಾದುತ್ಕ್ರಮಿತೇ ವಾಪಿ ಸಹ ಪ್ರಾಣಾನ್ಪರಿತ್ಯಜ ॥

ಈ ನಿನ್ನ ಪ್ರಾಣಲಿಂಗವನ್ನು ನಿನ್ನ ಪ್ರಾಣದಂತೆ ರಕ್ಷಿಸು. ಯಾವಾಗಲೂ ಅಗಲಿಸಲು ಬೇಡ. ಪ್ರಮಾದದಿಂದ ಲಿಂಗವು ಲೋಪವಾದರೆ ಪ್ರಾಣವನ್ನು ಬಿಡು.

**ಸೂಕ್ಷ್ಮತಂತ್ರ—ಪುಟ ೮೫ (ತಂತ್ರಸಂಗ್ರಹ)**

ತಸ್ಮಾಲ್ಲಿಂಗಾತ್ಯಯೇದೇವಿ ಸದ್ಯಃ ಪ್ರಾಣಾನ್ಪರಿತ್ಯಜ ।

ಲಿಂಗದ ಅಂತ್ಯಯ (ನಾಶ) ವಾದರೆ ಕೂಡಲೇ ಪ್ರಾಣವನ್ನು ಬಿಡು. ಹೀಗೆಯೇ ಎಲ್ಲಾ ಆಗಮಗಳಲ್ಲಿಯೂ ಹೇಳಿವೆ. ಶರಣರು ಇದಕ್ಕೆ ವಿರುದ್ಧವಾಗಿ ಆತ್ಮಘಾತಕತನವನ್ನು ಮಾಡಬಾರದೆಂದು ಹೇಳಿರುತ್ತಾರೆ.

**೨೮೦**

ಚನ್ನಬಸವಣ್ಣನವರು—

"ಪ್ರತಿ ಇಲ್ಲದ ಲಿಂಗವು ಭಿನ್ನವಾಯಿತ್ತೆಂದು ತನುವಿನ ಮೇಲೆ ಶಸ್ತ್ರವ ನಿಕ್ಕಿಕೊಂಡು ಆತ್ಮಘಾತಕವ ಮಾಡಿಕೊಂಬ ದ್ರೋಹಿಯ ಮುಖವ ನೋಡಲಾಗದು ಅದೆಂತೆಂದೊಡೆ ಮಂತ್ರ ಭಿನ್ನವಿಲ್ಲವಾಗಿ ಪೂಜೆ ಭಿನ್ನವಿಲ್ಲ ಮಹಾಬಯಲೊಳಗಣ ಪ್ರಸಾದದ ಸಂಚವನರಿಯದೆ ಆತ್ಮಘಾತಕವ ಮಾಡುವ ನರಕಿಗಳನೇನೆಂಬೆನಯ್ಯ ಕೂಡಲಚನ್ನಸಂಗಮದೇವಾ"

೨೮೧

ಮೋಳಿಗೆ ಮಾರಯ್ಯನವರು—

"ಲಿಂಗಭಿನ್ನವಾದರೆ ಸಮಾಧಿಯ ಕೊಂಡೆನೆಂಬಿರಿ ಗುರು ಸತ್ತರೇಕೆ ಸಮಾಧಿಯ ಕೊಳ್ಳಿರಣ್ಣ ಬಲ್ಲರೆ ಹೇಳಿರಿ ಅರಿಯದಿದ್ದರೆ ಕೇಳಿರಿ ಪೃಥ್ವಿಯಲ್ಲಿ ಹುಟ್ಟಿದ ಕಣಿಯನೇ ತಂದು ಅಷ್ಟತನುವಿನ ಕೈಯಲ್ಲಿ ಕೊಡಲು ಇದು ಮುಟ್ಟಿ ಪೂಜಿಸಲಿಕ್ಕೆ ನಾ ಹ್ಯಾಗೆ ಪೂಜಿಸಲಯ್ಯ ಲಿಂಗ ಮೂವರಿಗೆ ಹುಟ್ಟಿತು ಪೃಥ್ವಿಯಲ್ಲಿ ಶಿಲೆಯಾಯಿತ್ತು ಬಿನ್ನಾಣಕೈಯಲ್ಲಿರೂಪಾಯಿತ್ತು ಗುರುವಿನ ಕೈಯಲ್ಲಿ ಮೋಕ್ಷವಾಯಿತ್ತು ಈ ಲಿಂಗ ಬೀಳಬಲ್ಲುದೇ? ಪೃಥ್ವಿ ತಾಳಬಲ್ಲುದೇ? ಲಿಂಗ ಬಿದ್ದಿತೆಂದು ಷೋಡಶೋಪಚಾರವ ಮಾಡಲಾಗದು ಲಿಂಗದ ಗೂಢಸಮಾಧಿಯ ಕೊಂಡೆನೆಂತೆಂಬ ಭಕ್ತರಿಗೆ ನಾಯಕ ನರಕ ತಪ್ಪದೆಂದಾತ ನಿಷ್ಕಳಂಕ ಮಲ್ಲಿಕಾರ್ಜುನಪ್ರಭುವೇ"

೨೮೨

ಉರಿಲಿಂಗಪೆದ್ದಿಗಳು—

"ಶ್ರೀ ಗುರು ಶಿಷ್ಯಂಗೆ ಮಂತ್ರವ ಮೂರ್ತಿಗೊಳಿಸಬೇಕಾಗಿ ಪೃಥ್ವಿಯ ಮೇಲಣ ಕಣಿಯ ತಂದು ಇಷ್ಟಲಿಂಗವಂ ಮಾಡಿ ಶಿಷ್ಯನ ತನುವಿನ ಮೇಲೆ ಅವಧರಿಸಿದ ಲಿಂಗವು ಅವದಳವಾಗಿ ಭೂಮಿಯಲ್ಲಿ ಸಿಂಹಾಸನಗೊಂಡಿತ್ತೆಂದು ಸಮಾಧಿಯ ಹೋಗುವರಯ್ಯಾ ಲಿಂಗಕ್ಕೆ ಅವದಳವಾದರೆ ಭೂಮಿ ತಾಳಬಲ್ಲುದೇ? ಮಾರಾಂತನ ಗೆಲಿವೆನೆಂದು ಗರಡಿಯ ಹೊಕ್ಕು ಕಠಾರಿಯ ಕೋಲ ಕಳೆದುಕೊಂಡು ಸಾಧನೆಯ ಮಾಡುವಲ್ಲಿ ಕೈತಪ್ಪಿ ಕೋಲು ನೆಲಕ್ಕೆ ಬಿದ್ದರೆ ಆ ಕೋಲಂ ಬಿಟ್ಟು ಸಾಧನೆಯಂ ಬಿಟ್ಟು ಕಳೇವರೇ ಅಯ್ಯ? ತಟ್ಟು ಮುಟ್ಟು ಹಳಚುವಲ್ಲಿ ಅಲಗು ಬಿದ್ದರೆ ಭಂಗವಲ್ಲದೆ ಕೋಲು ಬಿದ್ದರೆ ಭಂಗವೇ ಅಯ್ಯ? ಆ ಕೋಲಂ ಕಳೆದುಕೊಂಡು ಸಾಧನೆಯಂ ಮಾಡುವದೇ ಕರ್ತವ್ಯ ಆ ಲಿಂಗ ಹುಸಿ ಎಂದಡೇನಯ್ಯ? ಶ್ರೀ ವಿಭೂತಿ ವೀಳ್ಯೆಯಕ್ಕೆ ಸಾಕ್ಷಿಯಾಗಿ ಬಂದ ಶಿವಗಣಂಗಳು ಹುಸಿಯೇ? ಆ ಗಣಂಗಳು ಹುಸಿಯಾದಡೆ ಕರ್ಣ ಮಂತ್ರ ಹುಸಿಯೇ? ಆ ಕರ್ಣಮಂತ್ರ ಹುಸಿಯಾದಡೆ ಶ್ರೀ ಗುರುಲಿಂಗವು ಹುಸಿಯೇ? ಶ್ರೀ ಗುರುಲಿಂಗವು ಹುಸಿಯಾದೊಡೆ ಜಂಗಮಲಿಂಗ ಹುಸಿಯೇ? ಆ ಜಂಗಮಲಿಂಗ ಹುಸಿಯಾದಡೆ ಪಾದತೀರ್ಥ ಪ್ರಸಾದ ಹುಸಿಯೇ? ಇಂತೀ ಷಟ್‌ಸ್ಥಲವ ತುಚ್ಛಮಾಡಿ ಗುರೂಪದೇಶವ ಹೀನವ ಮಾಡಿ ಸಮಾಧಿಯ ಹೋಗುವ ಪಂಚಮಹಾಪಾತಕರ ಮುಖವ ನೋಡಲಾಗದು ಉರಿಲಿಂಗಪೆದ್ದಿ ಪ್ರಿಯವಿಶ್ವೇಶ್ವರ"

ಬೇರೆ ಬೇರೆ ಶರಣರು ಅನೇಕ ವಚನಗಳನ್ನು ಹೇಳಿರುತ್ತಾರೆ. ಅವರೆಲ್ಲರಲ್ಲಿ ಮತೈಕ್ಯವಿರುತ್ತದೆ.

ಈ ಮೊದಲು ಆಗಮಗಳ ಸಂಖ್ಯೆಯು ಅಪಾರವಾಗಿರುತ್ತದೆಂದು ಹೇಳಿರುತ್ತೇನೆಯಷ್ಟೆ? ಶ್ರೀ ನಿಜಗುಣಶಿವಯೋಗಿಗಳು ಆಗಮಗಳಲ್ಲಿರತಕ್ಕ ಸಂಖ್ಯೆಗಳನ್ನು ತಮ್ಮ ವಿವೇಕ ಚಿಂತಾಮಣಿಯಲ್ಲಿ ಎರಡು ಶಂಖ ಒಂದು ಪದ್ಮ ಒಂದು ಅರ್ಬುದ ಹತ್ತೊಂಭತ್ತು

ಕೋಟಿ ಮೂವತ್ತಾರುಲಕ್ಷ ನಾಲ್ವತ್ತುಸಾವಿರ ಇರುತ್ತವೆಂದು ಹೇಳಿದ್ದಾರೆ. ಈ ಶ್ಲೋಕಗಳನ್ನು ಯಾವ ಆಧಾರದಿಂದ ಹೇಳಿರುವರೆಂಬುವದು ಲೆಖ್ಖ ಹತ್ತುವದಿಲ್ಲ. ಇಪ್ಪತ್ತೆಂಟು ಆಗಮುಗಳಲ್ಲಿಯೂ ಇಂತಿಷ್ಟೇ ಶ್ಲೋಕಗಳಿರುತ್ತವೆಂದು ಪ್ರಮಾಣಗಳು ಮಾತ್ರ ಸಿಕ್ಕರೂ ಆ ಆಗಮುಗಳೆಲ್ಲ ಈಗ ಸಿಗದಿರುವದು ಶೋಚನೀಯ ವಿಷಯವಾಗಿದೆ. ಸಾವಿರ ಪಾಲಿನಲ್ಲಿ ಒಂದು ಪಾಲು ಅಲ್ಲ ಲಕ್ಷದಲ್ಲಿ ಒಂದು ಪಾಲಾದರೂ ಸಿಕ್ಕಿರುವದಿಲ್ಲ. ಅವುಗಳೆಲ್ಲ ಕಾಲಗರ್ಭದ ಒಳಗೆ ಪ್ರವೇಶಿಸಿ ಅಲ್ಲಿಯೇ ಪುನರಾವೃತ್ತಿರಹಿತವಾದ ಐಕ್ಯವನ್ನು ಹೊಂದಿರಬಹುದು. ಸದ್ಯಕ್ಕೆ ವೀರಶೈವರಿಗೆ ಸಿಕ್ಕಿರತಕ್ಕ ಆಗಮುಗಳ ಸಂಖ್ಯೆ ಅಲ್ಪವಿಷ್ಟೇ ಅಲ್ಲ ಅತ್ಯಲ್ಪವೆಂದು ಹೇಳಬಹುದು.

ಶ್ರೀ ಬಸವಣ್ಣನವರು ಆಗಮೋಕ್ತಧರ್ಮದ ಸಾರವನ್ನೇ ತಮ್ಮ ವಚನಗಳಲ್ಲಿ ಹೇಳಿರುತ್ತಾರೆ. ನಾವು ಮೇಲೆ ಹೇಳಿದಂತೆ ಅಲ್ಲಲ್ಲಿ ಕೆಲವು ಭಿನ್ನಾಭಿಪ್ರಾಯ ಮಾತ್ರ ಆಗಮುಗಳಿಗೂ ಶರಣರ ವಚನಗಳಿಗೂ ಕಾಣಬರುತ್ತದೆ. ನಶಿಸಿಹೋಗಿದ್ದ ಆಗಮಧರ್ಮಕ್ಕೆ ಹೊಸ ಕಳೆಯನ್ನು ಕೊಟ್ಟು ಹೊಸರೀತಿಯೋ ಏನೋ ಎಂಬುವಷ್ಟು ಪ್ರಚಂಡತರವಾದ ಸುಸಂಘಟಿತರೀತಿಯಿಂದ ಅದನ್ನು ಭೂಲೋಕದಲ್ಲಿ ಪ್ರಸಾರಮಾಡಿದರು. ಆದ್ದರಿಂದ ಶ್ರೀ ಬಸವಣ್ಣನವರು ಆಗಮಾದಿಗಳನ್ನು ಬಿಟ್ಟು ತಮ್ಮ ಧರ್ಮಪ್ರಸಾರ ಮಾಡಿರುವದಿಲ್ಲ ಅಥವಾ ಆಗಮುಗಳಲ್ಲಿರುವದೆಲ್ಲವನ್ನೂ ಅನುಸರಿಸಿರುವದಿಲ್ಲ. ಇವರ ಧರ್ಮಪ್ರಸಾರದ ಕಾರ್ಯವು ಆಗಮೋಕ್ತವಾದುದೇ ಆಗಿರುತ್ತದೆ.

## ಆರನೆಯ ಪ್ರಕರಣ

## ಬಸವಣ್ಣನವರೂ ಧ್ಯಾನಯೋಗವೂ

ಬಸವಣ್ಣನವರು ಭಕ್ತಿ, ಜ್ಞಾನ, ಕ್ರಿಯಾಯೋಗಿಗಳೂ ಇರುವಂತೆ ಧ್ಯಾನ ಯೋಗಿಗಳೂ ಆಗಿರುವರೆಂಬುವದು ಅವರ ಅನೇಕ ವಚನಗಳಿಂದ ಸಿದ್ಧವಾಗುತ್ತದೆ. ಮಾನವನ ಅಂತಿಮ ಧ್ಯೇಯವಾದ ಆತ್ಮಸಾಕ್ಷಾತ್ಕಾರವನ್ನು ಹೊಂದಲಿಕ್ಕೆ ಭಕ್ತಿ, ಜ್ಞಾನ, ಕ್ರಿಯೆಗಳ ಆವಶ್ಯಕತೆ ಇರುವಂತೆ ಪರಮಾತ್ಮ ಧ್ಯಾನದ ಆವಶ್ಯಕತೆಯೂ ಅಧಿಕವಾಗಿರುತ್ತದೆ. ಇದನ್ನು ವೀರಶೈವ ಶಾಸ್ತ್ರಕಾರರೂ ದೃಢಪಡಿಸಿರುತ್ತಾರೆ. ಭಕ್ತಿ, ಜ್ಞಾನ, ಕ್ರಿಯಾ, ಧ್ಯಾನ ಈ ನಾಲ್ಕರ ಸಮನ್ವಯವಾದ ಅನೇಕ ಶರಣರ ವಚನಗಳನ್ನು ನಾವು ನೋಡಲು ಶಕ್ಯವಿದೆ. ಇಲ್ಲಿ ಧ್ಯಾನವೆಂದರೇನು? ಯೋಗವೆಂದರೇನು? ಇವುಗಳ ಅರ್ಥವನ್ನು ಮೊದಲು ನೋಡಬೇಕಾಗಿದೆ. "ಯೋಗಃ ಅಸ್ಯಾಸ್ತೀತಿ" ಯೋಗೀ ಅಂದರೆ ಯಾವಾತನಿಗೆ ಯೋಗವುಂಟೋ ಆತನೇ ಯೋಗಿ. ಯೋಗಶಾಸ್ತ್ರ ಭರತಖಂಡದ ಪ್ರಾಚೀನತಮ ಶಾಸ್ತ್ರಗಳಲ್ಲಿ ಒಂದಾಗಿರುತ್ತದೆ. ಯೋಗಶಾಸ್ತ್ರವು ಯಾವ ಕಾಲದಲ್ಲಿ ಹುಟ್ಟಿತೆಂಬುವದು ನಿಶ್ಚಿತ ಆಧಾರಗಳಿಂದ ತಿಳಿಯಲು ಶಕ್ಯವಿಲ್ಲದಿದ್ದರೂ ಕ್ರಿಸ್ತಶಕೆಯ ಪೂರ್ವದಲ್ಲಿ ಅನೇಕ ಶತಮಾನಗಳ ಹಿಂದೆ ಇದ್ದ ಶಾಸ್ತ್ರಗಳಲ್ಲಿ ಯೋಗಶಬ್ದವು ಸಿಗುತ್ತದೆ. ಶ್ರೀ ಬುದ್ಧದೇವರು ಯೋಗಮಾಡುತ್ತಿದ್ದರೆಂಬುವದು ಅಶ್ವಘೋಷನ ಚರಿತ್ರೆಯಿಂದ ತಿಳಿದುಬರುತ್ತದೆ. ಭಗವದ್ಗೀತೆಯಲ್ಲಿಯೂ, ಉಪನಿಷತ್ತುಗಳಲ್ಲಿಯೂ, ಯೋಗಶಬ್ದವನ್ನು ಅನೇಕ ಕಡೆಗೆ ನಾವು ಕಾಣಬಹುದು. ಈ ಯೋಗಶಾಸ್ತ್ರವನ್ನು ರಚಿಸಿದವರು ಪತಂಜಲಿ ಮಹರ್ಷಿಗಳು. ಈ ಮಹರ್ಷಿಗಳು ಪಾಣಿನಿಯ ಸೂತ್ರಗಳಿಗೆ ಭಾಷ್ಯವನ್ನು ಬರೆದಿರುತ್ತಾರೆ. ಇವರು ರಚಿಸಿರುವ ಭಾಷ್ಯಕ್ಕೆ ಮಹಾಭಾಷ್ಯವೆಂದು ಹೆಸರು. ಇವರಿಂದ ರಚಿಸಲ್ಪಟ್ಟ ಯೋಗಶಾಸ್ತ್ರವಾದರೂ ಷಡ್‌ದರ್ಶನಗಳಲ್ಲಿ ಪ್ರಸಿದ್ಧವಾಗಿರುವದು. ಶ್ರೀ ಪತಂಜಲಿ ಮಹರ್ಷಿಗಳು ಪರಮ ಶೈವರಾಗಿದ್ದರು. ಇವರು ರಚಿಸಿರುವ ಮಹಾಭಾಷ್ಯದ ಆರಂಭದಲ್ಲಿ ಶಿವಸ್ತುತಿಯನ್ನು ಮಾಡಿರುವರು. ಪತಂಜಲಿ ಮಹರ್ಷಿಗಳ ಕಾಲನಿರ್ಣಯವನ್ನು ಮಹಾಭಾಷ್ಯದ ಮುನ್ನುಡಿಯಲ್ಲಿ ಕ್ರಿಸ್ತಪೂರ್ವ ೭ನೆಯ ಶತಮಾನವೆಂದು ನಿರ್ಧರಿಸಿರುತ್ತಾರೆ. ಇವರು ಮಹಾ ಶಿವಭಕ್ತರಾದುದರಿಂದ ಎಲ್ಲ ಶೈವಮತಗಳಮೇಲೂ ಇವರು ರಚಿಸಿದ ಯೋಗಶಾಸ್ತ್ರದ ಪ್ರಭಾವವು ಚನ್ನಾಗಿ ಬಿದ್ದಿರುವದು. ವೀರಶೈವರು ಈ ಪತಂಜಲಿ ಮಹರ್ಷಿಗಳ ಯೋಗಶಾಸ್ತ್ರವನ್ನು ಖಂಡಿಸಿದರೂ ಅದರಲ್ಲಿಯ ಅನೇಕ ವಿಷಯಗಳನ್ನು ಆಯ್ದುಕೊಂಡು ಅದಕ್ಕೊಂದು ತಮ್ಮದೇ ಆದ ಹೊಸ ಸ್ವರೂಪವನ್ನು ಕೊಟ್ಟು ಮಂತ್ರ, ಲಯ, ಹಠ, ರಾಜ ಯೋಗಗಳಲ್ಲಿ ಶಿವಯೋಗವೇ ಶ್ರೇಷ್ಠವಾದುದೆಂದು ಸಿದ್ಧಾಂತಪಡಿಸಿ ಅದನ್ನು ಸರ್ವಾಂಗ ಸುಂದರವನ್ನಾಗಿ ಮಾಡಿರುವರು. ಮತ್ತು ಅದನ್ನು ಬಳಕೆಯಲ್ಲಿ ತಂದರು. ಅದಕ್ಕೂ ಉಳಿದ ಯೋಗಗಳಿಗೂ ಇರುವ ತರತಮಭಾವವನ್ನು ಮುಂದೆ ತೋರಿಸುತ್ತೇವೆ. ಇಂತಹ ಯೋಗಶಬ್ದದ ಅರ್ಥವನ್ನು ಯಾರು ಯಾರು ಹೇಗೆ ಹೇಗೆ ಮಾಡಿರುತ್ತಾರೆಂಬುವದನ್ನು ಇಲ್ಲಿ ನೋಡೋಣ. ಪಾರಮೇಶ್ವರಾಗಮ—ಪುಟ ೯೯೧ ("ಚಿತ್ತೇ ಚಲತಿ ಸಂಸಾರೋ ನಿಶ್ಚಲೇ ಮೋಕ್ಷಯೇವ ಚ") ಚಿತ್ತವು ಚಂಚಲವಾದರೆ ಸಂಸಾರ; ಅದು ನಿಶ್ಚಲವಾದರೆ

ಮೋಕ್ಷ ಎಂದು ಶಿವಾಗಮಗಳು ಪ್ರತಿಪಾದಿಸಿರುವವು. ಶಿವಾಗಮಗಳಲ್ಲಿ ಈ ಯೋಗದ ಬಗ್ಗೆ ಅನಂತ ವಿಷಯಗಳನ್ನು ಹೇಳೋಣವಾಗಿದೆ. "ಯೋಗಶ್ಚಿತ್ತವೃತ್ತಿ ನಿರೋಧಃ" ಇದು ಯೋಗಸೂತ್ರಕಾರರಾದ ಪತಂಜಲಿ ಮಹರ್ಷಿಗಳ ಸೂತ್ರವು. ಮನಸ್ಸಿನ ಚಂಚಲತೆಯನ್ನು ತಡೆದು ಒಂದೇ ಸ್ಥಾನದಲ್ಲಿ ನಿಲ್ಲಿಸುವದೇ ಯೋಗವೆಂದು ಈ ಮಹರ್ಷಿಗಳ ಸಿದ್ಧಾಂತವಾಗಿರುವದು. ಭಗವದ್ಗೀತೆಯಲ್ಲಿ ಯೋಗಶಬ್ದಕ್ಕೆ ಬೇರೆಬೇರೆ ಅರ್ಥ ಮಾಡಿದ್ದಾರೆ. ಗೀತೆಯ ೨ನೇ ಅಧ್ಯಾಯ, ಶ್ಲೋಕ ೫ರಲ್ಲಿ "ಯೋಗಃ ಕರ್ಮಸು ಕೌಶಲಂ" ಎಂದೂ ಇದೇ ಅಧ್ಯಾಯದ ೪೮ನೆಯ ಶ್ಲೋಕದಲ್ಲಿ "ಸಿಧ್ಯಸಿದ್ಧ್ಯೋಃ ಸಮೋಭೂತ್ವಾ ಸಮತ್ವಂ ಯೋಗ ಉಚ್ಯತೇ" ಎಂತಲೂ ಮತ್ತು ಯೋಗಿಯು ಎಲ್ಲರಿಗಿಂತಲೂ ಶ್ರೇಷ್ಠನೆಂದು ಗೀತೆಯು ಹೇಳುತ್ತದೆ. "ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ" ಅಂದರೆ— ಕೃಚ್ಛ ಚಾಂದ್ರಾಯಣಾದಿ ವ್ರತಗಳನ್ನು ಮಾಡುವ ತಪಸ್ವಿಗಳಿಗಿಂತಲೂ, ಶಾಸ್ತ್ರಜ್ಞಾನವಂತರಿಗಿಂತಲೂ, ಇಷ್ಟಪೂರ್ತಾದಿ ಕರ್ಮಗಳನ್ನು ಮಾಡುವವರಿಗಿಂತಲೂ, ಯೋಗ ಬಲ್ಲವನು ಶ್ರೇಷ್ಠನೆಂದು ಗೀತೆಯ ತಾತ್ಪರ್ಯವು. ಆದ್ದರಿಂದ ಎಲೌ ಅರ್ಜುನನೇ ನೀನು ಯೋಗಿಯಾಗು ಎಂದು ಕೃಷ್ಣನು ಬೋಧಿಸಿರುತ್ತಾನೆ. ಯೋಗಶಬ್ದಕ್ಕೆ ಬೇರೆ ಬೇರೆ ಶಾಸ್ತ್ರಕಾರರು ಬೇರೆಬೇರೆ ಅರ್ಥ ಮಾಡಿರುತ್ತಾರೆ. ಪತಂಜಲ ದರ್ಶನದಲ್ಲಿ "ಯುಜಿರ್—ಯೋಗೆ" ಸಿದ್ಧಾಂತ ಕೌಮುದಿ ಸಂಯೋಗಾರ್ಥವುಳ್ಳದ್ದಾದುದರಿಂದ ಯೋಗಶಬ್ದವು ಸಂಯೋಗ ವಚನವೇ ಆಗಿರುತ್ತದೆ. ನಿರೋಧ ವಚನವಾಗುವದಿಲ್ಲ. ಆದ್ದರಿಂದಲೇ ಯಾಜ್ಞವಲ್ಕ್ಯರು—"ಸಂಯೋಗೋ ಯೋಗ ಇತ್ಯುಕ್ತೋ ಜೀವಾತ್ಮ ಪರಮಾತ್ಮನೋಃ" ಜೀವಾತ್ಮ ಪರಮಾತ್ಮರ ಸಂಯೋಗವೇ ಯೋಗವೆಂದು ಅರ್ಥವಾಗುತ್ತದೆ. ಸಂಯೋಗ ಶಬ್ದಕ್ಕೆ ನೈಯಾಯಿಕರು "ಅಪ್ರಾಪ್ತಯೋಸ್ತು ಯಾ ಪ್ರಾಪ್ತಿಃ ಸೈವ ಸಂಯೋಗ ಈರಿತಃ" ಪ್ರಾಪ್ತಿಯನ್ನು ಹೊಂದದೆ ಇರತಕ್ಕ ಎರಡು ವಸ್ತುಗಳ ಪ್ರಾಪ್ತಿಯೇ ಸಂಯೋಗವು. ಮತ್ತು "ಧಾತೂನಾಂ ಅನೇಕಾರ್ಥತ್ವಾತ್" ಅಂದರೆ ಧಾತುಗಳಿಗೆ ಅನೇಕಾರ್ಥಗಳಾಗುತ್ತವೆ. "ನಿಪಾತಾಶ್ಚೋಪಸರ್ಗಾಶ್ಚ ಧಾತವಶ್ಚೇತಿ ತೇ ತ್ರಯಃ ಅನೇಕಾರ್ಥಾಃ ಸ್ಮೃತಾಃ ಸರ್ವೇ ಪಾಠಸ್ತೇಷಾಂ ನಿದರ್ಶನಮ್" ಅಂದರೆ ನಿಪಾತಗಳು, ಉಪಸರ್ಗಗಳು ಧಾತುಗಳು ಅನೇಕಾರ್ಥ ಉಳ್ಳವುಗಳು. ಆದ್ದರಿಂದ ಯೋಗಶಬ್ದವು "ಯುಜ–ಸಮಾಧೌ" ಎಂಬುವ ಧಾತುವಿನಿಂದ ಸಮಾಧಿ ಅರ್ಥವೂ ಕೂಡ ಆಗುತ್ತದೆ. ಹೀಗೆ ಹೇಳಿದ್ದಾದರೆ ಯಾಜ್ಞವಲ್ಕ್ಯರ ಮೇಲಿನ ಮಾತಿಗೂ ವ್ಯಾಘಾತವಾಗುವದಿಲ್ಲ. "ಸಮಾಧಿಃ ಸಮತಾವಸ್ಥಾ ಜೀವಾತ್ಮ ಪರಮಾತ್ಮನೋಃ ಬ್ರಹ್ಮಣ್ಯೇವ ಸ್ಥಿತಿರ್ಯಾಸಾ ಸಮಾಧಿಃ ಪ್ರತ್ಯಗಾತ್ಮನಃ" ಅಂದರೆ ಜೀವಾತ್ಮ ಪರಮಾತ್ಮರ ಸಮಾನಾವಸ್ಥೆಯೇ ಸಮಾಧಿಯು. ಜೀವಾತ್ಮನಿಗೆ ಬ್ರಹ್ಮಭಾವದಲ್ಲಿ ಯಾವ ಸ್ಥಿತಿಯು ಇರುತ್ತದೆಯೋ ಅದೇ ಪರಮಾತ್ಮನಿಗೆ ಸಮಾಧಿಯಾಗುತ್ತದೆ. ಮತ್ತು ವ್ಯಾಸ ಮಹರ್ಷಿಗಳೂ ಕೂಡ "ಯೋಗಃ ಸಮಾಧಿಃ" ಎಂದು ಹೇಳಿರುತ್ತಾರೆ. ಇಲ್ಲಿ ಸಂಯೋಗಾರ್ಥವು ಯೋಗ್ಯವಾದುದಲ್ಲ. ಜೀವೇಶ್ವರ ಸಂಯೋಗಕ್ಕೆ ಕಾರಣ ಜೀವ ಅಥವಾ ಈಶ್ವರರ ಕರ್ಮವಲ್ಲ. ಆದ್ದರಿಂದ ಸಂಯೋಗಾರ್ಥವಾಗುವುದಿಲ್ಲ. ಇನ್ನು ಸಮಾಧಿಗೂ ಅರ್ಥವಾಗುವದಿಲ್ಲ. ಯೋಗವೆಂದರೆ—ಯಮ, ನಿಯಮ, ಆಸನ,

ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಇವೇ ಅಷ್ಟಾಂಗಯೋಗಗಳು. ಈ ಅಷ್ಟಾಂಗಯೋಗಗಳಲ್ಲಿ ಸಮಾಧಿಯು ಒಂದು ಅಂಗವೇ ಹೊರತು ಅಂಗಿಯಲ್ಲ. ಆದ್ದರಿಂದ ಸಮಾಧಿ ಎಂಬುವದು ಯೋಗಶಬ್ದದ ಅರ್ಥವಲ್ಲ. ಎಲ್ಲಾ ಕಡೆಯಲ್ಲಿಯೂ ಶಬ್ದಗಳ ಉತ್ಪತ್ತಿಯಿಂದಲೇ ಅರ್ಥವನ್ನು ಹೇಳುವುದಕ್ಕೆ ಬರುವದಿಲ್ಲ. ಹಾಗಾದರೆ ಗೌ ಶಬ್ದದ ಉತ್ಪತ್ತಿಯು ಗಮ ಧಾತುವಿನಿಂದ ಆಗಿರುತ್ತದೆ. ಹೋಗುವ ಕಾಲಕ್ಕೆ ಮಾತ್ರ ಗೌ ಶಬ್ದದ ಅರ್ಥವಾಗಬೇಕಾದೀತು. ಆಕಳು ನಿಂತ ಕಾಲಕ್ಕೆ ಅಥವಾ ಮಲಗಿದಾಗ ಗೌ ಶಬ್ದದ ಪ್ರಯೋಗವೇ ಆಗಲಿಕ್ಕಿಲ್ಲ— ಅಥವಾ ಆಗದೆ ಹೋಗಬೇಕಾದೀತು. ಆದ್ದರಿಂದ ಯೋಗಶಬ್ದಕ್ಕೆ ಸಂಯೋಗ, ಸಮಾಧಿ ಮೊದಲಾದ ಅರ್ಥಗಳಾಗುವದಿಲ್ಲ. ಚಿತ್ತವೃತ್ತಿಯನ್ನು ತಡೆಯುವದೇ ಯೋಗಶಬ್ದದ ಮುಖ್ಯ ಅರ್ಥವು. ಇದು ಶಿವಾಗಮಗಳ ಮತ್ತು ಶ್ರೀ ಪತಂಜಲಿ ಮಹರ್ಷಿಗಳ ಅರ್ಥಕ್ಕೂ ಸರಿಹೋಗುತ್ತದೆ.

ಬಸವಣ್ಣನವರು— ಯೋಗಶಬ್ದದ ಅರ್ಥವು ಯಾವ ಧಾತುವಿನಿಂದ, ಯಾವ ಅರ್ಥದಲ್ಲಿ, ಯಾವ ಪ್ರತ್ಯಯ ಹತ್ತಿ ಸಿದ್ಧವಾಗುತ್ತದೆಂಬುವ ಗೊಡವೆಗೆ ಹೋಗದೆ, ಧ್ಯಾನಯೋಗದ ಸ್ವರೂಪವನ್ನು ತಮ್ಮ ವಚನಗಳಿಂದ ಅತ್ಯಂತ ಸ್ಫುಟವಾಗಿ ತೋರಿಸಿರುತ್ತಾರೆ. ಅವರು ನಿರ್ಗುಣ ಧ್ಯಾನದ ಸ್ವರೂಪದ ಬಗ್ಗೆ—

೨೮೩

"ಆಶೆ ರೋಷ ಹರುಷಾದಿಗಳೆಂಬ ಕರಣೇಂದ್ರಿಯಂಗಳ ಮುಟ್ಟಲೀಯದೆ ಆಚಾರ ಶಿವಾಚಾರವ ಮಾಡುವೆ ಭಯಭಕ್ತಿಯಿಂದ ತೋರುವೆ ಮನದಲ್ಲಿ ವಂಚನೆಯಿಲ್ಲದೆ ಭಾವಶುದ್ಧ ಪೂಜೆಯ ಮಾಡುವೆ ಎನ್ನ ಪ್ರಾಣ ಶಕ್ತಿಯಿಂದ ಕೂಡುವೆ ಕೂಡಲಸಂಗಮದೇವರ"

೨೮೪

"ಪಶ್ಚಿಮ ಪದ್ಮಾಸನದಲ್ಲಿ ಕುಳಿತು ನೆಟ್ಟೆಲುವ ಮುರಿದು ತುಟಿ ಮಿಡುಕದೆ ಅಟ್ಟಿಯಾಡಿತ್ತಲ್ಲಾ ಬಿಟ್ಟ ಕಣ್ಣು ಬಿಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಕಟ್ಟುಗುಡಿಯ ಕೂಡಲಸಂಗಮದೇವಾ ಹಿಡಿವಡೆದ"

ಹೀಗೆ ಧ್ಯಾನಮಾಡುವದು ಬಸವಣ್ಣನವರ ರೀತಿಯಾಗಿರುತ್ತದೆ.

ವೇದದಲ್ಲಿ— "ಮನೋನಾಶಃ ಪರಮಂ ಪದಂ" ಅಂದರೆ ಮನದ ನಾಶವೇ ಪರಮಪದವಾಗಿರುತ್ತದೆ.

**ಕಠೋಪನಿಷತ್ತಿನಲ್ಲಿ**

**ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ ।**
**ಬುದ್ಧಿಶ್ಚ ನ ವಿಚೇಷ್ಟತಿ ತಾಂ ಆಹುಃ ಪರಮಾಂಗತಿಂ ।**
**ಮನೋ ಜಾನೀಹಿ ಸಂಸಾರಂ ತಸ್ಮಿನ್ಸತಿ ಜಗತ್ರಯಂ ।**
**ತಸ್ಮಿನ್ ಕ್ಷೀಣೇ ಜಗತ್ಕ್ಷೀಣಂ ತಚ್ಚಿಕಿತ್ಸ್ಯಂ ಪ್ರಯತ್ನತಃ ॥**

ಅಂದರೆ ಯಾವ ಯೋಗಬಲದಿಂದ ಐದು ಜ್ಞಾನೇಂದ್ರಿಯಗಳು, ಮನಸ್ಸು, ಬುದ್ಧಿ ಇವುಗಳೆಲ್ಲ ಶಿವಪದದಲ್ಲಿ ಲಯವಾಗುತ್ತವೆಯೋ ಅದಕ್ಕೆ ಪರಮಗತಿ, ಮೋಕ್ಷ—ಮುಕ್ತಿ—ಕೈವಲ್ಯ, ಅಮನಸ್ಕ, ಬ್ರಾಹ್ಮೀಸ್ಥಿತಿ ಎಂದು ಕರೆಯುತ್ತಾರೆ. ಮನಸ್ಸಿನ ಉದಯದಿಂದ

ಜಗತ್ತಿನ ಉದಯ ಮತ್ತು ಮನಸ್ಸಿನ ಲಯದಿಂದ ಜಗತ್ತಿನ ಲಯವೂ ಆಗುತ್ತದೆ. ಆದ್ದರಿಂದ ವೇದಾಂತಿಗಳು "ಮನಯೇವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ" ಅಂದರೆ ಮನುಷ್ಯನ ಬಂಧನಕ್ಕೂ ಮೋಕ್ಷಕ್ಕೂ ಮನಸ್ಸೇ ಕಾರಣ ವಾಗಿರುವದು. ಶ್ರೀ ಬಸವಣ್ಣನವರಾದರೂ "ಹೇಗೆ ಮನ ಹಾಗೆ ಘನ" ವೆಂದು ಹೇಳಿರುವರು.

**ಶಿವಾಗಮಗಳಲ್ಲಿ**

**ಮದುಕ್ತೇ ನೈವ ಮಾರ್ಗೇಣ ಮಯ್ಯವಸ್ಥಾಪ್ಯ ಚೇತಸಃ ।**
**ವೃತ್ಯಂತರ ನಿರೋಧೋಯಃ ಸ ಯೋಗ ಇತಿ ಗೀಯತೇ ॥**

ನಾನು ಹೇಳಿದ ಮಾರ್ಗದಂತೆ ನನ್ನಲ್ಲಿಯೇ ಮನಸ್ಸನ್ನಿಟ್ಟು ಎರಡನೆಯ ವೃತ್ತಿಯನ್ನು ನಿರೋಧಮಾಡುವದಕ್ಕೆ ಯೋಗವೆಂದು ಶ್ರೀ ಶಂಕರನು ಪಾರ್ವತಿಗೆ ಹೇಳಿರುತ್ತಾನೆ.

**೨೮೫**

ಬಸವಣ್ಣನವರು—

"ನೋಡಿ ನೋಡಿ ಲಿಂಗಧ್ಯಾನವೆನ್ನ ಮನವು ರಾಗರಂಜನೆಯ ಉತ್ಪತ್ತಿ, ಸ್ಥಿತಿ, ಲಯ ನಿನಗೆಂದಾದುವು ರಾಗರಂಜನೆಯ ಪೂಜೆ ಎನ್ನ ಮನ ಕೂಡಲಸಂಗಮದೇವಾ ಆಹಾ ಎನ್ನ ಮನ"

**೨೮೬**

"ನಿಮ್ಮ ನೋಟವನಂತಸುಖ ನಿಮ್ಮ ಕೂಟ ಪರಮಸುಖ ಅವುಟು ಕೋಟಿ ರೋಮಂಗಳೇ ಕಂಗಳಾಗಿ ನೋಡುತ್ತಿರ್ದೆನು. ಕೂಡಲಸಂಗಮ ದೇವಯ್ಯ ನಿಮ್ಮ ನೋಡಿನೋಡಿಮನದಲ್ಲಿ ರತಿ ಹುಟ್ಟಿ ನಿಮಿರ್ದವೆನ್ನ ಕಳೆಗಳು"

ಬಸವಣ್ಣನವರು ಸರ್ವಾರ್ಪಣಯೋಗ ಅಥವಾ ಭಾವನೆಯಿಂದ ಪರಮಾತ್ಮನನ್ನು ಧ್ಯಾನಿಸುವ ವಚನವಿದು.

ಈ ಕೆಳಗಿನ ವಚನವು ಅದೆಂತಹ ರಮಣೀಯವಾಗಿರುತ್ತದೆಂದು ಹೇಳಲು ಬಾರದಾಗಿರುತ್ತದೆ—

**೨೮೭**

"ವಚನದಲ್ಲಿ ನಾಮಾಮೃತ ತುಂಬಿ ನಯನದಲ್ಲಿ ನಿಮ್ಮ ಮೂರುತಿ ತುಂಬಿ ಮನದಲ್ಲಿ ನಿಮ್ಮ ನೆನಹು ತುಂಬಿ ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ ಕೂಡಲಸಂಗಮದೇವಾ ನಿಮ್ಮ ಚರಣಕಮಲದಲಾನು ತುಂಬಿ"

**೨೮೮**

"ಸುರರು ಕಿನ್ನರರು ಕಿಂಪುರುಷರೆಂಬುವರನಾರು ಬಲ್ಲರು? ಎನ್ನ ಚಿತ್ತವು ನಿಮ್ಮ ಮೇಲೆ ಸಂಗಯ್ಯ ಎನ್ನ ಚಿತ್ತವು ನಿಮ್ಮ ಮೇಲೆ ಲಿಂಗಯ್ಯ ಕೂಡಲಸಂಗಮದೇವಾ ಅನ್ಯವೆಂಬುದನರಿಯೆನಯ್ಯ"

**೨೮೯**

"ಅಡಿಗಡಿಗೆ ಲಿಂಗವನಡರಿಯಡರಿ ನೋಡಿ ನೋಡಿ ಕಂಗಳು ಕಡೆಗೋಡಿ ವರಿಪವೆನಗಯ್ಯ ಎನ್ನ ಅಶ್ರುಜಲಂಗಳು ಆಲಿಕಲ್ಲರೂಪಿನಂತೆ

ಅರಗಿನ ಪುತ್ಥಳಿಯಂತೆ ತನುಪುಳಕಿತವಾದ ಬೆವರುಬಿಂದುಗಳೆಲ್ಲಾ ಕೂಡಲಸಂಗನ ದರ್ಶನ ಸ್ಪರ್ಶನದಿಂದ ಮನವಲಿದು ನೆನೆವ ಭರವನೇನು ಹೇಳುವೆನಯ್ಯ"

ಮೇಲೆ ಬರೆದ ವಚನಗಳನ್ನು ನೋಡಿದರೆ ಬಸವಣ್ಣನವರು ಎಂತಹ ಶ್ರೇಷ್ಠರಾದ ಧ್ಯಾನಯೋಗಿಗಳಿದ್ದರೆಂಬುವದು ಸ್ಪಷ್ಟಕಾಣುತ್ತದೆ. ಧ್ಯಾನಯೋಗಿಯಾದವನ ಮನಸ್ಸು ಯಾವಾಗಲೂ ಉಳಿದ ವಿಷಯುಗಳಿಂದ ನಿವೃತ್ತಿಯನ್ನು ಹೊಂದಬೇಕಾದುದು ಅತ್ಯಂತ ಅವಶ್ಯವಾದುದು. ಆದ್ದರಿಂದ ತಮ್ಮ ಮನಸ್ಸು ಪರಮಾತ್ಮಧ್ಯಾನದಿಂದ ಕೊಂಚವಾದರೂ ಚ್ಯುತವಾಗಬಾರದೆಂದು ಬಸವಣ್ಣನವರು ಬಹಳ ಕಳವಳಗೊಂಡು ಮನಸ್ಸಿಗೆ ಬುದ್ಧಿವಾದವನ್ನು ಹೇಳುತ್ತಾರೆ.

೨೯೦

"ಬೆಲ್ಲವ ತಿಂದ ಕೋಡಗನಂತೆ ಶಿಹಿಯ ನೆನೆಯದಿರಾ ಮನವೇ, ಕಬ್ಬು ತಿಂದ ನರಿಯಂತೆ ಹಿಂದಕ್ಕೆಳಸದಿರಾ ಮನವೇ, ಗಗನವಡರಿದ ಕಾಗೆಯಂತೆ ದೆಶೆದೆಶೆಗೆ ಹಂಬಲಿಸದಿರಾ ಮನವೇ, ಕೂಡಲಸಂಗನ ಶರಣರ ಕಂಡು ಲಿಂಗವೆಂದೇ ನಂಬು ಮನವೇ"

೨೯೧

"ಆಶೆಯೆಂಬ ಪಾಶದಲ್ಲಿ ಭವಬಂಧನನಾಗಿರ್ದೆನಯ್ಯಾ ಸಕೃತು ನಿಮ್ಮ ನೆನೆಯಲು ಎನಗೆ ತೆರಹಿಲ್ಲವಯ್ಯ ಕುರುಣಾಕರಾ ಅಭಯಾಕರಾ ವರದಾನಿ ಕರುಣಿಸಯ್ಯ ಸಂಸಾರಬಂಧನವನು ಮಣಿಸಿ ಎನಗೆ ಕೃಪೆಮಾಡಿ ನಿಮ್ಮ ಶ್ರೀಪಾದಪದ್ಮದಲ್ಲಿ ಭ್ರಮರನಾಗಿರಿಸು, ಭಕ್ತಜನ ಮನೋವಲ್ಲಭ ಕೂಡಲಸಂಗಮದೇವಾ"

೨೯೨

"ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ ಇರಿಸು ಕೂಡಲಸಂಗಮದೇವಾ"

೨೯೩

"ಅಯ್ಯಾ ಅಯ್ಯಾ ಎಂದು ಕರೆಯುತ್ತಲಿದ್ದೇನೆ. ಅಯ್ಯಾ ಅಯ್ಯಾ ಎಂದೊರಲುತ್ತಲಿದ್ದೇನೆ. ಓ ಎನ್ನಲಾಗದೇ ಅಯ್ಯ ಆವಾಗಳೂ ನಿಮ್ಮ ಕರೆಯುತ್ತಲಿದ್ದೇನೆ ಮೌನವೇ ಕೂಡಲಸಂಗಮದೇವಾ"

ಈ ವಚನಗಳಲ್ಲಿ ಬಸವಣ್ಣನವರು ಸಂಗನಮೇಲೆ ತೋರಿಸುತ್ತಿರುವ ಅವರ ಭಯ ಭಕ್ತಿಯು ಪರಮಾವಧಿಯು ತೋರುತ್ತಲಿದೆ. ಈ ತರಹದ ಭಕ್ತಿಯಿಂದ ಕೂಡಿದ ಧ್ಯಾನಯೋಗವೇ ಶ್ರೇಷ್ಠವಾದುದು.

ಇನ್ನು ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗಗಳಲ್ಲಿ ಶಿವಯೋಗವೇ ಶ್ರೇಷ್ಠವಾದುದೆಂದು ಬಸವಾದಿ ಪ್ರಮಥರೂ, ಉಳಿದ ವೀರಶೈವ ಧರ್ಮ

ಗ್ರಂಥಕಾರರೂ ಸ್ಥಿರಪಡಿಸಿರುತ್ತಾರೆ. ರಾಜಯೋಗವು ಶಿವಯೋಗವನ್ನು ಬಿಟ್ಟು ಉಳಿದ ಯೋಗಗಳಿಗಿಂತ ಶ್ರೇಷ್ಠವಾದುದೆಂದು ಕೆಲವರ ಅಭಿಪ್ರಾಯ.

ಶಿವಯೋಗದ ಮುಖ್ಯ ಲಕ್ಷಣವು ಶಿವಪೂಜಾದಿವ್ರತಗಳಿಂದ ಕೂಡಿದುದಾಗಿದೆ. ಶಿವಯೋಗ ಪ್ರದೀಪಿಕೆಯಲ್ಲಿ ಚನ್ನಸದಾಶಿವಯೋಗಿಗಳು—

> ಜ್ಞಾನಂ ಶಿವಮಯಂ ಭಕ್ತಿ ಶೈವೀಧ್ಯಾನಂ ಶಿವಾತ್ಮಕಂ ।
> ಶೈವವ್ರತಂ ಶಿವಾರ್ಚೇತಿ ಶಿವಯೋಗೋ ಹಿ ಪಂಚಧಾ ॥

ಅಂದರೆ ಶಿವಮಯವಾದ ಜ್ಞಾನವು, ಶಿವಸಂಬಂಧವಾದ ಭಕ್ತಿ, ಶಿವಾತ್ಮಕವಾದ ಧ್ಯಾನ, ಶಿವನ ಸಂಬಂಧವ್ರತ ಮತ್ತು ಶಿವಾರ್ಚನೆ ಈ ಐದರಿಂದ ಕೂಡಿದ್ದುದೇ ಶಿವಯೋಗ ವೆನಿಸುವದು. ಧ್ಯಾನಯೋಗವಾದರೂ ಶಿವಯೋಗದ ಒಂದು ಅಂಗವಾದುದೆಂದೇ ಸಿದ್ಧಾಂತವು. ಈ ಶಿವಯೋಗವನ್ನು ಯಾವಾತನು ಸಾಧಿಸುತ್ತಾನೆಯೋ ಅವನು ಶಿವನ ಸ್ವರೂಪನಾಗುವನು. ಆದುದರಿಂದಲೇ—

> ಕ್ರೀಟೋ ಭ್ರಮರಯೋಗೇನ ಭ್ರಮರೋ ಭವತಿ ಧ್ರುವಂ ।
> ಮಾನವಃ ಶಿವಯೋಗೇನ ಶಿವೋ ಭವತಿ ನಿಶ್ಚಯಾತ್ ॥

ಒಂದು ಸಣ್ಣ ಕೀಟವು (ಹುಳ) ಭ್ರಮರದ ಸಂಪರ್ಕದಿಂದ ಭ್ರಮರವಾಗುವಂತೆ ಮಾನವನು ಶಿವಯೋಗದಿಂದ ನಿಶ್ಚಯವಾಗಿ ಶಿವನೇ ಆಗುತ್ತಾನೆ. ಆದ್ದರಿಂದ ಶಿವಯೋಗವನ್ನು ಸಾಧಿಸುವದಕ್ಕೆ ಎಲ್ಲ ಪ್ರಯತ್ನಗಳನ್ನೂ ಮಾಡಬೇಕು.

> ತಸ್ಮಾತ್ಸರ್ವಪ್ರಯತ್ನೇನ ಕರ್ಮಣಾ ಜ್ಞಾನತೋಪಿ ವಾ ।
> ತ್ವಮಪ್ಯಷ್ಟಾಂಗಯೋಗೇನ ಶಿವಯೋಗೀ ಭವಾನಘ ॥

ಕರ್ಮ ಮತ್ತು ಜ್ಞಾನಾದಿ ಎಲ್ಲ ಪ್ರಯತ್ನಗಳಿಂದಲೂ ಮತ್ತು ಅಷ್ಟಾಂಗಯೋಗ ಗಳಿಂದಲೂ ಕೂಡಿದವನಾಗಿ ಶಿವಯೋಗಿಯಾಗು. ಅಷ್ಟಾಂಗಯೋಗಗಳಲ್ಲಿ ಮೊದಲಿನ ಐದು ಅಂದರೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಇವುಗಳು ಕರ್ಮಾಂಗಗಳು. ಧ್ಯಾನ, ಧಾರಣ ಸಮಾಧಿ ಈ ಮೂರು ಜ್ಞಾನಾಂಗಗಳು. ಶೌಚ, ಸಂತೋಷ, ತಪಸ್ಸು, ವೇದಾಧ್ಯಯನ, ಈಶಪ್ರಣಿಧಾನ, ಈ ಐದು ಗುಣಗಳೇ ಯಮ, ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಈ ಐದು ಗುಣಗಳೇ ನಿಯಮವು. ಸಿದ್ಧಾಸನ, ಪದ್ಮಾಸನ, ವೀರಾಸನ, ಸುಖಾಸನಾದಿಗಳೇ ಆಸನಗಳು. ರೇಚಕ, ಪೂರಕ, ಕುಂಭಕಾದಿಗಳೇ ಪ್ರಾಣಾಯಾಮ. ಸಂಚರಿಸುತ್ತಿರುವ ಇಂದ್ರಿಯ ಗಳನ್ನು ವಿಷಯಗಳಿಗೆರಗದಂತೆ ಹಿಂದಿರುಗಿಸುವದೇ ಪ್ರತ್ಯಾಹಾರ. ಮಣಿಪೂರಕಾದಿ ಚಕ್ರಗಳಲ್ಲಿ ಚಿತ್ತವನ್ನು ತಡೆಯುವದೇ ಧಾರಣೆ. ಒಂದೇ ಲಕ್ಷ್ಯದಲ್ಲಿ ವಿಚ್ಛಿತ್ತಿಯಿಲ್ಲದ ಜ್ಞಾನಪರಂಪರೆಯೇ ಧ್ಯಾನ. ಈ ಧ್ಯಾನದಲ್ಲಿ ಆತ್ಮನಿಗೆ ಯೇನೊಂದೂ ತೋರದಿರುವ ಸ್ಥಿತಿಯೇ ಸಮಾಧಿ. ಈ ರೀತಿಯಾಗಿ ಅಷ್ಟಾಂಗಗಳುಳ್ಳ ಯೋಗವನ್ನು ಅಭ್ಯಾಸಿಸುವದ ರಿಂದ ಜೀವಾತ್ಮ ಪರಮಾತ್ಮರಿಗೆ ಆಗುವ ಐಕ್ಯವೇ ಮುಕ್ತಿಯಾಗುವದು. ಇವನ್ನೆಲ್ಲ ಶಿವಶರಣರು ಶಿವಯೋಗದಲ್ಲಿ ಹೇಗೆ ಮಾರ್ಪಾಟು ಮಾಡಿಕೊಂಡಿರುತ್ತಾರೆಂದು ಯತಿ ತತಿ ಚಕ್ರವರ್ತಿಗಳಾದ ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಒಂದೇ ಒಂದು ವಚನವನ್ನು ನೋಡಿದರೆ ಬಹಳ ಚನ್ನಾಗಿ ಓದುಗರ ಮನವರಿಕೆಯಾಗುವದು.

**ಸಿದ್ಧೇಶ್ವರ ವಚನ—ಪುಟ ೧೧೯**

ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಯೆಂದು ಅಷ್ಟಾಂಗಯೋಗಗಳು. ಈ ಯೋಗಂಗಳೊಳಗೆ ಉತ್ತರ ಭಾಗ ಪೂರ್ವಭಾಗವೆಂದು ಎರಡು ಪ್ರಕಾರವಾಗಿರುವದು. ಯಮಾದಿ ಪಂಚಕವೈದು ಪೂರ್ವಯೋಗ ಧ್ಯಾನಧಾರಣ ಸಮಾಧಿ ಎಂದು ಈ ಮೂರು ಉತ್ತರ ಯೋಗ. ಇದಕ್ಕೆ ವಿವರ. ಯಮಯೋಗಕ್ಕೆ ವಿವರ—ಅನೃತ, ಹಿಂಸೆ, ಪರಧನ, ಪರಸ್ತ್ರೀ, ಪರನಿಂದೆ ಇಂತೀ ಐದನೂ ಬಿಟ್ಟು ಲಿಂಗಪೂಜೆ ಮಾಡುವದೀಗ ಯಮಯೋಗ.

ನಿಯಮಯೋಗದ ವಿವರ—ಬ್ರಹ್ಮಚಾರಿಯಾಗಿ ನಿರಪೇಕ್ಷನಾಗಿ ಆಗಮ ಧರ್ಮಂಗಳಲ್ಲಿ ನಡೆವನು. ಶಿವನಿಂದೆಯ ಕೇಳದಿಹನು. ಇಂದ್ರಿಯಂಗಳ ನಿಗ್ರಹವ ಮಾಡುವನು. ಮಾನಸ-ವಾಚಕ, ಉಪಾಂಶುಯೆಂಬ ತ್ರಿಕರಣದಲ್ಲಿ ಪ್ರಣವಪಂಚಾಕ್ಷರಿಯ ಸ್ಮರಿಸುತ್ತ ಶುಚಿಯಾಗಿ ಇಹನು. ಅಶುಚಿತ್ವ ಬಿಟ್ಟು ವಿಭೂತಿ ರುದ್ರಾಕ್ಷಿಗಳ ಧರಿಸಿ ಶಿವಲಿಂಗಾರ್ಚನಾತತ್ಪರನಾಗಿ ಪಾಪಕ್ಕೆ ಭೀತನಾಗಿಹನು. ಇದು ನಿಯಮಯೋಗ.

ಇನ್ನು ಆಸನ ಯೋಗವೆಂದರೆ ಅದಕ್ಕೆ ವಿವರ—ಸಿದ್ಧಾಸನ, ಪದ್ಮಾಸನ, ಸ್ವಸ್ತಿಕಾಸನ, ಅರ್ಧಚಂದ್ರಾಸನ, ಪರ್ಯಂಕಾಸನ ಈ ಐದು ಆಸನಯೋಗಂಗಳಲ್ಲಿ ಈ ಸುಸ್ಥಿರಚಿತ್ತನಾಗಿ ಮೂರ್ತಿಗೊಂಡು ಶಿವಲಿಂಗಾರ್ಚನೆಯ ಮಾಡುವದೀಗ ಆಸನ ಯೋಗ.

ಇನ್ನು ಪ್ರಾಣಾಯಾಮ ಅದಕ್ಕೆ ವಿವರ—ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕರ್ಮ, ಕೃಕರ, ದೇವದತ್ತ, ಧನಂಜಯ ಎಂಬ ದಶವಾಯುಗಳು ಪ್ರಾಣವಾಯು ಇಂದ್ರನೀಲವರ್ಣ; ಹೃದಯಸ್ಥಾನದಲ್ಲಿದ್ದು ಉಂಗುಷ್ಠ ತೊಡಗಿ ವಾಣಾಗ್ರ ಪರಿಯಂತರದಲ್ಲಿ ಸತ್ಪ್ರಾಣಿಸಿಕೊಂಡು ಉಚ್ಛ್ವಾಸ, ನಿಶ್ವಾಸಂಗೈದು ಅನ್ನ ಜೀರ್ಣೀಕರಣಂ ಮಾಡಿಸುತ್ತಿಹುದು. ಅಪಾನವಾಯು ಹರಿತವರ್ಣ; ಗುದಸ್ಥಾನದಲ್ಲಿದ್ದು ಮಲಮೂತ್ರಂಗಳ ವಿಸರ್ಜನೆಯ ಮಾಡಿಸಿ ಅಧೋದ್ವಾರವಂ ಬಲಿದು ಅನ್ನರಸವ್ಯಾಪ್ತಿಯಂ ಮಾಡಿಸುತ್ತಿಹುದು. ವ್ಯಾನವಾಯು ಗೋಕ್ಷೀರವರ್ಣ; ಸರ್ವಸಂದಿಗಳಲ್ಲಿರ್ದು ನೀಡಿಕೊಂಡಿದ್ದು, ದನು ಮುದಡಿಕೊಂಡಿದ್ದುದನು ಅನುಮಾಡಿಸಿ ಅನ್ನಪಾನವ ತುಂಬಿಸುತ್ತಿಹುದು. ಉದಾನವಾಯು ಎಳೆಮಿಂಚಿನ ವರ್ಣ; ಕಂಠಸ್ಥಾನದಲ್ಲಿದ್ದು ಸೀನುವ, ಕೆಮ್ಮುವ, ಕನಸ ಕಾಣುವ, ಏಳಿಸುವ ಛರ್ದಿನಿರೋಧಂಗಳಂ ಮಾಡಿಸಿ ಅನ್ನರಸವ ಆಹಾರಸ್ಥಾನಂಗೆಯಿಸುತ್ತಿಹುದು. ಸಮಾನ ವಾಯು ನೀಲವರ್ಣ; ನಾಭಿಸ್ಥಾನದಲ್ಲಿದ್ದು ಆಪಾದಮಸ್ತಕ ಪರಿಯಂತರ ಪಸರಿಸಿಕೊಂಡಂಥ ಅನ್ನರಸವನ್ನು ಎಲ್ಲ ರೋಮನಾಳಂಗಳಿಗೆ ಹಂಚಿಕ್ಕುವದು. ಈ ಐದೂ ಪ್ರಾಣಪಂಚಕ. ಇನ್ನು ನಾಗವಾಯು ಪೀತವರ್ಣ; ರೋಮನಾಳಂಗಳಲ್ಲಿದ್ದು ಚಲನೆ ಇಲ್ಲದೆ ಹಾಡಿಸುತ್ತಿಹುದು. ಕೂರ್ಮವಾಯು ಶ್ವೇತವರ್ಣ; ಉದರ ಲಲಾಟದಲ್ಲಿದ್ದು ಶರೀರವಂ ತಾಳ್ದು ದೇಹವಂ ಪುಷ್ಟಿಯಂ ಮಾಡಿಕೊಂಡು ಬಾಯಿ ಮುಚ್ಚುತ್ತ ತೆರವುತ್ತ ನೇತ್ರದಲ್ಲಿ ಉನ್ಮೀಲನ, ನಿಮೀಲನವಂ ಮಾಡಿಸುತ್ತಿಹುದು. ಕೃಕರ ವಾಯು ಅಂಜನವರ್ಣ; ನಾಶಿಕಾಗ್ರದಲ್ಲಿದ್ದು ಕ್ಷುಧಾದಿ ಧರ್ಮಂಗಳಂ ನೆಗಳಿಗಮನಾಗಮನಂಗಳಂ ಮಾಡಿಸುತ್ತಿಹುದು. ದೇವದತ್ತವಾಯು ಸ್ಫಟಿಕವರ್ಣ; ಗುಹ್ಯಕಟಿಕಸ್ಥಾನದಲ್ಲಿರ್ದು ಕುಳ್ಳಿರ್ದಲ್ಲಿ ಮಲಗಿಸಿ, ಮಲಗಿರ್ದಲ್ಲಿ ಏಳಿಸಿ, ನಿಂದಿರಿಸಿ, ಚೇತರಿಸಿ, ಒರಲಿಸಿ ಮಾತಾಡಿಸುತ್ತಿಹುದು. ಧನಂಜಯವಾಯು ನೀಲವರ್ಣ; ಬ್ರಹ್ಮರಂಧ್ರ

ದಲ್ಲಿದ್ದು ಕರ್ಣದಲ್ಲಿ ಸಮುದ್ರಘೋಷಮಂ ಘೋಷಿಸಿ ಮರಣಗಾಲಕ್ಕೆ ನಿರ್ಘೋಷ ಮಪ್ಪುದು. ಈ ಪ್ರಕಾರದಲ್ಲಿ ಮೂಲವಾಯು ಒಂದೇ ಸರ್ವಾಂಗದಲ್ಲಿ ಸರ್ವತೋ ಮುಖವಾಗಿ ಚರಿಸುತ್ತಿಹುದು. ಆ ಪವನದೊಡನೆ ಪ್ರಾಣ ಕೂಡಿ ಪ್ರಾಣದೊಡನೆ ಪವನ ಕೂಡಿ ಹೃದಯಸ್ಥಾನದಲ್ಲಿ ನಿಂದು ಹಂಸನೆನಿಸಿಕೊಂಡು ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯವೆಂಬ ಷಡುಚಕ್ರಂಗಳಮೇಲೆ ಸುಳಿದು ನವನಾಳಂಗಳೊಳಗೆ ಚರಿಸುತ್ತಿಹುದು. ಅಷ್ಟದಳಂಗಳೇ ಆಶ್ರಯವಾಗಿ ಅಷ್ಟದಳಂಗಳ ಮೆಟ್ಟಿ ಚರಿಸುವ ಹಂಸನು ಅಷ್ಟದಳಂಗಳಿಂದ ವಿಶುದ್ಧಿ ಚಕ್ರವನೆಯ್ದಿ ಅಲ್ಲಿಂದ ನಾಶಿಕಾಗ್ರ ದಲ್ಲಿ ಹದಿನಾರಂಗುಲ ಪ್ರಮಾಣ ಹೊರಸೂಸುತ್ತಿಹುದು. ಹನ್ನೆರಡಂಗುಲ ಪ್ರಮಾಣ ಒಳಗೆ ತುಂಬುತ್ತಿಹುದು. ಹೀಗೆ ರೇಚಕ ಪೂರಕದಿಂದ ಮಾರುತ ಚರಿಸು ತ್ತಿರಲು ಸಮಸ್ತಪ್ರಾಣಿಗಳ ಆಯುಷ್ಯವು ದಿನದಿನಕ್ಕೆ ಕುಂದುತ್ತಿಹುದು. ಹೀಗೆ ಈಡಾಪಿಂಗಳಲ್ಲಿ ಚರಿಸುವ ರೇಚಕ ಪೂರಕಂಗಳ ಭೇದವನರಿದು ಮನ ಪವನಂಗಳ ಮೇಲೆ ಲಿಂಗವ ಸಂಬಂಧಿಸಿ ಮನ ಪವನ ಪ್ರಾಣಂಗಳ ಲಿಂಗದೊಡನೆ ಕೂಡಿ ಲಿಂಗ ಸ್ವರೂಪವ ಮಾಡಿ ವಾಯು ಪ್ರಾಣತ್ವವ ಕಳೆದು ಲಿಂಗಪ್ರಾಣಿಯುಮಾಡಿ ಹೃದಯಕಮಲ ಮಧ್ಯದಲ್ಲಿ ಪ್ರಣವವನು ಉಚ್ಚರಿಸುತ್ತ ಪರಶಿವಧ್ಯಾನದಲ್ಲಿ ತರಹರನಾಗಿ ಇರ್ಪುದೀಗ ಪ್ರಾಣಾಯಾಮ.

ಇನ್ನು ಪ್ರತ್ಯಾಹಾರ ಯೋಗಕ್ಕೆ ವಿವರ— ಆಹಾರದಿಂ ನಿದ್ರೆ, ನಿದ್ರೆಯಿಂದ ಇಂದ್ರಿಯಂಗಳು, ಇಂದ್ರಿಯಂಗಳಿಂದ ವಿಷಯಗಳು, ಘನವಾಗುತ್ತಿಹವು ನೋಡಾ. ಈ ವಿಷಯಂಗಳಿಂದ ದುಷ್ಕರ್ಮಂಗಳ ಮಿಗೆಮಾಡಿ ಜೀವಂಗೆ ಭವಭವದ ಬಂಧನವನು ಒಡಗೂಡಿ ಆಯಸಂ ಬಡುತಿಪ್ಪರು. ಅಜ್ಞಾನಿ ಕರ್ಮಿಗಳು ಈ ಅವಸ್ಥೆಯ ಹೊಗದಿಹರು ಸುಜ್ಞಾನಿ ಧರ್ಮಿಗಳು ಅದರಿಂದ ಆಹಾರಮಂ ಕ್ರಮಕ್ರಮದಿಂದ ಉದರಕ್ಕೆ ಹವಣಿಸುತ್ತ ಬಹುದು. ಗುರುಕೃಪೆಯಿಂದ ಈ ಪ್ರಕಾರದಲ್ಲಿ ಸರ್ವೇಂದ್ರಿಯಂಗಳನು ಲಿಂಗಮುಖ ದಿಂದ ಸಾವಧಾನವನು ಮಾಡಿಕೊಂಡು ಇಪ್ಪುದೀಗ ಪ್ರತ್ಯಾಹಾರ ಯೋಗ. ಈ ಐದೂ ಪೂರ್ವಯೋಗಂಗಳು.

ಇನ್ನು ಧ್ಯಾನಯೋಗ ಅದರ ವಿವರ—ಅಂತರಂಗದ ಶುದ್ಧ ಪರಮಾತ್ಮ ಲಿಂಗವನೇ ಶಿವಲಿಂಗ ಸ್ವರೂಪವಮಾಡಿ ಕರಸ್ಥಲಕ್ಕೆ ಶ್ರೀ ಗುರು ತಂದುಕೊಟ್ಟನಾಗಿ ಆ ಕರಸ್ಥಲ ದಲ್ಲಿದ್ದ ಶಿವಲಿಂಗವೇ ಪರಮಾರ್ಥ ಚಿನ್ಹ (ಪರಮಾತ್ಮರೂಪ) ವೆಂದರಿದು ಆ ಲಿಂಗವನೆ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯ ಬ್ರಹ್ಮರಂಧ್ರ ಮುಖ್ಯವಾದ ಸ್ಥಾನಂಗಳಲ್ಲಿ ಆ ಶಿವಲಿಂಗ ಮೂರ್ತಿಯನೆ ಆಹ್ವಾನ ವಿಸರ್ಜನೆ ಇಲ್ಲದೆ ಧ್ಯಾನಿಸುವದೀಗ ಧ್ಯಾನಯೋಗ. ಆ ಲಿಂಗವ ಭಾವ ಮನ ಕರ ಮುಖ್ಯವಾದ ಸರ್ವಾಂಗ ದಲ್ಲಿ ಧರಿಸುವದೀಗ ಧಾರಣಯೋಗ. ಆ ಸತ್ಕ್ರಿಯಾ ಜ್ಞಾನಯೋಗದಿಂದ ಪ್ರಾಣಂಗೆ ಶಿವಕಳೆಯ ಸಂಬಂಧಿಸಿ ಇಷ್ಟ ಪ್ರಾಣ ಭಾವ ಎಂಬ ಲಿಂಗತ್ರಯವನು ಏಕಾಕಾರವ ಮಾಡಿ ಅಖಂಡ ಪರಿಪೂರ್ಣ ಕೇವಲ ಪರಂಜ್ಯೋತಿ ಸ್ವರೂಪವಪ್ಪ ಮಹಾಲಿಂಗದೊಳಗೆ ಸಂಯೋಗವಾಗಿ ಭಿನ್ನವಿಲ್ಲದೆ ಏಕಾರ್ಥವಾಗಿಹುದೀಗ ಸಮಾಧಿಯೋಗ— ಇಂತೀ ಅಷ್ಟಾಂಗಯೋಗದಲ್ಲಿ ಶಿವಲಿಂಗಾರ್ಚನೆಯಮಾಡಿ ಶಿವತತ್ವದೊಡನೆ ಕೂಡುವದೀಗ ಲಿಂಗಾಂಗಯೋಗ. ಇನ್ನು ಕರ್ಮಕಾಂಡಿಗಳು ಮಾಡುವ ಕರ್ಮಯೋಗಂಗಳು ಆವಾವು

ವೆಂದರೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರವೆಂಬ ಈ ಐದನು ಲಿಂಗವಿರಹಿತನಾಗಿ ಮಾಡುತಿಪ್ಪರಾಗಿ ಈ ಐದು ಕರ್ಮಯೋಗಂಗಳು. ಅವರು ಲಕ್ಷಿಸುವಂತಹ ವಸ್ತುಗಳು ಉತ್ತರ ಯೋಗವಾಗಿ ನಾದಲಕ್ಷ್ಯ, ಬಿಂದುಲಕ್ಷ್ಯ, ಕಲಾಲಕ್ಷ್ಯ ಎಂದು ಮೂರು ತೆರನಾದವೇ ಸಾಕ್ಷಾತ್ ಪರತತ್ವವೆಂದೇ ಲಕ್ಷಿಸುವರು. ಬಿಂದುವೇ ಅಕಾರ, ಉಕಾರ, ಮಕಾರ; ಈ ಮೂರು ಶುದ್ಧಬಿಂದು ಸಂಬಂಧವೆಂದೂ, ಆ ಶುದ್ಧ ಬಿಂದುವೇ ಕೇವಲ ದಿವ್ಯ ಪ್ರಕಾಶವನುಳ್ಳುದೆಂದೂ ಲಕ್ಷಿಸುವರು. ಕಲೆಯೇ ಚಂದ್ರನ ಕಳೆಯಹಾಗೆ ಸೂರ್ಯನ ಕಿರಣಂಗಳಹಾಗೆ ಮಿಂಚುಗಳ ಪ್ರಕಾಶದಹಾಗೆ ಮತ್ತು ಮಾಣಿಕ್ಯದ ನವರತ್ನಗಳ ದೀಪ್ತಿಯಹಾಗೆ ಪ್ರಕಾಶಮಯವಾಗಿಹುದು ಎಂದು ಲಕ್ಷಿಸುವದೀಗ ಕಲಾಲಕ್ಷ್ಯ. ಈ ಎಂಟು ಇತರ ಮತದವರು ಮಾಡುವ ಯೋಗಂಗಳು. ಈ ಕರ್ಮ ಕೌಶಲ್ಯದಲ್ಲಿ ಲಿಂಗವಿಲ್ಲ ನೋಡಾ ಇದುಕಾರಣ ಇವ ಮುಟ್ಟಲಾಗದು.

ಇನ್ನು ವೀರಮಾಹೇಶ್ವರರ ಲಿಂಗಸಂಧಾನವು ಎಂತೆಂದರೆ—

**೨೯೪**

ಸಿದ್ಧೇಶ್ವರರು—

"ಬ್ರಹ್ಮರಂಧ್ರದಲ್ಲಿ ಇಪ್ಪನಾದ ಚೈತನ್ಯವಪ್ಪ ಪರಮ ಚಿತ್ಕಳೆಯನೇ ಭಾವಮನಕರದಲ್ಲಿ ಶ್ರೀ ಗುರು ತಂದು ಸಾಹಿತ್ಯಪ ಮಾಡಿದನಾಗಿ ಭವದಲ್ಲಿ ಸತ್ಸ್ವರೂಪವಪ್ಪ ಭಾವಲಿಂಗವೆನಿಸಿ ಪ್ರಾಣದಲ್ಲಿ ಚಿತ್ಸ್ವರೂಪವಪ್ಪ ಪ್ರಾಣಲಿಂಗವೆನಿಸಿ ಕರಸ್ಥಲದಲ್ಲಿ ಆನಂದಸ್ವರೂಪವಪ್ಪ ಇಷ್ಟಲಿಂಗವೆನಿಸಿ ಒಂದೇ ವಸ್ತು ತನು ಮನ ಭಾವಂಗಳಲ್ಲಿ ಇಷ್ಟಪ್ರಾಣಭಾವವಾದ ಭೇದವನರಿದು ಇಷ್ಟಲಿಂಗದ ದೃಷ್ಟಿಯಿಂದ ಗ್ರಹಿಸಿ ಪ್ರಾಣಲಿಂಗದ ಮನಜ್ಞಾನದಿಂದ ಗ್ರಹಿಸಿ ತೃಪ್ತಿಲಿಂಗವ ಭಾವಜ್ಞಾನದಿಂದ ಗ್ರಹಿಸಿ ಈ ಲಿಂಗತ್ರಯವಿಡಿದು ಆಚರಿಸಿ ಲಿಂಗದೊಡನೆ ಕೂಡಿ ಆ ಲಿಂಗವೇ ತಾನು ತಾನಾಗಿ ವಿರಾಜಿಸುತ್ತಿಪ್ಪುದೀಗ ಶಿವಯೋಗ ನೋಡಾ ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ"

ಈ ವಚನವನ್ನು ಚನ್ನಾಗಿ ಧ್ಯಾನಗೊಟ್ಟು ಓದಿನೋಡಿದರೆ ಯೋಗಶಾಸ್ತ್ರದ ಸಾರವನ್ನು ಹೀರಿ ಶಿವಯೋಗದ ಲಕ್ಷಣವನ್ನು ಅದೆಷ್ಟು ಚನ್ನಾಗಿ ಮಂಡಿಸಿರುವರೆಂಬುವದು ತಿಳಿದು ಬರುತ್ತದೆ. ಇದರಿಂದ ಶಿದ್ಧಲಿಂಗ ಶಿವಯೋಗಿಗಳು ಅದೆಂತಹ ಶಿವಯೋಗ ಜ್ಞಾನಿಗಳೆಂಬುವದು ಸ್ಪಷ್ಟವಾಗಿ ಕಾಣಿಸುತ್ತದೆ. ಈ ವಚನವನ್ನು ಓದಿದರೆ ವಾಚಕರು ಮುಗ್ಧರಾಗನೆ ಇರರು. ಈ ಶಿವಯೋಗಕ್ಕೆ ಬಸವಾದಿ ಶರಣರು ಪರಮಯೋಗವೆಂತಲೂ ಹೇಳಿರುತ್ತಾರೆ. ಶ್ರೀ ತೋಂಟದ ಸಿದ್ಧಲಿಂಗ ಯತಿಗಳ ಶಿಷ್ಯಪರಂಪರೆಯಲ್ಲಿ ಸೇರಿದವರೂ, ಹೃದಯಂಗಮಗಳಾದ ವಚನಗಳನ್ನು ರಚಿಸಿದವರೂ ಆಗಿರುವ ಸ್ವತಂತ್ರಸಿದ್ಧಲಿಂಗ ದೇವರು ಶಿವಯೋಗದ ಬಗ್ಗೆ ಅನೇಕ ವಚನಗಳನ್ನು ಹೇಳಿರುತ್ತಾರೆ. ಅವರ ಒಂದೆರಡು ವಚನಗಳನ್ನು ಇಲ್ಲಿ ನೋಡಬೇಕಾಗಿದೆ.

**೨೯೫**

"ಹರಿವ ಮನವಾಯುವನೊಂದು ಹುರಿಮಾಡಿ ಮನವ ಸ್ಥಿರಗೊಳಿಸಿ ಸಗುಣಧ್ಯಾನದಲ್ಲಿ ಮನವ ಸವಿದು ನಿರ್ಗುಣದಲ್ಲಿ ನಿಂದು ಆ ನಿರ್ಗುಣ

ಧ್ಯಾನ ಬಲಿದು ಸಗುಣ ನಿರ್ಗುಣದಲ್ಲಿ ಅಡಗಿ ಆ ನಿರ್ಗುಣವಾದ ನಿಜದಲ್ಲಿ ಮನೋಲಯವಾದುದೇ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನ ಪರಮ ರಾಜಯೋಗ''

ಈ ವಚನವು ಕೇವಲ ನಿರ್ಗುಣಧ್ಯಾನವನ್ನು ಮಾಡುವ ಯೋಗಿಯ ಲಕ್ಷಣವನ್ನು ತೋರಿಸುತ್ತದೆ. ಮತ್ತು—

೨೯೬

''ಯೋಗದ ನೆಲೆಯನರಿಯದೆನೆಂಬವರಿಗೆ ಹೇಳಿಕೆ ಕೇಳಿಕೆ ಪೃಥ್ವಿ ಅಪ್ಪುಗಳೆರಡರ ಆಧಾರಗೊಳಿಸಿ ಅಗ್ನಿವಾಯುಗಳ ಅಂಬರ ಸ್ಥಾನಕೊಯ್ದು ಆತ್ಮಾಕಾಶವೆರಡು ಅನುಭಾವ ಮುಖಕ್ಕೆ ತಂದು ಮನದನು ಮಾನವಳಿದು ನೆನಹು ನಿಶ್ಚಲವಾಗಿ ಒಳಗೆ ಜ್ಯೋತಿರ್ಲಿಂಗವ ನೋಡುತ್ತ ಹೊರಗೆ ಎರಡು ಹುಬ್ಬಿನ ನಡುವೆ ಉಭಯಲೋಚನವನಿರಿಸಿ ಹಿಂದು ಮುಂದೆನೆಣಸದೆ ಸಂದೇಹವಿಲ್ಲದೆ ಖೇಚರಿಯನಾಚರಿಸಲು ಲೋಚನ ಮೂರುಳ್ಳ ಶಿವ ತಾನಹನು ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನಲ್ಲಿ ಆತನೇ ಶಿವಯೋಗಿ''

ಹೀಗೆ ಯೋಗವನ್ನು ಆಚರಿಸಿದ್ದೇ ಆದರೆ ಆತನೇ ಶಿವಯೋಗಿಯೆಂದು ಶಿವಯೋಗದ ಲಕ್ಷಣವನ್ನು ಮನೋಹರವಾಗಿ ವರ್ಣಿಸಿರುತ್ತಾನೆ.

ಯೋಗಶಾಸ್ತ್ರವು ಅತ್ಯಂತ ಕಠಿಣಗಳಾದ ಶಾಸ್ತ್ರಗಳಲ್ಲಿ ಒಂದಾಗಿರುತ್ತದೆ. ಅದನ್ನು ಸುಲಭವಾದ ತಿಳಿಗನ್ನಡದಲ್ಲಿ ಹೇಳುವದು ಬಹಳ ಕ್ಲಿಷ್ಟಕರವಾದ ಕಾರ್ಯವಾಗಿರುತ್ತದೆ ಯಾದರೂ ಶಿವಶರಣರು ಬಹಳ ಸುಲಭವಾಗಿ ವರ್ಣಿಸಿರುತ್ತಾರೆ. ಇದರಿಂದ ಅವರ ಅನುಭವದ ಜ್ಞಾನವು ಬಹಳ ಮಹತ್ತರವಾದುದೆಂಬುವದು ತೋರಿಬರುತ್ತದೆ.

೨೯೭

ಸ್ವತಂತ್ರಸಿದ್ಧಲಿಂಗದೇವರು—

''ಪೂರ್ವದ್ವಾರವ ಬಂಧಿಸಿ ಅಧೋದ್ವಾರವ ಬಲಿದು ಊರ್ಧ್ವ ದ್ವಾರವ ತೆಗೆದು ಎವೆ ಹಳಚದೆ ಒಳಗೆ ನಿಂದು ನೋಡುತಿರ್ದೆನಯ್ಯಾ ಬಂದುದಾ ಹೋದುದಾ ನರಿಯದೆ ನಿಮ್ಮ ನೋಡುತಿರ್ದೆನಯ್ಯಾ ಮನ ನಿಂದುದು ನಿಮ್ಮಲ್ಲಿ ಹೆರೆಹಿಂಗದೆ ಪರಮಸುಖ ದೊರಕೊಂಡಿತ್ತು ಇನ್ನಂಜೆನಂಜೆ ಜನನಮರಣವೆರಡೂ ಹೊರಗಾದವು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನಲ್ಲಿ ನಿಜಸುಖಸಮನಿಸಿತ್ತಾಗಿ''

ಇದು ಧ್ಯಾನಯೋಗದ ಪರಮಾವಧಿಯ ಲಕ್ಷಣವಾಗಿರುತ್ತದೆ. ಹೀಗೆಯೇ ಅನೇಕ ಜನ ಶರಣರು ಪ್ರಾಣಲಿಂಗಿಯ ಸ್ಥಲದಲ್ಲಿ ಹೇಳಿದ ವಚನಗಳೆಲ್ಲ ಪ್ರಾಯಶಃ ಶಿವಯೋಗ ಶಾಸ್ತ್ರಕ್ಕೆ ಹೋಲುತ್ತವೆ. ಅವುಗಳನ್ನೆಲ್ಲಾ ಪುಷ್ಟಿಗಾಗಿ ಇಲ್ಲಿ ಹೇಳುವದವಶ್ಯವಿದ್ದರೂ ಸ್ಥಳಾಭಾವದಮೂಲಕ ಹಾಗೆ ಮಾಡದೆ ಕೆಲವು ಶಿವಶರಣರ ವಚನಗಳನ್ನು ಮಾತ್ರ ಇಲ್ಲಿ ನೋಡಬೇಕಾಗಿರುತ್ತದೆ. ಯಾಕಂದರೆ ಶಿವಶರಣರೆಲ್ಲ ಅಷ್ಟಾಂಗಯೋಗವನ್ನು ಶಿವಯೋಗಕ್ಕೆ ಹೇಗೆ ಪರಿವರ್ತಿಸಿರುತ್ತಾರೆಂಬುವದು ಜನಗಳಿಗೆ ಗೊತ್ತಾಗುವದವಶ್ಯವಿರುತ್ತದೆ. ಆ ಶಿವಯೋಗದಲ್ಲಿ ತಾವು ಆನಂದಾಮೃತವನ್ನು ಪಾನಮಾಡಿ ಉಳಿದವರಿಗೂ ಹೇಗೆ ಮಾರ್ಗದರ್ಶಕರಾಗಿರುತ್ತಾರೆಂಬುವದು ಸ್ಪಷ್ಟವಾಗಿ ತೋರುತ್ತಲಿದೆ.

**೨೯೮**

ಅಖಂಡೇಶ್ವರನ ವಚನವನ್ನು ಬರೆದ ಷಣ್ಮುಖದೇವರು—

"ದೇಹವಾಸನೆ ಹರಿದು ಆತ್ಮಭವಬಂಧನದ ಕೀಲ ಮುರಿದು ಪರಾತ್ಪರವಾದ ಪ್ರಾಣಲಿಂಗವ ಕೂಡುವದಕ್ಕೆ ಆವುದು ಸಾಧನವೆಂದರೆ ಎಲ್ಲ ಗಣಂಗಳು ತಿಳಿಯುವಂತೆ ಹೇಳುವೆ ಕೇಳಿರಯ್ಯ ಎಂಭತ್ತೆಂಟು ಆಸನಂಗಳೊಳಗೆ ಮುಖ್ಯವಾಗಿರ್ಪುದು ಶುದ್ಧಾಸನವು. ಆ ಸಿದ್ಧಾಸನದ ವಿವರವೆಂತೆಂದೊಡೆ ಗುದ, ಗುಹ್ಯ, ಮಧ್ಯಸ್ಥಾನವಾದ ಯೋನಿಮಂಡಲ ವೆಂಬ ದ್ವಾರ ಆ ದ್ವಾರಕ್ಕೆ ಎಡದ ಹಿಮ್ಮಡವನಿಕ್ಕಿ ಬಲದ ಹಿಮ್ಮಡವ ಮೇಢ್ರಸ್ಥಾನದಲ್ಲಿರಿಸಿ ಬೆನ್ನು ಎಲುವ ಸೋಂಕಿಸದೆ ನೆಟ್ಟನೇ ಕುಳಿರ್ದು ಉಭಯಲೋಚನವನೊಂದುಮಾಡಿ ಉನ್ಮನಿಯ ಸ್ಥಾನದಲ್ಲಿರಿಸಿ ತ್ವಕ್ಕು, ನೇತ್ರ, ಜಿಹ್ವೆ, ಶ್ರೋತ್ರ, ಘ್ರಾಣ, ಹೃದಯವೆಂಬ ಆರು ದ್ವಾರಗಳನ್ನು ಆರಂಗುಲದಿಂದೊತ್ತಲು ಮೂಲಾಧಾರದಲ್ಲಿರ್ದ ಮೂಲಾಗ್ನಿ ಪಟುತರವಾಗಿ ಪವನನೊಡಗೂಡಿ ಮನಸ್ಥಿರಗೊಂಡು ಊರ್ಧ್ವಕ್ಕೆ ಹೋಗಿ ಉಭಯಲಿಂಗ ದೊಳಿರ್ದ ಮಹಾಲಿಂಗದೊಡಗೂಡಿ ಅನಂತಕೋಟಿ ಸೂರ್ಯಾಗ್ನಿ ಚಂದ್ರ ಪ್ರಕಾಶವನೊಳಗೊಂಡು ಅಲ್ಲಿ ಸೂಕ್ಷ್ಮವಾಗಿ ಅಂಗುಲಪ್ರಮಾಣವಾಗಿ ಶುದ್ಧ ತಾರೆಯಂತೆ ಕಂಗಳ ನೋಟಕ್ಕೆ ಕರತಳಾಮಳಕವಾಗಿ ಕಾಣಿಸುತ್ತಿದ್ದ ಪ್ರಾಣಲಿಂಗದಲ್ಲಿ ಪ್ರಾಣಸಂಭೋಗಮಾಡಬಲ್ಲಾತನೇ ಪ್ರಾಣಲಿಂಗ ಸಂಬಂಧಿ ಆತನೇ ಪ್ರಳಯಾದಿ ರಹಿತನಯ್ಯ ಅಖಂಡೇಶ್ವರಾ"

ಈ ವಚನ ಧ್ಯಾನಯೋಗದ ಲಕ್ಷಣವನ್ನು ಸ್ಫುಟವಾಗಿ ಹೇಳುತ್ತದೆ. ಹೀಗೆ ಅಷ್ಟಾಂಗ ಯೋಗಗಳನ್ನು ಶಿವಯೋಗಕ್ಕೆ ಸಂಬಂಧಿಸಿ ಹೇಳುವದರಿಂದ ಷಟ್‌ಸ್ಥಲಗಳೆಲ್ಲ ಈ ಶಿವ ಯೋಗದಲ್ಲಿ ಸ್ವಾರಸ್ಯವಾಗಿ ಸಮನ್ವಯವನ್ನು ಹೊಂದುತ್ತವೆ.

ಶಿವಯೋಗ ಪ್ರದೀಪಿಕೆಕಾರರು ವೀರಶೈವ ಮತವು ಜ್ಞಾನ ಕ್ರಿಯೋಭಯಾತ್ಮಕ ವಾಗಿರುವದರಿಂದ ಈ ಜ್ಞಾನಕ್ರಿಯೆಗಳ ಸಮ್ಮೇಳನ ಸಾಧನದಿಂದ ಮುಕ್ತಿಸಿದ್ಧಿಯನ್ನು ಕೊಡುವ ಯೋಗಾಭ್ಯಾಸದಲ್ಲಿ ವೀರಶೈವಾಚರಣೆಯು ಸಮರಸಗೊಂಡಿರುವದು ಆದುದ ರಿಂದಲೇ. ಈ ಅಷ್ಟಾಂಗವೇ ಶಿವಪೂಜಾಂಗವೆಂದೂ, ಶಿವಯೋಗವೇ ಷಟ್‌ಸ್ಥಲವೆಂದೂ ಸಮಂಜಸಗೊಳಿಸಿರುತ್ತಾರೆ.

**ಶಿವಯೋಗ ಪ್ರದೀಪಿಕೆಯಲ್ಲಿ**

ಯಮೇನ ನಿಯಮೇ ನೈವಮನ್ಯೇ ಭಕ್ತ ಇತಿ ಸ್ವಯಂ ।
ಸ್ಥಿರಾಸನಸಮಾಯುಕ್ತೋ ಮಾಹೇಶ್ವರ ಪದಾಶ್ರಿತಃ ।
ಚರಾಚರಲಯಸ್ಥಾನಂ ಲಿಂಗಮಾಕಾಶ ಸಂಜ್ಞಕಂ ।
ಪ್ರಾಣೇತದ್ವ್ಯೋಮ್ನಿ ಸಂಲೀನೇ ಪ್ರಾಣಲಿಂಗೀ ಭವೇತ್ಪುಮಾನ್ ।
ಪ್ರತ್ಯಾಹಾರೇಣ ಸಂಯುಕ್ತಃ ಪ್ರಸಾದೀತಿ ನ ಸಂಶಯಃ ।
ಧ್ಯಾನಧಾರಣಸಂಪನ್ನಶ್ಶರಣ ಸ್ಥಲವಾನ್ ಸುಧೀಃ ।
ಲಿಂಗೈಕ್ಯೋ ದ್ವೈತಭಾವಾತ್ಮಾ ನಿಶ್ಚಲೈಕ ಸಮಾಧಿನಾ ।
ಏವಮಷ್ಟಾಂಗಯೋಗೇನ ವೀರಶೈವೋಭವೇನ್ನರಃ ॥

ಅಂದರೆ— ಯಮ ನಿಯಮವೆಂಬ ಯೋಗದ್ವಯದಿಂದ ಭಕ್ತನೆನ್ನಿಸಿಕೊಳ್ಳುವನು. ಸ್ಥಿರವಾದಾಸನದಿಂದ ಕೂಡಿದಾತನು ಮಹೇಶ್ವರನೆನ್ನಿಸಿಕೊಳ್ಳುವನು. ಚರಚೇತನ ನೆನಿಸುವ ಸವಿಕಲ್ಪ ನಿರ್ವಿಕಲ್ಪಾತ್ಮಕವಾದ ಜ್ಞಾನಸಂತಾನಕ್ಕೂ ಅಚೇತನವೆನಿಸುವ ತತ್ವತಾತ್ವಿಕಂಗಳಿಗೂ ಬೀಜರೂಪದಿಂದ ಗರ್ಭೀಕರಿಸುವ ಲಯಸ್ಥಾನವಾದ ಮತ್ತು ನಾದಾತ್ಮಕವಾದ ಶುದ್ಧ ಪ್ರಸಾದಲಿಂಗವು ಆಕಾಶವೆಂಬ ಹೆಸರುಳ್ಳದು. ಆ ಪರಮಾ ಕಾಶವೆನಿಸುವ ಶಿವಬೀಜದಲ್ಲಿ ಪ್ರಾಣಕಲಾತ್ಮಕವಾದ ಆತ್ಮಬೀಜವು ಮನೋಮಾರುತಂ ಗಳೊಡನೆ ಕೂಡಿ ವಿಲಯವನೆಯ್ದಲಾಗಿ ಆ ಪ್ರಾಣಾಯಾಮಸಂಪನ್ನನಾದ ಪುರುಷನು ಪ್ರಾಣಲಿಂಗಿಯು ಆಗುವನು. "ಆತನಿಗೆ ಅನುಭವಭಕ್ತಿ ಆಗುವದರಿಂದ ಪ್ರಾಣಲಿಂಗಿ" ಆ ಪ್ರಾಣಲಿಂಗದಲ್ಲಿ ಲಯಿಸುವ ಮನೋಮಾರುತಂಗಳನು ಕೆದರಲೀಸದಿಹುದರಿಂದ ಕೂಡಿದಾತನು ಪ್ರಸಾದಿಯೆನಿಸುವನು. ಈತನಿಗೆ ಅವಧಾನಭಕ್ತಿಯು ಇರುವದು. ಮಹಾ ಲಿಂಗಧ್ಯಾನಧಾರಣಸಂಪನ್ನನಾದವನು ಶರಣಸ್ಥಲದವನು. ಈತನಿಗೆ ಆನಂದಭಕ್ತಿಯು ಇದೆ. ಸಂಪೂರ್ಣ ಕುಂಭದಂತೆ, ನಿಸ್ತರಂಗಾಂಬುಧಿಯಂತೆ, ನಿಶ್ಚಲತ್ವವೇ ಮುಖವಾದ ಸಮಾಧಿಯೋಗದಿಂದ ಜ್ಞಾತೃಜ್ಞೇಯವೆಂಬ ದ್ವೈತಭಾವವಿಲ್ಲದಾತನು ಲಿಂಗೈಕ್ಯ ನೆನಿಸುವನು. ಈತನಿಗೆ ಸಮರಸ ಭಕ್ತಿಯುಂಟು. ಈ ಪ್ರಕಾರ ಯಮಾದಿ ಅಷ್ಟಾಂಗ ಯೋಗದಿಂದ ಮನುಷ್ಯನು ಷಟ್‌ಸ್ಥಲವುಳ್ಳ ವೀರಶೈವನಾಗುವನು. ಹೀಗೆ ಅಷ್ಟಾಂಗ ಯೋಗವನ್ನು ಷಟ್‌ಸ್ಥಲಗಳಿಗೆ ಸಮನ್ವಯವಾಗಿ ಜಾಣ್ಮೆಯಿಂದ ತೋರಿಸಿರುವರು.

### ಶ್ರೀ ಗಣದಾಶಿ ವೀರಣ್ಣನ ವಚನ—ಪುಟ ೨೩

"ಧ್ಯಾನಧಾರಣಸಮಾಧಿ ಎಂತೆಂದೊಡೆ ಸದ್ಗುರುವೇ ಕರುಣಿಪುದು ಕೇಳೈ ಮಗನೆ ಧ್ಯಾನಯೋಗವೆಂದೊಡೆ ಆಧಾರ ಮೊದಲಾಗಿ ಆಜ್ಞೆ ಕಡೆತನಕ ಇಷ್ಟಲಿಂಗವ ಧ್ಯಾನಿಸಿ ಅರ್ಚಿಸಿ ಪೂಜಿಸಿ ಅಲ್ಲಿಯ ತ್ರಿಕೂಟ ಸಂಗಮದಲ್ಲಿ ಗಂಗೆ ಯಮುನೆ ಸರಸ್ವತಿ ನದಿಗಳು ಕೂಡಿದ ಠಾವಿನಲ್ಲಿ ಪ್ರಮಥಗಣಂಗಳು ಮೊದಲಾಗಿ ಅಲ್ಲಿ ಮಜ್ಜನವನೀಡುತ್ತಿಹರು. ಅಲ್ಲಿ ಸೂರ್ಯಪೀಠದಮೇಲೆ ಗುರುವು ಮೂರ್ತವಮಾಡಿರಲು ಅವರ ಪಾದಾ ರ್ಚನೆಯಮಾಡಿ ಪಾದೋದಕ ನದಿಗಳಲ್ಲಿ ಸ್ನಾನವಮಾಡಿ ಅವರ ಸಂಗಡ ಶಿಖಾಸ್ಥಾನಕ್ಕೆ ಹೋಗಿ ಆ ಶಿಖಾಚಕ್ರದಲ್ಲಿದ್ದ ಬಸವಾದಿ ಪ್ರಮಥಗಣಂಗಳು ಅವರ ಸಹವಾಗಿ ಏಳನೆಯ ಮಂಟಪಕ್ಕೆ ಹೋಗಿ ಅಲ್ಲಿ ಪಶ್ಚಿಮ ಚಕ್ರದಲ್ಲಿ ನಿರಂಜನ ಜಂಗಮವು ಅಲ್ಲಿ ಅಸಂಖ್ಯಾತ ಪ್ರಮಥರು ನೂತನ ಗಣಂಗಳು ಸಹವಾಗಿ ಲಿಂಗಾರ್ಚನೆಯಮಾಡುತ್ತಿಹರು. ಆ ಲಿಂಗಾರ್ಚನೆ ಎಂತೆಂದೊಡೆ —ಮೊದಲೇ ಚಿದ್ಭಸ್ಮವನೇ ಧರಿಸಿ ಆನಂದೋದಕದಿಂದ ಲಿಂಗಕ್ಕೆ ಕ್ರಿಯಾ ಮಜ್ಜನವ ನೀಡಿ ಅಷ್ಟತನುವಿನ ಅಷ್ಟಸುಗಂಧವನೆ ಧರಿಸಿ ಕರಣಂಗಳ ಸಂಚಲವಿಲ್ಲದೆ ಗುಣತ್ರಯದಕ್ಷತೆಯ ಧರಿಸಿ ಸಾವಿರದೈವತ್ತು ಪ್ರಣಮದ ಪರಿಮಳವ ತುಂಬಿರ್ದ ಪುಷ್ಪವ ಧರಿಸಿ ದಶವಾಯುಗಳ ಗುಣಧರ್ಮ ಕರ್ಮಂಗಳ ಸುಟ್ಟ ಸದ್ವಾಸನೆಯ ಧೂಪವ ಬೀಸಿ ಹೃದಯವೆಂಬ ಪ್ರಣತಿ ಯೊಳು ಪೃಥಚಿತ್ತವೆಂಬ ಬತ್ತಿಯನಿರಿಸಿ ಅರುಹೆಂಬ ತೈಲವನೆರೆದು ಮಹಾ

ಜ್ಞಾನವೆಂಬ ಜ್ಯೋತಿಯ ಮುಟ್ಟಿಸಿ ಅದರಿಂದೊದಗಿರ್ದ ಏಕಾರತಿ ತ್ರಿಯಾರತಿ ಪಂಚಾರತಿ ಮಹಾ ಪ್ರಕಾಶಗಳ ದೀಪವ ಬೆಳಗಿ ಕ್ರಿಯಾ, ಜ್ಞಾನ, ಇಚ್ಛಾದಿ, ಪರಾಚಿಚ್ಛಕ್ತಿ ಮೊದಲಾದವರು ಆರತಿಯ ಪಿಡಿದಿಹರು. ಆಮೇಲೆ ಪಾದತೀರ್ಥವ ಸಲಿಸಿ ಮತ್ತೆ ಐವತ್ತು ದಳಗಳಲ್ಲಿದ್ದ ಐವತ್ತು ರುದ್ರಕನ್ನಿಕೆಯರು ಅಡಿಗೆಯಮಾಡಿ ಅವರಿಗೆ ಇಚ್ಛಾಪದಾರ್ಥವ ನೀಡುತ್ತಿಹರು. ಅವರೊಕ್ಕುಮಿಕ್ಕ ಪ್ರಸಾದವನುಂಡು ಫಲಪದಾಕಾಂಕ್ಷೆಗಳಿಲ್ಲದೆ ಉಲುಹಡಗಿದ ನಿಜಪ್ರಭಾಲತೆಪರ್ಣದ ವೀಳೆಯವನಿತ್ತು ಅವರ ತಾಂಬೂಲ ಪ್ರಸಾದವನುಂಡು ಪರಿಣಾಮಿಸಿ ಕರಮನಭಾವಂಗಳಿಗೆ ಪ್ರತ್ಯಕ್ಷವಾಗಿ ಕಂಡು ಧ್ಯಾನಿಸುವದೇ ಧ್ಯಾನಯೋಗ. ಇನ್ನು ಧಾರಣಯೋಗದ ವಿವರ—ಕರದೊಳಗೆ ಇಷ್ಟಲಿಂಗವ ಮೂರ್ತವಮಾಡಿಸಿ ಮನದೊಳಗೆ ಪ್ರಾಣಲಿಂಗವ ಮೂರ್ತವಮಾಡಿಸಿ ಭಾವದೊಳಗೆ ತೃಪ್ತಿಲಿಂಗವ ಮೂರ್ತವ ಮಾಡಿಸಿ ಕರಮನಭಾವದೊಳಗೆ ಪ್ರತ್ಯಕ್ಷವಾಗಿ ಕಂಡು ಧರಿಸಿಕೊಂಡಿಪ್ಪುದೀಗ ಧಾರಣಯೋಗ. ಇನ್ನು ಸಮಾಧಿಯೋಗದ ವಿವರ—ಆ ಇಷ್ಟಪ್ರಾಣಭಾವಲಿಂಗವ ಏಕವಮಾಡಿ ಅಲ್ಲಿ ಐಕ್ಯವಾಗಿಪ್ಪುದೀಗ ಸಮಾಧಿಯೋಗ ಎಂದರುಹಿದಾತ ನಮ್ಮ ಶಾಂತ ಕೂಡಲಸಂಗಮದೇವಾ"

**ಸಂಗನ ಬಸವೇಶ್ವರನ ವಚನ—ಪುಟ ೫೩–೫೪**

ಶಿವಯೋಗದ ವಿಷಯಕ್ಕೆ—

"ಅಯ್ಯಾ ಇನ್ನು ಹಠಯೋಗವ ಮರೆದು ಶಿವಯೋಗದಲ್ಲಿ ನಿಂದ ಭೇದವೆಂತೆಂದೊಡೆ ಆ ನಿಲುಕಡೆಯ ಶ್ರೀ ಗುರುಕಟಾಕ್ಷೆಯಿಂದ ನಿರೂಪಿಸುವೆವು ಕೇಳಯ್ಯ ವರಕುಮಾರ ದೇಶಿಕೋತ್ತಮನೆ ವಾಮಭಾಗದ ಚಂದ್ರನಾಳ ಚಂದ್ರನೇತ್ರ ವಾಮಕರಣ ದ್ವಾರಂಗಳು ಮೂರು ಈಡಾನಾಡಿ ಎನಿಸುವದಯ್ಯ ದಕ್ಷಿಣಭಾಗದ ಸೂರ್ಯನಾಳ ಸೂರ್ಯನೇತ್ರ ದಕ್ಷಿಣ ಕರ್ಣದ್ವಾರಂಗಳು ಮೂರು ಪಿಂಗಳನಾಡಿ ಎನಿಸುವದಯ್ಯ ಅಧೋದ್ವಾರ ಗುಹ್ಯದ್ವಾರ ಜಿಹ್ವದ್ವಾರ ಇವು ಮೂರು ಸುಷುಮ್ನನಾಡಿ ಎನಿಸುವದಯ್ಯ ಮಣಿಪೂರಕ ವಿಶುದ್ಧಿ ಬ್ರಹ್ಮ ಇವು ಮೂರು ಇಪ್ಪತ್ತೆರಡುಸಾವಿರ ನಾಡಿಗಳಿಗೆ ಮೂಲಸೂತ್ರವಾದ ಮಧ್ಯನಾಡಿ ಎನಿಸುವದಯ್ಯ ಇಂತೀ ದಶ ದ್ವಾರಂಗಳಲ್ಲಿ ಚರಿಸುವ ಮನ್ಮಥವಿಕಾರವಂ ಗುರೂಪಾವಸ್ಥೆಯಂ ಹಿಂದು ಮಾಡಿ ತನ್ನ ಸತ್ಯವೇ ಮುಂದಾಗಿ ತನ್ನ ನಡೆನುಡಿಗಳ ತಾನೇ ವಿಚಾರಿಸಿ ಸದ್ಗುರುಲಿಂಗ ಜಂಗಮದಿಂದ ಶಿವದೀಕ್ಷೆಯ ಪಡೆದು ಲಿಂಗಾಂಗ ಸಂಬಂಧಿಯಾಗಿ ಆ ಲಿಂಗಚೈತನ್ಯಸ್ವರೂಪವಾದ ಪಾದೋದಕ ಪ್ರಸಾದ ಮಂತ್ರದಿಂದ ಆತ್ರಿವಿಧವಾದಿಗಳು ಮೊದಲಾಗಿ ದ್ವಾದಶನಾಡಿಗಳೇ ಕಡೆಯಾದ ಸಮಸ್ತ ನಾಡಿಗಳು ಪವಿತ್ರಸ್ವರೂಪವಾಗಿ ಸರ್ವಾವಸ್ಥೆಯಲ್ಲಿ ಚಿದ್ಘನಮಹಾಲಿಂಗವ ಅಷ್ಟವಿಧಾರ್ಚನೆ ಷೋಡಶೋಪಚಾರವನೊಡಗೂಡಿ ಪರಿಪರಿಯಿಂದರ್ಚಿಸಿ ಆಚಾರಭ್ರಷ್ಟರ ತ್ರಿಕರಣಂಗಳಿಂದ ಸೋಂಕದೆ ಅಂಗ ಕರಣಂಗಳಾಗಿ ಸತ್ಕ್ರಿಯೆ ಜ್ಞಾನಾನಂದವೆ ಪ್ರಭಾವಿಸಿ ಶ್ರೀ ಗುರುಲಿಂಗ

ಜಂಗಮ ಪಾದೋದಕ, ಪ್ರಸಾದ ವಿಭೂತಿ ರುದ್ರಾಕ್ಷಿ ಮಂತ್ರ ಸದಾಚಾರ ಸದ್ಭಕ್ತಿ ಸಮ್ಯಜ್ಞಾನ ಸದ್ವರ್ತನೆಯೆಂಬ ಚಿದೈಶ್ವರ್ಯದಲ್ಲಿ ಸಂತೃಪ್ತರಾಗಿ ನಿಂದ ನಿಲುಕಡೆಯಲ್ಲಿ ಪೂರ್ಣಸ್ವರೂಪ ನಿಜ ಶಿವಯೋಗಿಗಳು ನಿಮ್ಮ ಶರಣರು ನೋಡಾ ಸಂಗನ ಬಸವೇಶ್ವರಾ"

೨೯೯

ಚನ್ನಬಸವಣ್ಣನವರು—

"ಶ್ರೋತ್ರ, ನೇತ್ರ, ಘ್ರಾಣ, ಜಿಹ್ವೆ, ತ್ವಕ್ಕೆಂಬ ಬುದ್ಧೀಂದ್ರಿಯ ಕೂಡಿಕೊಂಡು ಇಚ್ಛಿಸುವ ವಾಯುನಾಳವಾವುದೆಂದರೆ ರೇಚಕ, ಪೂರಕ, ಕುಂಭಕರೂಪಿಂದೆ ಚೇಷ್ಟಿಸುವದೊಂದು ಪ್ರಾಣವಾಯು ರಸಂಗಳ ನಿರಸಂಗಳಂಮಾಡಿ ಮಲಮೂತ್ರಂಗಳ ನದಸ್ತುವಂ ಮಾಡಿಸುವದೊಂದು ಉದಾನವಾಯು ಸಮಧಾತುಗಳನರಿತು ಅನ್ನಪಾನಾದಿಗಳ ಪರಿಹರಿಸುವದೊಂದು ಸಮಾನವಾಯು ರಕ್ತವ್ಯಾಪ್ತಿಯ ಮಾಡಿಸುವದೊಂದು ನಾಗವಾಯು ಓಕರಿಕೆಯ ಮಾಡಿಸುವದೊಂದು ದೇವದತ್ತವಾಯು ನುಡಿ ನುಡಿಯಲಿಕ್ಕೆ ಬುದ್ಧಿಯ ಮಾಡಿಸುವದೊಂದು ಧನಂಜಯವಾಯು ಈಡಾದಿ ದಶವಾಯುಗಳ ಸ್ಥಾನವಾವಾವೆಂದೊಡೆ- ಗುಹ್ಯದಲ್ಲಿ ಅಪಾನವಾಯು ನಾಭಿಯಲ್ಲಿ ಸಮಾನವಾಯು ಹೃದಯದಲ್ಲಿ ಪ್ರಾಣವಾಯು ಕಂಠದಲ್ಲಿ ಉದಾನವಾಯು ಮುಖದಲ್ಲಿ ಧನಂಜಯವಾಯು ಸಪ್ತಸಂದುಗಳಲ್ಲಿ ವ್ಯಾನವಾಯು ಈಡಾನಾಳದಲ್ಲಿ ನಾಗವಾಯು ಪಿಂಗಳ ನಾಳದಲ್ಲಿ ಕೂರ್ಮವಾಯು ಸುಷುಮ್ನನಾಳದಲ್ಲಿ ಕೃಕರವಾಯು ಹಸ್ತದಲ್ಲಿ ದೇವದತ್ತವಾಯು ಜಿಹ್ವೆಯಲ್ಲಿ ಧನಂಜಯವಾಯು ಇಂತಿವು ದಶವಾಯುಗಳು ಈ ವಾಯು ಪ್ರಾಣಿಯಂ ಕಳೆದು ಲಿಂಗಪ್ರಾಣಿಯಂ ಮಾಡಿದಬಳಿಕ ಅದೇ ಲಿಂಗಾಂಗ ಸಮರಸೈಕ್ಯವಾದ ಶಿವಯೋಗ ನಿದ್ರಾಮುದ್ರೆ ಎನಿಸುವದಯ್ಯ ನಮ್ಮ ಕೂಡಲಚನ್ನಸಂಗಯ್ಯನಲ್ಲಿ ಮತ್ತು ತನುವೆಸನ, ಧನವೆಸನ, ವಾಹನವೆಸನ, ವಿಶ್ವವೆಸನ, ಉತ್ಸಾಹವೆಸನ, ಶೇವಕವೆಸನ ಇಂತಿವು ಸಪ್ತವೆಸನಂಗಳ ವಿವರ— ತನುವೆಸನವೆತ್ತಿದಲ್ಲಿ ವಸ್ತ್ರಾಭರಣ, ವೀಳ್ಯ ಅನುಲೇಪನಾದಿಗಳಂ ಬಯಸುತ್ತಿಹನು. ಮನವೆಸನವೆತ್ತಿದಲ್ಲಿ ಹುಸಿ, ಕಳವು ಪರದಾರಮಂ ಬಯಸುತ್ತಿಹನು ಧನವೆಸನವೆತ್ತಿದಲ್ಲಿ ಧನಧಾನ್ಯಮಂ ಬಯಸುವನು. ವಾಹನವೆಸನವೆತ್ತಿದಲ್ಲಿ ಆನೆ, ಕುದುರೆ ವಾಹನಂಗಳ ಬಯಸುತ್ತಿಹನು. ವಿಶ್ವವೆಸನವೆತ್ತಿದಲ್ಲಿ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯವೆಂಬ ಚತುರ್ವಿಧ ಕರ್ತವ್ಯಮಂ ಬಯಸುತ್ತಿಹನು. ಉತ್ಸವವೆಸನವೆತ್ತಿದಲ್ಲಿ ಪುತ್ರಮಿತ್ರಕಳತ್ರಾದಿಗಳಂ ಬಯಸುತ್ತಿಹನು. ಶೇವಕವೆಸನವೆತ್ತಿದಲ್ಲಿ ಗಳಿಸಲಾರೆ, ಕೊಡಲಾರೆ, ಕೊಳಲಾರೆನೆನುತಿಹನು. ಇಂತೀ ಸಪ್ತವೆಸನಂಗಳಂ ಬಿಟ್ಟು ಲಿಂಗವೆಸನಿಯಾಗಿರಬಲ್ಲಡೆ ನಮ್ಮ ಕೂಡಲ ಸಂಗಮದೇವನಲ್ಲಿ ಆತನೇ ಪರಮಶಿವಯೋಗಾಭ್ಯಾಸಿಯಾದ ಪ್ರಾಣಲಿಂಗ ಸಂಬಂಧಿ ಎನಿಸುವನು.

ಇಲ್ಲಿಯುವರೆಗೆ ಮೂರು ಜನ ಶರಣರ ಮೂರು ವಚನಗಳನ್ನು ಹೇಳಿದ್ದಾಯಿತು. ಶಿವಯೋಗದ ಮರ್ಮವನ್ನೆಲ್ಲ ಶರಣರು ಸುಲಭವಾಗಿ ತಿಳಿಯುವಂತೆ ಪ್ರತಿಪಾದಿಸಿರುವರು. ಇಂತಹ ಕಠಿಣವಾದ ವಿಷಯವನ್ನು ಇಷ್ಟು ಸುಲಭವಾಗಿ ಹೇಳುವದು ಸಾಮಾನ್ಯವಾದ ಕಾರ್ಯವಾಗಿರುವದಿಲ್ಲ; ಬಹಳ ಮಹತ್ವದ್ದಾಗಿರುತ್ತದೆ. ಶರಣರು ಸಾಮಾನ್ಯಜನರಿಗೂ ಕೂಡ ಶಿವಯೋಗದ ತತ್ವಗಳು ಕರತಲಾಮಲಕವಾಗುವಂತೆ ಮಾಡಿರುತ್ತಾರೆ. ಪಾಂಡಿತ್ಯವಾಗಲೀ, ಅನುಭವವಾಗಲೀ ಇಲ್ಲದಿದ್ದರೆ ಹೀಗೆ ಹೇಳುವದು ಶಕ್ಯವಾಗಲಾರದು. ಕನ್ನಡ ಭಾಷೆಯಲ್ಲಿ ಯೋಗಶಾಸ್ತ್ರದಂತಹ ಕ್ಲಿಷ್ಟವಾದ ವಿಷಯವನ್ನು ಶರಣರಷ್ಟು ಸುಲಭವಾಗಿ ಬೇರೆ ಯಾರೂ ಹೇಳಿರುವದಿಲ್ಲ. ಹೇಳುವದೂ ಕಷ್ಟಕರವಾದುದು.

ಅಷ್ಟಾಂಗಯೋಗಗಳಲ್ಲಿ ಕೆಲವಿಷಯ ತೆಗೆದುಕೊಂಡು ಲಿಂಗವಿರಹಿತನಾಗದೆ ಸದ್ಗುಣ ಸದಾಚಾರಗಳಿಂದ ಕೂಡಿ ದುರ್ಗುಣಗಳಿಂದ ದೂರನಾಗಿ ಸದಾ ಲಿಂಗಧ್ಯಾನದಲ್ಲಿ ತತ್ಪರನಾಗಿರಬೇಕೆಂಬುವ ಶಿವಯೋಗತತ್ವದ ತಳಹದಿಯಾಗಿರುತ್ತದೆಂಬುವದೇ ಬಸವಾದಿ ಶರಣರ ವಾದವಾಗಿರುತ್ತದೆ. ಶರಣರಲ್ಲಿ ಅನೇಕರು ಮಹಾನ್ ಮಹಾನ್ ಶಿವಯೋಗಿಗಳಾಗಿರುತ್ತಾರೆ. ಶಿವಯೋಗಿಗಳಲ್ಲಿಯೇ ಏಕೆ ಹಿಂದೂಸ್ಥಾನದ ಯೋಗಿಗಳ ಮಾಲಿಕೆಯಲ್ಲಿ ಅಗ್ರೇಸರರೂ, ಶೂನ್ಯಸಿಂಹಾಸನದ ಅಧ್ಯಕ್ಷರೂ, ಪರಮ ನಿರಂಜನ ಮೂರ್ತಿಗಳೂ ಆದ ಶ್ರೀ ಅಲ್ಲಮಪ್ರಭುಗಳು ಬಸವಾದಿ ಪ್ರಮಥರಲ್ಲಿ ಶ್ರೇಷ್ಠರಾಗಿರುತ್ತಾರಷ್ಟೆ? ಅವರ ವಿಷಯದಲ್ಲಿ ಇಲ್ಲಿ ಕೆಲವು ಸಂಗತಿಗಳನ್ನು ಬರೆದರೆ ಈ ವಿಷಯದ ಯಥಾರ್ಥವು ವಾಚಕರಿಗೆ ತಿಳಿಯುವದು.

ಹಠಯೋಗಪ್ರದೀಪಿಕೆಕಾರರು ಭರತಖಂಡದಲ್ಲಿ ಪ್ರಸಿದ್ಧರಾದ ಯೋಗಿಗಳ ಮಾಲಿಕೆಯೊಂದನ್ನು ಮಾಡಿರುತ್ತಾರೆ.

**ಹಠಯೋಗಪ್ರದೀಪಿಕಾ—ಪುಟ ೬**

(ಮಥುರಾದಲ್ಲಿ ಅಚ್ಚಾಗಿದ್ದು ಇದಕ್ಕೆ ಹಿಂದಿಯಲ್ಲಿ ಟೀಕೆ ಇರುತ್ತದೆ).

ಶ್ರೀ ಆದಿನಾಥ ಮತ್ಸ್ಯೇಂದ್ರ ಶಾಬರಾನಂದ ಭೈರವಾಃ ।
ಚೌರಂಗೀ ಮೀನ ಗೋರಕ್ಷ ವಿರೂಪಾಕ್ಷ ಬಿಲೇಶಯಾಃ ॥
ಮಂಥಾನೋ ಭೈರವೋ ಯೋಗೀ ಸಿದ್ಧಿ ರ್ಬುದ್ಧಶ್ಚ ಕಂಥಡಿಃ ।
ಕೋರಂಟಕಃ ಸುರಾನಂದಃ ಸಿದ್ಧಿಪಾದಶ್ಚ ಚರ್ಪಟಿಃ ॥
ಕಾನೇರೀ ಪೂಜ್ಯಪಾದಶ್ಚ ನಿತ್ಯನಾಥೋ ನಿರಂಜನಃ ।
ಕಪಾಲೀ ಬಿಂದುನಾಥಶ್ಚ ಕಾಕಚಂಡೀಶ್ವರಾಹ್ವಯಃ ॥
ಅಲ್ಲಾಮಪ್ರಭುದೇವಶ್ಚ ಘೋಟಾಚೋಲೀ ಚ ಟಿಂಟಿಣಿಃ ।
ಭಾನುಕೀನರದೇವಶ್ಚ ಖಂಡಃ ಕಾಪಾಲಿಕಸ್ತಥಾ ॥
ಇತ್ಯಾದಯೋಮಹಾಸಿದ್ಧಾ ಹಠಯೋಗಪ್ರಭಾವತಃ ।
ಖಂಡಯಿತ್ವಾ ಕಾಲದಂಡಂ ಬ್ರಹ್ಮಾಂಡೇ ವಿಚರಂತಿ ತೇ ॥

ಅಂದರೆ— ಶ್ರೀ ಆದಿನಾಥ, ಮತ್ಸ್ಯೇಂದ್ರ, ಶಾಬರ, ಆನಂದ, ಭೈರವ, ಚೌರಂಗಿ, ಮೀನನಾಥ, ಗೋರಕ್ಷನಾಥ, ವಿರೂಪಾಕ್ಷ, ಬಿಲೇಶಯ, ಮಂಥಾನ, ಭೈರವ, ಸಿದ್ಧಿ, ಬುದ್ಧ, ಕಂಥಡಿ, ಕೋರಂಟಕ, ಸುರಾನಂದ, ಸಿದ್ಧಿಪಾದ, ಚರ್ಪಟಿ, ಕಾನೇರಿ, ಬಿಂದುನಾಥ, ಪೂಜ್ಯಪಾದ, ನಿತ್ಯನಾಥ, ನಿರಂಜನಕಪಾಲಿ, ಕಾಕಚಂಡೀಶ್ವರ, ಅಲ್ಲಮಪ್ರಭುದೇವ, ಘೋಟಾಚೋಲೀ, ಟಿಂಟಣೀ, ಬಾನುಕಿ, ನಾರದೇವ, ಖಂಡಕಾಪಾಲಿಕ,

ಇವರೇ ಮೊದಲಾದ ಮಹಾ ಸಿದ್ಧರುಗಳ ಹಠಯೋಗದ ಪ್ರಭಾವದಿಂದ ಕಾಲದಂಡ ವನ್ನು ನಷ್ಟಮಾಡಿ ಬ್ರಹ್ಮಾಂಡದಲ್ಲಿ ಸಂಚಾರಮಾಡುತ್ತಾರೆ. ಈ ಶ್ಲೋಕದಲ್ಲಿರುವ ಆದಿಪದದಿಂದ ತಾರಾನಾಥಾದಿ ಯೋಗಿಗಳ ಹೆಸರುಗಳನ್ನು ಸೇರಿಸಬೇಕೆಂದು ಟೀಕಾ ಕಾರರು ಬರೆದಿರುತ್ತಾರೆ. ಮಹಾಸಿದ್ಧಪದದಿಂದ ಈ ಯೋಗಿಗಳ ಐಶ್ವರ್ಯ ಅಪ್ರತಿಮ ವಾದುದೆಂದು ತಿಳಿದುಬರುತ್ತದೆ.

ಕಾಲದಂಡವೆಂದರೆ ದೇಹ ಮತ್ತು ಪ್ರಾಣಗಳ ವಿಯೋಗಾನುಕೂಲವ್ಯಾಪಾರ ಮರಣವನ್ನು ಜಯಿಸಿ, ತಮ್ಮ ಇಚ್ಛೆಯಿಂದ ಬೇಕಾದಲ್ಲಿ ಸಂಚಾರಮಾಡುತ್ತಾರೆಂಬುವದು ತಿಳಿದುಬರುತ್ತದೆ. ಇವರುಗಳ ಗತಿಯನ್ನು ಯಾರೂ ತಡೆಯಲಾರರು. ಹಠಯೋಗ ಪ್ರದೀಪಿಕೆಯ ಗ್ರಂಥಕಾರರಾದರೂ ಸುಪ್ರಸಿದ್ಧ ಯೋಗಿಗಳು. ಇವರು ಅಲ್ಲಮಪ್ರಭು ದೇವರನ್ನು ಈ ಯೋಗಿಗಳ ಮಾಲಿಕೆಯಲ್ಲಿ ಸೇರಿಸಿರುತ್ತಾರೆ. ಇದು ವಿಚಾರಮಾಡತಕ್ಕ ವಿಷಯ. ಮೇಲೆ ಬರೆದ ಶ್ಲೋಕದಲ್ಲಿ ಅಲ್ಲಾಮಾ ಪ್ರಭುದೇವಶ್ಚ ಎಂದು ಇರುವದು. ಟೀಕಾಕಾರರೂ ಕೂಡ ಅಲ್ಲಮಾ, ಪ್ರಭುದೇವ ಹೀಗೆ ಎರಡು ಹೆಸರುಗಳೆಂದು ತಿಳಿದು ಕೊಂಡಂತೆ ಕಾಣುತ್ತದೆ. ಈ ಹಠಯೋಗಿಗಳ ಮಾಲಿಕೆಗೆ ಗೋರಕ್ಷನ ಹೆಸರೂ ಕೂಡ ಇರುತ್ತದೆ. ಹಠಯೋಗಪ್ರದೀಪಿಕೆಯನ್ನು ರಚಿಸಿರುವ ಸ್ವಾತ್ಮಾರಾಮಯೋಗಿಗಳು ತಾವು ಗೋರಕ್ಷಕನಿಂದ ಯೋಗದ ತತ್ವಗಳನ್ನು ತಿಳಿದುಕೊಂಡಿರುತ್ತೇವೆಂದು ಬರೆದಿರು ತ್ತಾರೆ. ಗೋರಕ್ಷನಾಥನು ಬಹಳ ದೊಡ್ಡ ಯೋಗಿಯಾಗಿದ್ದವನೆಂಬುವದು ಸರಿಯಾಗಿ ರುತ್ತದೆ. ಇದೇ ಗೋರಕ್ಷನೇ ಪ್ರಭುದೇವರ ಕೂಡ ವಾದವನ್ನು ಮಾಡಿ ಅವರಿಗೆ ಸೋತಿರುತ್ತಾನೆ. ಇದು ಶೂನ್ಯಸಂಪಾದನೆಯಲ್ಲಿ ವಿಸ್ತಾರವಾಗಿ ವರ್ಣಿಸಲ್ಪಟ್ಟಿರುತ್ತದೆ.

ಬಸವಾದಿ ಪ್ರಮಥರೆಲ್ಲ ಭೂಲೋಕದಲ್ಲಿ ತಮ್ಮ ಕಾರ್ಯದ ಸಮಾಪ್ತಿಯನ್ನು ಮಾಡಿ ನಿರ್ವಲಯ ಸಮಾಧಿಯನ್ನು ಹೊಂದಲಿಕ್ಕೆ ಬೇರೆ ಬೇರೆ ಸ್ಥಳಗಳಿಗೆ ಪ್ರಯಾಣ ವನ್ನು ಬೆಳೆಯಿಸಿದರು. ಆಗ ಶ್ರೀ ಪ್ರಭುಗಳವರು ತಾವು ಶ್ರೀಶೈಲದ ಕದಳಿಯ ವನಕ್ಕೆ ದಯಮಾಡಿಸಿದರು. ಮಾರ್ಗದಲ್ಲಿ ಗೋರಕ್ಷನಾಥನಿಗೂ ಅವರಿಗೂ ಭೇಟಿ ಯಾಯಿತು. ಅವನ ಕೂಡ ಪ್ರಭುಗಳು ಮಾತನಾಡಿ ಅವನ ವಜ್ರದೇಹವನ್ನು ನೋಡಿ ಸಂತೋಷಪಟ್ಟರು. ಖಡ್ಗವೆಂಬ ತಾಳಪತ್ರದಿಂದ ಅವನನ್ನು ಹೊಡೆದು ಪರೀಕ್ಷಿಸಿದರು. ಆ ಕಾಲಕ್ಕೆ ಅವನನ್ನು ನೋಡಿ ಅಲ್ಲಮಪ್ರಭುಗಳವರು—

೩೦೦

"ಹಿಂದನರಿಯದುದು ಮುಂದನೇನ ಬಲ್ಲುದೇ? ಉದಯ ಮುಖದಲ್ಲಿ ಹುಟ್ಟಿದ ಪ್ರಾಣಿಗಳು ಅಸ್ತಮಾನಕ್ಕೆ ಅಳಿದರಲ್ಲ ಅಂದಂದಿನ ಘಟಜೀವಿ ಗಳು ಬಂದ ಬಟ್ಟೆಗೆ ಹೋದರು ಗುಹೇಶ್ವರನ ಲಿಂಗವು ಆರಿಗೆಯೂ ಇಲ್ಲವು"

೩೦೧

"ಧರೆಯ ಮೇಲುಳ್ಳ ಅದು ಹಿರಿಯರೆಲ್ಲ ಮರುಳುಗೊಂಡು ಆಡುತ್ತಿ ದ್ದಾರೆ ನೋಡಾ ಮಂಜಿನ ಮಡಕೆಯೊಳಗೆ ನಿರಂಜನೆಯ ಭಾಂಡವ ತುಂಬಿ ಅಂಜದೆ ಪಾಕವ ಮಾಡಿಕೊಂಡುಂಡು ಭಾಂಡವ ಮಾರುತಿಪ್ಪರು ನೋಡಾ ಸಂಜೀವನೆಯ ಬೇರ ಕಾಣದೆ ಮರಣಕ್ಕೊಳಗಾದರು ಗುಹೇಶ್ವರನರಿಯದ ಭವಭಾರಕರೆಲ್ಲರು"

ಹೀಗೆಯೇ ಕೆಲವು ವಚನಗಳನ್ನು ಗೋರಕ್ಷನ ಮನಸ್ಸಿಗೆ ಹತ್ತುವಂತೆ ಅಲ್ಲಮ ಪ್ರಭು ಗಳು ಮಾತನಾಡುತ್ತ—

೩೦೨

"ನಾರುಬೇರಿನ ಕುಟಿಲಕುಹಕದ ಕಪಟಯೋಗವಲ್ಲಿದು ನಿಲ್ಲಿರೋ
ಕಾಯಸಮಾಧಿ ಕರಣಸಮಾಧಿ ಜೀವಸಮಾಧಿ ಯೋಗವಲ್ಲಿದು ನಿಲ್ಲಿರೋ
ನಿಜಸಮಾಧಿ ಗುಹೇಶ್ವರಾ"

ಹೀಗೆ ಹೇಳುತ್ತ ಅಲ್ಲಮಪ್ರಭುಶಿವಯೋಗಿಗಳು ಆತನ ಕಾಯಸಿದ್ಧಿ ಮೊದಲಾದ ಸಿದ್ಧಿ ಗಳನ್ನೂ ಮತ್ತು ಆತನ ಭಿನ್ನವಾದ ಯೋಗಾಭ್ಯಾಸವನ್ನೂ ಜರೆಯಲು ಆಗ ಗೋರಕ್ಷನು ಪ್ರಭುದೇವರಿಂದ ಉಪದೇಶವಂ ಪಡೆದು ಬಿನ್ನೈಸುವ ಪ್ರಸ್ತಾಪದ ವಚನ—

೩೦೩

"ರಸವಾದಂಗಳ ಕಲಿತಲ್ಲಿ ಲೋಹಸಿದ್ಧಿಯಲ್ಲದೆ ರಸಸಿದ್ಧಿ ಯಾದುದಿಲ್ಲ
ನಾನಾಕಲ್ಪ ಅದೃಶ್ಯಕರಣಂಗಳ ಕಲಿತಲ್ಲಿ ಕಾಯಸಿದ್ಧಿಯಲ್ಲದೆ ಆತ್ಮಸಿದ್ಧಿ
ಯಾದುದುಂಟೆ? ನಾನಾ ವಾಗ್ವಾದಂಗಳಿಂದ ಹೋರಿಮಾತಿನ ಮಾಲೆಯಾ
ಯಿತ್ತಲ್ಲದೆ ಆತ್ಮನಿಹಿತವಾದುದಿಲ್ಲ ನೀನಾನೆಂದಲ್ಲಿ ನೀನು ನಾನಾದೆಯಲ್ಲದೆ
ನಾನು ನೀನಾದುದಿಲ್ಲ ಗೋರಕ್ಷಪಾಲಕ ಮಹಾಪ್ರಭು ಸಿದ್ಧಸೋಮನಾಥ
ಲಿಂಗವಾದೆಯಲ್ಲದೆ ಲೀಯವಾಗಿ ಆಲಿಂಗವೆಯಾದುದಿಲ್ಲ."

ಹೀಗೆ ಗೋರಕ್ಷನು ನನ್ನನ್ನು ರಕ್ಷಿಸಬೇಕೆಂದು ಬೇಡಿಕೊಳ್ಳಲು ಪ್ರಭುದೇವರು ನಿರ್ವಲಯ ಸಮಾಧಿಯ ಭೇದವನ್ನು ನಿರೂಪಿಸುತ್ತಾರೆ.

೩೦೪

"ಅರಿವರತು ಬೆರಗುಹತ್ತಿತ್ತೆಂಬ ಜ್ಞಾನವಿದೇನೋ? ನಾಹಂ
ಎಂಬಲ್ಲಿ ತಾನಾರೋ ಕೋಹಂ ಎಂಬಲ್ಲಿ ಮುನ್ನಾರೋ ಪರಬ್ರಹ್ಮ ಸೋಹಂ
ಎಂಬಲ್ಲಿ ಮುನ್ನ ತಾನೇ ತಾನಾಗಿರ್ದ ಚಿದೋಹಂ ಎಂಬ ಹಮ್ಮಿನ
ಭವಮಾಲೆ ಇದೇನೋ? ನಿಶ್ಶಬ್ದಂ ಬ್ರಹ್ಮ ಉಚ್ಯತೇ ಎಂಬ ಶಬ್ದವಿಡಿದು
ಬಳಲುವ ಕಾರಣವಿದೇನೋ ಗುಹೇಶ್ವರಾ"

ಹೀಗೆಂದು ಪ್ರಭುದೇವರು ಹೇಳಲು ಅದಕ್ಕೆ ಗೋರಕ್ಷನು ಲಿಂಗಾಂಗ ಸಂಬಂಧಕೃತ ನಿಶ್ಚಯವನ್ನೈದಿದ್ದನ್ನು ಇಲ್ಲಿ ತೋರಿಸುತ್ತಾನೆ.

೩೦೫

"ನಾ ನಿನ್ನ ಕೇಳಿಹೆನೆಂದಡೆ ನಾ ನಂಗಿ ನೀ ನಿರಂಗಿ ನಾನಿನಗೆ ಹೇಳಿಹೆ
ನೆಂದಡೆ ನಾ ಸಂಗಿ ನೀ ನಿಸ್ಸಂಗಿ ನಿನ್ನಂಗ ಎನ್ನಂಗದಲ್ಲಿ ಪ್ರತಿಷ್ಠಿಸಿ ನಿನ್ನ
ಅರಿವು ಎನ್ನ ಆತ್ಮದಲ್ಲಿ ನಿಂದು ಅರಿವನ್ನಕ್ಕ ನನಗು ನಿನಗು ತತ್ತು ಗೊತ್ತು
ಗೋರಕ್ಷಪಾಲಕ ಮಹಾಪ್ರಭು ಸಿದ್ಧಸೋಮನಾಥ ಲಿಂಗವು ಸರಿಯಹುದು
ಗುಹೇಶ್ವರಾ"

ಪ್ರಭುಸ್ವಾಮಿಗಳವರು ಗೋರಕ್ಷನಿಗೆ ಲಿಂಗಧಾರಣೆಯನ್ನು ಮಾಡಿದರು. ಮುಂದೆ ಇವರು ಶ್ರೀಶೈಲದತ್ತ ಹೊರಟರು. ಇಲ್ಲಿ ಮುಖ್ಯವಾಗಿ ತಿಳಿಯತಕ್ಕ ವಿಷಯವೇನೆಂದರೆ

ಗೋರಕ್ಷನು ಹಠಯೋಗದಲ್ಲಿ ಎಷ್ಟೇ ಬಲ್ಲಿದವನಿದ್ದರೂ ಶಿವಯೋಗಿಗಳಾದ ಪ್ರಭು ದೇವರ ಮುಂದೆ ಅವನ ಆಟ ಸಾಗದೆ ಪ್ರಭುದೇವರ ಶಿವಯೋಗಕ್ಕೆ ತಲೆಬಗ್ಗಿಸಬೇಕಾ ಯಿತು. ಉಳಿದ ಯೋಗಿಗಳಿಗೆ ಲಿಂಗವಿಲ್ಲ; ಶಿವಯೋಗಿಗಳಿಗೆ ಉಂಟು. ಆದ್ದರಿಂದ ಅವನ ಯೋಗಕ್ಕೆ ಪ್ರಭುಗಳು ಒಪ್ಪಲಿಲ್ಲ. ಶಿವಶರಣರ ಅನೇಕ ಶ್ರೇಷ್ಠಕಾರ್ಯಗಳಲ್ಲಿ ಶಿವಯೋಗಪ್ರಚಾರವೂ ಮುಖ್ಯವಾದುದಾಗಿದೆ. ಗೋರಕ್ಷನಂತಹ ಮಹಾ ಹಠಯೋಗಿ ಯನ್ನು ಬಗ್ಗಿಸಿದ್ದುದು ಪ್ರಭುದೇವರ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರದಿಡ ತಕ್ಕಂಥಾದ್ದಾಗಿರುತ್ತದೆ.

ಶ್ರೀ ಅಲ್ಲಮಪ್ರಭುದೇವರು ಸೊನ್ನಲಾಪುರದ ಶ್ರೀ ಸಿದ್ಧರಾಮ ಶಿವಯೋಗಿ ಗಳವರಿಗೆ ಪರಮಯೋಗವನ್ನು ಬೋಧಿಸಿದ ಮಂತ್ರಗೋಪ್ಯ ಎಂಬುವ ಗ್ರಂಥವನ್ನು ಬರೆದಿರುತ್ತಾರೆ. ಅದರಲ್ಲಿ ಅವರು ಅಷ್ಟಾಂಗಯೋಗಗಳನ್ನು ಶಿವಯೋಗದಲ್ಲಿ ಸಮನ್ವಯಮಾಡಿರುತ್ತಾರೆ. ವೇದಾಂತಿ, ಸಿದ್ಧಾಂತಿ, ಯೋಗಮಾರ್ಗಿ ಇವರುಗಳು ಈ ಶಿವಯೋಗವನ್ನು ಹೊಂದಲಾರರು. ಇವರೆಲ್ಲರಿಗಿಂತಲೂ ಶಿವಯೋಗಿಯೇ ಶ್ರೇಷ್ಠನು. ಆ ಶಿವಯೋಗವನ್ನು ಆಚರಿಸುವ ಶರಣರ ಮಾರ್ಗವೇ ಸರ್ವೋತ್ತಮವಾದುದು ಎಂದು ಆ ಗ್ರಂಥದಲ್ಲಿ ಸಿದ್ಧಾಂತಪಡಿಸಿರುತ್ತಾರೆ. ಶ್ರೀ ಪ್ರಭುಗಳವರು ಅನೇಕ ಪ್ರಾಂತಗಳಲ್ಲಿ ತಮ್ಮ ಸಂಚಾರವನ್ನು ಮುಗಿಸಿ ಸೊಲ್ಲಾಪುರಕ್ಕೆ ಬಂದಾಗ್ಗೆ ಅಲ್ಲಿಯ ಯೋಗಿವರೇಣ್ಯ ರಾದ ಸಿದ್ಧರಾಮಣ್ಣನವರು ಅವರನ್ನು ತಮ್ಮ ಗೃಹಕ್ಕೆ ಕರೆದುಕೊಂಡುಹೋಗಿ ಅಷ್ಟ ವಿಧಾರ್ಚನೆ, ಷೋಡಶೋಪಚಾರಗಳಿಂದ ಪೂಜಿಸಿ, ನಮಸ್ಕರಿಸಿ ಮಹಾ ಪ್ರಭುವರೇಣ್ಯರೆ ನನ್ನ ಮೇಲೆ ಕೃಪೆಯಿಟ್ಟು ಬಂದಿರಿ. ನನ್ನ ಪಾಪವೆಲ್ಲ ಪರಿಹಾರವಾಯಿತು. ಮತ್ತು ತಾವು ನನಗೆ ನಿಜಸಮಾಧಿಯನ್ನು ಬೋಧಿಸಬೇಕು. ಹೀಗೆ ಸಿದ್ಧರಾಮದೇವರು ಪ್ರಾರ್ಥಿಸಲು ಪ್ರಭುಗಳು ನೀನು ಮಾಡುವ ಅಷ್ಟಾಂಗಯೋಗಮಾರ್ಗದ ಧ್ಯಾನಧಾರಣ ಸಮಾಧಿಯಿಂದ ಶಿವತತ್ವದ ನಿಜಸಮಾಧಿ ನಿನಗೆಂದೂ ಘಟಿಸದು. ನೀನು ತಿಳಿದ ವೇದಾಂತಜ್ಞಾನದಿಂದಲೂ ನೀನು ಮಾಡುವ ಅದ್ವೈತ ಶೈವಕ್ರಿಯೆಯಿಂದಲೂ ಶಿವತತ್ವವು ನಿನಗೆ ಸಾಧ್ಯವಾಗದೆಂದು ನುಡಿಯಲು—ಅದಕ್ಕೆ ಸಿದ್ಧರಾಮನು ಇಂತಹ ಜ್ಞಾನಕ್ರಿಯೆ ಯಿಂದಲೂ, ಅಷ್ಟಾಂಗಯೋಗ ಧ್ಯಾನಧಾರಣ ಸಮಾಧಿಯಿಂದಲೂ, ಶಿವತತ್ವವು ಏಕೆ ತಿಳಿಯುವುದಿಲ್ಲ? ತಿಳಿಯದಿದ್ದರೆ ಯಾವ ಮಾರ್ಗವನ್ನು ಅನುಸರಿಸಬೇಕೆಂತಲೂ ನುಡಿದನು. ಅದಕ್ಕೆ ಪ್ರಭುದೇವರು ನಿನ್ನ ಸಿದ್ಧಾಂತ ಭಿನ್ನಜ್ಞಾನಯೋಗದಿಂದ ಎಂದೆಂದೂ ಭಿನ್ನಾತ್ಮನಾಗಿ ಆತ್ಮತತ್ವ ಕೆಟ್ಟು ಶಿವತತ್ವವನ್ನು ಹೊಂದಲಾರಿ. ದ್ವೈತಕ್ರಿಯೆ ಗಳಿಂದ ಫಲಪದಗಳನ್ನು ಪಡೆದು ಭವಕ್ಕೆ ಬರುತಿಹೆ. ಶೈವಸಿದ್ಧಾಂತಕ್ರಿಯೆಯಿಂದಲೂ ಶಿವತತ್ವವ ನೆಯ್ದಲಿಕ್ಕೆ ಬಾರದು. ಇದಲ್ಲದೆ ವೇದಾಂತಿಯು ದೇಹ, ಕರಣ, ಇಂದ್ರಿಯ ವಿಷಯ ತಾನಲ್ಲ ತನ್ನವಲ್ಲ ಅವು ಮಾಯೆ (ಮಿಥ್ಯ) ಎಂದು ನುಡಿದೊಡಂ ದೇಹವಾಸನೆ ಯಳಿಯಲರಿಯದೆ ದೇಹೋಹಂ ಎಂದು ಇಂದ್ರಿಯ ಕರಣಂಗಳ ಇಚ್ಛೆಯಲ್ಲಿ ನಡೆದು ಪುಣ್ಯಪಾಪವಿಲ್ಲೆಂದು ಬೊಮ್ಮ ತಾನೆಂದು ವಾಗದ್ವೈತವ ನುಡಿದು ಸತ್ತು ಹುಟ್ಟು ತ್ತಿಹನು. ಅದರಿಂ ವೇದಾಂತತತ್ವದಿಂದ ಶಿವತತ್ವ ಘಟಿಸದು. ಸಮ್ಯಜ್ಞಾನವಿಲ್ಲದೆ ಶಿವತತ್ವ ಸ್ವರೂಪವನರಿಯದೆ ಅಷ್ಟಾಂಗಯೋಗಗಳಿಂದ ಲಕ್ಷ್ಯವಿಟ್ಟು ಕೂಡುವೆನೆಂಬ ಯೋಗಿಗಳ ಭಿನ್ನಜ್ಞಾನದ ಅರಿವಿಂಗೆ ಶಿವತತ್ವವೆಂದೂ ಗೋಚರವಲ್ಲವೆಂದೂ ಅವರಿಗೆ

ಶಿವಯೋಗವು ಎಂದಿಗೂ ಸಿದ್ಧಿಸದು. ಬಹುಮಾರ್ಗಂಗಳ ಶೃತಿಪ್ರಮಾಣಗಳಿಂದ ಅರಿದು ಸಾಧಿಸಿ ಕೂಡುವೆನೆಂಬ ಯೋಗಿಗಳಿಗೆ ಎಂದೂ ಶಿವತತ್ವವು ಸಾಧ್ಯವಾಗಲಾರ ದೆಂತಲೂ, ವೀರಶೈವ ಷಟ್‌ಸ್ಥಲ ಜ್ಞಾನಕ್ರಿಯೆಯಿಂದ ಲಿಂಗಾಂಗ ಸಂಬಂಧಿಯಾದ ಶರಣನಿಗೆ ಶಿವತತ್ವವು ಘಟಿಸುವದೆಂದೂ ಪ್ರಭುದೇವರು ಹೇಳಲು ಅದಕ್ಕೆ ಸಿದ್ಧರಾಮ ದೇವರು ಹಾಗಾದರೆ ಷಟ್‌ಸ್ಥಲ ಲಿಂಗಾಂಗಯೋಗಿಗಳ ಪರಿ ಎಂತೆನಲು ಪ್ರಭುದೇವರು— ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಈ ಐದು ಕರ್ಮಯೋಗಂಗಳು. ಧ್ಯಾನ, ಧಾರಣ, ಸಮಾಧಿ ಇವು ಜ್ಞಾನಯೋಗಗಳು. ಇವುಗಳಲ್ಲಿ ಐದು ಪೂರ್ವಯೋಗ ಗಳನ್ನು ಬಿಟ್ಟು ಉತ್ತರಯೋಗವಾದ ಧ್ಯಾನ, ಧಾರಣ, ಸಮಾಧಿ, ಇವುಗಳು ಷಟ್‌ಸಲ ಲಿಂಗಾಂಗಯೋಗಿಗಳಿಗೂ ಉಂಟು. ಅದೆಂತೆಂದೊಡೆ ಅಷ್ಟಾಂಗಯೋಗಗಳ ಲಕ್ಷ್ಯಾನು ಸಂಧಾನ ಪರಿಯಲ್ಲಿ ಷಟ್‌ಸ್ಥಲ ಜ್ಞಾನಿಗಳ ಧ್ಯಾನ, ಧಾರಣ, ಸಮಾಧಿಯ ರೀತಿಯು ಬೇರೆ ಇರುತ್ತದೆ. ಅದು ಹೇಗೆ ಅಂದರೆ ಗುರುಕರುಣದಿಂದ ಸಮ್ಯಜ್ಞಾನವಂ ಪಡೆದು ಆ ಗುರುಕರುಣದಿಂದಲೇ ಅಖಂಡ ಮಹಾ ಪ್ರಕಾಶಲಿಂಗವಂ ಪ್ರತ್ಯಕ್ಷವಂ ಮಾಡಿಕೊಂಡು ಆ ಸಮ್ಯಜ್ಞಾನದೃಕ್ಕಿನಿಂದ ಆ ಲಿಂಗವಂ ನೋಡಿ ಶಿವಮಂತ್ರಯುಕ್ತರಾಗಿ ಧ್ಯಾನಿಸುವದೇ ಧ್ಯಾನಯೋಗ. ಆ ಸಮ್ಯಜ್ಞಾನದಿಂದ ಷಟ್‌ಸ್ಥಲ ಲಿಂಗಾಂಗ ಸಂಯೋಗಾನುಭಾವಿ ಯಾಗಿ ಆ ಲಿಂಗಸುಖವನ್ನು ಅನುಭವಿಸುತ್ತಿರ್ಪುದೀಗ ಧಾರಣಯೋಗವೆಂದೂ, ಇಂತು ಲಿಂಗಾಂಗ ಸಂಬಂಧದಿಂದ ಲಿಂಗಸ್ವರೂಪನಾಗಿ ಲಿಂಗಸುಖವನರಿದನುಭವಿಸುತ್ತಿರ್ಪ ಅರಿವಡಗಿ ನಿಂದುದೇ ಸಮಾಧಿಯೋಗವೆಂದೂ ಪ್ರಭುದೇವರು ಬೋಧಿಸಿದರು. ಈ ಷಟ್‌ಸ್ಥಲ ಬ್ರಹ್ಮೋಪದೇಶವನ್ನು ಅತ್ಯಂತ ರಹಸ್ಯವಾಗಿ ೨೭ ಪದಗಳಿಂದ ಮಾಡಿರುತ್ತಾರೆ. ಇಲ್ಲಿ ಒಂದೆರಡು ಪದ್ಯಗಳನ್ನು ನೋಡಿದರೆ ಅವರ ಶಿವಯೋಗದ ರಹಸ್ಯವು ಸ್ಪಷ್ಟವಾಗಿ ತಿಳಿಯುವದು.

ಪ್ರಭುದೇವರ ಮಂತ್ರಗೋಪ್ಯ :—"ರಾಮ ಕೇಳಾ ಜ್ಞಾನ । ಸೋಮ ಕೇಳನು ಭಾವ । ಸಿದ್ಧರಾಮ ಕೇಳಾನಂದ ನಿಂದ ನಿಜವ" ಇದು ಎಲ್ಲ ಪದ್ಯಗಳ ಪಲ್ಲವಿಯಾಗಿರು ತ್ತದೆ. ಅಂದರೆ ಆನಂದಮೂರ್ತಿಯಾದ ಸಿದ್ಧರಾಮನೇ ಜ್ಞಾನದಲ್ಲಿ (ತನ್ನನ್ನು ತಾನು ತಿಳಿಯುವದರಲ್ಲಿ) ಶಿವಶಕ್ತಿ ಚಿದಾತ್ಮಸ್ವರೂಪನೇ (ಈ ಸ್ಥಿತಿಯೇ ಧ್ಯಾನಯೋಗ) ಕೇಳು, ಕ್ರಿಯಾಜ್ಞಾನಾನುಭವವುಳ್ಳ ಸಿದ್ಧಪ್ರಕಾಶನೇ (ಇದೇ ಧಾರಣಯೋಗ) ಕೇಳು, ಸದಾನಂದ ದಲ್ಲಿ ನಿರ್ಭರವಾದ ನಿಜಸ್ವರೂಪವನ್ನು (ಇದೇ ಸಮಾಧಿಯೋಗ) ಕೇಳು. ಹೀಗೆ ಜ್ಞಾನ ವೆಂಬುದೇ ಧ್ಯಾನಯೋಗವೆಂದೂ, ಅನುಭಾವವೆಂಬುದೇ ಧಾರಣಯೋಗವೆಂದೂ, ಆನಂದವು ನಿಂದ ನಿಜವೇ ಸಮಾಧಿಯೋಗವೆಂದೂ, ಹೀಗೆ ಧ್ಯಾನ ಧಾರಣ ಸಮಾಧಿ ತಿಳಿ ಎಂದೂ ಪ್ರಭುದೇವರು ಉಪದೇಶಿಸಿರುತ್ತಾರೆ. ಆರಂಭದಲ್ಲಿ ಜ್ಞಾನವೇ ಧ್ಯಾನಯೋಗ ವೆಂದು ಹೇಳುತ್ತಾರೆ.

"ಎಂಟೆಸಳದಾ ಕಮಲದಾನವ ಬ್ರಹ್ಮಪುರದೊಳಗೆ । ಎಂಟು ಬೀದಿ
ಯೊಳೆಂಟು ಕರಿಗಳುಂಟು । ಎಂಟು ಕರಿಗಳ ಸುಟ್ಟು ಕಂಟಕಂಗಳಿಗೆಲಿದು ।
ದಾಂಟಿದೆನು ಸಂಸಾರ ಸಾಗರವ"

ಈ ಪದ್ಯಕ್ಕೆ ಹಂಪೆಯ ಕಲ್ಮಠ ಪ್ರಭುದೇವರು ಕೆಳಗೆ ಬರೆದಂತೆ ಟೀಕೆಯನ್ನು ಮಾಡಿರುತ್ತಾರೆ.

ಬ್ರಹ್ಮಾಂಶಿಕವಪ್ಪ ಆತ್ಮನು ಪಂಚಬ್ರಹ್ಮದಿಂದ ಹುಟ್ಟಿದ ಪಂಚಭೌತಿಕ ದೇಹ ದಿಂದ ಕೂಡಿರಲು ಇಂತೆರಡು ವಿಧ ಬ್ರಹ್ಮದಿಂದೊಗೆದ ಕೃತ್ರಿಮದೇಹವೇ ನವಬ್ರಹ್ಮಪುರ. ಆ ದೇಹದಲ್ಲಿ ಹೃದಯಕಮಲ ಎಂಟೆಸಳು ಸಂಚಲಗುಣರೂಪವಾಗಿ ಇರುವವು. ಇವುಗಳಲ್ಲಿ ಅಷ್ಟತನುವೆಂಬ ಎಂಟು ಬೀದಿಗಳು; ಆ ಬೀದಿಗಳಲ್ಲಿ ಅಷ್ಟಮದಗಳೆಂಬ ಎಂಟು ಆನೆಗಳಿರುತ್ತವೆ. ಅಷ್ಟದಳಗಳ ಗುಣವಿಡಿದು ಈ ಎಂಟು ಮದಗಳಿಂದ ದೇಹವು ತಾನೆಂದು ಜೀವನು ತಾನಾಗಿ ಸತ್ತುಹುಟ್ಟುತ್ತಿರುವದೇ ಕಂಟಕ. ಹೀಗೆ ಇರುವ ದೇಹದಲ್ಲಿ ಜ್ಞಾನೋದಯವಾಗಿ ಆ ಜ್ಞಾನಾಗ್ನಿಯಿಂದಲೇ ಆ ದೇಹದ ಗುಣಗಳ ಅಷ್ಟಮದಗಳೆಲ್ಲ ವನ್ನೂ ದಹನಮಾಡಿ ಈ ಜ್ಞಾನಮುಖದಿಂದ ದೇಹಭಾವನಳಿದು ಶಿವಭಾವ ಧ್ಯಾನದಿಂದ ಜನನಮರಣಗಳೆಂಬ ಕಂಟಕಗಳನ್ನು ಪರಿಹರಿಸಿ ಭವಸಾಗರವನ್ನು ಜಯಿಸಿದೆನು— ಅಂದರೆ ಜ್ಞಾನದಿಂದ ದೇಹವಾಸನೆಯು ನಷ್ಟವಾಗಿ ಆ ಶಿವಜ್ಞಾನದಿಂದಲೇ ಭವವು (ಮರಳಿ ಹುಟ್ಟುವದು) ತಪ್ಪುವದಲ್ಲದೆ ಉಳಿದ ಅಷ್ಟಾಂಗಯೋಗಂಗಳ ತನುದಂಡನೆಯ ಕರ್ಮದಿಂದ ದೇಹವಾಸನೆ ಹೋಗುವದಿಲ್ಲ.

ಇನ್ನು ಕೆಲವು ಪದ್ಯಗಳ ಸಾರಾಂಶವನ್ನು ಮಾತ್ರ ಇಲ್ಲಿ ನೋಡೋಣ. ಹೀಗೆ ಮನಕರಣಂಗಳ ವಾಯುಗುಣವ ಕಳೆಯಲು ಶಿವಜ್ಞಾನವೇ ಸಾಧನವೆಂದು ಶಿವನ ಅಖಂಡತ್ವವನ್ನು ತಿಳಿದು ಧ್ಯಾನಿಸುವದೇ ಧ್ಯಾನಯೋಗ. ಉಸುರು ಹಿಡಿದುಬ್ಬರಿಸಿ ಉಬ್ಬುತ ವಾಯುಮುಖದಿಂದ ಸಾಧಿಸಿ ಧ್ಯಾನಿಸುವ ಧ್ಯಾನಯೋಗಿಗಳನ್ನು ಆ ವಾಯುವೇ ಭವಭಯದಲ್ಲಿ ಕೊಂದು ಕೂಗುವದು. ಹೀಗೆ ಅಖಂಡ ಪರಶಿವತತ್ವವು ತಾನೊಂದೇ ತನ್ನ ಚಿದ್ವಿಲಾಸಲೀಲೆಯಿಂದ ಪರನಾದ ಬಿಂದುಕಲಾರೂಪಿನಿಂದ ಷಡ್ವಿಧ ಲಿಂಗವಾಗು ತ್ತಲೆ ಷಡ್ವಿಧ ಆತ್ಮನಾಗಿ, ಷಡ್ವಿಧ ಭಕ್ತಿಯ ತಾಳಿ, ಷಡಕ್ಷರಿಯ ಮಂತ್ರಧ್ಯಾನ ಸ್ವರೂಪದಿಂದ ಅಂಗವಾಯಿತ್ತು. ಹೀಗೆ ಲಿಂಗಾಂಗವೆಂಬೆರಡಾಗಿ ಉಪಾಸ್ಯ ಉಪಾಸಕತ್ವ ವಾದುದು ಒಂದೇ ವಸ್ತುವೆಂದು ಶ್ರೀ ಗುರುವು ಆ ಷಡಕ್ಷರಿಯ ಮಂತ್ರಜ್ಞಾನದೃಷ್ಟಿ ಯಿಂದ ನೋಡಿ ತೆಗೆದುಕೊಟ್ಟ ಇಷ್ಟಲಿಂಗದ ಕಲಾರೂಪವನ್ನು ಭೇದಿಸಿ ಆ ಷಡಕ್ಷರಿಯ ಮಂತ್ರಜ್ಞಾನದಿಂದ ನೋಡಿ ಧ್ಯಾನಿಸುವದೇ ಧ್ಯಾನಯೋಗ. ಇದನ್ನು ಬಿಟ್ಟು ಬೇರೆ ಬ್ರಹ್ಮರಂಧ್ರದಲ್ಲಿ ಶಿವಕಲೆಯುಂಟೆಂದು ಹಠಕರ್ಮಯೋಗಂಗಳಿಂದ ಸಾಧಿಸಿ ಲಕ್ಷ್ಯವಿಟ್ಟು ಧ್ಯಾನಿಸಿ ಕೂಡುವೆವೆಂಬ ಯೋಗಭ್ರಮಿತರಿಗೆ ಶಿವಧ್ಯಾನ ಸಾಧ್ಯವಾಗದು. ಇನ್ನು ಧಾರಣಯೋಗದ ಬಗ್ಗೆ ಲಿಂಗದಲ್ಲಿ ಕ್ರಿಯಾಜ್ಞಾನದಿಂದ ಸರ್ವೇಂದ್ರಿಯ ಸುಖ ಗಳನ್ನೂ ಲಿಂಗಾರ್ಪಿತವಮಾಡಿ ಆ ಲಿಂಗದಲ್ಲಿ ಭಿನ್ನವಳಿದು ಕೂಡಿದ ಶರಣನೇ ಶಿವಯೋಗಿಯು. ಇದನರಿಯದೆ ಬರುಕಾಯರಾಗಿ (ವ್ಯರ್ಥದೇಹವುಳ್ಳವರಾಗಿ) ಕಾಯ ದೊಳಗೆ ಲಿಂಗವ ಹುಡುಕಿ ತೋರಿಸುವ ಭಿನ್ನಜ್ಞಾನದ ತನುಮುಖರಿಗೆ (ದೇಹಭಾವನೆ ಯುಳ್ಳವರಿಗೆ) ಶಿವಯೋಗಧಾರಣವು ಎಂದೂ ಆಗುವದಿಲ್ಲ. ಜ್ಞಾನಕ್ರಿಯೆಗಳಿಂದ ದೇಹವಾಸನೆ ಕಳೆದು ನೋಡಲು ಅಖಂಡ ಪರಿಪೂರ್ಣ ನಿರವಯ ಲಿಂಗವು ತಾನೇಯಾಗಿ ರ್ದುದು ಪ್ರತ್ಯಕ್ಷವಾಗಿ ತೋರುತ್ತದೆ. ಈ ಅಖಂಡ ಮಹಾಜ್ಞಾನದಿಂದ ಶಿವೋಹಂ (ನಾನು ಶಿವನು) ಎಂದು ಅಖಂಡ ಪರಶಿವತ್ವವ ಪಡೆದು ಆ ದೃಷ್ಟಿಗೆ ಮಾಯೆಯಿಂದ ಕಾಣುವ ಭಿನ್ನತೋರಿಕೆಯೆಲ್ಲವೂ ಹುಸಿಯಾಗಿ ತನುಮಧ್ಯದ ಷಡುಚಕ್ರಂಗಳ ಖಂಡಿತ ಲಕ್ಷಣಂಗಳನು ಒಳಗೊಂಡು ಅಖಂಡನಾಗಿರ್ದೆನು. ಹೀಗಿರುವ ಅಖಂಡ ಶಿವಯೋಗ

ವನು ತಿಳಿಯದೆ ಅಷ್ಟಾಂಗಯೋಗದಿಂದ ಷಡುಚಕ್ರಂಗಳ ಭೇದಿಸಿ ಪರವಸ್ತುವನ್ನು ಲಕ್ಷ್ಯವಿಟ್ಟು ಕೂಡುವೆನೆಂದು ತನುಮುಖದಲ್ಲಿ (ದೇಹಭಾವವಿಟ್ಟುಕೊಂಡು) ಸಾಧಿಸುವ ಯೋಗಿಗಳಿಗೆ ಯಾವಾಗಲೂ ತನುವು ಕೆಡದೆ ಹಾಗೆಯೇ ಉಳಿದಿರುತ್ತದೆ.

ಇಂತು ಜ್ಞಾನಕ್ರಿಯೆಯಿಂದ ಷಟ್‌ಸ್ಥಲ ಲಿಂಗಾಂಗ ಸಂಬಂಧದಿಂದ ಶಿವತತ್ವಮಂ ಪಡೆದು ಶಿವಸುಖವನು ಅನುಭವಿಸುತ್ತಿರ್ಪ ಅನುಭಾವವೇ ಧಾರಣಯೋಗವೆಂದು ಸಿದ್ಧಾಂತಪಡಿಸಿರುತ್ತಾರೆ.

೩೦೬

"ಏಕರಸಮಯವಾಗಿ ಏಕರಸಸಜ್ಜೀವ ಆಕಾರ ನಿರಾಕಾರವೇಕದಲಿ ಆಕಾರಪಡಗಿ ನದಿಯೊಳಗೆ ನದಿ ಬೆರೆದಂತೆ ಸಾಕಾರವಡಗಿದ ಪರಮ ಯೋಗಿ"

ಲಿಂಗಾಂಗವು ಏಕತ್ವದಿಂದ ಸ್ನೇಹ (ರಸ) ಸ್ವರೂಪವಾಗಿರುವದು. ಎಂದರೆ ಏಕವಾದ ಆ ಪರತತ್ವವೇ ಸ್ನೇಹ (ರಸರೂಪ) ದಿಂದ ಸದ್ರೂಪ (ಸಾಕಾರರೂಪ ಜೀವವೆಂದರೆ ಅಂಗ) ವಾಗುವದು. ನಿವೃತ್ತಿಮಾರ್ಗದಲ್ಲಿ ಅದೇ ಆಕಾರ (ಅಂಗ) ನಿರಾಕಾರ (ಲಿಂಗ) ಈ ಎರಡೂ ಏಕಸ್ವರೂಪದಲ್ಲಿ ತೋರಿ ಅಂಗವು ಲಿಂಗದಲ್ಲಿ ವಿಶ್ರಾಂತಿಯಾಗಿ (ಆಕಾರಪಡಗಿ) ಒಂದು ನದಿಯೊಳಗೆ ಮತ್ತೊಂದು ನದಿ ಸೇರಿ ಸಮುದ್ರದಲ್ಲಿ ಸಾಕಾರವಡಗುವಂತೆ (ಅನೇಕ ರೂಪಾದ) ಕ್ರಿಯೆಗಳೆಲ್ಲವನ್ನೂ ವಿಶ್ರಾಂತಿ ಹೊಂದಿಸಿದಾತನೇ ಮಹಾ ಯೋಗೀಶ್ವರನು. ಷಟ್‌ಸ್ಥಲ ಜ್ಞಾನಕ್ರಿಯೆಯಿಂದ ಆಚರಿಸುತ್ತಿರುವ ಶರಣನ ಅರಿವಿಂಗೆ ಲಿಂಗವು ಪ್ರತ್ಯಕ್ಷ ವಾಗಿರ್ದುದ ಕಂಡು ಮಹಾಜ್ಞಾನದಿಂದ ಬಿಡದೆ ಕ್ರಿಯೆಯನಾಚರಿಸಿದ ಶರಣನು ಲಿಂಗ ಸ್ವರೂಪನಾದನು. ಇದು ಶಿವಯೋಗ ಸಮಾಧಿಯು. ಉಳಿದ ಅಷ್ಟಾಂಗಯೋಗ ಗಳಿಂದ ಭೇದಿಸುವ ಭೇದಕ ಯೋಗಿಗಳ ಅರಿವಿಂಗೆ ಅಭೇದ್ಯವಾಗಿಪ್ಪುದು ಶಿವತತ್ವವು.

ಇಲ್ಲಿಯವರೆಗೆ ಮಹಾಶಿವಯೋಗಿವರೇಣ್ಯರಾದ ಪ್ರಭುದೇವರು ಸಿದ್ಧರಾಮನಿಗೆ ಉಪದೇಶಿಸಿದ ವಿಷಯದಲ್ಲಿ ಕೆಲವು ಪದ್ಯಗಳ ತಾತ್ಪರ್ಯವನ್ನು ವಿವರಿಸಿದ್ದಾಯಿತು. ಇದರಿಂದ ವೀರಶೈವ ಶರಣರು ಅಷ್ಟಾಂಗಯೋಗಗಳನ್ನು ಶಿವಯೋಗಕ್ಕೆ ಹೇಗೆ ಮಾರ್ಪಡಿಸಿರುತಾರೆಂಬುವದು ಸ್ಪಷ್ಟವಾಗಿ ತಿಳಿದುಬರುತ್ತದೆ. ಇದು ಗಹನವಾದ ವಿಷಯವಾದುದರಿಂದ ಅನೇಕ ಶರಣರ ವಚನಗಳನ್ನು ಉದಾಹರಿಸಿ ಈ ವಿಷಯ ಸಿದ್ಧಾಂತ ಪಡಿಸಿದ್ದಾಯಿತು. ಇನ್ನು ಶಿವಯೋಗವಲ್ಲದ ಇತರ ಯೋಗಗಳನ್ನು ಶರಣರು ಹೇಗೆ ಖಂಡಿಸಿರುತ್ತಾರೆಂಬುವದಕ್ಕೆ ಕೆಲವು ಶರಣರ ವಚನಗಳನ್ನು ಇಲ್ಲಿ ಕೊಡಲಾಗುವದು.

೩೦೭

ತೋಂಟದ ಸಿದ್ಧಲಿಂಗ ಯತಿಗಳು—

"ಲಂಬಿಕಾ ಯೋಗಿಗಳ ಡೊಂಬರಿಗೆ ಸರಿಯೆಂಬೆ ಹಠಯೋಗಿಗಳ ಆಟಮಾಟಕಾರರೆಂಬೆ ಅಷ್ಟಾಂಗಯೋಗಿಗಳ ಕಷ್ಟಕರ್ಮಿಗಳೆಂಬೆ ಪವನ ಯೋಗಿಗಳ ಪ್ರಪಂಚಿಗಳೆಂಬೆ ಲಯಯೋಗಿಗಳ ನಾಯಿಗಿಂತ ಕಡೆ ಎಂಬೆ ಅದೇನು ಕಾರಣವೆಂದಡೆ ಲಯಯೋಗವೆಂಬುವದು ನಾನಾ ದರುಶನದಲ್ಲಿ ವರ್ತಿಸುವದಾಗಿ ಅದನು ಶಿವಯೋಗಿಗಳು ಬಲ್ಲರು ಮಂತ್ರಯೋಗ ಎಂಬು

ವದು ಸರ್ವ ಸಂದೇಹಕಿಕ್ಕಿ ಕೊಲುತಿರ್ಪುದು. ಅದೇನು ಕಾರಣವೆಂದರೆ ಮಂತ್ರವೇ ಲಿಂಗಲಿಂಗವೇ ಮಂತ್ರವೆಂದರಿದು ಲಿಂಗನೆನಹ ಸಂಬಂಧಿಸಿ ಕೊಳ್ಳಲರಿಯದೆ ಲಿಂಗವಿರಹಿತವಾಗಿ ಮಾಡುತಿಪ್ಪರಾಗಿ ಅದನು ಲಿಂಗ ಸಂಬಂಧಿಗಳು ಮೆಚ್ಚರು ನೋಡಾ, ಅದೇನು ಕಾರಣವೆಂದರೆ ಕೆಲವರು ಶೈವರು ಮಾಡುವರಾಗಿ ರಾಜಯೋಗವೆಂಬುದು ಗಾಜುಗೋಜು ನೋಡಾ ಅದನು ಲಿಂಗವಿರಹಿತರಾಗಿ ಜಾತೃ, ಜ್ಞಾನ, ಜ್ಞೇಯ ಒಂದಾದಲ್ಲಿಯೇ ಯೋಗವೆನುತಿಪ್ಪರಾಗಿ ಇವು ಒಂದೂ ಲಿಂಗಾಂಗಯೋಗದ ಹೆಜ್ಜೆಯಲ್ಲಿ ಅದುಕಾರಣ ಲಿಂಗನಿಷ್ಠರು ಮೆಚ್ಚರು. ಅದೇನು ಕಾರಣವೆಂದರೆ ಲಿಂಗವ ತೆಗೆದರೆ ಲಿಂಗದೊಡನೆ ಪ್ರಾಣ ಹೋಗದಾಗಿ ಅದೆಲ್ಲಿಯ ಯೋಗಪಯ್ಯಾ ಭ್ರಾಂತಿಯೋಗ ಇದುಕಾರಣ ನಿಮ್ಮ ಶರಣರು ಲಿಂಗಪ್ರಾಣಿಗಳು ಪ್ರಾಣ ಲಿಂಗ ಸಂಬಂಧಿಗಳು, ಪ್ರಸಾದಮುಕ್ತರು. ಈ ಮೂರು ಪ್ರಕಾರದಲ್ಲಿ ಕೂಡುತಿಪ್ಪರು ಶಿವಯೋಗಿಗಳು. ಇದುಕಾರಣ ನಿಮ್ಮ ಶರಣರು ಸ್ವಾನು ಭವ ಜ್ಞಾನ ಶುದ್ಧಯೋಗದಲ್ಲಿ ಸ್ವರೂಪಜ್ಞಾನಿಗಳು ಕಾಣಾ ಮಹಾಲಿಂಗ ಗುರು ಸಿದ್ಧೇಶ್ವರಪ್ರಭುವೇ”

**ಆದಯ್ಯನವರ ವಚನ—ಪುಟ ೨೯**

“ಹಠಯೋಗ, ಲಂಬಿಕಾಯೋಗ, ಆತ್ಮಯೋಗ, ಸಿದ್ಧಿಯೋಗ, ಪಿಶಾಚಯೋಗ, ಅಷ್ಟಾಂಗಯೋಗಗಳೆಂಬ ಷಡ್ವಿಧ ಕರ್ಮಯೋಗಂ ಗಳೊಳು ಶೋಷನೆ, ದೋಹನೆ, ಸ್ಥಾಪನೆ, ಚಾಲನೆ, ಕಳಾಪಮಂ ಮಾಡಿ ತ್ರಿದೋಷಾದಿಗಳಂ ಪ್ರವರ್ತಿಸಲೀಯದೆ ಗಜಕರಣಂಗಳಿಂ ಪವನಧಾರಣೆಯಿಂ ಕಲ್ಪಯೋಗಂಗಳಿಂ ಮೂಲಿಕಾ ಬಂಧದಿಂ ಬಂಧಿಸಿ ಘಟಮಂ ನಟಿಸುವದು ಹಠಯೋಗ ಪವನಾಭ್ಯಾಸಗಳಿಂದ ಅಭ್ಯಾಸಯೋಗ ಕ್ರಮುಕ್ರಮಂಗಳಿಂ ಜಿಹ್ವೆಯ ಬೆಳಸಿ ಹಠಸಮ್ಮಿಶ್ರದಿಂ ಷಡಾಧಾರದ ಪಶ್ಚಿಮದ ಪಥವಿಡಿದು ಪ್ರಾಣಪವನವ ಮಸ್ತಕಕ್ಕೇರಿಸಿ ಜಿಹ್ವೆಯ ಸುಷುಮ್ನೆಯಲ್ಲಿಟ್ಟು ಸೋಮ ಪಾನವ ಶೇವಿಸಿ ಸಪ್ತಸ್ಥಾನ ನವಚಕ್ರದಲ್ಲಿ ಸಿಂದು ಮುಕ್ತ್ಯಂಬಿಕೆಯೊಡ ಗೂಡುವುದು ಲಂಬಿಕಾಯೋಗ ಆತ್ಮನಂ ಭೇದಿಸಿ ಪ್ರಾಣವಾಯು ನಾಡಿಗಳ ನರಿತು ಹಿಡಿವ ಭೇದಮಂ ತಿಳಿದು ತೆಗೆವ ಬಿಗಿವ ಪಂಚಮಂ ಕಂಡು ಒಡ್ಡಿಯಾಣ ಬಂಧ, ಜಾಳಂಧರ ಬಂಧ, ಶಾಣುಕಾ ಮುದ್ರೆ, ಭ್ರೂ ಸಂಕೋಚ ಬ್ರಹ್ಮಸ್ಥಾನದುತ್ತರ ನಾಡಿಯಿಂದಾತ್ಮನನಾತ್ಮಲಿಂಗದಲ್ಲಿ ಸಂಯೋಗವ ಮಾಡುವದಾತ್ಮಯೋಗ ಅಂಜನಾಸಿದ್ಧಿ, ಮೂಲಿಕಾಸಿದ್ಧಿ, ಘುಟಿಕಾಸಿದ್ಧಿ, ಶರೀರಸಿದ್ಧಿ, ಪರಕಾಯಪ್ರವೇಶ, ತ್ರಿಕಾಲಜ್ಞಾನ, ದೂರ ಶ್ರವಣ, ದೂರದೃಷ್ಟಿಯೊಳಗಾದ ಅಷ್ಟಮಹಾಸಿದ್ಧಿಯಂ ಪಡೆದು ರಸಸಿದ್ಧಿ, ಪಾಷಾಣಸಿದ್ಧಿ, ಲೋಹಸಿದ್ಧಿ, ವಯಸ್ತಂಭ, ಪರವಂಚನೆ, ಕಾಯವಂಚನೆ, ವೇದಶಾಸ್ತ್ರಸಿದ್ಧಿ, ಭರತಸಿದ್ಧಿ, ಗಾಂಧರ್ವಸಿದ್ಧಿ, ಕಿನ್ನರಸಿದ್ಧಿ, ಪಿಶಾಚಸಿದ್ಧಿ, ಖೇಚರತ್ವ, ಮಹೇಂದ್ರಜಾಲದೊಳಗಾದ ಚೌಷಷ್ಟಿವಿದ್ಯಾಸಿದ್ಧಿ, ಅಣಿಮಾ,

ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವವೆಂಬ ಅಷ್ಟೈಶ್ವರ್ಯಸಿದ್ಧಿ, ವ್ಯಾಳಿ, ಚರ್ಚಪಿ, ಕೋರಾಂಟ, ರತ್ನಘೋಷಿ, ಭೂತನಾಥ, ನಾಗಾರ್ಜುನ, ಮತ್ಸ್ಯೇಂದ್ರ, ಗೋರಕ್ಷ, ಮಂಜುನಾಥ, ನವನಾಥ ಸಿದ್ಧರೊಳಗಾದ ಸಮಸ್ತ ಸಿದ್ಧಿ ಬುದ್ಧಿಗಳಿಂ ಲಿಂಗವ ನರಸಿ ಅಟ್ಟಿ ಮುಟ್ಟಿ ಹಿಡಿದೆನೆಂಬುವದೀಗ ಸಿದ್ಧಿಯೋಗ, ಪಿಶಾಚತ್ವದಿಂ ತ್ರಿಭುವನಿಯಂ ಸೇವಿಸಿ, ಅಮಂಗಳಂ ಸೇವಿಸಿ, ಅಮರಿಭ್ರಮರಾದೇವಿ, ಅಮರಿತ್ರಿಪುರಾಂತಕಿ, ಅಮರಿಕಾಲಸಂಹಾರಿ, ಅಮರಿತ್ರೈಲೋಕ್ಯಸಾಧನಿ ಇಂತೆಂಬ ಶ್ರುತಿಗಳು ವಜ್ರ ಅಮರಿಗಳಂ ಅಂಗಲೇಪನಂ ಮಾಡಿ ಶುಲಕವಂ ಸೇವಿಸಿ, ಭೂತ ಸಂಕುಳಂಗಳೊಡನಾಡಿ ಅಜ್ಞಾನವಶದಿಂ ಲಿಂಗವನೇನೆಂದರಿಯದೆ ಕ್ಷೀಣವೃತ್ತಿಯ ಪಿಶಾಚತ್ವದಿಂ ಇಪ್ಪುದು ಪಿಶಾಚಿಯೋಗ. ಹಿಂಸೆಯ ನುಳಿದು ಶೌಚತ್ವದಿಂ, ಬ್ರಹ್ಮಚರ್ಯದಿಂ, ತತ್ವಂಗಳನಾವಾಶಿಸುತ್ತಿಪ್ಪುದು ಯಮಯೋಗ, ವಿವೇಕವಿಚಾರತ್ವದಿಂ ತತ್ವಂಗಳನರಿತು ಆಚರಿಸಿ ಅಡಿಯಿಟ್ಟು ನಡೆವುದು ನಿಯಮಯೋಗ, ಪದ್ಮಾಸನ, ಸಿದ್ಧಾಸನ, ಬುದ್ಧಾಸನ, ವಜ್ರಾಸನ, ಮಯೂರಾಸನ, ಕೂರ್ಮಾಸನ, ಕುಕ್ಕುಟಾಸನ, ಮಂಡೂಕಾಸನ, ಗೋಮುಖಾಸನ, ಮತ್ಸ್ಯಾಸನ, ಗರುಡಾಸನ, ಅರ್ಧಾಸನ, ವೀರಾಸನ, ಸ್ಮಶಾನಾಸನ, ಹಸ್ತಾಸನ, ಮೌಕ್ತಿಕಾಸನ, ಕುಠಾರಾಸನ, ಸಿಂಹಾಸನ, ಮಧ್ಯಲವಣಿ, ಶಿರೋಲವಣಿಯೊಳಗಾದ ಆಸನ ಬಂಧಂಗಳಿಂದ ಚರಿಸುವುದು ಆಸನಯೋಗತತ್ವ ಮೂವತ್ತಾರಕ್ಕೆ ಪ್ರಾಣವೇ ಮೂಲವೆಂದರಿತು ಷಡಾಧಾರ ಚಕ್ರಂಗಳ, ಅಕ್ಷರ ವರ್ಣಂಗಳ ತಿಳಿದು ಮೇಲಿನ ಅಜನಾಳ, ಬ್ರಹ್ಮಸ್ಥಾನ, ತುರಿಯಾತೀತ, ಓಂಕಾರ ಪ್ರಣಮವನರಿವುದು ಪ್ರಾಣಾಯಾಮಯೋಗ ಪ್ರತ್ಯಾಹಾರಯೋಗಕ್ರಮ ಗಳಿಂದಾಸನ ಪ್ರಮಾಣವನಾಹಾರಿಸುವುದು, ಪ್ರತ್ಯಾಹಾರಯೋಗ ಪ್ರಣವ ಕ್ಕತೀತವಾದ ಪರಶಿವಮೂರ್ತಿ ಮನದಲ್ಲಿ ಚಿಗುರ್ತು ಅಂತರಂಗದಲ್ಲಿ ಧ್ಯಾನಾರೂಢನಾಗಿ ಧ್ಯಾನಿಸುವದು ಧ್ಯಾನಯೋಗ. ಆ ಪರಶಿವನ ಮೂರ್ತಿಯೇ ಇಷ್ಟಲಿಂಗವೆಂಬ ಭಾವನೆಯಿಂದಷ್ಟವಿಧಾರ್ಚನೆ ಷೋಡ ಶೋಪಚಾರದಿಂದಿಷ್ಟಲಿಂಗಧಾರಣೆಯಿಂದಿರ್ಪುದು ಧಾರಣ ಎನಿಸಿ ಅಪ್ರ ಶಿಖಾಸಾನದಿಂದುತ್ತುಂಗ ವಿಭಾಗೆಯ ಚಿತ್ತು ಪ್ರಭೆಯಿಂದುಜ್ವಳ ತೇಜ ಸ್ವಯಂ ಸ್ವಯಂಪ್ರಕಾಶ ದಿವ್ಯ ತೇಜದಿಂದೊಪ್ಪಿಪ್ಪ ಮಹಾ ಘನಪರವಸ್ತುವ ನಿದಿರಿಟ್ಟೀಕ್ಷಿಸಿ, ಆ ಮಹಾಪ್ರಕಾಶದಲ್ಲಿ ಒಡಗೂಡಿ ತಾನೆತಾನಾಗಿ ಜಗದ್ವ್ಯವಹರಣೆಯ ಏನೆಂದರಿಯದೆ ಪರಮಕಾಷ್ಠೆಯ ಸಮಾಧಿಯಲ್ಲಿ ರ್ಪುದು ಸಮಾಧಿಯೋಗ. ಇಂತಪ್ಪ ಅಷ್ಟಯೋಗಂಗಳೊಳಗಾದ ಷಡ್ವಿಧ ಯೋಗ ಕರ್ಮಂಗಳಂ ಮೆಟ್ಟಿ ಚತುರ್ವಿಧ ಪದವಿಯಂ ಹೊದ್ದದೆ ಫಲ ಭೋಗಂಗಳಂ ಮುಟ್ಟದೆ ಖ್ಯಾತಿ ಲಾಭಪೂಜೆಯಂ ತಟ್ಟದೆ ಇಹಪರಂಗಳಂ ಸಾರದೆ, ಭವಬಂಧನಕ್ಕೆ ಬಾರದೆ, ಗೆಲ್ಲಸೊಲ್ಲಕ್ಕೆ ಹಾರದೆ, ತನುವಿನಿಚ್ಛೆಯಲ್ಲಿ ಸುಳಿಯದೆ, ಮನದಿಚ್ಛೆಯಲ್ಲಿ ಹರಿಯದೆ, ಪ್ರಾಣನ ಸುಳುಕಿನಲ್ಲಿ ಶಿಲ್ಕದೆ,

ಪ್ರಕೃತಿವಶಕ್ಕೊಳಗಾದ ಇಂದ್ರಿಯಂಗಳಿಗೆ ವೈ ಒಡ್ಡನೆ, ಸರ್ವಸಂದೇಹ ನಿವೃತ್ತಿಯಾಗಿ ನಿಂದಲ್ಲಿ ನಿರಾಳ, ನಡೆದಲ್ಲಿ ನಿರ್ಗಮನಿ, ನುಡಿಯಲ್ಲಿ ನಿಶ್ಶಬ್ದ ನುಳಿದರೊಡಲಿಲ್ಲದುಪಾಧಿಯರತು, ಅಂಗವೇ ಲಿಂಗವಾಗಿ ಲಿಂಗವೇ ಪ್ರಾಣವಾಗಿ, ಪ್ರಾಣವೇ ಪ್ರಸಾದವಾಗಿ, ಪ್ರಸಾದವೇ ಪರಿಪೂರ್ಣವಾಗಿ, ನಿಜಲಿಂಗೈಕ್ಯವಾಗಿ, ನಿಜಸುಖ ಸಂಬಂಧಿಯಾಗಿ, ನಿಜಯೋಗ ಸನ್ನಿಹಿತ ವಾಗಿ ಕಾಯವಿದ್ದೂ ಅಕಾಯರಾಗಿಪ್ಪರಯ್ಯ ಸೌರಾಷ್ಟ್ರ ಸೋಮೇಶ್ವರ ನಿಮ್ಮ ಶರಣರು''

ಮೇಲೆ ಉದಾಹರಿಸಿದ ಶ್ರೀ ಸಿದ್ಧೇಶ್ವರ ಮತ್ತು ಆದಯ್ಯನವರ ಎರಡೂ ವಚನ ಗಳಿಂದ ಲಿಂಗಾಂಗವಲ್ಲದ ಇತರ ಯೋಗಗಳನ್ನು ನಂಬಬಾರದೆಂಬುವದೇ ತಿಳಿದು ಬರುತ್ತದೆ. ಇನ್ನೂ ಒಂದೆರಡು ವಚನಗಳನ್ನು ಉದಾಹರಿಸಿ ಈ ವಿಷಯ ಮುಗಿಸ ಬೇಕೆಂದು ಇಚ್ಛಿಸುತ್ತೇನೆ.

೩೦೮

''ಈಡಾ ಪಿಂಗಳ ಸುಷುಮ್ನ ನಾಡಿಗಳಲ್ಲಿ ಆತ್ಮನು ಸಂಚರಿಸಬಾರ ದೆಂಬ ಯೋಗಾಂಗದ ಅಣ್ಣಗಳು ನೀವು ಕೇಳಿರಯ್ಯ ವಾಯುವನಧೋ ಮುಖಕ್ಕೆ ತರಬಾರದೆಂದು, ಊರ್ಧ್ವಮುಖಕ್ಕೆ ತಂದು ಅಮೃತವನುಂಡಿಹೆ ನೆಂಬ ಅಷ್ಟಾಂಗಯೋಗದ ಕರ್ಮಿಗಳು ನೀವು ಕೇಳಿರೊ ಶರೀರದಲ್ಲಿ ಶುಕ್ಲ ಶೋಣಿತಮಜ್ಜೆಮಾಂಸ ಇದರೊಳಗಾದ ಸಾಕಾರದ ತಲೆಯಲ್ಲಿ ನಿರಾಕಾರದ ಅಮೃತವನುಂಡಿಹೆನೆಂಬುದು ಹುಸಿಯಲ್ಲವೆ? ಬಂಜೆ ಆವಿನಲ್ಲಿ ಕ್ಷೀರ ಕೆಚ್ಚಲುಂಟೆ? ಕಲ್ಲರೆಯಲ್ಲಿ ಚಿಲುಮೆಯ ಸಾರವುಂಟೆ? ಹೊಲ್ಲದ ದೇಹದಲ್ಲಿ ನಲ್ಲ ಕ್ಷೀರವುಂಟೆ? ಇವೆಲ್ಲವನರಿಯದೆ ಬಲ್ಲತನವ ಸೂರೆಗೊಟ್ಟು ಗೊಲ್ಲ ಗೂಳಿಗೆ ಎಲ್ಲಿಯದೋ ಲಿಂಗಾಂಗಯೋಗ? ಹರಿವ ವಾರಿಧಿಗೆ ನೊರೆ ಪಾವಸೆ ಮುಸುಕುವದೆ? ಸುಡುವನಲ ತೃಣದಿ ಕಟ್ಟುವಡೆವುದೆ? ಅರಿವ ಶರಣನು ತನುವ ದಂಡಿಸಿ ಕೊಂಡಿಹನೆಂಬ ಭ್ರಾಂತಿಯಲ್ಲಿಯದೋ ಅಯ್ಯ? ಆತ್ಮನ ಇರುವು ಘಟಪಟದೊಳಗೆ ಗ್ರಹಿಸಿಪ್ಪ ಬಯಲಿನ ಇರುವಿನಂತೆ, ರವಿಯೊಳಗೆ ಸೂಸುವ ಕಿರಣದಂತೆ, ವಾಯುವಿನ ಬೆಂಬಳಿಯ ಗಂಧದಂತೆ ಚಿತ್ತಳಿದ ರುಜ್ಜುವಿನಂತೆ ತೈಲದೊಡನೆ ಬೆಳಗುವ ಕಳೆಯಂತೆ ಕಾಯದ ಮಧ್ಯದಲ್ಲಿ ನಿಂದು ಓಂಕಾರಸ್ವರೂಪವನರಿಯದೆ ಕೆಟ್ಟರಲ್ಲ ಕರ್ಮಕಾಂಡಿ ಗಳು ಸ್ಫಟಿಕದ ಶಿಲೆಯಲ್ಲಿ ನಿಂದ ವಾರಣದಂತೆ ನಿನ್ನ ನೀನೇ ತಿಳಿಯಾ ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿ ಸರ್ವಾಂಗಲಿಂಗಭರಿತವಾದ ವಂಗ ವಲ್ಲದೆ ಇಲ್ಲಿ ಲಿಂಗಾಂಗಯೋಗ'' ''ಶಿವಲಿಂಗಾರ್ಚನೆಯ ಕ್ರಿಯಾಶಕ್ತಿಗೆ ಅಭ್ಯಾಸಯೋಗದವರೆಲ್ಲ ಸರಿಯಲ್ಲ ನೋಡಾ ಯೋಗಬಲದಿಂದ ಸೇವಿಸುವ ಶ್ರೀಷ್ಮಾಮೃತವು ಶಿವಪ್ರಸಾದಾಮೃತಕ್ಕೆ ಸರಿಯಲ್ಲ ನೋಡಾ ಪ್ರಾಣನ ಬ್ರಹ್ಮರಂಧ್ರದಲ್ಲಿ ಬಿಡುವ ಯೋಗವು ಪ್ರಾಣಲಿಂಗೈಕ್ಯಸಂಬಂಧ ಯೋಗಕ್ಕೆ ಸರಿಯಲ್ಲ ನೋಡಾ ಶಿವಾನುಭವಕ್ಕೆ. ಯೋಗಕ್ಕೆ ಎಷ್ಟು ಅಂತರವು ನೋಡಯ್ಯ ಸೌರಾಷ್ಟ್ರ ಸೋಮೇಶ್ವರಾ''

ಈ ಎಲ್ಲ ಶರಣರ ವಚನಗಳ ಅಭಿಪ್ರಾಯವು ಶಿವಲಿಂಗವಿರಹಿತ ಧ್ಯಾನವು ನಿರರ್ಥಕವಾದುದೆಂದೇ ಸಿದ್ಧಾಂತವು.

ಶ್ರೀ ಬಸವಣ್ಣನವರು—ಧ್ಯಾನಯೋಗವು ಸಿದ್ಧಿಯಾಗಬೇಕಾದರೆ ಕ್ರಿಯಾ, ಭಕ್ತಿ, ಜ್ಞಾನ ಇವುಗಳು ಸಹಕಾರಿಯಾಗಿರಬೇಕಾಗುವವು—

೩೦೯

"ಯಸ್ಯ ಕ್ರಿಯಾ ತಸ್ಯ ಸಿದ್ಧಿರ್ಭವತಿ ಎಂದು ಕಟ್ಟಾಚಾರದಲ್ಲಿದ್ದು ನಾನು ಅನುಸರಿಸಿಕೊಂಡು ನಡೆವನ್ನಕ್ಕ ಕರ್ಮಕಾಂಡಿಯಲ್ಲ. ಉತ್ಪತ್ತಿ ಸ್ಥಿತಿ ಭೋಗ ಭಕ್ತಿ ಕಾಯವುಳ್ಳನ್ನಕ್ಕ ಭಕ್ತಿಕಾಂಡಿಯಲ್ಲ. ಪರವು ಸಾಧ್ಯವಾಯಿತ್ತೆಂದು ಕ್ರೀಯೆಲ್ಲವ ಮೀರಿ ನಡೆವೆನು. ಪರತತ್ವವನರಿದಿಹೆನೆಂಬೆನ್ನಕ್ಕ ಜ್ಞಾನಕಾಂಡಿಯಲ್ಲ. ಇನ್ನು ಕರ್ಮಕಾಂಡ, ಭಕ್ತಿಕಾಂಡ, ಜ್ಞಾನಕಾಂಡ ಈ ತ್ರಿವಿಧದಲ್ಲಿ ವಂಚಕನಾದರೆ ಈಸು ವಿಧದೊಳಗೆ ಅಂಗವಿಲ್ಲ ಮೇಲೆ ಸತ್ಪುರುಷರ ಸಂಗವಿಲ್ಲ. ಯುಕ್ತಿ ಇಲ್ಲ ಎನಗೆ ಭಕ್ತಿ ಎಂತಹುದಯ್ಯ? ಬಲ್ಲವರ ಬೆಸಗೊಂಡರೆ ಎನ್ನ ಬಿಮ್ಮು ಕೆಟ್ಟಿಹುದೆಂದು ಮೆಲ್ಲನೆ ಪ್ರಸಂಗದಿಂದ ತಿಳಿದು ನೋಡುವೆ ಕೂಡಲಸಂಗಮದೇವ ಎನ್ನವಗುಣವ ನೋಡದೆ ಶಿವರಾತ್ರಿಯ ಸಂಕಣ್ಣಗಳಿಗೆ ಕರುಣಿಸಿದಂತೆ ಎನಗೆ ಕೃಪೆ ಮಾಡಯ್ಯ"

ಈ ವಚನವು ಭಕ್ತಿ, ಕ್ರಿಯಾ, ಜ್ಞಾನಗಳಿಲ್ಲದೆ ಧ್ಯಾನಯೋಗವು ಸಿದ್ಧಿಸಲಾರದೆಂದು ಹೇಳುತ್ತದೆ. ಕ್ರಿಯೆಯನ್ನು ಮಾಡದೆ ಕೇವಲ ಪರಮಾತ್ಮ ಧ್ಯಾನವನ್ನು ಮಾಡಿದರಾಯಿತು ಎಂತಲೂ ಕೆಲವರ ಅಭಿಪ್ರಾಯವಿರುವದು. ಕ್ರಿಯೆಯು ಏತಕ್ಕೆ ಬೇಕೆಂದೇ ಅವರ ವಾದವು. ಕ್ರಿಯೆ ಇಲ್ಲದ ಧ್ಯಾನವು ವ್ಯರ್ಥವಾದುದೆಂದು ಶ್ರೀ ಬಸವಣ್ಣನವರು ನಿರೂಪಿಸಿರುತ್ತಾರೆ.

೩೧೦

ಬಸವೇಶ್ವರರು—

"ಕೆಂಚ ಕರಿಕನ ನೆನೆದರೆ ಕರಿಕನಾಗಬಲ್ಲನೆ? ಕರಿಕ ಕೆಂಚನ ನೆನೆದರೆ ಕೆಂಚನಾಗಬಲ್ಲನೆ? ದರಿದ್ರನು ಸಿರಿವಂತನ ನೆನೆದರೆ ಸಿರಿವಂತನಾಗಬಲ್ಲನೆ? ಸಿರಿವಂತನು ದರಿದ್ರನ ನೆನೆದರೆ ದರಿದ್ರನಾಗಬಲ್ಲನೆ? ಮುಂದಿನ ಪುರಾತನರ ನೆನೆದು ಧನ್ಯರಾದೆವೆಂಬ ಮಾತಿನ ರಂಜಕರನೇನೆಂಬೆ? ಕೂಡಲಸಂಗಮದೇವಾ"

೩೧೧

ಮುಮ್ಮಡಿಶಾರ್ಯೇಂದ್ರ—

"ಬೀಜದೊಳಗಿನ ವೃಕ್ಷಫಲವ ಸವಿಯಬಹುದೆ? ಮಳೆಹನಿಯೊಳಿಪ್ಪ ಹುರಮುಂಜಿನಮುತ್ತುಗಳಂ ಸರಗೋಳಿಸಿಕೊರಳೊಳು ಧರಿಸಬಹುದೆ? ಹಾಲೊಳಗಿದ್ದ ತುಪ್ಪವ ಅರಸಿದರೆ ಸಿಕ್ಕಬಹುದೆ? ಕಬ್ಬಿನೊಳಗಿರ್ಪ ಬೆಲ್ಲವು ಕಣ್ಣಿಗೆ ಕಾಣಿಸುವುದೆ? ತನ್ನೊಳಗಿರ್ಪ ಶಿವತತ್ವವು ನೆನೆದಾಕ್ಷಣ ಅನುಭವಕ್ಕೆ ಬರ್ಪುದೆ? ಭಾವಿಸಿ ತಿಳಿದು ಮಥಿಸಿ ಪ್ರಯೋಗಾಂತರದಿಂ

ಪ್ರಸನ್ನತ್ವಮಂ ಮಾಡಿಕೊಂಡು ತದನುಭವ ಸುಖದೊಳೋಲಾಡುವದು ಅತಿಚತುರನಾದ ಶಿವಶರಣಂಗಲ್ಲದೆ ಉಳಿದರ್ಗುಂಟೆ? ಮಹಾಘನ ದೊಡ್ಡ ದೇಶಿಕಾಚಾರ್ಯ ಗುರುಪ್ರಭುವೇ"

ಹೇಗೆ ಚಂಚಲವಾದ ಜಲದಲ್ಲಿ ಸೂರ್ಯನ ಪ್ರತಿಬಿಂಬವು ಚನ್ನಾಗಿ ಕಾಣಿಸುವದಿಲ್ಲವೊ, ಹಾಗೆ ಆ ನೀರು ಚಂಚಲರಹಿತವಾದರೆ ಆ ಬಿಂಬವು ಚನ್ನಾಗಿ ಕಾಣುತ್ತದೆ. ಅದರಂತೆಯೇ ಅಂತಃಕರಣದಮೇಲೆ ಆತ್ಮನ ಪ್ರತಿಬಿಂಬವು ಯಾವಾಗಲೂ ಹೊಳೆಯುವಂಥಾದ್ದಾದರೂ ವಿಷಯ ಮತ್ತು ಇಂದ್ರಿಯಗಳ ದ್ವಾರದಿಂದ ಚಿತ್ತವು ಚಂಚಲವಾಗುವದರಿಂದ ಅದರಲ್ಲಿ ಆತ್ಮನ ಸ್ವರೂಪವು ಚನ್ನಾಗಿ ಕಾಣುವದಿಲ್ಲ. ಆದರೆ ಯಾವಾಗ್ಗೆ ಸಾಧಕನು ಅಷ್ಟಾಂಗಯೋಗಗಳ ತತ್ವವನ್ನು ಚನ್ನಾಗಿ ತಿಳಿದು ಚಿತ್ತದ ಚಂಚಲತೆಯನ್ನು ಹೋಗಲಾಡಿಸುತ್ತಾನೆಯೋ ಆವಾಗ್ಗೆ ಆತನ ಶಾಂತಚಿತ್ತದಲ್ಲಿ ಪರಮಾತ್ಮನ ಸ್ವರೂಪವು ಕಾಣಿಸುತ್ತದೆ. ಯಾವ ಯೋಗವನ್ನೇ ಮಾಡಲಿ ಮನಸ್ಸು ಮಾತ್ರ ಶಾಂತವಾಗಿರಬೇಕು.

೩೧೨

ಬಸವಣ್ಣನವರು—

"ಅಂದಣವನೇರಿದ ಸೊಣಗನಂತೆ ಕಂಡೊಡೆ ಬಿಡದು ಮುನ್ನಿನ ಸ್ವಭಾವವನು ಸುಡು ಸುಡು ಮನವಿದು ವಿಷಯಕ್ಕೆ ಹರಿವುದು ಮೃಡ ನಿಮ್ಮನನುದಿನ ನೆನೆಯಲೀಯದು ಎನ್ನೊಡೆಯ ಕೂಡಲಸಂಗಮದೇವಾ ನಿಮ್ಮ ಚರಣವ ನೆನೆವಂತೆ ಕರುಣಿಸು ಸೆರಗೊಡ್ಡಿ ಬೇಡುವೆ ನಿಮ್ಮ ಧರ್ಮ"

೩೧೩

ಬಸವಣ್ಣನವರು—

"ತನ್ನಿಚ್ಛೆಯ ನುಡಿದರೆ ನಚ್ಚುವುದೀ ಮನವು ಇದಿರಿಚ್ಛೆಯ ನುಡಿದರೆ ಮೆಚ್ಚದೀ ಮನವು ಕೂಡಲಸಂಗನ ಶರಣರ ನಚ್ಚದ ಮನವ ಕಿಚ್ಚಿನೊಳಗಿಕ್ಕು"

ಮನವು ಇಂತಹ ಕೆಟ್ಟ ಸ್ಥಿತಿಯಲ್ಲಿರುವದರಿಂದ

೩೧೪

"ವಿಕಳನಾದೆನು ಪಂಚೇಂದ್ರಿಯ ಧಾತುವಿನಿಂದ ಮತಿಗೆಟ್ಟೆನು ಮನದ ವಿಕಾರದಿಂದ ಧೃತಿಗೆಟ್ಟೆನು ಕಾಯವಿಕಾರದಿಂದ ಶರಣುವೊಕ್ಕೆನು ಕೂಡಲಸಂಗಮದೇವಾ"

೩೧೫

ಬಸವಣ್ಣನವರು ಅತ್ಯಂತ ಪರವಶರಾಗಿ ಬೇಡಿಕೊಳ್ಳುತ್ತಾರೆ—

"ಮುನಿದೆಯಾದೊಡೆ ಒಮ್ಮೆ ಜರಿದಡೆ ಸಾಲದೆ? ಅಕಟಕಟಾ ಮದನಂಗೆ ಮಾರುಗುಡುವರೆ? ಹಗೆಗೆನ್ನಾರುಗೊಟ್ಟು ನಿನ್ನವರನೊಪ್ಪಿಸುವರೆ? ಕೂಡಲಸಂಗಮದೇವಾ"

ಎಲೌ ದೇವರೇ ನೀನು ನನ್ನ ಮೇಲೆ ಸಿಟ್ಟಿಗೆದ್ದಿದ್ದರೆ ಆದರೆ ಒಂದು ಸಾರೆ ನನ್ನನ್ನು ಜರಿದು ನಾಶನಾಡಿದರೆ ಸಾಕು. ವೈರಿಯಾದ ಮನ್ಮಥನಿಗೆ ಸ್ಥಾನವನ್ನು ಕೊಟ್ಟು ಅಂದರೆ ನಿನ್ನ

ವೈರಿಯಾದ ಮನ್ಮಥನಿಗೆ ನಿನ್ನವನಾದ ನನ್ನನ್ನು ಕೊಟ್ಟುಬಿಟ್ಟರೆ ಗತಿಯೇನು? ಎಂದು ಹಂಬಲಿಸಿ ಕೇಳಿಕೊಳ್ಳುತ್ತಾರೆ.

೩೧೬

"ಬಡಪಶು ಪಂಕದಲ್ಲಿ ಬಿದ್ದೊಡೆ ಕಾಲಬಡಿವುದಲ್ಲದೆ ಬೇರೆ ಗತಿಯುಂಟೆ? ಶಿವಶಿವ ಹೋದಹೆ ಹೋದಹೆನಯ್ಯ ನಿಮ್ಮ ಮನದತ್ತಲೆನ್ನ ತೆಗೆಯಯ್ಯಾ ಪಶುವಾನು ಪಶುಪತಿ ನೀನು ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ ಒಡೆಯ ನಿಮ್ಮ ಬಯ್ಯದಂತೆ ಮಾಡು ಕೂಡಲಸಂಗಮದೇವಾ"

೩೧೭

"ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ ಅಂಬೆ ಅಂಬೆ ಎಂದು ಕರೆಯುತ್ತಲಿದ್ದೇನೆ ಅಂಬೆ ಅಂಬೆ ಎಂದು ಒರಲುತ್ತಲಿದ್ದೇನೆ. ಕೂಡಲ ಸಂಗಮದೇವ ಬಾಳು ಬಾಳೆಂಬನ್ನಕ್ಕ"

೩೧೮

ಬಸವಣ್ಣನವರು—

"ಸಮುದ್ರದೊಳಗಣ ಸಿಂಪಿನಂತೆ ಬಾಯಬಿಡುತ್ತಿದ್ದೆನಯ್ಯ ನೀವಲ್ಲದೆ ಮತ್ತಾರೂ ಎನ್ನನರಿವರಿಲ್ಲ ನೋಡಯ್ಯಾ ಕೂಡಲಸಂಗಮದೇವ ನೀವಲ್ಲದೊಳಕೊಂಬುವರಿಲ್ಲವಯ್ಯಾ"

ಹೀಗೆಯೇ ಇನ್ನೂ ನೂರಾರು ವಚನಗಳಿಂದ ಪರಮಾತ್ಮಧ್ಯಾನವನ್ನು ಮಾಡಿರುತ್ತಾರೆ. ಅತ್ಯಂತ ಭಯಭಕ್ತಿಯುತರಾಗಿ ದೇವರನ್ನು ಕುರಿತು ಹೇಳುವ ಬಸವಣ್ಣನವರ ವಚನಗಳು ಬಹಳ ಹೃದಯಂಗಮವಾಗಿರುತ್ತವೆ. ಧ್ಯಾನಯೋಗಿಗಳ ಮಾಲಿಕೆಯಲ್ಲಿ ಅವರು ಮಧ್ಯಮಣಿಯಂತಿರುತ್ತಾರೆ.

### ಧ್ಯಾನಯೋಗಿಗಳ ಲಕ್ಷಣ—ಮನುಸ್ಮೃತಿ

ನ ತಸ್ಯ ದಹನಂ ಕಾರ್ಯಂ ನ ಚ ಪಿಂಡೋದಕಕ್ರಿಯಾ ।
ಶಿವಧ್ಯಾನರತೋಭೂತ್ವಾ ಶಿವಲಿಂಗಾಂಗಸಂಯುತಃ ॥
ಶಿವೇತರಪರಿತ್ಯಾಗೀ ಧ್ಯಾನಯೋಗೀ ಸ ಉಚ್ಯತೇ ।

ಅಂದರೆ ಶಿವಲಿಂಗಾಂಗ ಸಂಯುಕ್ತಕನಾಗಿಯೂ, ಶಿವಧ್ಯಾನದಲ್ಲಿ ತತ್ಪರನಾಗಿಯೂ, ಶಿವೇತರದೇವತೆಗಳನ್ನು ತ್ಯಜಿಸಿದವನಾಗಿಯೂ ಇರತಕ್ಕ ಧ್ಯಾನಯೋಗಿಗೆ ದಹನಾದಿ ಕರ್ಮವಾಗಲೀ, ಪಿಂಡೋದಕ ಮೊದಲಾದ ಕಾರ್ಯಗಳಾಗಲೀ ಇರುವದಿಲ್ಲ.

೩೧೯

ಬಸವಣ್ಣನವರು—

"ಶಿವಚಿಂತೆ ಶಿವಜ್ಞಾನವಿಲ್ಲದಮನುಜರು ಸಗಣಕ್ಕೆ ಸಾಸಿರಹುಳು ಹುಟ್ಟವೇ ಅಯ್ಯ"?

ಎಂದು ತಮ್ಮದೊಂದು ವಚನದಲ್ಲಿ ಹೇಳಿರುವರು. ಈ ಜಗತ್ತಿನಲ್ಲಿ ಹುಟ್ಟಿದ ಮಾನವರ ಜೀವನವು ಅಸ್ಥಿರವಾದುದು. ಆದ್ದರಿಂದ ಶಿವಪೂಜೆ ಶಿವಧ್ಯಾನ ಮೊದಲಾದ ಶ್ರೇಷ್ಠ ಕಾರ್ಯಗಳನ್ನು ಮಾಡಬೇಕೆಂದು ಬಸವಣ್ಣನವರು ಬೋಧಿಸಿರುತ್ತಾರೆ. ಅವರು—

೩೨೦

"ಸಂಸಾರವೆಂಬುದದೊಂದು ಗಾಳಿಯ ಸೊಡರು ಶಿರಿ ಎಂಬುವದೊಂದು ಸಂತೆಯ ಮಂದಿ ಕಂಡಯ್ಯಾ ಇದ ನೆಚ್ಚಿ ಕೆಡಬೇಡ ಶಿರಿ ಎಂಬುದ ಮರೆಯದೆ ಪೂಜಿಸು ನಮ್ಮ ಕೂಡಲಸಂಗಮದೇವನ"

ಈ ಮಾನವ ಜನ್ಮದಲ್ಲಿ ಪುನಃ ಬರುತ್ತೇನೆಯೋ ಅಥವಾ ಇಲ್ಲವೊ ಯಾರಿಗೆ ತಾನೇ ಗೊತ್ತುಂಟು? ಆದುದರಿಂದ—

೩೨೧

"ಎಂತಕ್ಕೆ ಎಂತಕ್ಕೆ ಹರೆದ ಕಾಯ ಬೀಯವಾಗದ ಮುನ್ನ ಅಟ್ಟುಣ್ಣುವೊ ಬೆರಣಿಯುಳ್ಳಲ್ಲಿ ಹೊತ್ತು ಹೋಗದ ಮುನ್ನ ಅಟ್ಟುಣ್ಣುವೊ ಮರಳಿ ಭವಕ್ಕೆ ಬಹೆಬಾರದಿಹೆ ಕರ್ತು ಕೂಡಲಸಂಗಂಗೆ ಶರಣೆನ್ನಿವೊ"

ಹೀಗೆ ಬಸವಣ್ಣನವರು ಬೋಧಿಸುತ್ತಾರೆ. ಹಾಲು ಇದ್ದಾಗ ಹಬ್ಬವನ್ನು ಮಾಡಬೇಕು. ಗಾಳಿ ಬಿಟ್ಟಾಗ ತೂರಿಕೊಳ್ಳಬೇಕು. ಮಾನವನಾಗಿ ಹುಟ್ಟಿ ಸಮಯ ಸಿಕ್ಕಾಗ ಶಿವಧ್ಯಾನ ಶಿವಪೂಜಾದಿ ಸತ್ಕರ್ಮಗಳನ್ನು ಮಾಡದೆ ಇದ್ದರೆ ಅವನ ಬಾಳು ಗೀಳಾಗುವದೆಂದು ಬಸವಣ್ಣನವರ ತತ್ವವಾಗಿರುವದು.

೩೨೨

"ಅಂದು ಇಂದು ಮತ್ತೊಂದೆನಬೇಡ ದಿನವಿಂದೇ ಶಿವಶರಣೆಂಬುವಂಗೆ ದಿನವಿಂದೇ ಹರಶರಣೆಂಬುವಂಗೆ ದಿನವಿಂದೇ ನಮ್ಮ ಕೂಡಲಸಂಗನ ಮಾಣದೆ ನೆನೆವಂಗೆ"

ಶಿವಧ್ಯಾನವನ್ನು ಮಾಡತಕ್ಕವನು ಅಂದು ಇಂದು ಎನ್ನಲಾಗದು. ಶಿವಧ್ಯಾನಮಾಡ ತಕ್ಕವನಿಗೆ ದಿನವಿಂದೇ ಆಗಿರುತ್ತದೆ.

ಧ್ಯಾನಯೋಗಿಯ ಮನಸ್ಸು ಯಾವಾಗಲೂ ಶಾಂತವಾಗಿರಬೇಕೆಂದು ಈ ಮೊದಲೇ ಬರೆಯಲಾಗಿದೆ. ಮಾನವನ ಮನಸ್ಸು ಶಾಂತಿಯುಕ್ತವಾಗಿರಬೇಕಾದರೆ ಸಾತ್ವಿಕ ಗುಣವು ಬೇಕಾಗುವದು. ಸಾತ್ವಿಕ ಸ್ವಭಾವವುಂಟಾಗಲಿಕ್ಕೆ ಆ ಮನುಷ್ಯನ ಆಹಾರ ವಿಹಾರಗಳೂ, ಆಚಾರ ವಿಚಾರಗಳೂ, ನಡೆನುಡಿಗಳೂ ಶುದ್ಧವಾಗಿರಲಿಕ್ಕೆಬೇಕು.

**ಭಗವದ್ಗೀತೆ**

ಯುಕ್ತಾಹಾರ ವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।
ಯುಕ್ತಸ್ವಪ್ನಾವ ಬೋಧಸ್ಯ ಯೋಗೋ ಭವತಿ ದುಃಖಹಾ ॥

ಮೇಲೆ ಹೇಳಿದಂತೆ ನಡೆದರೆ ಅವನ ಯೋಗವು ದುಃಖವನ್ನು ನಾಶಮಾಡುತ್ತದೆ. "ಶೀಲಂ ಪರಂ ಭೂಷಣಂ" ಎಂಬುವಂತೆ ಮನುಷ್ಯನಿಗೆ ಶೀಲವೇ ಭೂಷಣಪ್ರದ ವಾದುದು. ಶ್ರೀ ಬಸವಾದಿ ಶರಣರು ಶೀಲಕ್ಕೆ ಅತ್ಯಂತ ಮಹತ್ವವನ್ನು ಕೊಟ್ಟಿರುತ್ತಾರೆ. ಕೆಲವರು ಡಂಭಾಚಾರಗಳಿಂದ ಶೀಲವನ್ನು ಮಾಡತಕ್ಕವರನ್ನು ಖಂಡಿಸಿರುತ್ತಾರೆ.

೩೨೩

ಅಖಂಡೇಶ್ವರರು—

"ಶೀಲಶೀಲವೆಂದು ನುಡಿವುತಿರ್ಪರೆಲ್ಲರೂ ಶೀಲದ ಹೊಲಬನಾರೂ ಅರಿಯರಲ್ಲಾ ಕೆರೆ, ಬಾವಿ, ಹಳ್ಳ, ಕೊಳ್ಳ, ಹೊಳೆಗಳ ನೀರ ಬಳಸದಿರ್ದೊಡೆ ಶೀಲವೇ? ಕೊಡಕ್ಕೆ ಪಾವುಡಹಾಕಿ ಚಿಲುವೆ ಶಿತಾಳ ತಂದರೆ ಇದು ಶೀಲವೇ? ಬೆಳದ ಬೆಳಸು ಕಾಯಿ ಹಣ್ಣುಗಳ ಬಿಟ್ಟರೆ ಶೀಲವೇ? ಉಪ್ಪು, ಎಣ್ಣೆ, ಹಾಲು, ತುಪ್ಪ, ಇಂಗು, ಮೆಣಸು, ಅಡಿಕೆ, ಬೆಲ್ಲಗಳ ಬಿಟ್ಟರೆ ಶೀಲವೇ? ಪರಪಾಕವ ಬಿಟ್ಟು ಸ್ವಯಂಪಾಕದಲ್ಲಿದ್ದರೆ ಶೀಲವೇ? ಭವಿಯ ಕಾಣದಂತಿರ್ದಡೆ ಶೀಲವೇ? ಅಲ್ಲಲ್ಲ ಅದೇನು ಕಾರಣವೆಂದಡೆ ಇಂತಿವೆಲ್ಲವೂ ಹೊರಗಣ ವ್ಯವಹಾರವು ಇನ್ನು ಅಂತರಂಗದ ಅರಿಷಡ್ವರ್ಗಗಳೆಂಬ ಭವಿಗಳ ಕಳೆಯಲಿಲ್ಲ ಮಾಯಾ ಮೋಹ ಬೆಳೆ ಉಳಗುನ್ನಿಯ ಬಿಡಲಿಲ್ಲ ಸಂಸಾರ ವಿಷಯರಸವೆಂಬ ಹಳ್ಳ, ಕೊಳ್ಳ, ಕೆರೆ, ಬಾವಿಗಳಗಲಲಿಲ್ಲ ಅಷ್ಟಮದಗಳೆಂಬ ಉಪ್ಪು, ಎಣ್ಣೆ, ತುಪ್ಪ, ಹಾಲು, ಇಂಗು, ಮೆಣಸು, ಅಡಿಕೆ, ಬೆಲ್ಲಗಳ ಬಿಡಲಿಲ್ಲ ಸಕಲ ಕರಣಂಗಳೆಂಬ ಸುಫಲಂಗಳ ಬಿಡಲಿಲ್ಲ ಮನವೆಂಬ ಕೊಡಕ್ಕೆ ಮಂತ್ರವೆಂಬ ಪಾವುಡವ ಮುಚ್ಚಲಿಲ್ಲ. ಚಿತ್ಕೊಡವೆಂಬ ಚಲುಮೆಯಲ್ಲಿ ಚಿದಮೃತವೆಂಬ ಶಿತಾಳವ ತಂದು ಚಿನ್ಮಯಲಿಂಗಕ್ಕೆ ಅಭಿಷೇಕವ ಮಾಡಲಿಲ್ಲ ಇಂತೀ ಅಂತರಂಗದ ವಿಚಾರವನರಿಯದೆ ಹಾಳ ಸಂಕಲ್ಪದಿಂದ ಬಹಿರಂಗದ ಪದಾರ್ಥಂಗಳ ಬಿಟ್ಟು ಮುಕ್ತಿಯ ಪಡೆವೆನೆಂಬ ಯುಕ್ತಿಗೇಡಿಗಳಿಗೆ ಭವ ಬಂಧನ ಹಿಂಗಲಿಲ್ಲ ಜನನ ಮರಣಂಗಳು ಜಾರಲಿಲ್ಲ ಸಂಸಾರ ಮಾಯಾ ಮೋಹವ ನೀಗಲಿಲ್ಲ ಇಂತಪ್ಪ ಅಜ್ಞಾನಿಗಳ ವಿಧಿ ಎಂತಾಯಿತ್ತೆಂದರೆ ಹುತ್ತದೊಳಗಣ ಹಾವ ಕೊಲ್ಲುವೆನೆಂದು ಮೇಲೆ ಹುತ್ತವ ಬಡಿಯುವ ಮರುಳನಂತಾಯಿತ್ತು ಕೇಳಾ ಅಖಂಡೇಶ್ವರಾ"

ಮನುಷ್ಯನು ಶುದ್ಧ ಸಾತ್ವಿಕ ಗುಣಯುಕ್ತನಾಗಬೇಕಾದರೆ ಕೇವಲ ಡಂಭಾಚಾರದಿಂದಾಗುವದಿಲ್ಲ. ಆತನ ಆಂತರ್ಯಗುಣಗಳೂ ಕೂಡ ಶುದ್ಧವಾಗಿರಬೇಕೆಂಬುವದೇ ಮೇಲಿನ ವಚನದ ತಾತ್ಪರ್ಯವಾಗಿರುತ್ತದೆ.

ಈ ವಿಷಯ ಶಿವಾಗಮಗಳಲ್ಲಿಯೂ ಚನ್ನಾಗಿ ವಿವರಿಸಲಾಗಿದೆ. ಹಿಂದೆ ಒಂದೇ ಒಂದು ಶಿವಾಗಮದ ವಾಕ್ಯದ ಉದಾಹರಣೆ ಕೊಟ್ಟಿದ್ದೇವೆ.

ಸೂಕ್ಷ್ಮಾಗಮ—ಪಟಲ ೬

ಧ್ಯಾನಯಜ್ಞಪರೋ ದೇವಿ ಮೋಕ್ಷೈಕ ಫಲಸಾಧಕಃ ।
ಅಷ್ಟೈಶ್ವರ್ಯಪ್ರದಾ ಪೂಜಾ ಯೋಗಾದ್ಯಂ ಸ್ವರ್ಗಸಾಧನಂ ॥
ಪಾಪಪಾರೀಜಪಃ ಪ್ರೋಕ್ತೋ ಜ್ಞಾನಂ ಧ್ಯಾನಂ ಹಿ ಮೋಕ್ಷದಂ ।
ನಿಷ್ಕಾಮಕರ್ಮಕರ್ತೄಣಾಂ ಶ್ರೌತಸ್ಮಾರ್ತಾನುಸಾರತಃ ॥
ಬಹೂನಾಂ ಜನ್ಮನಾಮಂತೇ ಜ್ಞಾನೇ ಧ್ಯಾನೇ ಭವೇನ್ಮತಿಃ ।
ಕೇವಲಂ ಕರ್ಮನಿಷ್ಠಾನಾಂ ತದ್ವಾರ್ತಾಪಿ ನ ಜಾಯತೇ ॥ ೩೮ ॥

ಬಹಿರ್ಯಜ್ಞರತಾನಾಂತು ದೇವಾಃ ಪಾಷಾಣ ಮೃಣ್ಮಯಾಃ ।
ಅಂತರ್ಯಾಗವತಾಂ ದೇವಿ ಹೃದಯಸ್ಥಃ ಸದಾಶಿವಃ ॥ ೩೯ ॥

ಜ್ಞಾನಂ ಧ್ಯಾನಂ ನಯಸ್ಯಾಸ್ತಿ ಸ ನವೇತ್ತಿ ಪರಂಶಿವಂ ।
ಯದ್ವದರ್ಥಾಂಸ್ತು ಜಾತ್ಯಂಧೋ ನಹಿ ಪಶ್ಯತಿ ಪಾರ್ವತಿ ॥ ೪೦ ॥

ತಸ್ಮಾದ್ಯಜ್ಞಾದಿಕಂ ಬಾಹ್ಯಂ ತ್ಯಕ್ತ್ವಾ ಸ್ವರ್ಗಾದಿ ಸಾಧನಮ್ ।
ಗುರೋರ್ಲಬ್ಧ್ವಾ ಪರಂ ಜ್ಞಾನಂ ಧ್ಯಾನಯೋಗರತೋ ಭವೇತ್ ॥ ೪೧ ॥

ಅಶ್ವಮೇಧ ಸಹಸ್ರಾಣಿ ವಾಜಪೇಯ ಶತಾನಿ ಚ ।
ಧ್ಯಾನಯೋಗಸ್ಯಚೈಕಸ್ಯ ಕಲಾಂ ನಾರ್ಹಂತಿಷೋಡಶೀಂ ॥
ಶಿವಜ್ಞಾನಾಮೃತಂ ಪೀತ್ವಾ ಭಕ್ತ್ಯಾ ಪರವಶಂ ಗತಃ ।
ಅಂತರ್ನಿವಿಷ್ಟ ಚಿತ್ತಸ್ಯ ಕರ್ಮಣಾ ತಸ್ಯ ಕಿಂ ಭವೇತ್ ॥ ೪೨ ॥

ಕೃತ್ವಾ ವಾ ಕರ್ಮ ಸಕಲಮುನಪೇತೋ ಮಹತ್ಫಲಮ್ ।
ನಿವೇಶಯೇಚ್ಛಿವೇ ಚಿತ್ತಂ ಸಂಯತಾತ್ಮಾನಿರಾಕುಲಃ ॥
ಏವಮಾದೌ ಶಿವಂ ಧ್ಯಾತ್ವಾ ಜಪ್ತ್ವಾ ಪಂಚಾಕ್ಷರಂ ಮನುಂ ।
ತತಃ ಸಂಪೂಜಯೇದಿತ್ಥಂ ವೀರಶೈವಕ್ರಮೋ ಭವೇತ್ ॥ ॥ ೪೩ ॥

ಅಂದರೆ ಎಲೌ ದೇವಿಯೆ ಧ್ಯಾನಯಜ್ಞದಲ್ಲಿ ತೊಡಗಿದವನು ಮೋಕ್ಷವೆಂಬ ಫಲವನ್ನು ಸಾಧಿಸತಕ್ಕವನಾಗುವನು. ಪೂಜೆಯು ಅಷ್ಟೈಶ್ವರ್ಯಗಳನ್ನು ಕೊಡುವದು. ಯೋಗಾದಿಗಳು ಸ್ವರ್ಗಸಾಧನಗಳು, ಜಪವು ಪಾಪವನ್ನು ನಾಶಮಾಡತಕ್ಕುದಾಗಿದೆ. ಜ್ಞಾನ ಮತ್ತು ಧ್ಯಾನಗಳು ಮೋಕ್ಷವನ್ನು ಕೊಡತಕ್ಕವುಗಳಾಗಿವೆ. ಶೃತಿ ಸ್ಮೃತ್ಯಾದಿಗಳಲ್ಲಿ ಹೇಳಿದಂತೆ ಅನೇಕ ಜನ್ಮಗಳಲ್ಲಿ ನಿಷ್ಕಾಮುಕರ್ಮವನ್ನು ಮಾಡಿದವರಿಗೆ ಮಾತ್ರ ಜ್ಞಾನ-ಧ್ಯಾನಗಳಲ್ಲಿ ಬುದ್ಧಿಯು ಹುಟ್ಟುವದು. ಕೇವಲ ಕರ್ಮನಿಷ್ಠರಾದವರಿಗೆ ಜ್ಞಾನ, ಧ್ಯಾನಗಳ ವಾರ್ತೆಯೂ ಕೂಡ ಅವರಿಗೆ ತಿಳಿಯುವದಿಲ್ಲ. ಬಹಿರ್ಯಾಗದಲ್ಲಿ ತೊಡಗಿದವರಿಗೆ ಪಾಷಾಣ ಮೃಣ್ಮಯಾದಿ ದೇವತೆಗಳು ಸಿಗುತ್ತವೆ. ಅಂತರ್ಯಾಗವನ್ನು ಮಾಡತಕ್ಕವರ ಹೃದಯದಲ್ಲಿ ಸದಾಶಿವನು ವಾಸಿಸುತ್ತಾನೆ. ಧ್ಯಾನ, ಜ್ಞಾನಗಳು ಯಾವಾತನಿಗಿರುವದಿಲ್ಲವೊ ಅವನು ಖಂಡಿತವಾಗಿಯೂ ಶಿವನನ್ನು ತಿಳಿಯುವದಿಲ್ಲ. ಜಾತ್ಯಂಧನಾದವನು ಹೊರಗಿನ ಪದಾರ್ಥಗಳನ್ನು ಹೇಗೆ ನೋಡಲಾರನೋ, ಹಾಗೆಯೇ ಬಾಹ್ಯಗಳಾದ ಯಜ್ಞಾದಿಗಳನ್ನು ಬಿಟ್ಟು ಗುರುವಿನಿಂದ ಶ್ರೇಷ್ಠಜ್ಞಾನವನ್ನು ಪಡೆದು ಧ್ಯಾನಯೋಗಮಗ್ನನಾಗತಕ್ಕದ್ದು. ಸಹಸ್ರ ಅಶ್ವಮೇಧಯಾಗಗಳೂ, ನೂರಾರು ವಾಜಪೇಯ ಯಜ್ಞಗಳೂ ಧ್ಯಾನಯೋಗದ ಹದಿನಾರನೆಯ ಒಂದಂಶವನ್ನೂ ಕೂಡ ಹೊಂದಲಾರವು. ಶಿವಜ್ಞಾನಾಮೃತವನ್ನು ಪಾನಮಾಡಿ ಭಕ್ತಿಯಿಂದ ಪರವಶನಾಗುವನು. ಅಂತರ್ನಿವಿಷ್ಟ ಚಿತ್ತನಾದವನಿಗೆ ಕರ್ಮದಿಂದೇನಾಗುವದು? ಅಥವಾ ಎಲ್ಲ ಕರ್ಮಗಳನ್ನು ಮಾಡಿದರೂ ಮಹತ್ತರಗಳಾದ ಫಲಗಳನ್ನು ಹೊಂದುವದಿಲ್ಲ. ಆದ್ದರಿಂದ ನಿರಾಕುಲನಾಗಿಯೂ, ಸಂಯಮನ ಉಳ್ಳವನಾಗಿಯೂ ಶಿವನಲ್ಲಿ ಮನಸ್ಸನ್ನು ತೊಡಗಿಸಬೇಕು. ಅಂದರೆ ಧ್ಯಾನಮಾಡಬೇಕು. ಹೀಗೆ ಶಿವನನ್ನು ಧ್ಯಾನಿಸಿ ಪಂಚಾಕ್ಷರಿಯನ್ನು ಜಪಿಸಿ ಶಿವನನ್ನು ಪೂಜಿಸುವದೇ ವೀರಶೈವಕ್ರಮುವಾಗಿರುವದು.

**ಪಾರಮೇಶ್ವರಾಗಮ—ಸಪ್ತಮ ಪಟಲ**

ವೀರಶೈವನ ಲಕ್ಷಣವನ್ನು ಹೇಳುತ್ತ—

ಶಿವಧ್ಯಾನರತೋ ನಿತ್ಯಂ ದೃಢಚಿತ್ತೋ ಜಿತೇಂದ್ರಿಯಃ ॥ ೯೯ ॥

ತ್ರಿಕಾಲಮರ್ಚಯೇಲ್ಲಿಂಗಂ ಶಿವಪಂಚಾಕ್ಷರೀಂ ಜಪನ್ ।
ಕೀರ್ತಯನ್ ಶಿವನಾಮಾನಿ ಶಿವೋಹಮಿತಿ ಭಾವಯನ್ ॥ ೧೦೦ ॥

ಜಗಜ್ಜೀವಮಯಂ ಸರ್ವಂ ಚೈತನ್ಯಮಯ ವಿಗ್ರಹಂ ।
ಪಂಚಾಕ್ಷರಮಯಂ ಲಿಂಗಂ ಲಿಂಗಂ ಪಂಚಾಕ್ಷರಂ ಮಹತ್ ॥ ೧೦೧ ॥

ಜಗದಾತ್ಮನಿ ಸಂ ಪಶ್ಯನ್ ಆತ್ಮಾನಂ ಜಗದೀಕ್ಷಯನ್ ।
ಜಗದಾತ್ಮಾನಮಿಶಾನಿ ಪಶ್ಯೇನ್ಮಯಿ ಚಿದಾತ್ಮಕಂ ॥ ೧೦೨ ॥

ನಿತ್ಯದಲ್ಲಿ ಶಿವಧ್ಯಾನರತನಾಗಿಯೂ, ದೃಢವಾದ ಮನಸ್ಸುಳ್ಳವನಾಗಿಯೂ, ಜಿತೇಂದ್ರಿಯನಾಗಿಯೂ, ತ್ರಿಕಾಲದಲ್ಲಿಯೂ ಲಿಂಗಾರ್ಚನೆ ಮಾಡಬೇಕು. ಮತ್ತು ಶಿವಪಂಚಾಕ್ಷರಿಯನ್ನು ಜಪಿಸತಕ್ಕವನಾಗಿಯೂ ಶಿವನಾಮಂಗಳ ಕೀರ್ತನೆಯನ್ನು ಮಾಡುತ್ತ ನಾನೇ ಅವನೆಂದು ಭಾವಿಸಿ ಸರ್ವವೂ ಜಗಜ್ಜೀವಮಯವೂ, ಚೈತನ್ಯಮಯ ವಿಗ್ರಹವೂ, ಪಂಚಾಕ್ಷರಮಯವೂ ಆದ ಲಿಂಗವನ್ನು ಸದಾ ಪೂಜಿಸತಕ್ಕದ್ದು. ಆರಂಭದಲ್ಲಿ ಶಿವಧ್ಯಾನರತನಾಗಿರಬೇಕೆಂದೇ ಹೇಳಲಾಗಿದೆ.

**ಪಾರಮೇಶ್ವರಾಗಮ—೨೨ ನೇ ಪುಟ, ಶ್ಲೋಕ ೩೪**

**"ಕರ್ಮಣಾ ಮನಸಾ ವಾಚಾ ಜಾಗ್ರತ್ ಸ್ವಪ್ನ ಸುಷುಪ್ತಿಷುಮದನುಸ್ಮರಣಂ ಧ್ಯಾನಂ"**

ಕರ್ಮದಿಂದ, ಮನಸ್ಸಿನಿಂದ, ಮಾತಿನಿಂದ, ಜಾಗ್ರತೆ, ಸ್ವಪ್ನ, ಸುಷುಪ್ತಿಗಳಲ್ಲಿ ನನ್ನನ್ನು ಸ್ಮರಿಸುವದೇ ಧ್ಯಾನವೆಂದು ಪರಮಾತ್ಮನು ಪಾರ್ವತಿಗೆ ಬೋಧಿಸಿರುತ್ತಾನೆ.

ಈ ಧ್ಯಾನಯೋಗವನ್ನು ಉಪನಿಷತ್ತುಗಳಲ್ಲಿಯೂ ನಾವು ಕಾಣಬಹುದು.

**ಶ್ವೇತಾಶ್ವತರೋಪನಿಷತ್—ಒಂದನೇ ಅಧ್ಯಾಯ, ಶ್ಲೋಕ ೩**

**"ತೇ ಧ್ಯಾನಯೋಗಾನುಗತಾಃ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ"**

ಬ್ರಹ್ಮವಾದಿಗಳಾದ ಋಷಿಗಳು ದೇವನ ಗುಪ್ತವಾದ ಆತ್ಮಶಕ್ತಿಯನ್ನು ಧ್ಯಾನಯೋಗದಿಂದ ಕಂಡುಹಿಡಿದರು.

**ಶ್ವೇತಾಶ್ವತರೋಪನಿಷತ್—೧ ನೇ ಅಧ್ಯಾಯ, ಶ್ಲೋಕ ೧೪**

ಸ್ವದೇಹಂ ಅರಣಿಂ ಕೃತ್ವಾ ಪ್ರಣವಂ ಚೋತ್ತರಾರಣಿಂ ।
ಧ್ಯಾನನಿರ್ಮಥನಾಭ್ಯಾಸಾದ್ದೇವಂ ಪಶ್ಯನ್ ನಿಗೂಢವತ್ ॥

ತನ್ನ ದೇಹವನ್ನು ಅರಣಿಯನ್ನಾಗಿಯೂ, ಪ್ರಣವವನ್ನು ಉತ್ತರಾರಣಿಯನ್ನಾಗಿಯೂ ಮಾಡಿ ಧ್ಯಾನನಿರ್ಮಥನಾಭ್ಯಾಸಗಳಿಂದ ಗೂಢನಾದ ದೇವನನ್ನು ನೋಡಿದರು.

**ಕೈವಲ್ಯೋಪನಿಷತ್—ಪ್ರಥಮ ಖಂಡ**

ಆತ್ಮಾನಂ ಅರಣಿಂ ಕೃತ್ವಾ ಪ್ರಣವಂ ಚೋತ್ತರಾರಣಿಂ ।
ಧ್ಯಾನನಿರ್ಮಥನಾಭ್ಯಾಸಾತ್ ಪಾಪಂ ದಹತಿ ಪಂಡಿತಃ ॥

ಈ ವಾಕ್ಯವು ಶ್ವೇತಾಶ್ವತರೋಪನಿಷತ್ತಿನ ವಾಕ್ಯದಂತೆಯೇ ಇದ್ದು ಕೊನೆಯಲ್ಲಿ ಕೊಂಚ ಭೇದವಿರುತ್ತದೆ. ಪಂಡಿತನಾದವನು ಧ್ಯಾನನಿರ್ಮಥನಗಳಿಂದ ಪಾಪವನ್ನು ನಾಶ ಮಾಡುತ್ತಾನೆ.

**ಮುಕ್ತಿಕೋಪನಿಷತ್**

ಗುರೂಪದಿಷ್ಟಮಾರ್ಗೇಣ ಧ್ಯಾಯನ್ ಮದ್ಗುಣಮನ್ವಯಂ ।
ಮತ್ಸಾಯುಜ್ಯಂ ದ್ವಿಜಃ ಸಮ್ಯಕ್ ಭಜೇದ್ಭ್ರಮರಕೀಟವತ್ ॥

ಗುರೂಪದೇಶದಿಂದ ನಾಶರಹಿತನಾದ ನನ್ನ ಗುಣಗಳನ್ನು ಯಾವಾತನು ಧ್ಯಾನಿಸುತ್ತಾನೆಯೋ ಆತನು ನನ್ನ ಸಾಯುಜ್ಯವನ್ನು ಭ್ರಮರಕೀಟನ್ಯಾಯದಂತೆ ಹೊಂದುತ್ತಾನೆ.

ಶಿವಾಗಮಗಳೂ, ಉಪನಿಷತ್ತುಗಳೂ ಧ್ಯಾನಯೋಗವನ್ನು ಅನೇಕ ತರಹದಿಂದ ವರ್ಣಿಸಿರುತ್ತವೆ. ಈ ಪ್ರಕರಣದಲ್ಲಿ ಶ್ರೀ ಬಸವಣ್ಣನವರು ಲೋಕದೊಳಗೆ ಸರ್ವಶ್ರೇಷ್ಠರಾದ ಧ್ಯಾನಯೋಗಿಗಳೆಂಬುವದು ಅವರ ಹೃದಯಂಗಮಗಳಾದ ಅನೇಕ ವಚನಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಈ ವಿಷಯದಲ್ಲಿ ಶ್ರೀ ಬಸವಣ್ಣನವರ ಅಸಂಖ್ಯ ವಚನಗಳಿದ್ದರೂ ವಿಸ್ತಾರವಾಗುವದೆಂದು ಬಿಡಲಾಗಿದೆ. ಲೋಕದಲ್ಲಿ ಬಸವಣ್ಣನವರಂತಹ ಧ್ಯಾನಯೋಗಿಗಳು ವಿರಳರೆಂಬುವದರಲ್ಲಿ ಆವ ಸಂಶಯವೂ ಇರುವದಿಲ್ಲ.

# ಏಳನೆಯ ಪ್ರಕರಣ

## ಕ್ರಿಯಾಯೋಗವೂ ಬಸವಣ್ಣನವರೂ

ಶ್ರೀ ಬಸವಣ್ಣನವರು ಧ್ಯಾನ, ಭಕ್ತಿ, ಜ್ಞಾನಯೋಗಿಗಳಾಗಿರುವಂತೆ ಮಹಾ ಕ್ರಿಯಾಯೋಗಿಗಳೂ ಆಗಿದ್ದರೆಂಬುವದು ಅವರ ಪ್ರಚಂಡತರಗಳಾದ ಅನೇಕ ಕಾರ್ಯಗಳಿಂದಲೂ, ನಡೆ, ನುಡಿ, ರೀತಿ, ನೀತಿಗಳಿಂದಲೂ ಸಿದ್ಧವಾಗುತ್ತದೆ. ವೀರಶೈವ ಧರ್ಮವಾದರೂ ಜ್ಞಾನ ಕ್ರಿಯಾತ್ಮಕವಾಗಿರುವದು. ಕ್ರಿಯೆಯಿಲ್ಲದ ಜ್ಞಾನವನ್ನಾಗಲೀ, ಜ್ಞಾನವಿಲ್ಲದ ಕ್ರಿಯೆಯನ್ನಾಗಲೀ ವೀರಶೈವರು ಒಪ್ಪುವದಿಲ್ಲ. ನಡೆಯಂತೆ ನುಡಿ, ನುಡಿಯಂತೆ ನಡೆ ಎರಡೂ ಬೇಕು. ನುಡಿ (ಜ್ಞಾನ) ನಡೆ (ಕ್ರಿಯಾ). ಒಂದು ವೃಕ್ಷದಲ್ಲಿ ಹಣ್ಣುಗಳಿರುತ್ತವೆಂದು ತಿಳಿದುಕೊಳ್ಳುವದು ಜ್ಞಾನವಾಗುವದು. ಆ ವೃಕ್ಷವನ್ನು ಹತ್ತಿ, ಹಣ್ಣುಗಳನ್ನು ತಿನ್ನುವದು ಕ್ರಿಯೆಯೆನಿಸುವದು ಅಥವಾ ಪರಸ್ತ್ರೀಯರನ್ನು ಮುಟ್ಟಬಾರದೆಂಬುವದೇ ಜ್ಞಾನ; ಅದರಂತೆ ಆಚರಣೆಯನ್ನು ಮಾಡುವದೇ ಕರ್ಮ. ಹೀಗೆ ಜ್ಞಾನ ಕರ್ಮಗಳೆರಡೂ ಬೇಕಾಗುವವೆಂದು ವೀರಶೈವ ಸಿದ್ಧಾಂತವು ಹೇಳುವದು. ಇವುಗಳೆರಡಕ್ಕೂ ಭಕ್ತಿಯು ಮೂಲಾಧಾರವಾಗಿರುವದು. ಭಕ್ತಿ ಇಲ್ಲದೆ ಇವೆರಡೂ ಮಾನವನ ಮೂಲಧ್ಯೇಯಕ್ಕೆ ಉಪಯೋಗ ಬೀಳಲಾರವು. ಜ್ಞಾನ ಕರ್ಮಗಳೆರಡೂ ಒಂದು ಬಂಡಿಗೆ ಎರಡು ಚಕ್ರಗಳಿದ್ದಂತೆಯೇ ಸರಿ. ಒಂದೇ ಚಕ್ರದಿಂದ ಬಂಡಿಯು ಹೇಗೆ ನಡೆಯಲಾರದೋ ಅಥವಾ ಒಂದು ಪಕ್ಷಿಗೆ ಎರಡು ರೆಕ್ಕೆಗಳಿಲ್ಲದಿದ್ದರೆ ಹೇಗೆ ಹಾರಲಾರದೋ ಹಾಗೆಯೇ ಈ ಜ್ಞಾನ ಕರ್ಮಗಳೆರಡೂ ಇರುವವು. ಜೀವರೂಪವಾದ ಪಕ್ಷಿಯು ಜ್ಞಾನ ಕರ್ಮಗಳೆಂಬ ಎರಡು ರೆಕ್ಕೆಗಳಿಂದ ತನ್ನ ಸಾಧನದ ಗುರಿಯನ್ನು ಮುಟ್ಟಲು ಸಮರ್ಥವಾಗುವದು. ದ್ವೈತಿಗಳು ಕೇವಲ ಕರ್ಮವನ್ನೂ ಅದ್ವೈತಿಗಳು ಕೇವಲ ಜ್ಞಾನವನ್ನೂ ನಂಬುತ್ತಾರೆ. ವೀರಶೈವರು ಜ್ಞಾನ ಕರ್ಮಗಳೆರಡೂ ಬೇಕೆಂದು ತಿಳಿಯುತ್ತಾರೆ.

**ಶಿವಾಗಮ**

ಅಂಧಪಂಗುವದನ್ಯೋನ್ಯ ಸಾಪೇಕ್ಷೇ ಜ್ಞಾನಕರ್ಮಣಃ ।
ಫಲೋತ್ಪತ್ತೌ ವಿರಕ್ತಸ್ಯ ತಸ್ಮಾತ್ತದ್ದ್ವಯಮಾಚರೇತ್ ॥
ಜ್ಞಾನಂ ಪ್ರಧಾನಂ ನ ತು ಕರ್ಮಹೀನಂ ಕರ್ಮಪ್ರಧಾನಂ ನ ತು ಚಿದ್ವಿಹೀನಮ್ ।
ತಸ್ಮಾದ್ದ್ವಯೋರೇವ ಭವೇತ್ಪ್ರಸಿದ್ಧಿಃ ನ ಹ್ಯೇಕಪಕ್ಷೋ ವಿಹಗಃ ಪ್ರಯಾತಿ ॥
ಜ್ಞಾನಮಾಚಾರಹೀನಂ ಚೇತ್ತಜ್ಜ್ಞಾನಂ ತು ವೃಥಾ ವೃಥಾ ।
ಕೇವಲಂ ಕರ್ಮಮಾತ್ರೇಣ ಜನ್ಮಕೋಟಿ ಶತೈರಪಿ ।
ನಾತ್ಮನಾಂ ಜ್ಞಾಯತೇ ಮುಕ್ತಿರ್ಜ್ಞಾನಂ ಮುಕ್ತೇಸ್ತು ಕಾರಣಂ ॥
ಅಂಧೋ ಯಥಾ ಪುರಸ್ಥಾನಿ ವಸ್ತೂನಿ ಚ ನ ಪಶ್ಯತಿ ।
ಜ್ಞಾನಹೀನಸ್ತಥಾ ದೇಹಿ ನಾತ್ಮಸ್ಥಂ ವೀಕ್ಷತೇ ಶಿವಂ ॥

ಕುರುಡ ಕುಂಟರಂತೆ ಜ್ಞಾನ ಕರ್ಮಗಳು ಒಂದಕ್ಕೊಂದು ಸಾಪೇಕ್ಷಗಳಾಗಿರುತ್ತವೆ. ಫಲೋತ್ಪತ್ತಿಯಲ್ಲಿ ನಿಸ್ಪೃಹನಾದ ಮನುಷ್ಯನು ಇವೆರಡನ್ನೂ ಆಚರಿಸಬೇಕು. ಕರ್ಮಹೀನವಾದ ಜ್ಞಾನವು ಹೇಗೆ ಪ್ರಧಾನವಾಗಲಾರದೋ ಅದರಂತೆ ಜ್ಞಾನಹೀನವಾದ ಕರ್ಮವು ಪ್ರಧಾನಪೋಷಕವಾಗಲಾರದು. ಆದ್ದರಿಂದ ಅವೆರಡೂ ಕೂಡಿದರೆ ಒಂದು

ಕಾರ್ಯವಾಗುವದು. ಆಚಾರವಿಲ್ಲದ ಜ್ಞಾನವು ವ್ಯರ್ಥವಾದುದು. ಒಂದೇ ರೆಕ್ಕೆಯಿಂದ ಪಕ್ಷಿಯು ಹಾರಲಾರದು. ಕೇವಲ ಕರ್ಮಮಾತ್ರದಿಂದ ಕೋಟಿ ಜನ್ಮಗಳಲ್ಲಿಯೂ ಕೂಡ ಆತ್ಮರುಗಳಿಗೆ ಮುಕ್ತಿಯಾಗುವದಿಲ್ಲ. ಜ್ಞಾನವೂ ಮುಕ್ತಿಗೆ ಕಾರಣವಾಗಿರುವದು. ಕುರುಡನು ತನ್ನ ಎದುರಿಗೆ ಇರತಕ್ಕ ವಸ್ತುಗಳನ್ನು ಹೇಗೆ ನೋಡಲಾರನೋ ಹಾಗೆ ಜ್ಞಾನಹೀನನಾದ ಮನುಷ್ಯನು ಆತ್ಮನಲ್ಲಿರತಕ್ಕ ಶಿವನನ್ನು ನೋಡಲಾರನು.

ಆದ್ದರಿಂದಲೇ ಕೇವಲ ಕರ್ಮವನ್ನಾಗಲೀ, ಕೇವಲ ಜ್ಞಾನವನ್ನಾಗಲೀ ಆಶ್ರಯ ಮಾಡಕೂಡದೆಂದೇ ಬಸವಾದಿ ಪ್ರಮಥರ ತತ್ವವಾಗಿರುತ್ತದೆ. ಕೇವಲ ಜ್ಞಾನದಿಂದ ಮೋಕ್ಷವಿಲ್ಲವೆಂಬುವದಕ್ಕೆ ತೋಂಟದ ಸಿದ್ಧೇಶ್ವರರು—

೩೨೪

"ವಿಶ್ವದಲ್ಲಿ ಜ್ಞಾನ ಪ್ರತಿಷ್ಠೆಯ ಮಾಡುತ್ತಿಪ್ಪರು ಗೋವಿನ ದೇಹದಲ್ಲಿ ಘೃತವಿರ್ಪುದಯ್ಯ ಅದು ಆ ಗೋವಿಗೆ ಪುಷ್ಟಿಯಾಗಲಾರದು ಆ ಗೋವ ಪೋಷಿಸಿ ಹಾಲ ಕರೆದು ಕಾಸಿ ಹೆಪ್ಪು ಹಾಕಿ ಆ ದಧಿಯ ಮಥನವ ಮಾಡಿ ಬೆಣ್ಣೆಯ ತೆಗೆದು ಆ ನವನೀತ ತುಪ್ಪವ ಕಾಸಿ ಆ ಗೋವಿಗೆ ಕುಡಿಸಿದರೆ ದಿನದಿನಕ್ಕೆ ಪುಷ್ಟಿಯಪ್ಪುದು ತಪ್ಪದಯ್ಯ ಈ ಪ್ರಕಾರ ಸತ್ಕ್ರಿಯೋಪಚಾರವ ಮಾಡಲಾಗಿ ಜ್ಞಾನವಹುದು ಜ್ಞಾನವಾಗಿ ಸಮ್ಯಜ್ಞಾನವಹುದು ಸಮ್ಯಜ್ಞಾನವಾಗಿ ಪ್ರಾಣವೇ ಲಿಂಗವಪ್ಪುದು ತಪ್ಪದು ಸಂದೇಹವಿಲ್ಲವಯ್ಯ ಮಹಾಲಿಂಗ ಗುರು ಸಿದ್ಧೇಶ್ವರಪ್ರಭುವೇ"

೩೨೫

ಅಖಂಡೇಶ್ವರದೇವರು—

"ಕ್ರಿಯೆಯೇ ಅಧಿಕವೆಂಬ ದೊಡ್ಡ ಸಿದ್ಧಾಂತಿಗಳ ಮಾತು ಸೊಗಸದಯ್ಯ ಅದೇನು ಕಾರಣವೆಂದರೆ ಆವುದಾನೊಂದು ಪಕ್ಷಿಯು ಉಭಯ ರೆಕ್ಕೆಗಳಿಂದ ಗಗನಕ್ಕೆ ಹಾರುವಂತೆ ಅಂತರಂಗದಲ್ಲಿ ಸಮ್ಯಜ್ಞಾನ ಬಹಿರಂಗದಲ್ಲಿ ಶಿವಸತ್ಕ್ರಿಯಾ ಸಮ್ಯಜ್ಞಾನ ಸಂಪನ್ನರಾದ ಶರಣರ ರೀತಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ"

ಈ ವಚನವು ಜ್ಞಾನ ಕ್ರಿಯೆಗಳೆರಡೂ ಬೇಕೆಂದು ಸಮರ್ಥಿಸುತ್ತದೆ.

೩೨೬

ತೋಂಟದ ಸಿದ ಲಿಂಗೇಶ್ವರರು—

"ಕ್ರಿಯೆಯಿಲ್ಲದ ಜ್ಞಾನವು ಪ್ರಯೋಜನವಿಲ್ಲವಯ್ಯ ಅದು ಹೇಗೆಂದರೆ ದೇಹವಿಲ್ಲದ ಪ್ರಾಣಕ್ಕೆ ಆಶ್ರಯವುಂಟೆ? ಅಯ್ಯಾ ಆ ಪ್ರಾಣವಿಲ್ಲದ ಕಾಯಕ್ಕೆ ಚೈತನ್ಯವುಂಟೆ? ಅಯ್ಯಾ ಅದು ಕ್ರಿಯೆ ಇಲ್ಲದ ಜ್ಞಾನಕ್ಕೆ ಆಶ್ರಯವಿಲ್ಲ ಜ್ಞಾನವಿಲ್ಲದ ಕ್ರಿಯೆಗೆ ಆಶ್ರಯವಿಲ್ಲ ಇದುಕಾರಣ ಜ್ಞಾನ ಕ್ರಿಯೋಪಚಾರಗಳಿರಬೇಕೆಂದೆನಯ್ಯಾ ಮಹಾಲಿಂಗ ಗುರು ಸಿದ್ಧೇಶ್ವರಪ್ರಭುವೇ"

೩೨೭

ಚನ್ನಬಸವೇಶ್ವರರು—

"ಕ್ರಿಯೆಯೇ ಜ್ಞಾನ ಜ್ಞಾನವೇ ಕ್ರಿಯೆ ಜ್ಞಾನವೆಂದರೆ ತಿಳಿಯುವದು ಕ್ರಿಯೆಯೆಂದರೆ ಮಾಡುವದು ಪರಸ್ತ್ರೀ ಭೋಗಿಸಬಾರದೆಂಬುದೇ ಜ್ಞಾನ ಅದರಂತೆ ಆಚರಿಸುವದೇ ಕ್ರಿಯೆ ಅಂತು ಆಚರಿಸದಿದ್ದರೆ ಅಜ್ಞಾನ ನೋಡಾ ಕೂಡಲಚನ್ನಸಂಗಮದೇವಾ"

ಹೀಗೆಯೇ ಜ್ಞಾನ ಕ್ರಿಯೆಗಳೆರಡನ್ನೂ ಸಮರ್ಥಿಸುವ ಅನೇಕ ವಚನಗಳಿರುತ್ತವೆ.

ಕರ್ಮವು ಪ್ರತಿಯೊಬ್ಬ ಮಾನವನಿಗೂ ಬೇಕು. ಕರ್ಮ ಮಾಡದ ಮನುಷ್ಯನು ಲೋಕದಲ್ಲಿ ಹೇಡಿಯಾಗಿ ಅತ್ಯಂತ ನಿಂದಿತನೆನ್ನಿಸಿಕೊಳ್ಳುತ್ತಾನೆ. ಅವನ ಬಾಳುವೆ ಜನ ಸಾಮಾನ್ಯದಲ್ಲಿ ತಿರಸ್ಕರಣೀಯವಾಗುತ್ತದೆ. ಆದ್ದರಿಂದಲೇ ಮಹಾನುಭಾವರಾದ ಬಸವಣ್ಣನವರು ಕರ್ಮದ ಕಟ್ಟಳೆಯನ್ನು ಹಾಕಿ, ಪ್ರತಿಯೊಬ್ಬನೂ ಕಾರ್ಯವನ್ನು ಮಾಡಲೇಬೇಕೆಂದು ಹೇಳಿ ಕೃತಿಗಿಳಿಸಿ ವೀರಶೈವ ಸಮಾಜವು ಸ್ವಾವಲಂಬನೆಯಾಗುವಂತೆ ಮಾಡಿದರು. ಆಲಸ್ಯವಂತರಿಗೆ ಸಮಾಜದಲ್ಲಿ ಆಶ್ರಯವಿಲ್ಲದಾಯಿತು. ಗುರುವಾದರೂ ಕಾಯಕವನ್ನು ಮಾಡಲೇಬೇಕು; ಲಿಂಗಕ್ಕಾಗಲೀ, ಜಂಗಮಕ್ಕಾಗಲೀ ಕಾಯಕವು ಬೇಕೇ ಬೇಕು ಎಂಬುವದನ್ನು ಪ್ರಬಲವಾಗಿ ರೂಢಿಯಲ್ಲಿ ತಂದರು. ಯಾವನೂ ಭಿಕ್ಷೆಯನ್ನು ಮಾಡಬಾರದು; ಯಾವದಾದರೊಂದು ಕಾಯಕವನ್ನು ಮಾಡಿ ತನ್ನ ಉದರ ಪೋಷಣೆಯನ್ನು ಮಾಡಿಕೊಳ್ಳಬೇಕಲ್ಲದೆ, ಅದರಲ್ಲಿ ಕೆಲವಂಶವನ್ನು ಗುರುಲಿಂಗ ಜಂಗಮರಿಗೆ ಅರ್ಪಿಸಬೇಕು. ಅವರಾದರೂ ಸಮಾಜದ ಕಾರ್ಯಗಳಲ್ಲಿ ನಿರತರಾಗಿರಬೇಕು. ಪ್ರತಿಯೊಂದು ಉದ್ಯೋಗವೂ ವೀರಶೈವರಲ್ಲಿ ಇರುವಂತೆ ಮಾಡಿ ಸಮಾಜದ ಹಣವು ಸಮಾಜದಲ್ಲಿಯೇ ಉಳಿಯಬೇಕೆಂಬುವದು ಅವರ ಇಚ್ಛೆಯಾಗಿದ್ದಿತು. ಅದರಂತೆಯೇ ಮಾಡಿ ಕೀರ್ತಿಶಾಲಿಗಳಾದರು. ಯಾವ ಕಾರ್ಯಗಳನ್ನೇ ಮಾಡಲಿ ಸಕಾಮಿಗಳಾಗದೆ ಭಕ್ತಿಯಿಂದ ಕೂಡಿ ಮಾಡಬೇಕು. ಅದರಲ್ಲಿ ಗುರುಲಿಂಗ ಜಂಗಮರ ತೃಪ್ತಿಯೂ ಆಗಬೇಕು. ಇದೇ ಅವರ ಕಾಯಕದ ಹೆಗ್ಗುರುತಾಗಿದ್ದಿತು. ವೀರಶೈವನಾದವನು ವೀರಶೈವನಿಂದ ಮಾಡಿದ ಸಾಮಾನುಗಳನ್ನೇ ಉಪಯೋಗಿಸಬೇಕು. ಹೀಗೆ ಕಟ್ಟಳೆ ಮಾಡಿ ಅವರವರ ಯೋಗ್ಯತೆ ಪ್ರಕಾರ ಕಾರ್ಯಮಾಡಲಿಕ್ಕೆ ಹಚ್ಚಿದ್ದರಿಂದ ಆ ಕಾಲದಲ್ಲಿ ಬಹುಮಟ್ಟಿಗೆ ವೀರಶೈವ ಸಮಾಜದಲ್ಲಿ ಆರ್ಥಿಕತೊಂದರೆಯಾಗಲಿಲ್ಲ. ಇದು ಈಗಿನ ಸಾಮ್ಯವಾದದ ಮಾರ್ಗವನ್ನು ಅನುಸರಿಸುತ್ತದೆ. ಅಥವಾ ಬಸವಣ್ಣನವರ ಆ ಕಾಲದ ಸಾಮ್ಯವಾದವು ಈಗ ಜಗತ್ತಿನ ಎಲ್ಲೆಡೆಯಲ್ಲಿಯೂ ತಲೆಯೆತ್ತಿ ಮೆರೆಯಲು ಪ್ರಾರಂಭಿಸಿರುತ್ತದೆ. ಬಸವಣ್ಣನವರು ಪ್ರತಿಯೊಂದು ಕಾರ್ಯದಲ್ಲಿ ಸಾಮ್ಯವಾದ ಹೂಡಿದುದು ಸಾಮಾನ್ಯವಾದ ಮಾತಲ್ಲ. ಜಾತಿಯಲ್ಲಿಯೂ ಸಾಮ್ಯವಾದ, ರೀತಿಯಲ್ಲಿಯೂ ಸಾಮ್ಯವಾದ, ಹೀಗೆ ನಡೆನುಡಿಗಳಲ್ಲಿಯೂ ಸಾಮ್ಯವಾದವನ್ನು ಉಪಯೋಗಿಸಿದ್ದುದು ಅಸಾಧಾರಣ ಕಾರ್ಯವಾಗಿರುತ್ತದೆ. ತಾನು ಬ್ರಾಹ್ಮಣಕುಲದಲ್ಲಿ ಲೌಕಿಕ ರೂಢಿಗನುಸರಿಸಿ ಹುಟ್ಟಿದ್ದರೂ ಶಿವಭಕ್ತರಾದ ಹಾರುವ ಮೊದಲು ಅಂತ್ಯಜ ಕಡೆಯಾಗಿ ಎಲ್ಲರನ್ನೂ ಒಂದೇ ಎಂಬ ಎನ್ನುವ ಮಾತನ್ನು ಹೇಳುವದು ಬಹಳ ಕಷ್ಟ. ಹೇಳಿದಂತೆ ಆಚರಿಸಿ ತೋರಿಸುವದು ಮತ್ತಷ್ಟು ಕಷ್ಟಕರವಾದುದೇ ಸರಿ. ಆರ್ಥಿಕ ಸಮಸ್ಯೆಯನ್ನು

ಇಷ್ಟು ಸುಲಭವಾಗಿ ಬಸವಣ್ಣನವರು ಬಿಡಿಸಿದ್ದುದು ಸಾಮಾನ್ಯ ಕಾರ್ಯವಲ್ಲ. ಫ್ರಾನ್ಸಿನ ಮಹಾಕ್ರಾಂತಿ—ಅಂದರೆ ಕಾರ್ಲ್ ಮಾರ್ಕ್ಸನಿಂದ—ರಷ್ಯಾದ ಮಹಾಕ್ರಾಂತಿ ಕಾರಕನಾದ ಲೆನಿನ್ನನವರೆಗೆ (೧೯೨೨) ಸಮಾಜ ಸತ್ತಾವಾದಿಗಳಿಂದ ಬಗೆಹರಿಯುದ ಆರ್ಥಿಕ ಪರಿಸ್ಥಿತಿಯನ್ನು ೮೦೦ ವರ್ಷಗಳ ಹಿಂದೆಯೇ ಇಷ್ಟು ಸುಲಭವಾಗಿ ಬಿಡಿಸಿದ್ದುದು —ಈಗಿನ ಮಹಾನ್ ಮಹಾನ್ ಅರ್ಥಶಾಸ್ತ್ರ ಪಂಡಿತರನ್ನು ಬೆರಗುಗೊಳಿಸುವದಲ್ಲದೆ, ಅವರ ಅರ್ಥಶಾಸ್ತ್ರ ಪಾಂಡಿತ್ಯದ ಪ್ರದರ್ಶನವನ್ನೂ ಮಾಡಿಕೊಡುತ್ತಲಿದೆ.

ಪ್ರಪಂಚದಲ್ಲಿ ಮನುಷ್ಯನಿಗೆ ನಿತ್ಯದ ವ್ಯವಹಾರದಲ್ಲಿ ಅತ್ಯಗತ್ಯವಾಗಿ ಬೇಕಾದ ಎಲ್ಲ ವಸ್ತುಗಳಿಗಿಂತಲೂ ಕರ್ಮವು ಅತ್ಯಾವಶ್ಯಕವಾದುದು. ಕರ್ಮದ ಸಾಧನೆಯು ಸ್ಥೂಲ ವಸ್ತುಗಳಿಗಿಂತಲೂ ಹೇಗೆ ಸ್ಥೂಲವಾದುದಾಗಿದೆಯೋ ಹಾಗೆಯೇ ಕರ್ಮದ ಸಂಸ್ಕಾರ ಶಕ್ತಿಯಾದರೂ ಅತ್ಯಂತ ಬಲಶಾಲಿಯಾಗಿಯೂ, ಇಂದ್ರಿಯಗಳಿಗೆ ಮೀರಿದ್ದಾಗಿಯೂ ಇರುತ್ತದೆ. ಶುಭಕರ್ಮವೇ ಆಗಲಿ, ಅಶುಭಕರ್ಮವೇ ಆಗಲಿ ಅದರ ಯೋಗ್ಯತೆ ಅಥವಾ ಶಕ್ತಿಗೆ ಅನುಸಾರವಾಗಿ ಕರ್ತೃವಿಗೆ ಈ ಜನ್ಮದಲ್ಲಿಯಾಗಲೀ, ಎರಡನೆಯ ಜನ್ಮದಲ್ಲಿಯಾಗಲೀ, ಶುಭಫಲವಾಗಲಿ, ಅಶುಭಫಲವಾಗಲೀ, ಅವಶ್ಯವಾಗಿ ಆಗಿಯೇ ತೀರುವದೆಂಬುವದರಲ್ಲಿ ಲೇಶಮಾತ್ರವಾದರೂ ಸಂಶಯವಿಲ್ಲ. ಕರ್ಮಾನುಸಾರವಾಗಿಯೇ ಮನುಷ್ಯನಿಗೆ ಅನೇಕ ಯೋನಿಗಳಲ್ಲಿ ಸಂಚಾರಮಾಡುವ ಪ್ರಸಂಗ ಬರುತ್ತದೆ. ಕರ್ಮದ ಭೇದದಿಂದಲೇ ಜನ್ಮಾಂತರದಲ್ಲಿ ಸ್ವರ್ಗವಾಗಲೀ, ನರಕವಾಗಲೀ ಆಗುವದು ಸಿದ್ಧವಾದುದು. ಆದ್ದರಿಂದಲೇ ಬಸವಣ್ಣನವರು—"ಆಚಾರವೇ ಸ್ವರ್ಗ, ಅನಾಚಾರವೇ ನರಕ"ವೆಂದು ಕರ್ಮಭೇದದಿಂದ ಫಲಭೇದವನ್ನು ಅಂಗೀಕರಿಸಿ ಮಾನವಕುಲದ ಉದ್ಧಾರಕ್ಕೆ ಹೆಣಗಿದರು.

೩೨೮

"ಮರ್ತ್ಯಲೋಕವೆಂಬುವದೊಂದು ಕರ್ತಾರನ ಕಮ್ಮಟವಯ್ಯಾ
ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು ಇಲ್ಲಿ ಸಲ್ಲದವರು ಅಲ್ಲಿಯೂ
ಸಲ್ಲರು"

ಈ ವಚನವಾದರೂ ಕರ್ಮಕ್ಕೆ ತಕ್ಕ ಫಲವುಂಟೆಂದು ಹೇಳುತ್ತದೆ. ಕರ್ಮದ ಸಂಸ್ಕಾರದಿಂದಲೇ ನೀಚವಂಶದಲ್ಲಿ ಹುಟ್ಟಿದವರು ಶ್ರೇಷ್ಠರಾಗುವರು. ಲಿಂಗಧಾರಣವೆಂಬುವ ಸಂಸ್ಕಾರದ ಬಲದಿಂದ ಮಾಂಸಪಿಂಡವಳಿದು ಮಂತ್ರಪಿಂಡನಾಗಿ ಭವಿಯಾದವನು ಭಕ್ತನಾಗುವನು. ಆದ್ದರಿಂದಲೇ—

"ಜನ್ಮನಾ ಜಾಯತೇ ಶೂದ್ರಃ ಕರ್ಮಣಾ ದ್ವಿಜ ಉಚ್ಯತೇ" ಎಂದು ಭಗವದ್ಗೀತೆಯೂ ಕೂಡ ಕರ್ಮಾಧಿಕ್ಯವನ್ನು ಹೇಳುತ್ತದೆ. ಕರ್ಮದ ಸಂಸ್ಕಾರದ ಬಲದಿಂದಲೇ ಶಿಲೆಯಲ್ಲಿ ದೇವತ್ವವು ಪ್ರಾಪ್ತಿಯಾಗುತ್ತದೆಂಬುವದನ್ನು ಸೂಕ್ಷ್ಮದೃಷ್ಟಿಯಿಂದ ವಿಚಾರಿಸಿದರೆ ಕರ್ಮದ ಅತ್ಯದ್ಭುತಶಕ್ತಿಯು ತೋರಿಬರುತ್ತದೆ. ಸತ್ವಗುಣಾತಿಶಯವನ್ನು ತೋರಿಸುವ ಕರ್ಮಕ್ಕೆ ಪುಣ್ಯಕರ್ಮವೆಂದೂ, ತಮೋಗುಣಾಧಿಕ್ಯವನ್ನು ತೋರಿಸುವ ಕರ್ಮಕ್ಕೆ ಪಾಪಕರ್ಮವೆಂದೂ ಹೇಳುತ್ತಾರೆ. ಸಾತ್ವಿಕಕರ್ಮದಿಂದ ಜೀವನ ಅಂತಃಕರಣವು ಕ್ರಮವಾಗಿ ಶುದ್ಧವಾಗಿ ಮುಕ್ತಿಪದವಿಯನ್ನು ಹೊಂದಿಸತಕ್ಕುದಾಗಿದೆ. ಪಾಪಕರ್ಮದ ದ್ವಾರದಿಂದ ಅಂತಃಕರಣದಲ್ಲಿ ಜಡತ್ವವುಂಟಾಗಿ ಅನೇಕ ಪ್ರಕಾರಗಳಾದ

ನೀಚವಂಶಗಳಲ್ಲಿ ಅಲೆದಾಡಬೇಕಾಗುತ್ತದೆ. ಆದ್ದರಿಂದ ಯಾವಾಗಲೂ ಧರ್ಮೋನ್ನತಿಯನ್ನು ಅಪೇಕ್ಷಿಸತಕ್ಕ ಮನುಷ್ಯನು ಪ್ರತಿಕ್ಷಣದಲ್ಲಿಯೂ ಕರ್ಮದಲ್ಲಿ ಸಾವಧಾನಚಿತ್ತನಾಗಿ ಇರತಕ್ಕದ್ದು.

**ಮಹಾಭಾರತ**

**ಕರ್ಮಣಾಮಾಭಾಂತಿದೇವಾಃ ಪರತ್ರ ಕರ್ಮಣೈವೇಹ ಪ್ಲಾವತೇ ಮಾತರಿಶ್ವಾ ।**
**ಅಹೋರಾತ್ರೇ ವಿದಧತ್ಕರ್ಮಣೈವ । ಅತಂದ್ರಿತಃ ಶಶ್ವದುದ್ಯೆತಿ ಸೂರ್ಯಃ ॥**
**ಮಾಸಾರ್ಧಮಾಸಾನಥ ನಕ್ಷತ್ರಯೋಗಾನತಂದ್ರಿತಶ್ಚಂದ್ರಮಾಶ್ಚಾಭ್ಯುಪೈತಿ ।**
**ಅತಂದ್ರಿತೋ ದದತೇ ಜಾತವೇದಾಃ ಸಮಿಧ್ಯಾಮಾನಃ ಕರ್ಮಕುರ್ವನ್ ಪ್ರಜಾಭ್ಯಃ ॥**
**ಅತಂದ್ರಿತಾ ಭಾರಮಿಮಂ ಮಹಾಂತಂ ಬಿಭರ್ತಿದೇವೀ ಪೃಥಿವೀಬಲೇನ ।**
**ಅತಂದ್ರಿತಾಃ ಶೀಘ್ರಮಪೋವಹಂತಿ ಸಂತರ್ಪಯಂತ್ಯಃ ಸರ್ವಭೂತಾನಿ ನದ್ಯಃ ॥**
**ಹಿತ್ವಾಸುಖಂ ಮಾನಸಶ್ಚ ಪ್ರಿಯಾಣಿ ದೇವಃ ಶಕ್ರಃ ಕರ್ಮಣಾ ಶ್ರೈಷ್ಠ್ಯಮಾಪ ।**
**ಬೃಹಸ್ಪತಿರ್ಬ್ರಹ್ಮಚರ್ಯಂ ಚಚಾರ ಸಮಾಹಿತಃ ಸಂಶ್ರಿತಾತ್ಮಾ ಯಥಾವತ್ ॥**
**ಹಿತ್ವಾಸುಖಂ ಪ್ರತಿರುದ್ಧೇಂದ್ರಿಯಾಣಿ ತೇನ ದೇವಾನಾಂ ಆಗಮದ್ಗೌರವಂ ಸಃ ।**
**ತಥಾ ನಕ್ಷತ್ರಾಣಿ ಕರ್ಮಣಾ ಅಮುತ್ರಭಾಂತಿ ರುದ್ರಾದಿತ್ಯಾ ವಸವೋಽಥಾಪಿ ವಿಶ್ವೇ ॥**

ಕರ್ಮದ್ವಾರದಿಂದಲೇ ದೇವತೆಗಳು ಸ್ವರ್ಗದಲ್ಲಿ ಪ್ರಕಾಶಮಾನರಾಗಿರುತ್ತಾರೆ. ಕರ್ಮದಿಂದಲೇ ವಾಯುವು ಯಾವಾಗಲೂ ಬೀಸುತ್ತಲಿರುತ್ತಾನೆ. ಸೂರ್ಯನು ಆಲಸ್ಯರಹಿತನಾಗಿ ಹಗಲು ರಾತ್ರಿಗಳನ್ನುಂಟುಮಾಡುತ್ತ ನಿರಂತರ ಸಂಚರಿಸುತ್ತಾನೆ. ಚಂದ್ರನಾದರೂ ನಿರಾಲಸ್ಯನಾಗಿ ಮಾಸ ಪಕ್ಷ ನಕ್ಷತ್ರಾದಿಗಳನ್ನುಂಟುಮಾಡುತ್ತಾನೆ. ಅಗ್ನಿಯೂ ಕೂಡ ಯಜ್ಞಯಾಗಾದಿಗಳನ್ನು ಮಾಡಿದವರಿಗೆ ಫಲಗಳನ್ನು ಕೊಡುತ್ತಾನೆ. ಪೃಥ್ವಿಯು ತನ್ನ ಸಾಮರ್ಥ್ಯದಿಂದ ಅಧಿಕವಾದ ಭಾರವನ್ನು ಧರಿಸಿರುತ್ತದೆ. ನದಿಗಳು ಶೀಘ್ರವಾಗಿ ಹರಿಯುತ್ತ ಎಲ್ಲ ಜನಗಳನ್ನು ತೃಪ್ತಿಪಡಿಸುತ್ತ ಇರುತ್ತಲಿವೆ. ಇಂದ್ರನು ಸುಖವನ್ನು ತ್ಯಾಗಮಾಡಿ ಕರ್ಮದ ಬಲದಿಂದ ಶ್ರೇಷ್ಠನಾಗಿರುತ್ತಾನೆ. ಬೃಹಸ್ಪತಿಯು ಸಂಯಮಚಿತ್ತವುಳ್ಳವನಾಗಿ ಸುಖವನ್ನು ತ್ಯಜಿಸಿ ಇಂದ್ರಿಯಗಳನ್ನು ದಮನಮಾಡಿದ್ದರಿಂದಲೇ ದೇವತೆಗಳಿಗೆಲ್ಲ ಗುರುವಾದನು. ಹೀಗೆಯೇ ನಕ್ಷತ್ರಗಳು, ವಿಶ್ವೇದೇವ, ರುದ್ರ, ವಸುಗಳೆಲ್ಲರೂ ತಮ್ಮತಮ್ಮ ಶ್ರೇಷ್ಠಕರ್ಮಗಳಿಂದಲೇ ಇಂದಿಗೂ ಜಗತ್ತಿನಲ್ಲಿ ಶ್ರೇಷ್ಠರಾಗಿ ಪ್ರಕಾಶಿಸುತ್ತಲಿದ್ದಾರೆ.

ಕರ್ಮಾಧಿಕ್ಯವನ್ನು ಬೇರೆಬೇರೆ ಉಪನಿಷತ್ತುಗಳಲ್ಲಿಯೂ ಹೇರಳವಾಗಿ ಕಾಣಬಹುದು.

**ಬೃಹದಾರಣ್ಯಕೋಪನಿಷತ್**

**"ಪುಣ್ಯೋವೈ ಪುಣ್ಯಕರ್ಮಣಾ ಭವತಿ ಪಾಪಃ ಪಾಪೇನ"**

ಪುಣ್ಯಕರ್ಮಗಳಿಂದ ಪುಣ್ಯವೂ, ಪಾಪಕರ್ಮಗಳಿಂದ ಪಾಪವೂ ಬರುತ್ತದೆ.

**ಬೃಹದಾರಣ್ಯಕೋಪನಿಷತ್**

"ಸ ಯೋ ಮನುಷ್ಯಾಣಾಂ ರಾದ್ಧಃ ಸಮೃದ್ಧೋ ಭವತ್ಯನ್ಯೇಷಾಂ ಅಧಿಪತಿಃ ಸರ್ವೈಃ ಮಾನುಷ್ಯಕೈಃ ಭೋಗೈಃ ಸಂಪನ್ನತಮಃ ಸಮನುಷ್ಯಾಣಾಂ ಆನಂದಃ ಸ ಏಕಃ ಪಿತೄಣಾಂ ಜಿತಲೋಕಾನಾಂ ಆನಂದಾಃ ಸ ಏಕೋ ಗಂಧರ್ವಲೋಕ ಆನಂದೋಥ ಯೇ ಶತಂ ಗಂಧರ್ವಲೋಕ

ಆನಂದಾಃ ಸ ಏಕಃ ಕರ್ಮದೇವಾನಾಮಾನಂದೋವ ಕರ್ಮಣಾ ದೇವತ್ವಂ ಅಭಿಸಂಪದ್ಯಂತೇ ಅಥ ಯೇ ಶತಂ ಕರ್ಮದೇವಾನಾಂ ಆನಂದಾಃ ಸ ಏಕಃ ಆಜಾನದೇವಾ ನಾಮಾನಂದೋ ಯಶ್ಚ ಶ್ರೋತ್ರೀ ಯೋಽವೃಜಿನೋ ಕಾಮ ಹತೋಽಥ ಯೇ ಶತಮಾಜಾನದೇವಾನಾಮಾನಂದಾಃ ಸ ಏಕಃ ಪ್ರಜಾಪತಿ ಲೋಕ ಆನಂದೋ ಯಶ್ಚ ಶ್ರೋತ್ರೀಯೋ ಅವೃಜಿನೋಽಕಾಮಹತೋಽಥ ಯೇ ಶತಂ ಪ್ರಜಾಪತಿಲೋಕ ಆನಂದಾಃ ಸ ಏಕೋ ಬ್ರಹ್ಮಲೋಕ ಆನಂದೋಯಶ್ಚ ಶ್ರೋತ್ರೀಯೋ ಅವೃಜಿನೋ ಅಕಾಮಹತೋಽಥೈಷ ಏವ ಪರಮ ಆನಂದ ಏಷ ಬ್ರಹ್ಮಲೋಕಃ"

ಅಂದರೆ ಮನುಷ್ಯರಲ್ಲಿ ಯಾವಾತನು ಧನವಂತನೂ, ಸಕಲ ಭೋಗ ವಸ್ತುಗಳಿಂದ ಕೂಡಿದವನೂ, ಉಳಿದವರಿಗೆ ಅಧಿಪತಿಯಾಗಿಯೂ ಇರುತ್ತಾನೆಯೋ ಇದೇ ಮನುಷ್ಯರಲ್ಲಿ ಉತ್ತಮವಾದ ಆನಂದವೆನಿಸುತ್ತದೆ. ಮನುಷ್ಯರಿಗಿಂತ ನೂರುಪಟ್ಟು ಆನಂದವು ಪಿತೃದೇವತೆಗಳಿಗೂ, ಇವರಿಗಿಂತಲೂ ನೂರುಪಟ್ಟು ಆನಂದವು ಗಂಧರ್ವಲೋಕದವರಿಗೂ ಇರುತ್ತದೆ. ಇವರಿಗಿಂತಲೂ ನೂರುಪಟ್ಟು ಆನಂದವು ಕರ್ಮದಿಂದ ದೇವತೆಗಳಾದವರಿಗಿರುತ್ತದೆ. ಇವರಿಗಿಂತ ನೂರರಷ್ಟು ಹೆಚ್ಚು ಆನಂದವು ಆಜಾನಲೋಕದವರಿಗೆ ಇರುತ್ತದೆ. ಅವರಿಗಿಂತ ನೂರುಪಾಲು ಹೆಚ್ಚು ಆನಂದವು ಪ್ರಜಾಪತಿಲೋಕದವರಿಗೆ ಇರುತ್ತದೆ. ಇದಕ್ಕಿಂತಲೂ ನೂರುಪಟ್ಟು ಆನಂದವು ಬ್ರಹ್ಮಲೋಕದವರಿಗಿರುತ್ತದೆ.

ಈ ಉಪನಿಷತ್ತಿನ ತಾತ್ಪರ್ಯವೇನಂದರೆ ಯಾರು ಎಷ್ಟು ಉತ್ತಮ ಕರ್ಮಗಳನ್ನು ಮಾಡುತ್ತಾರೆಯೋ ಅವರಿಗೆ ಅಷ್ಟಷ್ಟು ಉತ್ತಮ ಸ್ಥಾನಗಳು ಸಿಗುತ್ತವೆ. ಮನುಷ್ಯನಿಗೆ ಉತ್ತಮ ಸ್ಥಾನ ಸಿಗಬೇಕಾದರೆ ಉತ್ತಮ ಕರ್ಮವೇ ಮುಖ್ಯವೆಂದಂತಾಯಿತು.

### ಛಾಂದೋಗ್ಯೋಪನಿಷತ್

"ತದ್ಯ ಇಹರಮಣೀಯಚರಣಾ ಅಭ್ಯಾಸೋ ಹಯಮಾತ್ತೇ ರಮಣೀ ಯಾಂ ಯೋನಿಮಾಪದ್ಯೇರನ್ ಬ್ರಾಹ್ಮಣಯೋನಿಂ ವಾ ಕ್ಷತ್ರಿಯಯೋನಿಂ ವಾ ವೈಶ್ಯಯೋನಿಂ ವಾ ಅಥ ಇಹ ಕಪೂಯಚರಣಾ ಅಭ್ಯಾಸೋ ಹಯ ಮಾತ್ತೇ ಕಪೂಯಾಂ ಯೋನಿಮಾಪದ್ಯೇರನ್ ಶ್ವಯೋನಿಂ ವಾ ಸೂಕರ ಯೋನಿಂ ವಾ ಚಂಡಾಲಯೋನಿಂ ವಾ"

ಯಾವ ಮನುಷ್ಯನು ಪುಣ್ಯಕರ್ಮದ ಅನುಷ್ಠಾನವನ್ನು ಮಾಡುತ್ತಾನೆಯೋ ಅವನು ಉತ್ತಮ ಯೋನಿಯನ್ನು ಪ್ರವೇಶಿಸುತ್ತಾನೆ. ಯಾವನು ನೀಚಕೆಲಸವನ್ನು ಮಾಡುತ್ತಾನೆಯೋ ಅವನು ನೀಚಯೋನಿಯನ್ನು ಅಂದರೆ ಹಂದಿ, ನಾಯಿ ಮೊದಲಾದ ಪ್ರಾಣಿಗಳ ಯೋನಿಯಲ್ಲಿ ಹುಟ್ಟುವನು.

### ೩೨೯

ಉದಾಹರಣೆಗಾಗಿ ಹೇಳಬೇಕಂದರೆ—

"ಸ್ತೇಯೋ ಹಿರಣ್ಯಸ್ಯ ಸುರಾಂ ಪಿಬಶ್ಚ ಗುರೋಸ್ತಲ್ಪಮಾವಸನ್ ಬ್ರಹ್ಮಹಾ ಚೈತೇ ಪತಂತಿ ಚತ್ವಾರಃ ಪಂಚಮ ಚರನ್ ಆಸ್ತ್ಯೈರಿತಿ"

ಬಂಗಾರ ಕದಿಯುವವನೂ. ಮದ್ಯಪಾನ, ಗುರುಪತ್ನೀಗಮನ ಮಾಡತಕ್ಕವನೂ, ಬ್ರಹ್ಮಹತ್ಯಾ ಮಾಡತಕ್ಕವನೂ ಈ ನಾಲ್ವರಕೂಡ ಯಾವನು ವ್ಯವಹಾರ ಮಾಡುತ್ತಾನೆಯೋ ಅವನೂ ಅಂದರೆ ಈ ಐದುಜನಗಳೂ ಅಧೋಗತಿಯನ್ನು ಹೊಂದುತ್ತಾರೆ.

## ಯೋಗದರ್ಶನ

"ಕ್ಲೇಶಮೂಲಃ ಕರ್ಮಾಶಯೋ ದೃಷ್ಟಾದೃಷ್ಟ ಜನ್ಮವೇದನೀಯಃ"

ಕರ್ಮವೇ ಅವಿದ್ಯ, ಅಸ್ಮಿತ, ರಾಗ, ಮೊದಲಾದ ಕ್ಲೇಶಗಳಿಗೆ ಕಾರಣರೂಪವಿದೆ. ಕರ್ಮಾಶಯದಲ್ಲಿರತಕ್ಕ ಸಂಸ್ಕಾರಗಳ ದ್ವಾರದಿಂದಲೇ ಜೀವವು ಪ್ರೇರಿತವಾಗಿ ಜನನ ಮರಣರೂಪ ಚಕ್ರದಲ್ಲಿ ಸಂಚರಿಸುತ್ತದೆ. ಕರ್ಮಸಂಸ್ಕಾರವು ಜೀವನವನ್ನು ಎಂದೂ ಬಿಡುವದಿಲ್ಲ. ಪೂರ್ವದಲ್ಲಿ ಮಾಡಿದ ಕರ್ಮವು ಪ್ರತ್ಯೇಕ ಅವಸ್ಥೆಯಲ್ಲಿ ಜೀವದೊಡನೆ ಇರುತ್ತದೆ. ಜೀವವು ಪೂರ್ವಜನ್ಮದಲ್ಲಿ ಯಾವ ಯಾವ ಕರ್ಮವನ್ನು ಯಾವ ಯಾವ ತರಹದಿಂದ ಮಾಡುತ್ತದೆಯೋ ಅದರ ಫಲವನ್ನು ಅದೇರೀತಿ ಹೊಂದುತ್ತದೆ. ತಾನು ಮಾಡಿದ ದುಃಖಜನಕ ಪ್ರಾರಬ್ಧಕರ್ಮದ ಭೋಗವನ್ನು ಮಾತೃಗರ್ಭದಿಂದಲೇ ಭೋಗಿಸುವದು ಪ್ರಾರಂಭವಾಗುತ್ತದೆ. ಬಾಲ್ಯ, ಯೌವನ, ವೃದ್ಧಾವಸ್ಥೆಯಲ್ಲಿ ಶುಭಾಶುಭಕರ್ಮಗಳು ಜೀವನದ್ವಾರ ಮಾಡಲ್ಪಟ್ಟಿರುತ್ತವೆಯೋ ಅದರ ಫಲಾಫಲಗಳು ಅದೇ ಅವಸ್ಥೆಯಲ್ಲಿ ಪ್ರಾಪ್ತವಾಗುತ್ತವೆ. ಯಾವ ಯಾವ ಶರೀರದಲ್ಲಿ ಯಾವ ಯಾವ ಕರ್ಮವು ಮಾಡಲ್ಪಟ್ಟಿರುವದೋ ಅದೇ ಶರೀರದಲ್ಲಿ ಅದರ ಫಲವಾಗುತ್ತದೆ.

ಯಥಾ ಧೇನುಸಹಸ್ರೇಷು ವತ್ಸೋ ವಿಂದತಿ ಮಾತರಂ ।
ತಥಾ ಪೂರ್ವಕೃತಂ ಕರ್ಮ ಕರ್ತಾರಮನುಗಚ್ಛತಿ ॥

ಅಂದರೆ ಸಾವಿರಾರು ಆಕಳುಗಳಲ್ಲಿ ಕರುವು ತನ್ನ ತಾಯಿಯನ್ನು ಹೇಗೆ ಗುರುತುಹಿಡಿಯುವದೋ ಹಾಗೆಯೇ ಪ್ರಾರಬ್ಧಕರ್ಮವು ತನ್ನ ಸ್ವಾಮಿಯನ್ನು ಹುಡುಕಿ ಓಡಿಯುತ್ತದೆ.

## ಯೋಗದರ್ಶನ

"ಸತಿಮೂಲೇ ತದ್ವಿಪಾಕೋ ಜಾತ್ಯಾಯುರ್ಭೋಗಃ"

ಕರ್ಮದ ಮೂಲದಲ್ಲಿ ಜಾತಿ, ಆಯುಷ್ಯ, ಭೋಗ ಈ ಮೂರುವಸ್ತುಗಳ ಪ್ರಾಪ್ತಿಯಾಗುತ್ತದೆ. ಜೀವನು ಕರ್ಮಾನುಸಾರವಾಗಿ ಉಚ್ಚನೀಚಜಾತಿಗಳನ್ನು ಹೊಂದುತ್ತಾನೆ. ಪ್ರಾರಬ್ಧಕರ್ಮಗಳಿಂದ ಆಯುಷ್ಯದ ನಿರ್ಧರವಾಗುತ್ತದೆ. ಯಾವ ಶರೀರದಲ್ಲಿ ಪ್ರಾಚೀನಕರ್ಮ ಎಷ್ಟುವರ್ಷಗಳವರೆಗೆ ಭೋಗವನ್ನು ಹೊಂದಬೇಕೋ ಆ ಶರೀರದಲ್ಲಿ ಅಷ್ಟೇ ವರ್ಷಗಳವರೆಗೆ ಜೀವದ ಸ್ಥಿತಿಯು ಇರುವದು. ಆಮೇಲೆ ದೇಹದ ಅಂತ್ಯವಾದಾಗ್ಯೆ ನವೀನ ಕರ್ಮದಿಂದ ಜೀವನ ಗತಿಯು ನೂತನ ಶರೀರದಲ್ಲಿ ಪ್ರವೇಶಿಸುತ್ತದೆ. ಭೋಗದ ತಾರತಮ್ಯವಾದರೂ ಕರ್ಮಾನುಸಾರವಾಗಿಯೇ ಆಗುತ್ತದೆ. ಸಂಸಾರದಲ್ಲಿ ಸುಖ ದುಃಖಗಳ ಅನುಭವವಾದರೂ ಪ್ರಾಕ್ತನ ಕರ್ಮಾನುಸಾರವಾಗಿಯೇ ಆಗುವದು. ಕೇವಲ ಇಷ್ಟೇ ಅಲ್ಲ, ಶರೀರದ ಅಂಗ ಪ್ರತ್ಯಂಗಗಳೂ ಕೂಡ ಪೂರ್ವ ಕರ್ಮಾನುಸಾರವಾಗಿಯೇ ಆಗುತ್ತವೆ.

**ಶುಶ್ರುತದಲ್ಲಿ**

> ಕರ್ಮಣಾ ಚೋದಿತೋ ಯೇನ ತದಾಪ್ನೋತಿ ಪುನರ್ಭವೇ ।
> ಅಭ್ಯಸ್ತಾಃ ಪೂರ್ವದೇಹೇ ಯೇತಾನೇವ ಭಜತೇ ಗುಣಾನ್ ॥
> ಅಂಗಪ್ರತ್ಯಂಗನಿವೃತ್ತಿಃ ಸ್ವಭಾವಾದೇವ ಜಾಯತೇ ।
> ಅಂಗಪ್ರತ್ಯಂಗನಿವೃತೌ ಯೇ ಭವಂತಿ ಗುಣಾಗುಣಾಃ ॥
> ತೇ ತೇ ಗರ್ಭಸ್ಯ ವಿಜ್ಞೇಯಾ ಧರ್ಮಾಧರ್ಮ ನಿಮಿತ್ತಜಾಃ ।
> ಶುಕ್ರಶೋಣಿತಸಂಯೋಗೇ ಯೋ ಭವೇದ್ದೋಷ ಉತ್ಕಟಃ ॥
> ಪ್ರಕೃತಿರ್ಜಾಯತೇ ಯೇನ ತಸ್ಯಾದೇತಲ್ಲಕ್ಷಣಂ ಶ್ರಣು ।

ಪೂರ್ವಕರ್ಮಾನುಸಾರವಾಗಿ ಶರೀರದ ಪ್ರಾಪ್ತಿಯಾಗುತ್ತದೆ. ಗುಣಗಳ ತಾರತಮ್ಯ ವಾದರೂ ಪ್ರಾಚೀನಜನ್ಮವನ್ನು ಅನುಸರಿಸಿಯೇ ಇರುತ್ತದೆ. ಅಂಗ ಪ್ರತ್ಯಂಗಗಳ ನಿರ್ಮಾಣವಾದರೂ ಸ್ವಭಾವಕ್ಕೆ ಅನುಸರಿಸಿಯೇ ಆಗುತ್ತವೆ. ಅದರಲ್ಲಿ ದೋಷಗಳಾ ಗಲೀ, ಗುಣಗಳಾಗಲೀ ಗರ್ಭವನ್ನು ಹೊಂದಿದ ಧರ್ಮಾಧರ್ಮಗಳ ಫಲವಾಗಿರುತ್ತದೆ. ರೇತಸ್ಸು ರಕ್ತಗಳ ಸಂಯೋಗದಲ್ಲಿ ಯಾವ ಉತ್ಕಟದೋಷವಾಗಿರುತ್ತದೆಯೋ ಅದ ರಂತೆಯೇ ಶರೀರವಾದರೂ ಆಗುತ್ತದೆ.

ವೇದದ ಒಂದು ಭಾಗದಲ್ಲಿ ಕರ್ಮಾಧಿಕ್ಯವಿರುವದರಿಂದ ಅದಕ್ಕೆ ಕರ್ಮಕಾಂಡ ಎಂಬುವ ಹೆಸರೇ ಬಂದಿರುತ್ತದೆ. ಶಾಸ್ತ್ರಗಳಲ್ಲಿ ಕರ್ಮವನ್ನು ಮೂರು ವಿಧವಾಗಿ ಹೇಳಿದ್ದುದು ಕಂಡುಬರುತ್ತದೆ. ನಿತ್ಯ, ನೈಮಿತ್ತಿಕ, ಕಾಮ್ಯ, ಯಾವ ಕರ್ಮವನ್ನು ಮಾಡಿದರೆ ಪುಣ್ಯವಿಲ್ಲವೋ ಅದನ್ನು ಮಾಡದಿದ್ದರೆ ಪಾಪವು ಬರುತ್ತದೆಯೋ ಅದಕ್ಕೆ ನಿತ್ಯಕರ್ಮವೆಂದು ಹೇಳುತ್ತಾರೆ. ಉದಾಹರಣೆಗಾಗಿ ವೀರಶೈವರಿಗೆ ಶಿವಪೂಜೆಯು ನಿತ್ಯಕರ್ಮವಾಗಿರುತ್ತದೆ. ಪ್ರತಿನಿತ್ಯದಲ್ಲಿ ಅರಿಯದೆಯೂ ಅರಿತೂ ಪಾಪಗಳನ್ನು ಮಾಡುವದುಂಟು. ಆ ಪಾಪಕ್ಷಾಲನಾರ್ಥವಾಗಿಯೇ ನಿತ್ಯಕರ್ಮವಾದ ಶಿವಪೂಜೆಯನ್ನು ತ್ರಿಕಾಲದಲ್ಲಿಯೂ, ದ್ವಿಕಾಲದಲ್ಲಿಯೂ ಅಥವಾ ಒಂದುಸಾರಿಯಾದರೂ ತನ್ನ ಶಕ್ತಿಗೆ ಅನುಸರಿಸಿ ಮಾಡಲೇಬೇಕು. ಇದರಂತೆಯೆ ನೈಮಿತ್ತಿಕ ಕರ್ಮಗಳಾದರೂ ವಿಶೇಷ ಕಾಲಗಳಲ್ಲಿ ಮಾಡಬೇಕಾಗುತ್ತದೆ. ಕಾಮ್ಯಕರ್ಮವಾದರೂ ಹೀಗೆಯೇ ಇರುವದು.

ಈ ಕರ್ಮಗಳೆಲ್ಲ ಅವರವರ ಪ್ರವೃತ್ತಿ, ತಮ್ಮ ತಮ್ಮ ಧರ್ಮಗಳಿಗೆ ಅನುಸಾರ ವಾಗಿರುತ್ತವೆ. ರಾಜನಾದವನು ಪ್ರತಿನಿತ್ಯದಲ್ಲಿಯೂ ಪ್ರಜೆಗಳನ್ನು ಸಂರಕ್ಷಣೆ ಮಾಡುವದೇ ಅವನ ನಿತ್ಯಕರ್ಮವಾಗಿರುತ್ತದೆ. ಈ ಕರ್ಮಗಳಲ್ಲಿ ಅನಂತ ಭೇದ ಗಳಿರುತ್ತವೆ. ಯಾವ ಕರ್ಮಗಳನ್ನು ಮಾಡೋಣದರಿಂದ ಫಲಪ್ರಾಪ್ತಿಯಾಗು ತ್ತದೆಯೋ ಮಾಡದೆ ಇರುವದರಿಂದ ಪಾಪವಿರುವದಿಲ್ಲವೊ ಅದಕ್ಕೆ ನೈಮಿತ್ತಿಕ ಕರ್ಮ ವೆಂದು ಹೆಸರು. ದಾನ, ಧರ್ಮ, ಪರೋಪಕಾರಾದಿ ಕರ್ಮಗಳೆಲ್ಲ ಇದರಲ್ಲಿ ಬರುತ್ತವೆ. ವಿಶೇಷವಾದ ಆಶೆಯಿಂದ ಮಾಡತಕ್ಕವುಗಳಿಗೆ ಕಾಮ್ಯಕರ್ಮವೆಂದು ಹೆಸರು. ಇವು ಗಳಲ್ಲಿ ಆಧ್ಯಾತ್ಮಿಕ, ಆದಿಭೌತಿಕ, ಆದಿದೈವಿಕವೆಂದು ಮೂರು ಭಾಗಗಳನ್ನು ಮಾಡು ತ್ತಾರೆ. ಇವುಗಳೆಲ್ಲ ಕರ್ಮದ ಶಕ್ತಿಯ ತಾರತಮ್ಯ ಭೇದದಿಂದ ತಿಳಿಯಲಾಗುತ್ತದೆ. ಆದಿಭೌತಿಕವೆಂದರೆ ಇತರಜೀವ ಪ್ರಾಣಿಗಳಿಂದ ತಮ್ಮ ಇಚ್ಛೆಯನ್ನು ಪೂರ್ತಿಮಾಡಿ ಕೊಂಡು ಫಲವನ್ನು ಹೊಂದುವರು. ಜಂಗಮಾರಾಧನೆ, ದಾನಧರ್ಮಗಳನ್ನು ಮಾಡು ವದು, ಶಾಲೆ ಕಾಲೇಜುಗಳಿಗೆ ಸಹಾಯಮಾಡುವದು, ಧರ್ಮಾರ್ಥಭೋಜನಾಲಯ

ಮೊದಲಾದವುಗಳನ್ನು ಮಾಡುವದು ಇದರಲ್ಲಿ ಬರುತ್ತವೆ. ಆದಿದೈವಿಕವೆಂದರೆ— ಕರ್ಮಗಳ ಮೂಲಕ ದೈವೀಶಕ್ತಿಯನ್ನು ಬೆಳೆಯಿಸಿಕೊಳ್ಳುವದಕ್ಕೆ ಆದಿದೈವಿಕ ಕಾರ್ಯಗಳೆನ್ನುತ್ತಾರೆ. ಆಧ್ಯಾತ್ಮಿಕ ಕಾರ್ಯವೆಂದರೆ ಇದು ಬುದ್ಧಿ ಪ್ರಧಾನಕಾರ್ಯದಾಗಿದೆ. ಸ್ವಧರ್ಮ, ಸ್ವದೇಶೋಪಕಾರ, ಜ್ಞಾನ ಬೆಳೆಸುವಿಕೆ ಮೊದಲಾದುವು ಇದರಲ್ಲಿ ಬರುತ್ತವೆ.

ಕರ್ಮದಲ್ಲಿ ಸಕಾಮ, ನಿಷ್ಕಾಮವೆಂದು ಎರಡು ಭೇದಗಳುಂಟು. ಫಲಾಪೇಕ್ಷೆಯಿಂದ ಮಾಡುವ ಕರ್ಮಕ್ಕೆ ವಾಸನೆಯು ಕೂಡಿರುವದರಿಂದ ಅದರಿಂದ ಮನುಷ್ಯನಿಗೆ ಸದ್ಗತಿಯು ದೊರೆಯಲಾರದು. ನಿಷ್ಕಾಮಕರ್ಮವೇ ಶ್ರೇಷ್ಠವಾದುದು.

೩೩೦

ಬಸವಣ್ಣನವರು—

"ತನುವ ಬೇಡಿದಡೀವೆ, ಮನವ ಬೇಡಿದಡೀವೆ, ಧನವ ಬೇಡಿದಡೀವೆ
ಬೇಡುಬೇಡೆಲೆ ಹಂದೆ, ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ, ಕೂಡಲ
ಸಂಗಮದೇವಾ ನಿಮಗಿತ್ತು ಶುದ್ಧನಾಗಿಪ್ಪೆ, ನಿಮ್ಮ ಪುರಾತನರ ಮನೆಯಲ್ಲಿ"

ನಿಷ್ಕಾಮಿಯಾಗಿ ದಾಸೋಹಂ ಭಾವದಿಂದ ಕಾರ್ಯವನ್ನು ಮಾಡಬೇಕೆಂಬುವದೇ ಬಸವಣ್ಣನವರ ಕರ್ಮಯೋಗದ ರಹಸ್ಯವಾಗಿರುತ್ತದೆ. ಆದ್ದರಿಂದಲೇ ಒಬ್ಬ ಶರಣರು ಬಸವಣ್ಣನವರ ಕರ್ಮಯೋಗದ ಬಗ್ಗೆ—

೩೩೧

"ತನುವಿಡಿದು ದಾಸೋಹವಮಾಡಿ ಗುರುಪ್ರಸಾದಿಯಾದ ಬಸವಣ್ಣ,
ಮನವಿಡಿದು ದಾಸೋಹವಮಾಡಿ ಲಿಂಗಪ್ರಸಾದಿಯಾದ ಬಸವಣ್ಣ,
ಧನವಿಡಿದು ದಾಸೋಹವಮಾಡಿ ಜಂಗಮ ಪ್ರಸಾದಿಯಾದ ಬಸವಣ್ಣ,
ಇಂತೀ ತ್ರಿವಿಧವಿಡಿದು ದಾಸೋಹವಮಾಡಿ ಸದ್ಗುರು ಮಲ್ಲಿಕಾರ್ಜುನಯ್ಯ
ನಿಮ್ಮ ಶರಣ ಬಸವಣ್ಣ ಸ್ವಯಪ್ರಸಾದಿಯಾದನಯ್ಯ"

ಇಂತಹ ಕರ್ಮದಿಂದ ಮುಕ್ತಿಯು ಕರತಲಾಮಲಕವಾಗುವದು. ಇಂತಹ ಕರ್ಮಕ್ಕೆ ಸಾತ್ವಿಕ ಕರ್ಮವೆಂದು ಹೆಸರು. ಫಲಾಕಾಂಕ್ಷೆ, ಅಹಂಕಾರ, ಮಮಕಾರ ಮೊದಲಾದ ಗುಣಗಳಿಂದ ಕೂಡಿಕೊಂಡು ಮಾಡಿದ ಕರ್ಮಕ್ಕೆ ರಾಜಸ ಕರ್ಮವೆಂದು ಹೆಸರು. ಮುಂದೆ ಆಗತಕ್ಕ ಶುಭಾಶುಭಗಳನ್ನು ವಿಚಾರಮಾಡದೆ ಪರಪೀಡೆ ಮೊದಲಾದ ಗುಣದಿಂದ ಕೂಡಿದುದಕ್ಕೆ ತಾಮಸಕಾರ್ಯವೆಂದು ಹೇಳಬಹುದು. ನಿಷ್ಕಾಮ ಬುದ್ಧಿಯಿಂದ ಕೆಲಸ ಮಾಡತಕ್ಕವನಿಗೆ ಫಲದಲ್ಲಿ ಆಸಕ್ತಿ ಇರುವದಿಲ್ಲ. ಮತ್ತು ನಾನು ಮಾಡುತ್ತೇನೆಂಬುವ ಕರ್ತೃತ್ವಾಭಿಮಾನವೂ ಕೂಡ ಇರುವದಿಲ್ಲ. ಧೈರ್ಯೋತ್ಸಾಹಗಳಿಂದ ಕೂಡಿಕೊಂಡು ಸಿದ್ಧಿ, ಅಸಿದ್ಧಿಗಳ ಕಡೆಗೆ ಲಕ್ಷ್ಯಕೊಡದೆ ಕಾರ್ಯಮಾಡತಕ್ಕವನೇ ಸಾತ್ವಿಕನಾಗುವನು. ವಿಷಯಾಸಕ್ತಿ, ಫಲಾಕಾಂಕ್ಷೆ, ಲೋಭ ಹಿಂಸೆ, ಅಶುಚಿ ಮತ್ತು ಹರ್ಷವಿಷಾದಗಳಿಂದ ಕೂಡಿ ಮಾಡತಕ್ಕವನು ರಾಜಸನಾಗುವನು. ವಿವೇಕ ಹೀನತೆಯಿಂದ ವಿನಯರಹಿತನಾಗಿಯೂ, ಆಲಸ್ಯವಂತನಾಗಿಯೂ, ಎರಡನೆಯವರಿಗೆ ಕೇಡನ್ನು ಮಾಡುವ ಉದ್ದೇಶದಿಂದ ಯಾವ ಮನುಷ್ಯನು ಕರ್ಮವನ್ನು ಮಾಡುತ್ತಾನೆಯೋ ಅವನು ತಾಮಸಗುಣಯುಕ್ತನೆನಿಸುವನು. ಇದುವರೆಗೆ ಉಪನಿಷತ್ತು

ಗಳಲ್ಲಿ ಹೇಳಿದ ಕರ್ಮದ ಲಕ್ಷಣವನ್ನು ವಿಚಾರಮಾಡಲಾಯಿತು. ಶ್ರೀ ಬಸವಣ್ಣನವರು ಫಲಾಪೇಕ್ಷೆಯಿಲ್ಲದೆ ಅತ್ಯಂತ ವಿನಯಶೀಲರಾಗಿ ಸಾತ್ವಿಕಯೋಗಿಗಳಿಗೆ ಒಪ್ಪುವಂತೆ ಪ್ರತಿಯೊಂದು ಕಾರ್ಯವನ್ನು ಮಾಡಿರುತ್ತಾರೆ.

೩೩೨

ಬಸವಣ್ಣನವರು—

"ನಾನು ಆರಂಭಮಾಡುವೆನಯ್ಯಾ ಗುರುಪೂಜೆಗೆಂದು, ನಾನು ವ್ಯವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು, ನಾನು ಪರಸೇವೆಮಾಡುವೆನಯ್ಯಾ ಜಂಗಮದಾಸೋಹಕ್ಕೆಂದು, ನಾನಾವ ಕರ್ಮಂಗಳಂ ಮಾಡಿದಡೆಯೂ, ಆ ಕರ್ಮಫಲಭೋಗವ ನೀ ಕೊಡುವೆ ಎಂಬುದ ನಾನು ಬಲ್ಲೆನು. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದು ಕ್ರಿಯೆ ಮಾಡೆನು. ನಿಮ್ಮ ಸೊಮ್ಮಿಂಗೆ ಸಲಿಸುವೆನು. ನಿಮ್ಮಾಣೆ ಕೂಡಲಸಂಗಮದೇವಾ"

ಬಸವಣ್ಣನವರು ಲೋಕದಲ್ಲಿಯೇ ಶ್ರೇಷ್ಠ ನಿಷ್ಕಾಮಕರ್ಮಿಗಳು ಎಂದು ಮೇಲಿನ ವಚನವು ಹೇಳುತ್ತದೆ. ವೇದಾಗಮೋಪನಿಷತ್ತುಗಳಲ್ಲಿ ಕರ್ಮಯೋಗಿಗೆ ಹೇಳಿದ ಗುಣಗಳೆಲ್ಲ ಮೇಲಿನ ವಚನದಲ್ಲಿವೆ. ಸಾತ್ವಿಕತನಮೂರ್ತಿಮಂತರಾಗಿಯೇ ಬಸವಣ್ಣನವರು ವ್ಯವಹರಿಸಿದರೆಂಬುವದು ಸರಿಯಾದುದಾಗಿದೆ.

೩೩೩

"ಹೊತ್ತಾರೆ ಎದ್ದು ಕಣ್ಣಹೊಸೆಯುತ್ತ ಎನ್ನೊಡಲಿಂಗೆ, ಎನ್ನೊಡವೆಗೆ, ಎನ್ನ ಮಡದಿಮಕ್ಕಳಿಗೆಂದು ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ 'ಅಶನೇ ಶಯನೇ ಯಾನೇ ಸಂಪರ್ಕೇ ಸಹಭೋಜನೇ, ಸಂಚರಂತಿ ಮಹಾಘೋರೇ ನರಕೇ ಕಾಲಮಕ್ಷಯಂ' ಎಂಬ ಶೃತಿಯನ್ನು ಬಸವಣ್ಣನು ಓದುವನು. ಎಂಬರು ಭವಿಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು ನುಡಿವರಯ್ಯ ಪ್ರಮಥರು ಕೊಡುವೆನುತ್ತರವನವರಿಗೆ ಕೊಡಲಮ್ಮವೆ ಹೊಲೆ ಹೊಲೆಯರ ಮನೆಯ ಹೊಕ್ಕು ಸಲೆ ಕೈಕೂಲಿಮಾಡಿಯಾದರೆಯೂ, ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದರೆ ತಲೆದಂಡ ಕೂಡಲಸಂಗಮದೇವಾ"

ಎಂತಹ ಪ್ರಸಂಗ ನಮ್ಮಮೇಲೆ ಬಂದರೂ ಕೂಡ ನಾವು ಹಿಡಿದ ಕರ್ಮವನ್ನು ಬಿಡುವದಿಲ್ಲವೆಂದು ಹೇಳುವ ಅವರ ಧೀರೋದಾತ್ತಗುಣವು ಬಹಳ ಶ್ರೇಷ್ಠವಾದುದಾಗಿರುತ್ತದೆ.

೩೩೪

"ಅರ್ಥವನರ್ಥವಮಾಡಿ ಕೋಳಾಹಳಂ ಗಯ್ಯುತ್ತಿರಲಿ ಹುಟ್ಟಿದ ಮಕ್ಕಳ ನವಖಂಡವಮಾಡಿ ಕಡಿಯುತ್ತಿರಲಿ, ಮುಟ್ಟಿದ ಸ್ತ್ರೀಯ ಕಣ್ಣಮುಂದೆ ಅಭಿಮಾನಗೊಂಡು ನೆರವುತ್ತಿರಲಿ, ಇಂತೀ ತ್ರಿವಿಧವು ಹೊರಗಣವು, ಇನ್ನೆನ್ನಂಗದ ಮೇಲೆ ಬರಲಿ ಹಿಡಿಖಂಡಂಗೊಯ್ಯಲಿ ಇಕ್ಕುವ ಶೂಲ ಪ್ರಾಪ್ತಿಸಲಿ, ಹಾಕೊಂದೆಸೆ ಹನ್ನೊಂದೆಸೆಯಾಗಿ ಮಾಡುತ್ತಿರಲಿ, ಮತ್ತೆಯೂ

ಲಿಂಗಾರಾಧನೆ ಮಾಡುವೆ, ಮತ್ತೆಯೂ ಜಂಗಮಾರಾಧನೆ ಮಾಡುವೆ,
ಪ್ರಸಾದಕ್ಕೆ ತಪ್ಪೆ ಇಂತಪ್ಪ ಭಾಷೆ ಕಿಂಚಿತ್ ಹುಸಿಯಾದರೆ ನೀನಂದೇ
ಮೂಗಕೊಯಿ, ಕೂಡಲಸಂಗಮದೇವಾ"

ಶ್ರೀ ಬಸವಣ್ಣನವರು ಶುದ್ಧ ಸಾತ್ವಿಕ ಫಲರಹಿತ ಕರ್ಮನಿಷ್ಠರಾಗಲು ಅನೇಕ ಶರಣರು ಅವರ ಮಾರ್ಗವನ್ನನುಸರಿಸಿ ಅವರಿಗೆ ಬೆಂಬಲಿಗರಾಗಿ ಕಾರ್ಯಗಳನ್ನು ಮಾಡಿದರು.

೩೩೫

ಚನ್ನಬಸವಣ್ಣನವರು—

"ಕ್ರಿಯೆಯಿಲ್ಲದ ಭಕ್ತ ಮನುಜ, ಕ್ರಿಯೆಯಿಲ್ಲದ ಜಂಗಮ ರಾಕ್ಷಸ,
ಕ್ರಿಯೆಯಿಲ್ಲದ ಪ್ರಸಾದಿ ಯವನ, ಕ್ರಿಯೆಯಿಲ್ಲದ ಶರಣ ಅಜ್ಞಾನಿ, ಕ್ರಿಯೆ
ಯಿಲ್ಲದ ಲಿಂಗೈಕ್ಯ ಜನನಕ್ಕೊಳಗು ನೋಡಾ ಕೂಡಲಚನ್ನಸಂಗಮದೇವಾ"

೩೩೬

ಪ್ರಭುದೇವರು—

"ಕ್ರಿಯಾಮಥನವಿಲ್ಲದೆ ಕಾಣಬಂದುದೇ ಇಕ್ಷುವಿನೊಳಗಣ
ಮಧುರ ಕ್ರಿಯಾಮಥನವಿಲ್ಲದೆ ಕಾಣಬಂದುದೇ ತಿಲದೊಳಗಣ ತೈಲ?
ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕ್ಷೀರದೊಳಗಣ ತುಪ್ಪ? ಕ್ರಿಯಾ
ಮಥನವಿಲ್ಲದೆ ಕಾಣಬಂದುದೇ ಕಾಷ್ಠದೊಳಗಣ ಅಗ್ನಿ? ಇದುಕಾರಣ
ನಮ್ಮ ಗುಹೇಶ್ವರಲಿಂಗವ ತನ್ನೊಳರಿದೆನೆಂಬ ಮಹಾಂತಂಗೆ ಸತ್ಕ್ರಿಯಾ
ಚರಣೆಯೇ ಸಾಧನ ಕಾಣಿ ಭೋ"

ಈ ಪ್ರಕಾರವಾಗಿ ಬಸವಣ್ಣನವರು ವೀರಶೈವ ಸಮಾಜವನ್ನು ಕ್ರಿಯಾಮಾರ್ಗಕ್ಕೆ ಹಚ್ಚಿದರು. ದೇಶದೇಶಾಂತರಗಳಿಂದ ಬಸವಣ್ಣನವರ ಕ್ರಿಯಾಮಾರ್ಗದ ವಾರ್ತೆಗಳನ್ನು ಕೇಳಿ ಬಂದ ಶರಣರು ನಿರಪೇಕ್ಷ ಬುದ್ಧಿಯಿಂದಲೂ, ಸಾತ್ವಿಕ ಕಳೆಯಿಂದಲೂ ಕೂಡಿಕೊಂಡು ಒಂದೊಂದು ವೀರಶೈವ ಸಾಧನಮಾರ್ಗದ ಕಾರ್ಯವನ್ನು ಕೈಕೊಂಡು ಅದರಲ್ಲಿ ಬಂದ ಹಣದ ಬಹು ಭಾಗವನ್ನು ಗುರು ಲಿಂಗ ಜಂಗಮರ ಪೂಜೆಗೆ ವಿನಿಯೋಗಿಸುತ್ತಿದ್ದರು. ಇವರ ಸತ್ವನಿಷ್ಠೆ, ವಿನಯಗುಣ, ಸತ್ಯತನ, ಲೋಭರಾಹಿತ್ಯ, ದೃಢನಿಶ್ಚಯ, ಆಚಾರ, ಬಂಧುರತೆ ಮೊದಲಾದ ಗುಣಗಳನ್ನು ನೋಡಿದರೆ ವೀರಶೈವ ಶಿವಶರಣರ ಮಾರ್ಗವು ಲೋಕದಲ್ಲಿ ಯಾರ ಆಚರಣೆಗಳಿಗಿಂತಲೂ ಕಡಿಮೆ ತರಗತಿಯನ್ನು ಹೊಂದಲಾರದೆಂದು ನಾನಿಲ್ಲಿ ಸ್ಪಷ್ಟವಾಗಿ ಹೇಳದಿರಲಾರೆನು. ಅವರ ಕಾಯಕಗಳ ಸಂಸ್ಕೃತಿ ಕುರುಹು ಇಂದಿಗೂ ವೀರಶೈವರ ರೋಮನಾಳಂಗಳಲ್ಲಿ ವ್ಯಾಪಿಸಿರುತ್ತದೆ. ಇವರ ಆಚರಣೆಯು ಶುದ್ಧವಾದುದು, ಸಾತ್ವಿಕವಾದುದು, ಸತ್ಯತನದಿಂದ ಕೂಡಿದ್ದುದು, ಅಹಿಂಸಾಮಾರ್ಗವನ್ನು ಕಾಯಾ ವಾಚಾ ಮನಸ್ಸಿನಿಂದ ಪಾಲಿಸುವಂಥಾದ್ದು, ಅಂದ ಮೇಲೆ ಶಿವಶರಣರಂತಹ ಪವಿತ್ರಾಚಾರವನ್ನು ಮಾಡತಕ್ಕವರು ವಿರಳರೆಂಬುವದು ನಿಜವಾದುದಾಗಿದೆ. ಇವರ ಕಾಯಕಗಳಲ್ಲಿ ಮೇಲು ಕೀಳೆಂಬ ಭಾವನೆಯಿರಲಿಲ್ಲ. ಎಂತಹ ಉದ್ಯೋಗವನ್ನು ಕೈಕೊಂಡರೂ ಮೋಕ್ಷಕ್ಕೆ ಪ್ರತಿಬಂಧಕವಿಲ್ಲವೆಂಬುವದನ್ನು ಪ್ರಮುಖರು ಮನವರಿಕೆಮಾಡಿಕೊಟ್ಟದ್ದರಿಂದ ಎಲ್ಲರೂ ಒಂದೊಂದು ತರಹದ ಕಾಯಕದಲ್ಲಿ ತೊಡಗಿದರು. ಆದ್ದರಿಂದಲೇ—

೩೩೭

ನುಲಿಯ ಚಂದಯ್ಯನವರು—

" ಕಾಯಕದಲ್ಲಿ ನಿರತನಾದರೆ ಗುರುದರ್ಶನವಾದರೂ ಮರೆಯಬೇಕು ಲಿಂಗಪೂಜೆಯಾದಡೂ ಮರೆಯಬೇಕು ಜಂಗಮ ಮುಂದಿದ್ದರೂ ಹಂಗು ಹರಿಯಬೇಕು ಕಾಯಕವೇ ಕೈಲಾಸವಾದಕಾರಣ ಅಮಳೇಶ್ವರಲಿಂಗ ವಾಯಿತ್ತಾದಡೂ ಕಾಯಕದೊಳು ಕಂದಿಸಿ, ಕುಂದಿಸಿ, ಬಂಧಿಸಿ, ನೋಯಿಸಿ, ಕಂಡಕಂಡವರ ಬೇಡಿ ತಂದು ಮಾಡಿಹೆನೆಂಬುದು ದಂದುಗ ದೋಗರ ಲಿಂಗನೈವೇದ್ಯಕ್ಕೆ ಸಲ್ಲದು. ತನುಕರಗಿ ಮನ ಬಳಲಿ ಬಂದ ತೆರ ದನುವನರಿದು ಸಂದಿಲ್ಲದೆ ಸಂಶಯವಿಲ್ಲದೆ ದಾಸೋಹಮಾಡುವದೇ ಮಾಟ ಕಾರೆಯಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ ದುರಾಶೆಯಿಂದ ಬಂದುದು ಅನರ್ಪಿತ ಇದುಕಾರಣ ಸತ್ಯ ಶುದ್ಧಕಾಯಕದ ನಿತ್ಯದ್ರವ್ಯ ಚಂದೇಶ್ವರಲಿಂಗಕ್ಕೆ ನೈವೇದ್ಯ ಕೇಳಯ್ಯಾ"

೩೩೮

ಚನ್ನಬಸವಣ್ಣನವರು—

" ತನುಮನ ಬಳಲದೆ ಉದ್ದಂಡ ವೃತ್ತಿಯಲ್ಲಿ ಧನವಗಳಿಸಿ ದಾಸೋಹವಮಾಡಿ ಭಕ್ತರಾದೆವೆಂಬುವರ ಮುಖವ ತೋರದಿರಯ್ಯ ಎನಗೆ ಅವನಲ್ಲದೆ ವೇಧನ ಚೋರ, ಅವಪಾಪಿ, ಕೋಪಿ ಪರಿಭ್ರಷ್ಟ ಅವನ ಕಾಯಕವ ವಿಚಾರಿಸದೆ ಅವನ ಮನೆಯಲ್ಲಿ ಹೊಕ್ಕು ಲಿಂಗಾರ್ಚನೆಯ ಮಾಡುವ ಜಂಗಮಕ್ಕೆ ಏಳನೆಯ ಪಾತಕ ಇಂತಪ್ಪ ಗುರುಶಿಷ್ಯ ಜಂಗಮರ ಬಾಳುವೆ ಹುಲಿಕವಿಲೆಯ ತಿಂದು ವಿಕ್ಕಿದ ನರಿ ತಿಂದಂತಾಯಿತ್ತು ಕಾಣಾ ಕೂಡಲ ಚನ್ನಸಂಗಮದೇವಾ"

೩೩೯

" ಕೃಷಿ ಕೃತ್ಯ ಕಾಯಕದಿಂದಾದಡೇನು? ತನುಮನ ಬಳಲಿಸಿ ತಂದು ದಾಸೋಹಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ ಅದೆಂತೆನೆ ಆತನ ತನು ಶುದ್ಧ, ಆತನ ಮನ ಶುದ್ಧ, ಆತನ ನಡೆ ಶುದ್ಧ, ಆತನ ನುಡಿಯೆಲ್ಲ ಪಾವನವು ಆತಂಗೆ ಉಪದೇಶಮಾಡುವಾತನೇ ಪರಮ ಸದ್ಗುರು ಅಂತಪ್ಪ ಸದ್ಭಕ್ತನ ಮನೆಯು ಕೈಲಾಸವೆಂದು ಹೊಕ್ಕು ಲಿಂಗಾರ್ಚನೆಯ ಮಾಡುವ ಜಂಗಮವೆ ಜಗತ್ಪಾವನ ಇಂತಪ್ಪವರ ನಾನು ನೆರೆ ನಂಬಿ ನಮೋ ನಮೋ ಎಂಬೆನಯ್ಯ"

ಬಸವಾದಿ ಪ್ರಮಥರು ನಡೆ ನುಡಿಗಳನ್ನು ಸರಿಯಾಗಿ ಆಚರಣೆಯಲ್ಲಿ ತರುತ್ತಿದ್ದರು. ಬಹಳ ಪರಿಶ್ರಮಪೂರ್ವಕವಾಗಿ ಅವರು ದುಡಿಯುತ್ತಿದ್ದರು. ಆಲಸ್ಯವೆಂಬುವದು ಅವರ ಸಮೀಪದಲ್ಲಿ ಸುಳಿದಾಡುತ್ತಿರಲಿಲ್ಲ. ಅವರಲ್ಲಿ ಅನೇಕರು ಅನೇಕ ತರಹದ ಅನುಕೂಲತೆಗಳಿಂದ ಕೂಡಿದ್ದರೂ ಕಾಯಕವನ್ನು ಮಾಡಲೇಬೇಕೆಂಬುವದನ್ನು ಸಂಕಲ್ಪಮಾಡಿದರು. ಕಾಯಕಗಳನ್ನು ಅತ್ಯಂತ ಯಶಸ್ವಿಯಾಗಿ ನಡೆಸಿದವರು ಅನೇಕರು

ಇರುತ್ತಾರೆ. ಕೆಲವರ ಹೆಸರುಗಳನ್ನು ಇಲ್ಲಿ ನೋಡೋಣ. ಮಡಿವಾಳ ಮಾಚಯ್ಯನವರು, ನಗೆಮಾರಿ ತಂದೆ, ಶಿವಲೆಂಕ ಮಂಚಣ್ಣ, ತಳವಾರ ರಾಮದೇವ, ಕೀಲಾರ ಭೀಮಣ್ಣ, ಡಕ್ಕೆಯ ಬೊಮ್ಮಣ್ಣ, ಆಯ್ದಕ್ಕಿಯ ಮಾರಯ್ಯ, ಮೋಳಿಗೆಯ ಮಾರಯ್ಯ, ನುಲಿಯ ಚಂದಯ್ಯ, ಹೊಡೆಹುಲ್ಲ ಬಂಕಣ್ಣ, ತುರುಗಾಹಿ ರಾಮಣ್ಣ, ಗುಪ್ತಮಂಚಣ್ಣ, ಶಿವದಾಸಿಮಯ್ಯ, ಕಾಲುಕಣ್ಣಿಯ ಕಾಯಮ್ಮ, ಕೊಟ್ಟಣದ ಸೋಮವ್ವೆ, ಕಾಮಾಟದ ಭೀಮಣ್ಣ, ಕಿನ್ನರಿ ಬ್ರಹ್ಮಯ್ಯ, ಶಾರ್ದೂಲ ಸಂಗಯ್ಯ, ಬಹುರೂಪಿ ಚೌಡಯ್ಯ, ಇವರಂತೆಯೇ ಇನ್ನೂ ನೂರಾರು ಜನರು ಕಾಯಕವನ್ನು ಮಾಡುತ್ತ ಉಳಿದವರಿಗೆ ಮಾರ್ಗದರ್ಶಕರಾಗಿ ಬಸವಣ್ಣನವರ ನೇತೃತ್ವದಲ್ಲಿ ಶಿವಧ್ವಜವನ್ನು ಮೆರೆಯಿಸುತ್ತ ಕಾಯಕವೇ ಕೈಲಾಸವೆಂದು ಜಗತ್ತಿಗೆ ಡಂಗುರವನ್ನು ಸಾರಿರುತ್ತಾರೆ. ಈ ಶರಣರ ಕಾಯಕಗಳು ಅತ್ಯಂತ ಮನೋವೇಧಕಗಳಾಗಿರುತ್ತವೆ. ಇವರಲ್ಲಿ ೨-೩ ಚಿಕ್ಕ ಕಥೆಗಳನ್ನು ಇಲ್ಲಿ ಕೊಟ್ಟರೆ ಓದುಗರಿಗೆ ಚನ್ನಾಗಿ ಗೊತ್ತಾಗುವದು.

ಮೇದಾರ ಕೇತಯ್ಯನವರು — ಇವರು ಪ್ರತಿದಿನ ಪ್ರಾತಃಕಾಲಕ್ಕೆ ವನಕ್ಕೆ ಹೋಗಿ ಬಿದಿರುಗಳನ್ನು ತಂದು ಪುಟ್ಟಿ (ಕುಕ್ಕೆ) ಮರಗಳನ್ನು ಮಾಡಿ ಮಾರುತ್ತಿದ್ದರು. ತಮಗೆ ಬಂದ ದುಡ್ಡಿನಲ್ಲಿ ಗುರುಲಿಂಗ ಜಂಗಮರ ಅರ್ಚನೆಗೆ ಖರ್ಚುಮಾಡುತ್ತಿದ್ದರು. ಅದರಲ್ಲಿ ಮಿಕ್ಕಿದ ಹಣದಿಂದ ತಮ್ಮ ಪ್ರಪಂಚವನ್ನು ಸಾಗಿಸುತ್ತಿದ್ದರು. ಇವರನ್ನು ಪರೀಕ್ಷಿಸಬೇಕೆಂದು ಒಂದು ದಿವಸ ಶ್ರೀ ಶಂಕರನು ಬಸವೇಶ್ವರನ ವೇಷವನ್ನು ಧರಿಸಿಕೊಂಡು ಕೇತಯ್ಯನು ಮನೆಯಲ್ಲಿಲ್ಲದ ಕಾಲದಲ್ಲಿ ಹೊನ್ನುಗಳನ್ನು ಉಡಿಯಲ್ಲಿ ಕಟ್ಟಿಕೊಂಡು ಬಂದನು. ಕೇತಯ್ಯನವರ ಧರ್ಮಪತ್ನಿ ಅವರ ಪಾದಕ್ಕೆ ನೀರನ್ನು ಕೊಟ್ಟಳು ಮತ್ತು ಉಚಿತವಾದ ಆಸನದಲ್ಲಿ ಕೂಡಿಸಿದಳು. ಆಗ ಆ ಸಾಧ್ವಿಯು ಭಯಭಕ್ತಿಯುಕ್ತಳಾಗಿ ತಾವು ಏನುಕಾರಣ ದಯಮಾಡಿಸಿದಿರೆಂದು ಪ್ರಾರ್ಥಿಸಲು ಬಸವಣ್ಣನವರು ತಾವು ತಂದ ಹೊನ್ನುಗಳನ್ನು ತೋರಿಸಿದರು. ಅಮ್ಮಾ! ನೀವು ಬಹಳ ಬಡವರು. ಈ ಹೊನ್ನುಗಳನ್ನು ತೆಗೆದುಕೊಳ್ಳಿರಿ. ನಿಮ್ಮ ದಾಸೋಹಕ್ಕೆ ಉಪಯೋಗ ಬೀಳುತ್ತವೆ ಎಂದು ಹೇಳಲು, ಅದಕ್ಕೆ ಆ ಸ್ತ್ರೀಯಳು ನಮ್ಮ ಕಾಯಕವೇ ನಮಗೆ ಕೈಲಾಸವಾಗಿರುವದರಿಂದ ನಮಗೆ ಅವು ಸಲ್ಲವು ಎಂದು ನುಡಿದಳು. ಅದಕ್ಕೆ ಆ ಕಪಟವೇಷಧಾರಿಯು ಶಿಟ್ಟಿನಿಂದ ಗದ್ದರಿಸಿ ಮಾತನಾಡಲು ಆಕೆಯು ಸುಮ್ಮನಾದಳು. ಆಕೆಯು ಸುಮ್ಮನೆ ಆದುದನ್ನು ನೋಡಿ "ಮೌನಮರ್ಧಮಂಗೀಕಾರಮ್" ಸುಮ್ಮನೆ ಇರುವದರಿಂದ ಅರ್ಧ ಒಪ್ಪಿಗೆ ಕೊಟ್ಟಂತಾಯಿತೆಂದು ತಿಳಿದು ಆ ಹೊನ್ನುಗಳನ್ನು ಸುರುವಿ ಹೊರಗೆ ಹೋಗಿ ಬಯಲಾದರು.

ಆಕೆಯು ಅವುಗಳನ್ನು ಕಣ್ಣಿನಿಂದ ಸಹ ನೋಡದೆ ತನ್ನ ನಿತ್ಯಕರ್ಮದಲ್ಲಿ ತೊಡಗಿದಳು. ಇಷ್ಟರಲ್ಲಿಯೇ ಕೇತಯ್ಯನವರು ಒಳಗೆ ಬಂದರು. ಇವುಗಳನ್ನು ಯಾರು ಇಲ್ಲಿ ಚಲ್ಲಿರುತ್ತಾರೆಂದು ಕೇಳಲು ಬಸವಣ್ಣನವರು ನಾವು ಬಡವರೆಂದು ನಮ್ಮ ದಾಸೋಹಕ್ಕೆಂದು ತಂದು ನಾನು ಬೇಡವೆಂದರೂ ಚಲ್ಲಿ ಹೋಗಿರುತ್ತಾರೆ. ಈ ಮಾತಿಗೆ ಅವರು ಶಿಟ್ಟಿಗೆದ್ದು ಬಸವಣ್ಣನವರಿಗೆ ಸೊಕ್ಕು ಬಂದಿತೇ? ಅವನಿಗೆ ರೊಕ್ಕ ಹೆಚ್ಚಿತೇ? ಎಂದು ನುಡಿದು ಮೊದಲು ಅವುಗಳನ್ನು ತಿಪ್ಪೆಗೆ ಹಾಕಿರೆಂದು ಹೇಳಿ ಆ ಸ್ಥಳವನ್ನು ಗೋಮಯದಿಂದ ಲೇಪನಮಾಡಿಸಿದರು. ಕಾಯಕದಿಂದಲ್ಲದೆ ಬಂದುದನ್ನು ನೋಡಿದಕಾರಣ

ನೈಲಿಗೆಯಾಯಿತೆಂದು ಸ್ನಾನಕ್ಕೆ ಹೋದರು. ದಂಪತಿಗಳೀರ್ವರೂ ಶುಚಿರ್ಭೂತರಾಗಿ ಎಂದಿನಂತೆ ತಮ್ಮ ಕಾಯಕವನ್ನು ನಡೆಯಿಸಿದರು. ಮುಂದೆ ಕೆಲವು ದಿನಗಳ ಮೇಲೆ ಶಿವನು ಕೇತಯ್ಯನು ತರುವ ಅರಣ್ಯದಲ್ಲಿರುವ ಬಿದಿರುಗಳನ್ನೆಲ್ಲ ಮುತ್ತುರತ್ನಗಳಿಂದ ತುಂಬಿದನು. ಕೇತಯ್ಯನು ಹೋಗಿ ಬಿದಿರು ಕಡಿಯಲು ಅವುಗಳಲ್ಲಿದ್ದ ಮುತ್ತುರತ್ನಗಳು ಬಳಬಳನೆ ಬಿದ್ದವು. ಆಗ್ಗೆ ಕೇತಯ್ಯನವರು ಇವು ಹುಳುಕಿವೆ ಬೇಡವೆಂದು ಮೇಲಕ್ಕೇರಿದರು. ಆಗ್ಗೆ ಶಿವನು ಸುಂಟರಗಾಳಿಯನ್ನು ನಿರ್ಮಿಸಿ ಅವನು ಕೆಳಗೆ ಬೀಳುವಂತೆ ಮಾಡಿದನು. ಬೀಳುವಾಗ್ಗೆ ಬಿದಿರಿನ ತುದಿಯೊಂದು ಶರಣನ ಹೃದಯದೊಳಗೆ ಚುಚ್ಚಿ ಬೆನ್ನಿನಲ್ಲಿ ಪಾರಾಗಿ ಹೋಯಿತು. ಆಗ ಕೇತಯ್ಯನವರು ದೇವ "ಜಾತಸ್ಯ ಮರಣಂ ಧೃವಂ" ಎಂಬುದ ನಾ ಬಲ್ಲೆ; ಸಾವಿಗೆ ಅಂಜುವದಿಲ್ಲ. ಆದರೆ ಜಂಗಮ ದಾಸೋಹ ತೀರಿದನಂತರ ನನ್ನ ಪ್ರಾಣವನ್ನು ಒಯ್ಯಬಹುದೆಂದೂ ಅದರೊಳಗೆ ಒಯ್ದರೆ ಆಣೆ ಇರುತ್ತದೆಂದೂ ಆಣೆಯನ್ನು ಹಾಕಿದನು. ಕಯ್ಯೊಳಗಿನ ಕುಡುಗೋಲಿನಿಂದ (ಕುಡ್ಲು) ನಟ್ಟ ಬಿದಿರನ್ನು ಸವರಿ ಬೇಕಾಗುವ ಬಿದಿರನ್ನು ತೆಗೆದುಕೊಂಡುಬಂದನು. ದಿನದಂತೆ ತಮ್ಮ ಕಾಯಕವನ್ನು ಮಾಡಿ ಪದ್ಮಾಸನ ಹಾಕಿಕೊಂಡು ಗೋಡೆಗೆ ಕುಳಿತು ಕ್ರಿಯಾ ಮೂರ್ತಿಗಳಿಗೆ ತನ್ನ ಮಸ್ತಕದ ಮೇಲೆ ಪಾದವನ್ನಿಡಲು ಹೇಳಿ ನಟ್ಟ ಬಿದಿರನ್ನು ಕೀಳಲು ಹೆಂಡತಿಗೆ ಆಜ್ಞಾಪಿಸಿದನು. ಅದರಂತೆ ಅವಳು ಮಾಡಲು ತತ್ಕಾಲದಲ್ಲಿ ಅವರ ಪ್ರಾಣ ಹೋಯಿತು. ಆಗ ಕಲ್ಯಾಣಪಟ್ಟಣದಲ್ಲಿರುವ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಗಣಾಧೀಶ್ವರರೇ ಮೊದಲಾದವರು ಕೂಡಿದರು. ಶ್ರೀ ಪ್ರಭುದೇವರೂ, ಮಾಚಯ್ಯನವರೂ ಇದ್ದಿರಲಿಲ್ಲ.

ಪಡಿಹಾರಿ ಉತ್ತಣ್ಣನವರು ಮಡಿವಾಳನನ್ನು ಕರೆಯಲಿಕ್ಕೆ ಹೋದರು. ಈ ಎಲ್ಲಾ ಸುದ್ದಿಯನ್ನು ಕೇಳಿ ಬರಲಿಕ್ಕೆ ಒಪ್ಪಲಿಲ್ಲ. ಯಾಕಂದರೆ ಬಸವಣ್ಣನವರು ತಾವು ಅವತರಿಸುವಾಗ್ಗೆ ಶರಣರ ಪ್ರಾಣವೇ ತನ್ನ ಪ್ರಾಣವೆಂದು ಪ್ರತಿಜ್ಞೆಮಾಡಿದ್ದು ಮರೆತಂತೆ ಕಾಣುತ್ತದೆ. ಕೇತಯ್ಯನವರ ಪ್ರಾಣ ಹೇಗೆ ಹೋಯಿತು? ಬಸವಣ್ಣನವರ ಪ್ರಾಣ ಹೇಗೆ ಉಳಿಯಿತು? ಪಡಿಹಾರಿಯು ಎಲ್ಲರ ಮುಂದೆ ಹೇಳಲು ಆ ಕೂಡಲೇ ಬಸವಣ್ಣನವರ ಪ್ರಾಣ ಹೋಯಿತು. ಕಲ್ಯಾಣದಲ್ಲಿ ಕೋಲಾಹಲವಾಯಿತು. ವೀರಘಂಟೆಯನ್ನು ಬಾರಿಸುತ್ತ ಮಾಚಯ್ಯನು ನಿಷ್ಕಾರಣವಾಗಿ ದಾಸೋಹವನ್ನು ಮಾಡುತ್ತಿದ್ದವರ ಪ್ರಾಣ ಹೇಗೆ ಹೋಯಿತು? ಶಿವನದು ತಪ್ಪೆಂದು ನುಡಿಯಲು ಆಗ ಪಾರ್ವತಿ ಶಂಕರನಿಗೆ ಬಿನ್ನೈಸಲು ಪುನಃ ಇಬ್ಬರೂ ಬದುಕಿದರು. ಸಂತೋಷದಿಂದ ಪ್ರಭುದೇವರ ಉತ್ಸವವಾಯಿತು.

ಆಯ್ದಕ್ಕಿ ಮಾರಯ್ಯನವರ ಕಾಯಕ—ಒಂದು ದಿನ ಶರಣರ ಸಭೆಯು ನಡೆದಿತ್ತು. ಆ ಕಾಲಕ್ಕೆ ಆಯ್ದಕ್ಕಿಯ ಮಾರಯ್ಯನೆಂಬ ಶರಣನು ಅಲ್ಲಿಗೆ ಬಂದು ಪ್ರಭುದೇವರೊಡನೆ ತಮ್ಮ ಕಾಯಕದ ನಿರ್ವಂಚಕತ್ವವೇ ಗುರುಲಿಂಗಜಂಗಮ ಕಾಯಕವೇ ಕೈಲಾಸವೆಂದು ಬಿನ್ನಹಂ ಮಾಡುವ ಪ್ರಸ್ಥಾವದ ವಚನ—

೩೪೦

"ಹಾಗದ ಕಾಯಕವ ಮಾಡಿಕೊಂಡು ಹಣವಡ್ಡವ ತಾ ಎಂಬಲ್ಲಿ
ಸತ್ಯಕಾಯಕವುಂಟೆ? ಭಕ್ತರಲ್ಲಿ ಕಾಯಕಕ್ಕೆ ಕಡಿಮೆಯಾಗಿ ತಾ ಎಂಬುದು

ಅಮರೇಶ್ವರಲಿಂಗಕ್ಕೆ ಚಿತ್ತಶುದ್ಧಿ ಕಾಯಕ ಮತ್ತಂ ನೇಮವ ಮಾಡಿಕೊಂಡು
ಭಕ್ತರ ಭವನಂಗಳ ಹೊಕ್ಕು ಕಾಯಕಕ್ಕೆ ಸತ್ತು ಪಣ ಹೊನ್ನ ಬೇಡಿಹೆ
ನೆಂಬುದು ಕಷ್ಟವಲ್ಲದೆ ಸದ್ಭಕ್ತಂಗೆ ಆ ಗುಣ ಅಮರೇಶ್ವರಲಿಂಗಕ್ಕೆ ದೂರ''

ನಿಯಮಿತ ದ್ರವ್ಯವನ್ನು ತೆಗೆದುಕೊಳ್ಳಬೇಕಲ್ಲದೆ ಹೆಚ್ಚು ಕಡಿಮೆ ಹಣವನ್ನು ಖಂಡಿತವಾಗಿಯೂ ಬೇಡಲಾಗದು. ಹಾಗೆ ಮಾಡಿದ್ದಾದರೆ ಅದು ಸತ್ಯಕಾಯಕವಾಗಲಾರದು. ಆದ್ದರಿಂದ ಕಾಯಕದಲ್ಲಿ ಅತ್ಯಂತ ಪವಿತ್ರತೆಯಿಂದ ಇರಬೇಕೆಂಬುವದೇ ಶರಣರ ತಾತ್ಪರ್ಯವು. ಉದರ ಪೋಷಣೆಗಾಗಿ ಮಾಡುವ ಉದ್ಯೋಗಕ್ಕೂ, ಚಿತ್ತಶುದ್ಧಿಯಿಂದ ಗುರುಲಿಂಗಜಂಗಮ ಸೇವೆಯ ಸಲುವಾಗಿ ಮಾಡುವ ಕಾಯಕಕ್ಕೂ ಮಹದಂತರವಿದೆ. ಈಗಿನ ಕಾಲದಲ್ಲಿಯೂ ಅನೇಕರು ಕಾಯಕಗಳನ್ನು ತಮ್ಮ ಹೊಟ್ಟೆಯ ಸಲುವಾಗಿ ಜನರನ್ನು ಕಾಡಿ ಬೇಡಿ ಮಾಡುತ್ತಾರೆ. ಇದು ಕಾಯಕವಲ್ಲ. ಹೊಟ್ಟೆಯನ್ನು ತುಂಬಿಸಿಕೊಳ್ಳಲಿಕ್ಕೆ ಆಲಸ್ಯವಂತರಾದ ಜನರಿಗೆ ಇದೊಂದು ಸಾಧನವಾಗಿದೆ. ಬಸವಾದಿಗಳ ಕಾಲದಲ್ಲಿ ಅನೇಕರು ಜನರನ್ನು ನೀತಿವಂತರನ್ನಾಗಿ ಮಾಡುವದಕ್ಕೂ, ಅವರ ದುರಾಚಾರಗಳನ್ನು ಬಿಡಿಸಿ ಸದಾಚಾರಿಗಳನ್ನಾಗಿ ಮಾಡುವದಕ್ಕೂ ಸತ್ಯಾಗ್ರಹವನ್ನು ಮಾಡುತ್ತಿದ್ದರು. ಬರಬರುತ್ತ ಕಾಯಕದ ಮೂಲ ಉದ್ದೇಶವು ಕೆಟ್ಟು ಸತ್ಯಾಗ್ರಹದ ಬದಲು ದುರಾಗ್ರಹವಾಗಿಬಿಟ್ಟಿರುತ್ತದೆ. ಆಯ್ದಕ್ಕಿಯ ಮಾರಯ್ಯನವರ ವಚನಗಳು ಕಾಯಕದ ಮಹತ್ವವನ್ನು ಹೇಳುತ್ತವೆ. ಅವರು ತಮ್ಮ ಕಾಯಕದ ಸ್ವರೂಪವನ್ನು ಪ್ರಭುದೇವರಿಗೆ ಹೇಳಲು ಅವರಿಬ್ಬರಿಗೂ ಅನೇಕ ಪ್ರಶ್ನೋತ್ತರಗಳಾಗಿವೆ. ಕಡೆಗೆ ಮಾರಯ್ಯನವರು ಪ್ರಭುದೇವರ ಪಾದಕ್ಕೆ ನಮಸ್ಕರಿಸಿ ತಮ್ಮ ಕಾಯಕವನ್ನು ತಾವೇ ಜರಿಯುತ್ತ—

೩೪೧

"ಅಹುದಹುದು ಗೆದಲಿ ಮನೆಯ ಮಾಡಿ ಸರ್ಪಂಗೆ ಇಂಬಾದಂತೆ
ನಾನತ್ತಣ ದ್ರವ್ಯವ ತಂದು ಇತ್ತ ಮಾಡಿದಡೆ ನನಗಿನ್ನೆತ್ತಣ ಮುಕ್ತಿ ಘನ
ಮಹಿಮ ಶರಣರ ಸಂಗದಿಂದ ಘನಕ್ಕೆ ಘನವೇದ್ಯವಾದ ಬಳಿಕ ಅರಿವರತು
ಮರಹು ನಷ್ಟವಾಗಿ ಅಮರೇಶ್ವರಲಿಂಗದಲ್ಲಿ ನಿಜಪದವ ಬೆರಸಿ ಪ್ರಭುದೇವರ
ಶ್ರೀ ಪಾದಕ್ಕೆ ನಮೋ ನಮೋ ಎನುತಿರ್ದನು"

ಇಷ್ಟರಲ್ಲಿಯೇ ಆಯ್ದಕ್ಕಿಯ ಮಾರಯ್ಯನವರ ಪತ್ನಿಯರಾದ ಲಕ್ಕಮ್ಮನವರು ಬಂದು ನಮ್ಮ ಮಾರಯ್ಯನವರ ಕಾಯಕ ನಿಂತಿರುತ್ತದೆ. ಆದ್ದರಿಂದ ಅವರನ್ನು ಬೇಗನೆ ಕಾಯಕಕ್ಕೆ ಕಳುಹಿಸಬೇಕೆಂದು ಶರಣರಿಗೆ ಪ್ರಾರ್ಥಿಸಲು ಮಾರಯ್ಯನವರು ಸಂತೋಷ ಭರಿತರಾಗಿ ಬೇಗ ಬೇಗನೆ ಬಸವೇಶ್ವರನ ಅಂಗಳಕ್ಕೆ ಬಂದು ಅಲ್ಲಿ ಚಲ್ಲಿರ್ದ ತಂಡುಲಗಳನ್ನು ಹೆಚ್ಚಾಗಿ ಆಯ್ದು ಲಕ್ಕಮ್ಮನವರಿಗೆ ಕೊಡಲು ಇದು ಆಶೆಯೆಂದು ತಮ್ಮ ಪತಿಗಳನ್ನು ನಿಂದಿಸಿ ನೀವು ಹೀಗೆ ಮಾಡಿದುದು ಸರಿಯಲ್ಲ, ಪುನಃ ಅಲ್ಲಿಯೇ ಚಲ್ಲಿ ಬರಬೇಕೆಂದು ಲಕ್ಕಮ್ಮನವರು ಹೇಳುತ್ತ—

೩೪೨

"ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ? ಎಲೆ ಅಯ್ಯ?
ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ? ಎಲೆ ಅಯ್ಯ?

ಈಸಕ್ಕಿಯ ಆಸೆ ನಿಮಗೇತಕೆ? ಈಶ್ವರನೊಪ್ಪ ಮಾರಯ್ಯ ಪ್ರಿಯ ಅಮರೇಶ್ವರಲಿಂಗಕ್ಕೆ ದೂರ ದೂರದಯ್ಯ"

### ೩೪೩

"ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನವುಂಟೆ? ಬೆಟ್ಟ ಬಲ್ಲಿತ್ತೆಂದರೆ ಉಳಿಯ ಮೊನೆಯಲ್ಲಿ ಬಡತನ ಉಳ್ಳರೆ ಒಡೆಯದೆ? ಘನಶಿವಭಕ್ತರಿಗೆ ಬಡತನವಿಲ್ಲ ಸತ್ಯರಿಗೆ ದುಃಕರ್ಮವಿಲ್ಲ ಎನಗೆ ಮಾರಯ್ಯ ಪ್ರಿಯ ಅಮರೇಶ್ವರಲಿಂಗವುಳ್ಳನ್ನಕ್ಕರ ನನಗಾರ ಹಂಗಿಲ್ಲ ಮಾರಯ್ಯ"

### ೩೪೪

"ಭಕ್ತರು ಕಾಯಕನೆಂದುದಾಯಗಾರಿಕೆಯಲ್ಲಿದ್ದು ದಾಸೋಹವ ಮಾಡಬಹುದೆ? ಒಮ್ಮನವ ತಂದು ಒಮ್ಮನದಲ್ಲಿಯೇ ಮಾಡಿ ಇಮ್ಮನ ವಾಗದ ಮುನ್ನವೇ ಮಾರಯ್ಯ ಪ್ರಿಯ ಅಮರೇಶ್ವರಲಿಂಗಕ್ಕೆ ಸಲ್ಲಬೇಕು ಮಾರಯ್ಯ?

### ೩೪೫

"ಭಕ್ತಂಗೆ ಬಡತನವುಂಟೆ? ನಿತ್ಯರಿಗೆ ಮರಣವುಂಟೆ? ಭಕ್ತರು ಬಡವರೆಂದು ಮತ್ತೊಂದ ಕೊಟ್ಟಹೆನೆಂದರೆ ಮಾರಯ್ಯ ಪ್ರಿಯ ಅಮರೇಶ್ವರವು ಲಿಂಗವು ಸತ್ತಂದಿಗಲ್ಲದೆ ಬಡತನವಿಲ್ಲ"

### ೩೪೬

"ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು ನಡೆಯಿಲ್ಲದ ನುಡಿ ಅರುವಿಂಗೆ ಹಾನಿ ಕೊಡದೆ ತ್ಯಾಗಿ ಎನಿಸಿಕೊಂಬುದು ಮುಡಿ ಇಲ್ಲದ ಶೃಂಗಾರ ದೃಢವಿಲ್ಲದ ಭಕ್ತಿ ಅಡಿನಡೆದ ಕುಂಭದಲ್ಲಿ ಸುಖಜಲವ ತುಂಬಿದಂತೆ ಮಾರಯ್ಯ ಪ್ರಿಯ ಅಮರೇಶ್ವರಲಿಂಗಕ್ಕೆ ಮುಟ್ಟದ ಭಕ್ತಿ"

### ೩೪೭

"ಒಮ್ಮನವ ಮಾರಿ ಇಮ್ಮನದಲ್ಲಿ ತಂದಿರಿ ಇದು ನಿಮ್ಮ ಮನವೋ? ಬಸವಣ್ಣನ ಅನುಮಾನದ ಚಿತ್ತ ಈ ಮಾತು ಮಾರಯ್ಯ ಪ್ರಿಯ ಅಮರೇಶ್ವರಲಿಂಗಕ್ಕೆ ಸಲ್ಲದ ಬೋನವ ಅಲ್ಲಿಯೇ ಸುರಿದು ಬನ್ನಿ ಮಾರಯ್ಯ"

ಹೀಗೆ ಅನೇಕ ವಚನಗಳಿಂದ ಲಕ್ಕಮ್ಮನವರು ತಮ್ಮ ಪತಿಗಳಿಗೆ ವಿಡಂಬನಮಾಡಿ ನುಡಿದ ಮುತ್ತಿನಂತಹ ವಚನಗಳನ್ನು ಮನಮುಟ್ಟಿ ಓದಿನೋಡಿದರೆ ವೀರಶೈವ ಹೆಣ್ಣುಮಕ್ಕಳೂ ಕೂಡ ಆ ಕಾಲದಲ್ಲಿ ಎಂತಹ ಶ್ರೇಷ್ಠತರವಾದ ಆಧ್ಯಾತ್ಮ ವಿಷಯದಲ್ಲಿ ನಿಪುಣತೆ ಪಡೆದಿದ್ದರೆಂಬುವದು ಗೊತ್ತಾಗುತ್ತದೆ. ಇದನ್ನು ಓದಿದ ಆಧುನಿಕರೂ ಕೂಡ ತಲೆದೂಗದೆ ಗತ್ಯಂತರವಿಲ್ಲ. ಶ್ರೀಮತಿ ಲಕ್ಕಮ್ಮನವರ ನಿರಾಶಾಭರಿತವಾದ ಈ ಕರ್ಮಯೋಗವನ್ನು ಮೀರಿದವರು ಅಥವಾ ಅವರಿಗೆ ಸಮಾನರಾದವರು ಭರತಖಂಡದಲ್ಲಿ ಕೈಬೆರಳಿನಿಂದ ಎಣಿಸುವಷ್ಟು ಹೆಣ್ಣುಮಕ್ಕಳು ಶಿಗುವದು ಶಕ್ಯವಿಲ್ಲ. ಅವರ ವಿವೇಚನಾ ಪದ್ಧತಿಯು ಪಂಡಿತರನ್ನು ತಲೆದೂಗಿಸುತ್ತದೆ. ಅವರ ನಿಷ್ಕಾಮ ಕಾಯಕವು ಆಧುನಿಕ

ಯುಗದ ಜನಗಳನ್ನು ಬೆರಗುಗೊಳಿಸುತ್ತದೆ. ಮಾರಯ್ಯನವರೂ ಕೂಡ ಲಕ್ಕಮ್ಮ ನವರಿಗೆ ಕೆಲವು ಮಾತುಗಳನ್ನು ಹೇಳಿದಮೇಲೆ ಬಸವಣ್ಣ, ಚನ್ನಬಸವಣ್ಣ, ಪ್ರಭುದೇವರು ಮೊದಲಾದ ಲಕ್ಷದಮೇಲೆ ತೊಂಭತ್ತಾರು ಸಾವಿರ ಜಂಗಮರುಗಳಿಗೆ ಅಮರೇಶ್ವರಲಿಂಗದ ಮನೆಯಲ್ಲಿ (ಆಯ್ದಕ್ಕಿ ಮಾರಯ್ಯನವರ ಮನೆ) ಪದಾರ್ಥವಾಯಿತ್ತೆಂದು ಬಿನ್ನಹವನ್ನು ಮಾಡಿ ಬರಲಿಕ್ಕೆ ಲಕ್ಷಮ್ಮನವರು ಹೇಳಲು ಆಗ ಮಾರಯ್ಯನವರು "ಶಿವಶಿವಾ ನಾನೆತ್ತ ನಿತ್ಯನಿಯಮ ವ್ರತಶೀಲರಾದ ಸಂಪನ್ನರಿಗೆ ಅವರವರ ನೇಮಂಗಳಂ ಸಲಿಸುವದು ನಮಗೆ ಸಾಧ್ಯವೇ? ನಾವು ಬಡವರು. ಅಸಂಖ್ಯಾತ ಗಣಂಗಳಿಗೆ ತೃಪ್ತಿ ಪಡಿಸುವದಕ್ಕೆ ನಾವು ಅಶಕ್ತರೆಂದೂ, ನಮಗೆ ಸಾಧ್ಯವಾಗಲಾರದೆಂತಲೂ, ಎಡೆ ಎಲ್ಲಿ ಕೆಡುವದೆಂದು ನಿರೂಪಿಸಲು ಇದಕ್ಕೆ ಲಕ್ಕಮ್ಮನವರು ಶಿವನ ಕರುಣವ ಪಡೆದ ಶಿವಭಕ್ತರಿಗೆ ಆಗುತ್ತದೆ ಅಥವಾ ಆಗುವದಿಲ್ಲವೆಂಬುವ ಸಂದೇಹವೇ ಬೇಡ ಎಂದು ಹೇಳುತ್ತ—

೩೪೮

"ಮನಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಲ್ಲದೆ ಚಿತ್ತಶುದ್ಧದಲ್ಲಿ
ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದತ್ತ ಲಕ್ಷ್ಮಿ ತಾನಾಗಿ
ಪ್ಪಳು ಮಾರಯ್ಯ ಪ್ರಿಯ ಅಮರೇಶ್ವರಲಿಂಗದ ಸೇವೆಯುಳ್ಳನ್ನಕ್ಕ"

ಹೀಗೆ ಲಕ್ಕಮ್ಮನವರು ತಮ್ಮ ಪತಿಗಳಿಗೆ ಧೈರ್ಯವುಂಟುಮಾಡಲು ಮಾರಯ್ಯನವರು ಪರಮ ಹರ್ಷದಿಂದ ಮುಕುಲಿತವದನರಾಗಿ ನಾನು ಬಿನ್ನಹವ ಮಾಡಲಿಕ್ಕೆ ಹೋಗುತ್ತೇನೆ. ನೀವು ಎಲ್ಲ ಪದಾರ್ಥಗಳನ್ನು ಸಿದ್ಧಪಡಿಸಬೇಕೆಂದು ಮಾರಯ್ಯನವರು ಹೇಳಲು ಸತಿ ಲಕ್ಕಮ್ಮನವರು ಬಸವಾದಿ ಅಸಂಖ್ಯಾತರ ಹೃತ್ಕಮಲ ಮಧ್ಯದಲ್ಲಿ ಮಹಾ ದಿವ್ಯಜ್ಞಾನದಿಂದ ನಿರೀಕ್ಷಿಸಿ ಅವರವರಿಗೆ ಇಷ್ಟವಿದ್ದ ಪದಾರ್ಥಗಳನ್ನು ನಿಮಿಷದಲ್ಲಿ ಸಿದ್ಧಪಡಿಸಿ ಇನ್ನುಮೇಲೆ ಕರೆದುಕೊಂಡು ಬರಬಹುದೆಂದು ಬಿನ್ನೈಸಲು ಮಾರಯ್ಯನವರು ಆ ಕಾಲಕ್ಕೆ—

೩೪೯

"ಸತ್ಯವೆಂಬುವ ತಟ್ಟೆಯಲ್ಲಿ ಚಿತ್ತಶುದ್ಧಿಯೆಂಬುವ ವಿಭೂತಿಯ
ಬೈಚಿಟ್ಟು ಸಕಲಸಂಪದ ಪ್ರಮಥರು ಮುಂತಾಗಿ ಅಮರೇಶ್ವರಲಿಂಗದ
ಆಶ್ರಯದಲ್ಲಿ ಪ್ರಸಾದವ ಕೊಂಬುವದಕ್ಕೆ ಬಾರಾ ಸಂಗನ ಬಸವಣ್ಣ"

೩೫೦

ಇದಕ್ಕೆ ಬಸವಣ್ಣನವರು—

"ಅಲ್ಲೆನಬಾರದು ಅಹುದೆನಬಾರದು ಕೂಡಲಸಂಗನ ಶರಣರ ಸಂಗ
ಕರಗಸದ ಬಾಯಿ ಧಾರೆಯಂತೆ ಅರಿಬಿರಿದೈಯ್ಯ"

ಹೀಗೆ ಮಹಾಗಣಂಗಳು ಸಹಿತವಾಗಿ ಬಸವರಾಜದೇವರು, ಪ್ರಭುದೇವರು ಬಿಜಯಂಗೈಸಿ ಪಾದಾರ್ಚನೆಯನ್ನು ಮಾಡಿ ಸಿಂಹಾಸನವನ್ನು ಸ್ಥಾಪಿಸಿ ಶರಣರ ಮನದಣಿಯುವಂತೆ ಎಡೆಮಾಡಿ ಮತ್ತು ಮಾಹೇಶ್ವರರಿಗೆ ಇಚ್ಛಾಪದಾರ್ಥಮಂ ಸಲಿಸಲು ಎಲ್ಲ ಗಣಂಗಳು ಷಡುರುಚಿಯ ಲಿಂಗಕ್ಕೆ ಅರ್ಪಿಸಿ ತೃಪ್ತಿಪಡೆಯಲು ಅದನ್ನು ಕಂಡು ಪ್ರಭುದೇವರು ಆಶ್ಚರ್ಯಂ ಬಟ್ಟು ಬಸವರಾಜದೇವರಿಗೆ—

೩೫೧

"ಆರಾರ ನೇಮಕ್ಕೆ ಸಂದಿತ್ತು ಇಚ್ಛಾಭೋಜನಕ್ಕೆ ತೃಪ್ತಿಯಾಯಿತು ಮನ ಘನವು ಕಂಡಯ್ಯ ಸಂಗನ ಬಸವಣ್ಣ"

ಮಾರಯ್ಯನವರು ಚನ್ನಾಗಿ ತೃಪ್ತಿಪಡಿಸಿದರು. ಅವರ ಮನಸ್ಸು ಬಹಳ ದೊಡ್ಡದು ಎಂದು ಪ್ರಭುಗಳು ಅಪ್ಪಣೆ ಕೊಡಿಸಲು ಬಸವಣ್ಣನವರು—

೩೫೨

"ಮನೆ ನೋಡಾ ಬಡವರು ಮನ ನೋಡಾ ಘನ ಸೋಂಕಿನಲ್ಲಿ ಸುಖಿ ಸರ್ವಾಂಗ ಕವಿಗಳು, ಪಸಾರಕ್ಕನುವಿಲ್ಲ ಬಂದ ತತ್‌ಕಾಲಕ್ಕುಂಟು ಕೂಡಲಸಂಗನಶರಣರು ಸ್ವತಂತ್ರಧೀರರು"

ಎಂದು ಬಸವಣ್ಣನವರು ದಂಪತಿಗಳೀರ್ವರೂ ಏಕಮನಸ್ಸಿನಿಂದ ಮಾಡಿದಕಾರಣ ಗುಹೇಶ್ವರಲಿಂಗಕ್ಕೆ ತೃಪ್ತಿಯಾಯಿತೆಂದು ಸಂತೋಷದಿಂದ ಹೇಳಿದರು. ಆಗ ಮಾರಯ್ಯನವರು ಬಹಳ ವಿನಯದಿಂದ ತಮ್ಮ ಸಾತ್ವಿಕ ಕಾಯಕಕ್ಕೆ ಒಪ್ಪುವಂತೆ—

೩೫೩

"ತನುವೀವಡೆ ತನುವೆನಗಿಲ್ಲ ಮನವೀವಡೆ ಮನವೆನಗಿಲ್ಲ ಧನವೀವಡೆ ಧನವೆನಗಿಲ್ಲ ಇಂತೀ ತನು ಮನ ಧನ ಸಕಲ ಸಂಪತ್ತುಳ್ಳ ನಿಮ್ಮ ಶರಣರ ತಪ್ಪಲಕ್ಕಿಯನಾಯ್ದು ತಂದು ಎನ್ನೊಡಲ ಹೊರೆವೆನಲ್ಲದೆ ಅಮರೇಶ್ವರಲಿಂಗಕ್ಕೆ ನೀಡುವ ಬಯಕೆ ಎನಗಿಲ್ಲ ಸಂಗನ ಬಸವಣ್ಣ"

೩೫೪

"ಎನಗೆ ಮನೆಯಿಲ್ಲ ಎನಗೆ ಧನವಿಲ್ಲ ಮಾಡುವದೇನು? ನೀಡುವದೇನು? ಮನೆಧನ ಸಕಲ ಸಂಪದವುಳ್ಳ ನಿಮ್ಮ ಶರಣರ ತಪ್ಪಲಕ್ಕಿಯ ನಾಯ್ದು ತಂದು ಎನ್ನೊಡಲ ಹೊರೆವೆನಲ್ಲದೆ ಅಮರೇಶ್ವರಲಿಂಗಕ್ಕೆ ನೀಡುವ ಬಯಕೆ ಎನಗಿಲ್ಲ ಸಂಗನ ಬಸವಣ್ಣ"

ಹೀಗೆ ನಿಷ್ಕಾಮಭಕ್ತಿಯಿಂದ ಸಾತ್ವಿಕ ಯೋಗಿಗಳಿಗೊಪ್ಪುವಂತೆ ಆಯ್ದಕ್ಕಿಯ ಮಾರಯ್ಯನವರು ಅತ್ಯಂತ ನಿಷ್ಠೆಯಿಂದ ತಮ್ಮ ಕಾಯಕವನ್ನು ಆವುದೆಂದು ಫಲಾಪೇಕ್ಷೆಯಿಲ್ಲದೆ ಮಾಡಿರುವುದನ್ನು ನೋಡಿದರೆ ಇದಕ್ಕಿಂತಲೂ ಹೆಚ್ಚಿನ ಸಾತ್ವಿಕ ಕರ್ಮವು ಜಗತ್ತಿನಲ್ಲಿ ಬೇರೊಂದು ದೊರೆಯಲಾರದು. ಆ ಕರ್ಮಯೋಗಿಯು ಬಸವನ ಕಾರ್ಯಪದ್ಧತಿಯಲ್ಲಿ ಶಿಕ್ಷಣಹೊಂದಿದವರೇ ಇಂತಹ ಉಪಮಾತೀತರಾಗಿರುವಾಗ ಶ್ರೀ ಬಸವಣ್ಣನವರ ವಿಷಯದಲ್ಲಿ ಹೆಚ್ಚಿಗೆ ಹೇಳುವದೇ ಬೇಡ. ಉಪನಿಷತ್ತುಗಳಲ್ಲಾಗಲೀ, ಭಗವದ್ಗೀತೆಯಲ್ಲಾಗಲೀ ಇದಕ್ಕಿಂತ ಹೆಚ್ಚಿನ ನಿಷ್ಕಾಮಕರ್ಮದ ಹೇಳಿಕೆಯಿಲ್ಲ. ಆಯ್ದಕ್ಕಿಯ ಮಾರಯ್ಯನವರು ತಮ್ಮ ಕಾಯಕವು ಸಾರ್ಥಕವಾಯಿತೆಂದು ಸಂತೋಷಪಟ್ಟು ಎಲ್ಲ ಶರಣರ ಎದುರಿಗೆ ತಮ್ಮ ಲಿಂಗದಲ್ಲಿ ಐಕ್ಯವಾಗುವ ಕಾಲಕ್ಕೆ—

೩೫೫

"ಚಂದ್ರಕಾಂತ ಶಿಲೆಯಲ್ಲಿ ಬಿಂದು ಅಡಗಿದಂತೆ ಗೋವುಗಳಲ್ಲಿ ಗೋರೋಚನ ರಂಜಿಸುವಂತೆ ಶಿಲೆಕಾಷ್ಠಗಳಲ್ಲಿ ಅನಲ ಅಡಗಿಪ್ಪಂತೆ

ಸತ್ಯರ ಹೃದಯದಲ್ಲಿ ಮೌಕ್ತಿಕದ ಉದುಕದಂತೆ ಭಾವವಿಲ್ಲದೆ ಅಡಗಿದೆ ಅಮರೇಶ್ವರಲಿಂಗದಲ್ಲಿ"

ಹೀಗೆ ದಂಪತಿಗಳೀರ್ವರೂ ಸಣ್ಣದೊಂದು ಕಾಯಕವನ್ನು ಹಿಡಿದು ದೇವರು ಮೆಚ್ಚುವಂತೆ ಮಾಡಿದ್ದೇನೂ ಸಾಧಾರಣವಾದುದಲ್ಲ. ಭಾವಶುದ್ಧವಿದ್ದವರಿಗೆ ಪರಮಾತ್ಮನ ಕೃಪೆಯು ಯಾವಾಗಲೂ ಇರುವದು. ಭಾವಶುದ್ಧವಿಲ್ಲದೆ ಅವನು ಎಷ್ಟೇ ದೊಡ್ಡ ಕಾರ್ಯದಲ್ಲಿ ತೊಡಗಿದ್ದರೂ, ಶ್ರೀಮಂತನು ಅಥವಾ ವಿದ್ಯಾವಂತನು ಆಗಿದ್ದರೂ ಅವನ ಮೇಲೆ ದೇವರ ದಯೆ ಆಗಲಾರದು. ವೀರಶೈವ ಶರಣರು ಮಾರಯ್ಯನವರಂತೆಯೇ ನೂರಾರು ಕಾಯಕಗಳನ್ನು ಶುದ್ಧಮನಸ್ಕರಾಗಿ ಆಚರಿಸಿ ಅದರಲ್ಲಿ ಲೋಕೋತ್ತರವಾದ ಗುಣಗಳನ್ನು ತೋರಿಸಿ ಅಜರಾಮರವಾದ ಕೀರ್ತಿಯನ್ನು ಗಳಿಸಿರುತ್ತಾರೆ. ಇದು ಇಂದಿನ ವೀರಶೈವರು ಹೆಮ್ಮೆಯನ್ನು ಪಡತಕ್ಕ ವಿಷಯವಾಗಿದೆ. ಲಕ್ಕಮ್ಮನವರಂತಹ ಓರ್ವ ಬಡಕುಟುಂಬದ ಹೆಣ್ಣುಮಗಳು ತಮ್ಮ ಕಾಯಕದಲ್ಲಿ ನಿರಾಶೆಯನ್ನು ತೋರಿಸದೆ ಸತ್ಯತನದಿಂದ ಅದನ್ನು ನಡೆಯಿಸಿ ಕೊನೆಗೆ ಯಶಸ್ವಿಯಾದುದು ಸುವರ್ಣಾಕ್ಷರಗಳಿಂದ ಭರತಖಂಡದ ಮಹಿಳೆಯರ ಚರಿತ್ರೆಯಲ್ಲಿ ಬರೆದಿಡಲು ಯೋಗ್ಯವಾಗಿದೆ.

ನುಲಿಯ ಚಂದಯ್ಯನವರ ಕಾಯಕ—ಇನ್ನೊಬ್ಬ ಶರಣರಾದ ನುಲಿಯ ಚಂದಯ್ಯನವರ ಸಂಪಾದನೆ ಅಥವಾ ಕಾಯಕವನ್ನು ಹೇಳಿ ಈ ಪ್ರಕರಣವನ್ನು ಮುಗಿಸುತ್ತೇನೆ. ಶರಣರು ಪರಮಾತ್ಮನ ಅಪ್ಪಣೆಯ ಪ್ರಕಾರ ಭೂಲೋಕಕ್ಕೆ ಬಂದು ವೀರಶೈವ ನಿಜವರ್ತನವನ್ನು ಮರ್ತ್ಯದಲ್ಲಿ ಪಸರಿಸುವದಕ್ಕೋಸ್ಕರ ಭೂಮಿಗೆ ಬಿಜಯಂಗೈವಾಗ ನುಲಿಯ ಚಂದಯ್ಯನೆಂಬ ಶರಣನು ಜಂಗಮ ದಾಸೋಹಕ್ಕೆ ಸತ್ಯಶುದ್ಧ ನಿಜಕಾಯಕದಿಂದ ನುಲಿಯನ್ನು ಮಾಡಿ ಹಾಗಕ್ಕೆ ಮಾರಿ ತಂದ ದ್ರವ್ಯದಿಂದ ಪದಾರ್ಥಮಂ ತಂದು ಜಂಗಮಕ್ಕೆ ನೀಡಿ ತತ್ಪ್ರಸಾದವಂ ಲಿಂಗ ಭೋಗೋಪಭೋಗಿಯಾಗಿರುತ್ತ ಜಂಗಮ ಭಕ್ತಿಯೇ ಅಧಿಕ; ಜಂಗಮಪೂಜೆಯೇ ಲಿಂಗಪೂಜೆಯೆಂದು ಸಾರುತ್ತ ಎಲ್ಲ ಕಾಯಕಗಳೂ ಜಂಗಮ ದಾಸೋಹದಲ್ಲಿಯೇ ಅಡಕವಾಗಿರುತ್ತವೆಂದು ತಿಳಿದು ಒಂದು ದಿನ ತನ್ನ ಕಾಯಕದ ಸಲುವಾಗಿ ಹುಲ್ಲನ್ನು ಕೊಯಿದು ಹೊರೆಯನ್ನು ಕಟ್ಟುವ ಕಾಲಕ್ಕೆ ಆತನ ಇಷ್ಟಲಿಂಗವು ಈತನ ಜಂಗಮ ದಾಸೋಹವೆ ಪರವೆಂಬುದು ನಿಜವೋ ಅಲ್ಲವೋ ಎಂದು ನೋಡುವನಿಮಿತ್ಯ ಜಲದಲ್ಲಿ ಬೀಳಲು ನುಲಿಯ ಚಂದಯ್ಯನು ಈ ಲಿಂಗದ ಮನೋಭಾವವನ್ನು ತಿಳಿದು ಚರಸೇವೆಯು ಬೇಕಾದರೆ ಲಿಂಗವು ತಾನೇ ಬರುವುದೆಂದೂ, ಪರಿಪೂರ್ಣವಾದ ವಸ್ತುವು ಎಲ್ಲಿರ್ದರೇನು? ಎಂಬುವ ಭಾವನೆಯಿಂದ ಜಂಗಮ ದಾಸೋಹದಲ್ಲಿಯೇ ಲಿಂಗವುಂಟೆಂದೂ ತಿಳಿದು ಚಂದಯ್ಯನು ಬಿಟ್ಟುಹೋಗಲು ಆ ಲಿಂಗವು ಆತನ ಜಂಗಮನಿಷ್ಠೆಯನ್ನು ಕಂಡು ಎಲೆ ಚಂದಯ್ಯ ನಾವು ಬಂದೆವೆಂದು ಮೇಲಕ್ಕೆ ಬಂದು ಧ್ವನಿಯನ್ನು ಮಾಡಲು ನಿಮ್ಮ ಭಾವದಂತೆ ನೀವು ಇರಬೇಕು, ನನಗೆ ನಮ್ಮ ಒಡೆಯರ ಸೇವೆಯು ಉಳಿದೀತೆಂದು ಹೋಗುತ್ತಿರೆ, ಆ ಲಿಂಗವು ತಾನೇ ವೃತ್ತ ಗೋಳಕ ಗೋಮುಖಾಕಾರಂಗಳಂ ಬಿಟ್ಟು ಪುರುಷಾಕಾರಮಂ ತಳೆದು ನಾನು ಬಂದೆನು ಬಿಟ್ಟು ಹೋಗಬೇಡೆಂದು ಹೇಳಲು ಚಂದಯ್ಯನು ಮೊದಲು ಹೋಗಿ ಈಗ ಬರುತ್ತೇವೆಂದು, ಹೇಳಿದರೆ ನಾನು ಒಪ್ಪುವುದಿಲ್ಲ. ಆಗ ಆ ಲಿಂಗವು ನೀನು ಒಲ್ಲೆನೆಂದರೆ ನಾನು ಬಿಡೆನು. ಎಂದು

ಶರಗಂ ಸುತ್ತಿಕೊಂಡು ಬಿಡದಿರಲು ಚಂದಯ್ಯನು ನೀವು ಸುಮ್ಮನೆ ಬಂದೆವೆಂದರೆ ನಾವೊಪ್ಪುವದಿಲ್ಲ. ಮುಂದೆ ನಾವು ಹೋಗತಕ್ಕ ದಾರಿಯಲ್ಲಿ ಮಡಿವಾಳಯ್ಯನವರು ಶೀರೆಯನ್ನು ತೊಳೆಯುತ್ತಲಿದ್ದಾರೆ. ಅವರ ಬಳಿಗೆ ಬನ್ನಿರೆಂದು ನಮಸ್ಕರಿಸಲು ಆಗ ಇಬ್ಬರೂ ಮಡಿವಾಳಯ್ಯನವರ ಹತ್ತಿರ ಬಂದರು. ಮಡಿವಾಳಯ್ಯನವರು ನಮಸ್ಕರಿಸಿ ಬಂದ ಕಾರಣವೇನೆಂದು ಕೇಳಲು ಲಿಂಗವು ತಮ್ಮ ಸ್ಥಿತಿಯನ್ನು ಹೇಳಲಾಗಿ—

೩೫೬

"ಬಂದಿಹೆನೆಂಬ ಸುಖವ ಹಿಂಗಿದವರುಂಟೆ? ಕಂಡ ನಿಧಾನವ ನೆಡಹಿ ಕೊಂಡು ನಡೆ ಎಂದವರುಂಟೆ? ಸುಖಕ್ಕೆ ಸುಖ ಒದಗಿದರೆ ಒಲ್ಲೆನೆಂಬುವ ರುಂಟೆ? ಕಲಿದೇವಯ್ಯ ಬಂದಿಹನೆಂದರೆ ಬೇಡವೆನಬೇಕೇ ಚಂದಯ್ಯ"

ಸ್ವಾಮಿಯು ತಾನೇ ಬಂದ ಕಾಲಕ್ಕೆ ಬೇಡವೆಂಬುವದು ಸರಿಯಲ್ಲವೆಂದು ಅನೇಕ ತರಹ ದಿಂದ ಮಡಿವಾಳಯ್ಯನವರು ಹೇಳಲು ಅದಕ್ಕೆ ಚಂದಯ್ಯನವರು—

೩೫೭

"ಅಂದು ಹೋಗಿ ಇಂದು ಬಂದಿಹೆನೆಂಬಾಗ ಈ ದಂದುಗದೊಡಲು ತನವುಂಟೆ? ಘನಲಿಂಗವೆಲ್ಲಿರ್ದಡಲ್ಲಿಯೆ ಪರಿಪೂರ್ಣಲಿಂಗ ಹೋಯಿತ್ತೆಂಬ ಸಂದೇಹವೆನಗುಂಟಾದರೆ ಆ ಲಿಂಗ ಉಳಿಯಬಲ್ಲುದೆ? ಆತ್ಮ ಹೋದಲ್ಲಿ ಘಟವೆಷ್ಟು ದಿವಸ ಉಳಿಯುವದು? ಜಂಗಮವುಳ್ಳನ್ನಕ್ಕರ ಚಂದೇಶ್ವರ ಲಿಂಗಕ್ಕೆ ಸಂದಿಲ್ಲ ಕಾಣಾ ಮಡಿವಾಳಯ್ಯ"

ಅಂದು ಹೋಗಿ ಈಗ ಬಂದೆವೆಂದರೆ ಹೇಗೆ ಸರಿಹೋಗುವದು? ಆತ್ಮನು ಹೋದರೆ ಶರೀರವೆಷ್ಟು ದಿನ ತಾಳುವದು? ಜಂಗಮವಿರುವವರೆಗೆ ಚಂದೇಶ್ವರಲಿಂಗಕ್ಕೆ ಕುಂದಿಲ್ಲ ವೆಂದು ನುಡಿದರು.

ಚಂದಯ್ಯನವರೇ ನೀವು ಹೇಳುವ ಮಾತು ಸರಿಯಾಗಿರುವದಿಲ್ಲ. ದಾಸೋಹ ವನ್ನು ಮಾಡಿದರೂ ಈಶ್ವರನ ಪೂಜೆಯನ್ನು ಬಿಡದೆ ಆಚಾರದಲ್ಲಿ ಮಗ್ನನಾಗಿರಬೇಕು. ನಾನು ಮಾಡುತ್ತೇನೆಂಬುವ ನೇಮವು ಬೇಡ ಅಥವಾ ಮಾಡಿದ್ದೇನೆಂಬ ಹೆಮ್ಮೆಯ ಕೃತ್ಯವೂ ಸರಿಯಾದುದಲ್ಲ. ದಾಸೋಹ ಮತ್ತು ಶಿವಪೂಜೆ ಇವೆರಡನ್ನೂ ತಪ್ಪದೇ ಮಾಡಬೇಕು. ಅಂದರೆ ಸರಿಯಾಗುವದೆಂದು ಮಡಿವಾಳಯ್ಯನವರು ಹೇಳಿದರು.

೩೫೮

ಚಂದಯ್ಯನವರು—

"ಆವಾವ ಕಾಯಕದಲ್ಲಿ ಬಂದರೂ ಭಾವಶುದ್ಧವಾಗಿ ಗುರುಲಿಂಗ ಜಂಗಮಕ್ಕೆ ಕೊಡುವದೇ ಶಿವಪೂಜೆ ಅದು ಚಂದೇಶ್ವರಲಿಂಗಕ್ಕೆ ಒಪ್ಪುವದು ಮಡಿವಾಳಯ್ಯ"

೩೫೯

"ಭಾವಶುದ್ಧನಾಗಿ ಯಾವ ಕಾಯಕವನ್ನಾಗಲೀ ಗುರುಲಿಂಗ ಜಂಗಮಕ್ಕೆ ಮಾಡಬೇಕು ಲಿಂಗವೆಂಬುವದು ಗುರುವಿನ ಹಂಗು ಗುರು ವೆಂಬುದು ಲಿಂಗದ ಹಂಗು ಈ ಉಭಯಕ್ಕತೀತ ಜಂಗಮಲಿಂಗ ದಾಸೋಹ ಅದೇ ಚಂದೇಶ್ವರಲಿಂಗಕ್ಕೆ ಕಟ್ಟುಗೊತ್ತು ಕಾಣಾ ಮಡಿವಾಳಯ್ಯ"

೩೬೦

ಅದಕ್ಕೆ ಮಡಿವಾಳಯ್ಯನವರು—

"ಗುರುವಾದರೂ ಲಿಂಗವ ಪೂಜಿಸಬೇಕು ಜಂಗಮವಾದರೂ ಲಿಂಗವ ಪೂಜಿಸಬೇಕು ಜಂಗಮಕ್ಕೆ ಲಿಂಗವಿಲ್ಲದೆ ಪ್ರಾಣವಿಲ್ಲ ಆದಿ ಆಧಾರ ವೇನೂ ಇಲ್ಲದೆ ಜಂಗಮವೇನು ಅರಿದಿಹೆನೆಂದರೆ ಅಂಗದಲ್ಲಿ ಲಿಂಗವಿರಬೇಕು ಕಲಿದೇವಯ್ಯನರಿವುದಕ್ಕೆ ಇದೇ ಮಾರ್ಗ ಚಂದಯ್ಯ"

ಚಂದಯ್ಯನವರ ವಾದವು ಕೇವಲ ದಾಸೋಹವನ್ನು ಮಾಡಿದರೆ ಸಾಕು ಎಂಬುವದಾಗಿದೆ. ಅದಕ್ಕೆ ಮಡಿವಾಳಯ್ಯನವರು—

೩೬೧

"ಹಾಗಾಗದು ಗುರುವಿಗೂ ಲಿಂಗ ಬೇಕು ಜಂಗಮಕ್ಕೂ ಲಿಂಗ ಬೇಕು ಅಂತೂ ಅಂಗದಲ್ಲಿ ಲಿಂಗವಿರಬೇಕು"

ಅದಕ್ಕೆ ಚಂದಯ್ಯನವರು ಮಡಿವಾಳಯ್ಯನವರೇ ಹಾಗಲ್ಲ.

೩೬೨

"ಭಾವಶುದ್ಧವಾಗಿಪ್ಪುದೇ ಗುರುಪೂಜೆ, ಜ್ಞಾನಶುದ್ಧವಾಗಿಪ್ಪುದೇ ಲಿಂಗಪೂಜೆ, ತ್ರಿಕರಣಶುದ್ಧವಾಗಿಪ್ಪುದೇ ಜಂಗಮಪೂಜೆ, ಈ ತ್ರಿವಿಧ ಭೇದದಲ್ಲಿ ತ್ರಿವಿಧಾರ್ಪಣವ ಸಮರ್ಪಿಸಿ ನಿಂದುದೇ ಚಂದೇಶ್ವರಲಿಂಗಕ್ಕೆ ಅರ್ಪಿತವಯ್ಯ ಮಡಿವಾಳಯ್ಯ"

೩೬೩

ಇದಕ್ಕೆ ಮಡಿವಾಳಯ್ಯನವರು—

"ಅರಿವನರಿದಿಹೆನೆಂದು ಕ್ರಿಯೆಯ ಬಿಡಬಹುದೇ? ಮಧುರಕ್ಕೆ ಮಧುರ ಒದಗಲಾಗಿ ಆ ಸವಿಗೆ ಸವಿಕೊರತೆಯುಂಟೆ? ದ್ರವ್ಯಕ್ಕೆ ದ್ರವ್ಯ ಒದಗಲಾಗಿ ಬಡತನದವಧಿಯುಂಟೆ? ಮಾಡುವ ಮಾಟ ಶಿವಪೂಜೆಯ ನೋಟ, ಭಾವವಿರಬೇಕು ಅದು ಕಲಿದೇವಯ್ಯನ ಮಾಟವಲ್ಲವೆ ಚಂದಯ್ಯ?"

ಹೀಗೆ ಇಬ್ಬರಲ್ಲಿ ಪ್ರಶ್ನೋತ್ತರಗಳಾಗಿರುತ್ತವೆ.

೩೬೪

"ಜಂಗಮ ಸೇವೆ ಲಿಂಗವಿಹಿತವಾಗಿರಬೇಕು ಲಿಂಗವೆಂಬುದು ಜಂಗಮದಂಗ ಆ ಲಿಂಗವಿಲ್ಲದೆ ಪ್ರಾಣವುಂಟೆ? ಹಣ್ಣಿಲ್ಲದೆ ರುಚಿಯನರಸು ವಂತೆ ನಿನ್ನ ಕಾಯಕದ ಕ್ರಿಯೆಯೆಲ್ಲವು ಲಿಂಗವಾದಬಳಿಕ ಮತ್ತೇನು ಭಾವಭೇದ? ನೀನಂದಂತೆ ಇರಲಿ ಆರೇನಂದರೆ ನಿನ್ನ ಮನವ ತಿಳುಹಿಕೊಳಲಿ ಇದಕ್ಕೆ ಕಲಿದೇವಯ್ಯ ಹೊಣೆಗಾರ ಕೇಳಾ ಎನ್ನೊಡೆಯ ಚಂದಯ್ಯ"

ಹೀಗೆಂದು ಮಡಿವಾಳಯ್ಯನವರು ಹೇಳಲು ತಮ್ಮ ಲಿಂಗವು ಕಣ್ಣಿಯನ್ನು ಮಾಡಿ ಕೊಳ್ಳುತ್ತ ತಮ್ಮಲ್ಲಿದ್ದರೆ ಇರಲಿ ಎಂದು ಹೇಳಿ ಮಡಿವಾಳಯ್ಯನವರಿಗೆ ನಮಸ್ಕರಿಸಿ ಲಿಂಗಸಹಿತವಾಗಿ ನಿಜಗೃಹಕ್ಕೆ ಬಂದು ಆ ಲಿಂಗದ ಕೈಯಲ್ಲಿ ಕಾಯಕವಮಾಡಿಸಿ

ಆ ಕಣ್ಣಿಯನ್ನು ಮಾರಿ ಹಾಗನ ಕೊಂಡುಬಾರೆಂದು ಕಳುಹಿಸಲು ಆ ಲಿಂಗವು ಕಣ್ಣಿಯನ್ನು ತೆಗೆದುಕೊಂಡು ಬಸವೇಶ್ವರನ ಮಠಕ್ಕೆ ಬರಲು ಬಸವರಾಜದೇವರು ಶಿವಪೂಜೆಯನ್ನು ಮಾಡುತ್ತ ಈ ವೃತ್ತಾಂತವನ್ನು ತಮ್ಮ ಲಿಂಗದಲ್ಲಿ ತಿಳಿದು ಎದುರಿಗೆ ಹೋಗಿ ಕಣ್ಣಿಯನ್ನು ತಂದವನಿಗೆ ಶರಣೆಂದು ಸಾವಿರ ಹೊನ್ನಂ ಕೊಟ್ಟು ಕಣ್ಣಿಯನ್ನು ತೆಗೆದುಕೊಳ್ಳಲು ಲಿಂಗವು ಮರಳಿ ಬಂದು ಚಂದಯ್ಯನವರಿಗೆ ಹೊನ್ನ ಕೊಡಲಾಗಿ ಕಳವಿನಿಂದ ತಂದೆಯೋ ಎಂದು ನುಡಿಯುತ್ತ—

೩೬೫

"ಸತ್ಯಶುದ್ಧ ಕಾಯಕದಲ್ಲಿ ಬಂದ ದ್ರವ್ಯದಲ್ಲಿ ಚಿತ್ತ ವಿಚ್ಛಂದವಾಗದಿರಬೇಕು ನೇಮದ ಕೂಲಿಯುಂದಿನ ನಿತ್ಯನೇಮದಲ್ಲಿ ಸಂದಿರಬೇಕು ನೇಮದ ಕೂಲಿಯ ಬಿಟ್ಟು ಹೇಮದಾಶೆಗೆ ಕಾಮಿಸಿ ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ನಷ್ಟವಯ್ಯ ನಿನ್ನಾಶೆ ವೇಷದ ಪಾಶಕ್ಕೆ ನೀನೇ ಹೋಗು ನನಗೆ ನನ್ನ ಜಂಗಮದ ಪ್ರಸಾದ ಹಾಗೆ ಚಂದೇಶ್ವರಲಿಂಗಕ್ಕೆ ಪ್ರಾಣವಯ್ಯ?"

ಹೀಗೆ ಚಂದಯ್ಯನವರು ನೀ ತಂದ ದ್ರವ್ಯಸಹಿತ ನೀನು ಎಲ್ಲಿಯಾದರೂ ಹೋಗು. ಮೊದಲು ಗುರುವಾಜ್ಞೆಗೆಟ್ಟದ್ದೊಂದು ಒಡೆಯರ ಸೇವೆಯ ಮಾಡಿಹೆನೆಂದು ಮಡಿವಾಳಯ್ಯಗೆ ಹೊಣೆಯಕೊಟ್ಟುದೊಂದು, ಈ ಎರಡಕ್ಕೆ ನೀನೇ ಗುರಿಯಾಗು ಎಂದು ಲಿಂಗದೇವನನ್ನು ಕೂಡಿಕೊಂಡು ಚಂದಯ್ಯನು ಮಡಿವಾಳಯ್ಯನಲ್ಲಿಗೆ ಬರಲು ಆಗ ಮಾಚಯ್ಯನವರು ಚಂದಯ್ಯನಿಗೆ—

೩೬೬

"ಕಾಯಕದಲ್ಲಿ ನಿರತನಾದ ಶರಣಂಗೆ ಸೇವೆಯವರ ತಪ್ಪು ಹಿಡಿದಿಹೆನೆಂದರೆ ಕಾಯಕವೆಂತು ನಡೆವುದಯ್ಯ? ಅವಗುಣಕ್ಕೆ ಮುನಿಯಬೇಕಲ್ಲದೆ ಲಾಂಛನಕ್ಕೆ ಮುನಿಯಬಹುದೆ? ಮುಗ್ಗಿದ ತುರಗವ ಕಾಲಕತ್ತರಿಸಿದವರುಂಟೆ? ಕಚ್ಚುವ ತ್ರಿಗುಣಿಗಾಗಿ ಮನೆಯ ಸುಟ್ಟವರುಂಟೆ? ಕಲಿದೇವರದೇವನಲ್ಲಿ ತಪ್ಪ ಹಿಡಿಯಲಿಲ್ಲ ಕೇಳಾ ಚಂದಯ್ಯ"

೩೬೭

ಚಂದಯ್ಯನವರು—

"ನಡೆನುಡಿ ಶುದ್ಧವಿಲ್ಲದಿದ್ದರೆ ಚಂದೇಶ್ವರಲಿಂಗನಾದರೂ ತಪ್ಪನೊಳಕೊಳ್ಳ"

ಎಂದು ವಾದಿಸಲು ಚಂದಯ್ಯನವರು ನಮಗೆ ಮಣಿಯತಕ್ಕವರಲ್ಲ. ಅನುಭವಮಂಟಪದಲ್ಲಿ ಬಸವರಾಜ ಮತ್ತು ಪ್ರಭುದೇವರೇ ಮೊದಲಾದವರಿರುತ್ತಾರೆ. ಅಲ್ಲಿಗೆ ಹೋದರೆ ಚಂದಯ್ಯನವರು ಮಣಿಯುತ್ತಾರೆಂದು ಕರೆದುಕೊಂಡುಹೋದರು.

೩೬೮

ಆಗ ಮಾಚಯ್ಯನವರು—

"ಗುರುಪೂಜೆಯನರಿದೆನೆಂದು ಲಿಂಗಪೂಜೆಯ ಬಿಡಲಾಗದು ಲಿಂಗಪೂಜೆಯನರಿದೆನೆಂದು ಜಂಗಮದ ಪೂಜೆಯ ಬಿಡಲಾಗದು ಜಂಗಮ

ಪೂಜೆಯನರಿದೆನೆಂದು ಶರಣರ ಸಂಗವ ಬಿಡಲಾಗದು ಇದುಕಾರಣ ಶರಣರ ಸಂಗದ ಸಮ್ಯಜ್ಞಾನದಲ್ಲಲ್ಲದೆ ಕಲಿದೇವಯ್ಯನ ಕೂಡುವ ಕೂಟ ಕಾಣಬಾರದು ಹೋಹಬಾರಾ ಚಂದಯ್ಯ"

ಆಗ ಅನುಭವಮಂಟಪಕ್ಕೆ ಬಿಜಯಂಗೈದು ಬರಲು ಆ ಲಿಂಗಮೂರ್ತಿಯು ಕಣ್ಣಿಯನ್ನು ಮೊದಲು ಬಸವಣ್ಣಂಗೆ ಕೊಡಲು ಅದಕ್ಕೆ ಕೂಲಿಯಾಗಿ ಕೊಟ್ಟ ಸಾವಿರ ಹೊನ್ನನ್ನು ಅವರಿಗೆ ತಿರುಗಿಕೊಟ್ಟು ಈ ವೃತ್ತಾಂತವನ್ನು ಹೇಳಲು ಆಗ ಚಂದಯ್ಯನವರು ಶರಣರಿಗೆ ನಮಸ್ಕರಿಸಿ ತನ್ನ ಕಾರ್ಯದ ಕ್ರಮುವನ್ನು ದಾಸೋಹದ ನೆಲೆಯನ್ನೂ ನಿಷ್ಠೆಯ ರೀತಿನೀತಿಗಳನ್ನೂ ಎಲ್ಲ ಪ್ರಮಥರು ಕೇಳುವ ಹಾಗೆ ಹೇಳುತ್ತಾರೆ.

೩೬೯

"ಆಯುಧಗಳನ್ನು ಹಿಡಿದವರೆಲ್ಲರೂ ಇರಿಯುವರೇ? ಸಾಧನೆಯ ಮಾಡತಕ್ಕವರೆಲ್ಲ ಯುದ್ಧಮಾಡಬಲ್ಲರೇ? ಯಾಚಕನಿಗೆ ದಾನಮಾಡಬಲ್ಲವರೆಲ್ಲ ಭಕ್ತರಾಗುವರೇ? ಯುದ್ಧವನ್ನು ಮಾಡಬೇಕೆಂದು ನಿಶ್ಚೈಸಿದ ಭಟನಿಗೆ ಮನೆಯ ಹಂಗೇಕೆ? ಅರ್ಥ ಪ್ರಾಣಾಭಿಮಾನಗಳನ್ನು ಬಿಟ್ಟವನಿಗೆ ಸದ್ಭಕ್ತಿಯುಂಟಾಗುವದೇ? ಮತ್ತು ಗುರುವಿಗೆ ತನುವನ್ನು ಲಿಂಗಕ್ಕೆ ಮನವನ್ನು ಜಂಗಮುಕ್ಕೆ ಧನವನ್ನು ಕೊಟ್ಟಮೇಲೆ ಮತ್ತೊಂದರಾಶೆಗೆ ಬೀಳಲೇಕೆ? ನಾನೇನೂ ರಾಜಚೋರರಿಗೆ ಅಂಜಿ ದಾಸೋಹವ ಮಾಡಲಿಲ್ಲ ಯಾವ ಕೃತ್ಯವಾದರೂ ಮನಶುದ್ಧವಾಗಿರಬೇಕು.

ಹೀಗೆಯೇ ಚಂದಯ್ಯನವರು ಅನೇಕ ವಚನಗಳನ್ನು ಹೇಳಲು ಆಗ ಪ್ರಭುದೇವರು ಲಿಂಗವನ್ನು ಬಿಡಬಾರದೆಂದು—

೩೭೦

"ಪರುಷವಾದರೂ ಒಂದರಲ್ಲಿರಿಸಿರಬೇಕು ರತ್ನವಿಶೇಷವಾದರೂ ಕುಂದಣದಲ್ಲಿ ಬಂಧಿಸಿ ಸಂಧಿಸಿರಬೇಕು. ಲಿಂಗವ ಹಿಡಿದಲ್ಲಿ ಪೂಜಿಸುವ ಅಂಗವಿರಬೇಕು ಇದುಕಾರಣ ಗುಹೇಶ್ವರಲಿಂಗವನರಿದು ಮರೆಯಲಿಲ್ಲ ಕಾಣಾ ಚಂದಯ್ಯ"

ಜಂಗಮ ದಾಸೋಹವನ್ನು ಮಾಡಿದರೂ ಲಿಂಗವನ್ನು ಬಿಡಲಾಗದೆಂದು ಪ್ರಭುದೇವರು ಹೇಳಿದರೂ ಚಂದಯ್ಯನವರು.

೩೭೧

"ಗುರುಸೇವೆಯ ಮಾಡಿದರೆ ಇಹದಲ್ಲಿ ಸುಖ ಲಿಂಗ ಸೇವೆಯ ಮಾಡಿದಲ್ಲಿ ಪರದಲ್ಲಿ ಸುಖ ಜಂಗಮಸೇವೆಯ ಮಾಡಿದರೆ ಇಹಪರವೆಂಬ ಭಯನಾಸ್ತಿ ಇದು ಚಂದ್ರೇಶ್ವರಲಿಂಗಕ್ಕೆ ಭಾವ ಕಾಣಾ ಪ್ರಭುವೇ"

ಇದಕ್ಕೆ ಪ್ರಭುದೇವರು—"ಅಂಗವುಳ್ಳನ್ನಬರಲಿಂಗಪೂಜೆಯೇ ಬೇಕು" ಎಂದು ಅನೇಕ ಉದಾಹರಣೆಗಳನ್ನು ದೃಷ್ಟಾಂತ ದ್ರಾಷ್ಟಾಂತಗಳಿಂದ ಸಿದ್ಧಪಡಿಸಲು—

೩೭೨

"ಗುರುವಾದರು ಕಾಯಕದಿಂದಲೆ ಜೀವನ್ಮುಕ್ತಿ ಲಿಂಗವಾದರು ಕಾಯಕದಿಂದಲೆ ಶಿಲೆಯ ಕುರುಹು ಹರಿಯುವದು ಜಂಗಮವಾದರು ಕಾಯಕದಿಂದಲೆ ತನ್ನ ವೇಷದ ಪಾಶ ಹರಿವುದು ಗುರುವಾದರು ಚರಸೇವೆಯ ಮಾಡಬೇಕು ಲಿಂಗವಾದರು ಚರಸೇವೆಯ ಮಾಡಬೇಕು ಜಂಗಮವಾದರು ಚರಸೇವೆಯ ಮಾಡಬೇಕು ಇದು ಚಂದೇಶ್ವರಲಿಂಗದ ಅರಿವು ಕೇಳಾ" "ಗುರುವನರಿದು ವರಗುರುವು ತಾನಾಗಬೇಕು ಲಿಂಗವಾದರು ನೈಷ್ಠ್ಯ ವಾಗಿ ಪೂಜೆಗೊಳ್ಳಬೇಕು. ಜಂಗಮವಾದರು ತ್ರಿವಿಧವ ಮರೆದು ಜಂಘೆ ನಾಸ್ತಿಯಾಗಿ ಜಂಗಮವಾಗಬೇಕು. ಜಂಗಮವಾದರು ಜಂಗಮಕ್ಕೆ ನೀಡಿ ಮಾಡಿಸಂದಳಿದು ಚಂದೇಶ್ವರಲಿಂಗವನರಿಯಬೇಕು"

ಚಂದಯ್ಯನವರಿಗೂ, ಪ್ರಭುದೇವರಿಗೂ ಅನೇಕ ಉತ್ತರ ಪ್ರತ್ಯುತ್ತರಗಳಾಗಲು ಕಡೆಗೆ ಪ್ರಭುದೇವರು ಬಸವಣ್ಣನವರನ್ನು ನೋಡಿ ತಿಳಿದುಬದುಕೆಂದು ಚಂದಯ್ಯನವರಿಗೆ ಹೇಳಲು

೩೭೩

ಬಸವರಾಜರು—

"ಜಂಗಮಸೇವೆಯೇ ಗುರುಪೂಜೆಯೆಂದರಿದ ಜಂಗಮಸೇವೆಯೇ ಲಿಂಗಸೇವೆಯೆಂದರಿದ ಜಂಗಮಸೇವೆಯೇ ತನ್ನಿರವೆಂದರಿದ ಜಂಗಮ ಸೇವೆಯೇ ತನ್ನ ನಿಜವೆಂದರಿದ ಜಂಗಮ ಸೇವೆಯೇ ತನ್ನ ಸ್ವಯವೆಂದರಿದ ಜಂಗಮ ಸೇವೆಯೇ ನಿತ್ಯವೆಂದರಿದ ಇದುಕಾರಣ ನಮ್ಮ ಕೂಡಲಸಂಗಮ ದೇವರಲ್ಲಿ ಜಂಗಮ ಪ್ರಾಣಿಯಾದ ಚಂದಯ್ಯನ ಹಳೆಯ ಮಗನಾಗಿ ಆತನ ಶ್ರೀ ಚರಣಕ್ಕೆ ಶರಣೆಂದು ಶುದ್ಧನಾದೆನು. ಆ ಮಹಿಮನ ಘನವ ನಾನೆತ್ತ ಬಲ್ಲೆನೆಂದು"

ಶ್ರೀ ಬಸವಣ್ಣನವರು ಸಹಜವಾದ ತಮ್ಮ ವಿನಯದಿಂದ ಹೇಳಿದ ಮಾತುಗಳನ್ನು ಪ್ರಭುದೇವರು ಕೇಳಿ—ಬಸವಣ್ಣನವರೇ ನಿಮಗೆ ಗೊತ್ತಿಲ್ಲದ್ದು ಯಾವದು ಇರುತ್ತದೆ? ಗುರುಲಿಂಗ ಜಂಗಮ ಪ್ರಸಾದ ಪಾದೋದಕ ಸ್ವರೂಪ ಬ್ರಹ್ಮವೇ ನೀನು ಮತ್ತು ಪೂರ್ವಾಚಾರಿ ನೀನೇ ಎಂದು ಕೊಂಡಾಡಿದರು. ಆಗ ಬಸವಣ್ಣನವರು ಚನ್ನಬಸವಣ್ಣ ನವರನ್ನು ಕೇಳಿರೆಂದು ಹೇಳಲು ಶ್ರೀ ಚನ್ನಬಸವಣ್ಣನವರು ಚಂದಯ್ಯನವರನ್ನು ಕುರಿತು ಜಂಗಮಸೇವೆಮಾಡಿದರೂ ಕೂಡ ಲಿಂಗವನ್ನು ಬಿಡಬಾರದೆಂದು ಅನೇಕ ವಚನಗಳನ್ನು ಹೇಳಿರುತ್ತಾರೆ. ಅವುಗಳಲ್ಲಿ ಒಂದು ವಚನವನ್ನು ಮಾತ್ರ ಹೇಳಿ ಈ ವಿಷಯ ಇಲ್ಲಿಗೆ ಮುಗಿಸಬೇಕಾಗಿರುತ್ತದೆ.

೩೭೪

ಚನ್ನಬಸವಣ್ಣನವರು—

"ಶ್ರೀ ಗುರುಕರುಣವೇ ಲಿಂಗ ಲಿಂಗದ ನಿಜವೇ ಜಂಗಮ ಇಂತು ಈ ಬಹಿರಂಗದ ವರ್ತನೆ ಇನ್ನು ಅಂತರಂಗದ ಸುಜ್ಞಾನವೇ ಜಂಗಮ ಆ ಜಂಗಮದ ನಡೆವ ಸತ್ಕ್ರಿಯೆ ಲಿಂಗ ಆ ಉಭಯದ ಏಕತ್ವ ಸಿದ್ಧಿಯೆ ಗುರು

ಇದುಕಾರಣ ಅಂಗತ್ರಯದಲ್ಲಿ ಲಿಂಗತ್ರಯಸಂಬಂಧವಾದಲ್ಲಿ ಜಂಗಮ ದಾಸೋಹವಿಲ್ಲದಡೆ ಲಿಂಗತೃಪ್ತಿಯಿಲ್ಲ ಅಂಗದ ಮೇಲೆ ಲಿಂಗವಿಲ್ಲದಿರ್ದಡೆ ಜಂಗಮಸೇವೆಯ ಕೈಕೊಳ್ಳ ಅದುಕಾರಣ ಒಂದು ಬಿಟ್ಟು ಒಂದರಲ್ಲಿ ನಿಂದರೆ ಅಂಗವಿಲ್ಲದ ಆತ್ಮನಂತೆ ಶಕ್ತಿ ಇಲ್ಲದ ಶಿವನಂತೆ ದೀಪವಿಲ್ಲದ ಪ್ರಕಾಶದಂತೆ ಒಂದಂಗ ಶೂನ್ಯವಾಗಿ ಭಕ್ತಿಯುಂಟೆ? ಅವಯವಹೀನನು ರಾಯಪಟ್ಟಕ್ಕೆ ಸಲ್ಲುವನೆ? ಲಿಂಗಹೀನನು ಭಕ್ತ್ಯಾಚಾರಕ್ಕೆ ಸಲ್ಲುವನೆ? ಅದು ದೇವತ್ವಕ್ಕೆ ಸಲ್ಲದು. ನಮ್ಮ ಕೂಡಲಚನ್ನಸಂಗಯ್ಯನಲ್ಲಿ ತ್ರಿವಿಧ ಸನ್ಮತವೆ ಚರಸೇವೆಯಯ್ಯ ಚಂದಯ್ಯಪ್ರಭುವೇ?"

ಅನೇಕ ರೀತಿಯಿಂದ ಈ ಪ್ರಕಾರ ಬೋಧಿಸಲು ಚಂದಯ್ಯನವರು ಅವರ ಮಾತಿಗೆ ಒಪ್ಪಿ ಲಿಂಗಮೂರ್ತಿಯನ್ನು ಕಟ್ಟಿಕೊಂಡು ತಮ್ಮ ಕಾಯಕದಲ್ಲಿ ನಿರತರಾಗಿ ಕರ್ಮ ಯೋಗಿಗಳಲ್ಲಿ ಬಲ್ಲಿದರೆಂಬುವದನ್ನು ತೋರಿಸಿದರು. ಅನೇಕ ಜನ ಶರಣರು ಹೀಗೆಯೇ ನಿಷ್ಕಾಮಕರ್ಮವನ್ನು ಆಚರಿಸಿ ತಮ್ಮ ಕೀರ್ತಿಕಾಯವನ್ನು ಬಿಟ್ಟು ಬಯಲಾಗಿರು ತ್ತಾರೆ. ಇವರ ಶುದ್ಧಾಚರಣೆಯು ಯಾರಿಗೆ ತಾನೇ ಒಪ್ಪಿಗೆಯಾಗಲಿಕ್ಕಿಲ್ಲ? ಬಸವಣ್ಣ ನವರ ಕರ್ಮಯೋಗವನ್ನು ಇಲ್ಲಿಯವರೆಗೆ ವಿವರಿಸಿದ್ದಾಯಿತು. ಅದಕ್ಕೆ ಪುಷ್ಟಿಯಾಗಿ ಮೂರು ಜನ ಶರಣರ ಕಾಯಕಗಳನ್ನು ಸಂಕ್ಷೇಪವಾಗಿ ತೋರಿಸಿದ್ದಾಯಿತು.

೩೭೫

ಬಸವಣ್ಣನವರು—

"ದೇವಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡರೆ ನಿಮ್ಮಾಣೆ ನಿಮ್ಮ ಪುರಾತನರಾಣೆ ತಲೆದಂಡ ತಲೆದಂಡ ಕೂಡಲಸಂಗಮದೇವಾ ಭಕ್ತರಲ್ಲಿ ಕುಲವನರಸಿದರೆ ನಿಮ್ಮ ರಾಣಿ ವಾಸ ದಾಣೆ"

ಕಾಯಕದಲ್ಲಿ ಸರ್ವರೂ ಸಮಾನರೆಂದು ತಿಳಿದು ನಡೆದುದರಿಂದಲೇ, ಪ್ರಚಂಡವಾಗಿ ಸಂಘಟನೆಯಾಗಿ ಬಸವಮಹಾತ್ಮನ ದಿವ್ಯನಾಮವು ಜಗತ್ತಿನಲ್ಲಿ ಮೆರೆಯುತ್ತಲಿದೆ.

## ಎಂಟನೆಯ ಪ್ರಕರಣ

## ಭಕ್ತಿಯೋಗವೂ ಬಸವಣ್ಣನವರೂ

ಶ್ರೀ ಬಸವಣ್ಣನವರ ಅನೇಕ ಕಾರ್ಯಗಳಲ್ಲಿ ಭಕ್ತಿ ಪ್ರಸಾರಣೆಮಾಡಿದ ಕಾರ್ಯವು ಬಹಳ ಮಿಗಿಲಾದುದು. ಆದ್ದರಿಂದಲೇ ಭಕ್ತಿಭಂಡಾರಿಗಳೆಂಬುವ ಬಿರುದನ್ನು ತಾಳಿರುವರು. ಹಿಂದೂದರ್ಶನ ಶಾಸ್ತ್ರಕಾರರು ಈಶ್ವರನ ಅನುಗ್ರಹವನ್ನು ಪಡೆಯಲು ಅನೇಕ ಮಾರ್ಗಗಳ ಅವಲಂಬನೆ ಮಾಡಿದ್ದುದು ದರ್ಶನ ಶಾಸ್ತ್ರದಿಂದ ತಿಳಿದುಬರುತ್ತದೆ. ಅವುಗಳಲ್ಲಿ ಧ್ಯಾನಯೋಗ, ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ಮೊದಲಾದ ಮಾರ್ಗಗಳೇ ಶ್ರೇಷ್ಠವಾಗಿರುತ್ತವೆ. ಇವುಗಳಲ್ಲಿಯೂ ಕೂಡ ಭಕ್ತಿ ಮಾರ್ಗವು ಶ್ರೇಷ್ಠವಾದುದಾಗಿರುತ್ತದೆ. ಪಂಡಿತ ಪಾಮರರೆಲ್ಲ ಈ ಮಾರ್ಗವನ್ನು ಸುಲಭವಾಗಿ ಅನುಸರಿಸಲುಬಹುದು. ಈ ಭಕ್ತಿಯ ಶ್ರೇಷ್ಠತೆಯನ್ನು ನಾರದೀಯ ಸೂತ್ರ, ಭಗವದ್ಗೀತೆ, ಶಿವರಹಸ್ಯ ಮೊದಲಾದ ಅನೇಕ ಗ್ರಂಥಗಳಲ್ಲಿ ಬಹಳ ಸ್ವಾರಸ್ಯವಾಗಿ ವರ್ಣಿಸಿರುತ್ತಾರೆ. ಭಕ್ತಿಯ ಮಾರ್ಗವು ಭೂಲೋಕದಲ್ಲಿ ಕ್ಷೀಣವಾದಾಗ ಅದನ್ನು ಪ್ರಚಾರಮಾಡುವದರ ಸಲುವಾಗಿ ಪರಮಾತ್ಮನ ಪ್ರೇರಣೆಯಿಂದ ದೇವದೂತರು ಬರುತ್ತಾರೆಂದು ನಮ್ಮ ಜನಗಳ ತಿಳುವಳಿಕೆಯಾಗಿರುತ್ತದೆ. ಭಕ್ತಿಯ ಮಾರ್ಗವನ್ನು ದಕ್ಷಿಣ ಹಿಂದೂಸ್ಥಾನದಲ್ಲಿ ಪ್ರಚಾರಮಾಡಿದವರಲ್ಲಿ ಬಸವಣ್ಣನವರಿಗೆ ಮೊದಲನೆಯ ಸ್ಥಾನವು ದೊರೆಯುತ್ತದೆ.

> **ಯಥಾ ವೀರೋ ರಣೇ ಶೂರೋ ವೀರಶೈವಮತೇ ತಥಾ ।**
> **ಭಕ್ತ್ಯಾ ವೀರೋ ನ ವೈರೇಣ ನ ಬಲೇನ ಚ ಕಾರ್ಯತಃ ॥**

ಅಂದರೆ ಯುದ್ಧದಲ್ಲಿ ಹೇಗೆ ವೀರರೋ ಹಾಗೆಯೇ ವೀರಶೈವ ಮತದಲ್ಲಿ ಭಕ್ತಿಯಿಂದ ವೀರನಾಗುವನಲ್ಲದೆ ವೈರದಿಂದಲೂ, ಬಲದಿಂದಲೂ ಆಗಲಾರನು. ಇಂತಹ ಭಕ್ತಿಯಲ್ಲಿ ಬಸವಣ್ಣನವರು ಅತ್ಯಂತ ಶ್ರೇಷ್ಠತೆಯನ್ನು ಹೊಂದಿರುತ್ತಾರೆ.

ಶ್ರೀ ಬಸವಣ್ಣನವರು ಯಾವ ಕಾರ್ಯವನ್ನು ಮಾಡಿದರೂ ಭಕ್ತಿಯಿಂದಲೇ ಮಾಡಿರುತ್ತಾರೆ. ಅವರ ವಚನಗಳನ್ನು ನೋಡಿದರೆ ಈ ಮಾತು ಸ್ಪಷ್ಟವಾಗಿ ತೋರುತ್ತಲಿದೆ. ಕೂಡಲಸಂಗನ ಭಕ್ತಿಯಿಲ್ಲದೆ ಅವರ ಯಾವ ವ್ಯವಹಾರವೂ ಇರುವದಿಲ್ಲ. ಬಸವಣ್ಣನವರ ಭಕ್ತಿಯ ಪ್ರಭಾವಾತಿಶಯವನ್ನು ಅವರ ಕಾಲದ ಶರಣರೂ, ವೀರಶೈವ ಕವಿಗಳೂ ಪರಿಪರಿಯಾಗಿ ಕೊಂಡಾಡಿರುತ್ತಾರೆ. ಸರಸಕವಿಸಾರ್ವಭೌಮನೂ, ವೀರಶೈವರ ಆದ್ಯಕವಿಯೂ ಆದ ಹರೀಶ್ವರನು "ಸದ್ಭಕ್ತಿಸೂರೆಗಾರಂ" "ಭಕ್ತಕುಲತಿಲಕಂ" ಎಂದು ತನ್ನ ಬಸವರಾಜದೇವರ ರಗಳೆಯಲ್ಲಿ ಹೇಳಿರುತ್ತಾನೆ.

### ಶ್ರೀ ಬಸವದೇವರಾಜ ರಗಳೆಯಲ್ಲಿ ಹರೀಶ್ವರನು

> ನಿತ್ಯನಿರ್ಮಳನೆ ನಿಃಕಳನೆ ಕೂಡಲಸಂಗ ।
> ನಿತ್ಯನಿರ್ಭಯನೆ ನಿರುಪಮನೆ ಕೂಡಲಸಂಗ ।
> ಹೊಗಳ್ವ ವೇದಾಳಿಗತಿಗೂಢ ಕೂಡಲಸಂಗ ।
> ಸೊಗಯಿಸುವ ಘನ ವೃಷಾರೂಢ ಕೂಡಲಸಂಗ ।

ಎನ್ನನತಿಕರುಣದಿಂ ನೋಡು ಕೂಡಲಸಂಗ ।
ಎನ್ನ ಮನದಕ್ಕರೊಳು ಕೂಡು ಕೂಡಲಸಂಗ ।
ಎನ್ನ ಕಣ್ಣೊಳಗೆ ಪರಿದಾಡು ಕೂಡಲಸಂಗ ।
ಎನ್ನ ಮನದೊಳಗೆ ಕುಣಿದಾಡು ಕೂಡಲಸಂಗ ।

ಗುರುಸಂಗ, ಶಿವಲಿಂಗ, ಸತ್ಯ ಶರಣರ ಸಂಗ, ವರಸಂಗಲಿಂಗ, ಶರಣಾಗು ಬಸವನ ಸಂಗ ಹೀಗೆಯೇ ಅನಂತರೀತಿಯಿಂದ ತನ್ನ ಗುರುವಾದ ಸಂಗನನ್ನು ಸ್ತುತಿಸಿರುವದನ್ನು ಹರಿಹರನು ಭಕ್ತಿರಸಪ್ರಪೂರಿತವಾಗಿ ವರ್ಣಿಸಿರುವನು. ಶ್ರೀ ಬಸವೇಶ್ವರದೇವರ ಭಕ್ತಿಯು ಬಲಿಯುತ್ತ ಹೋದಂತೆ ಜನಗಳಿಗೆ ಆ ಭಕ್ತಿಯನ್ನು ಹೇಗೆ ಪ್ರಸಾರಮಾಡಿದ ರೆಂಬುವ ಬಗ್ಗೆ ಅನೇಕ ಪಂಡಿತರು ಹೃದಯಂಗಮುವಾಗಿ ಮನಕರಗುವಂತೆ ವರ್ಣನೆ ಮಾಡಿರುತ್ತಾರೆ.

ಹೀಗೆ ಬಸವಣ್ಣನವರು ಭಕ್ತಿಪರವಶರಾಗಿ ಸಂಗನ ನಾಮಂಗಳಂ ಕೊಂಡಾಡುತ್ತ ಅತ್ಯಂತ ಭಕ್ತಿಪ್ರಸಾರಣೆಯನ್ನು ಮಾಡಿದ್ದರಿಂದಲೇ ಭರತಖಂಡದ ಮೂಲೆ ಮೂಲೆ ಗಳಿಂದಲೂ ಬಸವಣ್ಣನವರ ಭಕ್ತಿಯಲ್ಲಿ ಪರವಶರಾದ ಶರಣರು ಬಂದು ಅವರ ಅನುಯಾಯಿಗಳಾಗಿ ಕಾರ್ಯವನ್ನು ಮಾಡಿದ್ದುದು ಸಾಮಾನ್ಯವಾದ ಮಾತಾಗಿರು ವದಿಲ್ಲ. ಶಿವಭಕ್ತಿಯ ಪ್ರಸಾರಣೆಯಲ್ಲಿ ಬಸವಣ್ಣನವರ ಕೀರ್ತಿಯು ಅಜರಾಮರ ವಾಗಿರುತ್ತದೆ.

ಭಕ್ತಿಪರವಶರಾಗಿ ಬಸವಣ್ಣನವರು ಬೇಡಿದವರಿಗೆ ಬೇಡಿದ ಪದಾರ್ಥಗಳನ್ನು ಕೊಡುತ್ತಿದ್ದಾರೆ. ಅವರ ಭಕ್ತಿಯನ್ನು ಪರೀಕ್ಷಿಸುವದಕ್ಕೆ ಓರ್ವ ಜಂಗಮರು ಅವರ ಪತ್ನಿಯು ಉಟ್ಟುಕೊಂಡಿದ್ದ ಶೀರೆಯನ್ನು ಬೇಡಿದರೆಂತಲೂ, ತತ್‌ಕ್ಷಣದಲ್ಲಿಯೇ ಬಸವಣ್ಣನವರು ಅದನ್ನು ಪೂರೈಸಿದರೆಂತಲೂ ಗ್ರಂಥಗಳಲ್ಲಿ ಹೇಳಲಾಗಿದೆ. ಆದ್ದರಿಂದಲೇ ಬಸವಣ್ಣನವರಿಗೆ "ಇಲ್ಲೆನ್ನದಚಳ" ನೆಂದು ಹರೀಶ್ವರನು ಬೋಧಿಸಿರುತ್ತಾನೆ. ಜಂಗಮರ ಅಥವಾ ಶರಣರ ತಂಡವು ಬಂದರೆ ಬಸವಣ್ಣನವರು ಉಬ್ಬುತ್ತಿದ್ದರು.

ಜಂಗಮರು ಬೇಕಾದ ಪದಾರ್ಥಗಳನ್ನು ಬೇಡಿದರೂ ಸಂತೋಷದಿಂದ ಹಿಗ್ಗುತ್ತ ಪೂರೈಸುತ್ತಿದ್ದರು.

ಜಲಚರಂ ಸೋಂಕದಗ್ಘವಣಿ ಬೇಕೆಂದಡಂ ।
ಸಲೆವತ್ಸನುಣ್ಣದ ಪಯಂ ನೇಮವೆಂದಡಂ ।
ದೇವಲೋಕದ ಕಮಲವೆಮಗೆ ಬೇಕೆಂದಡಂ ।
ದೇವಲೋಕದ ಮರುಗವಂ ಕೊಡುವುದೆಂದಡಂ ।
ಕರಿಯ ಮಲ್ಲಿಗೆಯ ನೆಮ್ಮೀಶ್ವರಂಗೆಂದಡಂ ।
ಕರವೀರದರಳೆಮಗೆ ನೇಮ ತಾನೆಂದಡಂ ।
ಕಾಮದಹನದ ವಿಭೂತಿಯ ನೇಮವೆಂದಡಂ ।
ಹೇಮದಕ್ಷತೆ ನೇಮವೆಮಗೆ ಸಲಿಸೆಂದಡಂ ।
ಆರತಿಗೆ ಪಚ್ಚಕರ್ಪುರವನೀಯೆಂದಡಂ ।
ವಾರಿಜದ ತಂತುವಿನ ಬತ್ತಿ ಬೇಕೆಂದಡಂ ।
ಏಕಮುಖದ ರುದ್ರಾಕ್ಷಿಜಪಕೆ ಬೇಕೆಂದಡಂ ।
ಗಜಮಸ್ತಕದ ಮುತ್ತು ರಂಗವಲ್ಲಿಗೆಂದಡಂ ।
ಭುಜಗನ ಫಣಾಮಣಿ ನಿವಾಳಿ ಬೇಕೆಂದಡಂ ।

ಶರಣರು ಬಸವಣ್ಣನವರ ಮನೆಯಲ್ಲಿ ಲಿಂಗಾರ್ಚನೆಯನ್ನು ಮಾಡುವ ಕಾಲಕ್ಕೆ ತಮತಮಗೆ ಬೇಕಾದ ಪದಾರ್ಥಗಳನ್ನು ಬೇಡಿದರೂ ಭಕ್ತಿ ಸಾಮ್ರಾಜ್ಯ ಚಕ್ರವರ್ತಿಯಾದ ಬಸವಣ್ಣನು—

"ಕೋಡಿದನೆ, ಕೊಂಕಿದನೆ, ಕಂದಿದನೆ, ಕುಂದಿದನೆ, ಬಾಡಿದನೆ, ಬಿಕ್ಕಿದನೆ, ಬೆದರಿದನೆ, ಬೆಚ್ಚಿದನೆ, ಇಲ್ಲ ಇಲ್ಲ ಸಂಗನನ್ನು ನೆನೆನೆನೆದು ಆನಂದದಿಂದಲೇ ಬೇಡಿದ ವಸ್ತುಗಳನ್ನು ಕೊಡುತ್ತಿದ್ದನು"

ಬಸವಂ ಮುಕ್ತಿಗೆ ಮೂಲವೆಂದರೆ ಕೆಲವರು ಬಸವಂ ಭಕ್ತಿಗೆ ಮೂಲನೆಂದು ಹಾಡಿ ಹರಸಿರುವರು. ನಿಷ್ಕಾಮಭಕ್ತಿಯಲ್ಲಿ ನಿಷ್ಣಾತರಾದ ಬಸವಣ್ಣನವರು—

೩೭೬

"ತನುವ ಬೇಡಿವಡೀವೆ ಮನವ ಬೇಡಿದಡೀವೆ ಧನವ ಬೇಡಿದಡೀವೆ ಬೇಡುಬೇಡೆಲೆ ಹಂದೇ ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ, ಕೂಡಲಸಂಗಮದೇವಾ ನಿಮಗಿತ್ತು ಶುದ್ಧನಾಗಿಪ್ಪೆ ನಿಮ್ಮ ಪುರಾತರ ಮನೆಯಲ್ಲಿ"

ಶ್ರೀ ಬಸವಣ್ಣನವರ ಪಾದದಿಂದ ಭಕ್ತಿಯ ಸಂಪತ್ತು ಬೆಳೆಯಿತೆಂಬುವದನ್ನು ಓರ್ವ ಶರಣರು ಬಹಳ ಹೃದಯಂಗಮವಾಗಿ ವರ್ಣಿಸಿರುತ್ತಾರೆ.

೩೭೭

**ವಚನಶಾಸ್ತ್ರಸಾರ—ಭಾಗ ೧, ಪುಟ ೩೧೧**

"ಪ್ರಭುವಿನ ಪಾದದಿಂದ ವೈರಾಗ್ಯ ಸಂಪತ್ತು, ಬಸವನ ಪಾದದಿಂದ ಭಕ್ತಿಯ ಸಂಪತ್ತು, ಚನ್ನಬಸವನ ಪಾದದಿಂದ ಶಿವಪ್ರಸಾದದ ಸಂಪತ್ತು, ಮಡಿವಾಳಯ್ಯನ ಪಾದದಿಂದ ಜ್ಞಾನದ ಸಂಪತ್ತು, ಸಕಳೇಶನ ಪಾದದಿಂದ ಶಾಂತಿಯ ಸಂಪತ್ತು, ಮೋಳಿಗಯ್ಯನ ಪಾದದಿಂದ ದಾಸೋಹ ಸಂಪತ್ತು, ನೀಲಮ್ಮನ ಪಾದದಿಂದ ಲಿಂಗಪೂಜೆಯ ಸಂಪತ್ತು, ನಾಗಮ್ಮನ ಪಾದದಿಂದ ಮಹತ್ವ ಸಂಪತ್ತು, ಇದುಕಾರಣ ಕಿನ್ನರ ತ್ರಿಪುರಾಂತಕ ಲಿಂಗ ಸಾಕ್ಷಿಯಾಗಿ ಪ್ರಮಥರ ನುಡಿಯಲ್ಲಿ ಬೇಸರ ಬೀರದಿರು"

ಶಿವಭಕ್ತಿಸಂಪನ್ನರಾದ ಶಿವಶರಣರನ್ನು ಕಂಡರೆ ಬಸವಣ್ಣನವರ ಆನಂದಕ್ಕೆ ಅಳತೆ ಇರುತ್ತಿರಲಿಲ್ಲ. ಅವರು ತಮ್ಮದೊಂದು ವಚನದಲ್ಲಿ—

೩೭೮

"ಸೂರ್ಯನುದಯ ತಾವರೆಗೆ ಜೀವಾಳ, ಚಂದ್ರನುದಯ ನೈದಿಲೆಗೆ ಜೀವಾಳ, ಕೂಪದ ಠಾವಿನಲ್ಲಿ ಕೂಟ ಜೀವಾಳ, ಒಲಿದ ಠಾವಿನಲ್ಲಿ ನೋಟ ಜೀವಾಳವಯ್ಯಾ, ಕೂಡಲಸಂಗನ ಶರಣರ ಬರವೆನಗೆ ಪ್ರಾಣ ಜೀವಾಳವಯ್ಯಾ"

ಬಸವಣ್ಣನವರು ಭಕ್ತಿಯಿಂದ ಅನೇಕ ವಚನಗಳನ್ನು ಹೇಳಿರುತ್ತಾರೆ.

೩೭೯

"ನಿಮ್ಮ ನೋಡ ನೋಡಲೆನ್ನ ಹರಣವಿದ್ದುದು ನಿಮ್ಮ ನಗಲಲೊಡನೆ ಹರಣವೆಲ್ಲಿಯದೊ ಇರುಳಹುದು ಒಂದು ಜುಗವೇಲೆ ಕೆಡದಂತೆ ಹಗಲ ನಾವ ಪರಿಯೊಲಾಳವಾಗಿಡುವೆನಯ್ಯ ಕೂಡಲಸಂಗನ ಶರಣರ ನಗಲುವ ಥಾವತೆಗಿಂದ ಮರಣವೇ ಲೇಸಯ್ಯ"

ಬಸವಣ್ಣನವರು ಭಕ್ತಿಯನ್ನು ಯಾವ ರೀತಿಯಿಂದ ಆಚರಿಸುತ್ತಿದ್ದರೆಂಬುವದನ್ನು ಶಿಂಗಿರಾಜ ಪುರಾಣ ವಿಜಯ, ಪುಟ ೪೫೨ ರಲ್ಲಿ—

ಆಚಾರಲಿಂಗನಿಷ್ಠರಾದ ಭಕ್ತರನ್ನು ಶ್ರದ್ಧಾಭಕ್ತಿಯಿಂದಲೂ, ಗುರುಲಿಂಗನಿಷ್ಠರಾದ ಮಹೇಶ್ವರರನ್ನು ನಿಷ್ಠಾಭಕ್ತಿಯಿಂದಲೂ, ಶಿವಲಿಂಗನಿಷ್ಠರಾದ ಪ್ರಸಾದಿಕರನ್ನು ಅವಧಾನ ಭಕ್ತಿಯಿಂದಲೂ, ಜಂಗಮನಿಷ್ಠರಾದ ಪ್ರಾಣಲಿಂಗಿಗಳನ್ನು ಅನುಭವಭಕ್ತಿಯಿಂದಲೂ, ಪ್ರಸಾದಲಿಂಗನಿಷ್ಠರಾದ ಶರಣರನ್ನು ಆನಂದಭಕ್ತಿಯಿಂದಲೂ, ಮಹಾಲಿಂಗನಿಷ್ಠರಾದ ಐಕ್ಯರನ್ನು ಸಮರಸಭಕ್ತಿಯಿಂದಲೂ, ನಿಜಲಿಂಗನಿಷ್ಠರಾದ ಅರವತ್ತುಮೂರು ಶೀಲ ವುಳ್ಳವರುಗಳನ್ನು ನವವಿಧ ಭಕ್ತಿಯಿಂದಲೂ ಕೂಡ ಪೂಜಿಸಿ ಅವರವರ ಇಷ್ಟಾರ್ಥ ಗಳನ್ನು ಕೊಟ್ಟು ಸಂತೋಷಪಡಿಸುತ್ತಿದ್ದರು.

ಬಸವಣ್ಣನವರ ಈ ಭಕ್ತಿಯ ಪ್ರಭಾವವನ್ನು ನೋಡಿ ಶಿಂಗಿರಾಜ ಕವಿಯು—

"ದಾಸೋಹಕ್ಕೆ ಕಲ್ಪವೃಕ್ಷ ಶರಣರು ಕಾಮಿಸಿದ್ದನ್ನು ಕೊಡುವುದಕ್ಕೆ ಕಾಮಧೇನು ಶರಣರು ಚಿಂತಿಸಿದ್ದನ್ನು ಕೊಡುವುದಕ್ಕೆ ಚಿಂತಾರತ್ನವು ಜಗತ್ತಿನ ಅಶುದ್ಧವನ್ನು ಶುದ್ಧಮಾಡುವದಕ್ಕೆ ಸಿದ್ಧರಸವು ಪುರುಷಾಕಾರ ವನ್ನು ಹೊಂದಿದ ಪರುಷವು" ಎಂದಿರುವದು ಸಾರ್ಥಕವಾಗಿರುವದು.

ಶ್ರೀ ಬಸವಣ್ಣನವರು ಭಕ್ತಿಯನ್ನು ಪ್ರಕಟಿಸುವ ಕಾಲಕ್ಕೆ ಮನಸ್ಸನ್ನು ಹೇಗೆ ಶುದ್ಧಮಾಡಿಕೊಂಡಿದ್ದರೆಂಬುವದು ಕೆಳಗಿನ ವಚನಗಳಿಂದ ತಿಳಿದುಬರುತ್ತದೆ.

೩೮೦

"ನಂಬರು, ನೆಚ್ಚರು, ಬರಿದೆ ಕರೆವರು, ನಂಬಲರಿಯರೀ ಲೋಕದ ಮನುಜರು ನಂಬಿ ಕರೆದಡೆ ಓ ಎನ್ನನೇ ಶಿವನು ನಂಬದೆ ನೆಚ್ಚದೆ ಬರಿದೆ ಕರೆವರ ಕೊಂಬಮೆಟ್ಟಿ ಕೂಗೆಂದ ನಮ್ಮ ಕೂಡಲಸಂಗಮದೇವಾ"

೩೮೧

"ಹುತ್ತವ ಬಡಿದಡೆ ಹಾವು ಸಾಯಬಲ್ಲುದೇ ಅಯ್ಯಾ? ಅಘೋರ ತಪವ ಮಾಡಿದಡೇನು? ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತು ನಂಬುವ ನಯ್ಯ ಕೂಡಲಸಂಗಮದೇವಾ"

ಭಕ್ತಿಯನ್ನು ಮಾಡಬೇಕಾದರೆ ತನ್ನಂತರಂಗವನ್ನು ಮೊದಲು ಶುದ್ಧಿಮಾಡಿ ಕೊಳ್ಳಬೇಕೆಂದು ಬಸವಣ್ಣನವರು ಲೋಕಕ್ಕೆ ಸಾರಿದರು. ಮತ್ತು ಮನುಷ್ಯನಿಗೆ ಮುಪ್ಪು ಬರುವದಕ್ಕಿಂತ ಮುಂಚೆ ದೇವರನ್ನು ಭಜಿಸಲಿಕ್ಕೆ ಉಪದೇಶಿಸಿರುತ್ತಾರೆ,

೩೮೨

ಬಸವಣ್ಣನವರು—

"ನೆರೆಕೆನ್ನೆಗೆ ತೆರೆಗಲ್ಲಕೆ ಶರೀರಗೂಡುವೋಗದಮುನ್ನ ಹಲ್ಲು ಹೋಗಿ ಬೆನ್ನು ಬಾಗಿ ಅನ್ಯರಿಗೆ ಹಂಗಾಗದ ಮುನ್ನ ಕಾಲಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ ಮುಪ್ಪಿಂದೊಪ್ಪವಳಿಯದ ಮುನ್ನ ಮೃತ್ಯು ಮುಟ್ಟದ ಮುನ್ನ ಪೂಜಿಸು ಕೂಡಲಸಂಗಮದೇವನ"

ಜನರು ಸಂಸಾರದಲ್ಲಿ ತೊಳಲಿ ಬಳಲಿ ಬೆಂಡಾಗಿ ಹೋಗುವವರನ್ನು ಕಂಡು ಬಸವಣ್ಣನವರು ಕೆಳಗಿನ ವಚನ ಹೇಳಿದ್ದಾರೆ.

೩೮೩

"ಸಂಸಾರವೆಂಬುವದೊಂದು ಗಾಳಿಯ ಸೊಡರು, ಶಿರಿ ಎಂಬುವದೊಂದು ಸಂತೆಯ ಮಂದಿ ಕಂಡಯ್ಯ, ಇದ ನೆಚ್ಚಿ ಕೆಡಬೇಡ ಶಿರಿಯೆಂಬುದ ಮರೆಯದೆ ಪೂಜಿಸು ನಮ್ಮ ಕೂಡಲಸಂಗಮದೇವನ"

ಪ್ರಾತಃಕಾಲಕ್ಕೆ ಎದ್ದ ಕೂಡಲೇ ಭಕ್ತಿಪರವಶನಾಗಿ ಲಿಂಗವನ್ನು ಪೂಜಿಸಬೇಕೆಂದು ಕೆಳಗಿನ ವಚನ ಹೇಳಿದ್ದಾರೆ.

೩೮೪

"ಹೊತ್ತಾರೆಯೆದ್ದು ಅಗ್ಘವಣಿ ಪತ್ರೆಯ ತಂದು ಹೊತ್ತುಹೋಗದ ಮುನ್ನ ಪೂಜಿಸು ಲಿಂಗವ, ಹೊತ್ತುಹೋದಬಳಿಕ ನಿನ್ನನಾರು ಬಲ್ಲರು? ಹೊತ್ತುಹೋಗದ ಮುನ್ನ ಮೃತ್ಯುವೊಯ್ಯದ ಮುನ್ನ ತೊತ್ತುಗೆಲಸವ ಮಾಡು ಕೂಡಲಸಂಗಮದೇವನ"

ಬಸವಣ್ಣನವರ ಶಿವಭಕ್ತಿಯು ಅಸಾಧಾರಣವಾದುದೆಂದು ಕೆಳಗಿನ ವಚನದಿಂದ ತಿಳಿಯಬಹುದು.

೩೮೫

"ಹಲವುಕಾಲ ಥಾವತಿಗೊಂಡು ಒಟ್ಟಿದ ಹಿದಿರೆಯೊಂದು ಮಿಡಿಕಿಡಿಯಲ್ಲಿ ಬೇವಂತೆ, ಸಲೆ ಸನ್ನಿಹಿತನಾಗಿರ್ಪ ಶರಣನ ಭಕ್ತಿ ಒಂದನಾಯತದಿಂದೆ ಕೆಡುವುದು ಸ್ವಧರ್ಮದಲ್ಲಿ ಗಳಿಸಿದ ಪಿತನ ಧನವ ಅಧರ್ಮದಲ್ಲಿ ಕೆಡಿಸುವ ಸುತನಂತೆ ಶಿವನ ಸೊಮ್ಮು ಶಿವಂಗೆ ಮಾಡದೆ ಅನ್ಯಕ್ಕೆ ಮಾಡಿದೊಡೆ ತನ್ನ ಭಕ್ತಿ ತನ್ನನೆ ಕೆಡಿಸುವುದು ಕೂಡಲಸಂಗಮದೇವಾ"

ನಾನು ಭಕ್ತಿಯಿಂದ ಬಡವನೆಂದು ಬಸವೇಶ್ವರನು ಶಿವನನ್ನು ಅನನ್ಯಭಾವನೆಯಿಂದ ಬೇಡಿಕೊಳ್ಳುತ್ತಾನೆ.

೩೮೬

"ದಾಸಿದೇವ ತನ್ನ ವಸ್ತ್ರವನಿತ್ತು ತವನಿಧಿಯ ಪ್ರಸಾದವ ಪಡೆದ, ಬಲ್ಲಾಳ ತನ್ನ ವಧುವನಿತ್ತು ಸಮತಾಪ್ರಸಾದವ ಪಡೆದ, ಶಿರಿಯಾಳ ತನ್ನ ಮಗನನಿತ್ತು ಪ್ರಾಣಪ್ರಸಾದವ ಪಡೆದ, ಇವರೆಲ್ಲರು ತಮ ತಮಗೆ ಮಾಡಿ ಹಡೆದರು ಸಮ್ಯಕ್‌ಪದವಿಯನು, ನಾನೇನೂ ಅರಿಯದ ಭಕ್ತಿಯ ಬಡವಂಗೆ ಕರುಣಿಸು ಕೂಡಲಸಂಗಮದೇವಾ"

ಭಕ್ತಿಯು ಪರಮಾವಧಿಯಲ್ಲಿದ್ದು ಶಿವನನ್ನು ಬೇಡಿಕೊಳ್ಳುವ ರೀತಿಯನ್ನು ಕೆಳಗಿನ ವಚನವು ತಿಳಿಸುತ್ತದೆ.

**೩೮೭**

"ಆನು ಭಕ್ತನಲ್ಲಯ್ಯಾ ಆನು ವೇಷಧಾರಿಯಯ್ಯಾ ಕಾಟುಗ, ಕೆತ್ತುಗ, ಪೊಲ್ಲುಗನೆಂಬುದು ಎನ್ನ ಹೆಸರು ಕೂಡಲಸಂಗಮದೇವಾ ನಿಮ್ಮ ಶರಣರ ಮನೆಯ ಮಗ ನಾನಯ್ಯ"

**೩೮೮**

ಬಸವಣ್ಣನವರು—

"ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ, ರುದ್ರಪದವಿಯ ನೊಲ್ಲೆ ನಾನು ಮತ್ತಾವ ಪದವಿಯನೊಲ್ಲೆನಯ್ಯ ಕೂಡಲಸಂಗಮದೇವಾ ನಿಮ್ಮ ಸದ್ಭಕ್ತರ ಪಾದವನರಿದಪ್ಪ ಮಹಾಪದವಿಯ ಕರುಣಿಸಯ್ಯ"

ಎಂದು ಬಸವಣ್ಣನವರು ಹೇಳಿರುವದನ್ನು ನೋಡಿದರೆ ಅವರೆಂತಹ ಶಿವಭಕ್ತಿಯ ಧುರೀಣರೆಂಬುವದು ಸಹಜವಾಗಿ ತೋರುತ್ತದೆ.

**೩೮೯**

"ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ, ಅಂಬುಜಕ್ಕೆ ಭಾನುವಿ ನುದಯದ ಚಿಂತೆ, ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ, ಎನಗೆ ನಮ್ಮ ಕೂಡಲಸಂಗಮದೇವರ ನೆನೆವುದೆ ಚಿಂತೆ"

ಬಸವಣ್ಣನವರು ಅನನ್ಯಭಾವನೆಯಿಂದ ಶಿವನನ್ನು ಸ್ಮರಿಸುತ್ತಿದ್ದರೂ ತಮ್ಮಲ್ಲಿ ಭಕ್ತಿಯು ಎಳ್ಳಷ್ಟೂ ಇಲ್ಲವೆಂದು ಹೇಳುವ ಅಮೃತಪ್ರಾಯವಾದ ಅವರ ಕೆಳಗಿನ ವಚನವು ಭಕ್ತಿ ಯುಕ್ತರಾದ ಮಾನವರನ್ನು ಆಶ್ಚರ್ಯಗೊಳಿಸದೆ ಇರಲಾರದು.

**೩೯೦**

"ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದನಿತಿಲ್ಲ ಎನ್ನ ಭಕ್ತನೆಂಬರು ಎನ್ನ ಸಮಯಾಚಾರಿ ಎಂಬರು ನಾನೇನ ಪಾಪವ ಮಾಡಿದೆನೊ? ಬೆಳೆಯದ ಮುನ್ನವೇ ಕೊಯ್ವರೇ? ಹೇಳಯ್ಯ? ಇರಿಯದ ವೀರ ಇಲ್ಲದ ಸೊಬಗವ ಎಲ್ಲಾ ಒಡೆಯರ ಏರಿಸಿ ನುಡಿವರು ಎನಗಿದು ವಿಧಿಯೇ ಕೂಡಲಸಂಗಮ ದೇವಾ"

ಶಿವಭಕ್ತನಾಗಿ ಭಕ್ತಿಪಕ್ಷವನ್ನು ಮಾಡಲೇಬೇಕು. ಇಲ್ಲದಿದ್ದರೆ ಅವನ ಬಾಳು ಗೀಳುತನ ದ್ದಾಗುವದೆಂದು ಬಸವಣ್ಣನವರು ಹೇಳಿರುತ್ತಾರೆ.

**೩೯೧**

"ಕಾಗೆಯೊಂದಗುಳ ಕಂಡರೆ ಕರೆಯದೆ ತನ್ನ ಬಳಗವನು? ಕೋಳಿ ಯೊಂದು ಕುಟುಕ ಕಂಡರೆ ಕೂಗಿ ಕರೆಯದೆ ತನ್ನ ಕುಲವನೆಲ್ಲವ? ಶಿವಭಕ್ತ

ನಾಗಿ ಭಕ್ತಿಪಕ್ಷವಿಲ್ಲದಿಪ್ಪರೆ ಆ ಕಾಗೆಕೋಳಿಯಿಂದ ಕರಕಷ್ಟ ಕೂಡಲ ಸಂಗಮದೇವಾ"

ಶ್ರೀ ಬಸವಣ್ಣನವರು ಸಂಗಮೇಶ್ವರನ ವರಪುತ್ರನಾದುದರಿಂದ ಅವರಿಗೆ ಸಂಗನಮೇಲೆ ಅತಿಶಯ ಪ್ರೇಮವಿದ್ದಿತೆಂಬುವದು ಕೆಳಗಿನ ವಚನದಿಂದ ತಿಳಿಯುತ್ತದೆ.

೩೯೨

"ಎನಗೆ ನಿಮ್ಮ ನೆನಹಾದಾಗಲೇ ಉದಯ, ಎನಗೆ ನಿಮ್ಮ ಮರಹಾದಾಗಲೇ ಅಸ್ತಮಾನ, ಎನಗೆ ನಿಮ್ಮ ನೆನಹವೇ ಜೀವನ, ಎನಗೆ ನಿಮ್ಮ ನೆನಹವೇ ಪ್ರಾಣ ಕಾಣಾ ತಂದೆ ಸ್ವಾಮಿ ಎನ್ನ ಹೃದಯದಲ್ಲಿ ನಿಮ್ಮ ಚರಣದುಂಡಿಗೆಯನೊತ್ತಯ್ಯ ವದನದಲ್ಲಿ ಷಡಕ್ಷರಿಯ ಬರೆಯಯ್ಯಾ ಕೂಡಲಸಂಗಮದೇವಾ"

೩೯೩

"ಸಂಸಾರವೆಂಬ ಶ್ವಾನನಟ್ಟಿ ವಿಾಸಲ ಬೀಸರ ಮಾಡದಿರಯ್ಯಾ, ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯಾ ನೀವಲ್ಲದೆ ಮತ್ತೇನನು ಅರಿಯೆನು, ಕನ್ಯೆಯಲ್ಲಿ ಕೈವಿಡಿದೆನು ನಿಮ್ಮಲ್ಲಿ ನೆರೆದೆನು, ಮನ್ನಿಸು ಕಂಡಾ ಮಹಾಲಿಂಗವೇ, ಸತಿಯಾನು ಪತಿ ನೀನಯ್ಯಾ ಮನೆಯೊಡೆಯ ಮನೆಯ ಕಾಯ್ದಿಪ್ಪಂತೆ ನೀವೆನ್ನ ಮನವ ಕಾಯ್ದಿಪ್ಪ ಗಂಡನು ನಿಮ್ಮಗೋತ ಮನವನನ್ಯಕ್ಕೆ ಹರಿಸಿದರೆ ನಿನ್ನಭಿಮಾನ ಹಾನಿ ಕೂಡಲಸಂಗಮದೇವಾ"

೩೯೪

"ಸಕ್ಕರೆಯ ಕೊಡನ ತುಂಬಿ ಹೊರಗೆ ಸವಿವರೆ ರುಚಿಯುಂಟೆ? ತಕ್ಕೈಸಿ ಭುಜ ತುಂಬಿ ಲಿಂಗಸ್ಪರ್ಶನವಮಾಡದೆ ಅಕ್ಕಟಾ ಸಂಸಾರ ವೃಥಾ ಹೋಯಿತ್ತಲ್ಲಾ ಅದೇತರ ಭಕ್ತಿ ಅದೇತರ ಯುಕ್ತಿ ಕೂಡಿಕೋ ಕೂಡಲ ಸಂಗಮದೇವಾ"

೩೯೫

"ಕಾಳಿದಾಸಂಗೆ ಕಣ್ಣನಿತ್ತೆ ಓಹಿಲಯ್ಯನ ನಿಜಪುರಕ್ಕೊಯಿದೆ ನಂಬಿಕರೆದಡೋ ಎಂದೆ ತೆಲುಗ ಜೊಮ್ಮಯ್ಯಂಗೆ ಒಲಿದೆ ದೇವಾ ಕೂಡಲ ಸಂಗಮದೇವಾ ಎನ್ನನೇಕೆ ಒಲ್ಲೆಯಯ್ಯಾ?"

ಮೇಲೆ ಬರೆದ ವಚನಗಳನ್ನೆಲ್ಲ ಪರಿಶೀಲಿಸಿದರೆ ಬಸವಣ್ಣನವರು ಅದೆಂತಹ ಭಕ್ತಿ ಭಾಂಡಾರಿಗಳಾಗಿದ್ದರೆಂಬುವದು ತೋರುತ್ತದೆ.

೩೯೬

"ಭಕ್ತಿಯೆಂಬ ಪೃಥ್ವಿಯಮೇಲೆ ಗುರುವೆಂಬ ಬೀಜವಂಕುರಿಸಿ ಲಿಂಗವೆಂಬ ಎಲೆಯಾಯಿತ್ತು ಲಿಂಗವೆಂಬ ಎಲೆಯಮೇಲೆ ವಿಚಾರವೆಂಬ ಹೂವಾಯಿತ್ತು ಆಚಾರವೆಂಬ ಕಾಯಾಯಿತ್ತು ನಿಷ್ಪತ್ತಿ ಎಂಬುವ ಹಣ್ಣಾ

ಯಿತ್ತು ನಿಷ್ಪತ್ತಿ ಎಂಬ ಹಣ್ಣು ತೊಟ್ಟುಬಿಟ್ಟು ಕಳಚಿಬೀಳುವಲ್ಲಿ ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ"

ರೂಪಕಾಲಂಕಾರದಿಂದ ಕೂಡಿದ ಈ ವಚನವು ಬಹಳ ಸುಂದರವಾಗಿರುತ್ತದೆ.

ಶ್ರೀ ಬಸವಣ್ಣನವರು ಬೇಡಿದವರಿಗೆ ಬೇಡಿದ ಇಷ್ಟಾರ್ಥಗಳನ್ನು ಕೊಡುವ ಮಹಾ ದಾನಿಗಳಾಗಿರುತ್ತಾರೆ.

೩೯೭

"ನಾನು ಆರಂಭವ ಮಾಡುವೆನಯ್ಯಾ ಗುರುಪೂಜೆಗೆಂದು ನಾನು ವ್ಯವಹಾರ ಮಾಡುವೆನಯ್ಯಾ ಲಿಂಗಾರ್ಚನೆಗೆಂದು ನಾನು ಪರಸೇವೆಯ ಮಾಡುವೆನಯ್ಯಾ ಜಂಗಮದಾಸೋಹಕ್ಕೆಂದು ನಾನಾವಾವ ಕರ್ಮಂಗಳ ಮಾಡಿದಡೆಯೂ ಆ ಕರ್ಮಫಲಭೋಗವ ನೀ ಕೊಡುವೆ ಎಂಬುದ ನಾನು ಬಲ್ಲೆನು ನೀ ಕೊಟ್ಟ ದ್ರವ್ಯವ ನಿನಗಲ್ಲದೆ ಮತ್ತೊಂದು ಕ್ರಿಯೆ ಮಾಡೆನು ನಿಮ್ಮ ಸೊಮ್ಮಿಂಗೆ ಸಲಿಸುವೆನು ನಿಮ್ಮಾಣೆ ಕೂಡಲಸಂಗಮದೇವಾ"

ಅವರು ತಮ್ಮ ವಚನಗಳಿಂದ ಭಕ್ತಿಯ ಪ್ರಭಾವವನ್ನು ಕೊಂಡಾಡಿರುವರಲ್ಲದೆ ತಾವೂ ಅದರಂತೆ ನಡೆದು ಜನಗಳಿಗೆ ಮಾರ್ಗದರ್ಶಕರಾಗಿರುತ್ತಾರೆ. ಅವರ ಜೀವನವೆಲ್ಲ ಶಿವಭಕ್ತಿಯ ಪ್ರಸಾರಣೆಯ ಸಲುವಾಗಿಯೇ ಮೀಸಲಾಗಿದ್ದಿತು. ಅದಕ್ಕಾಗಿಯೇ ಅವರ ಅವತಾರವಿರುವದೆಂದು ಶರಣರು ತಮ್ಮ ವಚನಗಳಲ್ಲಿ ಪ್ರತಿಪಾದಿಸಿರುತ್ತಾರೆ.

೩೯೮

ಚನ್ನಬಸವಣ್ಣನವರು—

**ಶೂನ್ಯಸಂಪಾದನೆ—ಪುಟ ೮೮**

"ಮರ್ತ್ಯಲೋಕ ಶಿವಲೋಕವೆಂಬುದೊಂದು ನಿಚ್ಚಣಿಕೆಯಾವವು ನೋಡಾ ದೇವಾ ನೀವೀ ಕಲ್ಯಾಣಕ್ಕೆ ಬಂದವತರಿಸಿದಲ್ಲಿ ಸತ್ಯಶರಣರೆಲ್ಲರನು ಪಾವನ ಮಾಡಲೆಂದು ಬಂದರೆ ಜನ್ಮದಲ್ಲಿ ಬಂದನೆಂದು ನುಡಿಯ ಬಹುದೇ? ಕರ್ತೃರೂಪ ಭೃತ್ಯಂಗೆ ಬಂದಲ್ಲಿ ಆ ಭೃತ್ಯ ಕರ್ತನ ನರಸಿಕೊಂಡು ಬಂದವನಲ್ಲ ಸತ್ಯಸದಾಚಾರವ ಹರಹಿ ಮರ್ತ್ಯರ ಪಾವನ ಮಾಡಿ ನಿಜಲಿಂಗ ಸಮಾಧಿಯೊಳು ನಿಲ್ಲುವರಿನ್ನಾರು ಹೇಳಾ ನೀನಲ್ಲವೆ ಕೂಡಲಚನ್ನಸಂಗಮದೇವರು ಸಾಕ್ಷಿಯಾಗಿ ನಿಮಗೆ ಭವ ಉಂಟೆಂದು ಮನದಲ್ಲಿ ಹಿಡಿದರೆ ಸಂಗನ ಬಸವಣ್ಣ ನಿಮ್ಮ ಶ್ರೀ ಪಾದದಾಣೆ"

೩೯೯

ಹಡಪದ ಅಪ್ಪಣ್ಣನವರು—

**ಶೂನ್ಯಸಂಪಾದನೆ—ಪುಟ ೯೮**

"ಲಿಂಗ ಜಂಗಮ ಜಂಗಮ ಲಿಂಗವೆಂಬುದನಾರು ಬಲ್ಲರಯ್ಯ? ಮರ್ತ್ಯ ಲೋಕ ಶಿವಲೋಕದಲ್ಲಿ ಬಸವಣ್ಣನಲ್ಲದೆ ಲಿಂಗಕ್ಕಾಧಾರವಿಲ್ಲವೆಂದು ಮರ್ತ್ಯ ಲೋಕದಲ್ಲಿ ಬಂದವತರಿಸಿದನಯ್ಯ ಬಸವಣ್ಣನು ಜಂಗಮಮುಖಲಿಂಗ

ವೆಂಬುದನರಿದು ತನ್ನನರ್ಪಿಸಿ ಇದಿರ ತಪ್ಪಿಸಿ ಇರಬಲ್ಲನಯ್ಯ ಬಸವಣ್ಣನು ಅಂಗಮುಖವೆಲ್ಲ ನಷ್ಟವಾಗಿ ಭೃತ್ಯಾಚಾರವೆ ತನುವಾಗಿರಬಲ್ಲನಯ್ಯ ಬಸವಣ್ಣನು ಪ್ರಾಣಕಳೆಯರತು ಅಂತು ಜಂಗಮವೆ ಪ್ರಾಣವಾಗಿ ಹಂಗು ಹರಿಉದಿರಬಲ್ಲನಯ್ಯ ಬಸವಣ್ಣನು ಉಪಾಧಿಯೆಂಬ ಕೀರ್ತಿವಾರ್ತೆಯನು ಜರಿದು ನಿರುಪಾಧಿಕವೆಂಬ ವಿವೇಕಕ್ಕೆ ಅತೀತನಾಗಿ ಸಹಜ ದಾಸೋಹಿ ಯಾಗಿರಬಲ್ಲನಯ್ಯ ಬಸವಣ್ಣನು, ಬಸವಪ್ರಿಯ ಕೂಡಲಚನ್ನಸಂಗನ ಶರಣ ಬಸವಣ್ಣನೆ ನಿಮಗೆ ಭಕ್ತನಲ್ಲದೆ ಮತ್ತಾರನು ಕಾಣೆನಯ್ಯ''

ಮೇಲಿನ ಉದಾಹರಣೆಗಳನ್ನು ನೋಡಿದರೆ ಬಸವಣ್ಣನವರು ಶಿವಭಕ್ತಿಯನ್ನು ಪ್ರಸಾರ ಮಾಡುವದರ ಸಲುವಾಗಿಯೇ ಅವತರಿಸಿ ಶಿವಾಚಾರದ ಧ್ವಜವನ್ನು ಎತ್ತಿಹಿಡಿದರೆಂಬು ವದು ಸ್ಪಷ್ಟವಾಗಿ ಕಾಣುತ್ತದೆ.

ಈ ಭಕ್ತಿಮಾರ್ಗವು ಬಹಳ ಶ್ರೇಷ್ಠವಾದುದೆಂದು ಈ ಮೊದಲೇ ಹೇಳಿದ್ದೇವೆ. ಇಲ್ಲಿ ಕೆಲವು ಉದಾಹರಣೆಗಳನ್ನು ಕೊಡಬೇಕಾಗಿರುತ್ತದೆ.

**ಸೂತಸಂಹಿತೆ (ವ್ಯಾಸೋಕ್ತ)—ಪುಟ ೫೫೧**

ಭಕ್ತಿರೇವ ಪರಮಾರ್ಥದಾಯಿನೀ ।
ಭಕ್ತಿರೇವ ಭವರೋಗನಾಶಿನೀ ॥
ಭಕ್ತಿರೇವ ಪರವೇದನಪ್ರದಾ ।
ಭಕ್ತಿರೇವ ಪರಮುಕ್ತಿಕಾರಿಣೀ ॥

ಈ ಸೂತಸಂಹಿತೆಗೆ ವಿದ್ಯಾರಣ್ಯರು ತಾತ್ಪರ್ಯದೀಪಿಕೆಯೆಂಬುವ ಟೀಕೆಯನ್ನು ಬರೆದಿರು ತ್ತಾರೆ. ಅದರಲ್ಲಿ ಅವರ ಭಕ್ತಿಯೆಂಬುವದು ಸತ್ಯವಾಗಿ ಪ್ರಕಾಶಿಸುತ್ತಲಿದೆ.

**ಸೂತಸಂಹಿತೆ—ಪುಟ ೫೫೨**

ಭಕ್ತಿಯುಕ್ತಜನ ಚಿತ್ತ ಪಂಕಜೇ ।
ಭಕ್ತಿಮುಕ್ತಿ ಫಲದಃ ಪುರಾತನಃ ॥
ಶಕ್ತಿಯುಕ್ತ ಪರವಿಗ್ರಹಃ ಶಿವಃ ।
ಸತ್ಯಮೇವ ಸತತಂ ಪ್ರಕಾಶತೇ ॥

ಅಂದರೆ ಭಕ್ತಿಯುಕ್ತರಾದ ಮಹಾಜನಗಳ ಮನಸ್ಸೆಂಬ ಕಮಲದಲ್ಲಿ ಭಕ್ತಿಮುಕ್ತಿ ಫಲವನ್ನು ಕೊಡತಕ್ಕ ಪುರಾತನನಾದ ಶಕ್ತಿಯುಕ್ತನಾದ ಶಿವನು ಯಾವಾಗಲೂ ಪ್ರಕಾಶಿಸುತ್ತಾನೆ.

**ಸೂತಸಂಹಿತೆ—ಪುಟ ೫೫೨**

ಭಕ್ತಿಯುಕ್ತ ಜನಪರಿತುಷ್ಟಃ ಪರಮೇಶ್ವರಃ ।
ಸತ್ಯಸುಖ ಬೋಧ ಪರಮಂ ವಪುರನಂತರಂ ॥
ಸ್ವಸ್ಯ ಮುನಯಃ ಪರಮಕಾರುಣಿಕಃ ।
ಈಶಃ ಶಕ್ತಿಸಹಿತಸ್ತ್ರಿನಯನಃ ಖಲುದದಾತಿ ॥

ಭಕ್ತಿಯುಕ್ತರಾದ ಜನಗಳಿಗೆ ಪರಿತುಷ್ಟನಾದ ಪರಮೇಶ್ವರನು ಯಾವಾಗಲೂ ಸುಖ ವನ್ನು ಕೊಡುತ್ತಾನೆ,

**ಭಗವದ್ಗೀತೆ—ಅಧ್ಯಾಯ ೧೨, ಶ್ಲೋಕ ೬–೭**

ಯೇ ತು ಸರ್ವಾಣಿ ಕರ್ಮಾಣಿ ಮಯಿ ಸನ್ನ್ಯಸ್ಯ ಮತ್ಪರಾಃ ।
ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥
ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।
ಭವಾಮಿ ನಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಂ ॥

ಅಂದರೆ ಯಾವಾತನು ಎಲ್ಲಾ ಕರ್ಮಗಳನ್ನು ನನ್ನಲ್ಲಿ ಇರಿಸಿ ನನ್ನ ಪರವಾಗಿ ಅನನ್ಯ ಭಕ್ತಿಯಿಂದ ನನ್ನ ಉಪಾಸನೆಯನ್ನು ಮಾಡುತ್ತಾನೆಯೋ ಅವರುಗಳನ್ನು ನಾನು ಸಂಸಾರ ಸಾಗರದಿಂದ ಉದ್ಧಾರಮಾಡುತ್ತೇನೆ.

**ಭಗವದ್ಗೀತೆ—ಅಧ್ಯಾಯ ೧೨, ಶ್ಲೋಕ ೨**

ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।
ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾಮತಾಃ ॥

ಪರಮೇಶ್ವರನಾದ ನನ್ನಲ್ಲಿ ಯಾರು ಮನಸ್ಸನ್ನು ಇರಿಸಿ ಏಕಾಗ್ರಚಿತ್ತರಾಗಿ ನನ್ನ ಸಲುವಾಗಿಯೇ ಕರ್ಮನಿಷ್ಠರಾಗಿ ಆಚರಿಸುವ ಸಂತರು ನನಗೆ ಅಭಿಮತರು. ಮೇಲೆ ಉದಾಹರಿಸಿದ ಭಗವದ್ಗೀತೆಯಂತೆಯೇ ಬಸವಣ್ಣನವರು ಯಾವ ಕೆಲಸವನ್ನು ಮಾಡಿದರೂ ತನ್ನ ಗುರುವಾದ ಕೂಡಲಸಂಗಮದೇವನನ್ನು ಸ್ಮರಿಸಿಯೇ ಮಾಡುತ್ತಿದ್ದರು. ಸರ್ವಾರ್ಪಣ ಭಾವನೆಯಿಂದಲೇ ಅವರು ಎಲ್ಲಾ ಕಾರ್ಯಗಳನ್ನೂ ಮಾಡುತ್ತಿದ್ದರೆಂಬುವದಕ್ಕೆ ಅವರ ನೂರಾರು ವಚನಗಳೇ ಸಾಕ್ಷಿಯಾಗಿರುತ್ತವೆ. ಏಕಾಂತ ಭಕ್ತಿಯನ್ನು ಆಚರಿಸಬೇಕೆಂದು ಗೀತೆಯು ಹೇಳುತ್ತದೆ.

**ಭಗವದ್ಗೀತೆ—ಅಧ್ಯಾಯ ೧೨, ಶ್ಲೋಕ ೧೩**

ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಯೇವ ಚ ।
ನಿರ್ಮಮೋ ನಿರಹಂಕಾರಸ್ಸಮದುಃಖಸುಖಃ ಕ್ಷಮೀ ॥

ಅಂದರೆ—ಭಕ್ತನಾದವನು ಯಾವ ಪ್ರಾಣಿಗಳನ್ನೂ ದ್ವೇಷಿಸಬಾರದು. ಎಲ್ಲರಲ್ಲಿಯೂ ಮಿತ್ರತ್ವದಿಂದಿರಬೇಕು. ದಯೆಯಿಂದ ಕೂಡಿರಬೇಕಲ್ಲದೆ ಅಹಂಕಾರ ಶೂನ್ಯವಾಗಿರಬೇಕು. ಮಮಕಾರವಿರಕೂಡದು. ಅನ್ಯರ ಸುಖದುಃಖಗಳಲ್ಲಿ ಪಾಲುಗಾರನಾಗಿರಬೇಕು ಮತ್ತು ಕ್ಷಮಾವಂತನಾಗಿರಬೇಕು. ಶ್ರೀ ಬಸವಣ್ಣನವರು ಜಗತ್ತಿನಲ್ಲಿ ಯಾವ ಪ್ರಾಣಿಗಳನ್ನು ಕಾಯಾ ವಾಚಾ ಮನಸಾ ದ್ವೇಷಿಸಬಾರದೆಂದು ಅನೇಕ ವಚನಗಳಲ್ಲಿ ಹೇಳಿರುತ್ತಾರೆ. ದಯೆಯಿಂದ ಮಾನವನು ಯಾವಾಗಲೂ ಕೂಡಿರಬೇಕೆಂದು ಬೋಧಿಸಿರುತ್ತಾರೆ. ಎನಗಿಂತ ಕಿರಿಯರಿಲ್ಲವೆಂದು ಹೇಳುವ ಬಸವಣ್ಣನವರಲ್ಲಿ ಅಹಂಕಾರಕ್ಕೆ ಇಂಬಿಲ್ಲ; ಮಮಕಾರವಂತೂ ಅವರ ಸಮೀಪದಲ್ಲಿ ಸುಳಿದಾಡಿಲ್ಲ. ಹೀಗೆಯೇ ಗೀತೆಯಲ್ಲಿ ಭಕ್ತಿಯ ವಿಷಯವಾಗಿ ಹೇಳಿದ ಪ್ರತಿಯೊಂದು ಶಬ್ದಕ್ಕೂ ಬಸವಣ್ಣನವರ ವಚನಗಳನ್ನು ಹೋಲಿಸಿ "ಬಸವಣ್ಣನವರೂ ಭಗವದ್ಗೀತೆಯೂ" ಎಂಬುವ ಪ್ರಕರಣದಲ್ಲಿ ಚೆನ್ನಾಗಿ ವಿವರಿಸಲಾಗಿದೆ. ಶ್ರೀ ಬಸವಣ್ಣನವರು ಭಕ್ತಿಯುಕ್ತರಾಗಿಯೇ ತಮ್ಮ ಎಲ್ಲಾ ವ್ಯವಹಾರಗಳನ್ನು ನಡೆಸುತ್ತ ಬೇಡಿದವರಿಗೆ ಬೇಡಿದ ಪದಾರ್ಥಗಳನ್ನು ಅತ್ಯಂತ

ಭಕ್ತಿಯಿಂದ ಕೊಡುತ್ತ ಲಕ್ಷದಮೇಲೆ ತೊಂಭತ್ತಾರು ಸಾವಿರ ಜಂಗಮರಿಗೆ ನಿತ್ಯತೃಪ್ತಿಯನ್ನು ಪಡಿಸುತ್ತಿದ್ದರು.

ದೇವರನ್ನು ಶ್ರದ್ಧೆಯಿಂದಲೂ, ಆಸಕ್ತಿಯಿಂದಲೂ ಪೂಜಿಸುವದೇ ಭಕ್ತಿಯೋಗದ ಲಕ್ಷಣವಾಗಿರುತ್ತದೆ. ಅದನ್ನು ಬಸವಣ್ಣನವರು ಪರಿಪೂರ್ಣವಾಗಿ ಪಾಲಿಸಿರುತ್ತಾರೆ. ನಾರದ ಸೂತ್ರಕಾರರಾದರೂ ಭಕ್ತಿಯ ವ್ಯಾಖ್ಯಾನವನ್ನು ಮಾಡುವಾಗ ದೇವರಲ್ಲಿ ಅತಿ ಪ್ರೇಮವಿಡುವದೇ ಭಕ್ತಿಯೆನಿಸುತ್ತದೆಂದು ಪ್ರತಿಪಾದಿಸಿರುತ್ತಾರೆ. ಹೀಗೆ ಮನುಷ್ಯನು ದೇವರಲ್ಲಿ ಅತಿ ಪ್ರೇಮವನ್ನಿಟ್ಟರೆ ಅವನಿಗೆ ಪ್ರಪಂಚದಲ್ಲಿ ದ್ವೇಷಿಗಳೇ ಉಳಿಯುವದಿಲ್ಲ. ಅವನ ಆತ್ಮವು ನಿರ್ಮಲವಾಗಿ ಅವನು ದೇವನ ಸ್ವರೂಪನೇ ಆಗುತ್ತಾನೆ. ಪಾಪಗಳಿಂದ ಬಿಡಲ್ಪಟ್ಟವನು ಪರಮಾತ್ಮನಿಗೆ ಸಮಾನನಾಗುತ್ತಾನೆಂದು ಮುಂಡೂಕೋಪನಿಷತ್ತಿನಲ್ಲಿ ಹೇಳಿದೆ. ಹಿಂದೆ ನಾವು ಹೇಳಿದಂತೆ ಈ ಭಕ್ತಿಯೋಗವು ಕರ್ಮ ಜ್ಞಾನಯೋಗಗಳಿಗಿಂತಲೂ ಶ್ರೇಷ್ಠವಾದುದಾಗಿದೆ.

**ನಾರದ ಸೂತ್ರ—೧೧, ೭**

"ಓಂ ಸಾ ಕರ್ಮಜ್ಞಾನಯೋಗೇಭ್ಯೋಽಪ್ಯಧಿಕತರಾ"

ಅಂದರೆ ಭಕ್ತಿಯು ಕರ್ಮ ಜ್ಞಾನಗಳಿಗಿಂತಲೂ ಶ್ರೇಷ್ಠವಾದುದಾಗಿದೆ.

ಇಂತಹ ಭಕ್ತಿಯೋಗದಿಂದ ಆತ್ಮವು ಶುದ್ಧವಾಗುತ್ತದೆ. ಅಶುದ್ಧವಾಗಿರತಕ್ಕ ಆತ್ಮದಲ್ಲಿ ಬ್ರಹ್ಮಜ್ಞಾನವು ತುಂಬಲಾರದು. ಆದ್ದರಿಂದ ಭಕ್ತಿಯೋಗವು ಸರ್ವರಿಗೂ ಸುಸಾಧ್ಯವಾದುದಾಗಿರುತ್ತದೆ. ಪ್ರೇಮವೇ ದೇವರೆಂದು ಯಾರಿಗೆ ತಿಳಿದಿರುತ್ತದೆಯೋ ಅವರು ಮಾತ್ರ ದೇವತತ್ವವನ್ನು ಜನರಿಗೆ ಉಪದೇಶಿಸಬಲ್ಲ ಗುರುಗಳಾಗಬಲ್ಲರು. ಭಕ್ತಿಯೋಗವು ಉಚ್ಚಪ್ರೇಮದ ಶಾಸ್ತ್ರವಾಗಿರುತ್ತದೆ. ಭಕ್ತನ ಭಕ್ತಿಯಿಂದಲೇ ಅವನ ಇಂದ್ರಿಯಗಳ ಸುಖದಾಶೆಯೂ, ಬುದ್ಧಿಯ ಸುಖದಾಸೆಯೂ ತೊಲಗಿಹೋಗುತ್ತದೆ. ಭಕ್ತನ ಪ್ರೇಮವು ಪೂರ್ಣವಾಗಿ ನೆಲಸಿದಾಗ ಅದಕ್ಕೆ ಪರಾಭಕ್ತಿಯೆಂದು ಕರೆಯುತ್ತಾರೆ. ಈ ಮಟ್ಟಕ್ಕೆ ಹೋದವನು ಯಾವ ಬಂಧನಗಳಿಗೂ ಶಿಲುಕುವದಿಲ್ಲ. ಶ್ರೀ ಬಸವಣ್ಣನವರು ಅತ್ಯಂತ ನಿಷ್ಠಾವಂತರಾದ ಭಕ್ತಿಯೋಗಿಗಳಾಗಿದ್ದರು. ಸಂಗಮನನ್ನು ಬಸವಣ್ಣನವರು ಸದಾಕಾಲದಲ್ಲಿ ಪ್ರೀತಿಸುತ್ತಿದ್ದ ಕಾರಣ ಪ್ರಪಂಚದ ಎಲ್ಲಾ ವಸ್ತುಗಳೂ ಅವರಿಗೆ ಪ್ರಿಯಕರಗಳಾಗಿದ್ದವು. ಯಾಕಂದರೆ ಅವುಗಳೆಲ್ಲ ಭಗವಂತನ ವಸ್ತುಗಳಾಗಿರುತ್ತವೆ.

ಅಂತೂ ಬಸವೇಶ್ವರ ದೇವರು—

"ಸರ್ವಮನ್ಯತ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ"

ಎಂಬುವ ಭಗವದ್ಗೀತೋಕ್ತಿಯಂತೆ ಯಾವಾಗಲೂ ಸಂಗನ ವ್ಯವಹಾರದಲ್ಲಿಯೇ ತೊಡಗಿದ್ದರು.

ಈ ಭಕ್ತಿಯಲ್ಲಿ ಪ್ರಾಚೀನ ಶಾಸ್ತ್ರಕಾರರು ಅನೇಕ ಭೇದಗಳನ್ನು ಮಾಡಿರುತ್ತಾರೆ. ಅದರಲ್ಲಿ ನವವಿಧವಾದ ಭಕ್ತಿಯೇ ಪ್ರಸಿದ್ಧವಾಗಿರುತ್ತದೆ.

ಶ್ರವಣಂ ಕೀರ್ತನಂ ಶಂಭೋ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಂ ॥

ಇದು ಸಾಮಾನ್ಯವಾಗಿ ನವವಿಧವಾಗಿದ್ದರೂ ವೀರಶೈವ ಶಾಸ್ತ್ರಕಾರರು ಷಡ್ವಿಧ ಭಕ್ತಿಗಳಿಗೆ ಪ್ರಾಶಸ್ತ್ಯವನ್ನು ಕೊಟ್ಟಿರುತ್ತಾರೆ. ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭವಭಕ್ತಿ, ಆನಂದಭಕ್ತಿ, ಸಮರಸಭಕ್ತಿ ಈ ಷಡ್ವಿಧ ಭಕ್ತಿಗಳನ್ನು ಷಟ್‌ಸ್ಥಲಗಳಿಗೆ ಜೋಡಿಸಿರುತ್ತಾರೆ. ಅಂದರೆ ಒಂದೊಂದು ಸ್ಥಲದಲ್ಲಿ ಒಂದೊಂದು ಭಕ್ತಿಗೆ ಪ್ರಾಶಸ್ತ್ಯವಿರುತ್ತದೆ.

ಶ್ರೀ ಬಸವಣ್ಣನವರು ಭಕ್ತಿಯ ಯೋಗದ ಕೊನೆಯ ಮೆಟ್ಟಿಲಲ್ಲಿದ್ದು ಭಕ್ತಿ ಭಂಡಾರಿಗಳಾಗಿದ್ದರೂ ತನ್ನ ದೇವನಾದ ಸಂಗಮೇಶ್ವರನಲ್ಲಿ ಯಾವಾಗಲೂ ವಾತ್ಸಲ್ಯದಿಂದ ಅತ್ಯಂತ ಭಯಭಕ್ತಿಯಿಂದ ಕೂಡಿಕೊಂಡು ಸ್ಮರಣೆಗೈವುದನ್ನು ಅವರ ಅನಂತ ವಚನಗಳಲ್ಲಿ ಕಾಣಬಹುದಾಗಿರುತ್ತದೆ.

೪೦೧

ಬಸವಣ್ಣನವರು—

"ಎಂತೋ ಶಿವಭಕ್ತಿಯ ನಾನುಪಮಿಸುವೆನಯ್ಯಾ? ಎಂತೋ ಶಿವಾಚಾರವೆನಗೆ ವೇದ್ಯವಪ್ಪುದಯ್ಯಾ? ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳಿಂದ ಕಟ್ಟುವಡೆದೆನು ಹಸಿವು ತೃಷೆ ವೆಸನಗಳಿಂದ ಕುದಿಯುತ್ತಿದ್ದೇನೆ. ಪಂಚೇಂದ್ರಿಯಸಪ್ತಧಾತು ಹಂಚು ಹರಿಮಾಡಿ ಕಾಡಿಹುವಯ್ಯ ಅಯ್ಯಾ ಅಯ್ಯಾ ಎನ್ನ ಹುಯ್ಯಲ ಕೇಳಯ್ಯ ಕೂಡಲ ಸಂಗಮದೇವಾ ನಾನೇವೆ ನೇವೆನಯ್ಯಾ"

೪೦೧

"ಕಾಯವಿಕಾರ ಕಾಡಿಹುದಯ್ಯ ಮನೋವಿಕಾರ ಕೂಡಿಹುದಯ್ಯಾ ಇಂದ್ರಿಯವಿಕಾರ ಸುಳಿಹುದಯ್ಯಾ ಸುಳಿವಿನೊಳಗೆ ಸುಳಿಯುತ್ತಲಿದ್ದೇನೆ ಸಿಲುಕಿಸದಿರಯ್ಯಾ ಅನ್ಯಚಿತ್ತವಿರಿಸದಿರಯ್ಯಾ ನಿಮ್ಮ ಚಿತ್ತವಿರಿಸಯ್ಯಾ ಅನುಪಮ ಸುಖಸಾರಾಯ ಶರಣರಲ್ಲಿ ಕೂಡಲಸಂಗಮದೇವಯ್ಯಾ ಇದನೆ ಬೇಡುವೆನಯ್ಯಾ"

೪೦೨

"ವಿಷಯವೆಂಬ ಹಸುರೆನ್ನ ಮುಂದೆ ತಂದು ಪಸರಿಸಿದೆಯಯ್ಯಾ ಪಶುವೇನ ಬಲ್ಲದು? ಹಸುರೆಂದೆಳೆಸುವುದು ವಿಷಯರಹಿತನಮಾಡಿ ಭಕ್ತಿ ರಸವ ದಣಿಯೆ ಮೇಯಿಸಿ ಸುಬುದ್ಧಿ ಎಂಬುದಕವನೆರೆದು ನೋಡಿ ಸಲಹಯ್ಯಾ ಕೂಡಲಸಂಗಮದೇವಾ"

೪೦೩

"ಕೆಸರಿನಲ್ಲಿ ಬಿದ್ದ ಪಶುವಿನಂತಾನುದೆಸೆದೆಸೆಗೆ ಬಾಯಬಿಡುತ್ತಿದ್ದೇನಯ್ಯಾ ಅಯ್ಯಾ ಆರಯ್ವರಿಲ್ಲ ಅಕಟಕಟಾ ಪಶುವೆಂಬೆನ್ನ ಕೂಡಲಸಂಗಮದೇವ ಕೊಂಬ ಹಿಡಿದೆತ್ತುವನ್ನಕ್ಕ"

೪೦೪

"ಬಡಪಶು ಪಂಕದಲ್ಲಿ ಬಿದ್ದಡೆ ಕಾಲ ಬಡಿವುದಲ್ಲದೆ ಬೇರೆ ಗತಿಯುಂಟೆ? ಶಿವಶಿವಾ ಹೋದಹೆ ಹೋದಹೆನಯ್ಯಾ ನಿಮ್ಮ ಮನದತ್ತಲೆನ್ನ ತೆಗೆಯಯ್ಯಾ ಪಶುವಾನು ಪಶುಪತಿ ನೀನು ತುಡುಗಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ ಒಡೆಯ ನಿಮ್ಮ ಬಯ್ಯದಂತೆ ಮಾಡು ಕೂಡಲ ಸಂಗಮದೇವಾ"

ಶ್ರೀ ಬಸವಣ್ಣನವರ ಮೇಲೆ ಬರೆದ ವಚನಗಳನ್ನು ಪರಿಶೀಲಿಸಿದರೆ ಅವರ ಅಸಾಧಾರಣವಾದ ಭಕ್ತಿಯು ಸ್ಫುಟವಾಗಿ ಕಾಣುತ್ತದೆ.

ಶ್ರೀ ಬಸವಣ್ಣನವರು ಭಕ್ತಿಯನ್ನು ನಾನಾತರಹದಿಂದ ಜನಗಳಲ್ಲಿ ಪ್ರಸಾರ ಮಾಡಿರುತ್ತಾರೆ. ಭಕ್ತನಾದವನು ಲಿಂಗಜಂಗಮರನ್ನು ಪೂಜಿಸಬೇಕೆಂದು ಹೇಳುತ್ತ—

೪೦೫

"ಭಕ್ತನಾಗಿ ಲಿಂಗಜಂಗಮವ ಪೂಜಿಸಬೇಕು ಭಕ್ತನಾಗಿ ತನ್ನ ತಾ ಪೂಜಿಸಿಕೊಂಬುದು ಎಂತಯ್ಯಾ? ಸ್ವಾಮಿಭೃತ್ಯಸಂಬಂಧವು ಎಂತಯ್ಯಾ ಪೂರೈಸುವುದು? ಕೂಡಲಸಂಗಮದೇವಾ, ಕಣ್ಣುಕಟ್ಟಿ ಕನ್ನಡಿಯ ತೋರುವಂತೆ"

ಕೆಲವರು ಮಾತಿನಲ್ಲಿಯೇ ಭಕ್ತಿಯನ್ನು ತೋರಿಸುವರಲ್ಲದೆ ಕೃತಿಯಲ್ಲಿ ಏನೂ ಮಾಡುವದಿಲ್ಲ. ಅಂಥವರನ್ನು ಕುರಿತು ಬಸವಣ್ಣನವರು—

೪೦೬

"ಮಾತಿನ ಮಾತಿನಲ್ಲಿಪ್ಪುದೇ ಭಕ್ತಿ? ಮಾಡಿ ತನು ಸವೆಯದನ್ನಕ್ಕ ಮನ ಸವೆಯದನ್ನಕ್ಕ ಧನ ಸವೆಯದನ್ನಕ್ಕ ಅಪ್ಪುದೇ ಭಕ್ತಿ? ಕೂಡಲ ಸಂಗಮದೇವ ಎಲುದೋರಿ ಸರಸವಾಡುವನು ಸೈರಿಸದನ್ನಕ್ಕ ಅಪ್ಪುದೇ ಭಕ್ತಿ"

೪೦೭

"ಆಡಿದರೇನೊ, ಹಾಡಿದರೇನೊ, ಓದಿದರೇನೊ ತ್ರಿವಿಧ ದಾಸೋಹವಿಲ್ಲದನ್ನಕ್ಕ? ಆಡದೇ ನವಿಲು, ಹಾಡದೇ ತಂತಿ, ಓದದೇ ಗಿಳಿ? ಭಕ್ತಿ ಇಲ್ಲದವರನೊಲ್ಲ ಕೂಡಲಸಂಗಮದೇವ"

ಯಾವಾತನ ಮನಸ್ಸು ಭಕ್ತಿಯಿಂದ ದೇವರಲ್ಲಿ ತಲ್ಲೀನವಾಗಿರುತ್ತದೆಯೋ ಅಂಥವರು ಕೆಟ್ಟಕಾರ್ಯಗಳಿಗೆ ಸ್ವಲ್ಪಾದರೂ ಆಶ್ರಯ ಕೊಡಲಾರರು.

೪೦೮

"ಮತ್ತೊಂದ ಕಾಣದಂತೆ ಮತ್ತೊಂದ ಕೇಳದಂತೆ ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಇರಿಸಯ್ಯಾ ಕೂಡಲಸಂಗಮದೇವಾ"

೪೦೯

"ಧೃತಿಗೆಟ್ಟು ಅನ್ಯರ ಬೇಡದಂತೆ ಮತಿಗೆಟ್ಟು ಪರರ ಹೊಗಳದಂತೆ ಪರಸತಿಯರ ರತಿಗೆ ಮನ ಹಾರದಂತೆ ಶಿವಪಥವೊಲ್ಲದವರೊಡನಾಡದಂತೆ ಅನ್ಯಜಾತಿಯ ಸಂಗವ ಮಾಡದಂತೆ ಎನ್ನ ಪ್ರತಿಪಾದಿಸು ಕೂಡಲಸಂಗಮ ದೇವಾ"

ಭಕ್ತಿಯ ಪರವಾಗಿ ಅನೇಕ ವಚನಗಳನ್ನು ಬಸವಣ್ಣನವರು ಹೇಳಿರುತ್ತಾರೆ. ಬಸವಣ್ಣನವರು ಭಕ್ತಿಯೋಗಿಗಳಾಗಿರುವದರಿಂದ ಯಾವ ಪ್ರಾಣಿಗಳನ್ನೂ ದ್ವೇಷಿಸದೆ ಸಮಾನ ದೃಷ್ಟಿಯಿಂದ ಕಾಣುತ್ತಿದ್ದರು. ಎಲ್ಲ ಪ್ರಾಣಿಗಳಲ್ಲಿಯೂ ದಯಾವಂತರಾಗಿರುತ್ತಿದ್ದರು. ಅಹಂಕಾರ ಮಮಕಾರಗಳಿಂದ ಅಲಿಪ್ತರಾಗಿ ನಾನು ದೇವರ ಸೃಷ್ಟಿಯಲ್ಲಿ ಎಲ್ಲರಿಗಿಂತಲೂ ಕಿರಿಯನೆಂಬುವ ಭಾವನೆಯುಳ್ಳವರಾಗಿದ್ದರು. ಲಾಭಾಲಾಭಗಳಲ್ಲಿ ಪ್ರಸನ್ನಚಿತ್ತರಾಗಿಯೂ, ದೃಢವಾದ ನಿಶ್ಚಯವುಳ್ಳವರಾಗಿಯೂ ಇರುತ್ತಿದ್ದರಲ್ಲದೆ ಸಂಗಮೇಶ್ವರನಲ್ಲಿ ಯಾವಾಗಲೂ ಚಿತ್ತವನ್ನರ್ಪಿಸಿ ಸರ್ವಾರ್ಪಣಭಾವನೆಯಿಂದಿರುತ್ತಿರ್ದರು. ಲೋಕದ ಸ್ತುತಿ ನಿಂದೆಗಳಿಗೆ ಅವರು ಯತ್ಕಿಂಚಿತ್ತಾದರೂ ಲಕ್ಷ್ಯಕೊಡದೆ ಆಶಾರಹಿತರಾಗಿ ಸರ್ವವನ್ನೂ ತ್ಯಾಗಮಾಡಿ ಜನಗಳಿಗೆ ಶಿವಭಕ್ತಿಯ ಮಹಿಮೆಯನ್ನು ಅನೇಕ ವಿಧವಾಗಿ ಬೋಧಿಸಿದರು.

ಮೊಗ್ಗೆಯ ಮಾಯಿದೇವಾಚಾರ್ಯರು ತಮ್ಮ ಶತಕದಲ್ಲಿ—

"ಏನೆನಲುಂಟು ಭಕ್ತಿಯ ಮಾಹಾತ್ಮ್ಯಯಂ ಶೃತಿಶಾಸ್ತ್ರ ಪಂಙ್ಕ್ತಿ ಯೋಗೇನ ಪರಾ ಎನುತ್ತಮಳ ಭಕ್ತಿಯ ವೈಭವಮಂ ಪೊಗಳ್ದು ಸನ್ಮಾನಿಸಿತಾಗಿ ಯೋಗಪದದಿಂದುಪರಿಷ್ಟವೆನಿಪ್ಪ ಭಕ್ತಿ ಸೌಖ್ಯಾನುಭವೈಕ್ಯ ನಿಷ್ಕಳ ಪದಕ್ಕೆಣೆ ಯಾವಪದಂ ಶಿವಾಥವಾ"

ಅಂದರೆ—ಸಾಯುಜ್ಯಪದಕ್ಕಿಂತಲೂ ಭಕ್ತಿಯೇ ಉತ್ಕೃಷ್ಟವಾದುದೆಂದು ವೇದಗಳೂ, ಶಾಸ್ತ್ರಗಳೂ ಹೇಳಿ ಅದರ ಪ್ರಭಾವವನ್ನು ವರ್ಣಿಸಿರುವಾಗ ಇನ್ನದರ ಮಹತ್ವವನ್ನು ಏನೆಂದು ಹೇಳಬೇಕು? ಅಂತಹ ಶ್ರೇಷ್ಠವಾದ ಭಕ್ತಿಯಿಂದ ಲಭಿಸುವ ಪರಮಾನಂದವನ್ನು ಅನುಭವಿಸುತ್ತಿರುವ ಪದವಿಗೆ ಸಮಾನವಾದ ಪದವಿಯು ಮತ್ತೊಂದು ಯಾವದಿರುವದು.

"ಶಿವಭಕ್ತಿಶ್ಶಿವಪ್ರಸಾದಜನನೀ ಭವನಂ ಶಿವನ ಪ್ರಸಾದವಾ ಭಕ್ತಿಗೆ ಜನ್ಮಭೂಮಿ ವಿಮಲಾಂಕುರ ಬೀಜದವೋಲ್ ಪರಸ್ಪರಂ ವ್ಯಕ್ತಮಿದಿಂತು ನೋಳ್ಪೊಡದುತಾನೆ ನಿರಂತರಮಪ್ಪ ಮುಕ್ತಿಯಾ ಮುಕ್ತಿಯೆ ಶುದ್ಧ ನಿಷ್ಕಳ ನಿಜೈಕ್ಯ ಪದಂಪರಂ ಶಿವಾಥವಾ"

ಅಂದರೆ ಶಿವಭಕ್ತಿಯಿಂದ ಶಿವಾನುಗ್ರಹವುಂಟಾಗುವದು. ಆ ಶಿವಾನುಗ್ರಹದಿಂದ ಶಿವಭಕ್ತಿಯು ದೊರಕೊಳ್ಳುವುದು. ಎಂದಬಳಿಕ ಭಕ್ತಿಗೂ, ಶಿವಾನುಗ್ರಹಕ್ಕೂ ಪರಸ್ಪರವಾಗಿ ಬೀಜಾಂಕುರನ್ಯಾಯದಂತೆ ಸಂಬಂಧವಿರುವದು. ಆದುದರಿಂದ ಆ ಭಕ್ತಿಯೆಂಬುವದೇ ಅವಿಚ್ಛಿನ್ನವಾದ ಮುಕ್ತಿಯು. ಆ ಮುಕ್ತಿಯೆಂಬುವದೇ ನಿರ್ಮಲವಾದ ಸ್ವಸ್ವರೂಪ ಸಾಕ್ಷಾತ್ಕಾರ ಪದವಿಯು. ಇಂತಹ ಮಹತ್ತರವಾದ ಭಕ್ತಿಯೋಗವನ್ನು

ಕೈಕೊಂಡು ಆಚರಿಸಿ, ಅನುಭವಿಸಿ, ಲೋಕದ ಜನಗಳಿಗೆ ಬೋಧಿಸಲು ಲಕ್ಷಾಂತರ ಜನಗಳನ್ನು ತಮ್ಮ ಕಾರ್ಯದ ಅನುಯಾಯಿಗಳನ್ನಾಗಿ ಮಾಡಿಕೊಂಡ ಭಕ್ತಿಭಂಡಾರಿ ಬಸವಣ್ಣನವರಿಗೆ ಸರಿಹೋಲುವ ಭಕ್ತಿಯೋಗಿಗಳು ಸಿಗುವದು ದುರ್ಲಭವಾದುದೇ ಸರಿ. ಇವರ ಶಿವಭಕ್ತಿಯು ಕೇವಲ ಒಂದೇ ಜನ್ಮದಲ್ಲಿದ್ದದ್ದಾಗಿರುವದಿಲ್ಲ.

೪೧೦

"ತಾವು ಏಳೇಳು ಭವಾಂತರದಲ್ಲಿ ಶಿವಭಕ್ತರಾಗಿ ಬಾರದಿರ್ದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ನಿಮ್ಮ ಪ್ರಸಾದಕ್ಕಲ್ಲದೆ ಬಾಯ್ದೆರೆಯೆನಯ್ಯಾ ಅದೆಂತೆಂದೊಡೆ ಪ್ರಥಮ ಭವಾಂತರದಲ್ಲಿ ಶಿಲಾದನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಕಾರುಣ್ಯವ ಮಾಡಿಕೊಂಡಿದ್ದಿರಯ್ಯ, ಎರಡನೆಯ ಭವಾಂತರದಲ್ಲಿ ಸ್ಕಂದನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಕಾರುಣ್ಯವ ಮಾಡಿಕೊಂಡಿದ್ದಿರಯ್ಯ, ಮೂರನೆಯ ಭವಾಂತರದಲ್ಲಿ ನೀಲ ಲೋಹಿತನೆಂಬ ಗಣೇಶ್ವರನಮಾಡಿ ಹೆಸರಿಟ್ಟು ಕರೆದು ನಿಮ್ಮ ಲೀಲಾವಿನೋದ ದಿಂದಿರಿಸಿಕೊಂಡಿದ್ದಿರಯ್ಯ, ನಾಲ್ಕನೆಯ ಭವಾಂತರದಲ್ಲಿ ಮನೋಹರ ನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಮನಃಪ್ರೇರಕವಾಗ ಲೆಂದಿರಿಸಿಕೊಂಡಿದ್ದಿರಯ್ಯ, ಐದನೆಯ ಭವಾಂತರದಲ್ಲಿ ಕಾಲಲೋಚನ ನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ಸರ್ವಕಾಲ ಸಂಹಾರವ ಮಾಡಿಸುತ್ತಿರ್ದಿರಯ್ಯ, ಆರನೆಯ ಭವಾಂತರದಲ್ಲಿ ವೃಷಭನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮಗೇರಲು ವಾಹನವಾಗಲೆಂದಿರಿಸಿಕೊಂಡಿದ್ದಿ ರಯ್ಯ, ಏಳನೆಯ ಭವಾಂತರದಲ್ಲಿ ಬಸವದಣ್ಣಾಯಕರೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಒಕ್ಕುಮಿಕ್ಕುದಕ್ಕೆ ಯೋಗ್ಯವಾಗಲೆಂದಿರಿಸಿ ಕೊಂಡಿದ್ದಿರಯ್ಯ, ಇದುಕಾರಣ ಕೂಡಲಸಂಗಮದೇವಾ ನೀವು ಬರಿಸಿದ ಭವಾಂತರದಲ್ಲಿ ನಾನು ಬರುತ್ತಿದ್ದೆನಯ್ಯಾ"

೪೧೧

"ಪರಚಿಂತೆ ಎಮಗೇಕಯ್ಯ? ನಮ್ಮ ಚಿಂತೆ ನಮಗೆ ಸಾಲದೆ? ಕೂಡಲಸಂಗಯ್ಯ ಒಲಿಯುವನೋ ಒಲಿಯನೋ ಎಂಬುವ ಚಿಂತೆ ಹಾಸಲುಂಟು ಹೊದೆಯಲುಂಟು"

ಇಲ್ಲಿಯವರೆಗೆ ಶ್ರೀ ಬಸವಣ್ಣನವರು ಹೇಗೆ ಭಕ್ತಿಯೋಗಿಗಳಾಗಿ ಶಿವಭಕ್ತಿಯನ್ನು ಪ್ರಸಾರಮಾಡಿದರೆಂಬುವದನ್ನು ಅವರ ವಚನಗಳಿಂದಲೇ ವಿವರಿಸಿದ್ದಾಯಿತಲ್ಲದೆ ಭಕ್ತಿಯ ಮಾಹಾತ್ಮ್ಯೆಗೆ ಕೆಲವರ ಪ್ರಮಾಣಗಳನ್ನೂ ಕೊಟ್ಟಿದ್ದಾಯಿತು. ಶ್ರೀ ಬಸವಣ್ಣ ನವರಂತಹ ಭಕ್ತಿಸಾಮ್ರಾಜ್ಯ ಧುರಂಧರರ ಬಗ್ಗೆ ಬೇರೆಬೇರೆ ಪಂಡಿತರು ಅನೇಕ ತರಹದ ಉದ್ಗಾರಗಳನ್ನು ತೆಗೆದಿರುತ್ತಾರೆ. ವಿಸ್ತಾರವಾಗುವದರಿಂದ ಆ ವಿಷಯವನ್ನು ಇಲ್ಲಿ ಹೆಚ್ಚಾಗಿ ಹೇಳಿರುವದಿಲ್ಲ.

## ಒಂಭತ್ತನೆಯ ಪ್ರಕರಣ

## ಜ್ಞಾನಯೋಗವೂ ಬಸವಣ್ಣನವರೂ

ಈ ಚಿತ್ರಮಯವಾದ ಜಗತ್ತಿನಲ್ಲಿ ವಿಚಿತ್ರಗಳಾದ ಅನೇಕ ಪ್ರಾಣಿಗಳನ್ನು ನಾವು ನೋಡುತ್ತೇವೆ. ಎಲ್ಲ ಪ್ರಾಣಿಗಳಿಗಿಂತಲೂ ಮನುಷ್ಯನೇ ಶ್ರೇಷ್ಠನೆಂಬುವದು ನಿರ್ವಿವಾದವಾದ ಮಾತಾಗಿರುತ್ತದೆ. ಮನುಷ್ಯನು ಮನುಷ್ಯತ್ವವನ್ನು ಸಂಪಾದಿಸಿ ಮನುಷ್ಯನಾಗಿ ಬಾಳಬೇಕಾದರೆ ಅವನಿಗೆ ಜ್ಞಾನವೇ ಕಾರಣವಾಗಿರುತ್ತದೆ. ಜ್ಞಾನವಿರುವದರಿಂದಲೇ ಅವನು ಎಲ್ಲ ಪ್ರಾಣಿಗಳಿಗಿಂತ ಶ್ರೇಷ್ಠನಾಗಿರುತ್ತಾನೆ. ಮಾನವೇತರ ಪ್ರಾಣಿಗಳಿಗೆ ನಿಜವಾದ ಜ್ಞಾನವಿರುವದಿಲ್ಲ. ಧರ್ಮಾಧರ್ಮಗಳ ಜ್ಞಾನವಿರುವದಿಲ್ಲ. ಆಹಾರ, ನಿದ್ರಾ, ಭಯ, ಮೈಥುನ ಇವುಗಳು ಪಶುಗಳಿಗೂ ಮನುಷ್ಯರಿಗೂ ಸಮಾನವಾಗಿರುತ್ತವೆ. ಆದರೆ ಮನುಷ್ಯನಿಗೆ ಜ್ಞಾನರತ್ನವಿರುತ್ತದೆ. ಈ ಜ್ಞಾನದ ಬಲದಿಂದ ಮನುಷ್ಯನು ಎಲ್ಲ ಪ್ರಾಣಿಗಳಿಗೆ ಒಡೆಯನಾಗಿರುತ್ತಾನೆ. ಈ ಜ್ಞಾನದ ಬಲದಿಂದ ಆಧುನಿಕ ವೈಜ್ಞಾನಿಕರಾಗಲೀ, ಪ್ರಾಚೀನಕಾಲದ ಮಹರ್ಷಿಗಳಾಗಲೀ ಎಂತಹ ಮಹತ್ಕಾರ್ಯಗಳನ್ನು ಮಾಡಿಯೂ ಮಾಡುತ್ತಲಿದ್ದಾರೆಂಬುವದು ಪ್ರತಿಯೊಂದು ಜನಾಂಗಕ್ಕೆ ತಿಳಿದ ಮಾತಾಗಿ ಇರುತ್ತದೆ. ಆದ್ದರಿಂದಲೇ—

"ಬುದ್ಧಿರ್ಯಸ್ಯ ಬಲಂತಸ್ಯ ನಿರ್ಬುದ್ಧೇಶ್ಚ ಕುತೋಬಲಂ"

ಲೋಕದಲ್ಲಿ ಬುದ್ಧಿವಂತನೇ ಬಲವಂತನು. ಬುದ್ಧಿಶೂನ್ಯನಾದವನಿಗೆ ಎಂತಹ ಬಲವಿದ್ದರೂ ಅದು ಬಲವಲ್ಲ. ಬುದ್ಧಿಯ ಬಲದ ಮುಂದೆ ಶಕ್ತಿಯ ಬಲವು ದುರ್ಬಲವಾದುದು. "ಜ್ಞಾನೇನ ಹೀನಾಃ ಪಶುಭಿಃ ಸಮಾನಾಃ" ಜ್ಞಾನಹೀನನಾದವನು ಪಶುತುಲ್ಯನು. ಯಾವನಿಗೆ ಜ್ಞಾನವಿರುತ್ತದೆಯೋ ಅವನು ಆ ಜ್ಞಾನದ ಬಲದಿಂದ ಬೇಕಾದಂತಹ ಕಾರ್ಯಮಾಡಲು ಶಕ್ತನಾಗುತ್ತಾನೆ. ಆ ಜ್ಞಾನಾಗ್ನಿಯ ಬೆಂಬಲದಿಂದ ಅವನ ಸಕಲ ದುರಿತಗಳು ಸುಟ್ಟು ನಾಶವಾಗುವವು. ಜ್ಞಾನದಿಂದಲೇ ಮೋಕ್ಷವೆಂದು ಅನೇಕ ಮತಗಳ ಸ್ಥಾಪನಾಚಾರ್ಯರು ಸಿದ್ಧಾಂತಪಡಿಸಿರುತ್ತಾರೆ. ಲೋಕದಲ್ಲಿ ಜ್ಞಾನಿಯೇ ಶ್ರೇಷ್ಠನು. ಅವನಿಗಿಂತ ಅಧಿಕನಾಗಲೀ ಸಮಾನನಾಗಲೀ ಯಾವಾತನೂ ಸಿಗಲಾರನು. ಜಗತ್ತಿನಲ್ಲಿಯ ಮಹತ್ತರಗಳಾದ ಕಾರ್ಯಗಳನ್ನೆಲ್ಲ ಜ್ಞಾನಿಗಳೇ ಮಾಡಿರುತ್ತಾರೆ. ಜ್ಞಾನಿಗಳು ಲೋಕದಲ್ಲಿ ಅಜರಾಮರವಾದ ಕೀರ್ತಿಯನ್ನು ಗಳಿಸಿರುತ್ತಾರೆ. ಯೋಗಗಳಲ್ಲಿ ಜ್ಞಾನಯೋಗಕ್ಕೆ ದೊಡ್ಡ ಸ್ಥಾನವಿದೆ. ಪ್ರತಿಯೊಂದು ಕಾರ್ಯದಲ್ಲಿ ಜ್ಞಾನದ ಅವಶ್ಯಕತೆಯು ಹೆಚ್ಚಾಗಿ ಬೇಕಾಗುತ್ತದೆ. ಧರ್ಮದಲ್ಲಿ, ರಾಜಕಾರಣದಲ್ಲಿ, ವ್ಯವಹಾರ ಕುಶಲತೆಯಲ್ಲಿ, ಸಾಮಾಜಿಕ ನಡೆನುಡಿಗಳಲ್ಲಾಗಲಿ ಜ್ಞಾನವಿಲ್ಲದಿದ್ದರೆ ಏನೂ ಆಗಲಾರದು. ಮಾನವಜಾತಿಯ ಅಂತಿಮ ಧ್ಯೇಯವಾದ ಮೋಕ್ಷಕ್ಕೂ ಜ್ಞಾನವೇ ಕಾರಣವೆಂದಮೇಲೆ ಪ್ರಪಂಚದಲ್ಲಿ ಇದಕ್ಕಿಂತಲೂ ಹೆಚ್ಚಿನ ವಸ್ತು ಬೇರೊಂದಿಲ್ಲ. ಮನುಷ್ಯನ ಮನುಷ್ಯತ್ವವು ಜ್ಞಾನದಿಂದಲೇ ಸಿದ್ಧವಾದುದು. "ನಹಿ ಜ್ಞಾನೇನ ಸದೃಶಮಸ್ತಿ ಜಗತ್ರಯೇ" ಮೂರು ಲೋಕದಲ್ಲಿ ಜ್ಞಾನಕ್ಕೆ ಸಮಾನವಾದುದಿಲ್ಲವೆಂದು ಉಪನಿಷದ್ವಾಕ್ಯವಿರುತ್ತದೆ. ಆದ್ದರಿಂದ ಜ್ಞಾನವೇ ಶ್ರೇಷ್ಠವಾದುದು. ಜ್ಞಾನಿಯೇ ಎಲ್ಲರಿಗಿಂತ ಮಿಗಿಲಾದವನು. ವೇದದಲ್ಲಿ ಜ್ಞಾನಕಾಂಡವೆಂಬುವ ಒಂದು

ಭಾಗವೇ ಇರುತ್ತದೆ. "ಋತೇ ಜ್ಞಾನಾನ್ನಮುಕ್ತಿಃ" ಜ್ಞಾನವಿಲ್ಲದೆ ಮೋಕ್ಷವಿಲ್ಲ ವೆಂದು ಶೃತಿವಾಕ್ಯವಿರುತ್ತದೆ.

ಮನುಷ್ಯನ ಆದಿಭೌತಿಕ ಶರೀರ, ಆದಿದೈವಿಕ ಮನಸ್ಸು ಮತ್ತು ಆಧ್ಯಾತ್ಮಿಕ ಬುದ್ಧಿ ಈ ಮೂರು ಶುದ್ಧವಾಗುವದಾದರೂ ಜ್ಞಾನದಿಂದಲೇ ಎಂದು ತಿಳಿಯಬೇಕು.

ಕೆಳದಿಯ ಅರಸರಾಗಿದ್ದ ಸದಾಶಿವರಾಜರು ರಚಿಸಿದ ನೀತಿ ಗ್ರಂಥದಲ್ಲಿ—

ಜ್ಞಾನವೆ ಸರ್ವಕೆ ಶುಭಕರ ಜ್ಞಾನದಿ ಸರ್ವಾರ್ಥಸಿದ್ಧಿಯಾಹದು ಸಿದ್ಧಂ ।
ಜ್ಞಾನವೆ ಮುಕ್ತಿಗೆ ಕಾರಣ ಜ್ಞಾನವು ಸರ್ವರಿಗು ಬೇಕು ಗುರುನಂದೀಶ ॥
ಶೃತೇತಿಹಾಸಪುರಾಣಂ ಸ್ಮೃತಿಭಾಷ್ಯ ತರ್ಕಛಂದ ವೇದಾಂತಗಳು ।
ಅತಿಶಯ ಕಾವ್ಯನಿಘಂಟಿನ ಮತಿಯಿಂ ಶಿವಜ್ಞಾನವಧಿಕ ಗುರುನಂದೀಶ ॥
ನೀರೊಳಗನುದಿನ ಮುಳುಗಲು ಮೀರದೆ ಪ್ರತಿದಿವಸ ವ್ರತವನಾಚರಿಸಿದರುಂ ।
ದೂರಣ ಯಾತ್ರೆಯ ಮಾಡಲು ಬಾರದು ಸುಜ್ಞಾನದ್ವೊರತು ಮುಕ್ತಿಯುಂ ಗುರುವೇ ॥

ಮೇಲಿನ ಮುತ್ತಿನಂತಹ ಮೂರು ಕಂದಗಳ ಅಭಿಪ್ರಾಯವು ಜ್ಞಾನವೇ ಶ್ರೇಷ್ಠವಾದು ದೆಂಬುವದನ್ನು ಬಲಪಡಿಸುತ್ತದೆ.

ಸರ್ವಜ್ಞ ಕವಿಯು—

ಜ್ಞಾನದಿ ಮೇಲಿಲ್ಲ ಶ್ವಾನನಿಂ ಕೀಳಿಲ್ಲ ಭಾನುಮಂಡಲದಿಂ ಬೆಳಗಿಲ್ಲ ಜಗದೊಳು ಜ್ಞಾನವೇ ಅಧಿಕ ಸರ್ವಜ್ಞ ।
ಜ್ಞಾನದಿಂದಲೆ ಇಹವು ಜ್ಞಾನದಿಂದಲೆ ಪರವು ಜ್ಞಾನವಿಲ್ಲದಲೆ ಸಕಲವು ತನಗಿದ್ದು ಹಾನಿಕಾಣಯ್ಯ ಸರ್ವಜ್ಞ ॥
ಎತ್ತಹೋದರು ಮನವ ಹತ್ತಿಕೊಂಡೇ ಬಹುದು ಮತ್ತೊಬ್ಬ ಸೆಳೆದುಕೊಳಲರಿಯ ಜ್ಞಾನದ ಬಿತ್ತುಲೇಸಂದ ಸರ್ವಜ್ಞ ।

ಸರ್ವಜ್ಞನ ಈ ಸಂದೇಶವಾದರೂ ಎಲ್ಲ ವಸ್ತುಗಳಿಗಿಂತ ಜ್ಞಾನವೇ ಅಧಿಕವಾದುದೆಂದು ಹೇಳುತ್ತದೆ.

ಶ್ರೀ ಬಸವಣ್ಣನವರು ಜ್ಞಾನದ ಬಗ್ಗೆ ಒಂದು ಸೂತ್ರವನ್ನು ರಚಿಸಿರುತ್ತಾರೆ. "ಅರಿತರೆ ಶರಣ ಮರೆತರೆ ಮಾನವ" ಈ ಸೂತ್ರಕ್ಕೆ ದೊಡ್ಡ ಭಾಷ್ಯವನ್ನು ಬರೆಯಲು ಶಕ್ಯವಿರುತ್ತದೆ. ಬಹಳ ಮಾರ್ಮಿಕವಾಗಿ ಒಂದು ಸಾಲಿನಲ್ಲಿಯೇ ಜ್ಞಾನದ ಮಹತ್ವ ವನ್ನು ಕೊಂಡಾಡಿರುತ್ತಾರೆ.

೪೧೨

ಪ್ರಭುದೇವರು—

"ಭೂಮಿ ನಿನ್ನದಲ್ಲ ಹೇಮನಿನ್ನದಲ್ಲ ಕಾಮಿನಿ ನಿನ್ನವಳಲ್ಲ ಅದು ಜಗಕ್ಕಿಕ್ಕಿದ ವಿಧಿ ನಿನ್ನೊಡವೆವೆಂಬುದು ಜ್ಞಾನರತ್ನ ಅಂತಪ್ಪ ದಿವ್ಯರತ್ನವ ಕೆಡೆಗುಡದೆ ಆ ರತ್ನವ ನೀನಲಂಕರಿಸಿದೆಯಾದಡೆ ನಮ್ಮ ಗುಹೇಶ್ವರಲಿಂಗದಲ್ಲಿ ನಿನ್ನಿಂದಬಿಟ್ಟು ಶಿರಿವಂತರಿಲ್ಲ ಕಾಣಾ ಎಲೆ ಮನವೇ"

೪೧೩

ಸಿದ್ಧರಾಮ ಶಿವಯೋಗಿಗಳು—

"ಅರಿತವನೆಂತು ಸತ್ತನು? ಅರಿತವನೆಂತು ಹುಟ್ಟಿದನು? ಅರಿತವ ನೆಂತು ಅಘೋರ ಪಾಪಕ್ಕೆ ಒಳಗಾದನು? ಅರಿತವನೆಂತು ಪುಣ್ಯ

ಯಾದನು? ಅರಿತವನೇ ಚಿರಂಜೀವಿ ನೋಡಾ ಕಪಿಲ ಸಿದ್ಧ
ಮಲ್ಲಿಕಾರ್ಜುನಾ"

ಶ್ರೀ ಪ್ರಭುದೇವರು ಜಗತ್ತಿನಲ್ಲಿ ಹೊನ್ನು, ಹೆಣ್ಣು, ಮಣ್ಣು ನಿನ್ನದಲ್ಲ. ಆದರೆ ಜ್ಞಾನರತ್ನ ವೊಂದೇ ನಿನ್ನದು. ಆ ರತ್ನವನ್ನು ನೀನು ಅಲಂಕಾರಮಾಡಿಟ್ಟುಕೊಂಡರೆ ನಮ್ಮಗುಹೇಶ್ವರ ಲಿಂಗದಲ್ಲಿ ನೀನೇ ಹಿರಿಯನಾಗಿ ಶೋಭಿಸುವಿ ಎಂದು ಹೇಳಿರುತ್ತಾರೆ. ಶ್ರೀ ಸಿದ್ಧರಾಮ ಶಿವಯೋಗಿಗಳು ಜ್ಞಾನಿಯಾದವನಿಗೆ ಜನನ ಮರಣಗಳಿಲ್ಲ. ಅರ್ಥಾತ್ ಅವನು ಅಜರಾಮರನಾಗುವನು. ಅವನೇ ಚಿರಂಜೀವಿಯೆಂದು ಅಭಿಪ್ರಾಯಪಟ್ಟಿರುತ್ತಾರೆ.

೪೧೪

ಸ್ವತಂತ್ರಸಿದ್ಧಲಿಂಗದೇವರು—

"ಅಗ್ನಿರಜ್ಜುವಿನಿಂದ ಕಟ್ಟುವಡೆವುದೇ ಅಯ್ಯ? ಸೂರ್ಯನ ಕತ್ತಲೆ
ಬಾಧಿಸಲಾರ್ಪುದೇ ಅಯ್ಯ? ಆಕಾಶವು ರಜಧೂಮ್ರಗಳಿಂದ ಮಲಿನವಹುದೇ
ಅಯ್ಯ? ನಿಮ್ಮನರಿದ ಶಿವಯೋಗಿಗೆ ಸಂಸಾರ ಬಂಧಿಸಬಲ್ಲುದೇ?
ಹೇಳಾ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ"

ಶ್ರೀ ಸ್ವತಂತ್ರಸಿದ್ಧಲಿಂಗದೇವರಾದರೂ ಜ್ಞಾನಿಯಾದವನಿಗೆ ಸಂಸಾರ ಬಂಧಕವಿಲ್ಲ ವೆಂತಲೂ ಅವನೇ ಶ್ರೇಷ್ಠಪುರುಷನೆಂತಲೂ ಹೇಳಿದ್ದಾರೆ. ಹೀಗೆಯೇ ಅನೇಕ ಜನ ಶರಣರು ಜ್ಞಾನದ ಮಹಿಮೆಯನ್ನು ಪ್ರಶಂಸಿಸಿರುತ್ತಾರೆ.

**ಮುಂಡಕೋಪನಿಷತ್ತು**

**ನ ಚಕ್ಷುಷಾ ಗೃಹ್ಯತೇ ನಾಪೀ ವಾಚಾ ನಾನ್ಯೈರ್ದೇವೈಸ್ತಪಸಾ ।**
**ಕರ್ಮಣಾ ವಾ ಜ್ಞಾನಪ್ರಸಾದೇನ ವಿಶುದ್ಧಸತ್ವಸ್ತತಸ್ತು ತಂ ಪಶ್ಯತೇ**
**ನಿಷ್ಕಲಂ ಅಧ್ಯಾಯಮಾನಃ ॥**

ಅಂದರೆ ಪರಮಾತ್ಮನು ನೇತ್ರಗಳಿಂದಲೂ, ಮಾತಿನಿಂದಲೂ ಅಥವಾ ಬೇರೆ ಯಾವ ಇಂದ್ರಿಯಗಳಿಂದಲೂ ಪ್ರಾಪ್ಯನಾಗುವದಿಲ್ಲ. ಕೇವಲ ಧ್ಯಾನಯೋಗಿಗಳಾದ ಮಹಾತ್ಮರು ಜ್ಞಾನದ ಪ್ರಸಾದದಿಂದ ವಿಶುದ್ಧಚಿತ್ತರಾಗಿ ಅವನ ಸಾಕ್ಷಾತ್ಕಾರವನ್ನು ಹೊಂದು ತ್ತಾರೆ. ಮತ್ತು ಅದೇ ಉಪನಿಷತ್ತಿನಲ್ಲಿ—

**ಯಃ ಸರ್ವಜ್ಞಃ ಸರ್ವವಿತ್ ಯಸ್ಯೈಷ ಮಹಿಮಾ ಭುವಿ ।**
**ದಿವ್ಯೇ ಬ್ರಹ್ಮಪುರೇ ಹ್ಯೇಷವ್ಯೋಮನ್ಯಾತ್ಮಾ ಪ್ರತಿಷ್ಠಿತಃ ॥**
**ಮನೋಮಯಃ ಪ್ರಾಣಶರೀರನೇತಾ ಪ್ರತಿಷ್ಠಿತೋಽನ್ನೇ ಹೃದಯಂ ಸನ್ನಿಧಾಯ ।**
**ತದ್ವಿಜ್ಞಾನೇನ ಪರಿಪಶ್ಯಂತಿ ಧೀರಾಃ ಆನಂದರೂಪಮಮೃತಂ ಯದ್ವಿಭಾತಿ ॥**

ಯಾವ ಪರಮಾತ್ಮನು ಸರ್ವಜ್ಞನೂ, ಸರ್ವವನ್ನು ತಿಳಿದವನೂ, ಯಾವಾತನ ಮಾಹಾತ್ಮ್ಯವು ಪ್ರಕಟವಾಗುತ್ತದೆಯೋ ಅದೇ ಪರಮಾತ್ಮನು ಪ್ರಕಾಶಮಯವಾದ ಬ್ರಹ್ಮಪುರೀ ರೂಪ ಹೃದಯಾಕಾಶದಲ್ಲಿ ವಿರಾಜಮಾನನಾಗಿರುತ್ತಾನೆ. ಅವನ ಕೂಡ ಮನಸ್ಸಿನ ಉಪಾಧಿಯೂ ಇರುತ್ತದೆ. ಅಂದರೆ ಮನೋಮಯನಾಗಿರುತ್ತಾನೆ. ಪ್ರಾಣ ಮತ್ತು ಶರೀರಗಳಿಗೆ ಒಡೆಯನಾಗಿರುತ್ತಾನೆ. ಹೃದಯವನ್ನವಲಂಬಿಸಿ ಅನ್ನ ಪರಿಣಾಮ ರೂಪ ಶರೀರದಲ್ಲಿರುತ್ತಾನೆ. ಇಂತಹ ಆನಂದಮಯ, ಅಮೃತಮಯ

ಪರಪುರುಷನನ್ನು ಧೀರರಾದ ಯೋಗಿಗಳು ಶಮದಮಾದಿ ಸಾಧನಗಳಿಂದಲೂ, ಶಾಸ್ತ್ರ ಜ್ಞಾನ ದ್ವಾರದಿಂದಲೂ ಅವನ ದರ್ಶನವನ್ನು ಹೊಂದುತ್ತಾರೆ. ಅವನನ್ನು ನೋಡಿದರೆ ಆಗುವದೇನೆಂದು ಪ್ರಶ್ನಿಸಿದರೆ ಅದಕ್ಕೆ ಉತ್ತರವು ಕೆಳಗಿನ ಶ್ಲೋಕದಿಂದ ಸಿಗುತ್ತದೆ.

ಭಿದ್ಯತೇ ಹೃದಯಗ್ರಂಥಿಚ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥

ಸರ್ವಜ್ಞನಾದ ಪರಮಾತ್ಮನನ್ನು ಕಾಣುವದರಿಂದ ಹೃದಯದ ಅಜ್ಞಾನಗ್ರಂಥಿಯು ಒಡೆದುಹೋಗುತ್ತದೆ. ಎಲ್ಲ ಸಂಶಯಗಳೂ ದೂರವಾಗುತ್ತವೆ. ಸಂಚಿತ, ಆಗಾಮಿ, ಪ್ರಾರಬ್ಧ ಕರ್ಮಗಳು ನಷ್ಟವಾಗುತ್ತವೆ. ಇವೆಲ್ಲ ಜ್ಞಾನದ ಮಹಿಮೆಯ ಫಲಗಳಾಗಿರುತ್ತವೆ. ಇಂತಹ ಜ್ಞಾನವು ಗುರುಗಳ ವಾಕ್ಯದಲ್ಲಿ ವಿಶ್ವಾಸ ಮತ್ತು ಶ್ರದ್ಧಾ ತತ್ವಜ್ಞಾನಿಗಳಾದ ಗುರುಗಳ ಆಶ್ರಯಮಾಡುವದರಿಂದಲೂ ಪ್ರಾಪ್ತವಾಗುತ್ತದೆ.

## ಶ್ರೀ ಭಗವದ್ಗೀತೆಯಲ್ಲಿ

ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।
ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿ ಗಚ್ಛತಿ ॥
ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ವದರ್ಶಿನಃ ॥
ನಹಿ ಜ್ಞಾನೇನಸದೃಶಂ ಪವಿತ್ರಮಿಹ ವಿದ್ಯತೇ ।
ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥

ಭಗವದ್ಭಕ್ತಿಯಲ್ಲಿ ಆಸಕ್ತನಾದವನಿಗೂ, ಜಿತೇಂದ್ರಿಯನಾದವನಿಗೂ ಜ್ಞಾನದ ಪ್ರಾಪ್ತಿಯಾಗುತ್ತದೆ. ಜ್ಞಾನಿಯಾದ ಮನುಷ್ಯನು ಶೀಘ್ರವಾಗಿ ಉತ್ಕೃಷ್ಟವಾದ ಶಾಂತಿಯನ್ನು ಹೊಂದುತ್ತಾನೆ. ಈ ಜ್ಞಾನವು ತತ್ವದರ್ಶಿಗಳಾದ ಮಹಾಪುರುಷರ ಸೇವೆಯಿಂದಲೂ ಮತ್ತು ಅವರ ಕೂಡ ಜಿಜ್ಞಾಸಮಾಡುವದರಿಂದಲೂ ಲಾಭವಾಗುತ್ತದೆ. ಹೀಗಾಗುವದರಿಂದ ಅವರು ಸಂತುಷ್ಟರಾಗಿ ಜ್ಞಾನದ ಉಪದೇಶ ಮಾಡುತ್ತಾರೆ. ಜ್ಞಾನಕ್ಕೆ ಸಮಾನವಾದ, ಪವಿತ್ರವಾದ ವಸ್ತುವು ಈ ಲೋಕದಲ್ಲಿ ಬೇರೊಂದಿಲ್ಲ. ಯೋಗಿಯಾದ ಮನುಷ್ಯನು ಯೋಗದಲ್ಲಿ ಸಿದ್ಧಿಲಾಭವನ್ನು ಹೊಂದಿ ಕಾಲಾಂತರದಲ್ಲಿ ಈ ಶ್ರೇಷ್ಠವಾದ ಪರವಸ್ತುವಿನ ಲಾಭವನ್ನು ಹೊಂದುತ್ತಾನೆ.

ಸ್ನಾತಂ ತೇನ ಸಮಸ್ತ ತೀರ್ಥಸಲಿಲೇ ಸರ್ವಾಪಿದತ್ತಾವನಿರ್ಯ ।
ಜ್ಞಾನಾನಾಂ ಚ ಕೃತಂ ಸಹಸ್ರಮಖಿಲಂ ದೇವಾಶ್ಚ ಸಂಪೂಜಿತಾಃ ॥
ಸಂಸಾರಾಶ್ಚ ಸಮುದ್ಧೃತಾಃ ಸ್ವಪಿತರಸ್ತ್ರೈಲೋಕ್ಯಪೂಜ್ಯೋಪ್ಯಸೌ ।
ಯಸ್ಯ ಬ್ರಹ್ಮವಿಚಾರಣೇ ಕ್ಷಣಮಪಿ ಸ್ಥೈರ್ಯಂ ಮನಃ ಪ್ರಾಪ್ನುಯಾತ್ ॥

ಯಾವಾತನ ಮನಸ್ಸು ಜ್ಞಾನದ ಅವಲಂಬನೆಯಿಂದ ಕ್ಷಣಹೊತ್ತಾದರೂ ಬ್ರಹ್ಮವಿಚಾರದಲ್ಲಿ ಸ್ಥಿರವಾಗುತ್ತದೆಯೋ ಅವನಿಗೆ ಎಲ್ಲ ತೀರ್ಥಗಳಲ್ಲಿ ಸ್ನಾನ, ಎಲ್ಲ ಲೋಕಗಳ ದಾನ, ಸಾವಿರ ಯಜ್ಞಮಾಡಿದ ಫಲ ಮತ್ತು ಎಲ್ಲ ದೇವತೆಗಳನ್ನು ಪೂಜಿಸಿದ ಫಲ ಸಿಗುತ್ತದೆ. ಅವನ ಪಿತೃ ಪಿತಾಮಹಾದಿಗಳು ಸಂಸಾರದಿಂದ ಉದ್ಧಾರವಾಗುತ್ತಾರೆ ಮತ್ತು ಅವನು ಮೂರು ಲೋಕಗಳಲ್ಲಿ ಪೂಜ್ಯವಂತನಾಗುತ್ತಾನೆ. ಷಡ್ ದರ್ಶನಗಳಲ್ಲಿ ಜ್ಞಾನದ ಮಹತ್ವವು ಅಧಿಕವಾಗಿರುತ್ತದೆ.

ಶ್ರೀ ಬಸವಣ್ಣನವರೇ ಮೊದಲಾದವರು ಶಿವಜ್ಞಾನದ ಹೊರತು ಬೇರೆ ಜ್ಞಾನಕ್ಕೆ ಬೆಲೆಯನ್ನು ಕೊಟ್ಟಿರುವದಿಲ್ಲ.

೪೧೫

ಬಸವಣ್ಣನವರು—

"ಶ್ವಾನಜ್ಞಾನ, ಗಜಜ್ಞಾನ, ಕುಕ್ಕುಟಜ್ಞಾನವೆಂಬ ಜ್ಞಾನತ್ರಯ ಗಳೇನಾದವು ಕೂಡಲಸಂಗಮದೇವ ನಿಮ್ಮನರಿಯದ ಜ್ಞಾನವೆಲ್ಲ ಅಜ್ಞಾನ"

ಶಿವಜ್ಞಾನಸಂಪನ್ನನಾಗದಿದ್ದರೆ ಅವನಿಗೆ ಉಳಿದ ಜ್ಞಾನಗಳಿದ್ದರೂ ಎಲ್ಲ ವ್ಯರ್ಥವಾದವು ಗಳೆಂದು ಶರಣರ ತತ್ವವಾಗಿರುತ್ತದೆ.

೪೧೬

ಬಸವಣ್ಣನವರು—

"ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯ್ಯ ಜ್ಯೋತಿಯ ಬಲದಿಂದ ತಮಂಧದ ಕೇಡ ನೋಡಯ್ಯ ಸತ್ಯದ ಬಲದಿಂದ ಅಸತ್ಯದ ಕೇಡ ನೋಡಯ್ಯ ಪರುಷದ ಬಲದಿಂದ ಅವಲೋಹದ ಕೇಡ ನೋಡಯ್ಯ ಕೂಡಲಸಂಗನ ಶರಣರ ಅನುಭಾವದಿಂದ ಎನ್ನ ಮನದ ಕೇಡ ನೋಡಯ್ಯ"

ಮಾನವನು ಜ್ಞಾನವಂತನಾದರೆ ಅಜ್ಞಾನತನದ ಕೆಟ್ಟ ಕೃತ್ಯಗಳೆಲ್ಲ ನಷ್ಟವಾಗಿ ಅವನು ಮನುಷ್ಯತ್ವವನ್ನು ಪಡೆದವನೆಂದು ಹೇಳಿಸಿಕೊಳ್ಳಲು ಯೋಗ್ಯನಾಗುತ್ತಾನೆ. ಮನುಷ್ಯನು ಉತ್ತಮಜ್ಞಾನಿಯಾಗಬೇಕಾದರೆ ಅವನಿಗೆ ಯೋಗ್ಯವಾದ ಸಂಗವೂ ಬೇಕಾಗುತ್ತದೆ.

೪೧೭

"ಅಯ್ಯಾ ಸಜ್ಜನರ ಸದ್ಭಾವರ ಸಂಗದಿಂದ ಮಹಾನುಭಾವರ ಕಾಣಬಹುದಯ್ಯ ಮಹಾನುಭಾವರ ಸಂಗದಿಂದ ಶ್ರೀ ಗುರುವನರಿಯ ಬಹುದು ಲಿಂಗವನರಿಯಬಹುದು ಜಂಗಮವನರಿಯಬಹುದು ತನ್ನ ತಾನರಿಯಬಹುದು ಪ್ರಸಾದವನರಿಯಬಹುದು ಇದುಕಾರಣ ಸದ್ಭಕ್ತರ ಸಂಗವನೇ ಕರುಣಿಸು ಕೂಡಲಸಂಗಮದೇವಾ ನಿಮ್ಮ ಧರ್ಮ"

೪೧೮

"ಮರಮರ ಮಥನದಿಂದ ಅಗ್ನಿ ಹುಟ್ಟಿ ಆ ಮರನೆಲ್ಲವ ಸುಡ ದಿಪ್ಪುದೇ? ಮಹಾನುಭಾವರ ಸಂಗದಿಂದ ಜ್ಞಾನಾಗ್ನಿ ಹುಟ್ಟಿ ಎನ್ನ ತನು ಗುಣವೆಲ್ಲವ ಸುಡದಿಪ್ಪುದೇ ? ಇದುಕಾರಣ ಮಹಾನುಭಾವರ ತೋರಿಸು ಕೂಡಲಸಂಗಮದೇವಾ"

ಜ್ಞಾನಿಗಳಾದವರು ಹೇಗೆ ಇರಬೇಕೆಂಬುವ ಬಗ್ಗೆ ಶರಣರು ಬಹಳ ಸೊಗಸಾದ ವಚನ ಹೇಳಿರುತ್ತಾರೆ.

೪೧೯

"ಜ್ಞಾನಿಗಳು ತಾವಾದಬಳಿಕ ಮುಕುರದ ಬಿಂಬದಂತಿರಬೇಕು. ಜ್ಞಾನಿಗಳು ತಾವಾದಬಳಿಕ ಜ್ಞಾನದಲ್ಲಿ ಕನಕದಂತಿರಬೇಕು. ಜ್ಞಾನಿಗಳು

ತಾನಾದಬಳಿಕ ಸಂಶಯರಹಿತರಾಗಿರಬೇಕು. ಜ್ಞಾನಿಗಳು ತಾವಾದ ಬಳಿಕ ಪರಿಪೂರ್ಣ ಜಗತ್ತೆಂದು ಅರಿಯಬೇಕು. ಜ್ಞಾನಿಗಳು ತಾವಾದ ಬಳಿಕ ಪಾಪವಾಸನೆ ತೋರದಿರಬೇಕು. ಜ್ಞಾನಿಗಳು ತಾವಾದಬಳಿಕ ಅನ್ಯರ ನುಡಿಗೊಳಗಾಗಬಾರದು. ಜ್ಞಾನಿಗಳು ತಾವಾದಬಳಿಕ ಅನ್ಯರ ನಿಂದೆಗೆ ಒಳಗಾಗಬಾರದು. ಜ್ಞಾನಿಗಳು ತಾವಾದಬಳಿಕ ಗುರುಹಿರಿಯರಿಗಂಜಿ ನಡೆಯಬೇಕು. ಜ್ಞಾನಿಗಳು ತಾವಾದಬಳಿಕ ಅನ್ಯರ ಸ್ತ್ರೀ ಮಾತೆಯಂತಿರಬೇಕು. ಜ್ಞಾನಿಗಳು ತಾವಾದಬಳಿಕ ವಿಶ್ವಾಸಘಾತವ ಮಾಡಬಾರದು. ಜ್ಞಾನಿಗಳು ತಾವಾದಬಳಿಕ ಪರದೂಷಣೆಯ ಮಾಡಬಾರದು. ಜ್ಞಾನಿಗಳು ತಾವಾದಬಳಿಕ ಪರದ್ರವ್ಯವ ಅಪಹರಿಸಬಾರದು. ಜ್ಞಾನಿಗಳು ತಾವಾದ ಬಳಿಕ ಗುರುಸೇವೆ ಲಿಂಗಪೂಜೆ ಜಂಗಮದಾಸೋಹವ ಬಿಡಬಾರದು. ಜ್ಞಾನಿಗಳು ತಾವಾದಬಳಿಕ ನುಡಿಕೊಟ್ಟು ತಪ್ಪಬಾರದು. ಜ್ಞಾನಿಗಳು ತಾವಾದಬಳಿಕ ಅನ್ಯರ ಹಂಗಿಗೊಳಗಾಗಬಾರದು. ಜ್ಞಾನಿಗಳು ತಾವಾದ ಬಳಿಕ ವಚನವ ಕೊಡಬಾರದು. ಜ್ಞಾನಿಗಳು ತಾವಾದಬಳಿಕ ಅಸತ್ಯವ ನುಡಿಯಬಾರದು. ಜ್ಞಾನಿಗಳು ತಾವಾದಬಳಿಕ ರಾಜರಮುಂದೆ ಅಸತ್ಯ ಸಾಕ್ಷಿ ನುಡಿಯಬಾರದು. ಜ್ಞಾನಿಗಳು ತಾವಾದಬಳಿಕ ಜನರ ಅಪವಾದಕ್ಕೆ ಅನುಕೂಲರಾಗಬಾರದು. ಜ್ಞಾನಿಗಳು ತಾವಾದಬಳಿಕ ಮತಾಭಿಮಾನವ ತೋರಬಾರದು. ಜ್ಞಾನಿಗಳು ತಾವಾದಬಳಿಕ ಕಪಿಲಸಿದ್ಧ ಮಲ್ಲಿಕಾರ್ಜುನಗೆ ಅಪಮಾರ್ಗದಿಂ ಚ್ಯುತನಾಗಿರಬೇಕು. ಇದರಂತೆ ವರ್ತಿಸಬೇಕು ಕೇಳಾ''

೪೨೦

ಬಸವಣ್ಣನವರು ಜ್ಞಾನಯೋಗದಲ್ಲಿ—

**ಶೂನ್ಯ ಸಂಪಾದನೆ—ಪುಟ ೧೩೯**

''ಜಂಗಮವೇ ಜ್ಞಾನರೂಪು ಭಕ್ತನೇ ಆಚಾರರೂಪೆಂಬುದು ತಪ್ಪದು ನೋಡಾ ಅಯ್ಯ ನಾನು ನಿಮ್ಮಲ್ಲಿ ಆಚಾರಿಯಾದಡೇನಯ್ಯ ಜ್ಞಾನವಿಲ್ಲದನ್ನಕ್ಕರ ತಲೆಯಿಲ್ಲದ ಮುಂಡದಂತೆ ಉದಯವಾಗದ ಮುನ್ನವೆ ತಲೆದೋರುವ ಆಚಾರವುಂಟೆ? ಜಗದೊಳಗೆ ಜ್ಞಾನದಿಂದ ಆಚಾರ ಜ್ಞಾನದಿಂದ ಅನುಭವ ಜ್ಞಾನದಿಂದ ಪ್ರಸಾದವಲ್ಲದೆ ಜ್ಞಾನವನುಳಿದು ತೋರುವ ಘನವ ಕಾಣಿಸು ಎನ್ನ ಆಚಾರಕ್ಕೆ ನೀನು ಜ್ಞಾನರೂಪಾದಕಾರಣ ಸಂಗನ ಬಸವಣ್ಣನೆಂಬ ಪೆಸರನ್ನು ಪಡೆದೆನು ಅನಾದಿಪರಶಿವನು ನೀನೇಯಾಗಿ ಘನ ಚೈತನ್ಯಾತ್ಮಕನೆಂಬ ಮಹಾಜ್ಞಾನವು ನೀನೇಯಾದೆಯಲ್ಲದೆ ನಾನೆತ್ತ ಶಿವತತ್ವವೆತ್ತವಯ್ಯ ಕೂಡಲಸಂಗಮದೇವರ ಸಾಕ್ಷಿಯಾಗಿ ನಾನು ಪ್ರಭುದೇವರ ತೊತ್ತಿನಮಗನೆಂಬುದು ಮೂರು ಲೋಕವೆಲ್ಲ ಬಲ್ಲುದು ಕಾಣಾ ಪ್ರಭುವೇ''

ಶ್ರೀ ಬಸವಣ್ಣನವರು ಮುಖ್ಯವಾಗಿ ಭಕ್ತಿಯೋಗದಿಂದ ಜನಗಳಲ್ಲಿ ಶಿವಭಕ್ತಿಯನ್ನು ಪ್ರಚಾರಮಾಡಿ ಭಕ್ತಿಭಾಂಡಾರಿಗಳಾದರೂ ಅವರು ಜ್ಞಾನ ಕರ್ಮ ಈ ಎರಡೂ ಯೋಗ

ಗಳನ್ನು ತಮ್ಮ ಭಕ್ತಿಯೋಗದಲ್ಲಿ ಸಮನ್ವಯ ಮಾಡಿಕೊಂಡಿರುತ್ತಾರೆ. ಜ್ಞಾನಯೋಗವು ಎಷ್ಟೇ ಶ್ರೇಷ್ಠವೆನಿಸಿಕೊಂಡರೂ ಅದಕ್ಕೆ ಕರ್ಮಯೋಗದಿಂದ ಸಂಯೋಗವಿರಲೇಬೇಕು. ಇಲ್ಲದಿದ್ದರೆ ಪ್ರಫುಲ್ಲಿತವಾಗಲಾರದು.

ದೇವರು ನಿಜಜ್ಞಾನಿಗಳಲ್ಲಿ ಮಾತ್ರ ಇರುತ್ತಾನೆಂಬುವದಕ್ಕೆ ಶ್ರೀ ಮೋಳಿಗಿ ಮಾರಯ್ಯನವರ ಪುಣ್ಯಾಂಗನೆಯಾದ ಮಹಾದೇವಿಯಮ್ಮನು ತನ್ನದೊಂದು ವಚನದಲ್ಲಿ

೪೨೧

**ಮಹಾದೇವಿಯಮ್ಮನ ವಚನ—ಪುಟ ೧೧**

"ಮಣ್ಣನಿತ್ತು ಕಂಡಿಹೆನೆಂದರೆ ಜಗಭರಿತ ನೀನು ಹೊನ್ನನಿತ್ತು ನಿಮ್ಮ ಕಂಡಿಹೆನೆಂದರೆ ಹಿರಣ್ಯಮೂರ್ತಿ ನೀನು ಹೆಣ್ಣು ಕೊಟ್ಟು ನಿಮ್ಮ ಕಂಡಿಹೆನೆಂದಡೆ ತ್ರಿವಿಧ ಶಕ್ತಿಮೂರ್ತಿ ನೀನು ಎನಗೇನು ನಿನಗಿತ್ತ ಕಾಂಬಕಾಣಿಕೆ ನೀನು ಸಿಕ್ಕುವದಕ್ಕೆ ಕ್ರೀಯಲ್ಲಿ ನಿರತ ಸದ್ಭಾವದಲ್ಲಿ ಶುದ್ಧ ಹಿಡಿದುದ ಬಿಡದೆ ಬಿಟ್ಟುದ ಹಿಡಿಯದೆ ನಿಶ್ಚಯರಾದ ನಿಜಜ್ಞಾನಿಗಳಲ್ಲಿ ಬೆಚ್ಚಂತಿದ್ದದ್ದೆ ನೀನು ಅಲ್ಲಿ ತಪ್ಪದಿಪ್ಪೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ"

೪೨೨

ಅಖಂಡೇಶ್ವರ ದೇವರು ಜ್ಞಾನವೆಂಬುವದು ಎಲ್ಲರಿಗೂ ಬೇಕೆನ್ನುವ ಬಗ್ಗೆ—

"ಗುರುವಿಗಾದರೂ ಅರುಹು ಆಚಾರ ಸತ್ಕ್ರಿಯೆ ಬೇಕು ಲಿಂಗಕ್ಕಾದರೂ ಅರುಹು ಆಚಾರ ಸತ್ಕ್ರಿಯೆ ಬೇಕು ಜಂಗಮಕ್ಕಾದರೂ ಅರುಹು ಆಚಾರ ಸತ್ಕ್ರಿಯೆ ಬೇಕು ಅದೇನು ಕಾರಣವೆಂದಡೆ ಅರುಹು ಆಚಾರ ಸನ್ನಿಹಿತ ಶಿವನಿರ್ಪನಾಗಿ ಅರುವುಗೆಟ್ಟು ಆಚಾರದಪ್ಪಿ ಸತ್ಕ್ರಿಯೆ ಹೀನನಾಗಿರ್ಪರು ಸಲ್ಲರಯ್ಯ ಶಿವಪಥಕ್ಕೆ ಅಖಂಡೇಶ್ವರಾ"

ಮೇಲಿನ ವಚನದ ಅಭಿಪ್ರಾಯವು ಜ್ಞಾನದ ಕೂಡ ಕ್ರಿಯೆಯು ಅವಶ್ಯಕತೆಯುಂಟು. ಜ್ಞಾನ, ಆಚಾರ, ಸತ್ಕ್ರಿಯೆ ಮೂರೂ ಬೇಕೆಂದು ಪ್ರತಿಪಾದಿಸಿರುತ್ತಾರೆ. ಎಲ್ಲಿ ಜ್ಞಾನ, ಜ್ಞಾನಕ್ಕೆ ತಕ್ಕ ಆಚಾರ ಮತ್ತು ಆಚಾರಕ್ಕೆ ತಕ್ಕ ಸತ್ಕ್ರಿಯೆ ಇರುತ್ತದೆಯೋ ಅಲ್ಲಿಯೇ ಶಿವನಿರುತ್ತಾನೆ. ಎಲ್ಲಿ ಜ್ಞಾನವಿಲ್ಲವೊ, ಜ್ಞಾನದ ಕೂಡ ಆಚಾರವಿಲ್ಲವೊ ಅದಕ್ಕೆ ತಕ್ಕಂತೆ ಕ್ರಿಯೆಯಿಲ್ಲವೋ ಅವರಿಗೆ ಶಿವನೆಂದಿಗೂ ಮೆಚ್ಚಲಾರನೆಂದು ವಚನಕಾರರ ಸ್ಪಷ್ಟಾಭಿಪ್ರಾಯವಾಗಿರುತ್ತದೆ.

೪೨೩

"ಅಗ್ನಿ ಸುಡಲಲ್ಲದೆ ಸುಳಿಯಲರಿಯದು ವಾಯು ಸುಳಿವುದಲ್ಲದೆ ಸುಡಲರಿಯದು ಅಗ್ನಿ ವಾಯುವ ಕೂಡಿದಲ್ಲದೆ ಅಡಿ ಇಡಲರಿಯದು ಈ ಪರಿಯಂತೆ ನರರರಿವರೆ ಕ್ರಿಯಾ ಜ್ಞಾನಭೇದ ರಾಮನಾಥಾ"

ಇಲ್ಲಿ ವಚನಕಾರರು ಕ್ರಿಯಾ ಜ್ಞಾನಗಳೆರಡೂ ಬೇಕೆಂದು ಪ್ರತಿಪಾದಿಸಿರುತ್ತಾರೆ. ಈ ವಿಷಯವನ್ನು ಇನ್ನೊಂದು ಪ್ರಕರಣದಲ್ಲಿ ಚನ್ನಾಗಿ ವಿವರಿಸಿರುವದರಿಂದ ಇಲ್ಲಿ ಹೆಚ್ಚಾಗಿ ಹೇಳಲಾಗುವದಿಲ್ಲ. ಇನ್ನೊಂದು ವಚನವನ್ನು ಮಾತ್ರ ಈ ವಿಷಯದಲ್ಲಿ ಕೊಡುತ್ತೇವೆ.

೪೨೪

“ಕ್ರಿಯೆ ಮರೆದಲ್ಲಿ ಅರಿವು ಹೀನವಾಗಿಪ್ಪುದು ಅರಿವು ಮರೆದಲ್ಲಿ ಜ್ಞಾನ ಹೀನವಾಗಿಪ್ಪುದು ಜ್ಞಾನವ ಮರೆದಲ್ಲಿ ಬೆಳಗಿನ ಕಳೆ ಹೋಯಿತ್ತು ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವು ಅವರಿಗೆ ಮರೆಯಾಗಿ ತೊಲಗಿತ್ತು”

೪೨೫

ತೋಂಟದ ಸಿದ್ಧಲಿಂಗ ಯತಿಗಳು—

**ಸಿದ್ಧೇಶ್ವರವಚನ–ಪುಟ ೧೫೬**

“ಜ್ಞಾನಜ್ಯೋತಿಯ ಉದಯ ಭಾನುಕೋಟಿಸೂರ್ಯರ ಬೆಳಗು ನೋಡಾ ತನುತ್ರಯ ಜೀವತ್ರಯ ಅವಸ್ಥಾತ್ರಯ ಆದಿಯಾದ ಎಲ್ಲ ತೋರಿಕೆಯನೊಳಕೊಂಡು ಜ್ಯೋತಿ ಕರ್ಪುರವನು ಬೆರೆದಂತಿದೆ ನೋಡಾ ಷಡಾಧಾರಲಿಂಗದಲ್ಲಿ ತೊಳಗಿ ಬೆಳಗಿ ಬ್ರಹ್ಮರಂಧ್ರದಲ್ಲಿ ವಿಶ್ರಾಂತಿಯ ನೆಯ್ದಿದ್ದ ಅಖಂಡ ಜ್ಞಾನಜ್ಯೋತಿ ನೋಡಾ ಆ ಮಹಾ ಪ್ರಕಾಶ ಬೆಳಗಿನೊಳಗೆ ಮಹತ್ ಮಹವ ಕಂಡು ಪರಕೆ ಪರವಾಗಿ ಎನ್ನಿಂದ ಅನ್ಯವಾಗಿ ಮತ್ತೊಂದು ಪರವಿಲ್ಲದೆ ನಾನೇ ಪರವಸ್ತುವಾಗಿದ್ದೆನು ಕಾಣಾ ಮಹಾಲಿಂಗ ಗುರು ಸಿದ್ಧೇಶ್ವರಪ್ರಭುವೇ”

ವೀರಶೈವ ಸಿದ್ಧಾಂತವು ಜ್ಞಾನ ಕ್ರಿಯೋಭಯಾತ್ಮಕವಾಗಿರುವದರಿಂದ ಈ ಜ್ಞಾನಪ್ರಕರಣದಲ್ಲಿ ಕ್ರಿಯೆಯ ಅವಶ್ಯಕತೆಯು ಬೇಕೆಂಬುದನ್ನು ಇಲ್ಲಿ ಕೊಂಚಮಟ್ಟಿಗೆ ಹೇಳಿದ್ದೇವೆ.

ಹೀಗೆ ಶ್ರೀ ಬಸವಣ್ಣನವರು ಧ್ಯಾನ, ಕ್ರಿಯಾ, ಭಕ್ತಿ, ಜ್ಞಾನ ಇವುಗಳೆಲ್ಲವನ್ನೂ ಚನ್ನಾಗಿ ಅರಿತು ಆಚರಿಸಿ, ಜನಗಳಿಗೆ ಬೋಧೆಯನ್ನು ಮಾಡಿ, ಸರ್ವಾರ್ಪಣ ಭಾವನೆಯಿಂದ ಶುದ್ಧವಾದ ಕ್ರಿಯಾದಿಗಳನ್ನು ಆಚರಿಸಿ ಲೋಕದಲ್ಲಿ ವಂದ್ಯರಾಗಿರುತ್ತಾರೆ. ಅವರು ಅದ್ಭುತ ಕಾರ್ಯಗಳನ್ನು ಮಾಡಿದರೂ ಜನಗಳಿಗೆ ಜ್ಞಾನಬೋಧನೆಯನ್ನು ಮಾಡುವದನ್ನು ಬಿಡಲಿಲ್ಲ. ಜ್ಞಾನವೇ ಶ್ರೇಷ್ಠವೆಂಬುವದಕ್ಕೆ ಇನ್ನೂ ಬೇಕಾದಷ್ಟು ಉಪನಿಷತ್ತುಗಳಲ್ಲಿ ಪ್ರಮಾಣಗಳು ಸಿಗುತ್ತವೆ. ಅವುಗಳೇ ಈ ಪ್ರಕರಣಕ್ಕೆ ತಲೆಭಾರವಾಗಬಾರದೆಂದು ಬಿಟ್ಟಿರುತ್ತೇವೆ.

ಶ್ರೀ ಬಸವಣ್ಣನವರು ಯಾವ ಕಾರ್ಯವನ್ನೇ ಮಾಡಲಿ ಮೊದಲು ತಿಳಿದು ಆಚರಿಸಿ ಅಳವಡಿಸಿಕೊಂಡು, ಜನಗಳಲ್ಲಿ ಪ್ರಸಾರಣೆಯನ್ನು ಮಾಡಿ ಲೋಕದಲ್ಲಿ ಮೇಲ್ಮೆಯನ್ನು ಹೊಂದಿದರು. ಜ್ಞಾನದ ಬಗ್ಗೆ ಅವರು ಇನ್ನೂ ಅನೇಕ ವಚನಗಳನ್ನು ಹೇಳಿರುತ್ತಾರೆ. ಶ್ರೀ ಬಸವಣ್ಣನವರು ಜಗತ್ತಿನೊಳಗಣ ಶ್ರೇಷ್ಠಜ್ಞಾನಿಗಳಲ್ಲಿ ಒಬ್ಬರಾಗಿರುತ್ತಾರೆ.

# ಹತ್ತನೆಯ ಪ್ರಕರಣ

## ಬಸವಣ್ಣನವರ ಲಿಂಗನಿಷ್ಠೆ

ಶ್ರೀ ಬಸವಣ್ಣನವರ ಲಿಂಗನಿಷ್ಠೆಯು ಅತ್ಯಂತ ಮಹತ್ವದ್ದಾಗಿರುತ್ತದೆ. ಲಿಂಗ ಪೂಜೆಯ ಶ್ರೇಷ್ಠತೆಯನ್ನು ಭೂಲೋಕದಲ್ಲಿ ಸ್ಥಾಪಿಸಿ ಅದರ ಪ್ರತಿಷ್ಠೆಯನ್ನು ಸಾವಿರಾರು ವರ್ಷಗಳಿಂದ ಮಾಡಿದವರಲ್ಲಿ ಬಸವಣ್ಣನವರಿಗೆ ಪ್ರಥಮ ಸ್ಥಾನವಿರುತ್ತದೆ. ಇವರ ಸುಸಂಘಟಿತವಾದ ಈ ಪ್ರಚಾರಕಾರ್ಯವು ಶಿವಾನುಭವ ಮಂಟಪದ ಮೂಲಕ ಪ್ರಚಂಡತರವಾಗಿ ಹರಡಿತು. ಲಿಂಗವಂತ ಮತದಲ್ಲಿ ಇಷ್ಟಲಿಂಗವೇ ಪ್ರಾಮುಖ್ಯ ವಾದುದು. ಈ ಇಷ್ಟಲಿಂಗವನ್ನು ಆಚಾರನಿಷ್ಠರೂ, ಶಿವಭಕ್ತಿಸಂಪನ್ನರಾದವರೆಲ್ಲರೂ ಷಡಧ್ವಶೋಧನೆಪೂರ್ವಕ ಗುರುಮುಖದಿಂದ ಧರಿಸಿಕೊಳ್ಳಬಹುದೆಂಬುವ ಸಮತಾ ಭಾವನೆಯ ತತ್ವವನ್ನು ಜನರ ಮನಸ್ಸಿನಲ್ಲಿ ಪ್ರತಿಬಿಂಬಿಸುವಂತೆ ಮಾಡಿದರು. ಇದರ ಫಲವಾಗಿ ಉಚ್ಚನೀಚತ್ವವಳಿದು ಶಿವಭಕ್ತಿಯು ಜನಸಾಮಾನ್ಯರಲ್ಲಿ ಪ್ರಸಾರವಾಗಿ ಲೋಕಕಲ್ಯಾಣವಾಗಬೇಕೆಂಬುವದೇ ಶ್ರೀ ಬಸವಣ್ಣನವರ ಹೆಬ್ಬಯಕೆಯಾಗಿದ್ದಿತು. ಲಿಂಗನಿಷ್ಠೆಯ ಬಗ್ಗೆ—

**ಸೂಕ್ಷ್ಮಾಗಮ—ಸಪ್ತಮ ಪಟಲ, ಪುಟ ೮೮**

**ಲಿಂಗಭಕ್ತಿರ್ಲಿಂಗಪೂಜಾ ಲಿಂಗಶೇವಾ ಪರಾಸ್ತಥಾ ॥ ೫೭ ॥**
**ಲಿಂಗಧ್ಯಾನಂ ಲಿಂಗಮನೋರ್ಲಿಂಗಚರ್ಯಾ ಪರೌಕರೌ ।**
**ಲಿಂಗಶೃತಿಪರೇ ಶ್ರೋತ್ರೇ ಲಿಂಗಾರ್ಪಿತ ರಸಾದರಃ ॥ ೫೮ ।**
**ಲಿಂಗನಿರ್ಮಾಲ್ಯಸುರಭಿರ್ಲೋಭೋ ಘ್ರಾಣಸ್ಯ ಪಾರ್ವತಿ ।**
**ಲಿಂಗಾಲಂಕಾರ ಸಂದರ್ಶನಾಸಕ್ತೇ ಲೋಚನೇಪಿ ಚ ॥ ೫೯ ॥**
**ಲಿಂಗಪ್ರದಕ್ಷಿಣಪರೌಪಾದೌ ಚ ಗಿರಿಸಂಭವೇ ।**
**ಲಿಂಗಸ್ಯ ಪುರತೋ ನಿತ್ಯಂ ತದರ್ಥಂ ಚಾಂಗಚೇಷ್ಟನಂ ॥ ೬೦ ॥**
**ಲಿಂಗಾರ್ಥದತ್ತ ಸರ್ವಸ್ವಂ ಲಿಂಗನಿಷ್ಠೇತಿ ಗೀಯತೇ ॥**

ಅಂದರೆ—ಲಿಂಗದಲ್ಲಿ ಭಕ್ತಿಯುಳ್ಳವನಾಗಿಯೂ, ಲಿಂಗಪೂಜೆಯಲ್ಲಿ ತತ್ಪರನಾಗಿಯೂ, ಲಿಂಗದ ಶೇವೆಯಲ್ಲಿ ಆಸಕ್ತನಾಗಿಯೂ ಇರತಕ್ಕದ್ದು. ಅವನ ಕಿವಿಗಳು ಲಿಂಗದ ವಿಷಯವನ್ನು ಕೇಳುವದರಲ್ಲಿಯೇ ತೊಡಗಿರಬೇಕು. ಲಿಂಗಕ್ಕೆ ಆದರದಿಂದ ಅರ್ಪಿಸಲ್ಪಟ್ಟ ರಸಾದಿಗಳಲ್ಲಿ ಪ್ರೇಮವುಳ್ಳವನಾಗಿರಬೇಕು. ಎಲೌ ಪಾರ್ವತಿಯೇ! ಲಿಂಗಕ್ಕೆ ಅರ್ಪಿಸಲ್ಪಟ್ಟ ಸುಗಂಧಪುಷ್ಪಗಳ ವಾಸನೆಯನ್ನು ತೆಗೆದುಕೊಳ್ಳುವದರಲ್ಲಿಯೇ ಅವನ ನಾಶಿಕವು ತೊಡಗಿರಬೇಕು. ಲಿಂಗಕ್ಕೆ ಮಾಡಿದ ಅಲಂಕಾರಗಳನ್ನು ನೋಡುವದರಲ್ಲಿಯೇ ನೇತ್ರಗಳು ಆಸಕ್ತವಾಗಿರಬೇಕು. ಲಿಂಗದ ಪ್ರದಕ್ಷಿಣೆಯನ್ನು ಮಾಡುವದರಲ್ಲಿ ಪಾದ ಗಳು ಕೂಡಿರಬೇಕು. ಯಾವಾಗಲೂ ಲಿಂಗದ ಎದುರಿಗೆ ಅವನ ಎಲ್ಲ ಅವಯವಗಳ ವ್ಯಾಪಾರವು ನಡೆಯುತ್ತಿರಬೇಕು. ಲಿಂಗದ ಸಲುವಾಗಿ ತನ್ನ ಸರ್ವಸ್ವವನ್ನೂ ಅರ್ಪಿಸಬೇಕು. ಇಂತಹ ಕಾರ್ಯಗಳನ್ನು ಮಾಡಿದರೆ ಅವನು ಲಿಂಗನಿಷ್ಠನೆಂದು ಹೇಳಿಸಿಕೊಳ್ಳುವನು.

ಇಂತಹ ಲಿಂಗನಿಷ್ಠತೆಯು ಬಸವಣ್ಣನವರಲ್ಲಿ ಪರಿಪೂರ್ಣವಾಗಿತ್ತೆಂಬುದು ಅವರು ಮಾಡಿದ ಕಾರ್ಯಗಳಿಂದಲೂ, ಅವರ ವಚನಗಳಿಂದಲೂ ಚನ್ನಾಗಿ ವ್ಯಕ್ತವಾಗುತ್ತದೆ.

ಇಷ್ಟಲಿಂಗಪೂಜೆಯು ಬಸವೇಶ್ವರರಿಗಿಂತಲೂ ಮೊದಲಿನಿಂದ ನಡೆಯುತ್ತ ಬಂದಿದ್ದರೂ ಬಸವಣ್ಣನವರ ಕಾಲಕ್ಕೆ ಅದಕ್ಕೊಂದು ಮೂರ್ತಸ್ವರೂಪ ಬಂದಿತೆಂಬುವದು ಇತಿಹಾಸದಿಂದಲೂ, ವೀರಶೈವ ಶರಣರ ಆಚರಣೆಯಿಂದಲೂ ತಿಳಿದುಬರುತ್ತದೆ. ಲಿಂಗಪೂಜೆಯು ಸಾಮಾನ್ಯವಾಗಿ ಭರತಖಂಡದಲ್ಲಿಯೂ, ಜಗತ್ತಿನ ಇನ್ನಿತರ ಭಾಗಗಳಲ್ಲಿಯೂ ಅನೇಕ ಶತಮಾನಗಳಿಂದ ನಡೆದುಬಂದಿರುತ್ತದೆಂಬುವದನ್ನು ಅನೇಕ ಪ್ರಮಾಣಗಳಿಂದ ಮುಂದೆ ತೋರಿಸುತ್ತೇನೆ.

ಬಹಳ ಪ್ರಾಚೀನಕಾಲದಿಂದಲೂ ಶೈವ ಮತ್ತು ವೈಷ್ಣವ ಸಂಘಗಳು ನಮ್ಮ ದೇಶದಲ್ಲಿ ನಡೆದುಬಂದಿರುತ್ತವೆ. ಶೈವಧರ್ಮವು ಭರತಖಂಡದಲ್ಲಿಯೂ, ಪ್ರಪಂಚದ ಬೇರೆಬೇರೆ ಭಾಗಗಳಲ್ಲಿಯೂ ಕಾಲಕಾಲಕ್ಕೆ ತಕ್ಕಂತೆ ವಿಕಾಸವನ್ನು ಹೊಂದುತ್ತ ಬಂದಿರುತ್ತದೆ. ಇದು ಇಂತಹ ಕಾಲದಲ್ಲಿಯೇ ಸ್ಥಾಪಿಸಲ್ಪಟ್ಟಿತೆಂಬುವದಕ್ಕೆ ನಿಶ್ಚಿತಗಳಾದ ಆಧಾರಗಳು ಸಿಗುವದಿಲ್ಲ. ರಾಮೇಶ್ವರದಿಂದ ಕಾಶ್ಮೀರದವರೆಗೆ ಶೈವಧರ್ಮವು ಹಬ್ಬಿ ಅನೇಕಸಾರೆ ಅದು ಬಹಳ ಉನ್ನತಾವಸ್ಥೆಯನ್ನು ಹೊಂದಿದ್ದು ತಿಳಿದುಬರುತ್ತದೆ. ಐತಿಹಾಸಿಕ ದೃಷ್ಟಿಯಿಂದ ಶೈವಧರ್ಮವು ಬಹಳ ಮಹತ್ವದ್ದಾಗಿರುವಂತೆ ಧಾರ್ಮಿಕ ದೃಷ್ಟಿಯಿಂದ ಅದರ ರೀತಿ ನೀತಿಗಳು ಉಜ್ವಲಪರಂಪರೆಯನ್ನು ಹೊಂದಿ ನಡೆದುಕೊಳ್ಳುತ್ತ ಬಂದಿರುತ್ತದೆ. ಶೈವಧರ್ಮದಲ್ಲಿ ಶಿವೋಪಾಸನೆಯೇ ಮುಖ್ಯವಾದುದು. ಅದರಲ್ಲಿ ಅನೇಕ ಪ್ರಭೇದಗಳುಂಟಾಗಿರುತ್ತವೆ. ಸಪ್ತವಿಧ ಶೈವರುಗಳ ಉಲ್ಲೇಖವು ಆಗಮಗಳಲ್ಲಿ ವಿಶೇಷವಾಗಿ ಬರುತ್ತದೆ. ಅಂತೂ ಶೈವಧರ್ಮವು ಭರತಖಂಡದ ಧರ್ಮಗಳಲ್ಲಿ ಪ್ರಾಚೀನತಮವೂ, ವ್ಯಾಪಕವೂ ಆದುದಾಗಿರುತ್ತದೆ.

ಶಿವತತ್ವವನ್ನು ಬೋಧಿಸತಕ್ಕ ಗ್ರಂಥಗಳಾದರೂ ಸಂಸ್ಕೃತವಾಙ್ಮಯದಲ್ಲಿಯೂ, ಪ್ರಾಂತಿಕ ಭಾಷೆಗಳಲ್ಲಿಯೂ ಹೇರಳವಾಗಿ ದೊರೆಯುತ್ತವೆ. ಋಗ್ವೇದ, ಯಜುರ್ವೇದ ಮೊದಲಾದ ವೇದಗಳಲ್ಲಿಯೂ, ಐತರೇಯ, ಈಶಾವಾಶ್ಯ ಮೊದಲಾದ ಅನೇಕ ಉಪನಿಷತ್ತುಗಳಲ್ಲಿಯೂ, ಶಿವಸರ್ವೋತ್ತಮತ್ವವನ್ನು ಬೇಕಾದಷ್ಟು ಹೇಳಲಾಗಿದೆ. ವ್ಯಾಸಮಹರ್ಷಿಗಳು ರಚಿಸಿದ ೧೮ ಪುರಾಣಗಳಲ್ಲಿ ಸ್ಕಾಂದ, ಲಿಂಗ ಮೊದಲಾದ ಹತ್ತು ಪುರಾಣಗಳು ಶಿವಪರವಾಗಿಯೇ ಇರುತ್ತವೆ. ಹೀಗೆಯೇ ಅನೇಕ ಭಾಷ್ಯಗ್ರಂಥಗಳೂ ಶಿವಪರಬ್ರಹ್ಮತ್ವವನ್ನು ಸಿದ್ಧಾಂತಪಡಿಸತಕ್ಕವುಗಳಾಗಿರುತ್ತವೆ. ಅವುಗಳನ್ನೆಲ್ಲಾ ಇಲ್ಲಿ ಹೇಳುವದಕ್ಕೆ ಸ್ಥಳವಿಲ್ಲ. ಬಹು ಪ್ರಾಚೀನತಮಕಾಲಗಳಿಂದಲೂ ಶೈವಮತವು ಬಂದಿರುವದೇ ಇಲ್ಲಿ ಮುಖ್ಯವಾಗಿ ಗಮನಿಸತಕ್ಕ ವಿಷಯವಾಗಿರುತ್ತದೆ.

"ಶಿವಸಿದ್ಧಾಂತ ಸಾರಾವಳಿ" ಎಂಬ ಪ್ರಾಚೀನ ಗ್ರಂಥದಲ್ಲಿ ಅದರ ಕರ್ತೃಗಳಾದ ತ್ರಿಲೋಚನ ಶಿವಾಚಾರ್ಯರು—

> ಓತಂ ಏನ ಜಗಚ್ಚರಾಚರಮಿದಂ ಪ್ರೋತಂ ಚ ಸರ್ವಂ ಸದಾ ।
> ಶ್ಚೋತಂ ತೇ ಪಶವೋಪಿ ಪಾಶನಿಕರಾದ್ಯಸ್ಯ ಪ್ರಸಾದೇನ ತತ್ ॥
> ಓಮಿತ್ಯಾದಿಮನೂಚ್ಚರಧ್ವನಿಗತಂ ಜ್ಯೋತಿಷ್ಮತಾಂ ದ್ಯೋತಕಂ ।
> ವ್ಯೋಮವ್ಯಾಪಿ ಪರಂ ಶಿವಾಖ್ಯಕಮಲಂ ಜ್ಯೋತಿಃ ಪ್ರಸದ್ಯೇಧಿಯಾ ॥

ಓತಪ್ರೋತವಾಗಿ ಜಗತ್ತನ್ನು ವ್ಯಾಪಿಸಿರುವ ಪರಶಿವತತ್ವವನ್ನು ನಾನು ಬುದ್ಧಿಯಿಂದ ತಿಳಿಯುತ್ತಲಿದ್ದೇನೆಂದು ತ್ರಿಲೋಚನ ಶಿವಾಚಾರ್ಯರು ಬಹಳ ಗಂಭೀರವಾಗಿ ವರ್ಣಿಸಿರುತ್ತಾರೆ.

ಶಿವತತ್ವವನ್ನು ಸಿದ್ಧಾಂತಗೊಳಿಸುವ ಅನೇಕ ಗ್ರಂಥಗಳಿರುತ್ತವೆ. ಈ ಶಿವಲಿಂಗ ಪೂಜೆಯು ಪ್ರಾಚೀನಕಾಲದಿಂದ ಬಂದಿರುತ್ತದೆ. ಒಂದು ಸಮಯದಲ್ಲಿ ವಿಷ್ಣು ಬ್ರಹ್ಮರುಗಳು ಶಿವಲಿಂಗದ ಮಹತ್ವವನ್ನು ತಿಳಿಯಬೇಕೆಂದು ಅನಂತಕಾಲ ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಇದೇ ವಿಷಯವು ಸೌರಪುರಾಣದಲ್ಲಿ ವಿಶದವಾಗಿ ವರ್ಣಿಸಲ್ಪಟ್ಟಿರುತ್ತದೆ. ವ್ಯಾಸೋಕ್ತದ ಹದಿನೆಂಟು ಉಪಪುರಾಣಗಳಲ್ಲಿ ಇದೊಂದಾಗಿರುತ್ತದೆ.

**ಸೌರಪುರಾಣ—ಪುಟ ೨೧ (ಆನಂದ ಗ್ರಂಥಮಾಲಾ, ಪೂನಾ)**

ನಾರದನು—ಬ್ರಹ್ಮನಿಗೆ ಲಿಂಗವೆಂದರೇನು? ಬ್ರಹ್ಮನು—

**ಅವ್ಯಕ್ತಂ ಲಿಂಗಮಿತ್ಯುಕ್ತಂ ಆನಂದಂ ತಮಸಃ ಪರಂ ।**
**ಮಹಾದೇವಸ್ಯ ಯತ್ನೇನ ಲಿಂಗೀಸ್ಯಾತ್ತೇನ ಶಂಕರಃ ॥**
**ಏಕಾರ್ಣವೇ ಪುರಾ ಘೋರೇ ನಷ್ಟೇ ಸ್ಥಾವರಜಂಗಮೇ ।**
**ಮಮ ವಿಷ್ಣೋಃ ಪ್ರಭೋದಾರ್ಥಂ ಆವಿರ್ಭೂತಂ ಶಿವಾತ್ಮಕಂ ॥**
**ತದಾಪ್ರಭೃತ್ಯಹಂ ವಿಷ್ಣುಃ ಭಕ್ತ್ಯಾ ಪರಮಯಾ ಮುದಾ ।**
**ಲಿಂಗಮೂರ್ತಿಧರಂ ಶಾಂತಂ ಪೂಜಯಾವೋ ವೃಷಭಧ್ವಜಂ ॥**

ತಮೋಗುಣಾತೀತವಾದ ಮತ್ತು ಆನಂದದಾಯಕವಾದ ಲಿಂಗಕ್ಕೆ ಅವ್ಯಕ್ತವೆಂದೂ, ಮಹಾಭಯಂಕರವಾದ ಸಾಗರದಲ್ಲಿ ಸ್ಥಾವರಜಂಗಮಾತ್ಮಕಗಳಾದ ಪ್ರಾಣಿಗಳೆಲ್ಲ ನಷ್ಟವಾಗಿ ಹೋಗಲು ನನ್ನ ಮತ್ತು ವಿಷ್ಣುವಿನ ಜಾಗ್ರತೆಗಾಗಿ ಶಿವಾತ್ಮಕವಾದ ಲಿಂಗವು ಪ್ರಾದುರ್ಭವಿಸಿತು. ಆ ಕಾಲ ಮೊದಲುಗೊಂಡು ಲಿಂಗಮೂರ್ತಿಧರನಾದ ವೃಷಭಧ್ವಜನನ್ನು ನಾವು ಪೂಜಿಸುತ್ತಲಿದ್ದೇವೆ.

ಈ ಲಿಂಗದ ಉತ್ಪತ್ತಿಗೆ ಏನು ಕಾರಣವೆಂದು ಪುನಃ ನಾರದನು ಕೇಳಲಾಗಿ, ಬ್ರಹ್ಮನು — ನನಗೂ ವಿಷ್ಣುವಿಗೂ ಒಂದು ಸಮಯದಲ್ಲಿ ವಿವಾದವುಂಟಾಗಲು — ಆಗ ಕೃಷ್ಣನು—

**ಕರ್ತಾಹಂ ಸರ್ವಲೋಕಾನಾಂ ಪಾಲಕೋಹಂ ನ ಸಂಶಯಃ ।**
**ಸಂಹರ್ತಾಹಂ ಪುನಶ್ಚಾಂತೇ ನಾನ್ಯೋsಸ್ತಿ ಸದೃಶೋ ಮಯಾ ॥**

ನಾನೇ ಎಲ್ಲ ಲೋಕಗಳಿಗೆ ಕರ್ತನೂ, ಪಾಲಕನೂ ಇರುವೆನಲ್ಲದೆ, ಸಂಹಾರಕನೂ ಆಗಿರುತ್ತೇನೆ. ಇದರಲ್ಲಿ ಸಂಶಯವಿಲ್ಲವೆಂದು ಹೇಳಲು—

**ಏವಂ ವಿವಾದೇ ಮಮ ದೇವೇನ ಶಾರ್ಙ್ಗಿಣಾ ।**
**ಪ್ರಾದುರ್ಭೂತಂ ತದಾ ಲಿಂಗಂ ಆವಯೋರ್ದರ್ಪಹಾರಿ ತತ್ ॥**

ಈ ಪ್ರಕಾರ ನಮ್ಮಿಬ್ಬರ ದರ್ಪವನ್ನು ಹರಣಮಾಡತಕ್ಕ ಲಿಂಗದ ಉತ್ಪತ್ತಿಯಾಯಿತು.

ಇದಲ್ಲದೆ ಭರತಖಂಡದಲ್ಲಿ ಅನೇಕ ಸುಪ್ರಸಿದ್ಧ ಲಿಂಗಗಳಿವೆ. ಅವುಗಳಿಗೆಲ್ಲ ಪ್ರಾಚೀನತಮವಾದ ಐತಿಹಾಸಿಕದ ನೆಲೆಯು ಇರುತ್ತದೆ.

ಸೌರಾಷ್ಟ್ರೇ ಸೋಮನಾಥಂ ಚ ಶ್ರೀಶೈಲೇ ಮಲ್ಲಿಕಾರ್ಜುನಂ ।
ಉಜ್ಜಯಿನ್ಯಾಂ ಮಹಾಕಾಲಮೋಂಕಾರಮಮಲೇಶ್ವರಂ ॥
ಪರಲ್ಯಾಂ ವೈದ್ಯನಾಥಂ ಚ ಢಾಕಿನ್ಯಾಂ ಭೀಮಶಂಕರಂ ।
ಸೇತುಬಂಧೇ ತು ರಾಮೇಶಂ ನಾಗೇಶಂ ದಾರುಕಾವನೇ ।
ವಾರಾಣಸ್ಯಾಂ ತು ವಿಶ್ವೇಶಂ ತ್ರ್ಯಂಬಕಂ ಗೌತಮೀತಟೇ ॥
ಹಿಮಾಲಯೇ ತು ಕೇದಾರಂ ಘೃಸೃಣೇಶಂ ಶಿವಾಲಯೇ ।
ಏತಾನಿ ಜ್ಯೋತಿರ್ಲಿಂಗಾನಿ ॥

ಹೀಗೆ ಹನ್ನೆರಡು ಜ್ಯೋತಿರ್ಲಿಂಗಗಳು ಸುಪ್ರಸಿದ್ಧಗಳಾಗಿರುತ್ತವೆ. ಶ್ರೀರಾಮನು ಸ್ಥಾಪಿಸಿದ ಲಿಂಗಕ್ಕೆ ರಾಮೇಶ್ವರಲಿಂಗವೆಂಬುವ ಹೆಸರು ಪ್ರಸಿದ್ಧವಿರುವಂತೆ ಅನೇಕ ಮನುಮುನಿಗಳೆಲ್ಲರೂ ಲಿಂಗವನ್ನು ತಮ್ಮಿಷ್ಟದೇವನೆಂದು ತಿಳಿದು ಸ್ಥಾಪಿಸಿರುತ್ತಾರೆ. ಜ್ಯೋತಿರ್ಲಿಂಗಗಳಲ್ಲದೆ ಜ್ಯೋತಿರ್ಲಿಂಗಗಳಷ್ಟೇ ಪ್ರಖ್ಯಾತಿಯನ್ನು ಪಡೆದ ಅನೇಕ ಲಿಂಗಗಳು ಹಿಂದೂಸ್ಥಾನದಲ್ಲಿರುತ್ತವೆ. ಉದಾಹರಣೆಗಾಗಿ ಗೋಕರ್ಣದಲ್ಲಿರುವ ಮಹಾಬಲೇಶ್ವರಲಿಂಗವನ್ನೂ, ಪಂಪಾಪುರವರಾಧೀಶನಾದ ವಿರೂಪಾಕ್ಷಲಿಂಗವನ್ನೂ ತೆಗೆದುಕೊಳ್ಳಬಹುದು. ಕೇವಲ ಭರತಖಂಡದಲ್ಲಿಯೇ ಅಲ್ಲ, ಪ್ರಪಂಚದ ಇನ್ನಿತರ ಭಾಗಗಳಲ್ಲಿಯೂ ಈ ಲಿಂಗವನ್ನು ಬೇರೆಬೇರೆ ರೀತಿಯಿಂದ ಬೇರೆಬೇರೆ ಹೆಸರನ್ನಿಟ್ಟು ಕೊಂಡು ಪೂಜಿಸುವದು ಸುಪ್ರಸಿದ್ಧವಿದೆ.

### ನಿರ್ಮಾಲ್ಯರತ್ನಾಕರ—ಪುಟ ೨

ಈ ಗ್ರಂಥವನ್ನು ಬಾಬು ಬೇಚುಸಿಂಹ ಎಂಬುವರು ೧೮೯೮ನೆಯ ಇಸವಿಯಲ್ಲಿ ಕಲ್ಕತ್ತೆಯಲ್ಲಿ ಅಚ್ಚುಮಾಡಿಸಿರುತ್ತಾರೆ.

ಈ ಗ್ರಂಥವು ಹಿಂದಿಯಲ್ಲಿರುವದರಿಂದ ಕೊಂಚ ಅದರ ಅನುವಾದವನ್ನು ಮಾತ್ರ ಇಲ್ಲಿ ಕೊಡುತ್ತೇನೆ.

"ಕೇವಲ ಭರತಖಂಡದಲ್ಲಿಯೇ ಲಿಂಗಪೂಜೆಯು ನಡೆಯುತ್ತಿರುವದಿಲ್ಲ. ಪರಂತು ಯೂರೋಪ್, ಏಶಿಯಾ, ಆಫ್ರಿಕಾ, ಅಮೇರಿಕಾ, ಓಶನಿಯಾ ಮತ್ತು ಇನ್ನೂ ಅನೇಕ ದ್ವೀಪಗಳಲ್ಲಿ ಒಳ್ಳೇ ವಿಧಾನದಿಂದ ವಿಧರ್ಮಿಗಳಾದವರು ಲಿಂಗದ ಪೂಜೆಯನ್ನು ಇಲ್ಲಿಯವರೆಗೂ ಮಾಡುತ್ತ ಬಂದಿರುತ್ತಾರೆ. ಮತ್ತು ಆ ದೇಶ ಗಳಲ್ಲಿ ಪ್ರಾಚೀನಕಾಲದ ಬೇರೆಬೇರೆ ಹಿಂದೂ ಮೂರ್ತಿಗಳು ಪ್ರತಿವರ್ಷ ಶೋಧಿಸ ಲ್ಪಡುತ್ತಲಿವೆ. ಲುಯಿಸ್ ಸಾಹೇಬರವರು ರಚಿಸಿರುವ 'Pharlic Worship' ಎಂಬ ಗ್ರಂಥದಲ್ಲಿ ವಿಷ್ಣ್ವಾದಿ ದೇವತೆಗಳ ಪೂಜೆಯನ್ನು ಬಿಟ್ಟು ಕೇವಲ ಲಿಂಗಪೂಜಾವಿಧಾಯಕ ವಿಷಯವನ್ನು ಚನ್ನಾಗಿ ಬರೆದಿರುತ್ತಾರೆ. ಇಂತಹ ವಿಷಯಗಳನ್ನು ಶಿವಭಕ್ತ ಮಹಾ ಶಯರ ಚಿತ್ತವಿನೋದಾರ್ಥವಾಗಿ ಇಲ್ಲಿ ಸಂಕ್ಷಿಪ್ತವಾಗಿ ಹೇಳಲು ಪ್ರಯತ್ನಿಸುತ್ತೇನೆ" ಎಂದು ನಿರ್ಮಾಲ್ಯರತ್ನಾಕರ ಗ್ರಂಥಕಾರರು ಹೇಳಿರುತ್ತಾರೆ.

"ಆಫ್ರಿಕಾ" ಉತ್ತರ ಆಫ್ರಿಕೆಯ ಪ್ರಾಚೀನ ಇಜಿಪ್ತ ಮತ್ತು ಮಿಶ್ರದೇಶ ಗಳಲ್ಲಿ ಆಸಿರಿಸ್ ಮತ್ತು ಆಯಸಿಸ್ ಹೆಸರಿನ ಹೆಣ್ಣು ಗಂಡಿನ ಲಿಂಗಗಳನ್ನು ಇಲ್ಲಿಯ ವರೆಗೂ ಪೂಜಿಸುತ್ತಾರೆ. ಶಿವಕೇಸದೃಶ ಅಶರಿಸ್ ಪುಸ್ತಕದಲ್ಲಿ—ಸರ್ಪಹಸ್ತದ ತ್ರಿಶೂಲ ಮತ್ತು ಕೈಯಲ್ಲಿ ವ್ಯಾಘ್ರಚರ್ಮದ ವಸ್ತ್ರವಿರುತ್ತದೆ.

ಏಶಿಸ್ ಎಂಬುವ ಎತ್ತಿನಮೇಲೆ ಕೂತುಕೊಂಡಿರುತ್ತದೆ. ಆ ದೇಶದಲ್ಲಿ ಬಿಲ್ವ ಪತ್ರೆಗೆ ಸಮಾನವಾದ ಒಂದು ವೃಕ್ಷವಿರುತ್ತದೆ. ಅದರ ಎಲೆಗಳನ್ನು ಪ್ರತಿ ದಿನದಲ್ಲಿಯೂ ಆ ಮೂರ್ತಿಯಮೇಲೆ ಧರಿಸುತ್ತಾರೆ ಮತ್ತು ಹಾಲಿನಿಂದ ಸ್ನಾನಮಾಡಿಸುತ್ತಾರೆ. ನಮ್ಮ ದೇಶದಲ್ಲಿ ಕಾಶಿಯು ಪ್ರಸಿದ್ಧವಿರುವಂತೆ ಆ ದೇಶದಲ್ಲಿ ಮೆಂಫಿಸ್ ಎಂಬ ಸ್ಥಾನವು ಸುಪ್ರಸಿದ್ಧವಾಗಿರುತ್ತದೆ. ಈ ದೇಶದಲ್ಲಿ ಲಿಂಗದ ಬೀಜಾಕ್ಷರ (ಟ) ಇರುತ್ತದೆ. ಕೃಷ್ಣವರ್ಣದ ಮೂರ್ತಿಯು ಇರುತ್ತದೆ. ಅಸಿರಿಸ್ ವೃಷಭರೂಪದಲ್ಲಿಯೂ, ಆಯಿಸಿಸ್ ಗೋರೂಪದಲ್ಲಿಯೂ ಇರುತ್ತದೆ. ದೇಹೋಮಿಯಾ ಎಂಬುವ ಅಘೋರ ಪಂಥಿಯ ಹಬಸಿಗಳು "ಲೆಗ್ವಾ" ಎಂಬುವ ಕಟ್ಟಿಗೆಯ ಲಿಂಗಗಳನ್ನು ರಸ್ತೆಯಲ್ಲಿಟ್ಟು ಪೂಜಿಸುತ್ತಾರೆ. ತಾಳೆ ಗಿಡದ ಅಥವಾ ತೆಂಗಿನ ಗಿಡದ ಎಣ್ಣೆಯನ್ನು ಅದಕ್ಕೆ ಹಚ್ಚುತ್ತಾರೆ. ಮಕ್ಕಳುಗಳಿಲ್ಲದ ಹೆಣ್ಣುಮಕ್ಕಳು ಈ ಲಿಂಗಕ್ಕೆ ನಡೆದುಕೊಳ್ಳುತ್ತಾರೆ. ಅಲ್ಲಿ ಎತ್ತರವಾದ ಶಿವಾಲಯವಿದೆ. ಅದರ ಬಾಗಿಲುಗಳಲ್ಲಿ ಸಿಂಹ ಮತ್ತು ಮೀನು ಹಾಗೂ ಸರ್ಪ–ಆಮೆಯ ಆಕಾರಗಳನ್ನು ಮಾಡಿರುತ್ತಾರೆ. ಅಲ್ಲಿ ಮೊದಲನೆಯದು ಲಿಂಗ ಪುರುಷಾಕಾರವಿದ್ದು, ಎರಡನೆಯದು ಸ್ತ್ರೀಯಳ ಆಕಾರದಲ್ಲಿರುತ್ತದೆ. ಉತ್ತರ ಆಫ್ರಿಕೆಯಲ್ಲಿ ಎಷ್ಟು ಅರಬ ಜಾತಿಗಳಿರುತ್ತವೆಯೋ ಪ್ರತಿಯೊಬ್ಬರೂ ಲಿಂಗವಲ್ಲದೆ ಯೋನಿಯ ಪೂಜೆಯನ್ನೂ ಮಾಡುತ್ತಾರೆ. ಅವರು ಕುದುರೆಯ ಮತ್ತು ಒಂಟೆಯ ಯೋನಿಯನ್ನೂ ಪೂಜಿಸುತ್ತಾರೆ. ಮನೆಗೆ ಕೆಟ್ಟದೃಷ್ಟಿ ಆಗಬಾರದೆಂದು ಬಾಗಿಲುಗಳಿಗೆ ಯೋನಿಯ ಚಿಹ್ನೆಗಳನ್ನು ಕಟ್ಟಿರುತ್ತಾರೆ.

ಯೂರೋಪ್–ಗ್ರೀಸ್ ಮತ್ತು ಯುನಾ ದೇಶಗಳಲ್ಲಿ ಲಿಂಗಪೂಜೆಯನ್ನು ಈಗಲೂ ಮಾಡುತ್ತಾರೆ. ಬೇಕಸ್ ಮತ್ತು ಪ್ರಿಯೇಸಸ್ ಎಂದು ಶಿವನ ಎರಡು ಹೆಸರುಗಳಿವೆ. ಇಟಲಿಯ ರೋಮ್ ನಗರದಲ್ಲಿ ಈಗಲೂ ಲಿಂಗಪೂಜೆಯು ನಡೆಯುತ್ತಲಿದೆ. ರೋಮನ್ ಕೆಥಲಿಕ್ ಸಂಪ್ರದಾಯದ ಕ್ರಿಶ್ಚಿಯನ್ನರು ಇಟಲಿಯಲ್ಲಿ ಇಲ್ಲಿಯವರೆಗೂ ಲಿಂಗಪೂಜೆಯನ್ನು ಮಾಡುತ್ತ ಬಂದಿರುತ್ತಾರೆ. ಗ್ರೀಸ್ ದೇಶದಲ್ಲಿ ಪಾನ್ ಎಂಬುವ ಹೆಸರುಳ್ಳ ಲಿಂಗವು ಉಂಟು. ಅದರ ಪೂಜೆಯು ಆಗುತ್ತಲಿದೆ. ಇದರ ಆಕಾರವು ಅರ್ಧಭಾಗ ಮತ್ಸ್ಯದ ಆಕಾರವೂ, ಅರ್ಧಭಾಗ ಆಡಿನ ಆಕಾರವೂ ಇರುತ್ತದೆ. ಅಲ್ಲಿ ಪ್ರಿಯಾಪಸ್ ಎಂಬುವ ಲಿಂಗವಿದೆ. ಅದರ ಪೂಜೆಯು ನಡೆಯುತ್ತದೆ. ಈ ಮೂರ್ತಿಯ ಬಲಗೈಯಲ್ಲಿ ಒಂದು ಕೊಡಲಿಯನ್ನೂ, ಎಡಗೈಯಲ್ಲಿ ಒಂದು ಲಿಂಗವನ್ನೂ ಮಾಡಿರುತ್ತಾರೆ. ಗ್ರೀಸದಲ್ಲಿ ಮಿನರ್ವಾ (ಪಾರ್ವತೀ) ಮತ್ತು ಪಿಗೇಸಸ್ (ಮಹಾದೇವ) ನಿದಾನೆ. ಈ ಮೂರ್ತಿಯನ್ನು ಈಗಲೂ ಪೂಜಿಸುತ್ತಾರೆ. ಆಯರ್ಲಂಡ ಮೊದಲಾದ ದೇಶಗಳಲ್ಲಿಯ ಪ್ರಾಚೀನ ಚಿಹ್ನಗಳನ್ನು ನೋಡಿದರೆ ಇಲ್ಲಿಯೂ ಶಿವನ ಪೂಜೆ ಇದ್ದಂತೆ ಕಾಣುತ್ತದೆ. ಸ್ಕಾಟ್‌ಲಂಡದ ಗ್ಲಾಸ್ಗೋ ನಗರದಲ್ಲಿ ಸೂರ್ಯಮಂದಿರವಿದ್ದು ಒಳಗೆ ಲಿಂಗಮೂರ್ತಿಯು ಇರುತ್ತದೆ.

"ಏಶಿಯಾ" ತುರ್ಕಸ್ಥಾನದ ಅಸಿರಿಯಾ, ಸುರಯಾನಿ ಮತ್ತು ಬಾಬಿಲನ್ ನಗರದಲ್ಲಿ ಮುನ್ನೂರು ಘನ ಮಳ ಅಳತೆಯ ಶಿವಲಿಂಗವಿರುತ್ತದೆ. ಸಿರಿಯಾ ದೇಶದಲ್ಲಿ ಏಕೋನಿಸ್ ಮತ್ತು ಎಷ್ಟರಗೋಷ್ಠಿ ಎಂಬುವ ಹೆಸರಿನ ಲಿಂಗಪೂಜೆಯನ್ನು ಮಾಡುತ್ತಾರೆ. ಹಾಯಡ್ರಾಪೋಲಿಸದಲ್ಲಿ ಪ್ರಚಂಡವಾದ ಶಿವಮಂದಿರವಿರುತ್ತದೆ. ಅದರಲ್ಲಿ ೩೦೦ ಮಳ ಉದ್ದ ಶಿವಲಿಂಗವಿರುತ್ತದೆ. ಅರಬ ದೇಶದಲ್ಲಿ ಮಹಮ್ಮದ

ಪೈಗಂಬರರ ಜನ್ಮಕ್ಕಿಂತಲೂ ಪೂರ್ವದಿಂದ ಲಾತಮನಾತ ಅಲ್ಲಾತ ಮತ್ತು ಅಲಜ್ಜಾ-ಮಹಾದೇವ-ಮಹಾದೇವಿಯ ಪೂಜೆಯು ನಡೆಯುತ್ತಲಿದೆ. ಖಾಸ ಮಕ್ಕಾದಲ್ಲಿಯೂ ಸಂಗಅವಸದ ಅಥವಾ ಮಕ್ಕೇಶ್ವರ ಲಿಂಗವನ್ನು ಚುಂಬಿಸುತ್ತಾರೆ. ಸುಮಾತ್ರಾ ಜಾವಾ ದ್ವೀಪಗಳಲ್ಲಿಯೂ ಲಿಂಗಪೂಜಾ ಅಥವಾ ಮಹಾಭಾರತ ಮೊದಲಾದ ಇತಿಹಾಸಗಳ ಮತ್ತು ಲಿಂಗಕಥೆಗಳ ಪಾರಾಯಣ ಈಗಲೂ ನಡೆಯುತ್ತಲಿದೆ. ಫೀಜಿಯನ್ ದ್ವೀಪದಲ್ಲಿ ಎಟೆಸ್ ಎಂಬುವ ಲಿಂಗವನ್ನು ಪೂಜಿಸುತ್ತಾರೆ. ನಿನಿಭಾ ನಗರದಲ್ಲಿ ಏಶಿರಾ ಎಂಬುವ ವಿಶಾಲವಾದ ಲಿಂಗಮೂರ್ತಿ ಇರುತ್ತದೆ. ಯುಹೂದಿಯಾ ದೇಶದಲ್ಲಿ ಇಸರಾಯಿಲೀ ಅಥವಾ ಯುಹೂದೀ ಜನರಿಂದ ಪ್ರತಿಷ್ಠಿತವಾದ ಲಿಂಗಮೂರ್ತಿಯು ಈಗಲೂ ಇರುತ್ತದೆ. ಆ ಜನರು ಆ ಲಿಂಗಮೂರ್ತಿಯ ಸ್ಪರ್ಶವನ್ನು ಮಾಡಿ ಶಪಥಮಾಡತಕ್ಕ ಪದ್ಧತಿಯು ಇರುತ್ತದೆ. ತೌರೇತದಲ್ಲಿ ಇಬ್ರಾಹಿಮನ ನೌಕರಿ ಜನರಿಗೆ ಲಿಂಗಸ್ಪರ್ಶದ ಆಣೆಯನ್ನು ಮಾಡಿಸುತ್ತಾರೆ. ಯಾಕೂಬನು ತನ್ನ ತಂದೆಯ ಅಸ್ತಿಗಳನ್ನು ಮಿಶ,ದೇಶಕ್ಕೆ ತೆಗೆದು ಕೊಂಡುಹೋಗುವಕಾಲಕ್ಕೆ ತನ್ನ ನೌಕರರಿಗೆ ಇದೇ ಲಿಂಗದ ಸ್ಪರ್ಶವನ್ನು ಮಾಡಿಸಿದ್ದ ನೆಂದು ಅಲ್ಲಿಯ ಜನಗಳಿಂದ ತಿಳಿದುಬಂದಿದೆ. ಯುಹೂದಿಯ ರಾಜರೂ ಕೂಡ ಇದೇ ಲಿಂಗವನ್ನು ಪೂಜಿಸಿ ಕೋರ್ಟು ಕಚೇರಿಗಳಿಗೆ ಹೋಗುತ್ತಿದ್ದರು. ಯಾಕೂಬನು ಬೇಥಲ್ ಎಂಬುವ ಮಂದಿರವನ್ನು ರಚಿಸಿ ಅದರಲ್ಲಿ ಲಿಂಗಪ್ರತಿಷ್ಠೆ ಮಾಡಿ ಅದಕ್ಕೆ ಎಣ್ಣೆಯನ್ನೂ, ಮದ್ಯವನ್ನೂ ಹಚ್ಚುತ್ತಿದ್ದನು.

"ಜಪಾನ" ದೇಶದಲ್ಲಿ ಬೌದ್ಧಮತ ಪ್ರಬಲವಿದ್ದರೂ ಅಲ್ಲಲ್ಲಿ ಲಿಂಗಪೂಜೆಯು ನಡೆಯುತ್ತಲಿದೆ. ಜಪಾನದ ಆಯಿಸಿಸ್ ನಗರದಲ್ಲಿ ಸೂರ್ಯ ಮತ್ತು ಲಕ್ಷ್ಮಿಯ ಹೆಸರಿನ ಲಿಂಗಯೋನಿಗಳನ್ನು ಪೂಜಿಸುತ್ತಾರೆ. ಸಿಂಹಳ (ಲಂಕಾ) ದ್ವೀಪದಲ್ಲಿಯೂ ಕೂಡ ಬೌದ್ಧಧರ್ಮದ ಪ್ರಾಬಲ್ಯವಿರುತ್ತದಾದರೂ ಲಿಂಗಪೂಜೆಯು ನಡೆದಿರುತ್ತದೆ. ಅಫರೀದಿಸ್ತಾನ, ಖಾತ, ಚಿತ್ರಾಲಿ, ಕಾಬೂಲ, ವಲಬಿ, ಬುಖಾರ, ಕಾಫ, ಪಹಾಡ ಮೊದಲಾದವುಗಳಲ್ಲಿ ಪಂಚಶೇರ, ಪಂಚವೀರ ಎಂಬುವ ಲಿಂಗಮೂರ್ತಿಗಳ ಪೂಜೆಯನ್ನು ಮಾಡುತ್ತಾರೆ. ಈರಾನದಲ್ಲಿ ಜ್ವಾಲಾಮಯ ಲಿಂಗಗಳನ್ನು ಪೂಜಿಸುತ್ತಾರೆ. ಶೀಮೆಂಯೆಣ್ಣೆ ಯಿಂದ ಜ್ವಾಲಾ ಲಿಂಗವನ್ನು ಪೂಜಿಸುತ್ತಾರೆ. ಸಾಯುಬೇರಿಯಾ ದೇಶದಲ್ಲಿಯ ಮತ್ತು ತಾಶಕಂದಗಳಲ್ಲಿಯ ಶೈವಲಿನಿಯ ಜಾತಿಯ ಜನರು ಲಿಂಗಪೂಜೆಯನ್ನು ಮಾಡುತ್ತಾರೆ.

ಓಶನಿಯಾ ಹವಾಯಿ ದ್ವೀಪಗಳಲ್ಲಿ ಈಗ ಕ್ರಿಶ್ಚಿಯನ್ನರಿದ್ದಾರೆ. ಅಲ್ಲಿ ಜ್ವಾಲಾ ಮುಖಿಯು ಪರ್ವತಗಳಿಂದ ಹೊರಟಾಗ ದುರ್ಭಿಕ್ಷ, ಮಹಾಮಾರಿರೋಗ, ಭೂಮಿಯ ಕಂಪ ಆದಾಗ್ಗೆ ಲಿಂಗಪೂಜೆಯನ್ನು ಮಾಡುತ್ತಾರೆ.

ಅಮೇರಿಕಾ-ಪೇನ್ಯೂ ನಗರದಲ್ಲಿ ಮತ್ತು ಹಿಂಡುರಾಸ ದೇಶಗಳಲ್ಲಿ ಗೋಲಸರಳ ದ್ವಿಮುಖ ಕಲ್ಲಿನ ಲಿಂಗಪೀಗಲೂ ಇರುತ್ತದೆ. ಯುನಾಯಟೆಡ್ ಟೇನೀಸ ನಗರದಲ್ಲಿ ಒಂದು ದೊಡ್ಡ ಲಿಂಗಮೂರ್ತಿಯು ಇರುತ್ತದೆ. ಯಕೆಂಟಿನ್ ದೇಶದಲ್ಲಿ ಪ್ರತಿಯೊಂದು ಮಂದಿರದ ಎದುರಿಗೆ ದೊಡ್ಡ ಆಕಾರದ ಲಿಂಗಗಳಿವೆ. ದಕ್ಷಿಣ ಅಮೇರಿಕೆಯ ಬ್ರೇಜಿಲ್ ದೇಶದಲ್ಲಿ ಬಹಳ ಪ್ರಾಚೀನ ಲಿಂಗಮೂರ್ತಿಗಳೂ, ಗಣೇಶನ ಮೂರ್ತಿಗಳೂ ಸಿಗುತ್ತವೆ. ಪೇರುದೇಶದಲ್ಲಿ ಸುಣ್ಣದ ಲಿಂಗಪೂಜಾ ನಡೆಯುತ್ತದೆ. ಸುಣ್ಣದ ಕೋಠುಗಳ ಮೇಲೆಯೂ ಈ ಲಿಂಗವಿರುತ್ತದೆ.

ಮೇಲಿನ ವಿಷಯವನ್ನು ಓದಿ ನೋಡಿದ್ದೇ ಆದರೆ ಲಿಂಗಪೂಜೆಯು ಬಹು ಪ್ರಾಚೀನಕಾಲದಿಂದಲೂ ಅಖಿಲ ಭೂಮಂಡಲದಲ್ಲಿ ಸ್ವಲ್ಪ ಹೆಚ್ಚುಕಡಿಮೆಯಾಗಿಯೂ, ಬೇರೆ ಬೇರೆ ರೀತಿಯಿಂದಲೂ ನಡೆಯುತ್ತ ಬಂದಿದೆ. ಲಿಂಗಸಂಸ್ಕೃತಿಯ ಉಗಮಸ್ಥಾನವು ಭರತಖಂಡವಾದರೂ ಅದರ ಪ್ರಭಾವವು ಎಲ್ಲೆಡೆಯಲ್ಲಿಯೂ ಹಬ್ಬಿರುತ್ತದೆ.

ಸ್ಥಾವರಲಿಂಗ ಪೂಜೆಯಂತೆ ಇಷ್ಟಲಿಂಗ ಪೂಜೆಯಾದರೂ ಸಾವಿರಾರು ವರ್ಷಗಳಿಂದ ಈ ದೇಶದಲ್ಲಿ ನೆಲೆಗೊಂಡಿರುತ್ತದೆ. ಪ್ರಾಚೀನ ಶೈವಗ್ರಂಥಗಳಲ್ಲಿ ಲಿಂಗಪೂಜೆಯನ್ನು ಎರಡು ಪ್ರಕಾರವಾಗಿ ಅಂದರೆ ಸ್ಥಿರ (ಸ್ಥಾವರ), ಚರ (ಇಷ್ಟ)ವೆಂದು ವಿಭಾಗಿಸಿರುತ್ತಾರೆ. ಸ್ಥಾವರಲಿಂಗ ಪೂಜೆಯು ಆರಂಭವಾದಾರಭ್ಯ ಇಷ್ಟಲಿಂಗ ಪೂಜೆಯಾದರೂ ನಡೆದುಬಂದಿರುತ್ತದೆ. ಇದಕ್ಕೆ ಆಧಾರಗಳು ಸ್ಪಷ್ಟವಾಗಿ ಸಿಗದೇ ಇದ್ದರೂ ಲಿಂಗಗಳಲ್ಲಿ ಎರಡು ಭೇದಗಳಾಗಬೇಕಾದರೆ ಅದರ ಉತ್ಪತ್ತಿಯ ಕಾಲದಿಂದಲೂ ಈ ಭೇದವಿರಲೇಬೇಕಾದುದು. ವೇದಾಗಮೋಪನಿಷತ್, ವ್ಯಾಸೋಕ್ತ ಲಿಂಗ, ಸ್ಕಾಂದ, ಮೊದಲಾದ ಪ್ರಾಚೀನತಮಗಳಾದ ಗ್ರಂಥಗಳ ಆಧಾರದಿಂದಲೂ, ಅನೇಕ ಆಚಾರ್ಯರ ಭಾಷ್ಯಾದಿ ಗ್ರಂಥಗಳಿಂದಲೂ ಇಷ್ಟಲಿಂಗ ಪೂಜೆಯಾದರೂ ಬಹುಕಾಲದಿಂದ ನಡೆದುಬಂದಿರುತ್ತದೆಂದು ಹೇಳಲು ಬರುವದಾದರೂ ಶ್ರೀ ಬಸವಾದಿ ಪ್ರಮಥಪುಂಗವರ ಕಾಲದಿಂದ ಅದಕ್ಕೆ ಒಂದು ಮೂರ್ತಸ್ವರೂಪ ಬಂದಿತೆಂದು ಹೇಳಬಹುದು. ಬಸವಣ್ಣನವರು ಇಷ್ಟಲಿಂಗಕ್ಕೆ ಅತ್ಯಂತ ಮಹತ್ವವನ್ನು ಕೊಟ್ಟು, ಸ್ಥಾವರಲಿಂಗ ಪೂಜೆಯನ್ನೂ, ಅನ್ಯದೇವತೆಗಳ ಪೂಜೆಯನ್ನೂ ಖಂಡಿಸಿ, ಲಿಂಗದೇವನಿಗೆ ಸಮಾನನಾದ ದೇವನು ತ್ರೈಲೋಕ್ಯದಲ್ಲಿಯೂ ಇಲ್ಲವೆಂದು ಹೇಳಿದ್ದಾರೆ. ಆದ್ದರಿಂದಲೇ ಅಂದಿನಿಂದ ಲಿಂಗಪೂಜೆಯು ದಕ್ಷಿಣ ಹಿಂದೂಸ್ಥಾನದಲ್ಲಿ ಅತ್ಯಂತ ಮೇಲ್ಮೆಯನ್ನು ಹೊಂದಿರುತ್ತದೆ.

ಶಿವಯೋಗಿಗಳೂ, ಶ್ರೇಷ್ಠ ಶಿವಭಕ್ತರೂ ಆದ ಸೊನ್ನಲಾಪುರದ ಶ್ರೀ ಸಿದ್ಧರಾಮನಂಥವರಿಗೂ ಕೂಡ ಲಿಂಗವಿಲ್ಲದಕಾರಣ ಶರಣರೆಲ್ಲ ಅತ್ಯಂತ ಹೀಯಾಳಿಸಿ ಅನುಭವ ಮಂಟಪದಲ್ಲಿ ಲಿಂಗಧಾರಣವು ಆಗಲೇಬೇಕೆಂದು ಸಿದ್ಧಪಡಿಸಿದರು.

ಆ ಸಮಯದಲ್ಲಿ ಶ್ರೀ ಚನ್ನಬಸವಣ್ಣನವರ ವಾದಸರಣಿಯು ಅತ್ಯಂತ ತರ್ಕಬದ್ಧವಾದುದರಿಂದ ಅವರ ಒಂದೆರಡು ವಚನಗಳನ್ನು ಇಲ್ಲಿ ಬರೆಯಬೇಕಾಗಿರುತ್ತದೆ.

**೪೨೬**

**ಶೂನ್ಯ ಸಂಪಾದನೆ—ಪುಟ ೧೪೯**

ಚನ್ನಬಸವಣ್ಣನವರು—

"ನೊಸಲಲ್ಲೊಂದು ಕಣ್ಣುಳ್ಳವರಾದರೂ ಅವನಂಗದ ಮೇಲೆ ಲಿಂಗ ಸ್ವಾಯತವಿಲ್ಲದಿದ್ದರೆ ಅವನ ಮನೆಯಲ್ಲಿ ಮಾಡಿದ ಪಾಕ ಶ್ವಾನನ ಮಾಂಸ ತಪ್ಪದಾಗಿ ಬಲ್ಲವರೊಲ್ಲರು ಶಿವಭಕ್ತರಲ್ಲದವರ ಮನೆಯಲ್ಲಿ ಉಂಡರೆ ಜನ್ಮ ಜನ್ಮಾಂತರದಲ್ಲಿ ಶ್ವಾನನ ಯೋನಿಯಲ್ಲಿ ಬಪ್ಪದು ತಪ್ಪದು ಎಲೆ ಶಿವನೇ ನೀವಿಲ್ಲದವರ ಮನೆಯಲ್ಲಿ ತಿಂಬಸರ ಕಂಡರೆ ಎನ್ನ ಮನ ಸೊಗಸದಯ್ಯ ಕೂಡಲಸಂಗಮದೇವಾ"

೪೨೭

"ಲಿಂಗವಿಲ್ಲದೆ ನಡೆವವನ, ಲಿಂಗವಿಲ್ಲದೆ ನುಡಿವವನ, ಲಿಂಗವಿಲ್ಲದೆ ಉಗುಳ ನುಂಗಿದರೆ ಅಂದಂದಿಗೆ ಕಿಲ್ಬಿಷವಯ್ಯಾ, ಏನೆಂಜೆನೇನೆಂಜೆ ಲಿಂಗವಿಲ್ಲದೆ ನಡೆವವನ, ಲಿಂಗವಿಲ್ಲದೆ ನುಡಿವವನ, ಅಂಗ ಲೌಕಿಕ ಮುಟ್ಟಲಾಗದು, ಲಿಂಗವಿಲ್ಲದೆ ನುಡಿವ ಶಬ್ದ ಸೂತಕವ ಕೇಳಲಾಗದು, ಲಿಂಗವಿಲ್ಲದೆ ಗಮಿಸಿದರೆ ಆ ನಡೆನುಡಿಗೊಮ್ಮೆ ವ್ರತಗೇಡಿ, ಕೂಡಲಚನ್ನಸಂಗಮದೇವಾ"

ಹೀಗೆ ಲಿಂಗದ ಹಿರಿಮೆಯನ್ನು ಶರಣರು ಜಗತ್ತಿಗೆ ಸಾರಿ ಸಾರಿ ಹೇಳಿದರು. ಇವರೆಲ್ಲರ ವಚನಗಳನ್ನು ಮುಂದೆ ಕೊಡಲಾಗುವದು. ಆದರೆ ಈಗ ವೇದೋಪನಿಷತ್ತು, ಆಗಮ ಪುರಾಣಾದಿಗಳಲ್ಲಿ ಲಿಂಗದ ಬಗ್ಗೆ ಏನು ಕಲ್ಪನೆ ಇರುತ್ತದೆಂಬುವದನ್ನು ಮೊದಲು ವಿವೇಚನೆ ಮಾಡಬೇಕಾಗಿರುತ್ತದೆ.

ವೇದಶಾಸ್ತ್ರಪುರಾಣೇಷು । ಕಾಮಿಕಾದ್ಯಾಗಮೇಷು ಚ ।
ಲಿಂಗಧಾರಣಮಾಖ್ಯಾತಂ । ವೀರಶೈವಸ್ಯ ನಿಶ್ಚಯಾತ್ ॥

ಎಂಬುವ ಸಿದ್ಧಾಂತಶಿಖಾಮಣಿಯ ವಾಕ್ಯದಂತೆ ಮೊದಲು ವೇದಗಳಲ್ಲಿ ಲಿಂಗಧಾರಣವು ಹೇಗೆ ಉಲ್ಲೇಖವಾಗಿರುವದೆಂಬುವದನ್ನು ನೋಡೋಣ.

ನಮ್ಮ ಭರತಖಂಡದಲ್ಲಿ ಅನೇಕ ಮತಸ್ಥಾಪನಾಚಾರ್ಯರು ಅವತರಿಸಿ ವೇದಮಂತ್ರಗಳಿಗೆ ಭಾಷ್ಯಗಳನ್ನು ಬರೆದು ತಮ್ಮ ತಮ್ಮ ಮತಸಿದ್ಧಾಂತಗಳನ್ನು ಮಾಡಿರುವರು. ಈ ಮತಗಳಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ, ವಲ್ಲಭ, ನಿಂಬಾರ್ಕ, ಅಭಿನವಪ್ರಜ್ಞ ಮೊದಲಾದ ಮತಗಳು ಪ್ರಸಿದ್ಧಿಯನ್ನು ಹೊಂದಿರುತ್ತವೆ. ಈ ಮತಸ್ಥಾಪನಾಚಾರ್ಯರುಗಳೆಲ್ಲಾ ವೇದಮಂತ್ರಗಳಿಗೂ, ವ್ಯಾಸಸೂತ್ರಗಳಿಗೂ ತಮ್ಮ ಅಭೀಷ್ಟದಂತೆ ಅರ್ಥಗಳನ್ನು ಮಾಡಿ ಪರಮತಗಳನ್ನು ಖಂಡಿಸಿ ಸ್ವಮತಸಿದ್ಧಾಂತಪಡಿಸಿರುತ್ತಾರೆ. ಯಾಕೆಂದರೆ ವೇದಗಳು ಸರ್ವ ಹಿಂದೂ ಆಸ್ತಿಕಮತಗಳಿಗೆ ಮೂಲಗ್ರಂಥಗಳಾಗಿರುತ್ತವೆ. ವೇದಗಳ ಅರ್ಥವನ್ನು ಉಪಬೃಂಹಣವಾಕ್ಯಗಳಿಂದಲೇ ಸಿದ್ಧಮಾಡಬೇಕಾಗುತ್ತದೆ. ಇದರಂತೆಯೇ ವೀರಶೈವಮತದ ಪಂಡಿತರೂ ಕೂಡ ವೇದಮಂತ್ರಗಳಿಗೆ ಲಿಂಗಧಾರಣಪರ ಭಾಷ್ಯಗಳನ್ನು ಬರೆದಿರುತ್ತಾರೆ. ಮತ್ತು ಅನೇಕ ಆಧಾರಗಳಿಂದ ಲಿಂಗಧಾರಣವು ವೇದಸಮ್ಮತವೆಂದು ಸ್ಥಿರಗೊಳಿಸಿರುತ್ತಾರೆ.

ಕೆಲವು ವೇದಮಂತ್ರಗಳಿಗೆ ವೀರಶೈವ ಪಂಡಿತರು ಮಾಡಿರುವ ಅರ್ಥವಿವರಣೆಯನ್ನು ಇಲ್ಲಿ ನೋಡುವದವಶ್ಯವಿರುತ್ತದೆ.

ಋಗ್ವೇದ—೭-೩-೮

ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ । ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ।
ಅತಪ್ತತನುನತದಾಮೋಶ್ನುತೇ । ಶೃತಾಸಯಿದ್ವಹಂತಸ್ತತ್ಸಮಾನೇ ಚ ॥

ಈ ಮಂತ್ರಕ್ಕೆ ಶ್ರೀಮಧ್ವಾಚಾರ್ಯರು ಸೋಮಯಾಗದಲ್ಲಿ ಉಕ್ತವಾಗಿರುವದನ್ನು ಖಂಡಿಸಿ ತಪ್ತಮುದ್ರಾಧಾರಣವನ್ನು ಸಿದ್ಧಾಂತಗೊಳಿಸಿರುವರು. ತಪ್ತಮುದ್ರಾಧಾರಣವನ್ನು ಖಂಡಿಸಿ ಶ್ರೀರಾಮಾನುಜಾಚಾರ್ಯರ ಮತಾನುಯಾಯಿಗಳು ತಮಗೆ

ಅನುಕೂಲವಾದ ಅರ್ಥವನ್ನು ಮಾಡಿರುತ್ತಾರೆ. ಈ ಮಂತ್ರಕ್ಕೆ ವೀರಶೈವಾಚಾರ್ಯರು ಲಿಂಗಧಾರಣ ಪರ ಅರ್ಥವನ್ನು ಸಿದ್ಧಾಂತಮಾಡಿರುತ್ತಾರೆ. ಆರ್ಯಸಮಾಜ ಸ್ಥಾಪಕರಾದ ಶ್ರೀ ದಯಾನಂದ ಸರಸ್ವತಿಯವರು ಮೇಲೆ ಹೇಳಿದ ಎಲ್ಲ ಮತಸ್ಥಾಪನಾಚಾರ್ಯರುಗಳ ಅರ್ಥವನ್ನು ಖಂಡಿಸಿ ತಮಗೆ ಅನುಕೂಲವಾಗುವಂತೆ ಸಿದ್ಧಾಂತಗೊಳಿಸಿರುತ್ತಾರೆ. ಭಟ್ಟೋಜಿ ದೀಕ್ಷಿತಾದಿಗಳು ಲಿಂಗಧಾರಣ ಪರ ಅರ್ಥವನ್ನು ಖಂಡಿಸಿ ಸೋಮಯಾಗದ ವಿಷಯವನ್ನು ಪ್ರತಿಪಾದಿಸಿರುವರು. ಇದರಂತೆಯೇ ಉಳಿದ ಮಂತ್ರಗಳಿಗೂ ಸರ್ವ ಮತಗಳ ಸ್ಥಾಪನಾಚಾರ್ಯರು ಅನ್ಯಮತಗಳನ್ನು ಖಂಡಿಸಿ ತಮ್ಮ ತಮ್ಮ ಮತಗಳನ್ನು ಸಿದ್ಧಾಂತಗೊಳಿಸಿರುವರು. ಇದು ಸರ್ವರಿಗೂ ಸ್ವಾಭಾವಿಕವಾದ ವಿಷಯವಾಗಿರುತ್ತದೆ. ಅನ್ಯಮತಗಳ ಖಂಡನೆಯಿಲ್ಲದೆ ತಮ್ಮ ಮತಕ್ಕೆ ಪ್ರತಿಷ್ಠೆ ಬರಲಾರದೆಂದೇ ಇವರ ತಿಳುವಳಿಕೆಯಾಗಿರುತ್ತದೆ. ಆದ್ದರಿಂದ ಹಾಗೆ ಖಂಡನೆಮಾಡುವದು ಅವರವರ ದೃಷ್ಟಿಯಿಂದ ಅಸ್ವಾಭಾವಿಕವಾಗಲಾರದು.

ಹೀಗೆಯೇ ವೀರಶೈವ ಮತದ ಪಂಡಿತರೂ ಕೂಡ ಅನ್ಯಮತಗಳನ್ನು ಸಪ್ರಮಾಣವಾಗಿ ಖಂಡಿಸಿ ಲಿಂಗಧಾರಣ ಪರ ಅರ್ಥವನ್ನು ಸಿದ್ಧಾಂತಗೊಳಿಸಿರುತ್ತಾರೆ. ಲಿಂಗಧಾರಣ ಪರ ಅರ್ಥವನ್ನು ಅನ್ಯಮತದ ಆಚಾರ್ಯರು ಖಂಡಿಸಿದಾಕ್ಷಣ ಇವರ ಸಿದ್ಧಾಂತಕ್ಕೆ ಯಾವ ಬಾಧೆಯೂ ಉಂಟಾಗಲಾರದು. ಹಾಗಾದರೆ ಉಳಿದ ಮತಗಳ ಮತಸಿದ್ಧಾಂತವೂ ನಿರರ್ಥಕವಾಗಬೇಕಾದೀತು. ಇಂತಹ ಪ್ರಸಂಗದಲ್ಲಿ ಯಾವ ಆಚಾರ್ಯರ ಮತ ನಿಜವೆಂದು ತಿಳಿಯಬೇಕು? ಎಲ್ಲರೂ ಪಂಡಿತರು, ವೇದಮಂತ್ರಗಳಿಗೆ ಹೀಗೆಯೇ ಅರ್ಥವಾಗುತ್ತದೆಂದು ಹೇಳುವ ಧೈರ್ಯ ಆರಿಗೆ ಇರುವದು? ವೇದಮಂತ್ರಗಳು ಸರ್ವರಿಗೂ ಅನುಕೂಲಿಸುವ ಪದ್ಧತಿಯುಳ್ಳವುಗಳಾಗಿವೆ. ಇಲ್ಲದಿದರೆ ಒಬ್ಬ ಆಚಾರ್ಯರ ಮತವೇ ಸಿದ್ಧವಾಗಬೇಕಾದೀತು! ಲೌಕಿಕದಲ್ಲಿ ಹಾಗೇನೂ ಕಾಣಿಸುವದಿಲ್ಲ. ಆದ್ದರಿಂದಲೇ ಶ್ರೀ ವೇದವ್ಯಾಸರು ಉಪಬೃಂಹಣ ವಾಕ್ಯಗಳಿಂದಲೇ ವೇದದ ಮುಖ್ಯ ತಾತ್ಪರ್ಯವನ್ನು ಸ್ಪಷ್ಟೀಕರಿಸಬೇಕೆಂದು ಹೇಳಿರುತ್ತಾರೆ.

"ಪವಿತ್ರಂತೇ" ಈ ಋಗ್ವೇದದ ಮಂತ್ರವು ಸೋಮಯಾಗದೊಳಗೆ ದಶಾಪವಿತ್ರವನ್ನು ಧರಿಸುವ ವಿಷಯದಲ್ಲಿ ವಿನಿಯೋಗಿಸಿರುವದರಿಂದ ಲಿಂಗಧಾರಣ ಪರ ಅರ್ಥವು ಹೇಗೆ ಯುಕ್ತವಾದುದೆಂದು ಕೆಲವರ ಅಭಿಪ್ರಾಯವಾಗಿರುತ್ತದೆ. ಯಾವ ಮಂತ್ರವು ಎಲ್ಲಿ ವಿನಿಯೋಗಿಸಲ್ಪಟ್ಟಿರುವದೋ ಆ ಮಂತ್ರಕ್ಕೆ ಅಲ್ಲಿಯೇ ವಿನಿಯೋಗಿಸುವದು ಯುಕ್ತವು. ಸೋಮಯಾಗ ಪ್ರಕರಣದಲ್ಲಿ ಪಠಿತವಾದ ಈ ಮಂತ್ರಕ್ಕೆ ಲಿಂಗಧಾರಣ ಪರತ್ವವು ಪ್ರಕರಣ ವಿರೋಧವಾಗುವದು. ಆದ್ದರಿಂದ ಈ ಮಂತ್ರಕ್ಕೆ ಲಿಂಗಧಾರಣ ಪರ ಅರ್ಥವೂ ವಿರೋಧವಾಗುವದೆಂಬುವ ಕೆಲವರ ಪ್ರಶ್ನೆಗೆ ಉತ್ತರವೇನಂದರೆ ಯಾವ ಮಂತ್ರವು ಎಲ್ಲಿ ವಿನಿಯೋಗಿಸಲ್ಪಟ್ಟಿರುವದೋ ಆ ಮಂತ್ರವನ್ನು ಅಲ್ಲಿಯೇ ವಿನಿಯೋಗಿಸತಕ್ಕದ್ದು ಎನ್ನುವ ನಿರ್ಬಂಧವಿಲ್ಲ. ಯಾಕಂದರೆ ಚಯನಯಾಗದಲ್ಲಿ ವಿನಿಯೋಗಿಸಿದ ರುದ್ರಸೂಕ್ತವು ರುದ್ರಾಭಿಷೇಕದಲ್ಲಿಯೂ ಸಹ ವಿನಿಯೋಗಿಸಲ್ಪಟ್ಟಿರುವದರಿಂದ ವಿನಿಯೋಗ ಭೇದವು ಒಂದೇ ಕಡೆ ಇರಬೇಕೆಂಬುವದು ಯುಕ್ತವಾಗಿಲ್ಲ. ಮತ್ತು ಒಂದು ದೇವತಾ ವಿಷಯಕವಾದ ಮಂತ್ರವನ್ನು ಮತ್ತೊಂದು ದೇವತಾ ವಿಷಯದಲ್ಲಿ ಉಪಯೋಗಿಸಬಾರದು ಎಂಬುದು ಕಲ್ಪಸೂತ್ರಕಾರನ ಅಭಿಪ್ರಾಯವಾಗಿರುವದು. ಆದಕಾರಣ

17

ಅಗ್ನಿಚಯನವು ರುದ್ರದೇವತಾಕವಾದ್ದರಿಂದ ಅಲ್ಲಿ ವಿನಿಯೋಗಿಸಿದ ರುದ್ರಸೂಕ್ತವು ರುದ್ರದೇವತಾಕವಾದ ರುದ್ರಾಭಿಷೇಕದಲ್ಲಿಯೂ ವಿನಿಯೋಗಿಸುವದು ವಿರುದ್ಧವಲ್ಲ ಎಂಬುವದೇ ಕಲ್ಪಸೂತ್ರಕಾರನ ಅಭಿಪ್ರಾಯವಿದ್ದರೂ, ಅಗ್ನಿದೇವತಾಕವಾದ ಅಗ್ನಿ ಮೂರ್ಧ್ವಾದಿ ಮಂತ್ರಗಳನ್ನು ವಾಸ್ತೋಷ್ಪತ್ಯಧಿದೇವತಾಕವಾದ ಗೃಹಯಜ್ಞದಲ್ಲಿ ಅಂದರೆ ಭಿನ್ನದೇವತಾಕವಾದ ಕರ್ಮದಲ್ಲಿ ವಿನಿಯೋಗಿಸುವಂತೆ ಸೋಮಯಾಗ ಪ್ರಕರಣ ಪಠಿತವಾದ "ಪವಿತ್ರಂತೇ" ಎಂಬುವ ಋಗ್ವೇದ ಮಂತ್ರವನ್ನು ಲಿಂಗಧಾರಣಪರತ್ವದಲ್ಲಿ ವಿನಿಯೋಗಿಸುವದು ಕಲ್ಪಸೂತ್ರದ ಅಭಿಪ್ರಾಯಕ್ಕೆ ವಿರುದ್ಧವಲ್ಲವು. "ಬ್ರಹ್ಮಣಸ್ಪತೇ" ಎಂಬುವಲ್ಲಿ ಬ್ರಹ್ಮಶಬ್ದಕ್ಕೆ ಲಿಂಗಪರತ್ವವನ್ನು ತಿರಸ್ಕರಿಸುವದು ದಶಾಪವಿತ್ರದ ವಿನಿಯೋಗಕ್ಕೆ ಯೋಗ್ಯತೆಯುಂಟಾಗಲಾರದು. "ಯದ್ಯತ್ರ ವಿನಿಯುಕ್ತಂ" ಈ ನೇಮ ವಾದರೂ ಪ್ರಕೃತಾರ್ಥವನ್ನು ಬೋಧಿಸುವ ಮಂತ್ರದ ವಿನಿಯೋಗಸ್ಥಳದಲ್ಲಿಯೇ ಹೊರತು ಸರ್ವತ್ರವಿರುವದಿಲ್ಲ. ಮತ್ತು ಪವಿತ್ರಶಬ್ದಕ್ಕೆ ಸೋಮಯಾಗದಲ್ಲಿ ಪಠಿತ ದಶಾಪವಿತ್ರ ಎಂಬುವ ಅರ್ಥವು ನೇಮವಲ್ಲ; ಇನ್ನು ಪ್ರಕರಣ ವಿರೋಧವೂ ಸಂಭವಿಸುವದಿಲ್ಲ. ಯಾಕಂದರೆ—

> ಸೋಮಃ ಪವತೇ ಜನಿತಾಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾ
> ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೇಶ ವಿಷ್ಣೋಃ

ಎನ್ನುವಲ್ಲಿ ಜಡೀಭೂತವಾದ ಲತೆಗೆ ನಾರಾಯಣಾದಿ ಸಕಲ ಜನಕತ್ವವು ಅಸಂಭವ ವಾದದ್ದರಿಂದ "ಉಮಯಾ ಸಹಿತೋ ದೇವಸ್ಸೋಮ ಇತ್ಯುಚ್ಯತೇ ಬುಧೈಃ" ಎನ್ನುವ ಉಪಬೃಂಹಣ ವಚನಾನುಸಾರವಾಗಿ ಸೋಮಪದದ ಶ್ಲೇಷಮಹಿಮೆಯಿಂದ ಶಿವನಿಗೂ ಕೂಡ ಸೋಮಶಬ್ದವು ಸಂಭವವಿರುವದರಿಂದ ಈ ಅರ್ಥವನ್ನು ಗ್ರಹಿಸುವದು ಪ್ರಕರಣ ವಿರೋಧವಾಗಲಾರದು. ಆದ್ದರಿಂದಲೇ—

**ಸೂಕ್ಷ್ಮಾಗಮ—ಪಟಲ ೨, ಶ್ಲೋಕ ೧೫**

> ಸೃಷ್ಟ್ಯರ್ಥಂ ಜಗತಾಂ ದೇವೋ ನಿಷ್ಕಲಃ ಸಕಲೋಽಭವತ್ ।
> ಉಮಾ ಸಹಾಯತಾಂ ಪ್ರಾಪ್ತಸ್ತೇನ ಸೋಮಃ ಶಿವಸ್ಮೃತಃ ॥
> ಸ ಶಿವೋಽಹಮುಮಾಶಕ್ತಿಸ್ತ್ವಮೇವ ಪರಮೇಶ್ವರೀ ।
> ತ್ವಯಾಸಹಾವಿನಾಭಾವಾತ್ಸೋಮಂ ಮಾಂ ಪರಿಚಕ್ಷತೇ ॥

ಅಂದರೆ—ಜಗತ್ತಿನ ಸೃಷ್ಟಿಯ ಸಲುವಾಗಿ ಪರಮಾತ್ಮನು ಸಕಲನೂ, ನಿಷ್ಕಲನೂ ಆಗಿರುತ್ತಾನೆ. ಉಮೆಯ (ಪಾರ್ವತಿ) ಸಹಾಯವನ್ನು ಹೊಂದಿದಕಾರಣ ಆ ಶಿವನಿಗೆ ಸೋಮನೆಂದು ಹೆಸರು. ಎಲೌ ಪರಮೇಶ್ವರಿಯೇ! ನೀನೇ ಶಕ್ತಿ, ನಾನೇ ಶಿವ; ನಿನ್ನ ಕೂಡ ನಾನು ಅವಿನಾಭಾವದಿಂದಿರೋಣದರಿಂದ ನನಗೆ ಯಾವಾಗಲೂ ಸೋಮನೆಂದು ಕರೆಯುತ್ತಾರೆ.

ಆದ್ದರಿಂದ ಸೋಮಯಾಗದ ಪ್ರಕರಣದಲ್ಲಿ ಪಠಿತವಾದ "ಪವಿತ್ರಂತೇ" ಎಂಬುವ ಮಂತ್ರಕ್ಕೆ ಲಿಂಗಧಾರಣ ವಿಷಯದಲ್ಲಿ ವಿರೋಧನಾಗಲಾರದು. ಮತ್ತು "ಅಯಂ ಸೋಮಃ ಕಪರ್ದಿನಃ" ಎನ್ನುವ ಶೃತಿಯಿಂದ ಸೋಮಯಾಗಕ್ಕೆ ಉತ್ಪತ್ತಿ ವಿಶಿಷ್ಟ ಶಿವಸಂಬಂಧತ್ವದ ಬೋಧನದಿಂದಲೂ, "ರುದ್ರ ಆಹೂತಃ" ಎಂಬುವ ಶೃತಿಯಿಂದಲೂ ಸೋಮಪದದ ಸ್ಥಾನದಲ್ಲಿ ರುದ್ರಪದವು ಪ್ರಕ್ಷೇಪಿಸಲ್ಪಟ್ಟಿರುವದರಿಂದ ಸೋಮಯಾಗಕ್ಕೆ ರುದ್ರತಾದಾತ್ಮ್ಯ ಬೋಧವಾಗುವದರಿಂದಲೂ—

ಅಹಂ ಹಿ ಸರ್ವಹವಿಷಾಂ ಭೋಕ್ತಾಚೈವ ಫಲಪ್ರದಃ ।
ಸರ್ವದೇವ ತನುರ್ಭೂತ್ವಾ ಸರ್ವಾತ್ಮಾ ಸರ್ವಸಂಸ್ಥಿತಃ ॥

ಎನ್ನುವ ಕೂರ್ಮಪುರಾಣದ ವಚನವಿರುವದರಿಂದ—ಶಿವನಿಗೆ ಸರ್ವಹವಿರ್ಭೋಕ್ತೃತ್ವ, ಸರ್ವಕರ್ಮಫಲಪ್ರದಾಯಕತ್ವದ ಪ್ರತಿಪಾದನದಿಂದ ಸೋಮಯಾಗಕ್ಕೆ ರುದ್ರ ದೇವತಾಕತ್ವ ಪ್ರತಿಪಾದನದಿಂದ ಮತ್ತು ರುದ್ರದೇವತಾಕತ್ವವು ನಿಶ್ಚಿತವಾದುದರಿಂದ ಆ ಪ್ರಕರಣದಲ್ಲಿ ಪಠಿತವಾದ "ಪವಿತ್ರಂತೇ" ಎಂಬುವ ಮಂತ್ರಕ್ಕೆ ಲಿಂಗಧಾರಣ ಪರಾರ್ಥವು ಎಂದಿಗೂ ವಿರೋಧವಾಗಲಾರದು.

ಓಂ ಊರ್ಧ್ವಾಯ ನಮಃ ಊರ್ಧ್ವಲಿಂಗಾಯ ನಮಃ ಇತ್ಯಾದಿ
ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಗ್ಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ

ಇತ್ಯಂತವಾಗಿ ನಮಸ್ಕಾರ ಪರಾಮರ್ಶಕ ಪೂರ್ವೋಕ್ತ ನಮಶ್ಶಬ್ದದಿಂದ ಸೂರ್ಯ ಚಂದ್ರರಿಗೆ ನಮಸ್ಕಾರವು ಹೇಳಿರುವದರಿಂದ ಲಿಂಗಧಾರಣಪರ ಅರ್ಥವನ್ನು ಮಾಡಿರುವದು ವಿರೋಧವೆಂತಲೂ ಕೆಲವರ ಆಕ್ಷೇಪವು. ಇದಕ್ಕೆ ಪ್ರಕರಣವಿರೋಧವಾಗುವದಿಲ್ಲವೆಂದು ಮೇಲೆ ಬರೆದ ಮಂತ್ರದಲ್ಲಿಯೇ ವಿಸ್ತಾರವಾಗಿ ವಿವೇಚಿಸಲ್ಪಟ್ಟದೆ. ಮತ್ತು ಉಪಕ್ರಮೋಪಸಂಹಾರಗಳಲ್ಲಿ ಶಿವಪರತ್ವವೇ ಇರುವದರಿಂದ ಮಧ್ಯದಲ್ಲಿ ಹೇಳಿರುವ ಚಂದ್ರಸೂರ್ಯರಿಗೆ ನಮಸ್ಕಾರವನ್ನು ಹೇಳುವದು ಸಂದರ್ಭವಿರೋಧವಾಗುವದು. ಆದ್ದರಿಂದ ಸೋಮ ಸೂರ್ಯ ಶಬ್ದಗಳಿಗೆ ಕೆಳಗೆ ಬರೆದಪ್ರಕಾರ ಅರ್ಥವನ್ನು ಮಾಡಿಕೊಳ್ಳಬೇಕು.

ಉಮಯಾ ಸಹಿತೋ ದೇವಸ್ಸೋಮ ಇತ್ಯುಚ್ಯತೇ ಬುಧೈಃ ।
ಸ ಯೇವ ಕಾರಣಾದಿ ನಾನ್ಮೋ ವಿಷ್ಣೋರಪಿ ಚ ವೈಶೃತಿಃ ॥

ಈ ಉಪಬೃಂಹಣ ವಾಕ್ಯದ ಪ್ರಮಾಣದಿಂದ ಸೋಮಶಬ್ದಕ್ಕೆ ಸೂರ್ಯ ಮಂಡಲಾಂತವೃತ್ತಿತ್ವ ರೂಪಾರ್ಥವನ್ನು ಸೋಮಶಬ್ದವಾಚ್ಯನಾದ ಶಿವನಿಗೆ ಕಲ್ಪಿಸಿ ವಿಶೇಷಗತಿಯಿಂದ ಶಿವಪರತ್ವವನ್ನೇ ಪ್ರತಿಪಾದಿಸುವದು ಅವಶ್ಯವಿರುವದರಿಂದ ಈ ಮಂತ್ರಕ್ಕೆ ಲಿಂಗಧಾರಣಾರ್ಥವನ್ನು ಹೇಳುವದು ಸಂದರ್ಭವಿರೋಧವೆಂದಿಗೂ ಆಗಲು ಶಕ್ಯವಿಲ್ಲ.

### ಋಗ್ವೇದ—ಮಂತ್ರ ೮-೧೨-೫

ಅಯಂ ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಃ ।
ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ ।
ಅಯಂ ಮಾತಾ ಅಯಂ ಪಿತಾ ಅಯಂ ಜೀವಾತುರಾಗಮಾತ್ ।
ಇದಂ ತವ ಪ್ರಸರ್ಪಣಂ ಸಜಂಧವೇ ಹಿ ನಿರೀಹೇಸಿ ॥

ಈ ಮಂತ್ರಕ್ಕೆ ಸವಿತೃದೇವತಾಕತ್ವದಿಂದ ಶಿವಲಿಂಗ ದೇವತಾಕ ಮಂತ್ರವಲ್ಲೆಂದು ಸಂದರ್ಭವಿರೋಧವನ್ನು ತೋರಿಸುವದನ್ನು ನೋಡಿದರೆ ಪೂರ್ವಾಪರ ವಿಚಾರಶೂನ್ಯತೆಯು ಕಂಡುಬರುತ್ತದೆ. ಹೇಗೆಂದರೆ ಈ ಮಂತ್ರದಲ್ಲಿ ಉಕ್ತವಾಗಿರುವ ಭಗವಚ್ಛಬ್ದದಿಂದ ಪರಶಿವನೆಂದೇ ಅರ್ಥವಾಗುತ್ತದೆ.

ಅಥೈನಂ ಭಗವಂತಂ ರುದ್ರಂ ಕುಮಾರಃ ಪಪ್ರಚ್ಛ ಅಥ ಕಾಲಾಗ್ನಿರುದ್ರಂ ।
ಭಗವಂತಂ ಸನತ್ಕುಮಾರಃ ಪಪ್ರಚ್ಛೇತ್ಯಾದಿ

ಸ್ಮೃತಿಗಳಲ್ಲಿಯೂ—"ಇತಿ ಸಸ್ತೂಯಮಾನೋಸ್ತು ಭಗವಾನ್ ವೃಷಭಧ್ವಜಃ" ಎಂದು ಹರಿವಂಶಕಾರಿಕದಲ್ಲಿ ಭಗವಚ್ಛಬ್ದವನ್ನು ಪರಶಿವಪರವಾಗಿಯೇ ಪ್ರಯೋಗಿಸಿರುವರು.

**ಆದಿತ್ಯೋ ಭಗವಾನ್ ಸೂರ್ಯೋ ನೀಲಗ್ರೀವ ಸ್ತ್ರಿಲೋಚನಃ ।**
**ಅಧಿತೇಯೋ ಸಹಸ್ರಾಂಶು ಸಾಮುಗಾಧ್ವರ್ಯು ಹೋತೃಭಿಃ ॥**

ಎನ್ನುವ ಆದಿತ್ಯಪುರಾಣದ ವಚನದಿಂದ ಭಗವಚ್ಛಬ್ದ ಪ್ರಯೋಗವು ಸವಿತೃದೇವತಾ ವಿಷಯದಲ್ಲಿ ಉಪಯೋಗಿಸಿರುವದರಿಂದ ಪರಶಿವಪರ ಅರ್ಥವಾಗುವದಿಲ್ಲವೆಂದು ಹೇಳುವದಾದರೂ ಯೋಗ್ಯವಾಗುವದಿಲ್ಲ. ಯಾಕಂದರೆ—

**ಲಿಂಗಧಾರಣ ಚಂದ್ರಿಕಾ**

"ಯಯೇಷೋಽಂತರಾದಿತ್ಯಃ ಹಿರಣ್ಮಯಃ ಪುರುಷೋ ದೃಶ್ಯತೇ ಇತ್ಯಾರಭ್ಯ ಅಂಬಿಕಾಪತಯೇ ಉಮಾಪತಯೇ ಪಶುಪತಯೇ ನಮೋ ನಮಃ"

ಇತ್ಯಂತವಾಗಿ ಹೇಳಿರುವ ತೈತ್ತರೀಯ ವಚನದಿಂದಲೂ ಮತ್ತು "ಸೌರಮಂಡಲ ಮಧ್ಯಸ್ಥಂ ಸಾಂಬಂ ಸಂಸಾರ ಭೇಷಜಂ" ಹೀಗೆಂದೂ, "ಮಂಡಲಾಂತರ್ಗತ ಹಿರಣ್ಮಯಂ" "ಭಾಜಮಾನವಪುಷಂ ಶುಚಿಸ್ಮಿತಂ" ಇತ್ಯಾದಿ ವಚನಗಳಿಂದ ಪರಶಿವನಿಗೆ ಆದಿತ್ಯ ಮಂಡಲಮಧ್ಯವರ್ತಿತ್ವವನ್ನು ಪ್ರತಿಪಾದಿಸುವದರಿಂದ ಆದಿತ್ಯನಿಗೂ ಶಿವನಿಗೂ ಅವಿಭಾಜ್ಯಮಾನವಾದ ಸಂಬಂಧವನ್ನು ತೋರಿಸುವದಕ್ಕಾಗಿ "ಆದಿತ್ಯಗತಸ್ತ್ರಿಲೋಚನಃ" ಎಂಬುವ ಉಕ್ತಿಯಂತೆ "ಅಯಂ ಮೇ ಹಸ್ತೋ ಭಗವಾನ್" ಎಂಬುವ ಮಂತ್ರದಲ್ಲಿಯಾದರೂ ಹಸ್ತ ಶಿವಲಿಂಗಗಳಿಗೆ ಅವಿಭಾಜ್ಯಮಾನವಾದ ಸಂಬಂಧವನ್ನು ತಿಳಿಸುವದಕ್ಕಾಗಿ ಹಸ್ತಗತವೆಂದು ಹೇಳದೆ ಹಸ್ತೋ ಭಗವಾನ್ ಎಂದು ಹೇಳಿರುವದು ಯುಕ್ತವು. ಅಂದಮೇಲೆ ಕೇವಲ ಸವಿತೃದೇವತಾಕತ್ವವನ್ನು ಹೇಳುವದೂ, ಹಸ್ತಗತವೆಂದು ಹೇಳುವದೂ ಸಂದರ್ಭವಿರೋಧವಾಗುವದು. ಆದಕಾರಣ—

**ಸಂಸ್ಕೃತ್ಯಗುರುಣಾ ದತ್ತಂ ಷಡಧ್ವನ್ಯಾಸಪೂರ್ವಕಂ ।**
**ವಾಮಹಸ್ತಗತಂ ಲಿಂಗಂ ಸಾವಧಾನೇನ ಪೂರ್ವಕಂ ।**
**ಧಾರಯೇದ್ಯಸ್ತು ಹಸ್ತಾದೌ ಲಿಂಗಾಕಾರಂ ಶಿವಂ ಸದಾ ।**
**ತಸ್ಯ ಹಸ್ತಸ್ಥಿತಂ ವಿದ್ಧಿ ಮತ್ಪದಂ ಸಂಪದಾಂ ಪದಂ ॥**

ಎಂಬುವ ವಾತುಲಾಗಮ-ವೀರಾಗಮಾದಿ ಉಪಬೃಂಹಣ ವಚನಾನುಸಾರವಾಗಿ ಹಸ್ತಾದಿಗಳಲ್ಲಿ ಅವಿಭಾಜ್ಯ ಸಂಬಂಧದಿಂದ ಧಾರಣವು ಸಂಭವಿಸುವದು. ಆದಕಾರಣ ಶಿವಪರತ್ವ ವಿರೋಧವಾಗಲಾರದು.

**ಸರ್ವಾನನ ಶಿರೋಗ್ರೀವಃ ಸರ್ವಭೂತ ಗುಹಾಶಯಃ ।**
**ಸರ್ವವ್ಯಾಪೀ ಚ ಭಗವಾನ್ ತಸ್ಮಾತ್ಸರ್ವಗತಶ್ಶಿವಃ ॥**

ಎಂಬ ಶ್ವೇತಾಶ್ವತರ ಶೃತಿಯು ಕೇವಲ ಪರಮಾತ್ಮನ ವರ್ಣನೆಯಿರುವದರಿಂದ ಲಿಂಗಧಾರಣ ವಿಷಯಕವು ಅಲ್ಲೆನ್ನುವದಂತೂ ಕೇವಲ ಅಜ್ಞಾನತನವೇ ಆಗುವದು. ಹೇಗಂದರೆ—

ತಸ್ಯಾಭಿಧ್ಯಾನಾತ್, ಯೋಜನಾತ್, ತತ್ವಭಾವಾತ್ ಎನ್ನುವ ಶ್ವೇತಾಶ್ವತರೋಪನಿಷತ್ತಿನ ಪೂರ್ವಮಂತ್ರದಲ್ಲಿ ತಸ್ಯಾಭಿಧ್ಯಾನಾತ್ ಅಂದರೆ ಜ್ಯೋತಿರ್ಲಿಂಗರೂಪವಾಗಿ

ಅನುಸಂಧಾನಮಾಡುವದರಿಂದ ಯೋಜನಾತ್ ಅಂದರೆ ಇಷ್ಟಲಿಂಗರೂಪವಾಗಿ ಧರಿಸುವದರಿಂದ ಎಲ್ಲಿ ಧರಿಸತಕ್ಕದ್ದೆಂಬ ಸಂದೇಹವುಂಟಾದಲ್ಲಿ ಧಾರಣಾಧಿಕರಣವನ್ನು ತೋರಿಸುವದಕ್ಕಾಗಿ—"ಸರ್ವಾನನ ಶಿರೋಗ್ರೀವಃ" ಎಂಬುವ ಮಂತ್ರವು ಪ್ರವರ್ತಕ ವಾಯಿತು. ಗುಹಾಶಯ ಎನ್ನುವಲ್ಲಿ ಅಂತರ್ಲಿಂಗಧಾರಣ ಸ್ಥಾನವನ್ನು ತೋರಿಸದೆ ಇದ್ದರೆ ಸಂದರ್ಭವಿರೋಧವಾಗುವದು. ಪಕ್ಷಾಂತರ ತೋರಿಸಿದರೆ "ಸರ್ವಾನನ ಶಿರೋಗ್ರೀವಃ" ಎಂಬುವ ಪದವು ನಿರರ್ಥಕವಾಗುವದು. ಅದು ಹೇಗೆಂದರೆ ಸರ್ವಾನನ ಶಿರೋಗ್ರೀವಃ ಎಂಬುವ ಈ ವಾಕ್ಯದಿಂದ ಶಿವನಿಗೂ ಆತನ ಶಿರೋಗ್ರೀವಗಳಿಗೂ ಅಭೇದ ವನ್ನು ಹೇಳುವಿರೋ ಅಥವಾ ತದ್ವೃತ್ತಿತ್ವವನ್ನು ಹೇಳುವಿರೋ ಎಂದರೆ ಮೊದಲನೆಯು ದಾಗುವದಿಲ್ಲ. ಯಾಕಂದರೆ, "ಸರ್ವಂ ವಾಕ್ಯಂ ಸಾಧಾರಣಂ" ಎಂಬುವ ನ್ಯಾಯ ದಿಂದ ಸರ್ವಾನನ ಶಿರೋಗ್ರೀವಮಾತ್ರಕ್ಕೇನೇ ಅಭೇದವನ್ನು ಹೇಳುವದಾದರೆ "ಸರ್ವೋ ಹ್ಯೇಷರುದ್ರಃ" ಎಂಬೀ ಶೃತಿವಿಹಿತವಾದ ಸರ್ವಾತ್ಮತ್ವವು ಭಂಗವಾಗುವದು. ಸರ್ವಾನನ ಶಿರೋಗ್ರೀವ ವೃತ್ತಿತ್ವವನ್ನು ಹೇಳುವದಾದರೆ "ತಸ್ಮಾತ್ಸರ್ವ ಗತಶ್ಶಿವಃ" ಎಂಬೀ ವಾಕ್ಯದಲ್ಲಿ ಹೇಳಿದ ಸರ್ವಗತಸ್ವರೂಪವು ಬ್ರಹ್ಮಲಿಂಗಕ್ಕೆ ಸಂಕೋಚವಾಗ ಬೇಕಾಗುವದು. ವೀರಶೈವ ಮತದಲ್ಲಿ ಸರ್ವವಾಕ್ಯಗಳು ಸಾರ್ಥಕವಾಗುವವು. ಆದ್ದರಿಂದ ಸರ್ವಾನನ ಶಿರೋಗ್ರೀವಾಧಿಕರಣಕ ಲಿಂಗಧಾರಣವು ಸಂದರ್ಭವಿರೋಧವಾಗಲಾರದು. "ತ್ವಂ ದೇವೇಷು ಬ್ರಾಹ್ಮಣಃ" ಎಂಬುವ ಮಂತ್ರಕ್ಕೆ ಪತಿಗೆ ಪ್ರಾಣವನ್ನೇ ಅರ್ಪಣ ಮಾಡುವ ವೀರಪತ್ನಿಯಂತೆ ಪತಿಯಾದ ಶಿವಲಿಂಗಕ್ಕೆ ಪ್ರಾಣವನ್ನು ಒಪ್ಪಿಸಿ ಶಿವಲಿಂಗ ರೂಪಿಯಾದ ಪರಬ್ರಹ್ಮದ ಸೇವೆಯನ್ನು ಮಾಡುತ್ತ ಮತ್ತೊಂದು ಬೇರೆ ದೇವರನ್ನು ಮನಸ್ಸಿನಲ್ಲಿಯೂ ಕೂಡ ನೆನೆಸದೆ ಇರತಕ್ಕ ವೀರಶೈವರೇ ಧನ್ಯರೆಂದು ತಿಳಿಯಬೇಕಾಗಿದೆ.

> ಮುಖೇ ಮಂತ್ರಂ ಹೃದಿಧ್ಯಾನಂ ಮಸ್ತಕೇ ಲಿಂಗಧಾರಣಂ ।
> ಶಿಖಾ ರುದ್ರಾಕ್ಷ ಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಂ ॥

ಎಂದು ಹೇಳುವ ಗೌತಮ ಶೃತಿಯಲ್ಲಿ ಯಜ್ಞೋಪವೀತ, ಲಿಂಗಧಾರಣ ಈ ಎರಡನ್ನೂ ಧರಿಸಿದವನು ಬ್ರಾಹ್ಮಣನೆಂದು ಹೇಳದೆ ಕೇವಲ ಮಂತ್ರ, ಧ್ಯಾನ, ರುದ್ರಾಕ್ಷ, ಭಸ್ಮ ಲಿಂಗಗಳಿಂದ ಕೂಡಿದವನು ಬ್ರಾಹ್ಮಣನೆಂದು ಹೇಳುವದರಿಂದ ಇದು ಅವರ ಪರವೆಂದು ಹೇಳುವದು ಎಂತಹ ವಿಪರೀತ ಬುದ್ಧಿಯುಳ್ಳವರಿಗೂ ಅರ್ಥವಾಗದು.

"ವಿವಿಕ್ತದೇಶೇ ಚ ಸುಖಾಸನಸ್ಥಃ ಶುಚಿಸ್ಸಮಗ್ರೀವಶಿರಶ್ಶರೀರಃ ಅತ್ಯಾಶ್ರಮಸ್ಥಃ" (ಕೈವಲ್ಯೋಪನಿಷತ್) ಎಂಬುವ ಮಂತ್ರದ ಉಪಬೃಂಹಣ ವಾಕ್ಯದಲ್ಲಿ—

**ಸಂಸ್ಕೃತ ಬಸವಪುರಾಣ**

> ಭವಿಸಂಸರ್ಗರಹಿತೇ ವಿವಿಕ್ತೇ ಚ ಸುಖಾವಹೇ ।
> ಸುಖಾಸನಸ್ಥಿತಃ ಶುದ್ಧಃ ಸಮಗ್ರೀವ ಶಿರೋಗವಾನ್ ॥
> ವಿರಜಾನಲಜಂ ಭಸ್ಮ ಗೃಹೀತ್ವಾತ್ಯಂತ ಪಾವನಂ ।
> ಅಗ್ನಿರಿತ್ಯಾದಿಭಿರ್ಮಂತ್ರೈಸ್ಸಪ್ತಭಿಶ್ಚಾಭಿಮಂತ್ರಿತಂ ॥
> ಶರೀರೋದ್ಧೂಲನಂ ಕೃತ್ವಾ ತ್ರಿಪುಂಡ್ರಸ್ಯ ತು ಧಾರಣಂ ।
> ರುದ್ರಾಕ್ಷಧಾರಣಶ್ಚೈವ ಷಡಕ್ಷರ ಜಪಸ್ತಥಾ ॥
> ಧೃತೇಷ್ಟಲಿಂಗ ಪೂಜಾದಿ ಸಂಸ್ಕಾರಾಃ ಪಂಚಕೀರ್ತಿತಾಃ ।
> ಅತ್ಯಾಶ್ರಯ ಇತಿ ಖ್ಯಾತೇ ಮುನಿಭಿಸ್ತತ್ವ ದರ್ಶಿಭಿಃ ॥

ಎಂಬುವ ಪ್ರಮಾಣದಿಂದ ಬ್ರಹ್ಮವಿದ್ಯಾಧಿಕಾರಿಯನ್ನು ಹೇಳುವ ವಿಷಯದಲ್ಲಿ ಭಸ್ಮಧಾರಣ, ರುದ್ರಾಕ್ಷಧಾರಣ, ಪಂಚಾಕ್ಷರ ಮಂತ್ರಜಪ, ಭಸ್ಮೋದ್ಧೂಲನ, ಇಷ್ಟಲಿಂಗ ಪೂಜಾ ಈ ಐದು ಸಂಸ್ಕಾರವುಳ್ಳ ಅತ್ಯಾಶ್ರಮಿಯೇ ಅಧಿಕಾರಿ ಎಂದು ಬ್ರಹ್ಮನು ಅಶ್ವಲಾಯನಋಷಿಗೆ ಹೇಳಿರುವನು. ಅದರಲ್ಲಿ ಯಜ್ಞೋಪವೀತವು ಬಾರದೆ ಇರುವದರಿಂದ ಅದು ಕೇವಲ ಲಿಂಗವನ್ನು ಧರಿಸಿದ ವೀರಶೈವನ ಪರವಾಗಿಯೇ ಇರುತ್ತದೆ. ಮತ್ತು ಶ್ರೀ ವೇದವ್ಯಾಸರು ಲಿಂಗಪುರಾಣದ ಉತ್ತರಭಾಗದಲ್ಲಿ ಲಿಂಗಧಾರಣ ವಿಷಯಕವಾಗಿ ವೇದಮಂತ್ರಗಳಿಗೆ ಹೀಗೆ ಅರ್ಥವನ್ನು ಮಾಡಿರುತ್ತಾರೆ.

**ವೇದೇಷು ಶಾಸ್ತ್ರಸಂಘೇಷು ಪುರಾಣೇಷ್ವಾಗಮೇಷು ಚ ।**
**ಬ್ರಾಹ್ಮಣಸ್ಯ ಸಮಾಖ್ಯಾತಂ ಲಿಂಗಧಾರಣಮುತ್ತಮಂ ॥**
**ಬ್ರಹ್ಮೇತಿ ಲಿಂಗಮಾಖ್ಯಾತಂ ಬ್ರಾಹ್ಮಣಃ ಪತಿರೀಶ್ವರಃ ।**
**ಪವಿತ್ರಂ ತದ್ಧಿ ವಿಖ್ಯಾತಂ ತತ್ಸಂ ಪರ್ಕಾತ್ತನುಶ್ಶುಚಿಃ ॥**
**ಋಗಿತ್ಯಾಹ ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ ।**
**ತಸ್ಮಾತ್ಪವಿತ್ರಂ ತಲ್ಲಿಂಗಂ ಧಾರ್ಯಂ ಶೈವಮನಾಮಯಂ ॥**
**ಅತಪ್ತತನುರಜ್ಞೋವೈ ಆಮಸಂಸ್ಕಾರ ವರ್ಜಿತಃ ।**
**ದೀಕ್ಷಯಾರಹಿತಃ ಸಾಕ್ಷಾತ್ ನ್ನಾಪ್ನುಯಾತ್ ॥**
**ಯಃ ಕರೋತಿ ತಪಃ ಪೂರ್ವಂ ಸತಪ್ತತನುರುಚ್ಯತೇ ।**
**ಪರಿಪಕ್ವೋ ವಿಮೋಕ್ಷಾಯ ಸೋಶ್ನುತೇ ಲಿಂಗಧಾರಣಂ ॥**

ಅಂದರೆ ವೇದಶಾಸ್ತ್ರ ಪುರಾಣಾದಿಗಳಲ್ಲಿ ಬ್ರಾಹ್ಮಣನಿಗೆ ಲಿಂಗಧಾರಣವು ಶ್ರೇಷ್ಠವೆಂದು ಹೇಳಿದೆ. ಯಾಕಂದರೆ ಬ್ರಹ್ಮವೆಂದರೆ ಲಿಂಗಕ್ಕೆ ಅರ್ಥವಾಗುವದು.

"ತಸ್ಮಾಲ್ಲಿಂಗಂ ಪರಬ್ರಹ್ಮ ಸಚ್ಚಿದಾನಂದಲಕ್ಷಣಂ"

ಬ್ರಹ್ಮಣಸ್ಪತಿಯೆಂದರೆ ಪರಶಿವಲಿಂಗವು. ಈ ಲಿಂಗವು ಪವಿತ್ರವಾದದ್ದು; ಇದು ನಿಶ್ಚಯವು. ಈ ಶಿವಲಿಂಗದ ಸಂಬಂಧದಿಂದ ಸ್ಥೂಲಸೂಕ್ಷ್ಮಕಾರಣರೂಪವಾದ ತನುವು ಶುದ್ಧವಾಗುವದು ಎಂದು ಋಗ್ವೇದವು ಹೇಳುವದು. ಆದಕಾರಣ ಪವಿತ್ರವಾದ ಆ ಶಿವಲಿಂಗವನ್ನು ಯಾವಾಗಲೂ ಧರಿಸತಕ್ಕದ್ದು. ಅದರಿಂದ ಅವರ ಭವರೋಗವೂ, ಭವಿತ್ವವೂ ನಾಶವಾಗಿ ಹೊರಟುಹೋಗುವವು. ಜನ್ಮಾಂತರದಲ್ಲಿಯೇ ಆಗಲಿ, ಈ ಜನ್ಮದಲ್ಲಿಯೇ ಆಗಲಿ ಯಾವಾತನು ಚಿತ್ತಶುದ್ಧಿಯಾಗುವ ತಪಸ್ಸನ್ನು ಆಚರಿಸುವದಿಲ್ಲವೋ ಆತನು ಈ ಪರಶಿವಲಿಂಗವನ್ನು ಧರಿಸಲಿಕ್ಕೆ ಅಧಿಕಾರಿಯಲ್ಲವು. ಯಾವನು ಈ ಜನ್ಮದಲ್ಲಿಯೇ ಆಗಲಿ, ಪೂರ್ವಜನ್ಮದಲ್ಲಿಯೇ ಆಗಲಿ ತಪಸ್ಸನ್ನು ಆಚರಿಸುವನೋ ಅವನಿಗೆ ತಪ್ತತನುವೆಂದೂ, ಪರಿಪಕ್ವಹೃದಯುದವನೆಂದೂ ಶಾಸ್ತ್ರಜ್ಞರು ಹೇಳುತ್ತಾರೆ. ಅಂಥವನು ಮೋಕ್ಷದ ಸಲುವಾಗಿ ಶಿವಲಿಂಗವನ್ನು ಧರಿಸತಕ್ಕದ್ದು ಎಂದು "ಪವಿತ್ರಂತೇ ವಿತತಂ" ಎಂಬುವ ಋಗ್ವೇದ ಮಂತ್ರಕ್ಕೆ ವ್ಯಾಸಮಹರ್ಷಿಗಳು ಲಿಂಗಧಾರಣ ವಿಷಯವನ್ನು ಪ್ರತಿಪಾದಿಸಿರುವರು. ಇದರಂತೆ ಋಗ್ವೇದದ ತೈತ್ತರೀಯ ಶೃತಿಗಾರರು—

**ಲಿಂಗಪುರಾಣ—ಶ್ಲೋಕ ೧೦೨**

**ಯಜುರಪ್ಯಾಹ ಸರ್ವಂ ವೈ ಲಿಂಗಂ ಸ್ಥಾಪಯತೀತಿ ಚ ।**
**ತಸ್ಮಾದ್ಧಾರ್ಯಂ ಮಹಾಲಿಂಗಂ ಪಾಣಿಮಂತ್ರೇತಿ ಮಂತ್ರತಃ ॥**
**ಪಾಣೌ ಲಿಂಗಂ ವಿನಿಕ್ಷಿಪ್ಯ ದೀಕ್ಷಾಕಾಲೇ ಗುರುಶ್ಶಿವಂ ।**
**ಧ್ಯಾನಸ್ತುವಂತಿ ತನ್ಮಂತ್ರಂ ಪಾಣಿಮಂತ್ರಂ ವದಂತಿ ಹಿ ॥**

ಅಂದರೆ ಸಮಸ್ತಗಳಾದ ಇಷ್ಟಾದಿ ದಶಲಿಂಗಗಳನ್ನು ಧರಿಸತಕ್ಕದ್ದು. ದೀಕ್ಷಾಕಾಲದಲ್ಲಿ ಗುರುಮೂರ್ತಿಯು ಲಿಂಗವನ್ನು ತನ್ನ ಹಸ್ತದಲ್ಲಿಟ್ಟುಕೊಂಡು ಷಡಧ್ವಶೋಧನಾದಿ ಸಂಸ್ಕಾರಗಳನ್ನು ಮಾಡಿ ಶಿಷ್ಯನ ಹಸ್ತದಲ್ಲಿ ಆ ಶಿವಲಿಂಗವನ್ನು ಧರಿಸಿ ಯಾವ ಮಂತ್ರವನ್ನು ಪಠಿಸುವನೋ ಆ ಮಂತ್ರಕ್ಕೆ ಪಾಣಿಮಂತ್ರವೆಂದೆನ್ನುತ್ತಾರೆ. ಉಪಾಸನಾಸಹಿತವಾದ ಆ ಶಿವಲಿಂಗವನ್ನು ಶಿಷ್ಯನಿಗೆ ಭಾವ, ಮನ, ದೃಷ್ಟಿದ್ವಾರದಿಂದ ತೆಗೆದುಕೊಂಡು ಗುರುಮೂರ್ತಿಯು ಪಾಣಿಮಂತ್ರದಿಂದ ಧರಿಸುವ ಕಾರಣ—

"ಏತತ್ತ್ಸೋಮಸ್ಯ ಸೂರ್ಯಸ್ಯ ಪಾಣಿಮಂತ್ರಂ ಪವಿತ್ರಂ"

ಎನ್ನುವ ಶೃತಿಗೆ ಲಿಂಗಧಾರಣ ವಿಷಯಕವಾಗಿ ಶ್ರೀ ವ್ಯಾಸಮಹರ್ಷಿಗಳೇ ಸಿದ್ಧಾಂತ ಪಡಿಸಿರುತ್ತಾರೆ. ಹೀಗೆಯೇ ಇನ್ನೂ ಅನೇಕ ಮಂತ್ರಗಳಿಗೆ ವ್ಯಾಸರೇ ಮೊದಲಾದ ಅನೇಕ ಘನ ವಿದ್ವಾಂಸರು ಲಿಂಗಧಾರಣಪರ ಅರ್ಥವನ್ನು ಮಾಡಿದ್ದಾರೆ.

**ಲಿಂಗಪುರಾಣ—ಉತ್ತರ ಭಾಗ, ಅಂ॥ ೧೦೮**

**ಪವಿತ್ರತ್ವಾತ್ ಮಹೇಶಸ್ಯ ಶಿವಸ್ಯ ಪ್ರತಿಪಾದನಾತ್ ।**
**ಪವಿತ್ರಕರಣಾತ್ಪುಂಸಾಂ ಪವಿತ್ರಮಿತಿ ಕಥ್ಯತೇ ॥**
**ಅತಃ ಸರ್ವೇಷು ಕಾಲೇಷು ಧಾರಯೇಲ್ಲಿಂಗಮುತ್ತಮಂ ।**
**ಗಚ್ಛನ್ ತಿಷ್ಠನ್ ಸ್ವಪನ್ ಜಾಗ್ರನ್ ಉನ್ಮಿಷನ್ನಿಮಿಷನ್ನಪಿ ।**
**ಶುಚಿರ್ವಾಪ್ಯಶುಚಿರ್ವಾಪಿ ಲಿಂಗಂ ಸರ್ವತ್ರ ಧಾರಯೇತ್ ॥**
**ಲಿಂಗಧಾರೀ ಸದಾ ಶುದ್ಧೋ ನಿಜಲಿಂಗಂ ಮನೋಹರಂ ।**
**ಅರ್ಚಯನ್ ಗಂಧ ಪುಷ್ಪಾದ್ಯೈಃ ಕರಪೀಠೇ ಸಮಾಹಿತಃ ॥**

**ಯಜುರ್ವೇದ—ತೈತ್ತರೀಯಸಂಹಿತ, ಕಾಂಡ ೪, ಅಧ್ಯಾಯ ೧**

**ಯಾತೇ ರುದ್ರ ಶಿವಾ ತನೂರಘೋರಾ ಪಾಪಕಾಶಿನೀ ।**
**ತಯಾನಸ್ತನುವಾಶಂತಮಯಾ ಗಿರಿಶಂತಾಭಿ ಚಾಕಶೀಹಿ ॥**

ಈ ಮಂತ್ರ ಲಿಂಗಧಾರಣವನ್ನು ಬೋಧಿಸುತ್ತದೆ. ಇದಕ್ಕೆ ಸರಿಯಾಗಿ ಸಿದ್ಧಾಂತ ಶಿಖಾಮಣಿಯ ಲಿಂಗಧಾರಣಸ್ಥಳದಲ್ಲಿ—

**ಅಘೋರಾಪಾಪಕಾಶೀತಿ ಯಾತೇ ರುದ್ರಶಿವಾ ತನೂಃ ।**
**ಯಜುಷಾ ಗೀಯತೇ ಯಸ್ಮಾತ್ ತಸ್ಮಾಚ್ಛೈವೋಘ ವರ್ಜಿತಃ ॥**

ಸೋಸಲೆಯ ರೇವಣಾರಾಧ್ಯರು ತಮ್ಮ ವ್ಯಾಖ್ಯಾನದಲ್ಲಿ ಈ ಮಂತ್ರಕ್ಕೆ ಕೆಳಗೆ ಬರೆದ ಪ್ರಕಾರ ಅರ್ಥ ಬರೆದಿದ್ದಾರೆ.

ಭೋ ರುದ್ರ—ಎಲೈ ಪರಮೇಶ್ವರನೇ, ತೇ—ನಿನ್ನ ಅಪಾಪಕಾಶಿನೀ—ಮನೋವಾಕ್ಕಾಯಂಗಳಲ್ಲಿ ಪುಟ್ಟಿದ ಬಹುವಿಧ ಪಾಪಂಗಳನ್ನು ಪ್ರಕಾಶಿಸದೆ ಸಂಹರಿಸುತ್ತಿದ್ದ ಅಘೋರಾಭಯಂಕರವಲ್ಲದೆ ಶಾಂತರೂಪವಾಗಿರ್ದ "ಯಾ ತನೂಃ ಲಿಂಗಂ ತು ಶಿವಯೋರ್ದೇಹ ಹಸ್ತಾಭ್ಯಾಂ ಯಸ್ಮಾದಧಿಷ್ಠಿತಃ" ಎಂದು ವಾಯುವ್ಯಸಂಹಿತಾವಾಕ್ಯಮುಂಟಾಗಿ ಆವುದಾನೊಂದು ಇಷ್ಟಪ್ರಾಣಲಿಂಗರೂಪವಾದ ದೇಹವು ಶಿವಾಮಾಂಗಲ್ಯ ಉಳ್ಳದ್ದೋ ತಂ ತನುಯಾ—ಭಕ್ತರಿಗೆ ಮಹಾ ಭೋಗಮೋಕ್ಷರೂಪವಾದ ಸುಖವನ್ನು ಕೊಡಲೋಸುಗವಾಗಿ ಅತ್ಯಂತ ಸುಖಸ್ವರೂಪವಾಗಿರ್ದ ತಯಾ ತನುವಾ—ಆ ಇಷ್ಟಪ್ರಾಣಲಿಂಗ

ರೂಪವಾದ ಶರೀರದಿಂದ ಭೋಗಿರಿಶಂತ—ವಾಗ್ಜ ಪ್ರಣವಪೀಠದಲ್ಲಿಯೂ, ಅನಾಹತ ಪ್ರಣವ ಪೀಠದಲ್ಲಿಯೂ ನಿರತಿಶಯ ಸುಖವನ್ನು ಪಸರಿಸುತ್ತಿರ್ದ ಎಲೈ ಪರಮೇಶ್ವರನೇ, ತ್ವಂ—ನೀನು ನಃ ಇಷ್ಟಮೂರ್ಜಿತಂ ತಪಸಾನುಯುಚ್ಛತೇ ಪ್ರಾಣೇಷ್ಟಂ ತನ್ಮಸೋ ಲಿಂಗಮಾಹುಃ ಎಂದು ಅಥರ್ವಶಿಖೋಪನಿಷತ್ತಿನ ಮಂತ್ರವುಂಟಾಗಿ "ಇಷ್ಟಲಿಂಗಂ ಪ್ರಾಣಲಿಂಗಂ ಏಕೀಕೃತ್ಯಾರ್ಚನಂ ಪರಂ" ಎಂದು ವಾತುಲೋತ್ತರ ತಂತ್ರವುಂಟಾಗಿ ದೇಶಿಕೋಪದೇಶದಿಂದ ಶಿಕ್ಷಿತರಾದ ನಮ್ಮ ಕರಕಮಲದಲ್ಲಿಯೂ, ಹೃದಯಕಮಲ ದಲ್ಲಿಯೂ ಅಭಿಚಾಕಶೀಹಿ ಅಭಿಮುಖವಾಗಿ ಪ್ರಕಾಶಿಸು. ಹೀಗೆ ಈ ಮಂತ್ರಾರ್ಥವನ್ನು ವಿವರಿಸಿರುತ್ತಾರೆ.

**ಯಜುರ್ವೇದ—ತೈತ್ತರೀಯ ಪ್ರ॥ ೧೦, ಅ॥ ೧೬**

"ನಿಧನಪತಯೇ ನಮಃ ನಿಧನಪತಾಂತಿಕಾಯ ನಮಃ ಊರ್ಧ್ವಾಯ ನಮಃ ಊರ್ಧ್ವಲಿಂಗಾಯ ನಮಃ ಹಿರಣ್ಯಾಯ ನಮಃ ಹಿರಣ್ಯಲಿಂಗಾಯ ನಮಃ ಸುವರ್ಣಾಯ ನಮಃ ಸುವರ್ಣಲಿಂಗಾಯ ನಮಃ ದಿವ್ಯಾಯ ನಮಃ ದಿವ್ಯಲಿಂಗಾಯ ನಮಃ ಭವಾಯ ನಮಃ ಭವಲಿಂಗಾಯ ನಮಃ ಶರ್ವಾಯ ನಮಃ ಶರ್ವಲಿಂಗಾಯ ನಮಃ ಶಿವಾಯ ನಮಃ ಶಿವಲಿಂಗಾಯ ನಮಃ ಆತ್ಮನೇ ನಮಃ ಆತ್ಮಲಿಂಗಾಯ ನಮಃ ಪರಮಾಯ ನಮಃ ಪರಮಲಿಂಗಾಯ ನಮಃ ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಗ್ಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ"

**ಯಜುರ್ವೇದ—ತೈತ್ತರೀಯ ಪ್ರಥಮ ವಲ್ಲಿ, ಅನುವಾಕ ೪**

"ಯಶ್ಛಂದಸಾಂ ವೃಷಭೋ ವಿಶ್ವರೂಪಃ ಛಂದೋ ಭ್ಯೋಧ್ಯಮೃತಾತ್ ಸಂಬಭೂವ ಸಮೇಂದ್ರೋ ಮೇಧಯಾಸ್ಪೃಣೋತು । ಅಮೃತಸ್ಯ ದೇವ ಧಾರಣೋ ಭೂಯಾಸಂ । ಶರೀರಂ ಮೇ ವಿಚರ್ಷಣಂ ಜಿಹ್ವಾ ಮೇ ಮಧು ಮತ್ತಮಾ । ಕರ್ಣಾಭ್ಯಾಂ ಭೂರಿವಿಶ್ರುತಂ ಬ್ರಹ್ಮಣಃ ಕೋಶೋಸಿ ಮೇಧಯಾ ಪಿಹಿತಃ ಶ್ರುತಂ ಮೇ ಗೋಪಾಯ"

ಈ ಮಂತ್ರಕ್ಕೆ ಲಿಂಗಧಾರಣಚಂದ್ರಿಕಾ ಕರ್ತರಾದ ನಂದಿಕೇಶ್ವರ ಶಿವಾಚಾರ್ಯರು ಚನ್ನಾಗಿ ಲಿಂಗಧಾರಣಪರ ಸಿದ್ಧಾಂತಪಡಿಸಿರುತ್ತಾರೆ. ಇದರ ವ್ಯಾಖ್ಯಾನವನ್ನು ಷಟ್‌ಶಾಸ್ತ್ರ ಪಾರಂಗತರೂ, ಭರತಖಂಡದಲ್ಲಿಯೇ ಸುಪ್ರಸಿದ್ಧ ಪಂಡಿತರಾಗಿದ್ದ ಮಹಾಮಹೋ ಪಾಧ್ಯಾಯ ಪಂಡಿತ ಶಿವಕುಮಾರ ಶಾಸ್ತ್ರಿಗಳು ವ್ಯಾಸರ ಉಕ್ತಿಯಂತೆ ನಾನು ಅರ್ಥ ಮಾಡುತ್ತೇನೆಂದು ಲಿಂಗಧಾರಣ ಸಿದ್ಧಾಂತಪಡಿಸಿರುತ್ತಾರೆ.

ಶ್ರುತಿಸಾರಭಾಷ್ಯವೆಂಬುವ ಗ್ರಂಥದಲ್ಲಿ ಶಿವಪೂಜಾ ಶಿವಲಿಂಗ ಸ್ವಾಮಿಗಳೆಂಬುವರು ೭೫ ವೇದಮಂತ್ರಗಳಿಗೆ ಲಿಂಗಧಾರಣಪರ ವ್ಯಾಖ್ಯಾನವನ್ನು ಬರೆದಿರುತ್ತಾರೆ. ಅವುಗಳಲ್ಲಿ ಒಂದು ಮಂತ್ರದ ಅರ್ಥವನ್ನು ಮಾತ್ರ ಇಲ್ಲಿ ಕೊಡುತ್ತೇನೆ.

"ತವ ಶ್ರಿಯೇ ಮರುತೋ ಮರ್ಜಯಂತ ರುದ್ರಯತ್ತೇಜನಿಮ ಚಾರು ಚಿತ್ರಮ್"

ರುದ್ರ—ಭೋ ಶಂಕರ ತೇ—ತವಸಂಬಂಧಿ ಚಾರು—ಮನೋಹರಂ ಚಿತ್ರಂ—ಸ್ಫಟಿಕಾದಿ ಭೇದತೋ ವಿವಿಧರೂಪಂ ಜನಿಮ—ಶಿವಲಿಂಗಂ ಯತ್—ತತ್ ತವ—ಭವತಃ ಶ್ರಿಯೇ—

ಸಾಲೋಕ್ಯ ಸಾರೂಪ್ಯ ಸಾಯುಜ್ಯಪದಂ ಪ್ರಾಪ್ತುಂ ಪುರುತಃ–ದೇವಾಃ ಅಮರ್ಜ-ಯಂತ–ಅಪೂಜಯಂತ ಮೃಜೂ–ಶುದ್ಧೌ ಧಾತೂನಾಮನೇಕಾರ್ಥತ್ವಾದಸ್ಯಧಾತೋರತ್ರ ಪೂಜಾರ್ಥಕತ್ವಂ.

ಅಂದರೆ ಎಲೌ ಶಂಕರನೇ, ನಿನ್ನ ಸಂಬಂಧವಾದ ಅನೇಕ ರೂಪದಿಂದ ಕೂಡಿದ ಶಿವಲಿಂಗವನ್ನು ಸಾಲೋಕ್ಯ, ಸಾಯುಜ್ಯ, ಸಾರೂಪ್ಯ, ಮೋಕ್ಷಪದವನ್ನು ಪಡೆಯುವದ ಕ್ಕೋಸ್ಕರ ದೇವತೆಗಳು ಅರ್ಚಿಸುತ್ತಾರೆ. ಆದಕಾರಣ—

**ಲಿಂಗಪುರಾಣದಲ್ಲಿ**

ಇಂದ್ರನೀಲಮಯಂ ಲಿಂಗಂ ವಿಷ್ಣುಃ ಪೂಜಯತೇ ಸದಾ ।
ವಿಷ್ಣುತ್ವಂ ಪ್ರಾಪ್ತವಾಂಸ್ತೇನ ಸಾದ್ಭುತೈಕಂ ಸನಾತನಂ ॥
ಬ್ರಹ್ಮಾ ಪೂಜಯತೇ ನಿತ್ಯಂ ಲಿಂಗಂ ಶೈಲಮಯಂ ಶುಭಂ ।
ತಸ್ಯ ಸಂಪೂಜನಾತ್ತೇನ ಪ್ರಾಪ್ತಂ ಬ್ರಹ್ಮತ್ವಮುತ್ತಮಂ ॥
ತಾಮ್ರಂ ಲಿಂಗಂ ಸದಾ ಕಾಲಂ ಭಕ್ತ್ಯಾ ದೇವೋ ದಿವಾಕರಃ ।
ತ್ರಿಕಾಲಂ ಯಜತೇ ತೇನ ಪ್ರಾಪ್ತಂ ಸೂರ್ಯತ್ವಮುತ್ತಮಂ ॥
ಮುಕ್ತಾ ಫಲಮಯಂ ಲಿಂಗಂ ಸೋಮಃ ಪೂಜಯತೇ ಸದಾ ।
ಸೋಮೇನ ಪ್ರಾಪ್ಯತೇ ತೇನ ಸೋಮತ್ವಂ ಸತತೋಜ್ವಲಂ ॥
ಲಿಂಗಂ ಹೇಮಮಯಂ ಕಾಂತಂ ಧನದೋರ್ಚಯತೇ ಸದಾ ।
ತೇನಾಸೌಧನದೋ ದೇವೋ ಧನದತ್ವಮವಾಪ್ತವಾನ್ ॥
ಏವಂ ದೇವಾಸ್ಸಗಂಧರ್ವಾಸ್ಸಯಕ್ಷೋರಗ ರಾಕ್ಷಸಾಃ ।
ಪೂಜಯಂತಿ ಸದಾ ಕಾಲಂ ಈಶಾನಂ ಸುರನಾಯಕಂ ॥
ಸರ್ವಂ ಲಿಂಗಮಯಂ ಲೋಕಂ ಸರ್ವಂ ಲಿಂಗೇ ಪ್ರತಿಷ್ಠಿತಂ ॥
ತಸ್ಮಾತ್ಸಂಪೂಜಯೇಲ್ಲಿಂಗಂ ಯಚ್ಛೇತ್ಸಿದ್ಧಿಮಾತ್ಮನಃ ।

ಅಂದರೆ ಇಂದ್ರನೀಲಮಯವಾದ ಲಿಂಗವನ್ನು ವಿಷ್ಣುವು ಪೂಜಿಸಿ ವಿಷ್ಣುತ್ವವನ್ನು ಹೊಂದಿದನು. ಶಿಲಾಮಯವಾದ ಲಿಂಗವನ್ನು ಬ್ರಹ್ಮನು ಯಾವಾಗಲೂ ಪೂಜಿಸಿ ತನ್ನ ಬ್ರಹ್ಮಪದವಿಯನ್ನು ಪಡೆದಿರುತ್ತಾನೆ. ಸೂರ್ಯನು ಭಕ್ತಿಯಿಂದ ತಾಮ್ರಮಯವಾದ ಲಿಂಗವನ್ನು ತ್ರಿಕಾಲದಲ್ಲಿಯೂ ಪೂಜಿಸಿ ತನ್ನ ಉತ್ತಮವಾದ ಸೂರ್ಯತ್ವವನ್ನು ಪಡೆದನು. ಚಂದ್ರನು ಮುತ್ತಿನ ವಿಕಾರವಾದ ಲಿಂಗವನ್ನು ಪೂಜಿಸಿ ತನ್ನ ಸೋಮತ್ವವನ್ನು ಪಡೆದನು. ಕುಬೇರನು ಯಾವಾಗಲೂ ಸುವರ್ಣಮಯವಾದ ಲಿಂಗವನ್ನು ಪೂಜಿಸಿ ಧನವುಳ್ಳತನವನ್ನು ಹೊಂದಿದನು. ಹೀಗೆಯೇ ಗಂಧರ್ವ ಮೊದಲಾದ ದೇವತೆಗಳೂ, ಯಕ್ಷರೂ, ರಾಕ್ಷಸರೂ, ಕಿನ್ನರರೂ, ಕಿಂಪುರುಷರೂ ಸುರನಾಯಕನಾದ ಶಿವನ ಲಿಂಗಸ್ವರೂಪಿಯಾದ ಶಿವನನ್ನು ಪೂಜಿಸುತ್ತಾರೆ. ಈ ಲೋಕನೆಲ್ಲಾ ಲಿಂಗಮಯವಾದುದು. ಲಿಂಗದಲ್ಲಿ ಎಲ್ಲವೂ ಪ್ರತಿಷ್ಠಿತವಾಗಿರುತ್ತದೆ. ಆದ್ದರಿಂದ ತನ್ನ ಇಷ್ಟಸಿದ್ಧಿಯನ್ನು ಹೊಂದಬೇಕಾದರೆ ಲಿಂಗವನ್ನು ಪೂಜಿಸಬೇಕು.

**ಉಪನಿಷತ್ತುಗಳಲ್ಲಿ ಲಿಂಗಧಾರಣವು**

ಇಲ್ಲಿಯವರೆಗೆ ಅನೇಕ ವೇದಮಂತ್ರಗಳಿಗೆ ಲಿಂಗಪರವಾದ ಅರ್ಥವನ್ನು ತೋರಿಸಿದ್ದಾಯಿತು. ಇನ್ನು ಉಪನಿಷತ್ತುಗಳಲ್ಲಿ ಅತ್ಯಂತ ಪ್ರಾಚೀನಗಳಾದ ದಶೋಪನಿಷತ್ತುಗಳಿಗೆ ಲಿಂಗಧಾರಣಪರ ವ್ಯಾಖ್ಯಾನವನ್ನು ಅನೇಕ ಪಂಡಿತಾಗ್ರಗಣ್ಯರಾದ ವೀರಶೈವರು

ಮಾಡಿರುತ್ತಾರೆ. ಇವುಗಳಲ್ಲಿ ಈಶ, ಕೇನ, ಕಠ, ಐತರೇಯ ಮೊದಲಾದ ಉಪನಿಷತ್ತು ಪ್ರಾಮುಖ್ಯಗಳಾಗಿರುತ್ತವೆ. ಮೇಲೆ ಬರೆದ ವೇದಮಂತ್ರಗಳ ವಿವೇಚನೆಯನ್ನು ಮಾಡುವ ಕಾಲಕ್ಕೆ ಅನೇಕ ಉಪನಿಷನ್ಮಂತ್ರಗಳನ್ನೂ ಹೇಳಿರುತ್ತೇವೆ. ಇಲ್ಲಿ ಪ್ರತಿಯೊಂದು ಉಪನಿಷತ್ತುಗಳಲ್ಲಿಯ ಮಂತ್ರಗಳ ವ್ಯಾಖ್ಯಾನವನ್ನು ಮಾಡುತ್ತಹೋದರೆ ವಿಸ್ತಾರ ವಾಗುವದೆಂದು ಸಂಕ್ಷೇಪಿಸಲಾಗಿರುತ್ತದೆ. ಈಶ, ಕೇನ, ಕಠ, ಕೈವಲ್ಯ ಮೊದಲಾದ ಉಪನಿಷತ್ತುಗಳಿಗೆ ಸಂಪೂರ್ಣವಾಗಿ ಲಿಂಗಧಾರಣಪರ ಭಾಷ್ಯವನ್ನು ವೀರಶೈವ ಪಂಡಿತರು ಬರೆದಿರುತ್ತಾರೆ.

## ಆಗಮಗಳಲ್ಲಿ ಲಿಂಗಧಾರಣವು

ಇಲ್ಲಿಯವರೆಗೆ ವೇದೋಪನಿಷತ್ತಿನ ಮಂತ್ರಗಳಲ್ಲಿ ಲಿಂಗಧಾರಣವು ಹೇಗೆ ಅಡಕ ವಾಗಿರುತ್ತದೆಂದು ಸ್ಪಷ್ಟಪಡಿಸಲಾಗಿದೆ. ಈಗ ಶಿವಾಗಮಗಳು ಲಿಂಗಧಾರಣವನ್ನು ಹೇಗೆ ಸಮರ್ಥಿಸುತ್ತವೆಂಬುವದನ್ನು ನೋಡಬೇಕಾಗಿರುತ್ತದೆ. ವೀರಶೈವರಿಗೆ ಶಿವಾಗಮ ಗಳು ಮುಖ್ಯ ಪ್ರಾಮಾಣ್ಯಗ್ರಂಥಗಳಾಗಿರುತ್ತವೆ. ಇಂತಹ ಆಗಮಗಳಲ್ಲಿ ೨೮ ಶಿವಾಗಮ ಗಳೇ ಮುಖ್ಯವಾದವುಗಳಾಗಿರುತ್ತವೆ. ಇಲ್ಲಿ ಕೆಲವು ಆಗಮಗಳ ಪ್ರಾಮಾಣ್ಯವನ್ನು ಮಾತ್ರ ಕೊಡುತ್ತೇವೆ.

**ಸೂಕ್ಷ್ಮಾಗಮ—ಪಟಲ ೬, ಶ್ಲೋಕ ೪**

ನಾದರೂಪಶ್ಶಿವಸ್ಸಾಕ್ಷಾಲ್ಲಿಂಗಮಿತ್ಯಭಿಧೀಯತೇ ।
ತತ್ಪ್ರತೀಕಾ ಮಹಾಶಕ್ತಿಸ್ಸಾಚವೈ ಬಿಂದುರೂಪಿಣೀ ॥ ೪ ॥
ತಯೋಸ್ಸಮ್ಮೇಳನಾದ್ದೇವಿ ಕಲಾ ತತ್ರ ಪ್ರತಿಷ್ಠಿತಾ ।
ಸಾ ಕಲಾ ಪರಮಾ ಸೂಕ್ಷ್ಮಾ ವ್ಯಾಪ್ತಾ ಸರ್ವತ್ರ ಸರ್ವದಾ ॥ ೫ ॥
ತಿಲೇಷು ತೈಲಂ ಪುಷ್ಪೇಷು ಗಂಧೋಯದ್ವದ್ವಿಭಾಸತೇ ।
ತಥಾ ಗುರುಕಟಾಕ್ಷೇಣ ತಾಂ ಪಶ್ಯೇ ಜ್ಞಾನಚಕ್ಷುಷಾ ॥ ೬ ॥
ತಸ್ಮಾಲ್ಲಿಂಗಮಿತಿ ಜ್ಞಾತಂ ನಾದಬಿಂದು ಕಲಾತ್ಮಕಂ ।
ಲಿಕಾರೋ ಲಯಬುದ್ಧಿಸ್ಸ್ಯಾ ಬಿಂದುನಾ ಸ್ಥಿತಿರುಚ್ಯತೇ ॥ ೭ ॥
ಗಕಾರಾತ್ಸೃಷ್ಟಿರಿತ್ಯುಕ್ತಂ ಲಿಂಗಂ ಸೃಷ್ಟ್ಯಾದಿ ಕಾರಣಂ ।
ಲೀನಂ ಪ್ರಪಂಚರೂಪಂ ಹಿ ಸರ್ವಮೇತಚ್ಚರಾಚರಂ ॥ ೮ ॥
ಸರ್ಗಾದೌ ಗಮ್ಯತೇ ಭೂಯಸ್ತಸ್ಮಾಲ್ಲಿಂಗಮುದೀರಿತಮ್ ।

ಅಂದರೆ—ಸಾಕ್ಷಾನ್ನಾದರೂಪನಾದ ಶಿವನೇ ಲಿಂಗವೆಂದು ಹೇಳಲಾಗುತ್ತದೆ. ಮಹಾ ಶಕ್ತಿಯೇ ಬಿಂದುರೂಪಳು. ಅವರಿಬ್ಬರ ಸಮ್ಮೇಳನದಿಂದ ಕಲೆಯು ಅಲ್ಲಿ ಪ್ರತಿಷ್ಠಿತ ವಾಗುವದು ಕಲೆಯು ಸೂಕ್ಷ್ಮವಾದುದು. ಎಲ್ಲಾ ಕಾಲಗಳಲ್ಲಿ ಎಲ್ಲೆಡೆಯಲ್ಲಿಯೂ ವ್ಯಾಪ್ತನಾದುದಾಗಿರುತ್ತದೆ. ತಿಲಗಳಲ್ಲಿ ತೈಲವೂ, ಪುಷ್ಪಗಳಲ್ಲಿ ಸುಗಂಧವೂ ಇರುವಂತೆ ಹೊಳೆಯುತ್ತಲಿದೆ. ಇಂತಹ ಲಿಂಗವನ್ನು ಗುರುಕಟಾಕ್ಷದಿಂದ ಪಡೆಯು ತಕ್ಕದ್ದು. ಆದ್ದರಿಂದ ಲಿಂಗವು ನಾದಬಿಂದುಕಲಾತ್ಮಕವಾದುದಾಗಿರುತ್ತದೆ. ಲಿಕಾರವು ಲಯವನ್ನೂ, ಬಿಂದುವು ಸ್ಥಿತಿಯನ್ನೂ, ಗಕಾರವು ಸೃಷ್ಟಿಯನ್ನೂ ಹೇಳತಕ್ಕವುಗಳಾಗಿ ರುತ್ತವೆ. ಅರ್ಥಾತ್ ಲಿಂಗಶಬ್ದವು ಅಂದರೆ ಅದರಲ್ಲಿರತಕ್ಕ ಪ್ರತಿಯೊಂದು ವರ್ಣದ ಅರ್ಥವನ್ನೂ ವ್ಯಾಕರಣ ಸಿದ್ಧಾಂತ ರೀತಿಯಿಂದ ನೋಡಿದರೆ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣವಾದುದೆಂದು ತಿಳಿಯುತ್ತಲಿದೆ. ಚರಾಚರಾತ್ಮಕವಾದ ಸರ್ವ ಪ್ರಪಂಚವೂ

ಲಿಂಗದಲ್ಲಿ ಅಡಕವಾಗಿರುತ್ತದೆ. ಸರ್ಗದ ಆದಿಯಲ್ಲಿ ಪುನಃ ಲಿಂಗರೂಪವಾಗಿ ತೋರುತ್ತದೆ.

### ಸೂಕ್ಷ್ಮಾಗಮ—ಪಟಲ ೬, ಶ್ಲೋಕ ೬೧

ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ವಾಪಿ ಶಾಂಕರೀ ।
ಪೂಜಯೇನ್ನಿಯತಂ ಲಿಂಗಂ ಪ್ರಾಣಲಿಂಗ ಪರಾಯಣಃ ॥ ೬೧ ॥
ಏವಂ ಯಃ ಕುರುತೇ ಭಕ್ತ್ಯಾ ಪ್ರಾಣಲಿಂಗಾರ್ಚನಂ ಸದಾ ।
ವೀರಶೈವಃ ಸವಿಜ್ಞೇಯಃ ಸರ್ವಶೈವೋತ್ತಮೋತ್ತಮಃ ॥ ೬೨ ॥

ಪ್ರಾಣಲಿಂಗಪರಾಯಣನಾದ ಮಾನವನು ಒಂದು ದಿವಸದಲ್ಲಿ ಒಂದುಸಾರೆ, ಅಥವಾ ಎರಡುಸಾರೆ ಮತ್ತು ಮೂರುಸಾರೆಯಾಗಲೀ ತಪ್ಪದೇ ಲಿಂಗವನ್ನು ಪೂಜಿಸತಕ್ಕದ್ದು. ಈ ಪ್ರಕಾರವಾಗಿ ಯಾವಾತನು ಪ್ರಾಣಲಿಂಗಾರ್ಚನೆಯನ್ನು ಭಕ್ತಿಯಿಂದ ಮಾಡುತ್ತಾನೆಯೋ ಅವನಿಗೆ ವೀರಶೈವನೆಂದು ಹೆಸರು. ಅವನೇ ಎಲ್ಲ ಶೈವರಲ್ಲಿ ಮಿಗಿಲಾದವನು.

### ಸೂಕ್ಷ್ಮಾಗಮ—ಶ್ಲೋಕ ೬೪

ಅನಭ್ಯರ್ಚ್ಯ ನಭುಂಜೀತ ಲಿಂಗರೂಪಂ ಸದಾಶಿವಂ ।
ಯಸ್ತ್ವೇವಂ ನಿರ್ವಹೇದ್ಭಕ್ತಃ ಸವೈಶಿಷ್ಟೋ ಮಮಪ್ರಿಯಃ ॥ ೬೪ ॥
ಇದಂ ಮಂತ್ರರಹಸ್ಯಂ ವೈ ಶ್ರೂಯತಾಂ ಷಟ್‌ಸ್ಥಲಾತ್ಮಕಂ ।
ಭಕ್ತಸ್ಥಲೇ ಸಮಾಸೀನೋ ಭೂತಿರುದ್ರಾಕ್ಷ ಸಂಯುತಃ ॥ ೬೫ ॥
ಷಡಕ್ಷರಜಪಂ ಕೃತ್ವಾ ತತೋ ಮಾಹೇಶ್ವರಸ್ಥಲೇ ।
ಹಸ್ತೇ ಕೃತ್ವಾ ಸಾವಧಾನಂ ಪ್ರಸಾದಸ್ಥಲಮಾಶ್ರಿತಃ ॥ ೬೬ ॥
ಲಿಂಗಂ ಚ ಭಕ್ತ್ಯಾ ಸಂಪೂಜ್ಯ ಪ್ರಾಣಲಿಂಗಸ್ಥಲೇ ತತಃ ।
ಕೃತ್ವಾ ಶಿವಾರ್ಪಣಂ ದೇವಿ ಸಾನಂದಂ ಶರಣಸ್ಥಲೇ ॥ ೬೭ ॥
ಐಕ್ಯಸ್ಥಲೇ ಪ್ರಸಾದೋಪಭೋಗ ತೃಪ್ತಿಮವಾಪ್ನುಯಾತ್ ।
ಏವಂ ಸಮರಸಾಭಾವಾತ್ ಷಟಸ್ಥಲಯೋಗತಃ ॥ ೬೮ ॥
ಯಃ ಪೂಜಯತಿ ಮಾಂ ದೇವಿ ವೀರಶೈವಸ್ಸ ಉಚ್ಯತೇ ॥

ಅಂದರೆ—ಲಿಂಗರೂಪನಾದ ಸದಾಶಿವನನ್ನು ಅರ್ಚಿಸದೆ ಊಟವನ್ನು ಮಾಡಬಾರದು. ಈ ಪ್ರಕಾರವಾಗಿ ಯಾವ ಭಕ್ತನು ಶಿವಪೂಜೆಯನ್ನು ಮಾಡುತ್ತಾನೆಯೋ ಅವನೇ ಶಿಷ್ಟನೂ ಮತ್ತು ನನಗೆ ಪ್ರಿಯಕರನೂ ಆಗುತ್ತಾನೆ. ಷಟ್‌ಸ್ಥಲಾತ್ಮಕವಾದ ಈ ಮಂತ್ರರಹಸ್ಯವನ್ನು ಕೇಳು. ಭಕ್ತಸ್ಥಲದಲ್ಲಿರತಕ್ಕವನು ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ಷಡಕ್ಷರ ಜಪವನ್ನು ಮಾಡಿ ಮಹೇಶ್ವರನಾಗಿ ಲಿಂಗವನ್ನು ಹಸ್ತದಲ್ಲಿ ತೆಗೆದುಕೊಂಡು ಸಾವಧಾನ ಚಿತ್ತನಾಗಿ ಪ್ರಸಾದಸ್ಥಲವನ್ನು ಹೊಂದಿ ಲಿಂಗವನ್ನು ಭಕ್ತಿಯಿಂದ ಪೂಜಿಸಿ ಪ್ರಾಣ ಲಿಂಗಿಯ ಸ್ಥಳದಲ್ಲಿ ಶಿವಾರ್ಪಣ ಬುದ್ಧಿಯಿಂದ ಶರಣಸ್ಥಲದಲ್ಲಿ ಆನಂದದಿಂದ ಐಕ್ಯ ಸ್ಥಲದಲ್ಲಿ ಪ್ರಸಾದೋಪಭೋಗದ ತೃಪ್ತಿಯನ್ನು ಹೊಂದಬೇಕು. ಹೀಗೆ ಸಮರಸ ಭಾವನೆಯಿಂದ ಷಟ್‌ಸ್ಥಲಗಳನ್ನು ಹೊಂದಿ ಯಾವಾತನು ನನ್ನನ್ನು ಪೂಜಿಸುತ್ತಾನೆಯೋ ಎಲೌ ದೇವಿಯೇ! ಅವನೇ ವೀರಶೈವನೆಂದೆನ್ನಿಸಿಕೊಳ್ಳುವನು.

### ವಾತುಲಾಗಮ—ಪಟಲ ೧೦

ಮೂರ್ಧ್ನಿ ಕಂಠೇ ಭುಜೇ ಹಸ್ತೇ ಹೃತ್‌ಸ್ಥಲೇ ನಾಭಿಮಂಡಲೇ ।
ವಿಶೇಷಾಮೇಕ ದೇಶೇ ತು ಧಾರಯೇಚ್ಛಿವಲಿಂಗಕಂ ॥ ೪೨ ॥

ಸ್ವೀಕರೋತಿ ಯದಾ ಲಿಂಗಂ ಗುರುಣಾ ದೀಕ್ಷಯಾ ಮುನಾ ।
ತದಾ ಪ್ರಭೃತಿ ಲಿಂಗೈಕ್ಯಮವಿನಾಭಾವ ಯೋಗತಃ ॥ ೪೬ ॥
ದೇಹಂ ಪ್ರಾಣೇನ ಸಂಸ್ಥಾಪ್ಯ ಪ್ರಾಣಲಿಂಗೇನ ನಿಕ್ಷಿಪೇತ್ ।
ಪ್ರಾಣೇ ನಿಕ್ಷೇಪಯೇಲ್ಲಿಂಗಂ ಪೃಥಗ್ಭಾವಂ ನ ಕಾರಯೇತ್ ॥

ಅಂದರೆ—ಮಸ್ತಕ, ಕಂಠ, ಭುಜ, ಹಸ್ತ, ಹೃದಯ, ನಾಭಿಮಂಡಲ ಇವುಗಳೊಳಗೆ ಒಂದು ಸ್ಥಲದಲ್ಲಿ ಲಿಂಗವನ್ನು ಧರಿಸತಕ್ಕದ್ದು. ವಿಧ್ಯುಕ್ತವಾಗಿ ಗುರುವಿನಿಂದ ಲಿಂಗಧಾರಣನಾಗಿ ಲಿಂಗದಲ್ಲಿ ನಿಷ್ಠಾವಂತನಾಗಿ ಅವಿನಾಭಾವನೆಯಿಂದ ಪ್ರಾಣದಿಂದ ದೇಹವನ್ನು ಕೂಡಿಸಿ ಪ್ರಾಣವನ್ನು ಲಿಂಗದಿಂದ ನೋಡಬೇಕು. ಪ್ರಾಣದಲ್ಲಿ ಲಿಂಗವನ್ನಿರಿಸಿ ಪೃಥಗ್ಭಾವವನ್ನು ಹೊಂದಕೂಡದು.

### ವೀರಾಗಮ—ಪಟಲ ೩

ಗುರೋಶ್ಚ ಜಂಗಮಶ್ಚೈವ ಶಿವಲಿಂಗಸ್ಯ ಪೂಜನಂ ।
ಏಷಾಂ ಪಾದೋದಕಂ ಚೈವ ಭುಕ್ತಶೇಷಾನ್ನಮೇವ ಚ ।
ಭಕ್ಷಯೇತ್ಶಿವಭಕ್ತಸ್ತು ಪ್ರಸಾದೋ ಜನ್ಮಶುದ್ಧದಃ ॥

ಗುರುಲಿಂಗಜಂಗಮರ ಪೂಜೆಯನ್ನು ಮಾಡಿ, ಅವರುಗಳ ಪಾದೋದಕವನ್ನು ಸ್ವೀಕರಿಸಿ, ಅವರ ಪ್ರಸಾದವನ್ನು ಸ್ವೀಕರಿಸಿದರೆ ಅವನ ಜನ್ಮವು ಶುದ್ಧವಾಗುವದು.

### ಪಾರಮೇಶ್ವರಾಗಮ—ಪಟಲ ೧

ನ ವೀರಶೈವಸದೃಶಂ ಮತಮಸ್ತಿ ಜಗತ್ರಯೇ ।
ಸರ್ವಭೋಗಪ್ರದಂ ಪುಣ್ಯಂ ಶಿವಸಾಯುಜ್ಯದಾಯಕಂ ॥
ಯಸ್ಯ ಭಸ್ಮ ಲಲಾಟೇಸ್ತಿ ಕಂಠೇ ಲಿಂಗಂ ಮದಾತ್ಮಕಂ ।
ರುದ್ರಾಕ್ಷಧಾರಣಂ ದೇಹೇ ಸೋಹಂ ದೇವಿ ನ ಸಂಶಯಃ ॥

ಅಂದರೆ—ಮೂರು ಲೋಕಗಳಲ್ಲಿಯೂ ವೀರಶೈವ ಮತಕ್ಕೆ ಸದೃಶವಾದ ಮತವು ಇರುವದಿಲ್ಲ. ಈ ಮತವು ಸರ್ವಭೋಗಪ್ರದವೂ, ಪುಣ್ಯಕರವೂ, ಶಿವಸಾಯುಜ್ಯವನ್ನು ಕೊಡತಕ್ಕದ್ದೂ ಆಗಿರುತ್ತದೆ. ಯಾವಾತನ ಹಣೆಯಲ್ಲಿ ಭಸ್ಮವೂ, ಕಂಠದಲ್ಲಿ ನನ್ನ ಸ್ವರೂಪವಾದ ಲಿಂಗವೂ, ದೇಹದಲ್ಲಿ ರುದ್ರಾಕ್ಷಧಾರಣವೂ ಇರುತ್ತದೆಯೋ ಅವನೇ ನಾನು. ದೇವಿಯೇ! ಇದರಲ್ಲಿ ಸಂಶಯವಿಲ್ಲವು.

### ಪಾರಮೇಶ್ವರಾಗಮ—ಪಟಲ ೩

ಸದಾ ವಿಭೂತಿಸಂಪರ್ಕಾತ್ ಸದಾ ರುದ್ರಾಕ್ಷಧಾರಣಾತ್ ।
ಧಾರಣಾನ್ಮಮ ಲಿಂಗಸ್ಯ ಸೋಹಮೇವ ನ ಸಂಶಯಃ ॥

ಸದಾ ವಿಭೂತಿ ರುದ್ರಾಕ್ಷಿಗಳನ್ನು ಧಾರಣಮಾಡುವದರಿಂದಲೂ, ಲಿಂಗವನ್ನು ಧರಿಸುವದರಿಂದಲೂ ಅವನೇ ನಾನು; ಇದರಲ್ಲಿ ಸಂಶಯವಿಲ್ಲ.

### ಕಾಮಿಕಾಗಮ—ವೀರಶೈವಾನಂದಚಂದ್ರಿಕಾ, ಪುಟ ೯೫

ಬಿಂದುನಾದಾತ್ಮಕಂ ಸರ್ವಂ ಜಗತ್ಸ್ಥಾವರ ಜಂಗಮಂ ।
ಬಿಂದುಶ್ಶಕ್ತಿಃ ಶಿವೋ ನಾದಃ ಶಿವಶಕ್ತ್ಯಾತ್ಮಕಂ ಜಗತ್ ।

ನಾದಾಧಾರ ಸ್ವಯಂಬಿಂದುರ್ಬಿಂದ್ವಾಧಾರಮಿದಂ ಜಗತ್ ।
ಜಗದಾಧಾರ ಭೂತೌಹಿ ಬಿಂದುನಾದೌ ವ್ಯವಸ್ಥಿತೌ ।
ಬಿಂದುನಾದಯುತಂ ಸರ್ವಂ ಸಕಲೀಕರಣಂ ಭವೇತ್ ॥
ಸಕಲೀ ಕರಣಾಜ್ಜನ್ಮ ಜಗತ್ತ್ರಪ್ನೋತ್ಯಸಂಶಯಂ ।
ಬಿಂದುರ್ವೇದಿಃ ಶಿವೋ ನಾದಃ ಶಿವಲಿಂಗಂ ತು ಕಥ್ಯತೇ ॥
ವೀರಶೈವಕ್ರಮಃ ಪ್ರೋಕ್ತಃ ಪ್ರಾಯಶ್ಚಿತ್ತವಿವರ್ಜಿತಃ ।
ಯದ್ದತ್ತಂ ಗುರುಣಾ ಲಿಂಗಂ ಅವಧಾನೇನ ಧಾರಯೇತ್ ॥

ಸ್ಥಾವರಜಂಗಮಾತ್ಮಕವಾದ ಈ ಸರ್ವ ಜಗತ್ತು ಬಿಂದುನಾದಾತ್ಮಕವಾದುದು. ಬಿಂದುವೇ ಶಕ್ತಿ; ಶಿವನೇ ನಾದ. ಈ ಜಗತ್ತು ಶಿವಶಕ್ತ್ಯಾತ್ಮಕವಾದುದು. ನಾದಕ್ಕೆ ಬಿಂದುವು ಆಧಾರವಾದುದು; ಬಿಂದುವಿಗೆ ಈ ಜಗತ್ತು ಆಧಾರವಾಗಿರುವದು. ಬಿಂದುನಾದಗಳು ಜಗತ್ತಿಗೆ ಆಧಾರಭೂತಗಳಾಗಿ ವ್ಯವಸ್ಥಾ ಮಾಡಲ್ಪಟ್ಟಿರುತ್ತವೆ. ಬಿಂದುನಾದಗಳಿಂದ ಕೂಡಿದುದು ಸಕಲೀಕರಣವಾಗುವದು. ಜನ್ಮವು ಸಕಲೀಕರಣವಾಗುವದರಿಂದ ಜಗತ್ತನ್ನು ಹೊಂದುತ್ತದೆ. ಬಿಂದುವೇ ವೇದಿಯು; ಶಿವನೇ ನಾದ. ಇದಕ್ಕೆ ಶಿವಲಿಂಗ ವೆಂದು ಹೇಳಲಾಗುತ್ತದೆ. ಪ್ರಾಯಶ್ಚಿತ್ತರಹಿತವಾದ ವೀರಶೈವಕ್ರಮವು ಹೇಳಲಾಗಿದೆ. ಗುರುವಿನಿಂದ ಕೊಡಲ್ಪಟ್ಟ ಲಿಂಗವನ್ನು ಸಾವಧಾನದಿಂದ ಧರಿಸತಕ್ಕದ್ದು.

**ಸಿದ್ಧಾಂತ ಶೇಖರ—ವೀರಶೈವಾನಂದಚಂದ್ರಿಕಾ, ಪುಟ ೫೬**

ಲಿಂಗಂ ಚ ತ್ರಿವಿಧಂ ಪ್ರೋಕ್ತಂ ಸ್ಥೂಲಂ ಸೂಕ್ಷ್ಮಂ ಪರಾತ್ಪರಮ್ ।
ಇಷ್ಟಲಿಂಗಮಿದಂ ಸ್ಥೂಲಂ ತದ್ಬಹಿರ್ಧಾರಯೇತ್ತನೌ ॥
ಪ್ರಾಣಲಿಂಗಂ ತು ತತ್ಸೂಕ್ಷ್ಮಂ ಯದಂತರ್ಭಾವನಾಮಯಂ ।
ಪರಾಪರಂ ತು ಯತ್ಪ್ರೋಕ್ತಂ ತೃಪ್ತಿಲಿಂಗಂ ತದುಚ್ಯತೇ ।
ಭಾವನಾತೀತಮವ್ಯಕ್ತ ಪರಬ್ರಹ್ಮ ಶಿವಾಭಿದಂ ॥
ಇಷ್ಟಲಿಂಗಮಿದಂ ಸಾಕ್ಷಾದನಿಷ್ಟಪರಿಹಾರಕಂ ।
ಧಾರಯೇದವಧಾನೇನ ಶರೀರೇ ಸರ್ವದಾ ಬುಧಃ ॥

ಅಂದರೆ—ಲಿಂಗವು ಸ್ಥೂಲ, ಸೂಕ್ಷ್ಮ, ಕಾರಣವೆಂದು ಮೂರು ಪ್ರಕಾರವಾಗಿರುವದು. ಸ್ಥೂಲವಾದ ಇಷ್ಟಲಿಂಗವನ್ನು ಶರೀರದ ಹೊರಗೆ ಧರಿಸತಕ್ಕದ್ದು. ಸೂಕ್ಷ್ಮವಾದುದೇ ಪ್ರಾಣಲಿಂಗವು. ಇದು ಒಳಗೆ ಭಾವನಾಮಯವಾದುದು. ಪರಾತ್ಪರವಾಗಿ ತೃಪ್ತಿಲಿಂಗ ವೆಂದು ಹೇಳಲ್ಪಡುತ್ತದೆ. ಭಾವನಾತೀತವಾದುದೇ ಭಾವಲಿಂಗ. ಇದು ಅವ್ಯಕ್ತ ಪರಬ್ರಹ್ಮ ಶಿವನೆಂಬುವ ಹೆಸರುಳ್ಳದ್ದಾಗಿರುವದು. ಇಷ್ಟಲಿಂಗವು ಅನಿಷ್ಟವನ್ನು ಪರಿಹಾರ ಮಾಡತಕ್ಕದ್ದು. ಆದ್ದರಿಂದ ಇದನ್ನು ಪಂಡಿತನಾದವನು ಯಾವಾಗಲೂ ಶರೀರದಲ್ಲಿ ಧರಿಸಬೇಕು.

**ಚಂದ್ರಜ್ಞಾನಾಗಮ—ವೀರಶೈವಾನಂದಚಂದ್ರಿಕಾ, ಪುಟ ೯೬**

ಪ್ರಾಣಾಸ್ತು ವೀರಶೈವಾನಾಂ ಇಷ್ಟಲಿಂಗೇ ವಸಂತಿ ಹಿ ।
ರಕ್ಷಣೀಯಂ ಪ್ರಯತ್ನೇನ ಲಿಂಗಪ್ರಾಣೈರತಂದ್ರಿತೈಃ ॥

ವೀರಶೈವನ ಪ್ರಾಣವು ಇಷ್ಟಲಿಂಗದಲ್ಲಿ ವಾಸವಾಗಿರುತ್ತವೆ. ಆದ್ದರಿಂದ ಪ್ರಯತ್ನ ಪೂರ್ವಕವಾಗಿ ಆ ಲಿಂಗವನ್ನು ರಕ್ಷಣೆ ಮಾಡತಕ್ಕದ್ದು.

ಆಗಮಗಳಲ್ಲಿ ಲಿಂಗಧಾರಣ ವಿಷಯವನ್ನು ವಿಸ್ತಾರವಾಗಿ ಹೇಳಿದ್ದಾಯಿತು.

## ಶಿವಪುರಾಣಗಳಲ್ಲಿ ಲಿಂಗಧಾರಣವು

ಶ್ರೀ ವ್ಯಾಸಮಹರ್ಷಿಗಳು ಶಿವಪರವಾಗಿ ರಚಿಸಿದ ೧೦ ಪುರಾಣಗಳಲ್ಲಿ ಲಿಂಗ ಪುರಾಣ, ಸ್ಕಂದಪುರಾಣ ಮತ್ತು ಶಿವಪುರಾಣಗಳಲ್ಲಿ ಲಿಂಗದ ವಿಷಯಕ್ಕೆ ಅನೇಕ ಪ್ರಮಾಣಗಳು ಸಿಗುತ್ತವೆ. ಲಿಂಗಪುರಾಣವಂತೂ ಸಂಪೂರ್ಣವಾಗಿ ಲಿಂಗಧಾರಣ ವಿಷಯವನ್ನು ಸಮರ್ಥಿಸುತ್ತದೆ. ಲಿಂಗಪುರಾಣದಲ್ಲಿಯ ಪ್ರಮಾಣಗಳನ್ನು ಎಲ್ಲ ಮತದ ಪಂಡಿತರೂ ಕೂಡ ಒಪ್ಪಿಕೊಳ್ಳುತ್ತಾರೆ. ಇಲ್ಲಿ ಉದಾಹರಣೆಗಾಗಿ—

"ನೀಲಕಂಠ ವಿಜಯ" ಚಂಪುವನ್ನು ತೆಗೆದುಕೊಳ್ಳೋಣ. ಇದನ್ನು ನೀಲಕಂಠ ದೀಕ್ಷಿತರೆಂಬುವ ಶೈವಪಂಡಿತರು ರಚಿಸಿರುತ್ತಾರೆ. ಮಹಾದೇವಪಂಡಿತರೆಂಬುವ ಸ್ಮಾರ್ತ ಬ್ರಾಹ್ಮಣ ಪಂಡಿತರು ವ್ಯಾಖ್ಯಾನವನ್ನು ಬರೆದಿರುತ್ತಾರೆ. ಶಂಕರರಾಮಶಾಸ್ತ್ರಿ, ಎಂ.ಎ., ಬಿ.ಎಲ್., ಇವರು ಇದನ್ನು ಶೋಧಿಸಿ ಮದ್ರಾಸಿನಲ್ಲಿ ಅಚ್ಚುಮಾಡಿಸಿರುತ್ತಾರೆ.

### ನೀಲಕಂಠವಿಜಯ—ಪುಟ ೨೪

ಮೂಲಗ್ರಂಥದಲ್ಲಿ "ಪಾಶುಪತ ಅವಹೇಳನಮಿವ ಭಸ್ಮೀಕೃತ ಜಗತ್ರಯಂ" ಎಂದು ಸಂದರ್ಭವು ಬಂದಿರುತ್ತದೆ.

ಅದಕ್ಕೆ ಟೀಕಾಕಾರರು "ಪಾಶುಪತಾಃ ಶಿವಭಕ್ತಾಃ" ಎಂದು ಹೇಳಿ "ಶಿವಭಕ್ತ ಸ್ವರೂಪಂ ಸ್ಕಂದೇ" ಅಂದರೆ ಸ್ಕಂದ ಪುರಾಣದಲ್ಲಿ ಶಿವಭಕ್ತನ ಸ್ವರೂಪವು—

ಯೋ ಹಸ್ತಪೀಠೇ ಶಿವಲಿಂಗನಿಷ್ಠ ನಿವೇಶ್ಯ ತಲ್ಲೀನಮನಃ ಪ್ರಚಾರಃ ।
ಬ್ರಾಹ್ಯಕ್ರಿಯಾ ಸಂಕುಲ ನಿಸ್ಪೃಹಾತ್ಮಾ ಸಂಪೂಜಯತ್ಯಂಗ ಸ ವೀರಶೈವಃ ॥

ಯಾವಾತನು ತನ್ನ ಹಸ್ತಪೀಠದಲ್ಲಿ ಇಷ್ಟಲಿಂಗವನ್ನಿಟ್ಟುಕೊಂಡು ತಲ್ಲೀನನಾಗಿ ಹೊರಗಿನ ಕ್ರಿಯೆಗಳನ್ನು ಮರೆತು ಪೂಜಿಸುತ್ತಾನೆಯೋ ಅವನೇ ವೀರಶೈವನು. ಮತ್ತು ಸ್ಕಂದ ಪುರಾಣದಲ್ಲಿ—

ಭಕ್ತಾನಾಂ ಗಣಮೂರ್ತಿನಾಂ ಪ್ರಾಣಲಿಂಗಾಂಗ ಸಂಗಿನಾಂ ।
ಅತಿಥೀನಾಂ ದ್ವಿಜಾಗ್ರಾಣಾಂ ಪ್ರಾಜ್ಞಸ್ಸನ್ಮಾನಮಾಚರೇತ್ ॥

ಪ್ರಾಣಲಿಂಗಾಂಗಸಂಗಿಗಳೂ, ಭಕ್ತಶ್ರೇಷ್ಠರೂ ಆದಂತಹ ಅತಿಥಿಗಳಿಗೆ ಪ್ರಾಜ್ಞನಾದವನು ಸನ್ಮಾನವನ್ನು ಮಾಡಬೇಕು. ಇದು ವೀರಶೈವನಾದವನಿಗೆ ಭೂಷಣಾಸ್ಪದವಾದುದೇ ಸರಿ.

ಆದರೆ ಮೇಲೆ ಬರೆದ ಪುರಾಣಗಳಲ್ಲಿ ಇತ್ತಿತ್ತ ಅಚ್ಚಾದ ಪುಸ್ತಕಗಳಲ್ಲಿ ಎಷ್ಟೋ ಶ್ಲೋಕಗಳನ್ನು ಕಿತ್ತುಹಾಕಿರುವದು ತಿಳಿದುಬಂದಿದೆ. ೧೯೩೫ ನೆಯ ಇಸವಿಯಲ್ಲಿ ಹೈದರಾಬಾದಿನೊಳಗೆ ಪರಳಿಯ ಜ್ಯೋತಿರ್ಲಿಂಗದ ಪೂಜೆಯ ವಿಷಯಕ್ಕೆ ನಡೆದ ವ್ಯಾಜ್ಯದಲ್ಲಿ ಈ ವಿಷಯವು ತಿಳಿಯಬಂದಿತು. ತೆಲುಗು ಅಕ್ಷರದಲ್ಲಿ ಲಿಂಗಪುರಾಣ ದಲ್ಲಿಯ ನೂರಾರು ಶ್ಲೋಕಗಳು ಬಾಲಬೋಧ ಲಿಪಿಯಲ್ಲಿ ಅಚ್ಚಾದ ಲಿಂಗಪುರಾಣ ದಲ್ಲಿರುವದೇ ಇಲ್ಲ. ಇದು ಶೋಚನೀಯವೂ, ನಿಂದ್ಯವೂ ಆದ ಕೃತಿಯಾಗಿರುತ್ತದಲ್ಲದೆ ವೀರಶೈವರನ್ನು ಕಣ್ಣು ತೆರೆಸುವಂತಹ ವಿಷಯವಾಗಿರುತ್ತದೆ.

### ಸ್ಕಂದಪುರಾಣ—ಕೇದಾರಖಂಡ, ಅಧ್ಯಾಯ ೭

ಯಥೋಕ್ತಾ ಶಿವಧರ್ಮಾ ಹಿ ನಂದಿನಾ ಪರಿಕೀರ್ತಿತಾಃ ।
ಶೈಲಾದೇನ ಮಹಾಭಾಗಾಃ ವಿಚಿತ್ರಾ ಲಿಂಗಧಾರಕಾಃ ॥
ಶವಸ್ಯೋಪರಿ ಲಿಂಗಂ ತು ಧ್ರಿಯತೇ ಹಿ ಪುರಾತನೈಃ ।
ಲಿಂಗೇನ ಸಹಪಂಚತ್ವಂ ಲಿಂಗೇನ ಸಹಜೀವಿತಂ ॥
ಏತೇಧರ್ಮಾಸ್ಸುಪ್ರತಿಷ್ಠಾಃ ಶೈಲಾದೇನ ಮಹಾತ್ಮನಾ ।

ಮಹಾತ್ಮನಾದ ನಂದೀಶ್ವರನು ಈ ಶಿವಧರ್ಮ ಪ್ರತಿಷ್ಠಾಗೊಳಿಸಿರುವನು. ಈ ಲಿಂಗ ಧಾರಕರು ವಿಚಿತ್ರರಾಗಿರುತ್ತಾರೆ. ಕಾರಣವೇನೆಂದರೆ ಶವದಮೇಲೂ ಲಿಂಗವನ್ನು ಧರಿಸತಕ್ಕವರು. ಲಿಂಗದೊಡನೆಯೇ ಜೀವನವು; ಲಿಂಗದೊಡನೆಯೇ ಮರಣವು. ಹೀಗೆ ಇರುವವರೇ ಲಿಂಗಧಾರಿಗಳು.

ಇನ್ನು ಈ ಶಿವಲಿಂಗವನ್ನು ಎಲ್ಲ ದೇವತೆಗಳೂ ಬೇರೆಬೇರೆ ತರಹದಿಂದ ಪೂಜಿಸುತ್ತಿದ್ದರೆನ್ನುವ ಬಗ್ಗೆ ಅನೇಕ ಪ್ರಮಾಣಗಳಿರುತ್ತವೆ.

### ಸ್ಕಂದಪುರಾಣ—ಕೇದಾರಖಂಡ, ಅಧ್ಯಾಯ ೩

ಇಂದ್ರನೀಲಮಯಂ ಲಿಂಗಂ ವಿಷ್ಣುಃ ಪೂಜಯತೇ ಸದಾ ।
ಬ್ರಹ್ಮಾ ಮಣಿಮಯಂ ಲಿಂಗಂ ಪೂಜಯತ್ಯನಿಶಂ ಶುಭಂ ॥
ಇಂದ್ರೋ ರತ್ನಮಯಂ ಲಿಂಗಂ ಚಂದ್ರೋ ಮುಕ್ತಾಮಯಂ ತಥಾ ।
ಭಾನುಸ್ತಾಮ್ರಮಯಂ ಲಿಂಗಂ ಪೂಜಯತ್ಯನಿಶಂ ಶುಭಂ ॥
ರೌಪ್ಯಂ ಲಿಂಗಂ ಕುಬೇರಶ್ಚ ಪಾಶೀಚಾಲ ಕ್ಷಮೇವ ಚ ।
ಯಮೋ ನೀಲಮಯಂ ಲಿಂಗಂ ರಾಸಸಂ ನೈಋತೋ ತಥಾ ॥
ಕಾಶ್ಮೀರೋ ಪವನಂ ಲಿಂಗಂ ಅರ್ಚಯಂತ್ಯನಿಶಂ ವಿಭೋಃ ।
ಏವಂತೇ ಲಿಂಗಿತಾಃ ಸರ್ವೇ ಲೋಕಪಾಲಾಃ ಸ ವಾಸವಾಃ ॥
ತಥಾ ಸರ್ವೇಽಪಿ ಗಂಧರ್ವಾಃ ಪಾತಾಲೇ ಕಿನ್ನರೈಸ್ಸಹ ।

ವಿಷ್ಣುವು ಇಂದ್ರನೀಲಮಣಿಮಯ ಲಿಂಗವನ್ನು ಸದಾ ಪೂಜಿಸುತ್ತಾನೆ. ಮಣಿಮಯ ಲಿಂಗವನ್ನು ಬ್ರಹ್ಮನು ಪೂಜಿಸುತ್ತಾನೆ. ಇಂದ್ರನು ರತ್ನಮಯ ಲಿಂಗವನ್ನೂ, ಚಂದ್ರನು ಮುತ್ತಿನ ಲಿಂಗವನ್ನೂ, ಸೂರ್ಯನು ತಾಮ್ರ ಲಿಂಗವನ್ನೂ, ಕುಬೇರನು ಬೆಳ್ಳಿಯ ಲಿಂಗವನ್ನೂ, ಯಮನು ನೀಲಮಯ ಲಿಂಗವನ್ನೂ ಹೀಗೆಯೇ ಬೇರೆಬೇರೆ ದೇವತೆಗಳು ಬೇರೆಬೇರೆ ಪ್ರಕಾರವಾಗಿ ಲಿಂಗವನ್ನು ಪೂಜಿಸುತ್ತಾರೆ.

### ಸ್ಕಂದಪುರಾಣ—ಅರುಣಾಚಲಮಾಹಾತ್ಮ್ಯ ಖಂಡ

ಭಗವನ್ ಸರ್ವಧರ್ಮಜ್ಞ ಗೌತಮಾರ್ಯ ಮುನೀಶ್ವರ ।
ಮಯಾನ್ಯಧರ್ಮರೂಪೇಣ ಕೋಪ್ಯಧರ್ಮಃ ಪ್ರಕಲ್ಪಿತಃ ।
ದೇವಾನಾಂ ರಕ್ಷಣಂ ಕರ್ತುಮಭಯಂ ದಾತುಮುದ್ಯತಾಂ ॥ ೫೪ ॥
ಅಜ್ಞಾನಾನ್ಮಹಿಷಂ ದೈತ್ಯಂ ಶಿವಭಕ್ತಮಮರ್ದಯಂ ।
ರಜಸಾ ಕ್ರಾಂತಬುದ್ಧೀನಾಂ ನ ಭವೇದ್ಧರ್ಮಸಂಗ್ರಹಃ ॥ ೫೫ ॥
ಗುರುಪ್ರಸಾದ ಸುಲಭಃ ಸ್ಫುರದ್ವಿಘ್ನಶತಾಕುಲಃ ।
ಸುದುರ್ಧರ್ಷೋ ಸಿರಾಚಾರ ಮರ್ದನಾಃ ಶಿವಸಂಶಯಾಃ ॥ ೫೬ ॥
ವಿಶೇಷತೋ ಲಿಂಗಧರಾಃ ಶಿವಸ್ತಾನ್ ಬಹುಮನ್ಯತೇ ।
ಪುರಾ ಪುರತ್ರಯಾವಾಸಾ ದೈತೇಯಾ ಲಿಂಗಧಾರಕಾಃ ॥ ೫೭ ॥

ಅಜಿತಾಃ ಶಂಭುನಾ ಪೂರ್ವಂ ಮುಕ್ತಲಿಂಗಾ ವಿದೂಷಿತಾಃ ।
ಆಸ್ಯಕಂಠಸ್ಥಿತಂ ಲಿಂಗಮುಮಪಾಣಿಂ ನ ಮುಂಚತಿ ॥ ೫೮ ॥

ಲಿಂಗಧಾರಕರಾದ ದೈತ್ಯರು ಪುರತ್ರಯಗಳಲ್ಲಿ ವಾಸವನ್ನು ಮಾಡಿ ಅಜೇಯರಾಗಿದ್ದರು. ಅಂತಹ ಲಿಂಗಧಾರಕರನ್ನು ಶಿವನು ಬಹಳ ಮನ್ನಿಸುತ್ತಾನೆ.

ಇದಕ್ಕೆ ಗೌತಮ ಮಹರ್ಷಿಗಳು ಕೆಳಗೆ ಬರೆದ ಪ್ರಕಾರ ಉತ್ತರವನ್ನು ಕೊಡುತ್ತಾರೆ.

ಪೂರ್ವಜನ್ಮನಿ ಭಕ್ತೋಯಮರುಣಾದ್ರಿಪತೇಃ ಸ್ಫುಟಂ ।
ಮಹಿಷತ್ವೇ ಮದಾಕ್ರಾಂತಃ ಪರಲಿಂಗೇನ ಸಂಗತಃ ।
ಭಕ್ತ್ಯಾ ಲಿಂಗಧರಂ ಹಂತುಮ್ ಕಃ ಸಮರ್ಥೋ ಜಗತ್ರಯೇ ॥ ೬೨ ॥
ದೃಷ್ಟ್ವಾ ಪುರತ್ರಯೇ ಪೂರ್ವಂ ರುದ್ರೇಣ ನಿಜಿತಾಸ್ತ್ರಯಃ ।
ತತ್ ಖಡ್ಗ ಪರಿಕೃತ್ತೇನ ಕಂಠೇನಾಸ್ಯೇ ವರಾನನೇ ॥ ೬೩ ॥
ದೀಕ್ಷಾ ವಿರಹಿತಂ ಲಿಂಗಂ ದತ್ತಂ ಹಂತೀತಿ ಚೋದಿತಂ ।
ಕೃತಂ ಹಿ ಮಹಿಷೇಣಾಪಿ ಭಕ್ತಿತೋ ಲಿಂಗಧಾರಣಂ ॥ ೬೪ ॥
ಪೂರ್ವಜನ್ಮತಪೋ ಯೋಗಾತ್ ಸ್ಮರಣಾಲ್ಲಿಂಗಧಾರಣಾತ್ ।
ತ್ವತ್ಪಾದ ಪದ್ಮಸಂಸ್ಪರ್ಶಾದಯಂ ಮುಕ್ತೋ ನ ಸಂಶಯಃ ॥ ೬೫ ॥

ಶ್ರೀ ಗೌತಮ ಮಹರ್ಷಿಗಳು ಲಿಂಗದ ಮಹಿಮೆಯನ್ನು ವರ್ಣಿಸಿರುತ್ತಾರೆ. ಭಕ್ತಿಯಿಂದ ಲಿಂಗವನ್ನು ಪೂಜಿಸತಕ್ಕವರಿಗೆ ಲೋಕದಲ್ಲಿ ಯಾರೂ ಸಮಾನರಿಲ್ಲ. ಅವರು ಯಾರಿಗೂ ಮಣಿಯುವದಿಲ್ಲ. ಪೂರ್ವದಲ್ಲಿ ಅನೇಕ ಮನು, ಮುನಿ, ಸಿದ್ಧರೆಲ್ಲ ಲಿಂಗವನ್ನು ಪೂಜಿಸಿ ಗೌರವಪಡೆದಿರುತ್ತಾರೆಂದು ಗೌತಮ ಮಹರ್ಷಿಗಳು ಇತಿಹಾಸದ ಉಲ್ಲೇಖವನ್ನು ಮಾಡಿರುತ್ತಾರೆ.

ಹೀಗೆಯೇ ಸ್ಕಂದಪುರಾಣದಲ್ಲಿ ಇನ್ನೂ ಅನೇಕ ಪ್ರಮಾಣಗಳು ಸಿಗುತ್ತವೆ. ಲಿಂಗಪುರಾಣದಲ್ಲಿ ಸಂಪೂರ್ಣವಾಗಿ ಲಿಂಗದ ಮಹಾತ್ಮ್ಯೆಯು ಹೇಳಲ್ಪಟ್ಟಿರುತ್ತದೆ. ಆದರೆ ಇಲ್ಲಿ ಲಿಂಗಪುರಾಣದ ಒಂದೆರಡು ಸನ್ನಿವೇಶಗಳನ್ನು ಕೊಡಲಾಗುತ್ತೆ.

ದೀಯತೇ ಲಿಂಗಸಂಬಂಧಃ ಕ್ಷೀಯತೇ ಚ ಮಲತ್ರಯಂ ।
ದೀಯತೇ ಕ್ಷೀಯತೇ ತಸ್ಮಾತ್ಸಾದೀಕ್ಷೇತಿ ನಿಗದ್ಯತೇ ॥
ಸಾ ದೀಕ್ಷಾ ಪರಮಾ ಶೈವೀ ತ್ರಿಧಾ ಭವತಿ ನಿರ್ಮಲಾ ।
ಏಕಾ ವೇಧಾತ್ಮಿಕಾ ಸಾಕ್ಷಾದನ್ಯಾಮಂತ್ರಾತ್ಮಿಕಾಮತಾ ॥
ಕ್ರಿಯಾತ್ಮಿಕಾ ಪರಾಕಾಚಿ ದೇವಮೇವ ತ್ರಿಧಾ ಭವೇತ್ ।
ಹಸ್ತ ಮಸ್ತಕ ಸಂಯೋಗಾದ್ವೇಧೇತಿ ಪರಿಗೀಯತೇ ॥
ಗುರುಣೋದೀರಿತಾಕರ್ಣೇ ಯಾ ಸಾ ಮಂತ್ರೇತಿ ಕಥ್ಯತೇ ।
ಶಿಷ್ಯಪಾಣಿತಲೇ ದತ್ತಾ ಯಾ ದೀಕ್ಷಾ ಸಾ ಕ್ರಿಯಾಮತಾ ॥
ಪಾಶಾನಶೇಷಾನ್ ಕರ್ತಯಾರ್ಚಿತ್ವಾ ಲಿಂಗಂ ಸಮಾದಿಶೇತ್ ।
ಕರ್ತರೀ ಶಿವದೀಕ್ಷಾಸ್ಯಾದ್ಯಯಾಪಾಶಾನ್ ಛಿನತ್ಯಸೌ ॥
ಕೃತ್ವಾ ಶೈವೀಂ ಪರಾಂ ದೀಕ್ಷಾಂ ತತ್ವವಿದ್ಯಾಂ ಶಿವಾತ್ಮಿಕಾಂ ।
ಛಿತ್ವಾ ವಿದ್ಯಾ ಮಹಾಕೋಶಂ ಕಲಾಧ್ಯಾನಂ ವಿಚಿಂತಯೇತ್ ॥
ಯಥಾ ಕಲಾ ತಥಾ ಭಾವೋ ಯಥಾ ಭಾವಸ್ತಥಾ ಮನಃ ।
ಯಥಾ ಮನಸ್ತಥಾ ದೃಷ್ಟಿಃ ಯಥಾ ದೃಷ್ಟಿಸ್ತಥಾ ಸ್ಥಲಂ ॥
ಯಾಕಲಾ ಪರಮಾ ಸೂಕ್ಷ್ಮಾ ಮಂತ್ರಾಸಾಂ ಬೋಧಿನೀ ಪರಾ ।
ತಾಮಾಕೃಷ್ಯ ಯಥಾ ನ್ಯಾಯಂ ಲಿಂಗೇ ಸಮುಪವೇಶಯೇತ್ ॥

ತತಸ್ತಲ್ಲಿಂಗಮಸ್ಯಾಂಗೇ ಶಿಷ್ಯಸ್ಯಾಮಿತ ತೇಜಸಾ ।
ಸಂಯೋಜನೀಯಂ ಗುರುಣಾ ಪೂರ್ವೋಕ್ತೇನೈವವರ್ತ್ಮನಾ ॥
ತನುತ್ರಯಗತಾನಾದಿ ಮಲತ್ರಯಮಸೌ ಗುರುಃ ।
ದೀಕ್ಷಾ ತ್ರಯೇಣ ನಿರ್ದಗ್ಧ್ವಾ ಲಿಂಗತ್ರಿತಯಮಾದಿಶೇತ್ ॥
ಲಿಂಗಂ ತು ತ್ರಿವಿಧಂ ಪ್ರೋಕ್ತಂ ಸ್ಥೂಲಂ ಸೂಕ್ಷ್ಮಂ ತು ಕಾರಣಂ ।
ಧಾರಯಂತೋ ನರಾ ಸ್ಥೂಲಂ ಕಾರಣಂ ಸಂಪ್ರಯಾಂತಿ ಹಿ ॥
ಕುರ್ಯಾತ್ರಿಪುಟಸಂಧಾನಂ ಶಿವಸಾಯುಜ್ಯಕಾರಣಂ ।
ವಕ್ಷ್ಯೇ ತ್ರಿಪುಟಸಂಧಾನ ಲಕ್ಷಣಂ ಶಿವಯೋಗಿನಾಂ ॥
ಸ್ಥೂಲಸ್ಯ ಲಿಂಗದೇಹಸ್ಯ ಸೂಕ್ಷ್ಮಸ್ಯ ಮನಸಸ್ತಥಾ ।
ಕಾರಣಸ್ಯಾತ್ಮನೋ ನಿತ್ಯಂ ಕುರ್ಯಾದೈಕ್ಯ ಮತಂದ್ರಿತಃ ॥
ಅಂಗೇನ ಧಾರಯೇಲ್ಲಿಂಗಂ ಧ್ಯಾಯೇಚ್ಚಿತ್ತೇನ ಶಂಕರಂ ।
ಸ್ವಾತ್ಮನಾ ಭಾವಯೇತ್ಪೂರ್ಣಂಮೈಕ್ಯಭಾವೇನ ಸರ್ವತಃ ॥
ಏತತ್ತ್ರಿಪುಟಸಂಧಾನ ಲಕ್ಷಣಂ ಪರಿಕೀರ್ತಿತಂ ।
ಕೀಟೋ ಭ್ರಮರಯೋಗೇನ ಭ್ರಮರೋ ಭವತಿ ಧ್ರುವಂ ॥
ಮಾನವಃ ಶಿವಯೋಗೇನ ಶಿವೋ ಭವತಿ ನಿಶ್ಚಯಂ ।
ಅನೇನ ವರ್ತ್ಮನಾ ಗಚ್ಛನ್ ಸಜೀವನ್ನೇವ ಶಂಕರ ॥
ಬ್ರಹ್ಮವಿಷ್ಣ್ವಾದಯೋ ದೇವಾಃ ಮುನಯೋ ಗೌತಮಾದಯಃ ।
ಧಾರಯಂತಿ ಸದಾ ಲಿಂಗಂ ಉತ್ತಮಾಂಗೇ ವಿಶೇಷತಃ ॥
ವೇದೇಷು ಶಾಸ್ತ್ರಸಂಘೇಷು ಪುರಾಣೇಷ್ವಾಗಮೇಷು ಚ ।
ಬ್ರಾಹ್ಮಣಸ್ಯ ಸಮಾಖ್ಯಾತಂ ಲಿಂಗಧಾರಣಮುತ್ತಮಂ ॥
ಆಚಾರಲಿಂಗಂ ಪ್ರಥಮಂ ಗುರುಲಿಂಗಂ ದ್ವಿತೀಯಕಂ ।
ಶಿವಲಿಂಗಂ ತೃತೀಯಂ ಸ್ಯಾತ್ ಚರಲಿಂಗಂ ಚತುರ್ಥಕಂ ॥
ಪ್ರಸಾದಂ ಪಂಚಮಂ ಲಿಂಗಂ ಮಹಾಲಿಂಗಂ ತು ಷಷ್ಠಕಂ ।
ಭಕ್ತೋ ಮಾಹೇಶ್ವರಶ್ಚೈವ ಪ್ರಸಾದೀ ಪ್ರಾಣಲಿಂಗಕಃ ।
ಶರಣೈಕ್ಯಸ್ಥಲೇ ಷಡ್ಭಿಃ ಕ್ರಮಾಲ್ಲಿಂಗಮುದಾಹೃತಂ ॥

ಅಂದರೆ—ಲಿಂಗಸಂಬಂಧವನ್ನುಂಟುಮಾಡಿ ಆಣವಮಲ, ಮಾಯಾಮಲ, ಕಾರ್ಮಿಕ ಮಲಗಳೆಂಬ ಮಲತ್ರಯಗಳನ್ನು ನಾಶಮಾಡುವದಕ್ಕೆ ದೀಕ್ಷೆಯೆಂದು ಹೆಸರು. ಆ ದೀಕ್ಷೆಯು ವೇಧಾ, ಮಂತ್ರ, ಕ್ರಿಯಾತ್ಮಕವಾಗಿ ಮೂರು ಪ್ರಕಾರವಾಗಿರುತ್ತದೆ. ಹಸ್ತ ಮಸ್ತಕಗಳ ಸಂಯೋಗದಿಂದ ವೇಧಾ ದೀಕ್ಷೆಯೆಂತಲೂ,—ಅಂದರೆ ಗುರುವು ತನ್ನ ಹಸ್ತವನ್ನು ಶಿಷ್ಯನ ಮಸ್ತಕದ ಮೇಲೆ ಇಡುವದಕ್ಕೇನೆ ವೇಧಾ ದೀಕ್ಷೆಯೆಂದು ಹೆಸರು. ಗುರುವು ಶಿಷ್ಯನ ಕರ್ಣದಲ್ಲಿ ಮಂತ್ರೋಪದೇಶವನ್ನು ಮಾಡುವದಕ್ಕೆ ಮಂತ್ರ ದೀಕ್ಷೆಯೆಂತಲೂ, ಶಿಷ್ಯನ ಹಸ್ತದಲ್ಲಿ ಶಿವಲಿಂಗವನ್ನು ಕೊಡುವದಕ್ಕೆ ಕ್ರಿಯಾ ದೀಕ್ಷೆಯೆಂತಲೂ ಹೆಸರು.

ಶ್ರೀ ಗುರುವು ಶಿವದೀಕ್ಷಾರೂಪವಾದ ಕತ್ತರಿಯಿಂದ ಶಿಷ್ಯನ ಸಮಸ್ತ ಪಾಶಗಳನ್ನೂ ಕತ್ತರಿಸಿ ಶಿವಲಿಂಗಜ್ಞಾನವನ್ನುಂಟುಮಾಡಿಕೊಡುವನು. ಶ್ರೇಷ್ಠವಾದ ಶಿವದೀಕ್ಷೆಯನ್ನು ಮಾಡಿ ಶಿವಾತ್ಮಕವಾದ ತತ್ವವಿದ್ಯೆಯನ್ನು ಬೋಧಿಸಿ ಅವಿದ್ಯಾಕೋಶವನ್ನು ಭೇದಿಸಿ ಕಲೆಯ ಧ್ಯಾನವನ್ನು ಮಾಡುವನು. ಆ ಸೂಕ್ಷ್ಮಕಲೆಯನ್ನು ಆಕರ್ಷಿಸಿ ವಿಧ್ಯುಕ್ತವಾಗಿ ಶಿವಲಿಂಗದಲ್ಲಿ ಸಮಾವೇಶಮಾಡಿ ಕಲಾನ್ವಿತವಾದ ಆ ಶಿವಲಿಂಗವನ್ನು ಶಿಷ್ಯನ ಶರೀರದಲ್ಲಿ ಗುರುಪಿಸಿಂದ ಸಂಯೋಜನೆ ಮಾಡಬೇಕು. ಸ್ಥೂಲ-ಸೂಕ್ಷ್ಮ

ಕಾರಣಾದಿ ತನುತ್ರಯುವನ್ನಾವರಿಸಿದ ಮಲತ್ರಯುವನ್ನು ದೀಕ್ಷಾತ್ರಯುಗಳಿಂದ ಲಯ ಗೊಳಿಸಿ ಇಷ್ಟ, ಪ್ರಾಣ, ಭಾವರೂಪ ಲಿಂಗತ್ರಯುವನ್ನು ಬೋಧಿಸುವನು.

ಲಿಂಗವು ಸ್ಥೂಲ-ಸೂಕ್ಷ್ಮ ಕಾರಣಭೇದದಿಂದ ಮೂರು ಪ್ರಕಾರವಾಗಿರುವದು. ಸ್ಥೂಲಲಿಂಗವನ್ನು ಧರಿಸುವ ಮಾನವರು ಕಾರಣಲಿಂಗವನ್ನು ಹೊಂದುವರು. ಶಿವ ಸಾಯುಜ್ಯಕ್ಕೆ ಕಾರಣವಾದ ತ್ರಿಪುಟಿಸಂಧಾನವನ್ನು ಮಾಡಬೇಕು. ಸ್ಥೂಲವಾದ ಲಿಂಗ ದೇಹಕ್ಕೂ, ಸೂಕ್ಷ್ಮವಾದ ಮನಸ್ಸಿಗೂ ಕಾರಣವಾದ ಆತ್ಮನಿಗೂ ಯಾವಾಗಲೂ ಐಕ್ಯತೆಯನ್ನುಂಟುಮಾಡಬೇಕು. ಅಂಗದಲ್ಲಿ ಲಿಂಗವನ್ನು ಧರಿಸಿ ಚಿತ್ತದಲ್ಲಿ ಶಂಕರನನ್ನು ಧ್ಯಾನಿಸುತ್ತ ಪೂರ್ಣವಾಗಿ ಐಕ್ಯವನ್ನುಂಟುಮಾಡುವದಕ್ಕೆ ತ್ರಿಪುಟೀಸಂಧಾನ ವೆನಿಸುವದು.

ಕೀಡೆಯು ಭ್ರಮರದ ಸಂಪರ್ಕದಿಂದ ಭ್ರಮರವಾಗುವದು ನಿಶ್ಚಯುವಾದುದು. ಮಾನವನು ಶಿವಯೋಗದಿಂದ ಶಿವನಾಗುವದು ನಿಶ್ಚಯುವಾದುದು. ಈ ಮಾರ್ಗದಿಂದ ನಡೆಯತಕ್ಕವನು ಜೀವಿಸಿರುವಾಗಲೇ ಶಿವನಾಗುವನು.

ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೂ, ಗೌತಮಾದಿ ಮುನಿಗಳೂ ಮಸ್ತಕದಲ್ಲಿ ಲಿಂಗವನ್ನು ಧರಿಸಿಕೊಳ್ಳುವರು. ವೇದಶಾಸ್ತ್ರ ಪುರಾಣಾಗಮಾದಿಗಳಲ್ಲಿ ಬ್ರಾಹ್ಮಣನಾದ ವನಿಗೆ ಲಿಂಗಧಾರಣವು ಹೇಳಲ್ಪಟ್ಟಿರುತ್ತದೆ. ಲಿಂಗವು ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಚರಲಿಂಗ, ಪ್ರಸಾದಲಿಂಗ, ಮಹಾಲಿಂಗವೆಂದು ಆರು ಪ್ರಕಾರವಾಗಿರು ವದು. ಸ್ಥಲವು—ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯವೆಂದು ಆರು ಪ್ರಕಾರವಾಗಿರುವದು. ಈ ಆರು ಸ್ಥಲಗಳಿಗೆ ಆರು ಲಿಂಗಗಳು ಕ್ರಮವಾಗಿ ಹೇಳ ಲ್ಪಟ್ಟಿರುತ್ತವೆ.

**ಸ್ಕಂದಪುರಾಣ—ಶಂಕರ ಸಂಹಿತಾ, ಅಧ್ಯಾಯ ೮೧**

> **ಯತ್ರ ಮಾಹೇಶ್ವರಃ ಕುರ್ಯಾತ್ ಶಿವಲಿಂಗಾರ್ಚನಂ ಸ ಕೃತ್ ।**
> **ವಸಂತಿ ತತ್ರ ತೀರ್ಥಾನಿ ಸರ್ವಾಣಿ ಸತತಂ ಗುಹ ॥**
> **ವೀರ ಮಾಹೇಶ್ವರಂ ಮಾಂ ಚ ವಿಭಿನ್ನಂ ಪ್ರವದಂತಿ ಯೇ ।**
> **ತೇ ಮೂಢಾ ಏವ ಮನುಜಾಃ ನಾತ್ರಕಾರ್ಯಾ ವಿಚಾರಣಾ ॥**

ಮಾಹೇಶ್ವರನು ಯಾವ ಸ್ಥಾನದಲ್ಲಿ ಶಿವಲಿಂಗಾರ್ಚನೆಯನ್ನು ಮಾಡುತ್ತಾನೆಯೋ ಅಲ್ಲಿ ಸಕಲ ತೀರ್ಥಗಳೂ ಯಾವಾಗಲೂ ಸನ್ನಿಹಿತವಾಗಿರುತ್ತವೆ. ವೀರ ಮಹೇಶ್ವರನಿಗೂ, ಶಿವನಿಗೂ ಯಾರು ಭೇದವನ್ನು ಕಲ್ಪಿಸುತ್ತಾರೆಯೋ ಅವರು ಮೂರ್ಖರು.

ಇಲ್ಲಿ ಮಾಹೇಶ್ವರರೆಂದರೆ ಶೈವರಿಗೂ ಅರ್ಥವಾಗುವದಿಲ್ಲವೇ? ಎಂಬುವ ಪ್ರಶ್ನೆಯು ಉದ್ಭವವಾಗುತ್ತದೆ. ವಿಶೇಷವಾಗಿ ಈ ಶಬ್ದವು ವೀರಶೈವರಿಗೆ ಅನ್ವಯಿಸುತ್ತದೆ.

**ನೀಲಕಂಠ ಚಂಪು—ಪುಟ ೩೧**

**"ವೀರಭದ್ರ ಇವಕ್ರುದ್ಧೋ ವೀರ ಮಾಹೇಶ್ವರೋ ಮುನೌ"**

ಎಂಬುವ ಶ್ಲೋಕದಲ್ಲಿರುವ ವೀರಮಾಹೇಶ್ವರ ಪದಕ್ಕೆ ಟೀಕಾಕಾರನಾದ ಶೈವಬ್ರಾಹ್ಮಣ ಪಂಡಿತನು—ವೀರಶೈವರೆಂದೇ ಅರ್ಥಮಾಡಿರುತ್ತಾನೆ.

ಶಿವಲಿಂಗಾಂಗ ಸಂಬಂಧಭಾಜಾಂ ದರ್ಶನಮಾತ್ರತಃ ।
ಮುಕ್ತಿಂ ಗಚ್ಛಂತಿ ಮನುಜಾಃ ಪಶುಪಕ್ಷಿ ಮೃಗಾದಯಃ ॥
ತೇಷಾಂ ಸಂರಕ್ಷಣಂ ಯಸ್ತು ಕುರುತೇ ಮನುಜೋತ್ತಮಃ ।
ಸ ಧನ್ಯಃ ಸ ಕೃತಾರ್ಥಃ ಸ್ಯಾತ್ಸಶಿವೈಕ್ಯ ಪದಂ ವ್ರಜೇತ್ ॥
ತಸ್ಮಾತ್ಸರ್ವಂ ಪರಿತ್ಯಜ್ಯ ಸರ್ವಭಾವೇನ ಸರ್ವದಾ ।
ಪೂಜಯೇದಾದರೇಣೈವ ದ್ವಿಜಂ ಲಿಂಗಾಂಗ ಸಂಗಿನಾಂ ॥

ಶಿವಲಿಂಗಾಂಗಗಳ ಸಂಬಂಧವುಳ್ಳ ವೀರಮಾಹೇಶ್ವರರ ದರ್ಶನಮಾತ್ರದಿಂದ ಮನುಷ್ಯರಿಗೂ, ಪಶುಪಕ್ಷಿ ಮೃಗಾದಿಗಳಿಗೂ ಮುಕ್ತಿಯು ದೊರಕುವದೆಂದೂ, ಈ ವೀರ ಮಾಹೇಶ್ವರರ ಸಂರಕ್ಷಣೆಯನ್ನು ಯಾವನು ಮಾಡುವನೋ ಅವನೇ ಧನ್ಯನೆಂದೂ, ಅವನು ಶಿವಪದವನ್ನು ಹೊಂದುವನೆಂದೂ ಹೇಳಿದೆ. ಆದ್ದರಿಂದ ಎಲ್ಲವನ್ನೂ ಬಿಟ್ಟು ಅದರ ಬುದ್ಧಿಯಿಂದ ಲಿಂಗಾಂಗಸಂಗಿಯಾದ ಮಹೇಶ್ವರನನ್ನು ಪೂಜಿಸಬೇಕು. ಇಲ್ಲಿ ಪರ್ಯಾಯದಿಂದ ಲಿಂಗಧಾರಣದ ಮಹಾತ್ಮ್ಯೆಯು ಹೇಳಲಾಗಿರುತ್ತದೆ.

### ಶಂಕರ ಸಂಹಿತಾ—ಅಧ್ಯಾಯ ೬೪

ಉರಸ್ಥಲೇ ಹರಿರ್ಲಿಂಗಂ ಧೃತ್ವಾಶಕ್ರಪುರೋಗಮಾಃ ।
ಲಿಂಗಸ್ಥಂ ಮಾಂ ಸಮಾರಾಧ್ಯ ಸ್ವಂ ಸ್ವಂ ಪದಮವಾಪಿರೇ ॥
ಲಕ್ಷ್ಮೀ ಸರಸ್ವತೀ ಮುಖ್ಯಾ ದೇವ್ಯೋ ಮಲ್ಲಿಂಗಮಾದರಾತ್ ।
ಧೃತ್ವಾ ನಿಜಾಂಗೇ ತಲ್ಲೀನಭಾವಾಜ್ಜಗ್ಮುಃ ಪರಂ ಸುಖಂ ॥

ವಿಷ್ಣು ಇಂದ್ರನೇ ಮೊದಲಾದ ದೇವತೆಗಳು ವಕ್ಷಸ್ಥಲದಲ್ಲಿ ಶಿವಲಿಂಗವನ್ನು ಧರಿಸಿ ಪೂಜಿಸಿ ಅಸಾಧಾರಣ ಸುಖವನ್ನು ಹೊಂದಿರುತ್ತಾರೆ. ಈ ವಿಷಯಕ್ಕೆ ಇನ್ನೂ ಬೇಕಾದಷ್ಟು ಪುರಾಣಗಳ ಪ್ರಮಾಣಗಳು ಸಿಗುತ್ತವೆ.

ಇಲ್ಲಿಯವರೆಗೆ ವೇದೋಪನಿಷತ್ಪುರಾಣಾಗಮಾದಿಗಳಲ್ಲಿ ಲಿಂಗಧಾರಣವು ಹೇಗೆ ಸಮರ್ಥಿಸಲ್ಪಟ್ಟಿರುತ್ತದೆಂಬುವದನ್ನು ವಿಸ್ತಾರವಾಗಿ ನಾವು ವಿವೇಚಿಸಿದ್ದೇವೆ. ಇಂತಹ ಲಿಂಗಧಾರಣವನ್ನು ಬಸವಣ್ಣನವರು ಹೇಗೆ ಪ್ರಚಂಡ ಪ್ರಚಾರವನ್ನು ಮಾಡಿ ಅದರ ಹೆಚ್ಚಳವನ್ನು ಹೆಚ್ಚಿಸಿದರೆಂಬುವದನ್ನು ಅವರ ಅನಂತ ವಚನಗಳಿಂದಲೂ ಇನ್ನುಮುಂದೆ ತೋರಿಸುತ್ತೇವೆ.

೬೨೮

ಬಸವಣ್ಣನವರು—

"ಶೃತಿಗಗವ್ಯ ದ್ವಾದಶಾಂತ್ಯನಪ್ರತಿಮ ಮಹಿಮಂಗೆ ಪ್ರತಿಯುಂಟೆ? ಸೋಮಃ ಪವತೇ ಎಂಬುವ ಶೃತಿಯನರಿದು ಶಿವನೇಕೋದೇವ ರುದ್ರ ನದ್ವಿತೀಯನೆಂದು ನಂಬುವದು ಕಾಣಿರಣ್ಣ ಕೂಡಲಸಂಗಮದೇವನಲ್ಲದೆ ಇಲ್ಲವೆಂದು ಎತ್ತಿದೆ ಬಿರುದ ಜಗವೆಲ್ಲರಿಯಲು"

೬೨೯

"ವೇದ ಸ್ವಯಂಭುವೆಂಬ ವಾದಿಸೀ ಕೇಳೆಲವೋ ಏಕೋದೇವ ರುದ್ರ ನದ್ವಿತೀಯನೆಂದು ನಂಬುವದು ಕಾಣಿರಣ್ಣ" "ಓಂ ದ್ಯಾವಾ ಭೂಮಿ ಜನಯನ್ ದೇವ ಏಕೋ ದೇವ ಏಕೋ ಹಿ ರುದ್ರೋ ನದ್ವಿತೀಯಾಯ

ತಸ್ಮಾತ್'' ''ಚಕಿತಮಭಿದತ್ತೆ, ಶೃತಿ ಸಾರುತ್ತಿದೆ. ಜಗದ ಕರ್ತ ಕೂಡಲ ಸಂಗಮದೇವನೊಬ್ಬನೇ ಕಾಣಿರಣ್ಣಾ''

೪೩೦

''ಶೃತಿತತಿ ಶಿರದಮೇಲೆ ಅತ್ಯತಿಷ್ಠದ್ದಶಾಂಗುಲವ ನಾನೇನೆಂಬೆನಯ್ಯ ಘನಕ್ಕೆ ಘನ ಮಹಿಮನ ಮನಕ್ಕಗೋಚರನ, ಅಣೋರಣೀಯಾನ್ ಮಹತೋ ಮಹೀಯಾನ್ ಮಹಾದಾನಿ ಕೂಡಲಸಂಗಮದೇವ''

೪೩೧

''ಸಕಲ ನಿಷ್ಕಲವ ಕೂಡಿಕೊಂಡಿಪ್ಪೆಯಾಗಿ ಸಕಲ ನೀನೇ ದೇವಾ ನಿಷ್ಕಲ ನೀನೇ ಕಂಡಯ್ಯ ವಿಶ್ವತೋ ಚಕ್ಷು ನೀನೇ ದೇವ, ವಿಶ್ವತೋ ಮುಖ ನೀನೇ ದೇವ, ವಿಶ್ವತೋ ಬಾಹು ನೀನೇ ದೇವ, ಕೂಡಲಸಂಗಮದೇವ''

೪೩೨

''ಎತ್ತೆತ್ತನೋಡಿದಡತ್ತತ್ತ ನೀನೇ ದೇವಾ, ಸಕಲ ವಿಸ್ತಾರದ ರೂಹು ನೀನೇ ದೇವಾ, ವಿಶ್ವತೋ ಬಾಹು ನೀನೇ ದೇವಾ, ವಿಶ್ವತೋ ಚಕ್ಷು ನೀನೇ ದೇವಾ, ವಿಶ್ವತೋ ಮುಖ ನೀನೇ ದೇವಾ, ವಿಶ್ವತೋ ಪಾದ ನೀನೇ ದೇವಾ ಕೂಡಲಸಂಗಮದೇವಾ''

೪೩೩

''ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ಪಾತಾಳದಿಂದ ತ್ತತ್ತ ನಮ್ಮ ಶ್ರೀಚರಣ ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ ಅಗಮ್ಯ ಅಗೋಚರ ಅಪ್ರತಿಮ ಲಿಂಗವೇ ಕೂಡಲಸಂಗಮದೇವಯ್ಯಾ ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ''

ಮೇಲೆ ಬರೆದ ಆರು ವಚನಗಳನ್ನು ಓದಿ ನೋಡಿದರೆ ಬಸವಣ್ಣನವರ ದೃಷ್ಟಿಯಲ್ಲಿ ಲಿಂಗ ತತ್ವದ ವ್ಯಾಪಕತೆಯು ಸ್ಪಷ್ಟವಾಗಿ ಕಾಣಿಸುತ್ತದೆ.

ಮೇಲಿನ ವಚನಗಳ ಸಾರಾಂಶವನ್ನು ಇಲ್ಲಿ ನೋಡೋಣ :—

ವೇದಗಳಿಗೆ ಅಗಮ್ಯನಾದ ಪರಮಾತ್ಮನಿಗೆ ಪ್ರತಿಯುಂಟೆ? ಸೋಮಃ ಪವತೇ ಎಂಬುವ ವೇದವನ್ನು ಓದಿ ನೋಡಿದರೆ ಶಿವನೊಬ್ಬನೇ ದೇವನು. ಅವನನ್ನು ತಿಳಿಯಲು ವೇದಗಳೂ ಕೂಡ ಚಕಿತವಾಗುತ್ತಲಿವೆ. ಜಗತ್ಕರ್ತ ಕೂಡಲಸಂಗಮದೇವನೊಬ್ಬನೇ ದೇವನು. ವೇದಗಳ ಸಮುದಾಯದ ಶಿರದಮೇಲೆ (ಅತ್ಯತಿಷ್ಠದ್ದಶಾಂಗುಲನೇನೆಂಬೆನಯ್ಯ) ದಶಾಂಗುಲವನ್ನು ಮೀರಿದವನು ಶಿವನು. ದಶಾಂಗುಲವೆಂಬುವ ಪದವು ಜಗತ್ತಿಗೆ ಉಪಲಕ್ಷಣವಿರುತ್ತದೆ. ದಶಾಂಗುಲವನ್ನು ಮೀರಿದವನೆಂದರೆ ಜಗತ್ತನ್ನು ಮೀರಿದವ ನೆಂದೇ ಅರ್ಥವು. ಈ ಮಂತ್ರವು ಯಜುರ್ವೇದದ ಪುರುಷಸೂಕ್ತದಲ್ಲಿರುತ್ತದೆ. ವೇದಭಾಷ್ಯಕರ್ತರಾದ ಸಾಯಣಾಚಾರ್ಯರು ಮೇಲೆ ಹೇಳಿದ ಪ್ರಕಾರ ವೇದಭಾಷ್ಯದಲ್ಲಿ ಬರೆದಿರುತ್ತಾರೆ. ಘನಕ್ಕೆ ಘನ ಮತ್ತು ಮನಸ್ಸಿಗೆ ಅಗೋಚರ, ದೊಡ್ಡ ವಸ್ತುಗಳಿಗಿಂತಲೂ ದೊಡ್ಡವನು, ಸಣ್ಣ ವಸ್ತುಗಳಿಗಿಂತಲೂ ಸಣ್ಣವನು, ಕೂಡಲಸಂಗಮದೇವನು. ಸಕಲ

ನೀಕಲದಿಂದ ಕೂಡಿಕೊಂಡಿರತಕ್ಕವನು. ಎಲ್ಲ ಕಡೆಗೂ ನೇತ್ರಗಳುಳ್ಳಾತನು. ಎಲ್ಲ ಕಡೆಗೂ ಮುಖಗಳುಳ್ಳಾತನು. ಎಲ್ಲ ಕಡೆಗೂ ಭುಜಗಳುಳ್ಳಾತನು ಕೂಡಲಸಂಗಮ ದೇವನು. ನೋಡಿದೆಡೆಯಲ್ಲಿ ಕಾಣುವಾತನು. ಎಲ್ಲ ಕಡೆಗೂ ಪಾದಗಳುಳ್ಳಾತನು. ಜಗತ್ತಿನ ಅಗಲಿನಷ್ಟು ಅಗಲಿರುವಾತನು. ಮುಗಿಲಿನಷ್ಟು ಅಗಲ. ಪಾತಾಳಕ್ಕಿಂತಲೂ ಅತ್ತತ್ತ ನಿಮ್ಮ ಚರಣಗಳು ಬ್ರಹ್ಮಾಂಡಕ್ಕಿಂತಲೂ ಅತ್ತತ್ತ ಮಸ್ತಕಗಳುಳ್ಳಾತನು. ಅಗಮ್ಯ, ಅಗೋಚರ, ಅಪ್ರತಿಮನು; ಇಂತಹ ಲಿಂಗವು ನನ್ನ ಕೈಯಲ್ಲಿ ಬಂದು ಚುಳುಕಾಯಿತು.

೪೩೪

"ಆವ ಕುಲವಾದರೇನು? ಶಿವಲಿಂಗವಿದ್ದವನೇ ಕುಲಜನು ಕುಲವ ನರಸುವರೇ ಶರಣರಲ್ಲಿ ಜಾತಿಸಂಕರನಾದ ಬಳಿಕ 'ಶಿವೇ ಜಾತಃ ಕುಲೇ ಧರ್ಮಃ ಪೂರ್ವಜನ್ಮ ವಿವರ್ಜಿತಃ ಉಮಾ ಮಾತಾ ಪಿತಾ ರುದ್ರಃ ಈಶ್ವರಃ ಕುಲಮೇವ ಚ' ಒಕ್ಕುದಕೊಂಬೆನವರಲ್ಲಿ ಕೂಸಕೊಡುವೆ ಕೂಡಲಸಂಗಮ ದೇವಾ ನಿಮ್ಮ ಶರಣರನು"

ಹೀಗೆ ಸಮಾನತ್ವವನ್ನು ಹೇಳುತ್ತ—

೪೩೫

"ಲಿಂಗಮುಖದಿಂದ ಬಂದ ಪ್ರಸಾದವಲ್ಲದೆ ಕೊಂಡೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ಲಿಂಗಾರ್ಪಿತವಲ್ಲದೆ ಉದಕವ ಮುಕ್ಕುಳಿಸಿದೆನಾದರೆ ಸಲ್ಲೆನು ನಿಮ್ಮ ಗಣಾಚಾರಕ್ಕಯ್ಯ ಲಿಂಗಾರ್ಪಿತವಲ್ಲದೆ ಹುಲ್ಲುಕಡ್ಡಿಯ ಕೊಂಡರೆ ಬಲ್ಲೆ ಮುಂದೆ ಭವಘೋರನರಕವೆಂಬುದ ನಿಮಗೆತ್ತಿದ ಕರದಲ್ಲಿ ಮತ್ತೊಂದಕ್ಕೆ ಕೈಯಾವೆನು. ಆಳವರಿಯದೆ ನುಡಿದೆನು ಕಡೆಮುಟ್ಟೆ ಸಲಿಸದಿದ್ದರೆ ತಲೆದಂಡ ತಲೆದಂಡ ಕೂಡಲಸಂಗಮದೇವಾ"

ಲಿಂಗವಿಲ್ಲದಲೆ ಯಾವ ಕರ್ಮಂಗಳನ್ನಾದರೂ ಮಾಡಲಾರೆನೆಂದು ಬಸವಣ್ಣನವರು ಹೇಳುತ್ತ ಲಿಂಗಪ್ರಸಾದಿಗಳಾಗದಿದ್ದವರ ಅವಹೇಳನವನ್ನು ಮಾಡಿರುತ್ತಾರೆ.

೪೩೬

"ಲಿಂಗಪ್ರಸಾದಿಗಳಲ್ಲದವರ ಸಂಗ ಭಂಗವೆಂದುದು ಗುರುವಚನ, ಲಿಂಗಪ್ರಸಾದಿಗಳಲ್ಲದವರ ಸಂಗ ಪಂಚಮಹಾಪಾತಕವೆಂದುದು ಲಿಂಗ ವಚನ, 'ಅಶನೇ ಶಯನೇ ಯಾನೇ ಸಂಪರ್ಕೇ ಸಹಭೋಜನೇ ಸಂಚರಂತಿ ಮಹಾ ಘೋರೇ ನರಕೇ ಕಾಲಮಕ್ಷಯಂ' ಇಂತೆಂದುದಾಗಿ ಕೂಡಲ ಸಂಗಮದೇವಾ ನಿಮ್ಮ ಶರಣರಿಗೆ ಶರಣೆಂದು ಶುದ್ಧನಯ್ಯಾ".

ಲಿಂಗವನ್ನು ಪೂಜಿಸಬೇಕಾದರೆ ಅದರಲ್ಲಿ ಬೆರೆತು ಅಂದರೆ ಸಮರಸಭಾವನೆಯಿಂದ ಮಾಡಿದರೆ ಫಲವುಂಟು.

ಲಿಂಗಕ್ಕಲ್ಲದೆ ಮತ್ತೊಂದಕ್ಕೆ ಯಾವ ಕಾರ್ಯವನ್ನಾದರೂ ಮಾಡಲಾರೆನೆಂದು ಬಸವಣ್ಣನವರು ಹೇಳಿದ ವಚನವನ್ನು ನೋಡೋಣ,

೪೩೭

"ಲಿಂಗಕ್ಕಲ್ಲದೆ ಮಾಡೆನೀ ಮನವನು ಜಂಗಮಕ್ಕಲ್ಲದೆ ಮಾಡೆನೀ ಧನವನು ಪ್ರಸಾದಕ್ಕಲ್ಲದೆ ಮಾಡೆನೀ ತನುವನು ಲಿಂಗಜಂಗಮದ ಪ್ರಸಾದಕ್ಕಲ್ಲದೆ ಬಾಯ್ದೆರೆಯೆನೆಂಬುದೆನ್ನ ಭಾಷೆ ಅನರ್ಪಿತವಾದರೆ ತಪ್ಪೆನ್ನದು ಮೂಗ ಕೋಯಿ ಕೂಡಲಸಂಗಮದೇವಾ"

ನಾನು ಆರಂಭವಮಾಡುವೆನಯ್ಯಾ ಗುರುಪೂಜೆಗೆಂದು ವ್ಯವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು ಹೇಳುವ ವಾಕ್ಯವು ವೀರಶೈವನ ಹೃದಯವನ್ನು ಭೇದಿಸುತ್ತಲಿದೆ.

ಲಿಂಗದ ಬಗ್ಗೆ ಬಸವಣ್ಣನವರು ರೂಪಕಾಲಂಕಾರದಿಂದ ಒಂದು ಸುಂದರವಾದ ವಚನವನ್ನು ಹೇಳಿರುತ್ತಾರೆ.

೪೩೮

"ಭಕ್ತಿಯೆಂಬುವ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ ಲಿಂಗವೆಂಬ ಎಲೆಯಾಯಿತ್ತು. ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯಿತ್ತು. ಆಚಾರವೆಂಬ ಕಾಯಾಯಿತ್ತು ನಿಷ್ಪತ್ತಿ ಎಂಬ ಹಣ್ಣಾಯಿತ್ತು, ನಿಷ್ಪತ್ತಿಯೆಂಬ ಹಣ್ಣು ತೊಟ್ಟುಬಿಟ್ಟು ಕಳಚಿ ಬೀಳುವಲ್ಲಿ ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ"

ಹೇಗಾದರೂ ಮಾಡಿ ಲಿಂಗತಂದೆಯನ್ನು ಒಲಿಸುವೆನೆಂದು ಬಸವಣ್ಣನವರು ಅಸಾಧಾರಣವಾದ ಭಕ್ತಿಯಿಂದ ಕೆಲವು ವಚನಗಳನ್ನು ಹೇಳಿರುತ್ತಾರೆ.

೪೩೯

"ಭವರೋಗ ವೈದ್ಯನೆಂದು ನಾನಿಮ್ಮ ಮರೆಹೊಕ್ಕೆ ಭಕ್ತಿದಾಯಕ ನೀ ಕರುಣಿಸು ಲಿಂಗತಂದೇ । ಜಯ ಜಯ ಶ್ರೀ ಮಹಾದೇವ ಜಯ ಜಯ ಶ್ರೀ ಮಹಾದೇವ, ಎನ್ನುತ್ತಿದ್ದಿತೆನ್ನ ಮನವು ಕೂಡಲಸಂಗಮದೇವಂಗೆ ಶರಣೆಂದಿತೆನ್ನ ಮನವು"

೪೪೦

"ಅಂಗೈಯೊಳಗಣ ಲಿಂಗವನೋಡುತ್ತ ಕಂಗಳು ಕಡೆಗೋಡಿವರೆವುತ್ತ ಸುರಿಯುತ್ತ ಎಂದಿಪ್ಪೆನೋ? ಕೂಟವೇ ಪ್ರಾಣವಾಗಿ ಎಂದಿಪ್ಪೆನೋ? ನೋಟವೇ ಪ್ರಾಣವಾಗಿ ಎಂದಿಪ್ಪೆನೋ? ಎನ್ನಂಗವಿಕಾರದ ಸಂಗವಳಿದು ಕೂಡಲಸಂಗಯ್ಯಾ ಲಿಂಗಯ್ಯಾ ಲಿಂಗ ಲಿಂಗವೆನ್ನುತ್ತ?

ಹೇಗಾದರೂ ಲಿಂಗವನ್ನು ಒಲಿಸುವೆನೆಂದು ಬಸವಣ್ಣನವರು ಹೇಳುತ್ತ—

೪೪೧

"ಮಂಡೆಯ ಬೋಳಿಸಿಕೊಂಡು ಗಂಡುದೊತ್ತುವೊಕ್ಕೆನಯ್ಯಾ ಲಜ್ಜೆಗೆಟ್ಟಾದರೂ ಲಿಂಗವನೊಲಿಸುವೆ ನಾಣುಗೆಟ್ಟಾದರೂ ಲಿಂಗವನೊಲಿಸುವೆ ಕೆಲದ ಸಂಸಾರಿಗಳು ನಗುತಿರ್ದೊಡಿರಲಿ ಕೂಡಲಸಂಗಮದೇವಾ ಶರಣಾಗತಿವೊಕ್ಕೆನಯ್ಯಾ"

ಹೀಗೆಯೇ ಬಸವಣ್ಣನವರು ಲಿಂಗದ ವಿಷಯಕ್ಕೆ ಅನೇಕ ವಚನಗಳನ್ನು ಹೇಳಿರುತ್ತಾರೆ. ಮುಂದೆ ಬಸವಣ್ಣನವರ ಅನುಯಾಯಿಗಳಾದ ಅಸಂಖ್ಯಾತ ಶರಣರು ಹೇಗೆ ಲಿಂಗದ ಶ್ರೇಷ್ಠತೆಯನ್ನು ಕೊಂಡಾಡಿರುತ್ತಾರೆಂಬುವದನ್ನು ತೋರಿಸಿಕೊಡಬೇಕಾಗಿರುತ್ತದೆ.

೪೪೨

ಸಿದ್ಧರಾಮೇಶ್ವರದೇವರು—

"ಇನಮಂಡಲದೊಳಗೆ ಕಿರಣವಡಗಿಪ್ಪಂತೆ ಫಲವಹ ಬೀಜದಲ್ಲಿ ವೃಕ್ಷವಡಗಿಪ್ಪಂತೆ ಇಂದುಕಾಂತ ರವಿಕಾಂತದಲ್ಲಿ ಜಲಬಿಂದು ಅಗ್ನಿ ಇಪ್ಪಂತೆ ಸಂದಕ್ಷೀರದಲ್ಲಿ ಹೊಂದಿದಧಿತಕ್ರ, ನವನೀತ, ಘೃತವಡಗಿಪ್ಪಂತೆ ಅಂಗದ ಮೇಲೆ ಲಿಂಗಸಾಹಿತ್ಯವಾಗಿ ತನ್ನೊಳಗೆ ಆ ಲಿಂಗವ ಕಂಡು ಅಂಗದೊಳಗೆ ತನ್ನ ಕಂಡು ತನ್ನೊಳಗೆ ಸಮಸ್ತ ವಿಸ್ತಾರವನೆಲ್ಲವ ಕಂಡು ಜಂಗಮ ಮುಖಲಿಂಗವೆಂಬ ಭೇದವನ್ನು ಲಿಂಗಕ್ಕೆ ಜಂಗಮವೇ ಪ್ರಾಣವಾಗಿಪ್ಪ ಭೇದವನು ಅಂಗದೊಳಗೆ ಲಿಂಗವೇ ಆಚಾರವಾಗಿ ಅಳವಟ್ಟ ವಿವರವನು ಲಿಂಗಾಂಗಸ್ಥಳ ಸಂಬಂಧ ಸ್ಥಳ ಕುಳಂಗಳ ವಿವರವಾಗಿ ಇದ್ದಿತೆಂಬುದನು ಕಂಗಳ ನೋಟಕ್ಕೆ ಗುರುವಾದ ಲಿಂಗವೇ ಅಂಗವನೊಳಕೊಂಬ ಭೇದವನು ಸಂಗನ ಬಸವಣ್ಣ ಚನ್ನಬಸವಣ್ಣನಿಂದೆ ಕೃಪೆಮಾಡಿಸಿ ಎನ್ನನುಳುಹು ಪ್ರಭುವೇ ಕಪಿಲಸಿದ್ಧಮಲ್ಲಿಕಾರ್ಜುನದೇವಯ್ಯ"

೪೪೩

ಉರುಲಿಂಗಪೆದ್ದಿಯ ವಚನ—ಪುಟ ೪೩

"ಯತೋ ವಾಚೋ ನಿವರ್ತಂತೇ ಅಪ್ರಾಪ್ಯಮನಸಾ ಸಹ ಎಂದೆನಿಸುವ ಲಿಂಗವು, ಅತ್ಯತಿಷ್ಠದ್ದಶಾಂಗುಲಂ ಎಂದೆನಿಸುವ ಲಿಂಗವು, ಶ್ರುತಿಚಕಿತಮಭಿದತ್ತೇ ಎಂದೆನಿಸುವ ಲಿಂಗವು, ಅಣೋರಣೀಯಾನ್ ಮಹತೋ ಮಹೀಯಾನ್ ಎಂದೆನಿಸುವ ಲಿಂಗವು, ಅಯಂ ಮೇ ಹಸ್ತೋ ಭಗವಾನ್ ಎಂದೆನಿಸುವ ಲಿಂಗವು, ಅಯಂ ಮೇ ಭಗವತ್ತರಃ ಎಂದೆನಿಸುವ ಲಿಂಗವು, ಶ್ರೀ ಗುರುಲಿಂಗ ಜಂಗಮರೂಪವಾಗಿ ಇಷ್ಟಪ್ರಾಣಸ್ತಥಾ ಭಾವಂ ತ್ರಿಧಾಮೇಕಂ ವರಾನನೇ ಎಂದುದಾಗಿ ತ್ರಿವಿಧವು ಏಕೀಭವಿಸಿ ಲಿಂಗರೂಪಾಗಿ ಎನ್ನ ಕರಸ್ಥಲಕ್ಕೆ ಬಂದು ಕರತಳಾಮಳಕವಾಗಿ ತೋರುತ್ತೈದಾನೆ. ಆಹಾ ಎನ್ನ ಪುಣ್ಯವೇ ಆಹಾ ಎನ್ನ ಭಾಗ್ಯವೇ ಆಹಾ ಎನ್ನ ಸತ್ಯವೇ ಆಹಾ ಎನ್ನ ನಿತ್ಯವೇ ಶಿವಶಿವ ಮಹಾದೇವ ಮಹಾದೇವ ನೀನೇ ಬಲ್ಲೆ ಉರುಲಿಂಗಪೆದ್ದಿ ಪ್ರಿಯವಿಶ್ವೇಶ್ವರಾ"

೪೪೪

ಅಕ್ಕಮಹಾದೇವಿಯವರು—

"ಶ್ರೀ ಗುರುಲಿಂಗದೇವರು ತಮ್ಮ ಹಸ್ತವ ತಂದು ಎನ್ನ ಮಸ್ತಕದ ಮೇಲೆ ಇರಿಸಿದಾಗಳೇ ಎನ್ನ ಭವಂ ನಾಸ್ತಿಯಾಯಿತ್ತು ಎನ್ನ ತನ್ನಂತೆ ಮಾಡಿದ ಎನಗೆ ತನಗೆ ತೆರಹಿಲ್ಲದಂತೆ ಮಾಡಿ ತೋರಿದನು ನೋಡಾ ತನ್ನ

ಕರಸ್ಥಲದಲ್ಲಿದ್ದ ಮಹಾ ಲಿಂಗವ ನನ್ನ ಕರಸ್ಥಲದಲ್ಲಿ ಮೂರ್ತಗೊಳಿಸಿದ ಎನ್ನ ಕರಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ ಮನಸ್ಥಲದಲ್ಲಿ ಮೂರ್ತಗೊಳಿಸಿದ ಎನ್ನ ಮನಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ ಭಾವಸ್ಥಲದಲ್ಲಿ ಮೂರ್ತಗೊಳಿಸಿದ ಎನ್ನ ಭಾವಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ ಸರ್ವಾಂಗದೊಳಹೊರಗೆ ತೆರಹಿಲ್ಲದಳವಡಿಸಿದ ನಮ್ಮ ಶ್ರೀ ಗುರುಲಿಂಗದೇವ ಚನ್ನಮಲ್ಲಿಕಾರ್ಜುನಾ"

೮೮೫

"ಅಯ್ಯಾ ಪಾತಾಳವಿತ್ತಿತ್ತ ಶ್ರೀಪಾದವತ್ತತ್ತ ಬ್ರಹ್ಮಾಂಡವಿತ್ತಿತ್ತ ಮಣಿಮುಕುಟವತ್ತತ್ತ ಅಯ್ಯಾ ದಶದಿಕ್ಕು ಇತ್ತಿತ್ತ ದಶಭುಜಗಳತ್ತತ್ತ ಚನ್ನಮಲ್ಲಿಕಾರ್ಜುನಯ್ಯಾ ನೀನೆನ್ನ ಕರಸ್ಥಳಕ್ಕೆ ಬಂದು ಚಳುಕಾದಿರಯ್ಯಾ"

೮೮೬

ಸಕಲೇಶಮಾದರಸರು—

"ಜ್ಯೋತಿಯ ಮುಟ್ಟಿದ ಬತ್ತಿ ಎಲ್ಲ ಜ್ಯೋತಿಯಪ್ಪವಯ್ಯ ಸಾಗರವ ಮುಟ್ಟಿದ ನದಿಗಳೆಲ್ಲ ಸಾಗರವಪ್ಪವಯ್ಯ ಪ್ರಸಾದವ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪವಯ್ಯ ಲಿಂಗವ ಮುಟ್ಟಿದಂಗವೆಲ್ಲ ನಿಮ್ಮಂತಪ್ಪವಯ್ಯ"

೮೮೭

ಆದಯ್ಯನವರು—

"ಅಂಗದಮೇಲಣ ಲಿಂಗ ಹಿಂಗಿದಾತ ಭವಿಯೆಂಬರು ಅಂಗದ ಮೇಲಣ ಲಿಂಗ ಹಿಂಗದಾದ ಭಕ್ತನೆಂಬರು ಅಂಗದೊಳಗೆ ಬೆರಸಿಪ್ಪ ಲಿಂಗದ ಹೊಬಲನಾರೂ ಅರಿಯರು ಆ ಲಿಂಗವಿಲ್ಲದೆ ಒಂದು ಕ್ಷಣ ಒಂದಂಗ ಸುಳಿಯುವುದೇ? ಅಂಗದೊಳಗಣ ಲಿಂಗ ಹಿಂಗದೆ ಆರಾಧಿಸಬಲ್ಲರೆ ಹಿಂಗುವುದು ಭವಮಾಲೆ ಸೌರಾಷ್ಟ್ರಸೋಮೇಶ್ವರಾ"

೮೮೮

ಸ್ವತಂತ್ರಸಿದ್ಧಲಿಂಗೇಶ್ವರರು—

"ಲಿಂಗವೆಂಬುದು ಸರ್ವಕಾರಣ ನಿರ್ಮಲ ಲಿಂಗವೆಂಬುದು ಸಚ್ಚಿದಾನಂದ ನಿತ್ಯ ಪರಿಪೂರ್ಣ ಲಿಂಗವೆಂಬುದು ಸರ್ವಲೋಕೋತ್ಪತ್ತಿಗೆಕಾರಣ ಲಿಂಗವೆಂಬುದು ಸರ್ವತತ್ವ ಪೂರಣ ನಿಜಚೈತನ್ಯವು ಲಿಂಗವೆಂಬುದು ಜನ್ಮ ವಾರಿಧಿಯ ದಾಂಟಿಸುವ ಛೈತ್ರವು ಲಿಂಗವೆಂಬುವದು ಶರಣರ ಹೃದಯದಲ್ಲಿ ಬೆಳಗುವ ಜ್ಯೋತಿರ್ಮಯ ಲಿಂಗವು ಇಂತೀ ಲಿಂಗದ ಮರ್ಮವರಿದವನೇ ಅರಿದವನು ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ"

೮೮೯

ಅಖಂಡೇಶ್ವರರು—

"ಜಗವನೊಳಕೊಂಡ ಲಿಂಗವು ಸೊಗಸಿದ್ದೆನ್ನ ಕರಸ್ಥಲಕ್ಕೆ ಬಂದಿರಲು ಕಂಡು ಹಗರಣವಾಯಿತ್ತೆನಗೆ ಆಹಾ ಎನ್ನ ಪುಣ್ಯವೇ ಆಹಾ ಎನ್ನ

ಭಾಗ್ಯವೇ ಆಹಾ ಅಖಂಡೇಶ್ವರಾ ನಿಮ್ಮ ಘನವ ಕಂಡು ಎನ್ನ ಮನಕ್ಕೆ ಮಂಗಳವಾಯಿತ್ತು ನೋಡಾ"

೪೫೦

"ಅಣುವಿಗೆ ಅಣುವು ಮಹತ್ತಿಗೆ ಮಹತ್ತು ಎನಿಸುವ ಲಿಂಗದೇವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ ಉಪಮಾತೀತ ವಾಙ್ಮನಕ್ಕಗೋಚರ ನೆನಿಸುವ ದೇವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ ಶೃತಿತತಿ ಶಿರದಮೇಲೆ ದಾಶಂಗುಲನೆನಿಸುವ ದೇವನ ಕಂಡೆನಯ್ಯಾ ನಾ ನನ್ನ ಕರಸ್ಥಲದಲ್ಲಿ ಭವಭರಿತ ಜ್ಞಾನಗಮ್ಯನೆನಿಸುವ ದೇವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ ಅಖಂಡೇಶ್ವರನೆಂಬ ಅನಾದಿಪರಶಿವನ ಕಂಡೆನಯ್ಯಾ"

೪೫೧

ಮಡಿವಾಳ ಮಾಚಿದೇವರು—

"ಮಾಡುವಾತ ಗುರುವಯ್ಯಾ ಮಾಡಿಸಿಕೊಂಬುವಾತ ಭಕ್ತನಯ್ಯಾ ಮಾಡುವ ಮಾಡಿಸಿಕೊಂಬುವೆರಡರ ಚೈತನ್ಯವೇ ಲಿಂಗವಯ್ಯಾ ಸಂಗನ ಬಸವಣ್ಣನು ಸ್ಥೂಲವನಿಃಕಲಿಸಿ ಸೂಕ್ಷ್ಮವ ಕರಸ್ಥಲದಲ್ಲಿ ಆಯಕರಿಸಿ ತೋರಿದನು ಆ ಬಸವಣ್ಣನ ನಿಲವ ನೆನೆದು ಬದುಕಿದೆನು ಕಾಣಾ ಕಲಿದೇವರದೇವಾ"

೪೫೨

ಸಿದ್ಧೇಶ್ವರದೇವರು—

"ವೇಧಾದೀಕ್ಷೆ ಮಂತ್ರದೀಕ್ಷೆ ಕ್ರಿಯಾದೀಕ್ಷೆಯೆಂಬ ದೀಕ್ಷಾತ್ರಯಂಗಳಿಂದ ತನುತ್ರಯಂಗಳ ಪೂರ್ವಾಶ್ರಯವ ಕಳೆದು ಅಂಗತ್ರಯಂಗಳ ಸಂಬಂಧಿಸಿದನು ಅದೆಂತೆಂದೊಡೆ ವೇಧಾದೀಕ್ಷೆಯೆಂದು ಶ್ರೀ ಗುರು ತನ್ನ ಹಸ್ತವ ಶಿಷ್ಯನ ಮಸ್ತಕದಲ್ಲಿ ಸಂಯೋಗವಮಾಡಿದುದು ಮಂತ್ರದೀಕ್ಷೆಯೆಂದು ಶ್ರೀ ಗುರುವು ಪ್ರಣವ ಪಂಚಾಕ್ಷರಿಯ ಮಂತ್ರವ ಕರ್ಣದಲ್ಲಿ ಉಪದೇಶಿಸಿದುದು ಕ್ರಿಯಾದೀಕ್ಷೆಯೆಂದು ಆ ಮಂತ್ರಸ್ವರೂಪವನೇ ಇಷ್ಟಲಿಂಗಸ್ವರೂಪವಮಾಡಿ ಕರಸ್ಥಲದಲ್ಲಿ ಸಂಬಂಧಿಸಿದುದು ಇದು ಕಾರಣವೇ ವೇಧಾದೀಕ್ಷೆಯಿಂದ ಕಾರಣ ತನುವಿನ ಪೂರ್ವಾಶ್ರಯವಳಿದು ಪ್ರಾಣಲಿಂಗಸಂಬಂಧವಾಯಿತ್ತು ಕ್ರಿಯಾದೀಕ್ಷೆಯಿಂದ ಸ್ಥೂಲತನುವಿನ ಪೂರ್ವಾಶ್ರಯವಳಿದು ಇಷ್ಟಲಿಂಗಸಂಬಂಧವಾಯಿತ್ತು ಹೀಗೆ ಅಂಗತ್ರಯಂಗಳಲ್ಲಿ ಲಿಂಗತ್ರಯಂಗಳ ಧರಿಸಿದನಯ್ಯ ಮಹಾಲಿಂಗಗುರುಸಿದ್ಧೇಶ್ವರ ಪ್ರಭುವೇ"

೪೫೩

ಲಿಂಗಮ್ಮನವರು—

"ಅಯ್ಯಾ ಈ ಮಹಾಘನವ ಕಾಂಬುದಕ್ಕೆ ಹಸಿವು ಕೆಡಬೇಕು ತೃಷೆಯಡಗಬೇಕು ವೆಸನ ನಿಲ್ಲಬೇಕು ನಿದ್ರೆ ಹರಿಯಬೇಕು ಜೀವಬುದ್ಧಿ ಹಿಂಗಬೇಕು ಮನಪವನ ಬಿಂದು ಒಡಗೂಡಬೇಕು ಚಿತ್ತ ಒತ್ತಟ್ಟಿಗೆ ಹೋಗದಿರ

ಬೇಕು ಹೊತ್ತು ಹೊತ್ತಿಗೆ ಉತ್ತರವನೇರಿ ಬೆಚ್ಚು ಬೇರಿಲ್ಲವೆ ಲಿಂಗದೊಳಗೆ ಅಚ್ಚೊತ್ತಿದಂತೆ ಬೆರೆದರೆ ಕತ್ತಲೆ ಹರಿಯುವದು ಮರವೆ ಹಿಂಗುವದು ನಿದ್ರೆ ಹರಿಯುವದು ಹಸಿವು ಕೆಡುವದು ತೃಷೆಯಡಗುವದು ವೆಸನ ನಿಲ್ಲುವದು ಇವೆಲ್ಲವನು ಹಿಂಗಿಸಿ ತಾ ಲಿಂಗವೆಸನಿಯಾಗಬಲ್ಲರೆ ಮುಂದೆ ಮಹಾ ಮಂಗಳದ ಬೆಳಗು ಕಾಣಿಪುದೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನ ಬಸವಣ್ಣ"

೪೫೪

ಗಣದಾಶಿ ವೀರಣ್ಣನವರು—

"ಈರೇಳುಲೋಕವನೊಳಕೊಂಡ ಮಹಾ ಘನ ಲಿಂಗವು ಭಕ್ತನ ಕರಸ್ಥಲಕ್ಕೆ ಬಂದು ಪೂಜೆಗೊಂಬ ಪರಿಯ ನೋಡಾ ಅಗಮ್ಯ ಅಗೋಚರ ಅಪ್ರಮಾಣ ಲಿಂಗಸಂಗದಲ್ಲಿ ಇರಬಲ್ಲಾತನೇ ಭಕ್ತನು ಹೀಗಲ್ಲದೆ ಕೇಡಿಲ್ಲದ ಲಿಂಗಕ್ಕೆ ಕೇಡುಕಟ್ಟಿ ಹೋದೀತೋ ಇದ್ದೀತೋ ಹೇಗೋ ಎಂತೋ ಎಂದು ಚಿಂತಿಸಿ ನುಡಿವರು ಭಿನ್ನಜ್ಞಾನಿಗಳು ಈ ಲಿಂಗದೊಳಗೆ ಅಖಿಳಾಂಡಕೋಟಿ ಬ್ರಹ್ಮಾಂಡಂಗಳಡಗಿದವು. ಸಾಕ್ಷಿ—

ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ ।
ಲಿಂಗಬಾಹ್ಯೇ ಪರಂ ನಾಸ್ತಿ ತಸ್ಮಾಲ್ಲಿಂಗಂ ಪ್ರಪೂಜಯೇತ್ ॥

ಎಂದುದಾಗಿ ಇಂತಪ್ಪ ಘನಲಿಂಗವ ಶ್ರೀ ಗುರುಭಕ್ತಂಗೆ ಕರಮನ ಭಾವಕ್ಕೆ ಪ್ರತ್ಯಕ್ಷವಾಗಿ ಮಾಡಿಕೊಟ್ಟಬಳಿಕ ಅಗಲಲುಂಟೇ? ಹೀಗೆ ಆವ ಶಾಸ್ತ್ರ ಆವ ಆಗಮ ಆವ ವಚನ ಹೇಳಿಲ್ಲವಾಗಿ ಮತ್ತಂ ಸಂಪಿಗೆಯ ಪುಷ್ಪದ ಪರಿಮಳವು ಎಳ್ಳೆಣ್ಣೆಯು ಬೆರೆದ ಮೇಲೆ ಆ ಸಂಪಿಗೆಯ ಪುಷ್ಪದ ಪರಿಮಳ ಬೇರೆ ಅಗಲಲುಂಟೇ? ಹಾಗೆ ಭಕ್ತನ ಅಂಗದಲ್ಲಿ ಬೆರೆದಬಳಿಕ ಲಿಂಗವ ಅಗಲಲುಂಟೇ? ಇಂತಪ್ಪ ಮಹಾ ಘನಲಿಂಗವು ಹೇಗಿಪ್ಪದೋ ಎಂದೊಡೆ ಅವರವರ ಮನಭಾವ ಹೇಗಿಪ್ಪದೋ ಹಾಗಿಪ್ಪದು" ಇದಕ್ಕೆ ದೃಷ್ಟ—

"ಉದಕ ಒಂದೇ ವೃಕ್ಷದಲ್ಲಿ ಪೊಕ್ಕು ಮಧುರ ಕಾರ ಒಗರು ಹುಳಿ ಉಪ್ಪು ಕಹಿ ಮೊದಲಾದ ಹಲವು ಪ್ರಕಾರದ ಹಣ್ಣು ಫಲಂಗಳು ಉದಕ ಒಂದೇ ಶ್ವೇತ, ಪೀತ, ಹರಿತ, ಮಾಂಜಿಷ್ಟ, ಕಪೋತ, ಮಾಣಿಕ್ಯ ಈ ಆರು ವರ್ಣಂಗಳಲ್ಲಿ ಬೆರೆದುದು ಅಭ್ರಕ ಒಂದೇ ಈ ಅಭ್ರಕ ಹೇಗೆ ಮನ ಹಾಗೆ ಘನ ಮಹಾಲಿಂಗ ಹೀಗೆಂದರುಹಿದಾತ ನಮ್ಮ ಶಾಂತ ಕೂಡಲಸಂಗಮ ದೇವಾ"

೪೫೫

"ಸತ್ತು ಚಿತ್ತಾನಂದ ನಿತ್ಯಪರಿಪೂರ್ಣ ಮಹಾ ಘನಲಿಂಗವು ಭಕ್ತನ ತನುತ್ರಯಕ್ಕೆ ಸಾಕಾರವಾಗಿ ಇಷ್ಟಪ್ರಾಣ ಭಾವಲಿಂಗವಾಗಿರ್ದ ಕಾರಣ ನಡೆವುತ್ತ ನುಡಿವುತ್ತ ಸರ್ವಾವಸ್ಥೆಯಲ್ಲಿ ಲಿಂಗದೊಳಗಿಪ್ಪಾತನೇ ಭಕ್ತ ಹೀಗಲ್ಲದೆ ನಿತ್ಯವಾದ ಲಿಂಗವ ಅನಿತ್ಯವೆಂದು ಸಂಕಲ್ಪ ವಿಕಲ್ಪ ಸಂದೇಹದಿಂದ ಅದನು ನುಡಿದ್ದು ಆ ಮಹಾ ಘನಲಿಂಗವ ನಂಬದವರಿಗೆ

ಆತನು ಇಂಬಾಗಿಪ್ಪನು, ವಿಶ್ವಾಸದಿಂದ ಗೊಲ್ಲಾಳಯ್ಯನಿಗೆ ಕುರಿಹಿಕ್ಕಿ ಲಿಂಗವಾದುದಿಲ್ಲವೇ? ಭಾವದಿಂದ ಸಂಬೆಣ್ಣಂಗೆ ಅಂಗಸೆಯ ಕುಚ ಲಿಂಗವಾದುದಿಲ್ಲವೇ? ವಿಶ್ವಾಸದಿಂದ ಕೆಂಭಾವಿ ಭೋಗಣ್ಣಂಗೆ ಲಿಂಗ ಒಡನೇ ಹೋದುದಿಲ್ಲವೇ? ಮತ್ತೆ ಇಷ್ಟಲಿಂಗದೊಳಗೆ ನೀಲಲೋಚನೆ ಯಮ್ಮನ ಶರೀರವೇ ಏಕಾಕಾರವಾಗಲಿಲ್ಲವೇ?'' ಸಾಕ್ಷಿ—

> ಕರ್ಪೂರಮನಲಂ ಗ್ರಾಹ್ಯಂ ರೂಪಂ ನಾಸ್ತಿ ನಿರಂತರಂ ।
> ತಥಾ ಲಿಂಗಾಂಗಸಂಯೋಗೇ ತತ್ಪದೇ ನಿರ್ಣಯೋ ಭವೇತ್ ॥

ಎಂಬುದಾಗಿ ಇಂತಪ್ಪ ಮಹಾ ಘನಲಿಂಗದ ನಿಲವನರುಹಿದಾತ ನಮ್ಮ ಶಾಂತ ಕೂಡಲಸಂಗಮದೇವಾ''

೪೫೬

ಹಡಪದ ಅಪ್ಪಣ್ಣನವರು—

''ಅಯ್ಯ ಎನ್ನಂಗದ ಮೇಲಿಪ್ಪ ಲಿಂಗವು ಕರ್ಪುರದಂತಾಯಿತ್ತು ಎನ್ನ ಪ್ರಾಣದ ಮೇಲಿಪ್ಪ ಲಿಂಗವು ಪರಂಜ್ಯೋತಿಯಂತಾಯಿತ್ತು ಎನ್ನ ನಿಃಪ್ರಾಣದ ಮೇಲಿಪ್ಪ ಲಿಂಗವು ನಿರಂಜನದಂತಾಯಿತ್ತು ಈ ತ್ರಿವಿಧವು ಏಕವಾದ ಭೇದವ ಹೇಳಿಹೆನು ಕೇಳಿರಣ್ಣ ಎನ್ನ ಅಂಗದ ಮೇಲಿದ್ದ ಕರ್ಪುರ ದಂತಿರ್ದ ಲಿಂಗ ಪ್ರಾಣದ ಮೇಲಿರ್ದ ಪರಂಜ್ಯೋತಿಲಿಂಗ ನಿಃಪ್ರಾಣದ ಮೇಲಿಪ್ಪ ನಿರಂಜನಲಿಂಗವ ಬೆರೆಯಿತ್ತು ಈ ತ್ರಿವಿಧವು ಏಕವಾದಮೇಲೆ ಒಂದಲ್ಲದೆ ಎರಡುಂಟೆ? ಇದಕ್ಕೆ ಸಂದೇಹ ಬೇರಿಲ್ಲವಯ್ಯ ಬಸವಪ್ರಿಯ ಕೂಡಲಚನ್ನಬಸವಣ್ಣ''

೪೫೭

ಸಂಗನಬಸವೇಶ್ವರರು—

''ಶ್ರೀ ಗುರುವಿನ ಕರಂಗಳು ಹೃದಯಮಧ್ಯದಲ್ಲಿ ಉದಯವಾದ ಇಷ್ಟ ಮಹಾಲಿಂಗವೇ ಪರಮಪಾವನವಯ್ಯ ಆ ಮಹಾ ಲಿಂಗವೇ ಪರಮ ಪ್ರಕಾಶವಯ್ಯ ಆ ಮಹಾಲಿಂಗವೇ ಪರಂಜ್ಯೋತಿಸ್ವರೂಪವಯ್ಯ ಆ ಮಹಾ ಲಿಂಗವೇ ಪರಮನಿಷ್ಕಳಂಕವಯ್ಯ ಚಿದ್ಘನವಸ್ತುವಯ್ಯ ಆ ಮಹಾಲಿಂಗವೇ ಚಿನ್ಮಯಸ್ವರೂಪವಯ್ಯ ಆ ಮಹಾಲಿಂಗವೇ ಚಿದಾನಂದಮೂರ್ತಿಯಯ್ಯ ಚಿತ್ಪ್ರಕಾಶಮೂರ್ತಿಯಯ್ಯ ಆ ಮಹಾಲಿಂಗವೇ ಚಿದ್ರೂಪಮೂರ್ತಿಯಯ್ಯ, ಸಹಜಸನ್ಮಾರ್ಗಸ್ವರೂಪವಯ್ಯ, ಆ ಮಹಾಲಿಂಗವೇ ಸತ್ತುಚಿತ್ತಾನಂದ ಮೂರ್ತಿಯಯ್ಯ ಸರ್ವಸಾಕ್ಷಿಕಮೂರ್ತಿಯಯ್ಯ ಸರ್ವಚೈತನ್ಯಮೂರ್ತಿ ಯಯ್ಯ ಆ ಮಹಾಲಿಂಗವೇ ಸರ್ವಾಂತರ್ಯಾಮಿ ನೋಡಾ ಅದೆಂತೆಂ ದೊಡೆ—

> ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ ।
> ಲಿಂಗಬಾಹ್ಯೇ ಪರಂ ನಾಸ್ತಿ ತಸ್ಮಾಲ್ಲಿಂಗಂ ಪ್ರಪೂಜಯೇತ್ ॥
> ಲೀಯತೇ ಗಮ್ಯತೇ ಯತ್ರ ಯೇನ ಸರ್ವಚರಾಚರಂ ।
> ತದೇವಲಿಂಗಮಿತ್ಯುಕ್ತಂ ಲಿಂಗತತ್ವಪರಾಯಣೈಃ ॥

ಎಂದುದಾಗಿ ಇಷ್ಟಮಹಾ ಚಿದ್ಘನಲಿಂಗವೇ ಸರ್ವತತ್ವಂಗಳಿಗೆ ಮೂಲಾ
ಧಾರಮೂರ್ತಿ ನೋಡಾ ಸಂಗನಬಸವೇಶ್ವರಾ''

ಇಲ್ಲಿಯವರೆಗೆ ಲಿಂಗಧಾರಣಪರಗಳಾದ ಅನೇಕ ಶರಣರ ವಚನಗಳನ್ನು ಕೊಟ್ಟಿರುತ್ತೇವೆ. ಶ್ರೀ ಬಸವಣ್ಣನವರ ಲಿಂಗಸಿದ್ಧಾಂತಪ್ರಚಾರಕ್ಕೆ ಶರಣರ ಬಲವಿದ್ದಿತು. ಆದ್ದರಿಂದ ಬಸವಣ್ಣನವರ ಕಾರ್ಯ ತೀವ್ರತರವಾದ ಗತಿಯಿಂದ ಎಲ್ಲೆಡೆಯಲ್ಲಿಯೂ ಹಬ್ಬಿತು. ಅದೊಂದು ಪ್ರಚಂಡತರವಾದ ಕ್ರಾಂತಿಯ ಕಾಲವೆನ್ನುವಷ್ಟರಮಟ್ಟಿಗೆ ವ್ಯಾಪಿಸಿತು. ಪ್ರಾಚೀನಕಾಲದಿಂದಲೂ ಲಿಂಗಪೂಜೆಯು ಭರತಖಂಡದಲ್ಲಿ ನಡೆಯುತ್ತ ಬಂದರೂ ಬಸವಣ್ಣನವರ ಕಾಲದಿಂದ ಅದಕ್ಕೊಂದು ಹೊಸ ಸ್ವರೂಪವು ಬಂದಿತೆಂದು ಹೇಳಬಹುದು. ವೇದಕಾಲದಿಂದಲೂ ಲಿಂಗಪೂಜೆಯು ವಿವಿಧ ರೀತಿಯಿಂದಿದ್ದರೂ ಶ್ರೀ ಬಸವಣ್ಣನವರು ಉತ್ಕೃಷ್ಟ ಸ್ವರೂಪವನ್ನು ಕೊಟ್ಟರು. ಅದನ್ನು ಜನರಿಗೆ ಬೋಧಿಸಿ ಕೃತಿಯಲ್ಲಿ ತಂದರು. ಶ್ರೀ ಬಸವಣ್ಣನವರು ವೇದಲಿಂಗವನ್ನು ಬಹುಪರಿಯಿಂದ ಅಂದಚಂದಗೊಳಿಸಿ ತಮ್ಮದೇ ಆದ ಒಂದು ಹೊಸ ಪರಿಸ್ಥಿತಿಯನ್ನುಂಟುಮಾಡಿ ಲಿಂಗ ತತ್ವಪ್ರಸಾರಣೆಯ ಆಚಾರ್ಯರೆನಿಸುವಷ್ಟು ಜನಸಾಮಾನ್ಯರ ಮೆಚ್ಚುಗೆಯನ್ನು ಪಡೆದರು. ಯಾವುದಾದರೊಂದು ಹಳೆಯ ವಸ್ತುವಿಗೆ ಹೊಸ ಸ್ವರೂಪ ಕೊಟ್ಟರೆ ಕೊಟ್ಟವನ ಜಾಣ್ಮೆಯನ್ನು ಲೋಕದಲ್ಲಿಯ ಜನಗಳು ಬಹುಪರಿಯಿಂದ ಕೊಂಡಾಡುವದು ಸ್ವಾಭಾವಿಕವಾಗಿರುತ್ತದೆ. ಮೂಲವಸ್ತುಕಾರನು ಯಾವಾತನೇ ಇರಲಿ ಅವನ ಹೆಸರು ಅಷ್ಟು ಬೆಳಕಿಗೆ ಬರುವದಿಲ್ಲ. ಬಸವಣ್ಣನವರಿಗಿಂತಲೂ ಮೊದಲು ಲಿಂಗತತ್ವವಿದ್ದಿತೆಂಬುವದನ್ನು ಈ ಮೊದಲೇ ತಿಳಿಸಿರುತ್ತೇವೆ. ಆದರೆ ಅದನ್ನು ಜನಸಾಮಾನ್ಯದ ಹಾಸುಹೊಚ್ಚುಗೆಯನ್ನು ಮಾಡಿದ ಗೌರವವು ಮಾತ್ರ ಬಸವಣ್ಣನವರನ್ನು ಬಿಟ್ಟರೆ ಬೇರೊಬ್ಬರಿಗೆ ಸಲ್ಲಲಾರದೆಂದು ಸೂರ್ಯಪ್ರಕಾಶದಷ್ಟು ಸ್ಪಷ್ಟವಿರುತ್ತದೆ. ಯಾರು ಯಾವ ಧರ್ಮದ ತತ್ವಗಳನ್ನು ಹೊಸ ರೀತಿಯಿಂದ ಬಳಕೆಯಲ್ಲಿ ತಂದು ಜನಸಾಮಾನ್ಯರ ಮನಸ್ಸಾಕರ್ಷವಾಗುವಂತೆ ಮಾಡುವರೋ ಅವರ ಹೆಸರು ಆ ಧರ್ಮವು ಅಸ್ತಿತ್ವದಲ್ಲಿರುವವರೆಗೆ ಉಳಿಯುವದು. ಅಂತೆಯೇ ಲಿಂಗತತ್ವವಿಶಾರದರಾದ ಬಸವಣ್ಣನವರು ಇಂದಿಗೂ ವೀರಶೈವರ ಹೃದಯಾಕಾಶದಲ್ಲಿ ಪ್ರಕಾಶಮಾನರಾಗಿದ್ದಾರೆ. ಲೋಕದಲ್ಲಿ ಯಾರು ಯಾವ ಕಾರ್ಯದಲ್ಲಿ ಎಷ್ಟು ಪರಿಶ್ರಮಪಟ್ಟಿರುತ್ತಾರೆಯೋ ಅವರಿಗೆ ಅದಕ್ಕೆ ತಕ್ಕಂತೆ ಗೌರವ ದೊರೆಯುತ್ತದೆಂಬುವ ಸಿದ್ಧಾಂತವು ಅಬಾಧಿತವಾಗಿರುತ್ತದೆ. ಅಂಥವರ ಗೌರವವನ್ನು ನೋಡಿ ಕೊರಗುವವರೂ ಇರುತ್ತಾರೆ. ಇದು ಲೋಕದಲ್ಲಿ ನಡೆದ ಪದ್ಧತಿಯಾಗಿರುತ್ತದೆ.

ಇಂತಹ ಶ್ರೇಷ್ಠತರವಾದ ಶಿವಲಿಂಗವನ್ನು ಎಡೆಬಿಡದೆ ಧರಿಸಿಕೊಂಡು ತ್ರಿಕಾಲದಲ್ಲಿಯೂ ಅರ್ಚನೆಮಾಡುವದೇ ವೀರಶೈವನ ಮುಖ್ಯ ಕುರುಹು. ಈ ಧರ್ಮದಲ್ಲಿ ಹಿಂಸೆಗೆ ಆಸ್ಪದವಿಲ್ಲ; ಅಭಕ್ಷ್ಯ ಭಕ್ಷಣ, ಅಪೇಯಪಾನ ಮೊದಲಾದವುಗಳಿಗೆ ಸ್ಥಾನವಿಲ್ಲ. ಸಮಾನಭಾವನೆಯು ಈ ಸಮಾಜದ ತತ್ವಗಳ ಮುಖ್ಯ ತಳಹದಿಯಾಗಿರುತ್ತದೆ. ಸ್ತ್ರೀ ಪುರುಷರೆಂಬುವ ಭೇದಕ್ಕೆ ಆಸ್ಪದವಿಲ್ಲ. ಷಡಧ್ವಶೋಧನಾಪೂರ್ವಕವಾಗಿ ಗುರುಮುಖದಿಂದ ದೀಕ್ಷೆಯನ್ನು ಪಡೆದವರೆಲ್ಲರೂ ಸಮಾನರೆಂದೇ ಈ ಧರ್ಮದ ವೈಶಿಷ್ಟ್ಯವಾಗಿರುತ್ತದೆ.

ವೆಂಕಟಾಧ್ವರಿಯೆಂಬ ಶ್ರೀವೈಷ್ಣವ ಕವಿಯು ತನ್ನ ವಿಶ್ವಗುಣಾದರ್ಶವೆಂಬುವ ಚಂಪೂಗ್ರಂಥದಲ್ಲಿ (ಪುಟ ೧೦೧)—

ವೇದವೈದಿಕವಿದ್ವೇಷಾ ದೂಷಿತಾ ಭಸ್ಮರೂಷಿತಾಃ ।
ಚಂಡಾಸ್ಸಂತ್ಯತ್ರ ಪಾಖಂಡಾ ಲಿಂಗಾಲಿಂಗಿತವಕ್ಷಸಃ ॥

ಈ ಕವಿಯು ಲಿಂಗವಂತರನ್ನು ಟೀಕಿಸಿ ಇವನು ಉಪಯೋಗಿಸಿರುವ ಶಬ್ದಗಳನ್ನು ನೋಡಿದರೆ ಈ ಕಾಲದಲ್ಲಿ ಇಂತಹ ಬರವಣಿಗೆಗೆ ಬೆಲೆಯು ಇಲ್ಲ. ಈ ಕವಿಯು ರಾಮಾನುಜಮತಾನುಯಾಯಿಯೆಂದು ಈ ಗ್ರಂಥದ ಉಪೋದ್ಘಾತದಿಂದ ತಿಳಿದು ಬರುತ್ತದೆ.

ಹೀಗೆಯೇ ಪೂರ್ವಕಾಲದಿಂದ ಒಂದು ಮತದವರು ಮತ್ತೊಂದು ಮತದವರನ್ನು ಕುತ್ಸಿತರೀತಿಯಿಂದ ಟೀಕೆಯನ್ನು ಮಾಡುತ್ತ ಬಂದುದರಿಂದಲೇ ಪರಸ್ಪರ ವಿರೋಧಿಗಳಾಗುತ್ತ ಬಂದಿರುತ್ತಾರೆ. ಆದ್ದರಿಂದಲೇ ಹಿಂದೂಸ್ಥಾನದಲ್ಲಿ ಪರಧರ್ಮೀಯರು ನೆಲಸಿ ಇದರ ಉಪಯೋಗವನ್ನು ಮಾಡಿಕೊಂಡರು. ತತ್ವದೃಷ್ಟಿಯಿಂದ ಖಂಡನ ಮಾಡಬೇಕೇ ಹೊರತು ಕುತ್ಸಿತತನದಿಂದ ಟೀಕಿಸುವದು ಯಾರಿಗೂ ಭೂಷಣವಾದುದಲ್ಲ. ವೆಂಕಟಾಧ್ವರಿ ಕವಿಯು ಪರಮತಾಂತರಗಳನ್ನು ನಿಂದಿಸಿದ್ದರಿಂದಲೇ ಅವನ ಕಣ್ಣುಗಳು ಹೋದವೆಂತಲೂ, ಆಮೇಲೆ ಅವನು ಲಕ್ಷ್ಮೀಸ್ತೋತ್ರವನ್ನು ಮಾಡಿ ತನ್ನ ಕಣ್ಣುಗಳನ್ನು ಪಡೆದುಕೊಂಡನೆಂತಲೂ ಅದೇ ಗ್ರಂಥದ ಉಪೋದ್ಘಾತದಲ್ಲಿ ಹೇಳಲಾಗಿದೆ. ಈ ಕವಿಯು ಇನ್ನೊಂದು ಅಕ್ಷಮ್ಯವಾದ ಅಪರಾಧವನ್ನು ಮಾಡಿರುತ್ತಾನೆ. ಅದೇನಂದರೆ ಎಲ್ಲ ಮತಗಳನ್ನು ನಿಂದಿಸಿ ಪುನಃ ಸ್ತೋತ್ರಮಾಡುತ್ತ ಹೋಗಿರುತ್ತಾನೆ. ಆದರೆ ವೀರಶೈವ ಮತವನ್ನು ನಿಂದಿಸಿ ಸ್ತೋತ್ರಮಾಡದೆ ಬಿಟ್ಟಿರುತ್ತಾನೆ. ಇದರಿಂದ ಇವನ ದ್ವೇಷಾಸೂಯ ಬುದ್ಧಿಯು ಸ್ಪಷ್ಟವಾಗಿ ಕಾಣಿಸುತ್ತದೆ. ಉಳಿದ ಮತಗಳಲ್ಲಿ ದೋಷಗಳನ್ನು ಎತ್ತಿ ಗುಣಗಳನ್ನು ಪ್ರಶಂಸಿಸಿರುವಂತೆ ಈ ಮತಗಳಲ್ಲಿದ್ದ ದೋಷಗಳನ್ನೆತ್ತಿ ಗುಣಪ್ರಶಂಸೆಮಾಡಿದ್ದರೆ ನಾವಿಲ್ಲಿ ಉಲ್ಲೇಖಮಾಡುವ ಪ್ರಸಂಗವೇ ಬರುತ್ತಿದ್ದಿಲ್ಲ.

**ಶಿವತತ್ವ ರತ್ನಾಕರ**

ನಿಂದಕಃ ಶಿವಭಕ್ತಾನಾಂ ಕೋಟಿಜನ್ಮಸು ಸೂಕರಃ ।
ಸಪ್ತಜನ್ಮಸು ಕುಷ್ಠೀಸ್ಯಾದಂತೇ ದಾಸ್ಯಾಂ ಪ್ರಜಾಯತೇ ॥

ಅಂದರೆ—ಶಿವಭಕ್ತರನ್ನು ನಿಂದಿಸಿದವನು ಕೋಟಿ ಜನ್ಮಗಳಲ್ಲಿ ಸೂಕರನಾಗಿ ಹುಟ್ಟುತ್ತಾನೆ. ಏಳು ಜನ್ಮಗಳಲ್ಲಿ ಕುಷ್ಠರೋಗದವನಾಗಿ ಕಡೆಗೆ ದಾಸಿಯ ಗರ್ಭದಲ್ಲಿ ಹುಟ್ಟುತ್ತಾನೆ. ವೆಂಕಟಾಧ್ವರಿಯ ಉಕ್ತಿಗೆ ಪ್ರತ್ಯುಕ್ತಿಯು—

**ಸೂಕ್ಷ್ಮತಂತ್ರ—ಪಟಲ ೬, ಶ್ಲೋಕ ೭೬ರಿಂದ**

ಅಪಹಾಸಂತಿ ಯೇ ಮೂಢಾ ದೇವಿಮಲ್ಲಿಂಗಧಾರಿಣಃ ।
ಆಬ್ರಹ್ಮಕಲ್ಪಪರ್ಯಂತಂ ಪಚ್ಯಂತೇ ನರಕೇಷು ತೇ ॥ ೭೬ ॥
ಶೈವಶಾಸ್ತ್ರಸ್ಯ ವಕ್ತಾರಂ ಆಕ್ಷಿಪಂತಿ ವಿಮೋಹಿತಾಃ ।
ಛಿದ್ಯಂತೇ ಕ್ರಕಚೈಸ್ತೇಷಾಂ ಜಿಹ್ವಾಶ್ಚ ಯಮಕಿಂಕರೈಃ ॥ ೭೭ ॥

ತತೋ ಭೂಮೌ ಪ್ರಜಾಯಂತೇ ಮೂರ್ಖಾಶ್ಚ ಗಲರೋಗಿಣಃ ।
ಶ್ವಾನಯೋನಿಶತಂಪ್ರಾಪ್ಯ ಜಾಯತೇ ಕ್ರಿಮಯಸ್ತತಃ ॥ ೭೮ ॥
ಸರ್ವೇಷಾಮಪಿ ಪಾಪಾನಾಂ ಪ್ರಾಯಶ್ಚಿತ್ತಂ ಶಿವಸ್ಮೃತಿಃ ॥

ಅಂದರೆ—ಏಲೌ ದೇವಿಯೇ! ನನ್ನ ಲಿಂಗಧಾರಿಗಳನ್ನು ಯಾರು ಹಾಸ್ಯ ಮಾಡು ತ್ತಾರೆಯೋ ಅವರು ಬ್ರಹ್ಮಕಲ್ಪಪರ್ಯಂತರವಾಗಿ ನರಕದಲ್ಲಿ ಬೇಯಿಸಲ್ಪಡುತ್ತಾರೆ. ಭ್ರಾಂತಿಯಿಂದ ಶೈವಶಾಸ್ತ್ರಪ್ರವರ್ತಕರನ್ನು ಯಾರು ಅಪೇಕ್ಷಿಸುತ್ತಾರೆಯೋ ಅವರನ್ನು ಯಮನ ಕಿಂಕರರು ಗರಗಸಗಳಿಂದ ಅವರ ನಾಲಿಗೆಗಳನ್ನು ಸೀಳುತ್ತಾರೆ. ಆಮೇಲೆ ಭೂಮಿಯಲ್ಲಿ ಮೂರ್ಖರಾಗಿಯೋ, ಶ್ವಾಸರೋಗದಿಂದ ಕೂಡಿದವರಾಗಿಯೋ ಹುಟ್ಟು ತ್ತಾರೆ. ನೂರು ನಾಯಿಯ ಜನ್ಮಗಳಲ್ಲಿ ಹುಟ್ಟಿ ಕ್ರಿಮಿಗಳಾಗುತ್ತಾರೆ. ಈ ಎಲ್ಲ ಪಾಪ ಗಳಿಗೆ ಪ್ರಾಯಶ್ಚಿತ್ತವೆಂದರೆ ಶಿವನಾಮ ಸ್ಮರಣೆಯು— ಈ ತರಹದ ಮತ ಮತಾಂತರ ಗಳ ಟೀಕೆಯು ಅನವಶ್ಯಕವಾದುದು. ಚಾರ್ವಾಕ ದರ್ಶನವನ್ನೋದಿದರೆ—

**ಸರ್ವದರ್ಶನಸಂಗ್ರಹ—ಪುಟ ೧೧**

ಮೃತಾನಾಮಪಿ ಜಂತೂನಾಂ ಶ್ರಾದ್ಧಂಚೇತ್ತೃಪ್ತಿಕಾರಣಂ ।
ಗಚ್ಛತಾಮಿಹ ಜಂತೂನಾಂ ವ್ಯರ್ಥಂ ಪಾಥೇಯ ಕಲ್ಪನಮ್ ॥
ಸ್ವರ್ಗಸ್ಥಿತಾ ಯದಾ ತೃಪ್ತಿಂ ಗಚ್ಛೇಯುಸ್ತತ್ರ ದಾನತಃ ।
ಪ್ರಾಸಾದಸ್ಯೋಪರಿಸ್ಥಾನಾಂ ಅತ್ರ ಕಸ್ಮಾನ್ನದೀಯತೇ ॥
ಯಾವಜ್ಜೀವೇತ್ಸುಖಂ ಜೀವೇತ್ ಋಣಂ ಕೃತ್ವಾ ಘೃತಂ ಪಿಬೇತ್ ।
ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂಕುತಃ ॥
ಯದಿ ಗಚ್ಛೇತ್ಪರಂಲೋಕಂ ದೇಹಾದೇಷ ವಿನಿರ್ಗತಃ ।
ತಸ್ಮಾದ್ಭೂಯೋ ನ ಚಾಯಾತಿ ಬಂಧುಸ್ನೇಹಸಮಾಕುಲಃ ॥

ಶ್ರಾದ್ಧವನ್ನು ಮಾಡಿದರೆ ಸತ್ತವರಿಗೆ ತೃಪ್ತಿಯಾಗುವಂತಿದ್ದರೆ ಪರದೇಶಗಳಿಗೆ ಹೋಗ ತಕ್ಕವರಿಗೆ ಬುತ್ತಿಯನ್ನು ಕಟ್ಟತಕ್ಕ ಆವಶ್ಯಕತೆಯೇ ಉಳಿಯುವದಿಲ್ಲ. ಇಲ್ಲಿ ದಾನ ಮಾಡಿದರೆ ಸ್ವರ್ಗದಲ್ಲಿರುವವರು ತೃಪ್ತಿಯನ್ನು ಹೊಂದಿದರೆ ಮೇಲಿನ ಮಾಳಿಗೆಯ ಮೇಲೆ ಕುಳಿತುಕೊಂಡವರಿಗೆ ಕೆಳಗೆ ಕುಳಿತು ದಾನಮಾಡಿದರೆ ಅವರಿಗೆ ತೃಪ್ತಿಯಾಗ ಬೇಕಾದೀತು? ಕೆಳಗೆ ಬರತಕ್ಕ ಶ್ರಮವೇ ಅವರಿಗೆ ಆಗಲಾರದು. ಎಲ್ಲಿಯವರೆಗೆ ಬದುಕಿರುವನೋ ಅಲ್ಲಿಯವರೆಗೆ ಸುಖವನ್ನು ಭೋಗಿಸಬೇಕು. ಸಾಲವನ್ನು ಮಾಡಿ ಯಾದರೂ ತುಪ್ಪವನ್ನು ತಿನ್ನಬೇಕು. ಸುಟ್ಟುಹೋದ ಶರೀರವು ಪುನಃ ಎಲ್ಲಿ ಬರುತ್ತದೆ? ಆದರೆ ಯಾವದೊಂದು ಆತ್ಮವು ಈ ದೇಶದಿಂದ ಲೋಕಾಂತರಕ್ಕೆ ಹೋದಮೇಲೆ ಪುನಃ ಬಂಧುಗಳ ಸ್ನೇಹದಿಂದ ವ್ಯಾಕುಲವಾಗಿ ಮನೆಗೆ ಯಾಕೆ ಬರುವದಿಲ್ಲ? ಆದ್ದರಿಂದ ದೇಹಕ್ಕಿಂತ ಭಿನ್ನವಾದ ಆತ್ಮವಿಲ್ಲ; ದೇಹಮಾತ್ರ ಇರುತ್ತದೆ. ಅದಾದರೂ ಇಲ್ಲಿಯೇ ನಷ್ಟವಾಗುತ್ತದೆ.

ತತಶ್ಚ ಜೀವನೋಪಾಯೋ ಬ್ರಾಹ್ಮಣೈರ್ವಿಹಿತಸ್ತ್ವಿಹ ।
ಮೃತಾನಾಂ ಪ್ರೇತಕಾರ್ಯಾಣಿ ನತ್ವನ್ಯದ್ವಿದ್ಯತೇ ಕ್ವಚಿತ್ ॥

ಸತ್ತಮೇಲೆ ಮಾಡುವ ಕರ್ಮಗಳನ್ನೆಲ್ಲ ಬ್ರಾಹ್ಮಣರು ತಮ್ಮ ಉಪಜೀವದ ಸಲು ವಾಗಿಯೇ ಮಾಡಿರುತ್ತಾರೆ. ಬೇರೆ ಏನೂ ಇರುವದಿಲ್ಲ. ಹೀಗೆಯೇ ಬೇರೆ ಬೇರೆ ದರ್ಶನ ಗಳನ್ನು ಓದಿದರೆ ಪರಸ್ಪರ ಟೀಕೆಗಳೇ ಕಂಡುಬರುತ್ತವೆ.

**ಸರ್ವದರ್ಶನಸಂಗ್ರಹ—ಪುಟ ೧೧**

ತ್ರಯೋ ವೇದಸ್ಯ ಕರ್ತಾರೋ ಭಂಡಧೂರ್ತನಿಶಾಚರಾಃ ।
ಜರ್ಫರೀ ತುರ್ಫರೀತ್ಯಾದಿ ಪಂಡಿತಾನಾಂ ವಚಃ ಸ್ಮೃತಮ್ ॥
ಅಶ್ವಸ್ಯಾತ್ರಹಿ ಶಿಶ್ನಂ ತು ಪತ್ನೀಗ್ರಾಹ್ಯಂ ತು ಪ್ರಕೀರ್ತಿತಮ್ ।
ಭಂಡೈಸ್ತದ್ವತ್ಪರಂ ಚೈವ ಗ್ರಾಹ್ಯಜಾತಂ ಪ್ರಕೀರ್ತಿತಮ್ ।
ಮಾಂಸಾನಾಂ ಖಾದನಂ ತದ್ವನ್ನಿಶಾಚರಸಮೀರಿತಮಿತಿ ॥

ವೇದಗಳನ್ನು ರಚಿಸಿದವರು ಭಂಡ, ರಾಕ್ಷಸ, ಧೂರ್ತ ಈ ಮೂರು ಜನರಿರುತ್ತಾರೆ. ಜರ್ಫರೀ, ತುರ್ಫರೀ ಎಂಬುವ ಋಷಿಗಳ ಹೆಸರನ್ನೂ ಕೂಡ ಈ ಪಂಡಿತರು ಕಲ್ಪನೆ ಮಾಡಿರುತ್ತಾರೆ. ಅಶ್ವದ ಶಿಶ್ನವನ್ನು ಪತ್ನಿಯ ಯೋನಿಗೆ ಮುಟ್ಟಿಸಬೇಕೆಂದು ಹೇಳು ವವರು ಭಂಡರಲ್ಲದೆ ಬೇರೆಯವರಾಗಲಾರರು. ಮಾಂಸಭಕ್ಷಣಾದಿಗಳನ್ನು ಹೇಳತಕ್ಕವರು ರಾಕ್ಷಸರು. ಆದ್ದರಿಂದ ಅನೇಕ ಜೀವಿಗಳ ಕಲ್ಯಾಣಕ್ಕೆ ಚಾರ್ವಾಕರ ಮತವನ್ನು ಅವ ಲಂಬಿಸು ಎಂದು ಹೇಳಿರುತ್ತಾರೆ.

ಆದರೆ ಇಲ್ಲಿ ತಿಳಿಯತಕ್ಕ ಮುಖ್ಯ ವಿಷಯವೇನೆಂದರೆ ವೇದಗಳನ್ನು ನಿಂದಿಸುವ ದಲ್ಲದೆ ವೇದಗಳನ್ನು ಮಾಡಿದವರು ಭಂಡರೆಂದು ಚಾರ್ವಾಕ ದರ್ಶನವು ಹೇಳುತ್ತದೆ. ಅವರ ಮಾತುಗಳನ್ನು ನಾವು ಒಪ್ಪುವದು ಶಕ್ಯವಿಲ್ಲ.

ಆದ್ದರಿಂದ ಪರಸ್ಪರ ಹೃದಯವೈಶಾಲ್ಯದಿಂದ ನಡೆದುಕೊಳ್ಳುವದೇ ಶ್ರೇಷ್ಠ ವಾಗಿರುತ್ತದೆ. ಪ್ರೇಮದಿಂದ ಪ್ರೇಮವೂ, ದ್ವೇಷದಿಂದ ದ್ವೇಷವೂ ಹುಟ್ಟುತ್ತದೆ. ಯಾರನ್ನೂ ಕಾಯಾ ವಾಚಾ ಮನಸ್ಸಿನಿಂದ ಹಿಂಸೆಯನ್ನು ಮಾಡಬಾರದು. ಅದೇ ಮಾನವನ ಶ್ರೇಷ್ಠ ಧರ್ಮವಾಗಿರುತ್ತದೆ. ಎಲ್ಲಾ ಧರ್ಮಗಳ ಮುಖ್ಯ ಗುರಿಯು ಒಂದೇ ಆಗಿರುತ್ತದೆ. ತತ್ವವಿಲ್ಲದೆ ಟೀಕೆಯನ್ನು ಮಾಡುತ್ತ ಹೋದರೆ ಯಾವ ಧರ್ಮವೂ ಉಳಿಯಲಿಕ್ಕಿಲ್ಲ. ಅದು ಸರಿಯಾದ ಮಾರ್ಗವಲ್ಲ.

## ಲಿಂಗಶಬ್ದದ ಅರ್ಥವೇನು ?

ಲಿಂಗಧಾರಣವು ಹೇಗೆ ಶ್ರೇಷ್ಠವಾದುದು? ಅದರ ತತ್ವಗಳೇನು? ಅದು ಹೇಗೆ ಪ್ರಚಾರದಲ್ಲಿ ಬಂದಿರುತ್ತದೆ? ಇವೇ ಮೊದಲಾದ ವಿಷಯುಗಳನ್ನು ಇಲ್ಲಿಯವರೆಗೆ ವಿಸ್ತಾರ ವಾಗಿ ಹೇಳಲಾಯಿತು. ಇನ್ನು ಮೇಲೆ ಲಿಂಗಶಬ್ದದ ಅರ್ಥವೇನು? ಎಂಬುವದನ್ನು ನೋಡಬೇಕಾಗಿರುತ್ತದೆ. ಲಿಂಗಶಬ್ದಕ್ಕೆ ಅನೇಕಾರ್ಥಗಳಿರುತ್ತವೆ. ಶಿವಾಗಮಗಳಲ್ಲಿಯೂ, ಪುರಾಣಗಳಲ್ಲಿಯೂ, ವಚನಗಳಲ್ಲಿಯೂ ಲಿಂಗಕ್ಕೆ ವಿಸ್ತೃತವಾದ ಅರ್ಥವನ್ನು ಮಾಡಲಾಗಿದೆ.

**ಶಿವರಹಸ್ಯ—ಪುಟ ೨೭**

ಒಂದು ದಿನ ವಿಷ್ಣು ಬ್ರಹ್ಮಾದಿಗಳು ಶಿವನ ಹತ್ತಿರ ಹೋಗಿ—

ಪ್ರಣಿಪತ್ಯ ಮಹಾದೇವಂ ಅಪೃಚ್ಛನ್ ಕೋಽಭವಾನಿತಿ ।
ಸೋಽಬ್ರವೀತ್ ಭಗವಾನ್‌ರುದ್ರಃ ಪಶೂನಾಂ ಪತಿರೀಶ್ವರಃ ॥
ಸರ್ವಜ್ಞಃ ಸರ್ವತತ್ವಾನಾಂ ತತ್ವಭೂತಃ ಸನಾತನಃ ।
ಅಹಮೇಕೋ ಜಗದ್ಹೇತು ರಾಸಂ ಪ್ರಥಮಮೀಶ್ವರಃ ॥
ವರ್ತಾಮಿ ಚ ಭವಿಷ್ಯಾಮಿ ನ ಮತ್ತೋಽನ್ಯಶ್ಚ ಕಶ್ಚನ ।
ಮನ್ಮಾಯಾಶಕ್ತಿ ಸಂಕ್ಲೃಪ್ತಂ ಜಗತ್ಸರ್ವಂ ಚರಾಚರಂ ॥

ಹೀಗೆ ಹೇಳಿ ಪರಮಾತ್ಮನು ತನ್ನ ರೂಪವನ್ನು ತೋರಿಸಿದನು. ಇದಕ್ಕೆ ವಿದ್ಯಾರಣ್ಯರು ಶಿವರಹಸ್ಯದ ತಮ್ಮ ತಾತ್ಪರ್ಯ ದೀಪಿಕೆಯೆಂಬ ಟೀಕೆಯಲ್ಲಿ ಶಿವತತ್ವದ ಬಗ್ಗೆ ಅನೇಕ ತರಹದ ಅರ್ಥಗಳನ್ನು ಮಾಡುತ್ತ—

**ಶಿವರಹಸ್ಯ—ಪುಟ ೨೭**

ಭೋಕ್ತಾ ಭೋಗ್ಯಾ ಪ್ರೇರಿತಾರಂ ಚ ಮತ್ವಾ ಸರ್ವಂ ಪ್ರೋಕ್ತಂ ತ್ರಿವಿಧಂ
ಬ್ರಹ್ಮಚೈತತ್ ಯಾವದ್ಬ್ರಹ್ಮ ನಜಾನಾತಿ ತಾವತ್ ಪ್ರೇರಯಿತಾ
ಭೋಗಪ್ರದ ಈಶ್ವರಃ ಭೋಕ್ತಾ ಜೀವಃ ಭೋಗ್ಯಂ ಜಗದಿತಿ ವಿಭಾಗಃ
ಬ್ರಹ್ಮಮತ್ವಾ ತು ಸ್ಥಿತಸ್ಸ್ಯೈ ಚ ತ್ರಿವಿಧಃ ಬ್ರಹ್ಮೈವ ಭವತಿ ಅತಃ ಮಾಯಾಶಕ್ತಿ
ಸಂತೃಪ್ತಮಿತ್ಯರ್ಥಃ ಎಂದು ಹೇಳುತ್ತ ಆಗಮಿಕಾಃ ಇತ್ಯಾಹುಃ
**ಶಿವೋ ದಾತಾ ಶಿವೋ ಭೋಕ್ತಾ ಶಿವಸ್ಸರ್ವಮಿದಂ ಜಗತ್**
**ಶಿವೋ ಯಜತಿ ಯಜ್ಞೈಶ್ಚ ಯಃ ಶಿವಃ ಸೋಹಮೇವ ಚ**

ಶಿವನೇ ಕೊಡುವವನು ; ಶಿವನೇ ಭೋಕ್ತನು. ಈ ಜಗತ್ತೆಲ್ಲ ಶಿವನ ಸ್ವರೂಪವಾದುದು. ಅರ್ಥಾತ್ ಮಾಯಾತೀತನಾದ ಶಿವನೇ ಭೋಗದಾತಾ ಭೋಕ್ತಾ ಭೋಗ್ಯನಿರುವನು. ಶಿವನೇ ಜಗದ್ವ್ಯಾಪಕನು. ಅಂತಹ ಶಿವಲಿಂಗದ ಅರ್ಥವನ್ನು ನೋಡೋಣ.

## ಲಿಂಗಶಬ್ದದ ಅರ್ಥವು

ಲಿಂಗವೆಂದರೆ ಗುರುತು ಚಿಹ್ನ ಮೊದಲಾದ ಅನೇಕಾರ್ಥಗಳಿರುತ್ತವೆ.

**ಸೂಕ್ಷ್ಮಾಗಮ—ತಂತ್ರ ಸಂಗ್ರಹ, ಪುಟ ೭೯**

ಲಿಕಾರೋ ಲಯಬುದ್ಧಿಸ್ಥೋ ಬಿಂದುನಾ ಸ್ಥಿತಿರುಚ್ಯತೇ ।
ಗಕಾರಾತ್ಸೃಷ್ಟಿರಿತ್ಯುಕ್ತಂ ಲಿಂಗಂ ಸೃಷ್ಟ್ಯಾದಿ ಕಾರಣಂ ॥
ಲೀನಂ ಪ್ರಪಂಚ ರೂಪಂ ಹಿ ಸರ್ವಮೇತಚ್ಚರಾಚರಂ ।
ಸರ್ಗಾದೌ ಗಮ್ಯತೇ ಭೂಯಸ್ತಸ್ಮಾಲ್ಲಿಂಗಮುದೀರಿತಂ ॥

ಲಿಕಾರದಿಂದ ಲಯಬುದ್ಧಿಯೂ, ಬಿಂದುವಿನಿಂದ ಸ್ಥಿತಿಯೂ, ಗಕಾರದಿಂದ ಸೃಷ್ಟಿಯೂ ಹೇಳಲ್ಪಟ್ಟಿರುವದರಿಂದ ಲಿಂಗವು ಸೃಷ್ಟಿ ಸ್ಥಿತಿ ಲಯಾದಿಗಳಿಗೆ ಕಾರಣವಾಗಿರುತ್ತದೆ. ಚರಾಚರಾತ್ಮಕವಾದ ಸರ್ವ ಪ್ರಪಂಚವೂ ಇದರಲ್ಲಿ ಅಡಗಿಹೋಗಿರುತ್ತದೆ. ಸರ್ಗಾದಿಯಲ್ಲಿ ಪುನಃ ಗಮನವನ್ನು ಹೊಂದುವದರಿಂದ ಇದಕ್ಕೆ ಲಿಂಗವೆಂದು ಹೇಳುತ್ತಾರೆ.

ಲಿಂಗದ ಸ್ವರೂಪವನ್ನು ಹೇಳುತ್ತ—

ನಿರಾಮಯಂ ನಿರಾಕಾರಂ ನಿರ್ಗುಣಂ ನಿರ್ಮಲಂ ಶಿವಂ ।
ಜ್ಯೋತಿರ್ಮಯಂ ನಿರಾಲಂಬಂ ಸರ್ವಾಧಾರ ಮನೂಪಮಂ ॥ ೧೧ ॥

ತತ್ತೈವ ತೇಜಸಾ ದೇವಿ ಚಂದ್ರಾದಿ ಗ್ರಹತಾರಕಾಃ ।
ಪ್ರಕಾಶಂತೇ ನಿಯಮಿತಾಃ ಕಾಲಕ್ಲೃಪ್ತ್ಯಾದಿವಾನಿಶಂ ॥ ೧೨ ॥

ಅಸ್ಯಭೀತ್ಯಾ ಮಹಾನ್ವಾಯುಃ ಸದಾವಾತಿ ಜಗತ್ರಯೇ ।
ಸೂರ್ಯಶ್ಚೋದೇತಿ ನಿಯತೋ ವಹ್ನಿರುಷ್ಣಕರಃ ಸದಾ ॥ ೧೩ ॥

ಚಂದ್ರಶ್ಚ ಶೀತತಾಂ ಯಾತಿ ಯಮಶ್ಚ ಪರಿಧಾವತಿ ।
ತಸ್ಮಾಲ್ಲಿಂಗಂ ಪರಬ್ರಹ್ಮ ಸಚ್ಚಿದಾನಂದ ಲಕ್ಷಣಂ ॥ ೧೪ ॥

ಅಂದರೆ ನಿರಾಮಯ, ನಿರಾಕಾರ, ನಿರ್ಗುಣ, ನಿರ್ಮಲ, ಜ್ಯೋತಿಸ್ವರೂಪ, ಆಶ್ರಯ ರಹಿತ, ಎಲ್ಲಕ್ಕೂ ಆಧಾರ, ಉಪಮಾತೀತವಿರುತ್ತದೆ. ಈ ಲಿಂಗದಲ್ಲಿಯೇ ಚಂದ್ರಗ್ರಹ ನಕ್ಷತ್ರಗಳು ಹೊಳೆಯುತ್ತಲಿವೆ. ಈ ಲಿಂಗದ ಭೀತಿಯಿಂದಲೇ ಸದಾ ವಾಯು ಬೀಸುತ್ತದೆ. ಸೂರ್ಯನು ನಿಯಮದಿಂದ ಉದಯನಾಗುತ್ತಾನೆ. ಚಂದ್ರನು ಶಾಂತಿಯನ್ನು ಹೊಂದುತ್ತಾನೆ. ಆದ್ದರಿಂದ ಲಿಂಗವು ಸಚ್ಚಿದಾನಂದಸ್ವರೂಪವಾದ ಪರಬ್ರಹ್ಮವಿರುತ್ತದೆ.

ಮತ್ತು

ಅವ್ಯಕ್ತಂ ವ್ಯಕ್ತಮಾಪನ್ನಂ ಅನಂತಂ ವಿಶ್ವತೋಮುಖಂ ।
ಸೂರಯಸ್ತತ್ರ ಪಶ್ಯಂತಿ ನಿರ್ಮಲಂ ಪರಮಂ ಪದಂ ॥

ದೇವಾಃ ಸ ರಕ್ಷೋ ಗಂಧರ್ವಾಃ ವೇದಾಃ ಸಾಂಗಾಃ ಸನಾತನಾಃ ।
ಉತ್ಪದ್ಯಂತೇಽತ್ರಕಲ್ಪಾದೌ ಕಲ್ಪಾಂತೇ ಚ ಲಯಂ ಗತಾಃ ॥

ದಕ್ಷಿಣಾಂಗಾತ್ಮಕೋಬ್ರಹ್ಮಾ ವಿಷ್ಣುರ್ವಾಮಾಂಗಕಸ್ತಥಾ ।
ಸಮಸ್ತ ವೇದಜನನೀ ಗಾಯತ್ರೀ ಹೃದಯಾದಭೂತ್ ॥

ವೇದಾಃ ಶಿರಸಮುದ್ಭೂತಾಃ ಸಾಂಗೋಪಾಂಗ ಸಹಸ್ರಶಃ ।
ಉತ್ಪದ್ಯತೇ ಲೀಯತೇ ಚ ಲಿಂಗೇಸ್ಮಿನ್ ಸಚರಾಚರಂ ॥

ಅಂದರೆ— ಅವ್ಯಕ್ತವೂ ವ್ಯಕ್ತವೂ ಆದುದು ಮತ್ತು ಅನಂತವಿಶ್ವತೋಮುಖ ಉಳ್ಳದ್ದು. ಆ ಲಿಂಗದಲ್ಲಿ ಕವಿಗಳು ಪರಮಪದವನ್ನು ಕಾಣತಕ್ಕವರಾಗಿರುತ್ತಾರೆ. ದೇವತೆಗಳು, ರಾಕ್ಷಸರು, ಯಕ್ಷರು, ಕಿನ್ನರರು, ಗಂಧರ್ವರು, ಅಂಗಸಹಿತಗಳಾದ ವೇದಗಳು ಕಲ್ಪದ ಆದಿಯಲ್ಲಿ ಈ ಲಿಂಗದಲ್ಲಿ ಹುಟ್ಟುತ್ತವೆ. ಕಲ್ಪಾಂತ್ಯದಲ್ಲಿ ಲಯವನ್ನು ಹೊಂದುತ್ತವೆ. ಬ್ರಹ್ಮನು ದಕ್ಷಿಣಾಂಗಾತ್ಮಕನು; ವಿಷ್ಣುವು ವಾಮಾಂಗಾತ್ಮಕನು. ಗಾಯತ್ರಿಯು ಹೃದಯದಲ್ಲಿ ಹುಟ್ಟಿತು. ವೇದಗಳು ಶಿರಸ್ಸಿನಿಂದ. ಅಂತೂ ಚರಾಚರಾತ್ಮಕವಾದ ಪ್ರಪಂಚವು ಈ ಲಿಂಗದಲ್ಲಿ ಹುಟ್ಟುತ್ತದೆ; ಲಯವನ್ನು ಹೊಂದುತ್ತದೆ.

**ವಾತುಲಾಗಮ—ತತ್ವಭೇದ ಪಟಲ, ಪುಟ ೬**

ಲಿಂಗಪೀಠಃ ಪ್ರಕಾರೇಣ ಕರ್ಮಸಾದಾಖ್ಯಲಕ್ಷಣಂ ।
ನಾದೋಲಿಂಗಮಿತಿಜ್ಞೇಯಂ ಬಿಂದುಃ ಪೀಠಮುದಾಹೃತಂ ॥ ೬೫ ॥

ಬಿಂದುನಾದಯುತಂ ರೂಪಂ ಲಿಂಗಾಕಾರಮಿತಿಸ್ಮೃತಂ ।
ಚತ್ವಾರಿ ಕರ್ತೃರೂಪಾಣಿ ಕೇವಲಂ ನಾದಮೀರಿತಂ ॥ ೬೬ ॥

ಲಿಂಗಂ ಶಿವ ಇತಿ ಜ್ಞೇಯಂ ಪೀಠಂ ಶಕ್ತಿರುದಾಹೃತಾ ।
ಯೋನಿಲಿಂಗಪ್ರಕಾರೇಣ ಜಗತ್ ಸೃಷ್ಟ್ಯರ್ಥಕಾರಣಂ ॥ ೬೭ ॥

ತಥಾ ಸಂಯೋಗಭಾವೇನ ಕರ್ಮರೂಪಮುದಾಹೃತಂ ।
ಬಿಂದುಮಧ್ಯಗತೋ ನಾದೋ ನಾದಮಧ್ಯೇತು ಮೂರ್ತಯಃ ॥ ೬೮ ॥

ಮೂರ್ತಿಮಧ್ಯಗತಂ ತತ್ವಂ ತತ್ವಮಧ್ಯಗತಶ್ಶಿವಃ ।
ಏತಚ್ಛಿವಮಯಂ ಲಿಂಗಂ ಸರ್ವತತ್ವಾಲಯಂ ವಿದುಃ ॥ ೬೯ ॥

ಲಿಂಗೇತು ಜಾಯತೇ ಸರ್ವಂ ಜಗತ್ ಸ್ಥಾವರಜಂಗಮಮ್ ।
ತಸ್ಮಾಲ್ಲಿಂಗಂ ವಿಶೇಷೇಣ ಕರ್ಮರೂಪಮುದಾಹೃತಂ ॥ ೭೦ ॥

ಕರ್ಮೋದಯೇ ಚ ಸೃಷ್ಟಿಸ್ಸ್ಯಾತ್ । ಕರ್ಮಾಂತೇ ಸಂಹೃತಿರ್ಭವೇತ್ ॥

ಅಂದರೆ— ನಾದವೇ ಲಿಂಗವು; ಬಿಂದುವೇ ಪೀಠವು. ಬಿಂದುನಾದಗಳಿಂದ ರೂಪವು
ಲಿಂಗಾಕಾರವೆಂದು ತಿಳಿಯಲ್ಪಡುತ್ತದೆ. ಲಿಂಗವೇ ಶಿವನು; ಪೀಠವೇ ಶಕ್ತಿಯು.
ಈ ಶಿವಮಯವಾದ ಲಿಂಗವನ್ನು ಎಲ್ಲ ತತ್ವಗಳಿಗೂ ಆಲಯವೆಂದು ಹೇಳುವರು.
ಲಿಂಗದಲ್ಲಿ ಸರ್ವವೂ ಹುಟ್ಟುತ್ತದೆ. ಆದ್ದರಿಂದ ಲಿಂಗವು ಕರ್ಮರೂಪವೆಂದು
ಹೇಳಲ್ಪಡುತ್ತದೆ. ಕರ್ಮೋದಯದಲ್ಲಿ ಸೃಷ್ಟಿಯೂ, ಕರ್ಮಾಂತ್ಯದಲ್ಲಿ ಲಯವೂ
ಆಗುತ್ತದೆ.

ಲಿಂಗಶಬ್ದವು ಸಂಸ್ಕೃತವಲ್ಲವೆಂತಲೂ, ಅದಕ್ಕೆ ಅನೇಕ ಅರ್ಥಗಳಿದ್ದರೂ
ಜನನೇಂದ್ರಿಯ ಅರ್ಥವೇ ಮುಖ್ಯವಾದುದೆಂತಲೂ, ಲಿಂಗಶಬ್ದವು ಪರದೇಶದಿಂದ
ಬಂದದ್ದೆಂತಲೂ, ಶಂ.ಬಾ. ಜೋಶಿಯವರು ತಮ್ಮ ಶಿವರಹಸ್ಯ– ಪುಟ ೩೫ ರಲ್ಲಿ ರುದ್ರ
ಶಿವಪೂಜಕರೂ, ಲಿಂಗಪೂಜಕರೂ ಒಂದೇ ಎಂದು ಭಾವಿಸುವದು ತಪ್ಪು ಎಂದು
ಹೇಳುವದು ಅನಿವಾರ್ಯವಾಗಿರುತ್ತದೆ. ಲಿಂಗಶಬ್ದಕ್ಕೆ ಸಂಸ್ಕೃತದಲ್ಲಿ ಸರಿಯಾದ
ನಿರುಕ್ತವಿಲ್ಲ. ಲಿ ಅಂದರೆ ಇಂತಹ ತತ್ವ ಅನುಸಾರಕ್ಕೆ ಈ ಅರ್ಥ. ಗ ಎಂದರೆ ಅದರ
ರಹಸ್ಯವೇನು? ಮುಂತಾಗಿ ಹೇಳುವ ಅರ್ಥಗಳೂ, ಮಾಡಿರುವ ಭಾಷ್ಯಗಳೂ ಆಯಾ
ಲೇಖಕರ ಶ್ರದ್ಧೆ ಭಾವನಾ ಶಕ್ತಿಗಳ ವೈಪುಲ್ಯವನ್ನೂ, ವಿಶಾಲತೆಯನ್ನೂ ತೋರಿಸಬಲ್ಲುವೇ
ಹೊರತು ಭಾಷಾ ಶಾಸ್ತ್ರದ ದೃಷ್ಟಿಯಿಂದ ಸಮರ್ಪಕವಾದ ಉತ್ಪತ್ತಿಯು ಅವುಗಳಲ್ಲಿ
ದೊರೆಯಲಾರದು. ಲಿಂಗದ ಮೂಲ ಕಲ್ಪನೆಯೊಳಗಿನ ಭೌತಿಕ ಅರ್ಥವನ್ನು ಸಂಪೂರ್ಣ
ವಾಗಿ ತೊಡೆದುಹಾಕಿ ಅದಕ್ಕೊಂದು ವಿಶಾಲವಾದ ಉಚ್ಚವಿಚಾರದ ತತ್ವಜ್ಞಾನವನ್ನು
ತಂದು ಜೋಡಿಸಿದ್ದುದು ಪ್ರಶಂಸನೀಯವಾಗಿರುತ್ತದೆ. ಆದರೆ ಮೂಲದಲ್ಲಿ ಲಿಂಗಶಬ್ದಕ್ಕೆ
ಇದ್ದ ಅರ್ಥವನ್ನು ಅಲ್ಲಗಳೆಯಲಾಗುವದಿಲ್ಲ. ಮತ್ತು ೩೨ನೆಯ ಪುಟದಲ್ಲಿಯೂ
ವೇದಗಳಲ್ಲಿ ರುದ್ರಶಿವನಿಗೆ ಲಿಂಗವೆಂದು ಹೇಳಿಲ್ಲ. ಅಲ್ಲಿ ಶಿಶ್ನೋದೇವರು ರುದ್ರದೇವರಿಗೆ
ಭಿನ್ನವಾಗಿರುತ್ತದೆ. ಆದುದರಿಂದ ಶಿವನನ್ನು ಲಿಂಗವೆಂದು ಭಾವಿಸಿರುವದು ಅರ್ವಾಚೀನ.
ಪ್ರಿಲಸ್ಕಿ ಮೊದಲಾದವರು ಲಿಂಗಶಬ್ದವು ಸಂಸ್ಕೃತವಲ್ಲವೆಂದೇ ಅವರ ಮತವು.

ಮೇಲಿನ ಬರಹವನ್ನು ನೋಡಿದರೆ ನಾವಿಲ್ಲಿ ಮೂರು ಮಾತಿನ ಅರ್ಥವನ್ನು
ಸ್ಪಷ್ಟೀಕರಿಸಬೇಕಾಗುತ್ತದೆ. (೧) ಲಿಂಗಶಬ್ದವು ಸಂಸ್ಕೃತವಲ್ಲ. (೨) ವೇದದಲ್ಲಿ
ಲಿಂಗಶಬ್ದವು ಬಂದಿಲ್ಲ. (೩) ಶಿವನಿಗೆ ಲಿಂಗವೆಂದು ಹೇಳುವದು ಅರ್ವಾಚೀನ ಕಾಲ.

ಇದರಲ್ಲಿ ಮೊದಲನೆಯ ಮಾತೆಂದರೆ, ಲಿಂಗಶಬ್ದವು ಸಂಸ್ಕೃತವಲ್ಲವೆಂಬುವುದು.
ಲಿಂಗಶಬ್ದವು ಸಂಸ್ಕೃತ; ಅದರಲ್ಲಿ ಎಳ್ಳಷ್ಟೂ ಸಂಶಯವಿರುವದಿಲ್ಲ. ಸಂಸ್ಕೃತಜ್ಞಾನ
ವಿಲ್ಲದವರು ಮಾತ್ರ ಈ ಮಾತನ್ನು ಆಡಬಹುದು. ಪ್ರಿಲಸ್ಕಿ ಮೊದಲಾದವರು
ಲಿಂಗಶಬ್ದವು ಸಂಸ್ಕೃತವಲ್ಲವೆಂದು ಹೇಳುವ ಮಾತನ್ನು ಯಾರೂ ಒಪ್ಪಲಾರರು. ಅಂದರೆ
ಸಂಸ್ಕೃತ ಬಲ್ಲ ಯಾವ ಪಂಡಿತನೂ ಈ ಮಾತಿಗೆ ಒಪ್ಪುವದು ಶಕ್ಯವಿಲ್ಲ. ಹಾಗಾದರೆ
ಪ್ರಿಲಸ್ಕಿ ಮೊದಲಾದವರು ಘನಪಂಡಿತರು, ಅಂಥವರ ಮಾತನ್ನು ಅಲ್ಲಗಳೆಯಲು
ಬರುವುದೇ ಎಂಬುವ ಮಾತಿನಲ್ಲಿ ಹುರುಳಿಲ್ಲ. ಐತಿಹಾಸಿಕ ದೃಷ್ಟಿಯಿಂದ ಅವರ ಕಲ್ಪನಾ
ಸಾಮ್ರಾಜ್ಯದಲ್ಲಿ ಬಂದದ್ದನ್ನು ಬರೆದಿರುತ್ತಾರೆ. ಅದನ್ನು ಎಂದಿಗೂ ಒಪ್ಪಲು ಸಾಧ್ಯವಿಲ್ಲ.
ದೊಡ್ಡ ದೊಡ್ಡ ವಿದ್ವಾಂಸರು ದೊಡ್ಡ ದೊಡ್ಡ ತಪ್ಪುಗಳನ್ನು ಮಾಡುತ್ತಾರೆಂಬುವದಕ್ಕೆ
ಬೇಕಾದಷ್ಟು ಉದಾಹರಣೆಗಳನ್ನು ಕೊಡಬಹುದು. ಪ್ರಿಲಸ್ಕಿ ಮೊದಲಾದವರು ಲಿಂಗ

ಶಬ್ದವು ಸಂಸ್ಕೃತವಲ್ಲವೆಂದು ಹೇಳುವದು ದೊಡ್ಡ ತಪ್ಪಾಗಿರುತ್ತದೆ. ಲೋಕದಲ್ಲಿ ಏನಾದರೊಂದು ಹೊಸ ಬೆಳಕನ್ನು ಕೆಡವಿ ಅದು ತಪ್ಪೇ ಇರಲಿ, ಒಪ್ಪೇ ಇರಲಿ ತಮ್ಮ ಹೆಸರು ಬಹುಕಾಲ ಉಳಿಯಲೆಂಬುವ ಉದ್ದೇಶದಿಂದ ಅವರು ಹಾಗೆ ಮಾಡುತ್ತಾರೆ.

ಲಿಂಗಶಬ್ದದ ಉತ್ಪತ್ತಿಯನ್ನು ನೋಡೋಣ—

ಸಂಸ್ಕೃತಧಾತುಗಳಲ್ಲಿ ಲಿಗಿ ಗತೌ ಭ್ವಾದಿ ಮತ್ತು ಲಿಗಿ ಚಿತ್ರೀಕರಣೆ ಚುರಾದಿ ಹೀಗೆ ಎರಡು ಧಾತುಗಳಿರುತ್ತವೆ. ಲಿಗಿ ಗತೌ ಎಂಬುವ ಭ್ವಾದಿ ಧಾತುವಿನಿಂದಲೇ ಲಿಂಗಶಬ್ದವಾಗಿರುತ್ತದೆ. ಲಿಗಿ—ಗತೌ ಇದಿತೋನುಮ್ ಎಂಬುವ ಪಾಣಿನಿಯ ಸೂತ್ರಕ್ಕನುಸಾರವಾಗಿ ನುಮಾಗಮ ಬಂದು, ಹಲಶ್ಚ ಘಂಯ್—ಇದರಿಂದ ಅಕಾರ ಬಂದು ಲಿಂಗವೆಂಬುವ ಶಬ್ದವಾಗಿರುತ್ತದೆ. ಉದಾಹರಣೆ—ಚದಿ–ಚಂದ್ರ, ಇದಿ–ಇಂದ್ರ, ಇತ್ಯಾದಿ ಇಕಾರಾಂತ ಧಾತುಗಳಂತೆ ಲಿಗಿ ಧಾತುವಾದರೂ ಆಗಿರುತ್ತದೆ. ಪಾಣಿನಿಯ ನಿರುಕ್ತಕ್ಕೆ ಸರಿಯಾಗಿಯೇ ಇಲ್ಲಿ ಸಿದ್ಧಮಾಡಲಾಗುತ್ತದೆ.

ಗತ್ಯರ್ಥಕಧಾತವಃ ಜ್ಞಾನಾರ್ಥಕಾಃ ಭವಂತಿ ಎಂಬುವ ಉಕ್ತಿಯಂತೆ ಇಲ್ಲಿ ಅರ್ಥವಾಗುತ್ತದೆ. ನಾವು ಹೇಳುವ ಈ ವಿಧಾನಕ್ಕೆ ಪಾಣಿನಿಯ ಸೂತ್ರಗಳೇ ಆಧಾರವಾಗಿದ್ದರೂ ಬೇರೆಬೇರೆ ಅನೇಕ ಪಂಡಿತಪ್ರಕಾಂಡರ ಉದಾಹರಣೆಯನ್ನು ಕೊಡಲು ಶಕ್ಯವಿದೆ. ಇಲ್ಲಿ ಶ್ರೀ ವಿದ್ಯಾರಣ್ಯರು ಶಿವರಹಸ್ಯ ಎಂಬುವ ಗ್ರಂಥಕ್ಕೆ ತಾತ್ಪರ್ಯ ದೀಪಿಕೆ ಎಂಬುವ ಟೀಕೆಯನ್ನು ಬರೆದಿರುತ್ತಾರೆ. ಅವರು ಲಿಂಗ ಶಬ್ದದ ವಿಷಯಕ್ಕೆ ಹೇಗೆ ಸಿದ್ಧಿಯನ್ನು ಮಾಡಿರುತ್ತಾರೆಂಬುವದನ್ನು ನೋಡೋಣ.

**ಶಿವರಹಸ್ಯ—ಪುಟ ೫೪೦, ಶ್ಲೋಕ ೧೫**

ಲಿಂಗಲಿಂಗ್ಯಾದಿ ಹೀನಾಯ ಲಿಂಗರೂಪಾಯ ತೇ ನಮಃ ।

ಈ ಶ್ಲೋಕಕ್ಕೆ ವ್ಯಾಖ್ಯಾನವನ್ನು ಮಾಡುವಾಗ—ಲಿಂಗರೂಪಾಯ ಲಿಗಿಗತ್ಯರ್ಥಃ ಗತ್ಯರ್ಥತಾಃ ಜ್ಞಾನಾರ್ಥಾಃ ಜ್ಞಾನರೂಪಾಯ ತಸ್ಯ ಸ್ವಪ್ರಕಾಶತ್ವೇನ ಮಾನಮೇಯ ಮಾತೃವಿಭಾಗ ವಿರಹಮಾಹ—ಈ ಉತ್ಪತ್ತಿಯು ಪಾಣಿನಿಯ ನಿರುಕ್ತಕ್ಕೆ ಸರಿಯಾಗಿರುವದು. ಲಿಂಗಶಬ್ದಕ್ಕೆ ಅನೇಕಾರ್ಥಗಳಿರುತ್ತವೆ. ಅಮರಕೋಶ ನಾನಾರ್ಥವರ್ಗ—ಲಿಂಗಂ ಚಿಹ್ನಶೇಫಯೋಃ—ಇದಕ್ಕೆ ಟೀಕೆಯನ್ನು ಬರೆಯುವಾಗ ಲಿಂಗ್ಯತೇ ಅನೇನ ಲಿಗಿಗತೌ ಭ್ವಾದಿ–ಪರಸ್ಮೈಪದ ಹಲಶ್ಚ (೩–೩–೧೨೧). ಪಾಣಿನಿ ಸೂತ್ರ "ಲಿಂಗಂ ಚಿಹ್ನೇನುಮಾನೇಚ ಸಾಂಖ್ಯೋಕ್ತ ಪ್ರಕೃತಾವಪಿ । ಶಿವಮೂರ್ತಿ ವಿಶೇಷೇ ಚ ಮೇಹನೇಪಿ ನಪುಂಸಕಮ್" ಲಿಂಗವೆಂದರೆ ಚಿಹ್ನ ಅನುಮಾನ. ಸಾಂಖ್ಯಶಾಸ್ತ್ರದಲ್ಲಿ ಹೇಳಿದ ಪ್ರಕೃತಿ, ಶಿವಮೂರ್ತಿ ವಿಶೇಷ—ಮೇಹನ ಅಂದರೆ ಶಿಶ್ನ—ಇದು ನಪುಂಸಕವಾಗುತ್ತದೆ. ಇತಿ ಮೇದಿನೀಕೋಶಃ.

ಲಿಂಗಶಬ್ದಕ್ಕೆ ಮೇಲೆ ಬರೆದಂತೆ ಆನೇಕಾರ್ಥಗಳಿರುವದು ನಿಜ. ಆದರೆ ಯಾವ ಅರ್ಥವನ್ನು ಯಾವ ಸಂದರ್ಭದಲ್ಲಿ ಉಪಯೋಗಮಾಡಿಕೊಳ್ಳಬೇಕಾಗುತ್ತದೆಂಬುವುದು ಲಕ್ಷ್ಯದಲ್ಲಿಡತಕ್ಕ ಸಂಗತಿಯಾಗಿರುತ್ತದೆ. ಅದಕ್ಕೆ ಪ್ರಕರಣವೂ, ಸಂದರ್ಭವೂ ಹೊಂದಿಕೊಂಡಿದ್ದರೇನೇ ಸಂಗತವಾಗುವದು. ಇಲ್ಲದಿದ್ದರೆ ಅಸಂಗತವಾಗಿ ಆ ಶಬ್ದಗಳನ್ನು ಉಪಯೋಗಿಸಿದವನು ಲೋಕದಲ್ಲಿ ಅಪಹಾಸ್ಯಕ್ಕೆ ಗುರಿಯಾಗುವದರಲ್ಲಿ ಸಂಶಯ

ವಿಲ್ಲ. ಇದಕ್ಕೆಲ್ಲ ಸಂಸ್ಕೃತಜ್ಞಾನವು ಚೆನ್ನಾಗಿದ್ದರೆ ಮಾತ್ರ ಸಾಧ್ಯ. ಕೇವಲ ಶಬ್ದಾರ್ಥದ ಮಟ್ಟಿಗೆ ಸಂಸ್ಕೃತ ಬಂದರೆ ಮಾತ್ರ ಅವನಿಗೆ ಪ್ರಯೋಗಜ್ಞಾನವೆಂದಿಗೂ ಸಾಧ್ಯವಾಗಲಾರದು.

ಎಲ್ಲ ಅರ್ಥಗಳನ್ನೂ ಎಲ್ಲ ಕಾಲಗಳಲ್ಲಿ ಉಪಯೋಗಿಸಲು ಶಕ್ಯವಿಲ್ಲ. "ಸೈಂಧವ ಮಾನಯ" ಎಂಬುವ ಶಬ್ದವನ್ನು ಊಟಮಾಡುವ ಕಾಲಕ್ಕೆ ಪ್ರಯೋಗಮಾಡಿದರೆ ಉಪ್ಪನ್ನೇ ತರಬೇಕಾಗುತ್ತದೆ. ಪ್ರಯಾಣಕ್ಕೆ ಹೊರಟಂತಹ ಮನುಷ್ಯನು ಸೈಂಧವ ಮಾನಯುವೆಂದು ತನ್ನ ಸೇವಕನಿಗೆ ಹೇಳಿದಾಗ ಕುದುರೆಯನ್ನೇ ತರಬೇಕಾಗುತ್ತದಲ್ಲದೆ ಉಪ್ಪನ್ನು ತಂದುಕೊಟ್ಟರೆ ಸರಿಹೋದೀತೇ ಎಂಬುವದನ್ನು ಬುದ್ಧಿಶಾಲಿಗಳಾದ ವಾಚಕರೇ ಊಹಿಸಬೇಕು. ಹೀಗೆ ಮಾಡಿದ್ದೇ ಆದರೆ ಅದರ ಭೌತಿಕಾರ್ಥವನ್ನು ಬಿಟ್ಟಂತಾಗುತ್ತದೆಯೋ ಹೇಗೆ? ಶಬ್ದಗಳ ತತ್ವಾರ್ಥವನ್ನು ಉಪಯೋಗಿಸುವ ಕಾಲದಲ್ಲಿ ಲೌಕಿಕಾರ್ಥಕ್ಕೆ ಅಂಟಿಕೊಳ್ಳುವದು ಅಶಾಸ್ತ್ರೀಯವಾದ ಮಾತಾಗಿರುತ್ತದೆ.

ಸಂಸ್ಕೃತದಲ್ಲಿ ಒಂದೊಂದು ಶಬ್ದಕ್ಕೆ ನೂರಾರು ಅರ್ಥಗಳಿರುತ್ತವೆ. ಅವುಗಳನ್ನು ಸಂದರ್ಭಕ್ಕೆ ಸರಿಯಾಗಿ ಉಪಯೋಗಿಸಿಕೊಳ್ಳಬೇಕಾಗುತ್ತದೆ. ಹಾಗಾದರೆ ಹರಿಶಬ್ದವನ್ನು ತೆಗೆದುಕೊಳ್ಳೋಣ. ಹರಿಶಬ್ದಕ್ಕೆ ಅನೇಕಾರ್ಥಗಳಿರುತ್ತವೆ. ಹರಿಗರ್ಭ ಶಿರಪಾಣಿ ಹರಿಮುಖ್ಯ— ಹರಿ ಎಂದರೆ ಚಿಗರೆಗೂ ಅರ್ಥವಿರುತ್ತದೆ. ಹರಿಹರ ಬ್ರಹ್ಮಾದಿಗಳು ಎಂಬುವ ಪದದ ಅರ್ಥವನ್ನು ನಾವು ಉಪಯೋಗಮಾಡಬೇಕಾದರೆ, ಶಿವ ಚಿಗರಿ ಮತ್ತು ಬ್ರಹ್ಮನೆಂದರೆ ಸರಿಹೋದೀತೇ? ಯಾಕಾಗಬಾರದೆಂದು ಹೇಳಿದರೆ ಲೋಕದಲ್ಲಿ ಜನಗಳು ಅಪಹಾಸ್ಯವನ್ನು ಮಾಡಲಿಕ್ಕಿಲ್ಲವೇ? ಹರಿಶಬ್ದದ ತತ್ವಾರ್ಥವನ್ನು ಬಿಡಲಾಗುವುದೇ? ಬ್ರಹ್ಮನೆಂದರೆ ಚತುರ್ಮುಖ ಬ್ರಹ್ಮನಿಗೂ ಅರ್ಥವಿದೆ. ಬೇರೆ ಬೇರೆ ಆಚಾರ್ಯರು ಬೇರೆ ಬೇರೆ ಅರ್ಥವನ್ನು ಮಾಡಿರುತ್ತಾರೆ. ಎಲ್ಲರೂ ಪಾಣಿನಿಯ ನಿರುಕ್ತಕ್ಕೆ ಸರಿಯಾಗಿಯೇ ಅರ್ಥವನ್ನು ಮಾಡುತ್ತಾರೆ. ಉಪಯೋಗಕ್ಕೆ ಮಾತ್ರ ಸಂದರ್ಭವು ಬೇಕಾಗುತ್ತದೆಂಬುವುದನ್ನು ಮರೆಯಲಾಗದು.

ಲಿಂಗಶಬ್ದಕ್ಕೆ ಶಿಶ್ನವೇ ಮುಖ್ಯಾರ್ಥವೆಂದು ಶಂ. ಬಾ. ಜೋಶಿಯವರು ಹೇಳಿರುವದು ಶುದ್ಧ ತಪ್ಪಾಗಿರುವದು. ಲಿಂಗಶಬ್ದಕ್ಕೆ ಹಿಂದೆ ಹೇಳಿದಂತೆ ಅನೇಕಾರ್ಥಗಳಿದ್ದು ಅವುಗಳಲ್ಲಿ ಶಿಶ್ನವೆಂಬುವುದು ಗೌಣಾರ್ಥವಾಗಿರುವುದು. ಅನೇಕ ಅರ್ಥಗಳಿರುವುದರಿಂದ ಅದನ್ನು ಕೋಶಕಾರರು ನಾನಾರ್ಥವರ್ಗದಲ್ಲಿ ಹೇಳಿರುತ್ತಾರೆ. ಶಿಶ್ನಾರ್ಥವೇ ಪ್ರಾಮುಖ್ಯವಾಗಿದ್ದರೆ ಅದನ್ನು ಮನುಷ್ಯವರ್ಗದಲ್ಲಿ ಹೇಳಬೇಕಾಗಿದ್ದಿತು. ಲಿಂಗಶಬ್ದದ ಅನೇಕ ಅರ್ಥಗಳಲ್ಲಿ ಅದೊಂದು ಗೌಣವಾದ ಅರ್ಥವಾಗಿರುತ್ತದೆ.

ಹಿಂದೆ ಹೇಳಿದ ಮೇದಿನೀಕಾರರ ಉಕ್ತಿಯಂತೆ ಲಿಂಗಶಬ್ದವು ನಪುಂಸಕವಾಗಿರುತ್ತದೆ. ಉಳಿದ ಅರ್ಥಗಳಲ್ಲಿ ಪುಲ್ಲಿಂಗವಾಗಿರುತ್ತದೆ. ಲಿಂಗವೆಂದರೆ ಶಿಶ್ನವೆಂದೇ ಜೋಶಿಯವರು ಹೇಳಿರುತ್ತಾರೆ. ಪ್ರತಿಯೊಂದು ಸಂದರ್ಭದಲ್ಲಿಯೂ ಅದೇ ಅರ್ಥವನ್ನು ಮಾಡುವುದಾದರೆ—

**ಶ್ವೇತಾಶ್ವತರೋಪನಿಷತ್ — ಪುಟ ೨೫೩, ಅಧ್ಯಾಯ ೬**

ನತಸ್ಯ ಕಶ್ಚಿತ್ ಪತಿರಸ್ತಿ ಲೋಕೇ ನಚೇಶಿತಾ ನೈವಚ ತಸ್ಯ ಲಿಂಗಮ್ ।
ಸಕಾರಣಂ ಕರಣಾಧಿಪಾಧಿಪೋ ನಚಾಸ್ಯ ಕಶ್ಚಿತ್ ಜನಿತಾ ನಚಾಧಿಪಃ ।

ಇಲ್ಲಿ ಲಿಂಗಶಬ್ದದ ಭೌತಿಕಾರ್ಥವನ್ನು ಹಿಡಿದು ಶಿಶ್ನವೆಂದು ಅರ್ಥಮಾಡಿದರೆ ಸರಿಹೋಗಬಹುದೇ? ಮೇಲೆ ಹೇಳಿದ ಶಿವರಹಸ್ಯದ "ಲಿಂಗಲಿಂಗ್ಯವಿಹೀನಾಯ ಲಿಂಗರೂಪಾಯತೇ ನಮಃ" ಎಂಬುವ ವಾಕ್ಯದಲ್ಲಿರುವ ಲಿಂಗಶಬ್ದಕ್ಕೆ ಶಿಶ್ನವೆಂದು ಅರ್ಥ ಹೇಳುವುದು ಅಜ್ಞಾನತನದ ದ್ಯೋತಕವಲ್ಲದೆ ಐತಿಹಾಸಿಕ ಶೋಧನೆಯಾಗಲಾರದು.

"ಶಿವಯೇವ ಲಿಂಗಂ ನ ತು ಶಿವಸ್ಯ ಲಿಂಗಂ" ಅಂದರೆ ಶಿವನೇ ಲಿಂಗವು. ಶಿವನ ಲಿಂಗವಲ್ಲ ಎನ್ನುವ ವಾದವು ಬಹಳಕಾಲದಿಂದ ನಡೆದುಬಂದರೂ ಇದನ್ನು ವ್ಯಾಸ ಮಹರ್ಷಿಗಳು ಸ್ಕಂದಪುರಾಣದಲ್ಲಿ ಖಂಡಿಸಿರುತ್ತಾರೆ. ಅದನ್ನು ಶ್ರೀವಿದ್ಯಾರಣ್ಯರು ತಮ್ಮ ತಾತ್ಪರ್ಯದೀಪಿಕೆಯೆಂಬುವ ಶಿವರಹಸ್ಯದ ಟೀಕೆಯಲ್ಲಿ ಎತ್ತಿಹಿಡಿದಿರುತ್ತಾರೆ. ಸೂತಸಂಹಿತೆಯ ಸಂಪೂರ್ಣ ಒಂದು ಪ್ರಕರಣವು ಈ ಚರ್ಚೆಯನ್ನೊಳಗೊಂಡಿರುತ್ತದೆ. ಶಿವನೇ ಲಿಂಗವೆಂದು ಸ್ಥಿರಗೊಳಿಸಲಾಗಿದೆ.

**ಸೂತಸಂಹಿತಾ — ಪುಟ ೫೬೨**

**ಶಿವಯೇವ ಸ್ವಯಂ ಲಿಂಗಂ । ಲಿಂಗಂ ಗಮಕಮೇವ ಹಿ ।**
**ಶಿವೇನ ಗಮ್ಯತೇ ಸರ್ವಂ । ಶಿವೋ ನಾನ್ಯೇನ ಗಮ್ಯತೇ ॥**

ಶಿವನೇ ಸ್ವಯಂ ಲಿಂಗವು. ಶಿವನಿಂದಲೇ ಸರ್ವವೂ ಗಮನವನ್ನು ಹೊಂದುತ್ತದೆ. ಇದಕ್ಕೆ ಟೀಕೆಯನ್ನು ಬರೆಯುವಾಗ ಶ್ರೀವಿದ್ಯಾರಣ್ಯರು ಶಿವಸ್ಯ ಲಿಂಗಂ ಶಿವಲಿಂಗಂ ಭ್ರಮಂ ನಿವಾರಯತಿ — ಅಂದರೆ ಶಿವನ ಲಿಂಗವೆಂಬುವ ಭ್ರಾಂತಿಯನ್ನು ಹೋಗಲಾಡಿಸುತ್ತಾನೆ, "ಶಿವಯೇವ ಸ್ವಯಂ ಲಿಂಗಮಿತಿ" ಶಿವನೇ ಸ್ವಂತ ಲಿಂಗವೆಂದು.

> "ಲಿಂಗಂ ಗಮಕಮಿತ್ಯಾದಿನಾ ಲೋಕೇ ಹಿ ವನ್ಹ್ಯಾದಿ ಲಕ್ಷಣಸ್ಯ ಅರ್ಥಾಂತರಸ್ಯ ಯದ್ಗಮಕಂ ಜ್ಞಾಪಕಂ ಧೂಮಾದಿ ಲಿಂಗಮುಚ್ಯತೇ ಶಿವೋಪಿ ಸ್ವಪ್ರಕಾಶ ಚಿದ್ರೂಪತ್ವೇನ ಸರ್ವಸ್ಯ ಜಡವರ್ಗಸ್ಯ ಗಮಕಃ ನ ತು ಅನ್ಯೇನ ಗಮ್ಯಃ ಅತೋ ಗಮಕತ್ವಾತ್ ಸ್ವಯಮೇವ ಲಿಂಗಂ"

ಶಿವನೇ ಸ್ವಯಂ ಲಿಂಗನಾಗಿರುವನು. ಲಿಂಗವು ಗಮಕವಾದುದು. ಲೋಕದಲ್ಲಿ ವನ್ಹ್ಯಾದಿಗಳಿಗೆ ಧೂಮಾದಿಯು ಲಿಂಗವೆಂದು ಹೇಳಲಾಗುತ್ತದೆ. ಶಿವನಾದರೋ ತನ್ನ ಪ್ರಕಾಶದಿಂದ ಎಲ್ಲ ಜಡವರ್ಗಕ್ಕೆ ಗಮಕನಾಗಿರುವದರಿಂದ ಅನ್ಯರಿಂದ ಅಥವಾ ಅನ್ಯ ವಸ್ತುವಿನಿಂದ ಗಮ್ಯನಲ್ಲ. ಆದ್ದರಿಂದ ಸ್ವಯಮೇವ ಲಿಂಗವಾಗಿರುವನು.

**ಶಿವರಹಸ್ಯ — ಪುಟ ೫೬೫**

> "ಅತಃ ಶಿವಃ ಸರ್ವಜಗದ್ವಿಭಾಸಕಃ ಸ್ವಯಂ ಪ್ರಕಾಶಃ ಸ್ವಯಮೇವ ಕೇವಲಂ ಮಯೋದಿತಂ ಲಿಂಗಮಿತಿ ದ್ವಿಜರ್ಷಭಾಃ ತದೇವ ಪೂಜ್ಯಂ ಶೃತಿ ಮಸ್ತಕಸ್ಥಿತಂ । ಮತ್ತು ಶಿವಸ್ಯ ಲಿಂಗಂ ಶಿವಲಿಂಗಮನ್ಯೇ ಮುನೀಶ್ವರಾ ವೇದವಿದೋ ವದಂತಿ । ಸ್ವಯಂಪ್ರಕಾಶಸ್ಯನ ಯುಜ್ಯತೇ ತತ್ ತತಶ್ಚ ಶಂಭುಃ ಸ್ವಯಮೇವ ಲಿಂಗಂ ॥ ವಿವೇಕಹೀನ ಮರ್ತ್ಯಸ್ಯ ಚಿತ್ತವೃತ್ತ್ಯಾದ್ಯ ಪೇಕ್ಷಯಾ ಶಿವಸ್ಯ ಲಿಂಗಮಿತ್ಯಯಂ ರವಃ ಸಮಸ್ತ ಜಂತುಭಿಃ ನಿಗದ್ಯತೇ ಶಿವಃ ಸ್ವತಃ ಪ್ರಸಿದ್ಧಯೇವ ಸರ್ವದಾ ತತಃ ಶಿವಸ್ಯ ಲಿಂಗಮಿತ್ಯಯಂ ರವಃ ನ ಸಂಗಚ್ಛತೇ"

ಕೆಲವರು ಶಿವನ ಲಿಂಗವೆಂದು ಹೇಳುತ್ತಾರೆ. ಸ್ವಯಂಪ್ರಕಾಶನಾದ ಶಿವನಿಗೆ ಅದು ಸಲ್ಲದು. ಆದ್ದರಿಂದ ಶಂಭುವು ಸ್ವಯಮೇವ ಲಿಂಗವಾಗಿರುವನು. ವಿವೇಕಹೀನನಾದ ಮನುಷ್ಯನ ಚಿತ್ತವೃತ್ತಿಯಂತೆ ಶಿವನ ಲಿಂಗವೆಂದು ಹೇಳುವ ಮಾತು ಸ್ವಯಂಪ್ರಕಾಶನಾದ ಶಿವನಿಗೆ ಯೋಗ್ಯವಾದುದಾಗಿರುವದಿಲ್ಲ.

**ಸೂತಸಂಹಿತಾ — ಪುಟ ೫೬೪**

"ವಿಶುದ್ಧವಿದ್ಯಾ ಪರಯೋಗಿನೋಸ್ಯ ಸ್ವಯಂ ಪ್ರಭಸ್ಯೈವ ನ ಲಿಂಗಮೂಚುः।"

**ಪುಟ ೫೭೧**

"ಅತಃ ಸಚ್ಚಿದಾನಂದ ಲಕ್ಷಣಃ ಪರಮೇಶ್ವರಃ ಸ್ವಯಮೇವ ಲಿಂಗಂ ನ ಲಿಂಗಂ ತಸ್ಯ ವಿದ್ಯತೇ।"

**ಪುಟ ೫೭೨**

ಲಯನಾಲ್ಲಿಂಗಮಿತ್ಯಾಹುः ಅಪರೇ ವೇದವಿತ್ತಮಾः।
ತಥಾಪಿ ಲಿಂಗಂ ಭಗವಾನ್ ಸ್ವಯಮೇವ ಮಹೇಶ್ವರः॥
ಲೀಯಮಾನಮಿದಂ ಸರ್ವಂ ಬ್ರಹ್ಮಣ್ಯೇವ ಹಿ ಲೀಯತೇ।
ನ ಲೀಯತೇ ಪರಂ ಬ್ರಹ್ಮ ಸದಾ ಸತ್ಯಸ್ವಭಾವತः॥

ಸಚ್ಚಿದಾನಂದಲಕ್ಷಣಸ್ವರೂಪನಾದ ಪರಶಿವನು ಸ್ವಯಮೇವ ಲಿಂಗವಾಗಿರುವನು. ಲಯವಾಗುವುದರಿಂದ ಲಿಂಗವೆಂದು ವೇದಜ್ಞಾನಿಗಳು ಹೇಳುತ್ತಾರೆ. ಲೀಯಮಾನವಾದ ಸರ್ವವೂ ಬ್ರಹ್ಮನಲ್ಲಿಯೇ ಲೀನವಾಗುತ್ತದೆ. ಬ್ರಹ್ಮವೆಂದರೆ ವಿದ್ಯಾರಣ್ಯರು ಇಲ್ಲಿ ಲಿಂಗಕ್ಕೆ ಅರ್ಥವನ್ನು ಮಾಡಿರುತ್ತಾರೆ.

ವೇದದಲ್ಲಿ ಲಿಂಗಶಬ್ದವು ಬಂದಿಲ್ಲವೆಂದು ಮತ್ತೊಂದು ವಾದವಿರುವದು. ವೇದದಲ್ಲಿ ಲಿಂಗಶಬ್ದವು ಬಂದಿರುತ್ತದೆ. ಬಹಳ ಸಾರಿ ಬಂದಿಲ್ಲವೆಂದೂ ಹೇಳಲಾಗುತ್ತದೆ. ಶಿವನೇ ಲಿಂಗವೆಂಬುವದು ಸ್ವತಃ ಸಿದ್ಧವಿರುವದರಿಂದ ದೋಷವಲ್ಲ. ವೇದದಲ್ಲಿ ಕೆಲವು ಕಡೆಗೆ ಲಿಂಗಶಬ್ದವು ಬಂದಿರುತ್ತದೆ. ಒಂದುಪಕ್ಷ ಬಾರದೇ ಇದ್ದರೂ ದೋಷವಿಲ್ಲ. ಯಾಕಂದರೆ ವೇದಾರ್ಥಗಳನ್ನು ಸಿದ್ಧಮಾಡಬೇಕಾದರೆ ವೇದದ ಷಡಂಗಗಳಲ್ಲದೆ, "ಇತಿಹಾಸ ಪುರಾಣಾಭ್ಯಾಂ ವೇದಾರ್ಥಂ ಸಮುಪಬೃಹ್ಮಯೇತ್" ಎಂಬುವ ವೇದವ್ಯಾಸರ ಉಪಬೃಹ್ಮಣ ವಾಕ್ಯಗಳಿಂದಲೇ ವೇದಗಳ ಅರ್ಥವನ್ನು ಕಂಡುಹಿಡಿಯಬೇಕಾಗುತ್ತದೆ. ಹಾಗಾದರೆ ವೇದಗಳಲ್ಲಿ ಯಾವ ಮತಗಳನ್ನೂ ಸ್ಪಷ್ಟಶಬ್ದಗಳಿಂದ ಹೇಳಿಲ್ಲ. ಆದುದರಿಂದ ಯಾವ ಸಂಪ್ರದಾಯವೂ ಸಿದ್ಧವಾಗಲಾರದು. ವೇದಗಳಿಗೆ ತಮ್ಮ ಬುದ್ಧಿಯ ಶಕ್ತಿಯಿಂದ ತಮ್ಮತಮ್ಮ ಮತಗಳ ಪರವಾಗಿ ಅರ್ಥಮಾಡಿರುವ ಯಾವ ಆಚಾರ್ಯರ ಭಾಷ್ಯಗಳಾಗಲೀ, ವ್ಯಾಸಮಹರ್ಷಿಗಳ ಬ್ರಹ್ಮಸೂತ್ರಕ್ಕೆ ಬರೆದ ವ್ಯಾಖ್ಯಾನಗಳಾಗಲೀ ಸಿದ್ಧವಾಗಲಾರವು. ಆದ್ದರಿಂದ ಲಿಂಗಶಬ್ದವು ಬಂದಿಲ್ಲವೆಂದು ಹೇಳುವ ವಾದವು ಯುಕ್ತಿಯುಕ್ತವಾದುದಲ್ಲ. ಶಿವನಿಗೆ ಲಿಂಗಶಬ್ದವು ಅರ್ವಾಚೀನವಲ್ಲ; ಅತ್ಯಂತ ಪ್ರಾಚೀನವಾದುದಾಗಿದೆ ಎಂಬುವದಕ್ಕೆ ಸಹಸ್ರಾರು ಪ್ರಮಾಣಗಳುಂಟು. ಒಂದೆರಡನು ಮಾತ್ರ ಇಲ್ಲಿ ಕೊಡುತ್ತೇವೆ.

ವೇದ ಮತ್ತು ದರ್ಶನಾಚಾರ್ಯರಾದ ಸ್ವಾಮಿ ಗಂಗೇಶ್ವರಾನಂದ ಎಂಬುವರು ತಮ್ಮದೊಂದು ಲೇಖನದಲ್ಲಿ ಲಿಂಗಪೂಜೆಯ ವಿಷಯಕ್ಕೆ ಬರೆಯುತ್ತ ಲೇಖನದ ಕಡೆಗೆ ಕೆಳಗೆ ಬರೆದಂತೆ ಅಭಿಪ್ರಾಯ ವ್ಯಕ್ತಮಾಡಿರುತ್ತಾರೆ.

### ಲಿಂಗಪುರಾಣ

ಮೂಲೇ ಬ್ರಹ್ಮಾ ತಥಾ ಮಧ್ಯೇ ವಿಷ್ಣುಃ ತ್ರಿಭುವನೇಶ್ವರಃ ।
ರುದ್ರೋರುಪರಿ ಮಹಾದೇವಃ ಪ್ರಣವಾಖ್ಯಃ ಸದಾಶಿವಃ ॥

ಲಿಂಗವೇದೀ ಮಹಾದೇವೀ । ಲಿಂಗಂ ಸಾಕ್ಷಾನ್ಮಹೇಶ್ವರಃ ।
ತಯೋಃ ಸಂಪೂಜನಾನ್ನಿತ್ಯಂ । ದೇವೀ ದೇವಶ್ಚ ಪೂಜಿತೌ ॥

ಲಿಂಗದ ಮೂಲದಲ್ಲಿ ಬ್ರಹ್ಮನೂ, ಮಧ್ಯದಲ್ಲಿ ವಿಷ್ಣುವೂ, ಮೇಲ್ಭಾಗದಲ್ಲಿ ಪ್ರಣವಸ್ವರೂಪ ನಾದ ಭಗವಾನ್ ಶಂಕರನೂ ಇರುತ್ತಾರೆ. ಲಿಂಗದಲ್ಲಿ ಸಾಕ್ಷಾತ್ ಮಹೇಶ್ವರನಿರುತ್ತಾನೆ. ಲಿಂಗವನ್ನು ಪೂಜಿಸಿದರೆ ಎಲ್ಲ ದೇವದೇವಿಯರ ಪೂಜೆಯಾಗುತ್ತದೆ. ಲಿಂಗಪುರಾಣ ಈ ಉಕ್ತಿಯಿಂದ ಕಲುಷಿತ ಅಂತಃಕರಣವುಳ್ಳವರ ಮನಸ್ಸು ಸ್ವಚ್ಛವಾಗುತ್ತದೆ. ಯಾಕಂದರೆ ಇಂಥವರ ಭಾವನೆಯು ಲಿಂಗಪೂಜೆಯು ಅಶ್ಲೀಲಭಾವನೆಯಿಂದ ಪ್ರಾರಂಭ ವಾಗಿರುತ್ತದೆಂದು ಇವರ ತಪ್ಪು ತಿಳಿವಳಿಕೆ ಇರುತ್ತದೆ. ಲಿಂಗಪೂಜೆಯು ಅಶ್ಲೀಲ ವಾದರೆ (ಆಗಲು ಶಕ್ಯವೇ ಇಲ್ಲ) ವೇದ ಮೊದಲುಗೊಂಡು ಎಲ್ಲ ಶಾಸ್ತ್ರಗಳಲ್ಲಿ ಇದರ ವಿಧಿ ವಿಧಾನಗಳಿರುತ್ತಿರಲಿಲ್ಲ. ಶ್ರೀಮದ್ವಾಲ್ಮೀಕಿ ರಾಮಾಯಣದಂತಹ ಪ್ರಾಚೀನ ಗ್ರಂಥದಲ್ಲಿಯೂ ಕೂಡ ಲಿಂಗಪೂಜೆಯ ವಿಧಾನವು ಇರುತ್ತದೆ. ಉಪಾಸನಾ ಪ್ರಧಾನ ಗಳಾದ ಶಿವಪುರಾಣಗಳಲ್ಲಿ ಎಲ್ಲಕ್ಕಿಂತಲೂ ಹೆಚ್ಚಿಗೆ ಲಿಂಗಪೂಜೆಯ ವಿಧಾನಗಳ ಬಗ್ಗೆಯೇ ವರ್ಣಿಸಿರುವುದು ಕಂಡುಬರುತ್ತದೆ.

### ವಾಲ್ಮೀಕಿ ರಾಮಾಯಣದ ಉತ್ತರ ಖಂಡದಲ್ಲಿ

ಯತ್ರ ಯತ್ರ ಚ ಯಾತಿಸ್ಮ ರಾವಣೋ ರಾಕ್ಷಸೇಶ್ವರಃ ।
ಜಾಂಬೂನದಮಯಂ ಲಿಂಗಂ ತತ್ರತತ್ರ–ಸ್ಮನೀಯತೇ ॥

ಬಾಲುಕಾವೇದಿಮಧ್ಯೇತು ತಲ್ಲಿಂಗಂ ಸ್ಥಾಪ್ಯ ರಾವಣಃ ।
ಅರ್ಚಯಾಮಾಸ ಗಂಧಾಡ್ಯೈಃ ಪುಷ್ಪೈಶ್ಚಾನರುಗಂದಿಭಿಃ ॥

ರಾಕ್ಷಸೇಶ್ವರನಾದ ರಾವಣನು ಎಲ್ಲೆಲ್ಲಿ ಪ್ರಯಾಣಮಾಡುತ್ತಿದ್ದನೋ ಅಲ್ಲಲ್ಲಿ ಆ ಸುವರ್ಣ ಮಯ ಲಿಂಗಮೂರ್ತಿಯನ್ನು ತೆಗೆದುಕೊಂಡುಹೋಗುತ್ತಿದ್ದನು. ಉಸುಕಿನ ವೇದಿಕೆ ಯನ್ನು ಮಾಡಿ ಆ ಮೂರ್ತಿಯನ್ನು ಸ್ಥಾಪಿಸುತ್ತಿದ್ದನು. ಮತ್ತು ಗಂಧಪುಷ್ಪಾದಿಗಳಿಂದ ಅರ್ಚನೆ ಮಾಡುತ್ತಿದ್ದನು. ಇದರಿಂದ ಲಿಂಗಪೂಜೆಯು ಪ್ರಾಚೀನತಮವೆಂದು ತಿಳಿಯದೆ ಇರಲಾರದು.

ಯಾವುದರಿಂದ ಸೃಷ್ಟಿಯು ಹುಟ್ಟುವುದೋ ಅದನ್ನೇ ಅವಲಂಬಿಸಿ ಲಯವೂ ಕೂಡ ಆಗುತ್ತದೆ. ಚೈತನ್ಯರೂಪ ಲಿಂಗಸತ್ತಾ ಮತ್ತು ಜಗತ್ತನ್ನು ಪ್ರಸವಿಸತಕ್ಕಂಥ ಪ್ರಕೃತಿ ಸತ್ತೆಯಿಂದಲೇ ಈ ಬ್ರಹ್ಮಾಂಡದ ಉತ್ಪತ್ತಿಯಾಗುತ್ತದೆ. ಈ ಎರಡೂ ಸತ್ತೆಗಳ ಪ್ರತೀಕವೇ ಲಿಂಗ. ಯಾವಾಗ ಉಪಾಸಕನು ಇದೇ ವ್ಯಾಪಕಭಾವನೆಯನ್ನು ಮನಸ್ಸಿನಲ್ಲಿ

ಇಟ್ಟುಕೊಂಡು ಶಿವಪೂಜೆಯನ್ನು ಮಾಡುತ್ತಾನೆಯೋ ಅವನ ಮನಸ್ಸು ಸ್ಥೂಲಮೂರ್ತಿಯ ಸಹಾಯದಿಂದ ಸರ್ವವ್ಯಾಪಕನಾದ ಪರಮಾತ್ಮನಲ್ಲಿ ಲೀನವಾಗುವದರಲ್ಲಿ ಸಮರ್ಥವಾಗುತ್ತದೆ. ಅಂತ್ಯದಲ್ಲಿ ಈ ಭಾವಪ್ರಧಾನ ಉಪಾಸನೆಯ ದೃಢತ್ವದಿಂದ ಅನಂತ ವಿಸ್ತಾರವಾದ ಮಾಯೆಯ ಲೀಲೆಯಿಂದ ಮುಕ್ತನಾಗಿ ಅರ್ಥಾತ್ ಕಾರ್ಯಬ್ರಹ್ಮದ ಸಹಾಯದಿಂದ ಕಾರಣಬ್ರಹ್ಮನಲ್ಲಿ ಸ್ಥಿತಿಯನ್ನು ಹೊಂದಿ ಮೋಕ್ಷವನ್ನು ಹೊಂದುತ್ತಾನೆ.

ಇದೇ ಲಿಂಗಪೂಜೆಯ ಪ್ರಧಾನ ಉದ್ದೇಶವಾಗಿರುತ್ತದೆ. ಪಂಡಿತ ವಾಸುದೇವ ಉಪಾಧ್ಯಾಯರು—

ಭಗವಾನ್ ಶಿವನ ಪೂಜೆಯು ಪೌರಾಣಿಕ ಕಾಲದಿಂದ ಬಹಳ ಮಹತ್ವವನ್ನು ಹೊಂದಿರುತ್ತದೆ. ಮೆಹಂಜೋದಾರ, ಹರಪ್ಪಾಗಳಲ್ಲಿ ದೊರೆತ ಸಾಮುಗ್ರಿಯಿಂದ ಭಾರತೀಯ ಧಾರ್ಮಿಕ ಇತಿಹಾಸದ ಮೇಲೆ ದೊಡ್ಡ ಪ್ರಕಾಶವು ಬಿದ್ದಿರುತ್ತದೆ. ಸಿಂಧೂ ತಟವರ್ತಿನೀ ಸಭ್ಯತೆಯಲ್ಲಿ ಶಿವಪೂಜೆಯ ವಿಶೇಷತೆಯು ಕಂಡುಬರುತ್ತದೆ. ಇಲ್ಲಿ ಎರಡು ತರಹದ ಮೂರ್ತಿಗಳು ಸಿಕ್ಕಿರುತ್ತವೆ. ಮೊದಲನೆಯ ಮೂರ್ತಿಯು ಮೆಹಂಜೋದಾರ ನಾಣ್ಯದಲ್ಲಿ ಯೋಗಾವಸ್ಥೆಯಲ್ಲಿ ಧ್ಯಾನದಿಂದ ಕುಳಿತ ಶಿವನ ಮೂರ್ತಿ ಇರುತ್ತದೆ. ಎರಡನೆಯ ಮೂರ್ತಿ—ಇದರಲ್ಲಿ ಶಿವನು ಮಧ್ಯಭಾಗದಲ್ಲಿ ಕುಳಿತುಕೊಂಡಿರುತ್ತಾನೆ. ನಾಲ್ಕೂಕಡೆಗೆ ಪಶುಗಳಿರುತ್ತವೆ. ಧ್ಯಾನೀಶಿವನ ಆಕೃತಿಯ ಹೊರತು ಹರಪ್ಪಾದಲ್ಲಿ ಬಹಳ ಮೂರ್ತಿಗಳು ಸಿಕ್ಕಿರುತ್ತವೆ. ಅವೆಲ್ಲ ಶಿವಲಿಂಗದ ಮೂರ್ತಿಗೆ ಸಮಾನವಾಗಿರುತ್ತವೆ. ಇದರಿಂದ ಸಿದ್ಧವಾಗುವದೇನೆಂದರೆ, ಆ ಕಾಲದಲ್ಲಿಯೂ ಕೂಡ ಶಿವಲಿಂಗದ ಪೂಜೆಯು ನಡೆಯುತ್ತಲಿದ್ದಿತು.

ಋಗ್ವೇದದಲ್ಲಿ ಶಿಶ್ನೋದೇವಾ ಎಂಬುವ ಶಬ್ದವು ಎರಡುಸಾರಿ ಬಂದಿರುತ್ತದೆ. ಇದರ ಅರ್ಥವನ್ನು ಪಾಶ್ಚಾತ್ಯರು, ಅನಾರ್ಯರು ಶಿವಲಿಂಗ ಪೂಜೆಯನ್ನು ಮಾಡುತ್ತಿದ್ದರು. ಆರ್ಯರಲ್ಲಿ ಕಾಣುವ ಶಿವಪೂಜೆಯು ಅನಾರ್ಯರಿಂದ ಕಸಿದುಕೊಂಡದ್ದಾಗಿದೆ ಎಂದು ಹೇಳುತ್ತಾರೆ. ಆದರೆ ಪಾಶ್ಚಾತ್ಯ ಪಂಡಿತರ ಈ ಅನುಮಾನವು ಅಥವಾ ವಿಧಾನವು ಸರಿಯಾದುದಲ್ಲ. ಯಾಸ್ಕರೂ, ಸಾಯಣರೂ ಶಿಶ್ನೋದೇವಾ ಎಂಬುವದಕ್ಕೆ ಅಬ್ರಹ್ಮಚರ್ಯಾರ್ಥವನ್ನು ಮಾಡಿರುತ್ತಾರೆ. ಇದಕ್ಕೆ ವಿರುದ್ಧವಾಗಿ ಮಾಡುತ್ತಿರುವ ಪಾಶ್ಚಾತ್ಯ ಪಂಡಿತರ ಅರ್ಥವು ಸರಿಯಾದುದಲ್ಲ. ಇಲ್ಲಿಯವರೆಗೆ ಅವರು ಹೇಳತಕ್ಕ ಅರ್ಥಕ್ಕೆ ಸರಿಯಾದ ಪ್ರಮಾಣಗಳು ದೊರೆತಿಲ್ಲ. ಅರ್ಥಾತ್ ಅನಾರ್ಯರಿಂದ ಆರ್ಯರು ಶಿವಲಿಂಗವನ್ನು ಕಸಿದುಕೊಂಡಿರುವರೆಂಬುವುದಕ್ಕೆ ಪ್ರಮಾಣವಿಲ್ಲದಾಗಿದೆ. ವಿದ್ವಾನ್ ಜನರಲ್ಲಿ ಇಲ್ಲಿಯವರೆಗೆ ಈ ವಿಷಯದಲ್ಲಿ ಮತಭೇದವಿದೆ. ಸಿಂಧೂತೀರದ ಸಭ್ಯತಾ ವೈದಿಕ ಸಭ್ಯತೆಗಿಂತಲೂ ಮೊದಲು ಇದ್ದದ್ದೋ ಅಥವಾ ಹಿಂದಿನದೋ ಆದರೆ ಅನೇಕ ಕಾರಣಗಳಿಂದ ಈ ಸಭ್ಯತೆಯು ವೈದಿಕ ಸಭ್ಯತೆಗಿಂತ ಹಿಂದಿನದೆಂದು, ತಿಳಿಯಲಾಗಿದೆ. ಈ ಸಭ್ಯತೆಯು ಈಗಿನದಕ್ಕಿಂತ ೫–೬ ಸಾವಿರ ವರ್ಷದ್ದೆಂದು ತಿಳಿಯಲಾಗುತ್ತದೆ. ಆದ್ದರಿಂದ ಶಿವಲಿಂಗಪೂಜೆಯಾದರೂ ಇದೇ ಕಾಲದಿಂದ ನಡೆದುಬಂದಿರುವುದೆಂದು ಧಾರಾಳವಾಗಿ ಹೇಳಬಹುದು. ಪುರಾತನ ತತ್ವಗಳಲ್ಲಿ ಹಿಂದೂ ಸಭ್ಯತೆಯ ಮೇಲೆ ಹೆಚ್ಚು ಪ್ರಕಾಶವನ್ನು ಕೆಡಹುವುದು ಇದಕ್ಕಿಂತಲೂ ಹಿಂದಿನದು ಯಾವದೂ ಇರುವದಿಲ್ಲ.

ಐತಿಹಾಸಿಕ ಕಾಲದಿಂದ ಬೌದ್ಧ ಧರ್ಮದ ಪ್ರಬಲತೆಯುಂಟಾಯಿತು. ಕ್ರಿಸ್ತ ಶಕಕ್ಕಿಂತ ಎರಡು ಶತಮಾನ ಪೂರ್ವದಲ್ಲಿ ಪುಷ್ಪಮಿತ್ರಸುಂಗ ಎಂಬುವನು ಬ್ರಾಹ್ಮಣ ಧರ್ಮವನ್ನುದ್ಧಾರಮಾಡಿದನು. ಅಂದಿನಿಂದ ಶೈವ ಮತವು ಪ್ರಬಲವಾಗುತ್ತ ಬಂದಿರುತ್ತದೆ. ಕ್ರಿಸ್ತಶಕೆ ಮೊದಲನೆಯ ಒಂದು ಶತಮಾನದಲ್ಲಿ ಶಕರಾಜರು ಉತ್ತರ ಪಶ್ಚಿಮ ಭಾರತ ರಾಜರಾಗಿದ್ದರು. ಅವರ ಮೊಹರಿನ ಮೇಲೆ ವೃಷಭದ ಚಿಹ್ನವಿರುತ್ತದೆ. ರಾಜಾ ಅಪಲದತ್ತ ಹಾಗೂ ಶಕರಾಜ ಮೋಸ (Maues) ಇವರ ಮುದ್ರೆಗಳಲ್ಲಿ ಶಿವನ ನಂದಿಯು ದ್ಯೋತಕವಾದ ವೃಷಭ ಚಿಹ್ನವಿರುತ್ತದೆ. ಈ ವಿಷಯದಲ್ಲಿ ಪ್ರೊ॥ ರೈಪ್‌ಸನ್ನ (Rapson) ನಿಗೆ ಸಂಶಯವಿದೆ. ಆದರೆ ಇವರ ಸಂಶಯು ಯುಕ್ತಿಯಿಂದ ಕೂಡಿದ್ದಾಗಿರುವದಿಲ್ಲ. ಇತಿಹಾಸಜ್ಞರಿಗೆ ಗೊತ್ತಿದ್ದಂತೆ ಬೌದ್ಧಕಾಲದಿಂದ ದೇವತೆಗಳನ್ನು ಬಿಟ್ಟು ಅವರ ಚಿಹ್ನವನ್ನು ಧರಿಸಲಿಕ್ಕೆ ಪ್ರಾರಂಭವಾಯಿತು. ಆ ಕಾಲದಲ್ಲಿ ಶಿವನನ್ನು ಬಿಟ್ಟು ಶಿವನ ಚಿಹ್ನವಾದ ನಂದಿಯನ್ನು ಪೂಜಿಸಲಿಕ್ಕೆ ಹತ್ತಿದರು. ಕೆಲವು ದಿನಗಳಾದ ಮೇಲೆ ಶಿವನ ಮೂರ್ತಿಯನ್ನು ಮುದ್ರೆಗಳ ಮೇಲೆ ಹಾಕಲು ಪ್ರಾರಂಭಿಸಿದರು. ಪಾರ್ಥಿಯನ್ ರಾಜನಾದ ಗೊಂಡಾಫರನಿಸನು ತನ್ನ ನಾಣ್ಯದ ಮೇಲೆ ಶಿವನ ಚಿಹ್ನವನ್ನು ಮುದ್ರಿಸಿರುತ್ತಾನೆ. ಅಂತೂ ಆ ಕಾಲದಲ್ಲಿ ಶಿವನ ಪೂಜೆಯು ವಿಶೇಷವಾಗಿದ್ದಿತು.

ಲಾಹೋರ ಮ್ಯೂಜಿಯಮ್, ಸಿಕ್ಕೊಂಕಾ ಸೂಚೀಪತ್ರ ಪ್ಲೇಟ್ ೧೫, ನಂ. ೪೩, ಗಾರ್ಡನರ್ ಪ್ಲೇಟ್ ೨೨, ೮ ಕ್ರಿಸ್ತಶಕೆಗಿಂತ ೧೦೦ ವರ್ಷ ಮೊದಲು ಕೃಪಣವಂಶದ ರಾಜರು ವಿಸ್ತಾರವಾದ ಭೂಪ್ರದೇಶವನ್ನು ಆಳುತ್ತಿದ್ದರು. ಅವರ ರಾಜ್ಯದ ವಿಸ್ತಾರವು ಕಾಶಿಯವರೆಗೆ ಇದ್ದಿತು. ರಾಜಾ ಭೀಮವೀಮ ವ್ರಡಫಾಯಿಸೀಸನು ಶೈವಧರ್ಮ ಸ್ವೀಕಾರ ಮಾಡಿ ಮಹಾದೇವನ ಪೂಜೆಯನ್ನು ಮಾಡಲು ಪ್ರಾರಂಭಿಸಿದನು.

ಬಾಬೂ ಕಾಶೀಪ್ರಸಾದ ಜಯಸವಾಲರು ನಾಗವಂಶದ ರಾಜರಿದ್ದರೆಂಬುವದನ್ನು ಸಂಶೋಧಿಸಿರುತ್ತಾರೆ. ಅವರು ಈ ವಂಶದವರು. ಕೃಷಕವಂಶದ ನಂತರ ಆಳಿದ್ದು ತಿಳಿದುಬಂದಿರುತ್ತದೆ. ಇವರು ಮಧ್ಯಭಾರತದಲ್ಲಿ ಆಳಿದ್ದರು. ಇವರ ಶಿಲಾ ಲೇಖಗಳಿಂದ ತಿಳಿದುಬರುವದೇನೆಂದರೆ, ಈ ವಂಶದ ಆದಿಪುರುಷರು ಶಿವಲಿಂಗವನ್ನು ತಮ್ಮ ಹೆಗಲ ಮೇಲೆ ಇಟ್ಟುಕೊಂಡು ಶಿವನನ್ನು ತೃಪ್ತಿಗೊಳಿಸಿ ತಮ್ಮ ವಂಶವನ್ನು ಸ್ಥಾಪಿಸಿದರು.

ಆ ಶಿಲಾ ಲೇಖದಲ್ಲಿ—

"ಅಸಂಭಾರ ಸನ್ನಿವೇಶಿತ ಶಿವಲಿಂಗೋದ್ವಹನ ಶಿವಸುಪರಿತುಷ್ಟ ಸಮುತ್ಪಾದಿತ ರಾಜವಂಶಾನಾಂ ಪರಾಕ್ರಮಾಧಿಗತ ಭಾಗೀರಥ್ಯಂ ಅಮಲ ಜಲಮೂರ್ಧಾಭಿಷಿಕ್ತಾನಾಂ ದಶಾಶ್ವಮೇಧಾವಭೃತಸ್ನಾನಾನಾಂ ಭಾರಶಿವಾನಾಂ"

— **ನಾಗರೀಪ್ರಚಾರಿಣೀ ಪತ್ರಿಕಾ — ಭಾ. ೧೩, ಅಂಕ ೧.**

ಆದ್ದರಿಂದ ಈ ವಂಶದ ಹೆಸರು ಭಾರಶಿವನೆಂದು ಬಿದ್ದಿತು. ಈ ವಂಶದ ರಾಜರು ಶಿವಲಿಂಗವನ್ನು ಪೂಜಿಸುತ್ತಿದ್ದರೆಂಬುವುದು ನಿರ್ವಿವಾದವಾದುದು. ಆ ಕಾಲದ ಒಂದು ಮೂರ್ತಿಯು ಈಗ ಕಾಶಿಯಲ್ಲಿ ಸಿಕ್ಕಿದ್ದು, ಆ ಮೂರ್ತಿಯ ತಲೆಯ ಮೇಲೆ ಲಿಂಗವಿರುತ್ತದೆ.

ಇವೆಲ್ಲ ಉದಾಹರಣೆಗಳಿಂದ ತಿಳಿದುಬರುವದೇನೆಂದರೆ, ಲಿಂಗಪೂಜೆಯು ಭರತ ಖಂಡದಲ್ಲಿ ಕ್ರಿಸ್ತಶಕಕ್ಕಿಂತಲೂ ೨–೩ ಸಾವಿರ ವರ್ಷಗಳಿಂದ ವಿವಿಧರೀತಿಯಿಂದ ನಡೆಯುತ್ತ ಬಂದುದು ತಿಳಿದುಬರುತ್ತದೆ.

ಇಲ್ಲಿಯವರೆಗೆ ಲಿಂಗಪೂಜೆಯು ಅತ್ಯಂತ ಪ್ರಾಚೀನ ಕಾಲದಿಂದಲೂ ಹಲವು ವಿಧದಿಂದ ನಮ್ಮ ದೇಶದಲ್ಲಿಯೂ, ಮತ್ತಿನ್ನಿತರ ದೇಶಗಳಲ್ಲಿಯೂ ನಡೆಯುತ್ತ ಬಂದಿರುವುದನ್ನು ಹೇಳಿದ್ದಾಯಿತು.

ಶ್ರೀ ಬಸವಣ್ಣನವರು ಇಂತಹ ಲಿಂಗಪೂಜೆಯನ್ನು ಒಂದು ಪರಿಪೂರ್ಣಾವಸ್ಥೆಗೆ ತಂದು ಅದನ್ನು ಲೋಕದಲ್ಲಿ ಅತ್ಯಂತ ಪ್ರಚಂಡವಾಗಿ ಪ್ರಚಾರ ಮಾಡಿ ೨–೩ ಸಾವಿರ ವರ್ಷಗಳಿಂದಲೂ ಬಸವಣ್ಣನವರಂತಹ ಲಿಂಗಪೂಜಾ ಪ್ರಚಾರಕರು ಆಗಿಲ್ಲವೆಂಬುವದನ್ನು ಸಿದ್ಧಮಾಡಿಕೊಟ್ಟರು. ಲಿಂಗದ ಸಲುವಾಗಿಯೇ ಅವರು ಆವಿರ್ಭವಿಸಿದರು. ಲಿಂಗ ಪ್ರಚಾರದ ಸಲುವಾಗಿಯೇ ಅತ್ಯಂತ ಪರಿಶ್ರಮಪಟ್ಟರು. ಲಿಂಗದ ಸಲುವಾಗಿಯೇ ತಮ್ಮ ಶರೀರವನ್ನು ಅರ್ಪಿಸಿ, ಲಿಂಗದಲ್ಲಿ ಲಯವಾಗಿ ಅಮರರಾಗಿಹೋದರು. ಆದ್ದರಿಂದಲೇ ಶೂನ್ಯಸಂಪಾದನೆಯಕಾರರು ಬಸವಣ್ಣನವರ ಬಗ್ಗೆ ಕೆಳಗೆ ಬರೆದ ಉದ್ಗಾರ ಗಳನ್ನು ತೆಗೆದಿರುತ್ತಾರೆ.

**ಶೂನ್ಯಸಂಪಾದನೆ – ಪುಟ ೯೪**

> "ಲಿಂಗ ಜಂಗಮವು ಜಂಗಮ ಲಿಂಗವೆಂಬುದನಾರು ಬಲ್ಲರಯ್ಯ? ಮರ್ತ್ಯಲೋಕ-ಶಿವಲೋಕದಲ್ಲಿ ಬಸವಣ್ಣನಲ್ಲದೆ ಲಿಂಗಕ್ಕಾಧಾರವಿಲ್ಲೆಂದು ಮರ್ತ್ಯಲೋಕದಲ್ಲಿ ಬಂದವತರಿಸಿದನಯ್ಯ ಬಸವಣ್ಣನು. ಜಂಗಮ ಮುಖ ಲಿಂಗವೆಂಬುದನರಿದು ತನ್ನನರ್ಪಿಸಿ ಇದಿರತಪ್ಪಿಸಿ ಇರಬಲ್ಲನಯ್ಯ ಬಸವಣ್ಣನು. ಅಂಗಮುಖವೆಲ್ಲ ನಷ್ಟವಾಗಿ ಭೃತ್ಯಾಚಾರವೆ ತನುವಾಗಿರಬಲ್ಲನಯ್ಯ ಬಸವಣ್ಣನು. ಪ್ರಾಣಕಳೆಯರತು ಅಂತು ಜಂಗಮವೆ ಪ್ರಾಣವಾಗಿ ಹಂಗು ಹರಿಯದಿರಬಲ್ಲನಯ್ಯ ಬಸವಣ್ಣನು. ಉಪಾಧಿ ಎಂಬ ಕೀರ್ತಿವಾರ್ತೆಯನು ಜರಿದು ನಿರುಪಾಧಿಕವೆಂಬ ವಿವೇಕಕ್ಕೆ ಅತೀತನಾಗಿ ಸಹಜ ದಾಸೋಹಿ ಯಾಗಿರಬಲ್ಲನಯ್ಯ ಬಸವಣ್ಣನು. ಬಸವಪ್ರಿಯ ಕೂಡಲ ಚನ್ನಸಂಗನ ಶರಣ ಬಸವಣ್ಣನು ನಿಮಗೆ ಭಕ್ತನಲ್ಲದೆ ಮತ್ತಾರನು ಕಾಣೆನಯ್ಯ."

ಲಿಂಗಕ್ಕಾಧಾರವಿಲ್ಲೆಂದೂ, ಬಸವಣ್ಣನವರು ಮರ್ತ್ಯದಲ್ಲಿ ಅವತರಿಸಿದರೆಂದೂ ಮೇಲಿನ ವಚನದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಇದರಿಂದ ಭೂಲೋಕದಲ್ಲಿ ಲಿಂಗದ ಸಲುವಾಗಿ ಕಾರ್ಯಮಾಡಿ ಜನಸಾಮಾನ್ಯರಲ್ಲಿ ಲಿಂಗತತ್ವ ಬೀರಿದವರು ಬಸವಣ್ಣನವರಲ್ಲದೆ, ಬೇರೊಬ್ಬರು ಅವರಿಗೆ ಸರಿಸಮಾನರಾದವರು ದೊರೆಯಲಾರರು. ಶ್ರೀ ಬಸವಣ್ಣನವರ ಲಿಂಗನಿಷ್ಠೆಯು ಲೋಕದಲ್ಲಿ ಪ್ರಚಾರವಾಗಿ ಜಗತ್ತೆಲ್ಲ ಲಿಂಗಭರಿತವಾಗುವ ಸುದಿನವನ್ನು ಕಾಣುವುದೇ ನಿಜವಾದ ವೀರಶೈವನ ಬಯಕೆಯಾಗಿರಬೇಕು.

## ಹನ್ನೊಂದನೆಯ ಪ್ರಕರಣ

## ಬಸವಣ್ಣನವರ ಜಂಗಮಪ್ರೇಮ

ಶ್ರೀ ಬಸವಣ್ಣನವರು ಅಷ್ಟಾವರಣಗಳಲ್ಲಿ ಚೈತನ್ಯವನ್ನು ಹುಟ್ಟಿಸಿ, ಪ್ರಚಂಡತರವಾಗಿ ಅವುಗಳ ಪ್ರತಿಷ್ಠೆಯನ್ನು ನೆಲೆಗೊಳಿಸಿದರು. ಅಷ್ಟಾವರಣಗಳಲ್ಲಿ ಗುರು, ಲಿಂಗ, ಜಂಗಮ ಇವುಗಳಿಗೆ ಅತ್ಯಂತ ಪ್ರಾಮುಖ್ಯತೆ ಇರುತ್ತದೆ. ಒಂದೇ ಮೂರ್ತಿಯೇ ಮೂರು ವಿಭಾಗವಾಗಿರುವುದು. ಇಂತಹ ಜಂಗಮದಲ್ಲಿ ಬಸವಣ್ಣನವರು ಅತ್ಯಂತ ಭಯಭಕ್ತಿಗಳಿಂದ ನಡೆದುಕೊಂಡಿರುವುದು ಅವರ ಅನೇಕ ವಚನಗಳಿಂದ ತಿಳಿದುಬರುತ್ತದೆ. ಬಸವಣ್ಣನವರಿಗೆ ಜಂಗಮ ಪ್ರಾಣಿ ಎಂಬುವ ಬಿರುದೂ ಇದ್ದಂತೆ ಕಾಣಿಸುತ್ತದೆ. ಅವರು ತಮ್ಮದೊಂದು ವಚನದಲ್ಲಿ—

> "ಜಂಗಮವೇ ಲಿಂಗವೆನಗೆ ಜಂಗಮವೇ ಪ್ರಾಣವೆನಗೆ ಕೂಡಲ
> ಸಂಗಮದೇವಯ್ಯಾ ಎನಗೆಯೂ ನಿನಗೆಯೂ ಜಂಗಮ ಪ್ರಸಾದವೇ ಪ್ರಾಣ"

ಬಸವಭಾಷೆಯೆಂದು ಸುಪ್ರಸಿದ್ಧವಿರುವ ಅವರ ಪ್ರತಿಜ್ಞೆಗಳಲ್ಲಿ ಜಂಗಮದ ವಿಷಯವೂ ಒಂದಾಗಿರುತ್ತದೆ.

> "ಲಿಂಗಕ್ಕಲ್ಲದೆ ಮಾಡೆನೀ ಮನವನು, ಜಂಗಮಕ್ಕಲ್ಲದೆ ಮಾಡೆನೀ
> ಧನವನು, ಪ್ರಸಾದಕ್ಕಲ್ಲದೆ ಮಾಡೆನೀ ತನುವನು ಲಿಂಗಜಂಗಮದ
> ಪ್ರಸಾದಕ್ಕಲ್ಲದೆ ಬಾಯ್ದೆರೆಯೆನೆಂದೆಂಬುದೆನ್ನ ಭಾಷೆ ಅನರ್ಪಿತವಾದರೆ
> ತಪ್ಪೆನ್ನದು ಮೂಗ ಕೋಯಿ ಕೂಡಲಸಂಗಮದೇವಾ."

ನನ್ನ ಧನವನ್ನೆಲ್ಲ ಜಂಗಮಕ್ಕೆ ಸೂರೆಮಾಡುವೆನು. ನಾನು ಯಾರನ್ನಾದರೂ ಬೇಡಬೇಕಾದರೆ ಜಂಗಮದ ಸಲುವಾಗಿಯೇ ಬೇಡುವೆನೆಂದು ಪ್ರತಿಪಾದಿಸಿ ಪ್ರತಿಜ್ಞೆಗೈದಿರುತ್ತಾರೆ. ಅದರಂತೆ ಅದನ್ನು ತಮ್ಮ ಜೀವನಕಾಲದಲ್ಲಿ ಕೃತಿಯಲ್ಲಿ ತಂದಿರುತ್ತಾರೆ.

ಬಸವಣ್ಣನವರ ಕಾಲದಲ್ಲಿ ಕಲ್ಯಾಣದೊಳಗೆ ಲಕ್ಷದ ಮೇಲೆ ತೊಂಭತ್ತಾರುಸಾವಿರ ಪ್ರಮಥಗಣಂಗಳು ಇದ್ದರೆಂದು ಅನೇಕ ಐತಿಹಾಸಿಕ ಆಧಾರಗಳಿಂದ ಸಿದ್ಧವಾಗುತ್ತದೆ. ಈ ಜಂಗಮ ಸಮುದಾಯವನ್ನು ಅವರು ವೀರಶೈವರ ಆಚಾರವಿಚಾರಗಳನ್ನು ಸತ್ಯಾಗ್ರಹದಿಂದ ಸುಧಾರಿಸುವ ಕಾರ್ಯದಲ್ಲಿ ಉಪಯೋಗಮಾಡಿಕೊಂಡರೆಂದು ಕೆಲವು ಗ್ರಂಥಗಳಿಂದ ತಿಳಿದುಬರುತ್ತದೆ. ಈ ಪ್ರಮಥರ ಸಮುದಾಯಕ್ಕೆ ಶ್ರೀ ಬಸವಣ್ಣನವರ ಮಹಾ ಮನೆಯಲ್ಲಿಯೇ ಪ್ರಸಾದ ತೃಪ್ತಿಯಾಗುತ್ತಲಿದ್ದಿತು.

ಶ್ರೀ ಬಸವಣ್ಣನವರು—

> "ನಾನು ಪರಸೇವೆಯ ಮಾಡುವೆನಯ್ಯ ಜಂಗಮ ದಾಸೋಹಕ್ಕೆಂದು"

ಹೇಳಿರುವ ಮಾತಾದರೂ ಜಂಗಮದ ವಿಷಯದಲ್ಲಿ ಬಸವಣ್ಣನವರ ಅಸಾಧಾರಣವಾದ ಭಕ್ತಿಯನ್ನು ವ್ಯಕ್ತಮಾಡುತ್ತಲಿದೆ. ಬೇಕಾದವರು ನನಗೆ ಬೇಕಾದ ಮಾತುಗಳನ್ನಾಡಲಿ ನಾನು ಜಂಗಮಾರಾಧನೆ ಮಾಡುವೆ. ಇಂತಹ ನನ್ನ ಪ್ರತಿಜ್ಞೆಯು ತಪ್ಪಿದರೆ ನೀನು ಅಂದೇ ನನ್ನ ಮೂಗು ಕೊಯ್ಯಿಯೆಂದು ತನ್ನ ಇಷ್ಟಸ್ವಾಮಿಯಾದ ಕೂಡಲಸಂಗನನ್ನು

ಬೇಡಿಕೊಂಡಿರುತ್ತಾರೆ. ಮತ್ತೊಂದು ವಚನದಲ್ಲಿ "ಛಲ ಬೇಕು ಶರಣಂಗೆ ಲಿಂಗಜಂಗಮ ಒಂದೆಂಬ" ಎಂದು ಹೇಳುವ ವಾಕ್ಯವನ್ನು ನೋಡಿದರೆ ಲಿಂಗ ಜಂಗಮುಗಳಲ್ಲಿ ಭೇದವನು ಮಾಡದೆ ಒಂದೆಂಬ ಭಾವನೆ ಇರಬೇಕೆಂಬುವುದೇ ತೋರುತ್ತದೆ.

> "ವೀರವ್ರತಿ ಭಕ್ತನೆಂದು ಹೊಗಳಿಕೊಂಬಿರಿ, ಹೇಳಿರಯ್ಯಾ ವೀರನಾದರೆ ವೈರಿಗಳು ಮೆಚ್ಚಬೇಕು, ವ್ರತಿಯಾದರೆ ಅಂಗನೆಯರು ಮೆಚ್ಚಬೇಕು, ಭಕ್ತನಾದರೆ ಜಂಗಮ ಮೆಚ್ಚಬೇಕು ಈ ನುಡಿಯೊಳಗೆ ತನ್ನ ಬಗೆಯಿರೆ ಬೇಡಿದ ಪದವಿಯನೀವ ಕೂಡಲಸಂಗಮದೇವ."

ಈ ವಚನದಲ್ಲಿ ಭಕ್ತನಾದರೆ ಜಂಗಮ ಮೆಚ್ಚಬೇಕೆಂದು ಹೇಳಿರುವ ಅವರ ಅಮೃತ ಪ್ರಾಯವಾದ ವಾಣಿಯು ಬಹಳ ಅರ್ಥಗರ್ಭಿತವಾಗಿರುವುದು. ಭಕ್ತನೆಂದು ತನ್ನನ್ನು ತಾನು ಹೊಗಳಿಸಿಕೊಳ್ಳುವಂತಿಲ್ಲ. ಜಂಗಮ ಮೆಚ್ಚಿದವನೇ ಭಕ್ತನು ಎಂದು ಅವರು ಬೇರೆ ಬೇರೆ ಉಪಮಾನಗಳನ್ನು ಕೊಟ್ಟು ಸಾಧಿಸಿರುತ್ತಾರೆ.

ಇನ್ನು ಜಂಗಮ ಶಬ್ದದ ಅರ್ಥವೇನು? ವೀರಶೈವ ಶಾಸ್ತ್ರಕಾರರೂ, ವಚನಕಾರರೂ ಹೇಗೆ ಪ್ರತಿಪಾದಿಸಿರುತ್ತಾರೆ? ಈ ಶಬ್ದದ ಬಳಕೆಯು ಹೇಗೆ ಇರುತ್ತದೆ? ಎಂಬುವುದನ್ನು ನೋಡಬೇಕಾಗಿರುತ್ತದೆ. "ಅತ್ಯಂತಂ ಗಚ್ಛತೀತಿ ಜಂಗಮಃ" ಗಮುಧಾತುವಿಗೆ ಅತಿಶಯಾರ್ಥದಲ್ಲಿ ಯಜಂತ್ ಪ್ರತ್ಯಯವು ಹತ್ತಿ ಜಂಗಮಶಬ್ದವಾಗಿರುತ್ತದೆ. ಲೋಕದ ಜನರ ರೂಢಿಯಲ್ಲಿ ಸ್ಥಾವರ ಮತ್ತು ಜಂಗಮ ಎಂಬುವ ಎರಡು ಶಬ್ದಗಳು ಸುಪ್ರಸಿದ್ಧಗಳಾಗಿರುತ್ತವೆ. ಸಂಚರಿಸುವ ಪ್ರಾಣಿಗಳಿಗೆಲ್ಲ ಜಂಗಮ ಎಂಬುವ ಸಾಮಾನ್ಯ ಅರ್ಥವಿರುತ್ತದೆ. ವೀರಶೈವ ಸಮಾಜದಲ್ಲಿ ಕೆಲವು ಶಬ್ದಗಳಿರುತ್ತವೆ. ಅವುಗಳ ಅರ್ಥವೆಲ್ಲ ಬೇರೆಯಾಗಿದ್ದು ಪಾರಮಾರ್ಥಿಕವಾಗಿರುತ್ತದೆ. ಉದಾಹರಣೆಗಾಗಿ — ಜಂಗಮ, ಕರುಣಪ್ರಸಾದ, ಸಾಮರಸ್ಯ, ಶರಣ, ಪ್ರಾಣಲಿಂಗಿ, ಐಕ್ಯ, ಪ್ರಸಾದಿ, ಹುದ್ಗಪಾವಡ ಮೊದಲಾದ ಶಬ್ದಗಳನ್ನು ತೆಗೆದುಕೊಳ್ಳಬಹುದು. ಇಲ್ಲಿ ಜಂಗಮಶಬ್ದದ ಅರ್ಥವು ಪಾರಮಾರ್ಥಿಕವಾಗಿರುತ್ತದೆ. ಗತ್ಯರ್ಥಕ ಧಾತುಗಳೆಲ್ಲ ಜ್ಞಾನಾರ್ಥಕಗಳಾಗಿರುವುದರಿಂದ ಇಲ್ಲಿ ಜಂಗಮನೆಂದರೆ ಅತಿಶಯ ಜ್ಞಾನಿ ಎಂದೇ ಅರ್ಥವಾಗುತ್ತಲಿದೆ. ಜಂಗಮ ಶಬ್ದದ ನಿರ್ವಚನವನ್ನು ವೀರಶೈವ ಗ್ರಂಥಗಳಲ್ಲಿ ಅನೇಕ ಪ್ರಕಾರವಾಗಿ ಕಾಣಬಹುದು.

**ಸಿದ್ಧಾಂತ ಶಿಖಾಮಣಿ — ಪುಟ ೧೫೦**

> ಜಾನಂತ್ಯತಿಶಯಾದ್ಯೇತು ಶಿವಂ ವಿಶ್ವಪ್ರಕಾಶಕಂ ।
> ಸ್ವಸ್ವರೂಪತಯಾತೇತು ಜಂಗಮಾ ಇತಿ ಕೀರ್ತಿತಾಃ ॥

ಯಾರು ವಿಶ್ವಪ್ರಕಾಶನಾದ ಶಿವನನ್ನು ಸ್ವಸ್ವರೂಪದಿಂದ ತಿಳಿಯುತ್ತಾರೆಯೋ ಅವರೇ ಜಂಗಮರು. ಅರ್ಥಾತ್ ಶಿವಜ್ಞಾನಿಗಳಿಗೆ ಜಂಗಮರೆಂದು ಹೇಳಲು ಶಕ್ಯವಿರುತ್ತದೆ. ಅವರು ಜ್ಞಾನ ಮತ್ತು ಕ್ರಿಯೆಗಳಿಂದ ಶಿವನನ್ನು ತಿಳಿಯಬೇಕು. ಬೇರೆ ಬೇರೆ ಗ್ರಂಥಕಾರರು ಪಟ್ಟಿರುವ ಅನೇಕಾಭಿಪ್ರಾಯಗಳಿರುತ್ತವೆ. ಅವುಗಳನ್ನು ಮುಂದೆ ಕೊಡುವೆವು. ಈ ಜಂಗಮ ಶಬ್ದಕ್ಕೆ ಅನೇಕ ಪರ್ಯಾಯ ನಾಮಗಳಿರುತ್ತವೆ.

**ಶ್ರೀಕರಭಾಷ್ಯ—ಪುಟ ೪೩೧**

ಅತ್ಯಾಶ್ರಮೀ ನಿರಾಭಾರ ಷಟ್‌ಸ್ಥಲೀ ಜಂಗಮಶ್ಚರಃ ।
ಶಿವಯೋಗೀ ಯತಿರ್ವೀರೋ ನಾನ್ಯೇಷು ನ ಕದಾಚನ ॥

ಈ ಶ್ಲೋಕವು ವೀರಾಗಮದಲ್ಲಿರುತ್ತದೆ. ಅದನ್ನೇ ಶ್ರೀಕರಾಚಾರ್ಯರು ಉಪಯೋಗಿಸಿ ರುತ್ತಾರೆ. ಅಂದರೆ ಅತ್ಯಾಶ್ರಮೀ, ನಿರಾಭಾರಿ, ಷಟ್‌ಸ್ಥಲೀ, ಜಂಗಮ, ಚರ, ಯತಿ, ಶಿವಯೋಗಿ, ವೀರ ಹೀಗೆ ಅನೇಕ ಪರ್ಯಾಯನಾಮಗಳಿರುತ್ತವೆ. ಆಗಮದ ಶ್ಲೋಕ ಗಳನ್ನೆಲ್ಲ ಸಂಗ್ರಹಿಸಿ,

**ಶಿವತತ್ವರತ್ನಾಕರ— ತೃತೀಯ ತರಂಗ, ಪುಟ ೧೪**

ಭಕ್ತಸ್ಯ ಪಶ್ಚಿಮಹೃದಿಸ್ಥಿತೋ ಯೋನಾದಿ ಜಂಗಮಃ ।
ತಸ್ಯ ಸ್ವರೂಪಮಧುನಾ ಸಮಾಸೇನ ಪ್ರಕಾಶತೇ ॥

ಪಶ್ಚಾದನಾದಿ ಭಕ್ತಸ್ಯ ಹೃಚ್ಚಿತ್ ಪದ್ಮಾಂತರೇ ಸದಾ ।
ಚಿನ್ಮಂಡಲ ತ್ರಯೋಪೇತಂ ಪ್ರಣವಾಸನ ಮಧ್ಯಗಃ ॥

ನಿರಂಜನಸ್ತತ್ವ್ರಣವ ಸ್ವರೂಪೋತ್ರ ನಿಗದ್ಯತೇ ।
ನಿರಾಕೃತಂ ರಂಜನಂ ಯನ್ಮಾಯಾಮೋಹ ವಿಜೃಂಭಿತಂ ॥

ಏಕಸ್ವರೂಪ ಸಿದ್ಧೇನ ಸ ಭವೇದ್ಧಿ ನಿರಂಜನಃ ।
ತದೇವ ನಿಷ್ಕಲಂ ಬ್ರಹ್ಮ ನಿರ್ವಿಕಲ್ಪಂ ನಿರಂಜನಂ ॥

ನಿಸ್ಸಂಜ್ಞಂ ನಿರವಗ್ರಹಂ ನಿರಶನಂ ನಿಷ್ಕಾರಣಂ ನಿಷ್ಫಲಂ ।
ನಿಸ್ಸಂಗಂ ನಿರುಪಾಧಿಕಂ ನಿರುಪಮಮ್ ನಿಷ್ಕ್ರಿಯಂ ॥

ನಿಶ್ಚಲಂ ನಿಷ್ಪುಣ್ಯಂ ನಿರನುಗ್ರಹಂ ನಿರಧಿಕಂ ನಿರ್ವಾಸನಂ ನಿರ್ವಹಂ ।
ನಿರ್ಭೇದ್ಯಂ ನಿರಘಂ ನಿರಂಜನಪದಂ ಚೈತಂಭಜೇ ಜಂಗಮಂ ॥

ಆದ್ಯಂತಜ್ಯೋತಿರಹಿತಂ ಜ್ಯೋತಿರನಾದಿ ಪ್ರಭುರವ್ಯಯಂ ।
ಅನಾದೇಶೋಹ್ಯಯಾತಶ್ಚ ಜಂಗಮಸ್ಯಾನ್ನಿರಂಜನಃ ॥

ಅಂದರೆ— ಭಕ್ತನ ಪಶ್ಚಿಮ ಹೃದಯದಲ್ಲಿರತಕ್ಕ ಅನಾದಿ ಜಂಗಮದ ಸ್ವರೂಪವನ್ನು ಹೇಳುತ್ತೇನೆ. ಅನಾದಿ ಭಕ್ತನ ಪಶ್ಚಿಮ ಹೃದಯದ ಚಿತ್ಪದ್ಮಾಂತರದಲ್ಲಿ (ಜ್ಞಾನವೆಂಬ ಕಮಲ ಮಧ್ಯದಲ್ಲಿ) ಪ್ರಣವಾಸನದ ಮಧ್ಯದೊಳಗೆ ನಿರಂಜನತತ್ವವಿರುತ್ತದೆ. ಮಾಯಾ ಮೋಹದಿಂದ ತೋರಿದ ನಿರಂಜನವನ್ನು ನಿರಾಕರಣಮಾಡುವದರಿಂದ ಈ ತತ್ವವು ನಿರಂಜನವೆಂದೆನ್ನಿಸಿಕೊಳ್ಳುತ್ತದೆ. ಅದು ನಿತ್ಯಸಿದ್ಧವಾದ ಏಕರೂಪದಿಂದಲೇ ಇರುತ್ತದೆ. ವಿಕಾರಿ ಮಾತ್ರ ಆಗಿರುವದಿಲ್ಲ. ಅದಕ್ಕೆ ನಿಷ್ಕಲಬ್ರಹ್ಮ, ನಿರ್ವಿಕಲ್ಪ, ನಿರಂಜನವೆಂದು ಹೇಳಲಾಗುತ್ತದೆ. ಅದು ನಾಮಾದಿ ಸಂಜ್ಞೆಗಳಿಂದ ಕೂಡಿರುವದಿಲ್ಲ. ಅದಕ್ಕೆ ಯಾವ ಬಾಧೆಯೂ ಇರುವುದಿಲ್ಲ. ಪ್ರತಿಬಂಧಕನಿಲ್ಲ. ಹಸಿವೆಯಿಲ್ಲ. ಕಾರ್ಯಕಾರಣಗಳೇನೂ ಅದಕ್ಕಿರುವುದಿಲ್ಲ. ಅದು ಅಸಂಗ, ಉಪಾಧಿರಹಿತವಾದುದೂ ಆಗಿದೆ. ಅದರಂತೆ ಬೇರೊಂದಿಲ್ಲ. ಅದಕ್ಕೆ ಅಸ್ಮಿ, ಪ್ರಕಾಶೆ, ನಂದಾಮಿ, ಇದ್ದೇನೆ, ಪ್ರಕಾಶಿಸುತ್ತಿದ್ದೇನೆ, ಸಂತೋಷಪಡುತ್ತೇನೆ, ಎಂಬುವ ವಿಮರ್ಶೆಯಲ್ಲದೆ ಬೇರೆ ಕ್ರಿಯೆಗಳಿಲ್ಲ. ಪುಣ್ಯವನ್ನು ಮೀರಿದುದಾಗಿದೆ. ಅದಕ್ಕೆ ಬೇರೊಂದರ ಅನುಗ್ರಹವಿಲ್ಲ. ಅದಕ್ಕಿಂತಲೂ ಹೆಚ್ಚಿನದೂ ಇರುವದಿಲ್ಲ. ವಾಸನೆ ಇಲ್ಲದ್ದು. ಆದ್ದರಿಂದ ಈ ಲೋಕದಿಂದ ಆ ಲೋಕಕ್ಕೂ ಆ ಲೋಕ

ದಿಂದ ಈ ಲೋಕಕ್ಕೂ ಸಂಚರಿಸುವ ಜೀವನಂತೆ ಅದಕ್ಕೆ ಕರ್ಮವೆಂಬ ವಾಹಕಗಳಿರುವದಿಲ್ಲ. ಜಂಗಮ ವಸ್ತುವಿನಲ್ಲಿ ಮತ್ತೊಂದು ಪದಾರ್ಥಕ್ಕೆ ಆಶ್ರಯವಿಲ್ಲದಕಾರಣ ಅದು ಬೇರೆ ವಸ್ತುವಿನಿಂದ ಬೆರಿಕೆಯೂ ಆಗಿರುವದಿಲ್ಲ. ಪಾಪ ಪುಣ್ಯಗಳೂ ಅದಕ್ಕೆ ಇರುವದಿಲ್ಲ. ಮಾಯಾ ಮೋಹರಂಜನೆ ಇಲ್ಲದುದಾಗಿರುತ್ತದೆ. ಈ ಜಂಗಮ ತತ್ವವು ಕಡೆ ಮೊದಲಿಲ್ಲದುದು. ನೋಡಲಿಲ್ಲದ ಜ್ಯೋತಿಸ್ವರೂಪವು; ಅದು ಪ್ರಕಾಶಮಾನವು ಅಥವಾ ಪ್ರಭುವು. ಕೇಡನ್ನು ಮಾಡದೆ ಇರತಕ್ಕದ್ದು. ಮಾತಿನಿಂದ ವರ್ಣಿಸಲಸಾಧ್ಯವಾದುದು. ಇಂತಹ ಜಂಗಮವನ್ನು ನಾನು ಭಜಿಸುತ್ತೇನೆಂದು ವರ್ಣಿಸಿರುತ್ತಾರೆ. ಈ ಜಂಗಮ ತತ್ವವು ವೀರಾಗಮ, ಯೋಗಜಾಗಮ, ಪಾರಮೇಶ್ವರಾಗಮ, ಸೂಕ್ಷ್ಮಾಗಮ ಮತ್ತು ಚಿಂತ್ಯಾಗಮಗಳಲ್ಲಿ ವಿಸ್ತಾರವಾಗಿ ವರ್ಣಿಸಲ್ಪಟ್ಟಿರುತ್ತದೆ. ಉಪನ್ಯಾಸ ಸಂಗ್ರಹ ಆಸ್ಥಾನ ಮಹಾ ವಿದ್ವಾನ್ ಸಿರಸೀ ಗುರುಶಾಂತ ಶಾಸ್ತ್ರಿಗಳಿಂದ ಸಂಗ್ರಹಿಸಿದ್ದು. ವೀರಾಗಮದ ವಾಕ್ಯಗಳನ್ನು ಕೆಳಗೆ ಬರೆದಂತೆ ಉದಾಹರಿಸಿರುತ್ತಾರೆ.

**ಉಪನ್ಯಾಸ ಸಂಗ್ರಹ — ಪುಟ ೨೫೫**

ಯದಾ ಯದಾಹಿ ಧರ್ಮಸ್ಯ ಹಾನಿರ್ಭವತಿ ಭೂತಲೇ ।
ತದಾತದವತಾರೋಽಯಮ್ ಗಣೇಶಾನಾಂ ಮಹೀತಲೇ ॥

ಯದಾ ಯದಾಹಿ ಪ್ರಾಣಶಿವೈಕ್ಯಭಾಜಾಂ ಹಾನಿರ್ಭವಧ್ಭೂಮಿತಲೇ ಗಣೇಶಾಃ ।
ತದಾ ತದಾ ಮರ್ತ್ಯಕುಲೇಽವತೀರ್ಯ ಸಂಭೂಯಕುರ್ವಂತಿ ಹಿ ಧರ್ಮಸಂಸ್ಥಾಂ ॥

ದೇವ ದೇವ ಜಗನ್ನಾಥ ಕರುಣಾಕರ ಶಂಕರ ।
ಆಗಮೇ ಭವತಾಚೋಕ್ತಂ ಶಿಷ್ಯಪಾಪಂ ಗುರೋರಿತಿ ॥

ಏತಸ್ಮಾತ್ಕರ್ಮಣೋ ಸ್ವಾಮಿನ್ ವಯಂ ಭೀತಾಸ್ಸದಾಶಿವ ।
ತೇಷೂತ್ತಮೇಷು ಭೋ ದೇವಿ ಗಣಾಧೀಶೇಷು ಪಂಚಸು ॥

ಮೇ ಶಿಖಾ ಚಕ್ರಮಧ್ಯಸ್ಥಂ ಚರಲಿಂಗಂ ನಿರಂಜನಂ ।
ಕೃತ್ವಾ ಬಹಿರ್ಗತಂ ತೇಭ್ಯೋ ಮಯಾಪ್ರೋಕ್ತಮಿದಂ ವಚಃ ॥

ಮಮೈತಚ್ಚರಲಿಂಗಂತು ಮತ್ತಶ್ಮತ ಗುಣಾಧಿಕಂ ।
ಇತ್ಯುಕ್ತ್ವಾಗಣಪಂಚೇಭ್ಯೋ ದತ್ವಾ ಜಂಗಮಲಿಂಗಕಂ ।
ಪ್ರೇಷಿತಂ ಧರಣೀಭಾಗೇ ಶೃಣು ಶಂಕರಿ ಸಾದರಂ ॥

ಯಾವ ಕಾಲದಲ್ಲಿ ಭೂಲೋಕದೊಳಗೆ ಪ್ರಾಣಲಿಂಗಾಂಗ ಸಾಮರಸ್ಯ ವಿಚಾರದಲ್ಲಿ ಹಾನಿಯುಂಟಾಗುತ್ತದೆಯೋ ಆಯಾ ಕಾಲದಲ್ಲಿ ಶಿವಧರ್ಮಸ್ಥಾಪನೆಯನ್ನು ಮಾಡುವದಕ್ಕೋಸ್ಕರ ರುದ್ರರು ಮರ್ತ್ಯಲೋಕದಲ್ಲವತರಿಸಿ ಧರ್ಮಸ್ಥಾಪನೆಯನ್ನು ಮಾಡುವರೆಂದಿರುವಂತೆ ಶ್ರೀಮದಾಚಾರ್ಯರನ್ನು ಶಿವಧರ್ಮಸ್ಥಾಪನಾರ್ಥವಾಗಿ ಭೂಲೋಕದಲ್ಲಿ ಅವತರಿಸಬೇಕೆಂದು ಪರಶಿವನು ಆಜ್ಞಾಪಿಸಲು, ಶಿಷ್ಯಪಾಪವು ಗುರುವಿಗೆಂದು ಪ್ರಮಾಣವಿರುವುದರಿಂದ ಇದಕ್ಕಾಗಿ ನಾವು ಭೀತರಾಗಿರುವೆವು ಎಂದು ಹೇಳಿದುದಕ್ಕೆ ಪರಶಿವನು ತನ್ನ ಶಿಖಾಚಕ್ರಮಧ್ಯಸ್ಥನಾಗಿದ್ದ ಆ ನಿರಂಜನ ಜಂಗಮನನ್ನು ಇವರ ಕೂಡ ಕಳುಹಿಸಿ, ಈ ಜಂಗಮಾರಾಧನೆಯಿಂದ ಶಿಷ್ಯಸಂಬಂಧವಾದ ಪಾಪಕ್ಕೊಳಗಾಗದೆ ಭೂಲೋಕದಲ್ಲಿ ಧರ್ಮಸ್ಥಾಪನೆಯಂ ಮಾಡಿರೆಂದು ಆಜ್ಞಾಪಿಸಿ ಕಳುಹಿಸಿದರೆಂದು ಚಿಂತ್ಯಾಗಮ, ವೀರಾಗಮ ಮೊದಲಾದ ಆಗಮಗಳ ವಚನಗಳ ಮೇರೆಗೆ ಭೂಲೋಕದಲ್ಲಿ ಅವತರಿಸಿದ ನಿರಂಜನ ಜಂಗಮ ವಂಶೀಭೂತರೇ ನಿರಾಭಾರಿ ವೀರಶೈವರೆಂಬ ವಿರಕ್ತಾಶ್ರಮಿಗಳು.

**ಸೂಕ್ಷ್ಮಾಗಮ ಜಂಗಮದ ಲಕ್ಷಣ — ಸಪ್ತಮ ಪಟಲ, ಪುಟ ೮೯**

ನಿರಾಭಾರಮತೋವಕ್ಷ್ಯೇ ಸಮಾಹಿತಮನಾಃ ಶೃಣು ।
ಜಂತೋಃ ಪುಣ್ಯಂ ಪಾಪಮಿತಿ ಕರ್ಮ ದ್ವಿವಿಧಮುಚ್ಯತೇ ॥
ನಿವೃತ್ತಕರ್ಮಭಾರತ್ವಾತ್ ನಿರಾಭಾರ ಇತಿ ಸ್ಮೃತಃ ॥ ೭೬ ॥

ಜಟೀ ಮುಂಡೀ ಶಿಖೀ ವಾಪಿ ಕಾಷಾಯ ವಸನಾನ್ವಿತಃ ।
ನಿಸ್ಪೃಹೋ ನಿಜಲಿಂಗೈಕ್ಯೋ ಭಿಕ್ಷಾಶೀ ಭಯವರ್ಜಿತಃ ॥ ೭೭ ॥

ಮೌನೀ ಭೂತದಯಾಯುಕ್ತೋ ನಿರಾಭಾರ ಇತಿ ಸ್ಮೃತಃ ।
ಕಂಥಾ ಕಮಂಡಲುಧರೋ ಭೂತಿರುದ್ರಾಕ್ಷ ಸಂಯುತಃ ॥ ೭೮ ॥

ದಂಡಕೌಪೀನಧಾರೀ ಚ ನಿರಾಭಾರ ಇತಿ ಸ್ಮೃತಃ ।
ಮಾಹಾತ್ಮ್ಯಂ ಜಟಿನಾಂ ಯತ್ ಸ್ಯಾನ್ಮುಂಡಿನಾಂ ಚ ತದೇವ ಹಿ ॥ ೭೯ ॥

ಅನ್ಯೈಃ ಪತ್ರೈಶ್ಚ ಪುಷ್ಪೈಶ್ಚ ಫಲೈರ್ಲಿಂಗಂ ಪ್ರಪೂಜಯೇತ್ ।
ಕಾಮಕ್ರೋಧಾದಿರಹಿತಃ ಶಿವಜ್ಞಾನೀ ಜಿತೇಂದ್ರಿಯಃ ॥ ೮೦ ॥

ಜಂಗಮಸ್ತು ಚರೇದ್ಭಿಕ್ಷಾಂ ಯಾವತ್ಸ್ವೋದರಪೂರಣಂ ।
ಚರೇನ್ಮಾಧುಕರೀಂ ಭಿಕ್ಷಾಂ ಚರಸ್ಥಾನೋ ದಯಾಪರಃ ॥ ೮೧ ॥

ಏಕಾನ್ನಂತು ಅಶ್ನೀಯಾತ್ ದೇವಿ ತದ್ದೋಷಕೃದ್ಯತಃ ।
ಯಥಾ ಮಧುಕರಃ ಪೌಷ್ಪಂ ಮಧುಗೃಹ್ಣಾತಿ ಪಾರ್ವತಿ ॥ ೮೨ ॥

ತಥಾ ಗೃಹಸ್ಥಾದ್ಭಿಕ್ಷೇತ ಉಪವಾಸ ಸಮೋವಿಧಿಃ ।
ಏಕಾನ್ನಂ ವಾಪಿ ಭುಂಜೀತ ಪ್ರಾರ್ಥಿತಃ ಸದ್ಭಿರಾದರಾತ್ ॥ ೮೩ ॥

ಭಕ್ತೈಃ ಗೃಹಸ್ಥೈಃ ಸಂಪೂಜ್ಯ ಯತ್ತೇ ಮಹೇಶ್ವರಾ ಜನಾಃ ।
ಏತಾನ್ವಿನಾ ಯತ್ರ ಕೃತಾ ಪೂಜಾ ಸಾ ನಿಷ್ಫಲಾ ಭವೇತ್ ॥ ೮೪ ॥

ನ ವಸ್ತುಸಂಗ್ರಹಂ ಕುರ್ಯಾದ್ಯತ್ರ ಕುತ್ರಾಪಿ ಜಂಗಮಃ ।
ತದಾ ದದ್ಯಾಚ್ಚ ಭಕ್ತೇಭ್ಯೋ ದರಿದ್ರೇಭ್ಯೋ ದಯಾನ್ವಿತಃ ॥ ೮೫ ॥

ಎಲೌ ಪಾರ್ವತಿಯೇ, ನಿರಾಭಾರಿಯ ಲಕ್ಷಣವನ್ನು ಹೇಳುತ್ತೇನೆ ಕೇಳು. ಪ್ರಾಣಿಗಳಿಗೆ ಪುಣ್ಯಪಾಪಗಳೆಂಬ ಎರಡು ಕರ್ಮಗಳು ಹೇಳಲ್ಪಟ್ಟಿರುತ್ತವೆ. ದಂಡ, ಕಮಂಡಲು, ಕೌಪೀನಧಾರಿಯಾಗಿಯೂ, ಜಡೆಯುಳ್ಳವನಾಗಿಯಾಗಲೀ ಅಥವಾ ಬೋಳುತಲೆಯುಳ್ಳವನಾಗಿಯಾಗಲೀ, ಕಾಷಾಯ ವಸ್ತ್ರವನ್ನು ಧರಿಸಿದವನಾಗಿಯೂ, ಆಶಾರಹಿತನಾಗಿಯೂ, ತನ್ನ ಲಿಂಗದಲ್ಲಿ ನಿಷ್ಠೆಯುಳ್ಳವನಾಗಿಯೂ, ಭಿಕ್ಷಾನ್ನವನ್ನುಣ್ಣುವವನಾಗಿಯೂ, ಭಯವರ್ಜಿತನೂ, ಮೌನಿಯೂ ಆಗಿರಬೇಕು. ಮತ್ತು ಭೂತದಯಾನ್ವಿತನಾಗಿಯೂ ಇರುವವನೇ ನಿರಾಭಾರಿಯು. ವಿಭೂತಿ ರುದ್ರಾಕ್ಷಿಗಳನ್ನು ಧರಿಸಿದವನಾಗಿಯೂ, ವನದಲ್ಲಿ ಬೆಳೆದ ಪತ್ರಪುಷ್ಪಾದಿಗಳಿಂದ ಲಿಂಗಾರ್ಚನೆ ಮಾಡುವವನಾಗಿಯೂ, ಭ್ರಮರಗಳು ಹೇಗೆ ಬೇರೆ ಬೇರೆ ಪುಷ್ಪಗಳಿಂದ ಮಕರಂದವನ್ನು ತೆಗೆದುಕೊಂಡು ಜೇನುತುಪ್ಪವನ್ನು ಸಂಗ್ರಹಮಾಡುತ್ತವೆಯೋ ಹಾಗೆಯೇ ಗೃಹಸ್ಥರ ಮನೆಗಳಿಂದ ಭಿಕ್ಷೆಯನ್ನು ಮಾಡಬೇಕು. ಇದು ಉಪವಾಸವ್ರತಕ್ಕೆ ಸಮಾನವಾದುದಾಗುವದು. ಜಂಗಮನಾದವನು ಯಾವ ವಸ್ತುವನ್ನೂ ಸಂಗ್ರಹಿಸಿಡಕೂಡದು. ಒಂದುವೇಳೆ ಸಂಗ್ರಹಿಸಿದರೂ ಕೂಡ ಬಡಭಕ್ತರಿಗೆ ದಾನವನ್ನು ಮಾಡಬೇಕು.

**ವಾತುಲಾಗಮ — ಪಟಲ ೧೦, ಶ್ಲೋಕ ೫೦**

ಸರ್ವಸಂಸಾರಸೌಖ್ಯಾನಿ ತ್ಯಕ್ತ್ವಾ ಚಿತ್ತಂ ಶಿವೇಲಯೇತ್ ।
ದಂಡ ಕೌಪೀನ ಕಾಷಾಯ ಜಟಾವಲ್ಕಲಧಾರಕಃ ॥
ಮುಂಡೀ ವಾ ಶಿವಚಿಹ್ನಾನಿ ಧಾರಯೇದಜಿನಾದಿಕಮ್ ।
ಭಿಕ್ಷಾಶೀನಿಯತಾಹಾರಃ ಸುಖಃ ಸಂಸಾರವರ್ಜಿತಃ ।
ನಿರಾಭಾರೀತಿ ವಿಜ್ಞೇಯಃ ಸಯೇವ ಪರಮಃಶಿವಃ ॥

ಅಂದರೆ ಸರ್ವ ಸಂಸಾರ ಸೌಖ್ಯಗಳನ್ನು ಬಿಟ್ಟವನಾಗಿಯೂ, ದಂಡ ಕೌಪೀನಾದಿಗಳನ್ನು ಧರಿಸಿದವನಾಗಿಯೂ, ಜಟಾಧಾರಿಯಾಗಲೀ, ಬೋಳುತಲೆಯುಳ್ಳವನಾಗಲೀ, ಶಿವಚಿಹ್ನ ಗಳನ್ನು ಧರಿಸಿದವನಾಗಿಯೂ, ಭಿಕ್ಷಾನ್ನದ ಭೋಜನಮಾಡುವವನಾಗಿಯೂ, ನಿಯತಾ ಹಾರಯುಕ್ತನಾಗಿಯೂ ಇರುವ ಜಂಗಮನಾದ ನಿರಾಭಾರಿಯೇ ಪರಶಿವನ ಸ್ವರೂಪ ನಾಗಿರುವನೆಂದೇ ವಾತುಲಾಗಮದ ಅಭಿಪ್ರಾಯವಾಗಿರುವದು.

ಮೇಲೆ ಬರೆದ ಆಗಮಗಳ ಶ್ಲೋಕಗಳಂತೆಯೇ ಜಂಗಮದ ಬಗ್ಗೆ ಬಸವಣ್ಣನವರು ಅನೇಕ ವಚನಗಳನ್ನು ಹೇಳಿರುತ್ತಾರೆ.

**ಬಸವೇಶ್ವರ ವಚನ—ಪುಟ ೭೯**

"ಜಂಗಮವ ನಿಂದೆಯಮಾಡಿ ಲಿಂಗವ ಪೂಜಿಸುವ ಭಕ್ತನ ಅಂಗವಣಿ ಯಂತೊ? ಶಿವ ಶಿವಾ ನಿಂದಿಸುವ ಪೂಜಿಸುವ ಪಾತಕವಿದ ಕೇಳಲಾಗದು ಗುರುವಿನ ಗುರುಜಂಗಮವಿಂತೆಂದುದು ಕೂಡಲಸಂಗನ ವಚನ."

"ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ, ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದರೆ ಮುಂದೆ ಸಕಲಪದಾರ್ಥವನೀವನು ಆ ಜಂಗಮವ ಹರನೆಂದು ಕಂಡು ನರನೆಂದು ಭಾವಿಸಿದರೆ ನರಕ ತಪ್ಪದುಕಾಣಾ ಕೂಡಲಸಂಗಮದೇವಾ."

"ಲಿಂಗವಪೂಜೆಯ ಮಾಡಿ ಜಂಗಮವಕಂಡುದಾಸೀನವ ಮಾಡಿದರೆ ಆ ಲಿಂಗಪೂಜಕರಿಗೆ ಮಾಡಿದ ಶಿವದೂತರ ದಂಡವೆಂಬುದು ಲೋಕಧರ್ಮಿ ಗಳಿಗೆ ಮಾಡಿದ ಯಮದೂತರ ದಂಡವೆಂಬುದು ಇದುಕಾರಣ ಲಿಂಗಜಂಗ ಮವನೊಂದೇ ಎಂದರಿಯದರ ತೋರದಿರಯ್ಯ ಕೂಡಲಸಂಗಮದೇವಾ."

ಮೇಲಿನ ಮೂರು ವಚನಗಳನ್ನು ವಿಮರ್ಶಿಸಿನೋಡಿದರೆ ಶ್ರೀ ಬಸವಣ್ಣನವರ ಜಂಗಮ ನಿಷ್ಠೆಯು ಅದ್ಭುತ ಕಾಣುತ್ತಲಿದೆ. ಲಿಂಗಜಂಗಮಗಳಲ್ಲಿ ಭೇದವಿಲ್ಲದೆ ಇರಬೇಕು. ಲಿಂಗವ ಪೂಜಿಸಿ ಜಂಗಮನನ್ನು ಕಂಡು ಉದಾಸೀನ ಮಾಡಿದರೆ ನರಕ ತಪ್ಪದು. ಗುರುವಿನ ಗುರು ಜಂಗಮ. ಗಿಡಗಳಿಗೆ ಬೇರುಗಳೇ ಮುಖವಿದ್ದಂತೆ ಲಿಂಗಕ್ಕೆ ಜಂಗಮವೇ ಮುಖವೆಂದು ಸ್ಪಷ್ಟವಾಗಿ ಹೇಳಿರುತ್ತಾರೆ.

"ಜಂಗಮವಿರಹಿತ ಲಿಂಗಾರ್ಚನೆ ಮಳಲತೆರದ ಜಲದಂತೆ ಜಂಗಮ ಸನ್ನಿಹಿತ ಲಿಂಗಾರ್ಚನೆ ಇದೇ ಭಕ್ತಿಗೆ ಪಥವಯ್ಯ ಜಂಗಮ ಪ್ರಸಾದ ಭೋಗೋಪಭೋಗವು ಎನಗಿದೇ ಲಿಂಗಾರ್ಚನೆ ಬೇರೆ ಮತ್ತೊಂದನರಿವ ನಾದೊಡೆ ಕೂಡಲಸಂಗಮದೇವ ನರಕದಲ್ಲಿಕ್ಕುವ."

"ಭಿತ್ತಿಯಿಲ್ಲದೆ ಬರೆಯಬಹುದೇ ಚಿತ್ತಾರವ? ಬಿತ್ತಿ ಬೆಳೆಯಬಹುದೇ ಧರೆಯಿಲ್ಲದೆ? ಜಂಗಮವಿಲ್ಲದೆ ಮಾಡಬಹುದೇ? ರೂಢೀಶನ ಭೇದಿಸ ಬಹುವೇ? ಒಡಲಿಲ್ಲದ ನಿರಾಳಕರ್ತೃ ಕೂಡಲಸಂಗಮದೇವ ಜಂಗಮ ಮುಖವಾದನಾಗಿ ಮತ್ತೊಂದನರಿಯೆನಯ್ಯ."

ಜಂಗಮವಿಲ್ಲದ ಲಿಂಗಾರ್ಚನೆ ಮಳಲಿನಲ್ಲಿ ನೀರನ್ನು ಹಣಿಸಿದಂತೆ. ಜಂಗಮದಿಂದ ಕೂಡಿದ ಲಿಂಗಪೂಜೆಯು ಭಕ್ತಿಗೆ ಮಾರ್ಗವು. ಜಂಗಮನ ಪ್ರಸಾದವು ನನಗೆ ಭೋಗೋಪ ಭೋಗವು. ಎನಗೆ ಇದೇ ಲಿಂಗಾರ್ಚನೆಯು. ಗೋಡೆಯಿಲ್ಲದೆ ಚಿತ್ರವನ್ನು ಬರೆಯಲಿಕ್ಕೆ ಹೇಗೆ ಬರುವದಿಲ್ಲವೋ, ಭೂಮಿಯಿಲ್ಲದೆ ಹೇಗೆ ಬೆಳೆಯಲಿಕ್ಕೆ ಬರುವದಿಲ್ಲವೋ ಹಾಗೆಯೇ ಜಂಗಮನನ್ನು ಬಿಟ್ಟು ಲಿಂಗಪೂಜೆಯು ಇರುವದಿಲ್ಲ. ದೇವರದೇವನಾದ ಮಹಾದೇವನು ಜಂಗಮಮುಖ ಲಿಂಗವಾದನು.

"ಸಮಯೋಚಿತದಲ್ಲಿ ಲಿಂಗಾರ್ಚನೆಯ ಮಾಡುತ್ತಿಪ್ಪನಾಭಕ್ತನು ಮಾಡಿದರೆ ಮಾಡಲಿ ಮಾಡಿದರೆ ತಪ್ಪೇನು? ಆ ಜಂಗಮದ ಶಬ್ದವ ಕೇಳಿ ಪ್ರಸಾದಕ್ಕೆ ಕೈದುಡುಕಿದರೆ ಅದು ಪ್ರಸಾದವಲ್ಲ ಕಿಲ್ಬಿಷ. ಆ ಸಮಯೋ ಚಿತದಲ್ಲಿ ಬಂದ ಜಂಗಮಶಬ್ದವ ಕೇಳಿ ಪ್ರಸಾದಕ್ಕೆ ಕೈದೆಗೆದರೆ ಅದು ಲಿಂಗಕ್ಕೆ ಬೋನ ಇದುಕಾರಣ ಕೂಡಲಸಂಗಮದೇವಾ ಇಂತಪ್ಪ ಸದಾ ಚಾರಿಗಳ—ನೆನಗೆ ತೋರಾ."

ಜಂಗಮದಲ್ಲಿ ಉತ್ತಮ, ಮಧ್ಯಮ, ಕನಿಷ್ಟವೆಂದು ತಿಳಿಯಲಾಗದೆಂದು ಬಸವಣ್ಣ ನವರು ಹೇಳಿರುತ್ತಾರೆ.

"ಉತ್ತಮ ಮಧ್ಯಮ ಕನಿಷ್ಟವೆಂದು ಬಂದ ಜಂಗಮವನೆಂದೆನಾದರೆ ನೊಂದೆನಯ್ಯಾ, ಬೆಂದೆನಯ್ಯಾ ಎನ್ನ ಕಿಚ್ಚು ಎನ್ನ ಸುಟ್ಟಿತ್ತು ಸುಖಿ ಜಂಗಮ, ಸಾಮಾನ್ಯ ಜಂಗಮವೆಂದುಂಟೆ? ಕೂಡಲಸಂಗಮದೇವಾ."

ಲೋಕದ ವ್ಯವಹಾರದಲ್ಲಿ ಈ ತರಹದ ಭೇದಗಳಾಗುವದನ್ನು ನಾವು ನೋಡುತ್ತಲಿದ್ದೇವೆ. ಬಸವಣ್ಣನವರು ಇದನ್ನು ಬಹಳ ತೀಕ್ಷ್ಣವಾಗಿ ಖಂಡಿಸಿರುತ್ತಾರೆ.

"ಜಂಗಮದ ಸನ್ನಿಧಿಯಲ್ಲಿ ನಾನು ವಾಹನವನೇರಲಮ್ಮೆ, ಏರಿದರೆ ಭವ ಹಿಂಗದು. ಅದೇನುಕಾರಣ ಮುಂದೆ ಶೂಲವನೇರುವ ಪ್ರಾಪ್ತಿ ಯುಂಟಾದಕಾರಣ ಜಂಗಮಬರಲಾಸನದಲ್ಲಿರಲಮ್ಮೆ ಇದ್ದರೆ ಭವ ಹಿಂಗದು. ಏನುಕಾರಣ ಮುಂದೆ ಕಾಯ್ದಿಟ್ಟಿಗೆಯ ಮೇಲೆ ಕುಳ್ಳಿರಿಸುವ ಪ್ರಾಪ್ತಿ ಯುಂಟಾದಕಾರಣ ಜಂಗಮದ ಮುಂದೆ ಧಿಟ್ಟತನದಲ್ಲಿ ಬೆರೆತು ನಿಂದಿರ ಲಮ್ಮೆನು. ನಿಂದರೆ ಭವ ಹಿಂಗದಾಗಿ ಏನುಕಾರಣ ಮುಂದೆ ಹೆಡಗುಡಿಯ ಕಟ್ಟಿ ಕುಳ್ಳಿರಿಸುವ ಪ್ರಾಪ್ತಿಯುಂಟಾದಕಾರಣ ಇಂತೀ ಬಾಧೆಭವಂಗಳಿ ಗಂಜುವೆನಯ್ಯಾ ನಿನ್ನವರ ಸುಳುಹು ನೀನೆಂದೇ ಭಾವಿಸಿ ತೊತ್ತುಭೃತ್ಯ ನಾಗಿಪ್ಪೆನಯ್ಯಾ ಕೂಡಲಸಂಗಮದೇವಾ."

ಈ ಭೂಲೋಕದೊಳಗೆ ಬಸವಣ್ಣನವರಂತಹ ಜಂಗಮ ಭಕ್ತಿಸಂಪನ್ನರು ಸಿಗುವದು ದುರ್ಲಭವಾದುದೇ ಸರಿ.

"ಆವಾವಭಾವದಲ್ಲಿ ಮಾಡಿಕೂಡಿಹೆವೆಂಬರ ಬಾಗಿಲ ತೋರಯ್ಯ, ತನುವನೊಪ್ಪಿಸಿದವರ, ಮನವನೊಪ್ಪಿಸಿದವರ, ಧನವನೊಪ್ಪಿಸಿದವರ ಬಾಗಿಲ ತೋರಯ್ಯ. ಇವನೆಲ್ಲವನೊಪ್ಪಿಸಿ ಜಂಗಮವೆನ್ನವರೆನ್ನವರೆಂಬವರ ಕೆರಹ ಹೊತ್ತಿರಿಸೆನ್ನನು, ಕೂಡಲಸಂಗಮದೇವಾ."

ಈ ವಚನವು ಬಸವಣ್ಣನವರ ಜಂಗಮಭಕ್ತಿಯ ಪರಾಕಾಷ್ಠತೆಯನ್ನು ಜಗತ್ತಿಗೆ ತೋರಿಸಿ ಕೊಡುವಂಥಾದ್ದಾಗಿರುತ್ತದೆ.

### ವಾತುಲಾಗಮ — ಪಟಲ ೧೦

ತ್ಯಕ್ತಪ್ರವರಗೋತ್ರಸ್ಯ ಸೂತ್ರವರ್ಣಾದಿಕಂ ತಥಾ ।
ದಂಡ ಕೌಪೀನ ಕಾಷಾಯ ಜಟಾವಲ್ಕಲಧಾರಕಃ ॥
ಭಿಕ್ಷಾಶೀ ನಿಯತಾಹಾರಃ ಸುಖಸಂಸಾರ ವರ್ಜಿತಃ ।
ನಿರಾಭಾರೀತಿ ವಿಜ್ಞೇಯಃ ಸಯೇವ ಪರಮುಶ್ಶಿವಃ ॥

ಪ್ರವರ-ಗೋತ್ರ ಸೂತ್ರಾದಿಗಳನ್ನು ಬಿಟ್ಟವನಾಗಿಯೂ, ದಂಡಕಮಂಡಲಾದಿಗಳನ್ನು ಧರಿಸಿದವನಾಗಿಯೂ, ಭಿಕ್ಷಾನ್ನವನ್ನುಣ್ಣುವವನಾಗಿಯೂ, ನಿಯತಾಹಾರವನ್ನು ಭುಂಜಿಸ ತಕ್ಕವನಾಗಿಯೂ, ಸಂಸಾರಸುಖವನ್ನು ಬಿಟ್ಟಂಥವನಾಗಿಯೂ ಇರತಕ್ಕ ನಿರಾಭಾರಿ ವೀರಶೈವನೇ ಜಂಗಮನಾಗಿರುತ್ತಾನೆ.

ಇನ್ನು ಜಂಗಮದ ವಿಷಯಕ್ಕೆ ಬೇರೆಬೇರೆ ಶರಣರ ವಚನಗಳನ್ನು ಇಲ್ಲಿ ಕೊಡುತ್ತೇವೆ.

### ಶ್ರೀ ಸಿದ್ಧರಾಮೇಶ್ವರ ವಚನ — ಪುಟ ೫೭

"ಜನನ ಮರಣ ದೇಹಧರ್ಮಕ್ಕಲ್ಲದೆ ಜಂಗಮಕ್ಕೆಲ್ಲಿಹದೊ? ಕ್ಷುಧಾ, ತೃಷೆ ಪ್ರಾಣಧರ್ಮವಲ್ಲದೆ ಜಂಗಮಕ್ಕೆಲ್ಲಿಹದೊ? ಸುಖ ದುಃಖ ಮನೋ ಧರ್ಮವಲ್ಲದೆ ಜಂಗಮಕ್ಕೆಲ್ಲಿಹದೊ? ಜ್ಞಾನಾಜ್ಞಾನಂಗಳು ಮುಮುಕ್ಷುವಿಗಲ್ಲದೆ ನಿಮ್ಮಲ್ಲಿ ಸಮರಸವಾದ ಸಚ್ಚಿದಾನಂದ ಶಿವಯೋಗಿ ಜಂಗಮಕ್ಕೆ ಎಲ್ಲಿಹದೊ ಕಪಿಲಸಿದ್ಧ ಮಲ್ಲಿಕಾರ್ಜುನಾ."

ಮತ್ತು

"ಜಂಗಮ ಪೂಜಿಸುವಡೆ ಜಗದ್ಭರಿತ ನೋಡಾ ನೋಡುವಡೆ ಏಕದೇಶಿ ನೋಡಯ್ಯ ಲಿಂಗವ ಪೂಜಿಸುವಡೆ 'ಲಿಂಗಮಧ್ಯೇ ಜಗತ್ಸರ್ವಂ' ಎಂಬ ಶೃತಿ ಸಾರುತ್ತಿದೆ ಗುರುವ ಪೂಜಿಸುವಡೆ 'ಶಿರತ್ಯಾಜ್ಞಾಂ ಗುರುಃ' ಎಂಬ ಸಮಾಸ ಇರುತ್ತದೆ ಇವೆಲ್ಲ ನನಗೆ ಅಸಾಧ್ಯ ನೋಡಯ್ಯ ನಿನ್ನ ಪೂಜಿಸಿ ನಿನ್ನ ಕೈಕೊಂಬಪರಿಯ ಹೇಳಾ ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ."

ಮೇಲಿನ ಎರಡೂ ವಚನಗಳಲ್ಲಿ ಸಿದ್ಧರಾಮ ಶಿವಯೋಗಿಗಳು ಜಂಗಮದ ಆಧಿಕ್ಯವನ್ನು ಚೆನ್ನಾಗಿ ಬಣ್ಣಿಸಿರುತ್ತಾರೆ. ಷಡೂರ್ಮಿಗಳಾದ ಹಸಿವೆ, ನೀರಡಿಕೆ, ಶೋಕ, ಮೋಹ, ಜನನ, ಮರಣ ಇವುಗಳು ಜಂಗಮಕ್ಕಿಲ್ಲ. ಜಂಗಮವು ಇವುಗಳನ್ನು ಮೀರಿದುದು ಎಂದು ಹೇಳಿರುವರಲ್ಲದೆ, ಸಚ್ಚಿದಾನಂದಸ್ವರೂಪಿಯಾದ ಶಿವಯೋಗಿಯೇ ಜಂಗಮ

ವೆಂದು ಹೇಳಿದ್ದಾರೆ. ಸಿದ್ಧಾಂತ ಶಿಖಾಮಣಿ, ಶ್ರೀಕರಭಾಷ್ಯಾದಿಗಳು ಇದನ್ನೇ ಸಮರ್ಥಿಸಿರುತ್ತವೆ.

**ಸಂಗನ ಬಸವೇಶ್ವರ ವಚನ— ಪುಟ ೨೯**

"ಹರಹರಾ, ಶಿವಶಿವಾ, ಕರುಣಾಕರ ಮತ್ಪ್ರಾಣನಾಥ ಮಹಾಪ್ರಭು ಜಂಗಮವೇ. ಸರ್ವಥಾ ಪರಬ್ರಹ್ಮ ಘನಗಂಭೀರ ಪರತತ್ವಮೂರ್ತಿ ನೋಡಾ ಜಂಗಮವೇ. ನಿರುಪಮ ನಿರವಯವ ನೋಡಾ ನಿಶ್ಚಿಂತ ನಿಷ್ಕಳಂಕ ನೋಡಾ ಜಂಗಮವೇ. ಸ್ವಯ ಚರ ಪರವಸ್ತು ನೋಡಯ್ಯ, ಭೂರುದ್ರಮೂರ್ತಿ ನೋಡಯ್ಯ, ಸತ್ಯಸದಾಚಾರಮೂರ್ತಿ ನೋಡಯ್ಯ ಜಂಗಮವೇ. ಸತ್ಕ್ರಿಯಾ ಸಮ್ಯಜ್ಞಾನಮೂರ್ತಿ ನೋಡಯ್ಯ ಸದ್ಭಕ್ತಿ ಪ್ರಿಯಜಂಗಮವೆ. ಗುರುಲಿಂಗ ಭಕ್ತಂಗೆ ಹರಣ ಕಿರಣ ಚೈತನ್ಯಮೂರ್ತಿ ನೋಡಯ್ಯ, ಅದೆಂತೆಂದೊಡೆ 'ಭೂಸುರೋ ಬ್ರಾಹ್ಮಣಶ್ಚೈವ ಭೂರುದ್ರೋ ಜಂಗಮಸ್ತಥಾ, ಸುರರುದ್ರ ದ್ವಯೋರ್ಮಧ್ಯೇ ರುದ್ರಯೇವ ವಿಶೇಷಿತಃ', 'ನಾದ ಬಿಂದು ಕಲಾತೀತಂ ವೇದಶಾಸ್ತ್ರಾತಿವರ್ತನಂ, ಆದಿಮಧ್ಯಾಂತರಹಿತಂ ನಿತ್ಯಾನಂದಾತ್ಮಕಂ ನಿಜಂ' ಎಂಬುದಾಗಿ ಜಂಗಮವೇ ಸದ್ಭಕ್ತಿ ಮಹೇಶ್ವರರ ಸದ್ಧರ್ಮ ಸರ್ವಾಚಾರ ಸಂಪತ್ತಿನಾಚರಣೆಗೆ ಕಾರಣಕರ್ತೃ ನೋಡಾ ಸಂಗನ ಬಸವೇಶ್ವರಾ."

ಮತ್ತು ಇವರೇ ತಮ್ಮ ಇನ್ನೊಂದು ವಚನದಲ್ಲಿ—

"ಅಯ್ಯಾ ಜಂಗಮವೆಂದೊಡೆ ಬಾಯುಲಿಖ್ಯವೇ? ಜಂಗಮವೆಂದೊಡೆ ಉಪಾಧಿಕನೇ? ಜಂಗಮವೆಂದೊಡೆ ಸ್ತ್ರೀಲಂಪಟನೇ? ಈ ಗುಣವುಳ್ಳವನ ಚರಜಂಗಮವೆಂಬೆನೆ? ಎನ್ನನು ಈ ಪಾತಕದ ನುಡಿಯ ಕೇಳಲಾಗದು ಜಂಗಮವೆಂತವನೆಂದೊಡೆ ನಿರ್ಲೇಪ, ನಿರುಪಾಧಿಕ, ನಿರ್ಬೋಧ, ನಿರಾಶ್ರಿತ, ನಿಷ್ಕಾರಣ, ನಿರ್ಲಂಪಟ, ಜಂಗಮ ಈ ಷಡ್ಗುಣಭರಿತನಾದೊಡೆ ಜಂಗಮವೆಂಬೆನಯ್ಯ? ಇಂತಿಪ್ಪುದೇ ಕಾರಣವಾಗಿ ಪ್ರಭುದೇವರೇ ಶರಣೆಂದು ಬದುಕನೇ ಬಸವಣ್ಣ ಇವರಿಬ್ಬರ ಒಕ್ಕುದಕೊಂಡು ನಾನು ಬದುಕಿದೆನು ಕಾಣಾ ಇಂತು ಪ್ರಮಥಗಣ ಮಾರ್ಗದಲ್ಲಿ ದೃಢಚಿತ್ತದಿಂದ ನಿಂದ ಮಹಂತ ಶರಣಂಗೆ ನಾನು ನೀನು ಗುರುವು ಶಿಷ್ಯ ಭಕ್ತ ಜಂಗಮ ಸತಿ ಪತಿ ತಂದೆ ಮಗನೆಂಬ ಉಭಯ ಶಬ್ದವುಂಟೆ? ನೋಡಾ ಸಂಗನ ಬಸವೇಶ್ವರಾ".

**ಸಿದ್ಧೇಶ್ವರ ವಚನ— ಪುಟ ೧೪೩**

"ಜಂಗಮ ಜಂಗಮವೆಂದೇನೋ ಲಜ್ಜಾಭಂಡರಿರಾ ಜಂಗಮವಂತೆ ಕಳಂಕಿಯೇ? ಅಪೇಕ್ಷಿಯೇ? ಅಶಕ್ತನೇ? ಪಾಶಜೀವಿಗಳನೆಂತು ಜಂಗಮವೆಂದೆನಯ್ಯ ಜಂಗಮವೇನು ದೋಷಿಯೇ? ದುರ್ಗುಣಿಯೇ? ಅಸತ್ಯನೇ? ಅನಾಚಾರಿಯೇ? ಅಲ್ಲ ಕಾಣಿರಯ್ಯ ಹೇಳಿಹೆನು ಕೇಳಿ ನಿಃಕಳಂಕ, ನಿರಪೇಕ್ಷ, ನಿರಾಶಕ, ನಿರ್ದೋಷಿ, ನಿಃಪುರುಷ, ಸತ್ಯ, ದಯ, ಕ್ಷಮೆ, ದಮೆ, ಶಾಂತಿ,

ಸೈರಣೆ, ಸಮಾಧಾನ, ಸಂತೋಷ, ಪರಿಣಾಮ, ನುಡಿನಡೆ, ತತ್ವ, ನಡೆ ನುಡಿ ಪಾವನ ಆತನ ಸುಳುಹು ವಸಂತಗಾಳಿ ಜಗದಾರಾಧ್ಯ, ಸ್ವಯಸ್ವತಂತ್ರ ಚರ ಪರಿಣಾಮಿ ಪರಿಪೂರ್ಣ ಪ್ರಕಾಶ ಸರ್ವತತ್ವಾಶ್ರಯಶೂನ್ಯ ನಿಶ್ಶೂನ್ಯ ನಿರಾಳನೇ ಜಂಗಮದೇವನೆಂದೆನು ಕಾಣಿರೊ ಕೇಳಿರಯ್ಯ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವಿನ ಘನವ."

**ವಚನಶಾಸ್ತ್ರಸಾರ — ಪುಟ ೧೪೯**

"ಪರರಾಣಿಯರ ನೋಡುವಲ್ಲಿ ಅಂಧಕನಾಗಿಪ್ಪ ನೋಡಾ ಜಂಗಮನು. ಪರಧನವ ಕಂಡಲ್ಲಿ ಹುಲಿಯ ಕಂಡ ಹುಲ್ಲೆಯಂತೆ ಭೀತಿಬಡುವ ನೋಡಾ ಜಂಗಮನು. ದುರ್ನರರ ಸಂಭಾಷಣೆ ಕೇಳುವಲ್ಲಿ ಅತಿ ಮುಗ್ಧನಾಗಿಪ್ಪ ನೋಡಾ ಜಂಗಮನು. ದುಷ್ಕರ್ಮಪಥದೊಳರಸುವಲ್ಲಿ ಕಡುಜಡಪೆಳವ ನೋಡಾ ಜಂಗಮನು. ವಿಷಯಗಳೊಳು ನಿಃಕರುಣಿಯಾಗಿಪ್ಪ ನೋಡಾ ಜಂಗಮನು. ಶಿವನಿಂದಕರ ಸ್ವರ ಕೇಳುವಲ್ಲಿ ಬಧಿರನಾಗಿಪ್ಪ ನೋಡಾ ಜಂಗಮನು. ದುರಾತ್ಮರಿಗೆ ಜ್ಞಾನದ್ರವ್ಯ ಕೊಡುವಲ್ಲಿ ಲೋಭಿಯಾಗಿಪ್ಪ ನೋಡಾ ಜಂಗಮನು, ಕಪಿಲಸಿದ್ಧ ಮಲ್ಲಿಕಾರ್ಜುನನು."

**ಚನ್ನಬಸವೇಶ್ವರ ವಚನ — ಪುಟ ೯೩**

"ಬರೆ ಜಾಳುಬೋಳರೆಲ್ಲ ಜಂಗಮವೇ? ವೇಷಧಾರಿಗಳೆಲ್ಲ ಜಂಗಮವೆ? ಪಾಶಬದ್ಧ ಪಶುಮತದ ವಿವರಗೇಡಿಗಳೆಲ್ಲ ಜಂಗಮವೆ? ಆಚಾರ ಭ್ರಷ್ಟರಾದ ಅನಾಚಾರ ಮಿಶ್ರವಾದ ಅಪಸ್ಮಾರಿಗಳೆಲ್ಲ ಜಂಗಮವೆ? ತಾನು ವಿಷಯದೊಳಗೆಲ್ಲ ಶಿಲ್ಕಿ ಅಹಂ ನಾನು ನನ್ನದೆಂದು ಮುಂದುವರಿವವರೆಲ್ಲ ಜಂಗಮವೆ? ಲಿಂಗಾಂಗ ಸಂಗ ಸಮರಸವರಿದಾನಂದಿಸುವ ಶಿವಯೋಗೀಶ್ವರನ ನಿಲುವನರಿಯದೆ ಮಿಥ್ಯವ ನುಡಿದು ಸ್ತುತಿನಿಂದೆಯ ಮಾಡುವವರು ಜಂಗಮವೆ? ನೀತಿಯ ನಿಜವ ಬಿಟ್ಟು ಸತ್ಯಸದಾಚಾರವನೊತ್ತಿ ನ್ಯಾಯವ ಮಾಡುವವರು ಜಂಗಮವೆ? ಜಂಗಮ ಜಂಗಮವೆಂದೊಡೆ ನಾಮರೂಪಿಗಳೆಲ್ಲ ಜಂಗಮವೆ? ನಾಮ ಕಲ್ಲು ಮರ ಮೊದಲಾದ ಜೀ ಎಂಬ ಹುಳುವಿಗುಂಟು ನಿಜಜಂಗಮವೆಂತೆಂದೊಡೆ ಹೇಳಿಹೆನು ಕೇಳಿರಣ್ಣ ನಿಜೈಕ್ಯನಾದ ನಿಸ್ಸೀಮನೆ ಜಂಗಮನು ಅರಿವು ಆಚಾರ ಸತ್ಕ್ರಿಯೆಯುಳ್ಳೊಡೆ ಜಂಗಮ ಅಂತಪ್ಪ ಸಚ್ಚಿದಾನಂದ ನಿತ್ಯನಿರಂಜನ ಜಂಗಮದ ಸುಳುಹು ಪಾವನ ಅಂತಪ್ಪ ರಹಸ್ಯಬ್ರಹ್ಮವ ತೋರಿಸಿ ಅವರ ಪಾದರಕ್ಷೆಯ ಕಾಯ್ವುದಕ್ಕೆ ಯೋಗ್ಯನ ಮಾಡಿರಿಸಯ್ಯ ಎನ್ನ ಕೂಡಲ ಚನ್ನಸಂಗಮದೇವಾ."

## ಬಸವಣ್ಣನವರು ಜಂಗಮ ಪ್ರಾಣಿಗಳು

ಶ್ರೀ ಬಸವರಾಜದೇವರು ಜಂಗಮ ಪ್ರಾಣಿಗಳಾಗಿದ್ದರೆಂದು ಈ ಮೊದಲು ನಾನು ಬರೆದಿರುತ್ತೇನೆಯಷ್ಟೆ? ಹಾಗಾದರೆ ಈ ವಿಷಯದಲ್ಲಿ ಪ್ರಮಾಣಗಳೇನು? ಎಂಬುವದನ್ನು ಇಲ್ಲಿ ನೋಡೋಣ.

**ಶೂನ್ಯಸಂಪಾದನೆ — ಪುಟ ೮೨**

"ಲಿಂಗಜಂಗಮ ಜಂಗಮಲಿಂಗದ ಮುಖವ ನೀವಲ್ಲದೆ ಇನ್ನು ಬಲ್ಲವರಾರಯ್ಯ ಅಂಗದ ಮೇಲೆ ಲಿಂಗವುಳ್ಳುದೆಲ್ಲವು ಸಂಗಮನಾಥನೆಂದಲ್ಲಿ ಪರವಾದಿ ಬಿಜ್ಜಳನು ಒರೆದುನೋಡಲೆಂದಟ್ಟಿದರೆ ಹಗರಣಿಗರ ಜಂಗಮ ಮುಖದಲ್ಲಿ ಲಿಂಗವ ಮಾಡಿದವರಾರು ಹೇಳಾ? ನೀವಲ್ಲದೆ? ಮರೆದ ಮಾನೀಶನ ಕರೆದು ಓ ಎನಿಸಿ ನುಡಿಸಿ ಉಣಿಸಿ ಜಂಗಮಲಿಂಗಪ್ರಾಣಿ ಸಂಗನ ಬಸವಣ್ಣನೆಂಬ ಧ್ವಜವನೆತ್ತಿ ಮೆರೆದವರಾರು ಹೇಳಾ ಈ ಕಲ್ಯಾಣದಲ್ಲಿ ನೀವಲ್ಲದೆ? ಜಂಗಮಮುಖದಿಂದಲ್ಲದೆ ಲಿಂಗವನರಿಯೆನೆಂದು ಎನ್ನ ಮನಕ್ಕೆ ಸಂದೇಹವನೊಡ್ಡಿ ಜಾರಿದರೆ ನಾನು ಸೈರಿಸಬಲ್ಲೆನೆ? ನೀನು ಜಂಗಮ ಮುಖ ಲಿಂಗಸಂಬಂಧಿ ಎಂಬುದಕ್ಕೆ ಆದಿ ಗಣನಾಥನು ಅಲ್ಲಮಪ್ರಭು ವೆಂಬುವ ನಾಮವ ಧರಿಸಿ ನಿನ್ನನರಸಿಕೊಂಡು ಬರುತ್ತಲೈದಾನೆ ಕೂಡಲ ಚನ್ನಸಂಗಮದೇವರು ಸಾಕ್ಷಿಯಾಗಿ ಸಂಗನ ಬಸವಣ್ಣ ನೀನೇ ಜಂಗಮ ಪ್ರಾಣಿಯೆಂದು ನಾನು ನಂಬಿದೆನು."

**ಹಡಪದ ಅಪ್ಪಣ್ಣನವರು — ಶೂನ್ಯಸಂಪಾದನೆ — ಪುಟ ೯೪**

"ಲಿಂಗಜಂಗಮ ಜಂಗಮಲಿಂಗವೆಂಬುದನಾರು ಬಲ್ಲರಯ್ಯ? ಮರ್ತ್ಯಲೋಕ ಶಿವಲೋಕದಲ್ಲಿ ಬಸವಣ್ಣನಲ್ಲದೆ ಲಿಂಗಕ್ಕಾಧಾರವಿಲ್ಲೆಂದು ಮರ್ತ್ಯಲೋಕದಲ್ಲಿ ಬಂದವತರಿಸಿದನಯ್ಯ ಬಸವಣ್ಣನು. ಜಂಗಮ ಮುಖ ಲಿಂಗವೆಂಬುದನರಿದು ತನ್ನನರ್ಪಿಸಿ ಇದಿರ ತಪ್ಪಿಸಿ ಇರಬಲ್ಲನಯ್ಯ ಬಸವಣ್ಣನು. ಅಂಗಮುಖವೆಲ್ಲ ನಷ್ಟವಾಗಿ ಭೃತ್ಯಾಚಾರವೇ ತನುವಾಗಿರ ಬಲ್ಲನಯ್ಯ ಬಸವಣ್ಣನು. ಪ್ರಾಣಕಳೆಯುರತು ಅಂತು ಜಂಗಮವೆ ಪ್ರಾಣ ವಾಗಿ ಹಂಗುಹರಿಯದಿರಬಲ್ಲನಯ್ಯ ಬಸವಣ್ಣನು. ಉಪಾಧಿ ಎಂಬ ಕೀರ್ತಿ ವಾರ್ತೆಯನು ಜರಿದು ನಿರುಪಾಧಿಕವೆಂಬ ವಿವೇಕಕ್ಕೆ ಅತೀತನಾಗಿ ಸಹಜ ದಾಸೋಹಿಯಾಗಿರಬಲ್ಲನಯ್ಯ ಬಸವಣ್ಣನು. ಬಸವಪ್ರಿಯ ಕೂಡಲ ಚನ್ನಸಂಗನ ಶರಣ ಬಸವಣ್ಣನೆ ನಿಮಗೆ ಭಕ್ತನಲ್ಲದೆ ಮತ್ತಾರನು ಕಾಣೆನಯ್ಯ."

**ಶೂನ್ಯಸಂಪಾದನೆ — ಪುಟ ೭೫**

"ಹೋ ಹೋ ಗುರುವೇ ನಿಮ್ಮ ಕರಕಮಲದಲ್ಲಿ ಉದಯಿಸಿ ಅಂಗದ ಮೇಲೆ ಲಿಂಗವ ಧರಿಸಿ ಆ ಲಿಂಗದಲ್ಲಿ ಅಂಗವಾಗಿ ಪ್ರಾಣಲಿಂಗ ಲಿಂಗ ಪ್ರಾಣವೆಂಬುದ ನಾನು ಕಂಡೆನು ನಿಮಗಾನು ತೋರಲು ಸಮರ್ಥನೆ? ಆಚಾರ ಅಂಗದಮೇಲೆ ನೆಲೆಗೊಂಡು ಇಷ್ಟಲಿಂಗದಲ್ಲಿ ದೃಷ್ಟಿನಟ್ಟು ಭಾವ ಸಂಪನ್ನನಾಗಿಪ್ಪ ನಿಮ್ಮ ಘನವ ನಾನೆತ್ತಬಲ್ಲೆನು? ಅಂಗದಮೇಲೆ ಲಿಂಗ ವುಳ್ಳುದೆಲ್ಲವು ಸಂಗಮನಾಥನೆಂದಲ್ಲಿ ಜಂಗಮಲಿಂಗ ಪ್ರಾಣಿಯಾಗಿಪ್ಪಿರಿ ನೀವು ನಿಮ್ಮ ಘನವ ನಾನೆತ್ತಬಲ್ಲೆನಯ್ಯ? ಲಿಂಗಕ್ಕೆ ಬಂದ ಪದಾರ್ಥವಲ್ಲದೆ ಕೊಳ್ಳೆನೆಂದು ಮನ ಮಿಾಸಲು ತನು ಮಿಾಸಲುಮಾಡಿ ಸರ್ವಾಂಗವೆಲ್ಲವನು

ಪ್ರಾಣದಲ್ಲಿ ಅರ್ಪಿಸಿ ನೀವು ತೊಲಗಿ ನಿರಾಭಾರಿಯಾಗಿ ಪ್ರಸಾದಲಿಂಗ ಪ್ರಾಣಿಯಾಗಿಪ್ಪಿರಿ ನಿಮ್ಮ ಘನವ ನಾನೆತ್ತಬಲ್ಲೆನಯ್ಯ ಅನಾದಿ. ಶಿವಂಗೆ ಆಧಾರವಿಲ್ಲೆಂದು ಅಖಂಡಿತವ ನಿನ್ನ ರೋಮದ ಕೊನೆಯಲ್ಲಿ ಧರಿಸಿ ಮಹಾಲಿಂಗ ಪ್ರಾಣಿಯಾಗಿಪ್ಪಿರಿ ನೀವು ನಿಮ್ಮ ಘನವ ನಾನೆತ್ತಬಲ್ಲೆನಯ್ಯ? ಕೂಡಲಚನ್ನಸಂಗಯ್ಯ ಸಾಕ್ಷಿಯಾಗಿ ನಿಮ್ಮ ಪ್ರಾಣಲಿಂಗ ಸಂಬಂಧದ ಶೆರಗು ಸೋಂಕಿನ ಒಕ್ಕು ಮಿಕ್ಕು ಪ್ರಸಾದಿ ನಾನು ಕಾಣಾ ಸಂಗನ ಬಸವಣ್ಣ."

ಬಸವಣ್ಣನವರು ಜಂಗಮಪ್ರಾಣಿಯಾಗಿದ್ದರೆಂಬುವದಕ್ಕೆ ಹೀಗೆಯೇ ಅನೇಕ ಶರಣರ ಹೇರಳ ವಚನಗಳು ಸಿಗುತ್ತವೆ.

ಅನಾದಿ ವೀರಶೈವಸಾರ ಸಂಗ್ರಹಕಾರರು "ಚರಾರ್ಚನೈಕನಿಷ್ಠಾಯ" ಎಂತಲೂ, ಜಂಗಮ ಸಾಧ್ಯವಾಯಿತ್ತು ಬಸವೇಶ್ವರ ದೇವರಿಗೆಂದು ಗಣದಾಸಿ ವೀರಣ್ಣನವರೂ ಹೇಳಿರುತ್ತಾರೆ.

ಶ್ರೀ ಬಸವಣ್ಣನವರು ೮೮ ಪವಾಡಗಳನ್ನು ಮಾಡಿರುತ್ತಾರೆಂದು ಸುಪ್ರಸಿದ್ಧವಾಗಿ ರುತ್ತದಷ್ಟೆ? ಆ ೮೮ ಪವಾಡಗಳಲ್ಲಿ ಬಸವಣ್ಣನವರು ಜಂಗಮಪ್ರಾಣಿಯಾದ ಕಥೆಯೂ ಇರುತ್ತದೆ. ಇದು ಶಿಂಗಿರಾಜ ಪುರಾಣದ ೧೧ನೆಯ ಸಂಧಿಯಲ್ಲಿಯೂ ಮತ್ತು ಪಂಡಿತಾ ರಾಧ್ಯಚರಿತೆ ಮೊದಲಾದ ಗ್ರಂಥಗಳಲ್ಲಿಯೂ ಇದೆ. ಈ ಕಥೆಯ ಸಾರಾಂಶವನ್ನು ಇಲ್ಲಿ ಕೊಡುವದು ಯುಕ್ತವಾಗಿರುತ್ತದೆ.

ವೀರಶೈವ ಧರ್ಮಕ್ಕನುಸಾರವಾಗಿ ಗುರುವಿಗೆ ತನುಸಂಬಂಧ ರೂಪನ್ನೂ, ಲಿಂಗಕ್ಕೆ ಪ್ರಾಣಸಂಬಂಧಗುಣವಾದ ರುಚಿಯನ್ನೂ, ಜಂಗಮಕ್ಕೆ ಆ ರೂಪು ರುಚಿಗಳನ್ನೂ ಮತ್ತು ಧನಸಂಬಂಧಗುಣವಾದ ತೃಪ್ತಿಯನ್ನೂ ಶ್ರೀ ಬಸವೇಶ್ವರನು ಅರ್ಪಿಸಿ, ಲಿಂಗ ಪ್ರಾಣಿ, ಗುರುಪ್ರಾಣಿ, ಜಂಗಮಪ್ರಾಣಿ ಎಂಬುವ ಬಿರುದುಗಳನ್ನು ಪಡೆದಿದ್ದನು. ಒಂದು ದಿವಸ ಶ್ರೀ ಬಸವೇಶ್ವರನು ಶಿವಯೋಗನಿದ್ರಾಮುದ್ರೆಯಲ್ಲಿರುವಾಗ ಓರ್ವ ಜಂಗಮನು ಅವರಲ್ಲಿಗೆ ಬಂದನು. ಆವಾಗ್ಗೆ ದ್ವಾರಪಾಲಕನು ಶಿವಯೋಗನಿದ್ರಾಮುದ್ರಿತರಾಗಿದ್ದಾರೆ ಕೊಂಚಕಾಲ ತಡೆದುಬನ್ನಿರೆಂದು ಹೇಳಲು, ಆ ಜಂಗಮನು ಚೇಷ್ಟೆಯನ್ನು ಮಾಡುತ್ತ, ಈತನು ಎಂತಹ ಜಂಗಮಪ್ರಾಣಿಯಪ್ಪ ಎಂದು ಹಾಸ್ಯಮಾಡುತ್ತ ಹೊರಟುಹೋದನು. ಆಗ ಬಸವೇಶ್ವರನ ಚಿದ್ರೂಪಕಳೆಯು ಆ ಜಂಗಮದ ಮುಂದೆ ಬಂದು ಅಡ್ಡಬಿದ್ದು ವಂದಿಸುತ್ತಿರಲು ಆ ಜಂಗಮನು ಅದನ್ನು ತಿಳಿಯದೆ ಹೊರಟುಹೋದನು. ಇತ್ತ ಬಸವೇಶ್ವರನ ಪ್ರಾಣವಾದರೂ ಆ ಜಂಗಮನ ಕೂಡ ಹೊರಟುಹೋಗಿತ್ತು. ಪ್ರತಿನಿತ್ಯದ ಸಮಯಕ್ಕೆ ಶ್ರೀ ಬಸವೇಶ್ವರನು ಏಳದಿರಲು ಎಲ್ಲರೂ ಕಳವಳಗೊಂಡು ಗಂಗಾಂಬಿಕೆ ಯವರಿಗೆ ಹೇಳಿಕಳುಹಿಸಿದರು. ಆಗ ಅವರು ಬಂದು ಬಸವಣ್ಣನವರ ಪಾದಗಳನ್ನು ಅಲ್ಲಾಡಿಸಲು ನಿರ್ಜೀವ ಕಳೆಯು ತೋರಿತು. ಗಂಗಾಂಬಿಕೆಯವರು ಶಿವನಾಮಂಗಳಂ ಸ್ಮರಿಸುತ್ತ ಎಲ್ಲ ಶರಣರಿಗೆ ಈ ಸುದ್ದಿಯನ್ನು ಹೇಳಿಕಳುಹಿಸಿದರು. ಚನ್ನಬಸವಣ್ಣನವರು ಜ್ಞಾನದೃಷ್ಟಿಯಿಂದ ವಿಚಾರಿಸಿ, ಕಾವಲುಗಾರರನ್ನು ಕರೆದು, ಯಾರಾದರೂ ಜಂಗಮರು ಬಂದಿದ್ದರೇ ಎಂದು ಕೇಳಿದರು. ಆಗ ಕಾವಲುಗಾರನು ಒಬ್ಬರು ಬಂದಿದ್ದರು, ನಾನು ತಡೆದುಬರಲಿಕ್ಕೆ ಹೇಳಿದೆನು, ಆದರೆ ಅವರು ಚೇಷ್ಟೆಯನ್ನು ಮಾಡುತ್ತ ಹೋದರೆಂದು

ಹೇಳಿದನು. ಆಗ ಚನ್ನಬಸವಣ್ಣನವರು ಆ ಜಂಗಮನನ್ನು ಕರೆಯಲಿಕ್ಕೆ ಹೋದಾಗ್ಗೆ ಆ ಜಂಗಮನೇ ಎದುರಿಗೆ ಬಂದನು. ಆಗ ನಡೆದ ಸಂಗತಿಗಳನ್ನೆಲ್ಲ ಚನ್ನಬಸವಣ್ಣನವರು ಹೇಳಿದರು. ಆ ಜಂಗಮನು ಭಯಕಂಪಿತನಾಗಿ ನಾನು ಎಂತಹ ಅಪರಾಧಕ್ಕೆ ಗುರಿಯಾದೆನಲ್ಲಾ ಎಂದು ವ್ಯಸನಪಡುತ್ತ ಬಂದು ಬಸವೇಶ್ವರಾ, ಬಸವರಾಜನೇ, ಬಸವಣ್ಣನೇ ಎಂದು ಕರೆಯಲು ಆ ಕ್ಷಣದಲ್ಲಿಯೇ ಬಸವೇಶ್ವರನ ಪ್ರಾಣವು ಆ ದೇಹದಲ್ಲಿ ಹೋಗಿ ಸೇರಿ ಶರಣು ಶರಣು ಶ್ರೀಗುರುವೇ ದಯಮಾಡಿಸಬೇಕೆಂದು ಮೇಲಕ್ಕೆದ್ದು ಸಾಷ್ಟಾಂಗ ನಮಸ್ಕಾರಂಗಳಂ ಮಾಡಲು, ಆ ಜಂಗಮನು ಬಸವೇಶ್ವರಾ, ಮಂಗಳ ಮೂರ್ತಿಯೇ ನೀನೇ ಜಂಗಮಪ್ರಾಣಿಯೆಂದು ಹೇಳಲು ಎಲ್ಲರೂ ಆಶ್ಚರ್ಯಪಟ್ಟರು.

ಲಿಂಗಪೂಜೆಗಿಂತಲೂ ಜಂಗಮಪೂಜೆಯು ಶ್ರೇಷ್ಠವಾದುದೆಂದು ವೀರಶೈವ ಸಿದ್ಧಾಂತವು ಹೇಳುವದರಿಂದ ಜಂಗಮವನ್ನು ಬಿಟ್ಟು ಲಿಂಗಪೂಜೆಯಿಲ್ಲ.

ಶ್ರೀ ಬಸವಣ್ಣನವರು—

"ಗುರು ಮುನಿದರೆ ಒಂದು ದಿನ ತಾಳುವೆ, ಲಿಂಗ ಮುನಿದರೆ ದಿನವರೆ ತಾಳುವೆ ಜಂಗಮ ಮುನಿದರೆ ಕ್ಷಣಮಾತ್ರ ತಾಳಿದೆನಾದರೆ ಎನ್ನ ಪ್ರಾಣದ ಹೋಕು ಕೂಡಲಸಂಗಮದೇವಾ."

ಶ್ರೀಬಸವೇಶ್ವರರು ಜಂಗಮ ವಿಷಯದಲ್ಲಿ ಅತ್ಯಂತ ನಿಷ್ಠಾವಂತರಿದ್ದರೆಂಬುವ ಬಗ್ಗೆ ಅವರ ಅನೇಕ ವಚನಗಳೇ ಪ್ರಮಾಣಗಳಾಗಿರುತ್ತವೆ. ವೀರಶೈವ ಸಂಸ್ಕೃತ ಗ್ರಂಥ ಗಳಲ್ಲಿಯೂ ಜಂಗಮದ ಶ್ರೇಷ್ಠತೆಯ ವಿಷಯದಲ್ಲಿ ಅನೇಕ ಪ್ರಮಾಣಗಳಿರುತ್ತವೆ.

**ಲಿಂಗಧಾರಣಚಂದ್ರಿಕಾ — (ಕಾಶಿಯ ಶ್ರೀ ಜಂಗಮವಾಡಿಯ ಮಠದಿಂದ ಅಚ್ಚಾದುದು)**
**ಪುಟ ೩೧೫**

ಲಿಂಗಧಾರಣ ಚಂದ್ರಿಕೆಯ ಕೊನೆಯ ಭಾಗದಲ್ಲಿ ವೀರಶೈವೋತ್ಕರ್ಷ ಪ್ರದೀಪಿಕೆಯು ಇರುತ್ತದೆ. ಅದರ ಕರ್ತೃಗಳು ಗ್ರಂಥಾರಂಭದಲ್ಲಿ—

"ಗುರುಮನಾದಿ ನಿರಂಜನಜಂಗಮಂ ಪರಮ ಸದ್ಗುಣಸೌಖ್ಯ
ಪರಾಯಣಂ ಜಗತಿ ತೋಂಟದ ।
ಸಿದ್ಧಮಹೇಶ್ವರಂ ಪ್ರಥಿತನಾಮಜುಷಂ ಪ್ರಣಮಾಮ್ಯಹಂ ॥
ಲೀಲಾಮೂರ್ತಿರನಾದಿ ಜಂಗಮಮಯಃ ಶ್ರೀತೋಂಟಸಿದ್ಧೇಶ್ವರಃ ।
ಸ್ವೈರೋದ್ಧಾಮ ಕೃಪಾಕಟಾಕ್ಷ ಲಹರೀ ಪ್ರಾಪ್ತೋಪದೇಶೋನ್ನತಿಃ ॥
ಧರ್ಮಾನ್ಸಾಧುಸಮಾರಯನ್ ಸ್ವಭಜಕಾನ್ ಶ್ರೀ ವೀರಶೈವೋಚಿತಾನ್ ।
ಬೋಧಂನೋವಿಮಲಂ ದದಾತು ಮುರಿಗಾ ಶ್ರೀ ಶಾಂತವೀರೋಯತಿಃ ॥

**ಲಿಂಗಧಾರಣಚಂದ್ರಿಕಾ — ಪುಟ ೩೩೮**

"ಲಿಂಗಾಂಗ ಬ್ರಾಹ್ಮಣ ಯತಿನೋ ನಿರಾಭಾರ ಇತಿ ನಿರ್ಣೀಯತೇ ಅತಯೇವ ಜಟೀಮುಂಡೀ ಶಿಖೀವಾಪಿ ಕಾಷಾಯ ವಸನಾನ್ವಿತಃ, ನಿಸ್ಪೃಹೋ ನಿಜಲಿಂಗೈಕ್ಯೋ ಭಿಕ್ಷಾಶೀ ಭಯವರ್ಜಿತಃ, ಕಂಥಾ ಕಮಂಡ ಲುಧರೋಭೂತಿ ರುದ್ರಾಕ್ಷ ಸಂಯುತಃ ದಂಡಕೌಪೀನಧಾರೀ ಚ ನಿರಾಭಾರ ಇತಿ ಸ್ಮೃತಃ, ಇತಿ ಸೂಕ್ಷ್ಮ ತಂತ್ರವಚನೈಃ ನಿರಾಭಾರಿ ವೀರಶೈವ

ಲಕ್ಷಣ ಪ್ರತಿಪಾದನಾತ್ ವಿಶೇಷ ವೀರಶೈವಾಪೇಕ್ಷಯಾ ಚರಜಂಗಮಾದಿ ಶಬ್ದವಾಚ್ಯಃ, ನಿರಾಭಾರಿ ವೀರಶೈವದೇಶಿಕೋತ್ತಮಃ ವಿರಕ್ತತಯಾ ಸರ್ವೋತ್ತಮ ಇತಿ ನಿರ್ವಿವಾದಃ''

ಅಂದರೆ ಲಿಂಗಾಂಗಸಾಮರಸ್ಯಜ್ಞಾನವುಳ್ಳ ಯತಿಗಳಿಗೆ ನಿರಾಭಾರವೆಂದು ನಿರ್ಣಯಿಸಲಾಗಿದೆ. ಆದ್ದರಿಂದಲೇ ಅವರು ಜಟಾಧಾರಿಗಳಾಗಿ ಆಗಲಿ, ಬೋಳುತಲೆವುಳ್ಳವರಾಗಿರಲಿ, ಕಾಷಾಯವಸ್ತ್ರಗಳನ್ನು ಧರಿಸಿಕೊಂಡು ಆಶಾರಹಿತನಾಗಿ ತನ್ನ ಇಷ್ಟಲಿಂಗದಲ್ಲಿ ನಿಷ್ಠೆಯುಳ್ಳವನಾಗಿ ಭಿಕ್ಷಾನ್ನವನ್ನುಣ್ಣುತ್ತ ಭಯರಹಿತನಾಗಿ, ಕಂಥಾ ಕಮಂಡಲು ಮೊದಲಾದವುಗಳನ್ನು ಧರಿಸಿ ಭೂತಿರುದ್ರಾಕ್ಷಿಗಳಿಂದ ಕೂಡಿಕೊಂಡು ಮತ್ತು ದಂಡ ಕೌಪೀನಗಳನ್ನು ಧರಿಸಿದಂಥವನಿಗೆ ನಿರಾಭಾರಿಯೆಂದು ಸೂಕ್ಷ್ಮಾಗಮದಲ್ಲಿ ಹೇಳಿದ ವಚನಗಳಿಂದ ನಿರಾಭಾರಿ ವೀರಶೈವನ ಲಕ್ಷಣವು ಪ್ರತಿಪಾದಿಸಲ್ಪಟ್ಟಿರುವದರಿಂದ ವಿಶೇಷ ವೀರಶೈವನಿಗಿಂತಲೂ ಚರಜಂಗಮಾದಿ ಶಬ್ದವಾಚ್ಯನಾದ ನಿರಾಭಾರಿ ವೀರಶೈವ ದೇಶಿಕೋತ್ತಮನು ವಿರಕ್ತತೆಯುಳ್ಳವನಾದುದರಿಂದ ಎಲ್ಲರಿಗಿಂತಲೂ ಶ್ರೇಷ್ಠನೆಂದೆನ್ನಿಸಿಕೊಳ್ಳುತ್ತಾನೆಂಬುವದು ನಿರ್ವಿವಾದದ ಮಾತಾಗಿರುತ್ತದೆ.

### ಶೈವರತ್ನಾಕರ — ಪುಟ ೩೪೧

ಲಿಂಗಕ್ಷೇತ್ರಂ ಗುರುಸ್ಥಾನಂ ಗುರುಕ್ಷೇತ್ರಂ ತು ಜಂಗಮಃ ।
ಜಂಗಮಸ್ತು ನಿರಾಭಾರೋ ಭಾರಾಭಾರವಿವರ್ಜಿತಃ ॥

ಅಂದರೆ ಲಿಂಗಕ್ಷೇತ್ರವೇ ಗುರುಸ್ಥಾನವು. ಗುರುಕ್ಷೇತ್ರವೇ ಜಂಗಮವು. ಭಾರಾಭಾರದಿಂದ ವರ್ಜಿತವಾದ ಜಂಗಮವೇ ನಿರಾಭಾರವು.

### ವೀರಶೈವ ಧರ್ಮಶಿರೋಮಣಿ — ಪುಟ ೨೨೯

''ವತ್ಸ್ಯತೇ ಗಣನಾಯಕಾಃ ಕ್ಷಿತಿತಲಂ ಗತ್ವಾ ನಿಯುಕ್ತಾ ಮಯಾ। ಸಂಭೂತಾಸ್ಸಕಲಾಸುಜಾತಿಷು ಪುನರ್ಲಿಂಗಾರ್ಚನಾ ತತ್ಪರಾಃ । ಸಂಸ್ಥಾಪ್ಯೋತ್ತಮ ವೀರಶೈವ ಪದವೀಂ ಲೋಕೇ ಹಿತಾರ್ಥಂ ಗತಾಃ। ಮುದ್ರಾ ಪಂಚಕಧಾರಿಣಸ್ತು ವಿಚರಂತ್ಯಂತೇ ಸಮೇಷ್ಯಂತಿ ಮಾಂ। ಸರ್ವಭಾವವಿನಿರ್ಮುಕ್ತಂ ಸರ್ವಸಂಕಲ್ಪನಾತಿಗಂ। ಸರ್ವಶೂನ್ಯ ಪರಾನಂದಂ ಚಿದ್ರೂಪಂ ಜಂಗಮಂಸ್ಮೃತಂ । ಜಗನ್ಮಧ್ಯಸ್ಥಿತಂ ನಿತ್ಯಂ ಜಗದ್ಭಿರ್ವಂದ್ಯತೇ ಸದಾ । ಜರಾಮರಣ ವಿನಿರ್ಮುಕ್ತಂ ಜಕಾರಾಯ ನಮೋ ನಮಃ । ಗಕಾರೋ ಭವಪೂರ್ಣಶ್ಚ ಗಜಾನನ ಪಿತಾಸ್ವಯಂ। ಗಗನವ್ಯಾಪಕಶ್ಚೈವ ಗಕಾರಾಯ ನಮೋ ನಮಃ। ಮಹಾಮಹಾ ಮಹಾತೇಜೋ ಮಹೀತಳವಿಚಾರಕಃ। ಮಹಾಮೂರ್ತಿಗತಧ್ಯಾನಃ ಮಕಾರಾಯ ನಮೋ ನಮಃ । ಸರ್ವಸಂಗಪರಿತ್ಯಾಗೀ ಲಿಂಗಸಂಗೀ ನಿರಂತರಂ। ನಿರ್ದ್ವಂದ್ವ ತಪಸೋವೃಷ್ಟಿಶ್ಚೈತಜ್ಜಂಗಮಲಕ್ಷಣಂ। ಧನೇ ಚ ಧಾನ್ಯತೇ ವಸ್ತ್ರೇ ಸ್ತ್ರೀಷು ಪುಷ್ಪಫಲೇಷು ಚ। ಕಿಂಚಿತ್ ಕಾಮ್ಯಲವೋ ನಾಸ್ತಿ ನಿರಾಶಶ್ಚ ಸ ಜಂಗಮಃ। ಮಾತಾನಾಸ್ತಿ ಪಿತಾನಾಸ್ತಿ ನಾಸ್ತಿನಾಮಕುಲಾನಿ ಚ। ಅಯೋನಿ ಶಂಭುರೂಪತ್ವಾತ್ ಉತ್ತಮಂ ಜಂಗಮಸ್ಥಲಮ್ । ಮುಖೇ ಮಂತ್ರೋ ಹೃದಿಧ್ಯಾನಂ ಪ್ರಾಣಲಿಂಗೇನ ಸಂಯುತಂ। ಅಷ್ಟಮೂರ್ತೇರಧಿಷ್ಠಾನಂ ತಜ್ಜಂಗಮಲಕ್ಷಣಮ್''

ಶ್ರೀ ಬಸವಣ್ಣನವರು ಹೀಗೆಯೇ ಜಂಗಮದ ವಿಷಯಕ್ಕೆ ಅನಂತ ವಚನಗಳನ್ನು ಹೇಳಿರುತ್ತಾರೆ.

"ಎನ್ನಾಪತ್ತು ಸುಖದುಃಖವನಿನ್ನಾರಿಗೆ ಹೇಳುವೆ ಶರಣಸ್ಥಲದವರಿಗೆ ಹೇಳಿದರೆ ಮಚ್ಚರ ಸವತಿ, ಸಕ್ಕರೆ, ಬೇವು, ಬೆಲ್ಲ ಉಂಟೆ? ಇನ್ನಾರಿಗೆ ಹೇಳುವೆ? ಕೂಡಲಸಂಗಮದೇವಾ ಜಂಗಮವಾಗಿ ಬಂದು ಎನ್ನ ಮನದ ಸೂತಕವ ಕಳೆಯಾ."

ಜಂಗಮವಾಗಿ ಬಂದು ಎನ್ನ ಮನದ ಸೂತಕವನ್ನು ಕಳೆಯೆಂದು ಬಸವಣ್ಣನವರು ಪರಿಪರಿಯಾಗಿ ಸಂಗನನ್ನು ಬೇಡಿಕೊಳ್ಳುತ್ತಾರೆ.

"ಅಯ್ಯಾ ನಿಮ್ಮ ದೇವರೆಂದು ಪೂಜಿಸಲಾಗದಯ್ಯಾ. ಮಿಾನಜ ರೋಮಜ ಮಹಾಮುನಿಗಳ ಲಯವ ಮಾಡಿದುದ ನಾ ಬಲ್ಲೆನಾಗಿ, ಅಯ್ಯಾ ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ. ನವಕೋಟಿ ಬ್ರಹ್ಮರಿಗೆ ಪ್ರಳಯವಮಾಡುವದ ನಾ ಬಲ್ಲೆನಾಗಿ, ಅಯ್ಯಾ ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ. ದಶಕೋಟಿ ನಾರಾಯಣರಿಗೆ ಮರಣವ ಮಾಡುವುದ ನಾ ಬಲ್ಲೆನಾಗಿ, ಅಯ್ಯಾ ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ. ಅನಂತಕೋಟಿ ರುದ್ರರಿಗೆ ಲಯವ ಮಾಡುವದ ನಾ ಬಲ್ಲೆನಾಗಿ, ಅಯ್ಯಾ ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ. ಎನ್ನನೇಳೇಳು ಭವಕ್ಕೆ ತಂದಲ್ಲಿ ಆನು ಉಭಯ ಲಿಂಗಜಂಗಮದ ಮರೆಹೊಕ್ಕು ಭವಂ ನಾಸ್ತಿಯಾಗಿ ಬದುಕಿದೆನಯ್ಯಾ ಕೂಡಲಸಂಗಮದೇವಾ."

ಜಂಗಮವೇ ನನಗೆ ಗತಿಯೆಂದು ಬಸವಣ್ಣನವರ ಸಿದ್ಧಾಂತವಾಗಿರುತ್ತದೆ. ಮತ್ತೊಂದು ವಚನದಲ್ಲಿ—"ಲಿಂಗವ ಕರಮುಟ್ಟಿ ಜಂಗಮವ ಶಿರಮುಟ್ಟಿ" ಎಂದು ಹೇಳುತ್ತ, ಶಿವಭಕ್ತರೇ ಅಧಿಕರು ನೋಡಯ್ಯ ಇದಕ್ಕೆ ಅಧಿಕವಾಗಿ ಜಂಗಮವ ಕಂಡೆ, "ಜಂಗಮ ವಿರಹಿತ ಲಿಂಗಾರ್ಚನೆ ಮಳಲಲೆರೆದ ಜಲದಂತೆ ಜಂಗಮ ಸನ್ನಿಹಿತ ಲಿಂಗಾರ್ಚನೆ ಇದೇ ಭಕ್ತಿಗೆ ಪಥವಯ್ಯಾ. ಜಂಗಮಪ್ರಸಾದ ಭೋಗೋಪಭೋಗವು ಎನಗಿದೇ ಲಿಂಗಾರ್ಚನೆ ಬೇರೆ ಮತ್ತೊಂದನರಿದೆನಾದರೆ ಕೂಡಲಸಂಗಮದೇವ ನರಕದಲ್ಲಿಕ್ಕುವ."

ಇದರಂತೆಯೇ ಶ್ರೀ ಬಸವಣ್ಣನವರೂ, ಉಳಿದ ಶರಣರೂ ಕೂಡ ಜಂಗಮದ ಬಗ್ಗೆ ಬಹಳ ವಚನಗಳನ್ನು ಹೇಳಿದ್ದಾರೆ. ಶ್ರೀ ಬಸವಣ್ಣನವರು ಜಂಗಮಪ್ರಾಣಿಗಳಾಗಿ ಕೀರ್ತಿಯನ್ನು ಗಳಿಸಿದ್ದಾರೆ.

## ಹನ್ನೆರಡನೆಯ ಪ್ರಕರಣ

### ಬಸವಣ್ಣನವರೂ ಜಾತಿಯ ವಾದವೂ

ಮಹಾನುಭಾವರಾದ ಬಸವಣ್ಣನವರು ಮಾಡಿದ ಮಹತ್ವದ ಕಾರ್ಯಗಳಲ್ಲಿ ಜಾತಿಯ ಉಚ್ಚಾಟನೆಯ ಕಾರ್ಯವು ಅತ್ಯಂತ ಪ್ರಾಮುಖ್ಯವಾಗಿರುತ್ತದೆ. ಅವರು ಶಿವಭಕ್ತರಾದವರನ್ನೆಲ್ಲ ಸಮಾನಭಾವನೆಯಿಂದ ಕಂಡು ಲೋಕದಲ್ಲಿ ತಮ್ಮ ಹೃದಯ ವೈಶಾಲ್ಯವನ್ನು ತೋರಿಸಿಕೊಟ್ಟರು. ಲಿಂಗವಂತರನ್ನು ಕಂಡರೆ ಬಹಳ ಪ್ರೀತಿಯಿಂದ ಆದರಿಸುತ್ತಿದ್ದರು. ಆದ್ದರಿಂದಲೇ "ಅಂಗದಮೇಲೆ ಲಿಂಗವಿದ್ದವರಿಗೆ ಸಂಗಮನಾಥನೆಂಬೆ" "ತತ್ಪದಂತೆ ನಡೆಯುವವರಿಗೆ ತೊತ್ತಾಗಿರುವೆ" ಎಂದು ಉದ್ಘೋಷಿಸಿ, ಅದರಂತೆ ಕಾರ್ಯಗಳನ್ನು ಮಾಡಿ ಲೋಕಕ್ಕೆ ತೋರಿಸಿಕೊಟ್ಟರು. ಲಿಂಗವಂತರನ್ನು ಕಂಡರೆ ಅವರೆಷ್ಟು ಪ್ರೇಮದಿಂದ ಹಿಗ್ಗುತ್ತಲಿದ್ದರೆಂಬುವದಕ್ಕೆ ಮೇಲೆ ಬರೆದ ಅವರ ವಚನವೇ ಸಾಕ್ಷಿಯಾಗಿರುತ್ತದೆ. ಇಂತಹ ಅನೇಕ ವಚನಗಳಿಂದ ಅವರು ವೀರಶೈವರನ್ನು ಸಮಾನರೀತಿಯಿಂದ ನಡೆಯಿಸಿಕೊಂಡು ತಾವೂ ನಡೆದದ್ದು ತಿಳಿದುಬರುತ್ತದೆ. ತಮ್ಮ ಮತ್ತೊಂದು ವಚನದಲ್ಲಿ—

> "ಹಡೆದೊಡವೆ ವಸ್ತುವನು ಮೃಡಭಕ್ತರಿಗಲ್ಲದೆ ಕಡಬಡ್ಡಿಯ ಕೊಡಲಾಗದು ಬಂದರೊಂದು ಲೇಸು, ಬಾರದಿದ್ದರೆರಡು ಲೇಸು, ಅಲ್ಲಿದ್ದರೆಯೂ ಲಿಂಗಕ್ಕೆ ಬೋನ ಇಲ್ಲಿದ್ದರೆಯೂ ಲಿಂಗಕ್ಕೆ ಬೋನ ಲಿಂಗದೊಡವೆ ಲಿಂಗಕ್ಕೆ ಸಾರಿತ್ತಾಗಿ ಬಂದಿತ್ತೆಂಬ ಪರಿಣಾಮವಿಲ್ಲ, ಬಾರದೆಂಬ ದುಃಖವಿಲ್ಲ, ಇದು ಕಾರಣ ಕೂಡಲಸಂಗಮದೇವಾ, ನಿಮ್ಮ ಶರಣರಿಗಲ್ಲದೆ ಕಡಬಡ್ಡಿಯ ಕೊಡಲಾಗದು."

ಷಡಧ್ವಶೋಧನಾಪೂರ್ವಕವಾಗಿ ಲಿಂಗಧಾರಣವನ್ನು ಹೊಂದಿದವರಲ್ಲಿ ಜಾತಿಯ ಭೇದಗಳಿಲ್ಲವೆಂದು ಬಸವಣ್ಣನವರು ತಮ್ಮ ನೂರಾರು ವಚನಗಳಲ್ಲಿ ಹೇಳಿರುತ್ತಾರೆ. ನುಡಿಯಂತೆ ನಡೆದು ಅದ್ಭುತ ಕ್ರಾಂತಿಯನ್ನು ಮಾಡಿ ವೀರಶೈವ ಸಮಾಜಕ್ಕೊಂದು ನೂತನ ಕಳೆಯನ್ನುಂಟುಮಾಡಿದರೆಂದು ವೀರಶೈವ ಧರ್ಮಗ್ರಂಥಗಳಲ್ಲಿ ಘಂಟಾಘೋಷವಾಗಿ ಹೇಳಲಾಗಿದೆ.

ವೀರಶೈವನಿಗೆ ಷಟ್‌ಸ್ಥಲಗಳಿರುವದರಿಂದ ಷಡ್ಲಿಂಗಗಳೂ ಉಂಟು. ಆದ್ದರಿಂದ ಗುರುಕೃಪೆಯಿಂದ ಇವನಿಗೆ ಲಿಂಗಧಾರಣವಾಗುವದರಿಂದ ಇವನ ಶರೀರವೆಲ್ಲ ಲಿಂಗಮಯವಾದುದಾಗಿರುತ್ತದೆ. ಈ ವಿಷಯದಲ್ಲಿ ಅನೇಕ ಪ್ರಮಾಣಗಳುಂಟು.

ದೇವರದಾಸಿಮಾರ್ಯರು—

> "ಉರಿವ ಕೆಂಡದಮೇಲೆ ತೃಣವ ತಂದಿರಿಸಿದರೆ ಆ ತೃಣವನಾಕಿಚ್ಚು ನುಂಗಿದಂತೆ ಗುರುಚರಣದಮೇಲೆ ತನುವೆಂಬ ತೃಣವ ತಂದಿರಿಸಿದರೆ ಆತನ ಸರ್ವಾಂಗವೆಲ್ಲವೂ ಲಿಂಗ ಕಾಣಾ ರಾಮನಾಥ."

ಸಕಳೇಶಮಾದರಸರು —

"ಜ್ಯೋತಿ ಮುಟ್ಟಿದ ಬತ್ತಿಯೆಲ್ಲ ಜ್ಯೋತಿಯಪ್ಪವಯ್ಯ ಸಾಗರ ಮುಟ್ಟಿದ ನದಿಗಳೆಲ್ಲ ಸಾಗರವಪ್ಪವಯ್ಯ ಪ್ರಸಾದ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪವಯ್ಯ ಲಿಂಗ ಮುಟ್ಟಿದ ಅಂಗವೆಲ್ಲ ಲಿಂಗವಪ್ಪವಯ್ಯ ಸಕಳೇಶ್ವರದೇವ ನಿಮ್ಮ ಮುಟ್ಟಿದವರೆಲ್ಲ ನಿಮ್ಮಂತಿಪ್ಪರಯ್ಯ."

ವೇದಾಂತಸಾರ, ವೀರಶೈವ ಚಿಂತಾಮಣಿ ಮೊದಲಾದ ಗ್ರಂಥಗಳಲ್ಲಿ ಒಂದೊಂದು ಪ್ರಕರಣ — "ಸರ್ವಾಂಗ ಲಿಂಗಸಾಹಿತ್ಯ" ನಿರೂಪಣವನ್ನು ವಿಸ್ತಾರವಾಗಿ ಮಾಡಿರುತ್ತಾರೆ.

### ಶಿವಾನುಭವಸೂತ್ರ — ಪುಟ ೮೧

"ದೇಹದ ಗುದ, ಗುಹ್ಯ, ನಾಭಿ, ಹೃದಯ, ಕಂಠ, ಭ್ರೂಮಧ್ಯ ಇವು ಆರು ಸ್ಥಲಗಳು. ಕ್ರಮವಾಗಿ ಆಧಾರ, ಸಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾ ಎಂಬ ಆರು ಚಕ್ರಗಳ ಸ್ಥಾನವಾಗಿರುವವು. ಈ ಆಧಾರಾದಿ ಸ್ಥಾನಗಳಲ್ಲಿಯೇ ಕ್ರಮವಾಗಿ ನಕಾರಾದಿ ನ, ಮ, ಶಿ, ವಾ, ಯ, ಓಂ ಎಂಬುವ ಪ್ರಣಮಗಳು. ಆಚಾರ ಲಿಂಗ, ಗುರುಲಿಂಗ, ಶಿವಲಿಂಗ, ಚರಲಿಂಗ, ಪ್ರಸಾದಲಿಂಗ, ಮಹಾಲಿಂಗ ರೂಪಕ ಗಳಾಗಿರುವವು. ಆಧಾರಚಕ್ರ ಕಮಲವು ನಾಲ್ಕು ದಳಗಳುಳ್ಳದ್ದು. ಮಣಿಪೂರಕವು ಹತ್ತು ದಳಗಳುಳ್ಳದ್ದು. ಅನಾಹತವು ಹನ್ನೆರಡು ದಳಗಳುಳ್ಳದ್ದು. ವಿಶುದ್ಧಿ ಹದಿನಾರು ದಳಗಳುಳ್ಳದ್ದು. ಆಜ್ಞಾ ಚಕ್ರ ಎರಡು ದಳಗಳುಳ್ಳದ್ದು. ಚಕ್ರದ ಪ್ರತಿಯೊಂದು ದಳದಲ್ಲಿಯೂ ಅಂದರೆ ಆಧಾರದಲ್ಲಿ ವ ಶ ಷ ಸ, ಸ್ವಾಧಿಷ್ಠಾನದಲ್ಲಿ ಬ ಭ ಮ ಯ ರ ಲ, ಮಣಿಪೂರಕದಲ್ಲಿ ಡ ಢ ಣ ತ ಥ ದ ಧ ನ, ಅನಾಹತದಲ್ಲಿ ಕ ಖ ಗ ಘ ಙ ಚ ಛ ಜ ಝ ಞ ಟ ಠ, ವಿಶುದ್ಧಿಯಲ್ಲಿ ಅ ಆ ಇ ಈ ಉ ಊ ಋ ೠ ಎ ಏ ಐ ಒ ಓ ಔ ಅಂ ಅಃ, ಆಜ್ಞಾ ಚಕ್ರದಲ್ಲಿ ಹಂ ಕ್ಷಂ ಎಂಬ ಪ್ರಣಮಗಳಿರುವವೆಂದು ಆಗಮಾದ್ಯನೇಕ ಗ್ರಂಥಗಳಲ್ಲಿ ಉಕ್ತವಾಗಿರುತ್ತವೆ. ಈ ಎಲ್ಲ ವಿಷಯಗಳನ್ನಾಲೋಚನೆ ಮಾಡಿದ್ದಾದರೆ ವೀರಶೈವನ ಶರೀರವು ಪ್ರಣಮಮಯವಾಗಿಯೂ ಇರುತ್ತದೆ. ಮತ್ತು

> ಓಂಕಾರೋ ವದನಂ ದೇವಿ ನಮಃಕಾರೌ ಭುಜದ್ವಯಂ ।
> ಶಿಕಾರೋ ದೇಹಮಧ್ಯಸ್ತು ವಾಯಕಾರೌ ಪದದ್ವಯಂ ॥

ಎಂಬುವ ಪ್ರಮಾಣದಿಂದ ವೀರಶೈವನ ಮುಖವೇ ಓಂಕಾರವು, ಎರಡು ಭುಜಗಳೇ ನಮಃಕಾರಗಳು, ದೇಹಮಧ್ಯವೇ ಶಿಕಾರ, ಎರಡು ಪಾದಗಳೇ ವಾ, ಮಕಾರಗಳೆಂದು ಹೇಳಿರುವದರಿಂದ ವೀರಶೈವನ ಶರೀರವು ಷಡಕ್ಷರ ಮಂತ್ರಮಯವಾಗಿರುತ್ತದೆಂಬುದು ಸ್ಪಷ್ಟವಾದುದು.

ಹೀಗೆ ವೀರಶೈವನ ಶರೀರವು ಲಿಂಗಮಯವೂ, ಮಂತ್ರಮಯವೂ ಆಗಿರುವದರಿಂದ ವೀರಶೈವನು ಶಿವಸ್ವರೂಪನೇ ಆಗಿರುವನೆಂಬುವದು ಸಿದ್ಧಾಂತವಾದುದು. ವೀರಶೈವನು ಶಿವಸ್ವರೂಪನಾಗಿರುತ್ತಾನೆಂಬುವದಕ್ಕೆ ಬೇಕಾದಷ್ಟು ಪ್ರಮಾಣಗಳು ಸಿಗುತ್ತವೆ. ಯಾವ ಸ್ಥಳದಲ್ಲಿಯೇ ಇರಲಿ ಅವನು ಆಯಾಯ ಸ್ಥಳಕ್ಕನುಗುಣವಾಗಿ ಪವಿತ್ರಾತ್ಮನಾಗಿರುತಾನೆಂಬುವದರಲ್ಲಿ ಸಂಶಯವಿರುವದಿಲ್ಲ.

ಇಂತಹ ವೀರಶೈವರಲ್ಲಿ ಜಾತಿಭೇದಗಳಾಗಲೀ, ವರ್ಣಗಳಾಗಲೀ ಇರುವದಿಲ್ಲ. ಇಲ್ಲಿ ಜಾತಿಭೇದವಿಲ್ಲವೆಂಬುವ ಬಗ್ಗೆ ಕೆಲವು ಪ್ರಮಾಣಗಳನ್ನು ನೋಡೋಣ—

**ಸೂಕ್ಷ್ಮತಂತ್ರ – ಪಂಚಮಪಟಲ, ಪುಟ ೭೭** (ಕ್ರೌನ್ ಮುದ್ರಾಕ್ಷರಶಾಲಾ, ಮೈಸೂರು)

ಮಲ್ಲಿಂಗ ಧಾರಿಣೋ ಯೇ ಚ ಭೂತಿ ರುದ್ರಾಕ್ಷ ಸಂಯುತಾಃ ॥ ೫೬ ॥
ಯೋ ವೈಮದೇಕ ಶರಣಾಸ್ತಾನ್ ದೃಷ್ಟ್ವಾ ಪ್ರಣಮೇನ್ಮುದಾ ।
ಉಪಚರ್ಯ ಚ ತಾನ್ ಭಕ್ತೋ ಯಥಾಶಕ್ತಿ ಸಮರ್ಚಯೇತ್ ॥ ೫೭ ॥
ತೋಷಯೇತ್ಸತತಂ ಭಕ್ತ್ಯಾ ಭೋಜನಾಚ್ಛಾದನಾದಿಭಿಃ ।
ವೀರಶೈವಃ ಕ್ರಮೇಣೈವ ಮಾಚರನ್ಮಮಶಾಸನಮ್ ॥ ೫೮ ॥
ಪ್ರಾಪ್ನೋತಿ ಸುಖಮಾರೋಗ್ಯಮಿಹಾಮುತ್ರ ಸು ದುರ್ಲಭಮ್ ।
ಅನೇಕ ಜನ್ಮಸಂಪ್ರಾಪ್ತಂ ಕರ್ಮಚಾಗಾಮಿಕಂ ತಥಾ ॥ ೫೯ ॥
ಪ್ರಾರಬ್ಧಮಪಿ ಚೈತಸ್ಯ ತತ್ಕ್ಷಣಾದೇವ ನಶ್ಯತಿ ।
ಬ್ರಹ್ಮರಾಕ್ಷಸ ಭೇತಾಳ ಕೂಷ್ಮಾಂಡಾದ್ಯಾಃ ಸುದಾರುಣಾಃ ॥ ೬೦ ॥
ವೀರಮಾಹೇಶ್ವರಂ ದೃಷ್ಟ್ವಾ ಪಲಾಯಂತೇ ಭಯಾತುರಾಃ ।
ನಾನಾ ವಿಧಾನಿ ಕಾಷ್ಠಾನಿ ವಹ್ನಿಯೋಗಾದ್ಯಥೈಕತಾಮ್ ॥ ೬೧ ॥
ತಥಾನೇಕವಿಧಾಮರ್ತ್ಯಾ ಗುರುತಃ ಶಿವತಾಮಿಯುಃ ।
ಕಾಂಚನಂ ರಜತಂ ತಾಮ್ರಂ ರಸಯೋಗಾತ್ಸುವರ್ಣತಾಂ ॥ ೬೨ ॥
ಯಥಾ ಶಿವಜ್ಞಾನ ರಸಾಚ್ಛೂದ್ರಾದಿಃ ಶಿವತಾಂ ವ್ರಜೇತ್ ।
ಯಸ್ಯೈವಂ ಶಾಂಭವೀದೀಕ್ಷಾ ಜಾತಾ ಗುರು ಕೃಪಾವಶಾತ್ ॥ ೬೩ ॥
ಪೂರ್ವಜಾತ್ಯಾದಿಕಂ ತಸ್ಯ ನಸ್ಮರೇತ್ಪ್ರಾಕೃತಂ ಹಿ ತತ್ ।
ಅಪ್ರಾಕೃತಸ್ಯ ಭಕ್ತಸ್ಯ ಗುರುಹಸ್ತಾ ಮಲಾಂಬುಜಾತ್ ॥ ೬೪ ॥
ಪುನರ್ಜಾತಸ್ಯಾತ್ಮ ಜನ್ಮಜಾತ್ಯಾದಿ ನ ಚ ಕಲ್ಪಯೇತ್ ।
ಪಾಷಾಣಾದಿ ಕೃತಂ ಲಿಂಗಂ ಯದ್ವತ್ಪೂಜ್ಯಂ ಪ್ರತಿಷ್ಠಿತಮ್ ॥ ೬೫ ॥
ನೀಚವಂಶೋದ್ಭವಶ್ಚಾಪಿ ಭಕ್ತಶ್ಚೇದೀಶ್ವರೇ ತಥಾ ।
ಭಕ್ತಸ್ಯ ಪ್ರಾಕ್ತನಂ ಜನ್ಮ ನಾಮಜಾತ್ಯಾದಿಕಂ ಚ ಯತ್ ॥ ೬೬ ॥
ಪೃಚ್ಛೇದ್ವಾ ಕಥಯೇದ್ವಾಪಿ ಸ ವೈಪಾತಕಿನಾಂ ವರಃ ।
ತಸ್ಮಾತ್ಸರ್ವಪ್ರಯತ್ನೇನ ಮಮ ಲಿಂಗಾಂಗಸಂಗಿನಾಂ ॥ ೬೭ ॥
ಮಾಮೇವ ನಮತೇ ಯಸ್ತು ಸೋಪಿ ಮುಚ್ಯೇತ ಬಂಧನಾತ್ ।
ಯಸ್ತು ಲಬ್ಧ್ವಾಗುರೋರ್ಮಂತ್ರಂ ಜಪೇಲ್ಲಿಂಗಂ ಚ ಪೂಜಯೇತ್ ॥ ೬೮ ॥
ವೀರಶೈವ ಪರೋದೇವೀ ಸತ್ಯಂ ನ ಪುರುಷೋಭುವಿ ।

ಅಂದರೆ— ಯಾರು ಲಿಂಗವನ್ನೂ, ವಿಭೂತಿ ರುದ್ರಾಕ್ಷೆಗಳನ್ನೂ ಧರಿಸಿರುತ್ತಾರೆಯೋ, ನನ್ನಲ್ಲಿಯೇ ಅಚಲವಾದ ಭಕ್ತಿಯಿಂದ ನನಗೆ ಶರಣಾಗತರಾಗಿರುತ್ತಾರೆಯೋ ಅಂಥವರನ್ನು ಕಂಡಕೂಡಲೇ ನಮಸ್ಕಾರಾದಿಗಳನ್ನು ಮಾಡಬೇಕು. ಭಕ್ತರಾದವರು ಲಿಂಗಧಾರಿಗಳನ್ನು ತನ್ನ ಶಕ್ತಿಗನುಸಾರವಾಗಿ ಉಪಚರಿಸಿ ಅರ್ಚಿಸಬೇಕು. ಮತ್ತು ಭೋಜನಾದಿಗಳಿಂದ ಸಂತೋಷಗೊಳಿಸಬೇಕು. ವೀರಶೈವನಾದವನು ಕ್ರಮವಾಗಿ ನನ್ನ ಶಾಸನವನ್ನು ಆಚರಣೆಯಲ್ಲಿ ತಂದರೆ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಸುಖವನ್ನು ಹೊಂದುವನು. ಈ ಕ್ರಮವು ಅನೇಕ ಜನ್ಮಗಳಿಂದ ಬಂದಂಥ ಕರ್ಮವನ್ನಾಗಲೀ,

ಪ್ರಾರಬ್ಧವನ್ನಾಗಲೀ ತತ್ಕಾಲದಲ್ಲಿಯೇ ನಾಶಮಾಡಿಬಿಡುವದು. ಬ್ರಹ್ಮರಾಕ್ಷಸ ಮೊದಲಾದ ಕ್ರೂರಗಳಾದ ಪ್ರಾಣಿಗಳು ವೀರಮಾಹೇಶ್ವರನನ್ನು ನೋಡಿ ಭಯಾಕುಲಗಳಾಗಿ ಪಲಾಯನವನ್ನು ಮಾಡುತ್ತವೆ.

ಅನೇಕ ಪ್ರಕಾರಗಳಾದ ಕಟ್ಟಿಗೆಗಳು ಬೆಂಕಿಯ ಸಂಪರ್ಕದಿಂದ ಹೇಗೆ ಏಕತ್ವವನ್ನು ಹೊಂದುತ್ತವೆಯೋ ಅದರಂತೆಯೇ ಅನೇಕಪ್ರಕಾರರಾದ ಮಾನವರು ಗುರುವಿನಿಂದ ಶಿವತ್ವವನ್ನು ಪಡೆಯುವರು. ಬಂಗಾರ, ಬೆಳ್ಳಿ, ತಾಮ್ರ, ಸೀಸ, ಹಿತ್ತಾಳೆ ಮೊದಲಾದ ಧಾತುಗಳು ರಸದ ಸಂಯೋಗದಿಂದ ಸುವರ್ಣತ್ವವನ್ನು ಹೊಂದುವಂತೆ ಶಿವಜ್ಞಾನ ರಸದಿಂದ ಶೂದ್ರಾದಿಗಳೂ ಕೂಡ ಶಿವತ್ವವನ್ನು ಹೊಂದುತ್ತಾರೆ.

ಯಾವ ಮನುಷ್ಯನಿಗೆ ಗುರುಕೃಪೆಯಿಂದ ಶಾಂಭವೀ ದೀಕ್ಷೆಯು ಆಗುವದೋ ಅಂತಹ ಮನುಷ್ಯನ ಪೂರ್ವಕಾಲದ ಜಾತಿಯೇ ಮೊದಲಾದವುಗಳನ್ನು ಪ್ರಾಕೃತರಂತೆ ಸ್ಮರಿಸಕೂಡದು. ಅಪ್ರಾಕೃತನಾದ ಭಕ್ತನು ಗುರುಗಳ ಹಸ್ತವೆಂಬುವ ನಿರ್ಮಲ ಕಮಲದಿಂದ ಪುನರ್ಜಾತನಾದಕಾರಣ ಜನ್ಮಜಾತ್ಯಾದಿಗಳ ಕಲ್ಪನೆಯು ಇರುವದಿಲ್ಲ. ಪಾಷಾಣಾದಿಗಳಿಂದ ಮಾಡಿದ ಲಿಂಗವು ಪ್ರತಿಷ್ಠಿಸಲ್ಪಟ್ಟರೆ, ಲೋಕದಲ್ಲಿ ಅದು ಹೇಗೆ ಪೂಜ್ಯವಾಗುತ್ತದೆಯೋ ಅದರಂತೆಯೇ ನೀಚವಂಶದಲ್ಲಿ ಹುಟ್ಟಿದ ಭಕ್ತನೂ ಕೂಡ ಶಿವದೀಕ್ಷೆಯನ್ನು ಹೊಂದಿದರೆ ಪೂಜ್ಯನಾಗುತ್ತಾನೆ. ಇಂತಹ ಭಕ್ತನ ಪೂರ್ವಕಾಲದ ಜಾತಿ, ಜನನ ಮೊದಲಾದ ವಿಷಯುಗಳನ್ನು ಯಾವನಾದರೂ ಕೇಳಿದರೆ ಅಥವಾ ಅವನ ವಿಷಯುವನ್ನು ಆಡಿಕೊಂಡರೆ ಅವನು ಪಾತಕಿಗಳಲ್ಲಿ ಶಿರೋಮಣಿಯಾಗುತ್ತಾನೆ. ಆದ್ದರಿಂದ ಎಲ್ಲ ತರಹದ ಪ್ರಯತ್ನದಿಂದಲೂ ನನ್ನ ಲಿಂಗಾಂಗಸಂಗಿಗಳನ್ನು ನನ್ನಂತೆಯೇ ಅಥವಾ ನನ್ನನ್ನಾಗಿಯೇ ತಿಳಿಯುತ್ತಾನೆಯೋ ಅವನು ಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಆದ್ದರಿಂದ ಎಲೌ ದೇವಿಯೇ, ವೀರಶೈವನಿಗಿಂತ ಅಧಿಕನಾದವನು ಈ ಲೋಕದಲ್ಲಿಲ್ಲ ಎಂದು ಪರಮೇಶ್ವರನು ತನ್ನ ಅರ್ಧಾಂಗಿನಿಯಾದ ಮಹಾದೇವಿಗೆ ಹೇಳಿರುತ್ತಾನೆ.

**ಪಾರಮೇಶ್ವರಾಗಮ — ಪ್ರಥಮಪಟಲ, ಪುಟ ೧೧೪** (ತಂತ್ರಸಂಗ್ರಹ)

ಮಮಯೋಧಾರಯೇಲ್ಲಿಂಗಂ ಯಥೋಕ್ತಂ ಗುರುಣಾಶಿವೇ ।
ಚಂಡಾಲಸ್ಪೃಷ್ಟದೋಷೋಪಿ ಸ್ಮರತೋ ನ ಶೃತಿಕ್ಷಣಾತ್ ॥ ೫೨ ॥

ನ ತಸ್ಯ ಜಾತಿಭೇದೋಸ್ತಿ ನ ಶುಚ್ಯಶುಚಿಕಲ್ಪನಾ ।
ನ ಸ್ಪೃಷ್ಟಿರ್ನಾಪಿವಾಶುದ್ಧಿಃ ಸರ್ವಂ ಶಿವಮಯಂ ಯತಃ ॥ ೫೩ ॥

ಭುಕ್ತ್ವಾವಶಿಷ್ಟಪಾತ್ರಂ ಯತ್ತದುಚ್ಛಿಷ್ಟಧಿಯಾಶಿವೇ ।
ಕ್ಷಾಲಯೇತ್ಶಿವಯೋಗೀ ಯಃ ಸಯಾತಿ ನರಕಂ ಧೃವಂ ॥ ೫೪ ॥

ನ ಸೃಷ್ಟಿರ್ನರಜೋದೋಷೋ ನ ಸ್ತ್ರೀಬಾಲಾದಿ ಕಲ್ಪನಾ ।
ನ ಜನ್ಮಮರಣಂ ಶೌಚಂ ನ ಸ್ನಾನಾದೇರ್ವಿಧೇಯತಾ ॥ ೫೫ ॥

ಬ್ರಾಹ್ಮಣಾಃ ಕ್ಷತ್ರಿಯಾಃ ವೈಶ್ಯಾಃ ಶೂದ್ರಾಯೇಚಾನ್ಯಜಾತಯಃ ।
ಲಿಂಗಧಾರಣಮಾತ್ರೇಣ ಶಿವಾಯೇವ ನ ಸಂಶಯಃ ॥ ೫೬ ॥

ಸ್ತ್ರೀಯೋ ಬಾಲಾಸ್ತಥಾ ವೃದ್ಧಾಃ ಖಂಜಾಃ ಕುಬ್ಜಾಂಧಪಂಗವಃ ।
ಉನ್ಮತ್ತಾಬಧಿರಾಃ ಕಾಣಾಃ ಶಠಾಧೂರ್ತಾಶ್ಚ ವಂಚಕಾಃ ॥ ೫೭ ॥

ಚೋರಾಜಾರಾಸ್ತಥಾ ವೇಶ್ಯಾ ಆಚಾಂಡಾಲಾಂತ ಸಂಭವಾಃ ।
ಮಲ್ಲಿಂಗಧಾರಣಾದೇವ ಮದ್ರೂಪಾ ಏವತೇ ಶಿವೇ ॥ ೫೮ ॥

ನ ಬಾಲವೃದ್ಧಭೇದೋಽಸ್ತಿ ನಮಸ್ಕಾರಾದಿ ಪೂಜನೇ ।
ಸರ್ವೇಽಪಿ ವಂದನೀಯಾಹಿ ವಿಧವಾಃ ಪುಷ್ಪಿಣೀಮುಖಾಃ ॥ ೫೯ ॥

ಯಸ್ಯಾಸ್ತಿ ಭಕ್ತಿರೀಶಾನಿ ವೀರಶೈವ ಮತಾಶ್ರಯೇ ।
ಭಕ್ತಿಮಾತ್ರ ಪವಿತ್ರಾಹಿ ಸರ್ವಯೇ ವಾಧಿಕಾರಿಣಃ ॥ ೬೦ ॥

ಅಂದರೆ–ಗುರುವಿನಿಂದ ಶಾಸ್ತ್ರೋಕ್ತವಾಗಿ ಯಾವಾತನಿಗೆ ಲಿಂಗಧಾರಣವಾಗಿರುತ್ತದೆಯೋ ಅವನಿಗೆ ಚಂಡಾಲಸ್ಪರ್ಶದಿಂದುಂಟಾದ ದೋಷವು ತತ್ಕಾಲದಲ್ಲಿಯೇ ನಾಶವಾಗುವದು. ಅವನಿಗೆ ಜಾತಿಯು ಭೇದವಿರುವದಿಲ್ಲ. ಶುಚಿ, ಅಶುಚಿಗಳ ಕಲ್ಪನೆಗಳೂ ಕೂಡ ಇರುವದಿಲ್ಲ. ಎಲ್ಲವೂ ಶಿವಮಯವೇ ಆಗುತ್ತದೆ. ಶಿವಯೋಗಿಯಾದವನು ತಾನು ಊಟಮಾಡಿದ ಪಾತ್ರೆಯನ್ನು ಉಚ್ಛಿಷ್ಟವೆಂದು ತಿಳಿದು ಅದನ್ನು ತೊಳೆದರೆ ಅವನು ನರಕವನ್ನು ಹೊಂದುತ್ತಾನೆ. ಸ್ಪರ್ಶದೋಷವಾಗಲೀ, ರಜೋದೋಷವಾಗಲೀ, ಸ್ತ್ರೀ ಬಾಲಾದಿ ಕಲ್ಪನೆಯಾಗಲೀ ಜನ್ಮಮರಣಾದಿ ಶೌಚಕರ್ಮಗಳಿಲ್ಲ. ಸ್ನಾನಾದಿಗಳಲ್ಲಿ ವಿಧೇಯತ್ವವಿಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ಉಳಿದ ಯಾವ ಜಾತಿಯವರೇ ಇರಲಿ ಲಿಂಗಧಾರಣಮಾತ್ರದಿಂದ ಅವರು ಶಿವಸ್ವರೂಪವನ್ನು ಹೊಂದುತ್ತಾರೆ. ಇದರಲ್ಲಿ ತಿಲಮಾತ್ರವಾದರೂ ಸಂಶಯವಿಲ್ಲ.

ಸ್ತ್ರೀಯರೇ ಆಗಲಿ ಬಾಲಕರೇ ಆಗಲಿ ವೃದ್ಧರೇ ಇರಲಿ ಕುಂಟ, ಕುರುಡ, ಉನ್ಮತ್ತ ಬಧಿರ, ಶಠ, ಧೂರ್ತ, ವಂಚಕ, ಜಾರ, ಚೋರ, ವೇಶ್ಯಾ, ಚಂಡಾಲ ಯಾರೇ ಇದ್ದರೂ ಲಿಂಗಧಾರಣ ಮಾಡಿಕೊಳ್ಳುವದರಿಂದ ಅವರೆಲ್ಲರೂ ನನ್ನ ಸ್ವರೂಪರು. ಅಥವಾ ಶಿವಸ್ವರೂಪಿಗಳಾಗುತ್ತಾರೆ. ನಮಸ್ಕಾರ ಪೂಜಾ ಮೊದಲಾದ ಕಾರ್ಯಗಳಲ್ಲಿ ಬಾಲಕರು ಅಥವಾ ವೃದ್ಧರು, ಸ್ತ್ರೀಯರು ಎಂಬುವ ಭೇದವಂತೂ ಇರುವದೇ ಇಲ್ಲ. ವಿಧವೆಯರಾಗಲಿ, ಋತುವಾದ ಸ್ತ್ರೀಯರಾಗಲಿ ವೀರಶೈವ ಮತ ಪ್ರವಿಷ್ಟರಾಗಿ ಭಕ್ತಿಯಿಂದ ಕೂಡಿಕೊಂಡಿದ್ದೇ ಆದರೆ ಅವರೆಲ್ಲರೂ ಪವಿತ್ರರೇ ಆಗುತ್ತಾರೆ.

ಈ ವಾಕ್ಯಗಳು ಸ್ತುತಿಪರವೆಂದು ತಿಳಿಯಲು ಬರುವದಿಲ್ಲ. ಮೇಲೆ ಹೇಳಿದ ಕೆಲವು ಶ್ಲೋಕಗಳು ವೀರಶೈವ ಶಿವಯೋಗಿಯ ಪರವಿದ್ದರೂ ಸ್ಥಲಾನುಕ್ರಮವಾಗಿ ಬೇಕಾದಷ್ಟು ಶರಣರ ವಚನಗಳೂ ಕೂಡ ಲಿಂಗಧಾರಿಯಾದವನಿಗೆ ಜಾತಿಭೇದವಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತವೆ. ವಿಧಿಪರವಿಲ್ಲದೆ ಸ್ತುತಿಪರವಾಗಿರುವದರಿಂದ ಎಲ್ಲರಿಗೂ ಲಿಂಗಧಾರಣವು ಶಕ್ಯವಿಲ್ಲೆಂಬುವ ವಾದವು ಇಲ್ಲಿ ಹುಟ್ಟುವದೇ ಶಕ್ಯವಿಲ್ಲ.

ಅಂತ್ಯಜರೇ ಮೊದಲಾದವರೂ ಕೂಡ ಲಿಂಗಧಾರಿಗಳಾದರೆ ಅವರು ಶಿವಸ್ವರೂಪಿಗಳಾಗುತ್ತಾರೆ. ಅರ್ಥಾತ್ ಶ್ರೇಷ್ಠರಾಗುತ್ತಾರೆಂದು ಮೇಲೆ ಹೇಳಿದ ಆಗಮಶ್ಲೋಕಗಳ ಅಭಿಪ್ರಾಯವಾಗಿರುತ್ತದಷ್ಟೆ ?

ಭಗವದ್ಗೀತಾಕಾರರೂ ಕೂಡ ಹೀಗೆಯೇ ಹೇಳಿರುತ್ತಾರೆ. ಆಚಾರಭ್ರಷ್ಟರಾದವರೂ ಕೂಡ ನನ್ನಲ್ಲಿ ಭಕ್ತಿಯುಳ್ಳವರಾದರೆ ಸಂಸಾರದಿಂದ ನಿವೃತ್ತರಾಗಿ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾರೆ.

**ಭಗವದ್ಗೀತಾ — ಅಧ್ಯಾಯ ೯, ಶ್ಲೋಕ ೩೨**

ಮಾಂಹಿಪಾರ್ಥ ವ್ಯಪಾಶ್ರಿತ್ಯ ಯೇಪಿಸ್ಯುಃ ಪಾಪಯೋನಯಃ ।
ಸ್ತ್ರೀಯೋ ವೈಶ್ಯಾಸ್ತಥಾ ಶೂದ್ರಾಸ್ತೇಪಿ ಯಾಂತಿಪರಾಂಗತಿಂ ॥

ಎಲೌ ಅರ್ಜುನನೇ ಅಂತ್ಯಜಾದಿಗಳೂ, ಸ್ತ್ರೀಯರೂ, ವೈಶ್ಯರೂ, ಶೂದ್ರರೂ ನನ್ನನ್ನು ಸೇವಿಸಿ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾರೆ, ನಿಶ್ಚಯವಾದುದು.

"ಪೂರ್ವಜನ್ಮವನ್ನು ನಿವೃತ್ತಿಯಮಾಡಿ ಶ್ರೀಗುರುವಿನ ಕರಕಮಲದಲ್ಲಿ ಜನಿಸಿದ ಭಕ್ತನ ಪಂಚಭೌತಿಕ ತನುವಿನಂತೆ ವರ್ಣಿಸಿ ನುಡಿಯಬಹುದೇ? ಉತ್ತಮಾಧಮ ತೃಣ ವೊದಲಾದವೆಲ್ಲವು ಜ್ಯೋತಿಯಮುಟ್ಟಿ ಜ್ಯೋತಿಯಪ್ಪವು ಕೇಳಿರೇ ಜ್ಯೋತಿರ್ಮಯ ಲಿಂಗವ ಮುಟ್ಟಿದಾತನು ಜ್ಯೋತಿರ್ಮಯಲಿಂಗ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೆ, ಬ್ರಹ್ಮರಂಧ್ರಗಳ ವರ್ಣ, ಅಕ್ಷರ, ಅಧಿದೇವತೆಯೆಂದು ಅಲ್ಲಿ ಶುಕ್ಲಶೋಣಿತಾತ್ಮಕನಂತೆ ವರ್ಣಿಸಿ ನುಡಿಯಬಹುದೇ, ಶಿವಲಿಂಗ ತನುವ?"

ಗೌರವಂ ಲೈಂಗಿಕಾಚಾರಂ ಪ್ರಸಾದಂ ಚರಣಾಂಬುಕಂ ।
ಭಾಕ್ತಿಕಂ ಚ ಮಯಾಪ್ರೋಕ್ತಂ ಷಡ್ವಿಧಂ ವ್ರತಮಾಚರೇತ್ ॥

ಎಂದು—

"ಷಡಾಧಾರ ಚಕ್ರವನು ಎನ್ನ ಸರ್ವಾಂಗದಲ್ಲಿ ಪ್ರತಿಷ್ಠೆಯಂ ಮಾಡಿ ಅಂತರ್ಬಾಹ್ಯದಲ್ಲಿ ಭರಿತನಾಗಿ ಸರ್ವಾಂಗವ ಲಿಂಗವಮಾಡಿದ ಕೂಡಲಚನ್ನಸಂಗ ಶ್ರೀಗುರುಲಿಂಗವು."

ಶ್ರೀ ಉರಿಲಿಂಗಪೆದ್ದಿಗಳು—

"ಗುರುಲಿಂಗದ ಕರುಣಕೃಪೆಯಲ್ಲಿ ಸಜ್ಜನ ಶರಣರ ಸುಖವಕಂಡೆನು ಏನೆಂದುಪಮಿಸಬಹುದಯ್ಯ. ಗುರುಲಿಂಗದ ಮಹಿಮೆಯನು ಮಹಾ ಘನ ಸೋಮೇಶ್ವರನೆಂಬ ಗುರುಲಿಂಗವ ತೋರಿದನಾಗಿ ಮಹಾಜ್ಯೋತಿಯ ಶೋಂಕಿದ ಉತ್ತಮಾಧಮ ತೃಣ ವೊದಲಾದವೆಲ್ಲವು ಮಹಾಜ್ಯೋತಿಯಪ್ಪುವು. ನೋಡಿರೆ ದೃಷ್ಟವ? ಮತ್ತೆ ಅಂತಿಂತೆಂದುಪಮಿಸಲುಂಟೆ? ಪರಂಜ್ಯೋತಿ ಸದ್ಗುರುಲಿಂಗವ ಸೋಂಕಿದ ಸದ್ಭಕ್ತನ ಅಂತರಂಗ ಬಹಿರಂಗ ಸರ್ವಾಂಗ ಪರಂಜ್ಯೋತಿಲಿಂಗ ಮತ್ತೆ ದೇಹವೆಂದು ಪ್ರಾಣವೆಂದು ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ, ಆಜ್ಞೆ, ಬ್ರಹ್ಮರಂಧ್ರವೆಂದು ವರ್ಣ, ದಳ, ಅಕ್ಷರ, ಅಧಿದೇವತೆಯೆಂದು ವಿವರಿಸಿ ನುಡಿಯಲುಂಟೆ? ಪಂಚಭೌತಿಕ ತನುವಿನಂತೆ ಪಂಚವಿಂಶತಿ ತತ್ವಗಳ ಸಂಬಂಧಿಸಿ ನುಡಿಯಲುಂಟೆ? ಕೇವಲ ಜ್ಯೋತಿರ್ಮಯಲಿಂಗ ತನುವಿಂಗೆ ಸದ್ಭಕ್ತನಂಗಲಿಂಗ ಮನಲಿಂಗ ಪ್ರಾಣಲಿಂಗ ಭಾವಲಿಂಗ ಪಂಚವಿಂಶತಿ ತತ್ವಂಗಳೆಲ್ಲವು ಲಿಂಗತತ್ವವು ಇದುಕಾರಣ ಲಿಂಗವಂತನು ಸರ್ವಾಂಗಲಿಂಗವಯ್ಯ ಉರಿಲಿಂಗ ಪೆದ್ದಿ ಪ್ರಿಯವಿಶ್ವೇಶ್ವರಾ."

ಮೇಲಿನ ಎರಡೂ ವಚನಗಳು ಲಿಂಗವಂತನ ಉತ್ಕೃಷ್ಟತೆಯನ್ನು ಚೆನ್ನಾಗಿ ಸಮರ್ಥಿಸಿ, ಅವನ ಶರೀರವು ಸರ್ವಾಂಗ ಲಿಂಗಮಯವಾದುದೆಂಬುವದನ್ನು ಬೋಧಿಸುತ್ತವೆ. ಇಲ್ಲಿ ಇವರು ಆಗಂತುಕರು, ಇವರು ಸಂಕರರು, ಇವರು ಶುದ್ಧರು ಎಂಬುವ ಹುರುಳಿಲ್ಲದ ವಾದವು ಹುಟ್ಟುವದು ಶಕ್ಯವೇ ಇರುವದಿಲ್ಲ. ಯಾಕಂದರೆ ಸದ್ಗುರುವಿನಿಂದ ಲಿಂಗವನ್ನು ಪಡೆದವರು ಸರ್ವಾಂಗಲಿಂಗಿಗಳೇ ಆಗುವರೆಂಬುವದೇ ಈ ವಚನಗಳ ತಾತ್ಪರ್ಯ ವಾಗಿರುತ್ತದೆ. ಸರ್ವಾಂಗಲಿಂಗಿಯಾದವನಿಗೆ ಜಾತಿಯ ಭೇದವೂ ಬರಲು ಶಕ್ಯವಿಲ್ಲ.

**ಸಿದ್ಧಾಂತಶಿಖಾಮಣಿ – ಪುಟ ೧೨೭** (ಎನ್. ಆರ್. ಕರಿಬಸವಶಾಸ್ತ್ರಿಗಳವರ ಪ್ರತಿ)

ಸ್ವಜಾತಿ ಕುಲಜಾನ್ ಧರ್ಮಾನ್ ಲಿಂಗನಿಷ್ಠಾ ವಿರೋಧಿನಃ ।
ತ್ಯಜನ್ಮಾಹೇಶ್ವರೋ ಜ್ಞೇಯಃ ಪೂರ್ವಾಶ್ರಮ ನಿರಾಸಕಃ ॥

ಶಿವಸಂಸ್ಕಾರಯೋಗೇನ ವಿಶುದ್ಧಾನಾಂ ಮಹಾತ್ಮನಾಂ ।
ಕಿಂ ಪೂರ್ವಕಾಲಿಕೈಃ ಧರ್ಮೈಃ ಪ್ರಾಕೃತಾನಾಂ ಹಿತೇಮತಾಃ ॥

ಶಿವಸಂಸ್ಕಾರಯೋಗೇನ ಶಿವಧರ್ಮಾನುಷಂಗಿಣಾಂ ।
ಪ್ರಾಕೃತಾನಾಂ ನ ಧರ್ಮೇಷು ಪ್ರವೃತ್ತಿರುಪಪದ್ಯತೇ ॥

ವಿಶುದ್ಧಾಃ ಪ್ರಾಕೃತಾಶ್ಚೇತಿ ದ್ವಿವಿಧಾಮಾನುಷಾಃ ಸ್ಮೃತಾಃ ।
ಶಿವಸಂಸ್ಕಾರಿಣಶ್ಶುದ್ಧಾಃ ಪ್ರಾಕೃತಾ ಇತರೇಮತಾಃ ॥

ವರ್ಣಾಶ್ರಮಾದಿ ಧರ್ಮಾಣಾಂ ವ್ಯವಸ್ಥಾಹಿದ್ವಿಧಾಮತಾ ।
ಏತಾ ಶಿವೇನ ನಿರ್ದಿಷ್ಟಾ ಬ್ರಹ್ಮಣಾ ಕಥಿತಾಪರಾ ॥

ಶಿವೋಕ್ತಧರ್ಮನಿಷ್ಠಾತು ಶಿವಾಶ್ರಮನಿಷೇವಿಣಾಂ ।
ಶಿವಸಂಸ್ಕಾರಹೀನಾನಾಂ ಧರ್ಮಃ ಪೈತಾಮಹ ಸ್ಮೃತಃ ॥

ಶಿವಸಂಸ್ಕಾರಯುಕ್ತೇಷು ಜಾತಿಭೇದೋ ನ ವಿದ್ಯತೇ ।
ಕಾಷ್ಠೇಷು ವಹ್ನಿದಗ್ಧೇಷು ಯಥಾರೂಪಂ ನ ವಿದ್ಯತೇ ॥

ತಸ್ಮಾತ್ಸರ್ವಪ್ರಯತ್ನೇನ ಶಿವಸಂಸ್ಕಾರ ಸಂಯುತಃ ।
ಜಾತಿಭೇದಂ ನ ಕುರ್ವೀತ ಶಿವಭಕ್ತೇ ಕದಾಚನ ॥

ಅಂದರೆ– ತನ್ನ ಲಿಂಗನಿಷ್ಠಾರಣೆಗೆ ವಿರುದ್ಧಗಳಾದ ಪೂರ್ವದ ತನ್ನ ಜಾತಿಯ ಸಂಬಂಧ ಗಳಾದ ಜಾತಪ್ರೇತ ಶೌಚಾದಿ ಧರ್ಮಗಳನ್ನು ಬಿಟ್ಟಂತಹ ವೀರಮಾಹೇಶ್ವರನು ಪೂರ್ವಾಶ್ರಮ ನಿರಾಸಕನಾಗುತ್ತಾನೆ. ಹಾಗಾದರೆ ಇಲ್ಲಿ ಒಂದು ಸಂಶಯ ಬರುತ್ತದೆ. ಅದೇನೆಂದರೆ, ಪೂರ್ವಾಶ್ರಮದಲ್ಲಿ ತನಗೆ ಹತ್ತಿಬಂದಿರುವ ನಿತ್ಯನೈಮಿತ್ತಿಕಾದಿ ಕರ್ಮ ಗಳನ್ನು ಬಿಟ್ಟರೆ ದೋಷ ಬರುತ್ತದೆ. ಅವುಗಳನ್ನು ಬಿಡುವದು ಹೇಗೆ? ಶಿವಸಂಸ್ಕಾರ ಯೋಗದಿಂದ ಶುದ್ಧರಾದವರಿಗೆ ಪೂರ್ವಾಶ್ರಮದ ಧರ್ಮದಿಂದೇನು ಪ್ರಯೋಜನ? ಅಂದರೆ– ಶಿವಜ್ಞಾನಸಂಬಂಧವನ್ನಿತ್ತು ಮಲತ್ರಯಗಳನ್ನು ನಾಶಮಾಡುವ ಶಿವದೀಕ್ಷಾ ಸಂಸ್ಕಾರದ ಸಂಬಂಧದಿಂದಲೂ, ಲಿಂಗೈಕ್ಯನಿಷ್ಠತೆಯಿಂದಲೂ ತ್ರೈಕಾಲಿಕ ಕಾಲುಷ್ಯವನ್ನು ತೊಳೆದುಕೊಂಡಿರುವವನಿಗೆ ಪೂರ್ವಾಶ್ರಮದಲ್ಲಿ ಹಿಡಿದುಕೊಂಡಿದ್ದ ನಿತ್ಯನೈಮಿತ್ಯಕಾದಿ ಫಲಗಳಿಂದ ಏನೂ ಪ್ರಯೋಜನವಿಲ್ಲ.

ಯೋ ದೀಕ್ಷಿತಸ್ತು ಶ್ರಾದ್ಧಾದೌ ಸ್ವಪೂರ್ವಂ ವಿಧಿಮಾಚರೇತ್ ।
ತಸ್ಯತನ್ನಿಷ್ಫಲಂ ಸರ್ವಂ ಸಮಯೇ ನ ಚ ಲಂಘ್ಯತೇ ॥

ಯಾವನು ಶಿವದೀಕ್ಷಾಸಂಸ್ಕೃತನಾಗಿದ್ದು ಶ್ರಾದ್ಧಾದಿ ಕ್ರಿಯೆಗಳಲ್ಲಿ ತನ್ನ ಪೂರ್ವಾಶ್ರಮದ ವಿಧಿಯನ್ನಾಚರಿಸುವನೋ ಅವನಿಗೆ ಆ ಕರ್ಮಾಚರಣೆಯಿಂದ ಯಾವ ಫಲವೂ ಉಂಟಾಗುವದಿಲ್ಲ.

ಶಿವದೀಕ್ಷಾಸಂಸ್ಕಾರ ಸಂಬಂಧದಿಂದ ಯಾರು ವೀರಶೈವೀಯ ಧರ್ಮಾಚರಣೆಯಲ್ಲಿ ತತ್ಪರರಾಗುತ್ತಾರೆಯೋ ಅವರಿಗೆ ಮಾಯಾ ಸಂಬಂಧಿಗಳಾದ ಪ್ರಾಕೃತರು ಆಚರಿಸತಕ್ಕ ಧರ್ಮಗಳನ್ನು ಆಚರಿಸಬೇಕೆಂಬ ಬುದ್ಧಿಯುಂಟಾಗುವದಿಲ್ಲ.

ವರ್ಣಾಶ್ರಮ ಧರ್ಮಗಳೊಳಗೆ ಎರಡು ತೆರದ ವ್ಯವಸ್ಥೆಯು ಇರುತ್ತಿರುವದು. ಅವುಗಳಲ್ಲಿ ಒಂದು ಶಿವನಿಂದ ಹೇಳಲ್ಪಟ್ಟಿರುವದು, ಮತ್ತೊಂದು ಬ್ರಹ್ಮನಿಂದ. ಅವುಗಳಲ್ಲಿ ಯಾವ ಧರ್ಮವು ಯಾರಿಗೆ ಉತ್ತಮವಾದುದೆಂದರೆ, ಶಿವನು ಹೇಳಿರುವ ಧರ್ಮದಲ್ಲಿ ವೀರಶೈವರಿಗೆ ಶ್ರದ್ಧೆಯು ಹುಟ್ಟುವದು.

ಬೆಂಕಿಯಿಂದ ಸುಟ್ಟ ಕಟ್ಟಿಗೆಯು ಪೂರ್ವದ ರೂಪವನ್ನು ಬಿಟ್ಟು ಹೇಗೆ ಬೇರೆ ಯಾಗುವದೋ ಹಾಗೆಯೇ ಶಿವದೀಕ್ಷಾಸಂಸ್ಕಾರಯುಕ್ತರಾದ ವೀರಶೈವರಲ್ಲಿ ಪೂರ್ವದ ಜಾತಿಭೇದಗಳು ಉಳಿಯುವದಿಲ್ಲ. ಆದುದರಿಂದ ಶಿವಸಂಸ್ಕಾರಿಯಾದಾತನು ಶಿವಭಕ್ತರಲ್ಲಿ ಯಾವಾಗಲೂ ಜಾತಿಭೇದವನ್ನು ಮಾಡದೆ ಇರಲು ಪ್ರಯತ್ನಿಸಬೇಕು.

ಶಿವರಹಸ್ಯ—

ಶಿವಸಂಸ್ಕಾರಯುಕ್ತೇಷು । ಜಾತಿಭೇದಂ ನ ಕಾರಯೇತ್ ॥
ಶಿವಲಿಂಗೇ ಶಿಲಾಬುದ್ಧಿಂ । ಕುರ್ವಾಣ ಇವ ಪಾತಕಃ ॥

ಶಿವಭಕ್ತಿಯುಕ್ತವರಾದವರಲ್ಲಿ ಜಾತಿಭೇದವನ್ನೆಣಿಸಕೂಡದು. ಒಂದುವೇಳೆ ಜಾತಿ ಭೇದವನ್ನು ಮಾನಿಸಿದರೆ ಶಿವಲಿಂಗಕ್ಕೆ ಕಲ್ಲು ಎಂದು ಹೇಳುವವನು ಹೇಗೆ ಪಾಪಿಯಾಗು ತ್ತಾನೆಯೋ ಅವನಂತೆ ಇವನೂ ಪಾಪಿಯಾಗುವನು. ಹೀಗೆಯೇ ಶಿವಸಂಸ್ಕಾರದ ಪ್ರಭಾವ ಬಹಳ ಮಹತ್ವದ್ದಾಗಿರುತ್ತದೆ.

ಶ್ರೀ ಬಸವಣ್ಣನವರು—

"ಎಂತಹನಾದರೇನು ಲಿಂಗ ಮುಟ್ಟಿದವನೇ ಕೀಳು ಜಾತಿ. ಕುಲ ವಹುದು ತಪ್ಪದು ಲಿಂಗ ಮುಟ್ಟಲೊಡನೆ ಕುಲವಹುದು ತಪ್ಪದು ಲಿಂಗ ಮುಟ್ಟಲೊಡನೆ ಹೊನ್ನಹುದು ತಪ್ಪದು ಪರುಷ ಮುಟ್ಟಲೊಡನೆ ಕೂಡಲ ಸಂಗಮದೇವನೊಲ್ಲ ಸರ್ವ ಸಂದೇಹಿಗಳ."

ಪರುಷವು ಮುಟ್ಟಿದರೆ ಕಬ್ಬಿಣವು ಹೊನ್ನಾಗುವದು. ಲಿಂಗವು ಮುಟ್ಟಿದೊಡನೆಯೇ ಅವನ ಕುಲ ಶಿವಕುಲವಾಗುವದು.

"ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ, ಮಂಡೋದರಿ ಕಪ್ಪೆಯ ಮಗಳು, ಕುಲವನರಸದಿರಿಂ ಭೋ, ಕುಲದಿಂದ ಮುನ್ನೇನಾದಿರಿಂ ಭೋ? ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದುರ್ವಾಸ ಮುಚ್ಚಿಗ, ಕಶ್ಯಪ ಕಮ್ಮಾರ, ಕೌಂಡಿಲ್ಯನೆಂಬ ಋಷಿ ಮೂರು ಭುವನವರಿಯೆನಾಯಿದ ಕಾಣಿಂ ಭೋ, ನಮ್ಮ ಕೂಡಲಸಂಗಮದೇವನ ವಚನವಿಂತೆಂದುದು ಶ್ವಪಚೋಪಿಯಾದರೇನು! ಶಿವಭಕ್ತನೇ ಕುಲಜನು."

ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ. ಜಲಬಿಂದುವಿನ ವೆವಹಾರವೊಂದೇ ಆಶೆಯಾಮಿಷ ರೋಷ ಹರುಷ ವಿಷಯಾದಿಗಳೆಲ್ಲಾ ಒಂದೇ. ಏನನೋದಿ ಏನಕೇಳಿ ಏನಫಲ? ಕುಲಜನೆಂಬುವದಕ್ಕಾವುದು ದೃಷ್ಟ?

ಸಪ್ತಧಾತು ಸಮಂ ಪಿಂಡಂ ಸಮಯೋನಿ ಸಮುದ್ಭವಂ ।
ಆತ್ಮಜೀವ ಸಮುತ್ಪನ್ನಂ ವರ್ಣಾನಾಂ ಕಿಂ ಪ್ರಯೋಜನಂ ॥

"ಕಾಶಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗ ನಾದ, ವೇದವನೋದಿ ಹಾರುವನಾದ ಕರ್ಣದಲ್ಲಿ ಜನಿಸಿದವರುಂಟೆ? ಜಗದೊಳಗೆ ಇದು ಕಾರಣ ಕೂಡಲಸಂಗಮದೇವ ಅಂಗಸ್ಥಲವನರಿದವನೇ ಕುಲಜನು."

ಮೇಲಿನ ಮೂರು ವಚನಗಳು ಒಂದೇ ಮಾದರಿಯಾಗಿದ್ದು ಭಾವಾರ್ಥವು ಜಾತಿ ಇಲ್ಲವೆಂಬುವದೊಂದೇ ಆಗಿರುತ್ತದೆ.

"ಜಾತಿವಿಡಿದು ಸೂತಕವನರಸುವೆ ಜ್ಯೋತಿವಿಡಿದು ಕತ್ತಲೆಯ ನರಸುವೆ ಇದೇಕೋ ಮರುಳುಮಾನವಾ? ಜಾತಿಯಲಿ ಅಧಿಕನೆಂಬೆ ವಿಪ್ರ ಶತಕೋಟಿಗಳಿದ್ದಲ್ಲಿ ಫಲವೇನು? ಭಕ್ತಶಿಖಾಮಣಿ ಎಂದುದು ವಚನ ನಮ್ಮ ಕೂಡಲಸಂಗನ ಶರಣರ ಪಾದಪರುಷವ ನಂಬು ಕೆಡಬೇಡ ಮಾನವಾ."

ಜಾತಿಯ ಗೊಂದಲಕ್ಕೆ ಹೋಗಬಾರದೆಂಬುವದೇ ಈ ವಚನದ ಅರ್ಥವಾಗಿರುತ್ತದೆ.

"ದೇವ ನಿಮ್ಮ ಪೂಜಿಸಿ ಚನ್ನನ ಕುಲ ಚನ್ನಾಯಿತ್ತಯ್ಯಾ ದೇವಾ ನಿಮ್ಮ ಪೂಜಿಸಿ ದಾಸನ ಕುಲದೆಶೆವಡೆಯಿತ್ತು ದೇವಾ ನಿಮ್ಮಡಿಗೆರಗಿದ ಮಡಿವಾಳ ಮಾಚಯ್ಯ ನಿಮ್ಮಡಿಯಾದ, ನೀನೊಲಿದ ಕುಲಕ್ಕೆ ನೀನೊಲ್ಲದ ಹೊಲೆಗೆ ಮೇರೆಯುಂಟೆ ದೇವಾ?

ಶ್ವಪಚೋಪಿ ಮುನಿಶ್ರೇಷ್ಠಃ ಯಸ್ತು ಲಿಂಗಾರ್ಚನೇರತಃ ।
ಲಿಂಗಾರ್ಚನ ವಿಹೀನೋಪಿ ಬ್ರಾಹ್ಮಣಃ ಶ್ವಪಚಾಧಮಃ ॥

ಎಂದುದಾಗಿ—

"ಜಾತಿ ವಿಜಾತಿಯಾದರೇನು? ಅಜಾತ ಶರಣೆನ್ನದವನು ಆತನೇ ಹೊಲೆಯ ಕೂಡಲಸಂಗಮದೇವಾ."

"ಚತುರ್ವೇದಿಯಾದರೇನು? ಲಿಂಗವಿಲ್ಲದವನೇ ಹೊಲೆಯ. ಶ್ವಪಚ ನಾದರೇನು? ಲಿಂಗವಿದ್ದವನೇ ವಾರಣಾಶಿ. ಆತನ ನುಡಿಗಡಣೆವೇ ಲೇಸು. ಆತ ಜಗಕ್ಕೆ ಪಾವನ. ಆತನ ಪ್ರಸಾದವೆನಗಮೃತಶೇವನೆ."

ನಮಃ ಪ್ರಿಯಃ ಚತುರ್ವೇದಿ ಮದ್ಭಕ್ತಶ್ವಪಚೋಪಿವಾನ್ ।
ತಸ್ಮಾದ್ದೇಪಂ ತಥೋಗ್ರಾಹ್ಯಂ ಸ ಚ ಪೂಜ್ಯೋ ಯಥಾಸ್ವಯಂ ॥

ಈ ಎರಡೂ ವಚನಗಳು ಲಿಂಗವಿದ್ದವನ ಶ್ರೇಷ್ಠತೆಯನ್ನು ಹೇಳುತ್ತವೆ.

"ಆವಕುಲವಾದರೇನು ಶಿವಲಿಂಗವಿದ್ದವನೇ ಕುಲಜನು. ಕುಲವ ನರಸುವರೇ ಶರಣರಲ್ಲಿ ಜಾತಿಸಂಕರನಾದ ಬಳಿಕ?"

ಶಿವೇ ಜಾತಃ ಕುಲೇ ಧರ್ಮಃ ಪೂರ್ವಜನ್ಮವಿವರ್ಜಿತಃ ।
ಉಮಾ ಮಾತಾ ಪಿತಾ ರುದ್ರಃ ಈಶ್ವರಃ ಕುಲಮೇವ ಚ ॥

ಎಂದುದಾಗಿ—

"ಒಕ್ಕುದಕೊಂಬೆನವರಲ್ಲಿ ಕೂಸ ಕೊಡುವೆ ಕೂಡಲಸಂಗಮದೇವ ನಂಬುವೆ ನಿಮ್ಮ ಶರಣರನು ಸೆಟ್ಟಿ ಎಂದೆಂಬೆನೆ ಶಿರಿಯಾಳನ? ಮಡಿವಾಳಯ್ಯ ನೆಂದೆಂಬೆನೆ ಮಾಚಯ್ಯನ? ಡೋಹಾರನೆಂದೆಂಬೆನೆ ಕಕ್ಕಯ್ಯನ? ಮಾದಾರ ನೆಂದೆಂಬೆನೆ ಚೆನ್ನಯ್ಯನ? ಆನು ಹಾರುವನೆಂದರೆ ಕೂಡಲಸಂಗಯ್ಯ ನಗುವನಯ್ಯಾ."

"ದೇವದೇವಾ ಬಿನ್ನಪವನವಧಾರು ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ. ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರನೊಂದೇ ಎಂಬೆ. ಹೀಗೆಂದು ನಂಬುವು ದೆನ್ನ ಮನ. ಈ ನುಡಿದ ನುಡಿಯೊಳಗೆ ಎಳ್ಳಮೊನೆಯಷ್ಟು ಸಂದೇಹ ವುಳ್ಳರೇ ಹಲುದೋರೆ ಮೂಗಕೊಯ್ಯಿ ಕೂಡಲಸಂಗಮದೇವಾ."

ಶ್ರೀ ಬಸವಣ್ಣನವರು ಈ ವಚನದಲ್ಲಿ ಲಿಂಗಧಾರಿಗಳಾದವರಲ್ಲಿ ಭೇದವನ್ನು ಮಾಡಿದರೆ ಅಥವಾ ಇದರಲ್ಲಿ ಮುಳ್ಳುಮೊನೆಯಷ್ಟು ತಪ್ಪಿದರೆ ನನ್ನ ಮೂಗನ್ನು ಕೊಯ್ಯಿ ಎಂದು ಹೇಳುತ್ತಾರೆ.

ಎಷ್ಟೋ ವಚನಗಳಲ್ಲಿ ಶಿವಭಕ್ತರಾದವರೆಲ್ಲರೂ ಒಂದೇ ಎಂದು ಹೇಳಿದ್ದಾರೆ. ಮತ್ತು ಅದರಂತೆ ನಡೆದುಕೊಳ್ಳಲಿಕ್ಕೆ ಸರ್ವರನ್ನೂ ಪ್ರವೃತ್ತರನ್ನಾಗಿ ಮಾಡಿರುತ್ತಾರೆ. ಶ್ರೀ ಬಸವಣ್ಣನವರ ಮಾರ್ಗವನ್ನೇ ಅನುಸರಿಸಿ ನಡೆದ ಅಸಂಖ್ಯಾತ ಶರಣರೂ ಕೂಡ ತಮ್ಮ ತಮ್ಮ ವಚನಗಳಲ್ಲಿ ವೀರಶೈವರಲ್ಲಿ ಜಾತಿಭೇದಗಳಿಲ್ಲವೆಂಬುದನ್ನು ಚೆನ್ನಾಗಿ ಹೇಳಿರುತ್ತಾರೆ.

ಬಸವಣ್ಣನವರ ಅನುಯಾಯಿಗಳಾದ ಶರಣರ ಕೆಲವು ವಚನಗಳನ್ನು ಇಲ್ಲಿ ನೋಡೋಣ.

**ಚನ್ನಬಸವಣ್ಣನವರು — ವಚನ, ಪುಟ ೨೨**

"ಉಂಬಲ್ಲಿ ಉಡುವಲ್ಲಿ ಕ್ರಿಯೆಯುಳಿಯಿತ್ತೆಂಬರು ಕೊಂಬಲ್ಲಿ ಕೊಡು ವಲ್ಲಿ ಕುಲವನರಸುವರು ಇವರಿಗೆ ನಾನೇನೆಂಬೆನಯ್ಯ ವಚ್ಚೊಚ್ಚಿ ಭಕ್ತರು ವಚ್ಚೊಚ್ಚಿ ಭವಿಗಳು ಇದು ಕಾರಣವಾಗಿ ಕೂಡಲಚನ್ನಸಂಗಯ್ಯ ಇವರಿಗೆ ಭಕ್ತಕಾಯ ಮಮಕಾಯವೆಂತೆನ್ನಬಹುದೇ?"

ಮತ್ತು

"ಕರ್ಮಜಾತವ ಕಳೆದು ಶ್ರೀ ಗುರುಲಿಂಗವ ಕೊಟ್ಟು ಪುಣ್ಯಜಾತನ ಮಾಡಿದ ಬಳಿಕ ಆತಂಗೆ ಶಿವಕುಲವಲ್ಲದೆ ಬೇರೆ ಮತ್ತೊಂದು ಕುಲವುಂಟೆ?

ಅಯ್ಯ ಎಂದುದಾಗಿ ಕೂಡಲಚನ್ನಸಂಗಯ್ಯ ನಿಮ್ಮ ಭಕ್ತಮಹೇಶ್ವರರ ಕುಲಕ್ಕೆ ಪ್ರತಿಗಾಣೆನು.”

ಈ ಎರಡೂ ವಚನಗಳನ್ನು ಪರಿಶೀಲಿಸಿದರೆ ಶಿವದೀಕ್ಷೆಯನ್ನು ಹೊಂದಿದವರಿಗೆ ಜಾತಿಭೇದವಿಲ್ಲವೆಂಬುವದು ಚೆನ್ನಾಗಿ ಗೊತ್ತಾಗುತ್ತದೆ.

ಶ್ರೀ ಚನ್ನಬಸವಣ್ಣನವರು ಮತ್ತೊಂದು ವಚನದಲ್ಲಿ—

“ಲಿಂಗಾಚಾರ, ಗಣಾಚಾರ, ಶಿವಾಚಾರ, ಸದಾಚಾರ, ಭೃತ್ಯಾಚಾರ, ಈ ಪಂಚಾಚಾರವೆಂತೆಂದೊಡೆ ಲಿಂಗದ ಕರಿಣವನರಿವುದೇ ಲಿಂಗಾಚಾರ. ಶಿವನಿಂದೆಯ ಕೇಳದಿರುವುದೇ ಗಣಾಚಾರ. ಶಿವಭಕ್ತರಲ್ಲಿ ಜಾತಿವರ್ಗವ ನೋಡದೆ ಅವರೊಕ್ಕುದ ಸಲಿಸುವದೇ ಶಿವಾಚಾರ. ತನುಮನ ಬಳಲಿಸಿ ಗುರುಲಿಂಗಜಂಗಮಕ್ಕೆ ಮಾಡುವುದೇ ಸದಾಚಾರ. ಶಿವಭಕ್ತನೇ ಹಿರಿದು ನಾನೇ ಕಿರಿದೆಂದು ಭಯಭಕ್ತಿಯಲ್ಲಿ ಆಚರಿಸುವುದೇ ಭೃತ್ಯಾಚಾರ. ಇಂತೀ ಪಂಚಾಚಾರವುಳ್ಳ ಪರಮಸದ್ಭಕ್ತರ ಒಕ್ಕು ಮಿಕ್ಕ ಪ್ರಸಾದವ ಎನಗಿಕ್ಕಿ ಸಲಹು ಬಸವಪ್ರಿಯ ಕೂಡಲಚನ್ನಸಂಗಮದೇವಾ.”

ಶ್ರೀ ಚನ್ನಬಸವಣ್ಣನವರು ಪಂಚಾಚಾರಗಳ ಅರ್ಥವನ್ನು ಈ ವಚನದಲ್ಲಿ ವಿವರಿಸಿದ್ದರೂ ಅದರ ತಥ್ಯಾಂಶವು ವೀರಶೈವನಾದವನಿಗೆ ಜಾತಿಗಳಿಲ್ಲವೆಂದೇ ಅರ್ಥವಾಗುತ್ತದೆ. ಯಾವಾತನು ಪಂಚಾಚಾರಗಳಿಗೆ ಸರಿಯಾಗಿ ನಡೆಯುತ್ತಾನೆಯೋ ಆತನಿಗೆ ಜಾತಿಭೇದವನ್ನು ಮಾಡಲು ಬರುವದಿಲ್ಲ. ಜಾತಿಭೇದವನ್ನು ಮಾಡಿದಾತನಿಗೆ ಪಂಚಾಚಾರಗಳಿಲ್ಲ. ಪಂಚಾಚಾರಗಳಿಲ್ಲದವನು ವೀರಶೈವನಲ್ಲ. ಅರ್ಥಾತ್ ನಿಜವಾದ ವೀರಶೈವನೆಂದಿಗೂ ಜಾತಿಭೇದವನ್ನು ಮಾಡುವದಿಲ್ಲ.

ಶ್ರೀ ಗಣದಾಸಿ ವೀರಣ್ಣನವರು—

“ಕುಲ ಎಷ್ಟು ಎಂದರೆ ಎರಡು ಕುಲ. ಅವಾವೆಂದೊಡೆ ಭವಿ ಒಂದು ಕುಲ, ಭಕ್ತ ಒಂದು ಕುಲ. ಅಷ್ಟಾವರಣವೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿಪ್ಪ ಭಕ್ತರ ಕುಲವನಾರಿಸಿದರೆ ಬಾರದ ಭವಂಗಳಲ್ಲಿ ಬಪ್ಪುದು ತಪ್ಪುದು. ನೀರಿನಿಂದಾದ ಮುತ್ತು ಮರಳಿ ಉದಕವಪ್ಪುದೇ? ಆಕಾಶಕ್ಕೆ ಹಾರಿಹೋದ ಜ್ಯೋತಿ ಹಿಂದಕ್ಕೆ ಬಪ್ಪುದೇ? ಮೃತ್ತಿಕೆಯಿಂದಾದ ಮಡಿಕೆ ಮರಳಿ ಮಣ್ಣಪ್ಪುದೇ? ಮತ್ತೆ ವಾಮಮುನಿ ಹಿರಿಯಭಕ್ತರ ಮನೆಯ ಬಿನ್ನಹವ ಕೈಕೊಂಡು ಕುಲಕಂಜಿ ಉಣಲೊಲ್ಲದೆ ಹೋದನಿಮಿತ್ಯದಿಂದ ಹಾವಿನ ಹಾಳ ಕಲ್ಲಯ್ಯಗಳ ಮನೆಯಲ್ಲಿ ಶ್ವಾನವಾಗಿ ಹುಟ್ಟಲಿಲ್ಲವೇ? ಅದುಕಾರಣ ಶಿವಭಕ್ತರೊಕ್ಕು ಮಿಕ್ಕ ಪ್ರಸಾದವ ಕೊಳಬೇಕು ಎಂದಾತ ನಮ್ಮ ಶಾಂತಕೂಡಲಸಂಗಮದೇವಾ.”

ಅಷ್ಟಾವರಣನಿಷ್ಠನಾಗಿಯೂ, ಪಂಚಾಚಾರಪರಾಯಣನಾಗಿಯೂ ಇರುವ ವೀರಶೈವನಿಗೆ ಜಾತಿಭೇದವು ಸೋಂಕಲಾರದೆಂದು ಈ ವಚನದ ಫಲಿತಾಂಶವಾಗಿರುವದು.

**ಶ್ರೀ ಸಿದ್ಧರಾಮ ಶಿವಯೋಗಿಗಳು — ವಚನ, ಪುಟ ೧೧೫**

"ಕುಲದಲ್ಲಿ ಶೂದ್ರನಾದರೇನು? ಮನದಲ್ಲಿ ಮಹಾದೇವ ನೆಲೆಗೊಂಡವನೇ ವೀರಶೈವ ನೋಡಾ."

ಕಾಂಚನಂ ರಜತಂ ತಾಮ್ರಂ ರಸಯೋಗಾತ್ಸುವರ್ಣತಾಂ ।
ತಥಾ ಶಿವಜ್ಞಾನರಸಾತ್ ಶೂದ್ರಾದ್ಯಾಃ ಶಿವತಾಂ ವ್ರಜೇತ್ ॥

"ಎಂಬ ವಾಕ್ಯ ಪಾಲಿಸಿದ ನೋಡಾ ಮನವೇ ಎನ್ನ ಗುರು ಚನ್ನಬಸವ ಕಪಿಲಸಿದ್ಧಮಲ್ಲಿಕಾರ್ಜುನನಿಂದೆ ಮನವೆ."

**ಸಿದ್ಧರಾಮ ವಚನ — ಪುಟ ೯೩**

"ಕುಲವೆಂದು ಹೋರಾಡುವ ಅಣ್ಣಗಳಿರಾ ಕೇಳಿರೊ. ಕುಲವೇ ಡೋಹರನ, ಕುಲವೇ ಮಾದಾರನ, ಕುಲವೇ ದೂರ್ವಾಸನ, ಕುಲವೇ ವ್ಯಾಸನ, ಕುಲವೇ ವಾಲ್ಮೀಕನ, ಕುಲವೇ ಕೌಂಡಿನ್ಯನ, ಕುಲವನೋಳ್ಪರೆ ಹುರುಳಿಲ್ಲ, ಅವರ ನಡೆನೋಳ್ಪರೆ ನಡೆಯುವವರು ತ್ರಿಲೋಕದಲ್ಲಿಲ್ಲ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ."

ಸಿದ್ಧರಾಮ ಶಿವಯೋಗಿಗಳು ಮೇಲಿನ ವಚನದಲ್ಲಿ 'ಕೆಲವರ ಹೆಸರುಗಳನ್ನು ತೆಗೆದು ಕೊಂಡು, "ಅವರ ಕುಲದಲ್ಲಿ ಹುರುಳಿಲ್ಲ, ಅವರಂತೆ ನಡೆಯುವವರು ಮೂರು ಲೋಕ ದಲ್ಲಿಯೂ ಸಿಗುವದಿಲ್ಲ"ವೆಂದು ಹೇಳಿರುವರು. ಇವರಲ್ಲಿ ವ್ಯಾಸ, ವಾಲ್ಮೀಕಿ, ದೂರ್ವಾಸ, ಕೌಂಡಿನ್ಯ ಮೊದಲಾದವರೂ ಇರುತ್ತಾರೆ.

**ಅಂಬಿಗರ ಚೌಡಯ್ಯ — ವಚನ, ಪುಟ ೧೮೯**

"ಕುಲಹೀನ ಶಿಷ್ಯಂಗೆ ಅನುಗ್ರಹವಮಾಡಿ ತಿರುಗಿ ಅವನ ಮನೆ ಯಲ್ಲಿ ಉಣ್ಣಬಾರದೆಂದು ಅಕ್ಕಿಕಣಕವ ಕೊಂಡುಹೋಗುವ ಗುರುವಿನ ಕಂಡರೆ ಕೆಡವಿಹಾಕಿ ಮೂಗನೇಕೊಯ್ದು ಇಟ್ಟಂಗಿಯಕಲ್ಲಿಲೆ ಸಾಸಿವೆಯ ತಿಕ್ಕಿ ಹಿಟ್ಟನೆ ತಳಿದು ಮೇಲೆ ನಿಂಬಿಯಹುಳಿಯನೆ ಹಿಂಡಿ ಪಡುವಲಗಾಳಿಗೆ ಹಿಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ."

ಅಂಬಿಗರ ಚೌಡಯ್ಯನವರು ಸುಪ್ರಸಿದ್ಧ ವೀರಶೈವ ಶರಣರು. ಇವರು ಜಾತಿಭೇದವನ್ನು ಮಾಡತಕ್ಕ ಗುರುಗಳಿಗೆ ಎಂತಹ ಕಠಿಣ ಶಿಕ್ಷೆಯನ್ನು ವಿಧಿಸಬೇಕೆಂಬುವದನ್ನು ಸ್ಪಷ್ಟವಾಗಿ ಹೇಳಿರುತ್ತಾರೆ.

ಶ್ರೀ ಪ್ರಭುದೇವರು—

"ಶ್ರೀ ಗುರುಸ್ವಾಮಿ ಪೂರ್ವಾಶ್ರಯಮಂ ಕಳೆದು ಪುನರ್ಜಾತನಂ ಮಾಡಿದ ಬಳಿಕ, ಪಂಚಭೂತಕಾಯವ ಕಳೆದು ಪ್ರಸಾದಕಾಯವ ಮಾಡಿದ ಬಳಿಕ, ವಾಯುಪ್ರಾಣಿಯ ಕಳೆದು ಲಿಂಗಪ್ರಾಣಿಯ ಮಾಡಿದ ಬಳಿಕ, ಎಲ್ಲಿಯ ಕುಲಸೂತಕ ಎಲ್ಲಿಯ ಛಲಸೂತಕ ಎಲ್ಲಿಯ ತನುಸೂತಕ ಎಲ್ಲಿಯ ಮನಸೂತಕ ಎಲ್ಲಿಯ ನೆನಹುಸೂತಕ ಎಲ್ಲಿಯ ಭಾವಸೂತಕ ಇವನೆಂತು

ಹಿಡಿಯಲಾಗದು. ಸದ್ಭಕ್ತನು ಕುಲಸೂತಕವುಳ್ಳನ್ನಕ್ಕರ ಭಕ್ತನಲ್ಲ. ಛಲ ಸೂತಕವುಳ್ಳನ್ನಕ್ಕರ ಮಹೇಶ್ವರನಲ್ಲ. ತನುಸೂತಕ ಉಳ್ಳನ್ನಕ್ಕರ ಪ್ರಸಾದಿ ಯಲ್ಲ. ಮನಸೂತಕವುಳ್ಳನ್ನಕ್ಕರ ಪ್ರಾಣಲಿಂಗಿಯಲ್ಲ. ನೆನಹುಸೂತಕ ಉಳ್ಳನ್ನಕ್ಕರ ಶರಣನಲ್ಲ. ಭಾವಸೂತಕವುಳ್ಳನ್ನಕ್ಕರ ಐಕ್ಯನಲ್ಲ. ಇಂತೀ ಸೂತಕವ ಮುಂದುಗೊಂಡಿಪ್ಪವರ ಮುಖವ ನೋಡಲಾಗದು ಗುಹೇಶ್ವರಾ.''

ಶ್ರೀ ಪ್ರಭುದೇವರು ಈ ವಚನದಲ್ಲಿ ಶ್ರೀ ಗುರುವಿನಿಂದ ದೀಕ್ಷೆಯನ್ನು ಪಡೆದು, ಪೂರ್ವಾಶ್ರಯವನ್ನು ಕಳೆದು ಪುನರ್ಜಾತನನ್ನಾಗಿ ಮಾಡಿದ ಮೇಲೆ ಕುಲಾದಿ ಸೂತಕಗಳು ಇವನಿಗಿರಲಾರವು. ಕದಾಚಿತ್ ಅವುಗಳಿದ್ದರೆ ಅವನ ಮುಖವನ್ನು ನೋಡಲಾಗದು ಮತ್ತು ಅವನು ಷಟ್‌ಸ್ಥಲಗಳಿಂದ ದೂರನಾಗುವನು. ಷಟ್‌ಸ್ಥಲಗಳಿಲ್ಲದವನು ವೀರಶೈವನೆಂದಿಗೂ ಆಗಲಾರನೆಂದು ಚೆನ್ನಾಗಿ ಬೋಧಿಸಿರುತ್ತಾರೆ.

ಶ್ರೀ ಅಖಂಡೇಶ್ವರ ದೇವರು—

''ಬ್ರಾಹ್ಮಣನಾಗಲಿ ಕ್ಷತ್ರಿಯನಾಗಲಿ ವೈಶ್ಯನಾಗಲಿ ಶೂದ್ರನಾಗಲಿ ಆವ ಜಾತಿಯಲ್ಲಿ ಹುಟ್ಟಿದಾತನಾದರೂ ಆಗಲಿ ಗುರುಕಾರುಣ್ಯವ ಪಡೆದು ಅಂಗದ ಮೇಲೆ ಲಿಂಗವ ಧರಿಸಿದವನು ಆಚಾರಸಂಪನ್ನ ಸತ್ಕ್ರಿಯಾವಂತ ನಾದ ಮಹಾತ್ಮನೇ ಮೂರು ಲೋಕಕ್ಕೆ ಅಧಿಕಾರಿಯು ನೋಡಾ ಅಖಂಡೇಶ್ವರಾ.''

''ನೀರುಗಟ್ಟಿಗೊಂಡು ಮುತ್ತಪ್ಪುದಲ್ಲದೆ ಮುತ್ತು ನೀರಪ್ಪುದೇನಯ್ಯ ಹಾಲು ಹೆಪ್ಪುಗೊಂಡು ತುಪ್ಪ ಆಗುವದಲ್ಲದೆ ತುಪ್ಪ ಹಾಲಪ್ಪುದೇನಯ್ಯ ಹೀನ ಜಾತಿಯಲ್ಲಿ ಜನಿಸಿದ ನರನು ಗುರುವಿನ ಕಾರುಣ್ಯದಿಂದ ಶಿವಜಾತಾ ಭರಣನಾದ ಬಳಿಕ ನರನಪ್ಪನೇನಯ್ಯ ಅಖಂಡೇಶ್ವರಾ.''

ಶ್ರೀ ತೋಂಟದ ಸಿದ್ಧಲಿಂಗ ಯತಿಗಳು—

''ಎನ್ನ ಭವಿತನವ ಕಳೆದು ಭಕ್ತನ ಮಾಡಿದಿರಯ್ಯ, ವಾಯು ಪ್ರಾಣಿಯ ಕಳೆದು ಲಿಂಗಪ್ರಾಣಿಯ ಮಾಡಿದಿರಯ್ಯ, ಅಂಗೇಂದ್ರಿಯವ ಕಳೆದು ಲಿಂಗೇಂದ್ರಿಯವ ಮಾಡಿದಿರಯ್ಯ, ಅಂಗವಿಷಯ ಭ್ರಮೆಯ ಕಳೆದು ಲಿಂಗವಿಷಯ ಭ್ರಾಂತನ ಮಾಡಿದಿರಯ್ಯ, ಅಂಗಕರಣಂಗಳ ಕಳೆದು ಲಿಂಗ ಕರಣಂಗಳೇ ಹರಣಕಿರಣವಾಗಿ ಬಿಂಬಿಸುವಂತೆ ಮಾಡಿದಿರಯ್ಯ, ಕುಲ ಸೂತಕ, ಛಲಸೂತಕ, ತನುಸೂತಕ, ಮನಸೂತಕ, ನೆನಹುಸೂತಕ, ಭಾವಸೂತಕವೆಂಬ ಇಂತೀ ಭ್ರಮೆಯ ಕಳೆದು ನಿರ್ಭ್ರಾಂತನ ಮಾಡಿ ರಕ್ಷಿಸಿದ ಶ್ರೀ ಗುರುವಿಂಗೆ ನಮೋ ನಮೋ ಎಂಬೆನಯ್ಯ ಮಹಾಲಿಂಗ ಗುರು ಸಿದ್ಧೇಶ್ವರ ಪ್ರಭುವೇ.''

ಶ್ರೀ ಸಿದ್ಧೇಶ್ವರರು ತಮ್ಮ ಗುರುವಿನ ಸ್ತೋತ್ರವನ್ನು ಮಾಡುವ ಕಾಲಕ್ಕೆ ಮೇಲಿನ ವಚನ ವನ್ನು ಹೇಳಿ, ''ಕುಲಾದಿಗಳನ್ನೆಲ್ಲ ನಷ್ಟವಮಾಡಿದ ಗುರುವೇ ತಮ್ಮ ಚರಣಕಮಲ ಗಳಿಗೆ ನಮೋ ನಮೋ ಎಂಬೆ'' ನೆಂದು ಹೇಳಿರುತ್ತಾರೆ.

ಶ್ರೀ ಬಸವಣ್ಣನವರು—

"ಪಟ್ಟವ ಕಟ್ಟಿದ ಬಳಿಕ ಲಕ್ಷಣವನರಸುವರೇ? ಲಿಂಗದೇವನ ಪೂಜಿಸಿ ಕುಲವನರಸುವರೇ ಅಯ್ಯಾ ಕೂಡಲಸಂಗಮದೇವಾ ಭಕ್ತಕಾಯ ಮಮಕಾಯವೆಂದನಾಗಿ."

ಮತ್ತು

"ದೇವಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡರೆ ನಿಮ್ಮಾಣೆ ನಿಮ್ಮ ಪುರಾತರಾಣೆ ತಲೆದಂಡ ತಲೆದಂಡ ಕೂಡಲ ಸಂಗಮದೇವಾ ಭಕ್ತರ ಕುಲವನರಸಿದರೆ ನಿಮ್ಮ ರಾಣಿವಾಸದಾಣೆ."

ಬಸವಣ್ಣನವರು ಸಾಕ್ಷಾತ್ ಕೂಡಲಸಂಗಮನನ್ನು ಕುರಿತು ಭಕ್ತರಲ್ಲಿ ಕುಲವನ್ನು ಆರಿಸಿದರೆ ನಿಮ್ಮ ರಾಣಿವಾಸದಾಣೆಯೆಂದು ಹೇಳಿರುತ್ತಾರೆ.

ಶ್ರೀ ಚನ್ನಬಸವಣ್ಣನವರು—

"ಉಂಬುವುದು ಉಡುವುದು ಶಿವಾಚಾರ, ಕೊಂಬುವುದು ಕೊಡುವುದು ಕುಲಾಚಾರ ಎಂಬುವ ಅನಾಚಾರಿಯ ಮಾತ ಕೇಳಲಾಗದು. ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರು ಒಂದೇ ಎಂದು ಕೊಟ್ಟು ಕೊಂಬುವದು ಸದಾಚಾರವು, ಉಳಿದವೆಲ್ಲವು ಅನಾಚಾರ. ಎಂತೆಂದೊಡೆ ಸ್ಫಟಿಕದ ಕೊಡದಲ್ಲಿ ಕಾಳಿಕೆಯನರಸುವ ಹಾಗೆ ಅಮೃತದೊಳಗೆ ವಿಷವ ನರಸುವಹಾಗೆ ಸಿಹಿಯೊಳಗೆ ಕಹಿಯನರಸುವಹಾಗೆ ರಜಸೂತಕ, ಕುಲ ಸೂತಕ, ಜನನಸೂತಕ, ಪ್ರೇತಸೂತಕ, ಉಚ್ಛಿಷ್ಟಸೂತಕ ಎಂದೊಡೆ ಆತಂಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ ತೀರ್ಥವಿಲ್ಲ ಪ್ರಸಾದವಿಲ್ಲ ಇಂತೀ ಪಂಚಸೂತಕವ ಕಳೆದಲ್ಲದೆ ಭಕ್ತನಾಗ ಇಂಥ ಭಕ್ತರಲ್ಲಿ ಕೊಟ್ಟು ಕೊಂಬುವುದು ಸದಾಚಾರ ಕೂಡಲಚನ್ನಸಂಗಮದೇವಾ."

ಲಿಂಗವಂತನಾದವಂಗೆ ಯಾವ ಸೂತಕವೂ ಬರಲಾರದು. ಅವನು ಪಂಚಸೂತಕ ಗಳನ್ನು ಕಳೆಯದೆ ಭಕ್ತನಾಗಲಾರನು. ಅರ್ಥಾತ್ ಯಾವಾತನು ಕುಲಾದಿ ಸೂತಕ ಗಳನ್ನು ಮಾಡಿಸುತ್ತಾನೆಯೋ ಅವನು ವೀರಶೈವನಾಗಲಾರನು.

**ವೀರಶೈವ ಧರ್ಮಶಿರೋಮಣಿ—ಪುಟ ೧೪೦**

ದೀಕ್ಷಾಪೂರ್ವಕವಾಗಿ ಗುರುವಿನಿಂದ ಲಿಂಗಧಾರಣೆಯನ್ನು ಹೊಂದಿ ಪಂಚಾಚಾರ ಪರಾಯಣನೂ, ಅಷ್ಟಾವರಣನಿಷ್ಠನೂ, ಷಟ್‌ಸ್ಥಲಸಂಪನ್ನನೂ ಆದ ವೀರಶೈವನಿಗೆ ಜಾತಿಭೇದಗಳಿಲ್ಲವೆಂಬುವದನ್ನು ಪ್ರತಿಪಾದಿಸುತ್ತ ಈ ಮೊದಲು ನಾವು ಉದಾಹರಿಸಿದ ಪಾರಮೇಶ್ವರಾಗಮ, ಸೂಕ್ಷ್ಮಾಗಮ ಮೊದಲಾದ ಗ್ರಂಥಗಳ ಉದಾಹರಣೆಯನ್ನೇ ಕೊಟ್ಟಿರುತ್ತಾನೆ.

ಶ್ರೀಲಿಂಗಧಾರಣ ಮಹಾವಿಭವೇನ ಸರ್ವೇ ರುದ್ರಾ ಬಭೂವುರತ ಏವ ನ ತಾರತಮ್ಯಂ ।
ಏತನ್ಮತೇ ಸಜನನೀಜನಕಃ ಸುತಾ ಇವ ಪರಸ್ಪರ ಸೋದರಭಾವ ಭಾಜಃ ॥

ಮತ್ತು

ಶ್ರೀ ವೀರಶೈವ ಮತನಿಷ್ಠಗುರು ದೀಕ್ಷಿತಾನಾಂ ಜೀವತ್ವ ವರ್ಣವಿಧೌ ಪೃಥಕ್ಸಾಹಸಾನಾಂ ।
ಪುಂಸಾಂ ನ ಮೂಲಮಿಹ ವೇದ್ಮಿ ವದಾಮಿ ತತ್ತ್ವಂ ಸಾಕ್ಷಾತ್ತ್ರಿಪತ್ತ್ರಮಖಿಳ ಶೃತಿಶಾಸನೇನ

ಈ ಎರಡೂ ಶ್ಲೋಕಗಳ ತಾತ್ಪರ್ಯವು ಕೆಳಗೆ ಬರೆದಂತಿರುತ್ತದೆ.

ಶ್ರೀ ಲಿಂಗಧಾರಣ ವೈಭವದಿಂದ ಸರ್ವರೂ ರುದ್ರರೂಪಿಗಳೇ ಆಗುತ್ತಾರೆ. ಮತ್ತು ಒಂದು ಕುಟುಂಬದ ತಂದೆ ತಾಯಿ ಮಕ್ಕಳುಗಳಂತೆ ಪರಸ್ಪರ ಸೋದರಭಾವವನ್ನು ಹೊಂದಿಕೊಂಡಿರತಕ್ಕವರು. ಮತ್ತು ದೀಕ್ಷಿತರಾದ ವೀರಶೈವರು ಶಿವಸ್ವರೂಪಿಗಳೇ ಆಗುತ್ತಾರೆ. ಹೀಗೆ ಪ್ರತಿಪಾದಿಸುತ್ತ,

ಶಿವೋಕ್ತಾಂ ಜಾತಿಮರ್ಯಾದಾಂ ಯೋತೀತ್ಯಭುವಿವರ್ತತೇ ।
ಸ ಚಂಡಾಲ ಇತಿ ಜ್ಞೇಯಃ ಸರ್ವಕರ್ಮ ಬಹಿಷ್ಕೃತಃ ॥

ಯಾವಾತನು ದೀಕ್ಷೆಯಾಗದೆ ಲಿಂಗವನ್ನು ಕಟ್ಟಿಕೊಂಡು ಸ್ವೇಚ್ಛಾಪ್ರವರ್ತನೆಯಿಂದ ಇರುತ್ತಾನೆಯೋ ಅವನ ಕೂಡ ದೀಕ್ಷಿತರಾದ ವೀರಶೈವರು ಬಳಿಕೆ ಭೋಜನಾದಿಗಳನ್ನು ಮಾಡಕೂಡದೆಂದೂ, ಕದಾಚಿತ್ ಮಾಡಿದ್ದೇ ಆದರೆ ಬಹಿಷ್ಕೃತರಾಗುತ್ತಾರೆಂದೂ ಹೇಳಿದ್ದಾರೆ.

ಇಲ್ಲಿ ಶಿರೋಮಣಿಕಾರರ ಅಭಿಪ್ರಾಯವಿಷ್ಟೇ ಇರುತ್ತದೆ. ಯಾರು ಸಂಪ್ರದಾಯ ಶುದ್ಧರಾಗಿ ಲಿಂಗಧಾರಣವನ್ನು ಶಾಸ್ತ್ರೋಕ್ತ ಪ್ರಕಾರವಾಗಿ ಮಾಡಿಕೊಂಡಿರುತ್ತಾರೆಯೋ ಅವರಲ್ಲಿ ಜಾತಿಭೇದಗಳಿಲ್ಲ. ಅವರು ಶಿವಸ್ವರೂಪಿಗಳು. ಇದಕ್ಕೆ ವಿರುದ್ಧವಾಗಿ ದುರಾಚಾರಿಗಳಾಗಿ ತಮ್ಮಿಷ್ಟಕ್ಕೆ ತಾವೇ ಲಿಂಗವನ್ನು ಕಟ್ಟಿಕೊಂಡು ಇರತಕ್ಕವರಿಗೆ ಜಾತಿಭೇದಗಳುಂಟು.

**ವೇದಾಂತಸಾರ ವೀರಶೈವ ಚಿಂತಾಮಣಿ – ಪುಟ ೩೧**

ಶಿವಸಂಸ್ಕಾರಸಂಪನ್ನೋ ಅಯಂ ಶೂದ್ರೋ ಅಯಂ ದ್ವಿಜಃ ।
ಲಿಂಗಭೇದೋ ಕೃತೋಯೇನ ರೌರವಂ ನರಕಂ ವ್ರಜೇತ್ ॥

ಅಂದರೆ–ಶಿವಸಂಸ್ಕಾರವನ್ನು ಹೊಂದಿದವರಲ್ಲಿ ಇವನು ಶೂದ್ರನು, ಇವನು ದ್ವಿಜನು ಎಂದು ಯಾವಾತನು ಲಿಂಗಭೇದವನ್ನು ಮಾಡುತ್ತಾನೆಯೋ ಅವನು ಭಯಂಕರವಾದ ನರಕಾರ್ಣವದಲ್ಲಿ ಮುಳುಗುತ್ತಾನೆ.

ಮತ್ತು 'ಲಿಂಗಸಾರ'

ಸ್ತ್ರೀವಾಥ ಪುರುಷಃ ಷಂಡಶ್ಚಂಡಾಲೋ ದ್ವಿಜವಂಶಜಃ ।
ನ ಜಾತಿಭೇದೋ ಲಿಂಗಾರ್ಚೇ ಸರ್ವೇ ರುದ್ರಗಣಾ ಸ್ಮೃತಾಃ ॥

ನಗರೀ ನಿರ್ಝರಾದ್ಯಂಬು ಗಂಗಾಂಪಾಪ್ಯೈಕತಾಂಯಥಾ ।
ದೀಕ್ಷಾಯೋಗ ಪ್ರಭಾವೇಣ ಶೂದ್ರಾದಿಃ ಶಿವತಾಂ ವ್ರಜೇತ್ ॥

ಗತಂ ಶೂದ್ರಸ್ಯ ಶೂದ್ರತ್ವಂ ದ್ವಿಜತ್ವಂ ಬ್ರಾಹ್ಮಣಸ್ಯತು ।
ಶಿವಸಂಸ್ಕಾರಸಂಪನ್ನೇ ಜಾತಿಭೇದೋ ನ ವಿದ್ಯತೇ ॥

ಸ್ತ್ರೀಯರಾಗಲಿ, ಪುರುಷರಾಗಲಿ, ಷಂಡನಿರಲಿ, ಚಂಡಾಲನಿರಲಿ ಅಥವಾ ಬ್ರಾಹ್ಮಣ ವಂಶದಲ್ಲಿ ಹುಟ್ಟಿರಲಿ ಲಿಂಗಾರ್ಚನೆಯಲ್ಲಿ ಸರ್ವರೂ ರುದ್ರಗಣರು. ಇವರುಗಳಿಗೆ ಜಾತಿಭೇದಗಳಿರುವದಿಲ್ಲ.

ಪಟ್ಟಣಗಳ ನೀರು ಗಂಗೆಯನ್ನು ಕೂಡಿ ಹೇಗೆ ಏಕತ್ವವನ್ನು ಹೊಂದಿರುತ್ತದೆಯೋ ಹಾಗೆಯೇ ದೀಕ್ಷಾಯೋಗ ಪ್ರಭಾವದಿಂದ ಶೂದ್ರಾದಿಗಳು ಶಿವತ್ವವನ್ನು ಹೊಂದುತ್ತಾರೆ. ದೀಕ್ಷೆಯಾದರೆ ಶೂದ್ರನ ಶೂದ್ರತ್ವವೂ, ಬ್ರಾಹ್ಮಣನ ದ್ವಿಜತ್ವವೂ ಹೋಗಿ ಜಾತಿ ಭೇದವಾಗದೆ ಜಾತಿಯ ಐಕ್ಯತೆಯನ್ನು ಹೊಂದುತ್ತದೆಂದೇ ಮೇಲೆ ಬರೆದ ಮೂರು ಶ್ಲೋಕಗಳ ತಾತ್ಪರ್ಯವಾಗಿರುತ್ತದೆ.

ಸಿದ್ಧಾಂತಶೇಖರದಲ್ಲಿ ದೀಕ್ಷಾ ವಿಧಾನವನ್ನು ಹೇಳುವ ಕಾಲಕ್ಕೆ ಹೇಳಿದ ವಿಷಯ ವನ್ನೇ ಎತ್ತಿ, ವೇದಾಂತಸಾರ ವೀರಶೈವ ಚಿಂತಾಮಣಿಕಾರರು—

ಶಿವತ್ವಂಯಾತಿ ಸಃ ತಥಾ ನ ಪುನರ್ಜೀವತಾಂ ವ್ರಜೇತ್ ।
ರಸವಿದ್ಧಂ ಯಥಾ ತಾಮ್ರಂ ತಾಮ್ರಭಾವಾದ್ವಿಮುಚ್ಯತೇ ॥

ಸುವರ್ಣೇನ ಸಹೈಕತ್ವಂ ಗತಂ ತದ್ಯಾತಿ ಹೇಮತಾಂ ।
ನವನೀತಂ ಯಥಾತಪ್ತಂ ತತ್ಸ್ವಭಾವಂ ಪರಿತ್ಯಜೇತ್ ॥

ಘೃತಸ್ವಭಾವಮಾಪನ್ನೇ ನ ಪುನರ್ನವನೀತತಾಂ ।
ಯಥಾ ಶುಕ್ತಿಗತಂ ತೋಯಂ ಮೌಕ್ತಿಕಂ ಜಾಯತೇ ಧ್ರುವಂ ॥

ನ ಪುನಸ್ತೋಯತಾಂ ಯಾತಿ ಮೌಕ್ತಿಕತ್ವಂ ನ ಮುಂಚತಿ ।
ಏವಂ ಸ ಶಿವತಾಂ ಪ್ರಾಪ್ತೋ ನ ಪುನರ್ಜೀವತಾಂ ವ್ರಜೇತ್ ॥

ಶಿವತ್ವಾನ್ನಜಹೀಯೇತ ವಿಮುಕ್ತೋ ದೀಕ್ಷಯಾ ಭವೇತ್ ।
ಸಾ ದೀಕ್ಷಾ ಗುರುಣಾಕಾರ್ಯಾ ॥

ದೀಕ್ಷೆಯಾದವನು ಶಿವತ್ವವನ್ನು ಹೊಂದುತ್ತಾನೆ. ಪುನಃ ಜೀವತ್ವವನ್ನು ಹೊಂದುವದಿಲ್ಲ. ರಸದಿಂದ ಕೂಡಿದ ತಾಮ್ರವು ತಾಮ್ರಭಾವವನ್ನು ಬಿಡುತ್ತದೆ. ಸುವರ್ಣದೊಡನೆ ಏಕತ್ವವನ್ನು ಹೊಂದಿ ಸುವರ್ಣವಾಗುತ್ತದೆ. ಬೆಣ್ಣೆಯು ಕಾಸಿದರೆ ತನ್ನ ಸ್ವಭಾವವನ್ನು ಬಿಡುತ್ತದೆ. ತುಪ್ಪವಾದ ಮೇಲೆ ಪುನಃ ಬೆಣ್ಣೆಯಾಗಲಾರದು. ಕಪ್ಪೆಯ ಚಿಪ್ಪಿನಲ್ಲಿ ಬಿದ್ದಂಥ ನೀರಿನ ಹನಿಯು ಸ್ಥಿರವಾಗಿ ಮುತ್ತಾಗುತ್ತದೆ. ತನ್ನ ಮೌಕ್ತಿಕತನವನ್ನು ಬಿಟ್ಟು ಪುನಃ ನೀರಾಗುವದಿಲ್ಲ.

ದೀಕ್ಷೆಯಿಂದ ಶಿವತ್ವವನ್ನು ಹೊಂದಿದ ಮಾನವನು ಪುನಃ ಜೀವನಾಗಲಾರನು. ದೀಕ್ಷೆಯಿಂದ ಮುಕ್ತನಾದ ಮೇಲೆ ಶಿವತ್ವದಿಂದವನು ಭ್ರಷ್ಟನಾಗುವದಿಲ್ಲ.

ಇಲ್ಲಿಯವರೆಗೆ ಕೆಲವು ವಚನಕಾರರ ವಚನಗಳನ್ನೂ, ಆಗಮಗಳೇ ಮೊದಲಾದ ಕೆಲವು ಸಂಸ್ಕೃತ ಗ್ರಂಥಗಳ ಉದಾಹರಣೆಗಳನ್ನೂ ಕೊಡುತ್ತ, ಅಲ್ಲಲ್ಲಿ ಬಸವಣ್ಣನವರ ವಚನಗಳನ್ನು ಕೊಡುತ್ತ ವೀರಶೈವನಾದವನಿಗೆ ಜಾತಿಭೇದಗಳಿಲ್ಲವೆಂದು ಸಿದ್ಧಾಂತ ಮಾಡಿರುತ್ತೇವೆ. ವೀರಶೈವರಲ್ಲಿ ಅತ್ಯಂತ ಪ್ರಾಮುಖ್ಯ ಕವಿಗಳೆನ್ನಿಸಿಕೊಂಡವರ ಕೆಲವು ಕಾವ್ಯಗಳಲ್ಲಿಯ ಉದಾಹರಣೆಗಳನ್ನು ನೋಡುವದು ಬಹಳ ಯೋಗ್ಯವಾಗಿರುತ್ತದೆ. ಅಂತಹ ಕವಿಗಳಲ್ಲಿ ಕೆಲವರ ಉದಾಹರಣೆಗಳನ್ನು ಮಾತ್ರ ಕೊಡುತ್ತೇವೆ.

**ಕವಿ ಸಿದ್ಧನಂಜೇಶ**— ತನ್ನ ರಾಘವಾಂಕ ಕಾವ್ಯದೊಳಗೆ

ಕೆಸರೊಳಗೆ ಪದ್ಮ ಮುದಿಸುವ ತೆರದಿ ಕಲ್ಲೊಳಗೆ ।
ಕಡವರಂ ಪುಟ್ಟುವೊಲು ಮರದೊಳುಂ ಕಿಚ್ಚು ಜನಿ ।
ಯಿಸುವಂತೆ ಪರನು ಶಿವಭಕ್ತರುಂ ಹೀನಕುಲದೊಳಗೊಗೆದು ಪಲವುತಿರದಾ ॥

ಕೃಷಿ ಮುಖ್ಯಗಳ ಮಾಡೆ ಕುಂದಿಲ್ಲಮವರೊಡನೆ ।
ತಿಸುಳಿಬೆಚ್ಚಂತಿರ್ಪ ನಿಂತಪ್ಪ ಭಕ್ತರಂ ।
ವಸುಧೆಯೊಳು ಕೀರ್ತಿಸುವುದೇ ಮುಕ್ತಿಯುಳಿದರಂ ಪೊಗಳೆ ನರಕಂ ರಾಘವಾ ॥

ಮತ್ತು

ಶಂಭುಲಿಂಗವನಂಗದಲ್ಲಿ ಗುರುಮುಖದಿಂದ ।
ನಂಬಿ ಧರಿಸುವನಾವಜಾತಿಯವನಾದೊಡಂ ।
ಶಂಭುತಾನಹನವಂ ಮುಕ್ತಿವರನೆನಿಸುವಂ ಲಿಂಗವಂಗದೊಳಿಲ್ಲದ ॥
ಇಂಬುಳ್ಳ ಕುಲವಂತನಾದೊಡಂ ನಾರಕವ ।
ನುಂಬುವಂ ಲೋಕದೊಳು ಭವಿಜನ್ಮವೇ ।
ಕಷ್ಟವೆಂಬುದಂ ಬುಧನೋದುತಿರೆ ಕೇಳಿದಳು ಸೂಳೆ ಸಿಂಬೆಸದ್ಗುಣಕದಂಬೆ ॥

ಅಂದರೆ–ಕೆಸರಲ್ಲಿ ಕಮಲವೂ, ಕಲ್ಲೊಳಗೆ ಬಂಗಾರವೂ, ಗಿಡದಲ್ಲಿ ಬೆಂಕಿಯೂ ಹುಟ್ಟುವಂತೆ ಶ್ರೇಷ್ಠರಾದ ಶಿವಭಕ್ತರು ಹೀನಕುಲದಲ್ಲಿ ಜನಿಸಿ, ಒಕ್ಕಲತನ ಮುಂತಾದ ಉದ್ಯೋಗ ಮಾಡುತ್ತಿದ್ದರೂ ಅವರ ಉದ್ಯೋಗದಿಂದ ಏನೊಂದೂ ಕುಂದು ತಟ್ಟುವದಿಲ್ಲ. ತ್ರಿಶೂಲಧಾರಿಯಾದ ಶಿವನು ಅವರಲ್ಲಿ ಸದಾ ಸನ್ನಿಹಿತನಾಗಿರುವನು. ಆದ್ದರಿಂದ ಎಲೈ ರಾಘವಾಂಕನೇ, ಇಂತಹ ಭಕ್ತರನ್ನು ಹೊಗಳುವುದೇ ಮುಕ್ತಿಯು. ಶಿವಭಕ್ತರಲ್ಲದವರನ್ನು ಕೊಂಡಾಡುವವರು ನರಕವನ್ನು ಹೊಂದುತ್ತಾರೆ.

ಮತ್ತು ಗುರುಮುಖದಿಂದ ಶಿವಲಿಂಗವನ್ನು ಪಡೆದ ಯಾವ ಜಾತಿಯವನೇ ಇರಲಿ ಅವನು ಸಾಕ್ಷಾತ್ ಶಿವಸ್ವರೂಪಿಯಾಗುವನು ಅಂದರೆ ಪವಿತ್ರನಾಗುವನು. ಅವನೇ ಮುಕ್ತಿಗೆ ಪಾತ್ರನು. ಆದರೆ ಉದಾರವಾದ ವಂಶದಲ್ಲಿ ಹುಟ್ಟಿದಾಗ್ಯೂ ಅಂಗದಲ್ಲಿ ಲಿಂಗವಿಲ್ಲದಿದ್ದರೆ ಯೋಗ್ಯನಲ್ಲವು. ಆದುದರಿಂದ ಶಿವಭಕ್ತರಲ್ಲಿ ಜಾತಿಭೇದವಿಲ್ಲ.

**ವೀರಶೈವಾಮೃತ ಮಹಾಪುರಾಣ — ಕಾಂಡ ೭, ಸಂಧಿ ೧೬, ಪದ ೯**

ಶಿವಭಕ್ತನಂ ಶಿವನೆಂಬುದಾತನ ಕುಲವ ।
ವಿವರಿಸಲು ತನ್ನ ಲಿಂಗವನೆ ಕಲ್ಲೆಂದು ನುಡಿ ।
ದವನ ದೋಷಂ ತಾಮ್ರಲೋಹಾದಿಗಳು ಪರುಷವುಂಟೆ ಚಿನ್ನವದಾಗಲೂ ॥
ಇವಕೆ ಲೋಹಾದಿ ಗುಣವುಂಟೆ ಕೆಸರೊಳು ಕಂಜ ।
ವನಿರತಂ ಕಲ್ಲೊಳಗೆ ಚಿನ್ನವಾಕಾಷ್ಠ ಸಂ ।
ಭವವ ನಲನೆಂಬವೋಲೆಲ್ಲಿ ಜನಿಸಿದವನಾಗಲಿ ಭಕ್ತರೆಲ್ಲಾ ಶಿವಂ ॥

ಭೀಮಕವಿಕೃತ —

**ಶ್ರೀ ಬಸವೇಶ್ವರ ಪುರಾಣ — ಸಂಧಿ ೫೭**

ಚಾರುಶಿವ ಸಂಯುತನ ಪೂರ್ವವ ।
ನಾರಯಿಸುವುದೆಲ್ಲಂ ಸುಲಿಂಗಾಕಾರವಂ ಶಿಲೆಯೆಂಬವೋಲತ್ಯಂತಪಾತಕವು ।
ಮೇರುವಂ ಸೋಂಕಿದೊಡಲಾತ ।
ದ್ಭೂರಿ ವರ್ಣದೊಳಿಹುದು ಕಾಗೆ ವಿ ।
ಚಾರಿಸಲು ಲಿಂಗೈಕ್ಯಭಾವರ ಕುಲವನರಸುವರೇ ॥ ೬೮ ॥

ಆಗದಿಹುದೇ ಸಿದ್ಧರಸ ಸಂ ।
ಯೋಗದಿಂ ಸೌವರ್ಣಮುಚಂ ।
ನಾಗಿ ಶಕ್ತಿಯೊಳೊಂದಿ ತಾಮ್ರವಹಂಗೆ ಲೋಕದೊಳು ॥
ಶ್ರೀಗುರು ಕರಸ್ಪರ್ಶನದಿ ಪರಿ ।
ಭಾವಿಸಲು ಕುಲವೊಂದೆಯಲ್ಲಾ ।
ಆಗಮೋಕ್ತಿಯೊಳಿಂತು ಅಂತ್ಯಜನಾದೊಡಗ್ರಜಸು ॥ ೬೯ ॥

ಭೂಪಕೇಳ್ಮೃತಿ ತಾನುಮಾ ಮಾ ।
ತಾರುದ್ರ ಯೆನಲೊಬ್ಬಳೆ ।
ಓಪತಾಯ್ತ್ಮಜೆಗಳ್ಗೆ ಬೇರೆಲ್ಲಿಯದು ನೋಡುವಡೆ ॥
ದೀಪಿಸುವ ಮಾಣಿಕ್ಯವಂ ಮಲಿ ।
ನಾಪರಿಮಿತ ಪಟಲ ಮುಸುಕಿದೊಡೆ ರೂಪುಗೆಡವುದೇ ।
ಅದರ ಹಗೆ ಶಿವಭಕ್ತನಾದವನು ॥ ೭೦ ॥

ಧರಣಿಯೊಳು ದುರ್ಜಾತಿ ವೇಷಂ ।
ಬೆರಸಿದಾತನ ಪೆಂಪುಕೆಡವುವೆ ।
ಸರಸಿಜಂ ಪಂಕಜವಮಾ ಅದು ಪೂಜ್ಯವಾಯಿತ್ತು ॥
ಅರಸಕಾಷ್ಠದೊಳೊದನಲವೆ ।
ಲ್ಲರಿಗೆ ಪಾವನತರವಲಾಯಿಮಾ ।
ಪರಿಯೊಳಂತ್ಯಜನಾದೊಡೇಂ ಶಿವಭಕ್ತನುತ್ತಮನು ॥ ೭೧ ॥

ಅಂದರೆ–ಶಿವಸಂಸ್ಕಾರದಿಂದ ಇಷ್ಟಲಿಂಗವನ್ನು ಪಡೆದ ವೀರಶೈವನ ಪೂರ್ವ ಕುಲ ಜಾತಿ ಮುಂತಾದ್ದನ್ನು ಎಣಿಸುವದು ಲಿಂಗಕ್ಕೆ ಶಿಲೆಯೆಂದೆಣಿಸಿದಂತೆ ಪಾತಕವೆನಿಸುವದು. ಮೇರುಪರ್ವತವನ್ನು ಸೋಂಕಿದ ಕಾಗೆಯು ಸುವರ್ಣಪಕ್ಷಿಯಾಗುವಂತೆ ಪರುಷವೇದಿಯ ಸ್ಪರ್ಶದಿಂದ ತಾಮ್ರವು ಬಂಗಾರವಾಗುವಂತೆ ಶ್ರೀಗುರುವಿನ ಹಸ್ತಕಮಲದಿಂದ ಲಿಂಗ ದೀಕ್ಷೆಯನ್ನು ಪಡೆದವರೆಲ್ಲರೂ ಒಂದೇ ಕುಲದವರು, ಅಂದರೆ ಶಿವಕುಲದವರು. ಪಾರ್ವತಿಯೇ ತಾಯಿ, ಪರಮೇಶ್ವರನೇ ತಂದೆಯು. ಹೊಳೆಯುತ್ತಿರುವ ಮಾಣಿಕ್ಯವನ್ನು ಮಶಿ ಮುಸುಕಿದ ಅರಿವೆಯಲ್ಲಿ ಕಟ್ಟಿದರೂ ಆ ರತ್ನದ ರೂಪು ಕೆಡದಿರುವಂತೆ ಶಿವಭಕ್ತನು ಉದ್ಯೋಗ ವ್ಯವಹಾರದಿಂದ ಕೆಟ್ಟಜಾತಿಯವರ ವೇಷದಿಂದೊಡಗೂಡಿದಾಗ್ಯೂ ಕೆಸರಿನಲ್ಲಿ ಹುಟ್ಟಿದ ಕಮಲವು ಪೂಜ್ಯವಾಗುವಂತೆ ಕಟ್ಟಿಗೆಯಿಂದ ಹುಟ್ಟಿದ ಅಗ್ನಿಯು ಪವಿತ್ರ ವಿರುವಂತೆ ಪೂಜ್ಯನೂ ಉತ್ತಮನೂ ಎನಿಸುವನೆಂಬುದಾಗಿ ಬಸವೇಶ್ವರನು ಬಿಜ್ಜಳನಿಗೆ ಹೇಳಿದ್ದನ್ನು ಇಲ್ಲಿ ಹೇಳಲಾಗಿದೆ.

### ವೃಷಭೇಂದ್ರವಿಜಯ — ಆಶ್ವಾಸ ೩೮

ವಾರ್ತೆಯಿದು ಜಗದೊಳಿನ್ನುಂ ।
ವರ್ತಿಸುವುದೆಲೆನೃಪತಿ ಪರಮ ಶಿವಭಕ್ತಿಲಸ ।
ದ್ವರ್ತತನರ ಪೂರ್ವಜಾತಿಯ ।
ನಾರ್ತಡೆಯುದೆ ನುಡಿವರಘುಕ್ಕೊಳಗಪ್ಪರ್ ॥ ೫೯ ॥

ಗುರುಕರ ಜಾತರೊಳೆಂದುಂ ।
ಹರಭಕ್ತರೊಳಿಲ್ಲ ಪೂರ್ವ ಕುಲಜಾತಿಭವ ॥

**ಶ್ರೀ ಮುಪ್ಪಿನ ಷಡಕ್ಷರಿಯ ವಚನ**— ತ್ಯಾಗಭೋಗ ಷಟ್ಪದಿ

ಅಂಬಕಹುಳ ಅಮೃತದನ್ನ ಕಂಬಳಿಗಳು ಕನಕದೂಟ ।
ಅಂಬುಧಿಗಳು ಕಾಲುವೆಗಳು ಸಮವದಾಗಿರೆ ।
ನಂಬಿ ಲಿಂಗದಲ್ಲಿ ಮನವು ।
ತುಂಬಿ ಹೊರಗೆ ಮರೆದನಾಗಿ ।
ಕುಂಭಿನಿಯೊಳು ಹಿರಿದು ಕಿರಿದು ತೋರದಾತಗೆ ॥

ಅರಳ ಮಂಚ ಸರಳ ಹಾಸು ವರ ಸುಗಂಧಪುಡಿಯು ಧೂಳಿ ।
ಅರರೆಕನಕ ಉಡಿಯಧಾರ ನೂಲು ಸಮವದು ।
ಪರಕೆ ಪರವದಾದಲಿಂಗ ಶರಧಿಯಲ್ಲಿ ಮುಳುಗಿ ಬಳಿಕ ।
ಹೊರದ ಮರೆದನಾಗಿ ಹಿರಿದು ಕಿರಿದು ತೋರದು ॥

ಹಿರಿಯರಿವರು ಕಿರಿಯರಿವರು ಅರಿಗಳಿವರು ಮಿತ್ರರಿವರು ।
ಅರಸರಿವರು ಬಂಟರಿವರುಯೆಂದು ತೋರದು ।
ಕರಣಹರಣವೆಲ್ಲ ಲಿಂಗ ಕಿರಣವಾಗಿ ಹೊರಗೆಮರೆದು ।
ಇರುವನಾಗಿ ಹಿರಿದು ಕಿರಿದು ತೋರಬಾರದು ॥

ಹೀಗೆಯೇ ವೀರಶೈವ ಯೋಗಿಗಳೂ, ಶರಣರೂ, ಪಂಡಿತರೂ, ಕವಿಗಳೂ, ಆಗಮಗಳೂ, ತಮ್ಮ ತಮ್ಮ ಗ್ರಂಥಗಳಲ್ಲಿ ವೀರಶೈವನಾದವನಿಗೆ ಜಾತಿಯ ಭೇದವಿಲ್ಲೆಂದು ಸ್ಪಷ್ಟವಾಗಿ ಸಂದರ್ಭಕ್ಕನುಸಾರವಾಗಿ ಹೇಳಿರುವ ನೂರಾರು ಪ್ರಮಾಣಗಳು ಸಿಗುತ್ತವೆ. ಇವರೆಲ್ಲರ ಉಕ್ತಿಗಳನ್ನು ಪ್ರಕರಣಗಳಿಗೆ ಅನುಸರಿಸಿ ಪರಿಶೀಲಿಸಿ ನೋಡಿದರೆ ಗುರುವಿನಿಂದ ಲಿಂಗ ಧಾರಣವನ್ನು ಹೊಂದಿದ ಶಿವಭಕ್ತನಿಗೆ ಜಾತಿಭೇದವೆಂಬುವದು ಇಲ್ಲವೆಂದು ಸ್ಪಷ್ಟ ತಿಳಿಯುತ್ತದೆ. ವೀರಶೈವನಿಗೆ ಮುಖ್ಯವಾಗಿ ಲಿಂಗಧಾರಣವೇ ಶ್ರೇಷ್ಠವಾದುದು. ಜಾತಿಭೇದವನ್ನು ತೋರಿಸುವ ಲಿಂಗಕ್ಕೆ ಬೆಲೆ ಬರಲಾರದು.

ಲಿಂಗವೆಂದರೆ—'ಯತೋವಾಚೋ ನಿವರ್ತಂತೇ ಅಪ್ರಾಪ್ಯಮನಸಾ ಸಹ' ಎಂದೆನಿಸುವ ಲಿಂಗವು, 'ಶೃತಿಚಕಿತಮಭಿದತ್ತೇ' ಎಂದೆನಿಸುವ ಲಿಂಗವು, 'ಏಕಮೂರ್ತಿ ಸ್ತ್ರಿಧಾಭೇದಂ' ಎಂದೆನಿಸುವ ಲಿಂಗವು, 'ಅಯಂ ಮೇಹಸ್ತೋ ಭಗವಾನ್' ಎಂದೆನಿಸುವ ಲಿಂಗವು, 'ಅಯಂ ಮೇ ಭಗವತ್ತರಃ' ಎಂದೆನಿಸುವ ಲಿಂಗವು, 'ಅಣೋರಣೀಯಾನ್ ಮಹತೋ ಮಹೀಯಾನ್' ಎಂದೆನಿಸುವ ಲಿಂಗವು, 'ಶ್ರೀಗುರು ಲಿಂಗ ಜಂಗಮರೂಪಾಣಿ ಇಷ್ಟಪ್ರಾಣಸ್ತಥಾಭಾವಂ ತ್ರಿವಿಧಾವೈಕ್ಯವರಾನನೇ' ಎಂದುದಾಗಿ ತ್ರಿವಿಧವು ಏಕೀಭವಿಸಿ ಲಿಂಗರೂಪಾಗಿ ಎನ್ನ ಕರಸ್ಥಲಕ್ಕೆ ಬಂದು ಕರತಲಾಮಲಕವಾಗಿ ತೋರುತಿರ್ದನೆ ಆಹಾ ಎನ್ನ ಪುಣ್ಯವೇ, ಆಹಾ ಎನ್ನ ಭಾಗ್ಯವೇ, ಆಹಾ ಎನ್ನ ಸತ್ಯವೇ, ಆಹಾ ಎನ್ನ ನಿತ್ಯವೇ, ಶಿವ ಶಿವ ಮಹಾದೇವ ನೀನೇ ಬಲ್ಲೆ ಉರಿಲಿಂಗಪೆದ್ದಿ ಪ್ರಿಯವಿಶ್ವೇಶ್ವರಾ.

ಇಂತಹ ಶ್ರೇಷ್ಠತರವಾದ ಲಿಂಗವನ್ನು ಷಡಧ್ವಶೋಧನಾಪೂರ್ವಕವಾಗಿ ಧರಿಸಿ ಕೊಂಡವನಿಗೆ ಕುಲಾದಿಗಳ ಸೋಂಕುಗಳು ಬರುವದು ಶಕ್ಯವಿಲ್ಲ. ಲಿಂಗಧಾರಣವನ್ನು ಸಾವಿರಾರು ವರ್ಷಗಳಿಂದ ಅನೇಕರು ಮಾಡಿಕೊಳ್ಳುತ್ತ ವೀರಶೈವ ಮತದಲ್ಲಿ ಪ್ರವಿಷ್ಟ ರಾಗಿರುತ್ತಾರೆ. ಮತ್ತು ಲಿಂಗದ ಶ್ರೇಷ್ಠತೆಯನ್ನು ಲೋಕದೊಳಗೆ ತೋರಿಸುತ್ತ ಬಂದಿರುತ್ತಾರೆ. ಅಂಥವರಲ್ಲಿ ಕವಿಗಳೂ, ಪಂಡಿತರೂ, ಬ್ರಾಹ್ಮಣರೂ, ಜೈನರೂ. ಉಳಿದ ಎಲ್ಲಾ ಸಮಾಜದವರೂ, ದೇಸಾಯಿಗಳೂ, ದೇಶಪಾಂಡೆಯವರೂ, ನಾಡಗೌಡರೇ

ಮೊದಲಾದ ಪ್ರಖ್ಯಾತ ಪುರುಷರಿರುತ್ತಾರೆ. ಅವರಲ್ಲಿ ಕೆಲವರ ಹೆಸರುಗಳನ್ನು ಮಾತ್ರ ಇಲ್ಲಿ ಹೇಳಬಯಸುತ್ತೇವೆ. ಈ ಮಹನೀಯರೆಲ್ಲ ವೀರಶೈವ ಸಮಾಜಕ್ಕೆ ಅತ್ಯಂತ ಉಪಕಾರವನ್ನು ಮಾಡಿರುತ್ತಾರೆ. ಆಚಾರನಿಷ್ಠರಾದ ಶಿವಭಕ್ತರು ಯಾವ ಜಾತಿಯವರೇ ಇರಲಿ ಅವರು ವೀರಶೈವ ದೀಕ್ಷೆಯನ್ನು ಹೊಂದಲು ಮುಕ್ತದ್ವಾರವಿರುವದು. ಧರ್ಮದ ಬೆಳವಣಿಗೆಗೆ ಇದು ಅತ್ಯಂತ ಮಹತ್ವವಾದುದು.

ಇತ್ತೀಚೆಗೆ ಕೆಲವರು ಸ್ವಾರ್ಥನಿಷ್ಠರಾಗಿ ಸಮಾಜದಲ್ಲಿ ಭಿನ್ನಾಭಿಪ್ರಾಯವನ್ನು ಹುಟ್ಟಿಸುತ್ತ ಅದರ ಲಾಭವನ್ನು ತಾವು ಮಾಡಿಕೊಂಡು ಸಮಾಜದ ಬೆಳವಣಿಗೆಗೆ ಕಂಟಕಪ್ರಾಯರಾಗಿ ಧರ್ಮಗ್ರಂಥಗಳಲ್ಲಿದ್ದ ಕೆಲವು ವಿಷಯಗಳನ್ನು ತೆಗೆದುಹಾಕುವದೂ, ಇಲ್ಲದ ವಿಷಯುಗಳನ್ನು ಸೇರಿಸುವದೇ ಮೊದಲಾದ ದುಷ್ಕೃತ್ಯಗಳನ್ನು ಮಾಡುತ್ತ, ಇವರು ಆಗಂತುಕರು, ಇವರು ಸಂಕರರು ಎಂದು ಹೇಳುತ್ತಲಿರುವದು ಅವರ ಅಜ್ಞಾನತನದ ಪರಮಾವಧಿಯಾಗಿರುತ್ತದೆ.

ವೀರಶೈವರಲ್ಲಿ ಜಾತಿಭೇದಗಳಿಲ್ಲವೆಂಬುವದು ಸಿದ್ಧವಾದುದು. ಸಾವಿರಾರು ವರ್ಷಗಳಿಂದ ಶುದ್ಧಾಚಾರಸಂಪನ್ನರಾದವರಿಗೆ ಲಿಂಗಧಾರಣವನ್ನು ಮಾಡುತ್ತ ಬಂದಿದ್ದರೂ, ಈಗ ವೀರಶೈವರಲ್ಲಿ ಅನೇಕ ಪಂಗಡಗಳಾಗಿ ಪರಸ್ಪರ ಸಹಾನುಭೂತಿಯಿಲ್ಲದೆ ಸಮಾಜದಲ್ಲಿ ಐಕ್ಯವಿಲ್ಲದಂತಾಗಿದೆ. ಧರ್ಮಬೋಧೆಯಿಂದ ಜನಗಳಲ್ಲಿದ್ದ ಅಜ್ಞಾನತನವನ್ನು ಹೋಗಲಾಡಿಸಿ ಸನ್ಮಾರ್ಗಕ್ಕೆ ಹಚ್ಚುವದು ಪ್ರತಿಯೊಬ್ಬ ವೀರಶೈವನ ಕರ್ತವ್ಯವಾಗಿರುತ್ತದೆ. ವೀರಶೈವ ಸಮಾಜವು ಎಚ್ಚತ್ತು ಈ ಕಾರ್ಯವನ್ನು ಮಾಡುತ್ತ ಬಂದಿದ್ದರೆ ಈಗಿನ ಕಾಲದಲ್ಲಿ ಈ ಸಮಾಜದ ರಾಜಕಾರಣವು ಅತ್ಯಂತ ಪ್ರಫುಲ್ಲಿತವಾಗುತ್ತಿತ್ತು. ಅಂತಹ ಸುದೈವವು ವೀರಶೈವರಿಗೆ ಬಾರದೇ ಇದ್ದುದು ಸಮಾಜದ ದುರ್ದೈವವಾಗಿರುತ್ತದೆ.

ಶ್ರೀರೇಣುಕಾದ್ಯಾಚಾರ್ಯರಾಗಲೀ, ಬಸವಾದಿ ಪ್ರಮಥರಾಗಲೀ ಜನಗಳನ್ನು ಸನ್ಮಾರ್ಗಕ್ಕೆ ಹಚ್ಚುತ್ತ, ಧರ್ಮಬೋಧೆಯನ್ನು ಮಾಡುತ್ತ ವೀರಶೈವರನ್ನಾಗಿ ಮಾಡಿರುತ್ತಾರೆ. ಶ್ರೀಬಸವಣ್ಣನವರಂತಹ ಮಹಾವಿಭೂತಿಯು ಅವತರಿಸಿ ಕ್ರಾಂತಿಯನ್ನು ಮಾಡಿ ವೀರಶೈವ ಸಮಾಜದ ದ್ವಾರವನ್ನು ತೆರೆದು ಸರ್ವರಿಗೂ ಮುಕ್ತಮಾಡಿದ್ದುದೇ ಈಗಿನ ಲಿಂಗವಂತ ಸಮಾಜದ ಸ್ಥಿತಿಗೆ ಕಾರಣವಾಗಿರುತ್ತದೆ. ಇಲ್ಲದಿದ್ದರೆ ಅದರ ಸ್ಥಿತಿಯೇ ಬೇರೆಯಾಗುತ್ತಿದ್ದಿತು.

ವೀರಶೈವ ಧರ್ಮೋದ್ಧಾರದ ಕಾರ್ಯವು ಬಹಳ ವೇಗದಿಂದಾಗದಿದ್ದರೂ ಮಂದಗತಿಯಿಂದಲಾದರೂ ನಡದೇ ಇರುತ್ತದೆ. ಕೆಲವು ಮಹನೀಯರು ಈಗಲೂ ಈ ಕಾರ್ಯವನ್ನು ನಡೆಸಿಯೇ ಇರುತ್ತಾರೆ. ಅಂತಹ ಮಹನೀಯರೇ ವೀರಶೈವೋದ್ಧಾರಕರಾಗುವದರಲ್ಲಿ ಸಂಶಯವಿಲ್ಲ. ಮೊದಲಿನಿಂದಲೂ ಅನೇಕ ಮಹನೀಯರು ಈ ಕಾರ್ಯವನ್ನು ಮಾಡುತ್ತ ಬಂದಿರುತ್ತಾರೆ.

"ಕ್ರಿಯಾಸಾರ" ಗ್ರಂಥಕಾರರು ತಮ್ಮ ಗ್ರಂಥದ ಮೊದಲನೆಯ ಪರಿಚ್ಛೇದದಲ್ಲಿ

> ಚತುರ್ದಶ ಸಹಸ್ರಂ ಹಿ ಕೈಲಾಸಾವರಣಾಧಿಪಾಃ ।
> ಮಠಪ್ರವರ್ತಕಾಸ್ಸರ್ವೇ ಗುರುಪೀಠಾದಿರೋಹಿಣಃ ॥

ಅಂದರೆ– ಹದಿನಾಲ್ಕುಸಾವಿರ ಗುರುಗಳು ಮತಪ್ರವರ್ತಕರಾಗಿ ಕಾರ್ಯವನ್ನು ಮಾಡಿದ್ದಾರೆ. ಇವರೆಲ್ಲ ಗುರುಪೀಠವನ್ನು ಆರೋಹಣಮಾಡಿದವರಾಗಿರುತ್ತಾರೆ. ಆದ್ದರಿಂದ ಇಂಥವರೇ ಈ ಕಾರ್ಯವನ್ನು ಮಾಡಬೇಕೆಂಬುದಿಲ್ಲ. ಪ್ರತಿಯೊಬ್ಬ ವೀರಶೈವನೂ ತನ್ನ ಜನ್ಮದಲ್ಲಿ ಸ್ವಲ್ಪ ಸಮಯವನ್ನಾದರೂ ವೀರಶೈವ ಧರ್ಮಬೋಧೆಯ ಕಾರ್ಯದಲ್ಲಿ ಕೊಡಬೇಕು. ಅಂದರೆ ಅವನು ವೀರಶೈವನಾಗಿ ಹುಟ್ಟಿದುದಕ್ಕೆ ಸಾರ್ಥಕವಾಗುವದು.

ಅನಾಚಾರಕ್ಕೆ ವೀರಶೈವ ಧರ್ಮದಲ್ಲಿ ಆಸ್ಪದವಿಲ್ಲ. ಅಂಥವರನ್ನು ಬಸವಣ್ಣನವರು ಬಹಳ ಹಳಿದಿರುತ್ತಾರೆ. "ಲಾಂಛನಕ್ಕೆ ಶರಣೆಂಬೆ ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ ನೀ ಸಾಕ್ಷಿಯಾಗಿ ಛೀ ಎಂಬೆ" ಎಂದು ಹೇಳಿರುತ್ತಾರೆ. ವೀರಶೈವ ಸಮಾಜದ ಆಚಾರಪರಂಪರೆ– ಸಂಸ್ಕೃತಿ ಮೊದಲಾದವುಗಳು ಅತ್ಯಂತ ಪವಿತ್ರವಾದವುಗಳೆಂಬುವದನ್ನು ಬಸವಣ್ಣನವರು ಲೋಕದ ಜನಗಳಿಗೆ ತೋರಿಸಿಕೊಟ್ಟಿರುತ್ತಾರೆ. ಮದ್ಯಪಾನ, ಮಾಂಸಭಕ್ಷಣಾದಿಗಳನ್ನು ತಿರಸ್ಕರಿಸಿರುತ್ತಾರೆ.

> "ಲಿಂಗವಿಲ್ಲದೆ ನಡೆವವರ, ಲಿಂಗವಿಲ್ಲದೆ ನುಡಿವವರ, ಲಿಂಗವಿಲ್ಲದೆ ಉಗುಳುನುಂಗಿದರೆ ಅಂದಂದಿಗೆ ಕಿಲ್ಬಿಷವಯ್ಯಾ ಏನೆಂಬೆ ಏನೆಂಬೆನಯ್ಯಾ ಲಿಂಗವಿಲ್ಲದೆ ನುಡಿವ ಶಬ್ದಸೂತಕ ಕೇಳಲಾಗದು. ಲಿಂಗವಿಲ್ಲದೆ ಗಮಿಸಿದೊಡೆ ಆ ನಡೆನುಡಿಗೊಮ್ಮೆ ವ್ರತಗೇಡಿ ಕೂಡಲಸಂಗಮದೇವಾ."

> "ಕುಂಬಳಕಾಯಿಗೆ ಕಬ್ಬುನದ ಕಟ್ಟಕೊಟ್ಟರೆ ಕೊಳೆವುದಲ್ಲದೆ ಬಲುಹಾಗಬಲ್ಲುದೇ? ಅಳಿದ ಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿ ಎಂತಹುದೋ? ಮುನ್ನಿನಂತೆ ಕೂಡಲಸಂಗಯ್ಯಾ ಮನಹೀನನ ಮಿಾಸಲ ಕಾಯ್ದಿರಿಸಿದಂತೆ."

"ಆಚಾರವೇ ಸ್ವರ್ಗ, ಅನಾಚಾರವೇ ನರಕ"ವೆಂಬುವ ಮಹಾ ಮಂತ್ರವನ್ನು ಸರ್ವರಿಗೂ ಬೋಧಿಸಿರುತ್ತಾರೆ. ಮತ್ತು ಬಸವಣ್ಣನವರು—

> "ಸಗಣಿಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣಾ, ಮಣ್ಣಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದರೆ ನಿಚ್ಚನಿಚ್ಚಕ್ಕೆ ಕೆಸರಹುದಲ್ಲದೆ ಅದರಚ್ಚುಗ ಬಿಡದಣ್ಣಾ, ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ ಕೆಟ್ಟವನೇಕೆ ಸದ್ಭಕ್ತನಹನು ಕೂಡಲಸಂಗಮದೇವಾ."

**ವಚನಶಾಸ್ತ್ರಸಾರ—ಭಾಗ ೧, ಪುಟ ೬೯**

> "ಎಲ್ಲರ ದೀಕ್ಷೆಯ ಪರಿಯಂತಲ್ಲ ಎಮ್ಮಯ್ಯನ ದೀಕ್ಷೆ ನಡೆನುಡಿ ಶುದ್ಧವಾದವರಿಗಲ್ಲದೆ ಅನುಗ್ರಹಿಸನೋಡಾ. ಪರಮಾರ್ಥಕ್ಕಲ್ಲದ ಜಡನರರ ನೊಲ್ಲನೊಲ್ಲ. ದೀಕ್ಷೆಯ ಕೊಡನು ಭವಭಾರಿಗಳ ಮುಖದತ್ತ ನೋಡನಯ್ಯ ನಮ್ಮ ಕೂಡಲಚನ್ನಸಂಗಯ್ಯನೆಂಬ ಜ್ಞಾನ ಗುರು."

ಅನಾಚಾರಿಗಳಾದವರಿಗೆ ವೀರಶೈವ ಧರ್ಮದಲ್ಲಿ ಸ್ಥಾನವಿಲ್ಲವೆಂಬುವದನ್ನು ಮೇಲೆ ತೋರಿಸಿರುತ್ತೇವೆಯಷ್ಟೆ?

ಶ್ರೀ ತೋಂಟದ ಸಿದ್ಧೇಶ್ವರದೇವರು—

"ಆಚಾರವಿಲ್ಲದ ಗುರು ಭೂತಪ್ರಾಣಿ, ಆಚಾರವಿಲ್ಲದ ಲಿಂಗ ಶಿಲೆ, ಆಚಾರವಿಲ್ಲದ ಜಂಗಮ ಮಾನವ, ಆಚಾರವಿಲ್ಲದ ಪಾದೋದಕ ನೀರು, ಆಚಾರವಿಲ್ಲದ ಪ್ರಸಾದ ಎಂಜಲು, ಆಚಾರವಿಲ್ಲದ ಭಕ್ತ ದುಷ್ಕರ್ಮಿ, ಇದಕಾರಣ ಅಟ್ಟವನೇರುವದಕ್ಕೆ ನಿಚ್ಚಣಿಕೆಯೇ ಸೋಪಾನವಯ್ಯ. ಹರ ಪದವನೇರುವದಕ್ಕೆ ಶ್ರೀಗುರು ಹೇಳಿದ ಸದಾಚಾರವೇ ಸೋಪಾನವಯ್ಯ. ಗುರು ಉಪದೇಶವ ಮೀರಿ ಮನಕ್ಕೆ ಬಂದಂತೆ ವರ್ತಿಸುವ ಪಾಪಿಗಳ ಎನಗೊಮ್ಮೆ ತೋರದಿರಯ್ಯ ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ."

ಶ್ರೀ ಬಸವಣ್ಣನವರು—

"ಸದಾಚಾರ ಸದ್ಭಕ್ತಿ 'ಇಲ್ಲದವರನೊಲ್ಲನಯ್ಯಾ ಅವರಾರಾಧನೆ ದಂಡ ನಿಚ್ಚನಿಚ್ಚ ಪ್ರಾಯಶ್ಚಿತ್ತರನೊಲ್ಲ ಕೂಡಲಸಂಗಮದೇವಾ ಭೂ ಭಾರಕರ."

ಹೀಗೆ ಬಸವಣ್ಣನವರು ಹೇಳಿರುವದನ್ನು ನೋಡಿದರೆ ಅನಾಚಾರಕ್ಕಾಗಲೀ, ಅತ್ಯಾಚಾರಕ್ಕಾಗಲೀ ಕೊಂಚವೂ ಸ್ಥಾನವಿಲ್ಲ. ಹೀಗಿದ್ದರೂ ಸಂಕರ ಮಾಡುತ್ತಾರೆಂದು ಅಜ್ಞಜನರೆದುರಿಗೆ ಹೇಳಿಕೊಳ್ಳುತ್ತ ಕೂಡುವದರಲ್ಲಿ ಏನೂ ಹುರುಳಿಲ್ಲ. ಹಾಗೆ ಮಾಡುವವರಿಗೆ ಯಾವ ಪುರುಷಾರ್ಥವೂ ದೊರೆಯಲಾರದು. ಅಂತಹ ಮನುಷ್ಯನೇ ಲೋಕದಲ್ಲಿ ಅಪಹಾಸ್ಯಕ್ಕೀಡಾಗುವದು ನಿಶ್ಚಯ. ಶ್ರೀ ಚನ್ನಬಸವಣ್ಣನವರ ಕೆಳಗೆ ಬರೆದ ವಚನವು ಬಹಳ ಉತ್ಕೃಷ್ಟವಾದುದಾಗಿರುತ್ತದೆ.

"ಶ್ರೀಗುರುವಾದಾತನು ಸಕಲಾಗಮಂಗಳ ಹೃದಯವನರಿದು ತನ್ನ ಆದಿಮಧ್ಯಾವಸಾನಮಂ ತಿಳಿದು ಸರ್ವಾಚಾರವು ತನ್ನಲ್ಲಿ ನೆಲೆಗೊಂಡು ಉಪದೇಶವ ಮಾಡುವ ಪರಿಯೆಂತೆಂದೊಡೆ ಬ್ರಾಹ್ಮಣನಂ ಮೂರು ವರ್ಷ ನೋಡಬೇಕು, ಕ್ಷತ್ರಿಯನಂ ಆರು ವರ್ಷ ನೋಡಬೇಕು, ವೈಶ್ಯನಂ ಒಂಭತ್ತು ವರ್ಷ ನೋಡಬೇಕು, ಶೂದ್ರನಂ ಹನ್ನೆರಡು ವರ್ಷ ನೋಡಬೇಕು ಅದೆಂತೆಂದೊಡೆ—

ವೀರಾಗಮ ಪ್ರಮಾಣ—

ಬ್ರಾಹ್ಮಣಂ ತ್ರೀಣಿವರ್ಷಾಣಿ । ಕ್ಷತ್ರಿಯಂ ವರ್ಷಷಟ್ಸುಚ ।<br>
ವೈಶ್ಯಂತು ನವವರ್ಷಾಣಿ । ಶೂದ್ರಂ ದ್ವಾದಶವರ್ಷಾಣಿ ॥

ಇಂತೀ ಶೃತ್ಯರ್ಥವನರಿಯದೆ ಉಪಾಧಿವಿಡಿದು ಉಪದೇಶವಂ ಮಾಡಿದಾತ ಗುರುವಲ್ಲ ಉಪದೇಶವಿಡಿದು ಉಪಾಧಿಯಲ್ಲಿ ದೀಕ್ಷೆಕೊಂಬಾತ ಶಿಷ್ಯನಲ್ಲ ಇವರಿಬ್ಬರ ನಿಲವು ಒಂದೇ. ಠಕ್ಕನ ಮನೆಗೆ ಠಕ್ಕ ಬಂದಂತೆ ಆ ಗುರು ಶಿಷ್ಯರಿಬ್ಬರನು ರೌರವನರಕದಲ್ಲಿಕ್ಕುವ ನಮ್ಮ ಕೂಡಲಚನ್ನ ಸಂಗಮದೇವಾ."

ಈ ವಚನವನ್ನು ಓದುಗರು ಧ್ಯಾನದೃಷ್ಟಿಯಿಂದ ವಿಚಾರಿಸಿದರೆ ಅಜ್ಞಾನಿಯಾದ ಗುರುವಿಗೆ ಸಮಾಜದಲ್ಲಿ ಸ್ಥಾನವಿಲ್ಲ. ಗುರುವಾದವನು ಸಕಲ ಆಗಮಗಳನ್ನು ಕಲಿತು ಅವುಗಳ

ವಿಷಯುಗಳನ್ನೆಲ್ಲ ತನ್ನಲ್ಲಿ ತಿಳಿದು ಸರ್ವಾಚಾರವು ತನ್ನಲ್ಲಿ ನೆಲೆಗೊಳ್ಳುವಂತೆ ಮಾಡಿ ಕೊಂಡು, ಅಂದರೆ ಜ್ಞಾನಸಂಪನ್ನನೂ, ಆಚಾರಸಂಪನ್ನನೂ ಆಗಿ ಉಪದೇಶವನ್ನು ಕೊಡಬೇಕು. ಉಪದೇಶವನ್ನು ಕೊಡುವದಕ್ಕಾದರೂ ಒಂದು ಕಾಲನಿಯಮನವಿರುವದು. ಬ್ರಾಹ್ಮಣನಾದವನನ್ನು ಮೂರು ವರ್ಷ ನೋಡಬೇಕು. ಅಂದರೆ ವೀರಶೈವ ಭಕ್ತಿಯು ಅವನಲ್ಲಿ ಅಳವಟ್ಟಿರುವದೇ? ಅಷ್ಟಾವರಣಗಳಲ್ಲಿ ನಿಷ್ಠನಾಗಿರುವನೇ ಎಂಬುವ ಮೊದಲಾದ ಗುಣಗಳನ್ನು ಪರೀಕ್ಷಿಸಿ ದೀಕ್ಷೆಯನ್ನು ಕೊಡಬೇಕು. ಇದರಂತೆಯೇ ಕ್ಷತ್ರಿಯನನ್ನು ಆರು ವರ್ಷಗಳವರೆಗೂ, ವೈಶ್ಯನನ್ನು ಒಂಭತ್ತು ವರ್ಷಗಳವರೆಗೂ, ಶೂದ್ರನನ್ನು ಹನ್ನೆರಡು ವರ್ಷಗಳವರೆಗೂ ಪರೀಕ್ಷಿಸಿ ಅವನಿಗೆ ದೀಕ್ಷೆಯನ್ನು ಕೊಡ ಬೇಕೆಂದು ವೀರಾಗಮ ಪ್ರಮಾಣವನ್ನು ಕೊಟ್ಟು ವಚನಕಾರರು ಬಹಳ ಚೆನ್ನಾಗಿ ಸಮರ್ಥನೆಯನ್ನು ಮಾಡಿರುತ್ತಾರೆ. ಗುರುವಾದವನು ಹೇಗಿರಬೇಕು? ಶಿಷ್ಯನ ಗುಣಗಳು ಹೇಗೆ ಇರುತ್ತವೆ? ಇವುಗಳನ್ನೆಲ್ಲ ಚೆನ್ನಾಗಿ ಸಿರೀಕ್ಷಿಸಿ ದೀಕ್ಷೆಯನ್ನು ಕೊಡಬೇಕು ಎಂದು ಹೇಳಿರುತ್ತಾರೆ.

ಇಲ್ಲಿ ಇನ್ನೊಂದು ಮಹತ್ವದ ವಿಷಯವು ತಿಳಿದುಬರುತ್ತದೆ. ವೀರಶೈವ ಮತವನ್ನು ಪ್ರವೇಶಿಸಬೇಕಾದರೆ ಬ್ರಾಹ್ಮಣನಿಗೂ ಕೂಡ ಮೂರು ವರ್ಷಗಳು ಬೇಕೆಂದು ಹೇಳಿದ ಮೇಲೆ ವೀರಶೈವ ಮತದ ಪ್ರಾಶಸ್ತ್ಯೆಯು ಎಂತಹ ಘನತೆಯುಳ್ಳದ್ದಾಗಿರುತ್ತದೆಂಬುವದು ಇದರಿಂದ ಜನಗಳಿಗೆ ಸ್ಪಷ್ಟ ತಿಳಿಯುವಂತಿದೆ. ಕೆಲವು ವೀರಶೈವ ಪಂಡಿತರಿಗೆ ವೀರ ಶೈವರಲ್ಲಿ ನಾಲ್ಕು ವರ್ಣಗಳುಂಟೆಂದು ಭ್ರಾಮಕ ಕಲ್ಪನೆಯು ಇರುತ್ತದೆ. ಈ ವಚನ ದಿಂದ ಅವರ ಕಲ್ಪನೆಯು ಹುರುಳಿಲ್ಲದ್ದು ಮತ್ತು ಅಯೋಗ್ಯವಾದುದೆಂದು ತಿಳಿದು ಬರುತ್ತದೆ.

ವೀರಶೈವನಾಗಬೇಕಾದರೆ ಎಲ್ಲ ವರ್ಣದವರಿಗೂ ಇಂತಿಷ್ಟು ವರ್ಷಗಳವರೆಗೆ ಅವನ ಆಚಾರವಿಚಾರಗಳನ್ನು ನೋಡಬೇಕೆಂದು ಹೇಳಿರುವದರಿಂದ ಲಿಂಗವಂತ ಅಥವಾ ವೀರಶೈವ ಧರ್ಮವು ನಾಲ್ಕು ವರ್ಣಕ್ಕೆ ಮೀರಿದ್ದು ಅಥವಾ ಅತಿವರ್ಣಿ ಎಂದು ಸ್ಪಷ್ಟ ಹೇಳಿದಂತಾಯಿತು. ಹನ್ನೆರಡು ವರ್ಷ ಆಚಾರಾದಿ ತಪಗಳನ್ನಾಚರಿಸಿದರೆ ಅವನು ವೀರಶೈವನಾಗಲು ಯೋಗ್ಯನಾಗುತ್ತಾನೆಂದು ಹೇಳಿರುವದರಿಂದ ವೀರಶೈವರಲ್ಲಿ ಶೂದ್ರರು ಉಂಟೆಂದು ಹೇಳುವದು ಮೂರ್ಖತನದ ಪ್ರದರ್ಶನವಾಗಿರುತ್ತದೆ.

ಮೇಲ್ಕಂಡ ವಚನವನ್ನು ಹೇಳುವ ಕಾಲಕ್ಕೆ ಜ್ಞಾನಿಗಳಾದ ಚನ್ನಬಸವಣ್ಣನವರು ವೀರಾಗಮದ ಪ್ರಮಾಣವನ್ನು ಕೊಟ್ಟಿರುತ್ತಾರೆ. ಈ ವಿಷಯವು ಲಕ್ಷ್ಯದಲ್ಲಿಡತಕ್ಕ ಮಾತಾಗಿದೆ. ಆಗಮಗಳ ಮೂಗನ್ನು ಕೊಯ್ಯಬೇಕೆಂದು ಹೇಳಿದ ಶರಣರು ಆಗಮದ ಪ್ರಮಾಣವನ್ನೇಕೆ ಕೊಟ್ಟರೆಂಬುವದನ್ನು ಇಲ್ಲಿ ವಿಚಾರಮಾಡುವದು ಅವಶ್ಯಕವಿರುತ್ತದೆ. ಶರಣರು ಶಿವಾಗಮಗಳ ಬಗ್ಗೆ ತಿರಸ್ಕಾರಭಾವನೆಯಿಂದ ಹೇಳಿರುವದಿಲ್ಲ. ಅನಾಚಾರ ವನ್ನು ಬೋಧಿಸತಕ್ಕ ಕೆಲವು ಅಶ್ರೌತಾಗಮಗಳೂ, ಶಾಕ್ತೇಯಾಗಮಗಳೂ ಇರುತ್ತವೆ. ಅವುಗಳನ್ನು ಕುರಿತು ಹೇಳಿದ ವಾಕ್ಯಗಳಿರುತ್ತವೆ. ಮದ್ಯಮಾಂಸಾದಿಗಳನ್ನು ಶಾಕ್ತೇಯಾ ಗಮಗಳು ಹೇಳುವದರಿಂದ ಶರಣರು ಆಗಮಗಳನ್ನು ಖಂಡಿಸಿದ್ದು ಯಥಾಯೋಗ್ಯವಿರು ತ್ತದೆ. ಈ ವಿಷಯವನ್ನು "ಆಗಮಗಳೂ ಬಸವಣ್ಣನವರೂ" ಎಂಬುವ ಪ್ರಕರಣದಲ್ಲಿ ವಿಸ್ತಾರವಾಗಿ ಕೊಡಲಾಗಿದೆ.

ಶ್ರೀ ಬಸವಣ್ಣನವರ ಕಾಲದಿಂದ ಅನೇಕ ಮಹಾನ್ ಮಹಾನ್ ವ್ಯಕ್ತಿಗಳು ವೀರಶೈವ ಮತವನ್ನು ಸ್ವೀಕರಿಸಿರುವದು ವೀರಶೈವರಿಗೆ ಹೆಮ್ಮೆಯ ಮಾತಾಗಿರುತ್ತದೆ. ಅವರಲ್ಲಿ ಕೆಲವರ ಹೆಸರನ್ನು ಇಲ್ಲಿ ಕೊಡುತ್ತೇವೆ. ಬಸವಣ್ಣನವರಿಂದ ಮೊದಲುಮಾಡಿ ಪ್ರತಿಯೊಂದು ಶತಮಾನದಲ್ಲಿ ವೀರಶೈವ ಮತವನ್ನು ಪ್ರವೇಶಿಸಿದ ಪ್ರಸಿದ್ಧ ಪುರುಷರ ಹೆಸರನ್ನು ಕೊಡಲು ಶಕ್ಯವಿದೆ. ಅದು ಬಹಳ ವಿಸ್ತಾರವಾಗುವ ಕಾರಣ ಕೆಲವರ ಹೆಸರುಗಳನ್ನು ಮಾತ್ರ ಇಲ್ಲಿ ಕೊಡುತ್ತೇವೆ.

ಶ್ರೀ ಶಿದ್ಧರಾಮ ಶಿವಯೋಗಿಗಳು :—ಇವರು ಸೊನ್ನಲಾಪುರದಲ್ಲಿ ಸುಪ್ರಸಿದ್ಧ ಶಿವಭಕ್ತರಾದ ಶಿವಯೋಗಿಗಳು. ಇವರಿಗೆ ಚನ್ನಬಸವಣ್ಣನವರಿಂದ ಲಿಂಗಧಾರಣ ವಾಗಿರುತ್ತದೆ. ಇವರಿಗೆ ಲಿಂಗಧಾರಣದ ಅವಶ್ಯಕತೆಯುಂಟೋ ಇಲ್ಲವೋ ಎಂಬುವ ವಿಷಯದಲ್ಲಿ ಶಿವಾನುಭವ ಮಂಟಪದಲ್ಲಿ ಸಂಪೂರ್ಣ ಚರ್ಚೆಯಾಗಿ,ಲಿಂಗಧಾರಣವಾಗಲೇ ಬೇಕೆಂದು ಎಲ್ಲಾ ಶರಣರೂ ನಿಶ್ಚಯಿಸಿ ಲಿಂಗಧಾರಣ ಮಾಡಲಾಯಿತು. ಬಸವಣ್ಣನವರ ಧಾರ್ಮಿಕಕ್ರಾಂತಿಗೆ ಇವರಿಂದ ಬಹಳ ಸಹಾಯವಾಯಿತು. ಶರಣರಲ್ಲಿ ಇವರ ಸ್ಥಾನವು ನಾಲ್ಕನೆಯದಾಗಿರುತ್ತದೆ. ಇವರು ಆಗಂತುಕರು ಅಥವಾ ಸಂಕರರೆಂದು ಕರೆದರೆ ಶೋಭಿಸುವದೋ ಅಥವಾ ಹಾಗೆ ಕರೆಯುವವರು ಲೋಕದಲ್ಲಿ ಮೂರ್ಖರಾಗುವದಿಲ್ಲವೇ? ವೀರಶೈವ ಮಹಾಜನಗಳು ಆಳವಾಗಿ ವಿಚಾರಮಾಡತಕ್ಕ ಸಂಗತಿಯಾಗಿರುತ್ತದೆ.

ಶ್ರೀ ಜಗದ್ಗುರು ಪಂಡಿತಾರಾಧ್ಯರು :—ಇವರು ಶ್ರೀಶೈಲ ಪೀಠದ ಜಗದ್ಗುರುಗಳು. ಶೈವ ಬ್ರಾಹ್ಮಣರು. ಆಂಧ್ರಭಾಷೆಯಲ್ಲಿ ಪ್ರಕಾಂಡ ಪಂಡಿತರು. ಇವರು ಬಸವಣ್ಣ ನವರ ಸಮಕಾಲದವರು. ಬಸವಣ್ಣನವರ ಲಿಂಗಭಕ್ತಿಯ ಕ್ರಾಂತಿಗೆ ಇವರೂ ಕೂಡಿ ಕೊಂಡು ವೀರಶೈವ ಧರ್ಮವನ್ನು ಸ್ವೀಕರಿಸಿದರು. ಇವರು ಪೀಠದ ಜಗದ್ಗುರುಗಳಲ್ಲ ವೆಂದು ಕೆಲವರ ಮತವಿರುತ್ತದೆ. ಯಾರೇ ಇರಲಿ ಲಿಂಗಧಾರಣವಾದದ್ದು ನಿಜ.

ಶ್ರೀ ಆದಯ್ಯನವರು :—ಇವರು ವೀರಶೈವ ಶಿವಶರಣರಲ್ಲಿ ಅತ್ಯಂತ ಸುಪ್ರಸಿದ್ಧರು. ಶ್ರೀ ಬಸವೇಶ್ವರನ ತರುವಾಯ ಕೆಲವು ದಿವಸಗಳ ನಂತರ ಇದ್ದವರು. ಇವರ ಮೂಲ ಸ್ಥಾನವು ಗುಜರಾತದಲ್ಲಿರುವ ದ್ವಾರಕಾ ನಗರವು. ಇವರು ಸೋಮನಾಥನ ಶಿಷ್ಯರು. ಇವರು ವ್ಯಾಪಾರಕ್ಕೆಂದು ಕರ್ಣಾಟಕಕ್ಕೆ ಬಂದು ಲಕ್ಷ್ಮೇಶ್ವರದಲ್ಲಿ ವಾಸವಾಗಿದ್ದು, ಪಾರಿಶೆಟ್ಟಿಯೆಂಬುವ ಜೈನ ವರ್ತಕನ ಮಗಳನ್ನು ಲಗ್ನವಾಗಿದ್ದರು. ಅವಳಿಗೆ ಪದ್ಮಾವತಿ ಯೆಂಬುವ ಹೆಸರಿದ್ದಿತು. ಅವಳು ವೀರಶೈವ ದೀಕ್ಷೆಯನ್ನು ಹೊಂದಿದ್ದಲ್ಲದೆ, ಆದಯ್ಯ ನವರೂ ವೀರಶೈವ ದೀಕ್ಷೆಯನ್ನು ಹೊಂದುವಂತೆ ಮಾಡಿದಳು. ಆದಯ್ಯನು ವೀರಶೈವ ಧರ್ಮಕಾರ್ಯದಲ್ಲಿ ಬಹಳ ಸಹಾಯಕನಾಗಿ ಕೆಲಸ ಮಾಡಿದನು. ರಾಘವಾಂಕ ಮಹಾ ಕವಿಯು ಆದಿಶೆಟ್ಟಿ ಪುರಾಣವನ್ನು ಬರೆದಿರುತ್ತಾನೆ. ಆದಯ್ಯನವರ ವಚನಗಳು ಸುಪ್ರಸಿದ್ಧವಾದವುಗಳಾಗಿರುತ್ತವೆ.

ಶ್ರೀ ಶಂಕರ ದಾಸೀಮಾರ್ಯರು :— ಇವರು ವೀರಶೈವ ಧರ್ಮಪ್ರಚಾರವನ್ನು ಚೆನ್ನಾಗಿ ಮಾಡಿದ ಮಹನೀಯರು. ಇವರ ಚರಿತ್ರೆಯು ರೋಮಾಂಚಕಾರಕವಾಗಿರು ತ್ತದೆ. ಇವರ ಮೊದಲನೆಯ ಹೆಸರು ಗೋವಿಂದಭಟ್ಟರೆಂಬುವದು ಸುಪ್ರಸಿದ್ಧವಿದ್ದಿತು. ಇವರು ಶ್ರೇಷ್ಠ ಬ್ರಾಹ್ಮಣರಾಗಿದ್ದು ಕಾಶಿಯ ಯಾತ್ರೆಯ ಸಲುವಾಗಿ ಹೊರಟದ್ದರು. ದಾರಿಯಲ್ಲಿ ನವಿಲೆಯೆಂಬುವ ಗ್ರಾಮದಲ್ಲಿ ಶಂಕರಲಿಂಗನ ಗುಡಿಯಲ್ಲಿ ತಪಸ್ಸನ್ನು

ಮಾಡುತ್ತಿರುವಾಗ ಗೋವಿಂದಭಟ್ಟನು ವಿಕಳಾವಸ್ಥೆಯನ್ನು ಹೊಂದಿದನು. ಆಗ ಜಂಗಮರೂಪದಿಂದ ಜಡೇಶಂಕರನು ಅವನಮೇಲೆ ಅನುಗ್ರಹವನ್ನು ಮಾಡಿ ಲಿಂಗ ಧಾರಣ ಮಾಡಿದನು. ಮುಂದೆ ಶಂಕರದಾಸೀಮಾರ್ಯರೆಂಬುವ ಹೆಸರನ್ನು ಹೊಂದಿ ಅನಂತ ಮಹಿಮೆಗಳನ್ನು ಮಾಡಿ ಸುಪ್ರಸಿದ್ಧರಾದರು. ಇವರು ಶ್ರೇಷ್ಠ ವೀರಶೈವರೆಂದು ಹೇಳುವದಿಲ್ಲವೇ?

ಮಾಯಾಕೋಲಾಹಲರಾದ ಶ್ರೀ ಪ್ರಭುವರ್ಯರು:—ಗೊಗ್ಗವ್ವೆ ಮೊದಲಾದವರಿಗೆ ಲಿಂಗತತ್ವವನ್ನು ಬೋಧಿಸಿ ವೀರಶೈವರನ್ನಾಗಿ ಮಾಡಿದ ಇತಿಹಾಸವು ಸುಪ್ರಸಿದ್ಧವಾಗಿರುತ್ತದೆ.

ಬಿಜ್ಜಳ ಮಹಾರಾಜನ ಮಾಂಡಲಿಕನಾದ ವೈಷ್ಣವಕುಲದ ಶಿಂಗಿರಾಜನು ಕವಿಯೂ, ವಿದ್ವಾಂಸನೂ, ರಾಜನೂ ಆಗಿದ್ದನು. ಇವನು ಬಸವಣ್ಣನವರಲ್ಲಿ ಭಕ್ತಿಯನ್ನಿಟ್ಟು ವೀರಶೈವನಾಗಿ ಶಿಂಗಿರಾಜ ಪುರಾಣವನ್ನು ಸರಸವಾಗಿ ಬರೆದಿರುತ್ತಾನೆ. ಇದು ವೀರ ಶೈವರಿಗೆ ಭೂಷಣಾಸ್ಪದವಾದುದಾಗಿರುವದಿಲ್ಲವೇ?

ಹರೀಶ್ವರ, ರಾಘವಾಂಕ, ಕೆರೆಯ ಪದ್ಮರಸ, ಚಾಮರಸ— ಈ ಕವಿಗಳೆಲ್ಲ ಮೊದಲು ಬ್ರಾಹ್ಮಣರಾಗಿದ್ದು ವೀರಶೈವ ಧರ್ಮ ಸ್ವೀಕರಿಸಿ, ಉತ್ಕೃಷ್ಟಗಳಾದ ಕಾವ್ಯ ಗಳನ್ನು ಬರೆದು ವೀರಶೈವ ಸಮಾಜಕ್ಕೆ ಭೂಷಣಾಸ್ಪದರಾಗಿರುವದಿಲ್ಲವೇ? ಹರೀಶ್ವರನು ವೀರಶೈವರ ಆದ್ಯಕವಿಯೆಂದು ನಾವು ಎದೆಚಪ್ಪರಿಸಿ ಹೇಳುವದಿಲ್ಲವೇ? ರಾಘವಾಂಕ ಕವಿಯು ಉಪಮಾತೀತನೆಂದು ನಾವು ಹೆಮ್ಮೆಪಡುವದಿಲ್ಲವೇ? ಕುಮಾರವ್ಯಾಸನಂತಹ ಮಹಾಕವಿಯನ್ನು ಹಿಂದಕ್ಕೆ ಸರಿಸಿ ವಿಜಯನಗರದ ಅರಸರಿಂದ ಜಯಪತಾಕೆಯನ್ನು ಪಡೆದ ಚಾಮರಸನು ವೀರಶೈವರಿಗೆ ಅತ್ಯಂತ ಪೂಜ್ಯನಾದ ಕವಿಯಾಗಿರುವದಿಲ್ಲವೇ?

ಬೀಳಗಿ - ಕಾಗತಿ ಮೊದಲಾದ ಅನೇಕ ರಾಜವಂಶದ ದೇಶಗತಿಯ ಮನೆತನದವರು ವೀರಶೈವ ಧರ್ಮವನ್ನು ಸ್ವೀಕರಿಸಿ ಇಂದಿಗೂ ವೀರಶೈವರಾಗಿರುವದು ಭೂಷಣಾಸ್ಪದ ವಾದ ಸಂಗ ಆಗಿರುತ್ತದೆ. ಇಂತಹ ಸಾವಿರಾರು ಉದಾಹರಣೆಗಳನ್ನು ಕೊಡಲು ಶಕ್ಯವಿದೆ.

ಶ್ರೀ ಜೇಡರ ದಾಸೀಮಾರ್ಯರು :—ಸುಗ್ಗಲದೇವಿಯ ಗಂಡನಾದ ಜಯಸಿಂಹ ರಾಜನನ್ನು ಜಯಿಸಿ ವೀರಶೈವನನ್ನಾಗಿ ಮಾಡಿದ ವಿಷಯವು ಸುಪ್ರಸಿದ್ಧವಾದುದಾಗಿದೆ. ಈ ಜಯಸಿಂಹನು ಜೈನಮತೀಯನಾಗಿದ್ದು ಚಾಳುಕ್ಯರಾಜ್ಯದ ಒಂದನೇ ಜಯಸಿಂಹ ನಿರಬಹುದೆಂದು ಕವಿ ಚರಿತ್ರೆಕಾರರು ತರ್ಕಿಸಿರುತ್ತಾರೆ.

ಶ್ರೀ ಕೆರೆಯ ಪದ್ಮರಸ ಕವಿಗಳು:—ತ್ರಿಭುವನ ತಾತನೆಂಬ ಆಂಧ್ರದೇಶದ ಬ್ರಾಹ್ಮಣ ಕವಿಯನ್ನು ವಾದದಲ್ಲಿ ಸೋಲಿಸಿ ಅವನನ್ನು ವೀರಶೈವನನ್ನಾಗಿ ಮಾಡಿರುತ್ತಾನೆಯಲ್ಲದೆ, ಅವನು ಪದ್ಮರಸನಿಗೆ ಶಿಷ್ಯನಾಗಿ ನಡೆದುಕೊಂಡಿರುತ್ತಾನೆ. ಮತ್ತು ದೊರಾಂಬುಧಿಯ ರಾಮಣ್ಣ, ಉಭಯ ಕವಿ ಶರಭ ಭೇರುಂಡ, ಕವೀಂದ್ರರಾಘವ, ಮಾಯಿದೇವ, ಪುರಾಣ ಭಟ್ಟ, ಗುರುಭಕ್ತ ಕಾಮಣ್ಣ, ವಿಶ್ವಣ್ಣ, ನಾಗನಾಥಾರ್ಯ, ಅತಿರಸಿಕ ಕರ್ಣಾಭರಣ ದೇವರಸಪಂಡಿತ, ಹಂಪೆಯ ರಾಮಿತಂದೆ, ಜಗದಾರಾಧ್ಯ ನಾಗಿದೇವ, ಅಷ್ಟಭಾಷಾ ಕವೀಶ್ವರ ಶಿವದಾಸ, ದಾವರಸ, ಶರಣಕವಿ ಮೊದಲಾದವರು ಪದ್ಮರಸನ ಕೂಡ ಇದ್ದು ವೀರಶೈವ ಧರ್ಮವನ್ನು ಸ್ವೀಕರಿಸಿದ್ದುದು ತಿಳಿದುಬರುತ್ತದೆ.

ಶ್ರೀ ಪಾಲ್ಕುರಿಕೆಯ ಸೋಮನಾರಾಧ್ಯರು ವೈಷ್ಣವನಾದ ಚಕ್ರಪಾಣಿ ರಂಗನಾಥನನ್ನು ವಾದದಲ್ಲಿ ಸೋಲಿಸಿ, ತಮ್ಮ ಮಗ ಚತುರ್ಮುಖ ಬಸವೇಶ್ವರನಿಂದ ಅವನಿಗೆ ವೀರಶೈವ ದೀಕ್ಷೆಯನ್ನು ಕೊಡಿಸಿದರು.

ಅನೇಕರ ಹೆಸರನ್ನು ಹೇಳುತ್ತಹೋದರೆ ಅದೊಂದು ದೊಡ್ಡ ಗ್ರಂಥವಾಗಬಹುದಾಗಿದೆ. ಶಾಸ್ತ್ರೋಕ್ತ ಲಿಂಗಧಾರಣವಾದ ಮೇಲೆ ತಾನು ಶುದ್ಧನೆಂಬುವ ಭಾವನೆ ಇರಬೇಕು. ಆದ್ದರಿಂದ ಮೊಗ್ಗೆಯ ಮಾಯಿದೇವಾಚಾರ್ಯರು—

"ಶ್ವಪಚನದೈವ ದಂತರಮನೊರ್ಮೆ ವಿಚಾರಿಸಿನೋಡೆ ಲೋಕದೊಳ್। ಶ್ವಪಚನೆಬಲ್ಪಲಾ ಜನದ ಬುದ್ಧಿಗೆ ದೈವಮನೊಲ್ದು ಮುಟ್ಟದ। ಲ್ಲಿ ಪರಮಶುದ್ಧ ತಾ ಸ್ಮರಣೆಯಿಲ್ಲದ ಶುದ್ಧಸಲೇಪಭಾವ ಮಾಶ್ವಪಚನ ತಟ್ಟು ಮುಟ್ಟೆ ನಡೆಯಲ್ಲಿಯೆ ಬರ್ಪುದರಿಂ ಶಿವಾಧವಾ"

ಕರ್ಮಭ್ರಾಂತರಾದ ಜನರ ಆಚರಣೆಯನ್ನು ನೋಡಿದರೆ ಅವರ ಬುದ್ಧಿಗೆ ದೈವಕ್ಕಿಂತಲೂ ಚಂಡಾಲನೇ ಬಲ್ಲಿದನೆಂದು ತೋರಿರುವಂತೆ ಕಾಣುತ್ತದೆ. ಏಕೆಂದರೆ ತನ್ನಲ್ಲಿ ಇಷ್ಟಲಿಂಗ ಸಂಬಂಧವಿರುವಾಗ ತಾನು ಯಾವಾಗಲೂ ಪರಿಶುದ್ಧನಾಗಿರುವೆನೆಂಬುವ ಭಾವವು ಇಲ್ಲದೆ ಚಂಡಾಲನು ತನ್ನನ್ನು ಸೋಂಕಿದ ಮಾತ್ರದಿಂದಲೇ ತನಗೆ ಅಶುಚಿತ್ವವು ಬರುವುದೆಂದು ತಿಳಿಯುವನು. ಪರಿಶುದ್ಧಭಾವವನ್ನುಂಟುಮಾಡುವ ದೈವಸಂಬಂಧಕ್ಕಿಂತಲೂ ಚಂಡಾಲನ ಸ್ಪರ್ಶದಲ್ಲಿ ಅಧಿಕಶಕ್ತಿ ಇರುವದೆಂದು ಭಾವಿಸಿದಂತಾಯಿತೆಂದು ಮೇಲಿನ ಶ್ಲೋಕದ ಅಭಿಪ್ರಾಯವಾಗಿರುವದು.

ಆದ್ದರಿಂದ ಗುರುವಿನಿಂದ ಲಿಂಗಧಾರಣವನ್ನು ಹೊಂದಿದವನು ಪವಿತ್ರನಾಗಿರುವನು. ಸಮಾಜದಲ್ಲಿ ಜಾತಿಗಳಾಗಲೀ, ವರ್ಣಗಳಾಗಲೀ ಇಲ್ಲವೆಂದು ಇಲ್ಲಿಯವರೆಗೆ ಅನೇಕ ಪ್ರಮಾಣಗಳಿಂದ ಹೇಳಿದ್ದಾಯಿತು. ಆದ್ದರಿಂದ ಶ್ರೀ ಬಸವಣ್ಣನವರು—

"ಭಕ್ತನಾಗಿ ಲಿಂಗಜಂಗಮವ ಪೂಜಿಸಬೇಕು. ಭಕ್ತನಾಗಿ ತನ್ನ ತಾ ಪೂಜಿಸಿಕೊಂಬುದು ಎಂತಯ್ಯಾ? ಸ್ವಾಮಿ ಭೃತ್ಯ ಸಂಬಂಧವು ಎಂತಯ್ಯಾ ಪೂರೈಸುವದು? ಕೂಡಲಸಂಗಮದೇವಾ, ಕಣ್ಣಕಟ್ಟೆ ಕನ್ನಡಿಯ ತೋರುವಂತೆ."

ಸದ್ಗುರುವಿನಿಂದ ದೀಕ್ಷೆಯನ್ನು ಹೊಂದಿದ ಮೇಲೆ ಅವನು ಪವಿತ್ರನಾಗುತ್ತಾನೆಂದು ಈ ಮೊದಲೇ ಹೇಳಲಾಗಿದೆಯಷ್ಟೆ? ಗುರುವಿನ ಮಹಾತ್ಮ್ಯೆಯ ಬಗ್ಗೆ ಬೇಕಾದಷ್ಟು ಪ್ರಮಾಣಗಳು ಸಿಗುತ್ತವೆ.

**ವೀರಶೈವಾನಂದಚಂದ್ರಿಕಾ — ಪುಟ ೫೦**

ಅಗಾಧ ಸಂಶಯಾಂಬೋಧಿ ತಾರಕಾನುಗ್ರಹಪ್ರದಃ ।
ಪರಮಜ್ಞಾನರೂಪತ್ವಾತ್ ಗುರುರೇವ ಪರಶ್ಶಿವಃ ॥

ಶಿವಧರ್ಮೋತ್ತರದಲ್ಲಿ—

ಸಯೇವ ವಂದ್ಯಃ ಪರಿಪೂಜನೀಯಃ ।
ಸಯೇವ ಮಾತಾ ಜಗತಾಂ ಪಿತಾ ಚ ।
ಸಯೇವ ಬಂಧುಃ ಸ ಗುರುಃ ಶಿವಸ್ಸ್ಯಾತ್ ।
ಜ್ಞಾನಾಮೃತಂ ಯಃ ಪರಮಂ ಪ್ರದದ್ಯಾತ್ ॥

ಸೂತಸಂಹಿತೆಯಲ್ಲಿ—

ಗುರುಮೂರ್ತಿಶ್ಶಿವಸ್ಸಾಕ್ಷಾತ್ ನಾನ್ಯಥಾ ಚ ಸುರೇಶ್ವರ ।
ವರ್ತತೇ ಪಾದಯುಗ್ಮೇತು ತ್ರೈಲೋಕ್ಯಂ ಸಚರಾಚರಂ ॥

ಮೇಲಿನ ಮೂರು ಶ್ಲೋಕಗಳಲ್ಲಿಯೂ ಗುರುವು ದೊಡ್ಡವನು, ಶಿವಸ್ವರೂಪನು. ಅವನು ವಂದ್ಯನು, ಪೂಜನೀಯನು. ಶಿಷ್ಯನಿಗೆ ತಂದೆ ತಾಯಿಗಳ ಸ್ವರೂಪನು ಮತ್ತು ಜ್ಞಾನ ಸ್ವರೂಪನೂ ಎಂದು ಹೇಳಿದೆ.

ನಾವು ಗುರುವಿನ ಮಹಾತ್ಮೆಯನ್ನು ತಿಳಿದುಕೊಳ್ಳುವ ಕಾಲಕ್ಕೆ ಗುರುವು ಹೇಗೆ ಇರಬೇಕು? ಎಂತಹ ಗುರುವಿದ್ದರೆ ಶಿಷ್ಯನು ಉದ್ಧಾರನಾಗುವನೆಂಬುವದನ್ನೂ ಕೂಡ ತಿಳಿದುಕೊಳ್ಳುವದು ಅತ್ಯಂತ ಮಹತ್ವದ್ದಾಗಿರುತ್ತದೆ. ಗುರುವಿನ ಮಹಾತ್ಮೆಯನ್ನು ಹೇಳಿಕೊಳ್ಳುತ್ತ ತಮ್ಮ ಉದರವನ್ನು ಪೋಷಿಸಿಕೊಳ್ಳತಕ್ಕ ಅನಂತ ಗುರುಗಳನ್ನು ನಾವು ನೋಡುತ್ತಲಿದ್ದೇವೆ. ಗುರುವಿನ ಮಾಹಾತ್ಮೆಗಿಂತ ಎಂತಹ ಗುರುವಿರಬೇಕೆಂಬುವದೇ ನಮ್ಮ ಮುಂದಿರತಕ್ಕ ಈಗಿನ ಪ್ರಶ್ನೆಯಾಗಿರುತ್ತದೆ. ಎಂತಹ ಗುರುವು ಇರಬೇಕೆಂಬುವ ಬಗ್ಗೆ ಅನೇಕ ಪ್ರಮಾಣಗಳುಂಟು.

ಶಿದ್ಧಾಂತಶಿಖಾಮಣಿ—

ಉಪೈತಿ ಲೋಕವಿಖ್ಯಾತಂ ಲೋಭ ಮೋಹ ವಿವರ್ಜಿತಂ ।
ಆತ್ಮತತ್ವ ವಿಚಾರಜ್ಞಂ ವಿಮುಕ್ತವಿಷಯಭ್ರಮಮ್ ॥

ಶಿವಸಿದ್ಧಾಂತ ತತ್ವಜ್ಞಂ ಛಿನ್ನಸಂದೇಹ ವಿಭ್ರಮಂ ।
ಸರ್ವತಂತ್ರ ಪ್ರಯೋಗಜ್ಞಂ ಧಾರ್ಮಿಕಂ ಸತ್ಯವಾದಿನಂ ।
ಕುಲಕ್ರಮಾಗತಾಚಾರಂ ಕುಮಾರ್ಗಾಚಾರ ವರ್ಜಿತಮ್ ।
ಶಿವಧ್ಯಾನಂ ಪರಂ ಶಾಂತಂ ಶಿವತತ್ವ ವಿವೇಕಿನಮ್ ।
ಭಸ್ಮೋದ್ಧೂಲಿತನಿಷ್ಣಾತಂ ಭಸ್ಮತತ್ವ ವಿವೇಕಿನಮ್ ।
ತ್ರಿಪುಂಡ್ರಧಾರಣೋತ್ಕಂಠಂ ಧೃತರುದ್ರಾಕ್ಷಮಾಲಿಕಾಂ ।
ಲಿಂಗಧಾರಣಸಂಯುಕ್ತಂ ಲಿಂಗಪೂಜಾ ಪರಾಯಣಂ ।
ಲಿಂಗಾಂಗಯೋಗತತ್ವಜ್ಞಂ ನಿರೂಢಾದ್ವೈತವಾಸನಂ ।
ಲಿಂಗಾಂಗ ಸ್ಥಲಭೇದಜ್ಞಂ ಶ್ರೀಗುರುಂ ಶಿವವಾದಿನಂ ।
ಶೇವೇತ ಪರಮಾಚಾರ್ಯಂ ಶಿಷ್ಯೋ ಭಕ್ತಿಸಮನ್ವಿತಃ ॥

ಅಂದರೆ— ಲೋಕವಿಖ್ಯಾತನಾಗಿಯೂ, ಲೋಭಮೋಹಾದಿಗಳನ್ನು ಬಿಟ್ಟವನಾಗಿಯೂ, ಆತ್ಮತತ್ವವಿಚಾರವನ್ನು ಚೆನ್ನಾಗಿ ತಿಳಿದವನಾಗಿಯೂ, ವಿಷಯಾದಿಗಳನ್ನು ಬಿಟ್ಟು ಶಿವಸಿದ್ಧಾಂತ ತತ್ವಗಳನ್ನು ಚೆನ್ನಾಗಿ ತಿಳಿದವನಾಗಿಯೂ, ಸಂದೇಹಗಳನ್ನು ನಾಶಮಾಡಿದವನಾಗಿಯೂ, ಎಲ್ಲ ತಂತ್ರಗಳ ಪ್ರಯೋಗವನ್ನು ಅರಿತವನಾಗಿಯೂ, ಧಾರ್ಮಿಕನೂ, ಸತ್ಯವಾದಿಯೂ, ಕುಲಕ್ರಮವಾಗಿ ಬಂದ ಆಚಾರವನ್ನು ಬಿಡದೆ, ಕೆಟ್ಟಾಚಾರಗಳನ್ನು ಮಾಡದೆ ಇರುವವನಾಗಿಯೂ, ಶಿವಧ್ಯಾನಪರನಾಗಿಯೂ, ಶಿವತತ್ವವನ್ನು ತಿಳಿದವನಾಗಿಯೂ, ಭಸ್ಮೋದ್ಧೂಲನದಲ್ಲಿ ನಿಷ್ಣಾತನಾಗಿ ಭಸ್ಮತತ್ವವನ್ನು ತಿಳಿದವನಾಗಿಯೂ, ತ್ರಿಪುಂಡ್ರಧಾರಣದಲ್ಲಿಯೂ, ರುದ್ರಾಕ್ಷೆಗಳನ್ನು ಧರಿಸುವದರಲ್ಲಿಯೂ, ಲಿಂಗಧಾರಣದಿಂದ ಕೂಡಿಕೊಂಡು ಲಿಂಗಾಂಗಸಂಯೋಗ ತತ್ವಜ್ಞನಾಗಿಯೂ, ಲಿಂಗಾಂಗ ಸ್ಥಲಭೇದ

ಗಳನ್ನು ಬಲ್ಲವನಾಗಿಯೂ ಇರತಕ್ಕ ಗುರುವನ್ನು ಹೊಂದಿ ಶಿಷ್ಯನು ಭಕ್ತಿಯಿಂದ ಕೂಡಿ ಕೊಂಡು ಅವನ ಸೇವೆಯನ್ನು ಮಾಡಬೇಕು.

ಹೀಗೆ ಬಸವಣ್ಣನವರು ಲಿಂಗಧಾರಿಗಳಲ್ಲಿ ಜಾತಿಭೇದವಿಲ್ಲೆಂದು ಸಾರಿ ಶಿವಭಕ್ತಿ ಸಂಪನ್ನರೂ, ಆಚಾರನಿಷ್ಠರೂ ಆದ ಯಾವ ಜಾತಿಯವನೇ ಇರಲಿ ಲಿಂಗಧಾರಣ ಮಾಡಿಕೊಳ್ಳಬೇಕೆಂದು ಮುಕ್ತದ್ವಾರ ಮಾಡಿದರು. ಆಗಮಾದಿಗಳಲ್ಲಿ ಜಾತಿಯು ವೀರಶೈವನಿಗೆ ಇಲ್ಲವೆಂದು ಪ್ರಮಾಣಗಳಿದ್ದರೂ, ಕೃತಿಯಲ್ಲಿ ಬಂದಿರಲಿಲ್ಲ. ಅದನ್ನು ಪ್ರಚಂಡತರವಾಗಿ ಪ್ರಚಾರಮಾಡಿ ಜನಸಾಮಾನ್ಯರಲ್ಲಿ ಕೃತಿಗಿಳಿಸಿದವರು ಬಸವಣ್ಣ ನವರು. ಅವರ ಮಾರ್ಗದಂತೆ ಅನೇಕ ಜನ ಅವರ ಅನುಯಾಯಿಗಳೂ ಕೂಡ ಅದೇ ಮಾರ್ಗವನ್ನು ಅನುಸರಿಸುತ್ತ ಬಂದದ್ದರಿಂದ ಕನ್ನಡ ನಾಡೆಂದರೆ ಲಿಂಗವಂತರ ನಾಡು ಎಂಬುವಷ್ಟು ಪ್ರಸಿದ್ಧಿಯನ್ನು ಹೊಂದಿತು.

ಧಾರ್ಮಿಕ ದೃಷ್ಟಿಯಿಂದ ಈ ಕಾರ್ಯವು ಅತ್ಯಂತ ಮಹತ್ವದ್ದು. ವೀರಶೈವ ಧರ್ಮವು ಜೀವಂತಧರ್ಮವಾದುದೆಂದು ಹೇಳಿಸಿಕೊಳ್ಳತಕ್ಕದ್ದೂ ಆಗುವದಲ್ಲದೆ, ರಾಜಕೀಯ ದೃಷ್ಟಿಯಿಂದ ಈ ಕಾರ್ಯವು ಈಗಿನ ಪ್ರಜಾಪ್ರಭುತ್ವದ ಯುಗದಲ್ಲಿಯಂತೂ ವರ್ಣಿಸಲಿಕ್ಕೆ ಬಾರದಷ್ಟು ಮಹತ್ವದ ಕಾರ್ಯವಾಗಿರುತ್ತದೆ.

ಬಸವಣ್ಣನವರ ತತ್ವಗಳೇನೋ ಜಗತ್ತಿನಲ್ಲಿ ಅತಿ ಮಹತ್ವದವುಗಳಾಗಿರುತ್ತವೆ. ಆದರೆ ಬಸವಣ್ಣನ ಭಕ್ತರೆಂದು ಹೇಳಿಕೊಳ್ಳುತ್ತಿರುವವರು ಆತನ ವಿಶಾಲವಾದ ತತ್ವ ಗಳನ್ನು ಅರಿತು ಕಾರ್ಯ ಮಾಡದೆ ಇರುವದು ಒಂದು ದೊಡ್ಡ ಕೊರತೆಯಾಗಿರುತ್ತದೆ. ಬಸವಣ್ಣನವರ ತತ್ವಗಳನ್ನು ಲೋಕದ ಮುಂದಿಟ್ಟರೆ ಎಷ್ಟೋ ಮಹತ್ಕಾರ್ಯಗಳನ್ನು ಮಾಡಿದಂತಾಗುತ್ತದೆ. ಅಂತಹ ಸದ್ಬುದ್ಧಿಯು ಬಸವಣ್ಣನವರ ಭಕ್ತರಿಗೆ ಬೇಗನೆ ಉಂಟಾಗಬೇಕಾಗಿರುತ್ತದೆ. ಮಹಮ್ಮದ್ ಪೈಗಂಬರರು ಅಂತ್ಯಕಾಲದಲ್ಲಿ ಸ್ವಲ್ಪೇ ಅನುಯಾಯಿಗಳನ್ನು ಬಿಟ್ಟುಹೋಗಿದ್ದರು. ಏಸುಕ್ರಿಸ್ತರ ಅಂತ್ಯಕಾಲದಲ್ಲಿ ೧೭ ಜನ ಪ್ರಮುಖ ಶಿಷ್ಯರಿದ್ದರು. ಅವರ ತರುವಾಯ ಅವರ ಸಮಾಜವು ಅವರ ಶಿಷ್ಯರ ಪ್ರಚಂಡ ಸಾಹಸದಿಂದ ಇಂದಿಗೆ ಜಗತ್ತಿನಲ್ಲಿ ಎಲ್ಲ ಸಮಾಜಕ್ಕಿಂತಲೂ ಹೆಚ್ಚಿಗೆ ಅಂದರೆ ೬೦ ಕೋಟಿ ಕ್ರೈಸ್ತರನ್ನು ನಾವು ಕಾಣಬಹುದು. ಈ ಗೌರವವು ಏಸುಕ್ರಿಸ್ತನ ಶಿಷ್ಯರಿಗೆ ಲಭಿಸತಕ್ಕ ದ್ದಾಗಿದೆ. ಪೈಗಂಬರರ ಶಿಷ್ಯರ ಕಾರ್ಯವಂತೂ ಜಗತ್ತಿನ ಮೂಲೆಮೂಲೆಗಳಲ್ಲಿ ಅದ್ಭುತವಾಗಿ ನಡೆಯುತ್ತಿರುವದಲ್ಲದೆ, ಜಗತ್ತಿನ ಮೂಲೆ ಮೂಲೆಗಳಲ್ಲಿಯೂ ಮುಸಲ್ಮಾನ ರನ್ನು ನಾವು ಕಾಣಬಹುದು. ಬುದ್ಧದೇವನ ಪ್ರಮುಖರಾದ ಮೂರು ಜನ ಶಿಷ್ಯರಿಂದಲೇ ಆ ಮತವು ಪ್ರಬಲವಾಗಿ ಜಗತ್ತಿನಲ್ಲಿ ನಾವು ನಲವತ್ತು ಕೋಟಿ ಬೌದ್ಧ ಮತದವರನ್ನು ಕಾಣಬಹುದು.

ಜಗತ್ತಿನ ಸುದ್ದಿಯೊತ್ತಟ್ಟಿಗಿರಲಿ, ಹಿಂದೂಸ್ಥಾನದ ಮೂರು-ನಾಲ್ಕು ಪ್ರಾಂತಗಳನ್ನು ಬಿಟ್ಟರಾಯಿತು ಲಿಂಗವಂತರ ಸುಳಿವೇ ಇರುವದಿಲ್ಲ. ಆದ್ದರಿಂದ ಶ್ರೀ ಬಸವ ಮಹಾತ್ಮನ ತತ್ವಗಳು ಜಗತ್ತಿನಲ್ಲಿ ವ್ಯಾಪಿಸಿ ಜಗತ್ತಿನ ತುಂಬ ಲಿಂಗವಂತರನ್ನು ಕಾಣಬೇಕೆಂಬುವ ಸದುದ್ದೇಶವು ಬಸವಣ್ಣನವರ ಶಿಷ್ಯರಿಗೆ ಇರಬೇಕಾದುದು ಅಗತ್ಯವಾಗಿರುವ ದಿಲ್ಲವೇ? ಅಂತಹ ಸದ್ಬುದ್ಧಿಯು ವೀರಶೈವ ಸಮಾಜಕ್ಕೆ ಬರುವದು ಮಹತ್ವದ್ದಾಗಿರು ವದಿಲ್ಲವೆ?

ಯಾವ ಧರ್ಮದ ತತ್ವಗಳೇ ಆಗಲಿ ಜಗತ್ತಿನಲ್ಲಿ ಪ್ರಸಾರವಾಗಬೇಕಾದರೆ ಆ ಧರ್ಮದ ಜನರ ಶಿಸ್ತು ಮತ್ತು ಸಂಘಟನೆಗಳೇ ಕಾರಣಗಳಾಗಿವೆ. ಈಗ ಜಗತ್ತಿನಲ್ಲಿ ಪ್ರಸಿದ್ಧಗಳಾದ ಕ್ರಿಶ್ಚಿಯನ್, ಮುಸಲ್ಮಾನ, ಬೌದ್ಧ, ಆರ್ಯಸಮಾಜ ಮೊದಲಾದ ಮತಗಳು ಪೈಪೋಟಿಯನ್ನು ನಡೆಸಿರುತ್ತವೆ. ವೀರಶೈವರು ಇಂತಹ ಸ್ಪರ್ಧೆಯ ಕಾಲದಲ್ಲಿ ಸುಮ್ಮನಿರುವದು ಭೂಷಣವಾಗಿದೆಯೇ. ಅನ್ಯರಿಗೆ ಹಿಂಸೆಯನ್ನು ಕೊಡುವದು ನಮಗೆ ಬೇಡ. ಒತ್ತಾಯ ಮಾಡುವದೂ ಬೇಡ. ನಮ್ಮ ತತ್ವಗಳ ಶ್ರೇಷ್ಠತೆಯನ್ನು ಜನಗಳ ಮುಂದಿಡುವದು ನಮ್ಮ ಕರ್ತವ್ಯವಾಗಿರುವದಿಲ್ಲವೇ?

## ಹದಿಮೂರನೆಯ ಪ್ರಕರಣ

### ಬಸವಣ್ಣನವರೂ ಅಸ್ಪೃಶ್ಯೋದ್ಧಾರವೂ

ಶ್ರೀ ಬಸವಣ್ಣನವರು ಮಾಡಿದ ಅತ್ಯದ್ಭುತ ಕೃತಿಗಳಲ್ಲಿ ಅಸ್ಪೃಶ್ಯೋದ್ಧಾರವೂ ಒಂದಾಗಿರುತ್ತದೆ. ೮೦೦ ವರ್ಷಗಳ ಹಿಂದೆ ಅವರು ಈ ಕಾರ್ಯ ಮಾಡಿದುದನ್ನು ನೋಡಿದರೆ ಈಗಿನ ಸಾಮಾಜಿಕ ಸುಧಾರಕರೂ ಅತ್ಯಂತ ಆಶ್ಚರ್ಯಚಕಿತರಾಗುತ್ತಾರೆ. ಈಗಿನ ಕಾಲಕ್ಕೂ ಆಗಿನ ಕಾಲಕ್ಕೂ ಮಹದಂತರವಿರುತ್ತದೆ. ವರ್ಣಗಳ ಪ್ರಾಬಲ್ಯ, ಜಾತಿಯ ಹೆಚ್ಚಳ, ಅಂತಹ ಕಾಲದಲ್ಲಿ ಬಸವಣ್ಣನವರು ಈ ಕಾರ್ಯವನ್ನು ಮಾಡಿದುದು ನಿಜವಾಗಿಯೂ ಅತ್ಯಂತ ಮಹತ್ವದ್ದಾಗಿರುತ್ತದೆ. ಯಾವ ಜನಾಂಗವು ವೇದವೋದುವ ದೊತ್ತೊಟ್ಟಗಿರಲಿ ವೇದಘೋಷಣವನ್ನು ಕೇಳಿದರೆ ಶೀಸವನ್ನು ಕುದಿಯುವಂತೆ ಕಾಯಿಸಿ ಅವರ ಕಿವಿಯಲ್ಲಿ ಸುರಿಯಬೇಕೆಂದು ಹೇಳುವ ಕಾಲದಲ್ಲಿ ಇಂತಹ ಕಾರ್ಯ ಮಾಡುವದು ಸುಸಾಧ್ಯವಾದುದಲ್ಲ. ಆದರೆ ಬಸವಣ್ಣನವರಂತಹ ಕೃತಿವೀರರಿಗೆ ಯಾವುದುತಾನೇ ಅಸಾಧ್ಯ? ಹಿಂದೂ ಧರ್ಮದಲ್ಲಿ ಆರು ಕೋಟಿ ಜನಗಳನ್ನು ಕತ್ತೆ ನಾಯಿ ನರಿಗಳಿಗಿಂತಲೂ ಕನಿಷ್ಠ ಭಾವನೆಯಿಂದ ತಿಳಿದದ್ದರಿಂದಲೇ ಅದರ ಘೋರ ಪಾಪವನ್ನು ಹಿಂದೂ ಧರ್ಮವು ಅನುಭವಿಸುತ್ತಲಿದೆ. ಹಿಂದೂ ಧರ್ಮಕ್ಕೆ ಮೂಲ ಧರ್ಮಗ್ರಂಥಗಳಾದ ವೇದೋಪನಿಷತ್ತುಗಳಲ್ಲಿಯೂ, ಆಗಮುಗಳಲ್ಲಿಯೂ ಅಸ್ಪೃಶ್ಯ ಎಂಬುವದೊಂದು ಜಾತಿಯು ಇದ್ದಿತ್ತೆಂಬುವದು ಎಲ್ಲಿಯೂ ಕಂಡುಬರುವದಿಲ್ಲ. ಹೀಗಿದ್ದರೂ ಒಂದು ದೊಡ್ಡ ಜನಾಂಗವನ್ನೇ ತುಳಿದುಹಾಕಿ ಮೂಲೆಗುಂಪು ಮಾಡಿದ್ದುದು ಸತ್ಯವಾಗಿಯೂ ಭಯಂಕರ ಅನ್ಯಾಯದ ಕಾರ್ಯವೆಂದು ವಿವೇಕಿಗಳಾದವರು ಹೇಳದೆ ಇರಲಾರರು. ಮತ್ತು ಮೇಲಿನ ವರ್ಣದವರೆಂದು ಹೇಳಿಕೊಳ್ಳುವವರಿಗೆ ನಾಚಿಕೆಗೇಡಾದ ಮಾತಾಗಿರುತ್ತದೆ. ಬರಬರುತ್ತ ಹಿಂದೂ ಧರ್ಮದಲ್ಲಿ ಅನೇಕ ಜಾತಿಗಳಾದುದರಿಂದ ಹಿಂದೂ ಸಮಾಜವು ಪರಸ್ಪರ ಜಗಳದ ತವರುಮನೆಯಾಗಿರುತ್ತದೆ. ಅಸ್ಪೃಶ್ಯರಲ್ಲಿಯೂ ಅನೇಕ ಅವಾಂತರ ಜಾತಿಗಳಾಗಿವೆ. ಭರತಖಂಡದಲ್ಲಿ ಮೊದಲು ಹಿಂದೂ ಜನರು ಮಾತ್ರ ಇರುತ್ತಿದ್ದರು. ಈಗಿನ ಕಾಲದ ಸ್ಥಿತಿಯು ಹಾಗಿರುವದಿಲ್ಲ. ಈ ಧರ್ಮದಲ್ಲಿಯ ಮೇಲು ಕೀಳುಗಳ ಲಾಭವನ್ನು ಪಡೆದು ಪರಧರ್ಮಿಯರು ಅಂದರೆ ಮುಸಲ್ಮಾನ ಮತ್ತು ಕ್ರಿಶ್ಚಿಯನ್ನರು ತಮ್ಮ ತಮ್ಮ ಸಮಾಜಗಳನ್ನು ಪ್ರಚಂಡತರವಾಗಿ ಬೆಳೆಯಿಸುತ್ತಲಿದ್ದಾರೆ. ಮುಸಲ್ಮಾನರು ಪರದೇಶಗಳಿಂದ ಬಂದವರೆಷ್ಟು? ಈಗ ಅವರ ಸಂಖ್ಯೆಯೆಷ್ಟು? ಎಂಬುವದನ್ನು ವಿಚಾರಿಸಲಾಗಿ ವಿಚಾರಪರರಾದ ಜನರಿಗೆ ವೇದನೆಯಾಗುವದು ಸಹಜವಾದುದಾಗಿದೆ. ನಮ್ಮ ದೇಶದ ನಾಲ್ಕಾಣೆ ಭಾಗವನ್ನು ತೆಗೆದುಕೊಂಡು ಸ್ವತಂತ್ರ ಸಾರ್ವಭೌಮ ಸರಕಾರವನ್ನು ರಚಿಸಿದರು. ವರ್ಣಗಳು ಮೊದಲು ಗುಣದಿಂದಾದವು, ಅವುಗಳೇ ಕಾಲಾಂತರದಲ್ಲಿ ಜಾತಿವಾಚಕಗಳಾದವು. ಮೂಲ ವೇದಾದಿಗಳಲ್ಲಿ ಈ ಭೇದಗಳು ಇರುವದಿಲ್ಲವಾದರೂ ಅನೇಕ ಟೀಕಾಗ್ರಂಥಗಳಲ್ಲಿ ಈ ಜಾತಿಭೇದಗಳು ಬಳಿಕೆಯಲ್ಲಿ ಬಂದುದು ತಿಳಿಯಬರುತ್ತದೆ. ಒಂದು ಜನಾಂಗವೇ ಅಸ್ಪೃಶ್ಯರಾಗಿ ಉಳಿಯುವದು ನ್ಯಾಯದೃಷ್ಟಿಯಿಂದ ಮಹಾಪಾಪಕರವಾದುದೇ ಸರಿ. ಇದನ್ನು ತಿಳಿದು ಬಸವಣ್ಣನವರು ಅವರನ್ನು ಉದ್ಧಾರ ಮಾಡಲಿಕ್ಕೆ ಪ್ರಾರಂಭಿಸಿದರು.

ಆರ್ಯಸಮಾಜ ಸ್ಥಾಪಕರಾದ ಸ್ವಾಮಿ ದಯಾನಂದ ಸರಸ್ವತಿಯವರೂ, ಕಲ್ಕತ್ತೆಯ ರಾಮಮೋಹನರಾಯರೇ ಮೊದಲಾದವರೂ ಈ ಕಾರ್ಯವನ್ನು ಮುಂದರಿಸಿದರೆನ್ನ ಬಹುದು. ಮಹಾತ್ಮಾ ಗಾಂಧಿಯವರು ಕಾಂಗ್ರೆಸ್ಸಿನ ತಮ್ಮ ವಿಧಾಯಕ ಕಾರ್ಯಗಳಲ್ಲಿ ಇದೊಂದನ್ನು ಸೇರಿಸಿ ಪ್ರಚಂಡ ಚಳವಳಿಯನ್ನು ಹೂಡಿ ಶಿಕ್ಷಣ, ಸಾಮಾಜಿಕ, ಧಾರ್ಮಿಕ ಮೊದಲಾದ ಕಾರ್ಯಗಳಲ್ಲಿ ಆ ಜನಗಳನ್ನು ಮುಂದೆ ತರಲು ಬಹಳ ಪ್ರಯತ್ನಿಸಿದರು. ಮಹಾತ್ಮಾಜಿಯವರು ಅನೇಕ ಸಲ ತಮ್ಮ ಲೇಖನ ಭಾಷಣಗಳಲ್ಲಿ ಅಸ್ಪೃಶ್ಯತೆಯೆಂಬುವುದು ಹಿಂದೂ ಧರ್ಮಕ್ಕೆ ದೊಡ್ಡ ಕಲಂಕ ಮತ್ತು ಪಾಪಕರವೆಂದು ಹೇಳಿದ್ದಾರೆ. ಈ ಕಾರ್ಯದ ಸಲುವಾಗಿ ಅನೇಕ ಕಷ್ಟನಷ್ಟಗಳನ್ನು ಅನುಭೋಗಿಸಿ ಕಾರ್ಯ ಮಾಡಿರುತ್ತಾರೆ. ಇದಕ್ಕಾಗಿ ಒಂದು ಸಾರೆ ಪುಣೆಯಲ್ಲಿ ೨೧ ದಿನ ಉಪವಾಸವನ್ನೂ ಮಾಡಿದರು.

ಜಗತ್ತಿನಲ್ಲಿ ಸರ್ವ ಪ್ರಾಣಿಗಳನ್ನೂ ಸಮಾನತೆಯಿಂದ ನೋಡಿಕೊಂಡುಹೋಗುವದು ಬಹು ಕಷ್ಟಕರವಾದ ಕಾರ್ಯವು. ಇದು ಎಲ್ಲರಿಗೂ ಸಾಧ್ಯವಾದುದಲ್ಲ. ಬಾಯಿ ಮಾತಿನಿಂದ ನಾವು ಬೇಕಾದಂತಹ ಸವಿಮಾತುಗಳನ್ನು ಹೇಳಬಹುದು. ಕೃತಿಯಲ್ಲಿ ತರುವ ಪ್ರಸಂಗ ಬಂದಾಗ ಮಾತ್ರ ಅದರ ಅರಿವು ನಮಗಾಗುತ್ತದೆ. ಆದ್ದರಿಂದಲೇ ಅನೇಕ ಶತಮಾನಗಳಿಂದ ಒಂದು ದೊಡ್ಡ ಜನಾಂಗವೇ ಮೂಲೆಗುಂಪಾಗಿಹೋಗಿದೆ ಯೆನ್ನಬಹುದು. ಅವರವರ ಉತ್ತಮ ಅಥವಾ ಕನಿಷ್ಠ ಗುಣಗಳಿಂದ ಮನುಷ್ಯನು ಉತ್ತಮ ಅಥವಾ ಕನಿಷ್ಠನೆಂದೆನ್ನಿಸಿಕೊಳ್ಳುತ್ತಾನೆ. ಇದು ಸ್ವಾಭಾವಿಕವೂ, ಸಹಜವೂ ಆದ ಮಾತಾಗಿರುತ್ತದೆ. ಆದರೆ ಒಂದು ದೊಡ್ಡ ಸಮಾಜವನ್ನೇ ಹೇಯಭಾವನೆ ಯಿಂದ ಕಾಣುವದು ಅತ್ಯಂತ ಘಾತುಕವಾದುದೆಂದು ವಿಚಾರಪರರೆಲ್ಲ ಹೇಳುವ ಮಾತಾಗಿರುತ್ತದೆ.

ಶ್ರೀ ಬಸವಣ್ಣನವರು ತಮ್ಮದೊಂದು ವಚನದಲ್ಲಿ—

> "ಕೊಲುವನೇ ಮಾದಿಗ, ಹೊಲಸ ತಿಂಬವನೇ ಹೊಲೆಯ, ಕುಲ ವೇನೇ ಅವಂದಿರ ಕುಲವೇನೊ? ಸಕಲ ಜೀವಾತ್ಮರಿಗೆ ಲೇಸನೇ ಬಯ ಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು."

ಈ ವಚನದ ಅರ್ಥವನ್ನು ನೋಡಿದರೆ–ಯಾರು ಪ್ರಾಣಿಗಳನ್ನು ಕೊಲ್ಲುತ್ತಾರೆಯೋ ಯಾರು ಮದ್ಯ ಮಾಂಸ ಮೊದಲಾದ ಅಭಕ್ಷ್ಯ ಭಕ್ಷಣವನ್ನು ಮಾಡುತ್ತಾರೆಯೋ ಅವರೇ ಹೊಲೆಯರು ಎಂದಂತಾಯಿತು. ಈ ವ್ಯಾಖ್ಯಾನಕ್ಕೆ ಒಳಗಾಗದವರೆಷ್ಟುಜನವೆಂಬುವದು ವಿಚಾರಣೀಯವಾದ ಮಾತಾಗಿರುತ್ತದೆ. ಎಲ್ಲ ಪ್ರಾಣಿಗಳಿಗೆ ಲೇಸನ್ನು ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರೆಂದು ಅವರು ಹೇಳಿರುತ್ತಾರೆ.

> "ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ, ಮಂಡೋದರಿ ಕಪ್ಪೆಯ ಮಗಳು, ಕುಲವನರಸದಿರಿಂ ಭೋ, ಕುಲ ದಿಂದ ಮುನ್ನೇನಾದಿರಿಂ ಭೋ, ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದೂರ್ವಾಸ ಮುಚ್ಚಿಗ, ಕಶ್ಯಪ ಕಮ್ಮಾರ, ಕೌಂಡಿಲ್ಯನೆಂಬ ಋಷಿ ಮೂರು ಭುವನ ವರಿಯೆ ನಾವಿದಕಾಣಿಂ ಭೋ, ನಮ್ಮ ಕೂಡಲಸಂಗಮದೇವನ ವಚನ ವಿಂತೆಂದುದು ಶ್ವಪಚೋಪಿಯಾದರೇನು? ಶಿವಭಕ್ತನೇ ಕುಲಜನು."

"ಹೊಲೆ ಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ, ಜಲಬಿಂದುವಿನ ವೆವಹಾರವೊಂದೇ ಆಶೆ, ಯಾಮಿಷ, ರೋಷ, ಹರುಷ, ವಿಷಯಾದಿಗಳೆಲ್ಲ ಒಂದೇ ಏನ ನೋದಿ ಏನ ಕೇಳಿ ಏನು ಫಲ? ಕುಲಜನೆಂಬುವದಕ್ಕಾವುದು ದೃಷ್ಟ?"

ಸಪ್ತಧಾತು ಸಮಂಪಿಂಡಂ । ಸಮಯೋನಿ ಸಮುದ್ಭವಂ ।
ಆತ್ಮಜೀವ ಸಮುತ್ಪನ್ನಂ । ವರ್ಣಾನಾಂ ಕಿಂ ಪ್ರಯೋಜನಂ ॥

"ಕಾಶಿ ಕಮ್ಮರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗ ನಾದ, ವೇದವನೋದಿ ಹಾರುವನಾದ, ಕರ್ಣದಲ್ಲಿ ಜನಿಸಿದವರುಂಟೆ? ಜಗದೊಳಗೆ? ಇದುಕಾರಣ ಕೂಡಲಸಂಗಮದೇವಾ ಅಂಗಸ್ಥಲವನರಿ ದವನೇ ಕುಲಜನು."

ಈ ಎರಡು ವಚನಗಳನ್ನು ನೋಡಿದರೆ ಶ್ರೀ ಬಸವಣ್ಣನವರು ಲಿಂಗತತ್ವವನ್ನು ಯಾರು ತಿಳಿಯುತ್ತಾರೆಯೋ ಅವರೇ ಕುಲಜರೆಂದು ಹೇಳಿರುತ್ತಾರೆ. ಋಷಿಗಳು ಬೇರೆ ಬೇರೆ ನೀಚಯೋನಿಗಳಲ್ಲಿ ಜನಿಸಿದವರಾದಾಗ್ಯೂ, ತಮ್ಮ ಶ್ರೇಷ್ಠ ಕರ್ಮಾಚರಣೆಗಳಿಂದ ಗೋತ್ರಾಧಿಪತಿಗಳಾದರು. ಋಷಿಗಳ ಕುಲವನ್ನು ಎಣಿಸಬಾರದೆಂದು ಲೋಕದ ಜನಗಳಲ್ಲಿ ರೂಢಿಯಾಗಿರುತ್ತದೆ. ಇದರ ಅರ್ಥವೇನು? ಅವರು ಶ್ರೇಷ್ಠವಾದ ಆಚರಣೆ ಯಲ್ಲಿ ಬಲ್ಲಿದರಾದುದರಿಂದ ಅವರ ಕುಲಗಳ ಉಪಯೋಗವಿಲ್ಲವೆಂದೇ ಆ ಮಾತಿನ ಅರ್ಥವಾಗುತ್ತದೆ. ಶ್ರೀ ಬಸವಣ್ಣನವರು ಅನೇಕ ಕೀಳುಜನಾಂಗವನ್ನುದ್ಧಾರ ಮಾಡುವದರ ಸಲುವಾಗಿಯೇ ತಮ್ಮದೊಂದು ಧ್ಯೇಯವನ್ನಿಟ್ಟುಕೊಂಡು ಮೊದಲು ಅವರ ಆಚಾರ-ವಿಚಾರ ನಡೆ-ನುಡಿಗಳನ್ನು ತಿದ್ದಿದರು. ಮತ್ತು ಅದರಲ್ಲಿ ಸರ್ವರೂ ಸಮಭಾಗಿಗಳಾಗಿ ಸೇರಿ ಕಾರ್ಯಮಾಡಿ ಆತ್ಮೋನ್ನತಿ ಮಾಡಿಕೊಳ್ಳಲು ಮುಕ್ತದ್ವಾರ ಮಾಡಿದರು. ಅವರನ್ನು ಸುಸಂಸ್ಕೃತರನ್ನಾಗಿ ಮಾಡಿ ನಮ್ಮ ಸಂಸ್ಕೃತಿಯು ಅಳವಡುವಂತೆ ಮಾಡಿದರು.

ಹೀಗೆ ತಮ್ಮ ಕಟ್ಟಿನೊಳಗೆ ಆವಜಾತಿಯವನಾದರೂ ಬಂದರೆ ಅವನನ್ನು ಬಸವಣ್ಣನವರು ತಮಗೆ ಸಮಾನರೆಂದು ಕಂಡರು. ಆದ್ದರಿಂದಲೇ ಅವರು—

"ಹೊಲೆಯ ಮಾದಿಗ ಭಕ್ತನಾದರೆ ಆತನ ಮನೆಯ ಸೊಣಗಂಗೆ ಪಂಚಮಹಾ ವಾದ್ಯದಲ್ಲಿ ಸನ್ಮಾನನೆಯ ಮಾಡೆನೆ? ನೆಲನ ನುಗ್ಗಡಿಪೆ 'ಉಘೇ, ಚಾಂಗುಭಲರೆ' ಎಂದು ಕುಲದಲಧಿಕ ಹಾರುವಂಗೆ ಸಿದ್ಧಿ ಗೆಯ್ಯಸಲೆ ನಿಮ್ಮ ಶರಣರ ಮಹಿಮೆ ಘನಕ್ಕೆ ಘನ ಎಲೆ ಕೂಡಲಸಂಗಮ ದೇವ ನಿಮ್ಮ ನಂಬದವ ಹೊಲೆಯ."

ಶಿವನನ್ನು ಯಾರು ನಂಬುವದಿಲ್ಲವೋ ಅವರೇ ಹೊಲೆಯರೆಂದು ಹೇಳಿದರೇ ಹೊರತು ಇಂಥಾದ್ದೊಂದು ಜನಾಂಗವೆಂದು ಹೇಳಲಿಲ್ಲ.

"ಚತುರ್ವೇದಿಯಾದರೇನು? ಲಿಂಗವಿಲ್ಲದವನೇ ಹೊಲೆಯ. ಶ್ವಪಚ ನಾದರೇನು? ಲಿಂಗವಿದ್ದವನೇ ವಾರಣಾಶಿ. ಆತನ ನುಡಿಗಡಣವೇ ಲೇಸು. ಆತ ಜಗಕ್ಕೆ ಪಾವನ ಆತನ ಪ್ರಸಾದವೆನಗಮೃತಸೇವನೆ."

"ನಮೋ ಪ್ರಿಯಶ್ಚತುರ್ವೇದಿ ಮದ್ಭಕ್ತಃ ಶ್ವಪಚೋಽಪಿ ವಾ ! ತತ್ಪ್ರಸಾದಃ ತತೋ ಗ್ರಾಹ್ಯಃ ಸ ಚ ಪೂಜ್ಯೋ ಯಥಾಹ್ಯಂ ॥ ಕೂಡಲಸಂಗಮದೇವನನರಿತು ಪೂಜಿಸಿದಾತ ಷಡ್ದರ್ಶನಕ್ಕಧಿಕ ಜಗಕ್ಕೆ ಪಾವನನೋಡಾ"

ಹೀಗೆ ಬಸವಣ್ಣನವರು ಅನಂತ ಗೀತೆಗಳನ್ನು ಹಾಡಿ ತಾವು ಅದರಂತೆ ಆಚರಿಸಿರುತ್ತಾರೆ. ಆದ್ದರಿಂದಲೇ ಅವರು ಜಗತ್ತಿನ ಮಹಾ ವ್ಯಕ್ತಿಗಳಲ್ಲಿ ಒಬ್ಬರಾಗಿ ಪ್ರಕಾಶಮಾನರಾಗಿರುತ್ತಾರೆ. ಬಸವಣ್ಣನವರು ಆಚರಣೆಯಲ್ಲಿ ಮಹಾ ನಿಷ್ಠಾವಂತರಾದುದರಿಂದಲೇ ಇತ್ತ ಸರ್ವ ಜಾತಿಯವರಿಗೂ ಮುಕ್ತದ್ವಾರ ಮಾಡಿ ಅತ್ತ ಆಚಾರವೆಂಬ ಬೇಲಿಯನ್ನು ಹಚ್ಚಿ ಸರ್ವರನ್ನೂ ಪವಿತ್ರಗೊಳಿಸಿದರು.

"ಲಿಂಗವಿಲ್ಲದೆ ನಡೆವವರ, ಲಿಂಗವಿಲ್ಲದೆ ನುಡಿವವರ, ಲಿಂಗವಿಲ್ಲದೆ ಉಗುಳನುಂಗಿದರೆ ಅಂದಂದಿಗೆ ಕಿಲ್ಬಿಷವಯ್ಯಾ, ಏನೆಂಬೆ ಏನೆಂಬೆನಯ್ಯ, ಲಿಂಗವಿಲ್ಲದೆ ನಡೆವವರ ಅಂಗ ಲೌಕಿಕ ಮುಟ್ಟಲಾಗದು, ಲಿಂಗವಿಲ್ಲದೆ ನುಡಿವ ಶಬ್ದ ಸೂತಕ ಕೇಳಲಾಗದು, ಲಿಂಗವಿಲ್ಲದೆ ಗಮಿಸಿದೊಡೆ ಆ ನಡೆನುಡಿಗೊಮ್ಮೆ ವ್ರತಗೇಡಿ ಕೂಡಲಸಂಗಮದೇವ."

ಎಂದು ಲಿಂಗದ ಬಗ್ಗೆ ಅಸಾಧಾರಣ ಭಕ್ತಿಯನ್ನು ತೋರಿಸಿರುತ್ತಾರೆ.

"ಸದಾಚಾರ ಸದ್ಭಕ್ತಿಯಿಲ್ಲದವರನೊಲ್ಲನಯ್ಯ. ಅವರಾರಾಧನೆ ದಂಡ ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲ ಕೂಡಲಸಂಗಮದೇವ ಭೂಭಾರಕರ."

ಎಂದು ಆಚಾರಕ್ಕೆ ಮಹತ್ವವನ್ನು ಕೊಟ್ಟಿರುತ್ತಾರೆ.

ಮತ್ತು

"ಶ್ವಪಚನಾದರೇನು? ಲಿಂಗಭಕ್ತನೇ ಕುಲಜನು ನಂಬಿ. ನಂಬದಿದ್ದರೆ ಸಂದೇಹಿ ನೋಡಾ, ಕಟ್ಟಿದರೇನು? ಮುಟ್ಟಿದರೇನು? ಹೂಸಿದರೇನು? ಮನಮುಟ್ಟದನ್ನಕ್ಕ? ಭಾವಶುದ್ಧವಿಲ್ಲದವಂಗೆ ಭಕ್ತಿ ನೆಲೆಗೊಳ್ಳದು ಕೂಡಲ ಸಂಗಯ್ಯನೊಲಿದಂಗಲ್ಲದೆ."

"ದೇವ ದೇವ ಬಿನ್ನಪವನವಧಾರು ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ, ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರನೊಂದೇ ಎಂಬೆ ಹೀಗೆಂದು ನಂಬುವ ದೆನ್ನಮನ ಈ ನುಡಿದ ನುಡಿಯೊಳಗೆಲ್ಲ ಮೊನೆಯಷ್ಟು ಸಂದೇಹವುಳ್ಳರೆ ಹಲುದೋರಿ ಮೂಗಕೊಯ್ಯಿ ಕೂಡಲಸಂಗಮದೇವ."

ಇದೆಂತಹ ಪ್ರತಿಜ್ಞೆಯು. ಅದೆಷ್ಟು ಸಮಾನಭಾವನೆ. ಎಂತಹ ಲಿಂಗಪ್ರೇಮ. ಈ ತರಹದ ಸಮಾನತತ್ವವು ಈಗಿನ ಸಾಮ್ಯವಾದವನ್ನು ಮೀರಿದ್ದಾಗಿರುತ್ತದೆ. ಮುಂದೆ ಬರೆದಿರುವ ವಚನವು ಬಸವಣ್ಣನವರ ಸಾಮ್ಯವಾದದ ಪರಮಾವಧಿಯಾಗಿರುತ್ತದೆ.

"ಸಮಚಿತ್ತವೆಂಬ ನೇಮದ ಹಲಗೆಯ ಹಿಡಿದು ಶಿವಚಿತ್ತವೆಂಬ ಕೂರಲಗ ಕೊಂಡು ಶರಣಾರ್ಥಿಯೆಂಬ ಶ್ರವವ ಕಲಿತರೆ ಆಳುತನಕ್ಕೆ ದೇಸಿ

ಯಪ್ಪೆ ನೋಡಾ ಮಾರಾಂಕಜಂಗಮ ಮನೆಗೆ ಬಂದಲ್ಲಿ ಇದಿರೆದ್ದು ನಡೆವುದು ಕೂಡಲಸಂಗಮದೇವನನೊಲಿಸು ವೊಡಿದುಚಿಹ್ನ.''

ಮತ್ತು

"ದೂಷಕನವನೊಬ್ಬ ದೇಶವ ಕೊಟ್ಟರೆ, ಆಸೆಮಾಡಿಯವನ ಹೊರೆ ಯಲಿರಬೇಡ. ಮಾದರ ಶಿವಭಕ್ತನಾದರೆ ಆತನ ಹೊರೆಯಲಿ ಭೃತ್ಯನಾಗಿ ರ್ಪುದು ಕರಲೇಸಯ್ಯಾ, ತೊತ್ತಾಗಿರ್ಪುದು ಕರಲೇಸಯ್ಯಾ, ಕಾಡಸೊಪ್ಪ ತಂದು ಓಡಿನಲ್ಲಿ ಹುರಿದಿಟ್ಟು ಕೂಡಿ ಕೊಂಡಿಪ್ಪುದು ನಮ್ಮ ಕೂಡಲಸಂಗನ ಶರಣರ.''

"ಹೊಲೆಯ ಹೊಲಬಿಗನಾದರೆ ಅವನ ಹೊರೆಯಲ್ಲಿಪ್ಪುದು ಲೇಸು ಕಂಡಯ್ಯಾ, ಹೊಲಬುಗೆಡದೆ ಲಿಂಗಶರಣೆನ್ನಿರಯ್ಯಾ, ಹೊಲಬುಗೆಡಬೇಡ ಶಿವಶರಣೆನ್ನಿರಯ್ಯಾ ನಮ್ಮ ಕೂಡಲಸಂಗನ ಮಹಾಮನೆಯೊಳು ಮಾದರ ಚೆನ್ನಯ್ಯ ಹೊಲಬಿಗನಯ್ಯಾ.''

ಈ ಎರಡೂ ವಚನಗಳನ್ನು ಪರಿಶೀಲಿಸಿದರೆ ಹೊಲೆಯನು ಜ್ಞಾನವುಳ್ಳವನಾಗಿ ರೀತಿ ನೀತಿ ಯಿಂದ ಕೂಡಿಕೊಂಡಿದ್ದರೆ ಆತನಲ್ಲಿ ಭೃತ್ಯನಾಗಿರುವದು ಲೇಸೆಂದು ಬಸವಣ್ಣನವರು ಹೇಳುತ್ತಾರೆ.

ಇಲ್ಲಿಯವರೆಗೆ ಹೇಳಿದ ವಚನಗಳಿಂದ ಬಸವಣ್ಣನವರು ಅಸ್ಪೃಶ್ಯರೆಂದು ಕರೆಯುವ ಜನರ ಮೇಲೆ ಯಾವ ತರಹದ ಪ್ರೇಮವುಳ್ಳವರಾಗಿದ್ದರೆಂಬುವದು ಸಹಜವಾಗಿ ತಿಳಿದು ಬರುತ್ತದೆ. ಶ್ರೀ ಬಸವಣ್ಣನವರ ಕಾಲಕ್ಕೆ ಸ್ವಲ್ಪ ಮುಂಚೆ ಮಾದರ ಚನ್ನಯ್ಯನವರೆಂಬ ಸುಪ್ರಸಿದ್ಧ ಶಿವಶರಣರಾಗಿ ಹೋಗಿರುತ್ತಾರೆ. ಅವರು ಒಳ್ಳೇ ನಿಷ್ಠಾವಂತ ಶಿವಭಕ್ತ ರಾಗಿದ್ದರು. ಬಸವಣ್ಣನವರು ಅವರ ಮೇಲೆ ಅತ್ಯಂತ ಪ್ರೇಮಪೂರಿತರಾಗಿದ್ದರೆಂಬುವದು ಅವರ ಅನೇಕ ವಚನಗಳಿಂದ ತಿಳಿದುಬರುತ್ತದೆ. ಅವರ ಹೆಸರನ್ನು ಬಸವಣ್ಣನವರು ತಮ್ಮ ವಚನಗಳಲ್ಲಿ ೭೫ ಸಾರೆ ಉಚ್ಚಾರ ಮಾಡಿರುತ್ತಾರೆ. ಇಷ್ಟು ಸಾರೆ ಯಾರ ಹೆಸರನ್ನೂ ಅವರು ಉಚ್ಚಾರಮಾಡಿದ್ದು ಕಂಡುಬರುವದಿಲ್ಲ. ಅವರ ಹೆಸರನ್ನು ಉಚ್ಚಾರಮಾಡುವ ಕಾಲಕ್ಕೆ ಅನೇಕ ವಿಶೇಷಣಗಳನ್ನು ಅವರಿಗೆ ಹಚ್ಚಿರುತ್ತಾರೆ. "ಓದಿದ ಫಲ ಮಾದಾರ ಚನ್ನಂಗಾಯಿತ್ತು' 'ಮುತ್ತಯ್ಯ ಚನ್ನಯ್ಯನಾದರೆ ಆನು ಬದುಕೆನೆ?' 'ಮನ್ನಣೆಯ ಚನ್ನಯ್ಯನೆನ್ನುವ ಮನ್ನಿಸ' 'ಮಾದರನೆಂಬೆನೆ ಚನ್ನಯ್ಯನ?' 'ಚನ್ನಯ್ಯನ ಮಗನ ದಾಸನ ಮಗಳು' 'ಚನ್ನಯ್ಯ ನೆಮ್ಮಯ್ಯನು' 'ಚನ್ನಯ್ಯನ ಮಗ ನಾನು' 'ಚೆನ್ನಯ್ಯ ನೆನ್ನ ಮುತ್ತಯ್ಯನಜ್ಜನಪ್ಪನಯ್ಯ' 'ಅಪ್ಪನು ನಮ್ಮ ಮಾದಾರ ಚನ್ನಯ್ಯ' 'ಚನ್ನಯ್ಯನ ಮನೆಯಲುಬೇಡಿದೆ' 'ಅಯ್ಯಗಳ ಅಯ್ಯ ನಮ್ಮ ಮಾದಾರ ಚೆನ್ನಯ್ಯ' 'ಚೆನ್ನಯ್ಯ ಎತ್ತಿ ಮುದ್ದಾಡಿಸಿದರೆನ್ನ' 'ಮಾದರ ಚನ್ನಯ್ಯಂಗೆ ಒಲಿದಾತ ಮತ್ತೊಬ್ಬ ದೇವನೇ ಅಯ್ಯ?' 'ದೇವ ನಿಮ್ಮ ಪೂಜಿಸಿ ಚೆನ್ನನ ಕುಲ ಚನ್ನಾಯಿತ್ತು' 'ಕೂಪರನಾರನೂ ಕಾಣೆನು ಮಾದರ ಚನ್ನಯ್ಯನಲ್ಲದೆ' 'ಚೆನ್ನನೆತ್ತ ಚೋಳನೆತ್ತ' 'ಚನ್ನನೊಡನುಂಡ ಶಿವ' 'ಕುಲಕ್ಕೆ ತಿಲಕ ನಮ್ಮ ಮಾದರ ಚನ್ನಯ್ಯ' 'ನಡೆ ಚನ್ನ, ನುಡಿ ಚೆನ್ನ, ಎಲ್ಲಿ ನೋಡಿದಡೆ ಚನ್ನ' 'ಪ್ರಮಥರೊಳಗೆ ಚನ್ನ, ಪುರಾತನರೊಳಗೆ ಚನ್ನ, ಸವಿದುನೋಡಿ

ಅಂಬಲಿ ರುಚಿಯಾಯಿತ್ತೆಂದು ಕೂಡಲಸಂಗಮದೇವಂಗೆ ಬೇಕೆಂದು ಕೈದೆಗೆದ ನಮ್ಮ ಚನ್ನ' 'ನಿನಗೆ ಚನ್ನನ ಪ್ರಸಾದ'—ಹೀಗೆ ಮಾದರ ಚನ್ನಯ್ಯನ ಹೆಸರನ್ನು ಬಸವಣ್ಣನವರು ಅನಂತರೀತಿಯಿಂದ ಉಚ್ಚಾರಮಾಡಿದ್ದುದು ಆಶ್ಚರ್ಯಕರವಾಗುವಂತಿದೆ. ಗುಣೈಕಪಕ್ಷಪಾತಿಗಳೂ, ಸರ್ವರನ್ನು ಸಮಭಾವನೆಯಿಂದ ಕಾಣತಕ್ಕವರೂ ಆದ ಬಸವಣ್ಣನವರು ಅವರವರ ಯೋಗ್ಯತೆಯ ಪ್ರಕಾರ ಗೌರವ ಕೊಟ್ಟಿರುತ್ತಾರೆ. ಚನ್ನಯ್ಯನವರ ತರುವಾಯ ಬಸವಣ್ಣನವರು ತಮ್ಮ ವಚನಗಳಲ್ಲಿ ಡೋಹಾರ ಕಕ್ಕಯ್ಯನವರ ಹೆಸರನ್ನು ಹೆಚ್ಚಾಗಿ ಉಚ್ಚರಿಸಿರುತ್ತಾರೆ. ಡೋಹಾರ ಕಕ್ಕಯ್ಯನವರು ಬಸವಣ್ಣನವರ ಕೃಪೆಯಿಂದ ಲಿಂಗಧಾರಣೆಯನ್ನು ಹೊಂದಿದ್ದು, ಅನುಭವಮಂಟಪದಲ್ಲಿ ಅವರೊಬ್ಬ ಪ್ರಧಾನ ಸದಸ್ಯರಾಗಿದ್ದರು. ಶಿವಾನುಭವ ಚರ್ಚೆಯಲ್ಲಿ ವಿಶೇಷ ಭಾಗವನ್ನು ವಹಿಸುತ್ತಿದ್ದರೆಂದು ತಿಳಿಯುತ್ತದೆ.

ಪ್ರಭುದೇವರನ್ನು ಸ್ತುತಿಸುವಾಗ ಡೋಹಾರ ಕಕ್ಕಯ್ಯನವರು—

> "ಕಷ್ಟಕುಲದಲ್ಲಿ ಹುಟ್ಟಿದ ಕರ್ಮವ ಕಳೆದು ಮುಟ್ಟಿ ಪಾವನವ ಮಾಡಿಕೊಟ್ಟನಯ್ಯ ಎನ್ನ ಕರಸ್ಥಲಕ್ಕೆ ಲಿಂಗವ. ಆ ಲಿಂಗ ಬಂದು ಸೋಂಕಲೊಡನೆ ಎನ್ನ ಸರ್ವಾಂಗದ ಅವಲೋಹವಳಿಯಿತ್ತಯ್ಯ ಎನ್ನ ತನುವಿನಲ್ಲಿ ಗುರುವ ನೆಲೆಗೊಳಿಸಿದ, ಎನ್ನ ಮನದಲ್ಲಿ ಲಿಂಗವ ನೆಲೆಗೊಳಿಸಿದ, ಎನ್ನ ಧನದಲ್ಲಿ ಜಂಗಮವ ನೆಲೆಗೊಳಿಸಿದ, ಎನ್ನ ಅರಿವಿನಲ್ಲಿ ಪ್ರಸಾದವ ನೆಲೆಗೊಳಿಸಿದ ಇಂತೀ ತ್ರಿವಿಧಸ್ಥಾನವ ಶುದ್ಧಮಾಡಿದ ಬಸವಣ್ಣನ ಕರುಣದಿಂದ ಪ್ರಭುವಿನ ಶ್ರೀಪಾದವ ಕಂಡು ಬದುಕಿದೆನುಕಾಣಾ ಅಭಿನವ ಚನ್ನಮಲ್ಲಿಕಾರ್ಜುನಾ."

ಕಕ್ಕಯ್ಯನವರು ಬಸವಾದಿ ಪ್ರಮಥರಿಂದ ಉದ್ಧಾರವಾಗಿ ಶಿವಾನುಭವ ಮಂಟಪದಲ್ಲಿ ಪ್ರಧಾನಪಾತ್ರವನ್ನು ವಹಿಸುವ ಯೋಗ್ಯತೆಯನ್ನು ಪಡೆದುದು ಗೊತ್ತಾಗುತ್ತದೆ. ಅವರು ಆಚಾರನಿಷ್ಠರಾಗಿದ್ದರಲ್ಲದೆ, ನಡೆನುಡಿಗಳಲ್ಲಿ ಉಳಿದವರಿಗೆ ಮಾರ್ಗದರ್ಶಕರಾದುದರಿಂದ ಬಸವಣ್ಣನವರು ಅವರನ್ನು ತಮ್ಮಲ್ಲಿ ಏಕೀಕರಿಸಿಕೊಂಡರು. ಇದು ಸಾಮಾನ್ಯವಾದುದಲ್ಲ. ಇದನ್ನು ನೋಡಿ ಕೆಲವರು ಬಸವಣ್ಣನವರಿಗೆ ಟೀಕೆಯನ್ನು ಮಾಡುತ್ತಾರೆ. ಇದು ಸರಿಯಾದುದಲ್ಲ. ದೊಡ್ಡವರ ಅವತಾರವು ಅನೇಕ ಜನಾಂಗದ ಉದ್ಧಾರಮಾಡುವದರ ಸಲುವಾಗಿಯೇ ಆಗುತ್ತದೆಂಬುವದು ಸರ್ವಶೃತವಾದುದು. ಶ್ರೀರಾಮಾನುಜಾಚಾರ್ಯರು, ಬುದ್ಧರು ಮೊದಲಾದವರೆಲ್ಲ ಕೆಳಗಿನ ಜನಾಂಗವನ್ನು ಉದ್ಧಾರಮಾಡಿರುತ್ತಾರೆ. ಇಂತಹ ಕಾರ್ಯಗಳನ್ನು ಮಾಡಿದವರೇ ಲೋಕಪೂಜ್ಯರಾಗಿ ಅಜರಾಮರವಾದ ಕೀರ್ತಿಯನ್ನು ಗಳಿಸುತ್ತಾರೆ. ಅಂತೆಯೇ ಬಸವಣ್ಣನವರು ಇಂದಿಗೂ ಸುಧಾರಕರಲ್ಲಿ ಪೂಜ್ಯವಾದ ಸ್ಥಾನವನ್ನು ಪಡೆದಿರುತ್ತಾರೆ. ಶ್ರೀಬಸವಣ್ಣನವರು ಡೋಹಾರ ಕಕ್ಕಯ್ಯಗಳನ್ನು ಪ್ರಸಾದಿಗಳನ್ನಾಗಿ ಮಾಡಿದುದು ಶಿವಾಗಮಗಳಿಗೂ ಒಪ್ಪಿತವಾದ ಮಾತಾಗಿರುತ್ತದೆ.

**ಸೂಕ್ಷ್ಮಾಗಮ — ಪಟಲ ೬**

ಭಕ್ತಸ್ಯ ಪ್ರಾಕ್ತನಂ ಜನ್ಮ ನಾಮಜಾತ್ಯಾದಿಕಂತು ವಾ ।
ಪೃಚ್ಛೇದ್ವಾ ಕಥಯೇದ್ವಾಪಿ ಸ ವೈಪಾತಕಿನಾಂ ವರಃ ॥

ಅಂದರೆ ಲಿಂಗಧಾರಿಯಾದ ಭಕ್ತನ ಪೂರ್ವಜನ್ಮಾದಿಗಳನ್ನು ಕೇಳಿದರೆ ಅಥವಾ ಹೇಳಿದರೆ ಅವನು ಹೆಚ್ಚಿನ ಪಾತಕಿಯಾಗುವನು. ಅಂದರೆ ಚಂಡಾಲನಿಗಿಂತಲೂ ಚಂಡಾಲ ನಾಗುತ್ತಾನೆಂಬುವದೇ ಸೂಕ್ಷ್ಮಾಗಮದ ಅಭಿಪ್ರಾಯವಾಗಿರುತ್ತದೆ. ಇದರಂತೆಯೇ ಅನೇಕ ಆಗಮಗಳಲ್ಲಿಯೂ ಈ ತರಹದ ಪ್ರಮಾಣಗಳು ಸಿಗುತ್ತವೆ. ಬಸವಣ್ಣನವರ ಜಾತ್ಯುಚ್ಚಾಟನೆ ಎಂಬುವ ಪ್ರಕರಣದಲ್ಲಿ ವಿಶದವಾಗಿ ವಿವೇಚನೆ ಮಾಡಲಾಗಿರುತ್ತದೆ. ಆದ್ದರಿಂದ ಶಾಸ್ತ್ರೋಕ್ತವೂ, ಕ್ರಮಬದ್ಧವೂ ಆದ ಮಾರ್ಗದಿಂದಲೇ ಶ್ರೀ ಬಸವಾದಿ ಪ್ರಮಥರು ಮತಸುಧಾರಣೆಯಲ್ಲಿ ಅತ್ಯದ್ಭುತಗಳಾದ ಕಾರ್ಯಗಳನ್ನು ಮಾಡಿರುತ್ತಾರೆ. ಹೀಗಿದ್ದರೂ ತಿಳಿಯಲಾರದೆ ಅಥವಾ ತಪ್ಪುತಿಳುವಳಿಕೆಯಿಂದ ಬಸವಣ್ಣನವರು ಸಂಕರ ಮಾಡಿರುತ್ತಾರೆಂದು ಹೇಳುವದು ಕೇವಲ ಅವರ ಅಜ್ಞತನದ ಪ್ರದರ್ಶನವು ಲೋಕದಲ್ಲಿ ಆಗುವದಲ್ಲದೆ, ಬಸವಾದಿ ಪ್ರಮಥರ ಕೀರ್ತಿಯು ತೇಜಃಪುಂಜವಾಗಿಯೇ ಉಳಿಯುವದು. ಹಾಗಾದರೆ ಶ್ರೀ ರೇಣುಕರನ್ನೂಕೂಡ ನಾವು ಸಂಕರವರ್ಗದಲ್ಲಿ ಅನಿವಾರ್ಯವಾಗಿ ಸೇರಿಸಬೇಕಾಗುತ್ತದೆ. ಶ್ರೀ ರೇಣುಕರು ಅಗಸ್ತ್ಯರಿಗೆ ಲಿಂಗಧಾರಣ ಮಾಡಿದುದು ತಿಳಿದು ಬರುತ್ತದೆ. ಇದು ಐತಿಹಾಸಿಕ ದೃಷ್ಟಿಯಿಂದ ಸಿದ್ಧವಾಗಿಲ್ಲದಿದ್ದರೂ ಅಗಸ್ತ್ಯರು ಯಾರು? ಅವರ ಕುಲಗೋತ್ರಗಳೇನು? ತಂದೆ ತಾಯಿಗಳು ಯಾರು? ಉತ್ಪತ್ತಿಯು ಹೇಗೆ ಆಯಿತು? ಈ ವಿಷಯಗಳು ನಮ್ಮ ಮುಂದೆ ನಿಲ್ಲುತ್ತವೆ.

ಯಾಸ್ಕನ ನಿರುಕ್ತಿಯಲ್ಲಿ– ಅಗಸ್ತ್ಯಮಹರ್ಷಿಗಳ ಉತ್ಪತ್ತಿಯ ವಿಷಯದಲ್ಲಿ—

> ತಯೋರಾದಿತ್ಯಯೋಃ ಸತ್ರೇ ದೃಷ್ಟ್ವಾಪ್ಸರಸಮುರ್ವಶೀಮ್ ॥
> ರೇತಶ್ಚಸ್ಕಂದತತ್ಕುಂಭೇನ್ಯಪತದ್ವಸುಧಾತಲೇ ।
> ತೇನೈವ ಚ ಮುಹೂರ್ತೇನ ವೀರ್ಯವಂತೌ ತಪಸ್ವಿನೌ ।
> ಅಗಸ್ತ್ಯಶ್ಚ ವಶಿಷ್ಠಶ್ಚ ಮಹರ್ಷೀ ಸಂಬಭೂವತುಃ ॥

ಅಂದರೆ– ಮಿತ್ರ ಮತ್ತು ವರುಣರೆಂಬ ಇಬ್ಬರು ದೇವತೆಗಳು ಆಕಾಶದಲ್ಲಿ ಸಂಚಾರವನ್ನು ಮಾಡುತ್ತಿದ್ದರು. ಊರ್ವಶೀ ಎಂಬುವ ಅಪ್ಸರಸ್ತ್ರೀಯಳನ್ನು ಕಂಡು ಕಡುಮೋಹಿತ ರಾದರು. ತತ್ಕಾಲದಲ್ಲಿ ಅವರ ವೀರ್ಯವು ಸ್ಖಲನವಾಗಿ ಕೆಳಗೆ ಬಿದ್ದಿತು. ಅದರಲ್ಲಿ ಕೊಂಚಭಾಗವು ಭೂಮಿಯಲ್ಲಿಟ್ಟಿದ್ದ ಕೊಡದಲ್ಲಿಯೂ, ಕೆಲಭಾಗವು ಹೊರಗೂ ಬಿದ್ದಿತು. ಕೊಡದಲ್ಲಿ ಬಿದ್ದ ವೀರ್ಯದಿಂದ ತತ್ಕಾಲದಲ್ಲಿಯೇ ಅಗಸ್ತ್ಯನ ಉತ್ಪತ್ತಿಯಾಯಿತು. ಆದ್ದರಿಂದಲೇ "ಅಗಸ್ತ್ಯಃ ಕುಂಭಸಂಭವ"ವೆಂದು ಅಮರಕೋಶವು ಹೇಳುತ್ತಲಿದೆ. ಇನ್ನು ಹೊರಗೆ ಬಿದ್ದ ವೀರ್ಯದಿಂದ ವಸಿಷ್ಠನ ಜನನವಾಯಿತು. "ವಶಿತಿಷ್ಠತೀತಿ ವಸಿಷ್ಠಃ" ಜಿತೇಂದ್ರಿಯನೆಂದು ಅರ್ಥವಾಗುತ್ತದೆ. ಮುಖ್ಯವಾಗಿ ಇವರ ಉತ್ಪತ್ತಿಯು ನಮಗಿಲ್ಲಿ ಬೇಕಾದುದು. ಟೀಕಾಕಾರರ ಮಾತಿನಂತೆ ನೋಡಿದರೆ ಅಗಸ್ತ್ಯ ವಸಿಷ್ಠರು ನಿಶ್ಚಯವಾಗಿ ಸಂಕರರಾಗುತ್ತಾರೆ. ಇಂತಹ ಸಂಕರನಾದ ಅಗಸ್ತ್ಯನಿಗೆ ರೇಣುಕರು ಹೇಗೆ ಲಿಂಗಧಾರಣ ಮಾಡಿದರೆಂಬುವ ಪ್ರಶ್ನೆಯು ಕೇಳುತ್ತಲಿದೆ. ಅರ್ಥಾತ್ ಅವರ ದೃಷ್ಟಿಯಿಂದ ಈ ಕಾರ್ಯವು ಯೋಗ್ಯವಾದುದು. ಅವರು ಅಗಣಿತ ಮಹಿಮಾಶಾಲಿಗಳು. ಅವರಿಗೆ ಎಲ್ಲವೂ ಸುಸಾಧ್ಯವೆಂದು ವಾದಿಸಿದರೂ ಗೆಲ್ಲಲಾರರು. ದ್ವಿತೀಯ ಶಂಭುವಾದ ಬಸವೇಶ್ವರರಿಗೂ ಇದು ಸಾಧ್ಯವೇ ಆಗಿರುವದು. ಪ್ರಮಥ ಪ್ರಥಮಾಚಾರ್ಯನೆಂದು ಗ್ರಂಥಗಳಲ್ಲಿ ಉಲ್ಲೇಖವಾಗಿರುವದರಿಂದ ಸುತರಾಂ ಅವರಿಗೆ ಇದು ಯೋಗ್ಯವೇ ಆಗಿದೆ.

ಅವರು ಧರ್ಮೋದ್ಧಾರಕ್ಕಾಗಿ ಪರಮಾತ್ಮನ ಅಪ್ಪಣೆಯಂತೆ ಭೂಲೋಕಕ್ಕೆ ಅವತರಿಸಿರುವದರಿಂದ ಅವರು ಸರ್ವತಂತ್ರಸ್ವತಂತ್ರರಾದ ದ್ವಿತೀಯ ಶಂಭುಗಳೂ ಅಹುದು. ಭೂಲೋಕದಲ್ಲಿ ಅವತರಿಸಿ ಅವರು ಮಾಡಿದ ಕಾರ್ಯಗಳನ್ನು ನೋಡಿದರೆ ಅದ್ವಿತೀಯ ಶಂಭುಗಳೂ ಅವರಾಗುತ್ತಾರೆ. ಹೀಗೆ ಬಸವಾದಿ ಪ್ರಮಥರು ೮೦೦ ವರ್ಷಗಳ ಹಿಂದೆಯೇ ಇಂತಹ ವಿಚಾರಕ್ರಾಂತಿಯನ್ನು ಮಾಡಲು ಪ್ರಾರಂಭಿಸಿದ್ದುದು ಈ ದೇಶದ ಇತಿಹಾಸದಲ್ಲಿಯೇ ಕ್ರಾಂತಿಕಾರಕ ಕಾರ್ಯವಾಗಿರುತ್ತದೆ. ಶ್ರೀ ಬುದ್ಧದೇವನು ಅತ್ಯಂತ ಸ್ವಾರ್ಥತ್ಯಾಗ ಮಾಡಿದ್ದುದು ನಿಜವಿದ್ದರೂ ಶರಣರ ಮಾರ್ಗವು ಅವರ ಮಾರ್ಗಕ್ಕಿಂತಲೂ ಅತ್ಯಂತ ವಿಲಕ್ಷಣವಾದುದಾಗಿರುತ್ತದೆ. ಶ್ರೀ ಜಗದ್ಗುರು ರೇಣುಕಾಚಾರ್ಯರು ಅಗಸ್ತ್ಯರಿಗೆ ಲಿಂಗಧಾರಣ ಮಾಡಿದ್ದುದು ಯೋಗ್ಯವೂ, ಅನ್ಯರಿಗೆ ಮಾರ್ಗದರ್ಶಕವೂ ಆಗಿರುತ್ತದೆ.

ಶ್ರೀ ಮಾದಾರ ಚನ್ನಯ್ಯನವರು —

"ನಡೆ ನುಡಿ ಸಿದ್ಧಾಂತವಾದಲ್ಲಿ ಕುಲಹೊಲೆಯಿಲ್ಲ. ನುಡಿಲೇಸು ನಡೆಯಧಮವಾದಲ್ಲಿ ಅದೇ ಬಿಡುಗಡೆ ಇಲ್ಲದ ಹೊಲೆ ಕಳವು ಪರದಾರಂಗಳಲ್ಲಿ ಹೊಲಬನರಿಯದೆ ಕೆಟ್ಟು ನಡೆವುತ್ತ ಮತ್ತೆ ಕುಲಜರೆಂಬ ಒಡಲುಂಟೆ? ಆಚಾರವೇ ಕುಲ, ಅನಾಚಾರವೇ ಹೊಲೆ ಇಂತೀ ಉಭಯವ ತಿಳಿದು ಅರಿಯಬೇಕು ಕಯ್ಯುಳಿಗತ್ತಿ ಅಡಿಗೂಂಟ ಕೆಡೆಯಾಗಬೇಡ ಅರಿನಿಜಾತ್ಮ ರಾಮ ರಾಮನಾ."

ಈ ವಚನದಲ್ಲಿ ಶರಣರು ಆಚಾರವೇ ಕುಲ, ಅನಾಚಾರವೇ ಹೊಲೆಯೆಂದು ಆಚಾರಕ್ಕೆ ಅತ್ಯಂತ ಪ್ರಾಧಾನ್ಯ ಕೊಟ್ಟಿರುತ್ತಾರೆ. ಆದುದರಿಂದಲೇ ಬಸವಣ್ಣನವರು ಆಚಾರವೇ ಸ್ವರ್ಗ, ಅನಾಚಾರವೇ ನರಕವೆಂದು ಸಾರಿರುತ್ತಾರೆ.

ಶ್ರೀ ಚನ್ನಬಸವಣ್ಣನವರು —

"ಚಾಂಡಾಲನಾದರೆಯೂ ಶಿವಭಕ್ತನೇ ಕುಲಜನು. ಆತನೊಡನೆ ನುಡಿಗಡಣವ ಮಾಡಬೇಕೆಂದುದು ವೇದ. ಕುಲವ ನೋಡಲುಬೇಡ, ಛಲವ ನೋಡಲುಬೇಡ, ಆತನೆಲ್ಲರಿಗಿಂತಲೂ ಹಿರಿಯನು. ಆತನಿರುತಿರ್ದಲ್ಲಿ ಶಿವನಿರುತ್ತಿಹನೆಂದು ವೇದ ನುಡಿವುತ್ತಿದೆ."

"ಅಪಿವಾಯಶ್ಚಾಂಡಾಲಃ ಶಿವ ಇತಿವದತಿ ತೇನಸಃ ವಾಚ್ಯಂ ತೇನಸಃ ವದೇತ್ ತೇನಸಃ ವಿಶೇತ್ ತೇನಸಃ ಭುಂಜೀಯಾತ್"

ಹೀಗೆಂದು ಉಪನಿಷತ್ತು ನುಡಿಯುತ್ತಿದೆ.

"ಶಿವನೇ ನಿಮ್ಮ ಸದ್ಭಕ್ತರನು ಅವರಿವರೆಂದು ಕುಲವೆತ್ತಿ ನುಡಿದವಂಗೆ ಇಪ್ಪತ್ತೆಂಟುಕೋಟಿ ನರಕ ತಪ್ಪದು ನೋಡಯ್ಯ ಬಸವಪ್ರಿಯ ಕೂಡಲ ಚನ್ನಸಂಗಮದೇವಾ."

ಶ್ರೀ ಚನ್ನಬಸವಣ್ಣನವರು ಈ ವಚನದಲ್ಲಿ ಬಹಳ ಮಾರ್ಮಿಕವಾಗಿ ಶಿವಭಕ್ತರೇ ಶ್ರೇಷ್ಠರೆಂದು ಹೇಳಿರುತ್ತಾರೆ. ಮತ್ತು ಅವರ ಕೂಡ ವಾಸವನ್ನು ಮಾಡಬೇಕು, ಅವರ ಕೂಡ

ಊಟ ಉಪಚಾರಾದಿಗಳನ್ನು ಮಾಡಬೇಕೆಂದು ಹೇಳಿರುವ ಉಪನಿಷತ್ತಿನ ಪ್ರಮಾಣ ವನ್ನೂ ಕೂಡ ತಮ್ಮ ವಚನದಲ್ಲಿ ಉದಾಹರಿಸಿರುತ್ತಾರೆ. ಕೊನೆಯ ಭಾಗದಲ್ಲಿ ಅವರು ಎಲೈ ಪರಮಾತ್ಮನೇ, ನಿಮ್ಮ ಸದ್ಭಕ್ತರನ್ನು ಅವರಿವರೆಂದು ಕುಲವನ್ನು ಎತ್ತಿ ಎಣಿಸಿದರೆ ಅವರು ನಿರಂತರವಾಗಿ ನರಕವಾಸಿಗಳಾಗುತ್ತಾರೆಂದು ಹೇಳಿರುತ್ತಾರೆ. ಶರಣರ ಬಳಗದಲ್ಲಿ ಉಗ್ರವಾದಿಗಳಾದ ಅಂಬಿಗರ ಚೌಡಯ್ಯನವರು ಹೊಲೆಯ ಶಬ್ದದ ಅರ್ಥವನ್ನು ಬಹಳ ಸ್ವಾರಸ್ಯವಾಗಿ ಮಾಡಿರುತ್ತಾರೆ.

> "ಹೊಲೆಯ ಹೊಲೆಯ ಎಂದಡೆ ಹೊಲೆಯರೆಂತಪ್ಪರಯ್ಯಾ? ಹೊಲೆಯ ಹೊರಕೇರಿಯಲ್ಲಿರುವರು ಊರೊಳಗಿಲ್ಲವಯ್ಯಾ ಹೊಲೆಯರು? ತಾಯಿಗೆ ಬೈದವನೇ ಹೊಲೆಯ, ತಂದೆಗೆ ಬೈದವನೇ ಹೊಲೆಯ, ತಂದೆಗೆ ಉತ್ತರ ಕೊಟ್ಟವನೇ ಹೊಲೆಯ, ಕೊಡುವ ಹಣಕ್ಕೆ ಅಡ್ಡಬಂದವನೇ ಹೊಲೆಯ, ನಡುದಾರಿಗೆ ಮುಳ್ಳುಹಚ್ಚಿದವನೇ ಹೊಲೆಯ, ಬ್ರಾಹ್ಮಣನ ಕುತ್ತಿಗೆಯ ಕೊಯ್ದವನೇ ಹೊಲೆಯ, ಹತ್ತುಆಡಿದರೆ ಒಂದು ನಿಜವಿಲ್ಲದವನೇ ಹೊಲೆಯ ಅರ್ಥಕ್ಕೆ ಪ್ರಾಣಹತ್ಯವ ಮಾಡುವವನೇ ಹೊಲೆಯ, ಚಿತ್ತದಲ್ಲಿ ಪರಸತಿಯ ಬಯಸಿದಾತನೇ ಹೊಲೆಯ, ಲಿಂಗಮುದ್ರೆಯ ಕಿತ್ತಿದವನೇ ಹೊಲೆಯ, ಲಿಂಗ ಬಿಟ್ಟು ತಿರುಗುವವನೇ ಹೊಲೆಯ, ನಿಂದೆಯ ಮಾಡುವವನೇ ಹೊಲೆಯ, ಧರ್ಮವ ಮಾಡದವನೇ ಹೊಲೆಯ, ಬಸವನ ಕೊಂದವನೇ ಹೊಲೆಯ, ಬಸವನ ಇರಿದವನೇ ಹೊಲೆಯ, ಲಿಂಗಪೂಜೆಯ ಮಾಡದವನೇ ಹೊಲೆಯ, ಇಂತಪ್ಪ ಹೊಲೆಯರು ಊರತುಂಬವಿರಲಾಗಿ ಹೊರಕೇರಿ ಯವರಿಗೆ ಹೊಲೆಯರೆನಬಹುದೇ? ಹೊಲೆಹುಟ್ಟಿದ ಮೂರು ದಿನಕ್ಕೆ ಪಿಂಡಕ್ಕೆ ನೆಲೆಯಾಯಿತ್ತು, ಹೊಳೆಯನುಂಡ ಪತ್ರಾವಳಿ ಹೊಳಿಗೆ ಹರಗೋಲವಾ ಯಿತ್ತು, ಗುರುಗಳಿಗೆ ಚಮ್ಮಾವುಗೆಯಾಯಿತ್ತು, ಹೊಡಲಿಕ್ಕೆ ಮಿಣಿಯಾ ಯಿತ್ತು, ಹೊಡೆಯಲಿಕ್ಕೆ ಬಾರಕೋಲವಾಯಿತ್ತು, ಅರಸರಿಗೆ ಮೃದಂಗ ವಾಯಿತ್ತು, ತೋಲು ನಗಾರಿಯಾಯಿತ್ತು, ತುಪ್ಪ ತುಂಬಲಿಕ್ಕೆ ಸಿದ್ದಲಿಕೆ, ಎಣ್ಣೆ ತುಂಬಲಿಕ್ಕೆ ಬುದ್ದಲಿಕೆ, ಸಿದ್ದಲಿಕೇನ ತುಪ್ಪ, ಬುದ್ದಲಿಕೇನ ಎಣ್ಣೆ, ಕಲ್ಲಶೆಟ್ಟಿ ಮಲ್ಲಶೆಟ್ಟಿಗಳು ಕೂಡಿ ನಾ ಶೀಲವಂತ ತಾ ಶೀಲವಂತವೆಂದು ಎಂದುಕೊಂಡು ತಿಂದು ಒಂದು ಸ್ಥಳಕ್ಕೆ ಬಂದಾಗ ನನ್ನ ಕುಲ ಹೆಚ್ಚು ನಿನ್ನ ಕುಲ ಕಡಿಮೆ ಎಂಬವರನು ಮೆಚ್ಚ ನಮ್ಮ ಅಂಬಿಗರ ಚೌಡಯ್ಯ."

ಹೀಗೆ ಶರಣರು ಗುಣಕ್ಕೆ ಪ್ರಾಧಾನ್ಯವನ್ನು ಕೊಟ್ಟಿರುವರು.

ಇವರಂತೆಯೇ ಹರಿದಾಸರಾದರೂ—

**ಹರಿಭಕ್ತಿಸುಧೆ — ಪುಟ ೧೭೯**

> "ಹೊಲೆಯ ಹೊರಗಿಹನೆ ಊರೊಳಗಿಲ್ಲವೆ? ಹೊಲೆಯ ಹೊಲೆತಿಲ್ಲವೆ? ಶೀಲವನ್ನು ಕೈಕೊಂಡು ನಡೆಸದಾತನೆ ಹೊಲೆಯ ಕೇಳಿ, ಹರಿಶಾಸ್ತ್ರವ ಕೇಳದವ ಹೊಲೆಯ, ಆಳಾಗಿ ಅರಸನೊಳು ಮುನಿವವನೆ ಹೊಲೆಯ,

ಸೂಳೆಯರಹೋಗುವ ಶುದ್ಧ ಹೊಲೆಯ, ಇದ್ದಾಗ ದಾನಧರ್ಮವ ಮಾಡದವ ಹೊಲೆಯ, ಕದ್ದು ತನ್ನೊಡಲ ಪೊರೆವವನೆ ಹೊಲೆಯ ॥ ೧ ॥

ಪದ್ಧತಿಯಬಿಟ್ಟು ನುಡಿಗಳಾಡುವವ ಹೊಲೆಯ, ಮದ್ದಿಕ್ಕಿ ಕೊಲ್ಲುವವ ಮಾರಿಹೊಲೆಯ ॥ ೨ ॥

ಕೊಂಡ ರುಣವನು ತಿರುಗಿ ಕೊಡದಿದ್ದವನೆ ಹೊಲೆಯ, ಬಂಡು ಮಾತುಗಳ ಬಯಲಿಗಿಕ್ಕುವ ಹೊಲೆಯ, ಗಂಡಹೆಂಡರ ಮಧ್ಯೆ ಭೇದ ಹಚ್ಚುವವ ಹೊಲೆಯ, ಹೆಂಡತಿಯ ಇಚ್ಛೆಯಲಿ ನಡೆವ ಹೇಡಿಹೊಲೆಯ ॥ ೩ ॥

ಆಶೆಯನು ಹುಟ್ಟಿಸಿ ಭಾಷೆ ತಪ್ಪುವವ ಹೊಲೆಯ, ಲೇಸು ಉಪಕಾರ ವನು ಅರಿಯದವ ಹೊಲೆಯ, ವೀಸಕೊಟ್ಟು ಬಹಳ ಕೊಟ್ಟೆನೆಂಬುವವ ಹೊಲೆಯ, ಹೇಸದಲೆ ಹುಸಿಯಾಡುವವ ಹುಚ್ಚಹೊಲೆಯ ॥ ೪ ॥

ಅರಿತು ಅನ್ಯಾಯವನು ಮರೆಮಾಳ್ಪನೇ ಹೊಲೆಯ, ಗುರುಹಿರಿಯ ರೆನ್ನದವ ಹಿರಿಯ ಹೊಲೆಯ, ಪರನಿಂದೆ ಆತ್ಮಸ್ತುತಿ ಮಾಡುವವನತಿ ಹೊಲೆಯ, ಪುರಂದರ ವಿಠಲನೆನ್ನದವ ಹೊಲೆಯ ॥ ೫ ॥"

ಶರಣರು ಮೇಲೆ ಹೇಳಿರುವ ವಚನವನ್ನು ಓದುವಾಗ ದ್ವೈತಿಗಳೆಂದು ತಿಳಿಯಲಾಗದು. ಅವರ ಆಚಾರ ಕಟ್ಟಳೆಯು ಬಹಳಮಟ್ಟಿಗೆ ಕಟ್ಟುನಿಟ್ಟಾಗಿರುವದು. ಆದ್ದರಿಂದ—

"ಅರಿವು ಸಾಧ್ಯವಾಯಿತ್ತೆಂದು ಗುರುಲಿಂಗ ಜಂಗಮವ ಬಿಡಬಹುದೇ? ಸಂದು ಸಂಶಯವಳಿದು ಅಖಂಡ ಜ್ಞಾನವಾಯಿತ್ತೆಂದು ಪರಧನ ಪರಸ್ತ್ರೀಗೆ ಅಳುಪಬಹುದೇ? "ಯತ್ರಜೀವಸ್ತತ್ರಶಿವಃ" ಎಂಬ ಅಭಿನ್ನಜ್ಞಾನ ವಾಯಿತ್ತೆಂದು ಶುನಕ, ಶೂಕರ, ಕುಕ್ಕುಟ, ಮಾರ್ಜಾಲಂಗಳ ಕೂಡಿ ಭುಂಜಿಸಬಹುದೇ? ಭಾವದಲ್ಲಿ ತನ್ನ ನಿಜದ ನೆಲೆಯನರಿವುದು ಸುಜ್ಞಾನ, ಸತ್ಕ್ರಿಯಾ, ಸುನೀತಿ, ಸುಮಾರ್ಗದಲ್ಲಿ ವರ್ತಿಸುವುದು ಹೀಗಲ್ಲದೆ ಜ್ಞಾನ ವಾಯಿತ್ತೆಂದು ತನ್ನ ಮನಕ್ಕೆ ಬಂದಹಾಗೆ ಮೀರಿ ನುಡಿದು ನಡೆದೆನಾದರೆ ಶ್ವಾನನ ಗರ್ಭದಲ್ಲಿ ಹುಟ್ಟಿಸದೇ ಬಿಡುವನೇ ಚನ್ನಮಲ್ಲಿಕಾರ್ಜುನಯ್ಯನು."

ಇಂತಹ ಶರಣರ ಮಾರ್ಗದಲ್ಲಿ ಅನಾಚಾರಕ್ಕೆ ಅವಕಾಶವಿರುವದಿಲ್ಲ. ಬಸವಾದಿ ಪ್ರಮಥರ ಸಂಘಕ್ಕೆ ಶ್ರೀ ಪ್ರಭುದೇವರು ಅಧಿನಾಯಕರಾಗಿರುವದರಿಂದ, ಶ್ರೀ ಪ್ರಭು ದೇವರು ಸರ್ವರನ್ನೂ ಸನ್ಮಾರ್ಗದಲ್ಲಿ ತರಲು ಸಮರ್ಥರಾದ ಜ್ಞಾನಿಗಳಾದುದರಿಂದ ಯಾವ ತರಹದ ಅನೀತಿಗೆ ಆಸ್ಪದವಿರುವದಿಲ್ಲ. ಅವರ ನಡೆ ನುಡಿ ರೀತಿ ನೀತಿಗಳು ಅತ್ಯಂತ ಪರಿಶುದ್ಧವಾದವುಗಳು.

ಶ್ರೀ ಬಸವಣ್ಣನವರು—

"ನಿಷ್ಠೆಯಿಂದ ಲಿಂಗವ ಪೂಜಿಸಿ ಮತ್ತೊಂದು ಪಥವನರಿಯದ ಶರಣರು ಸರ್ಪನ ಹೆಡೆಯ ಮಾಣಿಕದಂತಿರ್ಪರು ಭೂಷಣರಾಗಿ ದರ್ಪಣ ದೊಳಗಣ ಪ್ರತಿಬಿಂಬದಂತೆ ಹಿಂಗದಿಪ್ಪರು ಕೂಡಲಸಂಗಮದೇವಾ ನಿಮ್ಮ ಶರಣರು."

ಇಂತಹ ಶ್ರೇಷ್ಠತರವಾದ ಆಚರಣೆಯುಳ್ಳವರು ಅಸ್ಪೃಶ್ಯೋದ್ಧಾರ ಮಾಡಿದುದು ತುಂಬಾ ಆಶ್ಚರ್ಯಕರವಾದುದೂ, ಅನುಕರಣೀಯವೂ ಆಗಿರುತ್ತದೆ.

ಶ್ರೀ ವೊಗ್ಗೆಯ ಮಾಯಿದೇವಾಚಾರ್ಯರು ತಮ್ಮ ಶತಕತ್ರಯದಲ್ಲಿ—

"ಶ್ವಪಚನ ದೈವದಂತರಮನೊರ್ಮೆ ವಿಚಾರಿಸಿನೋಡೆ ಲೋಕ
ದೋಳ್ ಶ್ವಪಚನೆಬಲ್ಲಿದಂ ಜನದ ಬುದ್ಧಿಗೆ ದೈವಮನೊಲ್ದು ಮುಟ್ಟದ । ಲ್ಲಿ
ಪರಮ ಶುದ್ಧತಾ ಸ್ಮರಣೆಯಿಲ್ಲದ ಶುದ್ಧ ಸಲೇಪಭಾವಮಾ । ಶ್ವಪಚನ
ತಟ್ಟುಮುಟ್ಟೆ ನೆಡೆಯಲ್ಲಿಯೆ ಬರ್ಪುದರಿಂ ಶಿವಾಥವಾ"

ಅಂದರೆ–ಕರ್ಮಭ್ರಾಂತರಾದ ಜನರ ಆಚರಣೆಯನ್ನು ನೋಡಿದರೆ ಅವರ ಬುದ್ಧಿಗೆ ದೈವಕ್ಕಿಂತಲೂ ಚಂಡಾಲನೇ ಬಲ್ಲಿದನೆಂದು ತೋರಿರುವಂತೆ ಕಾಣುತ್ತದೆ. ಏಕೆಂದರೆ, ತನ್ನಲ್ಲಿ ಇಷ್ಟಲಿಂಗ ಸಂಬಂಧವಿರುವಾಗ ತಾನು ಯಾವಾಗಲೂ ಪರಿಶುದ್ಧನಾಗಿರುವೆನೆಂಬ ಭಾವವು ಇಲ್ಲದೆ ಚಂಡಾಲನು ತನ್ನನ್ನು ಸೋಂಕಿದಮಾತ್ರದಿಂದಲೇ ತನಗೆ ಅಶುಚಿತ್ವವು ಬರುವುದೆಂದು ತಿಳಿಯುವನು. ಪರಿಶುದ್ಧಭಾವವನ್ನುಂಟುಮಾಡುವ ದೈವಸಂಬಂಧಕ್ಕಿಂತಲೂ ಚಂಡಾಲನ ಸ್ಪರ್ಶದಲ್ಲಿ ಅಧಿಕಶಕ್ತಿ ಇರುವುದೆಂದು ಭಾವಿಸಿದಂತಾಯಿತೆಂದು ಅಭಿಪ್ರಾಯ.

ಹಿಂದೂಧರ್ಮದ ಆದ್ಯಗ್ರಂಥಗಳಾದ ವೇದಾಗಮೋಪನಿಷತ್ತುಗಳಲ್ಲಿ ಮೇಲು ಕೀಳುಗಳ ವರ್ಣನೆಗಳು ಎಲ್ಲಿಯೂ ಕಂಡುಬರುವುದಿಲ್ಲ. ಈ ಅಸ್ಪೃಶ್ಯವೆಂಬುವುದೊಂದು ಅವೈದಿಕ ಕರ್ಮವೆಂದು ಅನೇಕ ವಿದ್ವಾಂಸರ ಅಭಿಪ್ರಾಯವಾಗಿರುತ್ತದೆ. ವೇದಗಳಲ್ಲಿ ಇರತಕ್ಕ ವರ್ಣನೆಗಳೆಲ್ಲ ಗುಣದಿಂದಾದವುಗಳಲ್ಲದೆ ಜಾತಿಯಿಂದಾದವುಗಳಲ್ಲ. ವೇದಗಳು ಸಮಾನತ್ವಬೋಧಕಗಳಾಗಿರುತ್ತವೆಂಬುವದಕ್ಕೆ ವೇದಗಳ ಮಂತ್ರಗಳನ್ನು ನಾವು ಕೆಲವನ್ನಾದರೂ ಇಲ್ಲಿ ನೋಡಬಹುದು.

### ಋಗ್ವೇದಮಂಡಲ — ಸೂಕ್ತ ೫–೫೯–೬೦

ಅಜ್ಯೇಷ್ಠಾಸೋ ಅಕನಿಷ್ಠಾ ಸ ಏವತೇ ಸಂಭ್ರಾಂತರೋವಾವೃಧುಃ ।
ಸೌಭಗಾಯ ಯುವಾಪಿ ತಾ ಸ್ವಪಾರುದ್ರ ಏಷಾಂ ಪ್ರಶ್ನಿರ್ಮಾತಾ ಸುದಿನಾಮರುದ್ಭ್ಯಃ ॥

ಈ ಮನುಷ್ಯರಲ್ಲಿ ದೊಡ್ಡವರಾಗಲೀ ಚಿಕ್ಕವರಾಗಲೀ ಯಾರೂ ಇರುವದಿಲ್ಲ. ಎಲ್ಲರೂ ಸಮಾನರು. ಇವರೆಲ್ಲರ ತಂದೆ ಪರಮಾತ್ಮನು, ತಾಯಿ ಭೂದೇವತೆಯು. ಇದನ್ನು ತಿಳಿದೇ ಸಹೋದರರಾದ ಮಾನವರೆಲ್ಲ ಉನ್ನತರಾಗಬಲ್ಲರು.

ತೇ ಅಜ್ಯೇಷ್ಠಾ ಅಕನಿಷ್ಠಾ ಸ ಉದ್ಭಿದೋ ಅಮಧ್ಯಮಾಸೋಮಹಸಾವಿವಾವೃಧುಃ ।

ಅಂದರೆ ಮನುಷ್ಯರಲ್ಲಿ ಉತ್ತಮರು ಮಧ್ಯಮರು ಕನಿಷ್ಠರೆಂಬುವ ಭೇದಜನ್ಮದಿಂದಿಲ್ಲ. ಇದನ್ನು ತಿಳಿದು ಅವರು ತಮ್ಮ ಸ್ವಪ್ರಕಾಶದಿಂದ ಉನ್ನತರಾಗಬಲ್ಲರು.

ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ ಅಮೇಧಾಮನಿದಿವ್ಯಾನಿತಸ್ಥುಃ ॥

ಇದು ಯಜುರ್ವೇದದ ಮಂತ್ರವು. ಎಲೌ ಅಮೃತಸ್ವರೂಪನಾದ ಪರಮಾತ್ಮನ ಪುತ್ರರುಗಳಾದ ಮಾನವರೇ, ಈ ದಿವ್ಯೋಪದೇಶವನ್ನಾಲಿಸಿರಿ ಎಂದು ವೇದವು

ಉದ್ಘೋಷಿಸುತ್ತದೆ. ವೇದದ ದೃಷ್ಟಿಯಲ್ಲಿ ಎಲ್ಲರೂ ಅಮೃತಪುತ್ರರು. ಮತ್ತು ಕೆಳಗೆ ಬರೆದ ಯಜುರ್ವೇದದ ಮಂತ್ರಗಳು ಸಮಾನತ್ವವನ್ನು ತೋರಿಸುತ್ತವೆ.

> ದೃತೇದೃಗ್ಂ ಹಮಾಮಿತ್ರಸ್ಯ ಮಾ ಚಕ್ಷುಷಾ ಸರ್ವಾಣಿ ಭೂತಾನಿ ಸಮೀಕ್ಷಂತಾಂ ಮಿತ್ರಸ್ಯಾಹಂ ಚಕ್ಷುಷಾ ಸರ್ವಾಣಿ ಭೂತಾನಿ ಸಮೀಕ್ಷ್ಯೇ ಮಿತ್ರಸ್ಯ ಚಕ್ಷುಷಾ ಸಮೀಕ್ಷಾಮಹೇ ।
>
> ಯ., ೩೬-೧೮.

ಎಲ್ಲ ಪ್ರಾಣಿಗಳು ನನ್ನನ್ನು ಮಿತ್ರದೃಷ್ಟಿಯಿಂದ ನೋಡಲಿ. ನಾನು ಎಲ್ಲ ಪ್ರಾಣಿಗಳನ್ನು ಮಿತ್ರದೃಷ್ಟಿಯಿಂದಲೇ ನೋಡುತ್ತೇನೆ. ನಾವು ಪರಸ್ಪರ ದೃಷ್ಟಿಯಿಂದಲೇ ನೋಡೋಣ.

> ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತಿ ।
> ಸರ್ವಭೂತೇಷು ಚಾತ್ಮಾನಂ ತತೋ ನವಿಜುಗುಪ್ಸತೇ ॥

ಅಂದರೆ ಪರಮಾತ್ಮನು ಸರ್ವವ್ಯಾಪಿಯೆಂದೂ, ಸರ್ವಭೂತಗಳೂ ಪರಮಾತ್ಮನಲ್ಲಿ ಅಡಗಿವೆಯೆಂದೂ ತಿಳಿದವನು ಯಾರನ್ನೂ ದ್ವೇಷಿಸುವದಿಲ್ಲ.

ಶ್ರೀ ಬಸವಣ್ಣನವರು ಸರ್ವ ಪ್ರಾಣಿಗಳಲ್ಲಿ ಭೇದಗಳನ್ನು ಮಾಡದೆ ತಮ್ಮಂತೆ ಕಂಡು ವ್ಯವಹರಿಸಿರುತ್ತಾರೆ. ಶಿವಭಕ್ತ ಅಥವಾ ಲಿಂಗಭಕ್ತರ ಭೃತ್ಯರ ಭೃತ್ಯನೆಂದೂ, ನನಗಿಂತ ಕಿರಿಯರಾರೂ ಇಲ್ಲವೆಂದೂ ಉದ್ಘೋಷಿಸಿ ಮಾನವ ಸಮಾಜದಲ್ಲಿ ಸಮಾನತ್ವದ ಬೀಜವನ್ನು ೮೦೦ ವರ್ಷಗಳ ಹಿಂದೆಯೇ ಬಿತ್ತಿ ಅಜರಾಮರವಾದ ಕೀರ್ತಿಯನ್ನು ಗಳಿಸಿರುತ್ತಾರೆ.

> ಉತದೇವಾ ಅವಹಿತಂದೇವಾ ಉನ್ನಯಥಾ ಪುನಃ ।
> ಉತಾಗ್ರಶ್ಚ ಕೃಷಂದೇವಾ ದೇವಾಜೀವ ಯಥಾ ಪುನಃ ॥

ಹೇ ವಿದ್ವಜ್ಜನರುಗಳಿರಾ, ನೀವು ಕೆಳಗೆ ಬಿದ್ದವರನ್ನು ಉದ್ಧರಿಸಿರಿ. ಈ ವೇದ ಮಂತ್ರದಂತೆಯೇ ಬಸವ ಮಹಾತ್ಮನು ದೀನರಾದ ಅಸ್ಪೃಶ್ಯರ ಉದ್ಧಾರಕಾರ್ಯವನ್ನು ಪ್ರಾರಂಭ ಮಾಡಿದನೆನ್ನಬಹುದು.

> "ಈ ಜಗತ್ತಿನಲ್ಲಿ ಸರ್ವರೂ ಜ್ಞಾನದಿಂದಲ್ಲದೆ ಮತಗೋತ್ರಾಭಿಮಾನದಿಂದ ಮೋಕ್ಷವಂತರಲ್ಲ ಕೇಳಾ."

ಶ್ರೀ ಸಿದ್ಧರಾಮದೇವರು—

> "ಚಂಡಾಲನಾದರೇನು? ಶಿವಭಕ್ತನೇ ಕುಲಜನು. ಆತನೊಡನೆ ನುಡಿಗಡಣ ಮಾಡಬೇಕೆಂಬುದುದು ವೇದ. ಕುಲವ ನೋಡಲುಬೇಡ ಛಲವ ನೋಡಲುಬೇಡ ಆತ ಎಲ್ಲರಿಗಿಂತಲೂ ಹಿರಿಯನು."

> ತಪಸಾ ಬ್ರಾಹ್ಮಣೋಜಾತಃ ವಿಶ್ವಾಮಿತ್ರೋ ಮಹಾಮುನಿಃ ।
> ತಪಸಾ ಬ್ರಾಹ್ಮಣೋಜಾತಃ ಅಗಸ್ತ್ಯೋತ್ರ ಮಹಾಮುನಿಃ ।
> ತಪಸಾ ಬ್ರಾಹ್ಮಣೋಜಾತಃ ಪರಾಶರ ಮಹಾಮುನಿಃ ।
> ಭೃಗುರ್ವ್ಯಾಸೋಹಿ ಮಾಂಡವ್ಯಃ ॥

**ವ್ಯಾಸೋಕ್ತ ಬಸವಪುರಾಣ—ಅಧ್ಯಾಯ ೨, ಶ್ಲೋಕ ೬**

> ಚಂಡಾಲೋನೈವ ಚಾಂಡಾಲಃ ಪುಲ್ಕಸೋನೈವ ಪುಲ್ಕಸಃ ।
> ಶಿವ ಇತ್ಯೇವಯೋವಕ್ತಿ ಭುಂಜೀತತೇನ ವೈ ॥

ಚಂಡಾಲನು ಚಂಡಾಲನಲ್ಲ, ಪುಲ್ಕಸನು ಪುಲ್ಕಸನಲ್ಲ. ಯಾವಾತನು 'ಶಿವ' ಇಂತೆಂಬ ಎರಡು ಅಕ್ಷರಗಳನ್ನು ನುಡಿಯುತ್ತಾನೆಯೋ ಆತನ ಕೂಡ ಭೋಜನಾದಿಗಳನ್ನು ಮಾಡಬೇಕು.

**ಮಹಾಭಾರತ — ಅರಣ್ಯಪರ್ವ, ಅಧ್ಯಾಯ ೧೧೩**

ನ ಕುಲೇನ ನ ಜಾತ್ಯಾವಾ ಕ್ರಿಯಾಭಿರ್ಬ್ರಾಹ್ಮಣೋ ಭವೇತ್ ।
ಚಂಡಾಲೋಪಿ ಹಿ ವೃತ್ತಸ್ಥೋ ಬ್ರಾಹ್ಮಣೋ ಯಕ್ಷಪುಂಗವ ॥

ಅಂದರೆ ಕುಲದಿಂದಾಗಲಿ, ಜಾತಿಯಿಂದಾಗಲಿ ಅಲ್ಲ, ಕೇವಲ ಕ್ರಿಯೆಯಿಂದಲೇ ಜಾತಿಯು ಲಭಿಸುತ್ತದೆ. ಸದಾಚಾರಿಯಾದ ಚಂಡಾಲನು ಬ್ರಾಹ್ಮಣನೇ ಸರಿ.

**ಮಹಾಭಾರತ — ಅನುಶಾಸನಪರ್ವ, ಅಧ್ಯಾಯ ೧೪೭**

ನ ಯೋನಿರ್ನಾಪಿಸಂಸ್ಕಾರೋನ ಶೃತಂ ನ ಚ ಸಂತತಿಃ ।
ಕಾರಣಾನಿದ್ವಿಜತ್ವಸ್ಯ ವೃತ್ತಮೇವತು ಕಾರಣಂ ।
ವೃತ್ತೇಸ್ಥಿತಶ್ಚ ಶೂದ್ರೋಽಪಿ ಬ್ರಾಹ್ಮಣತ್ವಂ ಸ ಗಚ್ಛತಿ ॥

ಅಂದರೆ ದ್ವಿಜತ್ವದ ಕಾರಣ ಹುಟ್ಟಿದ ಯೋನಿಯಲ್ಲ, ಸಂಸ್ಕಾರವಲ್ಲ, ಅಧ್ಯಯನವಲ್ಲ, ಸಂತತಿಯೂ ಅಲ್ಲ. ಆದರೆ ಆಚಾರವೇ ಕಾರಣ. ಸದಾಚಾರಿಯಾಗಿದ್ದವನು ಶೂದ್ರನಾದರೂ ಬ್ರಾಹ್ಮಣತ್ವವನ್ನು ಹೊಂದುತ್ತಾನೆ.

**ಮಹಾಭಾರತ — ಅರಣ್ಯಪರ್ವ, ಅಧ್ಯಾಯ ೨೦೬**

ಯಸ್ತು ಶೂದ್ರೋ ದಮೇ ಸತ್ಯೇ ಧರ್ಮೇ ಚ ಸತತಂ ಸ್ಥಿತಃ ।
ತಂ ಬ್ರಾಹ್ಮಣಮಹಂಮನ್ಯೇ ವೃತ್ತೇನ ಹಿ ಭವೇ ದ್ವಿಜಃ ॥

ಯಾವನು ಶೂದ್ರನೆನಿಸಿಕೊಂಡಿದ್ದರೂ ದಮೆ, ಸತ್ಯ, ಧರ್ಮಗಳಲ್ಲಿ ಸದಾ ಇದ್ದರೆ ಅವನನ್ನು ನಾನು ಬ್ರಾಹ್ಮಣನೆಂದೇ ತಿಳಿಯುತ್ತೇನೆ. ಸದಾಚಾರದಿಂದಲೇ ಬ್ರಾಹ್ಮಣನಾಗುತ್ತಾನೆ. ಈ ಮೇಲೆ ಬರೆದ ಭಾರತದ ಶ್ಲೋಕಗಳಿಗೆ ಶಬ್ದಶಃ ಬಸವಣ್ಣನವರ ಅನೇಕ ವಚನಗಳಿರುತ್ತವೆ. ವೇದ ಮತ್ತು ಭಾರತ ಮೊದಲಾದ ಗ್ರಂಥಗಳಲ್ಲಿ ಹೇಳಿದ ರೀತಿ ನೀತಿಗಳು ಗ್ರಂಥಗಳಲ್ಲಿಯೇ ಉಳಿದವಲ್ಲದೆ, ಆಚರಣೆ ಮಾತ್ರ ಅವುಗಳಿಗೆ ವಿರುದ್ಧವಾಗಿ ಕೃತಿಯಲ್ಲಿ ಬಂದವು. ವೇದಾನುಯಾಯಿಗಳು ಮಾಡಿದ ಅಕ್ಷಮ್ಯ ಅಪರಾಧಗಳಲ್ಲಿ ಇದೊಂದು ಪ್ರಧಾನತಮವಾಗಿದೆ. ಗುಣದಿಂದ ಹೇಳಿದ ವೇದದ ಉದ್ದೇಶವು ಕೆಟ್ಟು, ಜಾತಿಗಳಾಗಿ ಕೋಟಿಗಟ್ಟಲೆ ಜನಗಳನ್ನು ಕೆಳಕ್ಕೆ ಒತ್ತಲಾಗಿದೆ.

'ಹಿಂದೂ ಧರ್ಮಪ್ರದೀಪಿಕೆ' ಎಂಬುವ ಮರಾಠಿಯ ಗ್ರಂಥದಲ್ಲಿಯ "ಉಚ್ಚನೀಚತ್ವಾ ಚ ದುರಭಿಮಾನ" ಎಂಬುವ ಪ್ರಕರಣದಲ್ಲಿ ಅದರ ಲೇಖಕರಾದ ಋಗ್ವೇದಿಯವರು ಕೆಳಗೆ ಬರೆದ ವಿಷಯವನ್ನು ವಿಸ್ತಾರವಾಗಿ ಬರೆದಿರುತ್ತಾರೆ. ಅದನ್ನು ಓದಿದರೆ ಹಿಂದೂ ಧರ್ಮದ ಪರಿಸ್ಥಿತಿಯ ಪರಿಜ್ಞಾನವು ಚೆನ್ನಾಗಿ ಆಗುತ್ತದೆ.

**ಶುಕ್ರನೀತಿ —**

ವಿಶ್ವಾಮಿತ್ರೋ ವಸಿಷ್ಠಶ್ಚ ಮತಂಗೋ ನಾರದಾದಯಃ ।
ತಪೋವಿಶೇಷೈಃ ಸಂಪ್ರಾಪ್ತಾ ಉತ್ತಮತ್ವಂ ನ ಜಾತಿತಃ ॥

ಅಂದರೆ—ವಿಶ್ವಾಮಿತ್ರ, ವಸಿಷ್ಠ, ಮತಂಗ, ನಾರದ ಮೊದಲಾದವರು ತಮ್ಮತಮ್ಮ ತಪೋವಿಶೇಷಗಳಿಂದಲೇ ಉತ್ತಮತ್ವವನ್ನು ಹೊಂದಿದರಲ್ಲದೆ ಜಾತಿಯಿಂದ ಶ್ರೇಷ್ಠತೆಯನ್ನು ಹೊಂದಲಿಲ್ಲ.

ಶುಕ್ರನೀತಿ—

> ಕರ್ಮಣೋತ್ತಮ ನೀಚತ್ವಂ ಕಾಲತಸ್ತು ಭವೇದ್ಗುಣೈಃ ।
> ವಿದ್ಯಾಕಲಾಶ್ರಣೇನೈವ ತನ್ನಾಮ್ನಾ ಜಾತಿರುಚ್ಯತೇ ॥

ಮನುಷ್ಯನು ಕರ್ಮ ಮತ್ತು ಗುಣಗಳ ಯೋಗದಿಂದ ಉತ್ತಮತನವನ್ನಾಗಲೀ, ನೀಚತನವನ್ನಾಗಲೀ ಹೊಂದುತ್ತಾನೆ. ವಿದ್ಯಾ ಮತ್ತು ಕಲೆ ಇವುಗಳನ್ನು ಉದರನಿರ್ವಾಹಾರ್ಥ ಗ್ರಹಣಮಾಡುವದರಿಂದ ಜಾತಿಯೆಂದು ಅದಕ್ಕೆ ತಿಳಿಯಲಾಗುತ್ತದೆ.

ಪೂರ್ವಕಾಲದಲ್ಲಿ ಅನೇಕಜನ ಕ್ಷತ್ರಿಯರೂ, ವೈಶ್ಯರೂ ಮತ್ತು ಶೂದ್ರರೂ ತಮ್ಮತಮ್ಮ ಕರ್ಮಗಳಿಂದ ಬ್ರಾಹ್ಮಣ್ಯವನ್ನು ಸಂಪಾದಿಸಿರುತ್ತಾರೆ. ಅವರೇ ಸದ್ಯದ ಬ್ರಾಹ್ಮಣರ ಗೋತ್ರಪ್ರವರ್ತಕರೂ ಆಗಿರುತ್ತಾರೆ. ಉದಾಹರಣೆಗಾಗಿ ಕೆಳಗಿನವರ ಹೆಸರನ್ನು ತೆಗೆದುಕೊಳ್ಳಬಹುದು.

ಸಿಂಧುದ್ವೀಪ, ವೀತಹವ್ಯ, ಗೃತ್ಸಮದ, ತ್ರಯ್ಯರುಣ, ಗಭೀರ, ಹರಿತ, ಪುಷ್ಕರೀ, ನಾಭಾಗರಿಷ್ಟ ಪುತ್ರ (ವೈಶ್ಯ), ತನಷ–ಎಲುಷ (ಇವರಿಬ್ಬರೂ ಶೂದ್ರನ ಮಕ್ಕಳು), ಪರಾಶರ(ಶ್ವಪಾಕೀಯ ಪುತ್ರ), ಮುದ್ಗಲ, ಕಪಿ, ವತ್ಸ, ಶೂನಕ, ಕಣ್ವ, ವಿಶ್ವಾಮಿತ್ರಾದಿಗಳು ಕ್ಷತ್ರಿಯ, ವೈಶ್ಯ, ಶೂದ್ರಾದಿ ಯೋನಿಗಳಲ್ಲಿ ಉತ್ಪನ್ನರಾದ ವ್ಯಕ್ತಿಗಳು. ತಮ್ಮ ತಮ್ಮ ಸದಾಚರಣೆಯ ಯೋಗದಿಂದ ಬ್ರಾಹ್ಮಣಪದತ್ವವನ್ನು ಹೊಂದಿದರು. ಬ್ರಾಹ್ಮಣರಲ್ಲಿ ಈಗ ವತ್ಸ, ಮುದ್ಗಲ, ಹರಿತ, ವಿಶ್ವಾಮಿತ್ರ, ಕಪಿ, ಕಣ್ವ ಇವರ ಗೋತ್ರಗಳು ರೂಢಿಯಲ್ಲಿರುತ್ತವೆ.

> "ಶೂದ್ರ ಯೋನಿಷು ಜಾಯಂತೇ ಮುನಯೋ ವೇದಪಾರಗಾಃ ॥"

ಶೂದ್ರ ಜಾತಿಗಳಲ್ಲಿ ವೇದವಿಶಾರದರಾದ ಋಷಿಗಳು ಉತ್ಪನ್ನರಾಗುತ್ತಾರೆಂದು ಹೇಳಲಾಗಿದೆ. ಈ ಮಾತು ಸತ್ಯವಾಗಿರುತ್ತದೆ. ಹಿಂದುಸ್ಥಾನದ ಎಲ್ಲ ಜಾತಿಗಳಲ್ಲಿ ಅನೇಕ ಜನ ಸಾಧು ಸಂತರು ಆಗಿಹೋಗಿರುತ್ತಾರೆ. ಅಂದಮೇಲೆ ಪ್ರಾಚೀನ ಕಾಲದಿಂದಲೂ ನಡೆದು ಬಂದಿರುವ ಈ ಉದಾಹರಣೆಗಳಿಂದ ಜಾತಿಯು ಸತ್ಯತನವು ಒಡೆದು ಕಾಣಿಸುತ್ತದೆ.

ಮೊದಲಿನಿಂದಲೂ ಎಲ್ಲಾ ವರ್ಣದವರೂ ಎಲ್ಲಾ ಉದ್ಯೋಗಗಳನ್ನೂ ಮಾಡುತ್ತ ಬಂದಿರುತ್ತಾರೆ. ಬ್ರಾಹ್ಮಣರಾದವರು ರಾಜ್ಯ ಕಟ್ಟಿದರು ಮತ್ತು ಕೃಷಿ ಕರ್ಮಾದಿಗಳನ್ನೂ ಮಾಡಿರುತ್ತಾರೆ. ವ್ಯಾಪಾರವನ್ನೂ ಮಾಡಿರುವರಲ್ಲದೆ ಪರಸೇವೆಯಲ್ಲಿ ಎಲ್ಲರಿಗಿಂತಲೂ ಹೆಚ್ಚಾಗಿ ತೊಡಗಿರುತ್ತಾರೆ. ಈ ಬಗ್ಗೆ ಬೇಕಾದಷ್ಟು ಐತಿಹಾಸಿಕ ಆಧಾರಗಳಿರುತ್ತವೆ. ಇದರಂತೆಯೇ ಕ್ಷತ್ರಿಯರೂ, ವೈಶ್ಯರೂ ಎಲ್ಲ ಉದ್ಯೋಗಗಳನ್ನೂ ಮಾಡುತ್ತಾ ಬಂದಿರುತ್ತಾರೆ. ಶೂದ್ರರಾದವರೂ ಕೂಡ ಕೇವಲ ಪರಸೇವೆಯಲ್ಲಿರದೆ ಎಲ್ಲ ಉದ್ಯೋಗಗಳನ್ನೂ ಮಾಡುತ್ತ ಬಂದಿದ್ದು ಸದ್ಯಕ್ಕೆ ಮಾಡುತ್ತಲೂ ಇದ್ದಾರೆ. ಇವರಲ್ಲಿ ಪಾರದ, ಪಲ್ಲವ, ಶಕ್ತ, ಯವನ, ಹೂಣ, ಆಂಧ್ರ ಇತ್ಯಾದಿಕರು ರಾಜ್ಯ

ಕಟ್ಟಿ ಇಲ್ಲಿಯ ಜನಗಳನ್ನು ಅನೇಕ ಸಂವತ್ಸರಗಳವರೆಗೆ ಆಳಿರುತ್ತಾರೆ. ಆದ್ದರಿಂದ ವರ್ಣ, ಧರ್ಮ, ಜಾತಿ, ಕುಲ ಮೊದಲಾದವುಗಳ ನಿಯಮಗಳು ಎಷ್ಟೋ ಸಂವತ್ಸರ ಗಳಿಂದ ಲೋಪವಾಗಿ ಆ ವಿಷಯದಲ್ಲಿ ದುರಭಿಮಾನವು ಮಾತ್ರ ಉಳಿದುಕೊಂಡಿರು ತ್ತದೆ. ಉಚ್ಚನೀಚತ್ವದ ದುರಭಿಮಾನವು ಜನಗಳಲ್ಲಿರುವದಲ್ಲದೆ ವೇದಾದಿ ಪ್ರಾಮಾಣ್ಯ ಗ್ರಂಥಗಳಲ್ಲಿರುವದಿಲ್ಲ.

ಋಗ್ವೇದ—೯—೬—೩೫

ಇಂದ್ರಂ ವರ್ಧಂತೋಪ್ತುರಃ ಕೃಣ್ವಂತೋ।
ವಿಶ್ವಮಾರ್ಯಂ। ಅಪರ್ಘಂತೋ ರಾವ್ಣಃ॥

ಅಂದರೆ ಸರ್ವಸ್ವವನ್ನು ಅಪಹರಣಮಾಡತಕ್ಕಂಥ ಅನಾರ್ಯರನ್ನು ದಂಡಿಸಿ ಈಶ್ವರನ ಕೀರ್ತಿಯು ಅಭಿವೃದ್ಧಿಯಾಗಬೇಕು. ಈ ರೀತಿಯಿಂದ ವಿಶ್ವದಲ್ಲಿ ಸಂಪೂರ್ಣ ಆರ್ಯರ ಸ್ಥಾನವನ್ನು ಮಾಡಿರಿ. ಹೀಗೆ ಋಗ್ವೇದದ ಆಜ್ಞೆ ಇರುವದಲ್ಲದೆ ಅದರಂತೆ ಕಾರ್ಯ ವನ್ನೂ ಕೂಡ ಮಾಡುತ್ತ ಬಂದಿರುತ್ತಾರೆ.

ಋಗ್ವೇದ—೧೦—೧೩೭

ಉತದೇವಾ ಅವಹಿತಂದೇವಾ ಉನ್ನಯಥಾ ಪುನಃ।
ಉತಾಗ್ರಶ್ಚ ಕೃಷಂದೇವಾ ದೇವಾಜೀವಯಥಾ ಪುನಃ॥

ಅಂದರೆ ಕೆಳಗೆ ಬಿದ್ದವರನ್ನು ಮೇಲಕ್ಕೆತ್ತು; ಯಾರು ಪಾಪಿಗಳೂ, ಮಲಿನರೂ ಆಗಿರು ತ್ತಾರೆಯೋ ಅವರಿಗೆ ಪುನಃ ಜೀವನವನ್ನು ಕೊಟ್ಟು ಪವಿತ್ರರನ್ನಾಗಿ ಮಾಡು.

ಇದರಂತೆಯೇ ಇನ್ನೂ ಕೆಲವು ವೇದಮಂತ್ರಗಳಿಂದ ದಸ್ಯುಗಳನ್ನು ಆರ್ಯರಲ್ಲಿ ಕೂಡಿಸಿಕೊಂಡದ್ದು ತಿಳಿದುಬರುತ್ತದೆ. ಋಗ್ವೇದದ ಹತ್ತನೆಯ ಮಂಡಲದ ಮಂತ್ರ ದ್ರಷ್ಟಾರರಾದ ಋಷಿಗಳೆಲ್ಲ ಬ್ರಾಹ್ಮಣರಿದ್ದರೆಂದು ಹೇಳಲಿಕ್ಕೆ ಯಾವ ಆಧಾರಗಳೂ ಇರುವದಿಲ್ಲ. ಋಗ್ವೇದದ ಮೂರನೆ ಮಂಡಲದ ಮಂತ್ರದ್ರಷ್ಟಾರರು ವಿಶ್ವಾಮಿತ್ರರೂ ಮತ್ತು ಅವರ ವಂಶಜರೂ ಆಗಿರುತ್ತಾರೆ. ಇವರು ಕ್ಷತ್ರಿಯರಾದರೂ ತಪಸ್ಸಿನಿಂದ ಬ್ರಾಹ್ಮಣತ್ವವನ್ನು ಪಡೆದರೆಂಬುವದು ಮಹಾಭಾರತದ ಅನುಶಾಸನ ಪರ್ವದಲ್ಲಿ ಹೇಳಿದೆ.

ತತೋ ಬ್ರಾಹ್ಮಣತಾಂ ಯಾತೋ ವಿಶ್ವಾಮಿತ್ರೋ ಮಹಾತಪಃ।
ಕ್ಷತ್ರಿಯೋಪಿಚ ಸೋತ್ಯರ್ಥಂ ಬ್ರಹ್ಮದೇಶಸ್ಥಕಾರಕಃ॥

ವಿಶ್ವಾಮಿತ್ರನು ಕ್ಷತ್ರಿಯನಿದ್ದು ಬ್ರಾಹ್ಮಣತ್ವವನ್ನು ಹೊಂದಿದನು. ಈ ವಿಶ್ವಾಮಿತ್ರನ ಗೋತ್ರಜರು ಕೌಶಿಕ ಗೋತ್ರಿಗಳೆಂದು ಹೇಳಿಸಿಕೊಳ್ಳತಕ್ಕವರು ಈಗ ಬ್ರಾಹ್ಮಣರಲ್ಲಿ ಗಣನೆಯಾಗಿರುತ್ತಾರೆ.

ಋಗ್ವೇದದ ನಾಲ್ಕನೆಯ ಮಂಡಲದ ಮಂತ್ರದ್ರಷ ಋಷಿಗಳು ಅಜಮೀಢ ಪುರಮೀಢರೆಂಬುವವರಿದ್ದರು. ವಿಷ್ಣುಪುರಾಣದಲ್ಲಿ ಈ ಬ್ರಾಹ್ಮಣರು ಕ್ಷತ್ರಿಯರಿದ್ದ ರೆಂದು ಹೇಳಲಾಗಿದೆ. ಕಾಣ್ವಾಯನ ಬ್ರಾಹ್ಮಣ ಅಜಮೀಢನ ಮಗ ಕಣ್ವಋಷಿಯು ಇವರ ಸಂತತಿಯವನಾಗಿರುತ್ತಾನೆ.

ಹೀಗೆ ಕ್ಷತ್ರಿಯರ ವಂಶಜರು ಬ್ರಾಹ್ಮಣರೊಳಗೆ ಕೂಡಿಕೊಂಡು ಗೋತ್ರಾಧಿಪತಿಗಳಾಗಿದ್ದಾರೆ.

ಹರಿವಂಶದಲ್ಲಿ ನಾಭಾಗರಿಷ್ಟ ಇವನು ವೈಶ್ಯನಿದ್ದನೆಂದು ಹೇಳಿದೆ. ಇವನ ಇಬ್ಬರು ಮಕ್ಕಳು ಬ್ರಾಹ್ಮಣ ವರ್ಣದಲ್ಲಿ ಕೂಡಿಕೊಂಡು ಹೋಗಿದ್ದಾರೆ. ಅಥವಾ ಇವರನ್ನು ಕೂಡಿಸಿಕೊಂಡಿರುತ್ತಾರೆ.

ನಾಭಾಗರಿಷ್ಟ ಪುತ್ರೌ ದ್ವೌ ವೈಶ್ಯೌ ಬ್ರಾಹ್ಮಣತಾಂ ಗತೌ।

ಕವಶ ಮತ್ತು ಐಲೂಷ ಇವರಿಬ್ಬರೂ ಶೂದ್ರರಿದ್ದರು. ಇವರನ್ನು ಋಷಿಗಳು ತಮ್ಮ ಗೋತ್ರದಲ್ಲಿ ಕೂಡಿಸಿಕೊಂಡರು. ಇದರಂತೆಯೇ ಜಾನಶೃತಿ–ಪೌತ್ರಾಯಣ ಎಂಬ ಹೆಸರಿನ ಒಬ್ಬ ಶೂದ್ರ ರಾಜನು ತಪಸ್ಸಿನ ಬಲದಿಂದ ಬ್ರಾಹ್ಮಣ್ಯವನ್ನು ಪಡೆದನು.

ಯಾವ ಋಷಿಗಳ ವಿಷಯದಲ್ಲಿ ಸಂಬಂಧವೂ, ಅತ್ಯಂತ ಆದರವೂ ಇರುತ್ತದೆಂದು ಬ್ರಾಹ್ಮಣರು ಹೇಳುವರೋ ಅವರ ಉತ್ಪತ್ತಿಯ ಕಥೆಯು ಅತ್ಯಂತ ವಿಲಕ್ಷಣವಾಗಿರುತ್ತದೆ.

ಗಣಿಕಾ ಗರ್ಭಸಂಭೂತೋ ವಶಿಷ್ಠಶ್ಚ ಮಹಾಮುನಿಃ।
ತಪಸಾ ಬ್ರಾಹ್ಮಣೋಜಾತಃ ಸಂಸ್ಕಾರಸ್ತತ್ರಕಾರಣಮ್॥

ಜಾತೋವ್ಯಾಸಸ್ತು ಕೈವರ್ತ್ಯಾಃ ಶ್ವಪಾಕ್ಯಸ್ತು ಪರಾಶರಃ।
ಬಹವೋಽನ್ಯೇಪಿ ವಿಪ್ರತ್ವಂ ಪ್ರಾಪ್ತಾಯೇ ಪೂರ್ವಮದ್ವಿಜಾಃ॥

ವಸಿಷ್ಠನ ಜನ್ಮವು ವೇಶ್ಯೆಯುಳ ಹೊಟ್ಟೆಯಲ್ಲಿ ಆಗಿದೆ. ಇದೇ ವಸಿಷ್ಠನು ಋಗ್ವೇದದ ಏಳನೆಯ ಮಂಡಲದ ಮಂತ್ರದ್ರಷ್ಟನಾಗಿರುತ್ತಾನೆ. ಮೂಲ ಭಾರತದ ಕರ್ತೃಗಳಾದ ವ್ಯಾಸರು ಪರಾಶರ ಋಷಿಯಿಂದ ಅಂಬಿಗರ ಕನ್ನಿಕೆಯಲ್ಲಿ ಜನಿಸಿದವರಾಗಿರುತ್ತಾರೆ. ಪರಾಶರನ ಜನ್ಮವು ಚಂಡಾಲ ಜಾತಿಯ ಸ್ತ್ರೀಯುಳ ಉದರದಲ್ಲಿ ಆಗಿರುತ್ತದೆ. ಇನ್ನೂ ಅನೇಕರು ತಮ್ಮ ತಮ್ಮ ಅನುಷ್ಠಾನಬಲದಿಂದ ಉತ್ತಮತನವನ್ನು ಹೊಂದಿರುತ್ತಾರೆ. ಈಗಿನ ಕಾಲದ ಅನೇಕ ದ್ವಿಜರು ತಾವು ವಸಿಷ್ಠ, ಪರಾಶರನ ಗೋತ್ರದವರೆಂದು ಹೇಳಿಸಿಕೊಳ್ಳುತ್ತಾರೆ.

ವ್ಯಾಸರ ತಾಯಿಯು (ವಿವಾಹವಿಲ್ಲದೆ) ಯೋಜನಗಂಧೆಯೆಂಬ ಬೇಡರ ಕನ್ಯೆ ಆಗಿದ್ದಳು. ಈ ಯೋಜನಗಂಧೆಯ ಲಗ್ನವು ಶಂತನು ಕ್ಷತ್ರಿಯ ರಾಜನ ಕೂಡ ಆಯಿತು. ಅವನಿಗೆ ಚಿತ್ರಾಂಗದಾ, ವಿಚಿತ್ರವೀರ್ಯ ಈ ಮಕ್ಕಳುಗಳಾದರು. ಅವನ ಅಕಾಲಿಕ ಮರಣದಿಂದ ಅವನ ಹೆಂಡತಿಯು ವಿಧವೆಯಾದಳು. ಅವಳಿಗೆ ವ್ಯಾಸನಿಂದ ಪಾಂಡು ಮತ್ತು ಧೃತರಾಷ್ಟ್ರರೆಂಬ ಮಕ್ಕಳುಗಳಾದರು. ವಿದುರನ ಜನ್ಮವು ದಾಸಿಯಲ್ಲಿ ಆಯಿತು. ಕುಂತಿಗೆ ಕೌಮಾರ್ಯಾವಸ್ಥೆಯಲ್ಲಿ ಅಂದರೆ ವಿವಾಹಕ್ಕಿಂತ ಪೂರ್ವದಲ್ಲಿ ಹುಟ್ಟಿದ ಕರ್ಣನು ಹಿಂದುಗಳಿಗೆ ಪರಮ ಪವಿತ್ರತಮನಾಗಿರುತ್ತಾನೆ.

**ಮನುಸ್ಮೃತಿ—೧೦—೬೪**

ಶೂದ್ರಾಯಾಂ ಬ್ರಾಹ್ಮಣಾಜ್ಜಾತಃ ಶ್ರೇಯಸಾ ಚೇತ್ಪ್ರಜಾಯತೇ।
ಅಶ್ರೇಯಾಚ್ಛ್ರೇಯಸೀಂ ಜಾತಿಂ ಗಚ್ಛತ್ಯಾಸಪ್ತಮಾದ್ಯುಗಾತ್॥

ಅಂದರೆ ಶೂದ್ರಸ್ತ್ರೀಯಳಿಂದ ಹುಟ್ಟಿದವನು ಏಳನೆಯ ಜನ್ಮದಲ್ಲಿ ಬ್ರಾಹ್ಮಣನಾಗುತ್ತಾನೆ. ಇದನ್ನು ಉಳಿದ ಸ್ಮೃತಿಕಾರರೂ ಒಪ್ಪಿರುತ್ತಾರೆ.

ಸೂತಮುನಿಯು ಪುರಾಣ ಕಥೆಗಳನ್ನು ಹೇಳುವುದರಲ್ಲಿ ಸುಪ್ರಸಿದ್ಧನಷ್ಟೆ? ಇವನ ತಂದೆಯು ಕ್ಷತ್ರಿಯನಾಗಿಯೂ, ತಾಯಿಯು ಬ್ರಾಹ್ಮಣಿಯಾಗಿಯೂ ಇದ್ದಳು. ಹೀಗೆ ಇವನು ಮಿಶ್ರವರ್ಣದಲ್ಲಿ ಹುಟ್ಟಿದವನಾಗಿರುತ್ತಾನೆ. ಇವನಿಗೆ ಹಿಂದೂ ವಾಙ್ಮಯದಲ್ಲಿ ಅಗ್ರೇಸರತ್ವವಿದೆ. ವಿಷ್ಣುಪುರಾಣದಲ್ಲಿ ಪುರುರಾಜನಿಂದ ಬ್ರಾಹ್ಮಣ ಮತ್ತು ಕ್ಷತ್ರಿಯ ಹೀಗೆ ಎರಡು ವರ್ಣಗಳು ಅಸ್ತಿತ್ವದಲ್ಲಿ ಬಂದಿರುತ್ತವೆಂದು ಹೇಳಲಾಗಿದೆ. ಪುರುರಾಜನ ತಂದೆ ಕ್ಷತ್ರಿಯನಾದ ರಾಜ ಯಯಾತಿಯ ತಾಯಿಯು ಬ್ರಾಹ್ಮಣ ಕನ್ಯೆ ದೇವಯಾನಿ ಇದ್ದಳೆಂದು ಪುರಾಣಗಳಿಂದ ತಿಳಿದುಬರುತ್ತದೆ. ಇವೇ ಪುರಾಣಗಳಲ್ಲಿಯೇ ಗಾರ್ಗ್ಯ, ಶಾಂಡಿಲ್ಯ, ಕಾಣ್ವಾಯನ, ಮೌದ್ಗಲ್ಯ ಮೊದಲಾದ ಗೋತ್ರಾಧಿಪತಿಗಳಾದ ಬ್ರಾಹ್ಮಣ ಉತ್ಪತ್ತಿಯು ಕ್ಷತ್ರಿಯ ತಂದೆಯಿಂದ ಆಗಿರುತ್ತದೆಂದು ಹೇಳಿದೆ. ಉತ್ತರ ಹಿಂದುಸ್ಥಾನ ದಲ್ಲಿ ಬ್ರಾಹ್ಮಣ ಮತ್ತು ಕ್ಷತ್ರಿಯರೆಂದು ಹೇಳುವವರ ಉತ್ಪತ್ತಿಯು ನಾಲ್ಕು ವರ್ಣಗಳ ಸ್ತ್ರೀಪುರುಷರಿಂದ ಆಗಿರುತ್ತದೆಂದು ಅನೇಕ ಆಧಾರಗಳಿಂದ ಸಿದ್ಧವಾಗುತ್ತದೆ.

ಮಹಾಭಾರತದ ಕಾಲದಲ್ಲಿ ಕ್ಷತ್ರಿಯರ ಕನ್ನಿಕೆಯರ ಸ್ವಯಂವರ ಕಾಲದಲ್ಲಿ ಬ್ರಾಹ್ಮಣರೂ ಹೋಗುತ್ತಿದ್ದರೆಂದು ದ್ರೌಪದಿ ಸ್ವಯಂವರದಿಂದ ತಿಳಿದುಬರುತ್ತದೆ. ಯಾಕೆಂದರೆ ಅರ್ಜುನನು ಬ್ರಾಹ್ಮಣ ವೇಷದಲ್ಲಿಯೇ ಇದ್ದನು. ಅದಕ್ಕೆ ಯಾರೂ ವಿರೋಧವನ್ನು ಮಾಡಲಿಲ್ಲ. ಹೀಗಲ್ಲದಿದ್ದರೆ ಕ್ಷತ್ರಿಯ ಕನ್ನಿಕೆಯ ಸ್ವಯಂವರದಲ್ಲಿ ಬ್ರಾಹ್ಮಣರಿಗೆ ಸ್ಥಾನವಿಲ್ಲವೆಂದು ಪ್ರತಿಭಟಿಸಬೇಕಾಗಿದ್ದಿತು.

ರಾಮಾಯಣ ಕಾಲದಲ್ಲಿ ಶೂರ್ಪಣಖಿ–ರಾಕ್ಷಸಿಯು ರಾಮನು ವರಿಸಬೇಕೆಂದು ಯಾಚಿಸಿದಳು. ಅವನು ಒಪ್ಪಲಿ ಅಥವಾ ಬಿಡಲಿ ಇದರಿಂದ ಸಿದ್ಧವಾಗುವುದೇನೆಂದರೆ ಆರ್ಯ ಮತ್ತು ಅನಾರ್ಯರಲ್ಲಿ ವಿವಾಹದ ಪದ್ಧತಿಯು ಇದ್ದದ್ದು ತಿಳಿದುಬರುತ್ತದೆ.

ಶ್ರೀರಾಮನು ಕ್ಷತ್ರಿಯಕುಲದವನಾದರೂ ಬ್ರಾಹ್ಮಣರಿಗೆ ಪೂಜ್ಯನಾಗಿಯೂ, ಯೋಗಿಗಳ ಹೃದಯದಲ್ಲಿ ರಮಿಸತಕ್ಕವನಾಗಿಯೂ ಇರುತ್ತಾನೆ. ಹೀಗಿದ್ದರೂ ಬೇಡರ ಜಾತಿಯವಳಾದ ಶಬರಿಯು ಎಂಜಲನ್ನು ತಿಂದದ್ದು ರಾಮಾಯಣ ಓದಿದವರಿಗೆಲ್ಲ ತಿಳಿದ ಮಾತಾಗಿದೆ. ಶಬರಿಯನ್ನು ಒಬ್ಬ ಋಷಿಯು ತನ್ನ ಆಶ್ರಮದಲ್ಲಿಟ್ಟುಕೊಂಡಿದ್ದನು. ಇದು ಮಹತ್ವದ ವಿಷಯವಾಗಿರುತ್ತದೆ.

ತ್ರಿಷುವರ್ಣೇಷು ಜಾತೋಹಿ ಬ್ರಾಹ್ಮಣಾತ್ ಬ್ರಾಹ್ಮಣೋ ಭವೇತ್ ॥

ಮಹಾಭಾರತದ ಅನುಶಾಸನ ಪರ್ವದಲ್ಲಿ ಹೇಳಿದೆ ಮತ್ತು ಪರಶುರಾಮನು ಕ್ಷತ್ರಿಯ ತಾಯಿಯಲ್ಲಿ ಜನಿಸಿದರೂ ಬ್ರಾಹ್ಮಣನೆಂದೇ ತಿಳಿಯಲಾಗುತ್ತದೆ. ಆದರೆ ಇತ್ತೀಚೆಗೆ ಹೀಗೆ ಹುಟ್ಟಿದವರಿಗೆ ಸಂಕರರೆಂದು ಅನ್ನಲಿಕ್ಕೆ ಹತ್ತಿರುತ್ತಾರೆ.

ಪೈಠೀನಸೀ ಧರ್ಮಸೂತ್ರದಲ್ಲಿ ಶೂದ್ರ ಸ್ತ್ರೀಯಳು ದ್ವಿಜರಿಗೆ ಧರ್ಮಪತ್ನಿಯಾಗ ಬಲ್ಲಳು, ಅಂದರೆ ಅವಳನ್ನು ದ್ವಿಜರು ಲಗ್ನವಾಗಬಹುದೆಂದು ಹೇಳಲಾಗಿದೆ. ಯಾಜ್ಞವಲ್ಕ್ಯರು ಮಾತ್ರ ಇದನ್ನು ನಿಷೇಧಿಸಿ ಮೂರುವರ್ಣಗಳಲ್ಲಿಯ ಸ್ತ್ರೀಯರನ್ನು ಬ್ರಾಹ್ಮಣರು ಲಗ್ನವಾಗಬಹುದೆಂದು ಹೇಳಿದ್ದಾರೆ. ಆನಂತರ ಆಪಸ್ತಂಭ ಸ್ಮೃತಿಯಲ್ಲಿ ಸವರ್ಣ ವಿವಾಹವು ಯೋಗ್ಯವೆಂದು ಹೇಳಲಾಗಿದೆ. ಅರ್ಜುನನು ಅನ್ಯವರ್ಣದ

ಉಲೂಪಿಯನ್ನು ಲಗ್ನವಾಗಿದ್ದನು. ಕೃಷ್ಣನು ನಾಗಕನ್ನಿಕೆಯನ್ನು ವರಿಸಿದನು. ಕ್ಷತ್ರಿಯ ರಾಜನಾದ ದುಷ್ಯಂತನು ವಿಶ್ವಾಮಿತ್ರನಿಂದ ಗಣಿಕಾ ಸ್ತ್ರೀಯಲ್ಲಿ ಹುಟ್ಟಿದ ಶಕುಂತಲೆಯನ್ನು ಲಗ್ನವಾದನು. ಭೀಮಸೇನನು ರಾಕ್ಷಸಿಯಾದ ಹಿಡಂಬಿಯನ್ನು ವರಿಸಿದನು. ಇದರಿಂದ ತಿಳಿದುಬರುವುದೇನೆಂದರೆ ಪ್ರಾಚೀನ ಕಾಲದ ಜಾತಿ ನಿರ್ಬಂಧಗಳು ಈಗಿನಂತಿರಲಿಲ್ಲವೆಂಬುದು ಸಿದ್ಧವಾಗುತ್ತದೆ.

ಹಿಂದುಸ್ಥಾನದ ಮೂಲ ನಿವಾಸಿಗಳಾದ ಅನಾರ್ಯರನ್ನು ಆರ್ಯರನ್ನಾಗಿ ಮಾಡುವ ಪದ್ಧತಿಯು ವೇದಕಾಲದಿಂದಲೂ ನಡೆದುಬಂದಿದೆ. "ವ್ರಾತ್ಯಸ್ತೋಮ" ಎಂಬುವ ಯಜ್ಞವನ್ನು ಮಾಡಿ ಎಷ್ಟೋ ಜನ ಅನಾರ್ಯರನ್ನು ಆರ್ಯರನ್ನಾಗಿ ಮಾಡಿದ ಬಗೆ ಅನೇಕ ಐತಿಹಾಸಿಕ ಆಧಾರಗಳಿರುತ್ತವೆ. ಈ ವಿಷಯವು ಸಾಮವೇದದ ೧೭ನೇ ಅಧ್ಯಾಯ ತಾಂಡ್ಯಬ್ರಾಹ್ಮಣದಲ್ಲಿ ವರ್ಣನೆಯು ಇರುತ್ತದೆ. ಇದರಂತೆಯೇ ಲಾಟ್ಯಾಯನ ಬ್ರಾಹ್ಮಣದಲ್ಲಿ ಹೀನರಾದ ಆರ್ಯರಿಗೆ ನಾಲ್ಕು ತರದ ವ್ರಾತ್ಯಸ್ತೋಮ ಯಜ್ಞವನ್ನು ಮಾಡಿ ಅವರನ್ನು ಶುದ್ಧಿಗೊಳಿಸಿದ ಪದ್ಧತಿಯು ಹೇಳಿದೆ. ಇದರಂತೆ ಖಳ ಕುಲಗಳನ್ನೂ ಆರ್ಯರಲ್ಲಿ ತೆಗೆದುಕೊಳ್ಳಲಾಗಿದೆ.

**ಭವಿಷ್ಯ ಪುರಾಣ—ಪ್ರತಿಸರ್ಗಪರ್ವ, ಖಂಡ ೪, ಅಧ್ಯಾಯ ೨೧**

ಸರಸ್ವತ್ಯಾಜ್ಞಯಾ ಕಣ್ವೋ ಮಿಶ್ರದೇಶಮುಪಾಯಯೌ ।
ಮ್ಲೇಂಚ್ಛಾನ್ ಸಂಸ್ಕೃತ ಮಾಭಾಷ್ಯ ತದಾ ದಶ ಸಹಸ್ರಕಾನ್ ॥

ವಶೀಕೃತ್ಯ ಸ್ವಯಂ ಪ್ರಾಪ್ತೋ ಬ್ರಹ್ಮಾವರ್ತೇ ಮಹೋತ್ತಮೇ ।
ತೇ ಸರ್ವೇ ತಪಸಾದೇವೀಂ ತುಷ್ಟುವುಶ್ಚ ಸರಸ್ವತೀಂ ॥

ಸಪತ್ನೀಕಾಂಶ್ಚ ತಾನ್ ಮ್ಲೇಂಚ್ಛಾನ್ ಶೂದ್ರವರ್ಣಾಯ ಚಾಕರೋತ್ ।
ಕಾರುವೃತ್ತಿಕರಾಃ ಸರ್ವೇ ಬಭೂವುರ್ ಬಹುಪುತ್ರಕಾಃ ॥

ದ್ವಿಸಹಸ್ರಾಸ್ತದಾ ತೇಷಾಂ ಮಧ್ಯೇ ವೈಶ್ಯಾ ಬಭೂವಿರೇ ।
ತದಾ ಪ್ರಸನ್ನೋ ಭಗವಾನ್ ಕಣ್ವೋ ವೇದ ವಿದಾಂವರಃ ॥

ತೇಷಾಂ ಚಕಾರ ರಾಜಾನಂ ರಾಜಪುತ್ರ ಪುರಂ ದದೌ ।
ಮಿಶ್ರ ದೇಶೋದ್ಭವಾಃ ಮ್ಲೇಂಚ್ಛಾಃ ಕಾಶ್ಯಪೇನ ಸುಶಾಸಿತಾಃ ॥

ಸಂಸ್ಕೃತಾಃ ಶೂದ್ರವರ್ಣಾಃ ಬ್ರಹ್ಮವರ್ಣಮುಪಾಗತಾ ।
ಶಿಖಾ ಸೂತ್ರಂ ಸಮಾಧಾಯ ಪಠಿತ್ವಾ ವೇದಮುತ್ತಮಮ್ ॥

ಅಂದರೆ—ಸರಸ್ವತೀದೇವಿಯ ಅಪ್ಪಣೆಯ ಪ್ರಕಾರ ಕಣ್ವ ಮುನಿಗಳು ಮಿಶ್ರದೇಶಕ್ಕೆ ಹೋದರು. ಅಲ್ಲಿ ಅವರು ಮ್ಲೇಂಚ್ಛರಿಗೆ ಸಂಸ್ಕೃತ ಭಾಷೆಯನ್ನು ಕಲಿಸಿ ಹತ್ತು ಸಾವಿರ ಜನವಸತಿಯನ್ನು ಮಾಡಿದರು. ಆಮೇಲೆ ಅವರು ಅವರನ್ನು ಬ್ರಹ್ಮಾವರ್ತದೇಶದಲ್ಲಿ ತಂದಿಟ್ಟರು. ಅವರೆಲ್ಲರೂ ತಪಸ್ಸಿನಿಂದ ದೇವಿಯನ್ನು ಸಂತೋಷಪಡಿಸಿದರು. ಅವರು ಸಪತ್ನೀಕರಾಗಿದ್ದು ಮೊದಲು ಶೂದ್ರ ವರ್ಣದಲ್ಲಿ ಗಣನೆಯಾದ ಅವರು ವೃತ್ತಿಯಿಂದ ಅಕ್ಕಸಾಲಿಗರು, ಕಮ್ಮಾರರು ಆಗಿದ್ದರು. ಈ ಸ್ಥಳದಲ್ಲಿ ಅವರ ವಂಶ ವೃದ್ಧಿಯಾಯಿತು. ಅವರಲ್ಲಿ ಸಾವಿರಾರು ಕುಟುಂಬಗಳು ವೈಶ್ಯ ವರ್ಣವನ್ನು ಹೊಂದಿದವು. ಅವರಿಗೆ ರಾಜನು ರಾಜಪುತ್ರ ಪುರವನ್ನು ಕೊಟ್ಟನು. ಹೀಗೆ ಮಿಶ್ರದೇಶ (ಆಫ್ರಿಕೆಯ ಪ್ರದೇಶ) ದ ಮ್ಲೇಂಚ್ಛರಿಗೆ ಕಣ್ವನು ಉತ್ತಮ ಪ್ರಕಾರದ ಶಿಕ್ಷಣವನ್ನು ಕೊಟ್ಟ ಕಾರಣ ಶೂದ್ರ ವರ್ಣದಿಂದ ಬ್ರಾಹ್ಮಣ ವರ್ಣವನ್ನು ಹೊಂದಿದರು. ಮತ್ತು ಅವರು

ಚಂಡಿಕೆಗಳನ್ನು ಬಿಟ್ಟರಲ್ಲದೆ ಜನಿವಾರವನ್ನು ಹಾಕಿಕೊಂಡು ಉತ್ತಮ ವೇದಾಧ್ಯಯನ ಮಾಡಿದರು. ಈ ಪ್ರಕಾರ ಮ್ಲೇಂಚ್ಛರಿಗೆ ಬ್ರಾಹ್ಮಣ ವರ್ಣವು ಸಿಕ್ಕಿರುತ್ತದೆ. ಮನು ಮತ್ತು ಇತರ ಸ್ಮೃತಿಕಾರರು ಕೆಳಗೆ ಬರೆದಂತೆ ಈ ವಿಷಯವನ್ನು ವರ್ಣಿಸಿದ್ದಾರೆ. ಚೀನ, ಹೂಣ, ಬರ್ಬರ, ಖಶ, ಪಲ್ಹವ (ಪಾರಶೀ), ಯವನ (ಗ್ರೀಕ), ಶಕ (ಶೀಥಿಯನ್), ಕಾಂಬೋಜಿ, ಕಾಂಬೋಡಿಯಾ, ತುರ್ಕ ಇತ್ಯಾದಿ ಜನರಿಗೆ ಮ್ಲೇಂಚ್ಛ ರೆಂಬುವ ಸಂಜ್ಞೆಯುಂಟು.

ಮ್ಲೇಂಚ್ಛರೆಂದರೆ ಮೂಲಕ್ಷತ್ರಿಯರಿದ್ದರೆಂದು ಮನುವಿನ ಅಭಿಪ್ರಾಯವಿದೆ.

### ಮನು—ಅಧ್ಯಾಯ ೧೦

ಶನಕೈಸ್ತು ಕ್ರಿಯಾಲೋಪಾದಿಮಾಃ ಕ್ಷತ್ರಿಯ ಜಾತಯಃ ।
ವೃಷಲತ್ವಂ ಗತಾ ಲೋಕೇ ಬ್ರಾಹ್ಮಣಾ ದರ್ಶನೇನ ಚ ॥ ೪೩ ॥
ಪೌಂಢ್ರಕಾ ಶ್ಚೌಂಡ ದ್ರವಿಡಾಃ ಕಾಂಬೋಜಾ ಯವನಾಃ ಶಕಾಃ ।
ಪಾರದಾಃ ಪಲ್ಲವಾಶ್ಚೀನಾಃ ಕಿರಾತಾ ದರದಾಃಖಶಾಃ ॥ ೪೪ ॥

ಪೌಂಢ್ರ ಮತ್ತು ದ್ರವಿಡ ದೇಶದ ಜನರು, ಕಾಂಬೋಜ, ಯವನ, ಶಕ, ಪಾರದ, ಪಲ್ಹವೀ (ಇರಾಣಿ), ಕಿರಾತ, ದರದ, ಖಶ ಈ ಹತ್ತು ಪ್ರಕಾರದ ಜನಗಳು ಧರ್ಮಾನು ಶಾಸನದಂತೆ ತಮ್ಮ ಧರ್ಮದ ಆಚರಣೆಗಳನ್ನು ಆಚರಿಸದೆ ಇದ್ದ ಕಾರಣ ಕ್ರಿಯಾಲೋಪ ವಾಗಿ ಅವರಿಗೆ ಬ್ರಾಹ್ಮಣರ ಭೆಟ್ಟಿಯಾಗದೆ ಇರುವುದರಿಂದ ಅಂದರೆ ಅವರ ಸಂಪರ್ಕಾದಿ ಗಳು ಇಲ್ಲದೆ ಇರುವುದರಿಂದ ಕ್ಷತ್ರಿಯತ್ವದಿಂದ ಚ್ಯುತರಾದರು. ಆದ್ದರಿಂದ ಭ್ರಷ್ಟ ರಾದರು.

ಈಗಿನ ಕಾಲದಲ್ಲಿದ್ದಂತೆ ವೇದಾಧಿಕಾರವು ಇಂಥವರಿಗೇ ಇರಬೇಕೆಂಬುವ ನೇಮವು ಇರಲಿಲ್ಲ.

### ವಾಜಸನೀಯ ಸಂಹಿತಾ—ಅಧ್ಯಾಯ ೨೬

ಯಥೇಮಾಂ ವಾಚಂ ಕಲ್ಯಾಣೀಮಾವಾದಾನಿ ಜನೇಭ್ಯಃ ।
ಬ್ರಹ್ಮರಾಜನ್ಯಾಭ್ಯಾಂ ಶೂದ್ರಾಯ ಚಾರ್ಯಾಯ ಚ ಸ್ವಾಯ ಚರಣಾಯಚ ॥

ಅಂದರೆ—ಕಲ್ಯಾಣಪ್ರದವಾದ ವೇದವಾಣಿಯನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಾದಿಗಳಿಗೆ ಕಲಿಸಬೇಕು ಅಥವಾ ಹೇಳಬೇಕು. ಹೀಗೆ ಮೇಲೆ ಬರೆದ ಯಜುರ್ವೇದ ವಾಕ್ಯದ ವಿಧಿಯು ಇರುತ್ತದೆ.

ಉಪನಿಷತ್ಕಾಲದಲ್ಲಿ ಸಂಭವಿಸಿದ ಕವಷ ಏಲುಷನೆಂಬುವ ಶೂದ್ರನು ಮತ್ತು ಸತ್ಯಕಾಮಾ ದಾಸೀ ಪುತ್ರ ಜಾಬಾಲ ಇವರುಗಳ ಒಂದು ವಿಷಯವು ಐತರೇಯ ಬ್ರಾಹ್ಮಣದಲ್ಲಿಯೂ, ಛಾಂದೋಗ್ಯೋಪನಿಷತ್ತಿನಲ್ಲಿಯೂ ಹೇಳಿರುತ್ತದೆ. ಒಂದು ಕಾಲದಲ್ಲಿ ಋಷಿಗಳು ಸರಸ್ವತೀ ನದೀ ತೀರದಲ್ಲಿ ಯಜ್ಞ ಮಾಡುತ್ತಿರುವಾಗ ಕವಷನು ಋಷಿಗಳ ಸಮುದಾಯದಲ್ಲಿ ಬಂದನು. ಆಗ ಋಷಿಗಳೆಲ್ಲ ಅವನ ಮೇಲೆ ಸಿಟ್ಟಿಗೆದ್ದರು ಮತ್ತು ಅವನನ್ನು ತಿರಸ್ಕರಿಸಿದರು. ಆದರೆ ಅವನು ತನ್ನ ತಪಸ್ಸಿನ ಬಲದಿಂದ ಬ್ರಾಹ್ಮಣನಾದನು. ಅದರಂತೆಯೇ ಜಾಬಾಲಿಯು ದಾಸೀಪುತ್ರನಾದರೂ ಸತ್ಯವನ್ನು ಮಾತನಾಡತಕ್ಕವನಾದರಿಂದ ಓರ್ವ ಋಷಿಯು ಅವನನ್ನು ಅಧ್ಯಯನದ ಸಲುವಾಗಿ

ಬ್ರಾಹ್ಮಣ ಗುಂಪಿನಲ್ಲಿ ಸೇರಿಸಿಕೊಂಡನು. ಒಟ್ಟಿನ ಮೇಲೆ ನೋಡಲಾಗಿ ವೇದಗಳ ಕಾಲದಿಂದ ಪೌರಾಣಿಕ ಕಾಲದವರೆಗೂ ಹಿಂದುಗಳ ಜಾತಿಯ ಪದ್ಧತಿಯು ಈಗಿನಂತೆ ಇರಲಿಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಿಷ್ಟೇ ಅಲ್ಲ ಮ್ಲೇಂಚ್ಛರೆಂದು ತಿಳಿಯುವ ಜನರಲ್ಲಿಯೂ ಕೂಡ ಪರಸ್ಪರ ಹೆಣ್ಣು ಗಂಡಿನ ಮತ್ತು ಊಟ ಉಪಚಾರದ ವ್ಯವಹಾರವು ನಡೆಯುತ್ತಿದ್ದಿತು. ಮತ್ತು ಸರ್ವರಿಗೂ ವೇದಾಧಿಕಾರವಿದ್ದಿತು. ಅಂದರೆ ಹೆಣ್ಣು, ಗಂಡು, ಶೂದ್ರ, ಬ್ರಾಹ್ಮಣ ಎಂಬುವ ಯಾವ ಭೇದವೂ ಇಲ್ಲದೆ ವೇದಗಳ ಪಠನ ಪಾಠನ ವ್ಯವಹಾರವು ನಡೆಯುತ್ತಲಿದ್ದಿತು.

ಬ್ರಾಹ್ಮಣನಾದ ಶುಕ್ರಾಚಾರ್ಯನ ಕನ್ನಿಕೆ ದೇವಯಾನಿಯು ಕ್ಷತ್ರಿಯ ರಾಜನಾದ ಯಯಾತಿಯನ್ನು ವರಿಸಿದಳು. ವಿದರ್ಭ ದೇಶದ ರಾಜನ ಪುತ್ರಿ ಲೋಪಾಮುದ್ರೆಯು ಅಗಸ್ತ್ಯನ ಹೆಂಡತಿಯಾದಳು. ಲೋಮಪಾದ ರಾಜನ ದತ್ತ ಕನ್ನಿಕೆಯಾದ ಶಾಂತೆಯು ಋಷ್ಯಶೃಂಗನನ್ನು ಮದುವೆ ಮಾಡಿಕೊಂಡಳು. ತೃಣಬಿಂದುವಿನ ಕನ್ಯಾ ಗೌ. ಈಕೆಯನ್ನು ಪುರಸ್ತ್ಯನಿಗೆ ಕೊಟ್ಟಿದ್ದರು. ಭಗೀರಥ ರಾಜನ ಕನ್ಯಾ ಹಂಸಿಯು ಕೌತ್ಸಋಷಿಯನ್ನು ವರಿಸಿದಳು. ಶರ್ಯಾತೀ ರಾಜನ ಮಗಳಾದ ಸುಕನ್ಯೆಯು ಚ್ಯವನಋಷಿಯನ್ನು ಲಗ್ನವಾದಳು. ಕ್ಷತ್ರಿಯರ ಹೆಣ್ಣುಗಳನ್ನು ಬ್ರಾಹ್ಮಣರಿಗೆ ಕೊಟ್ಟಿದ್ದರು. ಅವರ ಸಂತತಿಯು ಈಗ ಬ್ರಾಹ್ಮಣರೊಳಗೆ ಗಣನೆಯಾಗಿಬಿಟ್ಟಿದೆ. ಕೃಷ್ಣದ್ವೈಪಾಯನನ ಮಗನಾದ ಶುಕಮುನಿಯ ಕನ್ಯಾ ಕೃತ್ವೀ ಇವಳ ಪಾಣಿಗ್ರಹಣವನ್ನು ಕ್ಷತ್ರಿಯ ರಾಜನಾದ ಅಣುಹ ಇವನು ಮಾಡಿಕೊಂಡಿದ್ದನು. ಕ್ಷತ್ರಿಯರು ತಪಸ್ಸುಮಾಡಿದರೆ ಬ್ರಾಹ್ಮಣರಾಗಲು ಶಕ್ತರಾಗುತ್ತಿದ್ದರು. ಪುರು ಕುಲೋತ್ಪನ್ನ ಪ್ರಿಯಮೇಧ ಮತ್ತು ಗರ್ಗ ದುಷ್ಯಂತನ ವಂಶದವನಾದ ಶಿನಿ, ತ್ರಯ್ಯರುಣಿಗಳು ತಪಸ್ಸನ್ನು ಮಾಡಿ ಬ್ರಾಹ್ಮಣರಾದರು.

ಮಹಾಭಾರತದ ಅನುಶಾಸನ ಪರ್ವದಲ್ಲಿ ವೀತಹವ್ಯನೆಂಬುವ ಕ್ಷತ್ರಿಯ ರಾಜನು ತನ್ನ ಶತ್ರುಗಳ ಕೈಯಿಂದ ತಪ್ಪಿಸಿಕೊಂಡು ತನ್ನ ಪ್ರಾಣವನ್ನುಳಿಸಿಕೊಳ್ಳಲು ಭೃಗುವಿನ ಆಶ್ರಮಕ್ಕೆ ಹೋದನು. ಅವನನ್ನು ಹುಡುಕುತ್ತಾ ಅವನ ಶತ್ರುಗಳು ಅದೇ ಆಶ್ರಮಕ್ಕೆ ಬಂದರು. ಮತ್ತು ಅಲ್ಲಿದ್ದವರಿಗೆ, ಇಲ್ಲಿ ಯಾರಾದರೂ ಕ್ಷತ್ರಿಯರು ಬಂದಿರುವರೇ? ಎಂದು ಕೇಳಿದರು. ಇಲ್ಲಿ ಎಲ್ಲರೂ ಬ್ರಾಹ್ಮಣರೇ ಇರುವರೆಂದು ಸ್ವತಃ ಭೃಗುಋಷಿಯೇ ಉತ್ತರ ಕೊಟ್ಟನು. ಈ ವೀತಹವ್ಯನು ಭೃಗುವಿನ ಮಾತಿನಿಂದಲೇ ಬ್ರಾಹ್ಮಣನಾಗಿ ಗೃತ್ಸಮದನೆಂಬ ಋಷಿಯ ಹೆಸರಿನಿಂದ ಪ್ರಸಿದ್ಧನಾದನು.

ಉಪನಿಷತ್ತುಗಳು ವೇದಗಳ ಅಂಗಗಳಾಗಿದ್ದು ಸ್ಮೃತಿಗಳಿಗಿಂತಲೂ ಶ್ರೇಷ್ಠ ಮತ್ತು ಮಾನ್ಯಗಳಾದ ಗ್ರಂಥಗಳಾಗಿವೆ.

ಬೃಹದಾರಣ್ಯಕ ಮತ್ತು ಛಾಂದೋಗ್ಯ ಈ ಉಪನಿಷತ್ತುಗಳಲ್ಲಿ ಚಂಡಾಲರ ಉಲ್ಲೇಖ ಬಂದಿರುತ್ತದೆ. ನಿಷದಾದಿ ಹೆಸರುಗಳೂ ಇರುತ್ತವೆ. ಇವುಗಳ ಉಲ್ಲಂಘನೆ ಮಾಡಿದರೆ ಶಾಸ್ತ್ರವಿರುದ್ಧವಾಗುವದಿಲ್ಲವೇ? ಎಂದು ಸನಾತನಿಗಳ ವಾದವಿರುತ್ತದೆ.

**ಛಾಂದೋಗ್ಯ—೫-೧೦—೭**

ಪುಣ್ಯಾಚರಣೆಯನ್ನು ಮಾಡತಕ್ಕ ಜನಗಳಿಗೆ ಅವರವರ ಕರ್ಮಾನುಸಾರವಾಗಿ ಉತ್ತಮ ಜನ್ಮಗಳಾಗುತ್ತವೆ. ಯಾರು ದುಷ್ಟಾಚರಣೆಯನ್ನು ಮಾಡುತ್ತಾರೆಯೋ

ಅವರಿಗೆ ಅವರ ಪಾಪಕ್ಕೆ ಅನುಸಾರವಾಗಿ ನಾಯಿ, ಹಂದಿ, ಚಂಡಾಲ ಮೊದಲಾದ ಪ್ರಾಣಿಗಳಾಗಿ ಹುಟ್ಟುತ್ತಾರೆಂದು ಈ ಉಪನಿಷತ್ತಿನ ಮಂತ್ರದ ಅರ್ಥವಿದೆ. ಕಳ್ಳತನ, ಮದ್ಯಪಾನ, ಗುರುತಲ್ಪಗಮನ, ಬ್ರಹ್ಮಹತ್ಯ ಮೊದಲಾದ ಕೆಟ್ಟ ಕೆಲಸಗಳನ್ನು ಮಾಡ ತಕ್ಕವರು ಪತಿತರಾಗಿ ಚಂಡಾಲರಾಗುತ್ತಾರೆಂದು ತಿಳಿಯಬೇಕು. ಹೀಗಿದ್ದರೂ ಚಂಡಾಲನಿಗೆ ಹವನದಲ್ಲಿ ಸರ್ವ ಪಾಪಕ್ಷಯವಾಗಿ ಅವನು ಪುನೀತನಾಗುವನು (ಛಾಂದೋಗ್ಯ—೫–೨೪–೪).

ಇದರಿಂದ ಉಪನಿಷತ್ಕಾಲದಲ್ಲಿ ಯಾರಿಗೆ ಚಂಡಾಲರೆನ್ನುತ್ತಿದ್ದರೆಂಬುವದು ಸ್ಪಷ್ಟ ವಾಗುತ್ತದೆ. ಲೌಕಿಕದಲ್ಲಿ ರೂಢಿಯಾದರೂ ಮೇಲಿನ ಮಂತ್ರಕ್ಕನುಸಾರವಾಗಿಯೇ ಇರುತ್ತದೆ. ಯಾರಾದರೂ ವ್ಯವಹಾರದಲ್ಲಿ ಕೆಟ್ಟ ಕೆಲಸಗಳನ್ನು ಮಾಡಿದರೆ ಅವನು ಚಂಡಾಲನಾಗುತ್ತಾನೆಂದು ಬೈಯ್ಯುವದು ಸರ್ವರ ಅನುಭವಕ್ಕೆ ಬಂದ ಮಾತಾಗಿರು ತ್ತದೆ. ಆದರೆ ಬರಬರುತ್ತಾ ಸ್ಮೃತಿಕಾರರು ಮಾತ್ರ ಉಪನಿಷತ್ಕಾರರ ಅಭಿಪ್ರಾಯಕ್ಕೆ ವಿರುದ್ಧವಾಗಿ ವರ್ಣಗಳ ಕಟ್ಟಳೆಯನ್ನು ಬಲಪಡಿಸಿದರು. ಶೂದ್ರ ತಂದೆಯಿಂದ ಬ್ರಾಹ್ಮಣ ಸ್ತ್ರೀಯಳಲ್ಲಿ ಹುಟ್ಟಿದವನಿಗೆ ಚಂಡಾಲನೆಂತಲೂ, ಮತ್ತು ಶೂದ್ರ ಸ್ತ್ರೀಯಳಲ್ಲಿ ಬ್ರಾಹ್ಮಣನಿಂದ ಹುಟ್ಟಿದವನಿಗೆ ನಿಷಾದನೆಂತಲೂ, ಈ ಎರಡೂ ಜಾತಿಗಳೂ ಬರಬರುತ್ತ ಅಸ್ಪೃಶ್ಯಗಳಾದವು. ಮೂಲತಃ ಈ ಎರಡೂ ಜಾತಿಗಳ ಉತ್ಪತ್ತಿಗೆ ಬ್ರಾಹ್ಮಣನೇ ಕಾರಣವಾದಂತಾಯಿತು.

> ಕೇವಲಂ ಶಾಸ್ತ್ರಮಾಶ್ರಿತ್ಯ ನಕರ್ತವ್ಯೋ ವಿನಿರ್ಣಯಃ ।
> ಯುಕ್ತಿಹೀನ ವಿಚಾರೇತು ಧರ್ಮಹಾನಿಃ ಪ್ರಜಾಯತೇ ॥

ಅಂದರೆ ಕೇವಲ ಶಾಸ್ತ್ರ ಪ್ರಮಾಣದಿಂದ ನಿರ್ಣಯ ಮಾಡಬಾರದು. ವಿಚಾರದಿಂದ ಯುಕ್ತಿಯನ್ನು ಕೂಡಿಸಿ ಸಿದ್ಧಾಂತಪಡಿಸಬೇಕು. ಹೀಗೆ ಮಾಡದೆ ಇದ್ದರೆ ಧರ್ಮಹಾನಿ ಯಾಗುವದು ಎಂದು ವ್ಯವಹಾರ ಮಯೂಖವೆಂಬುವ ಗ್ರಂಥದಲ್ಲಿ ಹೇಳಿದೆ.

ಇಂತಹ ವಿಚಾರ ಸರಣಿಯು ಸಮಾಜದಲ್ಲಿ ಎಲ್ಲಿಯವರೆಗೆ ಇದ್ದಿತೋ ಅಲ್ಲಿಯ ವರೆಗೆ ಈ ದೇಶದಲ್ಲಿ ಜಾತಿ ವಿಶಿಷ್ಟ ತೊಂದರೆಯೇ ಇರಲಿಲ್ಲ. ಆ ಕಾಲದಲ್ಲಿ ಎಲ್ಲ ಜಾತಿಗಳು ಪರಸ್ಪರ ಅನೇಕ ವಿಷಯಗಳಲ್ಲಿ ಕೂಡಿಹೋಗುತ್ತಿದ್ದುವು. ಮೇಲುಕೀಳುಗಳ ತೊಂದರೆಯೇ ಇರಲಿಲ್ಲ. ಎಲ್ಲ ಜಾತಿಗಳೂ ಕೂಡಿಕೊಂಡು ಹೋಗಿದ್ದುವು. ಪರ ದೇಶದಿಂದ ಬಂದ ಬೇಡ ಜನಗಳು (ಕೈವರ್ತ) ಬ್ರಾಹ್ಮಣರಲ್ಲಿ ಕೂಡಿಹೋಗಿರುತ್ತಾರೆ. ಇರಾಣದೊಳಗಿನ ಅನ್ಯದೇಶೀಯ, ಅನ್ಯಧರ್ಮೀಯ ಜನಗಳು ಪವಿತ್ರ ಬ್ರಾಹ್ಮಣ ರೆಂದು ಈಗಲೂ ವಂದ್ಯರಾಗಿರುತ್ತಾರೆ. ಈಗಿನ ಕಾಲದಲ್ಲಿಯೂ ಅನೇಕ ಅನ್ಯ ಧರ್ಮಾನುಯಾಯಿಗಳು ಹಿಂದುಗಳೊಡನೆ ಗಣನೆಯಾಗಿರುತ್ತಾರೆ.

ಸುಪ್ರಸಿದ್ಧ ಬೌದ್ಧ ರಾಜನೂ, ಈಗಿನ ನಮ್ಮ ಧ್ವಜದ ನಾಯಕನೂ ಆದ ಅಶೋಕ ಚಕ್ರವರ್ತಿಯು ಒಂದು ಶಿಲಾ ಲೇಖನದಲ್ಲಿ ಗ್ರೀಕ ಮತ್ತು ಯವನರನ್ನು ಹಿಂದೂ ಧರ್ಮದಲ್ಲಿ ಸಮಾವೇಶ ಮಾಡಿಕೊಂಡ ಉಲ್ಲೇಖವಿರುತ್ತದೆ.

ಅಂತಿಗಳ Antiochas Soter ತುರಮಾಯ Ptolemy Philaldelphas ಮತ, ಅಲಿತ ಸುಂದರ Alexander ಮತ್ತು ಅತಿಕಿನಿ ಇವರುಗಳಲ್ಲಿ ಅನುಕ್ರಮವಾಗಿ ಸಿರಿಯಾ,

ಈಜಿಪ್ತ, ಮೆಸಿಡೋನಿಯಾ ಮತ್ತು ಎಫಿಸಸ ಇವುಗಳ ರಾಜರಾಗಿದ್ದರು. ಪಂಜಾಬ್ ಮತ್ತು ಕಾಬೂಲುಗಳಲ್ಲಿ ರಾಜ್ಯ ಮಾಡತಕ್ಕ ಮಿನೆಂಡರ್ ರಾಜನನ್ನು ಬೌದ್ಧ ಧರ್ಮದಲ್ಲಿ ಸೇರಿಸಿಕೊಂಡಮೇಲೆ ಅವನಿಗೆ ಮಿಲಂದ ಮಿಾನಿ ಎ್ಯಂಡರ್ ಎಂದು ಹೆಸರಾಯಿತು. ಮಿಾನಿ ಎ್ಯಂಡರ್ ಇದರ ಸಂಸ್ಕೃತ ರೂಪವು ಮಿಲಿಂದವೆಂದು ಆಯಿತು. ಈ ಯುವರಾಜನು ಮೇವಾಡ ಮೊದಲಾದ ಭಾಗಗಳನ್ನು ತನ್ನ ಸ್ವಾಧೀನಕ್ಕೆ ತೆಗೆದು ಕೊಂಡನೆಂದು ಪತಂಜಲ ಭಾಷ್ಯದಲ್ಲಿ ಉಲ್ಲೇಖವಿರುತ್ತದೆ. ಈ ರಾಜನು ಬೌದ್ಧ ಧರ್ಮವನ್ನು ಸ್ವೀಕರಿಸಿದ ಬಗ್ಗೆ ಗ್ರೀಕ್ ಮತ್ತು ಪ್ರಾಕೃತ ಭಾಷೆಗಳಲ್ಲಿ ಪ್ರಮಾಣಗಳು ಇರುತ್ತವೆ. ಇವನು ಬೌದ್ಧ ಧರ್ಮ ಸ್ವೀಕರಿಸಿದ ಮೇಲೆ ತನ್ನ ನಾಣ್ಯದ ಮೇಲೆ ಧರ್ಮಚಕ್ರವನ್ನು ಕೊರೆದದ್ದು ತಿಳಿದುಬಂದಿರುತ್ತದೆ. ಇದೇ ಧರ್ಮಚಕ್ರವೇ ಸದ್ಯಕ್ಕೆ ಹಿಂದುಸ್ಥಾನದ ಧ್ವಜವಾಗಿ ಹಾರಾಡುತ್ತಲಿದೆ.

ಪಾಲಿಯ ಭಾಷೆಯಲ್ಲಿರತಕ್ಕ ಇನ್ನೊಂದು ಶಿಲಾ ಲೇಖದಿಂದ ಕೆಳಗಿನ ಅಂಶಗಳು ತಿಳಿದುಬರುತ್ತವೆ. ತುರಕಣದ ಪುತ್ರ ಹರಕರಣ (ಇವನ ಮೊದಲಿನ ಹೆಸರು "ವದಾ ಲೋಕ" ವೆಂದಿದ್ದಿತು). ಇವನು ಅನೇಕ ಪ್ರಕಾರಗಳಾದ ದಾನಧರ್ಮಗಳನ್ನು ಮಾಡುತ್ತಲಿದ್ದನು. ಆದ್ದರಿಂದ ಇವನನ್ನು ಬ್ರಾಹ್ಮಣರು ಹಿಂದೂ ಧರ್ಮದಲ್ಲಿ ತೆಗೆದು ಕೊಂಡರು.

ಚಿಟ ಮತ್ತು ಚಂದಾನ ಈ ಇಬ್ಬರು ಯವನರಿಗೆ ಚಿತ್ರ ಮತ್ತು ಚಂದ್ರರೆಂಬುವ ಹೆಸರನ್ನಿಟ್ಟು ಆರ್ಯರಲ್ಲಿ ಸೇರಿಸಿಕೊಂಡರು. ನಾಶಿಕದ ಹತ್ತರ ಇರುವ ಕೆಲವು ಶಿಲಾ ಲೇಖಗಳಲ್ಲಿ ಯವನ ಜಾತಿಯ ತಂದೆ ಮಕ್ಕಳಿಗೆ ಹಿಂದಿನ ಕಾಲದಲ್ಲಿ ಹಿಂದೂಧರ್ಮ ದೊಳಗೆ ತೆಗೆದುಕೊಂಡಿರುವರೆಂದು ಉಲ್ಲೇಖವಿರುತ್ತದೆ. ಮತ್ತು ಶಕಜಾತಿಯ ಒಬ್ಬ ರಾಣಿಯು ಬಹಳ ಉದಾರಿಯಾಗಿದ್ದಳು. ಅವಳು ಧರ್ಮಾರ್ಥವಾಗಿ ಅನೇಕ ಕಾರ್ಯ ಗಳನ್ನು ಮಾಡಿದಳು. ಅವಳಿಗೆ "ವಿಷ್ಣುದತ್ತಾ" ಎಂಬುವ ಹೆಸರನ್ನಿಟ್ಟು ಅವಳಿಗೆ ಬೌದ್ಧ ಧರ್ಮದ ದೀಕ್ಷೆ ಕೊಟ್ಟದ್ದು ತಿಳಿದುಬರುತ್ತದೆ. ಇನ್ನೊಬ್ಬ ರಾಜನು ಮಾಳವ, ಗುಜರಾತ್ ಮೊದಲಾದ ಪ್ರಾಂತಗಳ ಮೇಲೆ ತನ್ನ ಅಧಿಕಾರವನ್ನು ಸಂಪಾದಿಸಿದ್ದನು. ಈ ಶಕರಾಜನ ವಂಶಸ್ಥರು ತಮಗೆ ಬ್ರಾಹ್ಮಣ ಮತ್ತು ಕ್ಷತ್ರಿಯರೆಂದು ಅಂದುಕೊಳ್ಳು ತ್ತಾರೆ. ಕೆಲವರು ವೈಶ್ಯ ವರ್ಗದಲ್ಲಿಯೂ ಸಮಾವಿಷ್ಟರಾಗಿರುತ್ತಾರೆ.

ಇಂಗ್ಲೀಷರ ಇತಿಹಾಸದಲ್ಲಿ (Satrap) ಸೆಟ್ರೆಪ್ ರಾಜನೆಂದು ಹೇಳಲಾಗಿದೆ. ಇವನು ಅನ್ಯ ದೇಶೀಯನಾಗಿದ್ದನು. ಇವನನ್ನು ಹಿಂದೂ ಧರ್ಮದಲ್ಲಿ ತೆಗೆದುಕೊಂಡ ಮೇಲೆ ಶುದ್ಧ ಕ್ಷತ್ರಿಯನೆಂದು ಹೇಳಲಿಕ್ಕೆ ಹತ್ತಿದರು. ಇವನ ರಾಜ್ಯ ಇಸವಿ ಸನ್ ೩೮೮ ರ ವರೆಗೆ ಇದ್ದಿತು. ಇವರಲ್ಲಿ ರುದ್ರದಮನನೆಂಬ ಹೆಸರಿನ ರಾಜನು ಪ್ರಸಿದ್ಧ ನಾಗಿದ್ದನು. ಇವನು ವ್ಯಾಕರಣ, ಸಂಗೀತ, ನ್ಯಾಯ ಮೊದಲಾದ ವಿಷಯಗಳಲ್ಲಿ ಪಾಂಡಿತ್ಯ ಸಂಪಾದಿಸಿದ್ದನೆಂದು ನಾಶಿಕದ ಹತ್ತಿರ ಇರತಕ್ಕ ಒಂದು ಶಿಲಾ ಲೇಖದಲ್ಲಿ ಉಲ್ಲೇಖವಿದೆ. ಈ ರಾಜ ಮನೆತನದ ಸಂಬಂಧವು ಉಚ್ಚವರ್ಣದ ಹಿಂದೂ ಕುಟುಂಬ ದೊಳಗಾಯಿತು.

ಶುದ್ಧಿಯನ್ನು ಮಾಡಿ ಬೌದ್ಧ ಧರ್ಮದಲ್ಲಿ ತೆಗೆದುಕೊಂಡ ಯವನರು ಹಿಂದೂ ದೇವಾಲಯಗಳಿಗೆ ಸಹಾಯ ಮಾಡಿದ್ದರಿಂದಲೂ, ಈ ಹೊಸ ಧರ್ಮದಲ್ಲಿ ಆದರವನ್ನು

ವ್ಯಕ್ತಮಾಡಿದ್ದರಿಂದಲೂ ಅವರ ಮೊದಲಿನ ಹೆಸರನ್ನು ಬದಲಾಯಿಸಿ ಅವರಿಗೆ ಸಂಸ್ಕೃತದ ಹೆಸರನ್ನಿಡಲಾಯಿತು.

ಆಭೀರ, ತುರುಷ್ಕ, ಹೂಣ, ಮಗ, ಗುರ್ಜರ ವಗೈರೆ ಪರಜಾತಿಯವರನ್ನು ಹಿಂದುಗಳಲ್ಲಿ ಸಮಾವೇಶ ಮಾಡಿಕೊಂಡ ಬಗ್ಗೆ ಪ್ರಮಾಣಗಳು ಬೇಕಾದಷ್ಟಿವೆ. ಪರ್ಶಿಯಾ ದೇಶದಲ್ಲಿದ್ದವರೇ ಅಧಿಕಸಂಖ್ಯಾತರಾಗಿದ್ದರು. ಇವರೆಲ್ಲ ಹಿಂದಿನಿಂದ ಬ್ರಾಹ್ಮಣರಾದರು.

ದೇವೋ ಜೀಯಾತ್ ತ್ರಿಲೋಕೀ ಮಣಿರಯ ಮರುಣೋ ಯನ್ನಿವಾಸೇನ ಪುಣ್ಯಃ ।
ಶಾಕದ್ವೀಪಸ್ಯ ದುಗ್ಧಾಂಬುನಿಧಿವಲಯತೋ ಯತ್ರ ವಿಪ್ರಾ ಮಗಾಖ್ಯಾಃ ॥
ವಂಶಸ್ತತ್ರ ದ್ವಿಜಾನಾಂ ಭ್ರಮಿಲಿಖಿತತನೋರ್ಭಾಸ್ವತಃ ಸ್ವಾಂಗಮುಕ್ತಾಃ ।
ಸಾಂಬೋ ಯಾನಾನಿನಾಯ ಸ್ವಯಮಿಹ ಮಹಿತಾಸ್ತೇ ಜಗತ್ಯಾಂ ಜಯಂತಿ ॥

ಈ ಮಗ ಜನರನ್ನು ಕೃಷ್ಣಪುತ್ರನಾದ ಸಾಂಬನು ಸೂರ್ಯ ಪೂಜೆಯ ಸಲುವಾಗಿ ಶಾಕ ದ್ವೀಪದಿಂದ ಕರೆದುಕೊಂಡು ಬಂದನೆಂದು ಭವಿಷ್ಯತ್ಪುರಾಣದಲ್ಲಿ ಹೇಳಿದೆ. ಇವರ ವಸತಿಯು ಬಂಗಾಲ, ರಾಜಪುತಾನ ಮೊದಲಾದ ಭಾಗಗಳಲ್ಲಿದ್ದಿತು. ಸೂರ್ಯ ದೇವತೆಯ ಪ್ರತಿಷ್ಠೆಯು ಮತ್ತು ಅದನ್ನು ಪೂಜೆ ಮಾಡತಕ್ಕ ಅಧಿಕಾರವು ಕೇವಲ ಮಗ ಬ್ರಾಹ್ಮಣರಿಗೆ ಮಾತ್ರ ಇದ್ದಿತೆಂಬುವದು ಪ್ರಾಚೀನ ಇತಿಹಾಸದಿಂದ ಕಂಡು ಬರುತ್ತದೆ. ಈ ಮಗ ಜನರು ಪಾರಸೀ ಧರ್ಮ ಸಂಸ್ಥಾಪಕನಾದ ಜರತುಷ್ಟ್ರನ ಅನುಯಾಯಿಗಳ ಗುರುಗಳೆಂದು ಮಾನಿಸಲ್ಪಡುತ್ತಾರೆ. ಇದರಂತೆ ಪರಮತದ ಅನೇಕ ಜನರ ಸಮಾವೇಶವು ಹಿಂದೂ ಧರ್ಮದಲ್ಲಿ ಆಗಿರುತ್ತದೆ. ಅವರ ರಕ್ತವು ಇಲ್ಲಿಯ ಬೇರೆ ಬೇರೆ ಜಾತಿಯ ಜನರ ರಕ್ತದಲ್ಲಿ ಬೆರೆತುಹೋಗಿದೆ. ಹೀಗಿದ್ದರೂ ಹಿಂದೂ ಧರ್ಮದಲ್ಲಿರತಕ್ಕ ಪ್ರತಿಯೊಂದು ಜಾತಿಯವರು ನಾವು ಶುದ್ಧ ರಕ್ತದವರೆಂದು ಹೇಳುವ ಮಾತು ಸತ್ಯದ ವಿಪರ್ಯಾಸವಾದುದಲ್ಲದೆ ಶುದ್ಧ ಭ್ರಮೆಯಿಂದ ಕೂಡಿದ್ದಾಗಿರುತ್ತದೆ. ನಾವು ಅನಾದಿಯಿಂದ ಬಂದವರು, ಆದ್ದರಿಂದ ಶುದ್ಧರು; ಉಳಿದವರು ಸಂಕರರು ಎಂದು ಹೇಳುವ ಮಾತು ಆಕಾಶಪುಷ್ಪದಷ್ಟು ಸುಳ್ಳಿನ ಕಂತೆಯಾಗಿರುತ್ತದೆ.

ಬೌದ್ಧ ಧರ್ಮವು ಈ ದೇಶದಲ್ಲಿ ಪ್ರಸಾರಣೆ ಹೊಂದಿದಾಗ ಲಕ್ಷಾಂತರ ಹಿಂದೂ ಜನರು ತಮ್ಮ ಧರ್ಮಕ್ಕೆ ತಿಲಾಂಜಲಿಯನ್ನು ಬಿಟ್ಟು ಬುದ್ಧಾನುಯಾಯಿಗಳಾದರು. ಪರದೇಶದ ಬಹಳ ಜನರು ಬುದ್ಧನ ಪ್ರಭಾವಕ್ಕೊಳಗಾಗಿ ಬುದ್ಧ ಧರ್ಮವನ್ನು ಸ್ವೀಕರಿಸಿ ಇಲ್ಲಿಯ ಬುದ್ಧ ಜನಗಳೊಡನೆ ಶರೀರ ಸಂಬಂಧ ಬೆಳೆಸಿದರು. ಕಾಲಾಂತರದಲ್ಲಿ ಬುದ್ಧ ಧರ್ಮವು ಕಳೆಗೆಟ್ಟುಹೋಗುವ ಕಾಲ ಬಂದಿತು. ಆಗ ಅವರೆಲ್ಲರೂ ಹಿಂದೂ ಧರ್ಮದ ಬೇರೆ ಬೇರೆ ವರ್ಣಗಳಲ್ಲಿ ಕೂಡಿಕೊಂಡು ಬಿಟ್ಟರು. ಹೀಗೆ ಪರದೇಶದ ಎಷ್ಟೋ ಜನರು ಹಿಂದೂ ಸಮಾಜದ ಘಟಕಗಳಾದರು.

ಹಿಂದುಸ್ಥಾನದ ಹೊರಗೆ ಅಂದರೆ ಜಾವಾ–ಚಂಪಾ, ಕಾಂಬೋಜ ಮೊದಲಾದ ದ್ವೀಪಗಳಿಗೆ ಹಿಂದುಗಳು ಹೋಗಿ ಅಲ್ಲಿಯ ಜನಗಳಿಗೆ ಹಿಂದೂ ಧರ್ಮದೀಕ್ಷೆಯನ್ನು ಕೊಟ್ಟರೆಂದು ಪ್ರಾಚೀನ ಗ್ರಂಥಗಳಲ್ಲಿ ಪ್ರಮಾಣಗಳುಂಟು. ಈ ದೇಶದ ಮೇಲೆ ಮುಸಲ್ಮಾನರು ಧಾಳಿಯನ್ನು ಮಾಡಿದಾಗ ಅವರ ರಾಜ ಸತ್ತಾ ಸ್ಥಾಪನೆಯಾಯಿತು. ಅನೇಕ ಹಿಂದೂ ಜನರು ಇಸ್ಲಾಂ ಮತವನ್ನು ಸ್ವೀಕರಿಸಿದರು. ಹೀಗೆ ಮುಸಲ್ಮಾನರಾಗಿ

ಹೋದವರನ್ನು ಸಾಧುಸಂತರೇ ಮೊದಲಾದ ಧಾರ್ಮಿಕ ಗುರುಗಳು ಅವರನ್ನು ಶುದ್ಧಿ ಮಾಡಿ ಹಿಂದೂ ಧರ್ಮದಲ್ಲಿ ತೆಗೆದುಕೊಂಡರು.

ಬಂಗಾಲ ಪ್ರಾಂತದಲ್ಲಿ ಕ್ರಿಸ್ತ ಶಕೆ ೧೫ನೆಯ ಶತಮಾನದಲ್ಲಿ ಪ್ರಸಿದ್ಧಿಗೆ ಬಂದ ಕೃಷ್ಣ ಚೈತನ್ಯ ಅಥವಾ ಗೌರಾಂಗಸ್ವಾಮಿ ಇವರು ಅನೇಕ ಮುಸಲ್ಮಾನರನ್ನು ಹಿಂದೂ ಧರ್ಮದಲ್ಲಿ ತೆಗೆದುಕೊಂಡರು.

ಭವಿಷ್ಯತ್ಪುರಾಣದಲ್ಲಿ ಈ ಇಬ್ಬರು ಮಹನೀಯರ ವಿಷಯದಲ್ಲಿ ಕೆಳಗೆ ಬರೆದ ಪ್ರಕಾರ ಉಲ್ಲೇಖವಿರುತ್ತದೆ.

> ಶೃತ್ವಾತೇ ವೈಷ್ಣವಾಃ ಸರ್ವೇ ಕೃಷ್ಣಚೈತನ್ಯ ಸೇವಕಾಃ ।
> ದಿವ್ಯಂ ಮಂತ್ರಂ ಗುರೋಶ್ಚೈವ ಪಠಿತ್ವಾ ಪ್ರಯಯುಃ ಪುರೀಮ್ ॥
>
> ರಾಮಾನಂದಸ್ಯ ಶಿಷ್ಯೋವೈ ಅಯೋಧ್ಯಾಯಾ ಮುಪಾಗತಃ ।
> ಕೃತ್ವಾವಿಲೋಮಮ್ ತಂ ಮಂತ್ರಂ ವೈಷ್ಣವಾಂಸ್ತಾನಕಾರಯತ್ ॥
>
> ಭಾಲೇ ತ್ರಿಶೂಲ ಚಿನ್ಹಂಚ ಶ್ವೇತರಕ್ತಂ ತದಾಭವತ್ ।
> ಕಂಠೇಚ ತುಲಸೀ ಮಾಲಾ ಜಿಹ್ವಾ ರಾಮಮಯೀಕೃತಾ ॥
>
> ಮ್ಲೇಂಚ್ಛಾಸ್ತೇ ವೈಷ್ಣವಾಶ್ಚಾಸನ್ ರಾಮಾನಂದ ಪ್ರಭಾವತಃ ।
> ಆರ್ಯಾಶ್ಚ ವೈಷ್ಣವಾ ಮುಖ್ಯಾ ಅಯೋಧ್ಯಾಯಾಂ ಬಭೂವಿರೇ ॥

ಅಂದರೆ ಕೃಷ್ಣಚೈತನ್ಯನ ಶಿಷ್ಯರು ಗುರುಗಳ ಉಪದೇಶವನ್ನು ತೆಗೆದುಕೊಂಡು ಬೇರೆಬೇರೆ ಗ್ರಾಮಗಳಿಗೆ ಹೋದರು. ರಾಮಾನಂದರ ಶಿಷ್ಯರು ಅಯೋಧ್ಯೆಗೆ ತೆರಳಿದರು. ಅಲ್ಲಿ ವೈಷ್ಣವ ಧರ್ಮೋಪದೇಶವನ್ನು ಮಾಡಿ ಅಲ್ಲಿರತಕ್ಕ ಇತರ ಧರ್ಮದ ಜನಗಳಿಗೆ ವೈಷ್ಣವ ಧರ್ಮದ ದೀಕ್ಷೆಯನ್ನು ಕೊಟ್ಟರು. ಆ ಜನಗಳ ಹಣೆಯಲ್ಲಿ ಬಿಳುಪು ಮತ್ತು ಕೆಂಪು ಬಣ್ಣದ ತ್ರಿಶೂಲಾಕೃತಿ ತಿಲಕವನ್ನಿಟ್ಟರು. ಕಂಠದಲ್ಲಿ ತುಲಸೀ ಮಾಲೆಯನ್ನು ಹಾಕಿದರು. ಆಚಾರ್ಯರು ನಿಂಬಾದಿತ್ಯ ಶಿಷ್ಯರೊಡನೆ ಕಾಚೀಪುರಕ್ಕೆ ಹೋಗಿ ಅಲ್ಲಿಯ ಅನೇಕ ಮುಸಲ್ಮಾನರನ್ನು ವೈಷ್ಣವ ಧರ್ಮದಲ್ಲಿ ತೆಗೆದುಕೊಂಡರು. ಅವರ ಕೊರಳಲ್ಲಿ ತುಳಸೀ ಮಾಲೆಯನ್ನು ಹಾಕಿಸಿದರು. ಸ್ವಧರ್ಮ ತ್ಯಾಗಮಾಡಿ ಅನ್ಯಧರ್ಮ ಸ್ವೀಕಾರ ಮಾಡಿದ್ದುದು ಎಲ್ಲಾ ಜಾತಿಗಳಲ್ಲಿಯೂ ಉದಾಹರಣೆಗಳು ಸಿಗುತ್ತವೆ. ರಾಜಸ್ಥಾನದಲ್ಲಿ ಈಗಿನ ಕಾಲದಲ್ಲಿಯೂ ಕೂಡ ಅನೇಕ ಹಿಂದುಗಳು ಮುಸಲ್ಮಾನ ಸ್ತ್ರೀಯರನ್ನು ಲಗ್ನ ಮಾಡಿಕೊಳ್ಳುತ್ತಾರೆ. ಆದರೆ ಅವರ ಮಕ್ಕಳು ಹಿಂದುಗಳಾಗುತ್ತಾರೆ. ಈಗಿನ ಕಾಲದಲ್ಲಿ ಜಾತಿಯ ಮಹತ್ವ ನಿಜವಾದ ಧರ್ಮದಲ್ಲಿರದೆ ಕೇವಲ ಜನಗಳ ದುರಾಗ್ರಹ ದಿಂದ ಅನವಸ್ಥಾ ಪ್ರಸಂಗವನ್ನು ಹೊಂದಿರುತ್ತದೆ. ಶ್ವಪಚ, ಶಬರ, ಖಲ ಮೊದಲಾ ದವರು ಯಾರೇ ಇರಲಿ ಈಶ್ವರನ ಸ್ಮರಣೆಯನ್ನು ಮಾಡಿದರೆ ಅವರೆಲ್ಲರೂ ಪವಿತ್ರರಾಗು ತ್ತಾರೆಂದು ವೇದ–ಆಗಮ, ಭಗವದ್ಗೀತೆ ಮೊದಲಾದ ಗ್ರಂಥಗಳಿಂದ ಸ್ಪಷ್ಟವಾಗಿ ತಿಳಿಯುತ್ತದೆ. ಹಿಂದುಗಳು ನಿಜವಾದ ಧರ್ಮವನ್ನು ಬಿಟ್ಟರು ಅರ್ಥಾತ್ ನಿಜವಾದ ಹಿಂದೂ ಧರ್ಮದ ಸ್ಥಿತಿಯನ್ನು ತಿಳಿಯದಂತಾದರು. ಯಾರು ತಿಳಿದವರಿದ್ದರೋ ಅಥವಾ ಧಾರ್ಮಿಕ ಶಿಕ್ಷಣವನ್ನು ಕೊಡುತ್ತಿದ್ದರೋ ಅವರೇ ಹಿಂದೂ ಧರ್ಮದಲ್ಲಿ ಜಾತೀಯ ಭೂತವನ್ನು ತುಂಬಿ ತಾವು ಶ್ರೇಷ್ಠರು ಉಳಿದವರು ಕನಿಷ್ಠರು, ನಮ್ಮ ಹೊರತು ಸಂಸ್ಕೃತವನ್ನು ಯಾರೂ ಕಲಿಯಬಾರದು ಎಂತಲೂ ಜಾತೀಯ ಭೂತವನ್ನು

ತುಂಬಿ ಗ್ರಂಥಗಳನ್ನು ಬರೆದು ಪ್ರಚಾರ ಮಾಡುತ್ತಾ ಬಂದರು. ಇವರಿಗೆ ಇಂತಹ ಅಧಿಕಾರವುಂಟು, ಇವರಿಗೆ ಇಲ್ಲವೆಂದು ಹೇಳುವ ಉಚ್ಚ ವರ್ಣಗಳಲ್ಲಿ ನೂರಾರು ಭೇದಗಳಾದವು. ಉಳಿದ ಜಾತಿಗಳಲ್ಲಿಯೂ ಭೇದೋಪಭೇದಗಳಾಗಿ ಸಾವಿರಾರು ಪಂಗಡಗಳಾದವು. ಇದರಂತೆ ಅಸ್ಪೃಶ್ಯರೆಂಬುವರಲ್ಲಿಯೂ ನೂರಾರು ಭೇದಗಳಾಗಿ ಹಿಂದೂ ಸಮಾಜವು ಹೀಗೆ ಅನೈಕ್ಯದ ದಾರಿಯನ್ನು ಹಿಡಿದ ಕಾರಣ ಒಕ್ಕಟ್ಟೂ ಉಳಿಯಲಿಲ್ಲ.

ಆಚಾರದ ಕೂಡ ವಿಚಾರವನ್ನು ಕೂಡಿಸಿ ಹಿಂದೂ ಸಮಾಜವು ಶುದ್ಧವಾಗುವಂತೆ ಮಾಡುವದು ಅತ್ಯಂತ ಆವಶ್ಯಕವಿರುತ್ತದೆ. ಸದ್ಯದ ಹಿಂದೂ ಧರ್ಮದ ದುರವಸ್ಥೆಯು ದೇಶದ ಅಧೋಗತಿಗೆ ಕಾರಣವಾಗಿರುತ್ತದೆ. ಅದನ್ನು ಹೀಗೆಯೇ ಬಿಟ್ಟರೆ ನಮ್ಮ ನಾಶಕ್ಕೆ ನಾವೇ ಆಹ್ವಾನವನ್ನು ಕೊಟ್ಟಂತಾಗುತ್ತದೆ. ಹಿಂದುಸ್ಥಾನದ ಸಾವಿರಾರು ಜಾತಿಗಳು, ಸಾವಿರಾರು ಗುರುಗಳು, ಅನೇಕ ಸಂಪ್ರದಾಯಗಳು ಏಕೀಕರಣದ ದಾರಿಯನ್ನು ಹಿಡಿಯಲೇಬೇಕು. ಹಿಡಿಯದಿದ್ದರೆ ಗತ್ಯಂತರವೇ ಇರುವದಿಲ್ಲ.

ಗುಣಕರ್ಮಗಳ ಪ್ರಮಾಣಾನುಸಾರವಾಗಿ ವರ್ಗಗಳ ವ್ಯವಸ್ಥಾ ಇರಬೇಕು. ವರ್ಗಾಶ್ರಮಗಳು ಧರ್ಮದ ಮರ್ಯಾದೆಯನ್ನು ಕಾಯಬೇಕು. ಸರ್ವರೂ ತಾವು ಹಿಂದೂ ಧರ್ಮದ ಸೇವಕರು ಅಥವಾ ಅದರ ಅನುಯಾಯಿಗಳೆಂಬುವದನ್ನು ತಿಳಿದು, ಸದ್ಯದ ಅನ್ಯಾಯದ ಪದ್ಧತಿಯನ್ನು ನಾಶಮಾಡಲಿಕ್ಕೇ ಬೇಕು. ಯಾವ ಕಾರ್ಯವನ್ನು ಬಸವ, ಬುದ್ಧ, ರಾಮಕೃಷ್ಣ, ಗಾಂಧೀಜಿ ಮೊದಲಾದ ಮಹಾನುಭಾವರು ಮಾಡಿದರೋ ಆ ಕಾರ್ಯವನ್ನು ಆಚರಣೆಗೆ ತರಲಿಕ್ಕೆ ಯತ್ನಿಸಬೇಕು. ಪರಸ್ಪರ ಪ್ರೇಮ, ಐಕ್ಯ ಭಾವನೆಗಳನ್ನು ಹುಟ್ಟಿಸುವ ಯತ್ನ ಮಾಡಬೇಕು.

ಜಾತಿಯ ಉಚ್ಚನೀಚ ದುರಭಿಮಾನವು ವ್ಯರ್ಥವಾದುದಾಗಿದೆ. ಅದು ನಿಜವಾದ ಹಿಂದೂ ಧರ್ಮಕ್ಕೆ ಮಾನ್ಯವಾದುದಾಗಿರುವದಿಲ್ಲ. ನಮ್ಮ ಧಾರ್ಮಿಕ ತಿಳುವಳಿಕೆಯು ಸತ್ಯದ ಆಧಾರದ ಮೇಲಿರುವದಿಲ್ಲ. ನಮ್ಮೆಲ್ಲರ ಆಚಾರ ವಿಚಾರಗಳನ್ನು ಲಕ್ಷ್ಯಕ್ಕೆ ತಂದುಕೊಂಡರೆ ಯಾವ ಜಾತಿಯವರೂ ಈಗ ವರ್ಣಾಶ್ರಮಧರ್ಮದಂತೆ ನಡೆದುಕೊಳ್ಳುವದಿಲ್ಲ. ಅವುಗಳು ಉಳಿದೂ ಇರುವದಿಲ್ಲ. ಮತ್ಸ್ಯ, ಮದ್ಯ, ಮಾಂಸಗಳನ್ನು ಸೇವಿಸತಕ್ಕ ಬ್ರಾಹ್ಮಣರ ಸಂಖ್ಯೆ ಕಡಿಮೆ ಇರುವದಿಲ್ಲ. ಅವುಗಳನ್ನು ಸೇವಿಸದೆ ಇರತಕ್ಕ ಇತರ ಜನಗಳ ಸಂಖ್ಯೆ ಅಲ್ಪವಾಗಿರುವದೂ ಇಲ್ಲ. ಇರಾಣಿ, ಕ್ರಿಶ್ಚಿಯನ್, ಮುಸಲ್ಮಾನರ ಹೋಟಲುಗಳಲ್ಲಿ ಊಟ ಮಾಡತಕ್ಕವರಲ್ಲಿ ಉಚ್ಚವರ್ಣದವರು ಬೇಕಾದಷ್ಟು ಜನರಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಯಾರು ಶ್ರೇಷ್ಠರು? ಯಾರು ಕನಿಷ್ಠರು? ಯಾರು ಪತಿತರು? ಯಾರು ಪಾವನರು? ಎಂಬುವ ಪ್ರಶ್ನೆಯನ್ನು ಪ್ರತ್ಯೇಕ ಜಾತಿಯವರು ಮನಸ್ಸಿನಲ್ಲಿ ತಂದುಕೊಂಡು ನೋಡಿದರೆ ಮೇಲಿನ ಪ್ರಶ್ನೆಗೆ ಯಾರಿಂದಲೂ ಸರಿಯಾದ ಉತ್ತರವು ಹೊರಡಲಾರದು. ಆದ್ದರಿಂದ ದುರಾಗ್ರಹದ ತ್ಯಾಗವನ್ನು ಮಾಡಿ ನಿಜವಾದ ಸದಾಚಾರದ ರಹಸ್ಯವನ್ನು ತಿಳಿಯಬೇಕು. ನಾವು ಶ್ರೇಷ್ಠರೆಂದು ಹೇಳುವ ಜನಗಳು ಯೂರೋಪಿಯನ್ನರಲ್ಲಿ ಊಟ ಮಾಡುತ್ತಾರೆ. ಅತ್ಯಾಚಾರ, ಅನಾಚಾರಗಳನ್ನು ಬೇಕಾದಷ್ಟು ಮಾಡಿದರೂ ಅರ್ಥಾತ್ ವಸ್ತುಸ್ಥಿತಿಯು ಹೀಗಿದ್ದರೂ ಪ್ರಸಂಗ ಬಂದಾಗ ಸನಾತನಿಗಳು ಶೃತ್ಯಾದಿ ಪ್ರಮಾಣಗಳನ್ನು

ಹುಡುಕಲಿಕ್ಕೆ ಹತ್ತುತ್ತಾರೆ. ಹೀಗೆ ಮಾಡದೆ ಹಿಂದೂ ಧರ್ಮದ ರಕ್ಷಣೆ ಕಾರ್ಯ ಮಾಡುವದು ಎಲ್ಲರ ಕರ್ತವ್ಯವಾಗಿರುತ್ತದೆ. ಹೀಗೆ ಮಾಡದೆ ಇದ್ದರೆ ಹಿಂದೂ ಧರ್ಮವು ಇನ್ನೂ ಅಧೋಗತಿಗೆ ಹೋಗುವುದಲ್ಲದೆ ಸನಾತನಿಗಳೂ ಕೂಡ ಕಾಲಪ್ರವಾಹ ದಲ್ಲಿ ಸಿಕ್ಕಿ ಮುಳುಗಿ ಹೋಗಿ ನಾಮಾವಶೇಷವಾಗುವುದರಲ್ಲಿ ಸಂಶಯವಿಲ್ಲ.

ಜಾತಿ ವಿಷಯಕ ದುರಭಿಮಾನದ ಪರಮಾವಧಿಯನ್ನು ನೋಡಬೇಕಾದರೆ ನಮ್ಮಲ್ಲಿ ಅಸ್ಪೃಶ್ಯರೆಂದು ತಿಳಿದಿರುವ ದಲಿತ ವರ್ಗದ ಕಡೆಗೆ ಲಕ್ಷ್ಯಹಾಕಬೇಕು. ಪಶುಗಳಿಗಿಂತಲೂ ನೀಚಾವಸ್ಥೆಯಲ್ಲಿ ಅವರನ್ನಿಡಲಾಗಿದೆ. ದೇವರು ಎಲ್ಲ ಕಡೆಗೂ ಸಮದೃಷ್ಟಿಯನ್ನಿಟ್ಟು ಎಲ್ಲ ಜಾತಿಗಳಲ್ಲಿಯೂ ಸಾಧು ಸಂತರು ಉತ್ಪನ್ನರಾಗುವಂತೆ ಮಾಡಿದ್ದಾನೆ. ಆತ್ಮೋದ್ಧಾರ ಮಾಡಿಕೊಳ್ಳಲಿಕ್ಕೆ ಸರ್ವರಿಗೂ ಅಧಿಕಾರವಿರುತ್ತದೆ.

ಹಿಂದುಸ್ಥಾನದೊಳಗೆ ಮಹಾತ್ಮರಾದವರೆಲ್ಲ ಬೇರೆಬೇರೆ ಕುಲಗಳಲ್ಲಿಯೇ ಜನಿಸಿರು ತ್ತಾರೆ. ಅವರುಗಳ ಹೆಸರನ್ನು ಇಲ್ಲಿ ಹೇಳುವ ಆವಶ್ಯಕತೆ ಇರುವದಿಲ್ಲ. ಯಾಕಂದರೆ ಅತ್ಯಂತ ನೀಚ ಜಾತಿಗಳೆಂದು ತಿಳಿದವುಗಳಲ್ಲಿಯೇ ಶ್ರೇಷ್ಠರಾದ ಸಾಧು ಸತ್ಪುರುಷರು ಆಗಿರುತ್ತಾರೆ.

**ಮಹಾಭಾರತ—ಶಾಂತಿಪರ್ವ**

ಕರ್ಮಭಿಃ ಶುಚಿಭಿರ್ದೇವಿ ಶುದ್ಧಾತ್ಮಾ ವಿಜಿತೇಂದ್ರಿಯಃ ।
ಶೂದ್ರೋಪಿ ದ್ವಿಜವತ್ಸೇವ್ಯಃ ಇತಿ ಬ್ರಹ್ಮಾ ಬ್ರವೀತ್ಸ್ವಯಂ ॥

ಸ್ವಭಾವಃ ಕರ್ಮ ಚ ಶುಭಂ ಯತ್ರ ಶೂದ್ರೇಪಿ ತಿಷ್ಠತಿ ।
ವಿಶಿಷ್ಟಃ ಸದ್ವಿಜಾತಿರ್ವೈವಿಜ್ಞೇಯ ಇತಿ ಮೇಮತಿಃ ॥

ನಯೋನಿರ್ನಾಪಿ ಸಂಸ್ಕಾರೋ ನಶ್ರುತಂ ನಚ ಸಂತತಿಃ ।
ಕಾರಣಾನಿ ದ್ವಿಜತ್ವಸ್ಯ ವೃತ್ತಮೇವತು ಕಾರಣಂ ॥

ಸರ್ವೋಯಂ ಬ್ರಾಹ್ಮಣೋ ಲೋಕೇ ವೃತ್ತೇನತು ವಿಧೀಯತೇ ।
ವೃತ್ತೇಸ್ಥಿತಸ್ತು ಶೂದ್ರೋಪಿ ಬ್ರಾಹ್ಮಣತ್ವಂ ನಿಯಚ್ಛತಿ ॥

ಧರ್ಮಾರ್ಥಂ ಜೀವಿತಂ ಯಸ್ಯ ಧರ್ಮೋ ಹರ್ಯರ್ಥಮೇವಚ ।
ಅಹೋರಾತ್ರಿಶ್ಚ ಪುಣ್ಯಾರ್ಥಂ ತಂ ದೇವಾ ಬ್ರಾಹ್ಮಣಂ ವಿದುಃ ॥

ಯೇನಕೇನ ಚಿದಾಚ್ಛನ್ನೋ ಯೇನಕೇನ ಚಿದಾಶಿತಃ ।
ಯತ್ರಕ್ವಚನಶಾವೀಶಾತ್ ತಂ ದೇವಾ ಬ್ರಾಹ್ಮಣಂ ವಿದುಃ ॥

**ಪರಾಶರ ಸ್ಮೃತಿ**

ಸತ್ಯಂ ಬ್ರಹ್ಮ ತಪೋ ಬ್ರಹ್ಮ ಬ್ರಹ್ಮಚೇಂದ್ರಿಯನಿಗ್ರಹಃ ।
ಸರ್ವಭೂತೇ ದಯಾಬ್ರಹ್ಮ ಏತದ್ಬ್ರಾಹ್ಮಣ ಲಕ್ಷಣಂ ॥

**ವಸಿಷ್ಠ ಸ್ಮೃತಿ**

ಯೋಗಸ್ತಪೋ ದಮೋ ದಾನಂ ಸತ್ಯಂ ಶೌಚಂ ದಯಾಕೃತಂ ।
ವಿದ್ಯಾ ವಿಜ್ಞಾನಮಾಸ್ತಿಕ್ಯಂ ಏತದ್ಬ್ರಾಹ್ಮಣ ಲಕ್ಷಣಂ ॥

**ವಸಿಷ್ಠ**

ಸರ್ವತ್ರದಾಂತಾಃ ಕೃತಪೂರ್ಣಕರ್ಣಾ ಜಿತೇಂದ್ರಿಯಾಃ ಪ್ರಾಣಿವಧಾನ್ನಿವೃತ್ತಾಃ ।
ಪ್ರತಿಗ್ರಹೇ ಸಂಕುಚಿತಾಗ್ರಹಸ್ತಾಃ ತೇ ಬ್ರಾಹ್ಮಣಾಸ್ತಾರಯಿತುಂ ಸಮರ್ಥಾಃ ॥

ಅಂದರೆ ಮೇಲೆ ಬರೆದ ಎಲ್ಲ ಶ್ಲೋಕಗಳ ಅಭಿಪ್ರಾಯವು ಕೆಳಗೆ ಬರೆದಂತೆ ಇರುತ್ತದೆ.

ಕ್ರಿಯೆಯಿಂದ ಶುದ್ಧನಾಗಿ ಇಂದ್ರಿಯಗಳನ್ನು ತನ್ನ ಸ್ವಾಧೀನ ಇಟ್ಟುಕೊಂಡಂಥ ಶೂದ್ರನನ್ನೂ ಕೂಡ ಬ್ರಾಹ್ಮಣನಂತೆ ತಿಳಿ. ಅಂದರೆ ಕರ್ಮದಿಂದ ಮತ್ತು ಸ್ವಭಾವದಿಂದ ಶುದ್ಧನಾಗಿದ್ದವನು ಶೂದ್ರನಿದ್ದರೂ ಬ್ರಾಹ್ಮಣರಲ್ಲಿ ಶ್ರೇಷ್ಠನನ್ನಾಗಿ ತಿಳಿ. ಯೋನಿ, ಸಂಸ್ಕಾರ, ವಿದ್ಯೆ, ಸತ್ಕುಲದಲ್ಲಿ ಹುಟ್ಟುವಿಕೆ ಇವುಗಳಿಂದ ಮಾತ್ರ ಬ್ರಾಹ್ಮಣ್ಯ ಅವಲಂಬಿಸಿರುವದಿಲ್ಲ. ಸದಾಚಾರವೇ ನಿಜವಾದ ಬ್ರಾಹ್ಮಣ್ಯದ ಲಕ್ಷಣವಾಗಿರುತ್ತದೆ. ಸದಾಚಾರವು ಶೂದ್ರನಲ್ಲಿದ್ದರೆ ಅವನನ್ನು ಬ್ರಾಹ್ಮಣನೆಂದು ತಿಳಿ. ಯಾವಾತನ ಜೀವನವು ಧರ್ಮಾರ್ಥವಾಗಿರುತ್ತದೆಯೋ ಯಾವನ ಧರ್ಮವು ದೇವನ ಪ್ರೀತಿಯ ಸಲುವಾಗಿ ಇರುತ್ತದೆಯೋ, ಯಾವಾಗಲೂ ಯಾವಾತನು ಪುಣ್ಯಕಾರ್ಯಗಳಲ್ಲಿ ತೊಡಗಿರುತ್ತಾನೆಯೋ ಆತನನ್ನು ದೇವರೂ ಸಹಿತ ಬ್ರಾಹ್ಮಣನೆಂದು ತಿಳಿಯುತ್ತಾನೆ. ಸತ್ಯವೇ ಬ್ರಹ್ಮ, ತಪವೇ ಬ್ರಹ್ಮ, ಇಂದ್ರಿಯನಿಗ್ರಹವೇ ಬ್ರಹ್ಮ, ಎಲ್ಲ ಪ್ರಾಣಿಗಳಲ್ಲಿ ದಯೆ ಇರುವದೇ ಬ್ರಹ್ಮ; ಯೋಗ, ತಪಸ್ಸು, ದಮ, ದಾನ, ಸತ್ಯ, ಶೌಚ, ದಯಾ, ಜ್ಞಾನ, ವಿದ್ಯಾ, ವಿಜ್ಞಾನ, ಭಕ್ತಿಭಾವ ಇವೇ ಬ್ರಾಹ್ಮಣನ ಲಕ್ಷಣಗಳು.

ಮಹಾತ್ಮಾ ಗಾಂಧಿಯವರು ಒಂದು ಸಾರೆ, 'ನಾನು ಹಿಂದೂ ಇರುತ್ತೇನೆಂದು ಹೇಳಲಿಕ್ಕೆ ಅಭಿಮಾನವಾಗುತ್ತದೆ' ಎಂದು ಹೇಳಿದ್ದರು. ಇದಕ್ಕೆ ಕಾರಣವಿಷ್ಟೇ ಇರುವುದು. ಹಿಂದೂ ಧರ್ಮವು ಸಹನಶೀಲತೆಯಲ್ಲಿ ಎಲ್ಲಾ ಧರ್ಮಗಳಿಗಿಂತಲೂ ಮಿಾರಿದ್ದಾಗಿರುತ್ತದೆ. ಮತ್ತು ಜಗತ್ತಿನ ಯಾವ ದೇಶದಲ್ಲಿಯೇ ಆಗಲಿ ಉತ್ಪನ್ನರಾದ ಧರ್ಮಸಂಸ್ಥಾಪಕರ ಧರ್ಮ ತತ್ವಗಳನ್ನು ಮತ್ತು ಅವರ ಉಪದೇಶಗಳನ್ನು ತನ್ನದನ್ನಾಗಿ ಮಾಡಿಕೊಳ್ಳಲಿಕ್ಕೆ ಸಮರ್ಥವೂ, ಸದಾ ಸಿದ್ಧವೂ ಆಗಿರುತ್ತದೆ. ಗೀತೆಯು ಜೀವನ ರಹಸ್ಯವನ್ನು ಹೇಳಿದ ಗ್ರಂಥವು. ಇದು ಅಸ್ಪೃಶ್ಯತೆಗೆ ಮಾನ್ಯತೆ ಕೊಟ್ಟಿರುವುದಿಲ್ಲ. ಚಂಡಾಲನಾಗಲೀ ನನ್ನ (ದೇವರ) ಸ್ಮರಣೆ ಮಾಡಿದರೆ ಪವಿತ್ರನಾಗುತ್ತಾನೆಂದು ಹೇಳಿದೆ. ಜಗತ್ತಿನ ಎಲ್ಲಾ ಪ್ರಾಣಿಗಳಲ್ಲಿಯೂ ಒಂದೇ ಒಂದಾದ ಚೈತನ್ಯವಿರುತ್ತದೆ. ದೇವನಿಂದ ಜೀವನು ಉತ್ಪನ್ನವಾಗಿದ್ದು ಪುನಃ ಆ ಪರಮಾತ್ಮನ ಹತ್ತಿರ ಜೀವವು ಹೋಗುತ್ತದೆ. ಅಂತಃಕರಣವು ಶುದ್ಧವಾಗಿರಬೇಕಲ್ಲದೆ ಬಹಿರಂಗದ ಕೃತಿಗಳು ಉಪಯೋಗ ಬೀಳುವದಿಲ್ಲ. ಇದೇ ಗೀತೆಯ ಸಾರಾಂಶವಾಗಿದೆ. ಈ ಅಸ್ಪೃಶ್ಯತೆಯ ಪದ್ಧತಿಯ ಪರಿಣಾಮವು ಅತ್ಯಂತ ದುಃಖಕಾರಕವಾಗಿದ್ದು ನಮ್ಮ ರಾಷ್ಟ್ರವನ್ನು ಅತ್ಯಂತ ಅವನತಿಗೆ ತರುವಂಥಾದ್ದಾಗಿರುತ್ತದೆ. ಹಿಂದೂ ಧರ್ಮಕ್ಕೆ ಹತ್ತಿದ ಈ ಕಲಂಕವನ್ನು ಮೂಲಸಹಿತವಾಗಿ ಕಿತ್ತುಹಾಕಬೇಕು. ಜಾತಿ ಜಾತಿಗಳಲ್ಲಿಯ ಭೇದವನ್ನು ಮರೆಯಬೇಕು. ನಮ್ಮಲ್ಲಿ ಪರಸ್ಪರ ವಿಶ್ವಾಸ ಹುಟ್ಟಿ ಎಲ್ಲ ಹಿಂದುಗಳೂ ಒಂದೇ ಮತ್ತು ಅವಿಭಕ್ತರಿದ್ದೇವೆಂಬುವ ಭಾವನೆಯು ಪ್ರತಿಯೊಬ್ಬ ಹಿಂದುವಿನಲ್ಲಿಯೂ ಉತ್ಪನ್ನವಾಗಬೇಕು. ಈ ಧರ್ಮದಲ್ಲಿಯ ಅವಿಶ್ವಾಸ, ಅತ್ಯಾಚಾರ, ಅನಾಚಾರ, ಕುಟಿಲಾಚಾರಗಳೆಲ್ಲ ಮಾಯವಾಗಬೇಕು. ಶೃತಿ, ಸ್ಮೃತಿ, ಉಪನಿಷದ್ವಾಕ್ಯಗಳನ್ನು ಸಮನ್ವಯ ಮಾಡುವದು ಶಕ್ಯವಿರುವದಿಲ್ಲ. ದೇಶ ಕಾಲಾನುಗುಣವಾಗಿ ನಡೆಯಬೇಕು. ಕೇವಲ ಶಬ್ದವಾದದಲ್ಲಿ ಯಾವ ತರಹದ ಲಾಭವಿರುವದಿಲ್ಲ. ಜನರಿಗೆ ಮಾನ್ಯವಾದುದೇ ಯೋಗ್ಯ ಧರ್ಮವಾಗುವದು. ಎಲ್ಲಿ ಸ್ಮೃತಿ ಶೃತಿಗಳಲ್ಲಿ ಏಕವಾಕ್ಯತಾ ಇರದೆ ಪರಸ್ಪರ ವಿರೋಧವು ಕಾಣಿಸುತ್ತದೆಯೋ ಅಲ್ಲಿ ದೇಶಾಚಾರ, ಕುಲಾಚಾರಗಳಿಂದಲೇ ಸರಿಪಡಿಸಿ

ಕೊಳ್ಳಬೇಕು. ಹೀಗೆ ನಿರ್ಣಯವಾದುದೇ ಧರ್ಮವೆನಿಸುವುದು. ಸಾಮವೇದೀಯ ವಜ್ರಸೂಚಿಕೋಪನಿಷತ್ತಿನಲ್ಲಿ ಸಂಪೂರ್ಣವಾಗಿ ಇದೇ ವಿಷಯ ಪ್ರತಿಪಾದಿಸಲ್ಪಟ್ಟಿದೆ.

**ಸಾಮವೇದೀಯ—ವಜ್ರಸೂಚಿಕೋಪನಿಷತ್**

**ಆಪ್ಯಾಯಂತ್ವಿತಿ ಶಾಂತಿಃ**

ಓಂ ವಜ್ರಸೂಚೀಂ ಪ್ರವಕ್ಷ್ಯಾಮಿ। ಶಸ್ತ್ರಮಜ್ಞಾನ ಭೇದನಂ।
ದೂಷಣಂ ಜ್ಞಾನಹೀನಾನಾಂ। ಭೂಷಣಂ ಜ್ಞಾನಚಕ್ಷುಷಾಂ॥

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಾ ಇತಿ ಚತ್ವಾರೋ ವರ್ಣಾಸ್ತೇಷಾಂ ವರ್ಣಾನಾಂ ಬ್ರಾಹ್ಮಣ ಏವ ಪ್ರಧಾನ ಇತಿ ವೇದವಚನಾನುರೂಪಂ ಸ್ಮೃತಿಭಿರಪ್ಯುಕ್ತಂ ತತ್ರಚೋದ್ಯಮಸ್ತಿ। ಕೋ ವಾ ಬ್ರಾಹ್ಮಣೋ ನಾಮ। ಕಃ ಜೀವಃ ಕಃ ದೇಹಃ ಕಃ ಜಾತಿಃ ಕಿಂ ಜ್ಞಾನಂ ಕಿಂ ಕರ್ಮಂ ಕಿಂ ಧಾರ್ಮಿಕಂ ಇತಿ ತತ್ರ ಪ್ರಥಮೋ ಜೀವೋ ಬ್ರಾಹ್ಮಣ ಇತಿ ಚೇತ್ತನ್ನ। ಅತೀತಾನಾಗತಾನೇಕ ದೇಹಾನಾಂ ಜೀವಸ್ಯೈಕ ರೂಪ ತ್ವಾತ್। ಏಕಸ್ಯಾಪಿ ಕರ್ಮವಶಾದನೇಕ ದೇಹಸಂಭವಾತ್ಸರ್ವಶರೀರಾಣಾಂ ಜೀವ ಸ್ಯೈಕರೂಪತ್ವಾಚ್ಚ। ತಸ್ಮಾನ್ನಜೀವೋ ಬ್ರಾಹ್ಮಣ ಇತಿ। ತರ್ಹಿದೇಹೋ ಬ್ರಾಹ್ಮಣ ಇತಿ ಚೇತ್ತನ್ನ। ಆಚಾಂಡಾಲಾದಿ ಪರ್ಯಂತಾನಾಂ ಮನುಷ್ಯಾಣಾಂ ಪಾಂಚ ಭೌತಿಕತ್ವೇನ ದೇಹಸ್ಯೈಕರೂಪತ್ವಾಜ್ಜರಾಮರಣ ಧರ್ಮಾಧರ್ಮಾದಿ ಸಾಮ್ಯ ದರ್ಶನಾನ್। ಬ್ರಾಹ್ಮಣ ಶ್ವೇತವರ್ಣಃ ಕ್ಷತ್ರಿಯೋ ರಕ್ತವರ್ಣಃ ವೈಶ್ಯಃ ಪೀತವರ್ಣಃ ಶೂದ್ರಃ ಕೃಷ್ಣವರ್ಣ ಇತಿ ನಿಯಮಾಭಾವಾತ್। ಪಿತ್ರಾದಿ ಶರೀರದಹನೇ ಪುತ್ರಾದೀನಾಂ ಬ್ರಹ್ಮಹತ್ಯಾದಿ ದೋಷಸಂಭವಾಚ್ಚ। ತಸ್ಮಾನ್ನದೇಹೋ ಬ್ರಾಹ್ಮಣ ಇತಿ। ತರ್ಹಿಜಾತಿ ಬ್ರಾಹ್ಮಣ ಇತಿ ಚೇತ್ತನ್ನ। ತತ್ರ ಜಾತ್ಯಂತರೇಷ್ವನೇಕಜಾತಿಸಂಭವಾತ್ ಮಹರ್ಷಯೋ ಬಹವಸ್ಸಂತಿ।

ಋಷ್ಯಶೃಂಗೋ ಮೃಗ್ಯಃ, ಕೌಶಿಕಃ ಕುಶಾತ್, ಜಾಂಬೂಕೋ ಜಂಬುಕಾತ್, ವಾಲ್ಮೀಕೋ ವಲ್ಮೀಕಾತ್, ವ್ಯಾಸಃ ಕೈವರ್ತ ಕನ್ಯಾಯಾಂ ಶತಪೃಷ್ಠಾದ್ಗೌತಮಃ, ವಸಿಷ್ಠಃ ಊರ್ವಶ್ಯಾಂ, ಅಗಸ್ತ್ಯಃ ಕಲಶೇ ಜಾತ ಇತಿ ಶೃತತ್ವಾತ್ ಏತೇಷಾಂ ಜಾತ್ಯಾ ವಿನಾಪಿ ಅಗ್ರೇ ಜ್ಞಾನಪ್ರತಿಪಾದಿತಾ ಋಷಯೋ ಬಹವಸ್ಸತಿ, ತಸ್ಮಾನ್ನಜಾತಿ ಬ್ರಾಹ್ಮಣ ಇತಿ। ತರ್ಹಿಜ್ಞಾನಂ ಬ್ರಾಹ್ಮಣ ಇತಿ ಚೇತ್ತನ್ನ। ಕ್ಷತ್ರಿಯಾದಯೋಪಿ ಪರಮಾರ್ಥ ದರ್ಶಿನೋಽಭಿಜ್ಞಾ ಬಹವಸ್ಸಂತಿ। ತಸ್ಮಾನ್ನಜ್ಞಾನಂ ಬ್ರಾಹ್ಮಣ ಇತಿ। ತರ್ಹಿ ಕರ್ಮಬ್ರಾಹ್ಮಣ ಇತಿ ಚೇತ್ತನ್ನ। ಸರ್ವೇಷಾಂ ಪ್ರಾಣಿನಾಂ ಪ್ರಾರಬ್ಧ, ಸಂಚಿತಾಗಾಮಿ ಕರ್ಮಸಾಧರ್ಮ್ಯ ದರ್ಶನಾತ್ ಕರ್ಮಾಭಿಪ್ರೇರಿತಾಸ್ಸಂತೋಜನಾಃ ಕ್ರಿಯಾಃ ಕುರ್ವಂತೀತಿ। ತಸ್ಮಾನ್ನಕರ್ಮಬ್ರಾಹ್ಮಣ ಇತಿ। ತರ್ಹಿ ಧಾರ್ಮಿಕೋ ಬ್ರಾಹ್ಮಣ ಇತಿ ಚೇತ್ತನ್ನ। ಕ್ಷತ್ರಿಯಾದಯೋ ಹಿರಣ್ಯದಾತಾರೋ ಬಹವಸ್ಸಂತಿ। ತಸ್ಮಾನ್ನಧಾರ್ಮಿಕೋ ಬ್ರಾಹ್ಮಣ ಇತಿ। ತರ್ಹಿಂ ಕೋವಾ ಬ್ರಾಹ್ಮಣೋ ನಾಮ। ಯಃ ಕಶ್ಚಿದಾತ್ಮಾನಮದ್ವಿತೀಯಂ ಜಾತಿ, ಗುಣ, ಕ್ರಿಯಾ ಹೀನಂ, ಷಡೂರ್ಮಿ ಷಡ್ಭಾವೇತ್ಯಾದಿ ಸರ್ವದೋಷ ರಹಿತಂ ಸತ್ಯಜ್ಞಾನಾನಂದಾನಂತಸ್ವರೂಪಂ ಸ್ವಯಂ ನಿರ್ವಿಕಲ್ಪಮಶೇಷಕಲ್ಪಾಧಾರಮಶೇಷಭೂತಾಂತರ್ಯಾಮಿತ್ವೇನ ವರ್ತಮಾನಮಂತ

ರ್ಬಹಿಶ್ಚಾಕಾಶವದನುಸ್ಯೂತಮಖಂಡಾನಂದಸ್ವಭಾವಮಪ್ರಮೇಯಮನುಭವೈಕವೇದ್ಯ ಮಪರೋಕ್ಷತಯಾಭಾಸಮಾನಂ ಕರತಲಾಮಲಕವತ್ಸಾಕ್ಷಾದಪರೋಕ್ಷೀಕೃತ್ಯಕೃತಾರ್ಥ ತಯಾ ಕಾಮರಾಗಾದಿ ದೋಷರಹಿತ ಶ್ಯಮಾದಿ ಸಂಪನ್ನೋಭಾವ ಮಾತ್ಸರ್ಯ ತೃಷ್ಣಾ ವ್ಯಾಮೋಹಾದಿರಹಿತೋ ದಂಭಾಹಂಕಾರಾದಿಭಿರಸಂಸ್ಪೃಷ್ಟ ಚೇತಾವರ್ತತೇ। ಏವಮುಕ್ತ ಲಕ್ಷಣೋ ಯಸ್ಸಏವ ಬ್ರಾಹ್ಮಣ ಇತಿ ಶೃತಿ-ಸ್ಮೃತಿ-ಪುರಾಣೇತಿಹಾಸಾನಾಮಭಿಪ್ರಾಯಃ। ಅನ್ಯಥಾ ಬ್ರಾಹ್ಮಣತ್ವ ಸಿದ್ಧಿರ್ನಾಸ್ತ್ಯೇವ। ಸಚ್ಚಿದಾನಂದಮಾತ್ಮಾನಮದ್ವಿತೀಯಂ ಬ್ರಹ್ಮ ಭಾವಯೇದಾತ್ಮಾನಂ ಸಚ್ಚಿದಾನಂದಂ ಬ್ರಹ್ಮಭಾವ ಯದಿತ್ಯುಪನಿಷತ್—ಆಪ್ಯಾಯಂ ತ್ವಿತಿ ಶಾಂತಿಃ ॥

॥ ಓಂ ತತ್ಸತ್ ॥

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂದು ನಾಲ್ಕು ವರ್ಣಗಳಿರುತ್ತವೆ. ಈ ವರ್ಣಗಳಲ್ಲಿ ಬ್ರಾಹ್ಮಣನೇ ಪ್ರಧಾನನೆಂದು ವೇದವಚನಾನುಸಾರವಾಗಿ ಸ್ಮೃತಿಗಳೂ ಕೂಡ ಹೇಳುತ್ತವೆ. ಇಲ್ಲಿ ಒಂದು ಆಶ್ಚರ್ಯವಿರುತ್ತದೆ.

ಬ್ರಾಹ್ಮಣನೆಂದರೆ ಯಾರು? ಜೀವನೇ, ದೇಹವೇ, ಜಾತಿಯೇ? ಜ್ಞಾನವೇ ಕರ್ಮವೇ, ಧಾರ್ಮಿಕವೇ ಇವುಗಳಲ್ಲಿ ಯಾವುದಕ್ಕೆ ಬ್ರಾಹ್ಮಣನೆಂದು ಹೆಸರು? ಇವುಗಳಲ್ಲಿ ಜೀವವೇ ಬ್ರಾಹ್ಮಣನೆಂದರೆ ಆಗುವದಿಲ್ಲ. ಅನೇಕ ದೇಹಗಳಲ್ಲಿ (ಅತೀತಾ ನಾಗತ) ಜೀವವು ಒಂದೇ ರೂಪವಾಗಿರುವುದರಿಂದಲೂ, ಒಂದೇ ಜೀವಕ್ಕೆ ಕರ್ಮ ವಶದಿಂದ ಬೇರೆಬೇರೆ ದೇಹಗಳುಂಟಾಗುವದರಿಂದಲೂ ಎಲ್ಲ ಶರೀರಗಳಲ್ಲಿ ಒಂದೇ ಆದ ಜೀವಕ್ಕೆ ಬ್ರಾಹ್ಮಣನೆಂದು ಹೇಳಲಿಕ್ಕೆ ಬರುವುದಿಲ್ಲ. ಹಾಗಾದರೆ ದೇಹಕ್ಕೆ ಹೇಳೋಣ ವೆಂದರೆ ಬ್ರಾಹ್ಮಣನ ಮೊದಲು ಚಂಡಾಲನವರೆಗೆ ಎಲ್ಲ ಮನುಷ್ಯರ ಶರೀರಗಳು ಪಂಚ ಭೌತಿಕವಾಗಿರುವದರಿಂದಲೂ ಮತ್ತು ಜರಾಮರಣ, ಧರ್ಮಾಧರ್ಮಾದಿಗಳೆಲ್ಲ ಎಲ್ಲ ಶರೀರಗಳಲ್ಲಿ ಸಾಮ್ಯ ಕಾಣುವದರಿಂದಲೂ, ಬ್ರಾಹ್ಮಣನು ಬಿಳಿಯ ವರ್ಣದವನು, ಕ್ಷತ್ರಿಯನು ರಕ್ತವರ್ಣದವನು, ವೈಶ್ಯನು ಹಳದಿ ವರ್ಣದವನು, ಶೂದ್ರನು ಕಪ್ಪು ವರ್ಣದವನು ಎಂಬುವ ನಿಯಮವು ಇರುವದಿಲ್ಲ. ಪಿತ್ರಾದಿಗಳ ಶರೀರ ದಹನದಲ್ಲಿ ಪುತ್ರಾದಿಗಳಿಗೆ ಬ್ರಹ್ಮಹತ್ಯಾದಿ ದೋಷವುಂಟಾಗುವದರಿಂದಲೂ ದೇಹವು ಬ್ರಾಹ್ಮಣ ವಲ್ಲವು.

ಜಾತಿಗೆ ಬ್ರಾಹ್ಮಣವೆಂದು ಹೇಳೋಣವೆಂದರೆ ಅದೂ ಆಗಲಾರದು. ಯಾಕಂದರೆ ಜಾತಿಗಳ ಮಧ್ಯದಲ್ಲಿ ಅನೇಕ ಜಾತಿಗಳಿವೆ. ಮಹರ್ಷಿಗಳೂ ಬಹಳ ಜನರಿದ್ದಾರೆ. "ಋಷ್ಯಶೃಂಗೋ ಮೃಗ್ಯಃ, ಕೌಶಿಕಃ ಕುಶಾತ್, ಜಾಂಬೂಕೋ ಜಂಬುಕಾತ್, ವಾಲ್ಮೀಕೋ ವಲ್ಮೀಕಾತ್, ವ್ಯಾಸಃ ಕೈವರ್ತ ಕನ್ಯಾಯಾಂ, ಶಶಪೃಷ್ಠಾತ್ ಗೌತಮಃ, ವಸಿಷ್ಠಃ ಊರ್ವಶ್ಯಾಂ, ಅಗಸ್ತ್ಯಃ ಕಲಶೇ ಜಾತ ಇತಿ ಶೃತತ್ವಾತ್" ಅಂದರೆ ಋಷ್ಯ ಶೃಂಗನು ಎರಳೆಯಲ್ಲಿ, ಕೌಶಿಕನು ದರ್ಭೆಯಿಂದ, ಜಂಬೂಕನು ನರಿಯಿಂದ, ವಲ್ಮೀಕಿಯು ಬೇಡನಿಂದ, ವ್ಯಾಸನು ಬೋವೆಯರ ಕನ್ನಿಕೆಯಿಂದ, ಗೌತಮನು ಮೊಲದಲ್ಲಿ, ವಸಿಷ್ಠನು ಊರ್ವಶಿಯಲ್ಲಿ, ಅಗಸ್ತ್ಯನು ಕೊಡದಲ್ಲಿ ಹುಟ್ಟಿರುವರೆಂದು ಕೇಳಲಾಗಿದೆ. ಇವರುಗಳು ಜಾತಿ ಇಲ್ಲದಲೆ ಜ್ಞಾನಪ್ರತಿಪಾದಿತ ಋಷಿಗಳಾಗಿರುತ್ತಾರೆ. ಆದ್ದರಿಂದ ಜಾತಿಗೆ ಬ್ರಾಹ್ಮಣವೆಂದು ಹೇಳಲಿಕ್ಕೆ ಬರುವದಿಲ್ಲ. ಹಾಗಾದರೆ ಜ್ಞಾನಕ್ಕೆ ಬ್ರಾಹ್ಮಣ

ವೆಂದು ಹೇಳೋಣವೆಂದರೆ ಕ್ಷತ್ರಿಯಾದಿಗಳಲ್ಲಿ ಅನೇಕರು ಜ್ಞಾನಸಂಪನ್ನರಾಗಿರುತ್ತಾರೆ. ಆದ್ದರಿಂದ ಜ್ಞಾನಕ್ಕೆ ಬ್ರಾಹ್ಮಣವೆಂದು ಹೇಳಲಿಕ್ಕಾಗುವುದಿಲ್ಲ. ಕರ್ಮಕ್ಕೆ ಬ್ರಾಹ್ಮಣ ವೆಂದು ಹೇಳೋಣವೆಂದರೆ ಅದೂ ಆಗುವುದಿಲ್ಲ. ಯಾಕಂದರೆ ಎಲ್ಲ ಪ್ರಾಣಿಗಳಿಗೂ ಪ್ರಾರಬ್ಧ, ಸಂಚಿತ, ಆಗಾಮಿ ಕರ್ಮಗಳ ಸಾದೃಶ್ಯವಿರುತ್ತದೆ. ಕರ್ಮಗಳಿಂದ ಪ್ರೇರಿತರಾದ ಸಜ್ಜನರು ಕಾರ್ಯಗಳನ್ನು ಮಾಡುತ್ತಾರೆ. ಆದ್ದರಿಂದ ಕರ್ಮವು ಬ್ರಾಹ್ಮಣವಲ್ಲ. ಧಾರ್ಮಿಕಕ್ಕೆ ಬ್ರಾಹ್ಮಣವೆಂದು ಹೇಳೋಣವೆಂದರೆ ಅದೂ ಸಿದ್ಧಿ ಯಾಗಲಾರದು. ಕ್ಷತ್ರಿಯಾದಿಗಳೂ ಕೂಡ ಬಂಗಾರ ಮೊದಲಾದವುಗಳನ್ನು ಕೊಡ ತಕ್ಕವರಾಗಿದ್ದಾರೆ. ಆದ್ದರಿಂದ ಧಾರ್ಮಿಕವು ಬ್ರಾಹ್ಮಣವಲ್ಲವು. ಹಾಗಾದರೆ ಯಾವನು ಬ್ರಾಹ್ಮಣನು—ಯಾವಾತನ ಆತ್ಮವು ಅದ್ವಿತೀಯವಾಗಿಯೂ, ಜಾತಿ, ಗುಣ, ಕ್ರಿಯಾ ಹೀನನಾಗಿಯೂ, ಷಡೂರ್ಮಿ, ಷಡ್ಭಾವ ಮೊದಲಾದ ಸರ್ವದೋಷ ರಹಿತವಾಗಿಯೂ, ಸತ್ಯ, ಜ್ಞಾನ, ಆನಂದಾದಿ ಸ್ವರೂಪವುಳ್ಳದ್ದಾಗಿಯೂ, ನಿರ್ವಿಕಲ್ಪವಾಗಿಯೂ, ಎಲ್ಲ ಪ್ರಾಣಿಗಳ ಅಂತರ್ಯಾಮಿಯಾಗಿರುವುದರಿಂದಲೂ, ಒಳಗೂ ಹೊರಗೂ ಆಕಾಶದಂತೆ ಪವಿತ್ರವಾಗಿಯೂ, ಅಖಂಡಾನಂದಸ್ವಭಾವದಿಂದ ಕೂಡಿದ್ದಾಗಿಯೂ, ಉಪಮಾತೀತ ವಾಗಿಯೂ, ಅನುಭವದಿಂದ ತಿಳಿಯಲು ಯೋಗ್ಯವಾಗಿಯೂ, ಪ್ರತ್ಯಕ್ಷವಾಗಿ ಹೊಳೆಯ ತಕ್ಕದ್ದಾಗಿಯೂ, ಹಸ್ತದಲ್ಲಿರುವ ನೆಲ್ಲಿಕಾಯಿಯಂತೆ ಕೃತಾರ್ಥತ್ವದಿಂದ ಕಾಮರಾಗಾದಿ ದೋಷರಹಿತವಾಗಿಯೂ, ಶಮದಮಾದಿ ಗುಣಸಂಪನ್ನವಾಗಿಯೂ, ಮಾತ್ಸರ್ಯ, ತೃಷ್ಣಾ, ಆಶಾ, ಮೋಹಾದಿ ಗುಣಗಳಿಂದ ರಹಿತವಾಗಿಯೂ, ದಂಭ ಅಹಂಕಾರಾದಿ ಗಳಿಂದ ಮುಟ್ಟದವನಾಗಿಯೂ, ಅಂದರೆ ಇಂತಿಷ್ಟು ಲಕ್ಷಣಗಳಿಂದ ಕೂಡಿದವನೇ ಬ್ರಾಹ್ಮಣನೆಂಬುದಾಗಿ ಶೃತಿ ಪುರಾಣೇತಿಹಾಸಗಳ ಅಭಿಪ್ರಾಯವಾಗಿರುತ್ತದೆ. ಹೀಗಲ್ಲ ದಿದ್ದರೆ ಬ್ರಾಹ್ಮಣತ್ವದ ಸಿದ್ಧಿಯೇ ಇರುವದಿಲ್ಲ. ಸಚ್ಚಿದಾನಂದಸ್ವರೂಪವಾದ ಆತ್ಮ ನಲ್ಲಿಯೇ ಬ್ರಹ್ಮಭಾವವನ್ನಿಡಬೇಕೆಂಬುವದೇ ಉಪನಿಷತ್ತಿನ ರಹಸ್ಯವಾಗಿರುತ್ತದೆ.

॥ ಆಪ್ಯಾಯಂತ್ವಿತಿ ಶಾಂತಿಃ ॥

ಮೇಲಿನ ವಿಷಯಗಳನ್ನೆಲ್ಲಾ ಚೆನ್ನಾಗಿ ಓದಿ ಆಳವಾಗಿ ವಿಚಾರಿಸಿ ನೋಡಿದರೆ ಗುಣಕ್ಕೆ ಪ್ರಾಧಾನ್ಯವಿದ್ದು ಜಾತಿಗೆ ಯಾವ ಮಹತ್ವವೂ ಇಲ್ಲವೆಂದು ಸಿದ್ಧವಾಗುತ್ತದೆ. ಆದರೆ ಬಸವಾದಿ ಶರಣರು ಧೈರ್ಯದಿಂದ ಎದುರಿಸಿ ಕೃತಿಯಲ್ಲಿ ತಂದಿರುತ್ತಾರೆ. ಇದರಿಂದ ಪ್ರಮಥಪುಂಗವರಾದ ಬಸವಣ್ಣನವರೇ ಮೊದಲಾದ ಶರಣರಿಗೆ ಅತ್ಯಂತ ಗೌರವವು ಸಿಕ್ಕಿರುತ್ತದೆ. ಬಸವಣ್ಣನವರು ವೀರಶೈವ ಸಮಾಜವು ಜಗತ್ತಿನಲ್ಲಿ ತಲೆ ಎತ್ತಿ ಮೆರೆಯುವಂತೆ ಮಾಡಿದರೂ ಅವರ ಅನುಯಾಯಿಗಳು ಅದರಂತೆ ನಡೆಯದೆ ತಮ್ಮ ತಮ್ಮ ಪಂಗಡಗಳನ್ನೇ ಬೇರೆ ಬೇರೆ ಜಾತಿಗಳನ್ನಾಗಿ ಮಾಡಿಕೊಂಡಿರುವುದು ಶಾಸ್ತ್ರಕ್ಕೂ, ರೂಢಿಗೂ ವಿರುದ್ಧವಾದುದಾಗಿರುತ್ತದೆ. ಶ್ರೀ ಬಸವಣ್ಣನವರ ಧಾರ್ಮಿಕ ಕ್ರಾಂತಿಗೆ ಕೊನೆಯ ಮೆಟ್ಟಲೆಂದರೆ ಹರಳಯ್ಯ ಮಧುವಯ್ಯಗಳ ಕಥೆಯಾಗಿರುತ್ತದೆ.

ಇಲ್ಲಿಗೆ ಶರಣರ ಅವತಾರ ಸಮಾಪ್ತಿಯೂ, ವೈಭವಯುಕ್ತವಾದ ಬಿಜ್ಜಳ ರಾಜನ ರಾಜ್ಯದ ನಾಶವೂ ಆಯಿತೆನ್ನಬಹುದು. ಈ ಹರಳಯ್ಯ ಮಧುವಯ್ಯಗಳ ಐತಿಹಾಸಿಕ ಪ್ರಸಿದ್ಧವಾದ ಕಥೆಯು ಅತ್ಯಂತ ರೋಮಾಂಚಕಾರಿಯೂ, ಕೆಲವರಿಗೆ ದಿಗ್ಭ್ರಮೆಯನ್ನು ಹುಟ್ಟಿಸತಕ್ಕದ್ದೂ ಆಗಿರುತ್ತದೆ. ಈ ಕಥೆಯು ವೀರಶೈವ ಧಾರ್ಮಿಕ ಗ್ರಂಥಗಳಲ್ಲಿ

ಅಲ್ಲಲ್ಲಿ ಬರುತ್ತದೆ. ಹರಳಯ್ಯನವರು ಮೊಚ್ಚಿಯ ಕಾಯಕವನ್ನು ಮಾಡುತ್ತಿದ್ದ ಶಿವಶರಣರು. ಇವರು ಕಲ್ಯಾಣ ಪಟ್ಟಣದಲ್ಲಿ ವಾಸವಾಗಿದ್ದು ಶರಣರಿಗೆ ಜೋಡುಗಳನ್ನು ಮಾಡಿಕೊಡುತ್ತ ತಮ್ಮ ಕಾಯಕವನ್ನು ನಡೆಸುತ್ತಿದ್ದರು. ಮಧುವಯ್ಯನವರು ಬಿಜ್ಜಳ ರಾಜನಲ್ಲಿ ಪ್ರಧಾನ ಸೇನಾಪತಿಗಳಾಗಿ ಕಾರ್ಯವನ್ನು ಮಾಡುತ್ತಿದ್ದ ಬ್ರಾಹ್ಮಣ ಶ್ರೇಷ್ಠರಾಗಿದ್ದರು. ಇವರಿಬ್ಬರೂ ವೀರಶೈವ ದೀಕ್ಷೆಯನ್ನು ಪಡೆದು ಪರಸ್ಪರ ಬೀಗತನವನ್ನು ಮಾಡಿದರು.

ರೆವರೆಂಡ್ ಉತ್ತಂಗಿ ಚನ್ನಪ್ಪನವರು ಹರಳಯ್ಯ ಮಧುವಯ್ಯಗಳ ಕಥೆ ಎಂಬುವ ಪುಸ್ತಕದಲ್ಲಿ ಚೆನ್ನಾಗಿ ಈ ಕಥೆಯನ್ನು ಚಿತ್ರಿಸಿರುವರು. ಹರಳಯ್ಯನವರು ವಿಜಾಪುರ ಜಿಲ್ಲೆಗೆ ಸೇರಿದವರು. ಮಧುವರಸರು ಸೊನ್ನಲಾಪುರ ಜಿಲ್ಲೆಯವರಾಗಿದ್ದರು. ಹರಳಯ್ಯನವರು ತಮ್ಮ ಕಾಯಕದಿಂದ ಬಂದ ಹಣದಿಂದ ಪ್ರತಿನಿತ್ಯ ಜಂಗಮತೃಪ್ತಿಯನ್ನು ಮಾಡಿಸುತ್ತ ತಮ್ಮ ಕಾಲವನ್ನು ಕಳೆಯುತ್ತಿದ್ದರು. ಒಂದು ದಿವಸ ಹರಳಯ್ಯನವರು ತಮ್ಮ ಕನಸಿನಲ್ಲಿ ಬಸವಣ್ಣನವರನ್ನು ಕಂಡರು. ಈ ವಿಷಯವನ್ನು ಅವರು ಯಾರಿಗೂ ಹೇಳಲಿಲ್ಲ. ಇದು ಬಸವಣ್ಣನವರಿಗೆ ಮಾತ್ರ ಗೊತ್ತಾಗಿದ್ದಿತು. ಒಂದು ದಿನ ಬಸವಣ್ಣನವರು ಅರಮನೆಯಿಂದ ತಮ್ಮ ಮಹಾಮನೆಗೆ ಅವಸರದಿಂದ ದಯಮಾಡಿಸುವ ಕಾಲದಲ್ಲಿ ಹರಳಯ್ಯನವರು ಅವರನ್ನು ಕಂಡು, ಭಕ್ತಿಭಂಡಾರಿಗಳಾದ ಮಹಾನುಭಾವರೇ ಈ ದೀನನನ್ನು ಉದ್ಧರಿಸಬೇಕೆಂದು ಶರಣು ಮಾಡಿದರು. ಹರಳಯ್ಯನವರು ಮಾಡಿದ ಶರಣಕ್ಕೆ ಪ್ರತಿಯಾಗಿ ಶ್ರೀ ಬಸವಣ್ಣನವರು ಶರಣು ಶರಣು ಎಂದು ಎರಡು ಸಾರೆ ತಮ್ಮ ಸೌಜನ್ಯಕ್ಕನುಗುಣವಾಗಿ ನುಡಿದರು. ಇದನ್ನು ಕೇಳಿ ಹರಳಯ್ಯನವರಿಗೆ ಬಹಳ ಆಶ್ಚರ್ಯವಾಯಿತು. ಏಕೆಂದರೆ ಬಸವಣ್ಣನವರು ಬಿಜ್ಜಳನ ೧೮ ಜನ ಮಂತ್ರಿಗಳಲ್ಲಿ ಮುಖ್ಯಮಂತ್ರಿಗಳಾಗಿದ್ದರಲ್ಲದೆ ಅವರು ಬಹಳ ದೊಡ್ಡ ಸ್ಥಾನದಲ್ಲಿ ಇದ್ದರು. ಅವರ ಧಾರ್ಮಿಕ ಪ್ರಭೆಯು ರಾಜಕೀಯ ಪ್ರಭೆಗಿಂತ ನೂರ್ಮಡಿ ಹೆಚ್ಚಾಗಿ ಇದ್ದಿತು. ಇಂತಹ ಮೇಲಿನ ಸ್ಥಾನದಲ್ಲಿದ್ದ ಬಸವಣ್ಣನವರು ಎರಡು ಸಾರೆ ಶರಣು ಎಂದುದು ಆಶ್ಚರ್ಯವನ್ನುಂಟುಮಾಡಿದುದು ಸಹಜವಾದುದಾಗಿದೆ. ಇಷ್ಟರೊಳಗಾಗಿ ದೇಶದೇಶಾಂತರಗಳಲ್ಲಿ ಅವರ ಕೀರ್ತಿಯು ಹಬ್ಬಿ ಅನೇಕ ಮಹಾಜನಗಳು ತಂಡೋಪತಂಡವಾಗಿ ಬರುತ್ತಿದ್ದರು. ಭಕ್ತಿಭಂಡಾರಿಗಳೆಂದು ಲೋಕದಲ್ಲಿ ಡಂಗುರ ಸಾರಿ ಹೋಗಿದ್ದಿತು. ನಾನೊಬ್ಬ ಬಡ ಮೊಚ್ಚೆಗಾರ. ಇಂತಹ ಲೋಕವಿಖ್ಯಾತರಾದ ಬಸವಣ್ಣನವರು ಎರಡು ಸಾರೆ ಶರಣು ಮಾಡಿದುದು ನನಗೆ ಬಹಳ ಕೇಡುಕೆಂದು ಹರಳಯ್ಯನವರು ಮನದಲ್ಲಿ ಮರಮುರನೆ ಮರುಗಿದರು. ಗರ್ವಿಷ್ಠರಾದ ಜನಗಳಿಗೆ ಎಷ್ಟುಸಾರೆ ನಮಸ್ಕಾರ ಮಾಡಿದರೂ ತೃಪ್ತಿ ಇರುವದಿಲ್ಲ. ಭಕ್ತಿಸಂಪನ್ನರಾದ ಸಜ್ಜನರಿಗೆ ಇದು ಮಾತ್ರ ಸರಿದೋರುವದಿಲ್ಲ. ಆದ್ದರಿಂದಲೇ ಬಸವಣ್ಣನವರು ಒಂದು ಕಡೆಯಲ್ಲಿ "ಹೊಗಳಿ ಹೊಗಳಿ ಎನ್ನನ್ನು ಹೊನ್ನಶೂಲಕ್ಕಿಕ್ಕಿದರಯ್ಯ...." ಎಂದು ಅಂದಿರುವರು. ಹೀಗೆ ಅಂದಿರುವ ಬಸವಣ್ಣನವರ ನುಡಿಗಳನ್ನು ಕೇಳಿ ಆಶ್ಚರ್ಯಚಕಿತರಾಗಿ ನಿಂತುಕೊಂಡಿದ ಹರಳಯ್ಯನವರನ್ನು ನೋಡಿ ಅವರ ಧರ್ಮಪತ್ನಿಯುವರಾದ ಕಲ್ಯಾಣಮ್ಮನವರು ಹೀಗೇಕೆ ನಿಂತಿರುವಿರಿ ಎಂದು ಕೇಳಲು, ನಡೆದ ಸಂಗತಿಗಳನ್ನು ಪತ್ನಿಗೆ ಹೇಳಿದರು. ಆಗ ಕಲ್ಯಾಣಮ್ಮನವರು—ನೀವು ಒಂದು ಜತಿ ಉತ್ತಮ ಜೋಡುಗಳನ್ನು ನಮ್ಮಿಬ್ಬರ

ತೊಡೆಯು ತೊಗಲಿನಿಂದ ಸಿದ್ಧಪಡಿಸಿ ಪ್ರತಿ ರೂಪುಗಳನ್ನು ಒಳಗೆ ಜೋಡಿಸಿ ಅವರಿಗೆ ಕೊಡಬೇಕು. ಅವರು ಅವುಗಳನ್ನು ಮೆಟ್ಟಿದರೆ ನಮ್ಮಿಬ್ಬರ ಜನ್ಮ ಸಾರ್ಥಕವಾಗುವದು ಎಂದು ಹೇಳಿದರು. ಯಾಕಂದರೆ ನಾವು ಅವರ ಪಾದದ ಕೆಳಗಡೆ ಆಗುತ್ತೇವೆ. ನಮ್ಮ ಪಾಪವೆಲ್ಲ ಪರಿಹಾರವಾಗುತ್ತದೆ—ಹೀಗೆ ಅವಳು ಹೇಳಿದಂತೆ ಹರಳಯ್ಯನವರು ಜೋಡು ಗಳನ್ನು ಸಿದ್ಧಪಡಿಸಿ ಅವಳಿಗೆ ತೋರಿಸಲು ಸಂತೋಷಪಟ್ಟು, ಕೂಡಲೇ ಚಿಂತಾಕ್ರಾಂತ ಳಾಗಿ, ಇದರಿಂದ ಮುಂದೆ ನಿಮಗೆ ಕೇಡುಂಟು; ಕಲ್ಯಾಣವು ಹಾಳಾಗುವುದೆಂದು ಭವಿಷ್ಯ ನುಡಿದಳು. ಈ ಹೆಂಗಸಿನ ಮಾತೇನೆಂದು ಹರಳಯ್ಯನವರು ಆ ಜೋಡು ಗಳನ್ನು ತೆಗೆದುಕೊಂಡು ಶಿವಾನುಭವ ಮಂಟಪಕ್ಕೆ ಹೋದರು. ಅಲ್ಲಿ ಶರಣರೆಲ್ಲರೂ ಈ ದಂಪತಿಗಳನ್ನು ಆದರದಿಂದ ಬರಮಾಡಿಕೊಂಡರು. ಆಗ ಕಲ್ಯಾಣಮ್ಮನವರು, "ಬಸವಣ್ಣನವರೇ, ಇನ್ನು ಸ್ವಲ್ಪ ದಿವಸಗಳಲ್ಲಿ ತಾವು ಕಲ್ಯಾಣವನ್ನು ಬಿಟ್ಟುಹೋಗು ತ್ತೀರಿ; ಮರಳಿ ಬರುವದಿಲ್ಲ. ಆಮೇಲೆ ವೀರಬಸವಂತನು ಬರುವನು. ರಾಕ್ಷಸನಾಮ ಸಂವತ್ಸರದ ಆಷಾಢ ಶುದ್ಧ ಏಕಾದಶಿ ಸೋಮವಾರ ಸಂಗಮನೊಳು ಐಕ್ಯವಾಗುವದು. ಅಲ್ಲಿಂದ ಒಂದು ವರ್ಷದೊಳಗೆ ಬಿಜ್ಜಳನ ವಧೆಯಾಗುವದು. ಆಗ ಪ್ರಮಥರೆಲ್ಲ ಕಲ್ಯಾಣ ಬಿಟ್ಟು ಬೇರೆ ಬೇರೆ ಕಡೆಗೆ ಹೋಗುವರು" ಎಂದು ಹೇಳಿದ ನಂತರ ಸತಿಪತಿ ಗಳಿಬ್ಬರೂ ತಮ್ಮ ಮನೆಗೆ ತೆರಳಿದರು. ಆಮೇಲೆ ಆ ಜೋಡುಗಳನ್ನು ಬಸವಣ್ಣನವರಿಗೆ ಕೊಡಬೇಕೆಂದು ಅವರ ಮನೆಗೆ ಹೋದರು. ಶ್ರೀ ಬಸವರಾಜದೇವರು ಅವರಿಗೆ ದರ್ಶನವನ್ನು ಕೊಟ್ಟು ಹರಳಯ್ಯನವರನ್ನು ಬಿಗಿದಪ್ಪಿಕೊಂಡರು. ಆಗ ಹರಳಯ್ಯ ನವರು ನಾನು ಹೊಲೆಯ, ತಾವು ಶ್ರೇಷ್ಠರಾದ ಶಿವಭಕ್ತರು, ನನ್ನನ್ನು ಅಪ್ಪಿಕೊಳ್ಳ ಬಹುದೇ ಎನ್ನಲು ಅದಕ್ಕೆ ಬಸವಣ್ಣನವರು ಯೋನಿಜವಾದೀ ಜಗವು ಹೊಲೆಯ ಮಾರ್ಗವನ್ನು ಬಿಟ್ಟು ತಲೆಯಲ್ಲಿ ಹುಟ್ಟುವದೇ? ಲೋಕದಲ್ಲಿ ಹೊಲೆ ಇಲ್ಲದ ಕುಲವೇ ಇಲ್ಲ. ಹೀಗಿರುವುದರಿಂದ ನಿಮಗೆ ಹೊಲೆಯರೆಂದೇಕೆ ಅಂದುಕೊಳ್ಳುವಿರಿ? ರಕ್ತ ಮಾಂಸದಿಂದಾದ ಪಿಂಡವು ಹೊಲೆಯಲ್ಲಿಯೇ ಬೆಳೆದು ಬಲಿಯುವದು. ಕಶ್ಯಪ, ಅಗಸ್ತ್ಯ, ಕೌಂಡಿನ್ಯ, ವಸಿಷ್ಠಾದಿಗಳು ಕೀಳು ಕುಲದಲ್ಲಿ ಹುಟ್ಟಿರುವದಿಲ್ಲವೇ? ಮಲ ಹರನ ಭಕ್ತರಿಗೆ ಕುಲವಿಲ್ಲ. ಬಂಗಾರವು ತಿಪ್ಪೆಯೊಳಗೆ ಬಿದ್ದಿದ್ದರೆ ನೋಡಿದವರು ಅದನ್ನು ತೆಗೆದುಕೊಳ್ಳದೆ ಬಿಡುವರೇ? ಪರುಷವು ಮಣ್ಣಿನೊಳಗೆ ಬಿದ್ದಿರಲು ರತ್ನಗಳ ಪರೀಕ್ಷಕನು ಅದನ್ನು ತೆಗೆದುಕೊಳ್ಳದೆ ಬಿಡುವನೇ? ಎಂದು ಹೇಳಿ, ನೀಲಾಂಬಿಕೆ ಯವರನ್ನು ಕರೆಯಿಸಿ ಹರಳಯ್ಯನವರಿಗೆ ನಮಸ್ಕಾರ ಮಾಡಿಸಿದರು. ಆಗ ಹರಳಯ್ಯ ನವರು ದೂರ ಸರಿದು, ತಾಯಿ, ಬೇಡ ಬೇಡ. ತಮ್ಮ ಪ್ರಸಾದವನ್ನು ನನಗೆ ಕೊಡಿರಿ ಮತ್ತು ಬಸವರಸರೇ ತಾವು ಈ ಜೋಡುಗಳನ್ನು ತೆಗೆದುಕೊಳ್ಳಿರಿ ಎಂದು ಹೇಳಲು, ಅದರಲ್ಲಿರತಕ್ಕ ಶರಣ ಶರಣೆಯರ ಚಿತ್ರಗಳನ್ನು ನೋಡಿ ಈ ಶರಣರನ್ನು ತುಳಿದು ನಾನು ಅವರಿಗಿಂತ ಹೆಚ್ಚಿಗೆಯವನೆನ್ನಿಸಿಕೊಳ್ಳಲಾರೆ. ತೆಗೆದುಕೊಂಡು ಹೋಗಿರೆಂದು ಹೇಳಿದರು. ಆಗ ಹರಳಯ್ಯನವರು ಅವುಗಳನ್ನು ತೆಗೆದುಕೊಂಡು ಮನೆಗೆ ಹೊರಟರು. ದಾರಿಯಲ್ಲಿ ಸೇನಾಪತಿಗಳಾಗಿದ್ದ ಮಧುವರಸರು ಭೆಟ್ಟಿಯಾದರು. ಹರಳಯ್ಯನವರಲ್ಲಿ ಇರತಕ್ಕ ಜೋಡುಗಳನ್ನು ತಾವು ತೆಗೆದುಕೊಳ್ಳುತ್ತೇವೆಂದು ಹೇಳಿದರು. ಅದಕ್ಕೆ ಹರಳಯ್ಯನವರು, ಬಸವಣ್ಣನವರ ಸಲುವಾಗಿ ಮಾಡಿದ ಜೋಡುಗಳನ್ನು ನೀವು

ಮೆಟ್ಟಿದರೆ ಅಪಾಯಕ್ಕೊಳಗಾಗುವಿರಿ ಎಂದರು. ಅದಕ್ಕೆ ಮಧುವರಸನು—ಯಾರು ದುಡ್ಡು ಕೊಟ್ಟು ತೆಗೆದುಕೊಳ್ಳುತ್ತಾರೆಯೋ ಅವರದೇ ಅವುಗಳ ಮೇಲೆ ಅಧಿಕಾರವೆಂದು ಸಿಟ್ಟಿನಿಂದ ಗದ್ದರಿಸಿ ಮಾತನಾಡಿದನು ಮತ್ತು ಜೋಡುಗಳನ್ನು ತೆಗೆದುಕೊಂಡನು. ಹರಳಯ್ಯನವರಾದರೋ ನಾನು ಸಂತೋಷದಿಂದ ಕೊಟ್ಟಿರುವದಿಲ್ಲವೆಂದು ಮಿಡುಕುತ್ತ ಮನೆಗೆ ಹೋದರು. ಇತ್ತ ಮಧುವರಸನು ಅವುಗಳನ್ನು ಮೆಟ್ಟಿದ ಕ್ಷಣ ಹೊತ್ತಿನಲ್ಲೇ ಸರ್ವಾಂಗಗಳಲ್ಲಿ ಉರಿಯುಂಟಾಯಿತು. ಬಸವಣ್ಣನೇ ಸತ್ತೆನೆಂದು ಅನ್ನುತ್ತ ತನ್ನ ತಾಯಿಯನ್ನು ಕರೆಯಿಸಿದನು. ಅಷ್ಟರಲ್ಲಿ ಮಧುವರಸನ ಹೆಂಡತಿಯೂ ಬಂದು ಇವುಗಳನ್ನು ಮೆಟ್ಟಲಿಕ್ಕೆ ತಾವು ಹೇಗೆ ಮನಸ್ಸು ಮಾಡಿದಿರಿ? ಎಂದೆನ್ನುವಷ್ಟರಲ್ಲಿಯೇ ತಾಯಿಯು, ಮಗನೇ ಈ ಕೇಡು ನಿನಗೆಲ್ಲಿಂದ ಬಂದಿತು? ನೀನು ಈ ಪವಿತ್ರವಾದ ಪಾದುಕೆಗಳನ್ನು ಹೇಗೆ ಮುಟ್ಟಿದಿ? ಎಂದು ಕೇಳಿದಳು. ಅಮ್ಮನವರೇ, ನಾನು ಈ ಸಂಕಷ್ಟವನ್ನು ತಾಳಲಾರೆನು; ಶ್ರೀ ಬಸವಣ್ಣನವರಿಗೆ ಹೇಳಿಕಳುಹಿಸಿರೆಂದು ನುಡಿಯಲು ಈ ಸುದ್ದಿಯನ್ನು ಬಸವಣ್ಣನವರಿಗೆ ಹೇಳಿಕಳುಹಿಸಿದರು. ಆಗ ಬಸವಣ್ಣನವರು ಶಿವಶರಣರನ್ನು ನಿಂದಿಸಿದ ಫಲವಿದು. ನಿತ್ಯದಲ್ಲಿಯೂ ಸ್ನಾನ ಮಾಡಿದರೆ ಇದರ ದೋಷವು ಪರಿಹಾರವಾಗುವುದೆಂದು ಹೇಳಿದರೆಂದು ಹೋದ ಮನುಷ್ಯನು ಬಂದು ಹೇಳಲು ಮಧುವರಸನು ಇದನ್ನು ಕೇಳಿ ಬಹಳ ಸಂತೋಷಪಟ್ಟು, ಈ ಕಾರ್ಯಕ್ಕಾಗಿ ಓರ್ವ ದಾಸಿಯನ್ನು ನೇಮಿಸಿದನು. ಅವಳಿಂದ ನೀರನ್ನು ತರಿಸುತ್ತ ಸ್ನಾನವನ್ನು ಮಾಡುತ್ತಿದ್ದನು. ಒಂದು ದಿನ ಸಾಯಂಕಾಲದಲ್ಲಿ ಗುಡುಗು ಮಿಂಚುಗಳಿಂದ ಆಕಾಶವು ಆರ್ಭಟಿಸುತ್ತಿರಲು ದಾಸಿಯು ದಾರಿಯಲ್ಲಿ ಡೊಂಬರ ಆಟವನ್ನು ನೋಡುತ್ತ ನಿಂತಳು. ಹೊತ್ತಾಯಿತು. ಭಯಂಕರ ಮಳೆಯು ಪ್ರಾರಂಭವಾಗಲು ಆಗ ಅವಳು ಗಾಬರಿಗೊಂಡು ಶಿವಸ್ಮರಣೆಯನ್ನು ಮಾಡುತ್ತಾ ಹಿಂದಕ್ಕೆ ಹೊರಟಳು. ದಾರಿಯಲ್ಲಿ ಹರಳಯ್ಯನು ಸ್ನಾನ ಮಾಡಿದ ನೀರು ಒಂದು ಗುಂಡಿಯಲ್ಲಿದ್ದವು. ಅವು ಬಹಳ ಸ್ವಚ್ಛವಾಗಿ ಕಂಡದ್ದರಿಂದ ಅಲ್ಲಿ ಬೇರೆಯವರಾರೂ ಇಲ್ಲದ್ದನ್ನು ನೋಡಿ ಆ ನೀರನ್ನು ತುಂಬಿಕೊಂಡು ಹೋದಳು. ಮಧುವರಸನು ಅಂದಿನ ದಿನ ದಾಸಿಯು ತಂದ ನೀರನ್ನು ಸ್ನಾನ ಮಾಡಿದ ಕೂಡಲೇ ಬೇನೆಗಳೆಲ್ಲ ದೂರಾಗಿ ಚೊಕ್ಕ ಚಿನ್ನದಂತೆ ಆದನು. ಆಗ ಅವನು ನೀರು ತಂದ ದಾಸಿಯನ್ನು ಕರೆದು ಇಂದು ತಂದ ನೀರು ಎಲ್ಲಿಯವೆಂದು ಕೇಳಲು, ದಾಸಿಯು ಮನದಲ್ಲಿಯೇ ಹೆದರಿ ಸುಮ್ಮನೆ ನಿಂತುಬಿಟ್ಟಳು. ಮಧುವರಸನು ಬಲಾತ್ಕಾರವಾಗಿ ಪೀಡಿಸಲು ಇದ್ದ ಸಂಗತಿಗಳನ್ನೆಲ್ಲ ವಿಸ್ತಾರವಾಗಿ ಹೇಳಿದಳು. ನಾನು ಹರಳಯ್ಯನವರ ಜೋಡುಗಳನ್ನು ಮೆಟ್ಟಿದರೆ ರೋಗ ಪ್ರಾಪ್ತವಾಯಿತು. ಅವನು ಜಳಕ ಮಾಡಿದ ನೀರನ್ನು ತಂದು ಮಿಂದರೆ ರೋಗವು ಪರಿಹಾರವಾಯಿತು. ಇದು ಬಹಳ ಆಶ್ಚರ್ಯಕಾರಕವೆಂದು ತಿಳಿದುಕೊಂಡನು ಮತ್ತು ಇದಕ್ಕೆ ಪ್ರತ್ಯುಪಕಾರವನ್ನು ಮಾಡಬೇಕೆಂದು ಬೆಲೆಯುಳ್ಳ ವಜ್ರ ವೈಢೂರ್ಯಾದಿಗಳನ್ನು ಹರಳಯ್ಯನವರಿಗೆ ಕಳುಹಿಸಿದನು. ಆಗ ಹರಳಯ್ಯನವರು ಆ ಪದಾರ್ಥಗಳನ್ನು ತೃಣಕ್ಕೆ ಸಮಾನವೆಂದು ಭಾವಿಸಿ ತಿರಸ್ಕರಿಸಿಬಿಟ್ಟರು. ಆಗ ಮಧುವರಸನು ಹೇಗಾದರೂ ಮಾಡಿ ಪ್ರತ್ಯುಪಕಾರವನ್ನು ಮಾಡಲೇಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಅವರ ಮಗನಿಗೆ ತನ್ನ ಮಗಳನ್ನು ಕೊಡಬೇಕೆಂದು ಮಹಾದೇವಿಯನು

ಕೇಳಿದನು. ಇದಾಗದ ಮಾತು; ಅವರು ಲಿಂಗಧಾರಿಗಳು; ಲಿಂಗವಿಲ್ಲದ ಭವಿಗಳನ್ನು ತಮ್ಮ ಅಂಗಳದಲ್ಲಿಯೂ ಬರಗೊಡುವದಿಲ್ಲವೆಂದು ಮಹಾದೇವಿಯು ಪ್ರತ್ಯುತ್ತರ ಕೊಟ್ಟಳು. ಹಾಗಾದರೆ ನೀನು ನಿನ್ನೆ ನೀರನ್ನು ಅವನ ಅಂಗಳಕ್ಕೆ ಹೋಗಿ ಹೇಗೆ ತಂದಿ ಎಂದು ಮಧುವರಸನು ಕೇಳಲು, ಮಹಾದೇವಿಯು ತನ್ನಲ್ಲಿ ಗುಪ್ತವಾಗಿದ್ದ ಲಿಂಗ ವನ್ನು ತೋರಿಸಿದಳು. ಆಗ ಮಧುವರಸನು ತನ್ನ ಮಗಳನ್ನು ತಾನೇ ಕರೆದುಕೊಂಡು ಹರಳಯ್ಯನವರ ಮನೆಗೆ ಹೋದನು. ಹರಳಯ್ಯನವರು ಇದು ಸಾಮಾನ್ಯವಾದ ಕಾರ್ಯವಲ್ಲ. ಚೆನ್ನಾಗಿ ವಿಚಾರಿಸದೆ ದುಡುಕಬೇಡಿರೆಂದು ಹೇಳಿ ಪುನಃ ಹಿಂದಕ್ಕೆ ಕಳುಹಿಸಿದರು. ಆಗ ದಾಸಿಯಾದ ಮಹಾದೇವಿಯು ನೀವು ಲಿಂಗವಂತ ದೀಕ್ಷೆಯನ್ನು ತೆಗೆದುಕೊಳ್ಳದೆ ಈ ಕಾರ್ಯವಾಗಲು ಸಾಧ್ಯವಿಲ್ಲವೆಂದು ಹೇಳಲು, ಮಧುವರಸನು ಶಿವಶರಣರ ಸ್ನಾನದ ನೀರಿನಿಂದ ನನ್ನ ರೋಗವೆಲ್ಲ ಪರಿಹಾರವಾಯಿತು ಅಂದಮೇಲೆ ಅವರ ದೇವರು ಎಂತಹ ಮಹಿಮಾಶಾಲಿಯಾಗಿರಬಹುದು? ನಾನು ಆ ದೇವನನ್ನು ಪಡೆದರೆ ನನ್ನ ಜನ್ಮ ಸಾರ್ಥಕವಾಗುವದರಲ್ಲಿ ಸಂಶಯವಿಲ್ಲವೆಂದು ನಿಶ್ಚಯಿಸಿ ಲಿಂಗ ದೀಕ್ಷೆಯನ್ನು ತೆಗೆದುಕೊಂಡನು. ಆಗ ಅವನ ಕುಲದವರೆಲ್ಲರೂ ಪರಿಪರಿಯಿಂದ ಹಾಸ್ಯ ಮಾಡಲು ಪ್ರಾರಂಭಿಸಿದರು. ಆಗ ಮಧುವರಸನು ಬಸವಣ್ಣನವರಲ್ಲಿ ಹೋಗಿ ನಡೆದ ಸಂಗತಿಗಳನ್ನೆಲ್ಲಾ ಹೇಳಿ, ಅವರ ಆಶೀರ್ವಾದವನ್ನು ಪಡೆದು ಪುನಃ ಹರಳಯ್ಯನವರ ಮನೆಗೆ ಹೋದನು. ಪುನಃ ಹರಳಯ್ಯನವರು ನೀವು ಮಾಡಬೇಕೆಂದಿರುವ ಕಾರ್ಯ ಬಿಜ್ಜಳನ ರಾಜ್ಯದಲ್ಲಿಯೇ ನೂತನವಾದುದಾಗಿರುವದರಿಂದ ನೀವು ಚೆನ್ನಾಗಿ ಆಲೋಚನೆ ಮಾಡಿ ಎಂದನು. ಆದರೂ ಕಡೆಗೆ ವಿವಾಹವು ನಡೆಯಿತು. ಇತ್ತ ಈ ಲಗ್ನದ ಫಲಿತಾಂಶವನ್ನು ತಿಳಿಯುವುದಕ್ಕೆ ಬಸವಣ್ಣನವರು ಪ್ರಭುದೇವರ ಅಧ್ಯಕ್ಷತೆಯಲ್ಲಿ ಸಭೆಯನ್ನು ಕೂಡಿಸಿದರು. ಲೋಕದಲ್ಲಿ ಈ ಬೀಗತನವು ಅಸಾಧಾರಣವಾದುದು ಮತ್ತು ಮೊದಲನೆಯದು. ಇದು ಅನೇಕರನ್ನು ಸಂಕಟಕ್ಕೆ ಗುರಿ ಮಾಡಬಹುದು. ನಾವು ಲೋಕದಲ್ಲಿ ಅವತರಿಸಿದ ಕಾರ್ಯವು ಸಮಾಪ್ತಿಯಾದಂತಾಯಿತು. ಆಗ ಸಭೆ ಯಲ್ಲಿದ್ದ ಓರ್ವ ಸರ್ವಜ್ಞಮೂರ್ತಿಯು—"ಶ್ರೀ ಬಸವೇಶ್ವರರು ಕಪ್ಪಡಿ ಸಂಗಮನಾಥ ನಲ್ಲಿಯೂ, ಅನೇಕ ಶಿವಶರಣರು ತಮ್ಮ ತಮ್ಮ ಇಷ್ಟ ಲಿಂಗದಲ್ಲಿಯೂ ಐಕ್ಯರಾಗುವರು. ಬಿಜ್ಜಳನು ಹರಳಯ್ಯ ಮಧುವಯ್ಯಗಳನ್ನು ಕೊಲ್ಲಿಸುವನು. ಜಗದೇವ ಮೊಲ್ಲೆಯಾ ಬೊಮ್ಮಣ್ಣಯ್ಯಗಳು ಬಿಜ್ಜಳನನ್ನು ಇರಿಯುವರು. ರಾಜ್ಯದಲ್ಲಿ ಕೋಲಾಹಲವೆದ್ದು ಯುದ್ಧವು ಪ್ರಾರಂಭವಾಗುವದು. ಶ್ರೀ ಚನ್ನಬಸವಣ್ಣನವರು ಉಳಿವೆಗೆ ಪ್ರಯಾಣ ಮಾಡುವರು. ಮುಂದೆ ಪ್ರತಾಪರುದ್ರನು ಕಲ್ಯಾಣವನ್ನಾಳುವನು" ಎಂದು ಹೇಳಿದನು. ಅತ್ತ ಪಟ್ಟಣದೊಳಗೆ ಈ ಲಗ್ನದ ವಾರ್ತೆಯು ಜನಗಳ ಮನಸ್ಸನ್ನು ಅಲ್ಲೋಲಕಲ್ಲೋಲ ಮಾಡಿತು. ಹಾರವರು ಹೊಲಗೇರಿಯನ್ನು ಕೂಡಿದರೆಂದು ಕೆಲವರು ಅನ್ನಲಿಕ್ಕೆ ಹತ್ತಿದರು. ಈ ವಿಷಯವನ್ನು ಬಿಜ್ಜಳನು ಕೇಳಿ ಕ್ರೋಧದಿಂದ ಬಸವಣ್ಣನವರನ್ನು ಕರೆಯಲಿಕ್ಕೆ ಕಳುಹಿಸಿದನು. ಉತ್ತಮ ಕುಲದವರು ಹೊಲೆಯರಿಗೆ ಕನ್ಯಾ ಕೊಡ ಬಹುದೆ? ಎಂದು ಬಿಜ್ಜಳನು ಪ್ರಶ್ನೆಯನ್ನು ಮಾಡಿದನು. ಆಗ ಬಸವಣ್ಣನವರು ಶರಣರು ಮಾಡಿದ ಕಾರ್ಯದಲ್ಲಿ ತಪ್ಪೇನಿರುತ್ತದೆ? ಅವರು ಅರಮನೆಯ ದುಡ್ಡನ್ನು ಅಪಹರಿಸಿದರೇ? ಪರಸ್ತ್ರೀಯರನ್ನು ಮುಟ್ಟಿದರೇ? ಅರಸನಿಗೆ ಕೇಡನ್ನು ಬಗೆದರೇ?

ತಮ್ಮ ರಾಜನನ್ನು ನಿಂದಿಸಿದರೇ? ಬಡವರ ಬದುಕನ್ನು ಹಾಳುಮಾಡಿದರೇ? ಮುನಿಗಳ ತಪವನ್ನು ಕೆಡಿಸಿದರೇ? ದಯವಿಟ್ಟು ಹೇಳಬೇಕೆಂದು ಕೇಳಿದರು. ಈ ಮಾತುಗಳನ್ನು ಬಿಜ್ಜಳನು ಕೇಳಿ ಮತ್ತಷ್ಟು ಸಿಟ್ಟಿಗೆದ್ದು, ನೀವು ಹೇಳುವುದಕ್ಕೆ ಪ್ರಮಾಣವೇನಾದರೂ ಉಂಟೆ ಎಂದು ಕೇಳಲು—ಕಶ್ಯಪ, ಶಾಂಡಿಲ್ಯ, ದೂರ್ವಾಸ, ವ್ಯಾಸ, ವಾಲ್ಮೀಕಿ ಮೊದಲಾದವರೆಲ್ಲ ಕೀಳು ಕುಲದವರು ಶ್ರೇಷ್ಠರೆನ್ನಿಸಿಕೊಂಡರು. ಕ್ಷತ್ರಿಯರಿಗೆ ಗುರುವಾದ ವಸಿಷ್ಠನು ಶೂದ್ರಳಾದ ಅರುಂಧತಿಯನ್ನು ಕೂಡಿಕೊಂಡನು. ಜಮದಗ್ನಿ ರೇಣುಕಾದಿಗಳು ಅಂತ್ಯಜರಾದ ಮಾತಂಗಿಯವರಲ್ಲಿ ಮನೆಮಾಡಿಕೊಂಡಿದ್ದರು. ಇದು ನವೀನ ಕಾರ್ಯವೇನೂ ಆಗಿರುವದಿಲ್ಲ. ಪುರಾತನ ಕಾಲದಿಂದ ಪಾರಂಪರ್ಯವಾಗಿ ಬಂದಿರುತ್ತದೆ. ವೇದಾಗಮಗಳು ಈ ವಿಷಯವನ್ನು ಘಂಟಾಘೋಷವಾಗಿ ಹೇಳುತ್ತವೆ. ಅಂಗದ ಮೇಲೆ ಲಿಂಗವನ್ನು ಧರಿಸಿದರೆ ನೂತನ ಸೃಷ್ಟಿಯಾಗುವದು. ಕುಲಭೇದವು ಹರಭಕ್ತರ ಮುಂದೆ ಹರಿದುಹೋಗುವದು ಎಂದು ಅನೇಕ ದೃಷ್ಟಾಂತ ದ್ರಾಷ್ಟಾಂತರ ಗಳಿಂದ ಹೇಳಿದರೂ ಬಿಜ್ಜಳನು ಒಪ್ಪಲಿಲ್ಲ. ಆಗ ಬಸವಣ್ಣನವರು ಇನ್ನುಮೇಲೆ ನಾವು ಕಲ್ಯಾಣದಲ್ಲಿರುವದು ಯೋಗ್ಯವಲ್ಲೆಂದು ಕಪ್ಪಡಿಯ ಕಡೆಗೆ ಪ್ರಯಾಣ ಬೆಳೆಯಿಸಿದರು. ಅನೇಕರು ತಮ್ಮ ತಮ್ಮ ಇಷ್ಟಲಿಂಗದಲ್ಲಿ ಲೀನರಾದರು. ಆಗ ಹರಳಯ್ಯ ಮಧುವಯ್ಯ ಗಳನ್ನು ಕರೆಯಿಸಿ ಅನೇಕ ಪ್ರಶ್ನೆಗಳನ್ನು ಮಾಡಿದರು. ಕೆಟ್ಟರೆ ನಾವು ಕೆಟ್ಟಿರುವೆವು, ಇದರಿಂದ ನಿಮಗಾದ ಹಾನಿಯೇನು ಎಂದು ಕೇಳಲು, ಬಿಜ್ಜಳನು ಮತ್ತಷ್ಟು ಸಿಟ್ಟಿಗೇಳಲು, "ಗುರುವ ನಿಂದಿಸಿದವ ಹೊಲೆಯ, ಪರರಿಗೆ ಕೇಡನ್ನು ಬಯಸಿದವ ಹೊಲೆಯ, ಪರ ನಾರಿಯರನ್ನು ಬಯಸಿದವನೇ ಹೊಲೆಯ, ಧರೆಗಧಿಕರಾದ ಶಿವಭಕ್ತರು ಹೊಲೆಯರಲ್ಲ" ಆದ್ದರಿಂದ ನಾನು ಅವರ ಸಂಬಂಧವನ್ನು ಮಾಡಿರುತ್ತೇನೆಂದು ಮಧು ವರಸನು ಸ್ಪಷ್ಟವಾಗಿ ಹೇಳಿಬಿಟ್ಟನು. ಬಿಜ್ಜಳನ ಕೋಪವು ಮಿತಿಮೀರಿತು. ಪಿತ್ತವು ತಲೆಗೇರಿತು. ಕ್ರೋಧಾಂಧನಾದ ಮಾನವನು ಯಾವ ಕಾರ್ಯವನ್ನು ತಾನೇ ಮಾಡುವದಿಲ್ಲ? ಆಗ ಅವನು ಚರರನ್ನು ಕರೆಯಿಸಿ ಕಟ್ಟಿ ಎಳೆಯಲು ಹೇಳಿದನು. ಆದರೂ ಅವರ ಪ್ರಾಣಗಳು ಹೋಗಲಿಲ್ಲ. ಆಮೇಲೆ ಕಣ್ಣುಗಳನ್ನು ಕೀಳಿಸಿ ಶೂಲಕ್ಕೆ ಹಾಕಬೇಕೆಂದು ಆಜ್ಞೆ ಮಾಡಿದನು. ಚರರು ಕಣುಗಳನ್ನು ಕೀಳಲು ಹರಳಯ್ಯನವರು ಅಲ್ಲಿಯೇ ಲಿಂಗಪೂಜೆ ಮಾಡಲು ಪ್ರಾರಂಭಿಸಿದರು. ಮಧುವಯ್ಯಗಳು ಅವರನ್ನೆಡವಲು ಅವರಿಗೆ ನೇತ್ರಗಳು ಬಂದವು. ಅಷ್ಟರೊಳಗೆ ಸಿದ್ಧವಾಗಿದ್ದ ಶಿವನ ಪುಷ್ಪಕ ವಿಮಾನದಲ್ಲಿ ಕುಳಿತು ಅವರು ಕೈಲಾಸಕ್ಕೆ ತೆರಳಿದರು. ಬಿಜ್ಜಳನ ಈ ಕ್ರೂರಕೃತ್ಯವನ್ನು ನೋಡಿ ಅನೇಕರು ಸಂತಪ್ತರಾದರು. ಬಸವ, ಚನ್ನಬಸವ, ಪ್ರಭುದೇವರೇ ಮೊದಲಾದವರು ಇಷ್ಟರಲ್ಲಿಯೇ ಬಿಟ್ಟಿದ್ದರು. ಈ ಅತ್ಯದ್ಭುತ ಕ್ರೂರಕರ್ಮವನ್ನು ನೋಡುತ್ತಿದ್ದ ಜಗದೇವ ಮೊಲ್ಲೆಯಾ ಬೊಮ್ಮಣ್ಣಗಳು ಅಲ್ಲಿಂದ ತಮ್ಮ ಮನೆಗೆ ಹೊರಟರು. ಅವರ ತಾಯಿಯು ಈ ಸಮಾಚಾರವನ್ನೆಲ್ಲ ಕೇಳಿ ಶಿವದ್ರೋಹಿಯು ಮಾಡಿದ ಕಾರ್ಯವನ್ನು ನೋಡುತ್ತ ಹಾಗೆಯೇ ಬಂದಿರುವಿರಿ. ಇದು ನಿಮಗೆ ನಾಚಿಕೆಯನ್ನು ಹುಟ್ಟಿಸಲಿಲ್ಲವೇ? ಎಂದು ಜರಿದು ಮಾತನಾಡಿದಳು. ಸೋಮವ್ವೆಯು ತನ್ನ ಆತ್ಮಹತ್ಯ ಮಾಡಿಕೊಳ್ಳಲು ಉದ್ಯುಕ್ತಳಾದಳು. ಜಗದೇವನು ಅಡ್ಡಬಂದು ಬಿಜ್ಜಳನನ್ನು ನಾನು ಕೊಲ್ಲುವೆನೆಂದು ತಾಯಿಯ ಎದುರಿಗೆ ಶಪಥ ಮಾಡಿದನು. ಆದರೂ ಈ ಕಾರ್ಯವನ್ನು ನೀವು ಅಲ್ಲಿಯೇ

ಮಾಡಿ ಬಂದಿದ್ದರೆ ವೀರಶೈವ ಗಣಾಚಾರದಂತೆ ನಡೆದುಕೊಂಡಂತೆ ಆಗುತ್ತಿದ್ದಿತು ಎಂದು ಅವರನ್ನು ಒಳಗೆ ಬರಗೊಡದೆ ನಾಯಿಗಳಿಗೆ ಹೊರಗೆ ಅನ್ನವನ್ನು ಹಾಕುವಂತೆ ಹಾಕಿದಳು. ಆಗ ನಾಚಿಕೆಯಿಂದ ಜಗದೇವನು ಅಮ್ಮಾ, ಬಿಜ್ಜಳನನ್ನು ಕೊಲ್ಲುವ ವರೆಗೆ ನಾನು ನಾಯಿಯಾಗಿಯೇ ಇರುವೆನೆಂದು ಹೇಳಿದನು. ಕೆಲವು ದಿನಗಳು ಹೋದಮೇಲೆ ಹೆಗ್ಗಡತಿ ಚನ್ನವ್ವನ ಚಾವಡಿಯ ಹಿಂದೆ ಜಗದೇವ ಮೊಲ್ಲೆಯಾ ಬೊಮ್ಮಣ್ಣಗಳು ಬಿಜ್ಜಳನನ್ನು ಸಂಹಾರ ಮಾಡಿದರು. ಶಿವಭಕ್ತದ್ರೋಹಿಯನ್ನು ಕೊಂದೆವೆಂದು ವೀರ ಕೇಕೆಯನ್ನು ಹಾಕುತ್ತಾ ಆರ್ಭಟಿಸಿ ಮನೆಗೆ ಬಂದರು. ಅಂತೂ ರೋಮಾಂಚಕಾರಕವಾದ ಈ ಕಥೆಯು ಹೀಗೆ ಮುಗಿದಿರುತ್ತದೆ. ಆ ಕಾಲದಲ್ಲಿ ಕಲ್ಯಾಣ ಪಟ್ಟಣದ ಸ್ಥಿತಿಯು ಬಹಳ ಕೆಟ್ಟುಹೋದದ್ದು ಸ್ವಾಭಾವಿಕವಾದುದಾಗಿರುತ್ತದೆ. ಕಾಲಕ್ಕೆ ಯಾರೇನು ಮಾಡುವರು ?

ಶ್ರೀ ಬಸವಾದಿ ಪ್ರಮಥಪುಂಗವರು ಮರ್ತ್ಯಲೋಕದಲ್ಲಿ ಮಾನವರಾಗಿ ಜನಿಸಿ ದೇವತ್ವವನ್ನು ಪಡೆದ ಮಹಾ ವಿಭೂತಿಗಳು. ಅವರು ಆ ಕಾಲದಲ್ಲಿ ಮಾಡಿದ ಕೃತ್ಯಗಳು ಈಗಿನ ಕಾಲದಲ್ಲಿಯೂ ಅತ್ಯಂತ ಸ್ಫೂರ್ತಿಯನ್ನು ಹುಟ್ಟಿಸತಕ್ಕವುಗಳಾಗಿರುತ್ತವೆ. ಈಗಿನ ಕಾಲದಲ್ಲಿ ಹರಳಯ್ಯ ಮಧುವಯ್ಯಗಳಂತಹ ಬೀಗತನವು ಆಗುತ್ತವೆ. ಆದರೆ ಅವುಗಳಲ್ಲಿ ಧಾರ್ಮಿಕ ಭಾವನೆ ಇರುವದಿಲ್ಲ. ಬಸವಣ್ಣನವರು ಎಲ್ಲರಿಗಿಂತಲೂ ಮೊದಲು ಈ ಕಾರ್ಯವನ್ನು ಮಾಡಿದರು. ಅವರ ತರುವಾಯ ಅವರ ಶಿಷ್ಯರು ಈ ಕಾರ್ಯವನ್ನು ಮುಂದುವರಿಸಲಿಲ್ಲ.

ಈಗಿನ ಕಾಲದಲ್ಲಿ ಅಸ್ಪೃಶ್ಯೋದ್ಧಾರಕ್ಕೆ ಸರಕಾರದವರೂ, ಪ್ರಜೆಗಳೂ ಬಹಳ ಸಹಾಯ ಮಾಡುತ್ತಲಿದ್ದಾರೆ. ಅದರಲ್ಲಿ ಧಾರ್ಮಿಕ ಭಾವನೆಯು ಲವಲೇಶವೂ ಕೂಡ ಇರುವದಿಲ್ಲ. ತಮ್ಮಂತೆ ಅವರನ್ನೂ ಮಾಡಿಕೊಂಡು ಸಂಸ್ಕೃತಿಯನ್ನು ಕಾಪಾಡಬೇಕಲ್ಲದೆ ತಾವು ಅವರಂತೆ ಆಗಿ ಸಂಸ್ಕೃತಿಯ ನಾಶಕ್ಕೆ ಕಾರಣರಾಗಬಾರದು. ಎಲ್ಲ ಕಾರ್ಯ ಗಳಿಗಿಂತಲೂ ಮೊದಲು ಅವರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲಿಕ್ಕೆ ಯತ್ನಿಸಬೇಕು. ಆರ್ಥಿಕ ಪರಿಸ್ಥಿತಿಯು ಸುಧಾರಿಸಿತೆಂದರೆ ಸಾಮಾಜಿಕ ಪರಿಸ್ಥಿತಿಯೇ ಮೊದಲಾದವುಗಳು ತಮ್ಮಷ್ಟಕ್ಕೆ ತಾವೇ ಅನುಕೂಲವಾಗುತ್ತವೆ. ಈಗಿನ ಕಾಲದಲ್ಲಿ ಆ ಸಮಾಜದಲ್ಲಿ ಅನೇಕರು ಗಣ್ಯರಾದ ವ್ಯಕ್ತಿಗಳಾಗುತ್ತಲಿದ್ದಾರೆ. ಕೆಲವು ವರ್ಷಗಳಲ್ಲಿ ರಾಜ ಕಾರಣದಲ್ಲಿಯೂ ಆ ಸಮಾಜದವರು ಮುಂದುವರಿಯುವುದರಲ್ಲಿ ಸಂಶಯವಿಲ್ಲ. ಅಸ್ಪೃಶ್ಯತೆಯು ನಮ್ಮ ರಾಜ್ಯಾಂಗಕ್ಕೆ ವಿರೋಧವೆಂದು ನಿರ್ಣಯವಾಗಿರುವುದರಿಂದ ಕ್ರಮೇಣ ಆ ಸಮಾಜದ ಔನ್ನತ್ಯವಾಗುವದು ನಿಶ್ಚಯವಾದುದು.

## ಮಹಾತ್ಮಾಜಿಯವರಿಗೆ ಸಿ. ಎಸ್. ಆ್ಯಂಡ್ರ್ಯೂಜರವರು ಬರೆದ ಪತ್ರ

ಅತ್ಯಂತ ಶೋಚನೀಯವೂ, ಆಶ್ಚರ್ಯವೂ ಆದ ಈ ಉಪೋಷಣದ ಸಂಗತಿ ಯನ್ನು ಕೇಳಿ ನನ್ನ ಮೈ ಕೂದಲುಗಳೆಲ್ಲ ನೆಟ್ಟಗಾದವು. ಕ್ಷಣಭಂಗುರಗಳಾದ ಮಹತ್ವಾ ಕಾಂಕ್ಷೆಗಳಿಂದಲೂ, ಮಾಯಾ ರೂಪದ ಬೆಲೆಗಳಲ್ಲಿಟ್ಟಿರುವ ನೆಚ್ಚಿಕೆಗಳಿಂದಲೂ ತುಂಬಿ ಕೊಂಡಿರುವ ಈ ಲೋಕದಲ್ಲಿ ಬಾಪೂಜಿಯವರು ಶಾಶ್ವತವಾದ ಸತ್ಯದ ಧ್ವಜವನ್ನೇ ಎತ್ತಿರುತ್ತಾರೆ. ಅನೇಕ ತರಹದ ಕೊಳಕುತನದಿಂದ ತುಂಬಿಕೊಂಡಿರುವ ಈ ಇಪ್ಪತ್ತನೇ ಶತಮಾನದಲ್ಲಿ ಈ ತರಹದ ಸಂಗತಿಗಳು ಸಂಭವಿಸುವದು ಅತ್ಯಾಶ್ಚರ್ಯವೇ ಸರಿ.

ಮಾನವ ಕೋಟಿಯು ಸಂತಾಪ ಸಂಕಟಗಳು ದೇವರೇ ಇಲ್ಲವೆಂದು ಕೂಗುತ್ತಿರುವಲ್ಲಿ ಬಾಪೂಜಿಯುವರಂಥವರ ಜೀವನವು ದೇವರಲ್ಲಿರುವ ನಮ್ಮ ವಿಶ್ವಾಸವನ್ನು ಪುನರುಜ್ಜೀವಗೊಳಿಸುತ್ತದೆ. ನನಗಂತೂ ಮಹಾತ್ಮರ ಜೀವಿಕೆಯು ದೇವರ ಅಸ್ತಿತ್ವದ ವಿಷಯದಲ್ಲಿ ಅತ್ಯಂತ ಮನಃಖಚಿತವಾದ ಆಧುನಿಕ ಸಿದ್ಧಾಂತವೇ ಎಂದು ಕಾಣುತ್ತದೆ. ಇಂತಹ ಇವರ ಜೀವನದ ರಹಸ್ಯವನ್ನು ಬೇರೊಂದು ರೀತಿಯಿಂದ ಎದುರಿಸುವದು ಸಾಧ್ಯವಿದೆಯೇ ?

ಅತ್ಯಂತ ತೀಕ್ಷ್ಣವಾದ ಅವರ ಅಗ್ನಿಪರೀಕ್ಷೆಯಲ್ಲಿ ನಮ್ಮ ಹೃದಯದ ಮಾಲಿನ್ಯವು ಸುಟ್ಟುಹೋಗಿ ನಾವು ಶುದ್ಧೀಕರಣವನ್ನು ಹೊಂದದಿದ್ದರೆ ಅವರ ಈ ಉಪೋಷಣವು ವ್ಯರ್ಥವೇ ಸರಿ. ಈ ಮಹತ್ವದ ಕರೆಯನ್ನು ಲಾಲಿಸಿ ಅದನ್ನು ಪಾಲಿಸುವಷ್ಟು ನಾವು ವಿಶಾಲಮನಸ್ಕರಾದರೆ ವ್ಯಕ್ತವಾಗಿರುವ ಅಸ್ಪೃಶ್ಯತೆಯನ್ನಷ್ಟೇ ಏಕೆ ಅವ್ಯಕ್ತ ಸ್ಥಿತಿಯಲ್ಲಿ ಇರುವ ಅದರ ಆತ್ಮವನ್ನೇ ಈ ಜಗತ್ತಿನೊಳಗಿಂದ ನಿರ್ಮೂಲ ಮಾಡಬಹುದು. ಬಾಪೂಜಿಯುವರ ಉಪವಾಸವು ಹಿಂದೂದೇಶದ ಮಟ್ಟಿಗೆ ಮಾತ್ರ ಇರದೆ ಅದು ಪಾಶ್ಚಾತ್ಯರ ಪ್ರಬಲ ರಾಷ್ಟ್ರಗಳೂ ಪಶ್ಚಾತ್ತಾಪ ಪಡಬೇಕೆಂದು ತೋರುತ್ತದೆ.

ಈ ಪತ್ರವನ್ನು ಓದಿದರೆ ಅಸ್ಪೃಶ್ಯತೆಯೆಂಬುವದೊಂದು ರಾಕ್ಷಸವು ನಮ್ಮ ದೇಶಕ್ಕೂ, ಹಿಂದೂ ಧರ್ಮಕ್ಕೂ ಭಯಂಕರವಾದ ಕಲಂಕವೆಂದು ತಿಳಿಯುತ್ತದೆ.

ಶ್ರೀ ಬಸವಣ್ಣನವರು ಅಸಾಧಾರಣವಾದ ಧೈರ್ಯದಿಂದ ಈ ಕಾರ್ಯದ ಪ್ರಾರಂಭದ ಅಡಿಗಲ್ಲನ್ನು ಹಾಕಿದರು. ಮತ್ತು ಅಸ್ಪೃಶ್ಯರನ್ನು ಅಪ್ಪಿಕೊಂಡು ಅವರಿಗೆ ಗೌರವ ಕೊಟ್ಟರು. ಇದು ಹಿಂದುಸ್ಥಾನದ ಇತಿಹಾಸದಲ್ಲಿಯೇ ಹೊಸ ಕಾರ್ಯವಾಗಿರುತ್ತವಲ್ಲದೆ ಅದ್ಭುತ ಸಾಹಸದ ಮಾತಾಗಿರುತ್ತದೆ. ಇಂತಹ ಮಹಾಮಹಿಮನ ಅವತಾರವು ಕರ್ಣಾಟಕ ಭೂಮಿಯಲ್ಲಿ ಆದದ್ದು ಕನ್ನಡಿಗರೆಲ್ಲರಿಗೂ ಹೆಮ್ಮೆಯ ಮಾತಾಗಿರುತ್ತದೆ. ಇದೊಂದು ಅಗ್ನಿಯ ಪರೀಕ್ಷೆಯು. ಅದರಲ್ಲಿ ತೇರ್ಗಡೆ ಹೊಂದಿದವರ ಹೆಸರುಗಳು ಇತಿಹಾಸದಲ್ಲಿ ಅಜರಾಮರವಾಗುವವು. ಆ ಕಾಲದಲ್ಲಿ ಕಲ್ಯಾಣದೊಳಗೆ ಮಹಾ ಅನರ್ಥವುಂಟಾದರೂ ಜಗತ್ತಿಗೊಂದು ಮಾರ್ಗದರ್ಶನವಾದ ಉದಾಹರಣೆಯಾಯಿತು. ಯಾವದಾದರೊಂದು ಹೊಸ ಕಾರ್ಯವು ಲೋಕದಲ್ಲಿ ಪ್ರಾರಂಭವಾಯಿತೆಂದರೆ ಅದಕ್ಕೆ ಅನೇಕರು ವಿರೋಧಿಗಳಾಗುವದು ಸ್ವಾಭಾವಿಕವಾದುದು ಎಂಬುವದು ಅನೇಕ ಉದಾಹರಣೆಗಳಿಂದ ಹೇಳಬಹುದು. ಜಗತ್ತಿನಲ್ಲಿ ಬಹಳ ಜನರು ತಮ್ಮ ತಮ್ಮ ಹಿರಿಮೆಯನ್ನು ಹೇಳಿಕೊಳ್ಳುವದರಲ್ಲಿಯೇ ಕಾಲವನ್ನು ಕಳೆಯುವರು. ನಾನು ಎಲ್ಲರಿಗಿಂತಲೂ ಕಿರಿಯನೆಂದು ಕೀಳು ಜನಗಳನ್ನು ಅಪ್ಪಿಕೊಂಡು ಅವರ ಉದ್ಧಾರದಲ್ಲಿ ತೊಡಗಿದ ಬಸವೇಶ್ವರನಂತಹ ಜನಗಳು ಜಗತ್ತಿನಲ್ಲಿ ಕೈಬೆರಳಿನಿಂದ ಎಣಿಸುವಷ್ಟು ಮಾತ್ರ ಸಿಗುತ್ತಾರೆ. ಇಂತಹ ಮಹಾಪುರುಷರೇ ಧನ್ಯರು. ಶ್ರೀ ಬಸವಣ್ಣನವರ ಈ ಶ್ರೇಷ್ಠ ಕಾರ್ಯವನ್ನು ಅವ್ಯಾಹತವಾಗಿ ನಡೆಸುವ ಮಹಾಜನಗಳು ನಮ್ಮಲ್ಲಿ ಬೇಕು.

ಅಂತೂ ಬಸವೇಶ್ವರರು ಮಾಡಿದ ಅನಂತ ಶ್ರೇಷ್ಠ ಕಾರ್ಯಗಳಲ್ಲಿ ಈ ಅಸ್ಪೃಶ್ಯೋದ್ಧಾರಕ್ಕೆ ಪ್ರಧಾನವಾದ ಸ್ಥಾನವಿದೆ. ಶ್ರೀ ಬಸವಣ್ಣನವರ ಉಜ್ವಲವಾದೀ ಕಾರ್ಯವು ಜಗತಿನಲ್ಲಿ ಯಾವಾಗಲೂ ಜಾಜ್ವಲ್ಯಮಾನವಾಗಿರುವದರಲ್ಲಿ ಸಂಶಯವಿಲ್ಲ.

# ಹದಿನಾಲ್ಕನೆಯ ಪ್ರಕರಣ

## ಶಿವಾನುಭವ ಮಂಟಪವೂ ಶ್ರೀ ಬಸವಣ್ಣನವರೂ

ಶ್ರೀ ಬಸವಣ್ಣನವರು ಮಾಡಿರುವ ಅನೇಕ ಮಹತ್ಕಾರ್ಯಗಳಲ್ಲಿ ಶಿವಾನುಭವ ಮಂಟಪದ ಸಂಸ್ಥಾಪನೆಯ ಕಾರ್ಯವು ಬಹಳ ಮೇಲಾದುದಾಗಿರುತ್ತದೆ. ಶಿವಾನುಭವ ಗೋಷ್ಠಿಯು ಮಾಡಿದ ಮಹತ್ಕಾರ್ಯಗಳು ಇಂದಿಗೂ ಜಗತ್ತಿನ ಜನಗಳಿಗೆ ಆಶ್ಚರ್ಯವನ್ನುಂಟುಮಾಡತಕ್ಕವುಗಳಾಗಿರುವವಲ್ಲದೆ ವೀರಶೈವ ಸಮಾಜದ ಹೆಗ್ಗುರುತಿನ ಚಿಹ್ನೆಗಳಾಗಿರುತ್ತವೆ. ಈಗಿನ ಕಾಲದಲ್ಲಿ ಯಾವದಾದರೊಂದು ಮಹತ್ಕಾರ್ಯವನ್ನು ಮಾಡಬೇಕಾದರೆ ದುಂಡು ಮೇಜಿನ ಸಭೆಯನ್ನು ಕರೆದು ಅದರಲ್ಲಿ ಬಹುಮತದಿಂದ ನಿರ್ಣಯ ಮಾಡಿ ಅದನ್ನು ಜನರೆದುರಿಗೆ ಇಟ್ಟು ಕೃತಿಯಲ್ಲಿ ತರುವದನ್ನು ನಾವು ನೋಡುತ್ತೇವೆ. ಶಿವಾನುಭವ ಮಂಟಪವಾದರೂ ಕರ್ಣಾಟಕದಲ್ಲಿ ಸುಪ್ರಸಿದ್ಧವಾದ ಧಾರ್ಮಿಕ ಮತ್ತು ಐತಿಹಾಸಿಕ ಸಂಸ್ಥೆಯಾಗಿದ್ದಿತು. ನೀತಿನಿಪುಣರೂ, ಭಕ್ತಿಸಂಪನ್ನರೂ, ಲಿಂಗನಿಷ್ಠರೂ ಆದ ೩೦೦ ಜನ ಶರಣರೂ, ಅನೇಕ ಶಿವಶರಣೆಯರೂ ಅದರ ಸಭಾಸದರಾಗಿ ಅತ್ಯದ್ಭುತತಮವಾದ ಕಾರ್ಯವನ್ನು ಮಾಡಿದರು. ಈ ಸಭೆಗೆ ಶ್ರೀ ಅಲ್ಲಮಪ್ರಭುದೇವರೇ ಅಧ್ಯಕ್ಷರಾಗಿದ್ದರು. ಇವರು ಪರಮ ವೈರಾಗ್ಯಚಕ್ರವರ್ತಿಗಳಾದ ಶಿವಯೋಗಿಗಳೂ, ಜ್ಞಾನವಂತರಲ್ಲಿ ಮಿಗಿಲಾದವರೂ ಮತ್ತು ಶ್ರೀ ಬಸವಣ್ಣನವರ ಗುರುಗಳೂ ಆಗಿದ್ದುದರಿಂದ ಇವರಿಗೆ ಆ ಸ್ಥಾನವು ಸಿಕ್ಕಿದ್ದಿತು. ಇದರ ಕಾರ್ಯದರ್ಶಿಗಳು ಚನ್ನಬಸವಣ್ಣನವರು. ಯಾಕಂದರೆ ಇವರು ಒಳ್ಳೆ ಜ್ಞಾನಿಗಳೂ, ಷಟಸ್ಥಲಾಚರಣೆಯಲ್ಲಿ ಬಲ್ಲಿದರೂ, ಷಟಸ್ಥಲಸ್ಥಾಪನಾಚಾರ್ಯವರ್ಯರೆಂದೆನ್ನಿಸಿಕೊಳ್ಳುವಷ್ಟು ಅದರಲ್ಲಿ ಜ್ಞಾನವನ್ನು ಪಡೆದವರೂ, ಚಿಕ್ಕವಯಸ್ಸಿನವರೂ, ಕಾರ್ಯದಕ್ಷರೂ ಆದುದರಿಂದ ಇವರಿಗೆ ಆ ಸ್ಥಾನವು ಯೋಗ್ಯವಾಗಿದ್ದಿತು. ಶ್ರೀ ಸಿದ್ಧರಾಮ ಶಿವಯೋಗಿಗಳೂ, ಮಡಿವಳ ಮಾಚರಸರೂ, ಹದಿಮೂರು ವರ್ಷದ ಅಕ್ಕಮಹಾದೇವಿಯವರೂ, ಸೊಡ್ಡಳ ಬಾಚರಸರೇ ಮೊದಲಾದವರು ಕಾರ್ಯಕಾರಿ ಮಂಡಲ ಸಭಾಸದರರಾಗಿದ್ದರು. ಮೇಲೆ ಬರೆದ ಮೂರುನೂರು ಶರಣ ಶರಣೆಯರು ಶಿವಾನುಭವ ಗೋಷ್ಠಿಯ ಸಾಮಾನ್ಯ ಸಭೆಯ ಸಭಾಸದರಾಗಿದ್ದರು.

ಯಾವದಾದರೊಂದು ನಿರ್ಣಯವನ್ನು ಮಾಡಬೇಕಾದರೆ ಈ ಸಭೆಯಲ್ಲಿ ಅದರ ಸಾಧಕ ಬಾಧಕಗಳನ್ನು ಚರ್ಚಿಸಿ ನಿರ್ಣಯವನ್ನು ಮಾಡಿ ಸಭಾಧ್ಯಕ್ಷರ ಮುದ್ರೆ ಬಿದ್ದು ಅದು ಪ್ರಚಾರಕರಾದ ಕಾಯಕದ ಪ್ರಮಥರಿಂದ ದೇಶದ ಹಳ್ಳಿಪಳ್ಳಿಗಳಲ್ಲಿಯೂ ಕೂಡ ಅದರ ಪ್ರಚಾರವಾಗಿ ಕೃತಿಯಲ್ಲಿ ಬರುತ್ತಿದ್ದಿತು. ಹೀಗೆ ಅದರ ಕಾರ್ಯಪದ್ಧತಿಯಾಗಿದ್ದಿತು. ಶ್ರೀಬಸವಣ್ಣನವರು ಅದರಲ್ಲಿ ನಿರ್ಣಯಗಳಾದ ವಿಷಯಗಳನ್ನು ಬಹಳ ಆಸ್ಥೆಯಿಂದ ರೂಢಿಯಲ್ಲಿ ತರಲು ಪ್ರಯತ್ನಿಸುತ್ತಿದ್ದರು. ಹೀಗೆ ಶಿವಾನುಭವ ಮಂಟಪದ ಆ ಕಾಲದ ಕಾರ್ಯಕಲಾಪಗಳನ್ನು ವಿಚಾರಪೂರ್ವಕ ವಿಮರ್ಶಿಸಿ ನೋಡಿದರೆ ಶ್ರೀ ಬಸವಣ್ಣನವರು ಅದೆಂತಹ ದೂರದರ್ಶಿಗಳಾಗಿದ್ದರೆಂಬುವದನ್ನು ಈಗಿನ ಪ್ರಜಾಪ್ರಭುತ್ವವನ್ನು ಸಂಘಗಳ ಮೂಲಕ ನಡೆಸುವವರೆಲ್ಲರೂ ಆಶ್ಚರ್ಯಪೂರ್ವಕವಾಗಿ ಒಪ್ಪಿಕೊಳ್ಳದೆ ಗತ್ಯಂತರವಿಲ್ಲವೆಂಬುದನ್ನು ಹೇಳಲೇಬೇಕಾಗುತ್ತದೆ.

ಇಂತಹ ಸಂಘಗಳು ಭರತಖಂಡದಲ್ಲಿಯೇ ಏಕೆ ಜಗತ್ತಿನ ಇನ್ನಿತರ ಭಾಗಗಳಲ್ಲಿಯೂ ಕಡಿಮೆಯೆಂದು ಹೇಳಬಹುದು. ಕೆಲವರು ಶಿವಾನುಭವ ಮಂಟಪದ ಧಾರ್ಮಿಕ ಕಾರ್ಯಕಲಾಪಗಳನ್ನು ಪ್ಲೇಟೋ ಸಂಗ್ರಹಿಸಿದ ಸಾಕ್ರೆಟೀಸನ ಸಂಭಾಷಣೆಗಳಿಗೂ, ತಮಿಳು ನಾಡಿನ ಸಂಘಸಾಹಿತ್ಯಕ್ಕೂ, ಮತ್ತೆ ಕೆಲವರು ಉಪನಿಷತ್ಕಾಲದ ಜನಕರಾಜನ ಸಭೆಗೂ ಮತ್ತು ಅಶೋಕನ ಸಭೆಗೂ ಹೋಲಿಸುತ್ತಾರೆ. ಹೀಗೆ ಶಿವಾನುಭವ ಗೋಷ್ಠಿಯಲ್ಲಿ ಚರ್ಚೆ ನಡೆದು ಸಿದ್ಧಾಂತಪಡಿಸಿದ ಕೆಲವು ವಿಷಯಗಳಿಂದ ಶೂನ್ಯ ಸಂಪಾದನೆಯೆಂಬುವ ಗ್ರಂಥವು ಸಿದ್ಧವಾಗಿರುತ್ತದೆ. ಈ ಗ್ರಂಥವು ಶಿವಾನುಭವ ಮಂಟಪದ ಒಂದು ಚಿಕ್ಕ ಕೈಪಿಡಿಯೆನ್ನಬಹುದು. ಕನ್ನಡ ಸಾಹಿತ್ಯದಲ್ಲಿ ಈ ಗ್ರಂಥದ ರಚನಾ ಪದ್ಧತಿಯು ಅಪೂರ್ವವಾಗಿದ್ದು ಅದೊಂದು ಹೆಮ್ಮೆಯ ಗ್ರಂಥವಾಗಿರುತ್ತದೆ.

ಈ ಶಿವಾನುಭವ ಮಂಟಪದ ಪ್ರಖ್ಯಾತಿಯು ಭರತಖಂಡದ ತುಂಬ ವ್ಯಾಪಿಸಿದ್ದಿತು. ಆದ್ದರಿಂದ ಅನೇಕ ತರಹದ ಜನಗಳು ತಮ್ಮ ತಮ್ಮ ಉದ್ಯೋಗಗಳನ್ನು ಬಿಟ್ಟು ಬಸವಣ್ಣನವರ ವ್ಯಕ್ತಿತ್ವ ಪ್ರಭಾವಕ್ಕೊಳಗಾಗಿ ಕಲ್ಯಾಣಕ್ಕೆ ಧಾವಿಸಿ ಬಂದರು.

ಬಂದವರಲ್ಲಿ ಕಾಶ್ಮೀರದಿಂದ ರಾಮೇಶ್ವರದವರೆಗೂ ಇರುತ್ತಾರೆ. ಈ ಕಾಲದಲ್ಲಿ ಇದ್ದಂತೆ ಆ ಕಾಲದಲ್ಲಿ ವರ್ತಮಾನ ಪತ್ರಿಕೆಗಳಾಗಲೀ, ತಂತಿಯಿಲ್ಲದೆ ಸಮಾಚಾರ ಕಳಿಸುವ ಯಂತ್ರಗಳಾಗಲೀ, ಆಕಾಶವಾಣಿಗಳಾಗಲೀ ಇರಲಿಲ್ಲ. ಶ್ರೀ ಬಸವಣ್ಣನವರ ಅಲೌಕಿಕವಾದ ವ್ಯಕ್ತಿತ್ವವೇ ಇದಕ್ಕೆ ಮುಖ್ಯ ಕಾರಣವಾಗಿದ್ದಿತು. ಅರ್ಥಾತ್ ಅವರ ವಾಣಿಯೇ ಬ್ರಾಡ್‌ಕ್ಯಾಸ್ಟ್ ದೇವವಾಣಿಯಾಗಿದ್ದಿತು. ಕಾಶ್ಮೀರದೇಶದಲ್ಲಿ ರಾಜರಾಗಿದ್ದ ಮೋಳಿಗೆಯ ಮಾರಯ್ಯನವರೂ ಬಂದಂತೆ ದಕ್ಷಿಣ ದೇಶದಲ್ಲಿ ರಾಜರಾಗಿದ್ದ ಕಲ್ಲುಕುರಿಕೆಯ ಸಕಲೇಶ ಮಾದರಸರೂ ಬಂದಿದ್ದರು. ಹೀಗೆಯೇ ಬೇರೆ ಬೇರೆ ಪ್ರಾಂತಗಳಿಂದ ಅಂದರೆ, ಭರತಖಂಡದ ಎಲ್ಲಾ ಭಾಗಗಳಿಂದಲೂ ಬಂದಿದ್ದರು. ಎಲ್ಲ ಜಾತಿಯವರಿಗೂ ಅಲ್ಲಿ ಪ್ರವೇಶವಿತ್ತು; ಆದರೆ ಅವರೆಲ್ಲರೂ ಆಚಾರನಿಷ್ಠರಾಗಿ ಲಿಂಗವಂತ ಧರ್ಮವನ್ನು ಸ್ವೀಕರಿಸಿದ್ದರೆ ಮಾತ್ರ ಆ ಸಭೆಯ ಸಭಾಸದರಾಗಲು ಅವರಿಗೆ ಅಧಿಕಾರ ಪ್ರಾಪ್ತವಾಗುತ್ತಿತ್ತು. ಇಲ್ಲದಿದ್ದರೆ ಧಾರ್ಮಿಕ ಕ್ರಾಂತಿಯ ಶರಣರು ಒಪ್ಪುತ್ತಿದ್ದಿಲ್ಲ. ಇದಕ್ಕೆ ಯೋಗಿಗಳಾದ ಶ್ರೀ ಸಿದ್ಧರಾಮದೇವರ ಉದಾಹರಣೆಯೇ ಸಾಕಾಗಿರುತ್ತದೆ. ಶ್ರೀ ಸಿದ್ಧರಾಮದೇವರು ಪ್ರಬಲರಾದ ಯೋಗಿಗಳಾಗಿದ್ದರೂ ಲಿಂಗಧಾರಣವಿಲ್ಲದೆ ಅವರಿಗೆ ಶಿವಾನುಭವ ಮಂಟಪದಲ್ಲಿ ಪ್ರವೇಶವು ದೊರೆಯಲಿಲ್ಲ.

ಹೀಗೆ ತಂಡೋಪತಂಡವಾಗಿ ಬಂದು ಶ್ರೀ ಬಸವಣ್ಣನವರ ಧಾರ್ಮಿಕ ಕ್ರಾಂತಿಯಲ್ಲಿ ಕೂಡಿಕೊಳ್ಳುತ್ತಿದ್ದರೆಂಬುವದು ಶ್ರೀ ಬಸವಣ್ಣನವರ ಧಾರ್ಮಿಕ ಕ್ರಾಂತಿಯ ಮಹತ್ವವು ಸ್ಪಷ್ಟವಾಗಿ ಹೊಳೆಯುತ್ತಲಿದೆ. ಈ ಅನುಭವಮಂಟಪದಲ್ಲಿರತಕ್ಕ ಶಿವಶರಣರು ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿದವರಾಗಿದ್ದರು. ಅವರು ಯಾವ ಉದ್ಯೋಗವನ್ನೇ ಮಾಡಲಿ, ಅದರಲ್ಲಿ ಮೇಲುಕೀಳುಗಳೆಂಬುವ ಭಾವನೆಗೆ ತಿಲಮಾತ್ರವೂ ಎಡೆಯಿರಲಿಲ್ಲ ಎಂಬುವದು ಮಹತ್ವದ ಮಾತಾಗಿರುತ್ತದೆ. ಇವರಲ್ಲಿ ಕಾಶ್ಮೀರದ ಅರಸನಾಗಿ ರಾಜ್ಯತ್ಯಾಗ ಮಾಡಿ ಬಂದು ಶ್ರೀ ಬಸವಣ್ಣನವರ ಧರ್ಮಸಾಮ್ರಾಜ್ಯದಲ್ಲಿ ಕಟ್ಟಿಗೆಗಳನ್ನು ಮಾರುವ ಕಾಯಕವನ್ನು ಕೈಕೊಂಡಿದ್ದ ಮೋಳಿಗೆಯ ಮಾರಯ್ಯನವರ ಹೆಸರು ಮಾತ್ರ ಮೊದಲು ಉಲ್ಲೇಖ ಮಾಡಲಿಕ್ಕೆ ಯೋಗ್ಯವಾದುದಾಗಿರುತ್ತದೆ. ಇವರಂತೆಯೇ ರಾಜ್ಯ

ತ್ಯಾಗ ಮಾಡಿ ಬಂದ ದಕ್ಷಿಣ ದೇಶದ ಅರಸು ಕಲ್ಲುಕುರಿಕೆಯ ಸಕಲೇಶ ಮಾದರಸರ ಹೆಸರೂ ಪ್ರಾಮುಖ್ಯವಾಗಿರುತ್ತದೆ. ಹಡಪದ ಅಪ್ಪಣ್ಣನವರೂ, ಜೇಡರ ದಾಸೀ ಮಾರ್ಯರೂ, ಶಿಂಪಿಗರಾದ ಶಂಕರದಾಸೀಮಾರ್ಯರೂ ಇವರಿಬ್ಬರೂ ಬಸವಣ್ಣ ನವರಿಗಿಂತ ಕೊಂಚ ಹಿರಿಯರು. ಈ ಶಿವಾನುಭವ ಮಂಟಪದಲ್ಲಿ ಅವರು ವೃದ್ಧ ರಾಗಿದ್ದರು. ಮಡಿವಾಳ ಕಾಯಕದ ಮಾಚಿದೇವರು ವೀರಾಗ್ರೇಸರರಾಗಿದ್ದರು. ರಾಮಣ್ಣನವರು ದನಗಳನ್ನು ಕಾಯುತ್ತಿದ್ದರು. ಸುಂಕದ ಬಂಕಣ್ಣ, ಅಕ್ಕಸಾಲಿಗನಾದ ಬೊಮ್ಮಣ್ಣ, ತೊಗಲಗಾರ ಡೋಹಾರ ಕಕ್ಕಯ್ಯ, ತಳವಾರ ರಾಮದೇವ, ವೈದ್ಯ ಸಂಗಣ್ಣ, ನೂಲಿ ಚಂದಯ್ಯ, ಬೇಡರವನಾದ ಸಂಗಯ್ಯ, ಸೂಜಿಕಾರ ರಾಮತಂದೆ, ಕಂಚುಗಾರ ಚಿಕ್ಕದೇವ, ಕನ್ನಡಿಕಾರನಾದ ಅಮ್ಮಿದೇವ, ಮೇದಾರ ಕೇತಯ್ಯ, ಆಯ್ದಕ್ಕಿಯ ಮಾರಯ್ಯ, ಒಕ್ಕಲು ಮುದ್ದಯ್ಯ, ಗಾಣದ ಕನ್ನಪ್ಪಯ್ಯ, ಶಿಪಾಯಿಯಾದ ಜೋಧರ ಮಾದಣ್ಣ, ಬಾಚಿಯ ಕಾಯಕದ ಬಡಿಗ ಬಸವಪ್ಪ, ಸತ್ತಿಗೆ ಕಾಯಕದ ರಾಮತಂದೆ, ಕೊಟ್ಟಣದ ಸೋಮವ್ವೆ, ಸತ್ಯಕ್ಕ, ಮುಕ್ತಾಯಕ್ಕ, ಅಕ್ಕಮಹಾದೇವಿ, ತಿಮ್ಮವ್ವೆ, ಸೋಮವ್ವೆ, ಲಿಂಗಮ್ಮ, ಕಾಳವ್ವೆ, ಗಂಗಾಂಬಿಕಾ, ನೀಲಾಂಬಿಕಾ ಮೊದಲಾದವರೆಲ್ಲರೂ ತಮತಮಗೆ ಶಕ್ಯವಾದ ಒಂದೊಂದು ಕಾರ್ಯಗಳನ್ನು ಮಾಡು ತ್ತಿದ್ದರು.

ಈ ಪ್ರಕಾರವಾಗಿ ಸಕಲ ಜಾತಿಯವರಿಂದ ಕೂಡಿ ೧೨ನೆಯ ಶತಮಾನದಲ್ಲಿ ಕರ್ಣಾಟಕದಲ್ಲಿ ಕಂಗೊಳಿಸುತ್ತಿದ್ದ ಈ ಧಾರ್ಮಿಕ ಶಿವಾನುಭವ ಮಂಟಪವನ್ನು ನೋಡ ಲನುಕೂಲವಾಗಿದ್ದರೆ ಈಗಿನ ಕಾಲದ ಎಷ್ಟೋ ಸಮಾಜ ಸುಧಾರಕರು ಹಿರಿಹಿರಿ ಹಿಗ್ಗುತ್ತಿದ್ದರು. ಕುಲ, ಜಾತಿ, ಬಣ್ಣ, ಭಾಷೆ, ಸ್ತ್ರೀಯರು, ಪುರುಷರು, ಸಣ್ಣವರು, ದೊಡ್ಡವರು, ಬಡವರು, ಬಲ್ಲಿದರು, ವಿದ್ಯಾವಂತರು, ನಿರಕ್ಷರಿಗಳು ಮುಂತಾದ ಭೇದಗಳನ್ನು ಕಿತ್ತೊಗೆದು, ಲಿಂಗನಿಷ್ಠರಾದವರೆಲ್ಲ ಪರಸ್ಪರ ಭೋಜನ, ಲಗ್ನ, ಶಿವಾನುಭವಜ್ಞಾನ ಮೊದಲಾದ ವಿಷಯಗಳಲ್ಲಿ ಅದೆಷ್ಟು ಪ್ರೇಮದಿಂದಿರುತ್ತಿದ್ದರು ಎಂಬುವದನ್ನು ನೋಡಿದರೆ ಹಿಂದುಸ್ಥಾನದ ಇತಿಹಾಸದಲ್ಲಿಯೇ ಇದು ಅದ್ವಿತೀಯವೂ, ಅನುಕರಣೀಯವೂ ಆಗಿರುತ್ತದೆ.

ಆದರೆ ಈಗಿನ ಲಿಂಗವಂತ ಸಮಾಜವು ಈ ವಿಷಯಗಳಿಗೆ ತೀರಾ ವಿರುದ್ಧವಾದ ಆಚರಣೆಯುಳ್ಳದ್ದಾಗಿ ಪರಸ್ಪರ ದ್ವೇಷ, ಮಿಥ್ಯಾರೋಪ, ನಾ ಹೆಚ್ಚು ನೀ ಹೆಚ್ಚು ಎಂಬುವ ಹುಚ್ಚುತನ ಮೊದಲಾದ ದುರ್ಗುಣಗಳಿಂದ ಕೂಡಿರುವದನ್ನು ನೋಡಿದರೆ, ಸಮಾಜಾಭಿಮಾನಿಯಾದವನಿಗೆ ಖೇದವಾಗದಿರದು. ಇಂತಹ ದುರ್ಗುಣಗಳನ್ನು ವೀರಶೈವನಾದವನು ದೂರೀಕರಿಸಿ, ಜಗತ್ತನ್ನೇ ಬೆರಗುಗೊಳಿಸುವ ಶಿವಾನುಭವ ಮಂಟಪದ ಕಾರ್ಯಗಳನ್ನು ನೆನೆದುಕೊಂಡು, ಅದರಂತೆ ಆಚರಿಸಿ, ವೀರಶೈವ ಸಮಾಜ ಜಗತ್ತಿನಲ್ಲಿ ತಲೆಯೆತ್ತಿ ಮೆರೆಯುವಂತೆ ಮಾಡುವದೇ ನಿಜವಾದ ವೀರಶೈವನ ಕರ್ತವ್ಯ.

ಶ್ರೀಮಾನ್ ಚನ್ನಪ್ಪನವರು ಉತ್ತಂಗಿ ಇವರು ತಾವು ಬರೆದ ಶಿವಾನುಭವ ಮಂಟಪವೆಂಬುವ ಚಿಕ್ಕ ಹೊತ್ತಿಗೆಯಲ್ಲಿ ಕೆಳಗೆ ಬರೆದ ೧೪ ಕಾರ್ಯಗಳನ್ನು ಅದು ತನ ಧ್ಯೇಯನಿರೂಪಣೆಯಲ್ಲಿಟ್ಟುಕೊಂಡಿತ್ತೆಂಬುವದನ್ನು ಬರೆದಿರುತ್ತಾರೆ.

(೧) ಈ ಸಂಸ್ಥೆಯು ಪ್ರತಿಮಾಪೂಜೆಯಿಂದ ತುಂಬಿದ ಹಿಂದೂದೇಶದಲ್ಲಿ ಶಿವನನ್ನು ಹೊಸ ರೀತಿಯಿಂದ ಪೂಜಿಸುವದಕ್ಕೆ ಹತ್ತಿತು. ಈ ನೂತನ ಪದ್ಧತಿಗೆ ಇಷ್ಟಲಿಂಗಪೂಜೆ ಯೆಂದು ಹೆಸರು. ಆಗ ಮುಖ್ಯ ಮತಧರ್ಮವು ವೇದದ ಕರ್ಮಮಾರ್ಗಗಳನ್ನು ತೊರೆದು ಯಜ್ಞವೇದಿಕೆಯ ಬದಲಾಗಿ ಸ್ಥಾವರ ಲಿಂಗಪೂಜೆಯನ್ನು ಪ್ರಚಾರದಲ್ಲಿ ತಂದರೆ ಈ ಸಂಸ್ಥೆಯು ಉಭಯ ಮಾರ್ಗಗಳನ್ನು ಸುಧಾರಿಸಿ ಮೇಲೆ ಹೇಳಿದಂತೆ ಹೊಸ ಮಾರ್ಗವನ್ನು ಕಲ್ಪಿಸಿಕೊಟ್ಟಿತು.

ಇದು ಸಾಕಾರ ನಿರಾಕಾರಗಳೆರೆಡಕ್ಕೂ ಸಂಬಂಧಿಸಿರುವದರಿಂದ ಒಂದು ತರಹದ ಸುಧಾರಣೆಯಾಯಿತೆನ್ನಬಹುದು. ಉಪನಿಷತ್ತುಗಳಲ್ಲಿ ನಿರ್ದಿಷ್ಟವಾದ ನಿರಾಕಾರ ಬ್ರಹ್ಮನನ್ನು ಇಷ್ಟಲಿಂಗದಲ್ಲಿಯೇ ಅಂದರೆ ರೂಪರಹಿತವಾದ ರೂಪದಲ್ಲಿಯೇ ಪೂಜಿಸ ಬೇಕೆಂಬುವದು ಇವರ ತಿಳುವಳಿಕೆ. 'ತಿಳಿದಂತೆ ನಡೆಯುವದೇ ಕ್ರಿಯೆಯು' ಎಂಬುದು ಶರಣರ ಸೂತ್ರದ ಸಾರ್ಥಕತೆಯು. ಇಷ್ಟಲಿಂಗವು ಆತ್ಮಲಿಂಗದ ಪ್ರತಿಚ್ಛಾಯೆ ಯಾಗಿದ್ದು ವ್ಯಕ್ತಿಗತವಾಗಿರುವುದರಿಂದಲೂ, ಅದು ಗುಡಿಯೊಳಗಿನ ಯಾವ ದೇವತೆ ಇಲ್ಲವೆ ಸ್ಥಾವರಲಿಂಗಗಳಂತೆ ಸಾಮಾನ್ಯವಾಗಿ ಸರ್ವರಿಂದ ಪೂಜಿಸಲ್ಪಡದೆ ಇರುವದ ರಿಂದಲೂ, ಇಷ್ಟಲಿಂಗವು ಚಿಲ್ಲಿಂಗಕ್ಕೆ ಸಾಂಕೇತಿಕವಾಗುವದರಿಂದಲೂ ಇಷ್ಟಲಿಂಗ ಪೂಜೆಯು ಮೂರ್ತಿಪೂಜೆಯಲ್ಲವೆಂದು ವೀರಶೈವ ಸಿದ್ಧಾಂತ. ಇದಲ್ಲದೆ ಇದು ಅನೇಕ ದೇವತೋಪಾಸನೆಯನ್ನು ಖಂಡಿಸಿ ಏಕದೇವೋಪಾಸನೆಯನ್ನು ಸ್ಥಾಪಿಸಿದ್ದರಿಂದ ದೇವರು ಒಬ್ಬನೇ ಎಂಬುವ ಪ್ರಥಮ ಆಜ್ಞೆಯನ್ನು ಹಿಂದೂದೇಶದಲ್ಲಿ ಘಂಟಾಘೋಷವಾಗಿ ಸಾರಿತೆಂದು ಹೇಳಬಹುದು. ಹೇಗೆಯೇ ಇರಲಿ, ಹಿಂದೂ ಜನಗಳ ರಕ್ತದಲ್ಲಿ ಬೆರೆತು ಹೋಗಿರುವ ಮೂರ್ತಿಪೂಜೆಯ ವಿಷಯದಲ್ಲಿ ಈ ಸಂಸ್ಥೆಯು ಸ್ಥಿತ್ಯಂತರವನ್ನುಂಟು ಮಾಡಿತೆಂಬುವದು ಮಾತ್ರ ನಿರ್ವಿವಾದವಾದುದಾಗಿದೆ.

(೨) ಇದು ಲಿಂಗದೀಕ್ಷೆಯ ಮೂಲಕವಾಗಿ ತನ್ನ ಧರ್ಮದ ದ್ವಾರವನ್ನು ಎಲ್ಲಾ ಜಾತಿಯ ಸ್ತ್ರೀ-ಪುರುಷರಿಗೆ ತೆರೆದಿಟ್ಟಿತು. ಅದರಿಂದ ಹಿಂದೂ ಸಮಾಜದ ಜೀವನದಲ್ಲಿ ಅತಿ ದೊಡ್ಡ ಕ್ರಾಂತಿಯನ್ನುಂಟುಮಾಡಿತೆಂದು ಹೇಳಬೇಕು. ಇದು ನೂರೆಂಟು ಜಾತಿ ಮತ ಪಂಥಗಳುಳ್ಳ ಹಿಂದೂ ಸಮಾಜವನ್ನು ಒಂದುಗೂಡಿಸಿ, ಅದನ್ನು ಉಚ್ಚತರಹದ ಸಮಾನತ್ವದ ಮೇಲೆ ರಚಿಸಿ, ಕೀಳು ಮೇಲೆನ್ನದೆ ಎಲ್ಲರೂ ಸಮಾನರೆಂದು ಸಾರಿ ಹೇಳಿತು. ಇದರಿಂದ ಸಮಾಜದಲ್ಲಿ ಬಂಧು ಭಾವನೆಯೂ, ಭಗಿನಿ ಭಾವನೆಯೂ ಬೆಳೆಯಿತು. ಸ್ತ್ರೀಯರಿಗೆ ಪುರುಷರಂತೆ ಸಮಾನ ಹಕ್ಕುಗಳು ದೊರೆತವು. ಅದರಿಂದ ಧಾರ್ಮಿಕ ಹಾಗೂ ಸಾಮಾಜಿಕ ವಿಷಯಗಳಲ್ಲಿ ಪ್ರತಿಯೊಂದು ವ್ಯಕ್ತಿಗೆ ಸಂಪೂರ್ಣ ಸ್ವಾತಂತ್ರ್ಯವು ಸಿಕ್ಕಿತು. ಈಗ ವೀರಶೈವರಲ್ಲಿ ರೂಢವಾಗಿರುವ ಅಪ್ಪ, ಅಣ್ಣ, ಅಯ್ಯ, ಅಕ್ಕ ಮುಂತಾದ ನಾಮವಾಚಕಗಳು ಅನುಭವ ಮಂಟಪ ಸೂಚಕವಾಗಿರುತ್ತವೆ. ಇಷ್ಟಲಿಂಗಕ್ಕೆ ಒಬ್ಬ ವಿಲಾಯತಿಯ ಪಂಡಿತರು, "ಸಾಮಾಜಿಕ ತಗ್ಗುದಿಣ್ಣೆಗಳನ್ನು ಸಮಮಾಡುವ ಸಾಧನ" ಎಂದು ಕರೆದಿದ್ದಾರೆ.

(೩) ಷಟ್‌ಸ್ಥಲ ಸಿದ್ಧಾಂತದ ಮೂಲಕ ಇದು ಕರ್ಮವಾದದ ಬೇರುಗಳನ್ನೆಲ್ಲ ಸಡಿಲಿಸಿಬಿಟ್ಟಿತು. ಹಿಂದೂ ಧರ್ಮದ ಪ್ರಕಾರ ಕರ್ಮಿಗೆ ಮುಕ್ತಿ ಇಲ್ಲ. ಅದು ಅವನಿಗೆ ಫಲಪದವನ್ನು ಕೊಡುವದಲ್ಲದೆ ನಿತ್ಯಪದವನ್ನು ಕೊಡಲಾರದು. ಅದರಿಂದ

೮೪ ಲಕ್ಷ ಯೋನಿಗಳಲ್ಲಿ ತಿರುಗುತ್ತಿರಬೇಕು. ಅತ್ತಕಡೆಯಲ್ಲಿ ಜ್ಞಾನಮಾರ್ಗವು ಮುಕ್ತಿಯನ್ನು ಕೊಡುವದಾಗಿದ್ದರೂ ಅದು ಜ್ಞಾನಿಗಳಾದ ಬಹು ಕೊಂಚ ಜನರಿಗೆ ಮಾತ್ರ ಸಾಧ್ಯ. ಅವರೂ ಸಹ ಕ್ರಿಯಾಶೂನ್ಯರಾಗುತ್ತಾ ಕ್ರಿಯೆಯು ಜ್ಞಾನಕ್ಕೆ ಸಾಧನವೆಂದು ತಿಳಿದಿದ್ದರಿಂದ ಹಿಂದೂದೇಶವು ಕ್ರಿಯಾಶೂನ್ಯವಾಯಿತು. ಇದನ್ನು ಪರಿಹರಿಸುವದಕ್ಕಾಗಿ ಭಗವದ್ಗೀತೆಯು ಮಧ್ಯಮ ಮಾರ್ಗವನ್ನು ಹಿಡಿದು ಕ್ರಿಯೆಯನ್ನು ಸಂಪೂರ್ಣ ನಿಲ್ಲಿಸುವದಕ್ಕೆ ಸಾಧ್ಯವಿಲ್ಲವೆಂದೂ, ಅದರಿಂದ ಕ್ರಿಯೆಯನ್ನು ಮಾಡಿದರೂ ಅದರ ಫಲವನ್ನು ಅಪೇಕ್ಷಿಸದೆ ಇರುವದೇ ಕರ್ಮಬಂಧನದಿಂದ ಮುಕ್ತವಾಗುವ ಮಾರ್ಗವೆಂದೂ ಕರ್ಮಯೋಗವನ್ನು ಸಾರಿತು. ಮತ್ತೊಂದು ಕಡೆಯಲ್ಲಿ ಭಕ್ತಿ ಮಾರ್ಗವು ಅನನ್ಯಮನಸ್ಸಿನಿಂದ ಶರಣಾಗತನಾದವನಿಗೆ ಕರುಣಾಸಾಗರನಾದ ದೇವರು ಕೇವಲ ಕೃಪೆಯಿಂದ ಸಕಲ ಪಾಪಗಳನ್ನೂ ಕ್ಷಮಿಸುವನೆಂದೂ ಹೇಳಿತು. ಆದರೆ, ಈ ವಾದವು ಮಾಡಿದ್ದನ್ನು ತಿಂದೇತೀರಬೇಕೆಂಬುವ ಕರ್ಮವಾದಕ್ಕೆ ವಿರೋಧವಾಗಿದೆ. ಹೀಗೆಯೇ ವಿವಿಧ ವಿಚಾರವುಳ್ಳ ಹಿಂದೂದೇಶದಲ್ಲಿ ಈ ಸಂಸ್ಥೆಯು ಒಂದೇ ಜನ್ಮದಲ್ಲಿ ಮುಕ್ತಿಯನ್ನು ಹೊಂದಲು ಶಕ್ಯವಿದೆಯೆಂದು ತೋರಿಸಿಕೊಟ್ಟದ್ದಲ್ಲದೆ ಲಿಂಗಧಾರಣದ ಮೂಲಕ ಅದು ಪ್ರತಿಯೊಬ್ಬನ ಸೊತ್ತೆಂದು ಪ್ರಕಟವಾಯಿತು. ಹಿಂದಿನ ಜನ್ಮವುಂಟು, ಆದರೆ ಮುಂದಿನ ಜನ್ಮವಿಲ್ಲವೆಂಬುದೇ ವೀರಶೈವ ಸಿದ್ಧಾಂತವು. ಮೋಕ್ಷ ವಿಚಾರದಲ್ಲಿ ದೇವರ ಕೃಪೆ, ಮನುಷ್ಯ ಪ್ರಯತ್ನ ಇವೆರಡಕ್ಕೆ ಭೇದಭಾವವು ಇಲ್ಲವೆಂದು ತೋರಿಸುವದೇ ಲಿಂಗಾಂಗಿಯ ಸಕೀಲ ಕರ್ಮಗಳಲ್ಲಿ ಜನ್ಮವನ್ನು ಕೊಡುವ ಬೀಜಶಕ್ತಿಯನ್ನು ನಾಶಮಾಡಿ ಅವೆಲ್ಲವುಗಳನ್ನು ಪ್ರಸಾದರೂಪವಾಗಿ ಪ್ರಕಾಶಿಸುವಂತೆ ಇಡುವದೇ ಷಟ್‌ಸ್ಥಲ ಸಿದ್ಧಾಂತವು. ಪ್ರಾರಬ್ಧಕರ್ಮವನ್ನು ಸಹ ಪ್ರಸಾದರೂಪವಾಗಿ ಹೇಗೆ ಭೋಗಿಸಬೇಕೆಂಬುವದಕ್ಕೆ ಇದೊಂದು ಬಸವಣ್ಣನವರ ವಚನ—

> ಪಂಡಿತನಾಗಲಿ ಮೂರ್ಖನಾಗಲಿ ಸಂಚಿತ ಕರ್ಮ ಉಂಡಲ್ಲದೆ ಬಿಡದು. ಪ್ರಾರಬ್ಧ ಕರ್ಮ ಭೋಗಿಸಿದಲ್ಲದೆ ಹೋಗದೆಂದು ಶೃತಿ ಸಾರುತೈದಾವೆ ನೋಡಾ. ತಾನಾವ ಲೋಕದೊಳಗಿದ್ದಡೆಯೂ ಬಿಡದು ಕರ್ಮ ಕರ್ಮಫಲಗೂಡಿ ಕೂಡಲಸಂಗಮದೇವರಿಗೆ ಆತ್ಮನೈವೇದ್ಯವ ಮಾಡಿದಾತನೇ ಧನ್ಯನು.

(೪) ಆಧ್ಯಾತ್ಮಿಕ ವಿಷಯದಲ್ಲಿ ಸ್ತ್ರೀಯರು ಪುರುಷರಿಗಿಂತ ಯಾವರೀತಿಯಿಂದಲೂ ಕಡಿಮೆಯುವರಿಲ್ಲವೆಂದು ಇದು ತೋರಿಸಿಕೊಟ್ಟಿತು. ಇದರಿಂದ ಸ್ತ್ರೀಯರ ಉನ್ನತಿಯು ವಿಲಕ್ಷಣವಾಗಿ ಆಯಿತು. ಅನೇಕ ಸ್ತ್ರೀಯರು ಶಿವಾನುಭವದಲ್ಲಿ ಪುರುಷರನ್ನು ಹಿಮ್ಮೆಟ್ಟಿಸಿದರು. ಜೈನರಾಗಲೀ, ಬ್ರಾಹ್ಮಣರಾಗಲೀ ಸ್ತ್ರೀಯರಿಗೆ ಹೀಗೆ ಅಧಿಕಾರವನ್ನು ಕೊಟ್ಟಿರಲಿಲ್ಲ. ಜೈನರು ಸ್ತ್ರೀಯರಿಗೆ ಮೋಕ್ಷವೇ ಇಲ್ಲವೆಂದು ಹೇಳಿದ್ದರು. ಮತ್ತು ಬ್ರಾಹ್ಮಣರು ಸ್ತ್ರೀಯರಿಗೆ ಮೋಕ್ಷಕ್ಕೆ ಅಧಿಕಾರವಿದ್ದರೂ ವೇದಗಳನ್ನು ಓದುವದಕ್ಕೆ ಅಧಿಕಾರವಿಲ್ಲವೆಂದು ನಿರ್ಬಂಧಪಡಿಸಿದ್ದರು. ಮಹದೇವಿಯಕ್ಕ, ಸತ್ಯಕ್ಕ ಮುಂತಾದ ಅತ್ಯುತ್ಕಟ ಶಿವಭಕ್ತಿಯುಳ್ಳ ನಿಷ್ಕಳಂಕ ಹಾಗೂ ಸ್ವತಂತ್ರವಾದ ಶೀಲವುಳ್ಳ ಶಿವ ಶರಣೆಯರು ಉದ್ಭವವಾಗುವದಕ್ಕೆ ಈ ಅನುಭವ ಮಂಟಪದಂತಹ ಸಂಸ್ಥೆಗಳು ಹುಟ್ಟಿಸಿದ ಅನುಕೂಲ ವಾತಾವರಣವೇ ಕಾರಣವಾಯಿತು. ಇವರ ಸಂಖ್ಯೆ ಸುಮಾರು

೬೦. ಇವರಲ್ಲಿ ಅನೇಕರ ವಚನಗಳು ಓದತಕ್ಕವುಗಳಾಗಿವೆ. ಇವರು ವೀರಶೈವ ಧರ್ಮಕ್ಕೆ ಮಾತ್ರವೇ ಅಲ್ಲ, ಇತರ ಸ್ತ್ರೀ ಸಮಾಜಕ್ಕೂ ಭೂಷಣರಾಗಿರುತ್ತಾರೆ.

(೫) ಈ ಅನುಭವ ಮಂಟಪದ ವಿದ್ಯುತ್ ಶಕ್ತಿಯು ಆಗರದಲ್ಲಿ ಹುಟ್ಟಿದ ಶಕ್ತಿಯ ಮೂಲಕ ಇಡೀ ಸಮಾಜದಲ್ಲಿ ಒಂದು ತರಹದ ಹೊಸ ಜೀವ, ಹೊಸ ಬೆಳಕು, ಹೊಸ ತೇಜಸ್ಸು ಮಿಂಚತೊಡಗಿತು. ಅದರ ಪರಿಣಾಮವು ಏನಾಯಿತೆಂದರೆ ಅತ್ಯಂತ ಪಾಪಿಗಳೂ, ನೀಚರಾಗಿರುವವರೂ ಕೂಡ ಪಾವನರಾಗಿರುವರು. ಮತ್ತು ಇವರು ತಮ್ಮ ನೀಚತನವನ್ನು ಬಿಟ್ಟುಕೊಟ್ಟು ಒಳ್ಳೆಯ ಮಾರ್ಗವನ್ನವಲಂಬಿಸಿದರು. ಅನುಭವ ಮಂಟಪದ ಉಷ್ಣತೆಯಿಂದ ಅನೇಕ ಹಸಿ ಇದ್ದಲಿಗಳು ಹೊತ್ತಿ ಉರಿಯಹತ್ತಿದವು.

(೬) ಈ ಸಂಸ್ಥೆಯು ಪ್ರತಿಯೊಬ್ಬ ವ್ಯಕ್ತಿಗೆ ವಿಚಾರ ಸ್ವಾತಂತ್ರ್ಯವನ್ನೂ, ಆಚಾರ ಸ್ವಾತಂತ್ರ್ಯವನ್ನೂ ಕೊಟ್ಟಿತು. ಅದರಿಂದ ಮಂಟಪಕ್ಕೆ ಸೇರಿದ ಪ್ರತಿಯೊಬ್ಬ ಸ್ತ್ರೀ ಪುರುಷರೆಂಬ ವ್ಯತ್ಯಾಸವಿಲ್ಲದೆ ಶಿವಾನುಭವವನ್ನು ಸಂಪಾದಿಸಿಕೊಳ್ಳುವದಕ್ಕೆ ಪ್ರಯತ್ನಿಸ ಲಾರಂಭಿಸಿದರು. ಮತ್ತು ತಾನು ಸಂಪಾದಿಸಿದ ಆಧ್ಯಾತ್ಮಿಕ ಅನುಭವವನ್ನು ಶೂನ್ಯ ಪೀಠವನ್ನಲಂಕರಿಸಿದ ಪ್ರಭುದೇವರ ಚರಣಕಮಲಗಳಿಗೆ ಬಹು ವಿನಯದಿಂದ ಸಮರ್ಪಿ ಸಿದ ಬಳಿಕ ಅನುಭವ ಮಂಟಪದಲ್ಲಿದ್ದ ಇತರ ಶಿವಶರಣರು ಇದರ ಯೋಗ್ಯಾಯೋಗ್ಯತೆ ಯನ್ನು ಕುರಿತು ವಾದಮಾಡುವರು. ಅವರವರು ಪಡೆದುಕೊಂಡ ಇಲ್ಲವೇ ಸಂಪಾದಿಸಿದ ಶಿವಾನುಭವಕ್ಕೆ ಸಂಪಾದನೆಯೆಂದು ಹೆಸರು. ಇದು ತರುವಾಯದ ಕಾಲದಲ್ಲಿ ಅವರವರ ಸಂಪಾದನೆಯೆಂದು ಕರೆಯಲ್ಪಟ್ಟಿತು. ಶೂನ್ಯಸಂಪಾದನೆಯೆಂಬುದರ ಅರ್ಥವನ್ನು ಈ ಪುಸ್ತಕದ ಕೊನೆಯಲ್ಲಿ ಕೊಟ್ಟಿದೆ.

(೭) ಇದು ಕನ್ನಡ ವಾಙ್ಮಯದಲ್ಲಿ ಹೊಸ ಜೀವಕಳೆಯನ್ನು ತುಂಬಿತು. ಬಸವನಿಗಿಂತ ಮುಂಚೆ ಕನ್ನಡ ಭಾಷೆಯು ಪ್ರಾಕೃತ ಸಂಸ್ಕೃತಮಯವಾಗಿದ್ದು ವಿಶಿಷ್ಟ ವರ್ಗದವರಲ್ಲಿ ಮಾತ್ರವೇ ಆದರಣೀಯವಾಗಿತ್ತು. ಆದರೆ ಮುಂದೆ ಸಾಮಾನ್ಯರಿಗೂ ಕೂಡ ಕನ್ನಡ ಭಾಷೆಯ ಬಗ್ಗೆ ಅಭಿಮಾನ ಹುಟ್ಟಿತು. ಮತ್ತು ಆ ಶಿವಶರಣರ ಹೃದಯ ದಿಂದ ಹೊರಹೊಮ್ಮಿದ ಮಿಂಚಿನಂತಹ ಉದ್ಗಾರಗಳು ಕನ್ನಡ ವಾಙ್ಮಯದಲ್ಲಿ ಹೊಸ ತೇಜವನ್ನು ಹುಟ್ಟಿಸಿದವು. ಇವುಗಳಿಗೆ ದಕ್ಷಿಣ ಹಿಂದೂಸ್ಥಾನದ ಉಪನಿಷತ್ತುಗಳೆಂದರೂ ಸಲ್ಲುವದು. ೧೯೧೯ನೆಯ ಇಸವಿಯ ಡಿಶೆಂಬರ್ ತಿಂಗಳಿನಲ್ಲಿ ಕಾರವಾರದಲ್ಲಿ ಜರುಗಿದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ದಿವಂಗತ ಪಂಡಿತ ಮುಳಿಯ ತಿಮ್ಮಪ್ಪಯ್ಯ ನವರು ಹೇಳಿದ ಮಾತುಗಳು ಇಲ್ಲಿ ಉದಾಹರಿಸಲಿಕ್ಕೆ ಯೋಗ್ಯವಾದವುಗಳಾಗಿವೆ. "ಸಾಹಿತ್ಯವು ಲಕ್ಷಣಬದ್ಧವಾಗಿರಬೇಕೆಂದು ಹೋರಾಡಿದ ಮನ್ನಣೆಯು ಜೈನರಿಗೆ; ಸಾಹಿತ್ಯವೆಂದರೆ ಒಬ್ಬರ ಸೊತ್ತಲ್ಲ, ಅದು ಜನಸಾಮಾನ್ಯರ ಹಕ್ಕಿನದು ಎಂದು ಅದನ್ನು ಊರಲ್ಲೆಲ್ಲ ಹಾಸುಹೊಕ್ಕಾಗಿ ಹೆಣೆದ ಹೆಗ್ಗಳಿಕೆ ವೀರಶೈವರಿಗೆ; ಒಂದು ತಣ್ಣೀರು ಮತ್ತೊಂದು ಬಿಸಿನೀರು ಇವೆರಡನ್ನೂ ಸೇರಿಸಿದ ಜಾಣ್ಮೆ ವೈಷ್ಣವರಿಗೆ."

(೮) ಪ್ರತಿಯೊಬ್ಬನೂ ಯಾವದಾದರೊಂದು ಕಾಯಕವನ್ನು ಕೈಕೊಳ್ಳಲೇ ಬೇಕೆಂದು ಕಟ್ಟುಮಾಡಿದ್ದರಿಂದ ಉದ್ಯೋಗದ ಗೌರವವು ಬೆಳೆಯಿತು. ತೋರಲಿಕ್ಕೆ ಎಷ್ಟು ಕೀಳು ಕೆಲಸವಾದರೂ ಅದು ಈಶಸೇವೆ, ಮಾನವಸೇವೆಯ ದೃಷ್ಟಿಯಿಂದ ಮಾಡ ಲ್ಪಡಬೇಕಾದುದರಿಂದ ಉದ್ಯೋಗವೆಲ್ಲ ಪವಿತ್ರವಾದುದೇ ಎಂಬುವ ಭಾವನೆಯನ್ನು

ಹುಟ್ಟಿಸಿತು. ಉತ್ತಮ ಕುಲದವರಿಗೆ ಉತ್ತಮ ಕಸಬುಗಳು, ಹೀನ ಕುಲದವರಿಗೆ ಹೀನ ಕಸಬುಗಳು ನೇಮಕವಾಗಿದ್ದು ಉತ್ತಮರು ಕೀಳು ಕಸಬಿನವರನ್ನು ಕಡೆಗಣ್ಣಿನಿಂದ ನೋಡುತ್ತಿದ್ದರು. ಈ ವಿಷಯದಲ್ಲಿ ಇದು ದೊಡ್ಡದೊಂದು ಕ್ರಾಂತಿಯನ್ನುಂಟು ಮಾಡಿತೆಂದು ಹೇಳಬೇಕು. ವೀರಶೈವ ಸಮಾಜದಲ್ಲಿ ಸರ್ವತರಹದ ಕಸಬಿನವರು ದೊರೆಯುವದರಿಂದ ಇದು ಆ ಸಮಾಜಕ್ಕೆ ಸ್ವಾವಲಂಬನದ ಮೂಲಾಕ್ಷರಗಳನ್ನೇ ಕಲಿಸಿ ಕೊಟ್ಟಿದ್ದಲ್ಲದೆ ಹಿಂದೂದೇಶದ ಅರ್ಥಶಾಸ್ತ್ರವನ್ನೇ ಬೇರೊಂದು ತಳಹದಿಯ ಮೇಲೆ ರಚಿಸಿತೆಂದು ಹೇಳಬಹುದು.

(೯) ಈ ಸಂಸ್ಥೆಯು ಭಾವಿಕತನ, ಮಡಿಮೈಲಿಗೆಗಳ ಕಲ್ಪನೆ, ಪಂಚ ಸೂತಕ ಮುಂತಾದ ದೋಷಗಳಿಂದಲೂ, ವ್ಯವಹಾರಿಕವಾದ ಹಾಗೂ ಅರ್ಥಹೀನವಾದ ಅನೇಕ ಆಚಾರಗಳ ಹಿಡಿತದೊಳಗಿಂದಲೂ, ನಿಷ್ಕಾರಣವಾದ ಅಸ್ಪೃಶ್ಯತೆ ಮುಂತಾದ ಹೊಲೆ ಯಿಂದಲೂ ಸಮಾಜವನ್ನು ಮುಕ್ತ ಮಾಡಿತು. ಲಿಂಗಧಾರಣವಾದ ಬಳಿಕ ಸರ್ವವನ್ನೂ ಪ್ರಸಾದರೂಪವಾಗಿ ಕಾಣಬೇಕಾಗಿ ಉಳಿದ ಮತಗಳಲ್ಲಿ ರೂಢವಾಗಿರುವ ಸೂತಕ ಮುಂತಾದವುಗಳಿಗೆ ಈ ಮತದಲ್ಲಿ ಆಸ್ಪದವಿರುವದಿಲ್ಲ. ವೀರಶೈವ ಸಮಾಜದಲ್ಲಿ ಕೆಲವು ಮಟ್ಟಿಗೆ ಕಡಿಮೆಯಾಗಿ ತೋರುವ ಈ ತರಹದ ದೋಷಗಳು ಹಿಂದೂ ಪಂಥಗಳಲ್ಲಿ ಇನ್ನೂ ಹೇರಳವಾಗಿ ಕಂಡುಬರುವದರಿಂದಲೂ, ಅವುಗಳಲ್ಲಿ ಆಧುನಿಕ ಆರೋಗ್ಯ ಶಾಸ್ತ್ರಕ್ಕೆ ವಿರೋಧವಾಗಿದ್ದು ಕೇವಲ ವ್ಯವಹಾರಿಕವಾದ ಇಲ್ಲವೆ ಆರೋಗ್ಯಶಾಸ್ತ್ರಕ್ಕೆ ಮೀರಿದ್ದು ಬಹು ಸೂಕ್ಷ್ಮವಾದ ಕೆಲವು ಮಡಿ ಮೈಲಿಗೆ ನೇಮಗಳು ವಿಶೇಷವಾಗಿ ಸ್ತ್ರೀಯರನ್ನು ಅಂಟಿಕೊಂಡಿರುವುದರಿಂದಲೂ ಎಂತಹ ಸಮಾಜಸುಧಾರಕರಿಂದಲೂ ಹಿಂದೂದೇಶದಲ್ಲಿ ಪ್ರಗತಿಯಾಗಲೊಲ್ಲದು.

(೧೦) ಇದು ವಿವಿಧ ಅನುಭವ ಪುಷ್ಪಗಳಿಂದ ಶೋಭಿಸುವದೊಂದು ವಸ್ತು ಪ್ರದರ್ಶನಶಾಲೆಯಾಗಿತ್ತು. ಈ ಹೂದೋಟದಲ್ಲಿ ದೇಶದ ಮೇಲಿರುವ ಸಕಲ ತರಹದ ಅನುಭವದ ಹೂವಿನ ಗಿಡಗಳು ಸಂಗ್ರಹಿಸಲ್ಪಟ್ಟಿದ್ದವು. ಒಂದೊಂದು ಹೂವಿಗೆ ಒಂದೊಂದು ಸೌಂದರ್ಯ, ಒಂದೊಂದು ತರಹದ ವಾಸನೆ. ಈ ಅನುಭವ ಮಂಟಪದಲ್ಲಿ ಶಿವಾನುಭವ ಪುಷ್ಪಗಳು ಬಹು ರಮಣೀಯವಾಗಿ ಶೋಭಿಸುತ್ತಿದ್ದುವು. ಆಧುನಿಕ ಶಾಸ್ತ್ರಜ್ಞರು ಈ ವಿವಿಧ ಅನುಭವಗಳನ್ನು ಮಾನಸ ಶಾಸ್ತ್ರಾನುಸಾರ ವಿವಿಧ ಜಾತಿಗಳಾಗಿ ವರ್ಗೀಕರಿಸಿದ್ದಾರೆ.

(೧೧) ಅನುಭವ ಮಂಟಪವು ಪ್ರತಿಯೊಬ್ಬನೂ ಸ್ನಾನ ಮಾಡಿ ತನ್ನ ದೋಷ ಗಳನ್ನೆಲ್ಲಾ ಕಳೆದುಕೊಳ್ಳುವದೊಂದು ದೊಡ್ಡ ಜಲಸಂಚಯವೇ ಆಗಿತ್ತು. ಅನೇಕ ಶಿವಶರಣರು ಈ ತೀರ್ಥದಲ್ಲಿ ಸ್ನಾನ ಮಾಡಿ ಅಹಂಕಾರವೇ ಮುಂತಾದ ದೋಷಗಳನ್ನು ದೂರಮಾಡಿಕೊಂಡ ಉದಾಹರಣೆಗಳನ್ನು ನಾವು ಶೂನ್ಯಸಂಪಾದನೆ ಎಂಬ ಗ್ರಂಥದಲ್ಲಿ ಕಾಣಬಹುದು. ಅನುಭವವೇ ಶುಭ್ರವಾದ ಖಾದಿ, ಅನುಭವದ ಅರಿದಾಟವೇ ಸಾಬೂನು, ಅನುಭವ ಮಂಟಪವೇ ಕೊಳ ಎಂಬುವಂತಿತ್ತು.

(೧೨) ಜ್ಞಾನ, ಭಕ್ತಿ ಮತ್ತು ಕರ್ಮ ಈ ಮೂರರೊಳಗೆ ಯಾವದು ಹೆಚ್ಚಿನ ದೆಂಬುವ ವಾದವನ್ನು ಇದು ನಿಲ್ಲಿಸಿಬಿಟಿತು. ಮತ್ತು ಅವು ಮೂರೂ ಸಮವಾಗಿಯೇ ಮಹತ್ವದವುಗಳೆಂಬುವದನ್ನು ಸಾರಿ ಹೇಳಿತು. ಗುರು, ಲಿಂಗ, ಜಂಗಮಗಳೆಂಬುವೇ

ಇದರ ಬಾಹ್ಯ ಕುರುಹುಗಳು. ಭಗವದ್ಗೀತೆಯೂ ಕೂಡ ಬಹುಶಃ ಅದೇ ತರಹದ ಉಚ್ಚ ತತ್ವವನ್ನು ಹೇಳುತ್ತಿದ್ದರೂ ಅದರಲ್ಲಿ ಈ ವಿಷಯವು ವೀರಶೈವ ಧರ್ಮದಲ್ಲಿ ಹೇಳಲ್ಪಟ್ಟಷ್ಟು ಸೂಕ್ಷ್ಮವಾಗಿಯೂ ಸ್ಪಷ್ಟವಾಗಿಯೂ ನಿರ್ದೇಶಿಸಲ್ಪಟ್ಟಿಲ್ಲವೆಂದು ಹೇಳಬೇಕು.

(೧೩) ಇದು ಗೃಹಸ್ಥಾಶ್ರಮಕ್ಕೆ ಬಹಳ ಗೌರವವನ್ನು ಕೊಟ್ಟಿತು. ಜೈನ ಬುದ್ಧಾದಿ ಧರ್ಮಗಳು ಸನ್ಯಾಸಕ್ಕೆ ಮನ್ನಣೆ ಕೊಟ್ಟಿರುವದರಿಂದ ಸಮಾಜದ ಮೇಲೆ ನಿವೃತ್ತಿಯ ಪರಿಣಾಮವೇ ಬಹಳ ಆಗಿತ್ತು. ಈ ಭಾವನೆಯನ್ನು ಕಿತ್ತುಹಾಕಿ, ಸಮಾಜವನ್ನು ಸುಧಾರಿಸಿ, ಸನ್ಯಾಸಿಯಂತೆ ಗೃಹಸ್ಥನೂ ಮೋಕ್ಷಕ್ಕೆ ಅಧಿಕಾರಿಯೆಂದು ಸಾರಿತು. ಈ ವೀರಶೈವ ಮತೋದ್ಧಾರಕನಾದ ಬಸವೇಶ್ವರನು ಸ್ವತಃ ಗೃಹಸ್ಥಾಶ್ರಮಿ.

(೧೪) ಯಾವ ಅಸ್ಪೃಶ್ಯರು ಮಾನವಜಾತಿಗಿರುವ ತಮ್ಮ ಹಕ್ಕುಗಳನ್ನು ಕಳೆದು ಕೊಂಡು ಇದುವರೆಗೆ ಹಿಂದೂ ಸಮಾಜದ ಹೊರಗೆ ನಿಂತುಕೊಂಡಿರುವರೋ, ಯಾವ ಜನರ ಉದ್ಧಾರದ ಮೇಲೆ ಹಿಂದೂದೇಶದ ಭಾವಿ ರಾಜಕೀಯ ಸ್ಥಿತಿಯು ಅವಲಂಬಿಸಿ ಕೊಂಡಿರುವದೋ ಅಂತಹ ಅಸ್ಪೃಶ್ಯರನ್ನು ಈ ಸಂಸ್ಥೆಯು ಬಿಗಿದಪ್ಪಿ ಅವರೊಡನೆ ಸಹಪಂಕ್ತಿ ಭೋಜನ, ಅವರೊಡನೆ ಲಗ್ನಸಂಬಂಧವಾದ ವ್ಯವಹಾರವನ್ನು ಮಾಡಿದ್ದಲ್ಲದೆ ಅವರಿಗೆ ಆತ್ಮೋನ್ನತಿಯ ಶಿಕ್ಷಣವನ್ನು ಕೊಟ್ಟಿತ್ತೆಂಬುವದು ಬಹು ಆಶ್ಚರ್ಯಕರವಾದ ಸಂಗತಿಯಾಗಿರುತ್ತದೆ. ಇಪ್ಪತ್ತನೇ ಶತಮಾನದಲ್ಲಿ ಈ ವಿಷಯವು ಇಷ್ಟು ಕಠಿಣ ವೆನಿಸಿರುವಲ್ಲಿ ೮೦೦ ವರ್ಷಗಳ ಪೂರ್ವದಲ್ಲಿ ಶಿವಶರಣರು ಇದನ್ನು ಸಹಜವಾಗಿ ಆಚರಣೆ ಯಲ್ಲಿ ತಂದದ್ದನ್ನು ನೋಡಿದರೆ ಆಧುನಿಕ ಸುಧಾರಕರೆಲ್ಲರೂ ತಲೆಬಾಗಿಸಬೇಕಾಗುವದು. ಆ ಸಂಸ್ಥೆಯು ಕೊಟ್ಟ ಆಧ್ಯಾತ್ಮಿಕ ಶಿಕ್ಷಣವು ಎಷ್ಟು ಉಚ್ಚತರಗತಿಯದಾಗಿತ್ತು ಎಂಬುವದನ್ನು ಅವರವರು ತಮ್ಮ ಕಾಯಕಗಳ ದ್ವಾರಾ ಹೇಳಿರುವ ವಚನಗಳಿಂದ ತಿಳಿದುಬರುತ್ತದೆ.

ಶಿವಾನುಭವ ಮಂಟಪದಲ್ಲಿ ಮುಖ್ಯವಾಗಿ ಧಾರ್ಮಿಕ ಚರ್ಚೆಯಾಗುತ್ತಲಿದ್ದಿತು. ಪ್ರತಿಯೊಬ್ಬರೂ ತಮ್ಮ ತಮ್ಮ ಶಿವನ ಸಂಬಂಧ ಅನುಭವವನ್ನು ಹೇಳುತ್ತಿದ್ದ ಕಾರಣ ಶಿವಾನುಭವವೆಂಬುವ ಹೆಸರಾಯಿತು. ಶಿವಸ್ಯ ಅನುಭವಃ ಶಿವಾನುಭವಃ. ಅನುಭವ ಎಂದರೆ ಜ್ಞಾನ; ಶಿವನ ಜ್ಞಾನವೆಂತಲೂ ಇದರ ಅರ್ಥವಾಗುವದು.

ಶಿವಾನುಭವ ಮಂಟಪದ ಬಗ್ಗೆ ವೀರಶೈವ ಧರ್ಮಗ್ರಂಥಗಳಲ್ಲಿ ಅನೇಕ ರೀತಿಯಿಂದ ವರ್ಣಿಸಲ್ಪಟ್ಟಿರುತ್ತದೆ. ಇದು ಐತಿಹಾಸಿಕ ಸುಪ್ರಸಿದ್ಧ ಕಾರ್ಯವಾಗಿರು ವದರಿಂದ ಶ್ರೀ ಬಸವಾದಿ ಪ್ರಮಥರ ಕಾಲದಿಂದಲೂ ಶಿವಾನುಭವ ಮಂಟಪದ ಚರ್ಚೆ ನಡೆಯುತ್ತಲೇ ಬಂದಿದೆ. ಆದ್ದರಿಂದ ಪ್ರತಿಯೊಬ್ಬ ಗ್ರಂಥಕಾರರೂ ಅದನ್ನು ಉಲ್ಲೇಖ ಮಾಡುತ್ತಾ ಬಂದಿರುತ್ತಾರೆ. ಶಿವಶರಣರು ಅಲ್ಲಿ ಸಿಗುತ್ತಿದ್ದ ಜ್ಞಾನದ ಸಲುವಾಗಿ ಬಹಳ ಅಭಿಮಾನಪೂರ್ವಕವಾಗಿ ಅದನ್ನು ತಮ್ಮ ತಮ್ಮ ವಚನಗಳಲ್ಲಿ ಹೇಳಿದ್ದಾರೆ.

ಈ ಅನುಭವ ಮಂಟಪವು ಮಾಡಿದ ಕಾರ್ಯಗಳಲ್ಲಿ ಇನ್ನೊಂದು ಅತ್ಯಂತ ಮಹತ್ವದ್ದಾಗಿರುತ್ತದೆ. ಇದರಲ್ಲಿ ಮುಖ್ಯಾವಿಗೆಯ ಕಾಯಕವೆಂಬುವದೊಂದು ಪ್ರಾಯಶ್ಚಿತ್ತದ ಹೊಸ ತರಹದ ವಿಧಿಯು ಪ್ರಚಾರದಲ್ಲಿ ತರಲ್ಪಟ್ಟಿದ್ದು, ಪಾಪಿಗಳಾ ದವರು ತಮ್ಮ ಪಾಪದ ಬಗ್ಗೆ ಪಶ್ಚಾತ್ತಾಪ ಪಡುವಂತೆ ನಿರಪರಾಧಿಗಳಾದ ಶಿವಭಕ್ತರು

ಮೊಳೆಗಳ ಮೇಲೆ ಉಪವಾಸ ನಿಂತುಕೊಳ್ಳುವದು, ಪಾಪ ಮಾಡಿದವನು ಒಬ್ಬನು, ದುಃಖ ಅನುಭವಿಸುವವನು ಇನ್ನೊಬ್ಬನು. ಕರ್ಮ ವಾದಕ್ಕೂ ಮಾನವ ಸ್ವಭಾವಕ್ಕೂ ವಿರೋಧವಾಗಿ ತೋರುವ ಈ ಆತ್ಮಶುದ್ಧತೆಯ ತತ್ವವು ಜಗತ್ತಿನಲ್ಲಿ ಸುಧಾರಿಸಿದ ಇತರ ಯಾವ ಸಮಾಜಗಳಲ್ಲಿಯೂ ಪ್ರಚಾರದಲ್ಲಿದ್ದಂತೆ ಕಂಡುಬರುವದಿಲ್ಲ.

ಈ ಅನುಭವ ಮಂಟಪವು ಕಲ್ಯಾಣ ನಗರದಲ್ಲಿದ್ದರೂ ದೇಶದ ತುಂಬ ಅದರ ಶಾಖೆಗಳಿದವು. ಅಂದರೆ ವೀರಶೈವರ ಮಠಗಳೇ ಶಿವಾನುಭವವನ್ನು ಪ್ರಚಾರಮಾಡತಕ್ಕ ಸಂಸ್ಥೆಗಳಾಗಿದ್ದವು.

ಅನುಭವವೆಂದರೆ ಜ್ಞಾನವೆಂದು ಮೇಲೆ ಹೇಳಿರುತ್ತೇವೆ. ಅನುಭವದ ಬಗೆ ಬೇರೆಬೇರೆ ಶರಣರು ತಮ್ಮ ವಚನಗಳಲ್ಲಿ:

ಶ್ರೀ ಚನ್ನಬಸವಣ್ಣನವರು—

"ಭಕ್ತಿಗೆ ಅನುಭಾವವೇ ಬೀಜ ಕಾಣಿರೊ, ಭಕ್ತಿಗೆ ಅನುಭಾವವೇ ಆಚರಣೆ ಕಾಣಿರೊ, ಭಕ್ತಿಗೆ ಅನುಭಾವವೇ ಸಕಲೈಶ್ವರ್ಯದ ಶೃಂಗಾರ ಕಾಣಿರೊ, ವೀರಶೈವಾಚಾರ ಸಂಪನ್ನರೆನಿಸುವ ಪರಮ ಸದ್ಭಕ್ತರಿಗೆ ಅನುಭಾವವೇ ಅರುವಿನ ಗೊತ್ತು ಕಾಣಿರೊ, ಅದು ಕಾರಣವಾಗಿ ಅನುಭಾವವಿಲ್ಲದವನ ಭಕ್ತಿ ಎಳತಟಗೊಳಿಸಿತ್ತು. ಅನುಭಾವವನರಿಯದವ ಕಾಮುಕ ಕಾಣಿರೊ, ಆ ಮಹಾನುಭವವ ಮಾಡುವಲ್ಲಿ ಸಕಳ ಸಂಚಲವಳಿದು ವಿನಯದಿಂದ ಕೇಳದಿರ್ದೊಡೆ ನಮ್ಮ ಕೂಡಲ ಚನ್ನ ಸಂಗಮದೇವರು ಆ ಘೋರ ನರಕದಲ್ಲಿಕ್ಕದೆ ಮಾಣ್ಬನೇ?"

ಶ್ರೀ ಚನ್ನಬಸವಣ್ಣನವರು—

"ಅನುಭಾವವಿಲ್ಲದ ಭಕ್ತಿ ಅರುವಿಂಗೆ ಬಾರದು, ಅನುಭಾವವಿಲ್ಲದ ಸಂಗಮ ಸಮರಕ್ಕೆ ನಿಲುಕದು. ಅನುಭಾವವಿಲ್ಲದ ಪ್ರಸಾದ ಪರಿಣಾಮವ ಕೊಡದು, ಅನುಭಾವವಿಲ್ಲದೆ ಏನೇನೂ ಅರಿಯಬಾರದು. ತನ್ನಲ್ಲಿ ಸನ್ನಿಹಿತ ಉಳ್ಳೊಡೆ ಶಿವಶರಣರ ಸಂಗವೇತಕ್ಕೆನಲುಂಟೆ? ಕೂಡಲ ಸಂಗಮ ದೇವಯ್ಯಾ ನಿಮ್ಮ ಅನುಭಾವ ಮಾಡಿದ ಮಥನವೆಂದು ನುಡಿಯಬಹುದೇ? ಪ್ರಭುವೇ?"

ಶ್ರೀ ಪ್ರಭುದೇವರು—

"ಅನುಭಾವದಿಂದ ಹುಟ್ಟಿತ್ತು ಲಿಂಗ, ಅನುಭಾವದಿಂದ ಹುಟ್ಟಿತ್ತು ಜಂಗಮ, ಅನುಭಾವದಿಂದ ಹುಟ್ಟಿತ್ತು ಪ್ರಸಾದ, ಅನುಭಾವದನುವಿನಲ್ಲಿ ಗುಹೇಶ್ವರಾ ನಿಮ್ಮ ಅನುಪಮ ಸುಖಿ."

ಈ ಅನುಭವ ಮಂಟಪದಿಂದ ಲಿಂಗ ತತ್ವವು ಚೈತನ್ಯಯುಕ್ತವಾಗಿ ಸ್ಫುರಣಗೊಂಡಿತು. ಷಟ್‌ಸ್ಥಳಗಳು ಪ್ರಫುಲ್ಲಿತಗಳಾದವು. ಪಂಚಾಚಾರಗಳು ಸ್ಥಿರವಾಗಿ ಸಮಾಜದಲ್ಲಿ ನೆಲೆಗೊಂಡವು. ಎತ್ತ ನೋಡಿದಡತ್ತ ಶಿವಭಕ್ತಿಯು ಬೇರೂರಿತು. ಆಚಾರನಿಷ್ಠತೆಯು ಬೆಳೆಯಿತು. ವಚನಗಳು ಪ್ರಚಾರಕ್ಕೆ ಬಂದವು. ಸಮಾಜದಲ್ಲಿ

ಮೇಲುಕೀಳುಗಳೆಂಬ ಕೊಳೆಯು ನಾಶವಾಗಿ ಸಮಾನತ್ವವು ಬೇರೂರಿತು. ಅನುಭವಿಗಳೇ ಹಿರಿಯರಾದರು. ಜಾತಿಭೇದವು ನಾಶವಾಗಿ ಅಂಗದ ಮೇಲೆ ಲಿಂಗವಿದ್ದವರೆಲ್ಲ ಪರಸ್ಪರ ಸಂಗಮನಾಥನೆಂಬುವ ಭಾವನೆಯು ಬೆಳೆಯಿತು. ಎಲ್ಲೆಡೆಯಲ್ಲೂ ವೀರಶೈವ ಧರ್ಮದ ಪ್ರಸಾರವು ಕ್ರಾಂತಿಕಾರಕವಾಗಿ ನಡೆಯಿತು. ಕಾಯಕಗಳು ಬೇರೂರಿದವು. ಬೇರೆ ಬೇರೆ ಮತದ ಪಂಡಿತ ಪಾಮರರೆಲ್ಲ ಶ್ರೀ ಬಸವಣ್ಣನವರ ಈ ಅದ್ಭುತ ಕಾರ್ಯಕ್ಕೆ ಮೆಚ್ಚಿ ತಲೆದೂಗಿ ಅನುಭವ ಪ್ರಚಾರಕ್ಕೆ ಒಳಪಟ್ಟು ವೀರಶೈವ ಧರ್ಮವನ್ನು ಸ್ವೀಕರಿಸಿದರು. ಹೀಗಾಗಿ ಅನುಭವ ಮಂಟಪದ ಕೀರ್ತಿಯು ದಶದಿಕ್ಕುಗಳಲ್ಲಿ ಹಬ್ಬಿತು.

ವೀರಶೈವ ಧರ್ಮ ಕೇವಲ ವ್ಯಕ್ತಿ ವೈಶಿಷ್ಟ್ಯವನ್ನು ಸಾರುವದಕ್ಕಾಗಲೀ, ವ್ಯಕ್ತಿಯ ವಿಮುಕ್ತಿಯನ್ನು ಸಾಧಿಸುವುದಕ್ಕಾಗಲೀ ಜನ್ಮತಾಳಲಿಲ್ಲ. ಪಾಂಡಿತ್ಯದ ಕೆಚ್ಚಿನಿಂದ ಒಂದು ಗಹನ ತತ್ವವನ್ನು ಪ್ರತಿಪಾದಿಸಿ ಜನತೆಯನ್ನು ದಂಗುಗೊಳಿಸುವುದಕ್ಕೂ ಪ್ರಯತ್ನಿಸಲಿಲ್ಲ. ಬಸವಣ್ಣನವರೇ ಆದಿಯಾಗಿ ವೀರಶೈವ ಧರ್ಮ ಪ್ರತಿಪಾದಿತರು ಜನತೆಯಿಂದ ಬಹಳ ಎತ್ತರದಲ್ಲಿ ನಿಂತು ಜನಸಾಮಾನ್ಯರನ್ನು ಕಡೆಗಣ್ಣಿನಿಂದ ಕಾಣುವ ಮಹಾನುಭಾವತ್ವವನ್ನೂ ಮೆರೆಸಲಿಲ್ಲ. ತಮ್ಮ ಆಧ್ಯಾತ್ಮಿಕ ಸಾಧನೆಯಿಂದ ಯಾವ ಆನಂದ ನೈರ್ಮಲ್ಯ ಶಾಂತಿಗಳನ್ನು ದೊರಕಿಸಿಕೊಂಡಿದ್ದರೋ ಅದರ ಲಾಭ ಎಲ್ಲರಿಗೂ ದೊರೆಯಬೇಕೆಂದು ಬಯಸಿದರು. ತಮ್ಮ ಜೀವನ ಹಸನಾದಂತೆ ನಾಡಿನವರೆಲ್ಲರ ಜೀವನವೂ ಹಸನಾಗಬೇಕು; ಲೋಕವೆಲ್ಲಾ ಒಂದು ಧರ್ಮದ ಶ್ವೇತಚ್ಛತ್ರದ ಕೆಳಗೆ ಕೆಳೆಯರಂತೆ, ಸಹೋದರರಂತೆ ಬಾಳಿ ಬದುಕಬೇಕೆಂಬುವದು ಅವರ ಹಿರಿಯಾಶೆಯಾಗಿತ್ತು. ಬಾಳುವೆಯನ್ನು ಮರೆತು ಸದಾ ಪರಲೋಕದ ಚಿಂತೆಯಲ್ಲಿರುವದು ನಿರರ್ಥಕವಾದುದೆಂದು ಬಗೆದರು. ಇಹಪರಲೋಕಗಳನ್ನು ಎರಡು ಜಗತ್ತುಗಳನ್ನಾಗಿ ವಿಭಾಗಿಸದೆ ಒಂದು ಮತ್ತೊಂದರ ಪೂರಕವೆಂದು ಭಾವಿಸಿದರು. ಮುಂದಿನ ಲೋಕಕ್ಕೆ ಹೋಗಿ ಬಾಳುವೆ ಮಾಡುವದೆಂದರೆ ಈ ಲೋಕದ ಜೀವನವನ್ನು ಮುಂದುವರಿಸಿದಂತಲ್ಲದೆ ಬೇರೆಯಲ್ಲವೆಂಬುವದನ್ನು ಸಾರಿದರು. ಇಹಲೋಕದ ಕುಂದುಕೊರತೆಗಳನ್ನೂ, ಅಪೂರ್ಣವಾದ ಆಶೆಗಳನ್ನೂ ಪೂರೈಸುವುದಕ್ಕೆ ಮುಂದಿನ ಲೋಕ ಒಂದಿದೆ ಎಂದು ಭಾವಿಸುವ ಮಾಯಾನಿರಸನವನ್ನು ಮಾಡಲೆತ್ನಿಸಿದರು.

ಶ್ರೀ ಅ. ನ. ಕೃಷ್ಣರಾಯರು ತಮ್ಮ 'ಶೂನ್ಯಸಂಪಾದನೆ' ಎಂಬುವ ಚಿಕ್ಕ ಹೊತ್ತಿಗೆಯಲ್ಲಿ—"ವೀರಶೈವ ಮತೋದ್ಧಾರಕರಾದ ಶ್ರೀ ಬಸವಣ್ಣನವರು ಅನೇಕ ಪವಾಡಗಳನ್ನು ಮೆರೆಯಿಸಿ ಕಾರಣಪುರುಷರೆಂದು ಹೆಸರಾದರು. ತಮ್ಮ ಶುಭ್ರವಾದ ಜೀವನದಿಂದ ಎಲ್ಲ ಧರ್ಮಗಳ ಬುನಾದಿಯಾದ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ತಮ್ಮ ಜೀವನದಲ್ಲಿಯೇ ಸಮನ್ವಯ ಮಾಡಿ ತೋರಿದರು. ತತ್ವಗಳ ಹೆಸರಿನ ಹೋರಾಟದಲ್ಲಿ ವೈಮನಸ್ಯ ಮತಗಳಿಗೆ ಈ ಶಾಂತಿಮಂತ್ರವು ನೂತನವೂ, ಪವಾಡಮಯವೂ ಆಗಿ ಕಂಡಿರಬೇಕು. ವೀರಶೈವ ಸಿದ್ಧಾಂತದಲ್ಲಿ ಅಡಗಿದ್ದ ಭಕ್ತಿ, ಜ್ಞಾನ, ವೈರಾಗ್ಯಗಳ ತ್ರಿವೇಣಿ ಸಂಗಮಕ್ಕೆ ಒಂದು ಶಾಶ್ವತವಾದ ನಿಲುವನ್ನು ಕೊಡಲು ಬಸವಣ್ಣನವರು ನಿಶ್ಚಯಿಸಿದರು. ಬಸವಣ್ಣನವರು ಸಾಧಿಸಿದ ಪವಾಡಗಳಲ್ಲಿ ಅತ್ಯಂತ ಮಹತ್ವವಾದುದೆಂದರೆ ಇದೇ" ಎಂದು ಹೇಳಿರುವರು.

"ದೇವನೊಬ್ಬ ನಾಮ ಹಲವು" ಎಂಬ ಸೂಕ್ಷ್ಮ ಆಧ್ಯಾತ್ಮಿಕ ತತ್ವವನ್ನು ಮನಗಂಡಿದ್ದ ಬಸವಣ್ಣನವರು ಆ ದೇವರನ್ನು ಸಾಧಿಸುವ ಮಾರ್ಗಗಳೂ ಹಲವೆಂಬುದನ್ನು ತಿಳಿದಿದ್ದರು. ಸಹಜವಾಗಿ ತಮ್ಮ ಒಲವು ಭಕ್ತಿ ಮಾರ್ಗವನ್ನು ಅವಲಂಬಿಸಿತೆಂದು ಎಲ್ಲರೂ ಆ ಮಾರ್ಗವನ್ನೇ ಅನುಸರಿಸಬೇಕೆಂಬ ಛಲ ಅವರಿಗಿರಲಿಲ್ಲ. ವ್ಯಕ್ತಿ ತನ್ನ ಸಂಸ್ಕಾರ ಹಾಗೂ ಮನೋಧರ್ಮವನ್ನು ಅವಲಂಬಿಸಿ ಪ್ರಗತಿಪಥದಲ್ಲಿ ಅಡಿ ಇಡಬೇಕು ಎಂದು ಬಯಸಿದರು. ಈ ಸಾಧಕಸ್ಥಿತಿಯಲ್ಲಿ ತಮ್ಮ ಮಾರ್ಗದಿಂದ ಭಿನ್ನವಾದರೂ ಪ್ರಗತಿಯ ಜಾಡನ್ನು ಬಿಡದಿರುವ ಪ್ರತಿಯೊಬ್ಬನೂ ಸಮಾನ ಧರ್ಮ ಎಂಬುವದನ್ನು ಒಪ್ಪಿಕೊಳ್ಳುವ ಔದಾರ್ಯವನ್ನು ತೋರಿದರು. ಇಂತಹ ಸಮಾನ ಧರ್ಮಿಗಳು ಒಂದು ಕಡೆ ಕಲೆತು ವಿಚಾರ ವಿನಿಮಯ ಮಾಡಿ, ವಾದ ಮಥನಕ್ಕೆ ತಮ್ಮ ತತ್ವವನ್ನು ನಿವೇದಿಸಿ ನೋಡಿ, ಸತ್ಯಾನ್ವೇಷಣವನ್ನು ಮಾಡಬೇಕಾಗಿದ್ದುದರ ಆವಶ್ಯಕತೆ ಬಹಳವಾಗಿತ್ತು.

ವೀರಶೈವ ಧರ್ಮದ ಉನ್ನತ ತತ್ವಗಳಿಗೆ ಸಾರ್ವತ್ರಿಕ ಸ್ವರೂಪ ಕೊಡುವದಕ್ಕೆ ಒಂದು 'ಅನುಭವ ಮಂಟಪ' ವನ್ನು ಸ್ಥಾಪಿಸಿ, ಅದನ್ನು ಆಧ್ಯಾತ್ಮಿಕ ಪರಮಹಂಸಗಳ ತಿಳಿಗೊಳವನ್ನಾಗಿ ಮಾಡಬೇಕೆಂದು ನಿಶ್ಚಯಿಸಿದರು. ತಮ್ಮ ಮಂಟಪವು ಶಿವಜ್ಞಾನದ ಒಂದು ವಿಶ್ವವಿದ್ಯಾನಿಲಯವಾಗಬೇಕೆಂಬುದೇ ಬಸವಣ್ಣನವರ ಹೆಬ್ಬಯಕೆಯಾಗಿದ್ದಿತು.

ವೀರಶೈವ ಧರ್ಮ ಸಜೀವ ಧರ್ಮವಾಗುವದಕ್ಕೆ ಅದರ ಪ್ರತ್ಯೇಕ ರೂಪವೇ ಮೂಲ ಕಾರಣವಾಗಿರಬಹುದು. ಆತ್ಮನ ಕಲ್ಯಾಣ ಯಾತ್ರೆಗೆ ಆರು ಹಂತಗಳನ್ನು ಏರ್ಪಡಿಸಿದ ಶಿವಶರಣರು ಸಾಧಕನಿಗೆ ದೊಡ್ಡ ಪ್ರವೇಶ ಪರೀಕ್ಷೆಯನ್ನೇರ್ಪಡಿಸಿದರು. ಸಾಧಕನು ವಸ್ತುವಿನೊಂದಿಗೆ ತದೇಕಚಿತ್ತನಾಗಿ ಅದರ ಜೀವತಂತಿಗೆ ತನ್ನ ಜೀವ ತಂತಿಯನ್ನು ಪ್ರತಿಯಾಗಿ ಹಚ್ಚುತ್ತಾನೆಯೇ ಎಂಬುವದನ್ನು ಮೊದಲು ದೃಢಪಡಿಸಿ ಕೊಳ್ಳಬೇಕಾಯಿತು.

ಮನೋಭೂಮಿಕೆಯನ್ನು ಇಂತು ಶುಚಿಗೊಳಿಸಿಕೊಂಡ ಶರಣರು ಪ್ರಗತಿಪಥದಲ್ಲಿ ಬಹಳ ಮುಂದುವರಿದಂತೆಯೇ ಆಯಿತು. ಈ ಮುಕ್ತಿ ಯಾತ್ರೆ ಸುಗಮವೂ ಶ್ರೇಯಃ ಪ್ರದವೂ ಆಗುವಂತೆ ಮಾಡಿದರು. ಷಟ್‌ಸ್ಥಲ ಮೂರ್ತಿಗಳಾಗಿದ್ದ ಚನ್ನಬಸವಣ್ಣನವರಿಂದ ಅಧಿಕೃತರಿಗೆ ದೀಕ್ಷೆ ದೊರಕುತ್ತಿತ್ತು. ಬಸವಣ್ಣನವರು, ಅಲ್ಲಮಪ್ರಭುಗಳವರು, ಸಿದ್ಧರಾಮದೇವರು, ಮಹಾದೇವಿಯಕ್ಕಗಳು ಸಾಧಕರ ಕೈಹಿಡಿದು ಯಾರು ಯಾರನ್ನು ಎಲ್ಲಿ ಎಲ್ಲಿ ಮುಟ್ಟಿಸಬೇಕೋ ಅಲ್ಲಿ ಅಲ್ಲಿಗೆ ಒಯ್ದು ಮುಟ್ಟಿಸುತ್ತಿದ್ದರು. ಇದರಿಂದ ಅನುಭವ ಮಂಟಪವು ಕೇವಲ ಜ್ಞಾನಪಾಂಡಿತ್ಯಗಳಿಂದ ಕೊಬ್ಬಿದ ಕೆಲವು ಪಾಂಡಿತ್ಯದ ವಾದ ಸಂತೆಯಾಗದೆ ಸಜೀವ ಸಾಧಕರ ಒಂದು ಪ್ರಯೋಗ ಕ್ಷೇತ್ರವಾಯಿತು. ದಿದೃಕ್ಷುಗಳೂ, ಜಿಜ್ಞಾಸುಗಳೂ, ಜ್ಞಾನಭಿಕ್ಷುಗಳೂ, ಭಕ್ತಿಮಾರ್ಗಾನುಯಾಯಿಗಳೂ, ಉತ್ಕಟ ಯೋಗಿಗಳೂ ಎಲ್ಲರೂ ನೆರೆಯಲು ಅನುವಾಯಿತು.

ವೀರಶೈವ ಅನುಭಾವಿಗಳು ತಮ್ಮ ಜೀವನದ ಜೇನ ಕೊಡಗಳನ್ನು ಅನುಭವ ಮಂಟಪದಲ್ಲಿ ಶೇಖರಿಸಿ ಜೇನು ಹೊಂಡವನ್ನೇ ನಿರ್ಮಾಣ ಮಾಡಿಬಿಟ್ಟರು. ಇದರಲ್ಲಿ ಎಲ್ಲ ಪುಷ್ಪಗಳ ಸೌರಭ ಪರಿಮಳ ಸವಿಗಳು ಬೆರೆತುಕೊಂಡಿವೆ. ಎಲ್ಲ ಧರ್ಮಗಳೂ ಒಂದೊಂದು ಜಾಡನ್ನು ಹಿಡಿಯಹೋಗಿ ಕಂಡ ಸತ್ಯದ ಕೇಂದ್ರವನ್ನೇ ವೀರಶೈವ ಧರ್ಮವು ಆರಿಸಿತು. ಇದು ಎಲ್ಲ ಧರ್ಮಗಳ ಸಾರವಾಯಿತು. ಅಂತೆಯೇ ವಿಶ್ವ

ಧರ್ಮವೆನಿಸಿಕೊಳ್ಳಲು ಪೂರ್ಣ ಅರ್ಹತೆಯನ್ನು ಪಡೆಯಿತು. ವಿಶ್ವಧರ್ಮವನ್ನೇ ಗುರಿಯಾಗಿಟ್ಟುಕೊಂಡು ಮಧ್ಯ ಯುಗದಲ್ಲಿ ಅರೇಬಿಯಾ, ಪರ್ಶಿಯಾ ದೇಶಗಳಲ್ಲಿ "ಸೂಫಿ ಧರ್ಮ" ತಲೆಯೆತ್ತಿತು. ಆದರೆ ಇಸ್ಲಾಮಿನ ಕಟುಧಾರ್ಮಿಯತೆಯನ್ನು ತಾಳಲಾರದೆ ಅದು ಒಂದು ಮಹತ್ವದ ಸ್ವರೂಪ ತಾಳಿ ಅಲ್ಲಿ ಇಲ್ಲಿ ತಲೆ ಮರೆಸಿಕೊಳ್ಳ ಬೇಕಾಯಿತು. ಹೀಗೆಯೇ ಅಶೋಕನು ಸ್ಥಾಪಿಸಲೆತ್ನಿಸಿದ ಧರ್ಮವಾದರೂ ಸ್ವಲ್ಪವೇ ದಿನಗಳಲ್ಲಿ ಮುಳುಗಿಹೋಯಿತು. ಆದರೆ ವೀರಶೈವ ಧರ್ಮ ಜೀವಂತ ಧರ್ಮವಾಗಿ ಉಳಿದಿದೆ. ಅನುಭವ ಮಂಟಪದ ಮಹಾನುಭಾವಿಗಳ ಕೃತಿಗಳು ನಾಡವರ ಕೊರಳಲ್ಲಿ ಮುಕ್ತಿಮಣಿಗಳಾಗಿ ರಾರಾಜಿಸುತ್ತಿವೆ. ಇಂದಿನ ಜಗತ್ತಿನ ಧರ್ಮ ಹಾಗೂ ಜೀವನ ಸಮಸ್ಯೆಗಳಿಗೆ ತನ್ನಲ್ಲಿ ನಿವಾರಣೋಪಾಯವನ್ನು ಧರಿಸಿದೆಯೋ ಏನೋ? ಜಗತ್ತಿನ ಕಲ್ಯಾಣಕ್ಕೆ ಅವಶ್ಯಕವಾದ ಬೆಳಕನ್ನು ನೀಡುವ ಸೌಭಾಗ್ಯವನ್ನು ಅನುಭವ ಮಂಟಪದ ಶಿವಾನುಭವಿಗಳು ಕನ್ನಡ ನಾಡಿಗೆ ಒದಗಿಸಿಕೊಟ್ಟಿರಬಾರದೇತಕ್ಕೆ?

ಅನುಭವ ಮಂಟಪದ ಅಧ್ಯಕ್ಷರು ಪ್ರಭುದೇವರೆಂಬುವದನ್ನು ಈ ಮೊದಲೇ ಹೇಳಿದ್ದೇವೆ. ಅವರ ಅಧ್ಯಕ್ಷತೆಯ ಪೀಠದ ಹೆಸರು ಶೂನ್ಯ ಸಿಂಹಾಸನವೆಂದು ಸುಪ್ರಸಿದ್ಧವಾದುದು. ಈ ಶೂನ್ಯಸಿಂಹಾಸನ ವರ್ಣನೆಯು ವೀರಶೈವ ಧಾರ್ಮಿಕ ಗ್ರಂಥಗಳಲ್ಲಿ ಅನೇಕ ತರಹದಿಂದ ವರ್ಣಿಸಲ್ಪಟ್ಟಿರುತ್ತದೆ. ಚಾಮರಸಕವಿಗಳು ತಮ್ಮ ಚನ್ನಬಸವಪುರಾಣದಲ್ಲಿ ಚೆನ್ನಾಗಿ ಪ್ರತಿಪಾದಿಸಿರುತ್ತಾರೆ.

ಶ್ರೀ ನೀಲಾಂಬಿಕಾದೇವಿಯವರು—

"ಅಷ್ಟದಳ ಕಮಲದ ಹೂಗಲ್ಲವಿಡಿದು ಶೂನ್ಯಸಿಂಹಾಸನಕ್ಕೆ ಧವಳಾಲಯವೆತ್ತಿತ್ತು, ಚಂದ್ರಕಾಂತದ ಶಿಲೆಯಲ್ಲಿ ಪಶ್ಚಿಮ ದ್ವಾರವಮಂ ತೆಗೆದು ನೋಡುವರೆ ವಿಪರೀತ, ಏಕೋಭಾವವೆಂಬುದೊಂದು ಕಂಭ। ಅದಕ್ಕೆ ಅನೇಕ ಚಿತ್ರಂಗಳಡಗಿದ ಪ್ರಭೆಯೊಳಗೆ ಬ್ರಹ್ಮರಂಧ್ರವೆಂಬ ಮಸ್ತಕದ ಮೇಲೆ ಪವಳಹಾರದ ಪಂಜರಮಂ ಕಟ್ಟಿ ಪಂಚಮೌಕ್ತಿಕದ ಮಾಲೆಯನಿಳೆಯಬಿಟ್ಟು ಮಲಕ್ಕು ಮಲಕ್ಕಿನ ನಡುವೆ ಕಟ್ಟಿದುವು ನವರತ್ನ ಗೊಂಡೆಯಂಗಳು ಕಾಳಿಕೆಯ ಕಪ್ಪಡವದಕೆ ಮೇಲು ಹೊದಿಕೆ। ಉಲುಹಿ ನರಳೆಲೆಯ ಬಳಸುದೋರಣವ ಕಟ್ಟಿ ದಶವಾಯುಗಳನೊಂದುಮಾಡಿ ಲಿಂಗಸುಖವಾಯುವ ಸಂತೈಸಿ ಅಲವಟ್ಟವಂ ಮಾಡಿ ಲಂಬಿಸಿದ ಮಂದಾನಿಲನ ಮಲಗಂ ಮಾಡಿ ಹರುಷನೀವ ವಸಂತನ ಚೌಕವಟ್ಟಿಗೆಯ ಆಸನವಂ ಮಾಡಿ ನವನಾಳಸುನಾಳದೊಳು ಮೊರೆವ ಶಬ್ದಮಂ ಶುಕಪಿಕ ಭ್ರಮರಾಮೋದಮಂ ಮಾಡಿ। ಪರಮಶಾಂತಿಯೆಂಬ ಶೈತ್ಯಾಕಾರ ಸೋಂಕಿನ ಚೂತಫಲಂಗಳಂ ಹಾಸಿ ಉತ್ತರದ್ವಾರವೆಂಬ ನುಸುಳುಗಂಡಿಯಂ ರಚಿಸಿ ಪೂರ್ವಯೋಗಂಗಳೆಂಬ ಸೋಪಾನಮಂ ಮಾಡಿ ಪಶ್ಚಿಮ ದ್ವಾರವೆಂಬ ನಿಜದ್ವಾರಮಂ ಮಾಡಿ ಸಪ್ತವಿಸನ ಪಂಚೇಂದ್ರಿಯಂಗಳೆಂಬ ಗವಾಕ್ಷಿಯನಿಕ್ಕಿ ಆಶೆಯಾಮಿಷಮಂ ಕೆಡಿಸಿ ಊರ್ಧ್ವ ಚಕ್ರವೆಂಬ ಮೇಲುಪ್ಪರಿಗೆಯಂ ಮಾಡಿ ಚಂದ್ರ ಸೂರ್ಯರೆಂಬ ದ್ವೀಪಂಗಳಂ ಬೆಳಗಿ ಶಿವೋಹವೆಂಬ ಶಿಖರಿಯ ಮೇಲೆ ಮಹಾಜ್ಞಾನಪ್ರಕಾಶವೆಂಬ

ಹೊನ್ನ ಕಲಶವ ಸಿಂಗಾರವಂ ಮಾಡಿ ನಿಶ್ಶೂನ್ಯ ನಿರಾಳವೆಂಬ ಶೂನ್ಯ ಸಿಂಹಾಸನವುಂ ಮಾಡಿದ ಬಸವಪ್ರಿಯ ಕೂಡಲ ಚನ್ನಸಂಗನಲ್ಲಿ ಎನ್ನ ಪರಮಗುರು ಸಂಗನ ಬಸವಣ್ಣ ॥"

ಶ್ರೀ ಹಡಪದ ಅಪ್ಪಣ ನವರು—

"ನೆಲನ ಹೊದ್ದದು ಆಕಾಶ ಮುಟ್ಟದು ಎಡಲೊಂದು ರೂಪಿಲ್ಲ ಭಾವವೆಂಬ ಜ್ಞಾನವೇ ನಿವಾಸ, ನಿಲುವೇ ಭಕ್ತಿ ನಿರಹಂಕಾರವೇ ಶಿಖರ ಮಹದಹಂಕಾರವೇ ಶೃಂಗಾರ ಕಳಸಪತ್ರದನವ ಕಮಲ ಸಿಂಹಾಸನದ ನಿತ್ಯ ಮಲಗು ನಿಜವೆಂಬ ವಿಸ್ತಾರದಲ್ಲಿ ನಿತ್ಯನಿರಾಳವೆಂಬ ಮಹಾ ಘನವು ಬಂದು ಮೂರ್ತಗೊಳ್ಳಲು ಕಾಯದಕಂಗೆ ಕಾಣಬಾರದು ಮಗದ ಮುಂದೆ ಅಳವಡದು, ಭಾವದ ಬಗೆಗೆ ವೈದೋರದು"

ಎಂಬುದಾಗಿ ವರ್ಣಿಸಿರುವರು.

ಶೂನ್ಯಸಿಂಹಾಸನದ ಮೇಲೆ ಕುಳಿತುಕೊಂಡಿರುವ ಪ್ರಭುದೇವರನ್ನು ಶ್ರೀ ಅಪ್ಪಣ್ಣ ನವರು ಸ್ತುತಿಸಿರುವ ರೀತಿಯು—

**ಶೂನ್ಯಸಂಪಾದನೆ—ಪುಟ ೩೭೨**

"ನಿರಾಕಾರದ ಶಕ್ತಿಯಲ್ಲಿ ನಿರಾಳವೆಂಬ ತನು ನಿಃಶೂನ್ಯವೆಂಬ ಸಿಂಹಾಸನದ ಮೇಲೆ ಘನವಾಗಿ ತೊಳಗಿ ಬೆಳಗುತ್ತಿರ್ದನು. ದೆಶೆಯಲ್ಲಿ ಮುಖವಾಗಿ ಮುಖವೆಲ್ಲ ಜಗವಾಗಿ ಅಖಂಡ ಪರಿಪೂರ್ಣ ಪರಬ್ರಹ್ಮ ತಾನಾದನು. ಈ ಮಹಿಮನ ನೆನೆದರೆ ಮನೋಮುಕ್ತಿ ಕಂಡರೆ ರೂಪು ಮುಕ್ತಿ ನುಡಿಸಿದರೆ ಶಬ್ದಮುಕ್ತಿ ಸಂಗವ ಮಾಡಿದರೆ ಸರ್ವಾಂಗಲಿಂಗೈಕ್ಯ ಬಸವಪ್ರಿಯ ಕೂಡಲ ಚನ್ನಸಂಗಯ್ಯ ನಿಮ್ಮ ಪ್ರಭುವಿನ ಶ್ರೀಪಾದಕ್ಕೆ ಶರಣೆಂದು ಬದುಕಿದೆನು."

ಶ್ರೀ ಸೊಡ್ಡಳ ಬಾಚರಸರು—

"ಬರದಲ್ಲಿ ಅರಗುಗೊಂಡವಗೆ ಅಮೃತ ಸಿಕ್ಕಿದಂತೆ ಜರಾಮರಣ ದುಃಖಿ ಮರುಜೀವಣಿಯ ಕಂಡಂತೆ ಭವದ ಬಾಗಿಲ ಹೊಗದೆ ಬದುಕಿದೆ ನಯ್ಯಾ ನಿತ್ಯವ ಕಂಡು ಒಳಗೆ ಬೆಳಗುವ ಪ್ರಕಾಶ ಹೊರಗೆ ಮೂರ್ತಿ ಗೊಂಡಂತೆ ಕಂಗಳಿಗೆ ಮಂಗಳವಾಯಿತ್ತಯ್ಯ ಮಹಾ ಘನದಲ್ಲಿ ಸಾಕಾರ ಸೊಡ್ಡಳನ ಶರಣ ಪ್ರಭುವಿಗೆ ನಮೋ ನಮೋ ಎನುತಿರ್ದೆನು."

ಶ್ರೀ ಕಕ್ಕಯ್ಯನವರು—

"ಕಷ್ಟಕುಲದಲ್ಲಿ ಹುಟ್ಟಿದ ಕರ್ಮವ ಕಳೆದು ಮುಟ್ಟಿ ಪಾವನವ ಮಾಡಿ ಕೊಟ್ಟನಯ್ಯ ಎನ್ನ ಕರಸ್ಥಲಕ್ಕೆ ಲಿಂಗವ. ಆ ಲಿಂಗ ಬಂದು ಸೋಂಕಲೊಡನೆ ಎನ್ನ ಸರ್ವಾಂಗದ ಅವಲೋಹವಳಿಯಿತ್ತಯ್ಯ. ಎನ್ನ ತನುವಿನಲ್ಲಿ ಗುರುವ ನೆಲೆಗೊಳಿಸಿದ, ಎನ್ನ ಮನದಲ್ಲಿ ಲಿಂಗವ ನೆಲೆ ಗೊಳಿಸಿದ, ಎನ್ನ ಧನದಲ್ಲಿ ಜಂಗಮ ನೆಲೆಗೊಳಿಸಿದ, ಎನ್ನ ಅರುವಿನಲ್ಲಿ

ಪ್ರಸಾದವ ನೆಲೆಗೊಳಿಸಿ, ಇಂತೀ ತ್ರಿವಿಧಸ್ಥಾನ ಶುದ್ಧವ ಮಾಡಿದ
ಬಸವಣ್ಣನ ಕರುಣದಿಂದೆ ಪ್ರಭುವಿನ ಶ್ರೀಪಾದವ ಕಂಡು ಬದುಕಿದೆನು
ಕಾಣಾ ಅಭಿನವ ಮಲ್ಲಿಕಾರ್ಜುನಾ"

ಇನ್ನೂ ಅನೇಕ ಶರಣರು ಶೂನ್ಯಸಿಂಹಾಸನದ ಮೇಲೆ ಕುಳಿತ ಪ್ರಭುವನ್ನು ಸ್ತೋತ್ರ ಮಾಡಿರುತ್ತಾರೆ. ಈ ಪ್ರಕಾರ ಸ್ತೋತ್ರ ಮಾಡಿರುವದನ್ನು ನೋಡಿದರೆ ಆ ಶೂನ್ಯಸಿಂಹಾಸನದ ಯೋಗ್ಯತೆಯು ಅದೆಷ್ಟರಮಟ್ಟಿಗಿರುತ್ತದೆಂದು ತಿಳಿದುಬರುತ್ತದೆ.

ಶೂನ್ಯ ಶಬ್ದಕ್ಕೆ ಅನೇಕಾರ್ಥಗಳಿವೆ. ಮುಂದೆ ಸಿಂಹಾಸನವೆಂಬುವ ಪದವಿರುವದರಿಂದ ಅದಕ್ಕನುಗುಣವಾಗಿ ಅರ್ಥವನ್ನೂ ಮಾಡಬೇಕಾಗುತ್ತದೆ.

ಶ್ರೀ ಉತ್ತಂಗಿ ಚನ್ನಪ್ಪನವರು, "ಶೂನ್ಯವೆಂಬುವ ಶಬ್ದವು ಬೌದ್ಧರ ಗ್ರಂಥಗಳಲ್ಲಿ ವಿಶೇಷವಾಗಿ ಬರುತ್ತದೆ. ಅದು ಅಲ್ಲಿಂದ ತೆಗೆದುಕೊಂಡದ್ದೆಂದು ಯಾರೂ ತರ್ಕಿಸಲಾಗದು. ಅದಕ್ಕೂ ಇದಕ್ಕೂ ಅರ್ಥದಲ್ಲಿ ಬಹಳ ವ್ಯತ್ಯಾಸ ಇರುತ್ತದೆ. ಶೂನ್ಯ ಸಂಪಾದನೆ ಎಂದರೆ ವಾಙ್ಮನಕ್ಕಗೋಚರವಾಗಿದ್ದು, ಬುದ್ಧಿಗೆ ಕೇವಲ ಶೂನ್ಯವಾಗಿ ತೋರುವದೋ ಅಂತಹ ಪರಬ್ರಹ್ಮ ವಸ್ತುವನ್ನು ಅನುಭವದಿಂದ ಸಂಪಾದಿಸುವದೇ ಶೂನ್ಯಸಂಪಾದನೆಯು. ಇದರಿಂದ ವೀರಶೈವರ ಶೂನ್ಯವೆಂದರೆ ಬುದ್ಧನ ನಿರ್ವಿಕಾರ ಶೂನ್ಯವಲ್ಲ; ಅದ್ವೈತಿಗಳ ಜಗನ್ಮಿಥ್ಯವಲ್ಲ; ದ್ವೈತರ ಜೀವ ಪರಮಾತ್ಮರ ಭೇದವಲ್ಲ; ಅದು ಶಕ್ತಿವಿಶಿಷ್ಟಾದ್ವೈತವು. ಜಗತ್ತೂ ಜೀವನವೂ ಪರಬ್ರಹ್ಮನಂತೆ ಸತ್ಯವಸ್ತುಗಳೆಂದೂ, ಕೊನೆಗೆ ಅವೆಲ್ಲವೂ ಪರಬ್ರಹ್ಮನಲ್ಲಿ ಲೀನವಾಗಿ ಅವನಲ್ಲಿಯೇ ಅಡಗಿಕೊಂಡಿರುವವೆಂದೂ ಅದು ಹೇಳುತ್ತದೆ" ಎಂದು ಹೇಳಿರುವರು.

ಈ ಅವ್ಯಕ್ತಸ್ಥಿತಿಗೆ ವೀರಶೈವ ಧರ್ಮದಲ್ಲಿ ನಿಷ್ಕಲವೆಂದೆನ್ನುತ್ತಾರೆ. ಪದಾರ್ಥಕ್ಕೂ ಅದರೊಳಗಿನ ಶಕ್ತಿಗೂ, ಲೋಹ ಚುಂಬಕಕ್ಕೂ ಅದರ ಆಕರ್ಷಣ ಶಕ್ತಿಗೂ, ಸೂರ್ಯನಿಗೂ ಅದರ ಕಿರಣಗಳಿಗೂ ಇರುವ ಸಂಬಂಧವೇ ಜೀವ ಪರಬ್ರಹ್ಮರ ಸಂಬಂಧವು. ಶೂನ್ಯಸಂಪಾದನೆಯಲ್ಲಿ ಅನುಭವಕ್ಕೆ ಬರಬೇಕಾದ ಇನ್ನೊಂದು ವಿಷಯವೇನೆಂದರೆ—

"ಜೀವನು ತನ್ನ ವ್ಯಕ್ತಿತ್ವವನ್ನು ಪರಬ್ರಹ್ಮದಲ್ಲಿ ಸಂಪೂರ್ಣವಡಗಿಸಿ ಶೂನ್ಯತ್ವವನ್ನು ಸಂಪಾದಿಸುವನು. ಆ ಶೂನ್ಯ ಸಂಪಾದನೆಯಾಗಬೇಕಾದರೆ ಇದಕ್ಕೆ ವಿರೋಧವಾಗಿ ಪೂರ್ವದಲ್ಲಿ ಸಂಪಾದಿಸಲ್ಪಟ್ಟಿರುವ ಅಹಂಕಾರವು ಮೊಟ್ಟಮೊದಲು ಶೂನ್ಯವಾಗಬೇಕು. ಇಲ್ಲಿ ವೀರಶೈವ ಭಾಷೆಯಲ್ಲಿ ಹೇಳಬೇಕಾದರೆ, ಅಂಗಾಂಗವೆಲ್ಲ ಲಿಂಗಾಂಗವಾಗಬೇಕೆನ್ನುವದೇ ಆಗಿರುತ್ತದೆ. ಇದಕ್ಕೆ ಆಧುನಿಕ ಮನಶ್ಶಾಸ್ತ್ರವು 'ಸಬ್ಲಿಮೇಷನ್' ಔನ್ನತ್ಯವೆಂದು ಹೆಸರು ಕೊಟ್ಟಿರುವರು. ಈ ಐಕ್ಯಸ್ಥಿತಿಯನ್ನು ಇಲ್ಲವೆ ಲಿಂಗಾಂಗ ಸಾಮರಸ್ಯದ ಅನುಭವವನ್ನು ಯಾವ ತತ್ವ ಸಿದ್ಧಾಂತದ ಭಾಷೆಯಿಂದಲೂ ವಿವರಿಸಿ ಹೇಳಲಾಗದು."

ಈ ಅನುಭವ ಗೋಷ್ಠಿಯಲ್ಲಿ ಒಬ್ಬೊಬ್ಬ ಶರಣರು ಒಂದೊಂದು ವಿಷಯದ ಚರ್ಚೆಯಲ್ಲಿ ಪ್ರಮುಖರಾಗಿರುತ್ತಾರೆ. ಯಾವ ಪ್ರಕರಣದಲ್ಲಿ ಯಾರು ಪ್ರಮುಖರಾಗಿರುತ್ತಿದ್ದರೋ ಅಂತಹ ಸಂಪಾದನೆಗೆ ಅವರವರ ಹೆಸರು ಬಿದ್ದಿರುತ್ತದೆ. ಇಂತಹ ಸಂಪಾದನೆಗಳೆಲ್ಲ ಕೂಡಿ ಶೂನ್ಯಸಂಪಾದನೆ ಎಂಬುವ ಹೆಸರನ್ನು ಪಡೆದಿರುತ್ತದೆ.

ಅವುಗಳಲ್ಲಿ 'ಶ್ರೀ ಸಿದ್ಧರಾಮೇಶ್ವರ ಗುರುಕರುಣ' ಎಂಬುವ ಸಂಪಾದನೆಯ ಕೊಂಚ ಭಾಗವನ್ನು ನಮ್ಮ ವಾಚಕರ ಸಲುವಾಗಿ ಇಲ್ಲಿ ಸಂಕ್ಷೇಪವಾಗಿ ಕೊಡುತ್ತೇವೆ.

ಶ್ರೀ ಸಿದ್ಧರಾಮದೇವರು ಪ್ರಭುದೇವರೊಡನೆ ಕೂಡಿಕೊಂಡು ಕಲ್ಯಾಣಪಟ್ಟಣಕ್ಕೆ ಬಂದರು. ಆಗ ಶಿವಾನುಭವ ಗೋಷ್ಠಿಯಲ್ಲಿ ಭಾಗವಹಿಸುವುದಕ್ಕೋಸ್ಕರ ಪ್ರಯತ್ನಿಸಿದರು. ಆದರೆ ಶ್ರೀ ಸಿದ್ಧರಾಮ ಶಿವಯೋಗಿಗಳಿಗೆ ಲಿಂಗಧಾರಣವು ಇಲ್ಲದ ಕಾರಣ ಅವರ ಪ್ರವೇಶಕ್ಕೆ ಶರಣರು ಅಡ್ಡಿಯನ್ನು ಮಾಡಿದರು. ಆ ಕಾಲಕ್ಕೆ ಅನೇಕ ಮನೋರಂಜಕಗಳಾದ ಪ್ರಶ್ನೋತ್ತರಗಳು ಶರಣರ ಸಭೆಯಲ್ಲಿ ನಡೆದಿರುತ್ತವೆ. ಅವುಗಳು ವಿಸ್ತಾರವಾಗಿದ್ದರೂ ಕೆಲವು ಪ್ರಶ್ನೋತ್ತರಗಳನ್ನು ಇಲ್ಲಿ ನೋಡೋಣ.

ಪ್ರಭುದೇವರು, ಬಸವರಾಜದೇವರು, ಚನ್ನಬಸವರಾಜದೇವರು, ಮಡಿವಳ ಮಾಚಿತಂದೆಗಳು, ಮುಖ್ಯರಾದ ಅಸಂಖ್ಯಾತ ಮಹಾ ಪುರಾತನರು ಮಹಾನುಭಾವ ಸದ್ಗೋಷ್ಠಿಯಂ ಮಾಡುತ್ತಿರ್ಪ ಪ್ರಸ್ತಾವದೊಳು ಪರಶಿವ ಯೋಗೀಶ್ವರನಪ್ಪ ಸಿದ್ಧರಾಮಯ್ಯದೇವರು ಪ್ರಭುದೇವರ ಕೂಡೆ, ನಿಮ್ಮ ಕರಸ್ಥಲದ ಲಿಂಗದ ನಿಜವ ಬಸವರಾಜದೇವರಿಂದ ಹೇಳಿಸಿಹೆನೆಂದು ಕರೆದುಕೊಂಡು ಬಂದಿರಿ. ಆ ಲಿಂಗದ ನಿಜಮಂ ನಿರೂಪಿಸೆಂದು ಬಿನ್ನೈಸುವ ಪ್ರಸ್ತಾಪದ ವಚನ.

> "ಅಯ್ಯ, ಕಾಯ ಲಿಂಗವೊ? ಕಾಯದಲ್ಲಿ ಸಾರಿಪ್ಪ ಲಿಂಗ ಲಿಂಗವೊ? ಪ್ರಾಣ ಲಿಂಗವೊ? ಪ್ರಾಣದಲ್ಲಿ ಸಾರಿಪ್ಪ ಲಿಂಗ ಲಿಂಗವೊ? ಜ್ಞಾನ ಲಿಂಗವೊ? ಜ್ಞಾನದ ಮೊನೆಯಲ್ಲಿ ಬೆಳಗುವ ಲಿಂಗ ಲಿಂಗವೊ? ಲಿಂಗ ಪ್ರಾಣಲಿಂಗವೆಂದರಿಯೆನು, ನಿಮ್ಮ ಕಾಯದ ಕರಸ್ಥಲವ ಸಾರಿದ ಲಿಂಗ ಪ್ರಾಣದೊಳಗೆ ವೇದ್ಯವಾದ ಪರಿಯನುಪದೇಶಿಸಿ ಕೃಪೆಯ ಮಾಡಾ ಪ್ರಭುವೇ ಕಪಿಲ ಸಿದ್ಧಮಲ್ಲಿಕಾರ್ಜುನಾ"

ಹೀಗೆ ಸಿದ್ಧರಾಮದೇವರು ಪ್ರಭುದೇವರಿಗೆ ಬಿನ್ನೈಸಿಕೊಳ್ಳಲು ಪ್ರಭುದೇವರು ಬಸವಣ್ಣನವರಿಗೆ ತಿಳಿಸಲು, ಬಸವಣ್ಣನವರು ಸಿದ್ಧರಾಮನ ಅಂಗದಮೇಲೆ ಲಿಂಗವಿಲ್ಲದಿರುವದನ್ನು ಕಂಡು ಪ್ರಭುದೇವರನ್ನು ಕುರಿತು—

> "ಎನ್ನ ಕಾಯದ ಕರಸ್ಥಲದಲ್ಲಿ ಅಲ್ಲಮಪ್ರಭುದೇವರ ಕಂಡೆನು. ಎನ್ನ ಮನದ ಕರಸ್ಥಲದಲ್ಲಿ ಚನ್ನಬಸವಣ್ಣನ ಕಂಡೆನು. ಎನ್ನ ಅರಿವಿನ ಕರಸ್ಥಲದಲ್ಲಿ ಮಡಿವಾಳಯ್ಯನ ಕಂಡೆನು. ಒಳಗು ಹೊರಗು ಒಳಗೆಂಬ ಭೇದವನರಿಯದೆ ಇದ್ದೆನು ಕೂಡಲಸಂಗಮದೇವಯ್ಯ ನಿಮ್ಮ ಶರಣರು ಪಾವನವ ಮಾಡಿದ ಪರಿಣಾಮವ ಅಂತಿಂತೆನಲಮ್ಮದೆ, ನಮೋ ನಮೋ ಎನುತಿರ್ದೆನು."

ಹೀಗೆಂದು ನಮಸ್ಕರಿಸುತ್ತ, ಸಿದ್ಧರಾಮಯ್ಯನವರಿಗೆ ಲಿಂಗವಿಲ್ಲದಿದ್ದರೆ ಎನ್ನ ಮನ ಒಪ್ಪದೆಂದು ಹೇಳುತ್ತ,

> "ಸಮಯವಿರುದ್ಧಕಂಜಿ ವಿನಯವ ನುಡಿವೆ, ಕೊಂದರೆ ಕೊಲ್ಲು ಕಾಯಿದರೆ ಕಾಯಿ ಎನ್ನುವರೆಂದು ಮನಹಿಡಿಯದು ಕೂಡಲಸಂಗಮ ದೇವಾ"

ಹೀಗೆ ಬಸವಣ್ಣನವರು ಲಿಂಗವಿಲ್ಲದವರಿಗೆ ನನ್ನ ಮನಸ್ಸು ಒಪ್ಪುವದಿಲ್ಲವೆಂದು ವಿನಮ್ರರಾಗಿ ಹೇಳಲು, ಆಗ ಶ್ರೀ ಸಿದ್ಧರಾಮದೇವರು—

"ಬೆಳಗು ಬೆಳಗು ಹಳಚುವಲ್ಲಿ ಕತ್ತಲೆ ಉಳಿಯಬಲ್ಲುದೇ ಅಯ್ಯ? ಶರಣರು ಶರಣರು ಮಹಾನುಭಾವ ಗೋಷ್ಠಿಯ ಮಾಡುವಲ್ಲಿ ಸಂಗದೊಳಿರ್ದವರ ಅಜ್ಞಾನವಳಿದು ನಿಜವನೈದುವರಯ್ಯ? ನಿಮ್ಮ ಮಹಾನುಭಾವದ ಸೊಂಕಿನ ಸೆರಗಿನೊಳಗಿರ್ದು ನಾನು ಪರಮ ಸುಖಿಯಾಗಿ ಮಡಿವಾಳನ ಪಾದದಲ್ಲಿ ಮನಮಗ್ನನಾದೆನು ಕಾಣಾ ಪ್ರಭುವೇ ಕಪಿಲಸಿದ್ಧ ಮಲ್ಲಿಕಾರ್ಜುನಾ"

ಆಗ ಶ್ರೀ ಚನ್ನಬಸವಣ್ಣನವರು ಸಿದ್ಧರಾಮನ ಮಾತನ್ನು ಕೇಳಿ, ಅಂಗದ ಮೇಲೆ ಲಿಂಗಸಂಬಂಧ ಇಲ್ಲದವರಿಗೆ ಪ್ರಾಣಲಿಂಗ ಸಂಬಂಧವಿಲ್ಲವೆಂದು ನಿರೂಪಿಸಿದ ವಚನ—

"ಅಂಗದ ಮೇಲೆ ಲಿಂಗವಿಲ್ಲದನ್ನಕ್ಕರ ಪ್ರಾಣಲಿಂಗದಲ್ಲಿ ಪರಿಣಾಮವನೆಯ್ದುವ ಪರಿ ಎಂತಯ್ಯ? ಅಂಗತ್ರಯವುಳ್ಳವರು ಲಿಂಗತ್ರಯ ಸಂಪನ್ನರಾಗಬೇಕು ಒಂದಂಗ ವಿರಹಿತರಾದವರುಂಟೆ? ಕಂಗಳ ನೋಟಕ್ಕೆ ಇಂಬಾವುದು ಹೇಳಾ ಒಂದಂಗವ ಬಿಟ್ಟು ಒಂದಂಗವ ತೋರದಾಗಿ ಸಂದುಭೇದವಿಲ್ಲದಿಪ್ಪ ಮಡಿವಾಳನ ನಿಲವು ಕೂಡಲಚನ್ನಸಂಗಯ್ಯನಲ್ಲಿ ನಿನಗೆಂತು ಸಾಧ್ಯವಾಯಿತ್ತು ಹೇಳಾ ಸಿದ್ಧರಾಮಯ್ಯ"

ಶ್ರೀ ಸಿದ್ಧರಾಮದೇವರ ಪ್ರತ್ಯುತ್ತರ—

"ತನು ಉಂಟೆಂಬ ಭಾವ ಮನದಲ್ಲಿಲ್ಲವಯ್ಯ ಮನ ಉಂಟೆಂಬ ಭಾವ ಅರಿವಿನಲ್ಲಿಲ್ಲವಯ್ಯ ಅರಿವುಂಟೆಂಬ ಭಾವ ನುಡಿಯೊಳಗಿಲ್ಲವಯ್ಯ ಇಂತೀ ತನು ಮನ ಜ್ಞಾನವೆಂಬ ತ್ರಿವಿಧವು ಏಕಾರ್ಥವಾದ ಬಳಿಕ ಆವ ತನುವಿನ ಮೇಲೆ ಸ್ವಾಯತವ ಮಾಡುವೆ? ಎನ್ನ ಕಾಯವೇ ಬಸವಣ್ಣ ಎನ್ನ ಪ್ರಾಣಲಿಂಗವೇ ಪ್ರಭುದೇವರು ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಒಳಗು ಹೊರಗೆಂಬುದಿಲ್ಲ ಕಾಣಾ ಚನ್ನಬಸವಣ್ಣ"

ಇದಕ್ಕೆ ಶ್ರೀ ಚನ್ನಬಸವಣ್ಣನವರು ಉತ್ತರವನ್ನು ಕೊಡುತ್ತಾರೆ—

"ಅಂಗವಿಲ್ಲೆಂಬಲ್ಲಿಯೆ ಅಂಗಶಂಕೆ ಬಿಡದು ಲಿಂಗ ಉಂಟೆಂಬಲ್ಲಿಯೆ ಲಿಂಗಶಂಕೆ ಬಿಡದು ಇಲ್ಲೆಂಬುದಕ್ಕೆ ಉಂಟೆಂಬುದೇ ಮರಹು ಉಂಟೆಂಬುದಕ್ಕೆ ಇಲ್ಲೆಂಬುದೇ ಮರಹು ಉಂಟಿಲ್ಲದೆಂಬುದಳಿದುಳಿದಲ್ಲದೆ ಪ್ರಾಣಲಿಂಗ ಸಂಬಂಧ ಸ್ವಾಯತವಾಗದು ಕೂಡಲಚನ್ನಸಂಗಯ್ಯನಲಿ ಪ್ರಾಣಲಿಂಗ ಸಂಬಂಧ ನಿನಗೆಲ್ಲಿಯದು ಹೇಳಾ ಸಿದ್ಧರಾಮಾ"

ಇಷ್ಟಲಿಂಗವಿಲ್ಲದೆ ಪ್ರಾಣಲಿಂಗದ ಸಂಬಂಧ ಆಗಲಾರದೆಂದು ಚನ್ನಬಸವಣ್ಣನವರು ಹೇಳಲು ಪುನಃ ಶ್ರೀ ಸಿದ್ಧರಾಮದೇವರು—

"ತನುವಿದ್ದು ತನುವಿಲ್ಲ ಮನವಿದ್ದು ಮನವಿಲ್ಲ ಭಾವವಿದ್ದು ಭಾವವಿಲ್ಲವೆಂಬುದಿಲ್ಲ ನೀನೆಂಬುದುಂಟಾಗಿ ಭೃತ್ಯಾಚಾರವಿಲ್ಲ ನಾನೆಂಬುದುಂಟಾಗಿ ಅಹಂಕಾರವಿಲ್ಲ ಕಪಿಲಸಿದ್ಧಮಲ್ಲಿನಾಥನಲ್ಲಿ ಲಿಂಗಸಂಗ ನಿರ್ಲೇಪನೆಂಬುದನಿದಿರಿಂಗೆ ನುಡಿದು ಹೇಳಬಾರದು ಕಾಣಾ ಚನ್ನಬಸವಣ್ಣ"

ಹೀಗೆ ಇವರಿಬ್ಬರ ಉತ್ತರ ಪ್ರತ್ಯುತ್ತರಗಳು ನಡೆಯಲಾಗಿ ಶ್ರೀ ಪ್ರಭುದೇವರು ಸಿದ್ಧರಾಮದೇವರ ಪಕ್ಷವನ್ನು ಹಿಡಿದು, ಚನ್ನಬಸವಣ್ಣನವರಿಗೆ—

"ನಿಮ್ಮನರಿದ ಶರಣರಿಗೆ ಶಿವಪೂಜೆಯ ಮಾಡುವ ದಂದುಗವೇಕೋ ಒಲುಮೆಯ ಕೂಟಕ್ಕೆ ಹಾಸಿಕೆಯ ಹಂಗೇಕೆ? ಬೇಟದ ಮರುಳಿಂಗೆ ಲಜ್ಜೆ ಇನ್ನೇಕೋ? ಮಿಸುನಿಯ ಚಿನ್ನಕ್ಕೆ ವರೆಗಲ್ಲಿನ ಹಂಗೇಕೆ? ಗುಹೇಶ್ವರ ಲಿಂಗವು ಪ್ರಾಣವಾಗಿಪ್ಪ ಸಿದ್ಧರಾಮಯ್ಯಂಗೆ ಕುರುಹು ಮುನ್ನೇಕೋ ಚನ್ನಬಸವಣ್ಣ?"

ಶ್ರೀ ಪ್ರಭುದೇವರು—

"ಆಕಾಶವನಡರುವಂಗೆ ಅಟ್ಟುಗೋಲ ಹಂಗೇಕೋ? ಸಮುದ್ರವ ದಾಟುವಂಗೆ ಹರುಗೋಲ ಹಂಗೇಕೋ? ಸೀಮೆಯ ಮೀರಿದ ನಿಸ್ಸೀಮಂಗೆ ಸೀಮೆಯ ಹಂಗೇಕೋ? ಗುಹೇಶ್ವರ ಲಿಂಗದಲ್ಲಿ ನಿಸ್ಸೀಮ ಸಿದ್ಧರಾಮಯ್ಯಂಗೆ ಲಿಂಗದಿಂದೇನು ಹೇಳಾ ಸಿದ್ಧರಾಮಯ್ಯ"

ಹೀಗೆ ಪ್ರಭುದೇವರು ಹೇಳಲು ಇವರ ಮಾತನ್ನು ಚನ್ನಬಸವಣ್ಣನವರು ಖಂಡಿಸಿ ಉತ್ತರ ಕೊಡುತ್ತಾರೆ.

ಶ್ರೀ ಚನ್ನಬಸವೇಶ್ವರರು—

"ಆಕಾಶದಲ್ಲಾಡುವ ಪಟಕ್ಕಾದರೂ ಮೂಲಸೂತ್ರವಿರಬೇಕು. ಕಲಿಯಾದಡು ಕಜ್ಜವಿಲ್ಲದಾಗದು ಭೂಮಿಯಿಲ್ಲದೆ ಬಂಡಿ ನಡೆಯುವದುಂಟೆ? ಲಿಂಗಕ್ಕೆ ಅಂಗಸಂಗವಿಲ್ಲದೆ ನಿಸ್ಸಂಗಿ ಎಂದು ನುಡಿಯಬಹುದೆ? ಪ್ರಭುವೇ, ಪಟವಾಕಾಶವನಡರಿತ್ತೆಂದಡೆ ಪಟದ ಸೂತ್ರದ ಸಂಚ ಕೆಳಗಿಪ್ಪುದು ನೋಡಾ ವ್ಯೋಮದಲ್ಲಿ ಚರಿಸುವ ಸೋಮಸೂರ್ಯರೆಂದಡೆ ಹೇಮಗಿರಿಯ ಸಂಚತಪ್ಪದು ನೋಡಾ ಭೂಮಿಯನೊಲ್ಲದೆ ಗಗನಕ್ಕೆ ಹಾರಿದವಂಗೆ ಆ ವ್ಯೋಮದಲ್ಲಿ ನಿಲುವುದಕ್ಕೆ ಒಂದೆಡೆಯುಂಟೆ? ಮಣ್ಣುಮರನನುಳಿದು ತೋರುವ ಹಣ್ಣು ರುಚಿಯುಂಟೆ? ನಮ್ಮ ಕೂಡಲ ಚನ್ನಸಂಗನ ಶರಣರೊಳಗಿರ್ದು ಸೀಮೆಯ ಮೀರಿದ ನಿಸ್ಸೀಮನು ಸಿದ್ಧರಾಮಯ್ಯ ಎಂಬ ಮಾತು ಅಂತಿರಲಯ್ಯ ಪ್ರಭುವೇ"

ಇದಕ್ಕೆ ಪುನಃ ಉತ್ತರ ಪ್ರತ್ಯುತ್ತರಗಳು ನಡೆದು,

ಶ್ರೀ ಚನ್ನಬಸವಣ್ಣನವರು—

"ಆಚಾರ ಅಂಗದ ಮೇಲೆ ಆಯತವಾದುದೇ ಇಷ್ಟಲಿಂಗ ಆ ಇಷ್ಟಲಿಂಗವಿಡಿದಿಹುದೇ ಪ್ರಾಣಲಿಂಗ ಸ್ವಾಯತ ಪ್ರಾಣಲಿಂಗ ಉದಯಿಸಿದಲ್ಲದೆ ಇಷ್ಟಲಿಂಗ ಕಾಣಬಾರದು ಈ ಭೇದವ ಭೇದಿಸಬಲ್ಲರೆ ಕೂಡಲ ಸಂಗಯ್ಯನಲ್ಲಿ ಲಿಂಗೈಕ್ಯ ಕಾಣಾ ಪ್ರಭುವೇ"

"ತಿಳಿದುಪ್ಪ ಗಟ್ಟಿದುಪ್ಪಕ್ಕೆ ಭೇದ ಉಂಟೆ? ದೀಪಕ್ಕೆ ದೀಪ್ತಿಗೆ ಭಿನ್ನ ಉಂಟೆ? ಆತ್ಮಕ್ಕೆಯೂ ದೇಹಕ್ಕೆಯೂ ಹಂಗುಂಟೆ? ಕ್ಷೀರಕ್ಕೆಯೂ ಸ್ವಾದಕ್ಕೆಯೂ ಭಿನ್ನ ಉಂಟೆ? ಇದು ಕಾರಣ ಸಾಕಾರವೇ ನಿರಾಕಾರವೆಂದರಿದು ಅಂಗಲಿಂಗ ಸಂಬಂಧವಿಲ್ಲದವರ ಸಂಗಭಂಗವೆಂದು ಕೂಡಲ ಚನ್ನಸಂಗಯ್ಯನ ಶರಣರು ಮೆಚ್ಚರಯ್ಯ ಪ್ರಭುವೇ"

ಹೀಗೆ ಚನ್ನಬಸವಣ್ಣನವರು ಸಿದ್ಧರಾಮಯ್ಯನವರಿಗೆ ಲಿಂಗಸಂಬಂಧವಿಲ್ಲದಿದ್ದರೆ ಶರಣರು ಎಂದಿಗೂ ಒಪ್ಪುವದಿಲ್ಲವೆಂದು ಹೇಳುತ್ತ,—

"ಸತಿಸಂಗವತಿಸುಖವೆಂದರಿದಡೇನು? ಗಣಸಾಕ್ಷಿಯಾಗಿ ವಿವಾಹವಾಗದನ್ನಕ್ಕರ? ಕಣ್ಣು ಕಾಂಬುದೆಂದಡೆ ಕತ್ತಲೆಯಲ್ಲಿ ಕಾಂಬುದೇ ದೀಪವಿಲ್ಲದನ್ನಕ್ಕರ? ಸೂರ್ಯ ಪ್ರಕಾಶದಿಂದ ಕಂಡು ತಾವೇ ಕಂಡೆವೆಂಬ ಜಗದ ನಾಣ್ನುಡಿಯಂತಾಯ್ತು. ಅಂಗವ ಬಿಟ್ಟು ಆತನುಂಟೆ? ಶಕ್ತಿಯ ಬಿಟ್ಟು ಶಿವನುಂಟೆ? ಇದು ಕಾರಣ ಸ್ಥೂಲ ಸೂಕ್ಷ್ಮ ಕಾರಣವೆಂಬ ತನುತ್ರಯವಿರಲು ಇಷ್ಟ ಪ್ರಾಣ ಭಾವವೆಂಬ ತ್ರಿವಿಧ ಲಿಂಗಸಂಬಂಧ ಬೇಡವೆಂದಡೆ ಅಸಂಖ್ಯಾತ ಪ್ರಮಥಗಣಂಗಳೊಪ್ಪುವರೇ? ಇದು ಕಾರಣ ಕೂಡಲಚನ್ನಸಂಗಯ್ಯನಲ್ಲಿ ಇಷ್ಟಲಿಂಗ ಸಂಬಂಧವಿಲ್ಲದವರ ಮುಖವ ನೋಡಲಾಗದಯ್ಯ ಪ್ರಭುವೇ"

ಲಿಂಗವಿಲ್ಲದವರ ಮುಖವನ್ನು ನೋಡಲಾಗದೆಂದು ಚನ್ನಬಸವಣ್ಣನವರು ಅಲ್ಲಿದ್ದ ಪ್ರಮಥರ ಮುಖವನ್ನು ನೋಡಿದರು. ಅಂದಿನ ಸಭೆಯಲ್ಲಿ ೭೭೦ ಅಮರಗಣಂಗಳು ಉಪಸ್ಥಿತರಿದ್ದರು. ಅವರೆಲ್ಲರೂ ಏಕಕಾಲಕ್ಕೆ ಪ್ರಚಂಡ ಕರತಾಡನವನ್ನು ಮಾಡಿ ಚನ್ನಬಸವಣ್ಣನವರ ವಾದಕ್ಕೆ ಮೆಚ್ಚಿ ಸಂತೋಷ ಪ್ರದರ್ಶನ ಮಾಡಿದರಲ್ಲದೆ ಆ ಸಭೆಯಲ್ಲಿರತಕ್ಕ ಪ್ರಾಮುಖ್ಯರಾದ ಪ್ರತಿಯೊಬ್ಬ ಶರಣರೂ ಒಂದೊಂದು ವಚನವನ್ನು ಹೇಳಿ ಲಿಂಗಧಾರಣೆಗೆ ಸಮರ್ಥನ ಮಾಡಿದರು. ಅಂದಿನ ಸಭೆಯಲ್ಲಿ ಗಂಭೀರವಾದ ಪರಿಸ್ಥಿತಿಯುಂಟಾಗಿದ್ದಿತು. ಸಿದ್ಧರಾಮನಂತಹ ಶಿವಯೋಗಿವರೇಣ್ಯನಿಗೆ ಬೆಂಬಲವನ್ನು ಕೊಟ್ಟ ಪ್ರಭುದೇವರಾದರೂ ಚನ್ನಬಸವಣ್ಣನವರ ವಾದಸರಣಿಯನ್ನು ಮೆಚ್ಚಿ ಸಿದ್ಧರಾಮಣ್ಣನಿಗೆ "ನಮ್ಮ ಶರಣರು ಲಿಂಗವಿಲ್ಲದ್ದರಿಂದ ನಿಮ್ಮ ಪ್ರವೇಶವನ್ನು ಒಪ್ಪುವದಿಲ್ಲ; ನೀವು ಈ ನಿರ್ಣಯವನ್ನು ಒಪ್ಪಲೇಬೇಕು" ಎಂದು ಸಲಹೆ ಕೊಟ್ಟರು.

ಆಗ ಸಿದ್ಧರಾಮಣ್ಣನವರು ಬಹಳ ಭಯಚಕಿತರಾಗಿ ಗಡಗಡ ನಡಗುತ್ತ, ಪ್ರಭುದೇವರ ಕಡೆಗೆ ಹೊರಳಿ,

ಶ್ರೀ ಸಿದ್ಧರಾಮದೇವರು—

"ಜಜ್ಜನೇ ಜರಿದು ಬಿಬ್ಬನೇ ಬಿರಿದು ಪ್ರಾಣ ಹಮ್ಮನೇ ಹಾರಿ ಭಯಪಟ್ಟು ನಡುನಡುಗಿ ಪ್ರಭುದೇವರ ಪಾದಾಕ್ರಾಂತರಾಗಿ ನಿಮ್ಮ ಶರಣರ ಕರುಣವ ಕೃಪೆಮಾಡು ಪ್ರಭುವೇ"

ಎಂದು ಪ್ರಭುದೇವರಿಗೆ ನಮಸ್ಕರಿಸಿ, ಗುರುವೇ, ನಿಮ್ಮ ಶರಣರ ಕೃಪೆಯು ನನ್ನಮೇಲೆ ಆಗುವಂತೆ ಮಾಡಿರೆಂದು ಬೇಡಿಕೊಳ್ಳಲು, ಕರುಣಾಶಾಲಿಗಳೂ ದಯಾರ್ದ್ರ ಹೃದಯಿಗಳೂ ಆದ ಶರಣರು ಪ್ರಭುದೇವರ ಮಾತಿಗೆ ಒಪ್ಪಿ ಶ್ರೀ ಚನ್ನಬಸವಣ್ಣನವರಿಂದ ಸಿದ್ಧರಾಮಣ್ಣನಿಗೆ ಲಿಂಗದೀಕ್ಷೆಯನ್ನು ಮಾಡಿಸಿದರು. ಆ ಸಭೆಯಲ್ಲಿ ಅಂದಿನ ದಿನದ ಚನ್ನಬಸವಣ್ಣನವರ ಲಿಂಗಪರ ವಾದವು ಎಲ್ಲ ಶರಣರ ಮನಸ್ಸನ್ನಾಕ್ರಮಿಸಿತು. ಆದ್ದರಿಂದಲೇ ಆ ಸಭೆಯಲ್ಲಿ ಚನ್ನಬಸವಣ್ಣನವರಿಗೆ ಆಧಿಕ್ಯವಿದ್ದಿತು. ಧಾರ್ಮಿಕ ವಾದದಲ್ಲಿ ಅವರನ್ನು ಹಿಮ್ಮೆಟ್ಟಿಸುವವರು ಯಾರೂ ಇರಲಿಲ್ಲ. ಹೀಗೆಯೇ ಮೇಲೆ ಹೇಳಿದಂತೆ ಈ ವಿಚಾರದಲ್ಲಿಯ ಎಲ್ಲ ಶರಣರ ವಚನಗಳನ್ನೂ ಇಲ್ಲಿ ಕೊಡಲು ಶಕ್ಯವಿಲ್ಲ. ವಾದದ ಪದ್ಧತಿಯು ಹೇಗಿತ್ತೆಂಬುದನ್ನು ಇಲ್ಲಿ ಕೊಂಚಮಟ್ಟಿಗೆ ತೋರಿಸಲಾಗಿದೆ. ವಿಶೇಷ ತಿಳಿದುಕೊಳ್ಳಬೇಕೆನ್ನುವವರು ಶೂನ್ಯ ಸಂಪಾದನೆಯನ್ನು ಓದಿನೋಡಬೇಕು.

ಇಲ್ಲಿಯವರೆಗೆ ಶಿವಾನುಭವದ ಅರ್ಥ, ಅದು ಮಾಡಿದ ಕಾರ್ಯಗಳು ಮೊದಲಾದ ವಿಷಯಗಳನ್ನು ಹೇಳಿದೆವಲ್ಲದೆ ಶ್ರೀ ಸಿದ್ಧರಾಮೇಶ್ವರನ ಗುರುಕರುಣ ಸಂಪಾದನೆಯಲ್ಲಿ ಕೆಲವು ಅಂಶಗಳನ್ನು ಸಂಕ್ಷೇಪವಾಗಿ ತೋರಿಸಿಕೊಟ್ಟಿರುತ್ತೇವೆ. ಈ ಶಿವಾನುಭವ ಮಂಟಪದ ಕಾರ್ಯಗಳು ಯಾವಾಗಲೂ ಅಚ್ಚಳಿಯದಂತೆ ಉಳಿಯಲು ತಕ್ಕವುಗಳಾಗಿವೆ. ಶಿವಾನುಭವ ಮಂಟಪದ ಅಸ್ತಿತ್ವವೇ ವೀರಶೈವದ ಅಸ್ತಿತ್ವವೆಂದು ಹೇಳುವದು ಅತ್ಯಂತ ಯೋಗ್ಯವಾಗಿರುತ್ತದೆ. ಈ ಶಿವಾನುಭವ ಮಂಟಪದ ಪುನರುಜ್ಜೀವನವಾಗಿ ವೀರಶೈವ ಧರ್ಮವು ಭೂಮಂಡಲದಲ್ಲಿ ತಲೆಯೆತ್ತಿ ಮೆರೆಯುವಂತಾಗಲೆಂದು ಹಾರೈಸುವದು ಪ್ರತಿಯೊಬ್ಬ ವೀರಶೈವನ ಕರ್ತವ್ಯವಾಗಿರುತ್ತದೆ. ವೀರಶೈವ ಧರ್ಮದ ತತ್ವಗಳು ಪ್ರತಿಯೊಬ್ಬರ ಹೃದಯವನ್ನಾಕರ್ಷಿಸಿ ಶ್ರೀ ಬಸವಣ್ಣನವರ ಧರ್ಮಧ್ವಜವು ವೀರಶೈವ ಜಗತ್ತಿನಲ್ಲಿ ಆಚಂದ್ರಾರ್ಕಪರ್ಯಂತರವಾಗಿ ಹಾರಾಡಿ ಶಿವಾನುಭವ ಮಂಟಪವು ಶಿವಸಮಯಕ್ಕಾಧಾರವಾಗಲೆಂದು ಬಯಸೋಣ.

# ಹದಿನೈದನೆಯ ಪ್ರಕರಣ

## ಶ್ರೀ ಬಸವಣ್ಣನವರೂ ಕನ್ನಡ ಸಾಹಿತ್ಯವೂ

ಶ್ರೀ ಬಸವಣ್ಣನವರ ಅನಂತ ಕೃತಿಗಳಲ್ಲಿ ಕನ್ನಡ ಸಾಹಿತ್ಯಕ್ಕೆ ಅವರು ಮಾಡಿರುವ ಉಪಕಾರವು ಅಪಾರವಾದುದಾಗಿದೆ. ಈ ವಿಷಯವನ್ನು ಕನ್ನಡ ನಾಡಿನ ಪಂಡಿತರೆಲ್ಲರೂ ಮುಕ್ತಕಂಠದಿಂದ ಬಸವಣ್ಣನವರನ್ನು ಪ್ರಶಂಸಿಸುತ್ತಿರುವರು. ಕನ್ನಡ ಕುಲ ಪುರೋಹಿತರಾದ ಶ್ರೀಮಾನ್ ಆಲೂರು ವೆಂಕಟರಾಯರು, ಬಿ.ಎ., ಎಲ್‌ಎಲ್.ಬಿ. ಇವರು ತಮ್ಮ 'ಕರ್ಣಾಟಕ ಗತವೈಭವ' ದಲ್ಲಿ ಶ್ರೀ ಬಸವಣ್ಣನವರು ಕನ್ನಡ ವಾಙ್ಮಯದ ಉದ್ಧಾರಕರಲ್ಲ ಭಾಷಾಜನಕರೆಂದು ಸ್ಪಷ್ಟವಾಗಿ ಬರೆದಿರುವದರಲ್ಲಿ ಅತಿಶಯೋಕ್ತಿಯೇನೂ ಇರುವದಿಲ್ಲ; ಅತ್ಯಂತ ನಿಜವಾದ ಮಾತಾಗಿರುತ್ತದೆ. ಶ್ರೀ ಬಸವಣ್ಣನವರು ಕನ್ನಡ ಸಾಹಿತ್ಯಪುರುಷರಾಗಬೇಕೆಂಬುವ ಉದ್ದೇಶದಿಂದ ಈ ಕಾರ್ಯವನ್ನು ಕೈಗೊಂಡವರಲ್ಲ. ಅವರ ಮುಖ್ಯ ಉದ್ದೇಶವು ಮಾತೃಭಾಷೆಯಲ್ಲೇ ಸಾಮಾನ್ಯ ಜನಗಳಿಗೂ ಕೂಡ ಧರ್ಮದ ಬೋಧೆಯಾಗಬೇಕೆಂಬುವದು ಅವರ ಮಹತ್ತರವಾದ ಉದ್ದೇಶವಾಗಿದ್ದಿತು. "ಏಕವೃಂತ ಫಲದ್ವಯನ್ಯಾಯ" ದಂತೆ ಈ ಕಾರ್ಯವು ಅವರಿಗೆ ಸಾಧಿಸಿತೆಂದು ಹೇಳಬಹುದು. ಅಂದರೆ ಒಂದೇ ದೇಂಟು, ಎರಡು ಫಲ—ಇದರಿಂದ ಕನ್ನಡ ಸಾಹಿತ್ಯದ ಪ್ರಚಂಡತರವಾದ ಬೆಳವಣಿಗೆಯೂ ಆಯಿತು. ಅವರ ಧರ್ಮಪ್ರಚಾರದಂತಹ ಶ್ರೇಷ್ಠ ಕಾರ್ಯವೂ ಇದರಿಂದ ಸಾಧಿಸಿದಂತಾಗಿ ಏಕಕಾಲದಲ್ಲಿ ಎರಡು ಕಾರ್ಯಗಳಾದಂತಾದವು.

ವಚನವಾಙ್ಮಯದಂತಹ ಒಂದು ದೊಡ್ಡ ವಾಙ್ಮಯವನ್ನು ರಚಿಸಿದರು. ಆದ್ದರಿಂದ ಆ ವಾಙ್ಮಯಕ್ಕೆ ಬಸವಣ್ಣನವರೇ ಮೂಲಪುರುಷರು ಅಥವಾ ವಚನವಾಙ್ಮಯಾಚಾರ್ಯರಾದರು. ಬಸವಣ್ಣನವರಿಗಿಂತ ಮೊದಲು ಕೆಲವರು ವಚನಗಳನ್ನು ಬರೆದರೂ ಬಸವಣ್ಣನವರೇ ಅದರ ಮೂಲಕ್ಕೆ ಕಾರಣಪುರುಷರಾದರು. ರಘುರಾಜನಿಗಿಂತ ಪೂರ್ವದಲ್ಲಿ ಅವನ ತಂದೆ ದಿಲೀಪನೂ, ದಿಲೀಪನ ತಂದೆ ಇಕ್ಷ್ವಾಕು, ಮನು ಮೊದಲಾದವರಿದ್ದರೂ ರಘುವಂಶವೆಂದೇ ಹೆಸರಾಯಿತು. ಇದಕ್ಕೆ ಕಾರಣವಿಷ್ಟೇ ಇರುವದು. ರಘು ಪ್ರಬಲನಾದ ರಾಜನಾದನು. ದಿಲೀಪನು ವಸಿಷ್ಠನ ನಂದಿನಿಯ ಸೇವೆ ಮಾಡಿ ಪುತ್ರನನ್ನು ಪಡೆದುಕೊಂಡನು. ಆ ಕಾಲಕ್ಕೆ ದಿಲೀಪನು ವಸಿಷ್ಠನನ್ನು ಕುರಿತು,

**ರಘುವಂಶ**

**"ವಂಶಸ್ಯಕರ್ತಾರ ಮನಂತಕೀರ್ತಿಂ ಸುದಕ್ಷಿಣಾಯಾಂ ತನಯಂ ಯಯಾಚೇ"**

ತನ್ನ ವಂಶಕ್ಕೆ ಕರ್ತೃವಾಗತಕ್ಕಂಥ ಮತ್ತು ಅಪರಿಮಿತ ಕೀರ್ತಿಯುಳ್ಳ ಮಗನನ್ನು ಬೇಡಿದ ಕಾರಣ ರಘುವಂಶವೆಂಬ ಹೆಸರಾಯಿತು. ಹಾಗೆಯೇ ಬಸವಣ್ಣನವರು ಒಂದು ಧರ್ಮದ ಅತ್ಯದ್ಭುತ ಪ್ರಚಾರಕ್ಕಾಗಿ ವಚನಗಳನ್ನು ಕನ್ನಡದಲ್ಲಿ ಬರೆದರು. ಮುನ್ನೂರು ಜನ ಶರಣರು ಅವರ ಬೆಂಬಲಿಗರಾಗಿದ್ದರು. ಅವರೆಲ್ಲರೂ ಅವರ ಮಾರ್ಗವನ್ನೇ

ಅನುಸರಿಸಿ ವಚನಗಳನ್ನು ಬರೆದರು. ಹೀಗಾಗಿ ಬಸವಣ್ಣನವರು ಈ ವಾಙ್ಮಯದ ಮೂಲಪುರುಷರಾದರು.

ಶ್ರೀ ಭಗವಾನ್ ಬುದ್ಧದೇವರು ತಮ್ಮ ಧರ್ಮಪ್ರಚಾರ ಮಾಡಲಿಕ್ಕೆ ತಮ್ಮ ಮಾತೃಭಾಷೆಯಾದ ಪಾಲಿಯ ಭಾಷೆಯಲ್ಲಿಯೇ ಧರ್ಮಗ್ರಂಥಗಳನ್ನು ಬರೆದು ಉಳಿದವರಿಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟರು. ಅವರ ತರುವಾಯ ಬಸವಣ್ಣನವರೇ ತಮ್ಮ ಮಾತೃಭಾಷೆಯಲ್ಲಿ ಧಾರ್ಮಿಕ ಗ್ರಂಥಗಳನ್ನು ಬರೆದವರಾಗಿರುತ್ತಾರೆ. ಸಂಸ್ಕೃತದಲ್ಲಿ ಬರೆದ ಗ್ರಂಥಗಳೇ ಮಾನ್ಯವಾದವುಗಳೆಂದೂ, ಉಳಿದ ಭಾಷೆಯಲ್ಲಿ ಬರೆದವುಗಳಿಗೆ ಆ ಕಾಲದಲ್ಲಿ ಜನಗಳು ಮಹತ್ವವನ್ನು ಕೊಡುತ್ತಿರಲಿಲ್ಲವೆಂಬ ಭಾವನೆಯೂ ಇದ್ದಿತು. ಅದನ್ನು ತಪ್ಪಿಸಿ ಪ್ರಾಂತಿಕ ಭಾಷೆಗಳಲ್ಲಿ ಧಾರ್ಮಿಕ ಗ್ರಂಥಗಳನ್ನು ಬರೆಯುವ ಸಾಹಸವನ್ನು ಯಾರೂ ಮಾಡಿರಲಿಲ್ಲ. ಆದ್ದರಿಂದ ದಕ್ಷಿಣ ಹಿಂದೂಸ್ಥಾನದಲ್ಲಿ ಮೊದಲನೆಯ ಗೌರವವು ಶ್ರೀ ಬಸವಣ್ಣನವರಿಗೆ ಸಲ್ಲಿತು. ಕರ್ಣಾಟಕವು ಎಲ್ಲ ಧರ್ಮಗಳ ತವರೂರಾದರೂ ಯಾವ ಆಚಾರ್ಯರೂ ತಮ್ಮ ಧರ್ಮಗ್ರಂಥಗಳನ್ನು ಕನ್ನಡದಲ್ಲಿ ಬರೆಯಲಿಲ್ಲ. ಕನ್ನಡದಲ್ಲಿ ಧಾರ್ಮಿಕ ಗ್ರಂಥಗಳನ್ನು ಬರೆದರೆ ಮೈಲಿಗೆಯಾಗುತ್ತದೆಂಬ ಭಾವನೆಯೂ ಕೆಲವರಲ್ಲಿದ್ದಿತು. ಆ ಪರಂಪರೆಯನ್ನೇ ಅವರು ಅನುಕರಣ ಮಾಡುತ್ತ ಬಂದಿದ್ದರು. ಅದನ್ನು ತಪ್ಪಿಸಿದ ಕೀರ್ತಿಯು ಬಸವಣ್ಣನವರಿಗೆ ಬಂದಿತು.

ಹೀಗಾಗಿ ಶ್ರೀ ಬಸವಣ್ಣನವರಿಗೂ ಕನ್ನಡ ಸಾಹಿತ್ಯಕ್ಕೂ ಬಹಳ ಸಂಬಂಧವು ಬೆಳೆಯಿತು. ಆದ್ದರಿಂದಲೇ ಕನ್ನಡಿಗರು ಬಸವಣ್ಣನವರನ್ನು ಕನ್ನಡ ಸಾಹಿತ್ಯವು ಅಸ್ತಿತ್ವದಲ್ಲಿರುವವರೆಗೂ ಮರೆಯುವಂತಿಲ್ಲ. ವಚನ ಸಾಹಿತ್ಯವು ಕನ್ನಡದಲ್ಲಿ ಅಂತಹ ಉನ್ನತವಾದ ಗೌರವವನ್ನು ಪಡೆಯುವ ಯೋಗ್ಯತೆಯುಳ್ಳದ್ದಾಗಿರುತ್ತದೆ. ಬೇರೆಬೇರೆ ಕಾಲಗಳಲ್ಲಿ ೩೦೦ ಜನ ಶರಣರು ವಚನಗಳನ್ನು ಬರೆದರು. ಇವರೆಲ್ಲರೂ ಬರೆದ ವಚನಗಳ ಸಂಖ್ಯೆಯು ಎರಡೆಂಭತ್ತು ಕೋಟಿ ಎಂದು ಐತಿಹ್ಯವಿದೆ. ಸಂಖ್ಯೆಯು ನಿಜವಿರಲಿ ಇಲ್ಲದಿರಲಿ ವಚನಗಳ ಬೆಳವಣಿಗೆಯು ಮಾತ್ರ ಬಹಳ ದೊಡ್ಡದಾಗಿರುತ್ತದೆ.

ಈ ಮುನ್ನೂರು ಶರಣರಲ್ಲಿ ಅನೇಕರು ಪ್ರೌಢಗಳಾದ ವಚನಗಳನ್ನು ರಚಿಸಿರುತ್ತಾರೆ. ಇವರು ವ್ಯಾಕರಣದ ಕಟ್ಟಿಗೆ ಒಳಪಡದೆ ಇದ್ದರೂ ರಚನಾ ಶೈಲಿಯು ಅಭೂತಪೂರ್ವವಾಗಿರುತ್ತದೆ. ಓದಿದವರ ಭಾಷೆಯ ಮೇಲೆ ಪರಿಣಾಮವಾಗದೆ ಬಿಡದು. ಈ ವಚನಗಳಲ್ಲಿ ನೂರಾರು ವಿಷಯಗಳು ಅಡಗಿರುತ್ತವೆ.

ಶ್ರೀ ಬಸವಣ್ಣನವರು—

"ಆದ್ಯರ ವಚನ ಪರುಷ ಕಂಡಣ್ಣಾ, ನಂಬಲೊಡನೆ ನೀ ವಿಜಯಿ ಕಂಡಣ್ಣಾ, ಸದಾಶಿವನೆಂಬ ಲಿಂಗವ ನೆರೆ ನಂಬುವುದು ಅಧರಕ್ಕೆ ಕಹಿ ಉದರಕ್ಕೆ ಸಿಹಿ, ಕೂಡಲಸಂಗನ ಶರಣರ ವಚನ ಜೇವ ಸವಿದಂತೆ."

"ಹಾಲ ತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮರಳು, ತವರಾಜದ ನೊರೆ ತೆರೆಯಂತೆ ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ ಉಪ್ಪ ನೀರನುಂಬುವ ವಿಧಿಯಂತೆ ಆಯಿತ್ತೆನ್ನ ಮತಿ, ಕೂಡಲಸಂಗಮದೇವ."

ಶ್ರೀ ಚನ್ನಬಸವಣ್ಣನವರು—

"ನಮ್ಮ ಆದ್ಯರ ವಚನ ಜ್ಞಾನದ ನೆಲೆಯ ತಿಗೆದಿರಿಸಿತ್ತು, ನಮ್ಮ ಆದ್ಯರ ವಚನ ಮದಮಾತ್ಸರ್ಯಾದಿ ಅರಿಷಡ್ವರ್ಗ ಸಪ್ತವೆಸನ ಪಂಚೇಂದ್ರಿಯ ದಶವಾಯುಗಳ ಇಚ್ಛೆಗೆ ಹರಿವ ಮನವಸ್ವಸ್ಥವಾಗಿ ನಿಲಿಸಿತ್ತು, ನಮ್ಮ ಆದ್ಯರ ವಚನ, ನೂರೊಂದು ಸ್ಥಲವ ಮೀರಿದ ಮಹದಲ್ಲಿ ನೆಲೆಸಿತ್ತು. ಇಂತಪ್ಪ ಆದ್ಯರ ವಚನಭಂಡಾರವ ನಮ್ಮ ಪ್ರಭುದೇವರು ಮುಖ್ಯರಾದ ೭೭೦ ಅಮರಗಣಂಗಳು ಅಸಂಖ್ಯಾತ ಪುರಾತನರು ಪ್ರಮಥ ಗಣಂಗಳು ಹೇಳಿ ಕೇಳಿ ಕೊಂಡಾಡಿದ ಕಾರಣ ನಮ್ಮ ಕೂಡಲ ಚನ್ನ ಸಂಗಯ್ಯನಲ್ಲಿ ಸರ್ವಸುಖವ ಸೂರೆಗೊಂಡು ಸ್ವಯಂ ಲಿಂಗವಾದರು. ಇಂತಪ್ಪ ಪುರಾತನರ ವಚನಂಗಳಂ ಎರಡಿಲ್ಲದೆ ಕೊಂಡಾಡಿ ತನುಮನ ಧನವ ಎರಡಿಲ್ಲದೆ ಸಮರ್ಪಿಸುವ ಭೃತ್ಯರ ಭೃತ್ಯ ನಾನು ಆಳಿನಾಳಯ್ಯ ನಾನು."

ಶ್ರೀ ಕಂಬಾಳ ಮಲ್ಲೇಶನು—

ತಿಳಿಪಲ್ ಜೀವ ಶಿವೈಕ್ಯ ಮು । ನಿರಿಪಲ್ ಭವಪಾಶ ಬಂಧಮಂ
ಶಿವಪದ ವಿ । ತ್ತುರಿಪಲ್ ನಿಜದೋಳ್ ಚಿತ್ಕ್ರಿಯೆ । ಯಳವಟ್ಟ ಪುರಾತ
ನೋಕ್ತಿಯೊಂದೆ ಸಮರ್ಥಂ ॥

ಅನೇಕ ಜನ ಶರಣರು ವಚನಗಳ ಮಹತ್ವವನ್ನು ಕೊಂಡಾಡಿರುತ್ತಾರೆ. ಕೆಲವರು ಧಾರ್ಮಿಕ ದೃಷ್ಟಿಯಿಂದ ವಚನಗಳನ್ನು ಪ್ರಶಂಸಿಸಿದರೆ ಮತ್ತೆ ಕೆಲವರು ಸಾಹಿತ್ಯ ದೃಷ್ಟಿಯಿಂದ ಇವುಗಳ ಮೇಲ್ಮೆಯನ್ನು ಕೊಂಡಾಡುತ್ತಾರೆ. ಇನ್ನುಳಿದವರು ಆ ವಚನಗಳಲ್ಲಿ ಇರತಕ್ಕ ಸತ್ಯ, ಅಹಿಂಸೆ, ನೀತಿ, ಬ್ರಹ್ಮಚರ್ಯ, ಪರದ್ರವ್ಯ ಪರಸ್ತ್ರೀ ಅಪೇಕ್ಷಿಸದಿರುವಿಕೆ ಮೊದಲಾದ ನೀತಿಗಳನ್ನು ನೋಡಿ ತಲೆದೂಗುತ್ತಿರುತ್ತಾರೆ. ವೀರಶೈವ ಧರ್ಮದ ತಿರುಳಾದ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಮೊದಲಾದ ವರ್ಣನೆಗಳು ಈ ವಚನಗಳಲ್ಲಿ ಬಹಳ ಸ್ವಾರಸ್ಯವಾಗಿ ಜಾಣರು ತಲೆದೂಗುವಂತೆ ವರ್ಣಿಸಲ್ಪಟ್ಟಿವೆ. ಆಧುನಿಕ ಪಾಶ್ಚಾತ್ಯ ವಿದ್ಯೆಯಲ್ಲಿ ಪಾರಂಗತರಾದ ಪಂಡಿತರನೇಕರು ಈ ವಚನಗಳ ಮಾಧುರ್ಯವನ್ನು ಸವಿದು ಜಗತ್ತಿನ ಯಾವ ಭಾಷೆಗಳಲ್ಲಿಯೂ ಇಂತಹ ಸುಂದರವಾದ ವಾಙ್ಮಯವಿಲ್ಲವೆಂದು ಮುಕ್ತಕಂಠದಿಂದ ಹೊಗಳುತ್ತಿರುತ್ತಾರೆ. ಇದು ನಮ್ಮ ಕನ್ನಡ ಸಾಹಿತ್ಯಕ್ಕೆ ಭೂಷಣಾಸ್ಪದವಾದ ಮಾತಾಗಿರುವದಲ್ಲದೆ ಕನ್ನಡಿಗರೆಲ್ಲರೂ ಹೆಮ್ಮೆಪಡತಕ್ಕ ಸಂಗತಿಯಾಗಿರುತ್ತದೆ.

ಶ್ರೀಮಾನ್ ರಂಗನಾಥ ರಾಮಚಂದ್ರ ದಿವಾಕರ, ಹಿಂದಿನ ಬಿಹಾರದ ರಾಜ್ಯಪಾಲರು, ಎಂ.ಎ., ಎಲ್‌ಎಲ್.ಬಿ., ಹಿಂದೂಸ್ಥಾನದ ಘಟನಾ ಸಮಿತಿಯ ಸಭಾಸದರು, ಇವರು ತಮ್ಮ "ವಚನಶಾಸ್ತ್ರ ರಹಸ್ಯ" ಎಂಬ ಗ್ರಂಥದ ಭಾಗ ೨, ಪುಟ ೪೨ರಲ್ಲಿ ಈ ಮುಂದೆ ಕಂಡಂತೆ ಬರೆದಿರುತ್ತಾರೆ:—

"ಕನ್ನಡ ವಾಙ್ಮಯದ ದೃಷ್ಟಿಯಿಂದ ಕೂಡ ವಚನಶಾಸ್ತ್ರವು ಕರ್ಣಾಟಕದಲ್ಲಿ ಬಹಳ ಮಹತ್ವದ ಕಾರ್ಯವನ್ನು ಮಾಡಿದೆ ಎಂದು ಒಪ್ಪಬೇಕಾಗುವದು. ವಚನ

ಕಾರರು ಒಂದು ಪ್ರತ್ಯೇಕವಾದ ಗದ್ಯರಚನೆಯ ರೀತಿಯನ್ನು ರೂಢಿಯಲ್ಲಿ ತಂದಿರುವರು. ಸಾಹಿತಿಗಳೆಲ್ಲ ಪದ್ಯರೂಪದಿಂದಲೇ ಬರೆಯುತ್ತಿರುವ ಕಾಲದಲ್ಲಿ ವಚನಕಾರರು ಅತ್ಯುಚ್ಚ ಮಾನವೀ ವಿಚಾರಗಳನ್ನೂ, ಭಾವಗಳನ್ನೂ ಗದ್ಯದಲ್ಲಿ ಬಹಳ ಸುಲಭ ಬಾಲಬೋಧೆ ಗದ್ಯದಲ್ಲಿ ವ್ಯಕ್ತಗೊಳಿಸಿ ಅಂಥ ಭಾವಗಳನ್ನು ಅತ್ಯಂತ ಬಲವುಳ್ಳ ತಿಳಿಗನ್ನಡದ ಗದ್ಯದಲ್ಲಿ ಪ್ರಕಟಿಸುವುದು ಶಕ್ಯವು ಎಂಬುದನ್ನು ಸಿದ್ಧಮಾಡಿ ತೋರಿಸಿದರು. ಈಗ್ಯೂ ವಚನಗಳು ಕನ್ನಡದಲ್ಲಿ ಗದ್ಯಶೈಲಿಯ ಮಾದರಿಯಾಗಿ ಕಂಗೊಳಿಸುವವು. ಪೂರ್ವದ ಚಂಪೂ ಗ್ರಂಥದಲ್ಲಿರುವ ಗದ್ಯ ಕೆಲವು ರಚನಗಳನ್ನು ಕುರಿತು ಬರೆದ ಟೀಕೆಯಲ್ಲಿಯ ಗದ್ಯ. ಇವುಗಳಿಗಿಂತ ಬೇರೆ ಬಗೆಯ ಹೆಚ್ಚು ಶ್ರೇಷ್ಠವಾದ ಶೈಲಿಯಲ್ಲಿ ವಚನಗಳು ಬರೆಯಲ್ಪಟ್ಟಿರುವವು. ಸ್ವಲ್ಪವೇ ಶಬ್ದಗಳಲ್ಲಿ ಬಹಳ ಮತ್ತು ಗೂಢವಾದ ಅರ್ಥವನ್ನು ವ್ಯಕ್ತಮಾಡುವ ವಚನದ ಸಂಕ್ಷೇಪ ಶಕ್ತಿ, ವಚನದ ರಚನೆಯಲ್ಲಿರುವ ಒಂದು ಬಗೆಯ ತಾಳ ಪ್ರಾಸ ಮತ್ತು ಪ್ರಮಾಣಬದ್ಧತೆ, ಯಥಾಯೋಗ್ಯ ಶಬ್ದಗಳನ್ನು ಉಪಯೋಗಿಸುವ ಕೌಶಲ್ಯ ವಿಚಾರ, ವ್ಯಕ್ತಿಯಲ್ಲಿ ಸಾಧಿಸಿದ ಸಮತೂಕ, ತಿಳಿಗನ್ನಡ ಶಬ್ದದ ಕುಶಲ ಬಳಿಕೆ ಈ ಮುಂತಾದ ಗುಣಗಳು ವಚನ ವಾಙ್ಮಯದಲ್ಲಿ ಪರಮಾವಧಿಯನ್ನು ಮುಟ್ಟಿವೆ ಯೆಂದು ಹೇಳಲಿಕ್ಕೆ ಯಾವ ಪ್ರತ್ಯವಾಯವೂ ಇಲ್ಲ.''

ಮತ್ತು ಇದೇ ಗ್ರಂಥದ ಪುಟ ೪೫ ರಲ್ಲಿ—

''ಕನ್ನಡದಲ್ಲಿ ಈ ವಚನಶಾಸ್ತ್ರದಂತಹ ವಾಙ್ಮಯವಿದ್ದುದು ಕನ್ನಡಿಗರ ಭಾಗ್ಯವು ಮತ್ತು ಕನ್ನಡಿಗರಿಗೆ ಭೂಷಣಾಸ್ಪದವೆಂದು ಹೇಳಬೇಕಾಗುತ್ತದೆ. ಇದು ಕನ್ನಡ ಭಾಷೆಯ ಗೌರವವನ್ನಷ್ಟೇ ಅಲ್ಲ, ಕನ್ನಡಿಗರ ಗೌರವವನ್ನೂ ಸ್ಪಷ್ಟಗೊಳಿಸುವದು. ಇಂಥ ವಾಙ್ಮಯವನ್ನು ನಿರ್ಮಾಣಮಾಡುವಷ್ಟು ಶಕ್ತಿಯುಳ್ಳವರು ಕನ್ನಡ ನಾಡಿನಲ್ಲಿರುವರು ಮತ್ತು ಇಂತಹ ಉಚ್ಚ ಹಾಗೂ ಕಠಿಣ ವಿಚಾರಗಳನ್ನು ಸಹಜವಾಗಿ ವ್ಯಕ್ತಮಾಡುವ ಸಾಮರ್ಥ್ಯವು ಕನ್ನಡ ನುಡಿಯಲ್ಲಿರುವದು. ಈ ಎರಡೂ ಮಾತುಗಳು ಈ ವಚನ ಶಾಸ್ತ್ರದಿಂದ ಸಿದ್ಧವಾಗುತ್ತವೆ. ಪಂಡಿತರಲ್ಲದವರು, ಗುರುಮನೆ ಅರಮನೆ ವಿಶೇಷ ಬೆಂಬಲವಿಲ್ಲದವರು, ಅಷ್ಟೊಂದು ಸಿರಿಸಂಪತ್ತುಗಳ ಸಹಾಯವಿಲ್ಲದವರು, ತಮ್ಮ ತಮ್ಮ ಕಾಯಕಗಳನ್ನು ನಮ್ರತನದಿಂದ ಮಾಡುತ್ತಿರುವ ಶಿವಶರಣರು ಈ ವಚನಗಳನ್ನು ರಚಿಸಿದರು ಎಂಬುದು ಆ ಶರಣರ ಸಂಸ್ಕೃತಿಯ ಹಿರಿಮೆಯನ್ನು ಅಥವಾ ಮೇಲ್ಮೆಯನ್ನು ತೋರಿಸುವದು. ವಚನಕಾರರಲ್ಲಿ ಎಷ್ಟೋ ಸ್ತ್ರೀಯರೂ ಇದ್ದರೆಂಬ ಸಂಗತಿಯು ಮತ್ತಷ್ಟು ಮಹತ್ವದ್ದು. ಧರ್ಮಜಾಗ್ರತೆಯ ಪ್ರಕಾಶವು ಎಲ್ಲೆಲ್ಲಿಯೂ ಸೇರಿ ಎಲ್ಲರನ್ನೂ ಆಗ ಎಚ್ಚರಿಸಿತ್ತು ಎಂಬ ಮಾತು ಅದರಿಂದ ಸಿದ್ಧವಾಗುವದು. ಈ ವಚನಗಳನ್ನು ಬರೆದವರು ಸತ್ಪುರುಷರು, ಶೀಲವಂತರು, ಸತ್ಯವನ್ನು ಆಚರಿಸಿದವರು. ವಚನ ವಿಷಯವು ಆಧ್ಯಾತ್ಮವು ಅಥವಾ ಮಾನವರ ಮೋಕ್ಷ ಧರ್ಮವು. ಅವುಗಳ ತಳಹದಿಯು ಆತ್ಮಾನುಭಾವವು. ಆ ವಚನಗಳು ಹೊರಹೊಮ್ಮುವ ಕಾರಣವು ದೈವೀಸ್ಫೂರ್ತಿಯು. ಅವು ಇಷ್ಟು ಸುಬೋಧ ಕನ್ನಡ ಸ್ವರೂಪವನ್ನು ಧರಿಸಿದ್ದು ಕರ್ಣಾಟಕದಲ್ಲಿ ಆಬಾಲ ವೃದ್ಧರಿಗೆ ತಿಳಿಯಬೇಕೆಂಬ ಸದ್ಭಾವದ ಮೂಲಕ ಈ ಪ್ರಕಾರ ವಚನಶಾಸ್ತ್ರವನ್ನು ಸಂಬಂಧಿಸಿದ ಯಾವದೇ ಸಂಗತಿಯನ್ನು ಪ್ರತ್ಯೇಕವಾಗಿ ಅಥವಾ ಎಲ್ಲವುಗಳನ್ನು ಸಾಮೂಹಿಕವಾಗಿ ವಿಚಾರಿಸಿದಂತೆ ವಚನಶಾಸ್ತ್ರದ ಮಹತ್ವವು ಹೆಚ್ಚೆಚ್ಚು ಗೋಚರ

ವಾಗುತ್ತಾ ಹೋಗುವದು. ಇಂಥ ವಚನಶಾಸ್ತ್ರದ ಉಪದೇಶವು ಏನಿರುವದು? ಇದರ ತಿರುಳೇನು? ಕನ್ನಡಿಗರಿಗೆ ಇದರ ಸಂದೇಶವೇನು? ಇದನ್ನು ನಾವು ಚೆನ್ನಾಗಿ ತಿಳಿದುಕೊಳ್ಳಲೆತ್ನಿಸುವದು ಅವಶ್ಯವು."

ಶ್ರೀಮಾನ್ ಕೆ. ವೆಂಕಟರಾಮಪ್ಪ, ಎಂ.ಎ., ಇವರು "ಕನ್ನಡ ಸಾಹಿತ್ಯ" ಎಂಬುವ ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕ ಮಾಲೆಯ ಪುಟ ೩೩ ರಲ್ಲಿ ಈ ರೀತಿ ಉಲ್ಲೇಖಿಸಿರುತ್ತಾರೆ:—

"ಹನ್ನೆರಡನೆಯ ಶತಮಾನದ ವೇಳೆಗೆ ಪರಿಸ್ಥಿತಿ ವ್ಯತ್ಯಾಸವಾಯಿತು. ಸುಮಾರು ಕ್ರಿಸ್ತಶಕ ೧೧೬೦ ರ ವೇಳೆಗೆ ಪ್ರಸಿದ್ಧಿಗೆ ಬಂದ ಬಸವಣ್ಣನು ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ಹಾದಿಯನ್ನು ಹಾಕಿಕೊಟ್ಟನು. ಈತನ ಉದ್ದೇಶವು ಮತಪ್ರಚಾರವೇ ಹೊರತು ಕಾವ್ಯರಚನೆಯಲ್ಲ. ಆದರೆ ಜನತೆಯಲ್ಲಿ ಯಾವ ಪ್ರಚಾರವಾಗಬೇಕಾದರೂ ಅವರಿಗೆ ತಿಳಿಯುವ ಸುಲಭ ಭಾಷೆಯ ಲಲಿತ ಮಾರ್ಗದಲ್ಲಿಯೇ ಆಗಬೇಕೆಂಬುವದನ್ನು ಅರಿತ ಬಸವಣ್ಣನು ತನ್ನ ಧರ್ಮಬೋಧೆಯೆಲ್ಲವನ್ನೂ ವಚನಗಳೆಂಬ ಸಾಮಾನ್ಯ ಜನರಿಗೂ ಅರ್ಥವಾಗುವ ಕಾವ್ಯರೀತಿಯಲ್ಲಿ ರಚಿಸಿದನು. ಈ ವಚನಗಳು ಸುಂದರವೂ, ಮನ ಮೋಹಕವೂ ಆಗಿವೆ. ಆದ್ದರಿಂದ ಮತಪ್ರಚಾರಕ್ಕೆ ಹೊರಟ ಬಸವಣ್ಣನಿಂದ ಸಾಹಿತ್ಯಾಭಿ ವೃದ್ಧಿಯು ವಿಶೇಷವಾಗಿ ಆಯಿತು.

ಬಸವಣ್ಣನ ವಚನಗಳಲ್ಲಿ ಹಲವು ಆಗಿನ ಸಾಮಾಜಿಕ ಸ್ಥಿತಿಗತಿಗಳನ್ನು ವಿವರಿಸುತ್ತವೆ. ಅಲ್ಲದೆ ಬಸವಣ್ಣನ ವ್ಯಕ್ತಿತ್ವವನ್ನೂ ಅವನ ಜೀವನದ ಅನುಭವಗಳನ್ನೂ ನಿರೂಪಿಸುವ ಹಲವು ವಚನಗಳಿವೆ. ಇವು ಆತನ ಆತ್ಮಕಥೆಯಂತಿವೆ. ಬಸವಣ್ಣನ ವಚನಗಳು ಜೀವನದ ನಾನಾ ಸಮಸ್ಯೆಗಳನ್ನು ಚರ್ಚಿಸುವುದರಿಂದ ಉತ್ತಮ ಸಾಹಿತ್ಯವೆಂದೆನ್ನಿಸಿಕೊಳ್ಳಲು ಅರ್ಹವಾಗಿವೆ. ವಚನಗಳ ಭಾಷೆ ಬಹಳ ತಿಳಿ. ಅನಾವಶ್ಯಕವಾದ ಕ್ಲಿಷ್ಟವಾದ ಸಂಸ್ಕೃತದ ಮಿಶ್ರಣವಿಲ್ಲ. ವಾಗಾಡಂಬರವಿಲ್ಲ. ಏತಕ್ಕೆಂದರೆ, ಪಂಡಿತ ರಂಜನೆಗಾಗಿ, ರಾಜಾಸ್ಥಾನಗಳಿಗಾಗಿ ಅವು ರಚಿತವಾಗಲಿಲ್ಲ. ಸಾಮಾನ್ಯ ಜನರನ್ನು ಸೇರಬೇಕಾದರೆ ಭಾಷೆಯು ಬಹಳ ಸುಲಭವಾಗಿರಲಿಕ್ಕೆ ಬೇಕಷ್ಟೆ? ಇವು ಹಲವು ನಾಣ್ಣುಡಿಗಳನ್ನೊಳಗೊಂಡು ಹೃದಯಂಗಮವಾಗಿವೆ. ವಚನ ಸಾಹಿತ್ಯದ ರೀತಿ ಸಂಪೂರ್ಣವಾಗಿ ಕನ್ನಡಕ್ಕೆ ಸೇರಿದ್ದು. ಸಂಸ್ಕೃತದ ಅನುಕರಣ ಸ್ವಲ್ಪವೂ ಇಲ್ಲ. ಈ ವಚನಗಳು ಬಹಳಮಟ್ಟಿಗೆ ಗದ್ಯದಂತೆಯೇ ಇದ್ದರೂ ಕೆಲವು ಹಾಡುವದಕ್ಕೂ ಬರುತ್ತವೆ. ಆಗಾಗ ಜಂಗಮರು ವಚನಗಳನ್ನು ತಮ್ಮ ಏಕನಾದದ ಶೃತಿಯೊಂದಿಗೆ ಹಾಡುವುದೂ ಉಂಟು. ಗಹನವಾದ ತತ್ವಗಳನ್ನು ಉಪದೇಶಿಸುವ ಹಲವು ವಚನಗಳಿಂದ ಅಚ್ಚ ಕನ್ನಡದ ಶಕ್ತಿಯನ್ನು ಕಂಡುಕೊಳ್ಳಬಹುದಾಗಿದೆ. ಅನೇಕ ವಚನಗಳು ಆಶುಕವಿತ್ವಗಳು. ಆಯಾ ಸಂದರ್ಭದಲ್ಲಿ ತೋರಿದ ಅಭಿಪ್ರಾಯಗಳನ್ನು ಹೇಳುತ್ತವೆ. 'ಹಲಗೆ ಬಳಪಗಳನ್ನು ಹಿಡಿಯದ ಅಗ್ಗಳಿಕೆ' ಬಹುಶಃ ಬಸವಣ್ಣನಿಗೂ ಸಲ್ಲುತ್ತದೆ. ಯಾರೋ ಯಜ್ಞಕ್ಕಾಗಿ ಮೇಕೆಯನ್ನು ಹಿಡಿದುಕೊಂಡುಹೋಗುತ್ತಿರುವದನ್ನು ಕಂಡು ಬಸವಣ್ಣನು ದಯಾಪರನಾಗಿ ಹೇಳುವ ಈ ವಚನವನ್ನು ಕೇಳಿ—

"ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು ಎಲೆ ಹೋತೇ ಅಳು ಕಂಡೆಯಾ। ವೇದವನೋದಿದವರ ಮುಂದೆ ಅಳು ಕಂಡೆಯಾ ಹೋತೇ। ಶಾಸ್ತ್ರವನೋದಿದವರ ಮುಂದೆ ಅಳು ಕಂಡೆಯಾ ಹೋತೇ। ನೀನತ್ತುದಕ್ಕೆ ತಕ್ಕುದ ಮಾಡುವ ನಮ್ಮ ಕೂಡಲಸಂಗಮದೇವನವರ ॥"

ಜನರು ಶಿವನನ್ನು ಪೂಜಿಸದೆ ಹಲವು ದೇವರುಗಳನ್ನು ನಂಬಿಕೊಂಡಿರುವರೆಂಬ ಅಭಿಪ್ರಾಯವು ಬಹಳ ಸ್ವಾರಸ್ಯವಾಗಿ ನಿರೂಪಿತವಾಗಿದೆ.—

"ಅರಗು ತಿಂದು ಕರಗುವ ದೈವ, ಉರಿ ಕಂಡರೆ ಮುರಟುವ ದೈವವ ಎಂತು ಸರಿ ಎಂಬೆನಯ್ಯಾ, ಅವಸರ ಬಂದರೆ ಮಾರುವ ದೈವವನೆಂತು ಸರಿ ಎಂಬೆನಯ್ಯಾ, ಅಂಜಿಕೆ ಬಂದರೆ ಹೂಳುವ ದೈವವನೆಂತು ಸರಿ ಎಂಬೆನಯ್ಯಾ, ಸಹಜ ಭಾವದ ನಿಜೈಕ್ಯ ಸ್ಥಿರರೂಪ ನಿರ್ವಿಕಾರ ನಿರಂಜನ ಕೂಡಲಸಂಗಮದೇವನೊರ್ವನೇ ಕಾಣಿರಣ್ಣ."

ಬಸವಣ್ಣನು ತಾನು ಇನ್ನೂ ಭಕ್ತಿಯ ಸಾಧನೆಯಲ್ಲಿದ್ದಾಗಿನ ಅನುಭವಗಳನ್ನು ಕೆಲವು ವಚನಗಳಲ್ಲಿ ವರ್ಣಿಸಿದ್ದಾನೆ. ಮಾದರಿಗೆ ಇಲ್ಲಿ ಕೆಲವನ್ನು ಬರೆಯುತ್ತೇವೆ.

"ಮರನನೇರಿದ ಮರ್ಕಟನಂತೆ ಹಲವು ಕೊಂಬೆಗೆ ಹಾಯುತ್ತಲಿದ್ದೇನೆ. ಬೆಂದ ಮನವನಾನೆಂತು ನಂಬುವೆನಯ್ಯ? ಎಂತು ನೆಚ್ಚುವೆನಯ್ಯ? ಎನ್ನ ತಂದೆ ಕೂಡಲಸಂಗಮದೇವನಲ್ಲಿಗೆ ಹೋಗಲೀಯದಯ್ಯ."

ಹೀಗೆ ಚಪಲಚಿತ್ತತೆ, ವಿಷಯಸುಖಾಪೇಕ್ಷೆ ಮೊದಲಾದವುಗಳನ್ನು ಗೆದ್ದು ಭಕ್ತಿಯನ್ನು ಸಾಧಿಸಲು ಪ್ರಯತ್ನಿಸುತ್ತಿರುವಾಗಲೇ ತನ್ನವರು ವಿಶೇಷವಾಗಿ ಹೊಗಳಿದರಂತೆ. ಈ ಹೊಗಳಿಕೆ ಬಸವಣ್ಣನವರ ಮನಸ್ಸಿಗೆ ಸರಿದೋರಲಿಲ್ಲ.

"ಎನ್ನವರೊಲಿದು ಹೊನ್ನಶೂಲದೊಳಿಕ್ಕಿದರೆನ್ನ ಹೊಗಳಿ ಹೊಗಳಿ ಎನ್ನ ಹೊಗಳಿಕೆ ಎನ್ನ ಮೈಗೊಂಡಿತಲ್ಲ ಅಯ್ಯೋ ನೊಂದೆನು ನೊಂದೆನು ಸೈರಿಸಲಾರೆನು ಕೂಡಲಸಂಗಮದೇವಾ ನೀನೆನಗೊಳ್ಳಿದನಾದರೆ ಎನ್ನ ಹೊಗಳಿಕೆಗಡ್ಡಬಾರಾ ಧರ್ಮಿ."

ಈ ವಚನಗಳಲ್ಲಿ ಬಸವಣ್ಣನ ವಿನಯ, ಭಕ್ತಿ, ವೈರಾಗ್ಯಗಳನ್ನು ಕಾಣಬಹುದು.

"ಎನ್ನ ಯೋಗಕ್ಷೇಮ ನಿಮ್ಮದಯ್ಯಾ ಎನ್ನ ಹಾನಿ ವೃದ್ಧಿ ನಿಮ್ಮದಯ್ಯಾ ಬಳ್ಳಿಗೆ ಕಾಯಿ ದಿಮ್ಮಿತ್ತೆ ಕೂಡಲಸಂಗಮದೇವಾ."

ಹೀಗೆ ತನ್ನ ಸುಖದುಃಖಗಳನ್ನೆಲ್ಲ ಶಿವನಿಗೆ ಅರ್ಪಿಸಿ ಬಸವಣ್ಣನು ಶರಣನಾದನು. ಶಿವ ಸಾಕ್ಷಾತ್ಕಾರವನ್ನು ಹೊಂದಿದನು. ತರುವಾಯ ಜನರಿಗೆ ಧರ್ಮೋಪದೇಶಕ್ಕೆ ಮೊದಲು ಮಾಡಿದನು. ಷಟ್‌ಸ್ಥಲ ಸಿದ್ಧಾಂತವನ್ನು ಜನರಿಗೆ ಉಪದೇಶಿಸಿ ಲಿಂಗೈಕ್ಯಸಾಧನೆಗೆ ಹಾದಿ ತೋರಿಸಿದನು. ಭಕ್ತರ ಕರ್ತವ್ಯಗಳನ್ನು ನಿರೂಪಿಸಿದನು. ಲಿಂಗಾರ್ಚನೆ, ಜಂಗಮಾರಾಧನೆ ಇವು ಭಕ್ತರ ಮುಖ್ಯ ಕರ್ತವ್ಯಗಳು. ಅವುಗಳನ್ನು ಕುರಿತು ಹೇಳುತ್ತ ಜಂಗಮರ ಪ್ರಾಶಸ್ತ್ಯವನ್ನು ಪ್ರಕಟಿಸಿದನು.

"ಕೆರೆ ಹಳ್ಳ ಬಾವಿಗಳು ಮೈದೆಗೆದರೆ ಗುಳ್ಳೆಗೊರಚಿ ಚಿಪ್ಪುಗಳ ಕಾಣಬಹುದು. ನಮ್ಮ ಕೂಡಲಸಂಗನ ಶರಣರು ಮನದೆರೆದು ಮಾತ ನಾಡಿದರೆ ಲಿಂಗವ ಕಾಣಬಹುದು."

ಬಸವಣ್ಣನು ಜಂಗಮವೇ ಲಿಂಗವೆಂದು ಸಾರಿದನು. "ತಳಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ" ಎಂದು ಒಂದು ಸುಂದರವಾದ ಉಪಮಾನವನ್ನು ಹೇಳಿ, ಜಂಗಮಾರಾಧನೆಯೇ ಭಕ್ತನ ಪರಮ ಕರ್ತವ್ಯವೆಂದೂ, ಅದರಿಂದಲೇ ಶಿವನು ತೃಪ್ತ ನಾಗುವನೆಂದೂ ಬಸವಣ್ಣನು ಸಾರಿದನು. ಇದರಿಂದ ಹಲವು ಮಂದಿ ಜಂಗಮರಿ ಗಾದರೂ ತಲೆ ತಿರುಗಿರಬೇಕು. ಅವರಿಗೆ ಬಸವಣ್ಣನು ಬುದ್ಧಿ ಹೇಳದೆ ಬಿಟ್ಟಿಲ್ಲ. ಅಲ್ಲದೆ ಜಂಗಮರು ಭಿಕ್ಷಾಟನೆಯನ್ನೇ ನೆಚ್ಚಿಕೊಂಡು ಸ್ವಾವಲಂಬಿಗಳಾಗದೆ ಕೆಡಬಾರದೆಂಬುವ ಯೋಚನೆಯಿಂದ, "ಕಾಯಕವ ಮಾಡಿರಣ್ಣ ಕಾಯಕವೆ ಕೈಲಾಸ" ಎಂದು ನುಡಿದನು.

ಶಿವಭಕ್ತರಿಗೆ, ಜಂಗಮರಿಗೆ ಮಾತ್ರವೇ ಅಲ್ಲದೆ ಇತರರಿಗೂ ಅನ್ವಯಿಸುವ ಸಾರ್ವಕಾಲಿಕವಾದ ನೀತಿಯನ್ನು ಬಸವಣ್ಣನು ತನ್ನ ವಚನಗಳಲ್ಲಿ ಒಮ್ಮೆಗೇ ಹೃದಯ ವನ್ನು ಹೊಗುವ ಭಾಷೆಯಲ್ಲಿ ಉಪದೇಶಿಸಿದ್ದಾನೆ. ಕೇವಲ ದೇವರನಾಮಸ್ಮರಣೆ ಯಿಂದಲೇ ಧನ್ಯನಾದೆನೆಂದು ಭಾವಿಸುವದು ಹೆಡ್ಡತನವೆಂಬ ಅಭಿಪ್ರಾಯವು ಈ ವಚನದಲ್ಲಿ ಗರ್ಭಿತವಾಗಿದೆ—

"ಕರಿಕ ಕೆಂಚನ ನೆನೆದಡೆ ಕೆಂಚನಾಗಬಲ್ಲನೇ? ದರಿದ್ರ ಸಿರಿವಂತನ ನೆನೆದಡೆ ಸಿರಿವಂತನಾಗಬಲ್ಲನೆ? ಮುನ್ನಿನ ಪುರಾತನರ ನೆನೆದು ಧನ್ಯ ನಾದೆನೆಂಬ ಮಾತಿನ ರಂಜಕರನೇನೆಂಬೆ ಕೂಡಲಸಂಗಮದೇವಾ."

ದೇವರ ಪ್ರೀತಿಯ ಪಡೆಯುವ ಮಾರ್ಗವನ್ನು ಕೇಳಿ—

"ಕಳಬೇಡ ಕೊಲಬೇಡ ಹುಸಿಯ ನುಡಿಯಲುಬೇಡ ಮುನಿಯಬೇಡ ಅನ್ಯರಿಗೆ ಅಸಹ್ಯಪಡಬೇಡ ತನ್ನ ಬಣ್ಣಿಸಬೇಡ ಇದಿರ ಹಳಿಯಲುಬೇಡ ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ."

ಬಸವಣ್ಣನ ಸಮಕಾಲೀನರನೇಕರು ವಚನಕಾರರಾದರು. ಅಲ್ಲಮಪ್ರಭು, ಸಿದ್ಧರಾಮ, ಚನ್ನಬಸವ, ಮಡಿವಾಳ ಮಾಚಯ್ಯ ಮೊದಲಾದವರು ವಚನಗಳನ್ನು ರಚಿಸಿದ್ದಾರೆ. ಹೆಂಗಸರೂ ವಚನಕಾರರಾಗಿದ್ದಾರೆ. ಬಹುಶಃ ಈ ಕಾಲದಲ್ಲಿದ್ದಷ್ಟು ಕಬ್ಬಿಗಿತಿಯರು ಕನ್ನಡದಲ್ಲಿ ಇನ್ನು ಯಾವಾಗಲೂ ಇದ್ದಿರಲಾರರು. ಇಂಥ ವಚನಕಾರ್ತಿಯರ ಪೈಕಿ ಅಕ್ಕಮಹಾದೇವಿಯು ಪ್ರಮುಖಳಾದಳು. ಈ ವಚನಕಾರರೆಲ್ಲರೂ ಸಾಮಾನ್ಯವಾಗಿ ತಮ್ಮ ಇಷ್ಟದೇವತೆಯ ಅಂಕಿತದಲ್ಲಿ ವಚನಗಳನ್ನು ನುಡಿದಿರುತ್ತಾರೆ. ಹೀಗೆ ವೀರಶೈವ ವಚನಸಾಹಿತ್ಯವು ಹುಲುಸಾಗಿ ಬೆಳೆದು ಕನ್ನಡ ಸಾಹಿತ್ಯವು ಅತ್ಯಂತ ಪುಷ್ಟಿಯನ್ನು ಹೊಂದಿರುತ್ತದೆ."

ಮೇಲೆ ಬರೆದ ಇಬ್ಬರು ಪಂಡಿತರು ಕನ್ನಡ ಸಾಹಿತ್ಯಕ್ಕೆ ಬಸವಣ್ಣನವರಿಂದ ಹೇಗೆ ಉಪಕಾರವಾಯಿತೆಂಬುದನ್ನು ಬಹಳ ಸ್ವಾರಸ್ಯಯುಕ್ತವಾಗಿಯೂ, ಹೃದಯಂಗಮ

ವಾಗಿಯೂ ವರ್ಣಿಸಿರುತ್ತಾರೆ. ಇದು ಕನ್ನಡ ಭಾಷೆಗೂ, ತನ್ಮೂಲಕ ಕನ್ನಡಿಗರಿಗೂ ವಿಶೇಷವಾಗಿ ವೀರಶೈವರಿಗೂ ಹೆಮ್ಮೆಯನ್ನು ಹುಟ್ಟಿಸತಕ್ಕದಾಗಿರುತ್ತದೆ. ಕನ್ನಡ ನಾಡಿನ ಎಲ್ಲ ಜಾತಿಯ ವಿದ್ವಾಂಸರೂ ಸಾಹಿತ್ಯದ ದೃಷ್ಟಿಯಿಂದ ವಚನಗಳು ಮಾಡಿರುವ ಅಪಾರ ಉಪಕಾರವನ್ನು ಹೊಗಳಿ, ಇದಕ್ಕೆಲ್ಲ ಬಸವಣ್ಣನವರೇ ಕಾರಣರೆಂದು ಸಂತೋಷ ಪೂರ್ವಕವಾಗಿ ಉಲ್ಲೇಖಮಾಡಿರುತ್ತಾರೆ. ಇನ್ನೂ ಅನೇಕ ಜನ ಪಂಡಿತರು ಬಸವಣ್ಣ ನವರಿಂದ ಕನ್ನಡ ಸಾಹಿತ್ಯಕ್ಕೆ ಆದ ಉಪಕಾರವನ್ನು ವಿವಿಧ ರೀತಿಯಿಂದ ಬಣ್ಣಿಸಿರು ತ್ತಾರೆ. ಅವರೆಲ್ಲರ ಅಭಿಪ್ರಾಯಗಳನ್ನು ಇಲ್ಲಿ ಕೊಡಲು ಸ್ಥಳವಿಲ್ಲದ ಕಾರಣ ಮೂರು ಜನರ ಅಭಿಪ್ರಾಯಗಳನ್ನು ಮಾತ್ರ ಆರಿಸಿ ಕೊಟ್ಟಿರುತ್ತೇವೆ.

ಬಸವಣ್ಣನವರ ಸಾಹಿತ್ಯವು ಕಟ್ಟುಕತೆಗಳಿಂದ ಕೂಡಿದ ವರ್ಣನೆಯುಳ್ಳದ್ದಾ ಗಿರುವದಿಲ್ಲ. ಹಿಂದಿನ ಸಾಹಿತ್ಯವೇ ಇಂದಿನ ಜನಜೀವನದ ಹೆಗ್ಗುರುತು ಎಂಬುವ ಹಾಗೆಯೇ ಇರುತ್ತದೆ. ಬಸವಣ್ಣನವರ ಸಾಹಿತ್ಯದಲ್ಲಿ ಅನೇಕ ಗುಣರತ್ನಗಳು ಹುದುಗಿ ಕೊಂಡಿರುತ್ತವೆ. ಸತ್ಯ, ಪ್ರೇಮ, ಸಮಾನತ್ವ, ಅಹಿಂಸಾ, ಆಚಾರನಿಷ್ಠೆ, ಶಿವಭಕ್ತಿ, ಯೋಗಗಳು ಇವೇ ಮೊದಲಾದ ನೂರಾರು ವಿಷಯಗಳು ಇದರಲ್ಲಿ ಅಡಕವಾಗಿರುತ್ತವೆ. ಈ ಸಾಹಿತ್ಯವು ಕನ್ನಡ ಸಾಹಿತ್ಯದ ಮೇಲ್ಮೆಯನ್ನು ಜಗತ್ತಿಗೆ ತೋರಿಸಿಕೊಡುವಂಥಾದ್ದು ಆಗಿರುತ್ತದೆ. ಇಂತಹ ಉಜ್ವಲ ಸಾಹಿತ್ಯ ನಿರ್ಮಾಣವನ್ನು ಮಾಡಿದವರಲ್ಲಿ ಬಸವಣ್ಣ ನವರು ಆದ್ಯ ಪುರುಷರಾಗಿರುತ್ತಾರೆ.

ಸಾಹಿತ್ಯವು ಆನಂದಕ್ಕಾಗಿಯೋ ತತ್ವಕ್ಕಾಗಿಯೋ ಎಂಬ ವಾದವು ಯಾವಾಗಲೂ ಇದ್ದೇ ಇರುತ್ತದೆ. ಸಾಹಿತ್ಯದಲ್ಲಿ ಆನಂದವು ಅವಶ್ಯವಾಗಿ ಉಂಟು. ಆದರೆ ಅದು ಗೌಣವಾಗಿರುವದು. ತತ್ವವೇ ಸಾಹಿತ್ಯದಲ್ಲಿ ಪ್ರಧಾನವಾದುದು. ಈ ಅಭಿಪ್ರಾಯ ವನ್ನು ಬಹಳ ಜನ ಪಂಡಿತರು ಒಪ್ಪುತ್ತಾರೆ. ತತ್ವದೃಷ್ಟಿಯಿಂದ ಬಸವಣ್ಣನವರ ಸಾಹಿತ್ಯವು ಅತ್ಯಂತ ಶ್ರೇಷ್ಠವಾಗಿರುತ್ತದೆ. ತತ್ವದಲ್ಲಿ ಆನಂದವು ಅಡಗಿರುತ್ತದೆಂಬುದನ್ನು ಮರೆಯಲಾಗದು. ಬಸವಣ್ಣನವರು ತಮ್ಮದೊಂದು ವಚನದಲ್ಲಿ—

> "ಮನಕ್ಕೆ ಮನವೊಂದಾಗಿ ಧನಕ್ಕೆ ಧನವೊಂದಾಗಿ ನಚ್ಚಿದ ಮಚ್ಚು ಅಚ್ಚೊತ್ತಿದಂತಿರಬೇಕು ಪ್ರಾಣಕ್ಕೆ ಪ್ರಾಣವೊಂದಾಗಿ ಶುಭ ಸೂಚನೆ ಯೊಂದಾಗಿರದ ನಚ್ಚು ಮಚ್ಚು ಪಾರವೈದುವುದೇ? ಶಿರ ಹರಿದರೇನು? ಕರುಳು ಕುಪ್ಪಳಿಸಿದರೇನು? ಇಂತಪ್ಪ ಸಮಸ್ತ ವಸ್ತುವೆಲ್ಲವೂ ಹೋದ ರೇನು? ಚಿತ್ತ ಮನ ಬುದ್ಧಿಯೊಂದಾದ ಮಚ್ಚು ಬಿಚ್ಚಿ ಬೇರಾಗದಿದ್ದರೆ ಮಚ್ಚುವ ನಮ್ಮ ಕೂಡಲಸಂಗಮದೇವಾ."

> "ಆನೆಯನೇರಿಕೊಂಡು ಹೋದಿರೆ ನೀವು, ಕುದುರೆಯನೇರಿಕೊಂಡು ಹೋದಿರೆ ನೀವು, ಕುಂಕುಮ ಕಸ್ತುರಿಯ ಪೂಸಿಕೊಂಡು ಹೋದಿರೆ ಅಣ್ಣಾ, ಸತ್ಯದ ನಿಲವನರಿಯದೆ ಹೋದಿರಲ್ಲಾ, ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ, ಅಹಂಕಾರವೆಂಬ ಸದ ಮದಗಜವನೇರಿ ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ, ನಮ್ಮ ಕೂಡಲಸಂಗಮದೇವರನರಿಯದೆ ನರಕಕ್ಕೆ ಭಾಜನವಾದಿರಲ್ಲಾ."

ಮತ್ತು

"ನೂರನೋದಿ ನೂರ ಕೇಳಿದರೇನು? ಆಶೆ ಹರಿಯದು ದೋಷ
ಬಿಡದು ಮಜ್ಜನಕ್ಕೆರೆದು ಫಲವೇನು? ಮಾತಿನಂತೆ ಮನವಿಲ್ಲದ ಜಾತಿ
ಡೊಂಬರ ನೋಡಿ ನಗುವ ನಮ್ಮ ಕೂಡಲಸಂಗಮದೇವ."

ಹೀಗೆ ತತ್ವದ ದೃಷ್ಟಿಯಿಂದ ನೂರಾರು ವಚನಗಳನ್ನು ಹೇಳಬಹುದಾಗಿದೆ. ಈ ವಚನಗಳಲ್ಲಿ ಸ್ವಾಭಾವಿಕವಾಗಿ ಅಲಂಕಾರಗಳೂ ಕೂಡ ಬಂದಿರುತ್ತವೆ. ಮೇಲಿನ ವಚನದಲ್ಲಿ 'ಸದ್ಗುಣವೆಂಬ', 'ಅಹಂಕಾರವೆಂಬ' ಅನ್ನುವ ಪದಗಳಲ್ಲಿ ರೂಪಕಾಲಂಕಾರವಿರುತ್ತದೆ. ಇದರಿಂದ ತಿಳಿದುಬರುವದೇನಂದರೆ ಬಸವಣ್ಣನವರ ವಚನಗಳು ತತ್ವದೃಷ್ಟಿಯಿಂದಲೂ ಮೇಲಾದ ಸಾಹಿತ್ಯದಿಂದ ಕೂಡಿದವುಗಳಾಗಿರುತ್ತವೆ.

ಸಾಹಿತ್ಯ ಶಬ್ದದ ಅರ್ಥವನ್ನು ನೋಡಿದರೆ "ಸಹಿತಸ್ಯ ಭಾವಃ ಸಾಹಿತ್ಯಂ" ಅಥವಾ "ಹಿತೇನ ಸಹವರ್ತತ ಇತಿ ಸಾಹಿತ್ಯಂ" ಹಿತದಿಂದ ಕೂಡಿರುವದೇ ಸಾಹಿತ್ಯ. ಓದತಕ್ಕವನಿಗೆ ಹಿತವಾಗದಿದ್ದರೆ ಅದು ಸಾಹಿತ್ಯವೇ ಆಗಲಾರದು. ಈ ದೃಷ್ಟಿಯಿಂದ ಸಾಹಿತ್ಯದ ವಿಚಾರವನ್ನು ತೆಗೆದುಕೊಂಡು ನೋಡಿದರೆ ಬಸವಣ್ಣನವರು ಶ್ರೇಷ್ಠತರಗತಿಯ ಸಾಹಿತ್ಯವಂತರಲ್ಲಿ ಅಗ್ರೇಸರರಾಗುತ್ತಾರೆಂದು ಧಾರಾಳವಾಗಿ ಹೇಳಬಹುದು. ಅವರ ಪವಿತ್ರ ವಾಣಿಯಿಂದ, ಆತ್ಮಸ್ಫುರಣದಿಂದ ಹೊರಟ ಸಾವಿರಾರು ವಚನಗಳು ಮಾನವರ ಹಿತಕ್ಕಾಗಿಯೇ ಇರುತ್ತವೆ. ಜೀವನದ ಎಲ್ಲಾ ಸಮಸ್ಯೆಗಳೂ ಬಸವಣ್ಣನವರ ವಚನಗಳಲ್ಲಿ ಬಂದುಹೋಗಿವೆ. ಅವರ ವಚನಗಳನ್ನು ಓದಿದಂತೆ ಮಾನವನ ಹೃದಯ ಪಲ್ಲಟವಾಗಿ ಓದುವವನು ತತ್ವಾನಂದಸಾಗರದಲ್ಲಿ ಮುಳುಗುವನು.

ಸಾಹಿತ್ಯವೆಂದರೆ ಒಂದು ಹೆಣ್ಣನ್ನೋ, ಪರ್ವತವನ್ನೋ, ನದಿಯನ್ನೋ ವರ್ಣನೆ ಮಾಡಿದರಾಗದು. ಅದರಿಂದ ಮಾನವನ ಹೃದಯ ಕರಗುವಂತಾಗಬೇಕು. ಅದೇ ಸಾಹಿತ್ಯದ ಲಕ್ಷಣ.

ಬಸವಣ್ಣನವರ ವಚನಗಳು ಅನೇಕ ತರಹದ ಕ್ರಾಂತಿಯನ್ನು ಸಾಮಾನ್ಯ ಜನಗಳಲ್ಲಿಯೂ ಕೂಡ ಹುಟ್ಟಿಸಿದವು. ಇದರ ಫಲವಾಗಿ ಹಿಂದುಸ್ಥಾನದ ಚತುರ್ದಿಕ್ಕಿನಿಂದಲೂ ಜನಗಳು ಕಲ್ಯಾಣಕ್ಕೆ ಧಾವಿಸಿ ಬಂದರು. ಒಂಭೈನೂರು ವರ್ಷಗಳು ಕಳೆದು ಹೋದರೂ ಅವರ ವಚನಗಳು ಈಗಲೂ ಓದುಗರ ಹೃದಯಪಲ್ಲಟವಾಗುವಂತೆ ಮಾಡದೆ ಬಿಡಲಾರವು. ಇದೇ ನಿಜವಾದ ಸಾಹಿತ್ಯದ ಲಕ್ಷಣವು.

ವೇದಾಗಮೋಪನಿಷತ್ತುಗಳಲ್ಲಿರತಕ್ಕ ಗಹನವಾದ ವೇದಾಂತವನ್ನು ಸುಲಭವಾದ ಕನ್ನಡ ಭಾಷೆಯಲ್ಲಿ ಹೇಳಲಿಕ್ಕೆ ಸಾಧ್ಯವಿರುತ್ತದೆಂಬುವದನ್ನು ಅವರು ಕನ್ನಡ ನಾಡಿಗೆ ತೋರಿಸಿಕೊಟ್ಟರಲ್ಲದೆ ಸಂಸ್ಕೃತದಿಂದಲೇ ಮೋಕ್ಷವೆಂಬುವ ಬಹುದಿವಸಗಳ ಸಂಪ್ರದಾಯವನ್ನು ಕಿತ್ತು ಒಗೆದರು. ಇದು ಸಾಮಾನ್ಯವಾದ ಕೃತಿಯಲ್ಲ. ಪರಂಪರಾಗತವಾಗಿ ಬಂದಿರತಕ್ಕ ಈ ಮಾರ್ಗವನ್ನು ಇವರು ತಪ್ಪಿಸಿದುದು ಅಜರಾಮರವಾದ ಇವರ ಕೀರ್ತಿಗೆ ಕಾರಣವೂ, ಅನುಕರಣೀಯವೂ ಆಗಿರುತ್ತದೆ. "ಜನನೀ ಜನ್ಮಭಾಷಾ ಚ ಸ್ವರ್ಗಾದಪಿ ಗರೀಯಸೀ" ಎಂಬುವ ಉಕ್ತಿಯನ್ನು ಸಾರ್ಥಕಗೊಳಿಸಿದರು.

ಶ್ರೀಮಾನ್ ಸಿದ್ಧರಾಮಪ್ಪ ಪಾವಟೆ, ಬಿ.ಎ., ಎಲ್‌ಎಲ್.ಬಿ., ತ್ರಿಭಾಷಾ ಪಂಡಿತರೂ, ವೀರಶೈವ ಸಿದ್ಧಾಂತವನ್ನು ಕೂಲಂಕಷವಾಗಿ ಅಧ್ಯಯನ ಮಾಡಿದವರೂ

ಆದ ಇವರು ತಮ್ಮ 'ಅಲ್ಲಮವ್ಯೋಮ' ಎಂಬುವ ಗ್ರಂಥದ ಪುಟ ೭೩ ರಲ್ಲಿ ಪ್ರಭುದೇವರು ಕನ್ನಡದಲ್ಲಿ ಏಕೆ ಗ್ರಂಥಗಳನ್ನು ರಚಿಸಿದರು ಎಂಬುವದನ್ನು ಹೀಗೆ ಬರೆದಿರುತ್ತಾರೆ—

"ಅವನ ವಚನಸರಣಿಯನ್ನು ನೋಡಿದರೆ ಅತಿ ಗಂಭೀರವಾಗಿಯೂ, ಸಾರವತ್ತಾಗಿಯೂ ಇರುವದು. ವಚನಗಳು ಅರ್ಥಗಳನ್ನು ಗರ್ಭೀಕರಿಸಿಕೊಂಡಿರುವವು. ಸಂಸ್ಕೃತವೆಂದರೆ ಒಂದಾನೊಂದು ವಿಶಿಷ್ಟ ಭಾಷೆಯ ಹೆಸರಲ್ಲ. ಲಕ್ಷಣದಿಂದ ಕೂಡಿದ ಸಾಧು ಶಬ್ದವೇ ಸಂಸ್ಕೃತವು. ಅಮರ ಟೀಕೆಯಲ್ಲಿ ಭರತನು, "ಪಾಣಿನ್ಯಾದಿ ವ್ಯಾಕರಣ ಸೂತ್ರೇಣ ಲಕ್ಷಣೋಪೇತಃ ಸಾಧು ಶಬ್ದಃ" ಎಂದು ಸಂಸ್ಕೃತ ಶಬ್ದವನಿರ್ವಚನವ ಮಾಡಿರುವನು. ಕನ್ನಡ ಭಾಷೆಗಾದರೂ ಲಕ್ಷಣ ಗ್ರಂಥಗಳುಂಟು. "ಗುಣಮವರೆ ಶಬ್ದಮಣಿದರ್ಪಣ ನಾಮವನಿಟ್ಟು ನೆರೆಯೆ ಕರ್ಣಾಟಕ ಲ। ಕ್ಷಣ ಶಬ್ದಶಾಸ್ತ್ರಮಂಲಾ। ಕ್ಷಣಿಕರ್ ಪೇಳೆಂದು ಬೆಸಸೆ ಬಗೆಯುಗೆ ಪೇಳ್ದೆಂ।" ಕರ್ಣಾಟಕ ಭಾಷೆಗೆ ಶಬ್ದಾನುಶಾಸನ, ಶಬ್ದಮಣಿದರ್ಪಣ ಮೊದಲಾದ ಲಕ್ಷಣ ಗ್ರಂಥಗಳಿರುವದರಿಂದ ಇದಾದರೂ ಸುಸಂಸ್ಕೃತವು. ಈ ಅರ್ಥದಲ್ಲಿ ಶಬ್ದಾನುಶಾಸನದ ಭಟ್ಟಾಕಳಂಕನು

> ನಮಃ ಶ್ರೀ ವರ್ಧಮಾನಾಯ । ವಿಶ್ವವಿದ್ಯಾವಭಾಸಿನೇ ।
> ಸರ್ವ ಭಾಷಾ ಮಯಿೀ ಭಾಷಾ । ಪ್ರವೃತ್ತಾಯನ್ಮುಖಾಂಭುಜಾತ್ ॥

ಎಂಬ ಮಂಗಲಶ್ಲೋಕದಿಂದ ಭಗವದ್ವಾಣಿಯೇ ಕರ್ಣಾಟಕ ಶಬ್ದವೃಂದಕ್ಕೆ ಮೂಲವೆಂದು ಉದ್ಘೋಷಿಸಿರುವನು. ಈ ರೀತಿಯಲ್ಲಿ ಕರ್ಣಾಟಕ ಭಾಷೆಯು ಭಗವದ್ವಾಣೀ ಮೂಲವೆಂದು ಸೂಚಿಸಿ, ಆ ಶಬ್ದಗಳು ಅನುಶಾಸನಕ್ಕೆ ತಕ್ಕವು. ಅಂದರೆ ವ್ಯಾಕರಣ ಶಾಸ್ತ್ರದಿಂದ ವ್ಯುತ್ಪತ್ತಿಪೂರ್ವಕವಾಗಿ, ಸಾಧ್ವಸಾಧುವಿವೇಚನಪೂರ್ವಕವಾಗಿ ಪ್ರಯೋಗಾರ್ಹವಾಗಿರುವವೆಂದು "ಅತಃ ಶಬ್ದಾನುಶಾಸನಮಾರಭ್ಯತೇ" ತೇಷಾಂ ಶಬ್ದಾನಾಂ ಕರ್ಣಾಟಕಾನಾಂ ಎಂಬ ಮೂರು ಸೂತ್ರಗಳಿಂದ ಹೇಳುತ್ತಾನೆ.

ಅದಿರಲಿ; ವಾಡಿಕೆಯಾಗಿ ಸಂಸ್ಕೃತವೆಂದೆನಿಸಿಕೊಂಬ ಗೀರ್ವಾಣವಾಣಿಯಲ್ಲಿ ಏಕೆ ಅಲ್ಲಮನು ವಚನಗಳನ್ನು ಹೇಳಲಿಲ್ಲ? ಎಂದು ಕೆಲವರು ಆಕ್ಷೇಪಿಸುವರು. ಸಂಸ್ಕೃತ ಭಾಷೆಯಲ್ಲಿ ಹೇಳಿದ ವೇದಾಗಮೋಪನಿಷತ್ತುಗಳ ಯಥಾರ್ಥವನ್ನು ಅರಿಯದೆ ಕಂಡವರು ಕಂಡಂತೆ ಅರ್ಥಮಾಡಿದ್ದರಿಂದ ಬಹಳ ಆಯಾಸದಿಂದ ತತ್ವವು ತಿಳಿಯಬಹುದಾಗಿದೆ. ಅಲ್ಪಕಾಲದಲ್ಲಿಯೇ ಅನೇಕ ಹೋರೆಗಳನ್ನು ಮಾಡುತ್ತಿರುವ ಭಕ್ತಿ ಪರಿಪ್ಲುತಮಾನಸರಾದ ಮುಮುಕ್ಷುಗಳಿಗೆ ಸುಲಭವಾಗಿ ಧರ್ಮರಹಸ್ಯದ ಬೋಧವಾಗಬೇಕೆಂಬುವ ಬುದ್ಧಿಯಿಂದ ಅಲ್ಲಮನು ವಚನಗಳನ್ನು ಕನ್ನಡದಲ್ಲಿ ರಚಿಸಿದನು. ಕನ್ನಡದಲ್ಲಿ ಹೇಳಿದುದರಿಂದ ಧರ್ಮತತ್ವಗಳ ಪರಿಚಯವು ಬಹು ಜನಕ್ಕಾಯಿತು. ಅವರೆಲ್ಲರೂ ಕೃತಾರ್ಥರಾದರು. ಅತ್ಯುತ್ತಮವಾದ ಕನ್ನಡ ತಾಯ್ನುಡಿಯಿಂದ ಧರ್ಮರಹಸ್ಯವನ್ನು ಬೋಧಿಸುವ ವಚನಗಳನ್ನು ಬಹಳ ಮಂದಿ ಶರಣರು ಬರೆಯುವ ಸುಯೋಗ ಪ್ರಭುವು ಕನ್ನಡದಲ್ಲಿ ಬೋಧಿಸದಿದ್ದರೆ ಬರುತ್ತಿರಲಿಲ್ಲ. ಕನ್ನಡದಲ್ಲಿ ಬೆಸಸಿದುದರಿಂದ ಕರ್ಣಾಟಕವು ಧರ್ಮಭೂಮಿಯಾಯಿತು.

ಶ್ರೀಮಾನ್ ಪಾವಟೆಯವರ ಹೇಳಿಕೆಯಲ್ಲಿ, "ಸಂಸ್ಕೃತವೆಂದರೆ ಒಂದಾನೊಂದು ವಿಶಿಷ್ಟ ಭಾಷೆಯ ಹೆಸರಲ್ಲ" ಎಂಬುವ ವಾಕ್ಯವನ್ನು ಒಪ್ಪಲು ಶಕ್ಯವಿಲ್ಲ. ಸಂಸ್ಕೃತವು ವಿಶಿಷ್ಟ ಭಾಷೆಯೇ ಆಗಿರುತ್ತದೆ. ಆದರೆ ಇಲ್ಲಿ ಅವರ ಕನ್ನಡದ ಉತ್ಕಟ ಅಭಿಮಾನದಿಂದ

ಹೇಳಿದ ಮಾತುಗಳು ಸ್ವಾಗತಾರ್ಹವಾಗಿರುತ್ತವೆ. ಮುಂದೆ ಎರಡನೆಯ ಪುಟದಲ್ಲಿ ಗೀರ್ವಾಣ ವಾಣಿಯೆಂದು ಅವರೇ ಹೇಳಿರುತ್ತಾರೆ. ಪ್ರಭುದೇವರು ಕನ್ನಡದಲ್ಲಿ ಏಕೆ ವಚನಗಳನ್ನು ಬರೆದರೆಂಬುವ ಅವರ ವಿವೇಚನೆಯು ಅತ್ಯಂತ ಯೋಗ್ಯವಾದುದಾಗಿ ಇರುತ್ತದೆ.

ಪುಣೆಯಲ್ಲಿ ತಾರೀಖು ೨೫-೭-೧೯೪೨ರಲ್ಲಿ ಕೂಡಿದ ಹೊರನಾಡಿನ ಕನ್ನಡಿಗರ ಸ್ನೇಹಸಮ್ಮೇಳನದ ಮುಖ್ಯ ಅತಿಥಿಗಳಾಗಿದ್ದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ.,ಬಿ.ಎಲ್., ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್, ಇವರು ತಮ್ಮ ಭಾಷಣದಲ್ಲಿ—

"ಈಗಿರುವ ಪರಿಸ್ಥಿತಿಯೆಂದರೆ ಕನ್ನಡವನ್ನು ಬೆಳೆಯಿಸಬೇಕೋ ಇಲ್ಲವೆ ಏಕಮೇವಾದ್ವಿತೀಯವೆಂದು ಹಿಂದಿಯನ್ನು ಇಡಿಯ ಹಿಂದೂಸ್ಥಾನದ ಭಾಷೆಯನ್ನಾಗಿ ಮಾಡಿ ಅದನ್ನೇ ನಾವು ಕಲಿತು ಆದರಲ್ಲಿಯೇ ನಾವು ಬೆರೆತು ಬೆಳೆದು ಆ ಹಿಂದಿಯಲ್ಲಿಯೇ ನಮ್ಮ ಸಾಹಿತ್ಯವನ್ನು ಹಬ್ಬಿಸಬೇಕೋ ಎಂಬುವದೊಂದು ಈಗಿನ ತುರುಸಿನ ಸಮಸ್ಯೆಯಾಗಿದೆ. ಮರಾಠಿಯಲ್ಲಿಯೂ ಆಳವಾದ ಸಾಹಿತ್ಯವಿದೆ, ಬೆಳೆದು ಬಂದ ಸಂಸ್ಕೃತಿ ಇದೆ. ಅವರೆಲ್ಲರೂ ಮರಾಠಿಯನ್ನು ಮರೆತು ಹಿಂದಿ ಭಾಷೆಯನ್ನು ಅಪ್ಪುವರೋ? .ಅದರಂತೆ ಕನ್ನಡ ನಾಡು, ನುಡಿ, ಸಾಮ್ರಾಜ್ಯ, ವೈಭವ, ಸಂಸ್ಕೃತಿ, ಜನಾಂಗ ಇವೆಲ್ಲವುಗಳನ್ನೂ ಮರೆಯಲಿಕ್ಕೆ ನಮಗೆ ಶಕ್ಯವಿದೆಯೆ? ಉಳಿದ ಸಾಹಿತ್ಯವನ್ನು ಓದಬೇಕೆಂದಾಕ್ಷಣ ತಾಯ್ನುಡಿಯನ್ನು ಮರೆಯಬೇಕೆಂದಲ್ಲ ಅಥವಾ ತಾಯ್ನುಡಿಯನ್ನು ಮುಂದಕ್ಕೆ ತರಲಿಕ್ಕೆ ಯತ್ನಿಸಿದಾಕ್ಷಣ ಅನ್ಯ ನುಡಿಗಳನ್ನು ದ್ವೇಷಿಸಿದಂತೆಯೂ ಅಲ್ಲ.

"ಕನ್ನಡ ಪ್ರಾಚೀನ ಸಾಹಿತ್ಯದಲ್ಲಿಯೂ ಸಂಸ್ಕೃತ ಮತ್ತು ತಾಯ್ನುಡಿ ಇವುಗಳ ಬಡಿದಾಟವೇ ಕಂಡುಬರುತ್ತದೆ. ಸಂಸ್ಕೃತವನ್ನೇ ಮುಂದೆ ತರಬೇಕು ಎಂದು ಬಲವಾಗಿ ಆಂದೋಲನ ಎಬ್ಬಿಸಿದವರೂ ಉಂಟು. 'ಏನು ಲಿಂಗವಂತರ ಹಾಗೆ ಕನ್ನಡ ಮಾತನಾಡುವದು' ಎಂದು ಅಂದವರೂ ಉಂಟು. ವೀರಶೈವರು ತಾಯ್ನುಡಿಯಲ್ಲಿಯೇ ದುಡಿದು ತಮ್ಮ ಮತಪ್ರಸಾರ ಮಾಡುವದನ್ನು ಕಂಡು ಆಮೇಲೆ ಬ್ರಾಹ್ಮಣರು ಕಣ್ಣು ತೆರೆದರು. ಕುಮಾರವ್ಯಾಸ, ಲಕ್ಷ್ಮೀಶ, ಪುರಂದರದಾಸರು ಮೊದಲಾದವರೂ ಕನ್ನಡದಲ್ಲಿ ತಮ್ಮ ಧರ್ಮಪ್ರಸಾರ ಮಾಡಲು ಪ್ರಾರಂಭಿಸಿದರು." ಇದು ಅವರ ಭಾಷಣದ ಸಾರಾಂಶವು.

ಒಂಭೈನೂರು ವರ್ಷಗಳ ಕೆಳಗೆ ಬಸವಣ್ಣನವರು ದೂರದರ್ಶಿತನದಿಂದ ಕನ್ನಡದಲ್ಲಿಯೇ ಗ್ರಂಥಗಳನ್ನು ಬರೆದು ಉಳಿದ ತಮ್ಮ ಅನುಯಾಯಿಗಳಿಗೂ ಬರೆಯಲಿಕ್ಕೆ ಹಚ್ಚಿ ಕನ್ನಡಿಗರ ಹೆಚ್ಚುಳವನ್ನು ಹೆಚ್ಚಿಸಿದರು. ಅಚ್ಚಗನ್ನಡದ ಪರಂಪರೆಯನ್ನು ಉಳಿಸಿಕೊಟ್ಟ ಗೌರವವು ವಚನವಾಙ್ಮಯದ ಆಚಾರ್ಯಪುರುಷರಾದ ಬಸವಣ್ಣನವರಿಗೆ ಸಲ್ಲತಕ್ಕದ್ದಾಗಿದೆ. ಶ್ರೀಮಾನ್ ಶ್ರೀಕಂಠಯ್ಯನವರ ಮೇಲಿನ ಭಾಷಣದ ಅಭಿಪ್ರಾಯವಾದರೂ ಇದೇ ಆಗಿರುತ್ತದೆ.

ವಚನಗಳು ಸರಳ ಗದ್ಯದಲ್ಲಿದ್ದರೂ ಅರ್ಥಗೌರವ, ಪದಲಾಲಿತ್ಯ ಮೊದಲಾದ ವಿಷಯಗಳು ಹೃದಯಂಗಮವಾಗಿವೆ. ಶ್ರೀ ಬಸವಣ್ಣನವರ ವಚನಗಳಲ್ಲಿ ವಿಶೇಷವಾಗಿ

ಉಪಮಾನ, ರೂಪಕ ಮೊದಲಾದ ಆಲಂಕಾರಗಳು ಹೇರಳವಾಗಿ ಬಂದಿರುತ್ತವೆ. ಅದರಲ್ಲಿಯೂ ಉಪಮಾಲಂಕಾರಗಳು ಬಹಳ ಸುಂದರಗಳಾಗಿವೆ.

ಶ್ರೀ ಬಸವೇಶ್ವರರು—

"ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ। ಅಂಬುಜಕ್ಕೆ ಭಾನುವಿನುದಯದ ಚಿಂತೆ। ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ। ಎನಗೆ ನಮ್ಮ ಕೂಡಲಸಂಗಮದೇವರ ನೆನೆವ ಚಿಂತೆ ॥"

ಮತ್ತು

"ಸೂರ್ಯನುದಯ ತಾವರೆಗೆ ಜೀವಾಳ। ಚಂದ್ರಮನುದಯ ನೈದಲೆಗೆ ಜೀವಾಳ। ಕೂಪರ ಠಾವಿನಲ್ಲಿ ಕೂಟ ಜೀವಾಳವಯ್ಯ। ಕೂಡಲಸಂಗನ ಬರವೆನಗೆ ಪ್ರಾಣಜೀವಾಳವಯ್ಯಾ ॥"

ಈ ಎರಡು ವಚನಗಳಲ್ಲಿ ಸುಂದರವಾದ ಉಪಮೆಯನ್ನು ಬಸವಣ್ಣನವರು ಕೊಟ್ಟಿರುವರು.

"ಆಘವಣಿಯುವಸರದಾಚಾರ ಸತ್ಕ್ರಿಯೆಯೆಂಬ ಭೂಮಿಯ ಮೇಲೆ ಸರ್ವಶುದ್ಧವೆಂಬ ಗೋಮಯಮಂ ತಂದು ವಿನಯಾರ್ಥವೆಂಬ ಉದಕದಿಂದ ಸಮ್ಮಾರ್ಜನೆಯಂ ಮಾಡಿ ತನುವಿನ ಗುಣಂಗಳಂ ಹಿಟ್ಟುಗುಟ್ಟಿ ರಂಗವೋಲಿಯನಿಕ್ಕಿ ಅಕ್ಷಯವೆಂಬ ಬಿಂದಿಗಿಯಲ್ಲಿ ಪರಮಾನಂದವೆಂಬ ಅಘವಣಿಯಂ ತುಂಬಿ ಸಮರಸದಿಂದೆ ಮಜ್ಜನಕ್ಕೆರೆಯಲು ಹೃದಯ ಕಮಲವೆಂಬ ಪುಷ್ಪವಂ ಸಲಿಸಿ ಸೌಖ್ಯತರ ಶಾಂತಿ ಎಂಬ ಗಂಧವನಿಟ್ಟು ಅಕ್ಷಯವೆಂಬ ಅಕ್ಷತೆಯನಿಟ್ಟು ಅಳವಡಿಸಿ ಸದ್ಭಾವವೆಂಬ ಧೂಪಮಂ ಬೀಸಿ ಸುಜ್ಞಾನವೆಂಬ ನಿವಾಳಿಯನೆತ್ತಿ ನಿತ್ಯನಿರಂಜನವೆಂಬ ನೀರಾಜನಮಂ ಬೆಳಗಲು ಬ್ರಹ್ಮನಾದವೆಂಬ ಗಂಟೆಯಂ ಬಾಜಿಸಲು ನಿತ್ಯಲಿಂಗಾರ್ಚನೆಗೆಡೆ ಮಾಡಲು ಇದರ ಮರ್ಮಕರ್ಮಸ್ಥಿತಿಯ ಶಿವಲಿಂಗಾರ್ಚನೆಯಂ ಮಾಡ ಬಲ್ಲರೆ ನಾನಾರನು ಕಾಣೆನು ಕೂಡಲಸಂಗಮದೇವರ ಪ್ರಭುಶಿವಲಿಂಗಾರ್ಚನೆಯ ಮಾಡಲು ನಾನೇ ಪರಿಚಾರಕನು."

ಇದರಲ್ಲಿ ರೂಪಕಾಲಂಕಾರದ ಪರಂಪರೆಯೇ ಇರುವದು. ಅಂದರೆ ಮಾಲಾರೂಪಕಾಲಂಕಾರವಿರುವದು.

ಶರಣ ಶರಣೆಯರನೇಕ ವಚನಗಳು ಕನ್ನಡ ಷಟ್ಪದಿ ಕಾವ್ಯಗಳಿಗೆ ಸರಿಯಾಗಿ ಹೋಲತಕ್ಕವುಗಳಾಗಿರುತ್ತವೆ.

ಶ್ರೀ ಅಕ್ಕಮಹಾದೇವಿಯವರು ಪರಮಾತ್ಮನನ್ನು ಹುಡುಕಿಕೊಳ್ಳುತ್ತ ಶ್ರೀಶೈಲಕ್ಕೆ ಹೋದಾಗ್ಗೆ ಅಲ್ಲಿಯೂ ದೇವರನ್ನು ಕಾಣದೆ ಅತ್ಯಂತ ಭಾವನಾಪರವಶಳಾಗಿ ಪಶುಪಕ್ಷಿಗಳನ್ನು ಕುರಿತು ಹೇಳಿರುವ ವಚನವು ಸಾರವತ್ತರವಾಗಿಯೂ, ಸುಂದರವಾಗಿಯೂ ಇರುತ್ತದೆ ನೋಡಿರಿ—

"ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೇ ?
ಸ್ವರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೇ ?

ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೇ ?
ಸರೋವರದೊಳಗಾಡುವ ಹಂಸಗಳಿರಾ ನೀವು ಕಾಣಿರೇ ?
ಗಿರಿಗಹ್ವರದೊಳಗಾಡುವ ಪುಳಿಂದರೆ ನೀವು ಕಾಣಿರೇ ?
ಚನ್ನಮಲ್ಲಿಕಾರ್ಜುನನೆಲ್ಲಿದ್ದಾನೆಂದು ಹೇಳಿರೇ ?"

ಕನ್ನಡ ಕವಿಗಳಲ್ಲಿ ಅತ್ಯಂತ ಸುಪ್ರಸಿದ್ಧನಾದ ಲಕ್ಷ್ಮೀಶನು ತನ್ನ ಜೈಮಿನಿಯಲ್ಲಿ ಘೋರಾರಣ್ಯದೊಳಗೆ ಲಕ್ಷ್ಮಣನು ಸೀತೆಯನ್ನು ಬಿಟ್ಟು ಹೋಗುವ ಕಾಲಕ್ಕೆ—

"ಎಲೆ ವನಸ್ಥಲಂಗಳಿರ ವೃಕ್ಷಂಗಳಿರ ಮೃಗಂ।
ಗಳಿರ ಕ್ರಿಮಿಕೀಟಂಗಳಿರ ಪಕ್ಷಿಗಳಿರ ಲತೆ।
ಗಳಿರ ತೃಣಗುಲ್ಮಂಗಳಿರ ಪಂಚಭೂತಂಗಳಿರ ದೆಶೆಗಳಿರ ಕಾವುದು॥
ಎಲೆಧರ್ಮದೇವತೆ ಜಗಜ್ಜನನಿ ಜಾಹ್ನವಿಯೆ।
ಸಲಹಿಕೊಂಬುದು ತನ್ನ ಮಾತೆಯಂ ಜಾನಕಿಯ।
ನೆಲೆತಾಯಿ ಭೂದೇವಿ ನಿನ್ನ ಮಗಳಿಹಳೆಂದು ಸುಮಿತ್ರಿ ಕೈಮುಗಿದನು॥"

ರತಿಯು ಮನ್ಮಥನನ್ನು ಕಾಣದೆ ದುಃಖದಿಂದ ಪ್ರಲಾಪಿಸುತ್ತಿರುವ ಸಂದರ್ಭವನ್ನು ಕವಿಶ್ರೇಷ್ಠನಾದ ವಿರೂಪಾಕ್ಷ ಪಂಡಿತನು ತನ್ನ ಚನ್ನಬಸವಪುರಾಣದಲ್ಲಿ—

"ತರುಗಳಿರ ಲತೆಗಳಿರ ಮೃಗಪಕ್ಷಿಗಳಿರ।
ಭಾಸುರಸುರಾಂಗನೆಯರಿರ ದಿಗ್ದೇವಿಯರಿರ।
ವನಗಳಿರ ಭೂದೇವಿ ವನಲಕ್ಷ್ಮಿಯರಿರ।
ಕಂಡಿರೆಯನ್ನ ವಿಧಿಯನೀಗ॥"

ಮೇಲೆ ಬರೆದ ಇಬ್ಬರು ಸುಪ್ರಸಿದ್ಧ ಕವಿಗಳ ಕವಿತೆಗೂ ಅಕ್ಕಮಹಾದೇವಿಯವರ ವಚನಕ್ಕೂ ಇರುವ ಗುಣಾವಗುಣಗಳನ್ನು ವಾಚಕರು ವಿಮರ್ಶಿಸಿ ನೋಡಬೇಕು.

ವಚನಗಳಲ್ಲಿ ಅಲ್ಲಲ್ಲಿ ಸರಳ ಗದ್ಯಗಳೂ ಇರುತ್ತವೆ. ಇವು ಬಹಳ ಮನೋಹರವಾದ ಶೈಲಿಯನ್ನು ತೋರಿಸುತ್ತವೆ.

**ಶೂನ್ಯಸಂಪಾದನೆ—ಪುಟ ೭೧**

"ಅದೆಂತೆಂದೊಡೆ ಪ್ರಭುದೇವರು ಸಿದ್ಧರಾಮಯ್ಯದೇವರು ಬಸವರಾಜದೇವರ ಮಾಹಾತ್ಮೆಯಂ ಕೊಂಡಾಡಲು ಪರಮಾನಂದದೊಳೋಲಾಡುತ್ತ ಬರುತ್ತಿರಲತ್ತ ಅಖಂಡಾದ್ವಯ ನಿತ್ಯ ನಿರವಯ ನಿಶ್ಶೂನ್ಯವಪ್ಪ ನಿಃಕಲಪರ ಶಿವನ ಸ್ಥೂಲತತ್ವವೇ ಮರ್ತ್ಯಲೋಕದಲ್ಲಿ ಜಗಹಿತಾರ್ಥವಾಗಿ ಬಸವೇಶ್ವರನ ನಾಮದಿಂದವತರಿಸಿ ಷಡ್‌ದರ್ಶನ, ಷಣ್ಮತ, ಷಟ್‌ಸಮಯಗಳಿಂದ ವೀರಶೈವ ಸದ್ಭಕ್ತಿ ಮಸುಳಿಸಿರಲಾ ಶಿವಭಕ್ತಿಯನುದ್ಧರಿಸಿ ಸರ್ವಾಚಾರಪನಿಂಬುಗೊಂಡು ಕಲ್ಯಾಣಪಟ್ಟಣದಲ್ಲಿ ಗುರುಲಿಂಗಜಂಗಮ ಭಕ್ತಿಯ ಮಾಡುತ್ತ ನಿತ್ಯವೆಂಭತ್ತೆಂಟು ಪವಾಡಂಗಳಂ ಜಯಿಸುತಿರ್ಪ—ಬಸವೇಶನೆಂತಾದನೆಂದೊಡೆ."

ಬಸವಣ್ಣನವರೇ ಮೊದಲಾದ ಶರಣರ ವಚನಗಳಲ್ಲಿ ಪ್ರಾಸಿನಿಂದಲೂ ಕೂಡಿದ ಅನೇಕ ವಚನಗಳಿರುತ್ತವೆ.

“ ಮಿಂಚಿನ ಪ್ರಭೆಯಲ್ಲಿ ಪಂಚವದನನ ಕಂಡೆನಯ್ಯಾ ಸಂಚಲವಿಲ್ಲದೆ
ನಿರೀಕ್ಷಿಸಲು ಪಂಚಪಂಚೀ ಕೃತಿಯ ಪ್ರಪಂಚ ಪರಿಹರವಾಗಿ ನಿಷ್ಪ್ರಪಂಚ
ನಿರ್ಲೇಪಕನಾದೆನು ಕಾಣಾ ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ.”

ಅರ್ಥವಾಗದ ಬೆಡಗಿನ ವಚನಗಳೂ ಉಂಟು. ಒಟ್ಟಿನ ಮೇಲೆ ಇಲ್ಲಿ ನಾವು ಬಸವಣ್ಣ ನವರಿಂದ ಎಂಥಾ ಸಾಹಿತ್ಯದ ಉದ್ಧಾರವಾಗಿರುತ್ತದೆಂಬುದನ್ನು ನೋಡುವದೇ ಮುಖ್ಯ ಕಾರ್ಯವಾಗಿರುತ್ತದೆ. ಅವರೊಬ್ಬರೇ ಈ ಕಾರ್ಯ ಮಾಡದೆ ಬೆಂಬಲಿಗರಾದ ಅನೇಕರನ್ನು ಈ ಮಾರ್ಗಕ್ಕೆ ಹಚ್ಚಿದ್ದುದು ಬಹಳ ಮಹತ್ತರವಾದುದು. ಲೋಕದಲ್ಲಿ ನಾವು ಎಷ್ಟೋ ಜನ ಸಾಹಿತ್ಯವಂತರನ್ನು ಕಾಣುತ್ತೇವೆ. ಅವರಿಗೆ ಅನುಯಾಯಿಗಳು ಕೈಬೆರಳಿನಿಂದ ಎಣಿಸುವಷ್ಟು ಜನರಿರುವದೂ ದುರ್ಲಭವಾದುದು. ಮುನ್ನೂರು ಶರಣರ ಜನ ಬೆಂಬಲ ಪಡೆದುದು ಬಸವಣ್ಣನವರ ಅಸಾಧಾರಣ ಕಾರ್ಯವನ್ನು ವ್ಯಕ್ತಗೊಳಿಸುತ್ತದೆ. ಇಂತಹ ಪ್ರಚಂಡವಾದ ಬೆಂಬಲವು ಎಲ್ಲರಿಗೂ ಸಿಗುವದು ಸಾಧ್ಯವಿಲ್ಲ. ದೈವಬಲವುಳ್ಳ ಮಹಾಪುರುಷರಿಗೆ ಮಾತ್ರ ಸಾಧ್ಯವಾದುದು. ಬಸವಣ್ಣನವರು ಕನ್ನಡ ಭಾಷಾ ಉದ್ಧಾರಕರಲ್ಲ ಜನಕರೆಂದು ಹೇಳುವದು ಅತ್ಯಂತ ಯೋಗ್ಯವಾಗಿರುತ್ತದೆ. ಕನ್ನಡ ಸಾಹಿತ್ಯದ ಕೀರ್ತಿಗೌರವಗಳನ್ನು ಬೆಳೆಸಿದ ಮಹಾಪುರುಷರಾದ ಬಸವಣ್ಣ ನವರನ್ನು ಕನ್ನಡ ಸಾಹಿತ್ಯವು ಈ ಜಗತ್ತಿನಲ್ಲಿ ಅಸ್ತಿತ್ವದಲ್ಲಿರುವವರೆಗೆ ಕನ್ನಡಿಗರು ಮರೆಯುವದು ಸಾಧ್ಯವೇ ಇರುವದಿಲ್ಲ. ಒಂದು ಸಾಹಿತ್ಯವನ್ನು ನಿರ್ಮಾಣ ಮಾಡಿದ ಗೌರವವನ್ನು ಪಡೆಯುವದು ಎಲ್ಲರಿಗೂ ಸಾಧ್ಯವಾದ ಮಾತಾಗಿರುವದಿಲ್ಲ. ಅದು ಬಸವಣ್ಣನವರಂತಹ ಕರ್ತೃತ್ವ ಶಕ್ತಿಯುಳ್ಳ ವ್ಯಕ್ತಿಗಳಿಗೆ ಮಾತ್ರ ಸಾಧ್ಯವಾದುದಾಗಿರುತ್ತದೆ. ಆದ್ದರಿಂದ ವಚನವಾಙ್ಮಯದಿಂದ ಕನ್ನಡ ಸಾಹಿತ್ಯವು ಪರಿಪುಷ್ಟಿಯನು ಹೊಂದಿ ಹೆಚ್ಚಿನ ಗೌರವಕ್ಕೆ ಪಾತ್ರವಾಗಿರುತ್ತದೆ.

# ಹದಿನಾರನೆಯ ಪ್ರಕರಣ

## ಬಸವಣ್ಣನವರೂ ಅಹಿಂಸಾ ತತ್ವವೂ

ಪ್ರಪಂಚದಲ್ಲಿಯ ಧರ್ಮಸ್ಥಾಪಕರೂ, ಧರ್ಮೋದ್ಧಾರಕರೂ ಅಹಿಂಸೆ ಎಂಬುವ ಶ್ರೇಷ್ಠವಾದ ಶಸ್ತ್ರವನ್ನು ಅನೇಕ ತರಹದಿಂದ ಪ್ರಯೋಗಮಾಡಿ ನೋಡಿ ಅದರ ಉಪಯೋಗ ಮಾಡಿಕೊಂಡಿದ್ದುದು ತಿಳಿಯಬರುತ್ತದೆ. ಆಯಾಯ ಮತಪ್ರವರ್ತಕರ ಚರಿತ್ರೆಗಳಿಂದಲೂ ಇದು ಸ್ಪಷ್ಟವಾಗುತ್ತಲಿದೆ. "ಅಹಿಂಸಾ ಪರಮೋಧರ್ಮಃ" ಎಂಬುವದು ಜೈನ ಬೌದ್ಧಾದಿ ಮತಗಳ ಬೀಜಮಂತ್ರವಾಗಿರುತ್ತದೆ. ಅಹಿಂಸೆ ಎಂಬುವದನ್ನು ಧರ್ಮದ ಹತ್ತು ಅಂಗಗಳಲ್ಲಿ ಸೇರಿಸಿರುತ್ತಾರೆ.

ಈ ಅಹಿಂಸೆಯ ವ್ಯಾಖ್ಯಾನವು ಇಷ್ಟರಮಟ್ಟಿಗೇನೇ ಇರಬೇಕೆಂಬುವದು ಇಲ್ಲಿಯ ವರೆಗೂ ನಿಶ್ಚಯವಾಗಿರುವದಿಲ್ಲ. ತಮತಮಗೆ ತಿಳಿದಂತೆ ಅರ್ಥವನ್ನು ಮಾಡುತ್ತಾರೆ. "ಮಾಹಿಂಸ್ಯಾತ್ ಸರ್ವಭೂತಾನಿ" ಅಂದರೆ ಯಾವ ಪ್ರಾಣಿಗಳನ್ನೂ ಕೊಲ್ಲಬೇಡ ಎಂದು ವೇದವಿಧಿಯಿದ್ದರೂ ಅದಕ್ಕೊಂದು ವಿಶೇಷ ವಾಕ್ಯವನ್ನು ಜೋಡಿಸಿ ಯಜ್ಞದಲ್ಲಿ ಪಶುಗಳನ್ನು ಕೊಂದರೆ ದೋಷವಿಲ್ಲ, ಯಜ್ಞೇತರ ಕಾರ್ಯಗಳಲ್ಲಿ ಪಶುಗಳನ್ನು ಕೊಂದರೆ ಮಾತ್ರ ದೋಷವೆಂದು ತಮಗನುಕೂಲವಾದ ವಾಕ್ಯವನ್ನು ಜೋಡಿಸಿದರು. ರಾಜಕಾರಣಕ್ಕೂ ಅಹಿಂಸೆಗೂ ತಳಕುಹಾಕುವವರನ್ನು ನಾವು ನೋಡುತ್ತಲಿದ್ದೇವೆ. ವೇದಗಳಲ್ಲಿ ಹಿಂಸೆ ಎಂಬುವದು ಇರುವದೇ ಇಲ್ಲ. ಕೆಲವರು ಮಾಂಸವನ್ನು ತಿನ್ನುವ ಆಸೆಯಿಂದ ಯಜ್ಞಗಳಲ್ಲಿ ಪಶುಗಳನ್ನು ವಧಿಸಬಹುದೆಂದು ವೇದಪ್ರಮಾಣ ಕೊಡುತ್ತಾರೆ. ಇದು ವಿಪರೀತವಾದ ಅರ್ಥವಲ್ಲದೆ ಪ್ರಾಮಾಣಿಕವಾದುದಲ್ಲವೆಂದು ಇತ್ತೀಚೆಗೆ ವೇದ ಮಂತ್ರಗಳಿಗೆ ವ್ಯಾಖ್ಯಾನವನ್ನು ಬರೆದ ಸ್ವಾಮಿ ದಯಾನಂದ ಸರಸ್ವತಿಯವರು ಬರೆದಿರುತ್ತಾರೆ. ಕರ್ಮಕಾಂಡವೆಂಬ ಭಾಗವು ವೇದದಲ್ಲಿರುವದರಿಂದ ಯಜ್ಞದಲ್ಲಿ ಪಶುಗಳನ್ನು ಕೊಂದರೆ ದೋಷವಿಲ್ಲ. ಇಷ್ಟೇ ಅಲ್ಲ, ಸ್ವರ್ಗಾದಿ ಫಲಗಳೂ ಕೂಡ ಸಿಗುತ್ತವೆಂದು ಅನೇಕರು ವ್ಯಾಖ್ಯಾನಗಳನ್ನು ಬರೆದಿರುತ್ತಾರೆ. ಹೀಗಾಗಿ ಬಹುದಿನ ಗಳಿಂದ ಯಜ್ಞಯಾಗಾದಿಗಳಲ್ಲಿ ಮೇಕೆಗಳನ್ನು ವಧಿಸುತ್ತ ಬಂದಿರುವ ರೂಢಿಯು ನಮ್ಮ ದೇಶದ ಕೆಲವು ವೈದಿಕ ಪಂಗಡಗಳಲ್ಲಿ ಮಾತ್ರ ಇಂದಿಗೂ ಅದು ಆಚರಣೆಯಲ್ಲಿದೆ. ಎಷ್ಟೋ ವೈದಿಕ ಸಂಪ್ರದಾಯದ ಪಂಗಡಗಳು ವಿರೋಧವನ್ನು ಮಾಡುತ್ತಾ ಬಂದಿರು ತ್ತವೆ. ಸ್ಮೃತಿಗಳಲ್ಲಿ ಮಾಂಸ ಭಕ್ಷಣೆ ಸಮರ್ಥಿಸಿದ ಬಗ್ಗೆ ಬೇಕಾದಷ್ಟು ಪ್ರಮಾಣಗಳು ಸಿಕ್ಕುತ್ತವೆ. ಉತ್ತರರಾಮ ಚರಿತ್ರೆಯಲ್ಲಿ ವಸಿಷ್ಠಮಹರ್ಷಿಗಳು ಬಂದಾಗ್ಗೆ "ವತ್ಸತರೀ ಮಡಮಡಾಯಿತ" ಆಕಳ ಕರುವನ್ನು ಅವರಿಗೆ ಆಹುತಿಯಾಗಿ ಕೊಟ್ಟು ಊಟಕ್ಕೆ ಮಾಡಿದ್ದರೆಂದು ಬರೆದಿರುತ್ತಾರೆ. ವಸಿಷ್ಠರಂತಹ ಮಹರ್ಷಿಗಳೂ ಕೂಡ ಗೋಮಾಂಸ ತಿನ್ನುತ್ತಿದ್ದರೆಂಬುವದು ಲಜ್ಜಾಸ್ಪದವಾದ ಸಂಗತಿಯಾಗಿದೆ. ಗೋತ್ರಾಧಿಪತಿಗಳಾದವರು ಮಾಂಸಭಕ್ಷಣೆಯನ್ನು ಮಾಡಿದ ಮೇಲೆ ಅವರ ಗೋತ್ರಗಳನ್ನು ಹೇಳತಕ್ಕವರು ಸಹಜವಾಗಿ ಮಾಂಸಭಕ್ಷಣ ಮಾಡುತ್ತ ಬಂದರು. ಉಚ್ಚವರ್ಣದವರೆಂದು ಹೇಳಿ ಕೊಳ್ಳುವ ಪಂಚಗೌಡ ಪಂಚದ್ರಾವಿಡರಲ್ಲಿ ಪಂಚಗೌಡರೆಲ್ಲ ಮಾಂಸಭಕ್ಷಕರೇ ಆಗಿರು

ತ್ತಾರೆ. ಉತ್ತರ ಹಿಂದೂಸ್ಥಾನದಲ್ಲಿ ಮೈಥಿಲಿ, ಪಂಜಾಬಿ, ಬಂಗಾಲಿ ಮೊದಲಾದ ಬ್ರಾಹ್ಮಣರೆಲ್ಲರೂ ಮಾಂಸಭಕ್ಷಕರಾಗಿರುತ್ತಾರೆ. ದಕ್ಷಿಣ ದೇಶವು ಮಾತ್ರ ಅದರಿಂದ ಕೊಂಚವುಟ್ಟಿಗಾದರೂ ದೂರವಿದೆಯೆಂದು ಹೇಳಬಹುದು. ಕಾಶಿಯಲ್ಲಿ ನಾನು ಅಧ್ಯಯನ ಮಾಡುವಾಗ ನಮಗೆ ಪಾಠ ಹೇಳುತ್ತಿದ್ದ ಅನೇಕ ಜನ ಬ್ರಾಹ್ಮಣ ಪಂಡಿತರ ಕೂಡ ಚರ್ಚಿಸಿದಾಗ ಅವರೆಲ್ಲರೂ ಮಾಂಸಭಕ್ಷಣವು ಸಶಾಸ್ತ್ರೀಯವಾದುದೆಂದು ವಾದಿಸಿದ್ದುದು ನನ್ನ ನೆನಪಿನಲ್ಲಿರುತ್ತದೆ. ಇದು ಹಿಂಸಾಚಾರವೆಂದೂ, ಕ್ರೂರಕೃತ್ಯ ವೆಂದೂ ಅವರು ತಿಳಿಯುವದಿಲ್ಲ. ಸ್ಮೃತಿಗಳೇ ಇದಕ್ಕೆ ಅವರಿಗೆ ಆಧಾರಗ್ರಂಥಗಳಾಗಿವೆ.

ಜಗತ್ಪ್ರಸಿದ್ಧ ವಿದ್ವಾಂಸರೂ, ಇಂಡಿಯನ್ ಫಿಲಾಸಫಿ ಮೊದಲಾದ ಗ್ರಂಥಗಳನ್ನು ಬರೆದವರೂ ಆದ ಡಾ॥ ಸುರೇಂದ್ರನಾಥ ದಾಸಗುಪ್ತ, ಎಂ.ಎ., ಪಿಹೆಚ್.ಡಿ. (ಕ್ಯಾಂಟಬ್), ಪಿಹೆಚ್.ಡಿ., (ಕಲ್ಕತ್ತಾ), ಡಾಕ್ಟರ್ ಆಫ್ ಲಿಟರೇಚರ್ (ರೋಮ್), ಪ್ರಿನ್ಸಿಪಾಲ್, ಸಂಸ್ಕೃತ ಕಾಲೇಜ್, ಕಲ್ಕತ್ತ, ಇವರು ೧೯೪೧ ನೆಯ ಇಸವಿ ಫೆಬ್ರವರಿ ತಿಂಗಳಲ್ಲಿ ಯಾದಗಿರಿಯ ಶ್ರೀ ಶಂಕರ ಸಂಸ್ಕೃತ ಕಾಲೇಜನ್ನು ಪರೀಕ್ಷೆಯ ಕೇಂದ್ರವನ್ನಾಗಿ ಮಾಡುವದರ ಸಲುವಾಗಿ ಆಗಮಿಸಿದ್ದರು. ವೀರಶೈವ ಧಾರ್ಮಿಕ ವಿಷಯದ ಚರ್ಚೆ ಅವರ ಕೂಡ ನಡೆಯಿತು. ಅಭಕ್ಷ್ಯ ಭಕ್ಷಣ, ಅಪೇಯ ಪಾನಾದಿಗಳು ವೀರಶೈವರಲ್ಲಿ ಇಲ್ಲ. ಅತ್ಯಂತ ಕಠೋರ ರೀತಿಯಿಂದ ವೀರಶೈವ ತತ್ವವು ನಿಷೇಧಿಸುತ್ತಲಿದೆ ಎಂದು ನಾನು ಹೇಳಿದೆನು. ಅವರು ಮಾಂಸಭಕ್ಷಣವನ್ನು ಸಮರ್ಥಿಸುತ್ತ ನನಗೆ ಕೆಲವು ಪ್ರಶ್ನೆ ಗಳನ್ನು ಮಾಡುತ್ತ ಇದ್ದ ಸಮಯದಲ್ಲಿ ಒಂದು ಚಮತ್ಕಾರ ವಿಷಯವು ನಡೆಯಿತು. ಸಮೀಪದಲ್ಲಿಯೇ ಮೇಜಿನ ಮೇಲೆ ಒಂದು ಹಣ್ಣಿನ ಬುಟ್ಟಿ ಇದ್ದಿತು. ಅದರಲ್ಲಿ ಒಂದು ಹಣ್ಣನ್ನು ತೆಗೆದುಕೊಳ್ಳಲಿಕ್ಕೆ ಕೈ ಇಟ್ಟೆನು. ಆ ಬುಟ್ಟಿಯಲ್ಲಿ ಕೋಳಿಯ ತತ್ತಿ ಗಳಿರುವದು ನನಗೆ ಗೊತ್ತಿರಲಿಲ್ಲ. ಒಂದು ಮೊಟ್ಟೆಯನ್ನು ಮುಟ್ಟಿದ ಕೂಡಲೇ ಅವಸರ ದಿಂದ ನನ್ನ ಕೈಯನ್ನು ಮೇಲಕ್ಕೆ ತೆಗೆದುಕೊಂಡೆನು. ಆಗ ಶ್ರೀಮಾನ್ ದಾಸಗುಪ್ತ ರವರು, "ಕಿಮಭವತ್ ಶಾಸ್ತ್ರಿ ಮಹೋದಯಾಃ" ಶಾಸ್ತ್ರಿಗಳೇ ಏನಾಯಿತು ಎಂದು ಕೇಳಿದರು. ಮೊಟ್ಟೆಯನ್ನು ಮುಟ್ಟಿದೆನೆಂದು ಉತ್ತರ ಕೊಟ್ಟೆನು. ಆಗ ಅವರು ಕೂಡಲೇ ತಾವೇ ನೀರನ್ನು ತಂದು ಮೊದಲು ಕೈತೊಳೆದುಕೊಳ್ಳಿರಿ ಎಂದು ಆಗ್ರಹ ಮಾಡಿದರು. ನೀವು ವೀರಶೈವರು, ಮಾಂಸಭಕ್ಷಕರಲ್ಲ, ಆದ್ದರಿಂದ ಕೈತೊಳೆದುಕೊಳ್ಳಿರೆಂದು ಹೇಳಿದೆ ನೆಂದು ಹೇಳಿ ಕುಳಿತುಕೊಂಡ ಮೇಲೆ ಪುನಃ ಪ್ರಶ್ನೆಗಳನ್ನು ಮಾಡಲು ಉಪಕ್ರಮಿಸಿದರು.

ಪ್ರಶ್ನೆ—"ಫಲಗಳಲ್ಲಿ ದ್ವಿವಿಧ; ಪಕ್ಷಿಫಲ, ವೃಕ್ಷಫಲ. ಈ ಎರಡೂ ವಿಧವಾದ ಫಲಗಳನ್ನು ತಿಂದರೆ ದೋಷವಿಲ್ಲ."

ಆಯುರ್ವೇದ ಶಾಸ್ತ್ರದಲ್ಲಿ ತತ್ತಿಗಳು ಪಕ್ಷಿಯ ಫಲವೆಂದು ಹೇಳಿಲ್ಲವೇ? ಪಕ್ಷಿಯ ಫಲವು ಒಂದೆರಡು ದಿನಗಳಲ್ಲಿ ಮರಿಗಳನ್ನು ಮಾಡಿಸುವ ಸ್ಥಿತಿಯಲ್ಲಿರುತ್ತದೆ. ನಿಷೇಧವೇ ಹೊರತು ಗ್ರಾಹ್ಯವಲ್ಲವೆಂದು ಹೇಳಿದೆನು. ಈ ಮಾತಿಗೆ ಅವರು ಒಪ್ಪಲಿಲ್ಲ. ಅವರ ವಾದದ ಸರಣಿಯೇ ಬೇರೆಯಾಗಿದ್ದಿತು. ಅವರು ಹಿಂಸಾಹಿಂಸೆಗಳ ವ್ಯಾಖ್ಯಾನವನ್ನು ಅನೇಕ ತರಹದಿಂದ ಮಾಡಿದರು. ಈಗಿನ ಕಾಲದ ಜಗತ್ತಿನ ಅಹಿಂಸಾವಾದಿಗಳಲ್ಲಿ ಅಗ್ರೇಸರರಾಗಿದ್ದ ಮಹಾತ್ಮಾ ಗಾಂಧಿಯವರು ಕೂಡ ಅಹಿಂಸೆಯ ವ್ಯಾಖ್ಯಾನವನ್ನು ಒಂದೊಂದು ಸಮಯದಲ್ಲಿ ಒಂದೊಂದು ತರಹದಿಂದ ಮಾಡುವದನ್ನು ಕಳೆದ ೩೦

ವರ್ಷಗಳಿಂದ ಓದುತ್ತಲಿದ್ದುದು ನನಗೆ ನೆನಪಿನಲ್ಲಿರುತ್ತದೆ. ಕೆಲವು ವರ್ಷಗಳ ಕೆಳಗೆ ಮಹಾತ್ಮಾಜಿಯವರು ಸಬರಮತಿ ಆಶ್ರಮದಲ್ಲಿದ್ದಾಗ ಒಂದು ಆಕಳ ಕರು ರೋಗದಿಂದ ನರಳುತ್ತಿರುವಾಗ ಮಹಾತ್ಮಾಜಿಯವರು ವಿಷಪ್ರಯೋಗದ ಇಂಜಕ್ಷನ್ ಮಾಡಿಸಿದರು. ಕೂಡಲೇ ಅದು ಸತ್ತುಹೋಯಿತು. ಆ ಕಾಲದಲ್ಲಿ ಹಿಂದೂಸ್ಥಾನದ ತುಂಬೆಲ್ಲ ಈ ವಿಷಯದ ಕೋಲಾಹಲವೆದ್ದಿತು. ಅನೇಕರು ಗಾಂಧೀಜಿಯವರ ಮೇಲೆ ಟೀಕಾಸ್ತ್ರಗಳ ಮಳೆಗರೆದರು. ಅಹಮದಾಬಾದಿನ ಜೈನ ಸಂಘದವರು ಇವರಿಗಿರುವ 'ಮಹಾತ್ಮಾ' ಎಂಬ ಪದವಿಯನ್ನು ಕಿತ್ತುಕೊಳ್ಳಬೇಕೆಂದು ನಿರ್ಣಯ ಮಾಡಿದ್ದರು. ಆಗ ಮಹಾತ್ಮಾಜಿಯವರ ಬಳಿ ಹೋಗಿ ಹೀಗೇಕೆ ಮಾಡಿದಿರೆಂದು ಕೇಳಲು, ಗಾಂಧೀಜಿಯವರು "ನಾನು ಮಾಡಿದ್ದೇ ನಿಜವಾದ ಅಹಿಂಸೆಯ ವ್ಯಾಖ್ಯಾನ" ಎಂದು ಅಂದರು. ಯಾಕಂದರೆ ಇನ್ನೊಂದು ತಾಸಿನಲ್ಲಿ ಅದು ಸಾಯತಕ್ಕ ಪ್ರಾಣಿಯು. ಕಷ್ಟಪಡುವದನ್ನು ನೋಡಲಾಗದೆ ಹಾಗೆ ಮಾಡಿದೆನೆಂದು ಹೇಳಿದರು. ಪುನಃ ಪತ್ರಿಕೆಗಳಲ್ಲಿ ಗಾಂಧೀಜಿಯವರ ಮೇಲೆ ಟೀಕೆಗಳು ಪ್ರಾರಂಭವಾದವು. ಅಂತೂ ಅದೊಂದು ಬಹಳ ಗದ್ದಲವೇ ಆಯಿತು. ಮಹಾತ್ಮಾಜಿಯವರು ತಮ್ಮ ವ್ಯಾಖ್ಯಾನವೇ ಸರಿ ಎಂದು ಸಮರ್ಥಿಸಿದರು. ಮತ್ತು ಪೋಲೆಂಡ್ ದೇಶವು ಎರಡನೇ ಮಹಾಯುದ್ಧದಲ್ಲಿ ಸೇರಿದಾಗ ಮಹಾತ್ಮಾಜಿಯವರು, ಇದು ಆತ್ಮರಕ್ಷಣೆಯ ಅಹಿಂಸೆಯೆಂದು ಹೇಳಿದರು. ಈ ವಾದಸರಣಿಯು ನಮ್ಮ ದೇಶದಲ್ಲಿ ಅನೇಕರಿಗೆ ಸರಿಹೋಗುವುದಿಲ್ಲವಾದರೂ ಅವರು ತಮ್ಮ ವಾದದ ಪ್ರಕಾರ ಇರುವದೇ ಅಹಿಂಸೆಯೆಂದು ಹೇಳುತ್ತಿದ್ದರು. ಇಲ್ಲಿ ಮುಖ್ಯ ಉದ್ದೇಶವೇನೆಂದರೆ ಅಹಿಂಸಾ ತತ್ವದಲ್ಲಿ ಹೀಗೆಯೇ ಇರಬೇಕೆಂಬುವ ಬಗ್ಗೆ ನಿರ್ದಿಷ್ಟವಾದ ಮಾರ್ಗವಿಲ್ಲದೆ ತಮ್ಮ ತಮ್ಮ ಬುದ್ಧಿಗನುಸರಿಸಿ ಸರ್ವರೂ ಅಹಿಂಸೆಯ ಅರ್ಥವನ್ನು ಮಾಡುತ್ತಾರೆ.

ರಾಜಕಾರಣದಲ್ಲಿ ಅಹಿಂಸೆಯಿಂದ ಜಯವಿಲ್ಲವೆಂದು ಅನೇಕರ ಮತವಾಗಿದೆ. ಲೆನಿನ್ ಮೊದಲಾದವರು ಹಿಂಸೆಯಿಂದಲೇ ಜಯಶಾಲಿಗಳಾಗಿರುತ್ತಾರೆ. ಜರ್ಮನಿಯ ಸಂಘಟಕರಾದ ಹಿಟ್ಲರನು ಹಿಂಸೆಯಿಂದಲೇ ಜಯವೆಂದು ಅನೇಕ ಸಾರಿ ಉಪನ್ಯಾಸ ಮಾಡಿರುತ್ತಾನೆ. ಇದು ರಾಜಕೀಯ ವಿಷಯದ ಮಾತಾಗಿರುತ್ತದೆ. ಇನ್ನು ಧಾರ್ಮಿಕ ವಿಷಯದಲ್ಲಿ ನಮ್ಮ ದೇಶದೊಳಗೆ ಯಜ್ಞ ಯಾಗಾದಿಗಳಲ್ಲಿ ಹಿಂಸೆಯು ಪ್ರಬಲವಾದಾಗ ಬುದ್ಧ, ಮಹಾವೀರರಂಥವರು ಪ್ರತಿಭಟಿಸಿದರು.

ಪ್ರತಿ ನಿತ್ಯ ಒಂದು ಊರಲ್ಲಿ ನೂರಾರು ಪ್ರಾಣಿ ವಧೆಯಾಗುತ್ತಿದ್ದರೂ ಅತ್ತಕಡೆಗೆ ಯಾರ ಲಕ್ಷ್ಯವೂ ಇರುವದಿಲ್ಲ. ಶಾಸ್ತ್ರದ ಬೆಂಬಲ ಪಡೆದು ದೇವರ ಹೆಸರಿನಿಂದ ಹಿಂಸೆಯನ್ನು ಮಾಡುವದು ಪ್ರಬಲ ಅನ್ಯಾಯವಾದುದು. ಈ ತರಹದ ಅತ್ಯಾಚಾರವು ಹೆಚ್ಚಾದಾಗ ಬಸವಣ್ಣನವರ ಅವತಾರವಾಯಿತು. ಶ್ರೀ ಬಸವಣ್ಣನವರು ಧರ್ಮದ ನೆವದಿಂದ ಆಗತಕ್ಕ ಪ್ರಾಣಿವಧೆಯನ್ನು ಸಹಿಸಲಿಲ್ಲ. ಅವರ ಕೋಮಲವಾದ ಮನಸ್ಸು ಕರಗಿ—

"ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು ಎಲೆ ಹೋತೇ ಅಳು ಕಂಡಾ, ವೇದವನೋದಿದವರ ಮುಂದೆ ಅಳು ಕಂಡಾ, ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡಾ, ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲ ಸಂಗಮದೇವ."

ವೇದದ ಪ್ರಮಾಣವನ್ನು ಕೊಟ್ಟು ಧರ್ಮದ ಹೆಸರಿನಿಂದ ಮಾಡತಕ್ಕ ಹಿಂಸೆಯನ್ನು ಅವರು ಈ ರೀತಿ ಹಳಿದಿದ್ದಾರೆ—

"ಆದಿಪುರಾಣ ಅಸುರರಿಗೆ ಮಾರಿ, ವೇದಪುರಾಣ ಹೋತಿಂಗೆ ಮಾರಿ, ರಾಮಪುರಾಣ ರಕ್ಕಸರಿಗೆ ಮಾರಿ, ಭಾರತಪುರಾಣ ಗೋತ್ರಕ್ಕೆ ಮಾರಿ, ಇವೆಲ್ಲ ಪುರಾಣ ಕರ್ಮಕ್ಕೆ ಮೊದಲು, ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲಾ ಕೂಡಲಸಂಗಮದೇವಾ."

ಶ್ರೀ ಬಸವಣ್ಣನವರು ತಮ್ಮ ಅನೇಕ ವಚನಗಳಲ್ಲಿ ವೇದದ ಪ್ರಮಾಣಗಳನ್ನು ಕೊಟ್ಟು ತಮ್ಮ ವಿಷಯಸಮರ್ಥನೆ ಮಾಡಿರುತ್ತಾರೆ. ಒಂದೊಂದು ಪ್ರಸಂಗದಲ್ಲಿ 'ವೇದದ ಮೂಗ ಕೊಯ್ಯುವೆ' ಎಂದಿರುವದನ್ನು ನೋಡಿದರೆ ಹಿಂಸಾ ಭಾಗದ ವೇದವು ಅವರಿಗೆ ಸ್ವಲ್ಪವೂ ಸಮ್ಮತಿ ಇಲ್ಲವೆಂದು ತೋರುತ್ತದೆ. ಈ ವಿಷಯವು 'ವೇದವೂ ಬಸವಣ್ಣನವರೂ' ಎಂಬುವ ಪ್ರಕರಣದಲ್ಲಿ ವಿಶೇಷವಾಗಿ ಚರ್ಚಿಸಲ್ಪಟ್ಟಿರುವ ಕಾರಣ ಇಲ್ಲಿ ಹೆಚ್ಚು ಹೇಳಲಾಗುವುದಿಲ್ಲ. 'ದಯವೇ ಧರ್ಮದ ಮೂಲ' ಎಂದು ಅವರು ಹೇಳುವದರಿಂದ ಅವರು ಧಾರ್ಮಿಕ ವಿಷಯದಲ್ಲಿ ಯಾವ ತರಹದ ಹಿಂಸೆಯನ್ನೂ ಒಪ್ಪುವದಿಲ್ಲ. ಬಸವಣ್ಣನವರ ಅನುಯಾಯಿಗಳಾದ ಶರಣರೆಲ್ಲರೂ ಹಿಂಸೆಯನ್ನು ಅನೇಕ ತರಹದಿಂದ ದೂಷಿಸಿರುತ್ತಾರೆ.

**ಶ್ರೀ ಅಕ್ಕಮಹಾದೇವಿಯ ವಚನ—ಪುಟ ೧೫**

"ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಯ ಕೊಂದು ನಲಿನಲಿದಾಡುವ, ತನ್ನ ಮನೆಯಲೊಂದು ಶಿಶು ಸತ್ತಡೆ ಅದಕ್ಕೆ ಮರುಗುವಂತೆ ಅವನೇಕೆ ಮರುಗನು? ಜಾಲಗಾರನ ದುಃಖ ಜಗಕ್ಕೆಲ್ಲ ನಗೆಗೆಡೆ, ಇದುಕಾರಣ ಚನ್ನಮಲ್ಲಿಕಾರ್ಜುನಯ್ಯನ ಭಕ್ತನಾಗಿರ್ದು ಜೀವಹಿಂಸೆಯ ಮಾಡುವ ಮಾದಿಗರನೇನೆಂಬೆನಯ್ಯ."

ಅಕ್ಕನವರು ಮಾರ್ಮಿಕವಾಗಿ ಹೇಳಿರುವ ಮೇಲಿನ ವಚನವು ಎಂತಹ ಅಜ್ಞಾನಿಯನ್ನೂ ಕೂಡ ಮಾರ್ಗಕ್ಕೆ ಹಚ್ಚುವಂಥಾದ್ದಾಗಿರುತ್ತದೆ.

"ದಯವಿಲ್ಲದ ಧರ್ಮವದಾವುದಯ್ಯಾ, ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ, ದಯವೇ ಧರ್ಮದ ಮೂಲವಯ್ಯ ಕೂಡಲಸಂಗಮ ದೇವ."

ಉತ್ತರ ಹಿಂದೂಸ್ಥಾನದಲ್ಲಿ ಸುಪ್ರಸಿದ್ಧ ಭಗವದ್ಭಕ್ತರಾದ ತುಲಸೀದಾಸರೂ ಕೂಡ ಶ್ರೀ ಬಸವಣ್ಣನವರ ಮಾತನ್ನು ಎತ್ತಿಹಿಡಿದು—

"ದಯಾ ಧರ್ಮಕೋ ಮೂಲ ಹೈ, ಪಾಪ ಮೂಲ ಹೈ ಅಭಿಮಾನ
ತುಲಸೀ ದಯಾ ಕಭೀ ನ ಛಾಡಿಯೆ ಜಬಲಗ್ ಘಟಮೇ ಪ್ರಾಣ"

ಅಂದರೆ, ದಯವೇ ಧರ್ಮದ ಮೂಲ, ಅಭಿಮಾನವು ಪಾಪಕ್ಕೆ ಮೂಲವಾಗಿರುವುದು: ಎಲೌ ತುಲಸಿಯೇ, ಶರೀರದಲ್ಲಿ ಪ್ರಾಣ ಇರುವವರೆಗೆ ದಯೆಯನ್ನು ಬಿಡಬೇಡವೆಂದು ತುಲಸೀದಾಸರು ತಮ್ಮ ಅಂತರಾತ್ಮನಿಗೆ ಹೇಳಿಕೊಂಡಿರುತ್ತಾರೆ.

ಶ್ರೀ ಬಸವಣ್ಣನವರು ಮತ್ತೊಂದು ವಚನದಲ್ಲಿ—

"ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ, ಕುಲವೇನೋ ಅವಂದಿರ ಕುಲವೇನೋ, ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು"

ಕೊಲ್ಲುವವನೇ ಮಾದಿಗನೆಂದು ಕಠೋರವಾಗಿ ನುಡಿಯಬೇಕಾದರೆ ಅವರ ಹೃದಯವು ಎಂತಹ ದಯಾಭರಿತವಾಗಿರಬೇಕೆಂಬುವದನ್ನು ಓದುಗರೇ ನಿರ್ಣಯಿಸಬೇಕು.

"ಶಾಸ್ತ್ರ ಘನವೆಂಬೆನೆ ಕರ್ಮವ ಭಜಿಸುತ್ತಿದೆ, ವೇದ ಘನವೆಂಬೆನೆ ಪ್ರಾಣಿವಧೆಯ ಹೇಳುತ್ತಿದೆ, ಸ್ಮೃತಿ ಘನವೆಂಬೆನೆ ಮುಂದಿಟ್ಟರಸುತ್ತಿದೆ, ಅಲ್ಲಿಲ್ಲಿಯೂ ನೀವಿಲ್ಲದ ಕಾರಣ ತ್ರಿವಿಧ ದಾಸೋಹದಲ್ಲಲ್ಲದೆ ಕಾಣಬಾರದು ಕೂಡಲಸಂಗಮದೇವಾ."

ಬಸವಾದಿ ಶರಣರು ಧರ್ಮವೀರರಾದುದರಿಂದ ಅವರ ನಡೆನುಡಿಗಳು ಬಹಳ ಶುದ್ಧವಾದವುಗಳೂ, ಸಾತ್ವಿಕ ಗುಣದಿಂದ ಕೂಡಿದವುಗಳೂ ಆಗಿರುತ್ತವೆ. ಆದ್ದರಿಂದ ಅವರು ಅಹಿಂಸಾ ತತ್ವದ ಕೊನೆಯ ಮಟ್ಟದಲ್ಲಿದ್ದರು.

ಶ್ರೀ ದಸರಯ್ಯನವರು—

"ಸರ್ವ ಜೀವ ನಿನ ಹಾಗೆ ಎಂಬೆನೆ? ಅದು ಭಿನ್ನಭಾವ ತ್ರಿಗುಣಾತ್ಮಕರುಂಟು, ಅವರು ನಿನಗನ್ಯರೆಂಬೆನೆ? ಆ ತ್ರಿಗುಣಾತ್ಮಕರು ನಿನ್ನ ತಿಲಾಂಶ, ಇಂತೀ ಸರ್ವಭೂತಕ್ಕೆ ನಿನ್ನ ದಯ ಎನಗಿದೇಕೆ? ಗೆಲ್ಲಸೋಲವೆಂಬ ಖುಲ್ಲತನ ಎಲ್ಲ ಜೀವಕ್ಕೂ ಸರಿ, ಅರುಣೋದಯದಂತೆ ಎನ್ನ ಚಿತ್ತದಲ್ಲಿ ಸರ್ವ ಜೀವಕ್ಕೆಲ್ಲಕ್ಕೂ ದಯವ ಮಾಡು ಚನ್ನದಸರೇಶ್ವರಲಿಂಗ"

ಅಂದರೆ, ಸಮಸ್ತ ಪ್ರಾಣಿಗಳೂ ನಿನ್ನ ಸೂತ್ರದಿಂದ ಚೇಷ್ಟಿಸುವ ಬೊಂಬೆಗಳೆಂಬೆನೆ? ಹಾಗೆಂಬುವದು ಖಂಡಿತ ಭಾವ. ಆ ಪ್ರಾಣಿಗಳೆಲ್ಲವನ್ನೂ ಉತ್ಪತ್ತಿ ಸ್ಥಿತಿ ಲಯಗಳಿಂದ ಆಡಿಸುವ ಗುಣತ್ರಯಸ್ವರೂಪವಾದ ಬ್ರಹ್ಮ ವಿಷ್ಣು ರುದ್ರರೆಂಬ ತ್ರಿದೇವತೆಗಳುಂಟು. ಆ ತ್ರಿದೇವತೆಗಳು ನಿನಗೆ ಭಿನ್ನವೆಂಬೆನೆ? ಆ ಗುಣತ್ರಯಸ್ವರೂಪರಾದ ಬ್ರಹ್ಮ ವಿಷ್ಣು ರುದ್ರರು ಪರಶಿವನ ಸಮುದ್ರದಲ್ಲಿ ಒಂದು ತುಂತುರು ಹನಿಗಳಾಗಿದ್ದರೂ ಇಂತೀ ಸರ್ವ ಪ್ರಾಣಿಗಳಲ್ಲಿ ನಿನ್ನ ಕೃಪೆಯೊಂದೇ ಸರಿ. ಎನಗೆ ಸರ್ವಜೀವ ದಯಾಪಾರತ್ವವೇಕೆ? ತಾ ಗೆದ್ದು ಅನ್ಯರ ಸೋಲಿಸಬೇಕೆಂಬ ಕೆಡುಕುತನ ಎಲ್ಲ ಪ್ರಾಣಿಗಳಲ್ಲಿ ಒಂದೇ ಸಮವಾಗಿಪ್ಪುದು. ಸೂರ್ಯೋದಯವಾದಲ್ಲಿ ಆ ಕಿರಣ ಉತ್ತಮಾಧಮ ಪ್ರಾಣಿಗಳೆನ್ನದೆ, ಶುಚಿ ಅಶುಚಿ ಎನ್ನದೆ ಹೇಗೆ ಎಲ್ಲ ವಸ್ತುಗಳಲ್ಲಿಯೂ ಬಿಂಬಿಸುವದೋ ಹಾಗೆ ಎನ್ನ ಮನದಲ್ಲಿ ಸಮಸ್ತ ಪ್ರಾಣಿಗಳೂ ತಥ್ಯಮಿಥ್ಯ ರಾಗದ್ವೇಷಂಗಳೊಡನೆ ಕೂಡಿ ಚರಿಸುತ್ತಿದ್ದರೂ, ಎನಗಾಗುಣವಿಲ್ಲದೆ ಆ ಜೀವಜಂತುಗಳೊಳಗೆಲ್ಲ ಕೃಪೆಯ ಮುಂದುಗೊಂಡಿರುವದನೇ ನನಗೆ ದಯಮಾಡು.

ಶ್ರೀ ದಸರಯ್ಯನವರು—

"ಎಲ್ಲವನರಿವಲ್ಲಿ ಕಡೆಯಲ್ಲಿ ಕೊಲ್ಲಬೇಕೆಂಬುವದೊಂದು ಭೇದವುಂಟೆ? ಶಾಸ್ತ್ರವನೆಲ್ಲ ಕಲಿತಲ್ಲಿ ಗೆಲ್ಲ ಸೋಲಕ್ಕೆ ಹೋರಬೇಕೆಂಬುದು

ಅಂದರೆ—ಅಹಿಂಸಾ, ಸತ್ಯ, ಸಿಟ್ಟಿಲ್ಲದಿರುವಿಕೆ; ತ್ಯಾಗ, ಶಾಂತಿ, ಚಾಡಿಯನ್ನು ಹೇಳದಿರುವಿಕೆ; ದಯಾ, ಲೋಭವಿಲ್ಲದಿರುವಿಕೆ; ಮೃದುತ್ವ, ಲಜ್ಜಾ, ಚಂಚಲವಿಲ್ಲದಿರುವಿಕೆ; ತೇಜಸ್ಸು, ಕ್ಷಮಾ, ಧೈರ್ಯ, ದ್ರೋಹ ಮಾಡದಿರುವಿಕೆ; ಅಂತರಂಗ ಬಹಿರಂಗ ಶುದ್ಧಿ, ನಾನು ದೊಡ್ಡವನೆಂಬ ಅಭಿಮಾನ ಇಲ್ಲದಿರುವಿಕೆ—ಇವುಗಳೆಲ್ಲ ದೈವೀಸಂಪತ್ತೆಂದು ಅರ್ಜುನನಿಗೆ ಶ್ರೀ ಕೃಷ್ಣನು ಹೇಳಿರುತ್ತಾನೆ. ಮತ್ತು ಅಹಿಂಸೆ ಎಂಬುವದೊಂದು ಶಾರೀರಕ ತಪಸ್ಸೆಂತಲೂ ಗೀತೆಯಲ್ಲಿಯೂ, ಆಗಮಗಳಲ್ಲಿಯೂ ಹೇಳಿರುತ್ತದೆ.

### ಪಾರಮೇಶ್ವರಾಗಮ—ಪಟಲ ೭

ನ ಮಾಂಸಂ ಭಕ್ಷಯೇಲ್ಲಿಂಗೀ ನಾಪ್ಯಪೇಯಂ ಪಿಬೇತ್ಕ್ವಚಿತ್ ।
ನಾಪ್ಯಭಕ್ಷಂ ಭಕ್ಷಯೇದ್ದೇವಿ ನಾನಾವಶ್ಯನಿಮಿತ್ತಕಂ ॥ ೪೦ ॥
ನೌದಾಸೀನ್ಯಂ ನಚದ್ವೇಷಂ ನ ಹಿಂಸಾಂ ನಾಪಿ ವಂಚನಮ್ ।
ಕುರ್ವೀತ ಲಿಂಗೀ ಯತ್ನೇನ ವಿಮತೇಷ್ವಪ್ಯಲಿಂಗಿಷು ॥ ೪೧ ॥

ಲಿಂಗವಂತನಾದವನು ಮಾಂಸಭಕ್ಷಣ ಮದ್ಯಪಾನಾದಿಗಳನ್ನು ಮಾಡಕೂಡದು. ಯಾವ ಜನಗಳ ಕೂಡ ದ್ವೇಷಾದಿಗಳನ್ನು ಮಾಡಬಾರದು. ಮತ್ತು ಹಿಂಸೆ, ವಂಚನೆ ಮೊದಲಾದವುಗಳನ್ನು ಬಿಡಲು ಪ್ರಯತ್ನಿಸಬೇಕು. ಎರಡನೆಯ ಮತದವರ ಕೂಡ ಲಿಂಗವಂತನಾದವನು ಬಹಳ ಸರಿಯಾದ ಮಾರ್ಗದಲ್ಲಿ ನಡೆದುಕೊಳ್ಳಬೇಕು. ಅವರಿಗೆ ಯಾವ ತರಹದ ಪೀಡೆಯನ್ನೂ ಉಂಟುಮಾಡಬಾರದು. ಈ ಮಾತು ಈಗಿನ ಕಾಲದಲ್ಲಿ ಎಲ್ಲರಿಗೂ ಜಾಗ್ರತೆಯನ್ನುಂಟುಮಾಡುವದಾಗಿರುತ್ತದೆ.

### ಪಾರಮೇಶ್ವರಾಗಮ—ಪಟಲ ೯

ವೀರಶೈವ ಮತಂ ಪ್ರಾಪ್ಯ ಯಃಕುರ್ಯಾತ್ಪ್ರಾಣಿಹಿಂಸನಂ ।
ಕರ್ಮಣಾ ಮನಸಾ ವಾಚಾ ಸೇವತೇ ರೌರವೇಚಿರಂ ॥ ೨೪ ॥
ವೀರಶೈವ ಮತಂ ಪ್ರಾಪ್ಯ ಯಃಕುರ್ಯಾತ್ಪರಪೀಡನಂ ।
ಭೋಗಾರ್ಥಂ ಸಂಗ್ರಹಂ ಮದ್ಯಂ ಮಾಸಂ ಸ್ತ್ರೀಂಚ ಖಲಂಜನಂ ॥ ೨೫ ॥

ವೀರಶೈವ ಮತವನ್ನು ಹೊಂದಿದ ಮೇಲೆ ಪ್ರಾಣಿಗಳ ಹಿಂಸೆಯನ್ನು ಯಾವಾತನು ಮಾಡುತ್ತಾನೆಯೋ ಅವನು ಬಹುಕಾಲದವರೆಗೆ ನರಕವನ್ನು ಹೊಂದುತ್ತಾನೆ. ಮತ್ತು ಪರಪೀಡೆ, ಭೋಗದ ಸಲುವಾಗಿ ಮದ್ಯ ಮಾಂಸಾದಿಗಳನ್ನೂ, ದುಷ್ಟ ಜನಗಳನ್ನೂ ಸಂಗ್ರಹಿಸುತ್ತಾನೆಯೋ ಅವನು ಅನೇಕ ಜನ್ಮಗಳಲ್ಲಿ ಶೂಕರಾದಿ ಜನ್ಮಗಳನ್ನು ತಾಳುವನು.

### ಪಾರಮೇಶ್ವರಾಗಮ—ಪಟಲ ೧೧

ಯಃಕುರ್ಯಾದ್ವೀರಶೈವಸ್ಥಃ ಪೀಡನಂ ಪ್ರಾಣಿನಾಂ ಭುವಿ ।
ಸಜೀವನ್ನೇವ ಚಾಂಡಾಲೋ ಮೃತೇ ನರಕಮಶ್ನುತೇ ॥ ೬೦ ॥

ವೀರಶೈವನಾದವನು ಪ್ರಾಣಿಹಿಂಸೆಯನ್ನು ಮಾಡಿದ್ದಾದರೆ ಅವನು ಜೀವಂತನಾಗಿರುವಾಗಲೇ ಚಂಡಾಲನಾಗುವನಲ್ಲದೆ, ಸತ್ತಮೇಲೆ ನರಕವನ್ನು ಹೊಂದುತ್ತಾನೆ.

ಹೀಗೆಯೇ ವೀರಶೈವ ಧರ್ಮಗ್ರಂಥಗಳಲ್ಲಿ ಅಹಿಂಸೆಯನ್ನು ಬಹಳ ಎತ್ತಿ ಹಿಡಿದು ಹಿಂಸಾಚಾರವನ್ನು ಪ್ರಬಲವಾಗಿ ಖಂಡಿಸಿರುತ್ತಾರೆ.

ಶ್ರೀ ಬಸವಣ್ಣನವರು—

"ಹೊಲೆಯೊಳಗೆ ಹುಟ್ಟಿ ಕುಲವನರಸುವ, ಎಲವೋ ಮಾತಂಗಿಯ ಮಗನೀನು ಸತ್ತುದನೆಳೆವನೆತ್ತಣ ಹೊಲೆಯ? ಹೋತ ತಂದು ನೀವು ಕೊಲುವಿರಿ, ಶಾಸ್ತ್ರವೆಂಬುದು ಹೋತಂಗೆ ಮಾರಿ, ವೇದವೆಂಬುದು ನಿಮಗೆ ತಿಳಿಯದು ನಮ್ಮ ಕೂಡಲಸಂಗಮದೇವನ ಶರಣರು ಕರ್ಮವಿರಹಿತರು ಶರಣ ಸನ್ನಿಹಿತರು ಅನುಪಮ ಚರಿತ್ರರು ಅವರಿಗೆ ತೋರಲು ಪ್ರತಿಯಿಲ್ಲವೋ"

ಹೀಗೆಯೇ ಹೇಳುತ್ತ—

"ಇಟ್ಟಿಯ ಹಣ್ಣ ನರಿ ತಿಂದು ಸೃಷ್ಟಿ ತಿರುಗಿತೆಂಬುವಂತೆ ಮಟ್ಟಿಯ ನಿಟ್ಟ ದ್ವಿಜರ ಮಾತದೇಕೆ? ಹಗಲು ಕಾಣದ ಗೂಗೆ ಇರುಳಾಯಿತೆಂದರೆ ಜಗಕ್ಕೆ ಇರುಳಪ್ಪುದೇ ಮರುಳೇ? ಹೋಮದ ನೆವದಿಂದ ಹೋತನ ಕೊಂದು ತಿಂಬ ಅನಾಮಿಕರೊಡನಾಡಿ ಗೆಲುವುದೇನು? ಕೂಡಲಸಂಗಮ ದೇವಾ"

ಅಂದರೆ, ಇಟ್ಟಿಯ ಹಣ್ಣನ್ನು ನರಿ ತಿಂದು ಸೃಷ್ಟಿ ತಿರುಗಿತೆಂದರೆ ನಂಬಲಿಕ್ಕೆ ಬರುವುದೇ? ಹಗಲು ಕಣ್ಣುಕಾಣದ ಗೂಗೆಯು ರಾತ್ರಿಯಾಯಿತೆಂದು ಆಂದಾಕ್ಷಣ ಜಗತ್ತಿಗೆ ರಾತ್ರಿಯಾಗಬಲ್ಲುದೇ? ಆದ್ದರಿಂದ ಹೋಮದ ನೆವ ಮಾಡಿ ಹೋತನ್ನ ತಿನ್ನತಕ್ಕವರು ಧರ್ಮವೆಂದು ಹೇಳಿದರೆ ಎಂದಿಗೂ ಒಪ್ಪಲಾಗದ ಮಾತಾಗಿರುತ್ತದೆ.

ಶ್ರೀ ಬಸವಣ್ಣನವರು ಈ ಅಹಿಂಸಾ ತತ್ವಾಚರಣೆಯನ್ನು ರೂಢಿಯಲ್ಲಿ ತರಲಿಕ್ಕೆ ಪ್ರಚಂಡ ಸಾಹಸವನ್ನು ಮಾಡಬೇಕಾಯಿತು. ಯಜ್ಞದಲ್ಲಿ ಪಶುಗಳ ವಧೆ ಮಾಡುವದು ರೂಢಿಯಲ್ಲಿ ಬಂದಿದ್ದಿತು. ಪ್ರಬಲತರವಾಗಿ ಬಸವಣ್ಣನವರು ಪ್ರತಿಭಟಿಸಿದ ಕಾರಣ ಅನೇಕ ಸಮಾಜಗಳ ಮೇಲೆ ಇದರ ಪರಿಣಾಮವಾಗಿ ಹಿಂಸಾಚಾರವು ಆ ಕಾಲದಲ್ಲಿ ಬಹುಮಟ್ಟಿಗೆ ಕುಗ್ಗಿತಲ್ಲದೆ ದಕ್ಷಿಣ ಹಿಂದೂಸ್ಥಾನದಲ್ಲಿ ಇದರ ಪರಿಣಾಮವು ಬಹಳವಾಯಿತು.

**ಸೂಕ್ಷ್ಮಾಗಮ—ಪಟಲ ೬**

ಸರ್ವವ್ಯಾಪಕಮೀಶಾನಂ ಪವಿತ್ರಂ ಪುಷ್ಟಿವರ್ಧನಂ।
ಅರ್ಚಯೇದಂಕುರೈಃ ಪುಷ್ಪೈಃ ಮಾನಸೈರುಪಚಾರಕೈಃ॥

ಅಂದರೆ, ಸರ್ವವ್ಯಾಪಕನಾದ ಈಶ್ವರನನ್ನು ಪುಷ್ಪಾಂಕುರಗಳಿಂದಲೂ, ಮಾನಸ ಉಪಚಾರಗಳಿಂದಲೂ ಅರ್ಚಿಸಬೇಕು.

ಅಹಿಂಸಾಚೇಂದ್ರಿಯಜಯಃ ಸರ್ವಭೂತ ದಯಾಪರಾ।
ಕ್ಷಮಾ ಧ್ಯಾನಂ ತಪೋ ಜ್ಞಾನಂ ಸತ್ಯಂ ಚೈವ ತಥಾಪರಮ್॥

ಏಭಿಃ ಪುಷ್ಪೈರಹಿಂಸಾದ್ಯೈಃ ಮಾನಸೈಃ ಶಿವಮರ್ಚಯೇತ್।
ಕರ್ಮಯಜ್ಞಸ್ತಪೋಯಜ್ಞಃ ಜಪಯಜ್ಞಸ್ತಥಾಪರಃ॥ ೩೨॥

ಧ್ಯಾನಯಜ್ಞೋ ಜ್ಞಾನಯಜ್ಞಃ ಪಂಚಯಜ್ಞಾ ಇಮೇ ಸ್ಮೃತಾಃ।
ಏತೇಷಾಮಪಿ ಪಂಚಾನಾಂ ಶ್ರೇಯಸ್ಯಾದುತ್ತರೋತ್ತರಮ್॥ ೩೩॥

ಕರ್ಮಯಜ್ಞೋ ದ್ವಿಧಾಜ್ಞೇಯಃ ಸಕಾಮಾ ಕಾಮಭೇದತಃ ।
ಸಕಾಮಸ್ತು ಫಲಂ ಭುಕ್ತ್ವಾ ಜಾಯತೇ ಭುವಿಪೂರ್ವವತ್ ॥ ೩೪ ॥

ನಿಷ್ಕಾಮೋಪಿ ವರಂ ಜ್ಞಾನಂ ಲಬ್ಧ್ವಾ ಮೋಕ್ಷಮವಾಪ್ನುಯಾತ್ ।
ಹಿಂಸಾದಿ ದೋಷರಹಿತೋ ರಾಗಾದಿ ಗುಣವರ್ಜಿತಃ ॥ ೩೫ ॥

ಅಂದರೆ—ಅಹಿಂಸಾ, ಇಂದ್ರಿಯ ನಿಗ್ರಹ, ಪ್ರಾಣಿಗಳಲ್ಲಿ ದಯೆ, ಕ್ಷಮಾ, ಧ್ಯಾನ, ತಪಸ್ಸು, ಜ್ಞಾನ, ಸತ್ಯವೆಂಬ ಮಾನಸ ಪುಷ್ಪಗಳಿಂದ ಶಿವನನ್ನು ಅರ್ಚಿಸಬೇಕು. ಕ್ರಿಯಾಯಜ್ಞ, ತಪೋಯಜ್ಞ, ಜಪಯಜ್ಞ, ಧ್ಯಾನಯಜ್ಞ, ಜ್ಞಾನಯಜ್ಞಗಳೆಂಬ ಐದು ಯಜ್ಞಗಳುಂಟು. ಇವುಗಳಲ್ಲಿ ಕರ್ಮಯಜ್ಞವು ಮಾತ್ರ ಸಕಾಮ ಅಕಾಮವೆಂದು ಎರಡು ಪ್ರಕಾರವಾಗಿರುವದು. ಸಕಾಮವೆಂದರೆ ಫಲವನ್ನು ಭೋಗಿಸಿ ಪುನಃ ಪೂರ್ವದಂತೆ ಭೂಲೋಕಕ್ಕೆ ಬರುವದು. ಅಕಾಮವೆಂದರೆ ಮೋಕ್ಷವನ್ನು ಕೊಡತಕ್ಕ ಯಜ್ಞ. ಹಿಂಸಾದಿ ದೋಷರಹಿತನಾಗಿಯೂ ರಾಗಾದಿ ಗುಣವರ್ಜಿತನಾಗಿಯೂ ಮಾಡಬೇಕು.

ಶ್ರೀ ಸಕಲೇಶಮಾದರಸರು—

"ಬೆಟ್ಟದ ಮೇಲಣ ಗಿಡಗಳು ಬೆಟ್ಟವ ಮುಟ್ಟದಂತಿಪ್ಪವೇ? ವಿವರಿಸಿ ನೋಡಿದರೆ ಸೃಷ್ಟಿಯೊಳಗಣ ಪ್ರಾಣಿಗಳು ಪರಮನ ಮುಟ್ಟದಿಪ್ಪವೇ? ಕಷ್ಟರು ಬೇಡವೆಂದು ಬಿಟ್ಟೋಡುತಿಪ್ಪ ಪ್ರಾಣಿಗಳನಟ್ಟಿ ಹಿಡಿದು ಕೊಂದರೆ ಪ್ರತಿಷ್ಠಿಸಿದೀಶ್ವರನಿಕ್ಕದಿರ್ಪನೆ ನರಕದಲ್ಲಿ? ಒಡೆಯರಿಲ್ಲೆಂದು ಹಲವು ಪ್ರಾಣಿಗಳ ಹರಿಹರಿದು ಕೊಂದರೆ ಹರನಿಕ್ಕದಿರ್ಪನೇ ಅಘೋರನರಕದಲ್ಲಿ? ಸಕಲ ಪ್ರಾಣಿಗಳ ಮೇಲಾರೈಕೆ ನಮ್ಮ ಸಕಲೇಶ್ವರನಲ್ಲದೆ ಮತ್ತೊಬ್ಬನುಂಟೆ?

ಅಂದರೆ—ಪರ್ವತದಲ್ಲಿ ಹುಟ್ಟಿದ ಮರಗಳು ಪರ್ವತವನ್ನು ಮುಟ್ಟದೆ ಇರುತ್ತವೆಯೋ? ವಿಚಾರಮಾಡಿ ನೋಡಿದರೆ ಸೃಷ್ಟಿಯೊಳಗಿರತಕ್ಕ ಪ್ರಾಣಿಗಳೆಲ್ಲ ಪರಮಾತ್ಮನನ್ನು ಬಿಟ್ಟಿರುತ್ತವೆಯೇ? ಇಲ್ಲ. ಹೀಗೆಯೇ ದುಷ್ಟಜನರು ಬೇಡವೆಂದು ಓಡಿಹೋಗತಕ್ಕ ಪ್ರಾಣಿಗಳನ್ನು ಅಟ್ಟಿ ಹಿಡಿದು ಕೊಂದರೆ ಪ್ರತಿಷ್ಠಿಸಿದ ಈಶ್ವರನು ಅವರಿಗೆ ನರಕದಲ್ಲಿಕ್ಕದೆ ಬಿಡುವನೆ? ಯಜಮಾನರಿಲ್ಲವೆಂದು ಹಲವು ಪ್ರಾಣಿಗಳನ್ನು ಹರಿಹರಿದು ಕೊಂದರೆ ಹರನು ಅಘೋರನರಕದಲ್ಲಿ ಇಡದೆ ಬಿಡುವನೆ? ಎಲ್ಲಾ ಪ್ರಾಣಿಗಳ ಮೇಲಾರೈಕೆ ದೇವರದಲ್ಲದೆ ಬೇರೊಬ್ಬರದುಂಟೆ?

ಶ್ರೀ ಸಕಲೇಶಮಾದರಸರು—

"ಆಶೆಯಿಂದ ಬಿಟ್ಟು ಕಿರಿಯರಿಲ್ಲ, ನಿರಾಶೆಯಿಂದ ಬಿಟ್ಟು ಹಿರಿಯರಿಲ್ಲ, ದಯದಿಂದ ಬಿಟ್ಟು ಧರ್ಮವಿಲ್ಲ, ವಿಚಾರದಿಂದ ಬಿಟ್ಟು ಸಹಾಯಿಗಳಿಲ್ಲ, ಸಚರಾಚರಕ್ಕೆ ಸಕಳೇಶ್ವರದೇವರಿಂದ ಬಿಟ್ಟು ದೈವವಿಲ್ಲ."

ಹೀಗೆಯೇ ವೀರಶೈವ ಮತದ ಅನೇಕ ಧಾರ್ಮಿಕ ಗ್ರಂಥಗಳಲ್ಲಿ ಅಹಿಂಸೆಯ ಬಗ್ಗೆ ಅನೇಕ ಪ್ರಮಾಣಗಳು ಸಿಗುತ್ತವೆ. ವೀರಶೈವನಾದವನು ತ್ರಿಕರಣಪೂರ್ವಕವಾಗಿ ಪ್ರಾಣಿಹಿಂಸೆಯನ್ನು ಮಾಡದೆ ಶುದ್ಧ ಸಾತ್ವಿಕ ಆಹಾರವನ್ನೇ ತೆಗೆದುಕೊಳ್ಳಬೇಕಾಗುತ್ತದೆ. ಧರ್ಮದ ಕಟ್ಟಳೆಯು ಹೀಗೆ ಇರುವುದು. ಬಸವಣ್ಣನವರು ಅತ್ಯಂತ ಪವಿತ್ರ

ವಾದ ಆಚರಣೆಯನ್ನು ತಾವು ಆಚರಿಸಿ, ತಮ್ಮ ಅನುಯಾಯಿಗಳಾದ ಅನೇಕ ಜನ ಶರಣರನ್ನು ತಮ್ಮ ಮಾರ್ಗದಂತೆ ನಡೆದುಕೊಳ್ಳಲು ಹಚ್ಚಿದರು. ಮತ್ತು ಅವರು ಪರಶಿವನ ಅಪ್ಪಣೆಯಿಂದ ಭೂಲೋಕಕ್ಕೆ ಬಂದ ಕಾರಣ ಅವರಿಗೆ ದೈವೀಸಂಪತ್ತಿದ್ದಿತು. ಆದ್ದರಿಂದ ಅವರು ಅತ್ಯಂತ ಪವಿತ್ರವಾದ ಆಚರಣೆಯುಳ್ಳವರಾಗಿದ್ದರು. ಅವರು ತ್ರಿಕರಣಪೂರ್ವಕವಾಗಿ ಅಹಿಂಸಾವ್ರತವನ್ನು ಆಚರಿಸಿದ್ದುದು ಅವರ ಚರಿತ್ರೆಯಿಂದ ತಿಳಿದುಬರುತ್ತದೆ.

> “ ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ ಭಕ್ತರ ಮನೆಯಲ್ಲಿ ತೊತ್ತಾಗಿರ್ಪುದು ಕರಲೇಸಯ್ಯ, ತಾರೌ ಅಗ್ಘವಣಿಯ ನೀಡೌ ಪತ್ರಿಯ ಲಿಂಗಕ್ಕೆ ಬೋನವ ಹಿಡಿಯೋ ಎಂಬರು, ಕೂಡಲಸಂಗನ ಮಹಾಮನೆ ಯಲು ಒಕ್ಕುದನುಣ್ಣೋ ತೊತ್ತೇ ಎಂಬರು”

ಮೇಲಿನ ಬಸವಣ್ಣನವರ ವಚನವನ್ನು ನೋಡಿದರೆ ದಾಸೋಹಂಭಾವದಿಂದ ನಡೆದ ರೆಂಬುವದು ಜನರಿಗೆ ತೋರದಿರದು. ಏಸುಕ್ರಿಸ್ತರು ತನ್ನ ವೈರಿಯು ಒಂದು ಕೆನ್ನೆಗೆ ಹೊಡೆದರೆ ಇನ್ನೊಂದು ಕೆನ್ನೆಯನ್ನು ಕೊಡಬೇಕೆಂದು ಹೇಳಿರುವದನ್ನು ನೋಡಿದರೆ ಬಸವಣ್ಣನವರು ಹೇಳಿದ ಅರ್ಥಗರ್ಭಿತ ವಚನವು ನೆನಪಾಗುತ್ತದೆ.

> “ತನಗೆ ಮುನಿವವರಿಗೆ ತಾನು ಮುನಿಯಲೇಕಯ್ಯ? ತನಗಾದ ರೇನು? ಅವರಿಗಾದಡೇನು? ತನುವಿನ ಕೋಪ ತನ್ನ ಹಿರಿಯತನದ ಕೇಡು, ಮನದ ಕೋಪ ತನ್ನ ಅರುಹಿನ ಕೇಡು, ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ ನೆರೆಮನೆಯ ಸುಡದು ಕೂಡಲಸಂಗಮದೇವಾ”

ಈ ವಚನವು ಮಾನವರಿಗೆ ಮಾರ್ಗದರ್ಶಕವಾದುದಾಗಿರುತ್ತದಲ್ಲದೆ ಅಹಿಂಸಾ ತತ್ವದ ಘೋರವಾದ ತಪಸ್ಸಾಗಿರುತ್ತದೆ.

ಹೀಗೆಯೇ ಬಸವಣ್ಣನವರ ವಚನಗಳನ್ನು ನೋಡುತ್ತ ಹೋದರೆ ಅವರು ಅಹಿಂಸಾ ತತ್ವದ ಮೂರ್ತಿಗಳಾಗಿದ್ದರೆಂಬುವದು ಸ್ಪಷ್ಟವಾಗುತ್ತದೆ.

ಹಾಗಾದರೆ ಹೀಗೆ ಅಹಿಂಸಾಚರಣೆಯನ್ನು ಆಚರಿಸಿದ ವೀರಶೈವನಿಗೆ ಆತ್ಮ ರಕ್ಷಣೆಯ ಉಪಾಯವೇನು? ಎಂದು ಯಾರಾದರೂ ಕೇಳಬಹುದು. ಅಹಿಂಸಾ ತತ್ವದ ವೀರನಾದವನಿಗೆ ಯಾವ ತೊಂದರೆಯೂ ಬರಲಾರದು. ವೀರಶೈವನ ಆತ್ಮ ರಕ್ಷಣೆಗೆ ಪಂಚಾಚಾರಗಳಲ್ಲಿ ಒಂದಾದ ಗಣಾಚಾರವು ಸದಾ ಸಿದ್ಧವಿರುತ್ತದೆ. ಆತ್ಮ ರಕ್ಷಣೆಯನ್ನು ಮಾಡಿಕೊಳ್ಳುವ ಕಾಲಕ್ಕೆ ಮಾತ್ರ ಅನ್ಯರಿಗೆ ಅಪಾಯವಾಗದಂತೆ ನೋಡಿ ಕೊಳ್ಳುವದು ಸೂಕ್ತವಾದುದಾಗಿದೆ.

ವೀರಶೈವನಾದವನಿಗೆ ೨೧ ಪ್ರಕಾರ ದೀಕ್ಷೆಗಳುಂಟು. ಇದರಲ್ಲಿ ಅಹಿಂಸೆಯೂ ಒಂದು ದೀಕ್ಷೆಯಾಗಿದೆ.

ಶ್ರೀ ಬಸವಣ್ಣನವರು—

> “ಆಣವಮಲ, ಮಾಯಾಮಲ, ಕಾರ್ಮಿಕಮಲವೆಂಬ ಮಲ ತ್ರಯಂಗಳ ಕಳೆದು; ಆಜ್ಞಾದೀಕ್ಷೆ, ಉಪಮಾದೀಕ್ಷೆ, ಸ್ವಸ್ತಿಕಾ

ರೋಹಣ, ಕಳಶಾಭಿಷೇಕ, ವಿಭೂತಿಪಟ್ಟ, ಲಿಂಗಾಯುತ, ಲಿಂಗ ಸ್ವಾಯತ ಈ ಏಳನ್ನು ಕಾಯಕ್ಕೆ ಉಪದೇಶ ಮಾಡುವದು; ಏಕಾಗ್ರ ಚಿತ್ತ, ದೃಢವ್ರತ, ಪಂಚೇಂದ್ರಿಯಾರ್ಪಿತ, ಅಹಿಂಸೆ, ಲಿಂಗನಿಷ್ಠೆ, ಮನೋರ್ಲಯ, ಸದ್ಯೋನ್ಮುಕ್ತಿ ಈ ಏಳನು ಮನಕ್ಕುಪದೇಶವಾಡುವದು; ಈ ಕ್ರಮುವನರಿದು ಮಾಡುವದು ಕೂಡಲಚನ್ನಸಂಗಯ್ಯನಲ್ಲಿ ಸಹಜ ದೀಕ್ಷೆಯಯ್ಯ.''

ಮೇಲೆ ಹೇಳಿದ ದೀಕ್ಷೆಗಳಲ್ಲಿ ಅಹಿಂಸೆ ಎಂಬುವದೊಂದು ದೀಕ್ಷೆಯು ವೀರಶೈವನಾದವನಿಗೆ ಇರುತ್ತದಷ್ಟೆ? ಈ ಅಹಿಂಸಾ ದೀಕ್ಷೆಯ ಅರ್ಥವನ್ನು ಶರಣರು ಈ ಕೆಳಗೆ ಬರೆದಂತೆ ಮಾಡಿರುತ್ತಾರೆ.

**ವಚನಶಾಸ್ತ್ರಸಾರ—ಭಾಗ ೩, ಪುಟ ೧೧೧**

"ಅಯ್ಯಾ, ಶ್ರೀ ಗುರುಲಿಂಗಜಂಗಮದ ಕರುಣಾಕಟಾಕ್ಷೆಯಿಂ ದ್ಯುತ್ಪತ್ಯವಾಗಿ ನಿರ್ಮಾಯಕಂಥೆಯ ಧರಿಸಿದ ಶಿವಶರಣಂಗೆ ಅನಂತಲೀಲೆಯಲ್ಲಿ ಬೆಂಬತ್ತಿ ಬಂದ ಮಹಾ ಪಾಪವೇ ಒಂದು ರೂಪಾಗಿ ಮಾಯಾ ಜಡಜೀವ ಶರೀರವ ಧರಿಸಿ, ಪರಿಪರಿಯಿಂದ ನಿಂದೆ ಕುಂದು ಅಪಮೃತ್ಯುಗಳು ಬಂದು ತಟ್ಟಿದಲ್ಲಿ ಅರ್ಪಿತಾವಧಾನ ಸುಖದುಃಖಗಳು ಬಂದು ಸೋಂಕಲೊಡನೆ ಶಿವಶರಣನು ತನ್ನ ಸ್ವಾತ್ಮಜ್ಞಾನದಿಂದರಿದು ನೋಡಿದಲ್ಲಿ ಈ ಮಾಯಾ ಜಡಜೀವಾತ್ಮರಿಗೆ ಸೂತ್ರಧಾರಿ ಶಿವನು ಕಪಟನಾಟಕ ಲೀಲೆಯ ಧರಿಸಿ ಸಕಲ ಜೀವಾತ್ಮರ ಮಧ್ಯದಲ್ಲಿ ಅಣುವಿಗಣುವಾಗಿ ಮಹತ್ತಿಂಗೆ ಮಹತ್ತಾಗಿ ಆ ಜೀವನೆಂಬ ವಿಧಿಗೆ ಸ್ತುತಿ, ನಿಂದೆ, ಪುಣ್ಯ, ಪಾಪ, ಸಂಕಲ್ಪ, ವಿಕಲ್ಪವೆಂಬ ಕುಟಿಲ ವೆವಹಾರವ ಕಲ್ಪಿಸಿ ಆ ಜೀವನಿಂದ ಭಕ್ತಗಣಂಗಳಲ್ಲಿ ಅಷ್ಟಾವರಣದ ನಿಷ್ಠಾಪರತ್ವವ ನೋಡಬೇಕೆಂದು ಅನಂತ ಬಾಧೆಗಳಿಂದ ಬಾಧಿಸಿದಲ್ಲಿ ಶಿವಶರಣಂಗಳು ಆ ಬಾಧೆಗೆ ಅಳುಕದೆ ಚಿಂತಿಸದೆ ಅಷ್ಟಾವರಣ ಭರಿತರಾಗಿ ದೇಹಾಭಿಮಾನದ ಹಸಿವು, ತೃಷೆ, ನಿದ್ರೆ, ಆಲಸ್ಯ, ಸಂಗವೆಂಬ ಕಾಲಕಾಮರ ಪಾಶದಲ್ಲಿ ಬೀಳದೆ ಭವಿಭಕ್ತನೆಂಬುವ ವಿಚಾರವನರಿಯದೆ ದುಷ್ಟರ ಕಂಡರೆ ದೂರದಲ್ಲಿರಬೇಕೆಂಬುವ ಗುರುವಾಕ್ಯವ ತಿಳಿದು ಅವರ ಸಂಭಾಷಣೆ ಸಂಸರ್ಗವ ಮಾಡದೆ ಅವರ ಸ್ತುತಿ ನಿಂದ್ಯಾದಿಗಳನಾಲಿಸದೆ ನಿಃಕಳಂಕ ಪರಬ್ರಹ್ಮ ಪರಶಿವನಲ್ಲಿ ಸದಾ ಸನ್ಮಾರ್ಗಿಯಾಗಿ ಸುಸಂಗಿಗಳಿಂದ ಶ್ರದ್ಧಾತುರ ಪರಿಣಾಮುದಲ್ಲಿ ಬಂದು ತಟ್ಟಿದ ಪರಿಣಾಮ ಪಾದೋದಕ ಪ್ರಸಾದದಲ್ಲಿ ಲೋಲುಪ್ತರಾಗಿ ತಮ್ಮ ನಡೆನುಡಿಗಳ ಸ್ವಾತ್ಮಜ್ಞಾನದಿಂದ ವಿಚಾರಿಸಿ ಪಕ್ವ ಮಾಡುವಂಥವನಿಂದ ನಿಲುಗಡೆಯ ಅಹಿಂಸಾದೀಕ್ಷೆಯಿಂತುಂಟೆಂದು ಶ್ರೀ ಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ."

**ಧರ್ಮಕಲ್ಪದ್ರುಮ—ಪುಟ ೪೬**

ಅಹಿಂಸಾ ಪರಮೋಧರ್ಮಸ್ತಥಾऽಹಿಂಸಾ ಪರೋದಮಃ ।
ಅಹಿಂಸಾ ಪರಮಂ ದಾನಂ ಅಹಿಂಸಾ ಪರಮಂ ತಪಃ ॥
ಅಭಯಂ ಸರ್ವಭೂತೇಭ್ಯೋ ಯೋ ದದಾತಿ ದಯಾಪರಃ ।
ಅಭಯಂ ತಸ್ಯ ಭೂತಾನಿ ದದಾತೀತ್ಯನುಶುಶ್ರುಮ ॥

ಅಂದರೆ, ಅಹಿಂಸೆಯು ಪರಮ ಧರ್ಮ—ಪರಮ ದಮ, ಪರಮ ದಾನ ಮತ್ತು ಪರಮ ತಪಸ್ಸಿನ ಸ್ವರೂಪವಿರುತ್ತದೆ. ಯಾವ ದಯಾಶಾಲಿಯಾದ ಮನುಷ್ಯನು ಎಲ್ಲ ಪ್ರಾಣಿಗಳಿಗೆ ಅಭಯುವನ್ನು ಕೊಡುತ್ತಾನೆಯೋ ಅರ್ಥಾತ್ ಯಾರಿಗೂ ಹಿಂಸೆಯನ್ನು ಮಾಡುವದಿಲ್ಲವೋ ಮತ್ತು ಯಾರಿಗೂ ಕಷ್ಟವನ್ನು ಕೊಡುವದಿಲ್ಲವೋ ಅವನಿಗೆ ಎಲ್ಲ ಪ್ರಾಣಿಗಳೂ ಅಭಯುವನ್ನು ಕೊಡುತ್ತವೆ. ಅಂದರೆ ಯಾರೂ ಅವನನ್ನು ಹಿಂಸಿಸುವದಿಲ್ಲ ಮತ್ತು ಕಷ್ಟವನ್ನೂ ಕೊಡುವದಿಲ್ಲ. ಇದು ಶಾಸ್ತ್ರಸಿದ್ಧಾಂತವಿರುತ್ತದೆ. ಪ್ರಕೃತಿಯ ಊರ್ಧ್ವಗತಿಶೀಲದಂತೆ ಅನುಕೂಲವಾಗಿ ನಡೆಯುವದು ಧರ್ಮಕ್ಕೆ ಬಾಧೆಯನ್ನು ಕೊಡುವದು ಅಧರ್ಮವಿರುತ್ತದೆ. ಆದ್ದರಿಂದ ಯಾವ ಜೀವನು ಪ್ರಕೃತಿಯ ಪ್ರವಾಹಕ್ಕೆ ಅನುಸರಿಸಿ ನಡೆಯುತ್ತಾನೆಯೋ ಅವನ ಗತಿಯಲ್ಲಿ ಬಾಧೆಯನ್ನುಂಟುಮಾಡುವದು ಮನುಷ್ಯಧರ್ಮವಾಗಿರುವುದಿಲ್ಲ. ಆದ್ದರಿಂದ ಇಂತಹ ಕಾರ್ಯ ಅಧರ್ಮವಾಗಿದೆ. ಅದರ ಪ್ರತಿಕ್ರಿಯೆಯಿಂದ ಮನುಷ್ಯನು ದುಃಖವನ್ನನುಭವಿಸಬೇಕಾಗುತ್ತದೆ.

**ದೈವೀಭಾಗವತ**

ಯೋಹಂತಿ ವಿನಾವೈರಂ ಸ್ವಕಾಮಃ ಸತತಂ ಪುನಃ ।
ಹಂತಾರಂ ಹಂತಿ ತಂ ಪ್ರಾಪ್ಯ ಜನನಂ ಜನನಾಂತರೇ ॥

ವೈರವಿಲ್ಲದೆ ಯಾವಾತನು ಸ್ವಾರ್ಥದ ಸಲುವಾಗಿ ಯಾವ ಪ್ರಾಣಿಯನ್ನು ಕೊಲ್ಲುತ್ತಾನೆಯೋ ಆ ಪ್ರಾಣಿಯು ಕೊಂದವನನ್ನು ಎರಡನೇ ಜನ್ಮದಲ್ಲಿ ಕೊಲ್ಲುತ್ತದೆ. ಆದ್ದರಿಂದ ಇಹಲೋಕ ಪರಲೋಕದಲ್ಲಿ ಕಲ್ಯಾಣವನ್ನು ಬಯುಸತಕ್ಕ ಮನುಷ್ಯನು ಸರ್ವಥಾ ಅಹಿಂಸಾ ರೂಪ ಶಾರೀರಕ ರೂಪ ತಪದ ಸಾಧನವನ್ನು ಮಾಡಬೇಕು. ಹೀಗೆ ಶಾರೀರಕ, ಮಾನಸಿಕ ಮತ್ತು ವಾಚನಿಕ ಈ ಮೂರು ಪ್ರಕಾರದ ತಪಸ್ಸಿನ ದ್ವಾರ ಅಸಾಧಾರಣವಾದ ಶಕ್ತಿಯನ್ನು ದೊರಕಿಸಿ ಮನುಷನು ಅಭ್ಯುದಯುವನ್ನುಂಟು ಮಾಡತಕ್ಕ ನಿಶ್ರೇಯಸ ಪದವಿಯ ಅಧಿಕಾರವನ್ನು ಹೊಂದುತ್ತಾನೆ.

ಶ್ರೀ ಬಸವಣ್ಣನವರು ತ್ರಿಕರಣದಲ್ಲಿಯೂ ಅತ್ಯಂತ ಪರಿಶುದ್ಧವಾಗಿ ಅಹಿಂಸೆಯನ್ನು ತಾವು ಆಲೋಚಿಸಿ ಲೋಕದ ಜನರಿಗೆ ಮಾರ್ಗದರ್ಶಕರಾಗಿಹೋಗಿರುವದರಿಂದ ಅವರ ಅಹಿಂಸಾ ತತ್ವವು ಇನ್ನೂ ರೂಢಿಯಲ್ಲಿರುತ್ತದೆ. ಅವರು ತಮ್ಮ ಜೀವಮಾನದಲ್ಲಿ ಎಲ್ಲ ಪ್ರಾಣಿಗಳನ್ನೂ ಸಮಾನವಾಗಿ ಕಂಡರಲ್ಲದೆ ಸ್ವಪ್ನದಲ್ಲಿಯೂ ಕೂಡ ಹಿಂಸೆಗೆ ಆಸ್ಪದವನ್ನು ಕೊಡಲಿಲ್ಲ. ಯಾಕಂದರೆ ಧರ್ಮದ ಮುಖ್ಯ ಹತ್ತು ಅಂಗಗಳಲ್ಲಿ ಅಹಿಂಸೆಗೆ ಮೊದಲನೆಯ ಸ್ಥಾನವಿದೆ. ಅಹಿಂಸೆಯನ್ನು ಆಚರಿಸದೆ ಇದ್ದ ಮನುಷ್ಯನ ಧರ್ಮವು ಪರಿಪೂರ್ಣವಾಗಲಾರದು. ಆದ್ದರಿಂದಲೇ ಧರ್ಮರೂಪಿಯಾದ ಬಸವಮಹಾತ್ಮನು ತನ್ನ ನಡೆನುಡಿಗಳಲ್ಲಿ ಅಹಿಂಸೆಯನ್ನಾಚರಿಸಿ ಲೋಕದಲ್ಲಿ ದಿವ್ಯಪುರುಷನಾಗಿ ಮೆರೆದು ಶಿವನಲ್ಲಿ ಬೆರೆದನು.

## ಹದಿನೇಳನೆಯ ಪ್ರಕರಣ

### ಶ್ರೀ ಬಸವಣ್ಣನವರೂ ಸ್ತ್ರೀಯರ ಮನ್ನಣೆಯೂ

ಶ್ರೀ ಬಸವಣ್ಣನವರು ಸ್ತ್ರೀಯರ ವಿಷಯಕ್ಕೆ ಮಾಡಿದ ಮನ್ನಣೆಯನ್ನು ನೋಡಿದರೆ ಭರತಖಂಡದಲ್ಲಿ ಸ್ತ್ರೀಯರಿಗೆ ಮೊಟ್ಟಮೊದಲು ಗೌರವವನ್ನು ಕೊಟ್ಟ ಕೀರ್ತಿಯು ಶ್ರೀ ಬಸವಣ್ಣನವರ ಪಾಲಿಗೆ ಇರುತ್ತದೆಂಬುವದು ಇತಿಹಾಸದಿಂದ ಚೆನ್ನಾಗಿ ತಿಳಿದು ಬರುತ್ತದೆ. ಭರತವರ್ಷದಲ್ಲಿರತಕ್ಕ ಸ್ತ್ರೀಯರ ಪಾತಿವ್ರತ್ಯಾದಿ ಧರ್ಮಗಳು ಇಂದಿಗೂ ಜಗತ್ತನ್ನೇ ಬೆರಗುಗೊಳಿಸತಕ್ಕವುಗಳಾಗಿವೆ. ನಮ್ಮ ದೇಶದಲ್ಲಿ ಸ್ತ್ರೀಯರಿಗೆ ಪ್ರಾಚೀನ ಕಾಲದಿಂದಲೂ ಮನ್ನಣೆಯುಂಟು. ಆದರೆ ಅವರಿಗೆ ಧಾರ್ಮಿಕ ಕಾರ್ಯಗಳಲ್ಲಿ ಸರಿಯಾದ ಅಧಿಕಾರವನ್ನು ಕೊಟ್ಟ ವಿಷಯವು ಯಾವ ಧರ್ಮದ ಇತಿಹಾಸವನ್ನು ನೋಡಿದರೂ ಸರಿಯಾಗಿ ಕಂಡುಬರುವದಿಲ್ಲ.

"ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ"

ಅಂದರೆ, ಯಾವ ಸ್ಥಳದಲ್ಲಿ ಸ್ತ್ರೀಯರು ಪೂಜೆಗೊಳ್ಳುತ್ತಾರೆಯೋ ಅಲ್ಲಿ ದೇವತೆಗಳು ಸಂತೋಷಚಿತ್ತರಾಗಿ ನಲಿದಾಡುತ್ತಾರೆ. ಉಪನಿಷತ್ ಕಾಲದಲ್ಲಿ ಗಾರ್ಗೇಯಿ, ಮೈತ್ರೇಯಿ ಮೊದಲಾದ ಋಷಿಪತ್ನಿಯರು ವೇದಾಂತದ ಚರ್ಚೆಯಲ್ಲಿ ಭಾಗವಹಿಸುತ್ತಿದ್ದರೆಂಬುದು ಕಂಡುಬಂದರೂ ಮುಂದೆ ಕೆಲವು ಕಾಲದಲ್ಲಿ ಕುಂಠಿತವಾದದ್ದು ತಿಳಿದು ಬರುತ್ತದೆ.

ಹಿಂದೂ ಧರ್ಮದ ಅನೇಕ ಸಮಾಜಗಳಲ್ಲಿ ಅಥವಾ ವೀರಶೈವ ಸಮಾಜವನ್ನು ಬಿಟ್ಟು ಉಳಿದ ಯಾವ ಸಮಾಜದಲ್ಲಿಯೂ ಸ್ತ್ರೀಯರಿಗೆ ಧರ್ಮದಲ್ಲಿ ಯಾವ ತರಹದ ಅಧಿಕಾರ ಕೊಟ್ಟದ್ದು ಕಂಡುಬರುವದಿಲ್ಲ. ವೈದಿಕ ಸಮಾಜದಲ್ಲಿ ಸ್ತ್ರೀಯಳಿಗೆ ಉಪನಯನಾದಿಗಳಿಲ್ಲ ಅರ್ಥಾತ್ ಮಂತ್ರ ಸಂಸ್ಕಾರವೇ ಇಲ್ಲ. ಜೈನ ಧರ್ಮದಲ್ಲಿ ಸ್ತ್ರೀಯಳಿಗೆ ಮೋಕ್ಷವೇ ಇಲ್ಲ. ಅದೇ ವೀರಶೈವ ಸಮಾಜದಲ್ಲಿ ಹುಟ್ಟಿದ ಕೂಡಲೇ ಪುರುಷರಿಗೆ ಲಿಂಗಧಾರಣ ಸಂಸ್ಕಾರವಾಗುವಂತೆ ಮಾಂಸಪಿಂಡವಳಿದು ಗುರುವು ಶಿವದೀಕ್ಷೆಯಿಂದ ಸ್ತ್ರೀಯಳನ್ನೂ ಮಂತ್ರಪಿಂಡವನ್ನಾಗಿ ಮಾಡುವನು. ಸ್ತ್ರೀಪುರುಷರಿಗಿಬ್ಬರಿಗೂ ಸಂಸ್ಕಾರವಾಗುವದರಿಂದ ಪುರುಷರಂತೆ ಸ್ತ್ರೀಯರಿಗೂ ಭೇದಭಾವವಿಲ್ಲದೆ ಅಧಿಕಾರ ಕೊಟ್ಟಂತೆ ಆಯಿತು. ಇದು ವೀರಶೈವ ಧರ್ಮದ ಶ್ರೇಷ್ಠತ್ವದ ಹೆಗ್ಗುರುತಾಗಿರುವದಲ್ಲದೆ ಎಲ್ಲ ಧರ್ಮಗಳಿಗಿಂತಲೂ ಈ ವೈಶಿಷ್ಟ್ಯವು ಈ ಧರ್ಮದಲ್ಲಿರುತ್ತದೆಂಬುವದನ್ನು ತೋರಿಸಿ ಕೊಡುತ್ತದೆ.

ಶೂದ್ರರೂ, ಸ್ತ್ರೀಯರೂ ವೇದಗಳನ್ನು ಓದಬಾರದೆಂದು ಬ್ರಾಹ್ಮಣ ಗ್ರಂಥಗಳ ಕಾಲದಿಂದ ಬಂದುದಾಗಿದೆ. ಪಾಣಿನಿ ಮಹರ್ಷಿಗಳ ವ್ಯಾಕರಣ ಸೂತ್ರಗಳಲ್ಲಿ ಸ್ತ್ರೀಯಳಿಗೆ ಆಶೀರ್ವಾದವನ್ನು ಮಾಡುವ ಕಾಲಕ್ಕೆ ಪ್ಲುತಸಹಿತ ಉಚ್ಚಾರ ಮಾಡಬಾರದೆಂದು ಹೇಳಲಾಗಿದೆ. ಇದು ಸ್ತ್ರೀಸಮಾಜದ ಮೇಲೆ ಮಾಡಿದ ದೊಡ್ಡ ಅಪರಾಧವೆಂದು ಹೇಳುವದರಲ್ಲಿ ತಪ್ಪೇನಿರುವದಿಲ್ಲ. ಅನೇಕ ರೀತಿಯಿಂದ ಸ್ತ್ರೀಯರೆಂದರೆ ಕೀಳುತನದ

ಜನಾಂಗವೆಂದು ಮೊದಲಿನಿಂದಲೂ ತಿಳಿಯುತ್ತಾ ಬಂದಿರುವದು ಶೋಚನೀಯ ವಿಷಯ ವಾಗಿರುತ್ತದೆ. ಸ್ತ್ರೀಯಳೆಂದರೆ ಪುರುಷನಿಗೆ ಉಪಭೋಗ್ಯ ವಸ್ತುವೆಂದು ಅನೇಕ ಸಮಾಜಗಳಲ್ಲಿ ತಿಳುವಳಿಕೆ ಇರುತ್ತದೆ. ದ್ವಿಜರಿಗೆ ಲಗ್ನದಲ್ಲಿ ಮಾತ್ರ ಗಾಯತ್ರಿಯ ಉಪದೇಶವಾಗುವದರಿಂದ ಅವಳಿಗೆ ಅದೊಂದು ಧಾರ್ಮಿಕ ವಿಧಿಯು ಇರುವುದೆಂದು ಹೇಳುತ್ತಾರೆ. ಆದರೆ ಲಗ್ನವಾಗುವವರೆಗೆ ಯಾವ ಸಂಸ್ಕಾರವೂ ಇರುವದಿಲ್ಲ.

ಸ್ತ್ರೀಯರಿಗೆ ಇದ್ದ ಅಧಿಕಾರವನ್ನು ಬಸವಣ್ಣನವರು ಆಚರಣೆಯಲ್ಲಿ ತಂದು ಜಗತ್ತಿನಲ್ಲಿ ಕೀರ್ತಿಕಾಯರಾದರು. ಯಾವ ತತ್ವಗಳೇ ಇರಲಿ ಶಾಸ್ತ್ರಗಳಲ್ಲಿ ಇದ್ದು ಕೃತಿಯಲ್ಲಿ ಬಾರದೆ ಇದ್ದರೆ ಅವುಗಳ ಉಪಯೋಗವೇನು? ಅವುಗಳನ್ನು ಜನಸಾಮಾನ್ಯ ರಲ್ಲಿ ಯಾರು ಪ್ರಚಾರ ಮಾಡುತ್ತಾರೆಯೋ ಅವರೇ ಧರ್ಮವೀರರು. ಅವರ ಹೆಸರು ಆ ವಿಷಯ ಬಂದಾಗ್ಗೆ ಜನರ ನಾಲಿಗೆಯ ತುದಿಯಲ್ಲಿ ನಲಿದಾಡುತ್ತಲಿರುವದು ಸ್ವಾಭಾವಿಕವಾದುದಾಗಿದೆ.

ಶಿವಾನುಭವ ಮಂಟಪದ ಸಭೆಯಲ್ಲಿ ಧಾರ್ಮಿಕ ಚರ್ಚೆಗಳು ನಡೆದಾಗ ಅಕ್ಕಮಹಾದೇವಿ, ಮುಕ್ತಾಯಕ್ಕ, ನೀಲಕ್ಕ, ನಿಂಬೆಕ್ಕ, ಗಂಗಾದೇವಿ, ಲಿಂಗಮ್ಮ ಮೊದಲಾದ ೨೫–೩೦ ಜನ ಹೆಣ್ಣುಮಕ್ಕಳು ಭಾಗವಹಿಸಿ ಕಾರ್ಯಗಳನ್ನು ಮಾಡಿದುದು ಸಾಮಾನ್ಯವಾದುದಲ್ಲ. ಇವರೆಲ್ಲರೂ ವಚನಗಳನ್ನು ರಚಿಸಿರುತ್ತಾರೆ. ಇವರಲ್ಲಿ ಕೆಲವರ ವಚನಗಳು ಉತ್ತಮ ತರಗತಿಗಳಾಗಿವೆ. ಅಕ್ಕಮಹಾದೇವಿ, ಮುಕ್ತಾಯಕ್ಕ, ಲಕ್ಕಮ್ಮ ಮೊದಲಾದವರು ವೇದಾಂತಿಗಳಾಗಿದ್ದರು. ಅವರ ವಚನಗಳಾಗಲೀ, ವಾದವಿವಾದ ಗಳಾಗಲೀ ಗಂಭೀರವಾಗಿದ್ದು ಓದುಗರನ್ನು ಮುಗ್ಧರನ್ನಾಗಿ ಮಾಡುವ ಮೋಹಕ ಗುಣ ಇರುತ್ತದೆ. ಶೂನ್ಯಸಂಪಾದನೆಯಲ್ಲಿ ಇವರ ಸಂಪಾದನೆಗಳು ಬಹಳ ಉತ್ಕೃಷ್ಟಗಳಾ ಗಿರುತ್ತವೆ. ಮುಕ್ತಾಯಕ್ಕಗಳು ಶ್ರೀ ಪ್ರಭುದೇವರ ಕೂಡ ಮಾಡಿದ ಸಂಭಾಷಣೆಯು ಎಂತಹ ಪಂಡಿತರನ್ನಾದರೂ ತಲೆದೂಗಿಸದೆ ಬಿಡುವದಿಲ್ಲ. ಅವುಗಳನ್ನು ಓದಿದವರು ಮುಕ್ತಾಯಕ್ಕಗಳ ವಾದ ಸರಣಿಯು ಉಪನಿಷತ್‌ಕಾರರಿಗೆ ಸರಿಸಮಾನವಾಗಿದೆಯೆಂದು ಹೇಳದೆ ಇರಲಾರರು.

ಪ್ರಮಥಗಣಂಗಳೊಳಗೋರ್ವ ಗಣಾಧೀಶ್ವರನು ಜಗಹಿತಾರ್ಥವಾಗಿ ಮರ್ತ್ಯಕ್ಕೆ ಅವತರಿಸಿ ಅಜಗಣ್ಣನೆಂಬಭಿನಾಮದಿಂ ಗುಪ್ತಭಕ್ತಿಯಿಂದಿರ್ದು ತಮ್ಮ ನಿರವಯ ಪದ ದೊಳು ನಿಜವನೈದಲು ಅಲ್ಲಿ ಮುಕ್ತಾಯಕ್ಕಗಳು ಅಜಗಣ್ಣನಗಲ್ದ ವಿಯೋಗಾವಸ್ಥೆಯಿಂ ಪ್ರಲಾಪಿಸುತ್ತಿರಲು ಆ ಪ್ರಲಾಪಮಂ ಪ್ರಭುದೇವರು ಕಂಡು ಈಕೆ ಮಹಾಜ್ಞಾನಿ ಯೆಂದು ನಿಂದು ನೋಡುತಿರ್ಪ ಪ್ರಸ್ಥಾವದೊಳು ಮುಕ್ತಾಯಕ್ಕಗಳ ವಚನ—

"ಅರಿವನಣಲೊಳಗಿಕ್ಕಿ ಅಗಿವುತಿದೆ ಮರ್ತ್ಯಲೋಕವೆಲ್ಲವು. ಅರಿವು ಉಳಿಯಲರಿಯದೆ ಕೆಟ್ಟಿತ್ತು ಲೋಕವೆಲ್ಲವು ನಾನೆಂತು ಬದುಕುವೆನಣ್ಣಾ ಕತ್ತಲೆ ಬೆಳಗ ಕಾಂಬ ಸಂದೇಹಿ ನಾನೊಬ್ಬಳು ಎನ್ನ ಕಣ್ಣಕಟ್ಟಿ ಕನ್ನಡಿಯ ತೋರಿತ್ತು ಅಜಗಣ್ಣ ನಿನ್ನ ಯೋಗಾ" ॥ ೧ ॥

"ಅಂಧನ ಕೈಯ ಅಂಧಕ ಹಿಡಿದಂತಿರಬೇಕು, ಮೂಗನ ಕೈಯ್ಯಲ್ಲಿ ಕಾವ್ಯವ ಕೇಳಿದಂತಿರಬೇಕು, ದರ್ಪಣದೊಳಗೆ ಪ್ರತಿಬಿಂಬದಂತೆ ಹಿಡಿ

ವರಿಗಳವಲ್ಲದಿರಬೇಕು ಅಣ್ಣ, ಕೂರ್ಮನ ಶಿಶುವಿನ ಸ್ನೇಹದಂತಿರಲೊಲ್ಲದೆ ಆರೂಢಗೆಟ್ಟೆಯೋ ಅಜಗಣ್ಣ" ॥ ೨ ॥

"ರವಿಯೊಳಡಗಿದ ಪ್ರತಿಬಿಂಬದಂತೆ ಹಿಡಿವರಿಗಳವಲ್ಲದಿರಬೇಕು. ಅಣ್ಣ ನಿನ್ನೊಳಡಗಿದ ಭೇದವ ಭಿನ್ನವ ಮಾಡುವರೇ? ಅಣ್ಣ ನಿಮ್ಮ ನುಡಿಗಳೆಲ್ಲವು ಪ್ರತಿಬಿಂಬಗಳಾದವೇ? ಕೊಡನೊಳಗಣ ಜ್ಯೋತಿಯು ಅಡಗಿಸಲರಿಯದೆ ಮಿಗೆವರಿದಂತಾದೆಯೋ ಅಜಗಣ್ಣಾ" ॥ ೩ ॥

"ಸ್ಫಟಿಕ ಪ್ರಜ್ವಲದಿಂ ಜ್ಯೋತಿ ಘಟದೊಳಗೆ ತೋರುತ್ತಿದೆ. ದಿಟ ಪುಟವನತಿಗಳೆದು ಸಟೆಯು ಬಯಸುವವರೇ? ಅಂತರಂಗದ ಸುದ್ದಿಯು ಬಹಿರಂಗಕ್ಕೆ ತಂದು ಸಂತೈಸಲರಿಯದೆ ಮರುಳಾದಿರಣ್ಣ. ಜಂತ್ರದ ಕೀಲುಕೂಟದ ಸಂಚದ ಭೇದವು ತಪ್ಪಿ ಮಂತ್ರಭಿನ್ನವಾಗಿ ನುಡಿವರೇ ಅಣ್ಣ?" ॥ ೩ ॥

ಮುಕ್ತಾಯಕ್ಕಗಳು ಅಜಗಣ್ಣನನ್ನು ಕುರಿತು ಹೀಗೆಯೇ ಅನೇಕ ವಚನಗಳನ್ನು ಹೇಳುತ್ತ ದುಃಖಿಸುತ್ತಿದ್ದಳು. ಆ ಸಮಯದಲ್ಲಿ ಪ್ರಭುದೇವರು ಅಲ್ಲಿಗೆ ಬಂದು ದುಃಖಿಸುತ್ತಿದ್ದ ಅವಳನ್ನು ನೋಡಿ—

"ಅಂಗೈಯೊಳಗೊಂದು ಅರಳ್ದ ತಲೆ ಹಿಡಿದುಕೊಂಡು ಕಂಗಳ ಮುತ್ತು ಪವಣಿಸುವಾಕೆ ನೀನಾರು ಹೇಳಾ? ಸಂದಸಂಪಿಗೆಯರಳ್ಗೆ ತುಂಬಿ ಬಂದುಂಬ ಭೇದವನರಿಯದೆ ಹಂಬಲಿಸುವ ಪರಿತಾಪವೇನು ಹೇಳಾ? ಒಂದೆಂಬೆನೆ? ಎರಡಾಗಿದೆ. ಎರಡೆಂಬೆನೆ? ಒಂದಾಗಿದೆ. ಅರಿವಿನೊಳಗಣ ಮರಹಿದೇನು ಹೇಳಾ? ದುಃಖವಿಲ್ಲದುದಕ್ಕೆ ಅಕ್ಕೆ ಇಲ್ಲದನುತಾಪ ನಮ್ಮ ಗುಹೇಶ್ವರಲಿಂಗದಲ್ಲಿ ತೋರುತ್ತಿದೆ ನೀನಾರು ಹೇಳಾ ಎಲೆ ಅವ್ವಾ."

ಈ ಪ್ರಕಾರ ಪ್ರಭುದೇವರು ಆಕೆಯ ಹೆಸರನ್ನು ಕೇಳಲು, ಮುಕ್ತಾಯಕ್ಕಗಳು ಅವರಿಗೆ ಉತ್ತರ ಕೊಡುತ್ತಾಳೆ—

"ಆರೆಂದು ಕುರುಹ ಬೆಸಗೊಳಲು, ಏನೆಂದು ಹೇಳುವೆನಯ್ಯಾ? ಕಾಯದೊಳಗೆ ಮಾಯವಿಲ್ಲ, ಭಾವದೊಳಗೆ ಭ್ರಮೆಯಿಲ್ಲ, ಕರೆದು ಬೆಸಗೊಂಬರೆ ಕುರುಹಿಲ್ಲ. ಒಬ್ಬರಿಗು ಹುಟ್ಟದೆ ಅಯೋನಿಯೊಳು ಬಂದು ದುರ್ಬುದ್ಧಿಯಾದವಳ ನೇನೆಂಬೆನಣ್ಣಾ? ತಲೆಯಳಿದು ತಲೆಗೆಟ್ಟು ಬೆಳಗುವ ಜ್ಯೋತಿ ಎನ್ನ ಅಜಗಣ್ಣ ತಂದೆಯು ಬೆನ್ನಬಳಿಯವಳು ನೀನಾರಯ್ಯ?"

ಹೀಗೆಂದು ಮುಕ್ತಾಯಕ್ಕಗಳು ತನ್ನ ವೃತ್ತಾಂತವನ್ನು ಪ್ರಭುದೇವರಿಗೆ ಹೇಳಿದಳು. ಪ್ರಭುಗಳಾದರೂ ತಮ್ಮ ವೃತ್ತಾಂತವನ್ನೆಲ್ಲ ಹೇಳುತ್ತಾರೆ. ಪುನಃ ಮುಕ್ತಾಯಕ್ಕಗಳು—

"ಅಹುದಹುದು ಶಿವಶರಣರ ಮಹಿಮೆಯು ಆರಿಗೆಯೂ ಕಾಣಬಾರದು. ಕಬ್ಬುನ ಉಂಡ ನೀರಿನಂತೆ, ಕೆಂಬಿಸಿಲುಂಡ ಅರಸಿನದಂತೆ,

ಉರಿಯೊಳಡಗಿದ ಕರ್ಪೂರದಂತೆ, ಬಯಲನಪ್ಪಿದ ವಾಯುವಿನಂತೆ ಇಪ್ಪನಿಲವ ನುಡಿದು ಹೇಳಿಹೆನೆಂಬ ಮಾತಿಗೆ ಅಳವಡುವುದೇ? ಅರಿವಡೆ ಮತಿಯಿಲ್ಲ, ನೆನೆವಡೆ ಮನವಿಲ್ಲ, ಅಜಗಣ್ಣ ತಂದೆಯನೊಳಗೊಂಡಿಪ್ಪ ನಿಮ್ಮ ಮಹಿಮೆಗೆ ನಮೋ ನಮೋ ಎನುತಿರ್ದೆನು."

ಇವರಿಬ್ಬರ ಪ್ರಶ್ನೋತ್ತರಗಳು ಅನೇಕ ವಚನಗಳಲ್ಲಿ ನಡೆದಿವೆ. ಇಲ್ಲಿ ಮುಖ್ಯವಾಗಿ ನಾವು ನೋಡಬೇಕಾದುದು ಓರ್ವ ವೀರಶೈವ ಹೆಣ್ಣುಮಗಳ ವಾದಸರಣಿಯನ್ನು ಇಂತಹ ಯೋಗ್ಯತೆಯುಳ್ಳ ಸ್ತ್ರೀಯರು ನಮ್ಮ ಕರ್ನಾಟಕದಲ್ಲಿಯೇ ಏಕೆ ಇಡೀ ಭರತ ಖಂಡದಲ್ಲಿಯೇ ಸಿಗುವದು ವಿರಳ ಅಥವಾ ದುರ್ಲಭವೆಂದರೂ ಸಲ್ಲುವದು. ಹೆಣ್ಣು ಮಕ್ಕಳು ಇಂತಹ ಯೋಗ್ಯತಾ ಸಂಪನ್ನೆಯರಾಗಬೇಕಾದರೆ ತಕ್ಕ ಸಲಕರಣೆಗಳೂ ಬೇಕಾಗುತ್ತವೆ. ಅವರಿಗೆ ಅದನ್ನು ಒದಗಿಸಿಕೊಟ್ಟದ್ದು ಬಸವಣ್ಣನವರ ದಯೆ. ಯಾಕಂದರೆ, ಶಿವಾನುಭವ ಮಂಟಫದಲ್ಲಿ ಅವರಿಗೆ ಉತ್ಕೃಷ್ಟವಾದ ಅನುಭವವು ದೊರೆಯಿತು. ಇಲ್ಲದಿದ್ದರೆ ಆವರಿಗೆ ಇಷ್ಟು ಯೋಗ್ಯತೆ ಎಲ್ಲಿಂದ ಬರುತ್ತಿತ್ತು? ಶ್ರೀ ಬಸವಣ್ಣನವರ ದೂರದೃಷ್ಟಿಯೇ ಇದಕ್ಕೆ ಕಾರಣವು.

ಅಕ್ಕಮಹಾದೇವಿಯರು ಹಿಂದುಸ್ಥಾನದ ಸುಪ್ರಸಿದ್ಧ ವೈರಾಗಿಣಿಯರಲ್ಲಿ ಅಗ್ರೇಸರರಾಗಿರುತ್ತಾರೆ. ಅವರಿಗಾದರೂ ಶಿವಾನುಭವ ಮಂಟಪದಲ್ಲಿಯ ಅನುಭವ ಶಿಕ್ಷಣವೇ ಮೂಲಕಾರಣವಾಗಿರುತ್ತದೆ. ಶ್ರೀ ಬಸವಣ್ಣನವರು ಸ್ತ್ರೀಯರಿಗೂ ಕೂಡ ಅನಿರ್ಬಂಧ ಪ್ರವೇಶವನ್ನು ಇಡದೇ ಇದ್ದರೆ ಆಗಿನ ಕಾಲದಲ್ಲಿ ಇಂತಹ ದಿವ್ಯ ಸ್ತ್ರೀರತ್ನಗಳು ದೊರೆಯುತ್ತಿದ್ದಿಲ್ಲ. ಅವರ ಶ್ರೇಷ್ಠತರಗತಿಯ ವಚನಗಳನ್ನೋದಿ ತಲೆದೂಗದ ವಿದ್ವಾಂಸರಿಲ್ಲ. ಅವರ ವೇದಾಂತಾನುಭವವು ಪ್ರಭುದೇವರಂತಹ ವೈರಾಗ್ಯ ಚಕ್ರವರ್ತಿಗಳ ತಲೆ ತೂಗಿಸಿತು. ಶೂನ್ಯಸಂಪಾದನೆಯಲ್ಲಿ ಅವರಿಗೂ ಪ್ರಭುಗಳಿಗೂ ನಡೆದ ಸಂವಾದವು ಚಿತ್ತಾಕರ್ಷಕವಾಗಿರುವದಲ್ಲದೆ ಮನೋವೇದಕವೂ ಆಗಿರುತ್ತದೆ.

ಒಂದು ಸಂದರ್ಭದಲ್ಲಿ ಪ್ರಭುದೇವರು ಅಕ್ಕನವರನ್ನು ಕುರಿತು, ನೀವು ಯಾರು? ನಿಮ್ಮ ಪತಿಗಳ್ಯಾರು? ನಿಮ್ಮ ಮತ್ತು ನಿಮ್ಮ ಪತಿಗಳ ಹೆಸರೇನು? ಇವುಗಳನೆಲ್ಲ ಹೇಳಿದರೆ ಈ ಶಿವಾನುಭವ ಮಂಟಪದಲ್ಲಿ ಪ್ರವೇಶವುಂಟು. ಇಲ್ಲದಿದ್ದರೆ ನೀವು ಈ ಸ್ಥಾನವನ್ನು ಬಿಟ್ಟು ಹೋಗಬೇಕಾಗುತ್ತದೆಂದು ಕೇಳಿದರು. ಆ ಸಂದರ್ಭದಲ್ಲಿ ಶ್ರೀ ಪ್ರಭುದೇವರು—

"ಉದಮದದ ಯೌವನವನೊಳಗೊಂಡು ಸತಿ ನೀನು ಇತ್ತಲೇತಕೆ ಬಂದೆಯವ್ವ? ಸತಿಯೆಂದರೆ ಮುನಿವರು ನಮ್ಮ ಶರಣರು. ನಿಮ್ಮ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು; ಇಲ್ಲದಿದ್ದರೆ ತೊಲಗು ತಾಯೆ. ನಮ್ಮ ಗುಹೇಶ್ವರನ ಶರಣರಲ್ಲಿ ಸಂಗಸುಖ ಸನ್ನಿಹಿತವ ಬಯಸುವರೆ? ನಿನ್ನ ಪತಿಯಾರೆಂಬುದು ಹೇಳಾ ಎಲೆ ಅವ್ವಾ."

ಇದಕ್ಕೆ ಉತ್ತರವಾಗಿ ಶ್ರೀ ಅಕ್ಕಮಹಾದೇವಿಯವರು—

"ಹರನೆ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೆ ನೋಡಾ. ಹಸಿಯ ಮೇಲಣ ಮಾತ ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರ

ಕಳುಹಿದರೆಮ್ಮವರು. ಭಸ್ಮವನೇ ಹೂಸಿ, ಕಂಕಣವನೆ ಕಟ್ಟಿ, ಚನ್ನ ಮಲ್ಲಿಕಾರ್ಜುನ ತನಗೆ ನಾನಾಗಬೇಕೆಂದು''

"ಪಚ್ಚೆಯುದ ನೆಲೆಗಟ್ಟು, ಕನಕದ ತೋರಣ, ವಜ್ರದ ಕಂಭ, ಪಚ್ಚವ ಚಪ್ಪರವಿಕ್ಕಿ ಮದುವೆಯು ಮಾಡಿದರೆನ್ನ ಮದುವೆಯು ಮಾಡಿದರು. ಕಂಕಣ ಕೈದಾರೆ ಸ್ಥಿರಸೇಸೆಯನಿಕ್ಕಿ ಚನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆಯು ಮಾಡಿದರು."

ಮತ್ತು

"ಗುರುವೇ ತೆತ್ತಿಗನಾದ, ಲಿಂಗವೇ ಮದವಳಿಗನಾದ, ನಾನೇ ಮದವಳಿಗೆಯಾದೆನು, ಈ ಭುವನವೆಲ್ಲವರಿಯಲು ಅಸಂಖ್ಯಾತರೆನಗೆ ತಾಯಿತಂದೆಗಳು, ಕೊಟ್ಟರು ಪ್ರಭುವಿನ ಮನೆಗೆ ಸಾದೃಶ್ಯವಪ್ಪ ವರನ ನೋಡಿ, ಇದು ಕಾರಣ ಚನ್ನಮಲ್ಲಿಕಾರ್ಜುನ ಗಂಡನೆನಗೆ, ಮಿಕ್ಕಿದ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ ಪ್ರಭುವೇ"

ಹೀಗೆಂದು ಅಕ್ಕಮಹಾದೇವಿಯರು ತಮ್ಮ ಪತಿಯ ಕುರುಹ ಹೇಳಲು, ಶ್ರೀ ಪ್ರಭುದೇವರು 'ನೀನು ಕೌಶಿಕನೆಂಬ ಭವಿಯ ಮೇಲೆ ಲಿಂಗಧಾರಣವಾಗದ ತಪ್ಪ ಹೊರಿಸಿ ನಿರ್ವಾಣವಾಗೆ ಬಾಹ್ಯದಲ್ಲಿ ಕೇಶ ಮರೆಯಾದರೆ ಅಭಿಮಾನ ಹರಿಯದೆಂದು ನಿರೂಪಿಸಿದ ವಚನ—

"ತಪ್ಪ ಹೊರಿಸಿ ಹೊರಟೆನೆಂಬುದು ಸತ್ಯವೆ? ತನು ಶಿರಿಯನಳಿದು ನಿರ್ವಾಣದಲ್ಲಿ ಮನದ ಭ್ರಾಂತು ನಿಶ್ಚಯವಾಗದು. ಕೇಶವೆಂಬ ಸೀರೆಯ ಅಂಗಕ್ಕೆ ಮರೆಯಾಯಿತ್ತು ಅಪಮಾನವೆಂತು ಹರಿಯಿತ್ತು ಅದು ಗುಹೇಶ್ವರಲಿಂಗಕ್ಕೆ ಸಲ್ಲದ ವೇಷ."

ಇದಕ್ಕೆ ಶ್ರೀ ಮಹಾದೇವಿಯಕ್ಕನವರು—

"ಕಾಯ ಕರ್ರನೆ ಕಂದಿದರೇನು? ಕಾಯ ಮಿರ್ರನೆ ಮಿಂಚಿದರೇನು? ಅಂತರಂಗ ಶುದ್ಧವಾದ ಬಳಿಕ ಚನ್ನಮಲ್ಲಿಕಾರ್ಜುನಲಿಂಗವು ಒಲಿದ ಕಾಯವು ಹೇಗಿದ್ದರೇನಯ್ಯ?"

ಪುನಃ ಶ್ರೀ ಪ್ರಭುದೇವರು—

"ದೇವನೊಲಿಯದೆ ನೀನೊಲಿದೆನೆಂಬುದು ಅದಾವುದಕ್ಕೆ? ಭಾವ ಶುದ್ಧವಾದಲ್ಲಿ ಸೀರೆಯನಳಿದು ಕೂದಲ ಮರೆಮಾಡಲೇತಕ್ಕೆ? ಅದು ಅಂತರಂಗದ ನಾಚಿಕೆ ಬಾಹ್ಯದಲ್ಲಿ ತೋರಿತ್ತು. ಅದು ಗುಹೇಶ್ವರಲಿಂಗಕ್ಕೆ ಒಲವರವಲ್ಲ."

ಇದಕ್ಕೆ ಶ್ರೀ ಅಕ್ಕಮಹಾದೇವಿಯವರು—

"ಫಲಪಕ್ವವಾದಲ್ಲದೆ ಹೊರಗಣ ಶಿಪ್ಪೆ ಒಪ್ಪಗೆಡದು. ಕಾಮನ ಮುದ್ರೆಯ ಕಂಡು ನಿಮಗೆ ನೋವಾದಿತ್ತೆಂದು ಆ ಭಾವದಿಂದ ಮುಚ್ಚಿದೆ ಇದಕೆ ನೋವೇಕೋ? ಕಾಡದಿರಣ್ಣ ಚನ್ನಮಲ್ಲಿಕಾರ್ಜುನ ದೇವರ ದೇವನ ಒಳಗಾದವಳ."

ಶ್ರೀ ಪ್ರಭುದೇವರು—

"ನೀ ದೇವರೊಳಗೊ ದೇವರು ನಿನ್ನೊಳಗೊ ಎಂಬ ಠಾವನರಿಯೆ ಸಿಪ್ಪೆ ಒಪ್ಪಗೆಟ್ಟಾಗ ಹಣ್ಣಿನ ರಸ ಕೊಳಕಾಯಿತ್ತು ಅದು ಗುಹೇಶ್ವರಲಿಂಗ ಒಪ್ಪದ ಮಾತು."

ಶ್ರೀ ಅಕ್ಕನವರು—

"ಗುಣದೋಷದ ಸಂಪಾದನೆಯ ಮಾಡುವನಕ್ಕರ ಕಾಮದ ಒಡಲು ಕ್ರೋಧದ ಗೊತ್ತು. ಲೋಭದ ಇಕ್ಕೆ ಲೋಹದ ಮಂದಿರ ಆಭಾವ ವರತಲ್ಲದೆ ಚನ್ನಮಲ್ಲಿಕಾರ್ಜುನನ ಕೇಳುವದಕ್ಕೆ ಇಂಬಿಲ್ಲ ಎಲೆ ಅಣ್ಣಗಳಿರಾ."

ಹೀಗೆಯೇ ಈ ಪ್ರಶ್ನೋತ್ತರಗಳು ನೂರಾರು ವಚನಗಳಿಂದ ಕೂಡಿರುತ್ತವೆ. ಅವುಗಳನ್ನು ಇಲ್ಲಿ ಹೇಳುವದು ಮುಖ್ಯೋದ್ದೇಶವಾಗಿಲ್ಲ. ಬೇಕಾದವರು ಶೂನ್ಯಸಂಪಾದನೆ ನೋಡಬಹುದು. ಇಲ್ಲಿ ನಾವು ಮುಖ್ಯವಾಗಿ ನೋಡಬೇಕಾದುದು ಅಕ್ಕನವರ ಯೋಗ್ಯತೆ ಎಂಥಾದ್ದು, ಅವರ ವೈರಾಗ್ಯವು ಉಪಮಾತೀತವಾದುದು. ಅವರು ಶಿವಾನುಭವ ಮಂಟಪದಲ್ಲಿ ಪ್ರವೇಶಿಸಿದುದು ತೀರಾ ಚಿಕ್ಕವಯಸ್ಸು ಅಂದಮೇಲೆ ಅವರ ಜ್ಞಾನಾನುಭವವು ಅಗಾಧವಾದ ಸಾಗರದಂತಿರಬೇಕಾದರೆ ಆಕೆಯ ಯೋಗ್ಯತೆಯು ಹೇಳಲಸದಳವಾಗಿರುವದು. ಪ್ರಭುದೇವರು ಜ್ಞಾನಿಗಳು, ವೈರಾಗ್ಯ ಮೂರ್ತಿಗಳು, ಶಿವಾನುಭವ ಮಂಟಪದ ಅಧ್ಯಕ್ಷರು. ಇಂಥವರ ಕೂಡ ಧೈರ್ಯದಿಂದ ಅವರ ಪ್ರಶ್ನೆಗಳಿಗೆಲ್ಲ ಸರಿಯಾದ ಉತ್ತರವನ್ನು ಕೊಟ್ಟು ಅವರನ್ನು ಸಂತೋಷಗೊಳಿಸಿದುದು ಸಾಮಾನ್ಯವಾದ ಮಾತಲ್ಲ. ಮೇಲೆ ಬರೆದ ಪ್ರಶ್ನೋತ್ತರಗಳ ವಚನಗಳನ್ನು ಓದಿದ ಮನುಷ್ಯನು ವಿಸ್ಮಿತನಾಗದೆ ಇರಲಾರನು.

ಹೀಗೆಯೇ ಅನೇಕ ಸ್ತ್ರೀಯರು ಶಿವಾನುಭವ ಮಂಟಪದ ಜ್ಞಾನಿಗಳ ಪಂಕ್ತಿಯಲ್ಲಿ ಸೇರಿದವರಿರುತ್ತಾರೆ. ಅವರೆಲ್ಲರ ವಿಷಯಗಳನ್ನು ಹೇಳಲು ಇಲ್ಲಿ ಸ್ಥಳವಿಲ್ಲ. ಮಾದರಿಗಾಗಿ ಇಬ್ಬರ ಸಂಕ್ಷಿಪ್ತ ವಿಷಯವನ್ನು ಮೇಲೆ ಕೊಡಲಾಗಿದೆ. ಬಸವಣ್ಣನವರು ಸ್ತ್ರೀಯರಿಗೆ ಅತ್ಯುನ್ನತವಾದ ಮನ್ನಣೆ ಕೊಟ್ಟುದೇ ಇಂತಹ ಸ್ತ್ರೀಯರ ಚರಿತ್ರೆಗಳು ಬೆಳಕಿಗೆ ಬಂದವು.

ಶ್ರೀ ಬಸವಣ್ಣನವರು ಸ್ತ್ರೀಯರ ವಿಷಯದಲ್ಲಿ ಅನೇಕ ವಚನಗಳನ್ನು ಹೇಳಿದ್ದಾರೆ. ಅವರು ಪರಸ್ತ್ರೀಯರ ವಿಷಯದಲ್ಲಿ ಬಹಳ ಅಂಜಿಕೆಯಿಂದ ನಡೆದುಕೊಂಡದ್ದು ತಿಳಿದು ಬರುತ್ತದೆ.

**ಬಸವಣ್ಣನವರ ವಚನ—ಪುಟ ೮೪**

"ಎಲ್ಲಿ ನೋಡಿದಡಲ್ಲಿ ಮನವೆಳಸಿದಡೆ ಆಣೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ, ಪರವಧುವನು ಮಹಾದೇವಿಯೆಂಬೆ ಕೂಡಲಸಂಗಮ ದೇವಾ."

ಮತ್ತು

"ಹರಿವ ಹಾವಿಗೆ ಅಂಜೆ, ಉರಿವ ನಾಲಿಗೆಗಂಜೆ, ಸುರಗಿಯ ಮೊನೆಗಂಜೆ, ಒಂದಕ್ಕಂಜುವೆ, ಒಂದಕ್ಕಳುಕುವೆ, ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ. ಮುನ್ನಂಜದ ರಾವಣನೇ ವಿಧಿಯಾದ ಅಂಜುವೆನಯ್ಯ ಕೂಡಲಸಂಗಮದೇವಾ."

ಮೇಲಿನ ಎರಡೂ ವಚನಗಳನ್ನು ನೋಡಿದರೆ ಬಸವಣ್ಣನವರು ಯಾವುದಕ್ಕೂ ಅಂಜದೆ ಇದ್ದರೂ ಪರಸ್ತ್ರೀಯರಿಗೆ ಮಾತ್ರ ಅಂಜುವೆನಯ್ಯ ಎಂಬ ಅವರ ವೀರವಾಣಿಯು ಮಾರ್ಗ ದರ್ಶಕವಾಗಿರುತ್ತದೆ.

ಶ್ರೀ ಬಸವಣ್ಣನವರು—

"ಭಕ್ತನೆಂತೆಂಬೆನಯ್ಯಾ ಭವಿಸಂಗ ಬಿಡದನ್ನಕ್ಕ? ಮಾಹೇಶ್ವರನೆಂತೆಂಬೆನಯ್ಯಾ ಪರಸ್ತ್ರೀಯ ಪರರರ್ಥ ಬಿಡದನ್ನಕ್ಕ? ಪ್ರಸಾದಿಯೆಂತೆಂಬೆನಯ್ಯಾ ಆದಿವ್ಯಾಧಿ ನಷ್ಟವಾಗದನ್ನಕ್ಕ? ಪ್ರಾಣಲಿಂಗಿ ಎಂತೆಂಬೆನಯ್ಯಾ ಪ್ರಾಣಸ್ವಸ್ಥಿರವಾಗದನ್ನಕ್ಕ? ಶರಣನೆಂತೆಂಬೆನಯ್ಯಾ ಪಂಚೇಂದ್ರಿಯ ನಾಶವಾಗದನ್ನಕ್ಕ? ಐಕ್ಯನೆಂತೆಂಬೆನಯ್ಯಾ ಜನನಮರಣ ವಿರಹಿತವಾಗದನ್ನಕ್ಕ? ಇಂತಪ್ಪ ಭಾಷೆ ವ್ರತ ನೇಮಂಗಳ ನಾನರಿಯೆನಯ್ಯಾ. ಅಘಟಿತಘಟಿತ ವರ್ತಮಾನವನಾನರಿಯೆನಯ್ಯಾ? ನಿಮ್ಮ ಶರಣರ ತೊತ್ತು ಭೃತ್ಯಾಚಾರವ ಮಾಡುವೆ ಕೂಡಲಸಂಗಮದೇವಾ."

ಈ ವಚನದಲ್ಲಿ ಪರಸ್ತ್ರೀ ಪರರರ್ಥ ಬಿಡದೆ ನಾನು ಅವರಿಗೆ ಹೇಗೆ ಮಹೇಶ್ವರನೆಂಬೆನೆಂದು ಹೇಳಿದ್ದಾರೆ. ಆದ್ದರಿಂದ ನಾನು ಮಹೇಶ್ವರ ತಾನು ಮಹೇಶ್ವರನೆಂದು ಹೇಳಿಸಿಕೊಳ್ಳುವ ಮಹನೀಯರು ಬಸವಣ್ಣನವರ ಮೇಲಿನ ವಚನವನ್ನು ಪರಿಶೀಲಿಸಬೇಕು.

**ಬಸವೇಶ್ವರ ವಚನ—ಪುಟ ೧೨೪**

"ತೊರೆಯ ಮಿಾವಣ್ಣಗಳಿರಾ, ತೊರೆಯ ಮಿಾವ ಸ್ವಾಮಿಗಳಿರಾ, ತೊರೆಯಿಂಭೋ, ತೊರೆಯಿಂಭೋ, ಪರನಾರಿಯ ಸಂಗವ ತೊರೆಯಿಂಭೋ ಪರಧನದಾಮಿಷವ ತೊರೆಯಿಂಭೋ, ಇವ ತೊರೆಯದೆ ಹೋಗಿ ತೊರೆಯ ಮಿಂದರೆ ಬರುದೊರೆ ಹೋಹುದು ಕೂಡಲಸಂಗಮದೇವಾ."

"ನೋಡಲಾಗದು ನುಡಿಸಲಾಗದು ಪರಸ್ತ್ರೀಯ, ಬೇಡ ಕಾಣಿರೊ ತಗರ ಬೆನ್ನಲ್ಲಿ ಹರಿವ ಸೊಣಗನಂತೆ ಬೇಡ ಕಾಣಿರೋ, ಒಂದಾಶೆಗೆ ಸಾಸಿರ ವರುಷ ನರಕದೊಳದ್ದುವ ಕೂಡಲಸಂಗಮದೇವಾ."

"ಲಿಂಗ ಜಂಗಮ ಒಂದೇ ಎಂದು ನಂಬಿದ ಬಳಿಕ ಅವರಂಗನೆಯರು ಲಿಂಗದ ರಾಣಿವಾಸ, ಅಲ್ಲಿಯೂ ಮೇಳ ಇಲ್ಲಿಯೂ ಮೇಳ, ಚೌಡೇಶ್ವರಿಯಲ್ಲಿಯೂ ಮೇಳ, ಮಾತೆಯೆಂಬುವ ಭಾವತಪ್ಪಿ ಅಪ್ಪಿದವರ ತಲೆಯ ಕೊಂಬ ಕೂಡಲಸಂಗಮದೇವಾ."

"ಒಡೆಯರು ತಮ್ಮ ಮನೆಗೆ ಒಡಗೊಂಡು ಹೋದರೆ ತುಡುಗಣಿ ತನದಲ್ಲಿ ಪರವಧುವ ನೋಡುವ ಸರಸ ಬೇಡಾ ಕಾಣಿರಣ್ಣಾ, ಒಡೆಯ ನರಸಿಯು ಸರಸ ಬೇಡ, ಕೂಳಸೊಕ್ಕು ತಲೆಗೇರಿ ರಾಣಿವಾಸದೊಡನೆ ಸರಸ ಬೇಡ ಕೂಡಲಸಂಗಮದೇವ ಕರಸಿತಗನಯ್ಯಾ."

"ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವುವು ದೋಷಂಗಳು, ಮುಂದೆ ಬಂದು ಕಾಡುವುವು ಪಂಚೇಂದ್ರಿಯಂಗಳು, ಸತಿಪತಿ ರತಿಸುಖವ ಬಿಟ್ಟರೆ ಶಿರಿಯಾಳ ಚಂಗಳೆಯರು? ಸತಿಪತಿ ರತಿಸುಖ ಭೋಗೋಪಭೋಗ ವಿಳಾಸವ ಬಿಟ್ಟರೆ ಸಿಂಧು ಬಲ್ಲಾಳರು? ನಿಮ್ಮ ಮುಟ್ಟಿ ಪರಧನ ಪರ ಸತಿಯರಿಗೆಳಸಿದರೆ ನಿಮ್ಮ ಚರಣಕ್ಕೆ ದೂರ ಕೂಡಲಸಂಗಮದೇವಾ."

ಮೇಲಿನ ಐದು ವಚನಗಳಲ್ಲಿಯೂ ಪರಸ್ತ್ರೀಯರ ಬಗ್ಗೆ ಶ್ರೀ ಬಸವಣ್ಣನವರು ಎಂತಹ ಕಠೋರ ವ್ರತ ಧಾರಣ ಮಾಡಿದ್ದರೆಂಬುವದು ಸ್ಪಷ್ಟವಿರುತ್ತದೆ.

ಶ್ರೀ ಗುಬ್ಬಿಯ ಮಲ್ಲಣಾರ್ಯರು ತಮ್ಮ 'ಗಣಭಾಷ್ಯ ರತ್ನಮಾಲಾ' ಎಂಬ ಗ್ರಂಥದಲ್ಲಿ ವೀರಶೈವರ ನೂರಾವೊಂದು ಸ್ಥಲಗಳಲ್ಲಿ 'ಪರದಾರ ನಿರಸನ' ಎಂಬುವ ಸ್ಥಲವೊಂದನ್ನು ವಿವರಿಸಿರುತ್ತಾರೆ.

"ಗಂಡನುಳ್ಳಾ ಹೆಂಡಿರ ಕಂಡು ಅಳುಪದಿರಾ ಮನವೇ? ಬಂದ ಬಸುರನು ಉಂಡ ಮೊಲೆಯನು ಕಂಡು ಮರುಗದಿರಾ ಮನವೇ? ಉದ್ದಂಡತನದಲಿ ನಡೆದ ಭಂಡರನು ಹುಳಗೊಂಡದಲ್ಲಿಕ್ಕದೇ ಬಿಡುವನೇ? ನಮ್ಮ ದೇವರಾಯಸೊಡ್ಡಳಾ."

ಬಸವೇಶ್ವರ ವಚನ—

"ಹೋಗಬಿಟ್ಟು ಮರಳಿ ಹಿಂದೆ ನೋಡಿ ಮತ್ತಾಗಬೇಕೆಂಬ ಸಂದೇಹ ವುಳ್ಳನ್ನಕ್ಕ ಅದೇ ಪರದಾರ ಪಂಚಮಹಾಪಾತಕ ನಾಯಕ ನರಕ ತಪ್ಪದು ಅನ್ಯ ವಧುವೆಂಬುದು ನಿಮ್ಮ ರಾಣಿವಾಸ ಎನಗಿದೇ ದಿವ್ಯ ಕೂಡಲಸಂಗಮದೇವಾ."

ಪರದಾರ ಎಂಬುವದು ಪಂಚಮಹಾಪಾತಕ, ಅನ್ಯಸ್ತ್ರೀಯೆಂಬುವದು ನಿಮ್ಮ ರಾಣಿ ವಾಸವೆಂದು ಶ್ರೀ ಬಸವಣ್ಣನವರು ಹೇಳಿದುದು ಬಹಳ ಮರ್ಮಭೇದಕವಾಗಿರುತ್ತದೆ. ಮತ್ತು ಅವರು ನನಗೆ ಮಾತ್ರ ಇದೇ ಬುದ್ಧಿ ಇರಲಿ ಎಂದು ಸಂಗನಿಗೆ ಹೇಳಿರುತ್ತಾರೆ.

ಶ್ರೀ ಹಡಪದ ಅಪ್ಪಣ್ಣನವರು—

"ತೊತ್ತಿನ ಸಂಗವ ಮಾಡಿದಡೆ ಸುರಾಪಾನವ ಕೊಂಡ ಸಮಾನ, ಸೂಳೆಯ ಸಂಗವ ಮಾಡಿದಡೆ ಮಾಂಸವ ತಿಂದ ಸಮಾನ, ಕನ್ನಿಕೆಯ ಸಂಗವ ಮಾಡಿದಡೆ ಬಂಗಿಯ ತಿಂದ ಸಮಾನ, ಗಂಡ ಬಿಟ್ಟವಳ ಸಂಗ ಮಾಡಿದಡೆ ಉದಾನವ ಕೊಂಡ ಸಮಾನ, ಮುಂಡೆಯ ಸಂಗವ ಮಾಡಿದಡೆ ಅಮೇಧ್ಯವ ತಿಂದ ಸಮಾನ, ಗಂಡನುಳ್ಳವಳ ಸಂಗವ ಮಾಡಿದಡೆ ಪಂಚ ಮಹಾಪಾತಕ ಮಾಡಿದ ಸಮಾನ."

ಅದೆಂತೆಂದೊಡೆ—

"ವಿಧವಾ ಯುಶ್ರಿಯಂ ಹಂತಿ ದಾಸೀಶೀಲ ಕುಲಂ ತಥಾ।
ವೇಶ್ಯಾ ಮಾನಧನಂ ಹಂತಿ ಸರ್ವಂ ಹಂತಿ ಪರಾಂಗನಾ॥
ದಾಸೀಕನ್ಯಾಭಿದಃಸ್ತ್ರೀಣಾಂ ವೇಶ್ಯಾಭಿದ ಪರಸ್ತ್ರಿಯಃ।
ಸಂತತಂ ಸೂತಕಶ್ಚೈವ ಬ್ರಹ್ಮಹತ್ಯಂ ದಿನೇದಿನೇ॥"

ಹೀಗೆ ಆರು ಪ್ರಕಾರದ ಸ್ತ್ರೀಯರನ್ನು ಮನ ವಚನ ಕಾಯದಲ್ಲಿ ಬಿಟ್ಟವಂಗೆ

"ಗುರುವುಂಟು, ಲಿಂಗವುಂಟು, ಜಂಗಮವುಂಟು, ಪಾದೋದಕವುಂಟು, ಪ್ರಸಾದವುಂಟು. ಇಂತೀ ಆರು ಪ್ರಕಾರದ ಸ್ತ್ರೀಯರು ಮೊದಲಾದ ರಾಶಿಕೂಟದ ಸ್ತ್ರೀಯರಿಗೆ ಮನಹೇಸದೆ ಅಂಗವಿಸುವ ಭಕ್ತ ಭವಿಗಿಂದ ಕಷ್ಟ ನೋಡಾ ಬಸವಣ್ಣಪ್ರಿಯ ಕೂಡಲಚನ್ನಸಂಗಮದೇವಾ."

ಕಾಮಶಾಸ್ತ್ರದಲ್ಲಿ ಸಂಭೋಗಕ್ಕೆ ಜಾತಿದೋಷ ಉಚ್ಛಿಷ್ಟದೋಷವಿಲ್ಲೆಂದು ಪಾಪಕರ್ಮಿಗಳು ಅಧರೋಚ್ಛಿಷ್ಟ ಪಾನವಂ ಮಾಡುತ್ತಿಹರು. ಮಾನವರು ದುರ್ಜಾತಿ ದೋಷವಿಲ್ಲೆಂದು ಆ ಸ್ತ್ರೀಯರುಗಳೊಡನೆ ಭುಂಜಿಸುತಿಹರು. ಇಂತಪ್ಪ ಭವಿ ಕರ್ಮಿಗಳ ಬಿಟ್ಟಲ್ಲದೆ ಲಿಂಗವಂತನಾಗಬಾರದು.

ಶ್ರೀ ಬಸವಣ್ಣನವರು ವೀರಶೈವ ಧಾರ್ಮಿಕ ಕ್ರಾಂತಿಯ ಮೂಲಪುರುಷರಿದ್ದ ಕಾರಣ ಅವರ ಛಾಯಾನುವರ್ತಿಗಳಂತಿದ್ದ ಶರಣರೆಲ್ಲರೂ ಅವರು ಕೈಗೊಂಡ ಆಚರಣೆಗಳನ್ನೆಲ್ಲಾ ಲೋಕದಲ್ಲಿ ಪ್ರಚಂಡತರವಾಗಿ ಪ್ರಚಾರ ಮಾಡುತ್ತಿದ್ದರೆಂಬುವದು ಆಯಾಯ ಶರಣರ ವಚನಗಳನ್ನು ನೋಡಿದರೆ ಸ್ಪಷ್ಟವಾಗಿ ಗೊತ್ತಾಗುತ್ತದೆ.

ಶ್ರೀ ದೇವರ ದಾಸೀಮಾರ್ಯರು—

"ಅಡಗ ತಿಂಬರು ಕಣಕದಡಿಗೆ ಇರಲಿಕ್ಕೆ, ಸುರೆಯ ಕುಡಿವರು ಹಾಲಿರಲಿಕ್ಕೆ, ಮುಕ್ಕುವರು ಭಂಗಿಯ ಸಕ್ಕರೆಯಿರಲಿಕ್ಕೆ, ಸ್ವಸ್ತ್ರೀ ಇದ್ದರೂ ಪರಸ್ತ್ರೀಯರಿಗೆ ಅಳುಪುವರು, ಸತ್ತನಾಯ ಭಕ್ಷಿಸುವ ಹಡಕಿಗರ ನೇನೆಂಬೆನಯ್ಯಾ."

ಮತ್ತು

"ಗುರುನಿರೂಪವ ಮಾಡರು, ಪರವಧುವನೆರೆವರು, ಪರಧನವನಳುಪುವರು, ಗುರುವಿಲ್ಲವವರಿಗೆ ಪರವಿಲ್ಲವವರಿಗೆ, ಇಂತಪ್ಪ ನರಕಿಗಳ ನೆನಗೊಮ್ಮೆ ತೋರದಿರಾ ರಾಮನಾಥಾ."

"ಪರವಧುವನೆರೆಯದೆ ಪರಧನವ ತುಡುಕದೆ ಪರದೈವದಿಚ್ಛೆ ನಡೆಯದೆ ಗುರುಲಿಂಗ ಜಂಗಮಕ್ಕೆ ವರದಾಸನಾದಾತನೇ ಧರೆ ಮೂರಕ್ಕೆ ಗುರುವಾಗಿಪ್ಪನೈ ರಾಮನಾಥಾ."

"ಸಾಸುವೆಯ ಮಟ್ಟ ಭಕ್ತಿಯುಳ್ಳನ್ನಕ್ಕ ವೇಶಿಯ ಮುಟ್ಟದಡೆ ಹೊಲೆಯರ ಮನೆಯ ಮುರುಹ ಹೊರಗಿರಿಸಿದರೆ ಹಂದಿ ಬಂದು ಮೂಸಿ ಮೇವಂತೆ ಕಾಣಾ ರಾಮನಾಥಾ."

"ಈಶನ ಶರಣರು ವೇಶಿಯ ಹೋದರೆ ಮಾಸಲೋಗರವ ಹೊರ ಗಿರಿಸಿದಡೆ ಹಂದಿ ಮೂಸಿನೋಡಿದಂತೆ ಕಾಣಾ ರಾಮನಾಥಾ."

"ವೇಶೀಯ ಎಂಜಲ ತಿಂದು ಈಶ್ವರ ಪ್ರಸಾದವ ಭುಂಜಿಸಿದೊಡೆ ಓಸರಿಸಿತ್ತಯ್ಯ ಲಿಂಗವು. ಆತ ದ್ರೋಹಿ ಭಾಷೆ ತಪ್ಪುತನವನು ಭವದಲ್ಲಿ ಬಳಲುವನು. ಅಂತಹವನ ಕಂಡು ಹೇಸಿ ಕಡೆಗೆ ತೊಲಗಿದನು ಕಾಣಾ ರಾಮನಾಥಾ."

ಈ ಐದು ಮುತ್ತಿನಂತಹ ವಚನಗಳನ್ನೂ ನೋಡಿದರೆ ಶ್ರೀ ದೇವರದಾಸೀಮಾರ್ಯರು ಪರಸ್ತ್ರೀಯರ ವಿಷಯಕ್ಕೆ ಬಹಳ ಉತ್ಕೃಷ್ಟತೆಯನ್ನು ಕೊಟ್ಟಿರುತ್ತಾರೆಂಬುವದು ಗೊತ್ತಾಗುತ್ತದೆ. ವೀರಶೈವ ಧರ್ಮದಲ್ಲಿ ಪರ ವಧುವಿನ ಬಗ್ಗೆ ಬಹಳ ಮಹತ್ವ ಕೊಟ್ಟಿರುತ್ತಾರೆ.

ಶ್ರೀ ದೇವರ ದಾಸೀಮಾರ್ಯರು—

"ಶಿವಭಕ್ತರು ತಮ್ಮ ನಿಜಕೈಲಾಸಕ್ಕೆ ಹೋದರೆ ಅವರರಸಿಯ ಪಾರ್ವತಿಯ ಸರಿ ಎಂದು ಕಾಣಲಿಬೇಕು. ಅಲ್ಲಿ ಅನುಸರಣೆಯ ಕೊಟ್ಟು ಬೆರಸಿ ಮಾತನಾಡುವ ನರಕಿಗಳ ನೇನೆಂಬೆ ರಾಮನಾಥಾ."

ಈ ವಚನವನ್ನು ಲಿಂಗವಂತನಾದವನು ಪ್ರತಿನಿತ್ಯ ಪಾರಾಯಣ ಮಾಡಲು ಯೋಗ್ಯ ವಾಗಿರುತ್ತದೆ.

ಕೇವಲ ಪತಿಯಿದ್ದ ಸ್ತ್ರೀಯರ ಕೂಡ ಅಲ್ಲ, ವಿಧವೆಯರ ಕೂಡ ಸಹ ಅತ್ಯಾದರ ದಿಂದ ವರ್ತಿಸಬೇಕೆಂದು ವಚನಕಾರರು ಇಲ್ಲಿ ಹೇಳಿದ್ದಾರೆ. ಅವರನ್ನು ಕೂಡ ಪಾರ್ವತಿ ಸಮಾನರೆಂದು ತಿಳಿಯತಕ್ಕದ್ದು. ಹಾಗೆ ವರ್ತಿಸದೆ ಸೊಕ್ಕಿನಿಂದ ನಡೆದರೆ ಅವರಿಗೆ ನರಕವು ತಪ್ಪಲಾರದು. ರಂಡೆ ಮುಂಡೆಯವರು ಲಿಂಗವಂತರಿಗೆ ಅಶುಭರಲ್ಲ. ಅವರೂ ಪಾರ್ವತಿಯ ಸಮಾನರು.

ಶ್ರೀ ದೇವರ ದಾಸೀಮಾರ್ಯರು—

"ಶಿವಪೂಜೆಯೆತ್ತ ವಿಷಯದ ಸವಿಯೆತ್ತ ಆ ವಿಷಯದ ಸವಿ ತಲೆಗೇರಿ ಶಿವಪೂಜೆಯ ಬಿಟ್ಟು ವೇಶಿಯರ ಎಂಜಲ ಹೇಸದೆ ತಿಂಬ ದೋಷಿಗಳ ನೇನೆಂಬೆನಯ್ಯ ರಾಮನಾಥಾ."

ಶಿವಶರಣಲ್ಲಿ ಹಿರಿಯರಾದ ದೇವರ ದಾಸೀಮಾರ್ಯರು ಅನೇಕ ವಚನಗಳನ್ನು ಹೇಳಿರುತ್ತಾರೆ.

ಶ್ರೀ ತೋಂಟದ ಸಿದ್ದಲಿಂಗಯತಿಗಳು—ಯಮ, ನಿಯಮ, ಆಸನ, ಪ್ರಾಣಾ ಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂದು ಈ ಎಂಟು ಅಷ್ಟಾಂಗ ಯೋಗಗಳು. ಈ ಯೋಗಗಳೊಳಗೆ ಉತ್ತರ ಭಾಗ, ಪೂರ್ವ ಭಾಗ ಎಂದು ಎರಡು ಪ್ರಕಾರವಾಗಿರುವವು. ಯಮಾದಿ ಪಂಚಕವೈದು ಪೂರ್ವಯೋಗ; ಧ್ಯಾನ, ಧಾರಣ, ಸಮಾಧಿ ಎಂದು ಈ ಮೂರು ಉತ್ತರಯೋಗ. ಇವಕ್ಕೆ ವಿವರ:—

ಯಮಯೋಗ ಅನೃತ, ಹಿಂಸೆ, ಪರಧನ, ಪರಸ್ತ್ರೀ, ಪರನಿಂದೆ ಇಂತೀ ಐದನ್ನು ಬಿಟ್ಟು ಲಿಂಗಪೂಜೆ ಮಾಡುವದೀಗ ಯಮಯೋಗ. ಮುಖ್ಯವಾಗಿ ಇದರಲ್ಲಿ ಪರಸ್ತ್ರೀಯರನ್ನು ಬಿಟ್ಟಿರುವದು ಯಮಯೋಗದಲ್ಲಿ ಕೂಡಿರುವದು.

**ಶ್ರೀ ಸಿದ್ಧರಾಮದೇವರ ವಚನ—ಪುಟ ೧೦೨**

"ಮಾಡಬಾರದು ಮಾಡಬಾರದು ಪರಸ್ತ್ರೀಸಂಗವ, ನೋಡಬಾರದು ನೋಡಬಾರದು ದೃಷ್ಟಿಯನೆತ್ತಿ ಪರರ ದ್ರವ್ಯವ, ಕೂಡಬಾರದು ಕೂಡಬಾರದು ಕುಲವಿಲ್ಲದವನಲ್ಲಿ, ಆಡಬಾರದು ಆಡಬಾರದು ದುರ್ವಿಷಯಗಳಲ್ಲಿ, ಆಡಿ ಮಾಡಿ ನೋಡಿ ಕೂಡಿ ಆಡಿದರೆ ಈಡನೋಡಾ. ಯಮ ಮಾಡಿದ ಪುಳಗೊಂಡಕ್ಕೆ ಎಲೆ ಬಲ್ಲೇಶ ಕಪಿಲಸಿದ್ಧ ಮಲ್ಲಿಕಾರ್ಜುನನ ಸಾನ್ನಿಧ್ಯದಲ್ಲಿ ಕೇದಾರಗುರುಸಾಕ್ಷಿಯಾಗಿ"

ಶ್ರೀ ಹಡಪದ ಅಪ್ಪಣ್ಣನರವು—

"ದಾಸಿಯರ ಸಂಗ ಎರಡನೆಯ ಪಾತಕ, ವೇಶಿಯ ಸಂಗ ಮೂರನೆಯ ಪಾತಕ, ಮಾಸಲಳಿಯದ ಸ್ತ್ರೀಯರ ಸಂಗ ಪಂಚಮಹಾಪಾತಕ. ಇನಿಸು ಶಿವಭಕ್ತರಿಗೆ ಸಲ್ಲವು. ಇವನರಿದರಿದು ಮಾಡಿದವನಾದರೆ ಯಮಪಟ್ಟಣವೆ ವಾಸವಾಗಿಪ್ಪರಲ್ಲದೆ ಈ ದೇಶಕ್ಕೆ ಮರಳಿ ಬರಲಿಲ್ಲ ನೋಡಾ ಬಸವಪ್ರಿಯ ಕೂಡಲಚನ್ನಬಸವಣ್ಣ."

ವೀರಶೈವರಿಗೆ ೬೩ ಶೀಲಗಳಿರುತ್ತವೆ. ಇವು ಬಾಹ್ಯಾಚರಣೆಗಳು. ಆದರೆ ಈ ಶೀಲಗಳನ್ನು ಮಾಡುವಾಗ—ಪರಧನ, ಪರಸ್ತ್ರೀ, ಪರನಿಂದೆ ಬಿಟ್ಟರೆ ಮಾತ್ರ ಮೇಲಿನ ಶೀಲಗಳು ಫಲಿಸುತ್ತವೆ. ಇಲ್ಲದಿದ್ದರೆ ವ್ಯರ್ಥವಾಗುತ್ತವೆಂದು ಮಡಿವಾಳ ಮಾಚಿದೇವರು ಹೇಳಿರುತ್ತಾರೆ.

**ಮಡಿವಾಳ ಮಾಚಿದೇವನ ವಚನ—ಪುಟ ೧೪**

"ಬಹು ಜಲಮಂ ಬಿಟ್ಟು ಚಿಲುಮೆಯಂ ತೆಗೆದರೆ ಅದು ನೆಲಶುದ್ಧ ಸೌಕರ್ಯವಲ್ಲದೆ ಅವು ಶೀಲವಲ್ಲ; ಉಪ್ಪ ಬಿಟ್ಟು ಸಪ್ಪೆಯನುಂಡರೆ ಅದು ಮನದ ಹೇಸಿಕೆಯಲ್ಲದೆ ದೃಢವ್ರತವಲ್ಲ; ವ್ರತ ನಿಶ್ಚಯವಾದರೆ ಪರಸ್ತ್ರೀ, ಪರಧನ, ಪರದೂಷಣೆಯನರಿತುಬಿಟ್ಟರೆ ಅರವತ್ತಾರು ವ್ರತಗಳಿಗೆ ಕಡೆಯೆಂದೆ"

ಅಂದರೆ, ಅರವತ್ತಮೂರು ಶೀಲಗಳಲ್ಲಿ ಪರಧನ, ಪರಸ್ತ್ರೀ, ಪರದೂಷಣೆ ಬಿಟ್ಟರೆ ಈ ಮೂರನ್ನೂ ಕೂಡಿಸಿ ಅರವತ್ತಾರು ಶೀಲಗಳೆಂದು ಹೇಳುವೆನೆಂದು ಮಾಚಿದೇವರು ಹೇಳಿದ್ದಾರೆ.

ಹೀಗೆಯೇ ಎಲ್ಲಾ ಶರಣರೂ ಪರಧನ, ಪರಸ್ತ್ರೀಯರ ವಿಷಯಕ್ಕೆ ಶ್ರೀ ಬಸವಣ್ಣನವರಂತೆಯೇ ಹೇಳಿದಿರುತ್ತಾರೆಯಲ್ಲದೆ ಸ್ತ್ರೀಯರಿಗೆ ಮನ್ನಣೆಯನ್ನೂ ಕೊಟ್ಟಿರುತ್ತಾರೆ.

ಶ್ರೀ ಸಿದ್ಧರಾಮ ಶಿವಯೋಗಿಗಳು—

"ತಾನು ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು; ತಾಮಾಡಿದ ಹೆಣ್ಣು ತೊಡೆಯನೇರಿತ್ತು; ತಾಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯ ನೇರಿತ್ತು; ತಾಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು; ಅದುಕಾರಣ ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ, ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ ನೋಡಾ."

ಶ್ರೀ ಜೋಧರ ಮಾಯಣ್ಣ—

"ಮುನ್ನ ಪರಸತಿ ಪಾರ್ವತಿಯೆಂದು ನಡಿಸಿತ್ತು ನುಡಿಸಿತ್ತು ಗುರು ವಚನ; ಬಳಿಕ ಶರಣರ ಸತಿ ಪಾರ್ವತಿಯೆಂದು ನಡಿಸಿತ್ತು ನುಡಿಸಿತ್ತು ಗುರು ವಚನ; ಇನ್ನು ಸತಿಯರೆಲ್ಲ ಗುರುಸತಿಯರೆಂದು ನಡಿಸಿತ್ತು ನುಡಿ ಸಿತ್ತು ಗುರುವಚನ; ಶಂಭು ಸೋಮನಾಥ ಲಿಂಗನ ಸಂಗಸುಸಂಗವ ಮಾಡಿತ್ತು ಗುರುವಚನ."

ಮೇಲಿನ ಎರಡು ವಚನಗಳೂ ಸ್ತ್ರೀಯರಿಗೆ ಹೆಚ್ಚಿನ ಮನ್ನಣೆ ಕೊಟ್ಟದ್ದನ್ನು ಪ್ರತಿಪಾದಿಸುತ್ತಲಿವೆ.

ಶ್ರೀ ಅಕ್ಕಮಹಾದೇವಿಯವರು ಸ್ವತಃ ಹೆಣ್ಣುಮಗಳಾದರೂ ಬಸವಣ್ಣನವರ ದಯೆಯಿಂದಲೇ ನನಗೆ ಇಂತಹ ಯೋಗ್ಯತೆ ಬಂದಿತೆಂದು ಹೇಳಿರುತ್ತಾರೆ. ಬಸವಣ್ಣ ನವರು ಹೆಣ್ಣಿಗೆ ಹೆಚ್ಚಿನ ಮರ್ಯಾದೆ ಕೊಟ್ಟಿದ್ದರು.

"ಕಾಮಾರಿ ಗೆಲಿದೆನು ಬಸವ ನಿಮ್ಮ ದಯೆಯಿಂದ, ಸೋಮಧರನ ಹಿಡಿ ತಪ್ಪೆನು ಬಸವ ನಿಮ್ಮ ಕೃಪೆಯಿಂದ, ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು ಭಾವಿಸಲು ಗಂಡುರೂಪು ಅತಿಕಾಮಿ ಚನ್ನಮಲ್ಲಿಕಾರ್ಜು ನಂಗೆ ತೊಡರಕ್ಕಿ ಎರಡುಮರಿಯದೆ ಕೂಡಿದೆನು ಬಸವ ನಿಮ್ಮ ಕೃಪೆಯಿಂದ"

ಇದರಂತೆಯೇ ಅಕ್ಕಮಹಾದೇವಿಯವರು ಬಸವಣ್ಣನವರ ಕೃಪೆಯೇ ನನ್ನ ಉದ್ಧಾರಕ್ಕೆ ಕಾರಣವೆಂದು ಅನೇಕ ವಚನಗಳನ್ನು ಹೇಳಿದ್ದಾರೆ. ಶ್ರೀ ಬಸವಣ್ಣನವರು ಹೆಣ್ಣಿಗೆ ಹೆಚ್ಚಿನ ಮನ್ನಣೆ ಕೊಡದೆ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬುವ ಸ್ಮೃತಿಯ ವಾಕ್ಯವನ್ನು ಪಾಲಿಸಿದ್ದರೆ ಅಕ್ಕಮಹಾದೇವಿ, ಮುಕ್ತಾಯಕ್ಕ, ಲಕ್ಕಮ್ಮಗಳಂತಹ ಯೋಗ್ಯತಾ ಸಂಪನ್ನರಾದ ಸ್ತ್ರೀಯರನ್ನು ಲಿಂಗವಂತ ಸಮಾಜವು ಕಾಣಲು ಶಕ್ಯ ವಿರಲಿಲ್ಲ.

ಸ್ತ್ರೀಯರಿಗೆ ಸ್ವಾತಂತ್ರ್ಯವೆಂದರೆ ಸ್ವೇಚ್ಛಾಪ್ರವರ್ತನೆಯೆಂದು ಕಲ್ಪನೆ ಮಾಡುವದು ತಪ್ಪಾಗುತ್ತಲಿದೆ. ಸತಿಪತಿಗಳಿಬ್ಬರೂ ಜ್ಞಾನವಂತರಾಗಿದ್ದರೆ ಆ ಸಂಸಾರವು ಸುಖಮಯ ವಾಗುವದು. ಪುರುಷರೇ ರತ್ನ, ಸ್ತ್ರೀಯರೇ ರತ್ನದ ಖಣಿಯೆಂಬುವ ಮಾತನ್ನು ನೆನಪಿಗೆ ತಂದುಕೊಂಡರೆ ರತ್ನಗಳು ಹುಟ್ಟತಕ್ಕ ಸ್ಥಾನವು ಹೇಗಿರಬೇಕಾದುದು ಎಂಬುವ ಮಾತು ಸಹಜವಾಗಿ ತಿಳಿಯುತ್ತದೆ. ಈಗಿನ ಕಾಲದಲ್ಲಿ ಸ್ತ್ರೀಯರು ದೊಡ್ಡದೊಡ್ಡ ವಿದ್ವಾಂಸರಾಗಿ ಜಗತ್ತಿನಲ್ಲಿ ಮಾನಮರ್ಯಾದೆಗಳನ್ನು ಹೊಂದುತ್ತಲಿದ್ದಾರೆ. ಆದರೆ ಮೊದಲಿನ ಕಾಲದಲ್ಲಿ

ಅವರಿಗೆ ಯಾವತರಹದ ಸ್ವಾತಂತ್ರ್ಯವೂ ಇರಲಿಲ್ಲ. ಅಂತಹ ಕಾಲದಲ್ಲಿ ಬಸವಣ್ಣನವರು ಸ್ತ್ರೀ ಸಮಾಜಕ್ಕೆ ಗೌರವ ಕೊಟ್ಟಿರುವದು ಅವರ ದೂರದರ್ಶಿತನದ ಹೆಗ್ಗುರುತಾಗಿದೆ. ಅವರು ತಮ್ಮದೊಂದು ವಚನದಲ್ಲಿ "ಛಲಬೇಕು ಶರಣಂಗೆ ಪರಸತಿಯನೊಲ್ಲೆಂಬ" ಎಂದು ಹೇಳಿರುತ್ತಾರೆ. ಮನುಷ್ಯನಿಗೆ ಛಲವು ಬೇಕು; ಆದರೆ ಪರಧನ ಪರಸತಿಯ ನೊಲ್ಲೆನೆಂಬ ಛಲಬೇಕಲ್ಲದೆ ಯಾರನ್ನಾದರೂ ನಾಶಮಾಡಬೇಕು, ಅನ್ಯರಿಗೆ ಕೇಡನ್ನು ಮಾಡತಕ್ಕ ಛಲ ಮಾತ್ರ ಬೇಡವೆಂದು ಅವರು ಹೇಳಿರುತ್ತಾರೆ.

ಈಗಿನಂತಹ ಸುಧಾರಣೆಯ ಕಾಲದಲ್ಲಿಯೂ ಸ್ತ್ರೀಯರಿಗೆ ಶಿಕ್ಷಣ ಕೊಡಬೇಕೇ? ಕೊಟ್ಟರೆ ಹೇಗೆ ಇರಬೇಕೆನ್ನುವ ಚರ್ಚೆಗಳು ನಡೆಯುತ್ತಲಿವೆ, ದೂರದರ್ಶಿಗಳಾದ ಬಸವಣ್ಣನವರು ೮೦೦ ವರ್ಷಗಳ ಹಿಂದೆಯೇ ಈಗ ಚರ್ಚೆ ಮಾಡತಕ್ಕವರಿಗೆ ಕಾರ್ಯ ರೂಪದಿಂದ ಉತ್ತರ ಕೊಟ್ಟಿರುತ್ತಾರೆ. ಆದ್ದರಿಂದ ಅವರ ಈ ವಿಷಯದಲ್ಲಿಯ ಮಾರ್ಗ ದರ್ಶಿತ್ವವು ಕೇವಲ ವೀರಶೈವರಿಗೇ ಅಲ್ಲ ಜಗತ್ತಿನ ಎಲ್ಲ ಸಮಾಜಗಳಿಗೂ ಸ್ವಾಗತಾರ್ಹ ವಾಗಿರುತ್ತದೆ.

ಶ್ರೀ ಬಸವಣ್ಣನವರ ಬಗ್ಗೆ ನಾವು ಹೀಗೆ ಹೇಳುವದರಿಂದ ಉಳಿದ ಸಮಾಜಗಳಲ್ಲಿ ಸ್ತ್ರೀಯರಿಗೆ ಬೆಲೆಯೇ ಇಲ್ಲವೋ ಎಂಬುವ ಪ್ರಶ್ನೆ ಹೊರಡಲಾರದು. ಯಾಕಂದರೆ ಧಾರ್ಮಿಕ ಕಾರ್ಯಗಳಲ್ಲಿ ಪುರುಷರಿಗೆ ಸಮಾನವಾದ ಅಧಿಕಾರವು ಯಾವ ಸಮಾಜದಲ್ಲಿಯೂ ಇಲ್ಲವೆಂದೇ ನಮ್ಮ ಅಭಿಪ್ರಾಯವು. ಕಳವು, ಹಿಂಸಾ, ಪರದ್ರವ್ಯಾಪಹರಣ, ಪರಸ್ತ್ರೀ ಗಮನ ಮೊದಲಾದ ಕೃತ್ಯಗಳು ಎಲ್ಲಾ ಸಮಾಜಗಳಿಗೂ ಖಂಡನಾರ್ಹವಾದವುಗಳೇ ಆಗಿರುತ್ತವೆ. ಅಂತಹ ನೀಚ ಕೃತ್ಯಗಳನ್ನು ಪ್ರತಿಯೊಂದು ಧರ್ಮದವರು ಖಂಡಿಸಿರು ವದೂ ಸಹಜವಾದುದು.

ಜಾರತ್ವದ ಬಗ್ಗೆ ಶ್ರೀ ಯೇಸುಕ್ರಿಸ್ತರು ತಮ್ಮ ಬೈಬಲ್ಲಿನಲ್ಲಿ ಬಹಳ ಚೆನ್ನಾಗಿ ಖಂಡಿಸಿ ಉತ್ತಮ ವಿಷಯ ಮಂಡಿಸಿರುತ್ತಾರೆ—

"ಜಾರತ್ವವು ಅತಿ ಭಯಂಕರವಾದ ಪಾಪಕೃತ್ಯ. ದೇಹವು ಪವಿತ್ರಾತ್ಮನಿಗೆ ಅನುಕೂಲವಾದ ಗರ್ಭಗುಡಿಯಾಗಿರಬೇಕು ಎಂಬುವ ಬೋಧೆ ಎಲ್ಲಾ ಕಾರ್ಯಗಳನ್ನು ಮಾಡುವದಕ್ಕೆ ನನಗೆ ಸ್ವಾತಂತ್ರ್ಯವೇನೋ ಉಂಟು. ಆದರೆ ಎಲ್ಲವೂ ವಿಹಿತವಾಗಿರು ವದಿಲ್ಲ. ಎಲ್ಲಾ ಕಾರ್ಯಗಳನ್ನು ಮಾಡುವದಕ್ಕೆ ನನಗೆ ಸ್ವಾತಂತ್ರ್ಯವುಂಟು. ಆದರೆ ನಾನು ಯಾವದಕ್ಕೂ ಒಳಗಾಗುವದಿಲ್ಲ. ಭೋಜನ ಪದಾರ್ಥಗಳು ಹೊಟ್ಟೆಗಾಗಿಯೂ ಹೊಟ್ಟೆಯು ಭೋಜನ ಪದಾರ್ಥಗಳಿಗಾಗಿಯೂ ಇದೆ. ದೇವರು ಇದನ್ನೂ ಅವುಗಳನ್ನೂ ತೆಗೆದು ಹಾಕುವನು. ಆದರೂ ದೇಹವು ಹಾದರಕ್ಕೋಸ್ಕರ ಇರುವಂಥಾದ್ದಲ್ಲ, ಕರ್ತನಿಗೋಸ್ಕರವಾಗಿದೆ. ಕರ್ತನು ದೇಹಕ್ಕೋಸ್ಕರ ಇದ್ದಾನೆ. ದೇವರು ಕರ್ತನನ್ನು ಎಬ್ಬಿಸಿದ್ದಲ್ಲದೆ ನಮ್ಮನ್ನು ತಮ್ಮ ಪರಾಕ್ರಮದಿಂದ ಎಬ್ಬಿಸುವನು. ನಿಮ್ಮ ದೇಹಗಳು ಕ್ರಿಸ್ತನ ಅಂಗಗಳಾಗಿವೆ ಎಂಬುದು ನಿಮಗೆ ತಿಳಿಯದೋ? ಹೀಗಿರ ಲಾಗಿ ಕ್ರಿಸ್ತನ ಅಂಗಗಳಾಗುವಂಥವುಗಳನ್ನು ತೆಗೆದುಬಿಟ್ಟು ಸೂಳೆಯ ಅಂಗಗಳಾಗಿ ಮಾಡಬಹುದೋ? ಎಂದಿಗೂ ಮಾಡಬಾರದು. ಸೂಳೆಯ ಸಂಸರ್ಗ ಮಾಡುವವನು ಅವಳೊಂದಿಗೆ ಒಂದೇ ದೇಹವಾಗಿದ್ದಾನೆಂಬುದು ನಿಮಗೆ ತಿಳಿಯದೋ? ಗಂಡಹೆಂಡಿರು ಇಬ್ಬರೂ ಒಂದೇ ಶರೀರವಾಗಿರುವರೆಂದು ದೇವರು ಹೇಳುತ್ತಾನಲ್ಲಾ? ಕರ್ತನ ಸಂಸರ್ಗ

ದಲ್ಲಿರುವವನಾದರೊ ಆತನೊಂದಿಗೆ ಒಂದೇ ಆತ್ಮವಾಗಿದ್ದಾನೆ. ಜಾರತ್ವಕ್ಕೆ ದೂರ ಓಡಿ ಹೋಗಿರಿ. ಮನುಷ್ಯರು ಮಾಡುವ ಇತರ ಪಾಪಕೃತ್ಯಗಳು ದೇಹಕ್ಕೆ ಹೊರಗಾಗಿವೆ. ಆದರೆ ಜಾರತ್ವ ಮಾಡುವವನು ತನ್ನ ದೇಹಕ್ಕೆ ಹಾನಿಕಾರಕವಾದ ಪಾಪವನ್ನು ಮಾಡುತ್ತಾನೆ. ದೇವರಿಂದ ದೊರಕಿ ನಿಮ್ಮೊಳಗೆ ನೆಲೆಗೊಂಡಿರುವ ಪವಿತ್ರಾತ್ಮನಿಗೆ ನಿಮ್ಮ ದೇಹವು ಗರ್ಭಗುಡಿಯಾಗಿದೆಯೆಂಬುವದು ನಿಮಗೆ ತಿಳಿಯದೋ? ನೀವು ನಿಮ್ಮ ಸ್ವಂತ ಸ್ವತ್ತಲ್ಲ. ನೀವು ಕ್ರಯಕ್ಕೆ ಕೊಳ್ಳಲ್ಪಟ್ಟವರು. ಆದಕಾರಣ ನಿಮ್ಮ ದೇಹದಲ್ಲಿ ದೇವರ ಪ್ರಭಾವವನ್ನು ಪ್ರಕಾಶಪಡಿಸಿರಿ."

ಮೇಲೆ ಬರೆದ ಉಪದೇಶವು ಮಾನವರಿಗೊಳ್ಳೇ ಮಾರ್ಗದರ್ಶಕವಾದುದಾಗಿದೆ. ವೀರಶೈವರಲ್ಲಿ ದೀಕ್ಷೆಯ ಮೂಲಕ ಅಂಗೇಂದ್ರಿಯಂಗಳೆಲ್ಲ ಲಿಂಗೇಂದ್ರಿಯಗಳಾಗುವದರಿಂದ ಅಂತಹ ಪವಿತ್ರವಾದ ಶರೀರವನ್ನು ವ್ಯಭಿಚಾರಕ್ಕೆ ಉಪಯೋಗಿಸುವವನು ಪರಮ ಪಾತಕಿಯಾಗುವನಲ್ಲದೆ ಅವನಿಗೆ ಅಷ್ಟಾವರಣಗಳೂ, ಷಟ್‌ಸ್ಥಲಗಳೂ, ಪಂಚಾಚಾರಗಳೂ ಅಳವಡಲಾರವು. ಶ್ರೀ ಬಸವಣ್ಣನವರು ದೇಹವೇ ದೇಗುಲವೆಂದು ಅಂದಿರುವರು. ಇಂತಹ ಪವಿತ್ರವಾದ ಶರೀರವನ್ನು ವ್ಯಭಿಚಾರಕೃತ್ಯಕ್ಕೆ ಉಪಯೋಗಿಸುವದು ಪಾಮರನ ಕಾರ್ಯವಲ್ಲದೆ ಲಿಂಗಾಂಗಿಯ ಕಾರ್ಯವಲ್ಲ.

ಬಸವಣ್ಣನವರು ಸ್ತ್ರೀಸಮಾಜಕ್ಕೆ ಸಮಾನ ಸ್ವಾತಂತ್ರ್ಯವನ್ನು ಕೊಟ್ಟು ಲೋಕದಲ್ಲಿ ಕೀರ್ತಿಕಾಯರಾಗಿರುತ್ತಾರೆ. ಮೇಲೆ ಬರೆದ ಕ್ರಿಸ್ತನ ಉಪದೇಶದಂತೆ ಬಸವಣ್ಣನವರೂ ಈ ವಿಷಯದಲ್ಲಿ ಬಹಳ ಸೂಕ್ಷ್ಮವಾಗಿ ಹೇಳಿರುತ್ತಾರೆ. ಅದರಂತೆ ನಡೆದುಕೊಂಡು ಸ್ತ್ರೀಪುರುಷರಿಬ್ಬರೂ ಧಾರ್ಮಿಕ ಕೃತ್ಯದಲ್ಲಿ ಸರಿಸಮಾನರಾಗಿ ಶ್ರೀ ಬಸವಣ್ಣನವರು ಹೇಳಿದಂತೆ ಕೃತಿಯಲ್ಲಿ ತರುವದೇ ಪ್ರತಿಯೊಬ್ಬರ ಕರ್ತವ್ಯವಾಗಿರುತ್ತದೆ.

## ಹದಿನೆಂಟನೆಯ ಪ್ರಕರಣ

### ಬಸವಣ್ಣನವರೂ ಪವಾಡಗಳೂ

ಶ್ರೀ ಬಸವಣ್ಣನವರು ಅನಂತ ಪವಾಡಗಳನ್ನು ಮಾಡಿ ಲೋಕದ ಮಹಾನುಭಾವರಲ್ಲಿ ಅದ್ವಿತೀಯರಾಗಿ ಕಾರುಣಿಕ ಪುರುಷರಾಗಿರುತ್ತಾರೆ. ಇವರು ೮೮ ಪವಾಡಗಳನ್ನು ಮಾಡಿರುವದಾಗಿ ಅನೇಕ ವೀರಶೈವ ಗ್ರಂಥಗಳಲ್ಲಿ ಪ್ರಮಾಣಗಳು ಸಿಗುತ್ತವೆ. ಇಂತಹ ಪವಾಡಗಳ ವರ್ಣನೆಯು ಪುರಾಣಗಳಲ್ಲಿ ಹೇರಳವಾಗಿ ಬರುತ್ತದೆ. ಶ್ರೀ ಶಂಕರಾಚಾರ್ಯರ ಪರಕಾಯಪ್ರವೇಶ ಮಾಡಿದ್ದಾಗಲೀ, ಶ್ರೀ ಮಧ್ವಾಚಾರ್ಯರು ಹಡಗು ಮುಳುಗುವಾಗ ತಮ್ಮ ಕಾವಿಯಶಾಟಿಯನ್ನು ಜಾಡಿಸಿ ಹಡಗನ್ನು ನಿಲ್ಲಿಸಿದರೆಂಬುವದಾಗಲೀ, ರಾಮದಾಸಸ್ವಾಮಿಗಳು ಗಂಡಸತ್ತವಳಿಗೆ ಅಷ್ಟಪುತ್ರಾ ಸೌಭಾಗ್ಯವತಿಯಾಗು ಎಂದು ಆಶೀರ್ವಾದ ಮಾಡಿದ್ದಾಗಲೀ, ಜ್ಞಾನದೇವರು ಕೋಣನಿಂದ ವೇದಗಳನ್ನು ಅನ್ನಿಸಿದ್ದಾಗಲೀ, ಏಸುಕ್ರಿಸ್ತನು ಸತ್ತವರನ್ನು ಬದುಕಿಸಿದ್ದಾಗಲೀ, ಇದರಂತೆಯೇ ಶ್ರೀ ಬುದ್ಧ, ಮಹಾವೀರ, ಪೈಗಂಬರರೇ ಮೊದಲಾದ ಮಹಾನುಭಾವರ ಚರಿತ್ರೆಗಳಲ್ಲಿ ನಾವು ಬೇಕಾದಷ್ಟು ಪವಾಡಗಳನ್ನು ಕಾಣಬಹುದು. ಕಬೀರದಾಸರು ಸತ್ತಮೇಲೆ ಅವರ ಹೆಣದ ಸಲುವಾಗಿ ಹಿಂದೂಗಳೂ ಮುಸಲ್ಮಾನರೂ ತಮ್ಮತಮ್ಮೊಳಗೆ ಬಡಿದಾಡಲು ಅವರ ಶರೀರವು ಮಲ್ಲಿಗೆಯ ಹೂವುಗಳಾಗಿದ್ದವಂತೆ. ಹೀಗೆಯೇ ಸಾವಿರಾರು ಉದಾಹರಣೆಗಳನ್ನು ಭರತಖಂಡದ ದಿವ್ಯಜ್ಯೋತಿಗಳ ಚರಿತ್ರೆಯಲ್ಲಿ ಕಾಣಬಹುದು. ಇಂತಹ ಅಮಾನುಷ ಕಾರ್ಯಗಳು ಅವತಾರಿ ಪುರುಷರಿಗೆ ಅನಿವಾರ್ಯವಾಗಿ ಗಂಟುಬೀಳುತ್ತವೆ. ಇತಿಹಾಸಕಾರರು ಒಪ್ಪಲಿ ಅಥವಾ ಒಪ್ಪದಿರಲಿ ಅತ್ತಕಡೆಗೆ ಜನಗಳ ಲಕ್ಷ್ಯವಿರುವುದಿಲ್ಲ. ಅವರ ಪ್ರಭಾವಕ್ಕೊಳಗಾಗಿ ಅವುಗಳಲ್ಲಿ ಅವರಿಗೆ ತುಂಬಾ ವಿಶ್ವಾಸವು ಹುಟ್ಟಿ ತನ್ಮಯರಾಗಿ ಧ್ಯಾನಿಸುತ್ತಾರೆ. ಇದು ಎಲ್ಲ ಕಾಲಗಳಲ್ಲಿ ಎಲ್ಲ ದೇಶಗಳಲ್ಲಿಯೂ ಪ್ರಚಲಿತವಾದ ವಿಷಯವಾಗಿರುತ್ತದೆ. ಪವಾಡಗಳೆಂದರೆ ತಮ್ಮಿಂದಾಗದ ದೊಡ್ಡ ಕೆಲಸವನ್ನು ಯಾರಾದರೂ ಮಾಡಿದರೆ ಅದಕ್ಕೆ ಪವಾಡವೆಂದು ಜನಗಳು ಅನ್ನುತ್ತಾರೆ.

ಬಸವಣ್ಣನವರ ೮೮ ಪವಾಡಗಳಲ್ಲಿ ೬೪ ಪವಾಡಗಳನ್ನು ಶಿಂಗಿರಾಜಕವಿಯು ತನ್ನ ಶಿಂಗಿರಾಜ ಪುರಾಣದಲ್ಲಿ ಬಹಳ ಹೃದಯಂಗಮವಾಗಿಯೂ, ರಸವತ್ತಾಗಿಯೂ ವರ್ಣಿಸಿರುತ್ತಾನೆ. ಶಿಂಗಿರಾಜನು ವೈಷ್ಣವ ಮತದವನೂ, ಕವಿಯೂ, ಬಿಜ್ಜಳ ಚಕ್ರವರ್ತಿಯ ಮಾಂಡಲಿಕ ರಾಜನೂ ಆಗಿದ್ದನು. ಇವನು ಬಸವಣ್ಣನವರ ಕೃಪೆಯಿಂದ ವೀರಶೈವ ಮತದೀಕ್ಷೆಯನ್ನು ತೆಗೆದುಕೊಂಡು ಅವರ ೮೮ ಪವಾಡಗಳಲ್ಲಿ ೬೪ ಪವಾಡಗಳನ್ನು ಮಾತ್ರ ಬರೆದಿರುತ್ತಾನೆ.

ಶ್ರೀ ಬಸವಣ್ಣನವರು ತಮ್ಮ ವಚನದಲ್ಲಿ—

"ಎಂಭತ್ತೆಂಟು ಪವಾಡವ ಮೆರೆದು ಹಗರಣದ ಚೋಹದಂತಾಯಿತೆನ್ನ ಭಕ್ತಿ, ತನುವಿನೊಳಗೆ ಮನ ಶಿಲುಕದೆ ಮನದೊಳಗೆ ತನು ಶಿಲುಕದೆ ತನು ಅಲ್ಲಮನಲ್ಲಿ ಶಿಲುಕಿತ್ತು, ಮನ ಚನ್ನಬಸವಣ್ಣನಲ್ಲಿ ಶಿಲುಕಿತ್ತು, ನಾನೇತರಲ್ಲಿ ನೆನೆವೆನಯ್ಯಾ ಕೂಡಲಸಂಗಮದೇವಾ."

ಮತ್ತು ಶೂನ್ಯಸಂಪಾದನೆಯಲ್ಲಿ ಶ್ರೀ ಬಸವಣ್ಣನವರು ತಮ್ಮ ಲಿಂಗಾಂಗಸಮರಸೈಕ್ಯ ವೆಂತೆಂದು ಬೆಸಗೊಂಬ ಪ್ರಸ್ತಾವನದ ವಚನ—

> "ದೇವದೇವ ಮಹಾಪ್ರಸಾದ ಅವಧರಿಸು ದೇವ, ಎನ್ನ ಬಿನ್ನಪವ ಕಾಯದ ಮಾಯದ ಸಡಗರದಲ್ಲಿ ಹುಟ್ಟಿಸಿದಿರಿ, ಎನ್ನ ಆಗು ನಿಮ್ಮ ಲೀಲಾ ವಿನೋದ. ಆ ಕಾಯದ ಮಾಯೆಯ ತಲೆಯ ಚಿವುಟಿ ಶ್ರೀ ಗುರು ಕಾರುಣ್ಯವ ಮಾಡಿ ಗುರುಲಿಂಗಜಂಗಮದ ತ್ರಿವಿಧ ಭಕ್ತಿಯ ಘನವ ತೋರಿಸಿ ನಿಮ್ಮ ಪಾದೋದಕಪ್ರಸಾದವನಿತ್ತು ರಕ್ಷಿಸಿದಿರಿ. ಅದು ನಿಮ್ಮ ಲೀಲಾವಿನೋದ ಪರವಾದಿ ಬಿಜ್ಜಳ ಒರೆಗಲ್ಲಾದಲ್ಲಿ ಮುನ್ನೂರಾ ಅರವತ್ತು ಸತ್ತ ಪ್ರಾಣವನೆತ್ತಿ ಮೂವತ್ತಾರು ಕೊಂಡೆಯರ ಪರಿಹರಿಸಿ ಎಂಭತ್ತೆಂಟು ಪವಾಡವ ಮೆರೆದಿರಿ ಅದು ನಿಮ್ಮ ಲೀಲಾವಿನೋದ. ಎನ್ನ ಮನದ ಮಲಿನವ ತೊಳೆಯಲೆಂದು ಬಂದು ಶೂನ್ಯಸಿಂಹಾಸನದ ಮೇಲೆ ಮೂರ್ತಿಗೊಂಡು ನಿಮ್ಮ ನಿಜಮಹಿಮೆಯನೆಲ್ಲ ಪ್ರಮಥರ ಮುಂದೆ ತೋರಿ ಎನ್ನ ಪಾವನವ ಮಾಡಿ ಷಟ್‌ಸ್ಥಲಮಂ ಎನ್ನ ಸರ್ವಾಂಗದಲ್ಲಿ ಪ್ರತಿಷ್ಠಿಸಿ ಎನ್ನ ನಿಮ್ಮಂತೆ ಮಾಡಿದಿರಿ ಅದು ನಿಮ್ಮ ಲೀಲಾವಿನೋದ. ಕೂಡಲಸಂಗಮದೇವ ಎನ್ನ ಮರ್ಮದ ಸಕೀಲ ನೀವೇ ಬಲ್ಲರಾಗಿ ಎನಗೊಮ್ಮೆ ತಿಳುಹಿ ಕೊಟ್ಟು ಎನ್ನನುಳುಹಿಕೊಳ್ಳ ಪ್ರಭುವೇ?"

ಶ್ರೀ ಬಸವಣ್ಣನವರು ತಮ್ಮ ಅವತಾರಕೃತ್ಯವನ್ನು ಮುಗಿಸುವ ಕಾಲದಲ್ಲಿ ಪ್ರಭುದೇವರಿಗೆ ಬಿನ್ನವಿಸಿಕೊಂಡ ವಚನವಿದು. ಅವರೇ ಈ ವಚನವನ್ನು ಹೇಳಿದ್ದಾರೆ. 'ಹೊಗಳಿ ಹೊಗಳಿ ಹೊನ್ನಶೂಲಕಿಕ್ಕಿದರು' ಎನ್ನುವ ಬಸವಣ್ಣನವರು ತಾವೂ ಮತ್ತು ಪ್ರಭುಗಳೂ ಅಗಲುವ ಸಮಯ ಬಂದಾಗ ಹಿಂದೆ ನಡೆದ ವೃತ್ತಾಂತಗಳನ್ನೆಲ್ಲ ಹೇಳಬೇಕಾಯಿತು. ಅದರಲ್ಲಿ ಅವರು ೩೬೦ ಸತ್ತ ಪ್ರಾಣಿಗಳನ್ನು ಉದ್ಧಾರ ಮಾಡಿ, ೩೬ ಜನ ಕೊಂಡೆಯರು ಅಂದರೆ ಚಾಡಿ ಹೇಳುವವರನ್ನೆಲ್ಲ ಪರಿಹರಿಸಿ, ೮೮ ಪವಾಡಗಳಾದವು ಇದೆಲ್ಲ ತಮ್ಮ ದಯೆಯಿಂದ ಆದವೆಂದು ಪ್ರಭುದೇವರಿಗೆ ಅತ್ಯಂತ ವಿನಯಯುಕ್ತರಾಗಿ ಹೇಳಿರುತ್ತಾರೆ. ಇದು ಸಹಜವಾದ ಮಾತಾಗಿರುತ್ತದೆ.

ಇಬ್ಬರು ಒಳ್ಳೆಯ ಸ್ನೇಹಿತರು ಬಹಳ ದಿನಗಳವರೆಗೆ ಕೂಡಿಕೊಂಡಿದ್ದು ಮಹತ್ಕಾರ್ಯಗಳನ್ನು ಮಾಡಿ ಅಗಲುವಾಗ ನಮ್ಮಿಬ್ಬರ ಭೆಟ್ಟಿಯು ಇದೇ ಕೊನೆಯದಾಗಿದೆ ಎಂದು ತಿಳುವಳಿಕೆ ಆದಾಗ್ಗೆ ತಮ್ಮತಮ್ಮೊಳಗೆ ಹಿಂದೆ ನಡೆದ ಸುಖದುಃಖಗಳನ್ನು ಬಿಚ್ಚಿ ಮಾತನಾಡುವುದು ಲೋಕರೂಢಿಯಾಗಿರುತ್ತದೆ. ಪ್ರಭುದೇವರು ಮತ್ತು ಬಸವಣ್ಣನವರಾದರೋ ಒಂದು ಪ್ರಚಂಡತರವಾದ ಧಾರ್ಮಿಕ ಕ್ರಾಂತಿಗಾಗಿ ಗುರುಶಿಷ್ಯರೆಂಬುವದನ್ನು ಲೋಕಕ್ಕೆ ತೋರಿಸಿ ಸಾಕ್ಷಾತ್ ಭಗವಂತನ ಚಿತ್ಕಳೆಯ ಸ್ವರೂಪದಿಂದ ಅವತಾರ ಮಾಡಿದವರು ಇಂತಹ ಅದ್ವಿತೀಯರಾದ ಇಬ್ಬರು ಮಹಾಪುರುಷರು ಪರಸ್ಪರ ವಿಯೋಗವನ್ನು ಹೊಂದುವ ಕಾಲದಲ್ಲಿ ಬಸವಣ್ಣನವರ ಹೃದಯದಿಂದ ಬಂದ ಕರುಣಾಜನಕಗಳಾದ ಮಾತುಗಳಾಗಿವೆ.

ಈ ೮೮ ಪವಾಡಗಳಲ್ಲಿ ಯಾವದು ಮೊದಲು ಯಾವದು ಹಿಂದಿನದು ಎಂಬುವ ಕ್ರಮವೇನೂ ಇರುವದಿಲ್ಲ. ಒಂದೆರಡು ಗ್ರಂಥಗಳಲ್ಲಿ ಪ್ರತಿನಿತ್ಯ ೮೮ ಪವಾಡಗಳನ್ನು

ಮಾಡುತ್ತಿದ್ದರೆಂತಲೂ ಬರೆಯಲಾಗಿದೆ. ಅದು ಏನೇ ಇರಲಿ ಬಸವಣ್ಣನವರು ೮೮ ಪವಾಡಗಳನ್ನು ಮಾಡಿದ್ದುದು ಮಾತ್ರ ನಿಜವಾದುದಾಗಿದೆ. ಸಂಖ್ಯೆಯ ಪರಿಮಿತಿಯು ಅವರ ವಾಣಿಯಿಂದಲೇ ಉದ್ಭವಿಸಿದುದಾಗಿರುತ್ತದೆ. ಶಿಂಗಿರಾಜನಾದರೂ ತನ್ನ ಪುರಾಣದಲ್ಲಿ ಬರೆಯಲಿಕ್ಕೆ ಬಸವಣ್ಣನವರ ಎಲ್ಲ ಪವಾಡಗಳು ಸಿಗಲಿಲ್ಲವಲ್ಲಾ, ಕೇವಲ ೬೪ ಮಾತ್ರ ಸಿಕ್ಕವಲ್ಲಾ ಎಂದು ವ್ಯಸನ ಪಡುತ್ತಾ ಕ್ರಿಯಾಪ್ರಕೃತಿಚೇಷ್ಟಾನಿಮಿತ್ತವಾಗಿ ೬೪ ಪವಾಡಗಳನ್ನೂ, ಭಾವಪ್ರಕೃತಿಚೇಷ್ಟಾನಿಮಿತ್ತವಾಗಿ ೨೪ ಪವಾಡಗಳನ್ನೂ ಮಾಡಿರುವರು. ಆದ್ದರಿಂದ ಬಸವಣ್ಣನವರ ಚರಿತ್ರೆಯು ೮೮ ಪವಾಡಗಳಿಂದ ಕೂಡಿದ್ದಾಗಿರುತ್ತದೆಂದು ಸ್ಪಷ್ಟವಾಗಿ ಹೇಳಿರುತ್ತಾನೆ. ಬಸವಣ್ಣನವರ ಮೇಲಿನ ಎರಡೂ ವಚನಗಳಿಗೆ ಸರಿಯಾಗಿ ಶಿಂಗಿರಾಜನ ಹೇಳಿಕೆಯು ಇರುತ್ತದೆ. ಎಂಭತ್ತೆಂಟು ಪವಾಡಗಳನ್ನು ಮಾಡಿದ ನನ್ನ ಭಕ್ತಿಯು ವ್ಯರ್ಥವಾಗಿ ಹೋಯಿತು. ಯಾಕೆಂದರೆ "ತನುವಿನೊಳಗೆ ಮನ ಶಿಲುಕಿರುವದಿಲ್ಲ, ಮನದೊಳಗೆ ತನು ಶಿಲುಕಿರುವದಿಲ್ಲ, ತನು ಅಲ್ಲಮನಲ್ಲಿ ಮನ ಚನ್ನಬಸವಣ್ಣನಲ್ಲಿ ಶಿಲುಕಿತ್ತು ದೇವರದೇವನಾದ ಕೂಡಲಸಂಗಮದೇವಾ ನಾನು ಹೇಗೆ ನೆನೆವೆನಯ್ಯಾ" ಎಂದು ಸಂಗಮನಾಥದೇವನಿಗೆ ಶರಣುಹೊಕ್ಕಿರುತ್ತಾನೆ.

ಬಸವಣ್ಣ, ಚನ್ನಬಸವಣ್ಣ, ಅಲ್ಲಮಪ್ರಭು ಇವರುಗಳು ವೀರಶೈವರ ತ್ರಿಮೂರ್ತಿಗಳಾಗಿರುತ್ತಾರೆ. ಇವರು ಪರಸ್ಪರ ಹೇಗೆ ನಡೆದುಕೊಂಡಿರುತ್ತಾರೆಂಬುವದು ಬಹಳ ವಿಲಕ್ಷಣವಾದ ರೀತಿಯಾಗಿರುತ್ತದೆ. ಇವರಲ್ಲಿ ಯಾರು ಹೆಚ್ಚಿನವರೋ ಅಥವಾ ಯಾರು ಕಡಿಮೆಯವರೋ ಹೇಳಲಿಕ್ಕೆ ಬರುವಂತಿರುವದಿಲ್ಲ. ಒಂದು ಸಂದರ್ಭದಲ್ಲಿ ಬಸವಣ್ಣನವರು ಅವರಿಬ್ಬರ ಮೇಲ್ಮೆಯನ್ನು ಕೊಂಡಾಡಿರುತ್ತಾರೆ; ಮತ್ತೊಂದು ಸಮಯದಲ್ಲಿ ಅವರಿಬ್ಬರೂ ಬಸವಣ್ಣನವರಿಂದಲೇ ನಾವು ಮುಕ್ತರೆಂದುಸುರಿದ್ದಾರೆ. ಈ ತ್ರಿಮೂರ್ತಿಗಳ ನಡೆನುಡಿಗಳು ಲೋಕವಿಲಕ್ಷಣವಾಗಿಯೂ, ಲೋಕದ ಜನರಿಗೆ ಮಾರ್ಗದರ್ಶಕವಾದವುಗಳಾಗಿಯೂ ಇರುತ್ತವೆ. ಅವರು ಒಬ್ಬರಿಗೊಬ್ಬರು ಹೇಗೆ ಗೌರವಾದರಗಳನ್ನು ಕೊಡುತ್ತಿದ್ದರೆಂಬುವದು ಶೂನ್ಯಸಂಪಾದನೆಯಿಂದ ಚೆನ್ನಾಗಿ ವ್ಯಕ್ತವಾಗುತ್ತದೆ.

ಇಂತಹ ಅಮಾನುಷ ಕೃತ್ಯಗಳನ್ನೆಸಗಿದ ಬಸವಣ್ಣನವರು ಅದು ತಮ್ಮ ಲೀಲಾ ವಿನೋದವೆಂದು ಅದರ ಭಾರವನ್ನೆಲ್ಲ ಪ್ರಭುದೇವರಿಗೆ ಅರ್ಪಿಸಿರುತ್ತಾರೆ. ಇದಕ್ಕೆಲ್ಲ ತಮ್ಮನುಗ್ರಹವೇ ಕಾರಣ. ನಾನು ಅದಕ್ಕೆ ಕಾರಣನಲ್ಲವೆಂಬುವದೇ ಬಸವಣ್ಣನವರ ವಾಣಿಯ ಮಥಿತಾರ್ಥವಾಗಿರುತ್ತದೆ. ಬಸವಣ್ಣನವರ ಪವಾಡಗಳ ವರ್ಣನೆಯು ಒಂದಿಲ್ಲೊಂದು ರೀತಿಯಿಂದ ವೀರಶೈವ ಪುರಾಣಾದಿಗಳಲ್ಲಿ ವಿಶೇಷವಾಗಿ ಬರುತ್ತದೆ. ಅವುಗಳನ್ನೆಲ್ಲ ಇಲ್ಲಿ ಹೇಳುವ ಉದ್ದೇಶವಿರುವದಿಲ್ಲ; ಕೆಲವುಗಳನ್ನು ಮಾತ್ರ ಇಲ್ಲಿ ಮಾದರಿಗಾಗಿ ತೋರಿಸಿರುತ್ತೇವೆ.

ಪವಾಡಗಳ ವಿಷಯದಲ್ಲಿ ಜನಸಾಮಾನ್ಯರಲ್ಲಿ ಅತಿಶಯವಾದ ಭಕ್ತಿಯಿರುತ್ತದೆ. ಅಂತಹ ಜನಗಳಿಗೆ ಪವಾಡಗಳ ಮರ್ಮವು ಗೊತ್ತಾಗಬೇಕಾಗುತ್ತದೆ.

(೧) ಬಸವಣ್ಣನವರು ಕಲ್ಯಾಣಪಟ್ಟಣವನ್ನು ಬಿಟ್ಟು ಕಪ್ಪಡಿಯ ಸಂಗಮನಾಥನಲ್ಲಿಗೆ ಬರುವಾಗ್ಗೆ ಒಂದು ಮಹತ್ವದ ಘಟನೆಯು ನಡೆಯಿತು. ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯರ ಶಿಷ್ಯರಾದ ದೇವಣ್ಣನವರು ಪ್ರತಿನಿತ್ಯದಲ್ಲಿಯೂ ತಮ್ಮ ಲಿಂಗಕ್ಕೆ ತಮ್ಮ ಎರಡೂ ಕಣ್ಣುಗಳನ್ನರ್ಪಿಸಿ ಭಕ್ತಿಯಿಂದ ಪೂಜಿಸುವದಕ್ಕೋಸ್ಕರ

ಶ್ರೀ ಮಲ್ಲಿಕಾರ್ಜುನಸ್ವಾಮಿಯಿಂದ ಊರ್ಧ್ವನೇತ್ರವನ್ನು ಪಡೆದುಕೊಂಡು ನಿತ್ಯನೇಮ ಶಿವಲಿಂಗಪೂಜೆಗೆ ತಮ್ಮ ಎರಡೂ ಕಣ್ಣುಗಳನ್ನು ಅರ್ಪಿಸುತ್ತಿದ್ದರು. ಮತ್ತು ತಮ್ಮ ಕಣ್ಣುಗಳನ್ನು ಪಡೆದುಕೊಂಡು ಮೆರೆಯುತ್ತಿದ್ದರು. ಇಂತಹ ದೇವಣ್ಣನವರಿಗೆ ಗುರುವಾಗಿರುವ ಮಲ್ಲಿಕಾರ್ಜುನ ಪಂಡಿತಾರಾಧ್ಯರು ತೆಲುಗಿನಲ್ಲಿ ದೊಡ್ಡ ಪಂಡಿತರಾಗಿದ್ದರು. ಇವರು ತೆಲುಗು ಭಾಷೆಯ ೪೦ ಗ್ರಂಥಗಳನ್ನು ರಚಿಸಿ ಆಂಧ್ರ ವಾಙ್ಮಯಕ್ಕೆ ಆಧಾರ ಪುರುಷರೂ ಆಗಿರುತ್ತಾರೆ. ತೆಲುಗಿನಲ್ಲಿ ಪರಶಿವನ ಸ್ತೋತ್ರಗಳನ್ನು ಮಾಡಿರುತ್ತಾರೆ. ಆಗ ಜನಗಳು ಶ್ರೀ ಪಂಡಿತಾರಾಧ್ಯರು ಕನ್ನಡ ಭಾಷೆಯಲ್ಲಿ ಸ್ತೋತ್ರಗಳನ್ನು ಮಾಡಿದ್ದರೆ ಬಹಳ ಚೆನ್ನಾಗಿ ಆಗುತ್ತಿತ್ತೆಂದು ಮಾತನಾಡುತ್ತಿದ್ದರು. ಆದರೆ ಇವರಿಗೆ ಕನ್ನಡದಲ್ಲಿ ಬರೆಯುವ ಪಾಂಡಿತ್ಯವಿರಲಿಕ್ಕಿಲ್ಲವೆಂತಲೂ ಅನ್ನುತ್ತಿದ್ದರು.

ಆದರೆ ಇಷ್ಟರಲ್ಲಿಯೇ ಕಲ್ಯಾಣಪಟ್ಟಣದೊಳಗೆ ಬಸವಣ್ಣನವರು ನಿರೂಪಿಸಿದ ಕನ್ನಡ ವಚನಗಳನ್ನು ನಿತ್ಯದಲ್ಲಿಯೂ ಪಂಡಿತಾರಾಧ್ಯರು ಕೇಳಿ ಕೇಳಿ ಅತಿ ಭಕ್ತಿಯನ್ನು ತಾಳಿ ಆ ಬಸವಣ್ಣನವರ ವಚನಗಳನ್ನು ಕೇಳಿದ ಮಾತ್ರದಿಂದಲೇ ಅವರಿಗೆ ಕನ್ನಡ ಭಾಷೆಯು ಬಂದಿತು. ಆಗ ಪಂಡಿತಾರಾಧ್ಯರು ಕನ್ನಡ ಭಾಷೆಯಲ್ಲಿ ಶಿವಾಧಿಕ್ಯವನ್ನು ರಚಿಸಿದರು. ಅದನ್ನು ಒಂದು ಓಲೆಯಲ್ಲಿ ಬರೆದು, ಆ ಓಲೆಯನ್ನು ವಿಭೂತಿಯ ಕರಡಿಗೆಯಲ್ಲಿಟ್ಟು, ಆ ಕರಡಿಗೆಯನ್ನು ಒಬ್ಬ ಶಿವಶರಣನ ಕೈಯಲ್ಲಿ ಕೊಟ್ಟು, 'ಅಯ್ಯಾ ಶರಣನೇ, ಶ್ರೀ ಬಸವೇಶ್ವರರಿಗೆ ನನ್ನ ಶರಣಾರ್ಥಿಯನ್ನು ಹೇಳಿ ಈ ಓಲೆಯನ್ನು ಮುಟ್ಟಿಸಬೇಕು' ಎಂದು ಹೇಳಿದರು. ಅದನ್ನು ಆ ಶರಣನು ತಂದು ಬಸವೇಶ್ವರರಿಗೆ ಕೊಡಲು, ಅವರು ಅದನ್ನು ಓದಿನೋಡಿ, ಶರಣು ಶರಣೆಂದು ಅದೇ ಕರಡಿಗೆಯಲ್ಲಿ ತಾವು ಅಚ್ಚಗನ್ನಡನುಡಿಯಲ್ಲಿ ಬರೆದಿರ್ದ ಪಂಡಿತರ ಸ್ತೋತ್ರವನ್ನು ಇರಿಸಿ, ಆ ಪೆಟ್ಟಿಗೆ ತುಂಬ ಭಸ್ಮವನ್ನಿರಿಸಿ ಪುನಃ ಕಳುಹಿಸಿಕೊಟ್ಟರು. ಆಗ ಪಂಡಿತಾರಾಧ್ಯರು ಆ ಶರಣನು ತಂದ ವಿಭೂತಿಯ ಕರಡಿಗೆಯನ್ನು ಬಿಚ್ಚಿ ಒಳಗಿರುವ ಭಸ್ಮವನ್ನು ಹಣೆಗೆ ಧರಿಸಿಕೊಂಡು ಮತ್ತೆ ಮತ್ತೆ ಬಸವ ನಾಮವ ಸ್ಮರಿಸುತ್ತ ತಮ್ಮ ನಾಲಿಗೆಗೆ ಬಸವ ನಾಮವನ್ನೇ ರಸಾಯನವನ್ನಾಗಿ ಮಾಡಿಕೊಂಡು ಆ ಪೆಟ್ಟಿಗೆಯಲ್ಲಿರುವ ಓಲೆಯನ್ನು ನೋಡಿದ ಕೂಡಲೇ ಕನ್ನಡದಲ್ಲಿ ಪಾಂಡಿತ್ಯವು ಬಂದಿತು. ಆಗ ಶ್ರೀ ಪಂಡಿತಾರಾಧ್ಯರು ಶಿವನ ಪಾವನ ಸ್ವರೂಪರಾದ ಬಸವಣ್ಣನವರ ಸ್ತುತಿಯನ್ನು ಅಚ್ಚಗನ್ನಡದಲ್ಲಿಯೂ, ಸಂಸ್ಕೃತದಲ್ಲಿಯೂ ಬರೆದು ಆ ಬಸವತತ್ವವನ್ನು ಮೆರೆಯಿಸಿದರು. ಇಂತಹ ಪಂಡಿತಶ್ರೇಷ್ಠರಾದ ಪಂಡಿತಾರಾಧ್ಯರಿಂದ ಹೊಗಳಿಸಿಕೊಳ್ಳತಕ್ಕ ಬಸವೇಶ್ವರನೇ ಧನ್ಯನು. ಶ್ರೀ ಬಸವಣ್ಣನವರ ಕೃಪಾದೃಷ್ಟಿ ಮಾತ್ರದಿಂದ ಕನ್ನಡ ಭಾಷಾ ಪಾಂಡಿತ್ಯ ಪಡೆದ ಪಂಡಿತಾರಾಧ್ಯರೇ ಧನ್ಯರೆಂದು ಜನಗಳು ಮಾತನಾಡುತ್ತಲಿದ್ದರು. ಕುರುಬನಾದ ಕಾಳಿದಾಸನಿಗೆ ದೇವಿಯ ಆಶೀರ್ವಾದವಾದ ಕೂಡಲೇ ಕವಿಶ್ರೇಷ್ಠನಾಗಿ ಜಗತ್ತಿನಲ್ಲಿ ಗೌರವ ಪಡೆದ ಇತಿಹಾಸವನ್ನು ನಾವು ಓದುತ್ತಿರುವುದಿಲ್ಲವೇ?

(೨) ಚರರೂಪನಿಂದ ಬಂದ ಶಿಶುವನ್ನು ಪ್ರತ್ಯಕ್ಷ ಮಾಡಿಕೊಂಡ ಪವಾಡ— ಲೋಕದಲ್ಲಿ ಭಕ್ತಿಯ ಮೇಲ್ಮೆಯಿಂದ ಮೆರೆಯುತ್ತಿದ್ದ ಬಸವಣ್ಣನವರನ್ನು ಪರೀಕ್ಷಿಸಬೇಕೆಂದು ಶಿವನೇ ಜಂಗಮನ ರೂಪ ತಾಳಿ, ಬಸವನು ಬೇಡಿದ ಜಂಗಮರಿಗೆ ಬೇಡಿದ ಪದಾರ್ಥಗಳನ್ನು ಹೇಗೆ ಕೊಡುತ್ತಾನೋ ನೋಡೋಣವೆಂದು ಬಸವಣ್ಣನವರ ಮುಂದೆ

ಬಂದು ಕುಳಿತುಕೊಂಡು, ಹೊಗಳುತ್ತ, ಹಿಗ್ಗುತ್ತ, ಕುಲುಕುಲು ನಗುತ್ತ, 'ಎಲೈ ಬಸವನೇ, ಜಂಗಮನು ಬೇಡಿದ ಪದಾರ್ಥವನ್ನು ನೀನು ಕೊಡುತ್ತೀಯೆಂದು ಲೋಕದಲ್ಲೆಲ್ಲ ವಾರ್ತೆಯಿದೆ. ನಾನು ಈಗ ಒಂದು ಪದಾರ್ಥವನ್ನು ಬೇಡುತ್ತೇನೆ ಕೊಡುತ್ತೀಯಾ?' ಎಂದೆನಲು, 'ಗುರುವೇ ಆಗಲಿ, ಅಪ್ಪಣೆಯಾಗಬೇಕು' ಎನಲು, 'ಪೂರ್ವದ ಮಹನೀಯರು ದಾಸೋಹವನ್ನು ಮಾಡಿ ಮುಕ್ತರಾಗಿದ್ದಾರೆ. ನೀನು ಅವರಂತೆ ನಡೆಯದೆ ಅನೇಕ ಪ್ರಕಾರವಾಗಿ ನಡೆಯುವದರಿಂದ ನೀನು ಮಾಡುವ ದಾಸೋಹ ಭೇದವಾಗಿ ನಿನ್ನ ಮನಸ್ಸು ಹಳೆಯದಾಯಿತು. ನಿನ್ನ ತನು ನಿನ್ನ ಧನ ಹಳೆಯವಾದವು. ಆದ್ದರಿಂದ ಅದು ನನಗೆ ಬೇಕಾಗಿಲ್ಲ. ನಾನು ಬೇಡುವ ವಸ್ತುವನ್ನು ಇದುವರೆಗೂ ಯಾರೂ ಬೇಡಿಲ್ಲ. ಆದ್ದರಿಂದ ಇದನ್ನು ಕೊಟ್ಟು ನನ್ನನ್ನು ಸಂತೋಷಪಡಿಸು. ಈಗ ನನಗೆ ಬೇಕಾದದ್ದು ಹಣೆಯುಗಣ್ಣು. ಅದನ್ನು ಜಾಗ್ರತೆಯಾಗಿ ಕೊಡಬೇಕು' ಎನಲು, ಬಸವಣ್ಣನವರು ಆ ಜಂಗಮಮೂರ್ತಿಯ ಹಣೆಯನ್ನು ದಿವ್ಯದೃಷ್ಟಿಯಿಂದ ನೋಡಿ ನಗುತ್ತ, 'ನಿನಗೆ ಈ ಮೊದಲು ಹಣೆಯುಗಣ್ಣು ಇದ್ದು ಪುನಃ ನನ್ನನ್ನು ಬೇಡುತ್ತಿ' ಎಂದು ನಮಸ್ಕರಿಸುತ್ತ ಒಂದು ಕನ್ನಡಿಯನ್ನು ಆ ಜಂಗಮನ ಕೈಯಲ್ಲಿ ಕೊಟ್ಟು ನೋಡಿಕೊಳ್ಳಲು ಹೇಳಿದನು. ಜ್ಯೋತಿರ್ಮಯ ಸ್ವರೂಪದಿಂದ ಹೊಳೆಯುತ್ತಿರುವ ತನ್ನ ಹಣೆಗಣ್ಣನ್ನು ನೋಡಿ ನಾಚಿಕೆಯಿಂದ ತಲೆಯನ್ನು ಬಗ್ಗಿಸಿಕೊಂಡು ನಿಂತನು. ಆಗ ಬಸವಣ್ಣನವರು ಮುಗುಳುನಗೆ ನಗುತ್ತ ನಿಂತರು. ಜಂಗಮನು ಹೊರಗೆ ಹೊರಡಲು ಸಿದ್ಧನಾದಾಗ ಶ್ರೀ ಬಸವಣ್ಣನವರು ನಮಸ್ಕರಿಸಿ ಈ ಕೆಳಗಿನ ವಚನವನ್ನು ಹೇಳಿದರು—

"ಹಿಂದೆ ಸಂದ ಭಕ್ತರಂತೆ ಆನೊಂದೊಂದ ಬೇಡಿ ಕಾಡುವವನಲ್ಲ.
ಹಿಂದೆ ಬೆನ್ನಲಿ ಬಂದು ಬಳಲದೆ ಇನ್ನೊಂದ ಬೇಡೆನಂಜದಿರಂಜದಿರಯ್ಯ
ಆಶಾಪಾಶವೆನ್ನ ಉಳ್ಳೊಡೆ ಕೂಡಲಸಂಗಾ ನಿನ್ನಾಣೆ."

ಶ್ರೀ ಬಸವಣ್ಣನವರು—

"ಓಡದಿರು ಓಡದಿರು ನಿನ್ನ ನಾ ಬೇಡುವನಲ್ಲ, ಶಿವನೇ ನೋಡುವೆ
ಕಣ್ಣತುಂಬಿ ಆಡಿಪಾಡಿ ನಲಿದಾಡುವೆ, ಬೇಡೆನ್ನಕೂಡ ಮಾತಾಡಲಾಗದೇ
ಎಲೋ ಶಿವನೆ ಕೂಡಲಸಂಗಮದೇವಾ, ನೀನಾಡಿಸುವ ಬೊಂಬೆ ನಾನು."

ಇವನು ಪ್ರತ್ಯಕ್ಷ ಶಿವನೇ ಇರುತ್ತಾನೆಂದು ತಿಳಿದ ಬಸವಣ್ಣನವರು ಎಲೌ ಸಂಗನೇ, ನನಗೆ ಯಾವ ತರಹದ ಆಶೆಯೂ ಇರುವದಿಲ್ಲ. ನಾನು ನಿನ್ನನ್ನು ಹಿಂದಿನ ಭಕ್ತರಂತೆ ಏನೂ ಬೇಡುವದಿಲ್ಲ. ನೀನು ಅಂಜಿಕೊಂಡು ಹೋಗಬೇಡ, ನಿಲ್ಲು. ಆದರೆ ನಾನು ನಿನ್ನನ್ನು ಕಣ್ಣುತುಂಬ ನೋಡುತ್ತೇನೆ. ನೀನು ಆಡಿಸುವ ಗೊಂಬೆಯಾಗಿದ್ದೇನೆ ನಾನು ಎಂದು ಬಸವಣ್ಣನವರು ಹೇಳಲು, ಆ ಜಂಗಮಮೂರ್ತಿಯು ಬಯಲಾಗಿಬಿಟ್ಟನು. ಆಗ ಬಸವಣ್ಣನವರು ನಗುತ್ತ—

"ಕೊಂಡದ್ದಿಲ್ಲ ಕೊಟ್ಟದ್ದಿಲ್ಲ, ಲಗ್ಗವಿಲ್ಲ ವಿಲಗ್ಗವಿಲ್ಲ, ನಮಗೆಯೂ
ನಿಮಗೆಯೂ ಸೊಪ್ಪು ಸಂಬಂಧವಿಲ್ಲ, ನಮಗೆಯೂ ನಿಮಗೆಯೂ ಭೇದ
ಭಾವಗಳಿಲ್ಲ ಕೂಡಲಸಂಗಮದೇವಾ ಇರು ಇರದೆ ಮಾಣು."

ಅಂದರೆ, ಆ ಜಂಗಮಮೂರ್ತಿ ಬಯಲಾದ ಕಾಲದಲ್ಲಿ ನಮಗೂ ನಿಮಗೂ ಕೊಡತಕ್ಕ ವ್ಯವಹಾರವಿಲ್ಲ ಮತ್ತು ಯಾವ ತರಹದ ಸಂಬಂಧವಿಲ್ಲ, ಭೇದಭಾವವೂ ಇಲ್ಲ. ಬೇಕಾದರೆ ಇರು, ಇಲ್ಲದಿದ್ದರೆ ಬಿಡು ಎಂದು ಬಸವಣ್ಣನವರು ಹೇಳಲು, ಅಲ್ಲಿದ್ದ ಜನಗಳೆಲ್ಲ ಬಯಲಾದವನು ಪರಶಿವಮೂರ್ತಿಯಲ್ಲದೆ ಬೇರೆ ಅಲ್ಲವೆಂದು ಮಾತನಾಡುತ್ತ ಈ ಬಸವಣ್ಣನು ಶಿವನಿಗಿಂತ ಭಿನ್ನನಲ್ಲವೆಂದು ಆಶ್ಚರ್ಯಚಕಿತರಾದರು. ದೊಡ್ಡವರ ಲೀಲೆಯು ಯಾರಿಗೆ ತಾನೇ ತಿಳಿಯುವದೆಂದು ಎಲ್ಲರೂ ಅನ್ನುತ್ತ ನಡೆದರು.

(೩) ಏಕಲಿಂಗ ನಿಷ್ಠಾಪವಾಡ—ಬಸವಣ್ಣನವರ ಲಿಂಗನಿಷ್ಠೆಯು ಅತ್ಯಗಾಧ ವಾದುದು. ಅದರ ಪ್ರಚಾರಕ್ಕಾಗಿಯೇ ಭೂಲೋಕದಲ್ಲಿ ಅವತರಿಸಿದರು. ನೀರಿನ ಆವಿಯ ಮರೆಯಲ್ಲಿ ಅಡಗಿರುವ ಜಲದಂತೆ, ಮೇಘಗಳ ಗುಂಪಿನ ಮರೆಯಲ್ಲಿ ಅಡಗಿದ ಬಿಸಿಲಿನಂತೆ, ಚಂದ್ರನಲ್ಲಿ ಅಡಗಿರುವ ಅಮೃತಕಲೆಯಂತೆ, ಜೀವರುಗಳಲ್ಲಿ ಅಡಗಿರುವ ಆತ್ಮನಂತೆ, ರಾತ್ರಿಯಲ್ಲಿ ಅಡಗಿರುವ ಸೂರ್ಯನಂತೆ, ನಿಷ್ಕಲ ತತ್ವದಲ್ಲಿ ಅಡಗಿರುವ ಸಕಲ ತತ್ವದಂತೆ, ಸಕಲ ತತ್ವದಲ್ಲಿ ಅಡಗಿರುವ ನಿಷ್ಕಲ ತತ್ವದಂತೆ ಪರಶಿವನು ಬಸವೇಶ್ವರನಲ್ಲಿ ಏಕಲಿಂಗ ನಿಷ್ಠಾಭಾವನೆಯು ಬೆಡಗುಗೊಂಡು ಅಡಗಿ ಶೋಭಿಸಲು ಒಂದು ದಿನ ಗೋಪಾಲಕರೆಲ್ಲರೂ ಆಕಳುಗಳನ್ನು ಅರಣ್ಯಕ್ಕಟ್ಟಿಕೊಂಡು ಹೋಗಿ ಮೇಯಿ ಸುತ್ತಿರಲು, ಆಗ ೧೦೧ ಜನ ಕಳ್ಳರಿಗೆ ಈ ದಿನ ಬಸವೇಶ್ವರನ ಅರಮನೆಯ ಆಕಳು ಗಳನ್ನು ಕದ್ದುಕೊಂಡು ಹೋಗಬೇಕೆಂಬುವ ಬುದ್ಧಿಯನ್ನುಂಟುಮಾಡಿದನು. ಆಗ ಕಳ್ಳರು ಅರಣ್ಯಕ್ಕೆ ಬಂದು ಗೋಪಾಲಕರನ್ನು ಹೊಡೆದು ಆಕಳುಗಳನ್ನು ಅಟ್ಟಿಕೊಂಡು ತಮ್ಮ ಬಿಡಾರಕ್ಕೆ ಹೋದರು. ಗೋಪಾಲಕರು ಮನೆಗೆ ಬಂದು ನಡೆದ ಸಂಗತಿಗಳನೆಲ್ಲ ಬಸವಣ್ಣನವರಿಗೆ ಹೇಳಲು, 'ಸಂಗನೇ ಕೊಟ್ಟದ್ದ, ಸಂಗನೇ ಒಯ್ದಿರುತ್ತಾನೆ. ಕರು ಗಳನ್ನು ಕೂಡ ಸಂಗನಿಗೆ ಅರ್ಪಿಸಿರಿ' ಎಂದು ಹೇಳುತ್ತಾ—

> "ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂಭೋ ನಿಮ್ಮ ಧರ್ಮ,
> ಬೊಬ್ಬಿಡಿರಿಂಭೋ ನಿಮ್ಮ ಧರ್ಮ, ಆರಡರದಿರಿಂಭೋ ನಿಮ್ಮ ಧರ್ಮ,
> ಅಲ್ಲಿ ಉಂಬರೆ ಸಂಗ, ಇಲ್ಲಿ ಉಂಬರೆ ಸಂಗ, ಕೂಡಲಸಂಗಮನೇಕೋ
> ಭಾವ ಕಾಣಿರೋ"

ಎಂದು ವಚನವನ್ನು ಹಾಡುತ್ತ, 'ಎಲೈ ಗೋಪಾಲಕರುಗಳಿರಾ, ಪರಶಿವನು ವಿಶ್ವತೋ ಮುಖನು; ಆದುದರಿಂದ ಶಿವನೇ ಪ್ರೀತಿಯಿಂದ ಕೊಂಡನೆಂಬ ನಿಜಭಾವವಿರಬೇಕಲ್ಲದೆ ಭಿನ್ನಸ್ವಭಾವವಿರಬಾರದು ಮತ್ತು ಶಿವನೇ ಜಗತ್ಸ್ವರೂಪನಾಗಿರುವದರಿಂದ ಅವರನ್ನೆಲ್ಲ ಸಂಗಮದೇವರೆಂದು ಹೇಳಬೇಕಲ್ಲದೆ ಅನ್ಯಥಾ ಭಾವಿಸಬಾರದು. ವಿಶ್ವನಾಥನಾದ ಶಿವನು ಕೆಲವರಿಗೆ ನಾಥನು, ಕೆಲವರಿಗೆ ಅನಾಥನೇ? ಆದುದರಿಂದ ನೀವೆಲ್ಲರೂ ಈಗ ಕರುಗಳನ್ನು ಅಟ್ಟಿಕೊಂಡು ಆಕಳುಗಳು ಹೋದ ಮಾರ್ಗದಲ್ಲಿ ಬಿಟ್ಟುಬರಬೇಕು' ಎಂದು ಹೇಳುವಷ್ಟರಲ್ಲಿ ಆ ಕಳ್ಳರು ಹಸುಗಳನ್ನು ಅಟ್ಟಿಕೊಂಡು ಹೋಗಿ ತಮ್ಮ ತಮ್ಮ ಬಿಡಾರಗಳಲ್ಲಿ ಕಟ್ಟಿ ಹುಲ್ಲು ನೀರುಗಳನ್ನಿಟ್ಟದ್ದರೂ ಅವುಗಳು ಹುಲ್ಲನ್ನು ತಿನ್ನದೆ ನೀರನ್ನು ಕುಡಿಯದೆ ನಿಶ್ಚಲವಾಗಿ ನಿಂತುಕೊಂಡುಬಿಟ್ಟದ್ದವು. ಹೀಗೆ ನಿಂತಿರುವ ಆಕಳು ಗಳನ್ನು ನೋಡಿ ಕಳ್ಳರಿಗೆ ಬಹಳ ಆಶ್ಚರ್ಯವಾಯಿತು.

ಆಗ ಕಳ್ಳರು ಬಹಳ ಭಯಭ್ರಾಂತರಾಗಿ ಅವುಗಳನ್ನು ಪುನಃ ಅಟ್ಟಿಕೊಂಡು ಬರುತ್ತಿದ್ದರು. ಕರುಗಳು ತಮ್ಮ ತಾಯಂದಿರನ್ನು ನೋಡಿ ಅಂಬಾ ಎಂದು ಕೂಗಿದವು. ಗೋಪಾಲಕರು ಬಸವಣ್ಣನವರು ಹೇಳಿದ ಸಮಾಚಾರವನ್ನೆಲ್ಲಾ ಕಳ್ಳರಿಗೆ ತಿಳಿಸಿದರು. ಆಗ ಕಳ್ಳರು ವ್ಯಸನಪಡುತ್ತಾ, ಶಿವ ಶಿವ ಎನ್ನುತ್ತ, ಹಸುಗಳನ್ನು ಗೋಪಾಲಕರಿಗೆ ಒಪ್ಪಿಸಿ, ತಮ್ಮ ನೀಚತನದ ಕಳ್ಳತನವನ್ನು ಹಳಿಯುತ್ತ ಬಸವೇಶ್ವರನ ಹತ್ತಿರ ಬಂದು ಅವರ ಪಾದಕಮಲಗಳಿಗೆ ನಮಸ್ಕರಿಸಿ ನಿಂತರು. ಆಗ ಬಸವಣ್ಣನವರು ಅವರ ಪಶ್ಚಾತ್ತಾಪ ಬುದ್ಧಿಗೆ ಸಂತೋಷಪಟ್ಟು ಬೇಡಿದ್ದನ್ನೆಲ್ಲ ಅವರಿಗೆ ಕೊಟ್ಟರು. ಅವರು ಅಲ್ಲಿಯೇ ಉಳಿದು ವೀರ ಭಕ್ತಿಯನ್ನು ತೋರಿಸಲು ಅವರಿಗೆ ತಕ್ಕ ಸಂಸ್ಕಾರಗಳನ್ನು ಮಾಡಿಸಿ ಅತಿ ಕಾರುಣ್ಯದಿಂದ ಅವರುಗಳನ್ನು ಲಿಂಗಾಂಗಿಗಳನ್ನಾಗಿ ಮಾಡಿದರು. ಅವರು ಮುಂದೆ ಸಚ್ಚರಿತ್ರೆಯುಳ್ಳವರಾದರು. ಇದು ಬಸವಣ್ಣನವರಂತಹ ಮಹಾ ಪುರುಷರ ಮೇಲ್ಮೆಯನ್ನು ತೋರಿಸುತ್ತದೆ. ನೀಚಕೃತ್ಯದಲ್ಲಿರತಕ್ಕ ಪಾಮರ ಜನರನ್ನು ಉದ್ಧಾರ ಮಾಡುತ್ತಾ ಅವರ ದುರ್ಗುಣಗಳನ್ನು ಬಿಡಿಸಿ ಸದ್ಗುಣಿಗಳನ್ನಾಗಿ ಮಾಡುವದೇ ದೊಡ್ಡವರ ಮಾರ್ಗವಾಗಿರುತ್ತದೆ. ಇದೇ ಬಸವಣ್ಣನವರ ನಿತ್ಯದ ಕೃತ್ಯವಾಗಿದ್ದಿತು.

(೪) ಬರಿಯ ಪೆಟ್ಟಿಗೆಗಳಲ್ಲಿ ಭಂಡಾರವನ್ನು ತುಂಬಿದ್ದು—ಶ್ರೀ ಬಸವಣ್ಣನು ಕಲ್ಯಾಣಪಟ್ಟಣದಲ್ಲಿ ಸಾಕಾರ ಬ್ರಹ್ಮವಾಗಿಯೂ, ಪರಶಿವನ ಮೂವತ್ತಾರು ತತ್ವಗಳಿಗೆ ಅಗ್ರಭಾಗದ ಕಲಶನಾಗಿಯೂ, ಪರಶಿವನ ಸಾಕಾರ ನಿರಾಕಾರ ತತ್ವಕ್ಕೆ ನಿಲುಕದವನಾಗಿಯೂ, ಬೇಡಿದವರಿಗೆ ಬೇಡಿದ ಪದಾರ್ಥಗಳನ್ನು ಕೊಡತಕ್ಕವನಾಗಿಯೂ ಮೆರೆಯುತ್ತಲಿದ್ದನು. ಒಂದು ದಿನ ಬಿಜ್ಜಳ ರಾಜನು, 'ಎಲೌ ಬಸವದಂಡಾಧೀಶನೇ, ನನ್ನ ರಾಜ್ಯದ ಎಲ್ಲಾ ನೌಕರರಿಗೂ, ಸೇನಾಸಾಗರಕ್ಕೂ ಈ ತಿಂಗಳು ನೀನೇ ವೇತನವನ್ನು ಕೊಡು' ಎಂದು ಹೇಳಿದನು. ಬಸವೇಶ್ವರನು ಭಂಡಾರದ ಕೀಲಿಯನ್ನು ತೆಗೆದು ಲೆಖ್ಖವನ್ನು ಕರಣಿಕರಿಂದ ಮಾಡಿಸುವ ಕಾಲದಲ್ಲಿ ಓರ್ವ ಜಂಗಮನು ಬಂದು, 'ನಾನು ಹೊತ್ತುಕೊಂಡು ಹೋಗುವಷ್ಟು ಹಣವನ್ನು ಕೊಡಬೇಕು' ಎಂದು ಕೇಳಲು, ಅವನ ಇಷ್ಟಪ್ರಕಾರವಾಗಿ ಕೊಡಲು, ಉಳಿದವರೆಲ್ಲರೂ ಈ ಸುದ್ದಿಯನ್ನು ತಿಳಿದುಕೊಂಡು ನಾವೂ ಹೋದರೆ ನಮಗೆ ಹೊರುವಷ್ಟು ದ್ರವ್ಯವು ಸಿಗುತ್ತದೆಂದು ಅನೇಕ ಜಂಗಮರು ಧಾವಿಸಿ ಬಂದರು. ಭಕ್ತಿಭಂಡಾರಿಗಳಾಗಿದ್ದ ಬಸವೇಶ್ವರರು ಎಲ್ಲರ ಇಷ್ಟವನ್ನೂ ಪೂರ್ತಿಗೊಳಿಸಿದರು. ಯಾಕಂದರೆ, ಒಬ್ಬರಿಗೆ ಕೊಟ್ಟು ಉಳಿದವರಿಗೆ ಕೊಡದಿದ್ದರೆ ಅಲ್ಲಿ ಭಕ್ತಿಯು ಕೆಡುವುದು. ಅಂದಿನ ದಿನ ಮನದಣಿಯುವಂತೆ ಮತ್ತು ಭಂಡಾರವು ಬರಿದಾಗುವಂತೆ ದಾನ ಮಾಡಿದರು. ಬರಿಯ ಪೆಟ್ಟಿಗೆಗಳು ಮಾತ್ರ ಉಳಿದುವು. ಅಲ್ಲಿ ಇದನ್ನೆಲ್ಲಾ ನೋಡುತ್ತಿದ್ದ ಚಾಡಿಕೋರರು ಬಿಜ್ಜಳ ಭೂಪಾಲನಲ್ಲಿಗೆ ಹೋಗಿ ಭಂಡಾರದಲ್ಲಿ ನಡೆದ ಸಮಾಚಾರವನ್ನೆಲ್ಲ ಹೇಳಿದರು. ಆಗ ಬಿಜ್ಜನು ಬಸವೇಶ್ವರನನ್ನು ಕರೆಯಿಸಿ 'ಮಂತ್ರಿಗಳಾದ ಬಸವಣ್ಣನವರೇ, ನಮ್ಮ ಬೊಕ್ಕಸವನ್ನೆಲ್ಲ ಬರಿದು ಮಾಡಿಬಿಟ್ಟಿರುವಿರಂತೆ? ನಿಮ್ಮ ಸ್ವಾಧೀನ ಮಾಡಿದ ರಾಜಬೊಕ್ಕಸವು ಬರಿದಾಗುವಂತೆ ನಿಮ್ಮ ಜನರಿಗೆ ದಾನ ಮಾಡಿದುದು ಯೋಗ್ಯವೇ?' ಎಂದು ಕೇಳಿದನು. ಆಗ ಬಸವಣ್ಣನವರು ಶಿವನನ್ನು ಸ್ಮರಿಸಿ, 'ಆಗಲಿ, ತಮ್ಮ ಲೆಖ್ಖವನ್ನು ನೋಡಿರಿ' ಎಂದು ಹೇಳಿದರು. ಮತ್ತು 'ಹಣವಾದರೂ ಪೆಟ್ಟಿಗೆಯಲ್ಲಿಯೇ ಇರುತ್ತದೆ; ತಾವು ನೋಡಬಹುದು' ಎಂದು ಹೇಳಿದರು. ಬಿಜ್ಜಳನು ನೋಡಲು ಹಣವೆಲ್ಲಾ ಸರಿಯಾಗಿಯೇ ಇದ್ದಿತು.

ಬಿಜ್ಜಳನು ಆಶ್ಚರ್ಯಚಕಿತನಾಗಿ ಕೊಂಡೆಯರ ಮಾತುಗಳನ್ನು ಕೇಳುವದರಿಂದ ನಾನು ಕೆಟ್ಟೆನೆಂದು ಅಂದುಕೊಂಡು ಮರಮರನೆ ಮರುಗಿದನು. ಆಗ ನ್ಯಾಯ ಯುಕ್ತರಾದ ಕೆಲವರು ವೈದಿಕರು ಅಲ್ಲಿಯೇ ಇದ್ದರು. ಅವರು, 'ಎಲೈ ಮಹಾರಾಜನೆ ಕೇಳು, ಮೊದಲು ಭಾರತದಲ್ಲಿ ಪಾಂಡವರು ಕೌರವರ ಅಸಹ್ಯ ಭಾವನೆಯನ್ನು ಕೇಳಿ ತಮ್ಮ ಸುವರ್ಣವೆಲ್ಲವನ್ನೂ ಆ ರಾಜಸೂಯ ಯಾಗದಲ್ಲಿ ಖರ್ಚು ಮಾಡಿದರೂ ಅವರ ಹಸ್ತದ ಯಶಸ್ವೀತನದಿಂದ ಅವರವರ ಸುವರ್ಣ ರಾಶಿಯು ಮತ್ತೆ ಮತ್ತೆ ಹೆಚ್ಚು ತ್ತಿತ್ತೆಂದು ಹೇಳಿದೆ. ಈ ದಂಡನಾಯಕನಾದ ಬಸವೇಶ್ವರನಾದರೋ ದೇವತಾಪುರುಷನೂ, ದ್ವಿತೀಯ ಶಂಭುವೂ ಇರುತ್ತಾನೆ. ಮತ್ತು ಅವನಿಗೆ ಪರುಷಸಿದ್ಧಿಯೂ ಇರುತ್ತದೆ. ಇಂತಹ ಸ್ವಾಮಿಯ ಹಸ್ತವು ಸೋಂಕಿದ ಮೇಲೆ ಭಂಡಾರದಲ್ಲಿದ್ದ ಬರಿಯ ಪೆಟ್ಟಿಗೆಗಳು ಪೂರ್ವದಂತೆ ಪೂರ್ಣವಾಗುವದರಲ್ಲಿ ಆಶ್ಚರ್ಯವೇನೂ ಇರುವದಿಲ್ಲ. ಈ ಬಸವ ಸ್ವಾಮಿಯ ಮಹಿಮೆಗೆ ಇದೇನೂ ದೊಡ್ಡದಲ್ಲ' ಎಂದು ಹೇಳಿದ ಮಾತನ್ನು ಕೇಳಿ ರಾಜನು ಆಶ್ಚರ್ಯಚಕಿತನಾಗಿ ತಲೆದೂಗಿಸುತ್ತ, ನಮ್ಮ ಪೂರ್ವದ ಪುಣ್ಯಪ್ರಭಾವದಿಂದ ಇಂತಹ ಮಹಾನುಭಾವನು ಮಂತ್ರಿಯಾಗಿ ದೊರಕಿದ್ದಾನೆಂದು ಹಿರಿಹಿರಿ ಹಿಗ್ಗುತ್ತ ಬಸವಣ್ಣ ನವರಿಗೆ ಬಹಳ ಗೌರವವನ್ನು ಮಾಡಿದನು.

(೫) ಎಡವಿ ಬೀಳುವಾಗ ಗೌಳಿಗಿತ್ತಿಯ ಕೊಡವನ್ನು ತಡೆಹಿಡಿದಿದ್ದು—ಒಂದು ದಿನ ಬಿಜ್ಜಳನು ಸಭೆಯಲ್ಲಿರುವಾಗ ಬಸವಣ್ಣನವರೇ ಮೊದಲಾದ ಹದಿನೆಂಟು ಮಂದಿ ಮಂತ್ರಿಗಳೂ ಆ ಸಭೆಯಲ್ಲಿದ್ದರು. ಆ ಕಾಲದಲ್ಲಿ ಭಕ್ತಶಿರೋಮಣಿಗಳಾದ ಬಸವಣ್ಣ ನವರು ಏಕಕಾಲಕ್ಕೆ ತಮ್ಮ ಎರಡೂ ಕೈಗಳನ್ನು ಮೇಲಕ್ಕೆತ್ತಿದರಲ್ಲದೆ 'ಎಲೌ ಸ್ತ್ರೀಯಳೇ ಬೀಳಬೇಡ ಬೀಳಬೇಡ, ನಿಲ್ಲು ನಿಲ್ಲು' ಎನಲು, ಇದನ್ನು ಕೇಳಿದ ರಾಜನು ಇದೇನು ಎಂದನು. ಎಲೈ ಮಹಾರಾಜನೇ ನಿಜಸ್ಥಿತಿಯನ್ನು ಹೇಳುತ್ತೇನೆ ಕೇಳಿರಿ.

"ತ್ರಿಪುರಾಂತಕೇಶ್ವರದ ಪೂರ್ವದಿಕ್ಕಿಗೆ ಕಪಿಲೇಶ್ವರ ಎಂಬುವ ಲಿಂಗವಿರುವದು. ಆ ಲಿಂಗಕ್ಕೆ ಓರ್ವ ಯತೀಶ್ವರರು ಒಂದು ಸಾವಿರ ಕೊಡ ಹಾಲಿನ ಅಭಿಷೇಕ ಮಾಡಲು ಭಕ್ತಿಯಿಂದ ನಿಶ್ಚಯಿಸಿದ್ದರು. ಅಲ್ಲದೆ ಹಾಲನ್ನು ಒಯ್ಯಬೇಕಾದರೆ ದಾರಿಯು ಬಹಳ ಕೆಸರಾಗಿದ್ದಿತು. ಒಬ್ಬ ಗವಳಗಿತ್ತಿಯು ಜಾರಿ ಬೀಳುವಾಗ್ಗೆ ಬಸವಾ, ಬಸವಾ ಎಂದು ಹೇಳಿದ ಕಾರಣ ಆ ಹೆಣ್ಣುಮಗಳು ಬೀಳುವದಕ್ಕಿಂತ ಮುಂಚಿತವಾಗಿ ಆಕೆಯನ್ನು ಹಿಡಿದೆತ್ತಿದೆನು. ಆಕೆಯಾದರೂ ಹಾಗೆಯೇ ನಿಂತಳು" ಎಂದು ಹೇಳಲು ಎಲ್ಲರೂ ಆಶ್ಚರ್ಯಚಕಿತರಾದರು ಮತ್ತು ನಿಜಸಂಗತಿಯನ್ನು ತಿಳಿದುಕೊಂಡು ಬರುವದಕ್ಕೆ ಕೆಲವರು ಹೋದರು. ಶ್ರೀ ಬಸವಣ್ಣನವರು ಹೇಳಿದಂತೆ ಎಲ್ಲವೂ ನಿಜವಿದ್ದಿತು. ರಾಜನು ಇದನ್ನು ಪರೀಕ್ಷಿಸಬೇಕೆಂದು ಆಕೆಯನ್ನು ಕರೆದು, 'ಅಮ್ಮಾ, ನೀನು ಇಲ್ಲಿ ಬಸವಾ ಎಂದು ಎಡವಿ ಬೀಳು' ಎನ್ನಲು, ಅವಳು ಹಾಗೆಯೇ ಮಾಡಿದಳು. ಬಸವಾ ಬಸವಾ ಎನ್ನಲು ಕೊಡವು ಆಕಾಶದಲ್ಲಿ ಹಾಗೆಯೇ ನಿಂತಿತು. ಈ ಸುದ್ದಿಯು ಪಟ್ಟಣದ ತುಂಬ ಮಿಂಚಿನ ವೇಗದಂತೆ ಹಬ್ಬಿತು. ಕೊಂಡೆಯವರಲ್ಲಿ ಹಿರಿಯರಾದ ಮಂಚಣ್ಣನವರು ದೊರೆಗೆ ಏಕಾಂತದಲ್ಲಿ, ರಾಜರೇ ಆ ಗೊಲ್ಲತಿಯು ಬಸವಣ್ಣನವರ ಮನೆಗೆ ಹಾಲು ತರತಕ್ಕವಳಿರುವಳು. ಆದ್ದರಿಂದ ತಾವು ತಮ್ಮ ಅರಮನೆಯ ಹೆಣ್ಣು ಮಕ್ಕಳಿಂದ ಹೀಗೆ ಮಾಡಿಸಿ ಅವರಿಂದ ಬಸವಾ, ಬಸವಾ ಎನ್ನಿಸಿರಿ. ನಿಮಗೆ ಇದರ

ನಿಜ ತತ್ವವು ತಿಳಿಯುತ್ತದೆಂದು ಹೇಳಲು, ರಾಜನು ತನ್ನ ಅರಮನೆಗೆ ಹೋಗಿ ಮಂಚಣ್ಣನವರು ಹೇಳಿದಂತೆ ಪ್ರಯೋಗ ಮಾಡಿ ನೋಡಿದನು. ಅವರ ಕೊಡಗಳೆಲ್ಲ ಹಾಗೆಯೇ ನಿಂತವು. ರಾಜನಿಗೆ ಸೇವಕರು ಬಂದು ಇದನ್ನು ಹೇಳಲು, ರಾಜನು ಬಸವಣ್ಣನವರಿಗೆ, ಅವರವರ ಕೊಡಗಳು ಹಾಗೆಯೇ ನಿಂತುಬಿಟ್ಟಿರುತ್ತವೆ; ಅವರಿಗೆ ದೊರೆಯುವಂತೆ ಮಾಡಿರೆಂದು ಬಿನ್ನೈಸಿಕೊಳ್ಳಲು ಬಸವಣ್ಣನವರು ಹಾಗೆಯೇ ಮಾಡಿದರು.

ಬಸವಣ್ಣನವರ ಕೀರ್ತಿವಾರ್ತೆಗಳು ಎಲ್ಲ ಕಡೆಗೂ ಹಬ್ಬಿ ಅವರ ನಾಮವು ಅತ್ಯದ್ಭುತವಾಗಿ ಜನಗಳಲ್ಲಿ ಪ್ರಫುಲ್ಲಿತವಾಯಿತು. ಇಂತಹ ಘಟನೆಗಳು ಸಂಭವಿಸು ವದರಿಂದಲೇ ಲೋಕದಲ್ಲಿ ದೊಡ್ಡವರ ಹೆಸರುಗಳು ಅಜರಾಮರವಾಗಿ ಅವರ ಕೀರ್ತಿ ಚಿರಸ್ಮರಣೀಯವಾಗುವದು. ಈ ತರಹದ ಕೃತ್ಯಗಳು ಮಹಾನುಭಾವರಾದವರ ಚರಿತ್ರೆ ಗಳಲ್ಲಿ ದೊರೆಯುವುದು ಅನಿವಾರ್ಯವಾಗಿರುತ್ತದೆ. ಹೀಗೆಯೇ ಬಸವಣ್ಣನವರ ಪವಿತ್ರಾಚರಣೆಯು ಎಲ್ಲ ಕಡೆಗೂ ಹಬ್ಬಿ, ಅವರ ವಾರ್ತೆಗಳು ಜನಸಾಮಾನ್ಯರಿಗೂ ಮುಟ್ಟುವಂತಾದುವು.

(೬) ಸರ್ಪವನ್ನು ಪದಕ ಮಾಡಿದ ಪವಾಡ—ಶ್ರೀ ಬಸವಣ್ಣನವರು ಶಿವಶರಣರ ಮಧ್ಯದಲ್ಲಿ ಪ್ರಕಾಶಮಾನರಾಗಿ ಉಲ್ಲಾಸದಿಂದಿರುತ್ತಿದ್ದರು. ಒಂದು ದಿನ ಕೆಲವರು ಜಂಗಮರು ಬಸವಣ್ಣನವರ ಹತ್ತಿರ ಹೋಗಿ, ಈ ದಿನ ಸಕಲ ಗಣಕ್ಕೆ ಆನಂದ ಮಾಡಬೇಕೆಂದು ಕೇಳಿಕೊಂಡರು. ಬಸವಣ್ಣನವರು ಆಗಲಿ ಎಂದು ಹೇಳಿ, ತ್ರಿಪುರಾಂತಕೇಶ್ವರನ ದೇವಾಲಯದ ಹತ್ತಿರ ಗಣಪರ್ವವನ್ನು ಮಾಡಿಸಿದರು. ಅಂದಿನ ದಿನ ಕಲ್ಯಾಣಪಟ್ಟಣದಲ್ಲಿರತಕ್ಕ ಶಿವಭಕ್ತಸಮುದಾಯವೆಲ್ಲ ಅದರಲ್ಲಿ ಭಾಗವಹಿಸಿದ್ದಿತು. ಭೋಜನಾಂತರದಲ್ಲಿ ಉತ್ಸವ ಮಾಡುತ್ತ ವಾದ್ಯ ವೈಭವಗಳೊಡನೆ ಊರೊಳಗೆ ಎಲ್ಲರೂ ಹೊರಟರು. ಬಿಜ್ಜಳನು ತನ್ನ ಅರಮನೆಯ ಮಹಡಿಯ ಮೇಲೆ ಕುಳಿತುಕೊಂಡು ಇದನ್ನೆಲ್ಲ ನೋಡುತ್ತ, ಇದೇನೆಂದು ಕೇಳಿದನು. ಚಾರರು ಎಲ್ಲಾ ಸುದ್ದಿಗಳನ್ನೂ ಹೇಳುತ್ತ, ತಮ್ಮ ದಂಡನಾಯಕರಾದ ಬಸವಣ್ಣನವರು ಲಕ್ಷಗಟ್ಟಲೆ ಜಂಗಮರಿಗೆ ಇಂದಿನ ದಿನ ಮೃಷ್ಟಾನ್ನ ಭೋಜನವನ್ನು ಮಾಡಿಸಿದರಲ್ಲದೆ ಬೇಡಿದವರಿಗೆ ಬೇಡಿದ ಪದಾರ್ಥಗಳನ್ನು ದಾನ ಮಾಡಿದರು. ಎಲ್ಲಿ ನೋಡಿದರೂ ಶಿವಭಕ್ತರ ಸಂಭ್ರಮವೇ ಸಂಭ್ರಮ ಎಂದು ಹೇಳಿದರು. ನಾವು ಬಸವಣ್ಣನವರಿಗೆ ತಿಂಗಳಿಗೆ ಸಾವಿರ ಹೊನ್ನು ಗಳನ್ನು ಕೊಡುತ್ತೇವೆ; ನಾವು ಕೊಡುವದು ಒಂದು ದಿನದ ಖರ್ಚಿಗೂ ಆಗುವದಿಲ್ಲ; ಇಷ್ಟು ಹಣವನ್ನು ಬಸವಣ್ಣನವರು ಎಲ್ಲಿಂದ ತರುತ್ತಾರೆಂಬುವ ಚಿಂತೆಯು ನಮ್ಮನ್ನು ಬಾಧಿಸುತ್ತಲಿದೆ ಎಂದು ಬಿಜ್ಜಳನು ಕೇಳಲು, ಆಗ ಚಾಡಿಕೋರರು, ಸಕಲವೂ ನಿಮ್ಮ ದ್ರವ್ಯವಲ್ಲದೆ ಬೇರೆ ಎಲ್ಲಿಂದ ಬರುತ್ತದೆಂದು ಹೇಳಿದರು. ಆಗ ರಾಜನು ನೊಂದುಕೊಂಡು ಚಿಂತಾಕ್ರಾಂತನಾದನು. ಅದಕ್ಕೆ ಅವರು, ತಾವು ವ್ಯಸನ ಮಾಡುವಕಾರಣವಿಲ್ಲ; ಬಸವಣ್ಣನವರನ್ನು ಕೆಲವು ದಿನ ಊರನ್ನು ಬಿಡಿಸಿದರಾಯಿತೆಂದು ಸಲಹೆ ಕೊಟ್ಟರು.

ಮನುಷ್ಯನಿಗೆ ಮುಂದೆ ಕಷ್ಟವು ಬರುವಂತಿದ್ದರೆ ಅವನ ಬುದ್ಧಿಯು ಮಂದ ವಾಗುತ್ತದೆ. 'ವಿನಾಶಕಾಲೇ ವಿಪರೀತ ಬುದ್ಧಿಃ' ಎಂಬುವ ಹಾಗೆ ಆಗುವದು. ಶ್ರೀರಾಮಚಂದ್ರನಿಗೆ ಲೋಕದಲ್ಲಿ ಬಂಗಾರದ ಜಿಗುರೆಗಳೆಲ್ಲಿಯೂ ಇರುವದಿಲ್ಲವೆಂಬುದು

ಗೊತ್ತಿದ್ದರೂ ಹೆಂಡತಿಯಾದ ಸೀತೆಯು ಬಂಗಾರದ ಚಿಗುರೆ ಹೋಗುತ್ತಿದೆ, ಅದನ್ನು ನನಗೆ ತಂದುಕೊಡಬೇಕೆಂದು ಕೇಳಲು, ಆ ಚಿಗುರೆಯನ್ನು ಬೆನ್ನಟ್ಟಿ ಅನಂತ ಕಷ್ಟಗಳಿಗೆ ಗುರಿಯಾಗಲಿಲ್ಲವೇ? ಅದರಂತೆಯೇ ಬಿಜ್ಜಳನ ಬುದ್ಧಿಯಾದರೂ ಆಯಿತು. ಆದ್ದರಿಂದ ಅವರ ಮಾತಿಗೆ ಒಡಂಬಟ್ಟು, ರಾಜಸಭೆಗೆ ಬಸವಣ್ಣನವರನ್ನು ಕರೆಯಿಸಿಕೊಂಡು, ನಿನ್ನೆ ತಾವು ನಡೆಸಿದ ಸಂಭ್ರಮದ ಗಣಪರ್ವವನ್ನು ನೋಡಿ ಪರಮಾನಂದ ಸಂದೋಹ ಭರಿತನಾದೆನು, ನಾವು ಕೊಡುವ ಹಣವು ತಮ್ಮ ಒಂದು ದಿನದ ಖರ್ಚಿಗೂ ಕೂಡ ಆಗಲಾರದು. ನೀವು ಇಷ್ಟೊಂದು ಹಣವನ್ನು ಎಲ್ಲಿಂದ ತರುತ್ತೀರಿ ಎಂದು ಪ್ರಶ್ನಿಸಲು ಅಯ್ಯಾ ರಾಜನೇ ಕೇಳು, 'ಕೊಡುವವನೂ ಸಂಗ, ಶರಣರ ಮುಖದಿಂದ ತೆಗೆದು ಕೊಳ್ಳುವಾತನೂ ಸಂಗ; ಕೊಟ್ಟದ್ದನ್ನು ತೆಗೆದುಕೊಂಡು, ಕೇಳಿದುದನ್ನು ಕೊಟ್ಟು ಭಕ್ತಿಭಾವದಿಂದ ಭೃತ್ಯತ್ವವನ್ನು ಮಾಡಿಕೊಂಡಿರುತ್ತೇನೆ' ಎಂದು ಬಸವಣ್ಣನವರು ಹೇಳಿದರು.

ಕೊಡುವಾತ ಸಂಗ, ಕೊಂಬುವಾತ ಸಂಗ, ಮಾಡುವಾತ ಬಸವ—ಈ ಮಾತು ಒತ್ತಟ್ಟಿಗಿರಲಿ. ಪ್ರತಿ ದಿನ ದುಡ್ಡು ಎಲ್ಲಿಂದ ಬರುತ್ತದೆ? ಇದು ನಮಗೆ ಸಂಶಯ ಬರುತ್ತದೆ. ಇದನ್ನು ತಾವು ನಿವಾರಣೆ ಮಾಡಬೇಕೆಂದು ಕೇಳಲು, ನಿಮ್ಮ ಬೊಕ್ಕಸ ದಿಂದ ಅದು ಹೇಗೆ ಬರುತ್ತದೆ? ಅಲ್ಲಿ ಅನೇಕ ಕರಣಿಕರಿರುತ್ತಾರೆ. ಅದರಲ್ಲಿ ಒಂದು ಪೈಯನ್ನು ಕೂಡ ಮುಟ್ಟಲು ಯಾರಿಗೂ ಸಾಧ್ಯವಿರುವುದಿಲ್ಲ. ನಿಮ್ಮ ಸಂಶಯ ವ್ಯರ್ಥ ವಾದುದು ಎಂದು ಬಸವಣ್ಣನವರು ಹೇಳಲು, ಅದಕ್ಕೆ ಬಿಜ್ಜಳರಾಜನು ಅದೇನೇ ಇರಲಿ, ಇನ್ನುಮೇಲೆ ಭಿಕ್ಷುಕರಾದೀ ಜಂಗಮರ ಸಹವಾಸವು ಸಾಕು. ನಿಶ್ಚಿಂತರಾಗಿ ರಾಜ್ಯ ಕಾರಭಾರ ಮಾಡಬೇಕು, ಇಲ್ಲದಿದ್ದರೆ ನಮ್ಮ ಮುದ್ರೆಯುಂಗುರವನ್ನು ನಮಗೆ ಕೊಟ್ಟು ಬಿಡಬೇಕೆಂದು ಹೇಳಲು, ಬಸವಣ್ಣನವರು, "ಸಂಗಮನಾಥನೇ" ಎಂದು ಎರಡೂ ಕಿವಿಗಳನ್ನು ಮುಚ್ಚಿಕೊಂಡು, ಜಂಗಮ ಸಂಗವನ್ನು ಬಿಡು ಎಂಬುವ ಪಾಪಕರವಾದ ಮಾತನ್ನು ಕೇಳುವಂತೆ ಮಾಡಿದಿಯಾ? ಜಂಗಮಲಿಂಗಸಂಗವಿಲ್ಲದ ಸ್ಥಾನವೇ ನರಕಾರ್ಣವ. ಜಂಗಮಲಿಂಗ ಸ್ಥಾನವನ್ನು ಬಿಟ್ಟು ತನ್ನ ಶರೀರವನ್ನು ಪೋಷಿಸಿ ಕೊಳ್ಳುವದು ಮಹಾ ಪಾಪಕರವಾದುದು ಎಂದು ಹೇಳಿ ಉಂಗುರವನ್ನು ಕೊಟ್ಟು ಬಿಟ್ಟರು.

ಆಗ ಕೊಂಡೆಯರೆಲ್ಲರೂ, ಬಸವಣ್ಣನವರೇ, ಈ ಭಿಕ್ಷುಕರ ಸಹವಾಸವನ್ನು ಬಿಟ್ಟು ರಾಜ್ಯದ ಕಾರಭಾರವನ್ನು ಎಂದಿನಂತೆ ನಡೆಯಿಸಿಕೊಂಡು ಹೋಗುವದು ಯೋಗ್ಯ ವಾಗಿರುವದಿಲ್ಲವೆ? ಎನಲು,

> "ಕಾಯದ ಕಳವಳಕ್ಕಂಜಿ ಕಾಯಯ್ಯಾ ಎನ್ನೆನು, ಜೀವನೋ
> ಪಾಯಕ್ಕಂಜಿ ಈಯಯ್ಯಾ ಎನ್ನೆನು, 'ಯದ್ಭಾವಂ ತದ್ಭವತಿ' ಉರಿ
> ಬರಲಿ, ಸಿರಿ ಬರಲಿ, ಬೇಕುಬೇಡೆನ್ನನಯ್ಯಾ। ಆ ನಿಮ್ಮ ಹಾರೆನು,
> ಮಾನವರ ಬೇಡೆನು, ಆಣೆ ನಿಮ್ಮಾಣೆ ಕೂಡಲಸಂಗಮದೇವಾ."

ಇದೇ ಸಂಗಮನಾಥನ ನಿರೂಪವೆಂದು ತಿಳಿದು, ಬೇಕಾದವರು ಬೇಕಾದಹಾಗೆ ಮಾತ ನಾಡಲಿ, ನಾನು ಮಾತ್ರ ನನ್ನ ಪ್ರಾಣವಾದ ಜಂಗಮಲಿಂಗವನ್ನೆಂದಿಗೂ ಬಿಡೆನು. ನಮ್ಮೊಡೆಯನಾದ ಸಂಗಮನಾಥನಿಂದಲೇ ಬೇಕಾದುದನ್ನೆಲ್ಲ ಪಡೆದುಕೊಂಡು ನಮ್ಮ

ಜಂಗಮದಾಸೋಹವನ್ನು ಮಾಡುವೆನಲ್ಲದೆ ಎಂದಿಗೂ ಬಿಡೆನು ಎಂದು ಹೇಳಿ ಹೊರಟರು. ರಾಜದೂತರು ಬಸವಣ್ಣನವರ ಅರಮನೆಗೆ ಕೀಲಿಯನ್ನು ಹಾಕಿದರು.

ಬಸವಣ್ಣನವರು ಅರಮನೆ ಬಿಟ್ಟು ಹೋಗುವಾಗ—

"ಧನ ಧನ ಹೋಯಿತೆಂದಡೆ, ಮನವು ಬೆದರಿಮೊಡೆ, ಚಿತ್ತವು ಸಂಶಯ ಪಟ್ಟೊಡೆ, ತನು ತೆರಳಿದೊಡೆ, ಭಾವ ಓಸರಿಸಿದೊಡೆ, ಆಣೆ ನಿಮ್ಮಾಣೆ ನಿಮ್ಮ ಪ್ರಮಥರ ಆಣೆ, ತನುಮನಧನವನಲ್ಲಾಡಿಸಿ ನೋಡು, ಒಡೆಯ ನೀನೇ ಹರಣವ ಮೇಲಿತ್ತೊಡೆ ಕಳವಳವೆ ಕೂಡಲಸಂಗಮ ದೇವಾ"

ಹೀಗೆ ಬಸವಣ್ಣನವರು ಗಂಭೀರ ಮುಖಮುದ್ರೆಯಿಂದ ನಿಶ್ಚಿಂತರಾಗಿ ವಚನವನ್ನು ಹೇಳಲು, ಕೇಳಿದವರು ಚಕಿತರಾದರು. ಕಾಳಿಮನೆಂಬ ಮಂತ್ರಿಯು, ಭಕ್ತಿಭಂಡಾರಿ ಬಸವಣ್ಣನವರೇ, ಈ ಸ್ಥಾನವನ್ನು ನೀವು ಬಿಟ್ಟುಹೋದರೆ ನಿಮ್ಮ ಭಕ್ತಿಗೆ ಕೆಡುಕು ಉಂಟಾಗುವದು. ರಾಜನನ್ನು ಬಿಟ್ಟುಹೋದಮೇಲೆ ನಿಮ್ಮ ದಾಸೋಹವು ಹೇಗೆ ನಡೆಯುವುದು? ಆದ್ದರಿಂದ, ಈ ಜಂಗಮರ ಸಹವಾಸವನ್ನು ಬಿಟ್ಟು ಮೊದಲಿನಂತೆ ಇದ್ದರಾಯಿತೆಂದು ಪರಿಪರಿಯಿಂದ ಹೇಳಿದನು. ಅದಕ್ಕೆ ಬಸವಣ್ಣನವರು—

"ಆರು ಮುನಿದು ಎಮ್ಮನೇನು ಮಾಡುವರಯ್ಯಾ? ಊರು ಮುನಿದು ನಮ್ಮನೆಂತು ಮಾಡುವದಯ್ಯಾ? ಕೊಡಬೇಡ ನಮ್ಮ ಕುನ್ನಿಗೆ ತುಸ, ಇಡಬೇಡ ನಮ್ಮ ಶುನಕಗೆ ತಳಿಗೆಯ, ಆನೆಯನೇರಿ ಹೋಹಾತನ ಶ್ವಾನ ಕಚ್ಚಬಲ್ಲುದೆ? ನಮಗೆ ನಮ್ಮ ಕೂಡಲಸಂಗಮನುಳ್ಳನ್ನಕ್ಕ"

ಎಂದು ವಚನವನ್ನು ಹಾಡುತ್ತಾ ಹೊರಟರು.

ಇತ್ತ ಬಿಜ್ಜಳನಾದರೂ, ಇಲ್ಲಿಯವರೆಗೆ ಬಸವಣ್ಣನವರು ನಮ್ಮ ಮಂತ್ರಿಗಳಾಗಿ ಇದ್ದರು. ಮನಬಲ್ಲಂತೆ ದಾನಧರ್ಮಾದಿಗಳನ್ನು ಮಾಡುತ್ತಿದ್ದರು. ಇನ್ನುಮೇಲೆ ಏನು ಮಾಡುವರೆಂದು ತಮ್ಮ ಬುದ್ಧಿಗನುಗುಣವಾಗಿ ನುಡಿಯುತ್ತ ಸಂತೋಷಪಟ್ಟು ಕೊಂಡಿದ್ದರು.

ಇತ್ತ ಬಸವಣ್ಣನವರು ಸತಿಸುತಾದಿಗಳಿಂದ ಕೂಡಿಕೊಂಡು ಕಪ್ಪಡಿಯ ಸಂಗಮ ನಾಥನ ದಾರಿಯನ್ನು ಹಿಡಿದು ಕಾಲ್ನಡಗೆಯಿಂದಲೇ ಹೊರಟರು. ಸ್ವಲ್ಪ ದೂರದ ವರೆಗೆ ಬಂದಮೇಲೆ ಓರ್ವ ಅಯ್ಯನವರು ಲಿಂಗಮುದ್ರೆಯುಳ್ಳ ಒಂದು ಬರಡು ಗೋವಿನ ಮೇಲೆ ಭೋಜನದ ಸಾಮಗ್ರಿಗಳಲ್ಲದೆ ಪಾತ್ರೆಗಳನ್ನು ಕೂಡ ಹಾಕಿಕೊಂಡು ಬರುತ್ತಿರಲು ಬಸವೇಶ್ವರನು ಆ ಜಂಗಮಮೂರ್ತಿಯನ್ನು ನೋಡಿದಕೂಡಲೇ ಸಾಷ್ಟಾಂಗ ನಮಸ್ಕಾರ ಗಳನ್ನು ಮಾಡಿದನು. ಶುಭಮಸ್ತು ಎಂದು ಆ ಜಂಗಮನು ಆಶೀರ್ವಾದವನ್ನು ಮಾಡಿ ಏನಯ್ಯ ಸದ್ಭಕ್ತರುಗಳಿರಾ, ಈ ಪ್ರಾಂತವು ಬಸವಣ್ಣನಿರುವ ಕಲ್ಯಾಣಪಟ್ಟಣಕ್ಕೆ ಸೇರಿರುವುದೆ? ಆ ಕಲ್ಯಾಣಪಟ್ಟಣದಲ್ಲಿ ಬಸವೇಶ್ವರನೇ ಮೊದಲಾದವರು ಭಕ್ತಿ ಭಾಗ್ಯದಿಂದ ಮೆರೆಯುತ್ತಲಿದ್ದಾರೆಯೇ? ನಾವು ಬಸವಣ್ಣನವರನ್ನು ಕಾಣಬೇಕೆಂದು ಬಹಳ ದೂರದಿಂದ ಬಂದಿರುತ್ತೇವೆ. ನಿಮ್ಮನ್ನು ಕಂಡಕೂಡಲೇ ಆ ಬಸವಣ್ಣನವರನ್ನೇ ಕಂಡಂತಾಯಿತು. ನೀವು ಈ ಕಾಡಿನಲ್ಲಿ ಸತಿಸುತಾದಿಗಳನ್ನು ಕೂಡಿಕೊಂಡು ಕಾಲ್ನಡಗೆ

ಯಿಂದಲೇ ಹೊರಟಿರುವ ಕಾರಣವೇನು? ಹೋಗತಕ್ಕ ಕಾರ್ಯವಾದರೂ ಏನು? ಎನ್ನಲು, ಬಸವಣ್ಣನವರು, ಪೂಜ್ಯರೇ ಕೇಳಿರಿ, ಕಲ್ಯಾಣಪಟ್ಟಣದಲ್ಲಿ ನಡೆಯುತ್ತಿದ್ದ ಶರಣರ ಪರ್ವವನ್ನು ನೋಡಿ ಬಿಜ್ಜಳನು ಸಹಿಸಲಾರದೆ, ಬಸವಣ್ಣನವರೇ, ನಮ್ಮ ರಾಜಮುದ್ರೆಯ ಉಂಗುರವನ್ನು ನಮಗೆ ಕೊಟ್ಟು ನೀವು ಹೊರಟುಹೋಗಿ. ಇಲ್ಲದಿದ್ದರೆ ಈ ದಾಸೋಹವನ್ನಾದರೂ ನಿಲ್ಲಿಸಿರಿ ಎಂದು ಹೇಳಿದನು. ದಾಸೋಹವನ್ನು ಬಿಡುವದು ಶಕ್ಯವಿಲ್ಲವೆಂದು ತಿಳಿದು ಅವರ ಉಂಗುರವನ್ನು ಅವರಿಗೆ ಕೊಟ್ಟು ಬಂದಿರುತ್ತೇವೆ. ಈಗ ಕಪ್ಪಡಿಯ ಸಂಗಮನ ಕಡೆಗೆ ಹೊರಟಿರುತ್ತೇನೆ. ನಾನೇ ಬಸವನು ಎನ್ನುತ್ತ, ಪುನಃ ಪುನಃ ನಮಸ್ಕಾರ ಮಾಡಿದನು. ಓಹೋ ಬಸವ! ಶಿವ ಶಿವ!! ನಿಮಗೆ ಇಂತಹ ಕಷ್ಟವು ಪ್ರಾಪ್ತವಾಯಿತೇ? ಎಂದು ಮನದಲ್ಲಿ ಮರಮರನೆ ಮರುಗಿ, ಕಣ್ಣಿನಲ್ಲಿ ನೀರು ಸುರಿಸುತ್ತ, ಅತ್ಯಂತ ಪ್ರೇಮವಶರಾಗಿ ಬಸವಣ್ಣನವರನ್ನು ಮಿಕಿ ಮಿಕಿ ನೋಡಿ ಅಳುತ್ತ ಆಲಂಗಿಸುತ್ತ ಇರಲು, ಆಗ ಬಸವಣ್ಣನವರು, ಪೂಜ್ಯರೇ, ತಾವು ಏತಕ್ಕೆ ಅಳುವಿರಿ? ತಮ್ಮ ಆಶೀರ್ವಾದದಿಂದ ನನಗೆ ಪರುಷಸಿದ್ಧಿಯುಂಟು. ಇದ್ದಾಗ್ಯೂ ಕೂಡ ಪ್ರಪಂಚ ದಲ್ಲಿ ನಡೆಯತಕ್ಕ ಕಾರ್ಯಕಲಾಪಗಳನ್ನು ಪೂರ್ತಿ ಮಾಡುವುದಕ್ಕೋಸ್ಕರ ತಮ್ಮ ಪಾದದ ಆಜ್ಞೆಯಂತೆಯೇ ನಡೆಯುವೆನು. ಲೋಕದ ಹಿಂದಿನ ಇತಿಹಾಸವನ್ನು ನೋಡಿದರೆ ಪಾಂಡವರೇ ಮೊದಲಾದವರು ಪಟ್ಟ ಕಷ್ಟವು ಸಾಮಾನ್ಯವಾದುದೇ? ನಾನು ಈಗ ತಮ್ಮನ್ನು ಪೂಜಿಸಲಿಕ್ಕೆ ಅನುಕೂಲವಿಲ್ಲವಲ್ಲಾ ಎಂದು ಕೊಂಚ ಉದ್ವಿಗ್ನ ಹೃದಯರಾಗಿ ಕಳವಳಗೊಂಡರು. ಶಿವ ಶಿವ! ಒಡೆಯರ ದಾಸೋಹಕ್ಕೆ ಇಲ್ಲಿ ಸಮಯ ವಿಲ್ಲದೆಹೋಯಿತೇ ಎಂದು ಶೋಕಿಸುತ್ತಿರಲು, ಆ ಅಯ್ಯನವರು, ಎಲೈ ಬಸವ ಲಿಂಗನೇ, ಬಸವೇಶ್ವರನೇ ಏತಕ್ಕೆ ಚಿಂತಿಸುವೆ? ನಮ್ಮನ್ನು ಪೂಜಿಸಲಿಲ್ಲ, ತೃಪ್ತಿ ಪಡಿಸಲಿಲ್ಲವೆಂದು ಆಲೋಚಿಸಬೇಡ ಎಂದು ಹೇಳಿ, ಆ ಅಯ್ಯನವರೂ, ಉಳಿದವರೂ ಮತ್ತೀಘಟ್ಟ ಎಂಬುವ ಸ್ಥಾನಕ್ಕೆ ಬಂದು, ಅಲ್ಲಿ ಹರಿಯುತ್ತಿರುವ ನದಿಯ ದಡದ ದಕ್ಷಿಣಭಾಗದಲ್ಲಿ ಚಿಗುರಿ ತಂಪಾಗಿದ್ದ ಆಲದ ಗಿಡದ ಕೆಳಗೆ ಎಲ್ಲರೂ ಕುಳಿತುಕೊಂಡರು. ಸಕಲರೂ ತಮ್ಮ ತಮ್ಮ ಕ್ರಿಯಾಚರಣೆಗಳನ್ನು ವಿಧಿವತ್ತಾಗಿ ಮಾಡಿಕೊಂಡು ಶಿವಾನುಭವ ಚಿಂತನೆಯನ್ನು ಮಾಡುತ್ತಾ ಕುಳಿತರು. ಆಗ ಬಸವಣ್ಣನವರು—

"ಒಡೆಯರುಳ್ಳಾಳಿಂಗೆ ಕೇಡಿಲ್ಲ ಕಾಣಿರೋ, ಊರೆನ್ನದೆ ಅಡವಿ ಎನ್ನದೆ ಆಳನರಸಿ ಬರ್ಪ ಆಳಿದರುಂಟೆ? ಜೋಳವಾಳಿಂಗೆ ಬಿಜ್ಜಳಂಗೆ ಆಳಾದರೇನು? ವೇಳವಾಳಿಂಗೆ ಕೂಡಿಕೊಂಡಿಪ್ಪ ಕೂಡಲಸಂಗಮದೇವಾ"

ಹೀಗೆ ವಚನವನ್ನು ಹೇಳುತ್ತ ಸಂತೋಷದಿಂದಿರುವ ಸಮಯದಲ್ಲಿ ಹಾಲಿನ ಸ್ವಾಮಿ ಗಳೆಂಬುವರು ಕಲ್ಯಾಣಪಟ್ಟಣದಿಂದ ಬಸವೇಶ್ವರನನ್ನು ಹುಡುಕಿಕೊಳ್ಳುತ್ತ ಒಂದೇ ಉಸಿರಿನಿಂದ ಓಡಿ ಬಂದ ಕಾರಣ ಅವರ ಮೈಯಲ್ಲಿ ಬೆವರು ಬಿಟ್ಟಿದ್ದಿತು. ಬಸವ, ಬಸವ ಎಂದು ಗಾಬರಿಯಿಂದ ಕೂಗಲು, ಬಸವಣ್ಣನವರು ಎದ್ದು ಅವರಿಗೆ ನಮಸ್ಕಾರ ಮಾಡಿದರು. ಶ್ರೀಗುರುವೇ, ನನ್ನನ್ನು ಹುಡುಕಿಕೊಳ್ಳುತ್ತ ತಾವು ಇಷ್ಟು ಕಷ್ಟ ಪಟ್ಟುಕೊಂಡು ಇಲ್ಲಿಗೆ ಬರಬಹುದೇ? ಎಂದು ಅನ್ನಲು, ಬಸವಣ್ಣನವರೇ, ರಾಜನು ಮಾಡಿದ ವೃತ್ತಾಂತವನ್ನೆಲ್ಲ ಕೇಳಿ ನಮಗೆಲ್ಲ ಸಹಿಸಲಸಾಧ್ಯವಾದ ವ್ಯಸನವಾಗಿರುತ್ತದೆ. ಒಂದು ಕ್ಷಣದಲ್ಲಿ ಈ ರಾಜನನ್ನು ಧ್ವಂಸ ಮಾಡಿಬಿಟ್ಟೇವು. ಆದರೆ, ಬಸವಣ್ಣನವರ

ಅಹಿಂಸಾ ತತ್ವವು ನಮ್ಮ ಮುಂದೆ ಬಂದು ನಿಲ್ಲುತ್ತದೆ. ಮತ್ತು ತಾವು ಜ್ಞಾನಕ್ರಿಯೆಗಳ ಉಚ್ಚನೀಚವು ಲೋಕದ ಜನರಿಗೆ ತಿಳಿಯಬೇಕೆಂದು ಹೇಳುವ ಕಾರಣ ಸುಮ್ಮನೆ ಇರುತ್ತೇವೆ. ಶಿವಭಕ್ತ ಸಮುದಾಯವೆಲ್ಲ ತಮ್ಮ ವರ್ತಮಾನವನ್ನು ತಿಳಿದುಕೊಂಡು ಬರಲು ನನ್ನನ್ನು ಕಳುಹಿಸಿರುತ್ತದೆ ಎಂದು ಹೇಳಿದರು. ಸ್ವಲ್ಪಹೊತ್ತು ವಿಶ್ರಾಂತಿ ತೆಗೆದುಕೊಂಡಮೇಲೆ, ಸ್ವಾಮಿಗಳೇ, ತಾವು ಶಿವಾರ್ಚನೆಯನ್ನು ಮಾಡಿರಿ ಎಂದು ಬಸವಣ್ಣನವರು ಹೇಳಲು, ಎಲೈ ಬಸವೇಶ್ವರನೇ, ನಮ್ಮ ಹಾಲಿನ ನೇಮವು ನಿಮಗೆ ಗೊತ್ತೇ ಇದೆ. ಈ ಕಾಡಿನಲ್ಲಿ ಹೇಗೆ ಅನುಕೂಲವಾಗುವದು? ತಾವೇನೂ ಕಾಳಜಿ ಮಾಡಬೇಡಿರಿ ನೋಡೋಣವೆಂದು ಸ್ವಾಮಿಗಳು ಉತ್ತರ ಕೊಟ್ಟರು. ಆದರೆ ಬಸವಣ್ಣನವರಿಗೆ ಆ ಮಾತು ಸರಿಬರಲಿಲ್ಲ. ಆಗ ಅವರು, ಮೊದಲು ಅಯ್ಯನವರು ತಂದ ಆಕಳಿನ ಕೆಚ್ಚಲಿನಲ್ಲಿ ಶಿವ ಶಿವಾ ಎಂದು ಕೈಯ್ಯಾಡಿಸಲು ಕ್ಷೀರವು ಸುರಿಯಲಾರಂಭಿಸಿತು. ಆ ಕ್ಷೀರವನ್ನು ತೆಗೆದುಕೊಂಡು ಸ್ವಾಮಿಗಳ ಶಿವಾರ್ಚನೆಗೆ ವ್ಯವಸ್ಥೆಯನ್ನು ಮಾಡಿದರು.

ದೈವಭಕ್ತರಿಗೆ ಆವುದು ತಾನೇ ಅಸಾಧ್ಯವಾದುದು? "ನೀನೊಲಿದರೆ ಕೊರಡು ಕೊನರುವುದು, ನೀನೊಲಿದರೆ ಬರಡು ಹಯನಾಗುವದು" ಎಂದು ಬಸವಣ್ಣನವರು ತಮ್ಮದೊಂದು ವಚನದಲ್ಲಿ ಹೇಳಿರುತ್ತಾರೆ. ಆ ಬಡ ಪಶುವನ್ನು ತಂದ ಅಯ್ಯನವರು ಬಹಳ ಆನಂದಪಟ್ಟು, ತಾವು ತಂದಿರುವ ಸಾಮಾನುಗಳನ್ನು ತೆಗೆದು ಪಾಕಾದಿಗಳನ್ನು ಮಾಡಿ ದಾಸೋಹವನ್ನು ಪ್ರಾರಂಭಿಸಿದರು. ಆಗ ಅವರು ಬಸವಣ್ಣನವರನ್ನು ಶಿವಾರ್ಚನೆಗೆ ಏಳಿರೆಂದು ಕರೆಯಲು,

ಬಸವಣ್ಣನವರು—

"ಕಂಗಳಿಲ್ಲದ ನೋಟ, ಲಿಂಗವಿಲ್ಲದ ಮಾಟ, ಜಂಗಮವಿಲ್ಲದೂಟ,
ಪ್ರಸಾದವಿಲ್ಲದೆ ಪರ ಹಿಂಗಿತ್ತು, ಶಿವಲೋಕವಿನ್ನೆಲ್ಲಿಯದೊ, ಬಂದ
ಸಮಯವನರಿಯದೆ ಉದರವ ಪೊರೆವರ ಕೂಗಿಡೆ ಕೂಡಲಸಂಗಮದೇವಾ"

ಎಂದು ವಚನವನ್ನು ಹೇಳಲು ಆಗ ಆ ಜಂಗಮಮೂರ್ತಿಗಳು ಅಹುದು ಜಂಗಮ ಮುಖವೇ ಲಿಂಗವು ಲಿಂಗ ಮುಖವೇ ಜಂಗಮವೆಂದು ಒಪ್ಪಿಕೊಂಡು ತಾವೂ ಕುಳಿತುಕೊಂಡು ಎಲ್ಲರನ್ನೂ ಕುಳ್ಳಿರಿಸಿ ತಮ್ಮ ಪ್ರಸಾದವನ್ನು ಎಲ್ಲರಿಗೂ ಕೊಟ್ಟು ತಾವೂ ಸ್ವೀಕರಿಸಿದರು.

ಬಸವಣ್ಣನವರು ತಮ್ಮ ಲಿಂಗ ಜಂಗಮಗಳ ತೃಪ್ತಿಯ ಸಾಧನವು ಇನ್ನುಮೇಲೆ ತಪ್ಪಬಹುದೇ ಎಂದು ಆಲೋಚನೆ ಮಾಡುತ್ತಿರುವ ಸಮಯದಲ್ಲಿ ಆಗ ಗುರುವಾದ ಸಂಗಮನಾಥನು ಸ್ವಪ್ನದಲ್ಲಿ ಕಂಡವನಂತೆ, ನೀನು ಚಿಂತಿಸಬೇಡ, ನಾವು ನಿನಗೆ ಈ ಮೊದಲೇ ಪಂಚಪರುಷಗಳನ್ನು ಕೊಟ್ಟಿರುವೆವು. ಪಂಚಪರುಷವಿದ್ದರೂ ಹೇಗೆ ನಡೆಯಬೇಕೆಂಬುದನ್ನು ನಾವು ನಿನಗೆ ಮೊದಲೇ ಅಪ್ಪಣೆ ಕೊಡಿಸಿರುತ್ತೇವೆ. ಅದರ ಕ್ರಮದಂತೆ ನಡೆಯೆಂದು ಹೇಳಿದಂತಾಗಲು, ಬಸವೇಶನು ಇದನ್ನೆಲ್ಲ ಕೇಳಿ ನಿದ್ರೆಯಿಂದ ತಿಳಿದೆದ್ದು—

"ಕಂಡ ಕನಸು ನಿಧಾನವ ಕಂಡೆನಯ್ಯಾ, ಬಿಡಲಾರದ ನಿಧಾನವ
ಕಂಡೆನಯ್ಯಾ, ಕೂಡಲಸಂಗಯ್ಯನೆಂಬ ನಿಧಿನಿಧಾನವ ಕಂಡೆನಯ್ಯಾ,
ಕಂಡು ಬಿಡಲಾರೆನಯ್ಯಾ. ಅಂಗಯ್ಯಲೆಂದುದೆನ್ನ ಕಂಗಳು ಕೆತ್ತುವು

ದಿಂದು ಬಂದರೇಕೆ ಪ್ರಮಥರು? ಎನ್ನ ಮನೆಗೆ, ಬಂದರೇಕೆ ಪುರಾತನರು? ಎನ್ನ ಮನೆಗೆ, ಕಂಡ ಕನಸು ದಿಟವಾಗಿ ಜಂಗಮ ಮನೆಗೆ ಬಂದೊಡೆ ಹಿಂಗದರ್ಚನೆಯು ಕೂಡಲಸಂಗಯ್ಯ ನಿನ್ನ ಮುಂದೆ"

ಹೀಗೆ ವಚನವನ್ನು ಹೇಳುತ್ತ ಇರಲು, ಅಷ್ಟರಲ್ಲಿ ಬಸವಣ್ಣನವರ ಪುತ್ರನಾದ ಬಾಲ ಸಂಗಯ್ಯನು ಎದ್ದು ಚಿಂತಿಸುತ್ತಿರಲು, ಬಾಲಕನ ಸ್ವಪ್ನದಲ್ಲಿ ಒಬ್ಬಾನೊಬ್ಬ ತಪಸ್ವಿಯು ಬಂದು, ಎಲೈ ಕಂದನೆ, ಈ ಸ್ಥಾನದಲ್ಲಿ ಒಂದು ಹುತ್ತವಿದೆ. ಅಲ್ಲಿ ಒಂದು ನವರತ್ನ ಖಚಿತವಾದ ಪದಕವಿರುವದು. ನೀನು ಅದನ್ನು ತೆಗೆದುಕೊಂಡು ಬಂದು ನಿನ್ನ ತಂದೆಯ ಕೈಯಲ್ಲಿ ಕೊಡು, ಅದರಿಂದ ನಿಮ್ಮ ದಾಸೋಹವು ಕಲ್ಯಾಣಪಟ್ಟಣಕ್ಕಿಂತಲೂ ಹೆಚ್ಚಾಗಿ ನಡೆಯುತ್ತದೆಂದು ಹೇಳಿದನು. ಬಾಲಸಂಗನು ನಡೆದ ವೃತ್ತಾಂತವನ್ನೆಲ್ಲ ಬಸವಣ್ಣ ನವರಿಗೆ ಹೇಳಿದನು. ಎಲೈ ಪುತ್ರನೇ, ಹುತ್ತದಲ್ಲಿ ಆ ಪದಕವಿರುವುದು, ಆದ್ದರಿಂದ ಹಾಲಸ್ವಾಮಿಗಳ ಪಾದೋದಕವನ್ನು ಆ ಹುತ್ತಕ್ಕೆ ಹಾಕಿ ನೀನು ಅದರಲ್ಲಿ ಕೈಯಿಟ್ಟು ತೆಗದುಕೊಂಡು ಬಾ ಎಂದು ಹೇಳಿದರು. ಅದರಂತೆಯೇ ಬಾಲಸಂಗಯ್ಯನು ಹುತ್ತಕ್ಕೆ ಕೈಹಾಕಲು, ಅಲ್ಲಿ ನೂರು ವರ್ಷದ ಕಾಳ ಸರ್ಪವು ತನ್ನ ಐದು ಹೆಡೆಗಳಿಂದ ಶೋಭಿಸುತ್ತಿತ್ತು. ಅದನ್ನು ಬಾಲಸಂಗಯ್ಯನು ತೆಗೆದುಕೊಳ್ಳಲು ಅದು ಕ್ರಿಯಾ ವ್ಯಾಪಾರ ಶೂನ್ಯವಾಗಿ ಅನರ್ಘ್ಯವಾದ ಪದಕವಾಯಿತು. ಅದನ್ನು ನೋಡಿ ಬಸವಣ್ಣ ನವರು ಸಂತೋಷಪಟ್ಟು ಇದರಿಂದ ತಮ್ಮ ಕಾರ್ಯಗಳೆಲ್ಲ ಇನ್ನು ಮುಂದೆ ಚೆನ್ನಾಗಿ ನಡೆಯುತ್ತವೆಂದು ಮನದಲ್ಲಿ ಆಲೋಚಿಸುತ್ತ ಇದನ್ನು ಕಲ್ಯಾಣಪಟ್ಟಣದಲ್ಲಿರುವ ಸಿದ್ದಿಗಶೆಟ್ಟಿಗೆ ಕಳುಹಿಸಿ ಒಂದು ಲಕ್ಷ ಹೊನ್ನನ್ನು ತರೋಣವೆಂದು ಮಾತನಾಡಿ ಹಾಲಸ್ವಾಮಿ ಮತ್ತು ಶಿವಸ್ವಾಮಿಗಳಿಬ್ಬರನ್ನೂ ಕಲ್ಯಾಣಪಟ್ಟಣಕ್ಕೆ ಕಳುಹಿಸಿದರು. ಈ ವಿಷಯವನ್ನು ಬಸವಣ್ಣನವರು ಹಾಲಸ್ವಾಮಿಗಳಿಗೆ ಹೇಳುವ ಕಾಲದಲ್ಲಿ ಒಂದು ನೂರು ಜನ ಗಣಂಗಳು ಶ್ರೀ ಬಸವೇಶ್ವರದೇವರನ್ನು ಹುಡುಕುತ್ತ ಅಲ್ಲಿಗೆ ಬಂದರು. ಹಾಲಸ್ವಾಮಿಗಳು ಕಲ್ಯಾಣಪಟ್ಟಣಕ್ಕೆ ಹೋಗಿ, ಅದನ್ನು ಕೊಟ್ಟ ಸಿದ್ದಿಗಶೆಟ್ಟಿಗೆ ಒಳಗಿರುವ ಪದಕವನ್ನು ತೋರಿಸಲು ಶೆಟ್ಟಿಯು ಒಂದು ಲಕ್ಷ ಹೊನ್ನನ್ನು ಕೊಟ್ಟು ಕಳುಹಿಸಿದನು ಮತ್ತು ಬಸವಣ್ಣನವರ ದಾಸೋಹಕ್ಕೆ ಬೇಕಾದಷ್ಟು ಹಣವನ್ನೂ, ಇನ್ನಿತರ ಸಾಮಾನು ಗಳನ್ನೂ ತೆಗೆದುಕೊಂಡು ಹೋಗಬಹುದು ಎಂದು ಪತ್ರವನ್ನು ಬರೆದು ಕಳುಹಿಸಿದನು.

ಹಾಲಸ್ವಾಮಿಗಳೇ ಮೊದಲಾದವರು ತಮಗೆ ಬೇಕಾದ ಪದಾರ್ಥಗಳನ್ನು ತೆಗೆದು ಕೊಂಡು ಪುನಃ ಮತ್ತೀಘಟ್ಟಕ್ಕೆ ಬಂದರು. ಅಷ್ಟರಲ್ಲಿಯೇ ಚನ್ನಬಸವಣ್ಣನವರು ೧೨೦೦ ಕಂಭಗಳನ್ನು ನೆಡಿಸಿ ಮಂಟಪವನ್ನು ಸಿದ್ಧಪಡಿಸಿದ್ದರು. ಆಗ ಕಲ್ಯಾಣಪಟ್ಟಣ ದಲ್ಲಿದ್ದ ಶಿವಭಕ್ತರ ಸಮುದಾಯವೂ, ನಾನಾ ದಿಕ್ಕುಗಳಿಂದ ಶರಣಸ್ತೋಮವೂ, ಮತ್ತೀಘಟ್ಟಕ್ಕೆ ಬರಲು ಪ್ರಾರಂಭವಾಯಿತು. ಅಲ್ಲಿ ಎಲ್ಲ ಸಿದ್ಧತೆಗಳಾಗಿರುವದನ್ನು ಬಸವಣ್ಣನವರು ನೋಡಿ ಆನಂದಸಾಗರದಲ್ಲಿ ಮುಳುಗಿದರು.

ಮತ್ತು

"ಸೂರ್ಯೋದಯ ತಾವರೆಗೆ ಜೀವಾಳ, ಚಂದ್ರನುದಯ ನೈದಲೆಗೆ ಜೀವಾಳ, ಕೂಪದ ಠಾವಿನಲ್ಲಿ ಕೂಟ ಜೀವಾಳ, ಒಲಿದರ ಠಾವಿನಲ್ಲಿ ನೋಟ ಜೀವಾಳ, ಕೂಡಲ ಸಂಗಶರಣರ ಬರವು ಎನ್ನ ಪ್ರಾಣಜೀವಾಳ"

ಎಂದು ವಚನವನ್ನು ಹೇಳುತ್ತ ಶರಣರು ತಂಡೋಪತಂಡವಾಗಿ ಬರುವದನ್ನು ನೋಡಿ ಹಿಗ್ಗುತ್ತ, ಆನಂದಪಡುತ್ತಲಿದ್ದ ಬಸವಣ್ಣನವರ ಸಂತೋಷಕ್ಕೆ ಎಣೆಯಿಲ್ಲದಾಯಿತು.

"ನಿಮ್ಮನೋಡನೋಡಲೆನ್ನ ಹರಣವಿದ್ದುದು, ನಿಮ್ಮನಗಲಲೊಡನೆ ಮೊದಲೆ ಹರಣದೆಲ್ಲಿಯದೋ?, ಇರುಳಿಹುದು ಒಂದು ಜುಗವೇಲಿ ಕೆಡದಂತೆ, ಹಗಲನಾವ ಪರಿಯೊಲಾಳವಾಡುವೆನಯ್ಯ, ಕೂಡಲಸಂಗನ ಶರಣರನಗಲು ಥಾವತೆಗಿಂದ ಮರಣವೇ ಲೇಸಯ್ಯ."

ಕೂಡಲಸಂಗನ ಶರಣರನ್ನು ಕಂಡರೆ ನನ್ನ ಪ್ರಾಣವಿರುವದು. ಅವರು ಹೋದರೆ ನನ್ನ ಪ್ರಾಣವೇ ಉಳಿಯುವದಿಲ್ಲ. ಕೂಡಲಸಂಗನ ಶರಣರನ್ನು ಅಗಲುವದಕ್ಕಿಂತ ಮರಣವೇ ಲೇಸೆಂದು ಹೇಳುವ ಬಸವಣ್ಣನವರ ಮಾತಿನಲ್ಲಿ ಎಂತಹ ಗಾಂಭೀರ್ಯವಿರುತ್ತ ದೆಂಬುವದು ಸ್ಪಷ್ಟ ಕಾಣಿಸುತ್ತದೆ. ಅವರು ಶರಣರೆಂದರೆ ಅಷ್ಟು ಪ್ರೀತಿಸುತ್ತಾ ಇದ್ದರು.

ಇತ್ತ ಒಂದು ದಿನ ಬಿಜ್ಜಳನು ತನ್ನ ಸಭೆಯಲ್ಲಿ ಭಕ್ತಿಪಿತ್ತವು ತಲೆಗೇರಿ ಬಸವಣ್ಣ ಎತ್ತ ಹೋದನೋ ತಿಳಿಯಲಿಲ್ಲ ಎಂದು ಹೇಳಲು, ಹತ್ತಿರ ಇದ್ದ ಚರರು, ಬಸವಣ್ಣನು ಅನರ್ಘ್ಯವಾದ ರತ್ನದ ಪದಕವನ್ನು ಸಿದ್ದಿಗಶೆಟ್ಟಿಗೆ ಕೊಟ್ಟು ಇಲ್ಲಿಗಿಂತ ಎಷ್ಟೋ ಪಾಲು ಹೆಚ್ಚು ಗಣತೃಪ್ತಿಯನ್ನು ಮತ್ತೀಘಟ್ಟದಲ್ಲಿ ನಡೆಯಿಸಿರುತ್ತಾನೆಂದು ಹೇಳಿದರು. ಅದಕ್ಕೆ ರಾಜನು, ಇದೆಲ್ಲವೂ ನಿಜವೋ? ಹಾಗಾದರೆ ಶೆಟ್ಟಿಯನ್ನು ನಮ್ಮಲ್ಲಿಗೆ ಕರೆದುಕೊಂಡು ಬನ್ನಿರೆಂದು ಚರರನ್ನು ಕಳುಹಿಸಲು ಅವರು ಶೆಟ್ಟಿಯನ್ನು ಕರೆದುಕೊಂಡು ಬಂದರು. ಆಗ ಬಿಜ್ಜಳನು ಶೆಟ್ಟಿಯಿಂದ ಎಲ್ಲ ವೃತ್ತಾಂತವನ್ನೂ ತಿಳಿದುಕೊಂಡು, ಹಾಗಾದರೆ ರತ್ನವನ್ನು ತರಿಸೆಂದು ಶೆಟ್ಟಿಗೆ ಹೇಳಿದನು. ಮಹಾರಾಜರೇ, ರತ್ನದ ಪೆಟ್ಟಿಗೆಯು ಬಸವಣ್ಣನವರಿಂದ ಮೊಹರು ಮಾಡಿದ್ದಾಗಿದೆ. ಅದನ್ನು ತೆಗೆಯಲಿಕ್ಕೆ ಅವರೇ ಬರಬೇಕಾಗುತ್ತದೆ. ಆದ್ದರಿಂದ ತಾವು ಅವರನ್ನು ಕರೆಯಿಸಿದರೆ ನಾನು ಅವರ ಸಮಕ್ಷಮ ಕೀಲಿಯನ್ನು ಕೊಡುತ್ತೇನೆಂದು ಶೆಟ್ಟಿಯು ಹೇಳಿದನು.

ಹಾಗೆಯೇ ಆಗಲೆಂದು ಚರರನ್ನು ಬಸವಣ್ಣನವರಿದ್ದಲ್ಲಿಗೆ ಕಳುಹಿಸಿದರು. ಚರರು ಬಸವಣ್ಣನವರೇ, ತಾವು ಅರಮನೆಯ ರತ್ನವನ್ನು ಸಿದ್ದಿಗಶೆಟ್ಟಿಯವರಲ್ಲಿಟ್ಟಿರುವಿರೆಂಬ ಸುದ್ದಿಯನ್ನು ಕೇಳಿ ಮಹಾರಾಜರು ಕೋಪಗೊಂಡಿರುತ್ತಾರೆ. ತಾವು ಬೇಗನೆ ದಯಮಾಡಿಸಿ ಅವರ ಸಂಶಯ ಪರಿಹಾರಮಾಡಬೇಕೆಂದು ಹೇಳಲು, ಅದಕ್ಕೆ ಶ್ರೀ ಬಸವಣ್ಣನವರು ಮುಗುಳುನಗೆ ನಗುತ್ತ, ಆಗಲಿ, ಎಲ್ಲವೂ ಪರಶಿವನ ಆಟ ಎಂದು ಹೊರಟು ಬಿಜ್ಜಳನ ಸಭೆಗೆ ಬಂದರು. ಆಗ ಶಿವಭಕ್ತರ ಮುಖಗಳೆಲ್ಲ ಪ್ರಫುಲ್ಲಿತಗಳಾದವು. ಬಿಜ್ಜಳನು, ಏನಿರೈ ಬಸವಣ್ಣನವರೇ, ನೀವು ನಮ್ಮ ರತ್ನವನ್ನು ಸಿದ್ದಿಗಶೆಟ್ಟಿಯಲ್ಲಿಡಬೇಕೆ ? ಎಂದು ಕೇಳಿದನು.

ಅದಕ್ಕೆ ಬಸವಣ್ಣನವರು, ಭೂಪಾಲನೇ, ಆ ರತ್ನವು ನಿಮ್ಮದಲ್ಲ. ನಿಮ್ಮದಾಗಿದ್ದರೆ ನೀವು ಅದನ್ನು ತೆಗೆದುಕೊಳ್ಳಬಹುದು. ಆದರೆ, ಅದು ಸಾಕ್ಷಾತ್ ಪರಶಿವನ ಪದಕವೆಂದು ಹೇಳಿದರು. ಮತ್ತು ಪೆಟ್ಟಿಗೆಯನ್ನು ತರಿಸಿ ರಾಜನ ಹತ್ತಿರ ಇಟ್ಟು, ನಿಮ್ಮದಾದರೆ ನೀವೇ ತೆಗೆದುಕೊಳ್ಳಿರಿ ಎಂದು ಹೇಳಿದರು. ಆಗ ಬಿಜ್ಜಳನು ಕೀಲಿಯನ್ನು ತೆಗೆಯಿಸಿ ತಾನೇ ಕೈಯಿಟ್ಟು ತೆಗೆದುಕೊಳ್ಳಲು ಹೋಗಲು, ಅದು ತನ್ನ ಮೊದಲಿನ ಐದು ಹೆಡೆಗಳ ಆಕಾರವನ್ನು ತಾಳಿ ಬುಸ್ಸೆನಲು, ಸಭೆಯವರೆಲ್ಲ ಬಹಳ ಗಾಬರಿ

ಗೊಂಡರು. ಬಿಜ್ಜಳನಾದರೋ ಮೂರ್ಛೆಯಿಂದ ತಿಳಿದೆದ್ದು, ಬಸವಣ್ಣನವರೇ, ಈ ಪದಕವು ನಮ್ಮದಲ್ಲ. ಚಾಡಿಕೋರರ ಮಾತನ್ನು ಕೇಳಿ ಕೆಟ್ಟೆನು. ನಿಜವಾಗಿ ಇದು ಪರಶಿವನ ಪದಕವೇ ಆಗಿರುತ್ತದೆ ಎಂದನು. ಆಗ ಬಸವಣ್ಣನವರು ಅದನ್ನು ಮುಟ್ಟಲು ಅದು ಮುಂಚಿನಂತೆ ಪದಕವಾಯಿತು. ಬಸವಣ್ಣನವರು ಮುಂಚಿನಂತೆ ಅದಕ್ಕೆ ಕೀಲಿಯನ್ನು ಹಾಕಿ ಸಿದ್ದಿಗಶೆಟ್ಟಿಯ ಕೈಯ್ಯಲ್ಲಿ ಕೊಟ್ಟು ಮತ್ತೀಘಟ್ಟಕ್ಕೆ ಹೊರಟರು. ಬಿಜ್ಜಳಭೂಪಾಲನು ಅವರನ್ನು ನೋಡಿ ಕಣ್ಣೀರು ಸುರಿಸುತ್ತ, ಎಲೌ ಬಸವೇಶ್ವರನೇ, ನೀನು ಬಿಟ್ಟುಹೋದಮೇಲೆ ನನ್ನ ಭಾಗ್ಯಾಂಗನೆಯು ನನ್ನನ್ನು ಬಿಟ್ಟು ಹೊರಟುಹೋಗುವದು ನಿಶ್ಚಯ ಆದ್ದರಿಂದ ನೀನು ಬಿಟ್ಟುಹೋಗಬೇಡ, ನನ್ನ ಅಪರಾಧವನ್ನು ಕ್ಷಮಿಸು, ಕಾಪಾಡು ಕಾಪಾಡು ಎಂದು ಬಹಳ ವಿನಯ ಪ್ರಪೂರಿತರಾಗಿ ದೈನ್ಯೋಕ್ತಿಯಿಂದ, ನಿನ್ನ ನಿಜಸ್ಥಿತಿಯನ್ನು ತಿಳಿಯಲು ಯಾರಿಗೆತಾನೇ ಸಾಧ್ಯ? ಇಲ್ಲಿಗಿಂತಲೂ ಹೆಚ್ಚಾಗಿ ನಿಮ್ಮ ನಿತ್ಯಾಚರಣೆಗಳು ಅಲ್ಲಿ ನಡೆದವು. ಸತ್ಯವಾಗಿ ನಿಮ್ಮಿಷ್ಟವನ್ನು ಪರಶಿವನು ಯಾವಾಗಲೂ ಕೈಗೂಡಿಸುತ್ತಾನೆ. ನನ್ನ ಅಪರಾಧವನ್ನು ಕ್ಷಮಿಸಿ ಮೊದಲಿನಂತೆ ತಾವೇ ಮುಖ್ಯ ಮಂತ್ರಿಗಳಾಗಿರಬೇಕೆಂದು ಪ್ರಾರ್ಥಿಸಿದನು.

ಈ ದಿನ ಮೊದಲುಗೊಂಡು ನನ್ನ ಭುಜಶ್ರೀಯು ನಿಮ್ಮದು, ಭಾಗ್ಯಶ್ರೀಯು ನಿಮ್ಮದು, ಕೀರ್ತಿಶ್ರೀಯು ನಿಮ್ಮದು, ಸಾಮ್ರಾಜ್ಯ ಯಜಮಾನಶ್ರೀಯು ನಿಮ್ಮದು, ಐಶ್ವರ್ಯಶ್ರೀಯು ನಿಮ್ಮದು, ಎಲ್ಲವೂ ನಿಮ್ಮದೇ ಇರುತ್ತದೆ. ನಿಮ್ಮ ಮನಸ್ಸಿಗೆ ಬಂದಂತೆ ಮಾಡಿರೆಂದು ಬೇಡಿಕೊಂಡನು. ದಯಾಶಾಲಿಗಳಾದ ಬಸವಣ್ಣನವರು ಮಂದಸ್ಮಿತರಾಗಿ ಮತ್ತೀಘಟ್ಟದಿಂದ ಚನ್ನಬಸವಣ್ಣನವರೇ ಮೊದಲಾದವರನ್ನು ವಾದ್ಯ ವೈಭವದಿಂದ ಕರೆಯಿಸಿಕೊಂಡು ಮುದ್ರೆಯುಂಗುರವನ್ನು ತೆಗೆದುಕೊಂಡು ಎಂದಿನಂತೆ ತಮ್ಮ ಧರ್ಮಕಾರ್ಯಗಳನ್ನು ಮತ್ತು ರಾಜಕಾರಣಗಳನ್ನೆಲ್ಲ ಲೀಲಾಜಾಲವಾಗಿ ನಡೆಸುತ್ತ ಲೋಕದಲ್ಲಿ ಧರ್ಮವೂ ರಾಜಕಾರಣವೂ ಎರಡೂ ಕೂಡಿಕೊಂಡು ಹೋಗಲಿಕ್ಕೆ ಹೇಗೆ ಸಾಧ್ಯವೆಂಬುವದನ್ನು ತೋರಿಸುತ್ತ ದಶದಿಕ್ಕುಗಳಲ್ಲಿ ತಮ್ಮ ಕೀರ್ತಿ ವಾರ್ತೆಗಳನ್ನು ಹಬ್ಬಿಸಿ ಆನಂದದೊಳಗೆ ಎಂದಿನಂತೆಯೇ ಇರುತ್ತಿದ್ದರು.

ಓದುಗರಿಗೆ ಇಲ್ಲಿ ಒಂದು ಮಾತನ್ನು ಹೇಳಬೇಕಾಗಿದೆ. ಬಸವಣ್ಣನವರ ಪವಾಡಗಳೂ ಅವಾಂತರ ಪವಾಡಗಳೂ ಕೂಡಿ ಸಾವಿರಾರು ಪುಟದ ಒಂದು ಗ್ರಂಥವಾಗುವದು. ಶಿಂಗಿರಾಜಪುರಾಣ, ಬಸವೇಶ್ವರ ಪುರಾಣ, ಇನ್ನುಳಿದ ಅನೇಕ ಶಿವಶರಣರ ಪುರಾಣ ಮತ್ತು ಕಾವ್ಯಾದಿಗಳಲ್ಲಿ ಬಸವಣ್ಣನವರ ಪವಾಡದ ಬಗ್ಗೆ ಹೇರಳವಾಗಿ ಬರೆಯಲಾಗಿದೆ. ಮಾದರಿಗಾಗಿ ಇಲ್ಲಿ ಕೆಲವನ್ನು ತೋರಿಸಿದೆವು. ಬಸವಣ್ಣನವರ ಚರಿತ್ರೆಯು ಕಟ್ಟು ಕಥೆಯಾಗಿರದೆ ನಿಜವಾದ ಸಂಗತಿಯಿಂದ ಕೂಡಿರುತ್ತದೆ. ಇದಕ್ಕೆ ಪ್ರತಿಯೊಂದು ಸಂದರ್ಭದಲ್ಲಿ ಅವರು ಹೇಳಿದ ವಚನಗಳೇ ಸಾಕ್ಷಿಯಾಗಿವೆ. ಲೋಕದಲ್ಲಿ ಯಾರಾದ ರೊಬ್ಬ ಮಹನೀಯರ ಚರಿತ್ರೆಯನ್ನು ಸಿದ್ಧಪಡಿಸಬೇಕಾದರೆ ಅವರು ಸ್ವತಃ ಹೇಳಿದ ಮಾತುಗಳಷ್ಟು ಬೇರೆ ಯಾವೂ ಪ್ರಾಮಾಣ್ಯಗಳಾಗಲಾರವು. ಬಸವಣ್ಣನವರ ಚರಿತ್ರೆಗೆ ಬೇಕಾದಷ್ಟು ಆಧಾರಗಳನ್ನು ಒದಗಿಸಿಕೊಡಲು ಅನುಕೂಲ ಇರುತ್ತದೆ. ಈ ಪ್ರಕರಣ ದಲ್ಲಿ ಅವರ ಸ್ವಂತ ವಚನಗಳನ್ನೇ ಪ್ರಮಾಣವನ್ನಾಗಿ ಕೊಟ್ಟಿರುತ್ತೇವೆ. ಅವರ ಸಾವಿರಾರು ವಚನಗಳು ಸಂದರ್ಭಕ್ಕೆ ಅನುಸಾರವಾಗಿರುತ್ತವೆ.

# ಹತ್ತೊಂಬತ್ತನೆಯ ಪ್ರಕರಣ

## ಶ್ರೀ ಬಸವಣ್ಣನವರೂ ಅವರ ಪ್ರತಿಜ್ಞೆಗಳೂ

ಜಗತ್ತಿನೊಳಗೆ ಇಲ್ಲಿಯುವರೆಗೆ ಆಗಿಹೋಗಿರುವ ಮಹಾಪುರುಷರ ಚರಿತ್ರೆಗಳನ್ನು ನೋಡಿದರೆ, ಅವರು ಯಾವದಾದರೊಂದು ಮಹಾಕಾರ್ಯದಲ್ಲಿ ಪ್ರವೃತ್ತರಾಗಿ ಆ ಕಾರ್ಯವನ್ನು ಮಾಡತಕ್ಕ ಪ್ರಸಂಗದಲ್ಲಿ ತಮ್ಮ ಮೇಲೆ ಎಂತಹ ಘೋರತರವಾದ ದುರ್ಧರ ಪ್ರಸಂಗ ಬಂದರೂ ಕೂಡ ಧೃತಿಗೆಡದೆ ತಮ್ಮ ಕಾರ್ಯವನ್ನು ಕೊನೆಗಾಣಿಸಿದ್ದುದು ಕಂಡುಬರುತ್ತದೆ. ಒಂದು ಕಾರ್ಯವನ್ನು ಪ್ರಾರಂಭಿಸಿದರೆ ಅದಕ್ಕೆ ವಿಘ್ನಗಳೊದಗುವುದು ಸ್ವಾಭಾವಿಕವಾದುದು. ಬಂದ ವಿಘ್ನಗಳಿಗೆ ಧೈರ್ಯಗುಂದದೆ ಅದನ್ನು ಕೊನೆಗಾಣಿಸುವ ಜಾಣತನವಾಗಲೀ, ಕ್ರಿಯಾನಿಷ್ಠೆಯಾಗಲೀ ಎಲ್ಲರಲ್ಲಿರುವುದಿಲ್ಲ.

"ಪ್ರಾರಬ್ಧಮುತ್ತಮ ಜನಾಃ ನ ಪರಿತ್ಯಜಂತಿ"

ಪ್ರಾರಂಭಿಸಿದ ಕಾರ್ಯವನ್ನು ಯಾರು ಕೊನೆಗಾಣಿಸಿ ಯಶಸ್ವಿಗಳಾಗುತ್ತಾರೋ ಅವರೇ ಜಗತ್ತಿನಲ್ಲಿ ತೇಜಃಪುಂಜರಾಗಿ ಕೀರ್ತಿಶಾಲಿಗಳಾಗುತ್ತಾರೆ. ಅವರು ಜನರ ನಾಲಿಗೆಯ ತುದಿಯಲ್ಲಿ ಯಾವಾಗಲೂ ನಲಿದಾಡುತ್ತಲಿರುತ್ತಾರೆ. ಅಂತಹ ಶ್ರೇಷ್ಠ ಸತ್ಕಾರ್ಯಗಳನ್ನು ಮಾಡಿದವರನ್ನೇ ಜನರು ಹಿಂಬಾಲಿಸುತ್ತಾರೆ. ಅವರ ಕೀರ್ತಿಯು ಅಚ್ಚಳಿಯದೆ ಉಳಿಯುವದು. ಹಿಡಿದ ಕಾರ್ಯಗಳನ್ನು ವಿಘ್ನಗಳಿಗೆ ಹೆದರದೆ ಅದನ್ನು ಕೊನೆಗಾಣಿಸುವದಕ್ಕೆ ಕ್ರಿಯಾಯೋಗವೆಂದು ಹೆಸರು. ಅದೊಂದು ದೊಡ್ಡವರಿಗೆ ನಿತ್ಯದ ಮಹಾ ವ್ರತವಾಗಿ ಪರಿಣಮಿಸುವದು. ಧೈರ್ಯವಾಗಲೀ, ಕೈಗೊಂಡ ಕಾರ್ಯದಲ್ಲಿ ನಿಷ್ಠೆಯಾಗಲೀ ಇಲ್ಲದಿದ್ದರೆ ಅಂತಹ ಮಹತ್ಕಾರ್ಯಗಳು ಕೊನೆಗೊಳ್ಳಲಾರವು. ಮನುಷ್ಯನು ಒಂದು ಕಾರ್ಯವನ್ನು ಹಿಡಿದನೆಂದರೆ ತನ್ಮಯನಾಗಿ ನಿಷ್ಠೆಯಿಂದ ಅದನ್ನು ಕೊನೆಗಾಣಿಸಬೇಕಾಗುತ್ತದೆ. ಇಲ್ಲದಿದ್ದರೆ ಅವನು ಅದರಲ್ಲಿ ಅಯಶಸ್ವಿಯಾಗಿ ಲೋಕದ ಜನರೆದುರಿಗೆ ಅಪಕೀರ್ತಿಯನ್ನು ಹೊಂದುವನು. ದೊಡ್ಡ ದೊಡ್ಡ ಲೋಕೋಪಕರಗಳಾದ ಕಾರ್ಯಗಳನ್ನು ಮಾಡಿದವರೇ ಶ್ರೇಷ್ಠರಾದ ಚರಿತ್ರೆ ನಾಯಕರಾಗುತ್ತಾರೆ. ಇಂತಹ ಮಹತ್ಕಾರ್ಯವನ್ನು ಕೈಗೊಂಡು ಅದರಲ್ಲಿ ಯಶಸ್ವಿಗಳಾಗಿ ಭೂಮಂಡಲದಲ್ಲಿ ಪ್ರಸಿದ್ಧರಾದ ಮಹಾಪುರುಷರಲ್ಲಿ ಬಸವಣ್ಣನವರೊಬ್ಬರಾಗಿರುತ್ತಾರೆ. ಅವರು ಮುಖ್ಯವಾಗಿ ಭೂಲೋಕದಲ್ಲಿ ಕ್ಷೀಣವಾಗಿ ಹೋಗಿದ್ದ ಶಿವಭಕ್ತಿಯನ್ನು ಉದ್ಧಾರ ಮಾಡುವದಕ್ಕೆ ಅವತರಿಸಿದರೆಂಬುವದು ಅನೇಕ ಐತಿಹಾಸಿಕ ಸಂಗತಿಗಳಿಂದ ತಿಳಿದುಬರುತ್ತದೆ. ಬಸವಣ್ಣನವರು ತಾವು ಹಿಡಿದ ವ್ರತಗಳಲ್ಲಿ ಯಶಸ್ವಿಗಳಾಗಿರುತ್ತಾರೆ. ಅವರು ಪ್ರತಿಜ್ಞಾಪೂರ್ವಕವಾಗಿ ತಮ್ಮ ಕಾರ್ಯಗಳನ್ನು ಕೊನೆಗಾಣಿಸಿರುತ್ತಾರೆ.

> "ಅರ್ಥವನರ್ಥವ ಮಾಡಿ ಕೋಲಾಹಲಂಗೈಯುತ್ತಿರಲಿ, ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿಯುತ್ತಿರಲಿ, ಮುಟ್ಟುವ ಸ್ತ್ರೀಯ ಕಣ್ಣ ಮುಂದೆ ಅಭಿಮಾನಂಗೊಂಡು ನೆರೆಯುತ್ತಿರಲಿ, ಇಂತೀ ತ್ರಿವಿಧವು ಹೊರಗಣವು ಇನ್ನೆಂತ್ನಂಗದ ಮೇಲೆ ಬರಲಿ, ಹಿಡಿಖಂಡಂಗೊಯ್ಯಲಿ, ಇಕ್ಕುವ ಶೂಲ ಪ್ರಾಪ್ತಿಸಲಿ, ಹಾಕೊಂದೆಸೆ ಹನ್ನೊಂದೆಸೆಯಾಗಿ ಮಾಡುತ್ತಿರಲಿ,

ಮತ್ತೆಯೂ ಲಿಂಗಾರಾಧನೆಯ ಮಾಡುವೆ, ಮತ್ತೆಯೂ ಜಂಗಮಾರಾಧನೆಯ ಮಾಡುವೆ, ಪ್ರಸಾದಕ್ಕೆ ತಪ್ಪೆನು. ಇಂತಪ್ಪ ಭಾಷೆ ಕಿಂಚಿತ್ತು ಹುಸಿಯಾದರೆ ನೀನಂದೇ ಮೂಗಕೊಯ್ಯಿ ಕೂಡಲಸಂಗಮದೇವಾ."

ಈ ವಚನದಲ್ಲಿಯ ಪ್ರತಿಯೊಂದು ಶಬ್ದವನ್ನೂ ನೋಡಿದ್ದೇ ಆದರೆ ಅವರ ಲೋಕೋತ್ತರವಾದ ಶಿವ ವ್ರತವು ಎದ್ದು ಕಾಣಿಸುತ್ತದೆ. ಇಂತಹ ಕಠೋರ ಶಬ್ದಗಳು ಬಸವಣ್ಣನವರಂತಹ ಸತ್ವಶಾಲಿ ಮಹಾಪುರುಷರ ವಾಣಿಯಿಂದ ಹೊರಡಬೇಕಾದರೆ ಅವರ ವ್ರತಗಳಿಗೆ ಎಂತಹ ವಿಪತ್ತು ಬಂದೊದಗಿರಬಹುದೆಂಬುವದು ಸ್ಪಷ್ಟವಾಗಿ ತಿಳಿದುಬರುತ್ತದೆ. ಏನು ಬಂದರೂ ನಾನು ಲಿಂಗಾರಾಧನೆ ಮಾಡುವೆನೆಂಬುವ ಅವರ ವಾಣಿಯಲ್ಲಿ ವೀರತನದ ದಿವ್ಯ ತೇಜಸ್ಸು ಅಡಗಿರುತ್ತದೆ. ಶಿವಭಕ್ತಿಯ ಅಸಾಧಾರಣವಾದ ದೃಢತ್ವವು ವ್ಯಕ್ತವಾಗುತ್ತದೆ. ನಶಿಸಿಹೋದ ಶಿವಭಕ್ತಿಯನ್ನು ಉದ್ಧಾರ ಮಾಡಲು ಮರ್ತ್ಯಲೋಕದಲ್ಲಿ ಮಾನವರಾಗಿ ಜನಿಸಿದ ಬಸವಣ್ಣನವರು ಆ ತರಹದ ದೊಡ್ಡ ವಿಘ್ನಗಳುಂಟಾಗದೆ ಇಂತಹ ಮಾತುಗಳನ್ನು ಉಚ್ಚರಿಸುತ್ತಿರಲಿಲ್ಲ. ಇಂತಹ ವಿಘ್ನಗಳನ್ನು ಎದುರಿಸದಿದ್ದರೆ ಸತ್ಯಸಾಮ್ರಾಜ್ಯದ ಸಾರ್ವಭೌಮರೆನ್ನಿಸಿಕೊಳ್ಳುತ್ತಿರಲಿಲ್ಲ. ದಯಾವೀರರೆಂಬ ಬಿರುದನ್ನು ಪಡೆಯುತ್ತಿರಲಿಲ್ಲ. ಸದ್ಭಕ್ತಿಸೂರೆಗಾರರೆಂದೆನ್ನಿಸಿಕೊಂಡು ಪೂಜ್ಯವ್ಯಕ್ತಿಗಳಾಗುತ್ತಿರಲಿಲ್ಲ. ಲೋಕದಲ್ಲಿ ಯಾವದಾದರೊಂದು ಅದ್ಭುತ ಕಾರ್ಯ ಪ್ರಾರಂಭಿಸಿದರೆ ಅವರಿಗೆ ಎಲ್ಲ ಕಡೆಯಿಂದಲೂ ವಿರೋಧವುಂಟಾಗುವದು ಸ್ವಾಭಾವಿಕವಾದುದಾಗಿದೆ. ಕೆಲವು ದಿನಗಳು ಹೋಗಿ ಆ ಕಾರ್ಯದ ಮಹತ್ವವು ತಿಳಿದ ಮೇಲೆ ಮೊದಲು ವಿರೋಧಿಸಿದ ಜನಗಳೇ ಕಡೆಗೆ ಅನುಯಾಯಿಗಳೂ ಆಗಬಹುದು. ಹೊಸ ಕಾರ್ಯವು ಬೇಕಾದಂತಹ ಮಹತ್ವದ್ದಿರಲಿ ಒಂದು ವರ್ಗದಿಂದ ಅದಕ್ಕೆ ವಿರೋಧವು ಆಗಿಯೇ ತೀರುವದು. ಇದು ಜಗತ್ತಿನ ಜನರ ಅನುಭವಕ್ಕೆ ಬಂದ ಮಾತಾಗಿರುತ್ತದೆ.

ಬಸವಣ್ಣನವರು, "ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ನಮಗೀಗಲೇ ಬರಲಿ, ಇದಕಾರಂಜುವರು? ಇದಕಳುಕುವರಾರು? ಜಾತಸ್ಯ ಮರಣಂ ಧ್ರುವಂ" ಎಂಬುದಾಗಿ ಕೂಡಲಸಂಗಮದೇವರು ಬರೆದ ಬರಹವ ತಪ್ಪಿಸುವರೆ? ಹರಿಹರಬ್ರಹ್ಮಾದಿಗಳಿಗಳವಲ್ಲವೆಂದು ಹೇಳಿದ್ದಾರೆ.

ಹುಟ್ಟಿದ ಪ್ರಾಣಿಯು ಎಂದಾದರೊಂದು ದಿನ ಸಾಯಲೇ ಬೇಕು. ಅಂದಮೇಲೆ ಸತ್ಕಾರ್ಯವನ್ನು ಮಾಡತಕ್ಕ ಪ್ರಸಂಗದಲ್ಲಿ ಮರಣ ಬಂದರೆ ಅದಕ್ಕೇಕೆ ಅಂಜಬೇಕು? ಪರಮಾತ್ಮನಾದ ಕೂಡಲಸಂಗನು ಬರೆದ ಹಣೆಯಬರಹವನ್ನು ತಪ್ಪಿಸುವದು ಯಾರಿಗೂ ಸಾಧ್ಯವಾದುದಲ್ಲ ಎಂದು ಹೇಳುವ ಬಸವಣ್ಣನವರ ವಾಣಿಯು ಅನುಕರಣೀಯವಾಗಿ ಇರುತ್ತದೆ.

ಇನ್ನೊಂದು ವಚನದಲ್ಲಿ—

"ಕಾಯದ ಕಳವಳಕ್ಕಂಜಿ ಕಾಯಯ್ಯಾ ಎನ್ನೆನು, ಜೀವನೋಪಾಯಕ್ಕಂಜಿ ಈಯಯ್ಯಾ ಎನ್ನೆನು, 'ಯದ್ಭಾವಂ ತದ್ಭವತಿ' ಉರಿ ಬರಲಿ, ಸಿರಿ ಬರಲಿ, ಬೇಕುಬೇಡೆನ್ನನಯ್ಯಾ ಆ ನಿಮ್ಮ ಹಾರೆನು, ಮಾನವರ ಬೇಡೆನು, ಆಣೆ ನಿಮ್ಮಾಣೆ ಕೂಡಲಸಂಗಮದೇವಾ."

ನಾನು ನನ್ನ ಕಳವಳಕ್ಕಂಜಿ ನೀನು ನನ್ನನ್ನು ರಕ್ಷಿಸು ಎಂದು ಹೇಳಲಾರೆನು. ಈ ಜಗತ್ತಿನ ಮಾನವರನ್ನು ಕುರಿತು ಏನನ್ನೂ ಬೇಡೆನು. ಸಂಪತ್ತು ಬಂದರೆ ಬರಲಿ, ವಿಪತ್ತು ಬಂದರೆ ಮಾತ್ರ ಬೇಡವೆಂದು ಹೇಳಲಾರೆನು. ಜಗತ್ತಿನಲ್ಲಿ ಜನಗಳ ಓಘವು "ಸುಖಂ ಮೇ ಭೂಯಾತ್ ದುಃಖಂ ಮಾಭೂತ್" ಸುಖವು ನನಗೆ ಬರಲಿ ದುಃಖವು ಬೇಡವೆಂಬುದೇ ಇರುತ್ತದೆ. ಆ ಮಾರ್ಗವು ಸರಿಯಾದುದಲ್ಲವೆಂದೇ ಬಸವಣ್ಣನವರ ಅಭಿಪ್ರಾಯ ವಾಗಿರುತ್ತದೆ.

> "ವಿಪದಿಧೈರ್ಯಮಥಾಭ್ಯುದಯೇ ಕ್ಷಮಾ । ಸದಸಿ ವಾಕ್ಪಟುತಾ ಯುಧಿ ವಿಕ್ರಮಃ ॥ ಯಶಸಿ ಚಾಭಿರುಚಿರ್ವ್ಯಸನಂ ಶೃತೌ । ಪ್ರಕೃತಿಸಿದ್ಧಮಿದಂಹಿ ಮಹಾತ್ಮನಾಂ ॥"

ಅಂದರೆ— ವಿಪತ್ತಿನಲ್ಲಿ ಧೈರ್ಯವು, ಅಭ್ಯುದಯದಲ್ಲಿ ಕ್ಷಮಾ ಗುಣವು, ಸಭೆಯಲ್ಲಿ ವಾಕ್ಪಟುತ್ವವು, ಯುದ್ಧದಲ್ಲಿ ಪರಾಕ್ರಮ, ಕೀರ್ತಿಯಲ್ಲಿ ಅಭಿರುಚಿ, ಶಾಸ್ತ್ರಚಿಂತನೆ ಯಲ್ಲಿ ವ್ಯಸನ ಇಂತಿಷ್ಟು ಮಹಾನುಭಾವರ ಪ್ರಕೃತಿಸಿದ್ಧವಾದ ಗುಣಗಳು.

ನನಗೆ ಎಂತಹ ವಿಪತ್ತು ಬಂದರೂ ನಾನು ಕೂಡಲಸಂಗಮದೇವನ ಸ್ಮರಣೆಯನ್ನು ಬಿಡಲಾರೆನೆಂದು ಬಸವಣ್ಣನವರು ಹೇಳಿದ್ದಾರೆ.

> "ಎನಿಸೆನಿಸೆಂದರೆ ನಾ ಧೃತಿಗೆಡೆನಯ್ಯಾ, ಎಲುದೋರಿದರೆ ನರ ಹರಿದರೆ ಕರುಳು ಕುಪ್ಪಳಿಸಿದರೆ ನಾ ಧೃತಿಗೆಡೆನಯ್ಯಾ, ಶಿರಹರಿದು ಅಟ್ಟೆ ನೆಲಕ್ಕೆ ಬಿದ್ದರೆ, ನಾಲಿಗೆ ಕೂಡಲಸಂಗಾ ಶರಣೆನುತ್ತಿದ್ದೀತಯ್ಯಾ"

ಮತ್ತು

> "ಒಣಗಿಸಿ ಎನ್ನ ಘಣಘಣಲನೆ ಮಾಡಿದರೆಯೂ, ಹರಣವುಳ್ಳನ್ನಕ್ಕ ನಿಮ್ಮ ಚರಣವ ನೆನೆವುದ ಮಾಣೆ ಮಾಣೆ, ಶರಣೆಂಬುದ ಮಾಣೆ ಮಾಣೆ ಕೂಡಲಸಂಗಮದೇವಯ್ಯಾ ಎನ್ನ ಹೆಣನ ಮೇಲೆ ಕಂಬಿಟ್ಟುಂಡರೆಯೂ ಮಾಣೆ ಮಾಣೆ"

ಈ ಎರಡೂ ವಚನಗಳು ಬಸವಣ್ಣನವರ ಘೋರ ಪ್ರತಿಜ್ಞೆಯ ದ್ಯೋತಕಗಳಾಗಿರುತ್ತವೆ. ಇಂತಹ ಪ್ರತಿಜ್ಞೆಗಳನ್ನು ಮಾಡಿ, ಆಚರಣೆಯಲ್ಲಿ ತಂದು, ಉಳಿದವರಿಗೂ ಆ ಮಾರ್ಗ ದಲ್ಲಿ ನಡೆಯುವಂತೆ ಮಾಡುವದು ಮಹಾನುಭಾವರ ಕಾರ್ಯವಲ್ಲದೆ ಸಾಮಾನ್ಯರಿಗೆ ಸಲ್ಲದ ಮಾತಾಗಿರುತ್ತದೆ. ನರ ಹರಿದುಹೋದರೂ ನನ್ನ ನಾಲಿಗೆಯು ಶಿವ ಶಿವ ಎನ್ನದೆ ಬಿಡತಕ್ಕಂಥಾದ್ದಲ್ಲವೆಂದು ಹೇಳುವ ಅವರ ಮಾತು ಸಾಮಾನ್ಯವಾದುದಲ್ಲ. ಕೋಟಿ ಗಟ್ಟಲೆ ಜನಗಳಿಗೆ ಮಾರ್ಗದರ್ಶಕವಾಗಿರುತ್ತದೆ. ಇಂತಹ ಪ್ರತಿಜ್ಞಾಬದ್ಧರಾದ ಮಹಾನುಭಾವರಿಂದಲೇ ಲೋಕದಲ್ಲಿ ಅಘಟನಾಘಟನಾ ಕಾರ್ಯಗಳಾಗುತ್ತವೆ. ಈ ವಿಷಯದಲ್ಲಿ ಶ್ರೀ ಬಸವಣ್ಣನವರ ಭಕ್ತಿಮಾರ್ಗವು ಪರಾಕಾಷ್ಠತೆಯನ್ನು ಹೊಂದಿತ್ತು ಎಂದು ಹೇಳಬಹುದು. ವೀರವ್ರತಿಗಳಾದ ಬಸವಣ್ಣನವರು ಒಂದು ಕಡೆ 'ಮರಣವೇ ಮಹಾನವಮಿ' ಎಂದು ಅಪ್ಪಣೆ ಕೊಡಿಸಿರುತ್ತಾರೆ. ಲೋಕದಲ್ಲಿ ಶ್ರೇಷ್ಠರಾದ ಏಸು ಕ್ರಿಸ್ತನೇ ಮೊದಲಾದ ಅನೇಕ ಮಹಾತ್ಮರು ಮರಣವನ್ನು ಹಸನ್ಮುಖಿಗಳಾಗಿ ಅಪ್ಪಿ ಕೊಂಡಿರುತ್ತಾರೆ.

"ಜೋಳವಾಳಿಯುವನಾನಲ್ಲಯ್ಯಾ, ವೇಳೆವಾಳಿಯುವನಾನಲ್ಲಯ್ಯ, ಹಾಳು ಗೆಟ್ಟೋಡುವ ಆಳು ನಾನಲ್ಲಯ್ಯಾ, ಕೇಳು ಕೂಡಲಸಂಗಮದೇವಾ ಮರಣವೇ ಮಹಾನವಮಿ ಎನಗೆ."

'ಶೂರಸ್ಯ ಮರಣಂ ತೃಣಂ' ಶೂರನಾದವನಿಗೆ ಮರಣವು ತೃಣಪ್ರಾಯವಾಗುವದು ಸಹಜವಾದುದಾಗಿರುತ್ತದೆ. ಶ್ರೀ ಬಸವಣ್ಣನವರು ವೀರವ್ರತಿಗಳಾದರೂ ಕೂಡ ಒಂದು ಪ್ರಸಂಗದಲ್ಲಿ 'ಮತಿ ಇಲ್ಲದ ಮರುಳ ನಾನಯ್ಯ, ಭಕ್ತಿ ಇಲ್ಲದ ಬಡವನಾನಯ್ಯ' ಎಂದು ಪರಮಾತ್ಮನಿಗೆ ಮರೆಹೊಕ್ಕಿರುವರು. ಪರಮಾತ್ಮನಿಗೆ ಅಂಜುವದು ಮಹಾನುಭಾವರ ಮಾರ್ಗವಾಗಿರುವದು.

ವ್ರತವೆಂದರೇನು? ಈ ನೇಮದ ಬಗ್ಗೆ ಬಸವಣ್ಣನವರು ಒಂದು ಅತ್ಯುತ್ತಮವಾದ ವಚನವನ್ನು ಹೇಳಿರುತ್ತಾರೆ.—

"ಬಂದುದ ಕೈಕೊಳ್ಳಬಲ್ಲರೆ ನೇಮ, ಇದ್ದುದ ವಂಚನೆ ಮಾಡದಿದ್ದರೆ ಅದು ನೇಮ, ನುಡಿದು ಹುಸಿಯದಿದ್ದರೆ ಅದು ನೇಮ, ನಮ್ಮ ಕೂಡಲಸಂಗನ ಶರಣರು ಬಂದರೆ ಒಡೆಯರಿಗೊಡವೆಯನೊಪ್ಪಿಸುವದೇ ನೇಮ."

ಇಂತಹ ವ್ರತಗಳನ್ನು ಹಿಡಿದು ಕೊನೆಗಾಣಿಸಬೇಕಾದರೆ ಅದಕ್ಕೆ ಶುದ್ಧವಾದ ಮನಸಃ ಬೇಕು. ಇಲ್ಲದಿದ್ದರೆ ಆ ವ್ರತದಿಂದ ಯಾವ ಪ್ರಯೋಜನವೂ ಆಗಲಾರದು.

"ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ, ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ, ಮಾಡುವ ನೀಡುವ ನಿಜಗುಣವುಳ್ಳರೆ ಕೂಡಿಕೊಂಬ ನಮ್ಮ ಕೂಡಲಸಂಗಮದೇವ."

ಯಾವದಾದರೊಂದು ನೇಮವನ್ನು ಹಿಡಿದುಕೊಂಡು ಅದನ್ನು ನಾನು ಮಾಡಿದೆನೆಂದು ಹೇಳಿದರೆ ಅದರಿಂದ ಮಾಡಿದ ಕಾರ್ಯದ ಫಲವೂ ಕೂಡ ಆ ಮಾನವನಿಗೆ ಸಿಗಲಾರದು.

"ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ ಮಾಡಿದೆನೆನ್ನದಿರಾ, ಲಿಂಗಕ್ಕೆ ಮಾಡಿದೆನೆನ್ನದಿರಾ, ಜಂಗಮಕ್ಕೆ ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ ಬೇಡಿದ್ದನೀವ ಕೂಡಲಸಂಗಮದೇವಾ."

ಶ್ರೀ ಬಸವಣ್ಣನವರ ಅನಂತ ಪ್ರತಿಜ್ಞೆಗಳಲ್ಲಿ ಬೇಡಿದವರಿಗೆ ಬೇಡಿದ್ದನ್ನು ಕೊಡುವೆನೆಂಬುವದೂ ಒಂದಾಗಿರುತ್ತದೆ. ಅದನ್ನು ಅವರು ಕೊನೆಯವರೆಗೂ ಚ್ಯುತಿಯಿಲ್ಲದೆ ಪೂರೈಸಿದವರಾಗಿರುತ್ತಾರೆ.

"ನೀನಿಕ್ಕಿದ ಬೀಯದಲ್ಲಿ ವಂಚನೆಯುಳ್ಳರೆ ಸಂಗಾ, ನಿಮ್ಮ ತೊತ್ತುತನಕ್ಕೆ ದೂರವಯ್ಯಾ, ಕದ್ದು ತಿಂದರೆ ಕೈಹಿಡಿದೊಮ್ಮೆ ಬಡಿದು ತುಡುಗುಣಿತನವ ಬಿಡಿಸಯ್ಯಾ, ಜಂಗಮ ಮನೆಗೆ ಬಂದಲ್ಲಿ ಓಸರಿಸದಿರೆ ಹಿಡಿದು ಮೂಗ ಕೊಯಿಯಯ್ಯಾ ಕೂಡಲಸಂಗಮದೇವಾ"

ಅಂದರೆ, ದೇವರು ಕೊಟ್ಟ ದ್ರವ್ಯವನ್ನು ದೇವರಿಗೆ ಸಮರ್ಪಿಸಬೇಕಲ್ಲದೆ ತನ್ನ ಸ್ವಾರ್ಥಕ್ಕೆ ಉಪಯೋಗಿಸಿದರೆ ಅದು ಧರ್ಮವೂ ಅಲ್ಲ, ನೀತಿಯುಕ್ತವೂ ಅಲ್ಲ, ಭಕ್ತನ ಕೆಲಸ ವಂತೂ ಮೊದಲೇ ಅಲ್ಲದ್ದಾಗಿರುವುದು. ಅಂದಮೇಲೆ ಭಕ್ತಿಭಂಡಾರಿಗಳಾದ ಬಸವಣ್ಣ ನವರು ಆ ದ್ರವ್ಯವನ್ನು ಸ್ವಾರ್ಥಕ್ಕೆ ಹೇಗೆ ಉಪಯೋಗಿಸುವರು? ಆದ್ದರಿಂದಲೇ ಅವರು—

> "ಹೊನ್ನಿನೊಳಗೊಂದೊರೆಯು, ಸೀರೆಯೊಳಗೊಂದೆಳೆಯು, ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ನಿಮ್ಮ ಶರಣರಿ ಗಲ್ಲದೆ ಮತ್ತೊಂದನರಿಯೆ ಕೂಡಲಸಂಗಮದೇವಾ."

ಶಿವನ ಸೊಮ್ಮಿನಲ್ಲಿ ಒಂದೆಳೆಯಷ್ಟೂ ನನಗೆ ಬೇಡವೆಂದು ನಿರ್ದಾಕ್ಷಿಣ್ಯವಾಗಿ ಹೇಳಿರು ತ್ತಾರೆ. ದಾನವನ್ನು ಮಾಡಬೇಕೆಂಬುವದೇ ಅವರ ದೊಡ್ಡ ಗುರಿ.

> "ಆವನೇವ(ಮ)ನಾದರೇನು ಹೇವವಿಲ್ಲದಂಗೈಸಬಹುದೇ? ಕೊಡ ಲಿಲ್ಲೆಂಬುದರಿಂದ ಸಾಯಲುಬಹುದು, ಸೈರಿಸಬಾರದು. ಬೇಡುವವರ ನೋಡಿ ನೋಡಿ ಈಯಲಿಲ್ಲದವವನ ಜೀವನವೇತಕೊ ಕೂಡಲಸಂಗಮ ದೇವಾ."

ಕೊಡುವದಿಲ್ಲವೆನ್ನುವದಕ್ಕಿಂತಲೂ ಸಾಯುವದೇ ಲೇಸು. ಬೇಡುವವರು ಬಂದಕಾಲಕ್ಕೆ ಕೊಡಲಿಲ್ಲದಿದ್ದರೆ ಅವರ ಜೀವನವೇ ವ್ಯರ್ಥವು. ಅದನ್ನು ಸೈರಿಸಲಾಗದು ಎಂದು ಅವರ ಹೇಳಿಕೆಯು ಇರುತ್ತದೆ.

ಒಂದು ಸಮಯದಲ್ಲಿ ಬಸವಣ್ಣನವರ ಮನೆಗೆ ಕಳ್ಳರು ಬಂದಿದ್ದರು. ಆ ಕಳ್ಳರು ಬಸವೇಶ್ವರರು ಮಲಗಿದ್ದ ಮಂಚದ ಹತ್ತಿರ ನೀಲಮ್ಮನವರ ಮೈಮೇಲಿನ ಆಭರಣ ಗಳನ್ನು ಬಿಚ್ಚಲು ಅಷ್ಟರಲ್ಲಿಯೇ ನೀಲಮ್ಮನವರಿಗೆ ಎಚ್ಚರವಾಯಿತು. ಅವರು ತಮ್ಮ ಪತಿಯನ್ನು ಎಬ್ಬಿಸಲು, ಆಗ ಬಸವಣ್ಣನವರು ತಮ್ಮ ಪತ್ನಿಗೆ—

> "ಒಡನಿರ್ದು ಸತಿಯೆಂದು ನಚ್ಚಿರ್ದೆನಯ್ಯ। ಕೈವಿಡಿದ ಸಜ್ಜನಿ ಯೆಂದು ನಂಬಿರ್ದೆನಯ್ಯಾ। ಅಯ್ಯೋ ನಮ್ಮಯ್ಯನ ಕೈಯನೊಂದಿತು ತೆಗೆದುಕೊಡಾ ಎಲೆ ಚಂಡಾಲಗಿತ್ತಿ ಕಳ್ಳನ ಮನಿಗೊಬ್ಬ ಬಲುಗಳ್ಳ ಬಂದೊಡೆ ಕೂಡಲಸಂಗಮದೇವನಲ್ಲದೆ ಆರೂ ಇಲ್ಲಾ"

ಎಂದು ಹೇಳಲು, ನೀಲಮ್ಮನವರು ಭಯಭಕ್ತಿಗಳಿಂದ ಗದಗದ ನಡಗುತ್ತ ಸಾಮಾನು ಗಳನ್ನು ಬಿಚ್ಚಿಕೊಡಲು, ಆ ಕಳ್ಳನು ಭಯಭೀತನಾಗಿ ಅಲ್ಲಿಯೇ ನಿಂತುಕೊಂಡನೆಂತಲೂ, ಬಸವಣ್ಣನವರ ಕೃಪೆಯಿಂದ ಪ್ರಾತಃಕಾಲದಲ್ಲಿ ಅವನ ಕಪಟವೇಷವೆಲ್ಲ ಬಯಲಿಗೆ ಬಂದು ಸಜ್ಜನನಾದ ಶಿವಭಕ್ತನಾದನೆಂತಲೂ ಹೇಳಲಾಗಿದೆ.

ಇಲ್ಲಿ ನಾವು ಗಮನಿಸತಕ್ಕ ವಿಷಯವೇನೆಂದರೆ, ಬೇಡಿದವರಿಗೆ ಇಲ್ಲೆನ್ನದ ಗುಣವು ಎಂತಹ ಶ್ರೇಷ್ಠವಾದುದು? ಅದನ್ನು ಬಸವಣ್ಣನವರು ಹೇಗೆ ಆಚರಣೆಯಲ್ಲಿ ತಂದರು. ಮಾನವರಿಗೆ ಮಾರ್ಗದರ್ಶಕರಾದರೆಂಬುವದೇ ಪ್ರಾಮುಖ್ಯವಾದುದಾಗಿರುತ್ತದೆ. ಈ ಗುಣವು ಬಸವಣ್ಣನವರಲ್ಲಿ ಪರಿಪೂರ್ಣವಾಗಿ ನೆಲೆಸಿದ್ದರಿಂದಲೇ ಅವರ ಕೀರ್ತಿಯು ದಶದಿಕ್ಕುಗಳಲ್ಲಿ ಹಬ್ಬಿಹೋಗಿದ್ದಿತು.

ಶ್ರೀ ಬಸವಣ್ಣನವರು—

"ಎಂಭತ್ತುನಾಲ್ಕುಲಕ್ಷ ಮುಖದೊಳಗೊಂದೇ ಮುಖವಾಗಿ ಕಾಡಿ ನೋಡೆನ್ನನು ಬೇಡಿನೋಡೆನ್ನನು ಬೇಡದಿದ್ದೊಡೆ ಅಯ್ಯಾ ನಿಮಗೆ ಪ್ರಮಥರಾಣೆ ನೀನಾವ ಮುಖದಲು ಬಂದು ಬೇಡಿದಡೀವೆ ಕೂಡಲ ಸಂಗಮದೇವಾ." (ಬೇಡುವದೇನು ದೇವಾ ಮುನ್ನ ಬೇಡಿದೆ ಸಿಂಧು ಬಲ್ಲಾಳನ ವಧುವ ಇನ್ನು ಬೇಡಿದಡೆಸಿಗಿಳವನಿಕ್ಕುವೆನು. ಬೇಡಿದ ಶರಣರ್ಗೆ ನೀಡದಿದ್ದೊಡೆ ತಲೆದಂಡ.)

ಬಸವಣ್ಣನವರ ಭಾಷೆಗಳಲ್ಲಿ ಇದೊಂದು ಪ್ರಾಮುಖ್ಯವಾದುದಾಗಿದೆ. ಅವರ ಪ್ರತಿಜ್ಞೆಗಳಲ್ಲಿ ಕೂಡಲಸಂಗನ ಭಕ್ತಿಯನ್ನು ಪ್ರಸಾರ ಮಾಡುವದೂ ಒಂದಾಗಿರುತ್ತದೆ. ಎಲ್ಲ ದೇವತೆಗಳಲ್ಲಿ ದೇವರದೇವನಾದ ಕೂಡಲಸಂಗನೇ ಶ್ರೇಷ್ಠನೆಂದು ಅವರ ಪ್ರತಿಜ್ಞೆಯು ಇರುವದು. ಆದ್ದರಿಂದಲೇ ಅವರು,

"ಆವನಾದೊಡೇನು ಶ್ರೀ ಮಹಾದೇವನ ನೆನಿವನ ಬಾಯತಂಬಲ ಮೆಲುವೆ, ಬೀಳುಡಿಗೆಯ ಹೊದಿವೆ, ಪಾದರಕ್ಷೆಯ ಕಾಯ್ದು ಬದುಕುವೆ ಕೂಡಲಸಂಗಮದೇವರ ಮಾಣದೆ ನೆನೆವನ."

ಹೀಗೆ ಅನ್ನುವ ಕಾರಣವಾದರೂ—

"ಜಲ, ಕೂರ್ಮ, ನಾಗ, ಮೇದಿನಿ, ಸಪ್ತ ಸಾಗರ, ಅಜಾಂಡ, ಭಾಂಡ, ಹರಿವಿರಿಂಚಿಗಳು ನಿಮ್ಮ ಉದರದ ಕೊನೆಯ ಪ್ರಾಣಿಗಳಯ್ಯಾ, ಕೂಡಲಸಂಗನ ಮಹಾಮನೆಯಲು ಅಸ್ತಿಗ್ರಾಹಕನೆಂಬ ಗಣೇಶ್ವರನ ಇಚ್ಛಾ ಮಾತ್ರದಿಂದ ಜಗ ಜುಗವಯ್ಯ"

"ಐದುವುದೇ ಬ್ರಹ್ಮನ ಕಪಾಲ ಕರದಲ್ಲಿ, ಐದುವುದೇ ವಿಷ್ಣುವಿನ ನಯನ ಪಾದದಲ್ಲಿ, ಐದುವುದೇ ಕಾಮನ ಸುಟ್ಟ ಭಸ್ಮ ಮೈಯ್ಯಮೇಲೆ ಮುಖ ಮೂದಲೆ ಏಕಯ್ಯ ಕೂಡಲಸಂಗಮದೇವಾ."

"ಹರನ ಕೊರಳಲ್ಲಿಪ್ಪ ಕರೋಟಿ ಮಾಲೆಯ ಶಿರದ ಲಿಖಿತವ ಕಂಡು ಮರಳುತಂಡಗಳು ಓದಿನೋಡಲು ಇವನಜ, ಇವಹರಿ, ಇವ ಸುರಪತಿ, ಇವ ಧರಣೇಂದ್ರನಿವನಂತಕನೆಂದು ಹರುಷದಿಂದ ಸರಸವಾಡಿತ್ತ ಕಂಡು ಹರ ಮುಕುಳಿತನಾಗಿ ನಸುನಕ್ಕನು ನಮ್ಮ ಕೂಡಲಸಂಗಮದೇವಾ."

ತಮ್ಮ ಅನಂತ ವಚನಗಳಿಂದ ದೇವರದೇವ ಮಹಾದೇವ ಕೂಡಲಸಂಗನೇ ಶ್ರೇಷ್ಠನೆಂದು ಪ್ರತಿಜ್ಞಾಪೂರ್ವಕವಾಗಿ ಈ ಕಾರ್ಯವನ್ನು ಮಾಡಿರುತ್ತಾರೆ. ಇದು ಅವರ ಮುಖ್ಯ ಧರ್ಮವಾಗಿರುವದು. ಹಾಗಾದರೆ ಬಸವಣ್ಣನವರು ಸಮತಾವಾದಿಗಳು, ವಿಶಾಲ ಹೃದಯದವರು. ಇಂಥವರು ಹೀಗೇಕೆ ಸಂಕುಚಿತ ಭಾವನೆಯನ್ನು ತಳೆದರು ಎಂದು ಯಾರಾದರೂ ಕೇಳಬಹುದು. ಆದರೆ ಇದಕ್ಕೆ ಉತ್ತರವೇನಂದರೆ ಜಗತ್ತಿನಲ್ಲಿಯ ಎಲ್ಲ ಮತಸ್ಥಾಪಕರೂ, ಮತೋದ್ಧಾರಕರೂ ತಮ್ಮ ತಮ್ಮ ಅಭೀಷ್ಟ ದೇವತೆಯೇ ಶ್ರೇಷ್ಠವೆಂದು ಲೋಕದಲ್ಲಿ ಸಾರಿ ತಮ್ಮ ತಮ್ಮ ಮತಗಳನ್ನು ಸ್ಥಾಪಿಸಿರುತ್ತಾರೆ. ಹಾಗೆಯೇ

ಬಸವಣ್ಣನವರಾದರೂ ತಮ್ಮ ಆರಾಧ್ಯದೇವನಾದ ಕೂಡಲಸಂಗಯ್ಯನ ಹೊರತ ತ್ರೈಲೋಕ್ಯದಲ್ಲಿ ಬೇರೆ ದೇವನಿಲ್ಲವೆಂದು ಹೇಳಿದ ಮಾತಿನಲ್ಲಿ ತಪ್ಪೇನಿರುವದು?

ಲಿಂಗದ ಬಗ್ಗೆ ಬಸವಣ್ಣನವರು ಪ್ರತಿಜ್ಞೆಯ ಅನೇಕ ವಚನಗಳನ್ನು ಹೇಳಿರುತ್ತಾರೆ.

> "ಲಿಂಗಕ್ಕಲ್ಲದೆ ಮಾಡೆನೀ ಮನವನು, ಜಂಗಮಕ್ಕಲ್ಲದೆ ಮಾಡೆನೀ ಧನವನು, ಪ್ರಸಾದಕ್ಕಲ್ಲದೆ ಮಾಡೆನೀ ತನುವನು, ಲಿಂಗಜಂಗಮದ ಪ್ರಸಾದಕ್ಕಲ್ಲದೆ ಬಾಯ್ದೆರೆಯೆನೆಂಬುದೆನ್ನ ಭಾಷೆ, ಅನರ್ಪಿತವಾದರೆ ತಪ್ಪೆನ್ನದು ಮೂಗಕೊಯಿ ಕೂಡಲಸಂಗಮದೇವಾ."

ಇಂತಹ ಶ್ರೇಷ್ಠತರದ ಪ್ರತಿಜ್ಞೆಯನ್ನು ಮಾಡುವ ಕಾಲಕ್ಕೆ ಅವರು ಯಾರ ಲಕ್ಷ್ಯವನೂ ಮಾಡಿರುವದಿಲ್ಲ.

> "ಆರು ಮುನಿದು ನಮ್ಮನೇನುಮಾಡುವರು? ಊರು ಮುನಿದು ನಮ್ಮನೆಂತು ಮಾಡುವದು? ನಮ್ಮ ಕುನ್ನಿಗೆ ಕೂಸಕೊಡಬೇಡ, ನಮ್ಮ ಸೊಣಕಂಗೆ ತಳಿಗೆಯಲಿಕ್ಕಬೇಡ. ಆನೆಯ ಮೇಲೆ ಹೋಹವನ ಶ್ವಾನ ಕಚ್ಚಬಲ್ಲುದೆ? ನಮಗೆ ನಮ್ಮ ಕೂಡಲಸಂಗಯ್ಯನನುಳ್ಳನ್ನಕ್ಕ?"

ಮತ್ತು

> "ನ್ಯಾಯ ನಿಷ್ಠುರಿ ದಾಕ್ಷಿಣ್ಯಪರ ನಾನಲ್ಲ, ಲೋಕವಿರೋಧಿ ಶರಣನಾರಿಗಂಜುವನಲ್ಲ, ಕೂಡಲಸಂಗಮದೇವರ ರಾಜತೇಜದಲ್ಲಿಪ್ಪವ ನಾಗಿ."

ಹೀಗೆ ನ್ಯಾಯವಾದ ಮಾರ್ಗದಲ್ಲಿ ಬಸವಣ್ಣನವರು ಯಾರಿಗೂ ಲಕ್ಷ್ಯ ಮಾಡದೆ ತಮ್ಮ ಮಾರ್ಗದಲ್ಲಿ ಮುಂದಕ್ಕೆ ಸಾಗಿರುವರು. ಅವರಿಗೆ ಕೂಡಲಸಂಗಮದೇವರಲ್ಲಿ ಅಚಲ ವಾದ ಭಕ್ತಿಯು ಇದ್ದ ಕಾರಣ ಅವರಿಗೆ ಬೇರೆಯವರ ಅಂಜಿಕೆಯು ಇರಲು ಕಾರಣವಿಲ್ಲ. ತಮಗೆ ಕಷ್ಟ ಬಂದ ಕಾಲದಲ್ಲಿ ತಮ್ಮ ಗುರುವಾದ ಸಂಗನನ್ನು ಬೇಡಿಕೊಂಡು ಅವನ ಕರುಣೆಯನ್ನು ಪಡೆದುಕೊಳ್ಳುತ್ತಿದ್ದರು.

ಶ್ರೀ ಬಸವಣ್ಣನವರ ಇನ್ನೊಂದು ಪ್ರತಿಜ್ಞೆಯು ಬಹಳ ಮಹತ್ವದ್ದಾಗಿರುತ್ತದೆ.

> "ಲಿಂಗಮುಖದಿಂದ ಬಂದ ಪ್ರಸಾದವಲ್ಲದೆ ಕೊಂಡೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ, ಲಿಂಗಾರ್ಪಿತವಲ್ಲದೆ ಉದಕವ ಮುಕ್ಕಳಿ ಸಿದೆನಾದರೆ ಸಲ್ಲೆನು ನಿಮ್ಮ ಗಣಾಚಾರಕ್ಕಯ್ಯಾ, ಲಿಂಗಾರ್ಪಿತವಲ್ಲದೆ ಹುಲ್ಲುಕಡ್ಡಿಯ ಕೊಂಡರೆ ಬಲ್ಲೆ ಮುಂದೆ ಭವ ಘೋರ ನರಕವೆಂಬುದ, ನಿಮಗೆತ್ತಿದ ಕರದಲ್ಲಿ ಮತ್ತೊಂದಕ್ಕೆ ಕೈಯಾನೆನು, ಆಳವರಿಯದೆ ನುಡಿದೆನು, ಕಡೆಮುಟ್ಟಿಸಲಿಸದಿದ್ದೊಡೆ ತಲೆದಂಡ ತಲೆದಂಡ ಕೂಡಲ ಸಂಗಮದೇವಾ."

ಶಿವಾರ್ಪಿತವಾಗದ ಯಾವದಾದರೊಂದು ಪದಾರ್ಥವನ್ನು ನಾನು ಸೇವಿಸಲಾರೆನು. ನನ್ನ ಯೋಗ್ಯತೆಯನ್ನು ತಿಳಿಯದೆ ಈ ಪ್ರತಿಜ್ಞೆಯನ್ನು ಕೈಗೊಂಡೆನು. ಆದರೆ ಇದನ್ನು ಕೊನೆಗಾಣಿಸದಿದ್ದರೆ ನನಗೆ ಭಯಂಕರ ಪಾಪವು ಘಟಿಸುವದೆಂದು ಬಸವಣ್ಣನವರು ಹೇಳುವ ಮಾತಿನಲ್ಲಿ ಬಹಳ ಮಹತ್ವವಿರುತ್ತದೆ. ಪ್ರತಿಜ್ಞೆಯನ್ನು ಮಾಡಿದ ಮೇಲೆ

ಅದನ್ನು ಕೊನೆಗಾಣಿಸಲೇ ಬೇಕು. ಅದರಲ್ಲಿ ಮಹಾಪುರುಷರ ಮುಖದಿಂದ ಹೊರಟ ಮಾತುಗಳೆಂದಿಗೂ ಹುಸಿಯಾಗಲಾರವು.

ಶ್ರೀ ಬಸವಣ್ಣನವರು ಬಹಳ ಪ್ರತಿಜ್ಞೆಗಳನ್ನು ಮಾಡಿರುತ್ತಾರೆ. ಅವುಗಳನ್ನೆಲ್ಲ ಇಲ್ಲಿ ಹೇಳುವದು ಸಾಧ್ಯವಿಲ್ಲ. ಬಸವ ಭಾಷೆಗಳೆಂದು ಸುಪ್ರಸಿದ್ಧ ಇರುತ್ತವೆ ಮತ್ತು ಬಸವ ಪುರಾಣದ ಆರನೆಯ ಸಂಧಿಯಲ್ಲಿಯೂ ಈ ಪ್ರತಿಜ್ಞೆಗಳ ವರ್ಣನೆಯನ್ನು ಭೀಮ ಕವಿಯು ವಿಸ್ತಾರವಾಗಿ ಮಾಡಿರುತ್ತಾನೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಡುತ್ತೇನೆ.

**ವೀರಶೈವ ತತ್ವಪ್ರಕಾಶ—ಪರಿಶಿಷ್ಟ, ಪುಟ ೧೪**

ಸಿಚ್ಚಲುಂ ಶಿವರಾತ್ರಿಯುಂ ಮಾ।  
ಳ್ವಚ್ಚರಿ ಯೆನಿಪ ಭಾಷೆ ಭಕ್ತರ।  
ನಚ್ಚ ಶಿವನೆಂದಿರ್ಪ ಭಾಷೆ ಶಿವೈಕ್ಯರೆಗ್ಗಗಳ॥  
ಎಚ್ಚರಿಸದಿಹ ಭಾಷೆ ಶರಣರ।  
ಹೆಚ್ಚು ಕುಂದಂಗಳಂ ನುಡಿಯದಿಹ।  
ಸಚ್ಚರಿತ್ರದ ಭಾಷೆ ಏನುವಂ ವಂಚಿಸದ ಭಾಷೆ॥ ೧ ॥

ಮೃಡನನಾದೊಡೆಯೊಂದು ಬಾರಿಗೆ।  
ತಡಗಿ ಬೇಡದ ಭಾಷೆ ಏನಾ।  
ದೊಡೆ ಬಯಸಿದೊಡವಿಗಳ ನಡಿಯಿಡದೀವುದದು ಭಾಷೆ॥  
ನುಡಿದು ಪುಸಿಯದ ಭಾಷೆ ನೆನಪಿನ।  
ಗಡಣೆಯಂತಂ ತೋರೆಯಿಲ್ಲದೆ।  
ನುಡಿವ ಭಾಷೆಯು ನುಡಿದ ಹಾಗೆ ತಾಂ ನಡೆಸುವುದು ಭಾಷೆ॥ ೨ ॥

ಅನೇಕ ಪ್ರತಿಜ್ಞೆಗಳಲ್ಲಿ ಮಾದರಿಗಾಗಿ ಕೆಲವನ್ನು ಮಾತ್ರ ಕೊಟ್ಟಿರುತ್ತೇವೆ.

ಹೀಗೆ ಬಸವಣ್ಣನವರು ಪ್ರತಿಜ್ಞೆಗಳನ್ನು ಮಾಡಿ ಅವುಗಳನ್ನು ತೃಪ್ತಿಕರವಾಗಿ ಪೂರ್ತಿಗೊಳಿಸಿರುತ್ತಾರೆ.

# ಇಪ್ಪತ್ತನೆಯ ಪ್ರಕರಣ

## ಶ್ರೀ ಬಸವಣ್ಣನವರೂ— ಏಕೇಶ್ವರ ವಾದವೂ

ಶ್ರೀ ಬಸವಣ್ಣನವರು ಲೋಕದಲ್ಲಿ ಒಬ್ಬನೇ ದೇವರು. ಅವನಿಂದಲೇ ಜಗತ್ತಿನ ಉತ್ಪತ್ತಿ ರಕ್ಷಣೆ ಲಯಗಳಾಗುವವು. ಅವನೇ ಶಿವನು. ಶಿವನೊಬ್ಬನೇ ಪರಬ್ರಹ್ಮ. ಅವನೇ ಲಿಂಗ. ಲಿಂಗದೇವನ ಹೊರತು ಬೇರೆ ದೇವರಿಲ್ಲ ಎಂಬುವ ಸಿದ್ಧಾಂತವನ್ನು ಬಲವಾಗಿ ಮಂಡಿಸಿ ಅದರಲ್ಲಿ ಅತ್ಯಂತ ಯಶಸ್ವಿಗಳಾಗಿರುತ್ತಾರೆ. ವೇದೋಪನಿಷತ್ತುಗಳಾದರೂ ಇದೇ ಮಾರ್ಗವನ್ನು ಬೋಧಿಸಿರುತ್ತವೆ. ವೀರಶೈವನಾದವನು ಲಿಂಗದೇವನ ಹೊರತು ಬೇರೆ ಯಾವ ದೇವರುಗಳಿಗೂ ತಲೆ ಬಾಗಬಾರದು ಎಂದು ಅನೇಕ ದೇವತೋಪಾಸನೆಯನ್ನು ಖಂಡಿಸಿರುತ್ತಾರೆ.

ಶಿವತತ್ವದ ಶ್ರೇಷ್ಠತೆಯನ್ನು ಇಲ್ಲಿ ಕೆಲವು ಶೃತಿಗಳ ಮತ್ತು ಉಪನಿಷತ್ತುಗಳ ಪ್ರಮಾಣಗಳಿಂದ ನೋಡಿದರೆ ಯಥಾರ್ಥ ಕಲ್ಪನೆಯು ಹೊಳೆಯುವದು.

ಮಹಿಮ್ನ ಸ್ತೋತ್ರಕಾರರಾದ ಪುಷ್ಪದಂತ ಶಿವಾಚಾರ್ಯರು ಹೇಳಿರುವಂತೆ "ಯಂ ಚಕಿತಮಭಿದತ್ತೇ ಶೃತಿರಪಿ" ಅಂದರೆ ವೇದವೂ ಕೂಡ ಯಾವ ಶಿವತತ್ವವನ್ನು ನಿರೂಪಣ ಮಾಡುವದರಲ್ಲಿ ಚಕಿತವಾಗುತ್ತದೆ. ಮತ್ತು ಅದೇ ಸ್ತೋತ್ರಕಾರನು—

> "ತ್ರಯೀಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ
> ಪ್ರಭಿನ್ನೇ ಪ್ರಸ್ಥಾನೇ ಪರಮಿದಮದಃ ಪಥ್ಯಮಿತಿ ಚ ।
> ರುಚೀನಾಂ ವೈಚಿತ್ರ್ಯಾದೃಜು ಕುಟಿಲನಾನಾ ಪಥಜುಷಾಂ
> ನೃಣಾ ಮೇಕೋಗಮ್ಯಸ್ತ್ವಮಸಿ ಪಯಸಾಮರ್ಣವ ಇವ ॥"

ಸ್ಮಾರ್ತ, ಸಾಂಖ್ಯ, ಯೋಗ, ಪಾಶುಪತ, ಪಾಂಚರಾತ್ರ ಮೊದಲಾದ ಶಾಸ್ತ್ರಗಳಲ್ಲಿ— ಇದು ಶ್ರೇಷ್ಠವಿದೆ, ಇದು ಹಿತಕಾರಕವಿದೆ, ಇತ್ಯಾದಿ ಮಾರ್ಗಗಳನ್ನು ತಮ್ಮತಮ್ಮ ರುಚಿಗೆ ಅನುಸಾರವಾಗಿ—ಸೀದಾ ಅಥವಾ ಡೊಂಕಾದ ಅನೇಕ ಮಾರ್ಗಗಳನ್ನು ಅವಲಂಬನ ಮಾಡಿದವರಿಗೆ ನೀನೊಬ್ಬನೇ ಗಮ್ಯಸ್ಥಾನನಾಗಿರುವಿ. ಹೇಗೆ—ನದ–ನದಿ, ಹಳ್ಳ–ಕೊಳ್ಳ ಮೊದಲಾದ ಪ್ರವಾಹಗಳಿಗೆ ಸಮುದ್ರವು ಆಶ್ರಯವಾಗಿರುತ್ತದೆಯೋ— ಹಾಗೆಯೇ ನೀನಿರುವಿ.

### ತೈತ್ತರೀಯೋಪನಿಷತ್

> "ಯತೋವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ
> ಯತ್ಪ್ರತ್ಯಭಿ ಸಂವಿಶಂತಿ ತದ್‌ವಿಜಿಜ್ಞಾಸಸ್ವ ತದ್ಬ್ರಹ್ಮ"

ಯಾವಾತನಿಂದ ಹಿರಣ್ಯಗರ್ಭನೇ ಮೊದಲುಮಾಡಿಕೊಂಡು ಕೀಟಪರ್ಯಂತರಗಳಾದ ಪ್ರಾಣಿಗಳು ಹುಟ್ಟುತ್ತವೆಯೋ, ಯಾವಾತನಿಂದ ಹುಟ್ಟಿ ಪ್ರಾಣಧಾರಣ ಮಾಡಿರುತ್ತವೆಯೋ, ಅಂತ್ಯದಲ್ಲಿ ಯಾವಾತನಲ್ಲಿ ವಿಲೀನವಾಗಿ ಹೋಗುತ್ತವೆಯೋ ಆತನನ್ನು ತಿಳಿಯಲಿಕ್ಕೆ ಇಚ್ಛಿಸು. ಅದೇ ಬ್ರಹ್ಮ, ಅವನೇ ಶಿವನು. ಆಗಮಗಳಲ್ಲಿ —"ತಸ್ಮಾಲ್ಲಿಂಗಂ ಪರಬ್ರಹ್ಮ ಸಚ್ಚಿದಾನಂದ ಲಕ್ಷಣಂ" ಈ ಪರಬ್ರಹ್ಮನಿಗೇನೇ ಲಿಂಗ

ವೆಂದು ಆಗಮಕಾರರು ಹೇಳಿರುತ್ತಾರೆ. ಶ್ವೇತಾಶ್ವತರೋಪನಿಷತ್, ೩–೩— "ದ್ಯಾವಾ ಭೂಮಿೂ ಜನಯನ್ ದೇವ ಏಕಃ" ಭೂವ್ಯಾಕಾಶಗಳ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುವ ಸ್ವಯಂಪ್ರಕಾಶಸ್ವರೂಪನು ಒಬ್ಬನೇ ಆಗಿರುತ್ತಾನೆ. ಶ್ವೇತಾಶ್ವತರೋಪ ನಿಷತ್ ೧–೧೦— "ಕ್ಷರಂ ಪ್ರಧಾನಂ ಅಮೃತಾಕ್ಷರಂ ಹರಃ ಕ್ಷರಾತ್ಮಾನಾ ವೀಶತೇ ದೇವ ಏಕಃ" ಜಗತ್ತಿನ ಜನ್ಮಾದಿಗಳಿಗೆ ಕಾರಣ ಶಿವನಿರುತ್ತಾನೆ. ಶ್ವೇತಾಶ್ವತರೋಪ ನಿಷತ್ ೩–೪— "ಏಕೋಹಿರುದ್ರೋ ನ ದ್ವಿತೀಯಾಯತಸ್ಥುಃ" ಅಂದರೆ ಒಬ್ಬವನೇ ರುದ್ರನಿರುತ್ತಾನೆ. ಆದ್ದರಿಂದ ಬ್ರಹ್ಮಾದಿಗಳಾದ ಜನಗಳು ಎರಡನೆಯವರ ಮುಖ ವನ್ನು ನೋಡುತ್ತಿರಲಿಲ್ಲ.

### ಶ್ವೇತಾಶ್ವತರೋಪನಿಷತ್—೬–೭

"ತಮೀಶ್ವರಾಣಾಂ ಪರಮಂ ಮಹೇಶ್ವರಂ
ತಂ ದೇವತಾನಾಂ ಪರಮಂಚ ದೈವತಂ ।
ಪತಿಂ ಪತೀನಾಂ ಪರಮಂ ಪರಸ್ತಾತ್
ವಿದಾಮದೇವಂ ಭುವನೇಶ ಮೀಢ್ಯಂ ॥

ಜಗತ್ತಿನ ಉತ್ಪತ್ತಿ ಸ್ಥಿತಿ ಲಯಕ್ಕೆ ಕಾರಣರಾದ ಬ್ರಹ್ಮ ವಿಷ್ಣು ರುದ್ರರುಗಳಿಗಿಂತಲೂ ಉತ್ಕೃಷ್ಟ, ಇಂದ್ರಾದಿ ದೇವತೆಗಳಿಗಿಂತಲೂ ಜಗತ್ಪತಿಯಾದ ಹಿರಣ್ಯಗರ್ಭಾದಿಗಳಿಗೂ ಅಧಿಪತಿ. ಪರಕ್ಕಿಂತಲೂ ಪರಲೋಕಗಳಿಗೆ ಒಡೆಯನಾದ ಪರಮೇಶ್ವರ ದೇವನನ್ನು ನಾವು ತಿಳಿಯುತ್ತೇವೆ. "ಸರ್ವವ್ಯಾಪೀ ಸ ಭಗವಾನ್ ಶಿವಃ" ಎಂದು ಶ್ವೇತಾಶ್ವ ತರೋಪನಿಷತ್ತಿನಲ್ಲಿಯೂ, "ಸತ್ಯಂ ಜ್ಞಾನಮನಂತಂ ಬ್ರಹ್ಮ" "ಆನಂದಂ ಬ್ರಹ್ಮ" ಎಂದು ತೈತ್ತರೀಯೋಪನಿಷತ್ತಿನಲ್ಲಿಯೂ "ಈಶಾವಾಸ್ಯ ಮಿದಂ ಸರ್ವಂ" ಎಂದು ಈಶಾವಾಸ್ಯೋಪನಿಷತ್ತಿನಲ್ಲಿಯೂ "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" "ಶಾಂತಂ ಶಿವಂ ಅದ್ವೈತಂ" ಎಂದು ತೈತ್ತರೀಯೋಪನಿಷತ್ತಿನಲ್ಲಿಯೂ ಇರುವ ವಾಕ್ಯಗಳೆಲ್ಲ ಶಿವನೊಬ್ಬನೇ ದೇವನೆಂದು ಆತನ ಸರ್ವೋತ್ತಮತ್ವವನ್ನು ಪ್ರತಿಪಾದಿಸಿರುತ್ತವೆಯಲ್ಲದೆ ಏಕೇಶ್ವರತ್ವವನ್ನೂ ಬೋಧಿಸುತ್ತವೆ.

### ಅಥರ್ವಶಿಖೋಪನಿಷತ್

"ದೇವಾಹವೈ ಸ್ವರ್ಗಂ ಲೋಕಮಗಮಂಸ್ತೇ
ದೇವಾ ರುದ್ರಮಪೃಚ್ಛನ್ ಕೋ ಭವಾನಿತಿ ।
ಸ ಅಬ್ರವೀದಹಮೇಕಃ ಪ್ರಥಮಮಾಸಂ ವರ್ತಾಮಿ
ಭವಿಷ್ಯಾಮಿ ಚನಾನ್ಯಃ ಕಶ್ಚಿನ್ಮತ್ತೋ ವ್ಯತಿರಿಕ್ತಃ"

ಅಂದರೆ ದೇವತೆಗಳು ಕೈಲಾಸಕ್ಕೆ ಹೋಗಿ ಅವರು ರುದ್ರನಿಗೆ ಪ್ರಶ್ನೆಯನ್ನು ಮಾಡಿದರು. ನೀವು ಯಾರು? ಭಗವಾನ್ ರುದ್ರನು ಉತ್ತರ ಕೊಟ್ಟನು. ನಾನೊಬ್ಬನೇ ಇರುತ್ತೇನೆ. ನಾನು ಸೃಷ್ಟಿಯ ಪೂರ್ವದಲ್ಲಿಯೂ ಇದ್ದೆನು. ಈಗಲೂ ಇರುತ್ತೇನೆ ಮತ್ತು ಭವಿಷ್ಯ ತ್ಕಾಲದಲ್ಲಿಯೂ ಇರುವೆನು. ನಾನು ಮೂರು ಕಾಲಗಳಲ್ಲಿಯೂ ಅಪರಿಚ್ಛಿನ್ನನಾಗಿರು ತ್ತೇನೆ. ನನ್ನ ಸರ್ವೇಶ್ವರತ್ವಕ್ಕಿಂತಲೂ ಅತಿರಿಕ್ತವಾಗಿ ಯಾರೂ ಎರಡನೆಯವರಿರು ವದಿಲ್ಲ. ಕೈವಲ್ಯೋಪನಿಷತ್ತಿನಲ್ಲಿಯೂ ಕೂಡ—

" ತಮಾದಿ ಮಧ್ಯಾಂತ ವಿಹೀನಮೇಕಂ
ವಿಭುಂ ಚಿದಾನಂದಮರೂಪಮದ್ಭುತಂ ।
ಉಮಾ ಸಹಾಯಂ ಪರಮೇಶ್ವರಂ ಪ್ರಭುಂ
ತ್ರಿಲೋಚನಂ ನೀಲಕಂಠಂ ಪ್ರಶಾಂತಂ ॥

ಅಂದರೆ ಅವನು ಆದಿಮಧ್ಯಾಂತರಹಿತನಾಗಿರುತ್ತಾನೆ. ರೂಪರಹಿತನಿರುತ್ತಾನೆ ಮತ್ತು ಅವನು ಒಬ್ಬನೇ ಇರುತ್ತಾನೆ. ಅದ್ವಿತೀಯನಾಗಿರುತ್ತಾನೆ. ಚಿದಾನಂದನೂ, ಅದ್ಭುತನೂ ಆಗಿರುತ್ತಾನೆ. ದೇವತೆಗಳಿಗೆ ಒಡೆಯನಾಗಿರುತ್ತಾನೆ. ಅವನೇ ಉಮೆಯ ಸಹಚರನೂ, ತ್ರಿಲೋಚನನೂ, ನೀಲಕಂಠನೂ ಆದ ಪರಮೇಶ್ವರನಾಗಿರುತ್ತಾನೆ.

ಹೀಗೆಯೇ ಶೃತ್ಯುಪನಿಷತ್ತುಗಳಲ್ಲಿ ಅನೇಕ ಪ್ರಮಾಣಗಳನ್ನು—ಈ ವಿಷಯದಲ್ಲಿ ಕೊಡಬಹುದು.

ಶ್ರೀ ಬಸವಣ್ಣನವರು—

" ಇಬ್ಬರು ಮೂವರು ದೇವರೆಂದುಬ್ಬುಬ್ಬಿ ಮಾತನಾಡಬೇಡ ದೇವ
ನೊಬ್ಬನೇ ಕಾಣಿರೋ ಇಬ್ಬರೆಂಬುದು ಹುಸಿ ನೋಡಾ ಕೂಡಲಸಂಗಮ
ದೇವನೊಬ್ಬನೇ ಅಲ್ಲದೆ ಇಬ್ಬರಿಲ್ಲವೆಂದಿತ್ತುದಾ ವೇದವು"

ಮತ್ತೊಂದು ವಚನದಲ್ಲಿ—

" ದೇವನೊಬ್ಬ ನಾಮ ಹಲವು ಪರಮ ಪತಿವ್ರತೆಗೆ ಗಂಡನೊಬ್ಬ
ಮತ್ತೊಂದಕ್ಕೆರಗಿದರೆ ಕಿವಿಮೂಗ ಕೊಯ್ಯುವನು ಹಲವು ದೈವದ ಎಂಜಲ
ತಿಂಬುವರನೇನೆಂಬೆನಯ್ಯ"

ಮೇಲಿನವೆರಡೂ ವಚನಗಳಿಂದ ದೇವನೊಬ್ಬ ಅವನಾದರೂ ಕೂಡಲಸಂಗಮನು ಎನ್ನುವದೇ ಬಸವಣ್ಣನವರ ಅಭಿಪ್ರಾಯವಾಗಿರುತ್ತದೆ. ವೇದವೂ ಕೂಡ ಒಬ್ಬನೇ ದೇವರೆಂದು ಹೇಳುತ್ತದೆಂಬುವದನ್ನು ಕೂಡ ಹೇಳಿರುತ್ತಾರೆ.

ಆದರೆ ವೀರಶೈವ ಧರ್ಮದಲ್ಲಿ ಲಿಂಗದ ಹೊರತು ಬೇರೆ ದೇವರನ್ನು ಆರಾಧಿಸ ಬಾರದು. "ಯತ್ರಾನ್ಯದೇವಾಸ್ತಿ ನ ತತ್ರ ದಿವಸಂವಸೇತ್" ಎಂದು ಆಗಮಗಳಲ್ಲಿ ಅನ್ಯದೇವತಾ ಪೂಜೆಯು ಸಂಪೂರ್ಣವಾಗಿ ತ್ಯಜಿಸಲ್ಪಟ್ಟಿರುತ್ತದೆ. ಹೀಗಿದ್ದರೂ ವೀರಶೈವ ಸಮಾಜದಲ್ಲಿ, ಮೈಲಾರಲಿಂಗ, ಹುಲಿಗವ್ವ, ಯಲ್ಲಮ್ಮ, ದ್ಯಾಮವ್ವ, ಉಡುಚವ್ವ, ಬರಮಪ್ಪ, ಲಕ್ಕವ್ವ, ದುರುಗವ್ವ, ಕರಿಯಪ್ಪ, ಕಾಳವ್ವ ಮೊದಲಾದ ನೂರಾರು ದೇವರುಗಳ ಪೂಜೆ ಮಾಡುವದು ನಡೆದಿರುತ್ತದೆ. ಈ ಪದ್ಧತಿಯು ವೀರಶೈವ ಧರ್ಮಕ್ಕೆ ಸಂಪೂರ್ಣ ವಿರೋಧವಾದುದಾಗಿರುತ್ತದಲ್ಲದೆ ಲಿಂಗದೇವನಿಗೆ ಅಪಮಾನ ಮಾಡಿದಂತೆಯೇ ಆಗುತ್ತದೆ. ಶ್ರೀ ಗುರುವು ಇಷ್ಟಲಿಂಗವನ್ನು ಕರುಣಿಸುವಾಗ ಪ್ರತಿದಿನ ತ್ರಿಕಾಲಗಳಲ್ಲಿ ತಪ್ಪದೆ ಶಿವಾರ್ಚನೆಯನ್ನು ಮಾಡಬೇಕೆಂದು ಅಪ್ಪಣೆಮಾಡಿ ದಾಗ್ಯೂ ಅನೇಕ ಕಿರುಕುಳ ದೇವರುಗಳನ್ನು ತಮ್ಮ ಮನೆಗಳಲ್ಲಿ ಇಟ್ಟು ಪೂಜೆಮಾಡು ವದು ಶಿವ ಸಂಪ್ರದಾಯವಾಗುವದು. ವೀರಶೈವ ಸಮಾಜದಲ್ಲಿ ಅರ್ಚಿಸುವಷ್ಟು ದೇವರುಗಳನ್ನು ಸದ್ಯಕ್ಕೆ ಬೇರೆ ಯಾವ ಸಮಾಜದವರೂ ಅರ್ಚಿಸಲಾರರು. ಇದು ಅನ್ಯಾಯವೂ, ಲಿಂಗವಂತ ಧರ್ಮಕ್ಕೆ ಅಪಮಾನಕಾರಕವೂ, ಅಶಾಸ್ತ್ರೀಯವೂ ಆಗಿರು ತ್ತದೆ. ಪ್ರತಿಯೊಬ್ಬ ವೀರಶೈವನೂ ತನ್ನ ಇಷ್ಟಲಿಂಗದ ಹೊರತು ಬೇರೆ ಯಾವ

ದೇವರಿಗೂ ತಲೆ ಬಾಗಿಸಬಾರದೆಂಬುವ ಪ್ರತಿಜ್ಞಾಬದ್ಧರಾಗತಕ್ಕದ್ದು. ವೀರಶೈವ ನಾದವನಿಗೆ ಗುರು ಕೊಟ್ಟ ಇಷ್ಟಲಿಂಗದ ಹೊರತು ಅನ್ಯದೈವವಿಲ್ಲವೆಂದು ಬಸವಾದಿ ಪ್ರಮಥರು ತಮ್ಮ ಅನೇಕ ವಚನಗಳಲ್ಲಿ ಕಠೋರವಾಗಿ ಖಂಡಿಸಿರುತ್ತಾರಲ್ಲದೆ ತಾವು ಅದರಂತೆ ನಡೆದು ಅನ್ಯರಿಗೆ ಮಾರ್ಗವನ್ನು ಹಾಕಿ ಕೊಟ್ಟರುತ್ತಾರೆ.

ಶ್ರೀ ಬಸವಣ್ಣನವರು—

"ಅರಗು ತಿಂದು ಕರಗುವ ದೈವವ, ಉರಿಯ ಕಂಡರೆ ಮುರುಟುವ ದೈವವನೆಂತು ಸರಿ ಎಂಬೆನಯ್ಯಾ? ಅವಸರ ಬಂದರೆ ಮಾರುವ ದೈವವ ನೆಂತು ಸರಿ ಎಂಬೆನಯ್ಯಾ? ಅಂಜಿಕೆಯಾದರೆ ಹೂಳುವ ದೈವವನೆಂತು ಸರಿ ಎಂಬೆನಯ್ಯಾ? ಸಹಜ ಭಾವ ನಿಜೈಕ್ಯ ಕೂಡಲಸಂಗಮದೇವ ನೊಬ್ಬನೇ ದೇವ"

ಮತ್ತು

"ಮಡಕೆ ದೈವ, ಮೊರ ದೈವ, ಬೀದಿಯ ಕಲ್ಲು ದೈವ, ಹಣಿಗೆ ದೈವ, ಬಿಲ್ಲನಾರಿ ದೈವ, ಕಾಣಿರೋ ಕೊಳಗ ದೈವ, ಗಿಣ್ಣಿಲು ದೈವ ಕಾಣಿರೋ ದೈವ ದೈವವೆಂದು ಕಾಲಿಡಲಿಂಬಿಲ್ಲಾ ದೇವನೊಬ್ಬ ಕೂಡಲಸಂಗಮದೇವ"

"ಹಾಳು ಮೊರಡಿಗಳಲ್ಲಿ, ಊರ ದಾರಿಗಳಲ್ಲಿ, ಕೆರೆ ಬಾವಿ ಹೂಗಿಡ ಮರಂಗಳಲ್ಲಿ, ಗ್ರಾಮದ ಮಧ್ಯದಲ್ಲಿ, ಚೌಪಥ ಪಟ್ಟಣ ಪ್ರದೇಶಗಳಲ್ಲಿ ಹಿರಿಯಾಲದ ಮರದಲ್ಲಿ ಮನೆಯಮಾಡಿ ಕರೆವೆಮ್ಮೆಯ ಹಸುಗೂಸು ಬಸುರಿ, ಬಾಣತಿ, ಕುಮಾರಿ, ಕೊಡಗೂಸೆಂಬವರ ಹಿಡಿದು ತಿಂಬ ತಿರಿದುಂಬ ಮಾರಯ್ಯ ಬೀರಯ್ಯ, ಕೇಚರಗಾವಿಲ ಅಂತರ, ಬೆಂತರ, ಕಾಳಯ್ಯ, ಧೂಳಯ್ಯ, ಕೇತಯ್ಯಗಳೆಂಬ ನೂರು ಮಡಕೆಗೆ ನಮ್ಮ ಕೂಡಲಸಂಗಮದೇವ ಶರಣೆಂಬುದೊಂದು ದಡಿ ಸಾಲದೇ"

ಈ ಮೂರು ವಚನಗಳಲ್ಲಿ ಬಸವಣ್ಣನವರು ಹಲವು ದೇವರಿಗೆ ಹರಿಕೆ ಹೊರತಕ್ಕವರನ್ನು ಬಹಳ ಹಳಿದಿರುತ್ತಾರೆ.

ಶ್ರೀ ಅಖಂಡೇಶ್ವರದೇವರು—

"ಕುಂಭ ಸಹಸ್ರ ಉದಕದೊಳಗೆ ಬಿಂಬಿಸಿ ತೋರುವ ಸೂರ್ಯ ನೊಬ್ಬನಲ್ಲದೆ ಮತ್ತೆ ಹಲಬರುಂಟೇನಯ್ಯ? ಸಕಲ ದೇಹಗಳೊಳಗೆ ಭ್ರಮಿಸಿ ತುಂಬಿಪ್ಪ ಪರವಸ್ತು ನೀನೊಬ್ಬನಲ್ಲದೆ ಮತ್ತಾರನೂ ಕಾಣೆನಯ್ಯ ಅಖಂಡೇಶ್ವರ"

ಶ್ರೀ ಸ್ವತಂತ್ರಸಿದ್ಧಲಿಂಗದೇವರು—

"ಇಬ್ಬರು ಮೂವರು ದೇವರೆಂದು ತಬ್ಬಿಬ್ಬಿಕೊಂಡು ನುಡಿಯಬೇಡ ಒಬ್ಬನೇ ದೇವ ಕಾಣಿರಣ್ಣ ಶಿವ ಏಕೋದೇವನೆಂದು ಸಾರುತ್ತಿವೆ ಶೃತಿ ಪುರಾಣಂಗಳು, ಇದು ಕಾರಣ ಶಿವನಲ್ಲದೆ ದೈವವಿಲ್ಲವೆಂದರಿದ ಮಹೇಶ್ವರನ ಹೃದಯ ವಾಸವಾಗಿಪ್ಪ ನಮ್ಮ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನು"

ಶ್ರೀ ತೋಂಟದಾರ್ಯ ಸಿದ್ಧಲಿಂಗಯತಿಗಳು—

"ಶಿವನಲ್ಲದೆ ದೇವರಿಲ್ಲ ನೋಡಾ ಎನಗೆ ಶಿವಮಂತ್ರವಲ್ಲದೆ ಬೇರೆ ಮಂತ್ರವಿಲ್ಲ ನೋಡಾ ಇದುಕಾರಣ ಓಂನಮಃ ಶಿವಾಯ ಎಂಬ ಷಡಕ್ಷರ ಮಂತ್ರವನ್ನೇ ಜಪಿಸುತ್ತಿರ್ದೆನು ಕಾಣಾ ಮಹಲಿಂಗ ಗುರು ಸಿದ್ಧೇಶ್ವರ ಪ್ರಭುವೇ"

ಶ್ರೀ ಉರಿಲಿಂಗ ಪೆದ್ದಿಗಳು—

"ಲಿಂಗವಂತ ಲಿಂಗವಂತ ಎಂಬಿರಿ ಎಂತು ಲಿಂಗವಂತರಾದಿರೊ ಅನ್ಯದೈವದ ಭಜನೆ ಮಾಡದನ್ನಕ್ಕ? ಭವಿಗಳ ಸಂಗವ ಮಾಡದನ್ನಕ್ಕ? ಎಂತು ಲಿಂಗವಂತರಾದಿರೋ? ನೀವು ಅದೆಂತೆಂದೊಡೆ 'ಶಿವಾಚಾರ ಸಂಪನ್ನೋ ಅನ್ಯದೈವಸ್ಯಪೂಜಕಃ। ಶ್ವಾನಯೋನಿ ಶತಂಗತ್ವಾ ಚಂಡಾಲ ಗೃಹಮಾಚರೇತ್॥' 'ಅಶನೇ ಶಯನೇ ಯಾನೇ ಸಂಪರ್ಕೇ ಸಹಭೋಜನೇ। ಸಂಚರಂತಿ ಮಹಾಘೋರೇ ನರಕೇ ಕಾಲಮಕ್ಷಯಂ॥' ಇಂತೆಂದುದಾಗಿ ಅನ್ಯದೈವಭವಿ ಉಳ್ಳನಕ ನೀವು ಲಿಂಗವಂತರೆಂತಾದಿರೊ ಮರುಳುಗಳಿರ್ಯಾ? ಇದನರಿತು ಭಕ್ತಿಪಥವ ಸೇರದಿರ್ದೊಡೆ ನೀವೆಂದೆಂದಿಗೂ ಭವಭವದ ಲೆಂಕರು ಇದು ಕಾರಣ, ನಮ್ಮ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಲಿಂಗವು ಮುನ್ನವೇ ದೂರವಯ್ಯ"

ಶ್ರೀ ಅಖಂಡೇಶ್ವರ ದೇವರು—

"ಶ್ರೀ ಗುರುಸ್ವಾಮಿ ಕರುಣಿಸಿಕೊಟ್ಟ ಇಷ್ಟಲಿಂಗವನ್ನು ಉದರದಲ್ಲಿ ಧರಿಸಿಕೊಂಡು ಅದು ದೇವರೆಂದು ನಂಬದೆ ಧರೆಯಮೇಲೆ ಕಂಡಕಂಡ ದೇವರ ಕಂಡು ಕಲ್ಪಿಸಿ ಹರಿದಾಡುವ ಭಂಡಮಾದಿಗರ ಭಕ್ತರೆಂದರೆ ಅಘೋರನರಕ ತಪ್ಪದಯ್ಯಾ ಅಖಂಡೇಶ್ವರ"

ಶ್ರೀ ಜೇಡರ ದಾಸೀಮಾರ್ಯರು—

"ಈಶ ನಿಮ್ಮ ಪೂಜಿಸಿದ ಬಳಿಕ ಅನ್ಯದೈವಂಗಳಿಗೆ ಹೇಸಿರಬೇಕು. ಹೇಸದೆ ಅನ್ಯದೈವಕ್ಕಾಸೆಮಾಡಿದರೆ ಅವ ನಮ್ಮ ಈಶ್ವರಂಗೆ ಹೊರಗುದೋಷ ರಹಿತ ಭಕ್ತರು ಅವಂಗೆ ಕುಲವೆಂದು ಕೂಸಕೊಟ್ಟು ಕೂಡುಂಡರೆ, ಮಾಸಲ ಬೋನ ನಾಯಿ ಮುಟ್ಟಿದಂತೆ ಕಾಣಾ ರಾಮನಾಥ"

ಶ್ರೀ ಅಂಬಿಗರ ಚೌಡಯ್ಯನವರು—

"ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ ಕೊರಳಿಗೆ ಕವಡೆಯ ಕಟ್ಟಿ ನಾಯಾಗಿ ಬೊಗಳುವದು ಅದಾವ ವಿಚಾರವಯ್ಯ? ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ ಹುರಿಬೆನ್ನ ಶಿಡಿಬಾಯ ಬೀಗದಲ್ಲಿ ಹೋಗುವುದು ಅದಾವ ವಿಚಾರವಯ್ಯಾ? ಬೇವಿನ ಉಡುಗೆಯನುಟ್ಟು ಹಡಲಿಗೆಯ ಹೊತ್ತು ಉದೋ ಎಂಬುವದು ಅದಾವ ವಿಚಾರವಯ್ಯಾ? ಇಂಥ ಭವಿ ಮಾರ್ಗದಲ್ಲಿ ಚಲಿಸುವ ಶಿವದ್ರೋಹಿಗಳಿಗೆ ಲಿಂಗಧಾರಣವ ಮಾಡುವ

ನೊಬ್ಬ ಗುರುದ್ರೋಹಿ, ಅವರಿಗೆ ಚರಣೋದಕವ ಧರಿಸುವ ವಿಭೂತಿ ರುದ್ರಾಕ್ಷಿಯು ಕೊಡುವನೊಬ್ಬ ಲಿಂಗದ್ರೋಹಿ, ಅವನು ಭಕ್ತನೆಂದು ಅವನು ಮನೆಯು ಹೊಕ್ಕು ಮಂತ್ರವ ಹೇಳಿ ಅನ್ನವ ತಿನ್ನುವನೊಬ್ಬ ಜಂಗಮ ದ್ರೋಹಿ ಇಂತೀ ನಾಲ್ವರಿಗೆ ಸೂರ್ಯ ಚಂದ್ರರುಳ್ಳನ್ನಕ್ಕರ ಎಕ್ಕಲ ಕುಂಡದಲ್ಲಿ ಇಕ್ಕದೆ ಮಾಣ್ಬನೇ ನಮ್ಮ ಅಂಬಿಗರ ಚೌಡಯ್ಯ"

ಮತ್ತೊಬ್ಬ ಶರಣರು—

"ಕರಸ್ಥಲದಲ್ಲಿದ್ದ ಲಿಂಗವ ಬಿಟ್ಟು ಧರೆಯ ಮೇಲಣ ಪ್ರತಿಮೆಗೆ ಎರಗುವ ನಾಯಕ ನರಕಿಗಳನೇನೆಂಬೆನಯ್ಯ ಪರಮಗುರು ಶಾಂತ ಮಲ್ಲಿಕಾರ್ಜುನಾ."

ಮೇಲೆ ಹೇಳಿದ ಎಲ್ಲ ಶರಣರ ವಚನಗಳಲ್ಲಿಯೂ ಅನ್ಯ ದೇವರ ಪೂಜಾ ನಿಷೇಧ ವನ್ನು ಹೇಳಿರುತ್ತದಲ್ಲದೆ ಈಶ್ವರನೊಬ್ಬನೇ ದೇವನೆಂದು ಪ್ರತಿಪಾದಿಸಲ್ಪಟ್ಟಿದೆ. ಇದರಲ್ಲಿ ಕೆಲವು ಶರಣರ ವಚನಗಳು ವಾಚಕವೃಂದಕ್ಕೆ ಕಠೋರವಾಗಿ ಕಾಣಿಸಬಹುದು. ಆದರೆ ಅವರ ವಿಚಾರಗಳು ಬಹಳ ಮೃದುವಾಗಿದ್ದು ಅಡ್ಡಹಾದಿಯನ್ನು ಹಿಡಿದಿರುವ ಜನಂಗಳನ್ನು ಸರಿಯಾದ ದಾರಿಗೆ ತರುವದೇ ಅವರ ಮುಖ್ಯ ಗುರಿಯಾಗಿರುತ್ತದೆ. ಜಾಣರನ್ನು ಸಾಮಾನ್ಯ ಮಾತುಗಳಿಂದ ದಾರಿಗೆ ತರಲು ಶಕ್ಯವಿದೆ. ಅಜ್ಞಾನಿಗಳಾದ ಜನಸಮುದಾಯವನ್ನು ದಾರಿಗೆ ತರಬೇಕಾದರೆ ಅಂಬಿಗರ ಚೌಡಯ್ಯನಂಥವರೇ ಬೇಕಾಗುತ್ತದೆಂಬುವದನ್ನು ಮರೆಯಲಾಗದು. ಎಷ್ಟೋ ಜನ ವೀರಶೈವರು ಚೌಡಯ್ಯ ನವರು ತಮ್ಮ ವಚನದಲ್ಲಿ ಹೇಳಿದಂತೆ ಮೈಲಾರಲಿಂಗನ ಶಿಷ್ಯರಾಗಿ ಗೊರವರಾಗಿ ಮನ ಬಲ್ಲಂತೆ ಮಾಡುವದನ್ನು ನೋಡುತ್ತಲಿದ್ದೇವೆ. ಕೆಲವರು ಹೆಣ್ಣು ದೇವರುಗಳಿಗೆ ಹರಕೆ ಯನ್ನು ಹೊತ್ತು ಶಿಡಿಯಾಡುವ ಪದ್ಧತಿಯನ್ನೂ ಇಟ್ಟುಕೊಂಡಿದ್ದಾರೆ. ಮತ್ತು ಹಲವರು ಹಡಲಿಗೆ ಹೊತ್ತು ಬೇವಿನಸಪ್ಪನ್ನು ಉಟ್ಟುಕೊಂಡು ಉಧೋ ಉಧೋ ಎಂದೆನ್ನುವದೂ ರೂಢಿಯಲ್ಲಿ ಬಂದುಬಿಟ್ಟಿದೆ. ಇದರಂತೆಯೇ ಇನ್ನೂ ಅನೇಕ ಅನಾಚರಣೆಗಳು ಅಂದರೆ ಲಿಂಗವಂತ ಧರ್ಮಕ್ಕೆ ಸಲ್ಲದ ಆಚಾರಗಳನ್ನು ಆಚರಿಸುತ್ತಲಿದ್ದಾರೆ. ಇದೆಲ್ಲ ಲಿಂಗಾಂಗಿಗೆ ಸಲ್ಲದೆಂಬುವದೇ ಶರಣರ ವಾದವು.

ಶ್ರೀ ಬಸವಣ್ಣನವರು—

ಶಿವನೇ ಜಗತ್ರಯಕ್ಕೊಡೆಯನೆಂದುದು ವೇದ, ಅವನೇ ಉತ್ಪತ್ತಿ ಸ್ಥಿತಿ ಲಯಕ್ಕೆ ಕಾರಣನೆಂದುದು ವೇದ, "ಈಶ್ವರಸ್ಸರ್ವಜಗತ್ಪ್ರಭುಃ ಪ್ರೇರಕಃ ವಿಶ್ವಭುಕ್" ಎಂದು ಸಾರುತ್ತಿದೆ.

ಹೀಗೆ ಬಸವಣ್ಣನವರು ಶಿವನೊಬ್ಬನೇ ದೇವರು, ಆತನನ್ನು ಇಷ್ಟಲಿಂಗರೂಪದಲ್ಲಿ ಆರಾಧಿಸಬೇಕಲ್ಲದೆ ಅನ್ಯ ದೇವರನ್ನು ಆರಾಧಿಸಬಾರದು ಎಂದು ತಿಳಿಸಿ,

"ಜಾಗೃತ್ ಸ್ವಪ್ನ ಸುಷುಪ್ತಿಯಲ್ಲಿ ಮತ್ತೊಂದ ನೆನೆದಡೆ ತಲೆದಂಡ ತಲೆದಂಡ, ಹುಸಿದೆನಾದಡೆ ದೇವಾ ತಲೆದಂಡ ತಲೆದಂಡ, ಕೂಡಲ ಸಂಗಮದೇವಾ ನೀನಲ್ಲದೆ ಅನ್ಯದೈವವ ನೆನೆದಡೆ ತಲೆದಂಡ ತಲೆದಂಡ"

ಎಂದು ಹೇಳಿದರೆ ಅವರ ಏಕೇಶ್ವರವಾದವೂ, ಅನ್ಯ ದೈವಂಗಳ ಭಜನೆಯ ನಿಷೇಧವೂ ಸ್ಪಷ್ಟವಾಗಿರುತ್ತದೆ.

ಶಿವಾನುಭವದಲ್ಲಿಯೂ ಕೂಡ ಏಕೇಶ್ವರತ್ವವೂ ಅನ್ಯ ದೈವಂಗಳ ನಿಷೇಧವೂ ಚೆನ್ನಾಗಿ ಪ್ರತಿಪಾದಿಸಲ್ಪಟ್ಟಿರುತ್ತದೆ.

"ಶಿವೋ ದಾತಾ ಶಿವೋ ಭೋಕ್ತಾ ಶಿವಸ್ಸರ್ವಮಿದಂ ಜಗತ್ ।
ಶಿವೋ ಯಜತಿ ಯಜ್ಞೈಶ್ಚ ಯಶ್ಶಿವಸ್ಸೋಽಹಮೇವ ಚ ॥"

ಅಂದರೆ, ಶಿವನೇ ದಾತಾ, ಶಿವನೇ ಭೋಕ್ತಾ, ಈ ಜಗತ್ತೆಲ್ಲ ಶಿವಮಯವಾಗಿರುವದು.

ಶ್ರೀ ಅಂಬಿಗರ ಚೌಡಯ್ಯನವರ ಇನ್ನೊಂದು ವಚನವನ್ನು ಇಲ್ಲಿ ನೋಡೋಣ. ವಚನ ಪುಟ ೪೪—

"ಸತ್ತರೆ ಸಂಗಾತಿ ಹೂಳಿಸಿಕೊಂಬ ಇಷ್ಟಲಿಂಗವ ಸಟೆಮಾಡಿ ಮತ್ತೆ ಅನ್ಯದೈವಕ್ಕೆರಗುವ ಕತ್ತೆ ಹೊಲೆಯರು ನೀವು ಕೇಳಿರೊ, ತನ್ನ ಪುರುಷನಿರಲು ಅನ್ಯಪುರುಷನ ಕೂಡಿಹ ಸ್ತ್ರೀಗೆ ನರಕವಲ್ಲವೇ? ಮೋಕ್ಷಾರ್ಥಿಯೆಂದು ಗುರುವು ಕೊಟ್ಟ ಇಷ್ಟಲಿಂಗವು ಅಂಗಕ್ಕೆ ಸಂಬಂಧಿಸಿದ ಬಳಿಕ ಹಲವು ದೇವರೆಂದು ಭಾವಿಸಿ ಪೂಜೆಯ ಮಾಡುವ ಭ್ರಷ್ಟರು ನೀವು ಕೇಳಿರೊ, ನೀವು ಮಾಡಿದ ಪೂಜೆಯು ಹಾದರ ಸ್ತ್ರೀಯಳಂತೆ ಕಾಣಿರೊ, ಕಡೆಗೆ ಅದೇ ಲಿಂಗವೇ ಮುಂದೆ ಮಾರಿಯಾಗಿ ಮೋಕ್ಷಕ್ಕೆ ದೂರಮಾಡುವದೆಂದಾತ ನಮ್ಮ ಅಂಬಿಗರ ಚೌಡಯ್ಯ"

ಬೇಡಿದ ಇಷ್ಟಾರ್ಥಗಳನ್ನು ಕೊಡುವಂತಹ ದೇವನು ಸದಾ ತನ್ನಲ್ಲಿ ಸನ್ನಿಹಿತವಾಗಿರಲು ಹಗಲಿರುಳು ಹದಿನೆಂಟು ದೇವರಿಗೆ ಹರಕೆ ಹೊರುವದು ಮಹಾ ಪಾಪಕರವಾದುದೆಂದೇ ಶರಣರ ಭಾವನೆಯಾಗಿರುತ್ತದೆ. ಲಿಂಗಧಾರಣವಾದಮೇಲೆ ಅಂಗೇಂದ್ರಿಯಂಗಳೆಲ್ಲ ಲಿಂಗೇಂದ್ರಿಯಂಗಳಾಗುವ ಕಾರಣ ಲಿಂಗಚೈತನ್ಯವು ಶರೀರದಲ್ಲಿ ಉಂಟಾದ ಬಳಿಕ ಲಿಂಗಭಕ್ತನು ಲಿಂಗಭಕ್ತಿ ಲಿಂಗಾಚರಣೆ ತನ್ನಲ್ಲಿ ಹೆಚ್ಚು ಅಳವಡುವಂತೆ ಮಾಡಬೇಕಾದುದು ಅವನ ಮುಖ್ಯ ಕಾರ್ಯ. ವೀರಶೈವ ಷಟ್‌ಸ್ಥಲ ಮಾರ್ಗವು ಇದನ್ನೇ ಬೋಧಿಸುತ್ತದೆ. ವೀರಶೈವ ಮಾರ್ಗಾವಲಂಬಿಯಾದವನು ಅವಶ್ಯವಾಗಿ ಈ ಮಾರ್ಗವನ್ನು ತಿಳಿದುಕೊಂಡು, ತನ್ನಲ್ಲಿ ಪರಮಾತ್ಮಕಳೆಯನ್ನು ಹೆಚ್ಚಿಸಿಕೊಳ್ಳುತ್ತ ಅಂತಿಮ ಗುರಿಯಾದ ಲಿಂಗಾಂಗ ಸಾಮರಸ್ಯವನ್ನು ಹೊಂದಬೇಕು. ಇದೇ ಲಿಂಗಾಂಗಿ ಧರ್ಮದ ಕೊನೆಯ ಧ್ಯೇಯವಾಗಿರುತ್ತದೆ. ಈ ಅಂತಿಮ ಧ್ಯೇಯವನ್ನು ಸಾಧಿಸಬೇಕಾದರೆ ಮೇಲೆ ಹೇಳಿದ ಬಸವಾದಿ ಶರಣರ ಮಾರ್ಗದ ಹೊರತು ಗತ್ಯಂತರವೇ ಇರುವದಿಲ್ಲ. ಲಿಂಗವು ವಿಜ್ಞಾನ ದೃಷ್ಟಿಯಿಂದ ಬಹಳ ಮಹತ್ತರವಾದುದಾಗಿರುವ ಕಾರಣ ಎಲ್ಲ ಕಲೆಗಳೂ ಲಿಂಗಾಂಗಿಯಲ್ಲಿ ನೆಲೆಸುತ್ತವೆನ್ನುವದಕ್ಕೆ ಅನೇಕರ ಅನುಭವ ಪ್ರಮಾಣಗಳಿರುತ್ತವೆ. ಇದನ್ನರಿತೇ ಗುರುವು ಷಡಧ್ವಶೋಧನಾಪೂರ್ವಕ ಶಿಷ್ಯನಿಗೆ ಲಿಂಗಧಾರಣೆಯನ್ನು ಮಾಡುತ್ತಾನೆ. ಆ ಮಾರ್ಗವನ್ನು ಬಿಟ್ಟು ಲಿಂಗಧಾರಿಗೆ ಎಂದೆಂದಿಗೂ ಮೋಕ್ಷದ ದಾರಿಯು ಕಾಣಲಾರದು.

ಶರಣರು ಕೇವಲ ಕಿರುಕುಳ ದೇವತೆಗಳನ್ನು ಮಾತ್ರ ತಿರಸ್ಕರಿಸಿರುತ್ತಾರೆಂದು ಯಾರೂ ತಿಳಿಯಕೂಡದು. ಸ್ಥಾವರ ಲಿಂಗಪೂಜೆಯೂ ಕೂಡ ವೀರಶೈವ ಮಾರ್ಗಕ್ಕೆ ಸಲ್ಲದೆಂದು ಅನೇಕ ವಚನಗಳಿಂದ ಹೇಳಿರುತ್ತಾರೆ.

ಶ್ರೀ ಅಕ್ಕಮಹಾದೇವಿಯವರು—

"ಹಾಲ ಹಿಡಿದು ಬೆಣ್ಣೆಯನರಸಲುಂಟೆ? ಲಿಂಗವ ಹಿಡಿದು ಪುಣ್ಯ ತೀರ್ಥಕ್ಕೆ ಹೋಗಲುಂಟೆ? ಲಿಂಗದ ಪಾದತೀರ್ಥ ಪ್ರಸಾದವ ಕೊಂಡು ಅನ್ಯಬೋಧೆ ಅನ್ಯಶಾಸ್ತ್ರ ಹಾರೈಸಲೇತಕ್ಕೆ? ಇಷ್ಟಲಿಂಗವಿದ್ದಂತೆ ಸ್ಥಾವರ ಲಿಂಗಕ್ಕೆ ಶರಣೆಂದೊಡೆ ತಡೆಯದೆ ಹುಟ್ಟಿಸುವ ಶ್ವಾನಗರ್ಭದಲ್ಲಿ— ಅದೆಂತೆಂದೊಡೆ— ಶಿವಧರ್ಮ ಪುರಾಣದಲ್ಲಿ 'ಇಷ್ಟಲಿಂಗಮವಿಶ್ವಸ್ಯ ತೀರ್ಥಲಿಂಗಂ ನಮಸ್ಕೃತಃ। ಶ್ವಾನಯೋನಿಶತಂಗತ್ವಾ ಚಂಡಾಲ ಗೃಹ ಮಾಚರೇತ್॥' ಎಂದುದಾಗಿ, ಇದನರಿದು ಗುರುಕೊಟ್ಟ ಲಿಂಗದಲ್ಲಿಯೇ ಎಲ್ಲ ತೀರ್ಥಂಗಳು ಎಲ್ಲ ಕ್ಷೇತ್ರಂಗಳು ಇದ್ದಾವೆಂದು ಭಾವಿಸಿ ಮುಕ್ತ ರಪ್ಪುದಯ್ಯ. ಇಂತಲ್ಲದೆ ಗುರು ಕೊಟ್ಟಲಿಂಗವ ಕಿರಿದು ಮಾಡಿ ತೀರ್ಥ ಲಿಂಗವ ಹಿರಿದು ಮಾಡಿ ಹೋದಾತಂಗೆ ಅಘೋರನರಕ ತಪ್ಪದು ಕಾಣಾ ಚನ್ನಮಲ್ಲಿಕಾರ್ಜುನಾ."

ಶ್ರೀ ಅಖಂಡೇಶ್ವರ ದೇವರು—

"ಸದ್ಭಕ್ತರಾದವರು ಸ್ಥಾವರಲಿಂಗವಂ ಭಜನೆಯ ಮಾಡಲಾಗದು, ಮನದಲ್ಲಿ ಸ್ಥಾವರ ಘನವೆಂದು ನೆನೆಯಲಾಗದು, ಅದೇನು ಕಾರಣ ವೆಂದೊಡೆ ಆದಿ ಅನಾದಿಯಿಂದಿತ್ತತ್ತವಾದ ಮಹಾ ಘನವಸ್ತುವನ್ನು ಶ್ರೀ ಗುರುಸ್ವಾಮಿ ಭೇದಿಸಿ ತಂದು ಕೈಯ್ಯಲ್ಲಿ ಇಷ್ಟಲಿಂಗವೆನಿಸಿ ಕರಸ್ಥಳಕ್ಕೆ ಕೊಟ್ಟ ಬಳಿಕ ಆ ಲಿಂಗದಲ್ಲಿ ಸಕಲ ಕ್ಷೇತ್ರಂಗಳುಂಟೆಂದು ಭಾವಿಸಿ ಮುಕ್ತಿಯ ಪಡೆಯಲರಿಯದೆ ಖಂಡಿತ ಬುದ್ಧಿಯಿಂದ ಬೇರೆ ಮುಕ್ತಿಯ ಪಡೆವೆನೆಂದು ಕಂಡಕಂಡ ತೀರ್ಥಕ್ಷೇತ್ರಂಗಳಿಗೆಡೆಯಾಗಿ ತೊಳಲಿ ಬಳಲುವ ಭ್ರಷ್ಟ ಭವಿಗಳಿಗೆ ನರಕವೇ ಪ್ರಾಪ್ತಿಯಯ್ಯಾ ಅಖಂಡೇಶ್ವರಾ."

ಶ್ರೀ ತೋಂಟದ ಸಿದ್ಧಲಿಂಗದೇವರು—

"ಕೈಯ್ಯಲ್ಲಿ ಹಣ್ಣಿದ್ದು ಮರವನೇರಿ ಕೊಂಬೆಯ ಬಾಗಿಸಿ ಕಾಯಿ ಕೊಯ್ವ ಅರೆಮರುಳನಂತೆ ಅನಾದಿಮೂಲದೊಡೆಯ ತನ್ನ ಕರಸ್ಥಲ ಮನ ಸ್ಥಲದಲ್ಲಿಪ್ಪುದ ತಾನರಿಯದೆ ಬೇರೆ ಲಿಂಗವುಂಟು, ಬೇರೆ ಕ್ಷೇತ್ರವುಂಟು ಎಂದು ಹಲವು ಲಿಂಗಕ್ಕೆ ಹರಿದು ಹಂಬಲಿಸುವ ಈ ಸೂಳೆಗೆ ಹುಟ್ಟಿದವರಿಗೆ ಗುರುವಿಲ್ಲವಾಗಿ ಲಿಂಗವಿಲ್ಲ, ಜಂಗಮವಿಲ್ಲ, ಪ್ರಸಾದವಿಲ್ಲ ಮುಕ್ತಿ ಎಂಬುದು ಎಂದಿಗೂ ಇಲ್ಲ ಕಾಣಾ ಮಹಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ."

ಶ್ರೀ ಚನ್ನಬಸವಣ್ಣನವರು—

"ಪತಿವ್ರತೆಯಾದೊಡೆ ಅನ್ಯಪುರುಷರ ಸಂಗವೇತಕ್ಕಯ್ಯ? ಲಿಂಗ ಸಂಗಿಯಾದಡೆ ಅನ್ಯದೈವದ ಸಂಗವೇತಕ್ಕಯ್ಯ? ಕಂಡಕಂಡವರ ಹಿಂದೆ

ಹರಿವ ಚಾಂಡಾಲಗಿತ್ತಿಯಂತೆ ಒಬ್ಬನ ಕೈವಿಡಿದು ಒಬ್ಬಗೆ ಮಾತುಕೊಟ್ಟು
ಒಬ್ಬಗೆ ಸನ್ನೆಯ ಮಾಡಿ ಮತ್ತೊಬ್ಬನ ಸಂಗವ ಮಾಡುವ ಹಾದರಗಿತ್ತಿ
ಯಂತೆ, ಪ್ರಾಣಲಿಂಗವಿದ್ದಂತೆ ಸ್ಥಾವರ ಲಿಂಗಕ್ಕೆ ಹರಿಸಿ ಪೊಡಮಡುವ
ಕೋಟಲೆ ಏತಕೋ? ಇದು ಕಾರಣ ಕೂಡಲಚನ್ನಸಂಗಮದೇವಾ
ಇಂತಪ್ಪ ಪಾತಕರ ಮುಖವೆನಗೆ ತೋರದಿರಯ್ಯ."

ಮೇಲೆ ಹೇಳಿದ ನಾಲ್ಕು ವಚನಗಳ ಅರ್ಥವು ಸ್ಪಷ್ಟವಾಗಿಯೇ ಇದ್ದರೂ ಸಾರಾಂಶವು ಹೀಗೆ ಇರುತ್ತದೆ—

ಹಾಲು ಇದ್ದಾಗ್ಗೆ ಬೆಣ್ಣೆಯ ಸಲುವಾಗಿ ಬಳಲುವದೇಕೆ? ಲಿಂಗವಿದ್ದಾಗ್ಗೆ ಪುಣ್ಯ ತೀರ್ಥಕ್ಕೆ ಹೋಗುವದೇತಕ್ಕೆ? ಲಿಂಗದ ಪಾದತೀರ್ಥವಿದ್ದಕಾಲಕ್ಕೆ ಅನ್ಯಬೋಧೆ ಅನ್ಯ ಶಾಸ್ತ್ರದಿಂದ ಪ್ರಯೋಜನವೇನು? ಇಷ್ಟಲಿಂಗವಿದ್ದಾಗ್ಯೂ ಸ್ಥಾವರಲಿಂಗಗಳಿಗೆ ಹೋದರೆ ಅವನು ಕಡಿಮೆ ತರಗತಿಯ ಜನ್ಮವನ್ನು ಧರಿಸುವನು. ಆದ್ದರಿಂದ ಗುರು ಕೊಟ್ಟ ಲಿಂಗದಲ್ಲಿಯೇ ಎಲ್ಲ ತೀರ್ಥಗಳೂ, ಕ್ಷೇತ್ರಗಳೂ ಉಂಟೆಂದು ಭಾವಿಸಿ ಮುಕ್ತ ರಾಗಬೇಕು. ಇದನ್ನು ಬಿಟ್ಟು ಗುರುಕೊಟ್ಟ ಇಷ್ಟಲಿಂಗವನ್ನು ಕಿರಿದು ಮಾಡಿ ತೀರ್ಥದ ಲಿಂಗವನ್ನು ಹಿರಿದು ಮಾಡಿದವನಿಗೆ ನರಕವು ತಪ್ಪಲಾರದು.

ಸದ್ಭಕ್ತರಾದವರು ಸ್ಥಾವರಲಿಂಗವನ್ನು ಭಜನೆ ಮಾಡಬಾರದು. ಮನದಲ್ಲಿ ಸ್ಥಾವರ ಲಿಂಗವು ಘನವೆಂದು ನೆನೆಯಲಾಗದು. ಮಹಾ ಘನವಸ್ತುವನ್ನು ಶ್ರೀ ಗುರು ಸ್ವಾಮಿಯು ಇಷ್ಟಲಿಂಗ ರೂಪವಾಗಿ ಕರಸ್ಥಳಕ್ಕೆ ಕೊಟ್ಟ ಬಳಿಕ ಆ ಲಿಂಗದಲ್ಲಿ ಸಕಲ ಕ್ಷೇತ್ರಗಳುಂಟೆಂದು ಭಾವಿಸಬೇಕು. ಅದನ್ನು ಬಿಟ್ಟು ಕಂಡಕಂಡ ಸ್ಥಾವರಲಿಂಗಗಳಿಗೆ ಎರಗಿದರೆ ಅಷ್ಟೇ ನರಕವು. ಕೈಯೊಳಗೆ ಹಣ್ಣಿದ್ದರೂ ಮರವನ್ನು ಏರಿ ಕೊಂಬೆಯನ್ನು ಬಾಗಿಸಿ ಕಾಯನ್ನು ಕೊಯ್ಯುವ ಅರೆಮರುಳನಂತೆ ಅನಾದಿಮೂಲದೊಡೆಯ ತನ್ನ ಕೈಯ್ಯಲ್ಲಿರಲು ಬೇರೆ ಲಿಂಗ ಬೇರೆ ಕ್ಷೇತ್ರ ಉಂಟೆಂದು ಹಂಬಲಿಸುವವರಿಗೆ ಎಂದೂ ಶಿವನ ಸಾನ್ನಿಧ್ಯ ದೊರಕಲಾರದು. ಪತಿವ್ರತೆಯಾದರೆ ಅವಳಿಗೆ ಅನ್ಯಪುರುಷರ ಸಂಗವೇತಕ್ಕೆ ಬೇಕು? ಲಿಂಗಸಂಗಿಯಾದವನಿಗೆ ಅನ್ಯ ದೈವದ ಸಂಗವೇತಕ್ಕೆ ಬೇಕು? ಕಂಡಕಂಡವರ ಹಿಂದೆ ಬೆನ್ನು ಹತ್ತಿ ಹೋಗುವ ವ್ಯಭಿಚಾರಿಯಂತೆ ಮಾಡುವದೆಂದಿಗೂ ಹಿತಕರವಾದುದಲ್ಲ.

ಶ್ರೀ ಬಸವಣ್ಣನವರು—

"ನಂಬಿದ ಹೆಂಡತಿಗೆ ಗಂಡನೊಬ್ಬ ಕಾಣಿರೊ, ನಂಬಬಲ್ಲ ಭಕ್ತಂಗೆ
ದೇವನೊಬ್ಬ ಕಾಣಿರೊ, ಬೇಡ ಬೇಡ ಅನ್ಯದೈವದ ಸಂಗ ಹೊಲ್ಲ ಅನ್ಯ
ದೈವವೆಂಬುದು ಹಾದರ ಕಾಣಿರೊ ಕೂಡಲಸಂಗಮದೇವರು ಕಂಡರೆ
ಮೂಗಕೊಯ್ಯುವ ಕಾಣಿರೋ."

ಇದರಂತೆಯೇ ಇನ್ನೂ ಕೆಲವು ವಚನಗಳಲ್ಲಿ ಶಿವನಲ್ಲದನ್ಯದೈವಂಗಳ ಪೂಜೆಯನ್ನು ಖಂಡಿಸಿ, ಒಬ್ಬನೇ ಶಿವನು ಜಗತ್ಕರ್ತನೆಂದು ಸಿದ್ಧಾಂತ ಪಡಿಸಿರುತ್ತಾರೆ. ಶ್ರೀ ಬಸವಣ್ಣ ನವರ ಏಕೇಶ್ವರವಾದವು ಎಲ್ಲ ಉಪನಿಷತ್ತುಗಳ ಸಾರದಂತಿರುತ್ತದೆ.

## ಕೈವಲ್ಯೋಪನಿಷತ್

ಅಣೋರಣೀಯಾನಹಮೇವ ತದ್ವನ್ಮಹಾನಹಂ ವಿಶ್ವಮಹಂ ವಿಚಿತ್ರಂ ।
ಪುರಾತನೋಹಂ ಪುರುಷೋಹಮೀಶೋ ಹಿರಣ್ಮಯೋಹಂ ಶಿವರೂಪಮಸ್ಮಿ ॥ ೧ ॥

ಅಪಾಣಿಪಾದೋಹಮಚಿಂತ್ಯಶಕ್ತಿಃ ಪಶ್ಯಾಮ್ಯಚಕ್ಷುಃ ಸಶೃಣೋಮ್ಯಕರ್ಣಃ ।
ಅಹಂವಿಜಾನಾಮಿ ವಿವಿಕ್ತರೂಪೋ ನಚಾಸ್ತಿವೇತ್ತಾ ಮಮಚಿತ್ಸದಾಹಂ ॥ ೨ ॥

ವೇದೈರನೇಕೈರಹಮೇವ ವೇದ್ಯಃ ವೇದಾಂತಕೃದ್ವೇದ ವಿದೇವ ಚಾಹಂ ।
ನಪುಣ್ಯಪಾಪೇ ಮಮನಾಸ್ತಿ ನಾಶೋ ನಜನ್ಮ ಬುದ್ಧೇಂದ್ರಿಯ ಬುದ್ಧಿರಸ್ತಿ ॥ ೩ ॥

ನಭೂಮಿರಾಪೋ ನಚವಹ್ನಿರಸ್ತಿ ನಚಾನಿಲೋ ಮೇಸ್ತಿ ನಚಾಂಬರಂ ಚ ।
ಏವಂ ಪರಮಾತ್ಮರೂಪಂ ವಿದಿತ್ವಾ ಗುಹಾಶಯಂ ನಿಷ್ಕಲಂ ಅದ್ವಿತೀಯಂ ॥ ೪ ॥

ಸಮಸ್ತ ಸಾಕ್ಷಿಂ ಸದ ಸದ್ವಿಹೀನಂ ಪ್ರಯಾತಿ ಶುದ್ಧಂ ಪರಮಾತ್ಮ ರೂಪಂ ।
ಯಃ ಶತರುದ್ರೀಯಂ ಅಧೀತೇ ಸಃ ಪೂತೋ ಭವತಿ–

ಇನ್ನೂ ಅನೇಕ ಉಪನಿಷತ್ತುಗಳ ಉದಾಹರಣೆಯನ್ನು ಕೊಡಬಹುದು. ಎಲ್ಲವೂ ಒಂದೇ ವಿಧವಾಗಿರುವದರಿಂದ ಈಗ ಕೊಟ್ಟಿರುವ ಉದಾಹರಣೆಗಳೇ ಸಾಕಷ್ಟಾಗಿರುತ್ತವೆ. ಶ್ರೀ ಬಸವಣ್ಣನವರ ಈ ಏಕೇಶ್ವರವಾದವು ಒಳ್ಳೇ ಸಮಂಜಸವಾಗಿದ್ದು ಮೇಲೆ ಹೇಳಿದಂತೆ ಸರ್ವೋಪನಿಷತ್ತುಗಳ ಸಾರವಾಗಿರುತ್ತದೆ. ಅದನ್ನು ಸರ್ವ ಜನಗಳಿಗೂ ಸುಲಭವಾಗಿ ತಿಳಿಯುವಂತೆ ಶಿವಸಿದ್ಧಾಂತವನ್ನು ಲಿಂಗರೂಪದಿಂದ ಮಂಡಿಸಿದ್ದುದು ಸರ್ವ ಜನಗಳಿಗೂ ತಲೆದೂಗುವಂತೆ ಇರುತ್ತದೆ. ಈ ಏಕೇಶ್ವರವಾದವೂ, ಅನ್ಯ ದೇವತಾ ಪೂಜಾ ನಿಷೇಧವೂ ವೀರಶೈವ ಧರ್ಮದ ಮುಖ್ಯ ತಳಹದಿಯಾಗಿರುತ್ತದೆ.

# ಇಪ್ಪತ್ತೊಂದನೆಯ ಪ್ರಕರಣ

## ಬಸವಣ್ಣನವರೂ ಟೀಕಾಕಾರರೂ

ಬಸವಣ್ಣನವರು ಶಿವಭಕ್ತಿಯನ್ನು ಪ್ರಸಾರಮಾಡಲಿಕ್ಕೆ ಪರಮಾತ್ಮನ ಅಪ್ಪಣೆಯಂತೆ ಭೂಲೋಕಕ್ಕೆ ಬಂದು ಭಕ್ತಿಭಾಂಡಾರಿಗಳಾಗಿ ದ್ವಿತೀಯ ಶಂಭುವೆಂದೆನ್ನಿಸಿಕೊಂಡ ಮಹಾಪುರುಷರು, ಅಜಾತಶತ್ರುಗಳೂ ಅವರ ನಡೆನುಡಿಗಳೆಲ್ಲ ಅಹಿಂಸಾಮಯಗಳಾಗಿರುವದರಿಂದಲೂ ಅವರಿಗೂ ಲೋಕದಲ್ಲಿ ಟೀಕಾಕಾರರುಂಟೇ? ಎಂಬುವ ಪ್ರಶ್ನೆಯು ವಾಚಕರ ಮನಸ್ಸಿನಲ್ಲಿ ಬರುವದು ಸಹಜವಾದುದಾಗಿರುತ್ತದೆ.

**ಪಂಚತಂತ್ರ**

> " ಪ್ರಾಯೇಣಾತ್ರ ಕುಲಾನ್ವಿತಂ ಕುಕುಲಜಾ ಶ್ರೀ ವಲ್ಲಭಂ ದುರ್ಭಗಾ ।
> ದಾತಾರಂ ಕೃಪಣಾ ಋಜೂನನೃಜವೋ ವಿತ್ತೇಸ್ಥಿತಂ ನಿರ್ಧನಾಃ ॥
> ವೈರೂಪ್ಯೋಪ ಹತಾಶ್ಚ ಕಾಂತವಪುಷಂ ಧರ್ಮಾಶ್ರಯಂ ಪಾಪಿನೋ ।
> ನಾನಾಶಾಸ್ತ್ರ ವಿಚಕ್ಷಣಂ ಚ ಪುರುಷಂ ನಿಂದಂತಿ ಮೂರ್ಖಾಸ್ಸದಾ ॥ "

ಸಾಮಾನ್ಯವಾಗಿ ಸತ್ಕುಲ ಸಂಪನ್ನರನ್ನು ಕುಲಗೇಡಿಗಳು, ದೈವಶಾಲಿಗಳನ್ನು ದುರ್ದೈವಿಗಳು, ಸರಳಮಾರ್ಗಿಗಳನ್ನು ಕುಟಿಲರು, ಬಲ್ಲಿದರನ್ನು ಬಡವರು, ಚೆಲುವರನ್ನು ಕುರೂಪಿಗಳು, ಧರ್ಮಿಷ್ಠರನ್ನು ಪಾಪಿಗಳು, ಸಕಲಶಾಸ್ತ್ರ ಸಂಪನ್ನರನ್ನು ಮೂರ್ಖರು ಯಾವಾಗಲೂ ನಿಂದಿಸುವರು.

ಮೇಲಿನ ಪಂಚತಂತ್ರ ವಾಕ್ಯದಂತೆ ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆ ಬರುತ್ತವೆ. ಅದನ್ನು ತಪ್ಪಿಸುವದು ಅಥವಾ ಅದರಿಂದ ತಪ್ಪಿಸಿಕೊಳ್ಳುವದು ಯಾರಿಂದಲೂ ಸಾಧ್ಯವಿಲ್ಲವೆಂಬುವದಕ್ಕೆ ಅನೇಕ ಉದಾಹರಣೆಗಳಿರುತ್ತವೆ. ಅದು ಸೃಷ್ಟಿಯ ನಿಯಮದಂತೆ ಅಪರಿಹಾರ್ಯವೆಂದೇ ತಿಳಿಯಬೇಕಾಗಿರುತ್ತದೆ.

ಲೋಕದೊಳಗೆ ಭಿನ್ನರುಚಿಗಳಿರುವವರೆಗೆ ಭಿನ್ನಾಭಿಪ್ರಾಯಗಳಾದರೂ ಇರುವದು ಸಹಜವಾದುದಾಗಿರುತ್ತದೆ. ಊಟಕ್ಕೆ ಕುಳಿತುಕೊಂಡಾಗ ಕೆಲವರು ಸಿಹಿಯನ್ನು ಅಪೇಕ್ಷಿಸಿದರೆ ಹಲವರು ಉಪ್ಪನ್ನು ಬೇಡುವರು. ಉಳಿದವರಾದರೂ ತಮ್ಮ ಅಭೀಷ್ಟದಂತೆ ಹುಳಿಯನ್ನೋ ಅಥವಾ ಮತ್ತಾವುದನ್ನೋ ಪ್ರೀತಿಸುವರು. ಆತ್ಮವು ಒಂದೇ ಆದರೂ ಪಂಚ ಭೌತಿಕವಾದ ಶರೀರವು ಭಿನ್ನವಾಗಿರುವದರಿಂದ ಭಿನ್ನಾಭಿಪ್ರಾಯಗಳಿರುವದು ನೈಸರ್ಗಿಕವಾದುದು.

ಮನುಷ್ಯನು ಹೇಗೆ ನಡೆದುಕೊಂಡರೂ ಜಗತ್ತಿನ ಜನಗಳನ್ನೆಲ್ಲ ತೃಪ್ತಿಪಡಿಸುವದು ಸಾಧ್ಯವಾದ ಮಾತಾಗಿರುವದಿಲ್ಲ. ರಾಜಕಾರಣದಲ್ಲಾಗಲಿ, ಧಾರ್ಮಿಕ ವಿಷಯದಲ್ಲಾಗಲಿ, ಐತಿಹಾಸಿಕ ಸಂಗತಿಗಳಲ್ಲಾಗಲಿ ವಿವಿಧ ಅಭಿಪ್ರಾಯಗಳು ತಲೆದೋರುವದು ಕಂಡುಬರುವದು ಎಲ್ಲರ ಅನುಭವಕ್ಕೆ ಬಂದ ಮಾತಾಗಿದೆ. ಮನುಷ್ಯನು ಖರ್ಚುಗಾರನಾದರೆ ಮನೆ ಹಾಳುಮಾಡುವವನೆಂತಲೂ, ಖರ್ಚುಮಾಡದೆ ಇದ್ದರೆ ಜೀನನೆಂತಲೂ ಅನ್ನುತ್ತಾರೆ. ಅರ್ಥಾತ್ ಹೇಗೆ ಇದ್ದರೂ ಯಾವದಾದರೊಂದು ಹೆಸರನ್ನು ಇಡದೆ ಬಿಡುವದಿಲ್ಲ. ಜನಗಳು ಹೆಸರಿಡುತ್ತಾರೆಂದು ಮನಬಲ್ಲಂತೆ ಮಾಡಬಾರದು. ಆದರೆ

ಪರಿಸ್ಥಿತಿಯ ಪರಿಜ್ಞಾನವನ್ನು ತಿಳಿದು ನಡೆದುಕೊಳ್ಳಬೇಕಾಗುತ್ತದೆ. ರಾಜಕಾರಣದಲ್ಲಿ ಇಂತಹ ಉದಾಹರಣೆಗಳು ಬಹಳ ಸಿಗುತ್ತವೆ. ಅವನು ರಾಜಕೀಯ ಮುಖಂಡನಾಗಿ ಆ ದೇಶವನ್ನೇ ಉದ್ಧಾರಮಾಡಿರಲಿ ಅವನ ವಿರುದ್ಧ ಬಂಡಾಯವನ್ನು ಹೂಡಿ ಅವನ ಪ್ರಾಣ ತೆಗೆದುಕೊಂಡ ಬೇರೆಬೇರೆ ದೇಶಗಳಲ್ಲಿಯ ಅನಂತ ಉದಾಹರಣೆಗಳನ್ನು ಕೊಡ ಬಹುದು. ನಮ್ಮ ದೇಶದಲ್ಲಿ ಗಾಂಧೀಜಿಯ ಉದಾಹರಣೆ ನಮಗಿದೆ.

ಧಾರ್ಮಿಕ ಇತಿಹಾಸದಲ್ಲಿಯೂ ಇಂತಹ ಉದಾಹರಣೆಗಳು ಬೇಕಾದಷ್ಟು ಸಿಗುತ್ತವೆ. ಏಸುಕ್ರಿಸ್ತರು, ಬುದ್ಧ, ಮಹಾವೀರ, ಮಹಮ್ಮದ್ ಪೈಗಂಬರ್, ಶ್ರೀ ಶಂಕರಾಚಾರ್ಯರು, ಮಧ್ವಾಚಾರ್ಯರು ಮೊದಲಾದವರ ಚರಿತ್ರೆಗಳನ್ನು ನೋಡಿದರೆ ಅವರಿಗೆ ಎಂತಹ ಸಂಕಟಗಳು ಬಂದಿದ್ದವೆಂಬುವದು ತಿಳಿದುಬರುತ್ತದೆ. ಏಸುವನ್ನು ಅವರ ಶತ್ರುಗಳು ಹೆಜ್ಜೆ ಹೆಜ್ಜೆಗೂ ಕಾಡಿರುತ್ತಾರೆ. ಕಡೆಗೆ ಶಿಲುಬೆಗೆ ಹಾಕುವವರೆಗೂ ಬಿಡಲಿಲ್ಲ. ಆದರೂ ಆ ಮಹಾತ್ಮನ ಕೀರ್ತಿಯು ಇಂದಿಗೂ ಜಗತ್ತಿನ ತುಂಬ ಹಬ್ಬಿ ಆತನ ಶಿಷ್ಯರು ಈಗ ೬೦ ಕೋಟಿ ಇರುವದಿಲ್ಲವೇ? ನೀಚರು ಕಾಡಿದಷ್ಟೂ ದೊಡ್ಡವರ ಚರಿತ್ರೆಗಳು ನಿರ್ಮಲವಾಗುತ್ತವೆ. ದೊಡ್ಡವರ ಕೀರ್ತಿಗೆ ಅವರ ಎದುರಾಳಿಗಳೇ ಕಾರಣ ರಾಗಿರುತ್ತಾರೆ. ಮಹಮ್ಮದ್ ಪೈಗಂಬರರೂ ಅನಂತ ಕಷ್ಟನಷ್ಟಗಳನ್ನು ತಮ್ಮ ಜೀವಮಾನದಲ್ಲಿ ಅನುಭವಿಸಿದರು. ದುಷ್ಟರು ಸಜ್ಜನರಿಗೆ ಸಹಜ ವೈರಿಗಳಾಗುತ್ತಾರೆ. ಬಂಗಾರವು ಪುಟಹಾಕಿದಂತೆ ಚೊಕ್ಕಟವಾಗುತ್ತದೆ. ದೊಡ್ಡವರಾದರೂ ಅಪ್ಪಟ ಅಪರಂಜಿ (ಶುದ್ಧ ಬಂಗಾರ) ಯಂತಿರುತ್ತಾರೆ.

ಒಂದು ದಿನ ಏಸುಕ್ರಿಸ್ತನನ್ನು ವಿಚಾರಿಸಿ ಅವನಿಗೆ ಮರಣದಂಡನೆಯನ್ನು ವಿಧಿಸುವ ಸಮಯದಲ್ಲಿ ಪಿಲಾತನು ಏಸುವಿನನ್ನು ಕೊರಡೆಯಿಂದ ಹೊಡೆಯಿಸಿದನು. ಸಿಪಾಯಿ ಗಳು ಮುಳ್ಳುಗಳ್ಳಿಯಿಂದ ಕಿರೀಟವನ್ನು ಮಾಡಿ ಆತನ ತಲೆಯ ಮೇಲಿಟ್ಟು ಕೆಂಪು ಒಲ್ಲಿಯನ್ನು ಹೊದಿಸಿ ಯೆಹೂದ್ಯರ ಗುರುವೇ ನಿನಗೆ ನಮಸ್ಕಾರವೆಂದು ಕೆನ್ನೆಯಮೇಲೆ ಏಟುಕೊಟ್ಟರು. ಇದಕ್ಕಿಂತ ಹೆಚ್ಚಿನ ಅಪಮಾನವೇನು ಬೇಕು? ಇಂತಹ ಅನಂತ ಕಷ್ಟಗಳನ್ನು ಏಸುವು ತನ್ನ ಜೀವಮಾನದಲ್ಲಿ ಅನುಭವಿಸಿದನು. ಅವನ ಸದುಪದೇಶದ ಮಹಿಮೆಗಳೇ ಅವನಿಗೆ ಶತ್ರುಗಳನ್ನು ಹುಟ್ಟಿಸಿದವು. ಆದ್ದರಿಂದ ಲೋಕದಲ್ಲಿಯ ಶ್ರೇಷ್ಠ ಪುರುಷರಿಗೆ ನಿಂದೆಗಳೂ, ಕಷ್ಟಗಳೂ ಬರತಕ್ಕವುಗಳೇ ಆಗಿರುತ್ತದೆ.

ಇದರಲ್ಲಿ ತಿಳಿಯತಕ್ಕ ಸಂಗತಿ ಏನೆಂದರೆ ಏಸುವಿಗೆ ಒಳ್ಳೆಯವನೆಂದರೆ ಅವನು ದೇವರು ಒಬ್ಬವನೇ ಒಳ್ಳೆಯವನೆಂದು ಹೇಳಿದನೇ ಹೊರತು ತಾನು ಕನಿಷ್ಟನೆಂದು ತಿಳಿದನು. ಬಸವಣ್ಣನವರಾದರೂ ಎನಗಿಂತ ಕಿರಿಯರಿಲ್ಲವೆಂದು ನಡೆದುಕೊಂಡು ನನ್ನನ್ನು ಹೊಗಳಿ ಹೊಗಳಿ ಹೊನ್ನ ಶೂಲಕ್ಕಿಕ್ಕಿದರೆಂದು ಹೇಳಿದ್ದಾರೆ. ಶ್ರೀ ಬಸವಣ್ಣ ನವರನ್ನು ಸ್ತುತಿಸಿದಷ್ಟು ಕವಿಗಳು ಹಿಂದೂಸ್ಥಾನದಲ್ಲಿ ಯಾರನ್ನೂ ವರ್ಣಿಸಿರುವದಿಲ್ಲ. ಆದರೆ ಆರಂಭದಿಂದಲೂ ನಿಂದಕರೂ ಇರುತ್ತಾರೆ. ಬಸವಣ್ಣನವರು ಮುಖ್ಯಮಂತ್ರಿ ಗಳಾಗಿದ್ದಾಗ ಇವರು ಮಾಡತಕ್ಕ ಶಿವಭಕ್ತಿಯ ಪ್ರಸಾರವನ್ನು ನೋಡಿ ನೆರೆಧರ್ಮ ದವರೆಲ್ಲ ಗಾಬರಿಗೊಂಡರು. ಮತ್ತು ಅವರ ಮೇಲೆ ಅಲ್ಲಸಲ್ಲದ ಆರೋಪಗಳನ್ನು ಮಾಡಲಿಕ್ಕೆ ಪ್ರಾರಂಭಿಸಿದರು. ಜೈನ ಧರ್ಮಾನುಯಾಯಿಗಳಂತೂ ತಮ್ಮ ಧರ್ಮವು ಅಳಿಯುವದೋ ಉಳಿಯುವದೋ ಎಂಬ ವಿಷಯದಲ್ಲಿ ಚಿಂತಾಕ್ರಾಂತರಾದರು.

ಬಸವಣ್ಣನವರು ತಮ್ಮ ಎಂಟನೆಯ ವರ್ಷದಲ್ಲಿ ಉಪನಯನವನ್ನು ಮಾಡಬೇಕೆಂದು ಪ್ರಯತ್ನಿಸಿದ ತಂದೆಯ ಮಾತುಗಳನ್ನೆಲ್ಲ ಖಂಡಿಸಿ ದೊಡ್ಡ ದೊಡ್ಡ ಪಂಡಿತರನ್ನು ತಲೆದೂಗುವಂತೆ ಮಾಡಿದ ಕಾರಣ ಉಪನಯನ ಪಕ್ಷಪಾತಿಗಳೆಲ್ಲ ಸ್ವಾಭಾವಿಕವಾಗಿ ಇವರಿಗೆ ಕಡುವಿರೋಧಿಗಳಾದರು. ಇತ್ತ ಯಜ್ಞಯಾಗಾದಿಗಳಿಂದಾಗ ತಕ್ಕ ಹಿಂಸೆಯನ್ನು ನಿರ್ದಾಕ್ಷಿಣ್ಯದಿಂದ ಖಂಡಿಸಿದ್ದುದರಿಂದಲೂ ವರ್ಣಾಶ್ರಮಗಳ ಮೇಲು ಕೀಳುಗಳನ್ನು ಹೊಡೆದೋಡಿಸಿದ್ದರಿಂದಲೂ ವರ್ಣಾಶ್ರಮವಾದಿಗಳು ಬಸವಣ್ಣನವರನ್ನು ಕಟ್ಟಾವಿರೋಧಿಗಳೆಂದು ತಿಳಿದುಕೊಂಡರು. ವೈದಿಕ ಕರ್ಮಗಳನ್ನು ಇವರು ಖಂಡಿಸುವವರೆಂದು ಪ್ರಖ್ಯಾತರಾದರು.

ಬಹು ದಿನಗಳಿಂದ ಬಂದ ತಮ್ಮ ಸಂಪ್ರದಾಯದ ವಿರುದ್ಧ ನಡೆಯಲು ಜನಗಳು ಸಿದ್ಧರಿರುವದಿಲ್ಲ ಇದು ಲೋಕದಲ್ಲಿ ಪ್ರಸಿದ್ಧವಾದ ವಿಷಯವಾಗಿರುತ್ತದೆ. ಯಜ್ಞದಲ್ಲಿ ಪಶುಗಳನ್ನು ಕೊಲ್ಲಬಾರದೆಂದು ಬಸವಣ್ಣನವರು ಹೇಳಿದ ಕಾರಣ ಅಬ್ರಹ್ಮಣ್ಯಂ ಇದು ಅವೈದಿಕರ ಮಾತೆಂದು ಪಶುಗಳನ್ನು ಯಜ್ಞದಲ್ಲಿ ಕೊಲ್ಲುವವರೆಲ್ಲ ಅನ್ನಲಿಕ್ಕೆ ಹತ್ತಿದರು. ಹೀಗೆ ಉತ್ತಮ ಅಹಿಂಸಾ ಮಾರ್ಗವನ್ನು ಬೋಧಿಸಿದ್ದುದೇ ಬಸವಣ್ಣನವರು ಆ ವರ್ಗದ ಜನಗಳ ವಿರೋಧಕ್ಕೆ ಕಾರಣವಾಯಿತು. ಎಂತಹ ನೀಚ ಕೃತ್ಯಗಳನ್ನು ಮಾಡಿದರೂ ನಾವು ಯಾವಾಗಲೂ ಎಲ್ಲರಿಗಿಂತಲೂ ಮೇಲಾಗಿಯೇ ಮೆರೆಯಬೇಕೆಂಬುವವರಿಗಂತೂ ಶೂಲದಿಂದ ತಿವಿದಷ್ಟು ವೇದನೆಯಾಯಿತು. ಹೀಗಾಗಿ ಆ ಕಾಲದಲ್ಲಿ ಪ್ರಬಲಗಳಾದ ಎರಡು ಸಮಾಜಗಳನ್ನು ಬಸವಣ್ಣನವರು ಎದುರಿಸಲೇ ಬೇಕಾಯಿತು. ಬಸವಣ್ಣನವರು ಸ್ವತಃ ಅಜಾತಶತ್ರುಗಳಾಗಿದ್ದರೂ, ಅವರ ಅಹಿಂಸಾ ತತ್ವವೂ, ಸರ್ವಜನಗಳನ್ನು ಸಮಾನ ಭಾವನೆಯಿಂದ ಕಾಣುವ ವಿಶಾಲ ಹೃದಯವೂ, ಅವರಿಗೆ ವಿರೋಧಿಗಳನ್ನು ಹುಟ್ಟಿಸಿದವು. ಯಾರೂ ಓದದೆ ಇರತಕ್ಕ ಶಿಲಾಲಿಪಿಯನ್ನು ಇವರು ಓದಿ ಬಿಜ್ಜಳನ ಮಂತ್ರಿಗಳಲ್ಲಿ ಮುಖ್ಯಮಂತ್ರಿಗಳಾದರು. ಬಹುದಿನಗಳಿಂದ ಆ ಸ್ಥಾನವನ್ನು ಆಕ್ರಮಿಸಿಕೊಂಡಿದ್ದ ಜನಗಳಿಗೆ ಬಲವಾದ ಪೆಟ್ಟುಬಿದ್ದಂತಾಯಿತು. ಅವರಿಗೆಲ್ಲ ಇದು ಸಹನೆಯಾಗದೆ ಬಿಜ್ಜಳನಲ್ಲಿಗೆ ಹೋಗಿ ಚಾಡಿಯನ್ನು ಹೇಳಲಿಕ್ಕೆ ಪ್ರಾರಂಭಿಸಿದರು. ಅದನ್ನೆಲ್ಲ ಬಸವಣ್ಣನವರು ತಮ್ಮ ಕರ್ತೃತ್ವ ಶಕ್ತಿಯಿಂದ ಸುಳ್ಳುಮಾಡಿ ತೋರಿಸುತ್ತಿದ್ದರು.

ಹೀಗೆ ಬಸವಣ್ಣನವರಿಗೆ ವಿರೋಧವು ಉಂಟಾಗುತ್ತಾ ಬಂದಿತು. ಅದ್ಭುತ ಶಕ್ತಿಯುಳ್ಳ ಮಹಾನುಭಾವರು ಇಂತಹ ಟೀಕಾಕಾರರಿಗೆ ಮಣಿಯುವುದಿಲ್ಲ. ತಮ್ಮ ಲೋಕೋತ್ತರ ಗುಣಗಳಿಂದ ಅವರು ಜಗತ್ತಿನಲ್ಲಿ ತೇಜಃಪುಂಜರಾಗುತ್ತಾರೆ. ಇಂತಹ ಗುಣದಲ್ಲಿ ಬಸವಣ್ಣನವರು ಅತ್ಯಂತ ಶ್ರೇಷ್ಠರಾಗಿರುತ್ತಾರೆ. ತಮ್ಮ ಶಕ್ತಿಯನ್ನು ತೋರಿಸದೆ ಇದ್ದರೆ ಅವರು ಮಹಾಪುರುಷರಾಗುತ್ತಿದ್ದಿಲ್ಲ.

ರಾಜಕಾರಣದಲ್ಲಿ ಒಬ್ಬರಿಗೊಬ್ಬರು ಹೇಗೆ ವೈರಿಗಳಾಗುತ್ತಾರೆಂಬುವದು ಲೋಕದಲ್ಲಿ ಪ್ರಸಿದ್ಧವಾದ ವಿಷಯವಾಗಿರುತ್ತದೆ. ಎಂತಹ ದೊಡ್ಡ ವ್ಯಕ್ತಿಯಾದರೂ ಅವರಿಗೆ ಗಂಡಾಂತರ ತಪ್ಪಿದ್ದಲ್ಲ. ಜರ್ಮನಿಯ ದೇಶವನ್ನು ತನ್ನ ಲೋಕೋತ್ತರವಾದ ಸಂಘಟನೆಯ ಶಕ್ತಿಯಿಂದ ಅದ್ಭುತ ಶಕ್ತಿಯುತವಾದುದನ್ನು ಮಾಡಿದ ಸತ್ತುಹೋದ ಹಿಟ್ಲರನಿಗೆ ಅವನ ದೇಶದ ಜನರೇ ವಿರುದ್ಧವಾಗಿ ಸ್ಟಾರನ್‌ಬರ್ಗ್ ಎಂಬುವನು ಗುಂಡನ್ನು ಹಾರಿಸಲಿಲ್ಲವೇ? ಲೆನಿನ್ನನ ಬಲಗೈಯಂತಿದ್ದ ಟ್ರಾಟಸ್ಕಿಯನ್ನು ಅವನ ವಿರೋಧಿಗಳು

ಮೆಕ್ಸಿಕೋ ದೇಶದಲ್ಲಿ ಸುತ್ತಿಗೆಯನ್ನು ತೆಗೆದುಕೊಂಡು ಅವನ ತಲೆಯನ್ನು ಒಡೆಯು ಲಿಲ್ಲವೇ? ಮಹಾತ್ಮಾ ಮೋಹನ ಕರಮಚಂದ ಗಾಂಧಿಯವರು ಕೊಲೆಗಡುಕನ ಗುಂಡಿಗೆ ತುತ್ತಾಗಲಿಲ್ಲವೇ? ಸಾಕ್ರಟೀಸನಿಗೆ ಬಂದ ವಿಪತ್ತುಗಳು ಸಾಮಾನ್ಯವಾದವುಗಳೇ? ಇಂತಹ ಸಾವಿರಾರು ಉದಾಹರಣೆಗಳನ್ನು ಕೊಡಬಹುದು. ಬಸವಣ್ಣನವರ ವಿಷಯಕ್ಕೆ ಹೇಳಬೇಕಾದರೆ ಅವರು ತಮ್ಮ ವಿರೋಧಿಗಳನ್ನು ತಮ್ಮ ಅಹಿಂಸಾ ಶಕ್ತಿಯಿಂದಲೇ ಜಯಿಸಿದರಲ್ಲದೆ "ಬೈದವರೆನ್ನ ಬಂಧುಗಳೆಂಬೆ" "ಜರಿದವರೆನ್ನ ಜನ್ಮತಂದೆಗಳೆಂಬೆ" ಎಂದು ಹಸನ್ಮುಖರಾಗಿಯೇ ಸಹನಮಾಡಿಕೊಳ್ಳುತ್ತಿದ್ದರು. ಇದು ಮಹಾಪುರುಷರ ಲಕ್ಷಣವಾಗಿರುವದು. ಬಸವಣ್ಣನವರು ಧಾರ್ಮಿಕ ಪುರುಷರಿದ್ದಂತೆ ರಾಜಕೀಯ ಪುರುಷರೂ ಕೂಡ ಇದ್ದ ಕಾರಣ ಎರಡೂ ವರ್ಗದ ಜನಗಳ ವಿರೋಧವನ್ನು ಅವರು ಸಹಿಸಬೇಕಾಗುತ್ತಿದ್ದಿತು. ಬಸವಣ್ಣನವರು ಅಸಾಧಾರಣವಾದ ಸಹನಶಕ್ತಿಯುಳ್ಳವ ರಾಗಿದ್ದರು. ಎಂತಹ ಕಠಿಣ ಸ್ಥಿತಿಯು ಪ್ರಾಪ್ತವಾದರೂ ಮುಗುಳುನಗೆಯಿಂದಲೇ ಅದನ್ನು ಎದುರಿಸುತ್ತಿದ್ದರು. ಅತ್ಯಂತ ಕಷ್ಟಕಾಲದಲ್ಲಿ ತಮ್ಮ ಗುರುವಾದ ಸಂಗನನ್ನು ಸ್ಮರಿಸಿಕೊಂಡು ಕಾರ್ಯವನ್ನು ಕೊನೆಗಾಣಿಸುತ್ತಿದರು.

ಜೈನ ಧರ್ಮಗ್ರಂಥಗಳಲ್ಲಿ ಬಸವಣ್ಣನವರನ್ನು ನಿಂದಿಸಿದ್ದುದು ಕಂಡುಬರುತ್ತದೆ. ಧರಣೀಧರ ಪಂಡಿತನು ತನ್ನ ಬಿಜ್ಜಳಾಂಕ ಚರಿತ್ರೆಯಲ್ಲಿ ಬಸವಣ್ಣನವರ ತಂಗಿಯನ್ನು ಬಿಜ್ಜಳನಿಗೆ ಕೊಟ್ಟದ್ದರೆಂತಲೂ ಬರೆದಿರುವನಲ್ಲದೆ ಕುತ್ಸಿತತದಿಂದ ವೀರಶೈವ ಮತದ ಅವಹೇಳನವನ್ನು ಮಾಡಿರುತ್ತಾನೆ. ವೀರಶೈವರ ಆರಾಧ್ಯದೇವನನ್ನು ಕೂಡ ಹಳಿದಿರು ತ್ತಾನೆ. ಗಂಟೆಯ ಚೋರರಿಗೂ, ತಿರುಕರಿಗೂ ಲಿಂಗಗಳನ್ನು ಕಟ್ಟಿ ವೀರಶೈವ ಮತವನ್ನು ಬೆಳೆಸಿದ್ದಾರೆಂದು ಹೇಳುವುದರಲ್ಲಿ ಅರ್ಥವಿಲ್ಲ. ಕಳೆದ ೯೦೦ ವರ್ಷಗಳಿಂದ ಅನೇಕ ಜನ ರಾಜರೂ, ಬ್ರಾಹ್ಮಣರೂ, ಜೈನರೂ, ದೇಸಾಯಿಗಳೂ, ದೇಶಪಾಂಡೆಯವರೂ, ಗೌಡರೂ, ನಾಡಗೌಡರೇ ಮೊದಲಾದ ಎಲ್ಲ ವರ್ಗದ ಜನರೂ ವೀರಶೈವ ಮತ ಪ್ರವಿಷ್ಟರಾಗಿರುತ್ತಾ ರೆಂಬುವದಕ್ಕೆ ಬೇಕಾದಷ್ಟು ಪ್ರಮಾಣಗಳಿವೆ. ಬಸವಣ್ಣನವರ ತರುವಾಯ ೪೦೦ ವರ್ಷ ಗಳ ಮೇಲೆ ಧರಣೀಧರ ಪಂಡಿತನಿದ್ದುದು ತಿಳಿಯಬರುತ್ತದೆ. ಕೇವಲ ಸ್ವಕಪೋಲ ಕಲ್ಪಿತದಿಂದ ಬರೆದಿರುತ್ತಾನಲ್ಲದೆ ಆತನಿಗೆ ಪ್ರಮಾಣ ಗ್ರಂಥಗಳ ಆಧಾರವಿರುವದಿಲ್ಲ.

ಈ ತರಹದ ಟೀಕೆಯನ್ನು ಮಾಡತಕ್ಕವರಿಗೆ ಆಸ್ಪದವಿರಕೂಡದೆಂದು ಮೊದಲೇ ಅವರು ತಮ್ಮ ವಚನಗಳಲ್ಲಿ ಕ್ಷುದ್ರಜನಗಳು ಮಾಡುವ ಟೀಕೆಗೆ ಉತ್ತರವನ್ನು ಕೊಟ್ಟಿರುತ್ತಾರೆ. ಅಳಿದ ಮನದವರಿಗೆ ಶಿವದೀಕ್ಷೆಯನ್ನು ಕೊಟ್ಟರೆ ಅವನು ಒಳ್ಳೆಯವ ನಾಗುವದು ಸಾಧ್ಯವಿಲ್ಲ. ಕುಂಬಳದ ಕಾಯಿಗೆ ಕಬ್ಬಿಣದ ಕಟ್ಟನ್ನು ಕಟ್ಟಿದರೆ ಅದು ಕೊಳೆಯದೆ ಹಾಗೆಯೇ ಉಳಿಯಬಹುದೇ? ಎಂದು ಶಂಕಿಸಿ ಸದ್ಗುಣಮಂಡಿತರಾದ ಆಚಾರನಿಷ್ಠರು ಮಾತ್ರ ವೀರಶೈವರಾಗಲು ಶಕ್ತರೆಂದು ಸ್ಪಷ್ಟಹೇಳಿರುವಾಗ, ಸುಮ್ಮನೆ ಆರೋಪಮಾಡುವದರಲ್ಲಿ ಅರ್ಥವಿಲ್ಲ. ಅವರ ತತ್ವಗಳೇನು? ಆಚಾರ ವಿಚಾರಗಳೇನು? ದಯಾ ದಾಕ್ಷಿಣ್ಯಾದಿಗಳೇನು? ಮೊದಲಾದವುಗಳನ್ನು ನೋಡದೆ ವಿಚಾರವಿಲ್ಲದೆ ಟೀಕೆಯನ್ನು ಮಾಡಿದರೆ ಆ ಟೀಕೆಗೆ ಬೆಲೆ ಸಿಗಲಾರದು. ಆಗಮ ಧರ್ಮೋಕ್ತವಾಗಿ ಲೋಕದಲ್ಲಿ ಶಿವಭಕ್ತನಾದವನಿಗೆ ಉಚ್ಚನೀಚತ್ವವಿಲ್ಲವೆಂದು ಅಂತಹ ಉಚ್ಚನೀಚತ್ವವನ್ನು ಯಾವ ಗ್ರಂಥಗಳಾದರೂ ಹೇಳುತ್ತಿದ್ದರೆ ಅವುಗಳನ್ನೆಲ್ಲ ನಿರ್ದಾಕ್ಷಿಣ್ಯವಾಗಿ ಖಂಡಿಸಿ

ವೀರಶೈವ ಧರ್ಮವನ್ನು ಪ್ರಸಾರಮಾಡಿದ್ದರಿಂದಲೇ ವೀರಶೈವ ಧರ್ಮವು ಇಂದಿಗೂ ಜೀವಂತ ಸಮಾಜವೆಂದು ಎನ್ನಿಸಿಕೊಳ್ಳುತ್ತದೆ. ಬಸವಣ ನವರಂತಹ ದಯಾಮೂರ್ತಿಗಳೂ, ಶಿವಭಕ್ತಸಂಪನ್ನರೂ ಇಂದಿಗೂ ಇತಿಹಾಸದಲ್ಲಿ ಆದದ್ದು ಕಂಡುಬರುವದಿಲ್ಲ.

ಮನುಷ್ಯನು ವಿಶಾಲಹೃದಯುದವನಾಗಿ ತನ್ನಂತೆಯೇ ಪರರನ್ನು ಬಗೆಯಬೇಕಲ್ಲದೆ ತನ್ನ ಧರ್ಮವೇ ಶ್ರೇಷ್ಠ, ತಾನೇ ಶ್ರೇಷ್ಠನೆನ್ನುವದು ಸರಿಯಾದುದಲ್ಲ. ಇಂತಹ ಗುಣಗಳಿದ್ದರೆ ಅವನು ಮಾನವನಾಗಲಾರನು.

ಬಸವಣ್ಣನವರ ಟೀಕಾಕಾರರು ಎಲ್ಲ ಮತದವರಿಗೆ ಲಿಂಗಧಾರಣವನ್ನು ಮಾಡಿ ಸಂಕರ ಮಾಡಿದರೆಂಬುವ ಅಪವಾದವನ್ನು ಕೊಡುತ್ತಾರೆ. ಈ ವಿಷಯದಲ್ಲಿ ಪಾರಮೇಶ್ವರಾಗಮ, ಸೂಕ್ಷ್ಮಾಗಮ, ವೀರಾಗಮ ಮೊದಲಾದ ಶಿವಾಗಮಗಳೇ ಬಸವಣ್ಣನವರ ಈ ಕಾರ್ಯಕ್ಕೆ ಆಧಾರಗಳಾಗಿವೆ. ಈ ವಿಷಯವನ್ನು ಬೇರೆ ಪ್ರಕರಣದಲ್ಲಿ ವಿಸ್ತಾರವಾಗಿ ವಿವೇಚನೆಮಾಡಲಾಗಿದೆ.

ಯಾವದಾದರೊಂದು ಮತವಾಗಲಿ, ಮನುಷ್ಯನಾಗಲಿ ಲೋಕದಲ್ಲಿ ಶ್ರೇಷ್ಠತೆಯನ್ನು ಹೊಂದಬೇಕಾದರೆ ಆ ಮತದ ಅಥವಾ ಆ ಮನುಷ್ಯನ ಆಚಾರ ವಿಚಾರಗಳೇ ಕಾರಣವಲ್ಲದೆ ಹುಟ್ಟುಗಳು ಕಾರಣವಲ್ಲ. ಇದೇ ವೀರಶೈವ ಧರ್ಮದ ತಿರುಳಾಗಿರುತ್ತದೆ. ಹಿಂದಿನ ವೇದಾಗಮಗಳೆಲ್ಲ ಇದನ್ನೇ ಹೇಳುತ್ತವೆ. ಅವುಗಳ ಮೇಲೆ ಬರೆದ ಇತ್ತೀಚಿನ ಟೀಕಾತ್ಮಕ ಗ್ರಂಥಗಳು ಮಾತ್ರ ಒಪ್ಪತಕ್ಕವುಗಳಾಗಿರುವದಿಲ್ಲ. ಆದ್ದರಿಂದ ಬಸವಣ್ಣನವರ ಮೇಲೆ ಈ ವಿಷಯದಲ್ಲಿ ಮಾಡುವ ಟೀಕೆಯು ನಿರಾಧಾರವಾದುದು.

**ಪಾರಮೇಶ್ವರಾಗಮ—ಪುಟ ೧೧೫**

> ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ಯೇ ಚಾನ್ಯಜಾತಯಃ ।
> ಲಿಂಗಧಾರಣ ಮಾತ್ರೇಣ ಶಿವಾ ಏವ ನ ಸಂಶಯಃ ॥

ಎಂದು ಹೇಳಿರುವದರಿಂದ ವರ್ಣಗಳ ಕಲ್ಪನೆಯು ವೀರಶೈವರಲ್ಲಿ ಸುತರಾಂ ಇರುವದಿಲ್ಲ ಅಂದಮೇಲೆ ಶ್ರೀ ಬಸವಣ್ಣನವರನ್ನು ನಿಂದಿಸುವದೇಕೆ? ಕೆಲವರು ಬಸವಣ್ಣನವರು ಮುಖ್ಯಪ್ರಧಾನಿಗಳಾಗಿದ್ದು ಬಿಜ್ಜಳನ ಹಣವನ್ನೆಲ್ಲ ತಮ್ಮ ಧರ್ಮಪ್ರಸಾರದ ಕಾರ್ಯಕ್ಕಾಗಿ ಉಪಯೋಗಿಸಿದರೆಂದು ಟೀಕಿಸುತ್ತಾರೆ. ಇದೂ ಒಂದು ಅಜ್ಞಾನತನದ ಮಾತಾಗಿದೆ. ಬಸವಣ್ಣನವರು ಸ್ವತಃ ಅನೇಕಸಾರೆ ಬಿಜ್ಜಳ ರಾಜನಿಗೆ ತಮ್ಮ ಸತ್ಯತನವನ್ನು ಮನಗಾಣಿಸಿ ಕೊಟ್ಟಿರುತ್ತಾರೆ. ಅವರು ತಮ್ಮ ಅನೇಕ ವಚನಗಳಲ್ಲಿ ಪರಧನದಾಶೆಯನ್ನು ಖಂಡಿಸಿರುತ್ತಾರೆ. "ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲಿ ಬಿಜ್ಜಳನ ಭಂಡಾರ ಎನಗೇಕಯ್ಯ" ಎಂದಿರುವರು. "ಛಲಬೇಕು ಶರಣಂಗೆ ಪರಧನವನೊಲ್ಲೆಂಬ, ಪರಧನಕ್ಕಳುಪಿದರವಹಿಡಿ ಖಂಡವಕೊಯ್ಯನೇ? ಪರಧನದಾಮಿಷವ ತೊರೆಯಿಂಬೋ" ಹೀಗೆ ಅನೇಕ ವಚನಗಳಲ್ಲಿ ಪರಧನವೆಂಬುವದು ಮಹಾಪಾಪಕೃತ್ಯವೆಂದು ಖಂಡಿಸಿರುತ್ತಾರೆ. ಈ ತರಹದ ಟೀಕೆಗಳಲ್ಲಿ ಹುರುಳಿಲ್ಲ.ಕಲ್ಪನಾಸೃಷ್ಟಿಯಿಂದ ಯಾರ ಮೇಲೆ ತಾನೇ ಆರೋಪಮಾಡಲಿಕ್ಕೆ ಬರುವದಿಲ್ಲ?

ಯಾವ ಮಹನೀಯರು ವೀರಶೈವೋದ್ಧರಣಕ್ಕಾಗಿ ಅವತರಿಸಿ ಗುರುಲಿಂಗ ಜಂಗಮದ ಸಲುವಾಗಿ ತಮ್ಮ ತನುಮನಧನಗಳನ್ನು ಸವಿಸಿ ಲೋಕದಲ್ಲಿ ಶಿವಧರ್ಮ

ವನ್ನುದ್ಧಾರಮಾಡಿ ಪವಿತ್ರಮಂತ್ರಮಯನೂ, ಅನಾದಿಭಕ್ತನೂ ಎಂದೆನ್ನಿಸಿಕೊಂಡನೋ ಆ ದಿವ್ಯಮೂರ್ತಿಯನ್ನು ಹಾಸ್ಯಮಾಡುವದಾಗಲೀ, ನಿಂದಿಸುವದಾಗಲೀ ಪರಮ ಪಾಪ ಕೃತ್ಯವಾಗಿರುವದರಲ್ಲಿ ಸಂಶಯವಿಲ್ಲ. ಇಂತಹ ಕೃತ್ಯಗಳಿಂದ ಯಾವ ಲಾಭವೂ ಆಗಲಾರದು. ಪ್ರೇಮದಿಂದ ಪ್ರೇಮವೂ, ದ್ವೇಷದಿಂದ ದ್ವೇಷವೂ ಹುಟ್ಟುತ್ತದೆ. "ಶಠಂಶಾಠ್ಯಂ" ಎಂದರೆ ದುಷ್ಟರ ಕೂಡ ದುಷ್ಟತನದಿಂದಲೇ ವ್ಯವಹಾರಮಾಡಬೇಕೆಂಬುವ ತತ್ವವಿರುವದರಿಂದ ಈ ಮಾರ್ಗಾನುಯಾಯಿಗಳಿಗೆ ದ್ವೇಷಿಗಳು ಮಾತ್ರ ಆಗುತ್ತಾರಲ್ಲದೆ ಕಾರ್ಯಸಿದ್ಧಿಯಾಗಲಾರದು. ೮೦೦ ವರ್ಷಗಳಿಂದ ಬೇಕಾದವರು ಬೇಕಾದಷ್ಟು ನಿಂದಿಸಿದರೂ ಬಸವಣ್ಣನವರ ಕೀರ್ತಿಯು ಅಜರಾಮರವಾಗಿರುವದಲ್ಲದೆ ಅವರ ತೇಜಸ್ಸು ವೀರಶೈವ ಹೃದಯವನ್ನು ಆಕರ್ಷಿಸಿಬಿಟ್ಟಿರುತ್ತದೆ. ಸೂರ್ಯನ ಮೇಲೆ ಉಗುಳಲಿಕ್ಕೆ ಹೋದವರ ಗತಿಯೇ ಬಸವಣ್ಣನವರ ಟೀಕಾಕಾರರಿಗಾಗುವದು ಸಹಜವಾದುದು. ಇನ್ನು ಕೆಲವರಿಗೆ ದೊಡ್ಡವರನ್ನು ನಿಂದಿಸಿದರೆ ನಾವೂ ಕೊಂಚಮಟ್ಟಿಗಾದರೂ ದೊಡ್ಡವರಾಗುವೆವೆಂಬ ಭ್ರಾಂತಿಯು ಇರುತ್ತದೆ. ಇದು ಸರಿಯಾದ ಮಾರ್ಗವಲ್ಲ. ಇದರಿಂದ ಲೋಕದಲ್ಲಿ ಅಪಹಾಸ್ಯವಲ್ಲದೆ ಸಾಧುಜನಗಳ ಆಚರಣೆಯ ಮಾರ್ಗವಾಗಿರುವದಿಲ್ಲ. ಆದ್ದರಿಂದ ವೀರಶೈವರಾದವರು ಇಂತಹ ಅಮಾನುಷ ದುಷ್ಕೃತ್ಯಗಳನ್ನು ಮಾಡುವ ಹವ್ಯಾಸಕ್ಕೆ ಹೋಗದೆ ತಮ್ಮಲ್ಲಿ ಪಾಂಡಿತ್ಯ ಬಲವಿದ್ದರೆ ವೀರಶೈವ ಸಮಾಜವನ್ನು ಸುಸಂಘಟಿತವನ್ನಾಗಿ ಮಾಡಿ ವೀರಶೈವ ಧರ್ಮ ಪತಾಕೆಯು ಜಗತ್ತಿನ ಎಲ್ಲೆಡೆಯಲ್ಲಿಯೂ ಮೆರೆಯುವಂತೆ ಮಾಡಿದರೆ ಜನ್ಮಸಾರ್ಥಕವಾಗುವದು. ಅಂತಹ ಸದ್ಬುದ್ಧಿಯು ಸರ್ವರಿಗೂ ಉಂಟಾಗುವಂತೆ ಪರಮಾತ್ಮನು ಮಾಡಲೆಂದು ಹಾರೈಸುತ್ತೇನೆ. ಯಾರನ್ನೂ ನಿಂದಿಸಬಾರದು ಯಾಕಂದರೆ "ಸರ್ವ ಚಾಂಡಾಲ ನಿಂದಕಃ" ಎಂದು ಹೇಳುವಾಗ ಒಂದು ಮತದವರೇ ತಮ್ಮತಮ್ಮೊಳಗೆ ತಮ್ಮ ಸಮಾಜದ ಉದ್ಧಾರಕರನ್ನೂ, ಸಂಸ್ಥಾಪಕರನ್ನೂ ಅವಾಚ್ಯ ಶಬ್ದಗಳಿಂದ ನಿಂದಿಸುವದಕ್ಕಿಂತಲೂ ನೀಚ ಕೆಲಸವು ಲೋಕದಲ್ಲಿ ಮತ್ತೊಂದಿಲ್ಲವೆಂದು ಹೇಳಬಹುದು. ಯಾವ ಸಮಾಜದಲ್ಲಿ ಯಾದವಿಯ ಯುದ್ಧವು ನಡೆಯುವದೋ ಆ ಸಮಾಜವು ತನ್ನ ನಾಶಕ್ಕೆ ಆಹ್ವಾನವನ್ನು ಕೊಟ್ಟಂತೆಯೇ ಸರಿ. ಸಮಾಜ ಭಾಂಧವರೆಲ್ಲ ನಮ್ಮ ಈ ಮಾತುಗಳನ್ನು ಲಕ್ಷ್ಯದಲ್ಲಿಟ್ಟು ನಡೆದುಕೊಂಡದ್ದಾದರೆ ಸಮಾಜ ದ್ರೋಹಿಗಳು ತಮ್ಮಷ್ಟಕ್ಕೆ ತಾವೇ ನಷ್ಟವಾಗಿ ಹೋಗುವರು.

ಶ್ರೀ ಬಸವಣ್ಣನವರಾಗಲೀ ಇನ್ನುಳಿದ ಮಹಾತ್ಮರಾಗಲೀ ಜನಗಳ ಹೊಗಳಿಕೆಗೆ ಅಥವಾ ತೆಗಳಿಕೆಗೆ ಕೊಂಚವೂ ಲಕ್ಷ್ಯಕೊಟ್ಟಿಲ್ಲವೆಂದು ಅವರವರ ಚರಿತ್ರೆಗಳಿಂದಲೇ ತಿಳಿದುಬಂದಿರುತ್ತದೆ. ಬಸವಣ್ಣನವರು ತಮ್ಮದೊಂದು ವಚನದಲ್ಲಿ,

> "ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರೆನ್ನ ಹೊಗಳಿ ಹೊಗಳಿ ಎನ್ನ ಹೊಗಳತೆಗೆ ಎನ್ನ ಮೈಗೊಂಡಿತ್ತಲ್ಲಾ ಅಯ್ಯೋ ನೊಂದೆನು ಸೈರಿಸಲಾರೆನು ನಿಮ್ಮ ಮನ್ನಣೆ ಮಸೆದಲಗಾಗಿ ತಾಗಿತ್ತಲ್ಲ ಅಯ್ಯೋ ನೊಂದೆನು ಸೈರಿಸಲಾರೆನು ಕೂಡಲಸಂಗಮದೇವಾ ನೀನೆನಗೊಳ್ಳಿದನಾದರೆ ಎನ್ನ ಹೊಗಳತೆಗಡ್ಡ ಬಾರಾ ಧರ್ಮಿ"

ಮತ್ತು

"ಎನ್ನವರೆನಗೊಲಿದು ಹೊನ್ನ ಶೂಲವನಿಕ್ಕಿದರಯ್ಯಾ ಅಹಂಕಾರ ಪೂರಾಯುಘಾಯದಲ್ಲಿ ಆನೆಂತು ಬದುಕುವೆನೆಂತು ಜೀವಿಸುವೆ? ಜಂಗಮ ವಾಗಿ ಬಂದು ಜರೆದು ಶೂಲವನಿಳುಹಿ ಪ್ರಸಾದದ ಮುದ್ದನಿಕ್ಕಿ ಸಲಹು ಕೂಡಲಸಂಗಮದೇವಾ"

ಶ್ರೀ ಬಸವಣ್ಣನವರು ಇಂತಹ ಭಕ್ತಿ ಪ್ರಪೂರಿತ ದೈನ್ಯೋಕ್ತಿಗಳಂತಹ ವಚನಗಳನ್ನು ಹೇಳಿರುತ್ತಾರೆ. ಅವರು ಲೋಕೋತ್ತರವಾದ ಧಾರ್ಮಿಕ ಕಾರ್ಯ ಮಾಡಲಿಕ್ಕೆ ಅವತರಿಸಿದ ಮಹಾ ಪುರುಷರಾಗಿರುವದರಿಂದ ಅಲ್ಪಜ್ಞರ ಸ್ತುತಿ ನಿಂದೆಗಳಿಗೆ ಅವರು ಬಗ್ಗುವದಿಲ್ಲ, ಹಿಗ್ಗುವದಿಲ್ಲ, ಕುಗ್ಗುವದೂ ಇಲ್ಲ. ಆನೆಯ ಮೇಲೆ ಹೋಗತಕ್ಕವರಿಗೆ ಶ್ವಾನ ಏನು ಮಾಡುವದೆಂದು ಪ್ರಶ್ನೆಯನ್ನು ಮಾಡಿ ಆನೀಬಿಜ್ಜಳಂಗಂಜುವೆನೆ ಎಂದಿರುತ್ತಾರೆ.

"ನ ವಿನಾ ಪರವಾದೇನ ರಮತೇ ದುರ್ಜನೋಜನಃ
ಗುಣೇಚ ಗುಣರಾಗೀಚ ಸರಲೋ ವಿರಲೋ ಜನಃ"

ದುರ್ಜನರು ಪರರ ವಾದವಿಲ್ಲದೆ ಸಂತೋಷಚಿತ್ತರಾಗುವದಿಲ್ಲ. ಗುಣಗಳಲ್ಲಿಯೂ, ಗುಣವಂತರಲ್ಲಿಯೂ ಸರಳವಾಗಿರುವವರು ವಿರಳರು. ಯಾವ ರೀತಿಯಿಂದಲಾದರೂ ಕಳೆದ ೮೦೦ ವರ್ಷಗಳಿಂದ ಬಸವಣ್ಣನವರ ಟೀಕಾಕಾರರು ಎಷ್ಟೇ ಕಷ್ಟಪಟ್ಟರೂ ಅವರಿಗೆ ಬೆಲೆಯನ್ನು ಲೋಕದ ಜನಗಳು ಕೊಟ್ಟಿರುವದಿಲ್ಲ. ಆದರೆ ಬಸವಣ್ಣನವರ ಕೀರ್ತಿಯು ಮಾತ್ರ ನಿಂದಕರಾದ ಪಾಪಿಗಳ ಕಣ್ಣನ್ನು ಕುಕ್ಕಿಸುತ್ತ ದಶದಿಕ್ಕುಗಳಲ್ಲಿಯೂ ವ್ಯಾಪಿಸುತ್ತಲಿದೆ.

ಯಾವ ಮಹಾತ್ಮರನ್ನೇ ಆಗಲಿ ನಿಂದಿಸುವದೆಂದರೆ ಬಹು ಪಾಪಕರವಾದುದು. ಅಂಥ ಮಾರ್ಗವು ಯಾರಿಗೂ ಕ್ಷೇಮವಲ್ಲ. ಯಾವ ಮಹಾ ಪುರುಷರನ್ನೇ ಆಗಲಿ ನಿಂದಿಸುವದು ಬಹಳ ನೀಚತಮವಾದ ಕೆಲಸವಾಗಿರುವದರಿಂದ ಅಂತಹ ಕಾರ್ಯದಿಂದ ಅಲಿಪ್ತರಾಗಿರುವದೇ ಬುದ್ಧಿವಂತರ ಲಕ್ಷಣವಾಗಿರುವದೆಂದು ಹೇಳದಿರಲಾರೆನು. ಭಿನ್ನಾಭಿಪ್ರಾಯಗಳು ಸಹಜವಾದರೂ ಅವುಗಳನ್ನು ತಾಳ್ಮೆಯಿಂದಲೇ ತಿದ್ದಿಕೊಳ್ಳಬೇಕು —"ನಿಂದಿಸಿ ನುಡಿಯದಿರಾರನು" ಎಂದು ನಿಜಗುಣದ ವಾಕ್ಯವೂ ಇದನ್ನೇ ಸಮರ್ಥಿಸುತ್ತದೆ— ಆದ್ದರಿಂದ ಮಹಾಪುರುಷರನ್ನು ನಿಂದಿಸುವ ಉದ್ಯೋಗವು ಯಾರಿಗೂ ಹಿತಕರವಾದುದಲ್ಲ.

## ಇಪ್ಪತ್ತೆರಡನೆಯ ಪ್ರಕರಣ

### ಶ್ರೀ ಬಸವೇಶ್ವರರೂ ಷಟ್‌ಸ್ಥಲಗಳೂ

ವೀರಶೈವ ಧರ್ಮಕ್ಕೆ ಅಷ್ಟಾವರಣಗಳೂ, ಪಂಚಾಚಾರಗಳೂ, ಷಟ್‌ಸ್ಥಲಗಳೂ ಪ್ರಾಮುಖ್ಯವಾದವುಗಳು. ಆದ್ದರಿಂದಲೇ ವೀರಶೈವನಾದವನು ಅಷ್ಟಾವರಣನಿಷ್ಠ ನಾಗಿಯೂ, ಪಂಚಾಚಾರ ಪರಾಯಣನಾಗಿಯೂ, ಷಟ್‌ಸ್ಥಲ ಬ್ರಹ್ಮಿಯಾಗಿಯೂ ಅಂದರೆ ಜ್ಞಾನಿಯಾಗಿಯೂ ಇರಬೇಕಾದುದೆಂದು ಅಲ್ಲಲ್ಲಿ ವೀರಶೈವ ಧರ್ಮ ಶಾಸ್ತ್ರಕಾರರು ನಿರೂಪಿಸಿರುತ್ತಾರೆ. ಈ ಮೂರರಲ್ಲಿ ಕೆಲವು ಪ್ರವೃತ್ತಿಮಾರ್ಗವನ್ನೂ, ಮತ್ತೆ ಕೆಲವು ನಿವೃತ್ತಿಮಾರ್ಗವನ್ನೂ ಬೋಧಿಸತಕ್ಕವುಗಳಾಗಿರುತ್ತವೆ.

ಷಟ್‌ಸ್ಥಲಗಳೆಂದರೆ: ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ,ಐಕ್ಯ— ಇದು ವೀರಶೈವ ಮತದ ಮುಖ್ಯ ವೇದಾಂತ ತತ್ವವಾಗಿರುತ್ತದೆ. ಷಟ್‌ಸ್ಥಲಗಳೆಂದರೆ ಲಿಂಗಾಂಗ ಸಾಮರಸ್ಯ, ಲಿಂಗಾಂಗ ಸಾಮರಸ್ಯವೆಂದರೆ ಷಟ್‌ಸ್ಥಲಗಳ ಜ್ಞಾನಸಂಪಾದನೆ ಯೆಂದು ಅರ್ಥವಾಗುತ್ತದೆ. ವೀರಶೈವ ಪರಬ್ರಹ್ಮದ ನಿರೂಪಣೆಯನ್ನು ಈ ಸ್ಥಲಗಳು ಬೋಧಿಸುವದರಿಂದ ವೀರಶೈವ ಧರ್ಮದ ಜೀವಾಳದಂತಿರುತ್ತವೆಂಬುವುದು ಸಿದ್ಧ ವಾದುದು. ಇಂತಹ ಸ್ಥಲಗಳ ಮರ್ಮವನ್ನರಿಯುವುದು ಲಿಂಗಾಂಗಿಯ ಅಥವಾ ವೀರಶೈವನ ಮುಖ್ಯ ಕರ್ತವ್ಯವಾಗಿರುತ್ತದೆ. ಈ ಷಟ್‌ಸ್ಥಲಗಳ ನಿರೂಪಣೆಯು ಬಹು ಕಷ್ಟದಾಯಕವೂ, ಸೂಕ್ಷ್ಮವೂ ಆಗಿರುತ್ತದೆ. ವೀರಶೈವನಾದವನು ಈ ಸ್ಥಲಗಳ ಜ್ಞಾನವನ್ನು ಮಾಡಿಕೊಳ್ಳುವುದು ಅವನ ಕರ್ತವ್ಯನಿಷ್ಠ ಕರ್ಮಗಳಲ್ಲಿ ಒಂದಾಗಿರುತ್ತದೆ. ಶ್ರೀ ಬಸವಣ್ಣನವರು ಒಂದು ಸಾವಿರಕ್ಕಿಂತಲೂ ಹೆಚ್ಚಾಗಿ ವಚನಗಳನ್ನು ಹೇಳಿದ್ದಾರೆ. ಈ ಪವಿತ್ರವಾದ ವಚನಗಳು ಷಟ್‌ಸ್ಥಲವನ್ನು ಬೋಧಿಸುತ್ತವೆ. ಅವರ ವಚನಗಳಿಗೆ ಷಟ್‌ಸ್ಥಲದ ವಚನಗಳೆಂದೇ ಸಾಮಾನ್ಯವಾಗಿ ಹೆಸರಿದೆ. ಮುಂದೆ ಈ ಪ್ರಕರಣದಲ್ಲಿ ಅವರು ಹೇಗೆ ಹೇಗೆ ಷಟ್‌ಸ್ಥಲಗಳ ನಿರೂಪಣೆಮಾಡಿ ಜನಗಳಿಗೆ ಬೋಧಿಸಿದರೆಂಬುವುದನ್ನು ತೋರಿಸುತ್ತೇವೆ. ಮೊದಲು ಇಲ್ಲಿ ಕೆಲವು ವಿಷಯಗಳನ್ನು ವಿವೇಚಿಸಬೇಕಾಗಿರುತ್ತದೆ.

ವೀರಶೈವನ ಅಂತಿಮ ಧ್ಯೇಯವೆಂದರೆ ಲಿಂಗಾಂಗ ಸಾಮರಸ್ಯ. ಲಿಂಗಾಂಗ ಸಾಮರಸ್ಯವೆಂದರೆ ಷಟ್‌ಸ್ಥಲಗಳ ಜ್ಞಾನಸಂಪಾದನೆಯು. ವೀರಶೈವನಿಗೆ ಲಿಂಗಾಂಗ ಸಾಮರಸ್ಯವು ಅಂತಿಮ ಧ್ಯೇಯವೆಂದರೆ— ವೀರಶೈವ ಶಬ್ದದ ಅರ್ಥವನ್ನಿಲ್ಲಿ ಮೊದಲು ಜ್ಞಾನಮಾಡಿಕೊಳ್ಳಬೇಕಾದುದು ಪ್ರಾಮುಖ್ಯವಾಗಿದೆ.

ಲಿಂಗವಂತ, ಲಿಂಗಾಯತ, ಶಿವಾಚಾರದವ, ವೀರಶೈವ, ಶಿವಭಕ್ತ, ಲಿಂಗಾಂಗಿ ಮೊದಲಾದ ಹೆಸರುಗಳಿರುತ್ತವೆ. ಇವುಗಳೆಲ್ಲ ಪರ್ಯಾಯ ವಾಚಕಗಳಾಗಿರುತ್ತವೆ. ವೀರಶೈವ ಶಬ್ದವು ಗ್ರಂಥಸ್ಥವಾಗಿದ್ದರೆ— ಲಿಂಗಾಯತ, ಲಿಂಗವಂತ ಶಬ್ದಗಳು ಬಳಕೆ ಯಲ್ಲಿ ವಿಶೇಷವಾಗಿ ರೂಢಿಗೆ ಬಂದಿರುತ್ತವೆ. ಶರಣರು ವಿಶೇಷವಾಗಿ ವೀರಶೈವ ಶಬ್ದವನ್ನು ಪ್ರಯೋಗಿಸಿಲ್ಲವಾದರೂ ಅನೇಕರು ಆ ಶಬ್ದವನ್ನು ಪ್ರಯೋಗಿಸಿದ್ದಾರೆ. ಅಕ್ಕಮಹಾದೇವಿಯವರ ವಚನಗಳಲ್ಲಿ ವೀರಶೈವ ಶಬ್ದವು ಅನೇಕ ಕಡೆಗೆ ಉಚ್ಚಾರ ಮಾಡಿದ್ದುದು ಕಂಡುಬರುತ್ತದೆ. ಮೇಲೆ ಬರೆದ ಶಬ್ದಗಳು ಪರ್ಯಾಯ ವಾಚಕ ಗಳಾಗಿರುವುದರಿಂದ ಹೆಚ್ಚು ಕಡಿಮೆ ಎಂಬುವ ಭಾವನೆಗೆ ಆವಕಾಶವೇ ಇರುವುದಿಲ್ಲ.

ಒಂದು ಸಂಸ್ಕೃತ, ಇನ್ನೊಂದು ಸಂಸ್ಕೃತವಲ್ಲವೆಂಬುವ ವಾದಕ್ಕೂ ಅವಕಾಶವು ಇರುವುದಿಲ್ಲ — ಒಂದು ಶಬ್ದದಲ್ಲಿ ಒಂದು ತರಹದ ಸ್ವಾರಸ್ಯಾರ್ಥವು ಹೊರಟರೆ, ಇನ್ನೊಂದು ಶಬ್ದದಲ್ಲಿ ಮತ್ತೊಂದು ಸ್ವಾರಸ್ಯಾರ್ಥವು ಹೊರಡುವುದು. ಆದರೆ ತಾತ್ಪರ್ಯಾರ್ಥದಲ್ಲಿ ಒಂದೇ ಆಗುತ್ತದೆ. ಈಶ್ವರನಿಗೆ ಶರ್ವ, ಶಂಕರ, ಶಿವ, ಚಂದ್ರಶೇಖರಗಳೆಂಬ ಹೆಸರುಗಳಿದ್ದರೂ ಮೂಲಾರ್ಥವೆಲ್ಲ ಒಂದೇ ಆಗುತ್ತದೆ. ಇಲ್ಲಿ ವೀರಶೈವ ಶಬ್ದದ ಬಗ್ಗೆ ಗ್ರಂಥಗಳಲ್ಲಿ ಏನು ಆಧಾರವಿದೆಯೆಂಬುವುದನ್ನು ನೋಡಬೇಕಾಗಿದೆ. ಬೇರೊಂದು ಪ್ರಕರಣದಲ್ಲಿ ನಾನು ಬರೆದಿರುವಂತೆ ಶೈವಧರ್ಮವು ಪ್ರಪಂಚದ ನಾನಾ ಭಾಗಗಳಲ್ಲಿ ಅನೇಕ ಶತಶತಮಾನಗಳಿಂದ ಸ್ಫೂರ್ತಿದಾಯಕವಾಗಿ ಬೇರೆ ಬೇರೆ ಆಡಳಿತಗಾರರ ಕಾಲದಲ್ಲಿ ತಲೆಯೆತ್ತಿ ಮೆರೆದ ಪ್ರಬಲತಮವಾದ ಧರ್ಮವಾಗಿರುತ್ತದೆ. ಅಂತಹ ಶೈವದಲ್ಲಿ ಶ್ರೇಷ್ಠವಾಗಿ ಮೆರೆದುದರಿಂದ ವೀರ ಎಂಬುವ ಪದವು ಇದಕ್ಕೆ ಜೋಡಿಸಲ್ಪಟ್ಟಿರುತ್ತದೆ.

ಮೊದಲು ಆಗಮ ಗ್ರಂಥಗಳಲ್ಲಿ ಈ ಶಬ್ದದ ಬಗ್ಗೆ ಇರುವ ನಿರ್ವಚನವನ್ನು ನೋಡಿದರೆ ಸ್ಪಷ್ಟವಾಗುತ್ತದೆ.

**ವಾತುಲಾಗಮ — ಪಟಲ ೧೦**

ವಿಶಿಷ್ಟ ಈರ್ಯತೇ ಯಸ್ಮಾದ್ವೀರ ಇತ್ಯಭಿಧೀಯತೇ ।
ಶಿವೇನ ಸಹಸಂಬಂಧಂ ಶೈವಮಿತ್ಯಾದೃತಂ ಬುಧೈಃ ॥
ಉಭಯೋಃ ಸಂಪುಟೇ ಭಾವಾದ್ವೀರಶೈವಮಿತಿ ಸ್ಮೃತಂ ।
ಶಿವಾರ್ಥಾರ್ಪಿತ ಜೀವತ್ವಾತ್ ವೀರತಂತ್ರ ಸಮುದ್ಭವಾತ್ ।
ವೀರಶೈವ ಸಮಾಯೋಗಾತ್ ವೀರಶೈವಮಿತಿಸ್ಮೃತಂ ॥

ವಿಶಿಷ್ಟವಾದುದಾದ್ದರಿಂದಲೇ ವೀರನೆಂದು ಹೇಳಲ್ಪಡುತ್ತದೆ. ಶಿವನಕೂಡ ಅವಿನಾಭಾವ ಸಂಬಂಧವಿರುವುದರಿಂದ ಶೈವವೆಂದೂ ಹೇಳಿಸಿಕೊಳ್ಳುತ್ತದೆ. ಎರಡೂ ಶಬ್ದಗಳು ಕೂಡುವುದರಿಂದ ವೀರಶೈವವೆಂದು ಆಗುತ್ತದೆ. ಶಿವನಿಗರ್ಪಿಸಲ್ಪಟ್ಟ ದೇಹವಿರುವ ಕಾರಣದಿಂದಲೂ, ವೀರತಂತ್ರದಿಂದ ಹುಟ್ಟಿದುದರಿಂದಲೂ ವೀರ ಮತ್ತು ಶೈವಪದಗಳ ಜೋಡಣೆಯಾಗುವುದರಿಂದ ವೀರಶೈವವೆಂದು ಆಗುತ್ತದೆ.

**ಶಂಕರ ಸಂಹಿತೆ**

ಯೋ ಹಸ್ತಪೀಠೇ ನಿಜಲಿಂಗಮಿಷ್ಟಂ ವಿನ್ಯಸ್ಯತಲ್ಲೀನಮನಃ ಪ್ರಚಾರಃ ।
ಬಾಹ್ಯಕ್ರಿಯಾಸಂಕುಲ ನಿಸ್ಪೃಹಾತ್ಮಾ ಸಂಪೂಜಯತ್ಯಂಗ ಸ ವೀರಶೈವಃ ॥

ಯಾವಾತನು ತನ್ನ ಹಸ್ತಪೀಠದಲ್ಲಿ ಇಷ್ಟಲಿಂಗವನ್ನಿಟ್ಟುಕೊಂಡು ಅದರಲ್ಲಿ ಲೀನವಾದ ಮನಸ್ಸುಳ್ಳವನಾಗಿ ಹೊರಗಿನ ಕಾರ್ಯಗಳಲ್ಲಿ ನಿಸ್ಪೃಹನಾಗಿ ಲಿಂಗವನ್ನು ಪೂಜಿಸುವನೋ ಅವನೇ ವೀರಶೈವನು.

**ಅನಾದಿ ವೀರಶೈವ ಸಾರಸಂಗ್ರಹ — ಭಾಗ ೧, ಪುಟ ೧೪**

ವಿಶಬ್ದೇನೋಚ್ಯತೇ ಯುಕ್ತಿಃ । ರಶಬ್ದೇನ ರಜೋಮತಂ ।
ವಶಬ್ದೇನೇರ್ಯತೋ ಬಿಂದುಃ । ಶಶಬ್ದೇನ ಚಿದೀರಿತಂ ॥
ಯಥಾ ಹಿಸಿಧಾತೋಃ ವರ್ಣವ್ಯತ್ಯಯೇನ ಸಿಂಹಶಬ್ದೋ ನಿಷ್ಪನ್ನಃ ।
ತಥಾ ವಶಕಾಂತಾವಿತಿಧಾತೋಃ ವರ್ಣವ್ಯತ್ಯಯೇನ ಶಿವಶಬ್ದೋ ನಿಷ್ಪನ್ನಃ

### ಸಿದ್ಧಾಂತ ಶಿಖಾಮಣಿ

ವಿಶಬ್ದೇನೋಚ್ಯತೇ ವಿದ್ಯಾ । ಶಿವ ಜೀವೈಕ್ಯಬೋಧಿನೀ ॥
ತಸ್ಯಾಂ ರಮಂತೇ ಯೇಶೈವಾಃ । ವೀರಶೈವಾಃ ಪ್ರಕೀರ್ತಿತಾಃ ॥

ವಿಶಬ್ದದಿಂದ ಶಿವಜೀವೈಕ್ಯವನ್ನು ಬೋಧಿಸತಕ್ಕಂಥ ವಿದ್ಯೆಯು ಹೇಳಲ್ಪಡುತ್ತದೆ. ಅದರಲ್ಲಿ ರಮಿಸುವವನಿಗೆ ವೀರಶೈವನೆಂದು ಬೋಧೆಯಾಗುತ್ತದೆ.

### ವೀರಶೈವ ಧರ್ಮ ಶಿರೋಮಣಿ

ವೀರತ್ವಮಸ್ಯ ನ ಧನೇನ ನ ವಾ ಬಲೇನ ।
ನೋಕಾರ್ಯತಶ್ಚ ವಿಹಿತಂ ದೃಢಶಂಭುಭಕ್ತ್ಯಾ ॥
ವೀರಸ್ತುರೀಯ ಇತಿ ಶಂಕರ ಭಾಷಣೇನ ।
ಶ್ರೀ ವೀರಶೈವ ಮತಗಾನ್ನಪರೋಸ್ತಿ ಕಶ್ಚಿತ್ ॥

ಇವನಿಗೆ ವೀರತ್ವವು ಧನದಿಂದಲಾಗಲಿ, ಬಲದಿಂದಲಾಗಲಿ, ಕಾರ್ಯದಿಂದಲಾಗಲಿ ಬಂದಿರುವುದಿಲ್ಲ. ಈಶ್ವರನಲ್ಲಿ ದೃಢವಾದ ಭಕ್ತಿಯು ಇರುವುದರಿಂದಲೇ ವೀರಪದವು ಪ್ರಾಪ್ತವಾಗಿರುತ್ತದೆ.

### ಪಾರಮೇಶ್ವರಾಗಮ

ಯಥಾ ವೀರೋ ರಣೇ ಶೂರೋ । ವೀರಶೈವಮತೇ ತಥಾ ॥
ಭಕ್ತ್ಯಾ ವೀರೋ ನ ವೈರೇಣ । ನ ಬಲೇ ನ ಚ ಕಾರ್ಯತಃ ॥

ರಣದಲ್ಲಿ ಹೇಗೆ ಶೂರನೆಂದೆನಿಸಿಕೊಳ್ಳುತ್ತಾನೆಯೋ ವೀರಶೈವ ಮತದಲ್ಲಿ ಭಕ್ತಿಯಿಂದ ವೀರನಾಗುತ್ತಾನಲ್ಲದೆ ಬಲದಿಂದಲಾಗಲೀ ಯುದ್ಧ ಕಾರ್ಯದಿಂದಲಾಗಲೀ ಉಂಟಾಗುವುದಿಲ್ಲ.

### ಪಾರಮೇಶ್ವರಾಗಮ—ಪುಟ ೧೬೦—ಹುಬ್ಬಳ್ಳಿಯ ಪ್ರತಿ

ವೀರತ್ವ ನಾಮದೇವೇಶಿ । ಯಥಾ ವೀರೋ ರಣೇ ಭಟಃ ॥
ತಥಾಮತೇಚ ಸದ್ಭಕ್ತ್ಯಾ । ವೀರೋ ವೈರಾಗ್ಯತೋ ದೃಢಾತ್ ॥

ಹೀಗೆಯೇ ಬೇರೆ ಬೇರೆ ಗ್ರಂಥಗಳಲ್ಲಿ ವೀರಶೈವ ಪದದ ವ್ಯಾಖ್ಯಾನವಿದ್ದರೂ ಎಲ್ಲಾ ಅಭಿಪ್ರಾಯಗಳೂ ಒಂದೇ ಆಗಿರುತ್ತವೆ. ಶೈವರಲ್ಲಿ ಅಗ್ರಗಣ್ಯರಾದುದರಿಂದ ಇವರಿಗೆ ವೀರಶೈವರೆಂಬುವ ನಾಮವು ಲಬ್ಧವಾಗಿರುತ್ತದೆ.

ನಮ್ಮ ದೇಶದಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮೊದಲಾದ ಮತಗಳಿರುತ್ತವೆ. ಅದ್ವೈತ ಮತಸ್ಥಾಪಕರು ಶ್ರೀ ಶಂಕರಾಚಾರ್ಯರು ಇರುವಂತೆ ದ್ವೈತ ಮತಸ್ಥಾಪಕರು ಮಧ್ವಾಚಾರ್ಯರು ಇರುತ್ತಾರೆ. ವಿಶಿಷ್ಟಾದ್ವೈತ ಮತವನ್ನು ರಾಮಾನುಜಾಚಾರ್ಯರು ಸಂಸ್ಥಾಪಿಸಿರುತಾರೆ. ಇದರಂತೆ ವಲ್ಲಭ, ನಿಂಬಾರ್ಕ, ಅಭಿನವಗುಪ್ತ ಮೊದಲಾದವರ ಮತಗಳೂ ಇರುತ್ತವೆ. ವೀರಶೈವ ಮತವು ಶಕ್ತಿವಿಶಿಷ್ಟಾದ್ವೈತವೆನ್ನಿಸಿಕೊಳ್ಳುತ್ತದೆ. ಇದನ್ನು ಸಂಸ್ಥಾಪಿಸಿದವರು ಶ್ರೀ ಜಗದ್ಗುರು ಪಂಚಾಚಾರ್ಯರು.

ದ್ವೈತಿಗಳು ಶಿವಜೀವರ ಭೇದವನ್ನೂ, ಅದ್ವೈತಿಗಳು ಅಭೇದವನ್ನೂ ಪಾಲಿಸುತ್ತಾರೆ. ವೀರಶೈವರ ಶಕ್ತಿವಿಶಿಷ್ಟಾದ್ವೈತವಾದರೋ ಭೇದಾಭೇದವನ್ನು ಬೋಧಿಸುತ್ತದೆ.

ಶಕ್ತಿವಿಶಿಷ್ಟ ಎಂದರೆ ಏನು? ಶಕ್ತಿವಿಶಿಷ್ಟಾದ್ವೈತವೆಂದರೆ ಶಕ್ತಿವಿಶಿಷ್ಟ ಶಿವನಿಗೂ ಶಕ್ತಿವಿಶಿಷ್ಟ ಜೀವನಿಗೂ ಸಾಮರಸ್ಯವೆಂದು ತಿಳಿಯಬೇಕು.

"ಶಕ್ತಿಶ್ಚ-ಶಕ್ತಿಶ್ಚ ಶಕ್ತೀ ತಾಭ್ಯಾಂವಿಶಿಷ್ಟೌ ಜೀವೇಶೌ
ತಯೋಃ ಅದ್ವೈತಂ ಶಕ್ತಿ ವಿಶಿಷ್ಟಾದ್ವೈತಂ"

ದ್ವೈತಿಗಳು ಬ್ರಹ್ಮಜೀವರಿಗೆ ಭೇದವನ್ನೂ, ಅದ್ವೈತಿಗಳು ಅಭೇದವನ್ನೂ ಹೇಳುತ್ತಾರೆ. ಈ ಮತಗಳಿಗೆಲ್ಲ ಶೃತಿಗಳೇ ಮೂಲಾಧಾರಗಳಾಗಿವೆ. ಶೃತಿಗಳಲ್ಲಿಯೂ ಏಕವಾಕ್ಯತೆ ಇರುವುದಿಲ್ಲ. ಕೆಲವು ವಾಕ್ಯಗಳು ಜೀವೇಶ್ವರರ ಭೇದವನ್ನು ಪ್ರತಿಪಾದಿಸಿದರೆ ಕೆಲವು ಅಭೇದವನ್ನು ಹೇಳುವ ವಾಕ್ಯಗಳೂ ಇರುತ್ತವೆ.

ಜೀವ ಬ್ರಹ್ಮರಿಗೆ ಭೇದವನ್ನು ಹೇಳುವ ವಾಕ್ಯಗಳೆಂದರೆ ದ್ವಾಸುಪರ್ಣಾಸಯುಜಾ ಸಖಾಯೌ, ಜ್ಞಾಜ್ಞಾವಜಾನೀಶಾನೀಶೌ, ದೇವಾಬ್ರಹ್ಮಣೋ ರೂಪಂ, ದ್ವೇ ಬ್ರಾಹ್ಮಣೇ ವೇದಿತವ್ಯರೂಪಚಾ ಪರಮೇವ ಚ, ಇತ್ಯಾದಿ ವಾಕ್ಯಗಳು ಭೇದ ಪ್ರತಿಪಾದಕಗಳಾಗಿರುತ್ತವೆ.

ಏಕಮೇವಾದ್ವಿತೀಯಂ ಬ್ರಹ್ಮ, ನೇಹನಾನಾಸ್ತಿಕಿಂಚನ, ನಾನ್ಯತೋಸ್ತಿದ್ರಷ್ಟಾ, ನಾನ್ಯತೋಸ್ತಿಶ್ರೋತಾ, ಏಕ ಏವ ರುದ್ರೋ ನ ದ್ವಿತೀಯಾಯ ಚ ತಸ್ಮೈ ಮೊದಲಾದ ವಾಕ್ಯಗಳು ಜೀವಬ್ರಹ್ಮರಿಗೆ ಅಭೇದ ಪ್ರತಿಪಾದಕಗಳಾಗಿರುತ್ತವೆ.

ಶಕ್ತಿವಿಶಿಷ್ಟಾದ್ವೈತಿಗಳು ಮೊದಲು ಭೇದವನ್ನೂ, ಆಮೇಲೆ ಅಭೇದವನ್ನೂ ಹೇಳುತ್ತಾರೆ. ಬಂಧನ ದಶೆಯಲ್ಲಿ ಶಿವ ಜೀವರುಗಳ ಭೇದವನ್ನೂ, ಮೋಕ್ಷಾವಸ್ಥೆಯಲ್ಲಿ ಅಭೇದವನ್ನೂ ಈ ತತ್ವವು ಪ್ರತಿಪಾದಿಸುತ್ತದೆ.

ಈ ಮತದಲ್ಲಿ ಶಿವನೇ ಸರ್ವೋತ್ತಮ. ಶಿವನಲ್ಲದನ್ಯ ದೈವವಿಲ್ಲೆಂದು ತಿಳಿಯುವುದೇ ಶುದ್ಧ ಲಿಂಗವಂತನ ತತ್ವವಾಗಿರುತ್ತದೆ. ಶಿವನ ಹೊರತು ಉಳಿದ ದೇವತೆಗಳೆಲ್ಲ ಆತನ ಊಳಿಗ ವರ್ಗಕ್ಕೆ ಸೇರಿದವರು. ಶಿವನು ಪಶುಪತಿ. ಉಳಿದ ದೇವತೆಗಳು ಪಶುಗಳು. ಅಂದರೆ ಆತನ ಆಜ್ಞೆಯಂತೆ ನಡೆದುಕೊಳ್ಳುವವರು. ಆದ್ದರಿಂದಲೇ "ಪಶುಪತೀಂದು ಪತಿಂ ಧರಣೀ ಪತಿಂ" ಎಂಬುವ ಅಷ್ಟಕವು ಪ್ರಚಲಿತವಾಗಿರುತ್ತದೆ. ಈ ವಿಷಯವು ವೇದಾಗಮೋಪನಿಷತ್ತುಗಳಲ್ಲಿ ಅತ್ಯಂತ ಸ್ಫುಟವಾಗಿ ವ್ಯಕ್ತವಾಗಿರುತ್ತದೆ. ಆದ ರಿಂದಲೇ—

ಶಕ್ತಯೋಶ್ಚ ಜಗತ್ ಕೃತ್ಸ್ನಂ ಶಕ್ತಿಮಾಂಶ್ಚ ಮಹೇಶ್ವರಃ ।
ಶಕ್ತಿಸ್ತು ಶಕ್ತಿಮದ್ರೂಪಾತ್ ವ್ಯತಿರೇಕಂ ನ ಗಚ್ಛತಿ ॥
ತಾದಾತ್ಮ್ಯಮನಯೋರ್ನಿತ್ಯಂ ವಹ್ನಿದಾಹ ಕಯೋರಿವ ।
ಶಕ್ತಿಶಕ್ತಿ ಮತೋರ್ಯಸ್ಮಾದಭೇದಭೇದಸ್ಸರ್ವದಾ ಸ್ಥಿತಃ ॥

ಇಂತಹ ಶಕ್ತಿವಿಶಿಷ್ಟನಾದ ಪರಶಿವನಿಗೆ ಪರಬ್ರಹ್ಮವೆಂದು ಶಕ್ತಿವಿಶಿಷ್ಟಾದ್ವೈತಿಗಳಾದ ವೀರಶೈವರು ನಂಬುತ್ತಾರೆ.

ಕ್ಷರಂ ಪ್ರಧಾನಮಮೃತಾಕ್ಷರಂ ಹರಃ ತಸ್ಮಾತ್ ಸರ್ವಗತಃ ಶಿವಃ ।
ವಿಶ್ವಾಧಿಕೋ ರುದ್ರೋ ಮಹರ್ಷಿಃ ಮಾಯಿನಂತು ಮಹೇಶ್ವರಂ ॥
ತಮೀಶ್ವರಾಣಾಂ ಪರಮಂ ಮಹೇಶ್ವರಂ । ತಂದೇವತಾನಾಂ ಪರಮಂ ಚ ದೈವತಂ ।
ಪತಿಂಪತೀನಾಂ ಪರಮಂಪರಸ್ತಾದ್ವಿ । ದಾಮದೇವಂ ಭುವನೇಶಮೀಢ್ಯಂ ॥

**ಶ್ವೇತಾಶ್ವತರೋಪನಿಷತ್**

ಸರ್ವಮಿದಂ ಬ್ರಹ್ಮವಿಷ್ಣು ರುದ್ರೇಂದ್ರಾಸ್ತೇ ಸಂಪ್ರಸೂಯಂತೇ ।

**ಅಥರ್ವ ಶಿಖೋಪನಿಷತ್**

ಜ್ಞಾತ್ವಾಶಿವಂ ಶಾಂತಿಮತ್ಯಂತಮೇತಿ ।

**ಶ್ವೇತಾಶ್ವತರೋಪನಿಷತ್**

ಬ್ರಹ್ಮವಿದಾಪ್ನೋತಿಪರಂ । ಸತ್ಯಂ ಜ್ಞಾನಮನಂತಂ ಬ್ರಹ್ಮ ॥

**ತೈತ್ತಿರೀಯೋಪನಿಷತ್**

ಜ್ಞಾತ್ವಾ ತಂ ಮೃತ್ಯುಮತ್ಯೇತಿ ನಾನ್ಯಃ ಪಂಥಾ ವಿಮುಕ್ತಯೇ ।

**ಕೈವಲ್ಯೋಪನಿಷತ್**

ತಮೇವ ವಿದಿತ್ವಾ ಮೃತ್ಯು ಮತ್ಯೇತಿನಾನ್ಯಃ ಪಂಥಾವಿದ್ಯತೇ ಅಯನಾಯ ।

ಮೇಲೆ ಬರೆದ ಉಪನಿಷತ್ತುಗಳ ವಾಕ್ಯಗಳೆಲ್ಲ ಮನುಷ್ಯನ ಮೋಕ್ಷಕ್ಕೆ ಬ್ರಹ್ಮಜ್ಞಾನವೇ ಕಾರಣವೆಂದು ಬೋಧಿಸುತ್ತವೆ. ಶಿವನೇ ಪರಬ್ರಹ್ಮವಾಚ್ಯನೆಂಬುವುದಕ್ಕೆ ಸಾಕಷ್ಟು ಉಪನಿಷತ್ತಿನ ವಾಕ್ಯಗಳಿರುತ್ತವೆ. ಆದ್ದರಿಂದಲೇ ಆಗಮಗಳಲ್ಲಿ—

"ತಸ್ಮಾಲ್ಲಿಂಗಂ ಪರಬ್ರಹ್ಮ ಸಚ್ಚಿದಾನಂದ ಲಕ್ಷಣಂ"

**ಕೈವಲ್ಯೋಪನಿಷತ್**

ಉಮಾ ಸಹಾಯಂ ಪರಮೇಶ್ವರಂ ಪ್ರಭುಂ । ತ್ರಿಲೋಚನಂ
ನೀಲಕಂಠಂ ಪ್ರಶಾಂತಂ । ಧ್ಯಾತ್ವಾ ಮುನಿರ್ಗಚ್ಛತಿ
ಭೂತಯೋನಿಂ ಸಮಸ್ತ ಸಾಕ್ಷಿಂ ತಮಸಃ ಪರಸ್ತಾತ್ ।
ಸ ಬ್ರಹ್ಮಾ ಸ ಶಿವಸ್ಸೇಂದ್ರಸ್ಸೋಽಕ್ಷರಃ ಪರಮ ಸ್ವರಾಟ್ ।
ಸ ಏವ ವಿಷ್ಣುಃ ಸ ಕಾಲೋಽಗ್ನಿಃ ಸ ಚಂದ್ರಮಾಃ ।
ಸ ಯೇವ ಸರ್ವಂ ಯದ್ಭೂತಂ ಯಚ್ಚಭವ್ಯಂ ಸನಾತನಂ ।
ಜ್ಞಾತ್ವಾ ತಂ ಮೃತ್ಯುಮತ್ಯೇತಿ ನಾನ್ಯಃ ಪಂಥಾ ವಿಮುಕ್ತಯೇ ॥

ಶಕ್ತಿವಿಶಿಷ್ಟವಾದ ಈ ಪರಬ್ರಹ್ಮವೇ ಚೇತನಾಚೇತನ ಪ್ರಪಂಚ ರೂಪಾತ್ಮಕವಾಗಿ ತೋರುವುದು. ಸಾಗರದ ಅಲೆಗಳಲ್ಲಿ ಫೇನಬುದ್ಬುದಾದಿಗಳು ಹುಟ್ಟಿ ಕ್ಷಣಕಾಲವಿದ್ದು ಕೊನೆಗೆ ಸಾಗರದ ರೂಪವೇ ಆಗುವಂತೆ ಹಾಗೆಯೇ ಶಕ್ತಿವಿಶಿಷ್ಟನಾದ ಬ್ರಹ್ಮನಲ್ಲಿ ಈ ಜಗತ್ತೆಲ್ಲವೂ ಹುಟ್ಟಿ ಬೆಳೆದು ಅಳಿದರೂ ಕೊನೆಗೆ ಬ್ರಹ್ಮದ ರೂಪವೇ ಆಗಿ ತೋರುವುದಲ್ಲದೆ ಬೇರೆ ಏನೂ ಆಗಲಾರದು.

**ಸಿದ್ಧಾಂತ ಶಿಖಾಮಣಿ**

ಶಿವತತ್ವಾತ್ಸಮುತ್ಪನ್ನಂ । ಜಗದಸ್ಮಾನ್ನಭಿದ್ಯತೇ ।
ಫೇನೋರ್ಮಿಬುದ್ಬುದಾಕಾರೋ । ಯಥಾಸಿಂಧೋರ್ನಭಿದ್ಯತೇ ॥

**ಅಥರ್ವಶಿಖೋಪನಿಷತ್**

ಅಹಮೇಕಃ ಪ್ರಥಮ ಮಾಸಂ ವರ್ತಾಮಿ ಚ ಭವಿಷ್ಯಾಮಿ ಚ ।
ನಾನ್ಯಃ ಕಶ್ಚಿನ್ಮತ್ತೋ ವ್ಯತಿರಿಕ್ತಃ ॥

ಶಿವನು ಅಂದರೆ ಪರಬ್ರಹ್ಮನು ಶಕ್ತಿವಿಶಿಷ್ಟನೆಂಬುವುದಕ್ಕೆ ಇನ್ನೂ ಕೆಲವು ಪ್ರಮಾಣಗಳನ್ನು ಇಲ್ಲಿ ಕೊಡುತ್ತೇನೆ.

**ಶ್ವೇತಾಶ್ವತರೋಪನಿಷತ್**

ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ
ಸ್ವಾಭಾವಿಕೀ ಜ್ಞಾನಬಲ ಕ್ರಿಯಾ ಚ ।
ಏಕ ಏವ ರುದ್ರೋ ನ ದ್ವಿತೀಯಾಯ ತಸ್ಮೈ ।
ಯ ಇಮಾನ್ ಲೋಕಾನೀ ಶತಈಶನೀಭಿಃ ।
ಪರಮ ಶಕ್ತಿಭಿಃ ॥

ಶಕ್ತಿವಿಶಿಷ್ಟತ್ವವನ್ನು ಅಂಗೀಕರಿಸದ ಹೊರತು—ಸರ್ವಜ್ಞತ್ವ, ಸರ್ವಶಕ್ತಿಮತ್ವ, ಸರ್ವ ಕಾರಣತ್ವ, ಸರ್ವನಿಯಂತೃತನ, ಸರ್ವಾನುಗ್ರಾಹಕತ್ವ ಮೊದಲಾದುವುಗಳು ಈ ಬ್ರಹ್ಮ ನಲ್ಲಿ ಬರುವುದಿಲ್ಲ.

**ಶಕ್ತಿಸಂದೋಹವೆಂಬುವ ಗ್ರಂಥ**

ಶಕ್ತ್ಯಾದಿ ಚ ಪೃಥಿವ್ಯಂತಂ ಜಗದೇತಚ್ಚರಾಚರಂ ।
ಶಿವಶಕ್ತಿ ಸಮುತ್ಪನ್ನಂ ತಂತೂರ್ನಿರ್ಮಿತೋದ್ಭವೋ ಯಥಾ ।
ಶಕ್ತಿ ಮನುಚ್ಯತೇ ದೇವಃ ಸಚ್ಚಿದಾನಂದ ಲಕ್ಷಣಃ ।
ಧರ್ಮರೂಪಾ ಪರಾಶಕ್ತಿಃ ಧರ್ಮಿರೂಪಃ ಪರಶ್ಶಿವಃ ।
ತಸ್ಯಾನಾವೃತ ರೂಪತ್ವಾತ್ ಪರಾಶಕ್ತಿಃ ಪರಾತ್ಮನಃ ।
ಸರ್ವದಾ ತತ್ವರೂಪೇಣ ಭಾತಿ ಭಾನೋರಿವ ಪ್ರಭಾ ।
ತಾದಾತ್ಮ್ಯಮನಯೋರ್ನಿತ್ಯಂ ಧರ್ಮಧರ್ಮಿ ಸ್ವಭಾವತಃ ।
ತತ್ರ ಸ್ವತಂತ್ರ ರೂಪೇಣ ಶಿವಸಚ್ಚಿತ್ಸುಖಾತ್ಮಕಃ ।
ಶಕ್ತಿಸ್ತು ಪಾರತಂತ್ರೇಣ ನಿಶ್ಶೋತ್ಪಾದನ ಮಿಷ್ಯತೇ ।

ಶಕ್ತಿವಿಶಿಷ್ಟನಾದ ಶಿವನೇ ಜಗತ್ಸ್ವರೂಪನಾಗಿ ಅದರ ಉತ್ಪತ್ತಿಗೆ ಉಪಾದಾನ ಕಾರಣ ನಾಗಿರುತ್ತಾನೆ. ಶಿವನಿಷ್ಠವಾದ ಶಕ್ತಿಯ ಅಂಶವು ಜಗದ್ರೂಪವಾಗಿ ಪರಿಣಮಿಸುವುದ ರಿಂದ ಶಿವನು ನಿರ್ವಿಕಾರನಾಗಿಯೇ ಇರುತ್ತಾನೆ. ಪ್ರಪಂಚೋತ್ಪತ್ತಿಗೆ ಶಿವಶಕ್ತಿಯ ರಿಬ್ಬರೂ ಶಿವನು ಸ್ವಾತಂತ್ರ್ಯದಿಂದ ಮಾಯೆಯು ಪಾರತಂತ್ರ್ಯದಿಂದ ಉಪಾದಾನ ಕಾರಣವಾದರೂ ಶಿವನಿಷ್ಠವಾದ ಚಿದಾನಂದ ರೂಪತ್ವವು ಪ್ರಪಂಚಕ್ಕೆ ಬರಲಾರದು. ಹೇಗಂದರೆ—ಧೂಮರೂಪ ಕಾರ್ಯಕ್ಕೆ ಕಟ್ಟಿಗೆ ಬೆಂಕಿಗಳೆರಡೂ ಕಾರಣಗಳಾದರೂ ಧೂಮದಲ್ಲಿ ಕಟ್ಟಿಗೆಯ ಧರ್ಮವಾದ ಕೃಷ್ಣರೂಪವಿರುವುದೇ ಹೊರತು ವಹ್ನಿಧರ್ಮವಾದ ತೇಜಸ್ಸು ಅದರಲ್ಲಿರುವುದಿಲ್ಲ.

**ಕೂರ್ಮ ಪುರಾಣ**

ಮಾಂವಿದ್ಧಿ ಪರಮಾಂಶಕ್ತಿಂ ಮಹೇಶ್ವರ ಸಮಾಶ್ರಯಾಂ ।
ಅನನ್ಯಾಮವ್ಯಯಾಮೇಕಾಂ ಮಾಂ ಪಶ್ಯಂತಿ ಮುಮುಕ್ಷವಃ ।
ಅಹಂವೈ ಸರ್ವಭೂತಾನಾಮಾತ್ಮಾ ಸರ್ವಾಂತರಾ ಶಿವಾ ।
ಶಾಶ್ವತೈಶ್ವರ್ಯ ವಿಜ್ಞಾನಮೂರ್ತಿಸ್ಸರ್ವ ಪ್ರವರ್ತಿಕಾ ।
ಅನಂತಾನಂತ ಮಹಿಮಾ ಸಂಸಾರಾರ್ಣವಕಾರಿಣೀ ।
ದಿವ್ಯಂದದಾಮಿತೇ ಚಕ್ಷುಃ ಪಶ್ಯಮೇ ರೂಪಮೈಶ್ವರಂ ।

ಅಂದರೆ ಮಹೇಶ್ವರನನ್ನು ಆಶ್ರಯಮಾಡಿದ ನನ್ನನ್ನು ಪರಮಶಕ್ತಿಯೆಂಬುವುದಾಗಿ ತಿಳಿ. ಮೋಕ್ಷಾಪೇಕ್ಷಿಗಳಾದ ಮಹಾಜನಗಳು ನನ್ನನ್ನು—ಅನನ್ಯಳೂ, ನಾಶರಹಿತಳೂ ಎಂಬುವುದಾಗಿ ನೋಡುತ್ತಾರೆ. ಸರ್ವ ಪ್ರಾಣಿಗಳಿಗೆ ನಾನು ಆತ್ಮ ಸ್ವರೂಪಳಾಗಿದ್ದೇನೆ.

ಶಾಶ್ವತವಾದ ಐಶ್ವರ್ಯ ವಿಜ್ಞಾನಮೂರ್ತಿಯೂ ನಾನಾಗಿರುತ್ತೇನೆ. ಅನಂತಾನಂತ ಮಹಿಮೆಯುಳ್ಳವಳೂ, ಸಂಸಾರ ಸಾಗರವನ್ನು ದಾಟಿಸತಕ್ಕವಳೂ ಆಗಿರುತ್ತೇನೆ. ನನ್ನ ಚಿದ್ಘನ ಸ್ವರೂಪವನ್ನು ನೋಡು. ಇದು ಈಶ್ವರನ ಸಂಬಂಧಿಯಾದುದು. ಹೀಗೆ ಮಾಡಿದ್ದಾದರೆ ಸ್ವರ್ಗೀಯವಾದ ನೇತ್ರವನ್ನು ನಿನಗೆ ಕೊಡುತ್ತೇನೆಂದು ಪರಮಶಕ್ತಿಯು ಭಕ್ತನಿಗೆ ಬೋಧಿಸುತ್ತಾಳೆ.

ಸಿದ್ಧಾಂತ ಶಿಖಾಮಣಿಕಾರರು ತಮ್ಮ ಗ್ರಂಥದ ಆದಿಯಲ್ಲಿ ಶಕ್ತಿಯ ಸ್ತೋತ್ರವನ್ನು ಕೆಳಗೆ ಬರೆದಂತೆ ಮಾಡಿರುತ್ತಾರೆ.

ಯಾ ಮಾಹುಃ ಸರ್ವಲೋಕಾನಾಂ । ಪ್ರಕೃತಿಂ ಶಾಸ್ತ್ರಪಾರಗಾಃ ।
ತಾಂ ಧರ್ಮಚಾರಿಣೀಂ ಶಂಭೋಃ । ಪ್ರಣಮಾಮಿ ಪರಾಂಶಿವಾಂ ॥

ಶಾಸ್ತ್ರಗಳಲ್ಲಿ ಪಾರಂಗತರಾದ ಪಂಡಿತರುಗಳು ಸರ್ವಲೋಕಗಳ ಉತ್ಪತ್ತಿಗೆ ಮೂಲ ಕಾರಣಳನ್ನಾಗಿ ಯಾರನ್ನು ಹೇಳುತ್ತಾರೆಯೋ ಅಂತಹ ಶಂಭುವಿನ ಧರ್ಮಚಾರಿಣಿಯಾದ ಆ ದೇವಿಯನ್ನು ನಮಸ್ಕರಿಸುತ್ತೇನೆ.

### ಸಿದ್ಧಾಂತ ಶಿಖಾಮಣಿ—೨೦ ನೇ ಪರಿಚ್ಛೇದ

ಯಥಾ ಚಂದ್ರೇ ಚಿರಜ್ಯೋತ್ಸ್ನಾ ವಿಶ್ವವಸ್ತು ಪ್ರಕಾಶಿನೀ ।
ತಥಾಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ ॥ ೩೨ ॥

ಸಮಸ್ತ ವಸ್ತುಗಳನ್ನು ಪ್ರಕಾಶಪಡಿಸುವ ಬೆಳದಿಂಗಳು ಚಂದ್ರನಲ್ಲಿ ಹೇಗೆ ಸ್ಥಿರವಾಗಿರುತ್ತದೆಯೋ ಹಾಗೆಯೇ ವಿಮರ್ಶಾನಾಮಕ ಶಕ್ತಿಯು ಪ್ರಕಾಶರೂಪ ಪರಬ್ರಹ್ಮ ಶಿವನಲ್ಲಿ ಸ್ಥಿರವಾಗಿರುವುದು. ಚಂದ್ರನನ್ನು ಬಿಟ್ಟು ಚಂದ್ರಿಕೆಯೂ, ಚಂದ್ರಿಕೆಯನ್ನು ಬಿಟ್ಟು ಚಂದ್ರನೂ ಹೇಗೆ ಇರುವುದಿಲ್ಲವೋ ಹಾಗೆಯೇ ಶಿವನನ್ನು ಬಿಟ್ಟು ಶಕ್ತಿಯೂ, ಶಕ್ತಿಯನ್ನು ಬಿಟ್ಟು ಶಿವನೂ ಇರುವುದಿಲ್ಲ.

ಕನ್ನಡ ನಾಡಿನ ಕವಿಪುಂಗವರೂ, ಯೋಗಿವರೇಣ್ಯರೂ ಆದ ಶ್ರೀ ನಿಜಗುಣ ಶಿವಯೋಗಿಗಳು ತಮ್ಮ ೬೩ ಪುರಾತನರ ತ್ರಿವಿಧಿಯಲ್ಲಿ ಶಿವಶಕ್ತಿಯರ ಏಕೀಕರಣವನ್ನು ಬಹು ಹೃದಯಂಗಮವಾಗಿ ಚಿತ್ರಿಸಿರುತ್ತಾರೆಂಬುದು ಕೆಳಗಿನ ಅವರ ವಚನದಿಂದ ತಿಳಿಯುತ್ತದೆ.

"ಇಂಗಡಲೊಳಿಂಪು ಬೆಳದಿಂಗಳೊಳು ತಂಪು ಕುಸುಮಂಗಳೊಳು
ಕಂಪು ಬೆರೆದಂತೆ ಪರಮನೊಳು ಪಿಂಗದಗ ಸುತೆಗೆ ನತನಪ್ಪೆ"

ಎಂದು ಸೊಗಸಾಗಿ ಶಿವಶಕ್ತಿಯರ ಏಕತ್ವವನ್ನು ವರ್ಣಿಸಿರುತ್ತಾರೆ.

ಸಂಸ್ಕೃತ ಸಾಹಿತ್ಯ ಪ್ರಪಂಚದಲ್ಲಿ ವಿಖ್ಯಾತ ಕವಿಶ್ರೇಷ್ಠ ಕಾಳಿದಾಸ ಮಹಾಕವಿಯೂ ಕೂಡ ತನ್ನ ರಘುವಂಶ ಮಹಾಕಾವ್ಯದ ಆರಂಭದಲ್ಲಿ—

ವಾಗರ್ಥಾವಿವ ಸಂಪೃಕ್ತೌ । ವಾಗರ್ಥಃ ಪ್ರತಿಪತ್ತಯೇ ।
ಜಗತಃ ಪಿತರೌ ವಂದೇ । ಪಾರ್ವತೀ ಪರಮೇಶ್ವರೌ ॥

ಶಬ್ದಾರ್ಥಗಳು ಒಂದಕ್ಕೊಂದು ಕೂಡಿರುವಂತೆ ಲೋಕದ ತಂದೆತಾಯಿಗಳಾದ ಪಾರ್ವತೀ ಪರಮೇಶ್ವರರನ್ನು ನಮಸ್ಕರಿಸುತ್ತೇನೆಂದು ವರ್ಣಿಸಿದ್ದಾರೆ. ಇಲ್ಲಿ ಪಾರ್ವತೀ ಪರಮೇಶ್ವರ

ರೆಂಬರೆ ಶಿವಶಕ್ತಿಯರೆಂದು ಅರ್ಥವು. ಶಬ್ದವನ್ನು ಬಿಟ್ಟು ಅರ್ಥವೂ ಅರ್ಥವನ್ನು ಬಿಟ್ಟು ಶಬ್ದವೂ ಹೇಗೆ ಇರುವದಿಲ್ಲವೋ ಹಾಗೆಯೇ ಶಿವನನ್ನು ಬಿಟ್ಟು ಶಕ್ತಿಯೂ ಶಕ್ತಿಯನ್ನು ಬಿಟ್ಟು ಶಿವನೂ ಇರುವುದಿಲ್ಲವೆಂದು ಈ ಕವಿಶ್ರೇಷ್ಠನ ಅಭಿಪ್ರಾಯವಾಗಿರುತ್ತದೆ.

ಶಿವಶಕ್ತಿಯರ ಅಭಿನ್ನತ್ವವನ್ನು ತೋರಿಸುವುದಕ್ಕೆ ಮೇಲೆ ಅನೇಕ ಉದಾಹರಣೆಗಳನ್ನು ಕೊಟ್ಟಿದ್ದೇವೆ. ಇವುಗಳಿಂದ ಶಿವಶಕ್ತಿಯರಿಬ್ಬರೂ ಅವಿನಾಭಾವದಿಂದ ಕೂಡಿಕೊಂಡಿರುತ್ತಾರೆಂಬುದು ಸುಸ್ಪಷ್ಟವಾಗುತ್ತದೆ.

ಸೂರ್ಯ ಮತ್ತು ಅವನ ಕಿರಣಗಳು, ಅಗ್ನಿ ಅದರ ತಾಪವು, ಹಾಲು ಮತ್ತು ಅದರ ಬಿಳಿಯ ಬಣ್ಣವು ಒಂದಕ್ಕೊಂದು ಕೂಡಿರುವಂತೆಯೇ ಶಿವಶಕ್ತಿಯರ ಮಿಲನವು ಇರುತ್ತದೆ.

ಶೇತೆ ಇತಿ ಶಿವಃ—ಯಾವಾತನಲ್ಲಿ ಎಲ್ಲಾ ಪ್ರಾಣಿಗಳು ಶಯನವನ್ನು ಮಾಡುತ್ತವೆಯೋ ಆತನೇ ಶಿವನು—ಶಿವನು ಯಾರು?

### ಅಥರ್ವೋಪನಿಷತ್

ಯತ್ಪರಂ ಬ್ರಹ್ಮ ಸ ಏಕಃ । ಯ ಏಕಃ ಸಃ ರುದ್ರಃ ಯೋ ರುದ್ರಃ ।
ಸ ಈಶಾನಃ ಸಭಗವಾನ್ ಮಹೇಶ್ವರಃ ॥

ಶಕ್ತಿಯು ಶಿವನ ಕೂಡ ಇದ್ದಾಗಲೇ ಅದು ಪರಬ್ರಹ್ಮವಸ್ತುವಾಗುವುದು. ಆದ್ದರಿಂದಲೇ "ನಶಿವೇನ ವಿನಾಶಕ್ತಿಃ ನಶಕ್ತಿರಹಿತಃ ಶಿವಃ" ಎಂಬುವ ವಾಕ್ಯವು ಪ್ರಸಿದ್ಧವಾಗಿರುತ್ತದೆ. ಹೀಗೆಯೇ—"ಪುಷ್ಪ ಗಂಧವದನ್ಯೋನ್ಯಂ ಮಾರುತಾಂಬರ ಯೋರಿವ"—ಪುಷ್ಪವಿಲ್ಲದೆ ಗಂಧವಿಲ್ಲ ಗಂಧವಿಲ್ಲದ ಪುಷ್ಪವಿಲ್ಲ, ಗಾಳಿಯಿಲ್ಲದ ಆಕಾಶವಿಲ್ಲ ಆಕಾಶವಿಲ್ಲದ ಗಾಳಿ ಇಲ್ಲ ಎಂಬುವ ಉಪಮಾನಗಳು ಪ್ರಸಿದ್ಧಿಯನ್ನು ಪಡೆದಿರುತ್ತವೆ.

### ಶ್ವೇತಾಶ್ವತರೋಪನಿಷತ್

ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂತು ಮಹೇಶ್ವರಮ್ ॥ ೪-೧೦ ॥

ಈ ಮಂತ್ರವು ಶಕ್ತಿ ವಿಶಿಷ್ಟವನ್ನು ಬೋಧಿಸುತ್ತದೆ.

ಮಾಯಾ ಶಬ್ದಕ್ಕೆ ನಮ್ಮ ಆಚಾರ್ಯರು—

ಮಂ ಶಿವಂ ಅಯತಿ ಸ್ವಭಾವತಃ ಪ್ರಾಪ್ನೋತೀತಿ ಮಾಯಾ

ಎಂದು ಅರ್ಥಮಾಡಿರುವುದರಿಂದ ಇದು ವಿಮರ್ಶಾಶಕ್ತಿ ರೂಪಾಗಿರುವುದು. ಈ ಮಂತ್ರದ ಬಗ್ಗೆ—

### ಸಿದ್ಧಾಗಮ

ಮಂ ಶಿವಂ ಪರಮಂ ಬ್ರಹ್ಮ ಪ್ರಾಪ್ನೋತೀತಿ ಸ್ವಭಾವತಃ ।
ಮಾಯೇತಿ ಪ್ರೋಚ್ಯತೇ ಲೋಕೇ ಬ್ರಹ್ಮನಿಷ್ಠಾ ಸನಾತನೀ ॥

### ಯಜುರ್ವೇದ ತೈತ್ತಿರಿಯಾಸಂಹಿತೆ

ಆಖುಸ್ತೇ ರುದ್ರ ಪಶುಸ್ತಂಜುಷಸ್ವೈಷತೇ ರುದ್ರ ಭಾಗಃ ।
ಸಹಸ್ವಸ್ರಾಽಂಬಿಕಯಾ ತಂಜುಷಸ್ವ ॥ ೧-೮-೬ ॥

ಈ ಮಂತ್ರದಿಂದ ಶಕ್ತಿಯ ನಿತ್ಯತ್ವವು ತಿಳಿಯುವುದಲ್ಲದೆ ಸ್ವಸ್ರಾ–ಅಂಬಿಕಯಾ ಎಂಬುವ ಪದಗಳನ್ನು ಪರ್ಯಾಲೋಚಿಸಿದರೆ ಪರಮಾತ್ಮನಲ್ಲಿ ಶಕ್ತಿಯು ಸ್ವಾಭಾವಿಕವಾಗಿ ಇದ್ದುದು ಕಂಡುಬರುತ್ತದೆ.

**ಕೈವಲ್ಯೋಪನಿಷತ್**

ಉಮಾ ಸಹಾಯಂ ಪರಮೇಶ್ವರಂ ಪ್ರಭುಂ

ಎಂಬುವ ವಾಕ್ಯವೂ ಕೂಡ ಶಕ್ತಿವಿಶಿಷ್ಟತ್ವವನ್ನು ಬೋಧಿಸುತ್ತದೆ. ಇಲ್ಲಿಯವರೆಗೆ—ಶಿವನೇ ಸರ್ವೋತ್ತಮ, ಅವನೇ ಪರಬ್ರಹ್ಮ, ಅವನು ಶಕ್ತಿವಿಶಿಷ್ಟನು. ಇದೇ ವೀರಶೈವ ಸಿದ್ಧಾಂತವೆಂಬುವುದನ್ನು ವೇದಾಗಮೋಪನಿಷತ್ಪ್ರಮಾಣಗಳಿಂದ ಸಿದ್ಧಮಾಡಿ ತೋರಿಸಿದ್ದೇನೆ. ಶಿವನ ಸರ್ವೋತ್ತಮತ್ವದ ಬಗ್ಗೆ ಶರಣರು ಸಾವಿರಾರು ವಚನಗಳಿಂದ ಸಿದ್ಧಮಾಡಿದ್ದಾರೆ. ಆದರೆ ಇಲ್ಲಿ ಕೆಲವು ವಚನಗಳನ್ನು ಮಾತ್ರ ನೋಡಬೇಕಾಗಿರುತ್ತದೆ.

ಶ್ರೀ ಅಖಂಡೇಶ್ವರರು—

"ವಿಶ್ವದೊಳಗೆಲ್ಲ ನೀನೇ ದೇವ, ವಿಶ್ವಭರಿತನು ನೀನೇ ದೇವ, ವಿಶ್ವರೂಪನು ನೀನೇ ದೇವ, ವಿಶ್ವಪತಿ ನೀನೇ ದೇವ, ವಿಶ್ವಾತೀತನು ನೀನೇ ದೇವ ಅಖಂಡೇಶ್ವರಾ."

ಶ್ರೀ ಬಸವಣ್ಣನವರು—

"ಎತ್ತತ್ತನೋಡಿದಡತ್ತತ್ತ ನೀನೇ ದೇವ, ಸಕಲ ವಿಸ್ತಾರದರೂಹು ನೀನೇ ದೇವ, ವಿಶ್ವತೋಚಕ್ಷು ನೀನೇ ದೇವ, ವಿಶ್ವತೋಮುಖ ನೀನೇ ದೇವ, ವಿಶ್ವತೋಬಾಹು ನೀನೇ ದೇವ, ವಿಶ್ವತೋಪಾದ ನೀನೇ ದೇವ, ಕೂಡಲಸಂಗಮದೇವಾ."

ಶ್ರೀ ಸ್ವತಂತ್ರ ಸಿದ್ಧಲಿಂಗದೇವರು—

"ಎಲ್ಲೆಲ್ಲಿನೋಡಿದಡಲ್ಲಲ್ಲಿ ನೀನೇ ದೇವ, ಪಿಂಡಾಂಡಗಳೊಳಗೆಲ್ಲ ನೀನೇ ದೇವ, ಮಹದಾಕಾಶರೂಪ ನಿರುಪಾಧಿಕ ಪರಂಜ್ಯೋತಿ ನೀನೇ ದೇವ, ಉಪಮಾತೀತ ವಾಙ್ಮನಕ್ಕ ಗೋಚರ ನೀನೇ ದೇವ, ಸ್ವಾನುಭೂತಿ ಸ್ವರೂಪ ಶರಣಜನ ಮನೋವಲ್ಲಭ ನೀನೇ ದೇವ, ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ."

ಶ್ರೀ ದಾಸೀಮಾರ್ಯರು—

"ಶರಧಿಯ ಮೇಲೆ ಧರೆಯ ಕರಗದಂತಿರಿಸಿದೆ, ಅಂಬರವ ಗದ್ದುಗೆ ಬೋದುಗೆ ಇಲ್ಲದಂತಿರಿಸಿದೆ, ಎಲೆ ಮೃಡನೇ ನೀನಲ್ಲದೆ ಉಳಿದ ದೈವಂಗಳಿಗಹುದೇ ರಾಮನಾಥ."

ಶ್ರೀ ಚನ್ನಬಸವಣ್ಣನವರು—

"ಅಜಹರಿಸುರರೆಲ್ಲರೂ ಅಳಿಯದೆ ಉಳಿದವರಿಲ್ಲ ಶಿವನೇ ನಿತ್ಯನೆಂದು ಹೊಡೆವಡುತ್ತಿವೆ. 'ಉತ ಇದಂ ವಿಶ್ವಭೂತಾನಿ ಸದೃಷ್ಟ್ವೋಮೃಡಯಾತಿ

ನಮಸ್ತು ನೀಲಗ್ರೀವಾಯ ಸಹಸ್ರಾಕ್ಷಾಯ ಈಡುಷೇ' ಬಸವಪ್ರಿಯ ಕೂಡಲ ಚನ್ನಸಂಗಯ್ಯನೊಬ್ಬನೇ ನಿತ್ಯನೆಂದು ಹೊಗಳುತ್ತಿದೆ ವೇದ."

ಇದಲ್ಲದೆ

"ಶಿವನೇ ಜಗತ್ರಯಕ್ಕೊಡೆಯನೆಂದುದು ವೇದ, ಉತ್ಪತ್ತಿ ಸ್ಥಿತಿ ಲಯ ಕಾರಣನೆಂದುದು ವೇದ" ಈಶ್ವರಸ್ಸರ್ವಜಗತ್ಪ್ರಭುಃ ಪ್ರೇರಕೋವಿಶ್ವಭುಕ್ ಇತ್ಯಾದಿ ಅನಂತ ವಾಕ್ಯಗಳು ಆತನ ನಿಲುವನ್ನು ಸೂಚಿಸುತ್ತವೆ.

ಉಪನಿಷತ್ತುಗಳಲ್ಲಿಯೂ, ಆಗಮಗಳಲ್ಲಿಯೂ ಹೇಳಿದ ಶ್ರೀ ಪ್ರಭುದೇವರು ಈ ಶಕ್ತಿವಿಶಿಷ್ಟ ಸಿದ್ಧಾಂತವನ್ನು ತಮ್ಮದೊಂದು ವಚನದಲ್ಲಿ ಬಹಳ ಸೊಗಸಾಗಿ ಸಿದ್ಧಾಂತಪಡಿಸಿರುತ್ತಾರೆ.

ಬಿತ್ತಿದೆನಯ್ಯ ಬ್ರಹ್ಮಬೀಜವ ಎಂಬುವ ಶಬ್ದಗಳಿಂದ ಸ್ಪಷ್ಟವ್ಯಕ್ತವಾಗುತ್ತದೆ.

"ಕಾಣಬಾರದ ಲಿಂಗನೆನ್ನಕರಸ್ಥಲಕ್ಕೆ ಬಂದರೆ ಹೇಳಲಮ್ಮೆ ಕೇಳಲಮ್ಮೆ ಎನಗಿದು ಸೋಜಿಗ ಗುಹೇಶ್ವರನೆಂಬ ಲಿಂಗ ನಿರಾಕಾರಬಯಲು ಸಾಕಾರವಾಗಿ ಎನ್ನ ಕರಸ್ಥಲಕ್ಕೆ ಬಂದರೆ ಹೇಳಲಮ್ಮೆ ಕೇಳಲಮ್ಮೆ"

### ತಲವಕಾರೋಪನಿಷತ್

"ಯಶ್ಚಕ್ಷುಷಾ ನ ಪಶ್ಯತಿ ತದೇವ ಬ್ರಹ್ಮತ್ವಂ ವಿದ್ಧಿನೇದಂ ಯದಿದಮುಪಾಸತೇ"

ಆವುದೊಂದನ್ನು ಕಣ್ಣಿನಿಂದ ಕಾಣಲಾರನೋ ಆವುದೊಂದರಿಂದ ಆ ಕಣ್ಣಿನ ವೃತ್ತಿಗಳನ್ನು ತಿಳಿಯಬಲ್ಲನೋ ಅದೇ ಬ್ರಹ್ಮವೆಂದು ತಿಳಿ. ಅನಾತ್ಮರೂಪನಾದ ಅಂದರೆ ಆತ್ಮನಿಂದ ಭಿನ್ನವಾದ ಆವುದೊಂದನ್ನು ಅಜ್ಞರು ತಮ್ಮಿಂದ ಭಿನ್ನವಾಗಿ ಉಪಾಸನೆಯನ್ನು ಮಾಡುತ್ತಾರೆಯೋ ಅದು ಬ್ರಹ್ಮವಲ್ಲೆಂದು ತಿಳಿ ಎಂಬುವ ಉಪನಿಷದ್ವಾಕ್ಯದಿಂದಲೂ "ಏಕೋರುದ್ರಃ ಪರಂಜ್ಯೋತಿಃ" ಎಂಬುವ ಆಗಮ ವಚನದಿಂದಲೂ ಸರ್ವಪ್ರಾಣಿಗಳಿಗೂ ಮೂಲಕಾರಣವಾಗಿರುವುದರಿಂದ ತನ್ನಿಂದಲೇ ಪ್ರಕಾಶವಾಗುವ ನೇತ್ರತೇಜಸ್ಸಿಗೆ ನಿಲುಕದ ಲಿಂಗವು ಗುರುವಿನ ಅನುಗ್ರಹದಿಂದ ಇಷ್ಟಲಿಂಗವೆನಿಸಿ ಕರಸ್ಥಲಕ್ಕೆ ಬರಲಾಗಿ ಆ ಸುದ್ದಿಯನ್ನು ವಚನದಿಂದ ಹೇಳಲಾರೆ ಹಾಗೂ ಎನ್ನಂತೆ ಇನ್ನೊಬ್ಬ ಭಕ್ತನ ಕರಸ್ಥಲಕ್ಕೆ ಆ ಲಿಂಗವು ಬರಲು ಆತನು ಅದರ ವಿವರವನ್ನು ಹೇಳಲನುವಾದರೆ ಕೇಳಲಾರೆನು. ಏಕೆಂದರೆ "ಯಚ್ಛ್ರೋತ್ರೇಣ ನ ಶೃಣೋತಿ ಯೇನಶ್ರೋತಮಿದಂಶೃತಂ" ಎಂಬುವ ಉಪನಿಷನ್ಮಂತ್ರವೂ "ಯತೋವಾಚೋನಿವರ್ತಂತೇ ಅಪ್ರಾಪ್ಯಮನಸಾಸಹ" ಎಂಬುವ ನಿಗಮಾಂತ ವಾಕ್ಯವೂ ಪರವಸ್ತುವಿನಲ್ಲಿ ಶ್ರವಣೇಂದ್ರಿಯವಾಗಲೀ ವಾಗಿಂದ್ರಿಯ ವ್ಯವಹಾರವಾಗಲೀ ಇಲ್ಲೆಂದು ಹೇಳುತ್ತಿವೆ.

"ಆಕಾಶಂ ಶರೀರಂ ಬ್ರಹ್ಮ" ಎಂದೂ, ಅಕಾಯಂ ಎಂದೂ ನಿಗಮಾಗಮಂಗಳು ಸಾರುವುದರಿಂದ ಪರವಸ್ತು ನಿರಾಕಾರ ಬಯಲಾಗಿದೆ. ಇದು ತನ್ನ ಶಕ್ತಿಯ ವಿಲಾಸದಿಂದ ಇಷ್ಟಲಿಂಗವೆಂಬ ಸಾಕಾರವಾಗಿ ಎನ್ನ ಕರಸ್ಥಲಕ್ಕೆ ಬಂದರೆ ಆ ಸುಖವನ್ನು ಹೇಳಲಾರೆನು. ಪರವಸ್ತು ಶಕ್ತಿವಿಶಿಷ್ಟವಾದುದು ಲಿಂಗಾಂಗಶಕ್ತಿ ಭಕ್ತಿವಿಶಿಷ್ಟವಾದವುಗಳು ಗುಹೇಶ್ವರನೆಂಬ ಲಿಂಗನಿರಾಕಾರ ಬಯಲು ಸಾಕಾರವಾಗಿ ಎನ್ನ ಕರಸ್ಥಲಕ್ಕೆ

ಬಂದರೆ ಎಂಬೀ ಶಬ್ದಗಳಿಂದ ಲಿಂಗವೇ ಪರಬ್ರಹ್ಮವಸ್ತುವು. ಶಕ್ತಿಸಮೇತವಾದುದೆಂದೂ ಅಂಗನೆಂಬಾತ್ಮನು ಭಕ್ತಿಸಮೇತನು ಎಂದೂ ವ್ಯಕ್ತವಾಗುತ್ತದೆ. ಲಿಂಗ ಶಬ್ದವು ಶಕ್ತಿ ವಿಶಿಷ್ಟವಾದ ಶಿವತತ್ವವನ್ನು ಬೋಧಿಸುತ್ತದೆ.

### ಸೂಕ್ಷ್ಮಾಗಮ

"ಲಿಂಗಂ ಶೈವಮಿದಂ ಸಾಕ್ಷಾತ್ ಶಿವಶಕ್ತ್ಯುಭಯಾತ್ಮಕಂ"

ಈ ಶಿವಲಿಂಗವು ಶಿವಶಕ್ತಿಗಳೆರಡರಿಂದಲೂ ಕೂಡಿರುತ್ತದೆ. ನಿರಾಕಾರವಾದ ವಸ್ತುವು ಸಾಕಾರವಾಗಿ ಎಂಬುದರಿಂದ ಶಿವಶಕ್ತಿಗಳೆರಡೂ ಅನ್ಯೋನ್ಯ ಸಮರಸ ಭಾವದಿಂದ ಇರುತ್ತವೆಂದು ತಿಳಿಯುತ್ತದೆ.

ನಿರಾಕಾರ ವಸ್ತುವು ಮಹಾಸ್ಥಲವೆಂದೂ, ಪರಸ್ಥಲವೆಂದೂ ಸಂಜ್ಞೆಯುಳ್ಳದ್ದಾಗಿದೆ.

ಪರನಿರ್ವಾಣ ನಿಷ್ಠಾನಾಂ ಯದ್ಭವೇತ್ ಪರಮಂಪದಂ ।
ತದಾಹುಃ ಸ್ಥಲಮದ್ವೈತಂ ಶಿವಜ್ಞಾನೈಕ ತತ್ಪರಾಃ ॥

ಸಂಸಾರದ ಉಪಶಮೆಯೆಂಬ ಪರನಿರ್ವಾಣದಲ್ಲಿ ನಿಷ್ಠೆಯುಳ್ಳವರು ಆವುದಾನೊಂದು ಸ್ಥಾನವನ್ನು ತಮ್ಮ ಅಂತಿಮ ಪದವೆಂದು ನೆನೆವರೋ ಅದಕ್ಕೆ ಶಿವಜ್ಞಾನ ನಿಷ್ಠರಾದ ಯೋಗಿಗಳು ದ್ವೈತರಹಿತವಾದ ಸ್ಥಲವೆನ್ನುವರು. ಇಂತಪ್ಪ ಶಿವತತ್ವದಲ್ಲಿ ತನ್ನ ಸ್ವರೂಪದ ಎಚ್ಚರವೆಂಬ ಶಕ್ತಿಯುಂಟು ಆ ಶಕ್ತಿ ಇರುವುದರಿಂದಲೇ ಶಿವನು ಸ್ವತಃ ಸಿದ್ಧನೆನಿಸುವನು.

ಮೇಲೆ ಬರೆದ ವಿಸ್ತಾರವಾದ ವಿವೇಚನೆಯಿಂದ ಶಕ್ತಿಯುಕ್ತನಾದ ಶಿವನೇ ಪರಬ್ರಹ್ಮ. ಆತನೇ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಮೂಲಪುರುಷನೆಂದು ಸಿದ್ಧಾಂತವು.

ಸ್ಥಲವೆಂದರೆ ಏನು?—ವೀರಶೈವ ಸಿದ್ಧಾಂತದಲ್ಲಿ ಸ್ಥಲ ಶಬ್ದದ ಮಹತ್ವವು ಅಧಿಕವಾದದ್ದಾಗಿರುತ್ತದೆ. ಶಿವನೇ ಪರಬ್ರಹ್ಮ ಅವನಂತೆ ಇನ್ನೊಂದು ವಸ್ತುವು ಇರುವುದಿಲ್ಲ. ಇದಕ್ಕೆ ಉಪನಿಷತ್ತುಗಳಲ್ಲಿ "ಏಕಮೇವಾದ್ವಿತೀಯಂ ಬ್ರಹ್ಮ"ವೆಂದು ಹೇಳುತ್ತಾರೆ. ಈ ವಸ್ತುವು ಸಚ್ಚಿದಾನಂದ ಲಕ್ಷಣಗಳಿಂದ ಕೂಡಿದ್ದಾಗಿರುತ್ತದೆ ಮತ್ತು ಜಗತ್ತಿನ ಸೃಷ್ಟಿ ಸ್ಥಿತಿ ಲಯಾದಿಗಳಿಗೆ ಕಾರಣವಾದದ್ದಾಗಿರುತ್ತದೆ. ಇಂತಹ ಪರಶಿವ ತತ್ವಕ್ಕೆ ವೀರಶೈವ ಶಾಸ್ತ್ರಕಾರರು ಸ್ಥಲವೆನ್ನುತ್ತಾರೆ. ಅಂದರೆ ಶಿವನೇ ಸ್ಥಲ ಸ್ಥಲವೇ ಶಿವನು.

"ಸ್ಥೀಯತೇ ಲೀಯತೇ ಯತ್ರ ವಿಶ್ವಮಿತಿ ಸ್ಥಲಂ"

ಎಂಬುವ ವ್ಯುತ್ಪತ್ತಿಯಿಂದ ಯಾವ ಅರ್ಥವು ಹೊರಡುತ್ತದೆಯೋ "ಶೇತೇಜಗದಸ್ಮಿನ್ನಿತಿ ಶಿವಃ" ಎಂಬುವುದರಿಂದಲೂ ಅದೇ ಅರ್ಥವು ಹೊರಡುತ್ತದೆ. ಏಕೆಂದರೆ ಪರಶಿವನು ಜಗತ್ತಿನ ಹುಟ್ಟು ಸಾವುಗಳಿಗೆ ಕಾರಣನೆಂಬುವುದಕ್ಕೆ

"ಯತೋವಾ ಇಮಾನಿ ಭೂತಾನಿ ಜಾಯಂತೇ ಏನ ಜಾತಾನಿ ಜೀವಂತಿ
ಯತ್ಪ್ರತ್ಯಯಂತ್ಯಭಿಸಂವಿಶಂತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ"

ಎಂಬುವ ತೈತ್ತಿರೀಯೋಪನಿಷತ್ತಿನಲ್ಲಿಯೂ ಮತ್ತು ಶಿವಾಗಮಗಳಲ್ಲಿಯೂ ಕೂಡ ಸ್ಥಲ ಶಬ್ದಕ್ಕೆ

ಸಿಕಯೇವ ಪರಂಬ್ರಹ್ಮ । ಸಚ್ಚಿದಾನಂದ ಲಕ್ಷಣಂ ।
ಶಿವತತ್ವಂ ಶಿವಾಚಾರ್ಯಾಃ । ಸ್ಥಲಮಿತ್ಯಾಹುರಾದರಾತ್ ॥
ಸ್ಥಕಾರಃ ಸ್ಥಾನವಾಚೀಸ್ಯಾ । ಲ್ಲಕಾರೋ ಲಯವಾಚಕಃ ।
ತಯೋಃ ಕಾರಣಭೂತಂ । ಯತ್ತತ್ತದೇವ ಸ್ಥಲಮುಚ್ಯತೇ ॥

ಇತ್ಯಾದಿ ಅನಂತ ಶಿವಾಗಮಗಳ ವಾಕ್ಯಗಳು ಸ್ಥಲಶಬ್ದದ ನಿರ್ವಚನವನ್ನು ಮಾಡಿರುತ್ತವೆ. ಹೀಗೆ ಶಿವನು ಸಚ್ಚಿದಾನಂದ ಸ್ವರೂಪನಾಗಿರುವುದರಿಂದ

"ತಸ್ಮಾಲ್ಲಿಂಗಂ ಪರಂ ಬ್ರಹ್ಮ ಸಚ್ಚಿದಾನಂದ ಲಕ್ಷಣಂ"
ಮತ್ತು—"ತಸ್ಮಾಲ್ಲಿಂಗಂ ಪರಂ ಬ್ರಹ್ಮ ಧ್ಯಾಯಂತಿ ಮುನಿಪುಂಗವಾಃ"

ಮೊದಲಾದ ವಾಕ್ಯಗಳು ಅದೇ ಅರ್ಥವನ್ನು ಬೋಧಿಸುತ್ತವೆ.

ಶಿವನೇ ಜಗತ್ತಿಗೆ ಕಾರಣನು. ಅವನಿಗೆ ಬೇರೆ ಯಾರೂ ಕಾರಣವಿಲ್ಲದ್ದರಿಂದ ಸದ್ರೂಪನಾಗುವನು. ತಾನು ಎಲ್ಲ ಜಗತ್ತಿನ ವಿಕಾಸಕ್ಕೆ ಕಾರಣನಾಗಿ (ಜನಕನಾಗಿ) ತನ್ನ ವಿಕಾಸಕ್ಕೆ ಅನ್ಯರನ್ನು ಅಥವಾ ಬೇರೆ ಪ್ರಮಾಣವನ್ನು ಅಪೇಕ್ಷೆಮಾಡದಿರುವುದರಿಂದ ಚಿದ್ರೂಪನಾಗಿರುವನು. ಪ್ರಪಂಚವೆಲ್ಲ ಅನುಭವಿಸುವ ಆನಂದಕ್ಕೆ ಕಾರಣನಾಗಿರುವುದರಿಂದ ಆನಂದಸ್ವರೂಪನಾಗಿರುವನು. ಶಿವನಿಗೆ ವಿಮರ್ಶಾ ಶಕ್ತಿಯು ಇರುವುದರಿಂದ ಸತ್ ಚಿತ್ ಆನಂದಗಳ ಅನುಭವವು ಅವನಿಗೆ ಆಗುವುದು. ಈ ವಿಮರ್ಶಾ ಶಕ್ತಿಯು ಆತನಿಗಿಲ್ಲದಿದ್ದರೆ ಘಟಾದಿಗಳಂತೆ ಅಚೇತನನಾಗುವನು. ಚೈತನ್ಯದಿಂದ ಕೂಡಿದ ಪರಮಾತ್ಮನು ತನ್ನ ವಿಮರ್ಶಾತ್ಮಕ ಶಕ್ತಿಯಿಂದಲೇ ಜಗತ್ತನ್ನು ಸೃಷ್ಟಿ ಮಾಡುವನು.

**ಶಿವಾದ್ವೈತಮಂಜರಿ**

ಸನ್ ಹೃದಯಪ್ರಕಾಶೋಭವನಸ್ಯಕ್ರಿಯಾ
ಯಾ ಭವತಿ ಕರ್ತಾಸ್ಯೈವಕ್ರಿಯಾ ವಿಮರ್ಶಃ ।
ಸ್ವಸ್ಥಾಕ್ಷುಭಿತಾ ಚ ವಿಶ್ವ ವಿಸ್ತಾರಾ ॥

ಇದರಿಂದ–ಮೇಲೆ ಬರೆದ ಸ್ಥಲಶಬ್ದದ ವ್ಯಾಖ್ಯಾನಕ್ಕೆ ಪುಷ್ಟಿಯು ದೊರೆಯುತ್ತದೆ. ವೀರಶೈವ ಸಿದ್ಧಾಂತವು ಶಿವನು ಜಗತ್ತಿಗೆ ಅಭಿನ್ನ ನಿಮಿತ್ತೋಪಕಾರಣನೆಂದು ಹೇಳಿದರೆ ಉಭಯ ಕಾರಣಗಳು ಒಂದೇ ವಸ್ತುವಿಗೆ ವಿರುದ್ಧವಾದವುಗಳೆಂಬ ಪ್ರಶ್ನೆಯು ಇಲ್ಲಿ ಉದ್ಭವಿಸುವುದಿಲ್ಲ. ಅಘಟಿತ ಘಟನಾ ಸಮರ್ಥನಾದ ಶಿವನಿಗೆ ಉಭಯ ಕಾರಣತ್ವವು ವಿರೋಧವಾದುದಲ್ಲವು. ಆದ್ದರಿಂದ ಶಿವನಿಗೆ "ಯತೋವಾ ಇಮಾನಿ ಭೂತಾನಿ ಜಾತಾನಿ" ಎಂಬುವ ಶೃತಿವಾಕ್ಯದಿಂದ ಎರಡೂ ಕಾರಣಗಳು ಸಿದ್ಧವಾಗುತ್ತವೆ.

ಈ ಸ್ಥಲದಲ್ಲಿ ಲಿಂಗಸ್ಥಲವೆಂತಲೂ, ಅಂಗಸ್ಥಲವೆಂತಲೂ ಎರಡು ಪ್ರಕಾರವಾಗಿರುವುದು. ಈ ಪ್ರಕರಣದಲ್ಲಿ ಮುಖ್ಯವಾಗಿ ಭಕ್ತಾದಿ ಷಟ್‌ಸ್ಥಲಗಳನ್ನು ಮಾತ್ರ ವಿಶದವಾಗಿ ವಿವೇಚಿಸಬೇಕಾಗಿರುತ್ತದೆ. ಸಂದರ್ಭೋಚಿತವಾಗಿ ಈ ಸ್ಥಲಗಳ ಅಂಗಾಂಗಿ ಭಾವ ಭೇದಗಳನ್ನು ತಿಳಿದುಕೊಂಡರೆ ಸ್ಥಲಗಳ ಮರ್ಮವು ವಿದಿತವಾಗುವುದರಿಂದ ಇಲ್ಲಿ ಅವುಗಳನ್ನೆಲ್ಲ ಹೇಳಬೇಕಾಗಿರುತ್ತದೆ.

ಶ್ರೀ ಮೊಗ್ಗೆಯ ಮಾಯಿದೇವರು ತಮ್ಮ ಅನುಭವ ಸೂತ್ರದಲ್ಲಿ—

ಸ್ವಶಕ್ತಿಃ ಕ್ಷೋಭಮಾತ್ರೇಣ । ಸ್ಥಲಂ ತದ್ವಿಧಂ ಭವೇತ್ ।
ಏಕಂ ಲಿಂಗಸ್ಥಲಂ ಪ್ರೋಕ್ತ । ಮನ್ಯಮಂಗಸ್ಥಲಂ ಸ್ಮೃತಂ ॥
ಲಿಂಗಾಂಗೋಪಾಧಿ ಭೇದೇನ । ದ್ವಿಧಾಭಿನ್ನಂ ಪರಸ್ಪರಂ ।
ಮಹಾನ್ ಘಟಪ್ರಭೇದೇನ । ಯಥಾಕಾಶಃ ಪ್ರತೀಯತೇ ॥
ಪ್ರತೀಯತೇ ತಥಾಚೈವ । ಸ್ಥಲಂ ಲಿಂಗಾಂಗಭೇದತಃ ।

ಶಿವಸಮೇತವಾದ ವಿಮರ್ಶಾ ಶಕ್ತಿಯ ಕ್ಷೋಭೆಯೇ ಎರಡು ಪ್ರಕಾರದ ಸ್ಥಲವಾಯಿತು. ಒಂದು ಲಿಂಗಸ್ಥಲವೆಂಬುವುದಾಗಿಯೂ, ಮತ್ತೊಂದು ಅಂಗಸ್ಥಲವೆಂಬುವುದಾಗಿಯೂ, ಆಕಾಶವು ಬೇರೆಬೇರೆ ಉಪಾಧಿಗಳ ಭೇದದಿಂದ ಘಟಾಕಾಶ, ಮಹಾಕಾಶವೆಂಬುವ ಭೇದವು ತೋರುವಂತೆ ಲಿಂಗಾಂಗಗಳ ಭೇದದಿಂದ ಎರಡು ಪ್ರಕಾರವಾಗಿರುವುದು. ಇವೆರಡು ಉಪಾಸ್ಯ–ಉಪಾಸಕ ಭೇದದಿಂದಾಗಿರುವುದು. ಲಿಂಗಸ್ಥಲವು ಉಪಾಸ್ಯಕ ವಾಗಿಯೂ, ಅಂಗಸ್ಥಲವು ಉಪಾಸಕವಾಗಿಯೂ ಇರುವುದು. ಹೀಗಿದ್ದರೂ ಉಪಾಸ್ಯ ಉಪಾಸಕ ಪರಶಿವನೇ ಆಗಿರುತ್ತಾನೆ. ಈ ಉಪಾಸ್ಯ–ಉಪಾಸಕ ಭೇದವು ಅವಿನಾಶಿ ಯಾದ ಆತ್ಮನ ಭೇದದಿಂದಲೂ ಮತ್ತು ಸಹಜವಾದ ಲೀಲೆಯಿಂದಲೂ ಉತ್ಪನ್ನವಾಗಿರು ತ್ತದೆ. ಈ ಪೂರ್ವೋಕ್ತ ಭೇದವು ಆತ್ಮಶಕ್ತಿಯಿಂದಲೂ, ಏಕಾಏಕಿ ಕ್ರಮದಿಂದಲೂ ಪ್ರಾಪ್ತವಾಗಿರುತ್ತದೆ.

ಶಿವನಾಗಿಯೇ ಶಿವನನ್ನು ಪೂಜಿಸಬೇಕು "ನಾರುದ್ರಂ ರುದ್ರಮರ್ಚಯೇತ್" ರುದ್ರನಾಗಿಯೇ ರುದ್ರನನ್ನು ಪೂಜಿಸಬೇಕು ಅಥವಾ

"ನಾಶಿವಸ್ಯ ಶಿವೋಪಾಸ್ತಿ ಘಟತೇ ಜನ್ಮಕೋಟಿಭಿಃ"

ಹೀಗೆ ಶಿವನಾಗಿ ಶಿವನನ್ನು ಪೂಜಿಸಬೇಕೆಂಬುವ ಬಗ್ಗೆ ಬೇಕಾದಷ್ಟು ಪ್ರಮಾಣಗಳು ಸಿಗುತ್ತವೆ. ಸಚ್ಚಿದಾನಂದ ಸ್ವರೂಪನಾದ ಶಿವನೇ ಸ್ಥಲವೆಂದಮೇಲೆ ಸ್ಥಲವಾದರೂ ಸಚ್ಚಿದಾನಂದ ಸ್ವರೂಪವಾದುದೆಂದು ಹೇಳಬೇಕಾಗುತ್ತದೆ. ಈ ಸ್ಥಲವೇ ಲಿಂಗಾಂಗಗಳ ಭೇದವಾದಂತೆ ಶಿವಜೀವರ ಭೇದದಿಂದಲೂ ಕೂಡಿ ನಾಲ್ಕು ಪ್ರಕಾರವಾಗಿರುವುದು.

ಶಿವನೇ ಲಿಂಗಸ್ಥಲವು ಜೀವನೇ ಅಂಗಸ್ಥಲವು. ಸ್ಥಲವು ಎರಡು ಪ್ರಕಾರವಾದಂತೆ ಶಕ್ತಿಯೂ ಎರಡು ಪ್ರಕಾರವಾಗಿರುವುದು. ಅಪ್ರತಿಮವಾದ ಶಕ್ತಿಯು ಶಿವನ ಸಾಕ್ಷಾತ್ ಅರ್ಧಾಂಗಿನಿಯು ಇದ್ದು ಎಲ್ಲಾ ಕರ್ಮಗಳಿಗೆ ಸಾಕ್ಷೀಭೂತವಾಗಿಯೂ, ಸತ್ಯಪೂರ್ಣ ಮತ್ತು ನಿರ್ವಿಕಲ್ಪಕ ಮಹೇಶ್ವರಿಯೂ ಆಗಿರುತ್ತಾಳೆ. ಭಕ್ತರ ಮೇಲೆ ದಯೆಯನ್ನು ತೋರಿಸತಕ್ಕ ಆ ಶಕ್ತಿಯು ಶಿವನ ಅರ್ಧಾಂಗಿನಿಯಾದ ಕಾರಣ ತನ್ನ ಸ್ವಾತಂತ್ರ್ಯ ದಿಂದಲೇ ಎರಡು ಪ್ರಕಾರವಾಯಿತು. ಒಂದು ಶಕ್ತಿಯು ಲಿಂಗಸ್ಥಲವನ್ನೂ, ಇನ್ನೊಂದು ಶಕ್ತಿಯು ಅಂಗಸ್ಥಲವನ್ನೂ ಆಶ್ರಯಮಾಡಿತು. ಲಿಂಗಸ್ಥಲವನ್ನು ಆಶ್ರಯಮಾಡಿದ ಶಕ್ತಿಗೆ ಕಲೆಯೆಂತಲೂ, ಅಂಗಸ್ಥಲವನ್ನು ಆಶ್ರಯಮಾಡಿದ ಶಕ್ತಿಗೆ ಸಂಸಾರನಾಶಕವಾದ ಭಕ್ತಿಯೆಂತಲೂ ಹೇಳುತ್ತಾರೆ.

ಹೇಗೆ ಬೆಂಕಿಯ ಜ್ವಾಲೆಯು ಸ್ವಾಭಾವಿಕವಾಗಿ ಒಂದೇ ಇದ್ದು ದೀಪದ ಆಕಾರ ದಿಂದ ಭಿನ್ನವಾಗಿರುತ್ತದೆಯೋ ಹಾಗೆಯೇ ಈಶ್ವರೀ ಶಕ್ತಿಯು ಒಂದೇ ಇದ್ದು ಭಕ್ತಿಯ ರೂಪದಿಂದ ಭಿನ್ನಭಿನ್ನವಾಗಿ ಕಾಣುತ್ತದೆ. ಶಕ್ತಿಯು ವಾಸನೆಯಿಂದ ಕೂಡಿರುವುದು.

ಭಕ್ತಿಯು ವಾಸನಾರಹಿತವಾಗಿರುವುದು. ಇದರಿಂದ ಭಕ್ತಿಯು ಶಕ್ತಿಗಿಂತಲೂ ಮಹತ್ತರ ವಾದುದು ಮತ್ತು ಶುದ್ಧವೂ, ಮನೋಹರವೂ, ಉತ್ತಮವೂ, ಸೂಕ್ಷ್ಮವೂ ಆಗಿರುತ್ತದೆ. ಭಕ್ತಿಯು ಸಚ್ಚಿದಾನಂದ ಸ್ವರೂಪವಾಗಿರುವ ಕಾರಣ ಜೀವನಿಗೆ ಸುಖಕರವಾದ ಮುಕ್ತಿಯನ್ನು ಕೊಡತಕ್ಕದ್ದಾಗಿರುತ್ತದೆ.

ನಿಜವಾಗಿ ನೋಡಿದರೆ ಶಕ್ತಿ ಮತ್ತು ಭಕ್ತಿಗಳಲ್ಲಿ ಭೇದವೇ ಇರುವುದಿಲ್ಲ, ಫಲಗಳಲ್ಲಿ ವೈಷಮ್ಯವಿರುತ್ತದೆ. ಶಕ್ತಿಯು ಪ್ರವೃತ್ತಿ ಮಾರ್ಗವನ್ನೂ, ಭಕ್ತಿಯು ನಿವೃತ್ತಿ ಮಾರ್ಗ ವನ್ನೂ ಉಂಟುಮಾಡತಕ್ಕವುಗಳಾಗಿರುತ್ತವೆ. ಶಕ್ತಿಯಿಂದ ಪ್ರಪಂಚದ ಉತ್ಪತ್ತಿಯೂ, ಭಕ್ತಿಯಿಂದ ಪ್ರಪಂಚದ ಲಯವೂ ಆಗುತ್ತದೆ. ಶಕ್ತಿಯ ವೈಚಿತ್ರ್ಯದಿಂದ ರೂಪರಹಿತ ವಸ್ತುವಿಗೂ ಕೂಡ ರೂಪದ ಪ್ರಾಪ್ತಿಯಾಗುತ್ತದೆ. ಭಕ್ತಿಯ ವೈಚಿತ್ರ್ಯದಿಂದ ರೂಪವು ನಿರೂಪವನ್ನು ಹೊಂದುತ್ತದೆ. ಜಗತ್ತನ್ನು ಬೆಳೆಯಿಸತಕ್ಕ ಗುಣವು ಶಕ್ತಿಯಲ್ಲಿ ಸ್ವಾಭಾವಿಕವಾಗಿರುತ್ತದೆ. ಪ್ರಪಂಚವನ್ನು ಲಯಮಾಡತಕ್ಕ ಸ್ವಾಭಾವಿಕ ಗುಣವು ಭಕ್ತಿಯಲ್ಲಿರುತ್ತದೆ. ಶಕ್ತಿಯು ಅಧೋಮುಖವಾಗಿಯೂ, ಭಕ್ತಿಯು ಊರ್ಧ್ವಮುಖವಾಗಿಯೂ ಇರುತ್ತದೆ. ಮಾಯೆಯಿಂದ ಕೂಡಿರುವುದೇ ಶಕ್ತಿ, ಮಾಯಾರಹಿತವೇ ಭಕ್ತಿ. ಹೀಗೆಯೇ ತರ್ಕರೀತಿಯಿಂದ ವಿಚಾರಮಾಡಿದರೆ ಶಕ್ತಿಗಿಂತಲೂ ಭಕ್ತಿಯು ಗುಣದಲ್ಲಿ ಅಧಿಕ ವಾದುದಾಗಿರುತ್ತದೆ. ಶಕ್ತಿಯು ಉಪಾಸ್ಯವಾಗಿಯೂ, ಭಕ್ತಿಯು ಉಪಾಸಕ ವಾಗಿಯೂ ಇರುತ್ತವೆ. ಆದ್ದರಿಂದ ಲಿಂಗಸ್ಥಲದಲ್ಲಿ ಶಕ್ತಿಯೂ, ಅಂಗಸ್ಥಲದಲ್ಲಿ ಭಕ್ತಿಯೂ ಇರತಕ್ಕಂಥವುಗಳಾಗಿರುತ್ತವೆ. ಲಿಂಗಸ್ಥಲವು ಸಾಕ್ಷಾತ್ ಶಿವನಾಗಿಯೂ, ಅಂಗಸ್ಥಲವು ಜೀವನಾಗಿಯೂ ಇರುವುದರಿಂದ ಲಿಂಗಾಂಗ ಸ್ಥಲಗಳ ಐಕ್ಯವೇ ಶಿವಜೀವ ರೈಕ್ಯವು.

ಲಿಂಗ ಶಿವವಾಚಕವಾಗಿರುತ್ತದೆ, ಇಲ್ಲಿ ಚಿಹ್ನಾದಿಗಳ ಅರ್ಥವಿಲ್ಲ. ಸರ್ವಸ್ಥಾವರ ಜಂಗಮಾತ್ಮಕಗಳಾದ ಪ್ರಾಣಿಗಳ ಸೃಷ್ಟಿಯೂ ಲಯವೂ ಆಗಿ ಪುನಃ ಯಾವದರಲ್ಲಿ ಸೃಷ್ಟಿಯಾಗುತ್ತದೆಯೋ ಆ ಪರಶಿವತತ್ವಕೆ, ಲಿಂಗತತ್ವ ವಿಜ್ಞಾನಿಗಳು ಲಿಂಗವೆಂದು ಹೇಳುತ್ತಾರೆ. ಈ ವಿಷಯವು ಲಿಂಗನಿಷ್ಠೆ ಎಂಬುವ ಪ್ರಕರಣದಲ್ಲಿ ವಿಶದವಾಗಿ ಚರ್ಚಿಸಿ ಬರೆಯಲ್ಪಟ್ಟಿರುತ್ತದೆ. ಎಲ್ಲ ಪ್ರಾಣಿಗಳ ಲಯ ಗತಿಗಳಿಗೆ ಶಿವನೇ ಕಾರಣನಾಗಿರುವುದರಿಂದ ಅದಕ್ಕೆ ಲಿಂಗವೆಂದು ಹೇಳುತ್ತಾರೆ. ಶಿವನು ಕಲಾಯುಕ್ತನಾಗಿಯೂ, ಕಲಾರಹಿತನಾಗಿಯೂ ಇರುವನು.

ಲಿಂಗಸ್ಥಲವು ಮೂರು ಪ್ರಕಾರವಾಗಿರುವುದು :

ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ— ಇವುಗಳಲ್ಲಿ ಭಾವಲಿಂಗವು ಕಲಾ ರಹಿತವಾಗಿ ಭಾವದಿಂದ ಗೋಚರವಾಗತಕ್ಕದ್ದೂ, ಎಲ್ಲವುಗಳಿಗಿಂತಲೂ ಶ್ರೇಷ್ಠವಾದುದೂ, ಸನ್ಮಾತ್ರವಾದುದೂ ಆಗಿರುತ ದೆ. ಸನ್ಮಾತ್ರ ಅಂದರೆ ದೇಶ, ಕಾಲ, ಭೇದದಿಂದ ಅಬಾಧಿತವಾಗಿರುವುದು ಎಂದು ಜ್ಞಾನಿಗಳ ತಿಳುವಳಿಕೆ. ಪ್ರಾಣಲಿಂಗವು ಮನೋ ಗ್ರಾಹ್ಯವಾಗಿ ಸಕಲ ನಿಷ್ಕಲವಾಗುವುದು. ಪ್ರಾಣ ಮತ್ತು ಮನ ಇವುಗಳ ಮಧ್ಯದಲ್ಲಿ ಇರುತ್ತದೆಂದು ಶೃತಿಯು ಸಾರುತ್ತಿದೆ. ಇಷ್ಟಲಿಂಗವು ಕಲಾಯುಕ್ತವಿದ್ದು ಚಕ್ಷುರಿಂದ್ರಿಯ ದಿಂದ ಗ್ರಹಣಮಾಡಲು ಯೋಗ್ಯವಾಗಿರುತ್ತದೆ. ಇಷ್ಟಲಿಂಗವು ಭಕ್ತರ ದುಃಖವನ್ನು ನಿವಾರಣೆಮಾಡಿ ಇಚ್ಛಿತ ಫಲವನ್ನು ಕೊಡುತ್ತದೆ.

ಇಷ್ಟಿಃ ಪೂಜಾತಯಾನಿತ್ಯಂ ಇಷ್ಟಂ ಪೂಜಿತಮಾದರಾತ್ ।
ಇಷ್ಟಲಿಂಗಮಿತಿಪ್ರೋಕ್ತಂ ಆಚಾರ್ಯೈಃ ಲಿಂಗಪೂಜಕೈಃ ॥

ತನ್ನ ಭಕ್ತನಿಗೆ ವಿಶೇಷವಾಗಿ ಇಚ್ಛಿತ ಫಲವನ್ನು ಕೊಡತಕ್ಕದ್ದಾಗಿರುತ್ತದೆ. ಇವುಗಳಲ್ಲಿ ಭಾವಲಿಂಗವು ಸದ್ರೂಪವಾಗಿಯೂ, ಪ್ರಾಣಲಿಂಗವು ಚಿದ್ರೂಪವಾಗಿಯೂ, ಇಷ್ಟ ಲಿಂಗವು ಆನಂದಮಯವೂ ಆಗಿರುತ್ತದೆ.

"ತತ್ವಮಸಿ" ಈ ವಾಕ್ಯದಲ್ಲಿ ತತ್, ತ್ವಂ, ಅಸಿ ಹೀಗೆ ಮೂರು ಪದಗಳಿವೆ. ಇವುಗಳಲ್ಲಿ ಅಸಿ ಪದದ ಅರ್ಥವು ಭಾವಲಿಂಗವು. ತ್ವಂ ಪದದ ಅರ್ಥವು ಪ್ರಾಣಲಿಂಗವು. ತತ್ ಪದದ ಅರ್ಥವು ಇಷ್ಟಲಿಂಗವಾಗಿರುವುದು. ಭಾವಲಿಂಗವು ಕಾರಣತತ್ವವುಳ್ಳದ್ದು ಪ್ರಾಣಲಿಂಗವು ಸೂಕ್ಷ್ಮತತ್ವವಿದೆ. ಇಷ್ಟಲಿಂಗವು ಸ್ಥೂಲ ತತ್ವವಿದೆ. ಹೀಗೆ ಮೂರು ಲಿಂಗಗಳ ಸ್ವರೂಪವಿರುತ್ತದೆ.

ಇಷ್ಟಲಿಂಗವು ದೇಹಲಿಂಗವಾಗಿಯೂ, ಪ್ರಾಣಲಿಂಗವು ಪ್ರಾಣದ್ದಾಗಿಯೂ, ಭಾವಲಿಂಗವು ಆತ್ಮನದಾಗಿಯೂ ಇರುತ್ತದೆ. ಇಷ್ಟಲಿಂಗವು ಕ್ರಿಯಾರೂಪವಾಗಿಯೂ, ಪ್ರಾಣಲಿಂಗವು ಮಂತ್ರರೂಪವಾಗಿಯೂ, ಭಾವಲಿಂಗವು ಪ್ರಯೋಗರೂಪವಾಗಿಯೂ ಇರುತ್ತವೆ. ಹೀಗೆಯೇ ಈ ಲಿಂಗತ್ರಯಗಳು ನಾದ, ಬಿಂದು, ಕಲಾ ಉಪಾಧಿಗಳಿಂದ ಕೂಡಿರುತ್ತವೆ. ಈ ಮೂರು ಲಿಂಗಗಳು ಎರಡೆರಡು ಪ್ರಕಾರವಾಗಿರುತ್ತವೆ.

ಭಾವಲಿಂಗದಲ್ಲಿ ಮಹಾಲಿಂಗ, ಪ್ರಸಾದಲಿಂಗವೆಂದು ಎರಡು ಪ್ರಕಾರವಾಗಿಯೂ, ಪ್ರಾಣಲಿಂಗವು ಚರಲಿಂಗ, ಶಿವಲಿಂಗವೆಂದೂ, ಇಷ್ಟಲಿಂಗವು ಗುರುಲಿಂಗ, ಆಚಾರ ಲಿಂಗವೆಂದು ದ್ವಿಪ್ರಕಾರವಾಗಿರುತ್ತದೆ.

ಶಕ್ತಿಯಾದರೂ ಈ ಆರು ಲಿಂಗಗಳಲ್ಲಿ ಆರು ಪ್ರಕಾರವಾಗಿರುವುದು. ಮಹಾ ಲಿಂಗಕ್ಕೆ ಚಿಚ್ಛಕ್ತಿ, ಪ್ರಸಾದಲಿಂಗಕ್ಕೆ ಪರಾಶಕ್ತಿ, ಜಂಗಮಲಿಂಗಕ್ಕೆ ಆದಿಶಕ್ತಿ, ಶಿವಲಿಂಗಕ್ಕೆ ಇಚ್ಛಾಶಕ್ತಿ, ಗುರುಲಿಂಗಕ್ಕೆ ಜ್ಞಾನಶಕ್ತಿ, ಆಚಾರಲಿಂಗಕ್ಕೆ ಕ್ರಿಯಾಶಕ್ತಿ ಅಂದರೆ ಶಕ್ತಿಯು ಚಿಚ್ಛಕ್ತಿ, ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಹೀಗೆ ಆರು ಪ್ರಕಾರವಾಗಿರುವುದು.

ಪ್ರಸಾದಲಿಂಗಲಕ್ಷಣ—

"ಅಖಂಡಪರಿಪೂರ್ಣ ಶ್ರೀಗುರುಲಿಂಗಜಂಗಮದ ಬಳಿವಿಡಿದ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ ಸ್ಥಲವ ಸದ್ಗುರುಕೃಪೆಯಿಂದರಿದು ಆದ್ಯರ ವಚನ ಮೊದಲಾದ ಶಿವಶಾಸ್ತ್ರದನುಭಾವವ ಬೆಸಗೊಂಡು ಮಿಶ್ರಾಮಿಶ್ರಂಗಳರ್ಪಿತಾವಧಾನ ಮೂವತ್ತೆರಡು ಉದ್ಧರಣೆಗಳಿಂದ ಆಚರಿಸುವ ಶಿವಶರಣಂಗಳ ವಿಶುದ್ಧಿ ಸಂಬಂಧವಾದ ಷೋಡಶ ದಳಯುಕ್ತವಾದ ಸುಜ್ಞಾನಪದ್ಮದಲ್ಲಿ ಮೂರ್ತಿಗೊಂಡಿರುವಾತನೆಂಬುದೀಗ ಪ್ರಸಾದಲಿಂಗ ವೆಂಬ ಶಬ್ದಕ್ಕೆ ಅರ್ಥವಾಗುತ್ತದೆ."

ಮಹಾಲಿಂಗದ ವಿವರ—

ಅನಾದಿ ಪ್ರಮಥ ಗಣರಾದ್ಯರ ಬಳಿವಿಡಿದು ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣಸ್ಥಲವ ಚಿದ್ಘನ ಗುರುಕೃಪೆಯಿಂದ ಆರು ಇಂತೀ ಮೊದಲಾದ ಚಿದ್ಘನ ಪ್ರಕಾಶಂಗಳ ಬೆಸಗೊಂಡು ಆ ಪ್ರಕಾಶದಲ್ಲಿ ಪರಿಪೂರ್ಣಾನಂದ ನಿಜೈಕ್ಯಗಣಂಗಳ

ಆಜ್ಞಾಸಂಬಂಧವಾದ ದ್ವಿದಳಯುಕ್ತವಾದ ಸದ್ಭಾವಪದ್ಮದಲ್ಲಿ ಮೂರ್ತಗೊಂಡಿರುವಾತನೆಂಬುದೀಗ ಮಹಾಲಿಂಗವೆಂಬ ಶಬ್ದಕ್ಕರ್ಥವು.

ಅಂಗಸ್ಥಲದ ನಿರೂಪಣೆಯು—

ಜನನ ಮರಣರಹಿತವೂ, ಪರಕ್ಕಿಂತ ಪರವಾದುದೂ ಆದ ಮಹಾಲಿಂಗವನ್ನು ಮಹಾ ಭಕ್ತಿಯಿಂದ ಯಾವ ವಸ್ತುವು ಸೇರುತ್ತಿರುವುದೋ ಅಥವಾ ಅದರಲ್ಲಿ ಐಕ್ಯವಾಗುವುದೋ ಅದೇ ಅಂಗಸ್ಥಲವು. ಅಕಾರವು ಪರಬ್ರಹ್ಮವಾಚಕವಾದುದು ಗಕಾರವು ಗಮನ ವಾಚಕವಾಗಿರುತ್ತದೆ. ಆ ಸ್ಥಲದಲ್ಲಿ ಆಸಕ್ತವಾಗಿರುವ ಜೀವನಿಗೆ ಅಂಗಸ್ಥಲವೆಂದು ಹೆಸರು. ಅಂವೆಂದರೆ ಸದ್ರೂಪ ಬ್ರಹ್ಮಪರವೂ ಗಂವೆಂಬುದು ಗಚ್ಛತಿ ಅಂದರೆ ಹೋಗುತ್ತದೆ ಎಂಬುವ ಅರ್ಥ ಪ್ರತಿಪಾದಕವಾಗಿರುತ್ತದೆ. ಈ ಎರಡರಿಂದಲೇ ಅಂಗ ಎಂಬುದು ರೂಪಿಸಲ್ಪಟ್ಟಿರುತ್ತದೆ. ಅಂದರೆ ಸದ್ರೂಪವಾದ ಪರಬ್ರಹ್ಮವನ್ನು ಹೊಂದಿ ಸಾಮರಸ್ಯ ರೂಪದಿಂದ ಇರುವುದೆಂದು ಹೇಳಿಸಿಕೊಳ್ಳುವುದು.

ಬಂಗಾರದಿಂದ ಮಾಡಿದ ಆಭರಣವು ಬಂಗಾರವೇ ಆಗುವಂತೆ ಅಂಗನಾದರೂ ಕೆಲವು ಕಾಲ ಭೇದದಿಂದಿದ್ದು ಬಳಿಕ ಲಿಂಗವನ್ನು ಕೂಡಿ ಲಿಂಗವೇ ತಾನಾಗುವನು. ಆ ಅಂಗಸ್ಥಲವು ಮೂರು ಪ್ರಕಾರವಾಗಿರುವುದು — ಯೋಗಾಂಗ, ಭೋಗಾಂಗ, ತ್ಯಾಗಾಂಗ.

ಶಿವಯೋಗದೊಳಿರತಕ್ಕ ಸುಖಪ್ರಾಪ್ತಿಯು ಯಾವುದರಿಂದ ಉಂಟಾಗುತ್ತದೆಯೋ ಅದಕ್ಕೆ ಯೋಗಾಂಗವೆಂತಲೂ, ಶಿವನೊಡನೆ ಭೋಗವನ್ನು ಅನುಭವಿಸುವುದಕ್ಕೆ ಭೋಗಾಂಗವೆಂತಲೂ, ಸಂಸಾರದ ಭ್ರಾಂತಿಯು ಯಾವುದರಿಂದ ತ್ಯಾಜ್ಯವಾಗುವುದೋ ಅದಕ್ಕೆ ತ್ಯಾಗಾಂಗವೆಂತಲೂ ಹೆಸರು ಇದೆ. ಯೋಗಾಂಗಕ್ಕೆ ಕಾರಣಶರೀರವೂ, ಭೋಗಾಂಗಕ್ಕೆ ಸೂಕ್ಷ್ಮಶರೀರವೂ, ತ್ಯಾಗಾಂಗಕ್ಕೆ ಸ್ಥೂಲಶರೀರವೂ ಶಾಸ್ತ್ರದಲ್ಲಿ ಹೇಳಿದೆ.

ಯೋಗಾಂಗಕ್ಕೆ ಸುಷುಪ್ತಿ ಅವಸ್ಥೆಯೂ, ಭೋಗಾಂಗಕ್ಕೆ ಸ್ವಪ್ನಾವಸ್ಥೆಯೂ, ತ್ಯಾಗಾಂಗಕ್ಕೆ ಜಾಗ್ರದವಸ್ಥೆಯೂ ಇರುವುದು. ಯೋಗಾಂಗವು ಪ್ರಾಜ್ಞವಾಗಿಯೂ, ಭೋಗಾಂಗವು ತೈಜಸವಾಗಿಯೂ, ತ್ಯಾಗಾಂಗವು ವಿಶ್ವವಾಗಿಯೂ ಇರುತ್ತವೆ.

ಯೋಗಾಂಗ—ಐಕ್ಯಸ್ಥಲ—ಶರಣಸ್ಥಲ

ಭೋಗಾಂಗ—ಪ್ರಾಣಲಿಂಗಿ—ಪ್ರಸಾದಿಸ್ಥಲ

ತ್ಯಾಗಾಂಗ—ಭಕ್ತ—ಮಹೇಶಸ್ಥಲ

ಕಾರಣಶರೀರವು ಐಕ್ಯ ಮತ್ತು ಶರಣಸ್ಥಲಕ್ಕೆ ಸೂಕ್ಷ್ಮಶರೀರವು ಪ್ರಾಣಲಿಂಗಿ ಪ್ರಸಾದಿ ಸ್ಥಲಗಳಿಗೆ ಕೂಡಿದುದಾಗಿಯೂ, ಸ್ಥೂಲಶರೀರವು ಮಹೇಶ್ವರ ಮತ್ತು ಭಕ್ತಸ್ಥಲಗಳಿಗೆ ಹೊಂದಿಕೊಂಡಿರುತ್ತದೆ.

ಭಕ್ತಿಯ ವೈಚಿತ್ರ್ಯ, ಸಂಯೋಗ ಮತ್ತು ವಿಕಾರಗಳ ಸಾಮರ್ಥ್ಯದಿಂದ—ನಾಮ, ರೂಪ, ಕ್ರಿಯೆಗಳಿಂದ ಭಿನ್ನವಾಗಿರತಕ್ಕ ಅಂಗಸ್ಥಲವು ಆರು ಪ್ರಕಾರವಾಗಿರುತ್ತದೆ.

"ಸರ್ವಜ್ಞತಾ, ತೃಪ್ತಿ, ಅನಾದಿಬೋಧ, ಸ್ವತಂತ್ರತಾ, ಅಲುಪ್ತಶಕ್ತಿ, ಅನಂತ ಶಕ್ತಿ" ಹೀಗೆ ಪರಮಾತ್ಮನ ಆರು ಅಂಗಗಳಾಗಿರುತ್ತವೆ. ಈ ಆರು ಸ್ಥಲಗಳಲ್ಲಿ ಭಕ್ತಿಯು ಪ್ರವೇಶಿಸಿ ಆರು ಪ್ರಕಾರವಾಗಿರುವುದು. ಮಧುರಾದಿ ಷಡ್ರಸಗಳಲ್ಲಿ ನೀರು ಕೂಡಿದ್ದೇ ಆದರೆ ಬೇರೆ ಬೇರೆ ಆಕಾರವನ್ನು ಹೇಗೆ ತಾಳುತ್ತಲಿದೆಯೋ ಹಾಗೆಯೇ ಭಕ್ತಿಯು ಬೇರೆ

ಬೇರೆ ಸ್ಥಲಗಳಲ್ಲಿ ಬೇರೆ ಬೇರೆ ಆಕಾರಗಳನ್ನು ಧರಿಸುತ್ತದೆ. ಇದು ಸಾಕ್ಷಾತ್ಕಾರಾತ್ಮಕ ವಾಗಿರುತ್ತದೆ. ಶಕ್ತಿಯು ಹೇಗೆ ಮಹಾಲಿಂಗಾದಿ ಆರು ಸ್ಥಲಗಳಲ್ಲಿರುತ್ತದೆಯೋ ಅದರಂತೆಯೇ ಭಕ್ತಿಯಾದರೂ ಐಕ್ಯಾದಿ ಷಟ್‌ಸ್ಥಲಗಳಲ್ಲಿರುತ್ತದೆ.

ಸಮರಸ ಭಕ್ತಿ, ಆನಂದ ಭಕ್ತಿ, ಅನುಭವ ಭಕ್ತಿ, ಅವಧಾನ ಭಕ್ತಿ, ನೈಷ್ಠಿಕೀ ಭಕ್ತಿ, ಸದ್ಭಕ್ತಿ ಹೀಗೆ ಆರು ಪ್ರಕಾರವಾಗಿರುತ್ತದೆ. ಈ ಆರು ಭಕ್ತಿಗಳಿಂದ ಕೂಡಿದ ಆರು ಅಂಗಗಳ ಲಕ್ಷಣ ಮತ್ತು ಸ್ವರೂಪಗಳು ಕೆಳಗೆ ಬರೆದಂತೆ ಇರುತ್ತವೆ.

ನಾನು ನೀನೆಂಬುವ ಭೇದವು ಮಿಥ್ಯವಾದುದು. ವ್ಯವಹಾರದಲ್ಲಿ ಅನೇಕ ಶಬ್ದ ಗಳಿಂದ ತೋರುವ ಭೇದಭಾವವೂ ಕೂಡ ಮಿಥ್ಯವಾದುದಾಗಿದೆ. ಪ್ರಾಣ, ದೇಹ, ಇಂದ್ರಿಯ, ಪಂಚಮಹಾಭೂತಗಳೂ ಕೂಡ ಮಿಥ್ಯವಾಗಿದ್ದು ಅಂದರೆ ಭ್ರಮಾತ್ಮಕ ವಾಗಿರುತ್ತವೆ. ಈ ಮಿಥ್ಯಾಭಾವವು ನನ್ನಲ್ಲಿ ಇಲ್ಲದೆ ಇರುವುದರಿಂದ ಐಕ್ಯಸ್ಥಲವು ಸಮರಸ ಸುಖಸ್ವರೂಪವಾಗಿರುವುದು.

ನಾನು ಸ್ವತಃ ಲಿಂಗವಾಗಿದ್ದೇನೆ. ದೇಹೇಂದ್ರಿಯಾದಿಗಳೆಲ್ಲ ನನ್ನ ಸ್ವರೂಪಗಳಾಗಿವೆ. ಇಂತಹ ಜ್ಞಾನದ ಪ್ರಕಾಶದ ಬಲದಿಂದ ಸರ್ವ ವಿಷಯಗಳ ಭಾವನೆಯುಂಟಾಗಿ—ವಿಶ್ವ ತತ್ವವಾಗಿರುತ್ತದೆಯೋ ಅದಕ್ಕೆ ಶರಣಸ್ಥಲವೆನ್ನುತ್ತಾರೆ.

ಪ್ರಾಣ ಮತ್ತು ಇಂದ್ರಿಯಗಳೆಲ್ಲ ನನ್ನವು ಇರುತ್ತವೆಂದು ತಿಳಿಯುವುದು ಶುದ್ಧ ಭ್ರಮಾತ್ಮಕವಾಗಿರುತ್ತದೆ. ಆದ್ದರಿಂದ ದೇಹೇಂದ್ರಿಯಾದಿಗಳ ಮಮಕಾರವನ್ನು ಬಿಟ್ಟು ಪಂಚಪ್ರಾಣಗಳನ್ನು ಮತ್ತು ಮನಸ್ಸನ್ನು ಲಿಂಗದಲ್ಲಿ ಯೋಜಿಸುವುದೇ ಪ್ರಾಣಲಿಂಗಿಯ ಸ್ಥಲವು.

ಅಹಂಕಾರದಿಂದ ಕೂಡಿದ ಎಲ್ಲ ಇಂದ್ರಿಯ ವರ್ಗಗಳಿಂದಲೂ ಮತ್ತು ಆತ್ಮನಿಗೆ ಭೋಗವಿಷಯಗಳಾದ ಎಲ್ಲ ಪದಾರ್ಥಗಳಿಂದಲೂ, ಮನಃಪೂರ್ವಕವಾಗಿ ಲಿಂಗದಲ್ಲಿ ಅರ್ಪಣಮಾಡಿದ್ದು ಪ್ರಸಾದವಾಗುವುದು. ಇದಕ್ಕೆ ಪ್ರಸಾದಿಸ್ಥಲವೆಂದು ಹೆಸರು.

ಆಸ್ತಿಕ್ಯಬುದ್ಧಿ, ನಿಯಮ, ಶಿವವ್ರತ, ಸತ್ಯ, ಧರ್ಮ, ಶೌಚ ಮೊದಲಾದ ವಿಷಯಗಳಿಂದ ಪರಿಸ್ಫುರಿತವಾದ ಚರಿತ್ರೆಯುಳ್ಳವನಾಗಿ ಲಿಂಗನಿಷ್ಠೆಯಿಂದ ವೀರ ವ್ರತವನ್ನು ಧರಿಸಿದ ಸತ್ಪುರುಷನೇ ಮಹೇಶ್ವರಸ್ಥಲದವನು. ಅರ್ಥಾತ್ ಇದಕ್ಕೆ ಮಹೇಶ್ವರ ಸ್ಥಲವೆಂದು ಹೆಸರು.

ಮಿಥ್ಯೆಯುಳ್ಳವುಗಳಾದರೂ ಸತ್ಯದಂತೆ ತೋರುವ ಶರೀರ ಮತ್ತು ಪ್ರಾಣ ಇತರ ಪದಾರ್ಥಗಳ ಸಮೂಹದಿಂದ ಪರಾವೃತ್ತವಾದ ಮನಸ್ಸುಳ್ಳವನಾಗಿ ಭಕ್ತಿ ಮತ್ತು ಕರ್ಮಾಚರಣೆಯನ್ನು ಮಾಡಿ ವಿರಕ್ತನಾಗುವುದಕ್ಕೆ ಸಂಸಾರನಾಶಕವಾದ ಭಕ್ತಸ್ಥಲ ವೆಂದು ಹೇಳುತ್ತಾರೆ.

ಐಕ್ಯಸಲದ ಅಂಗವು ಆತ್ಮಾ, ಶರಣಸ್ಥಲಕ್ಕೆ ಅಂಗ ಆಕಾಶವು, ಪ್ರಾಣಲಿಂಗಿ ಸ್ಥಲಕ್ಕೆ ವಾಯುವೇ ಅಂಗ, ಪ್ರಸಾದಿಸ್ಥಲಕ್ಕೆ ಅಗ್ನಿಯು, ಮಹೇಶ್ವರಸ್ಥಲಕ್ಕೆ ಜಲವು, ಭಕ್ತಸ್ಥಲಕ್ಕೆ ಭೂಮಿಯು ಅಂಗವಾಗಿರುವುದು.

ಭಕ್ತ ಮಹೇಶಸ್ಥಲಗಳೆರಡೂ ಬಿಂದ್ವಾತ್ಮಕವಾಗಿರುವವು. ಪ್ರಾಣಲಿಂಗಿ, ಪ್ರಸಾದಿ ಸ್ಥಲಗಳೆರಡೂ ನಾದಾತ್ಮಕಗಳಾಗಿರುತ್ತವೆ. ಐಕ್ಯಸ್ಥಲ, ಶರಣಸ್ಥಲಗಳೆರಡೂ ಕಲಾತ್ಮಕ ವಾಗಿರುತ್ತವೆ.

## ದೀಕ್ಷೆಯು

ದೀಯತೇ ಲಿಂಗಸಂಬಂಧಂ ಕ್ಷೀಯತೇ ಚ ಮಲತ್ರಯಂ ।
ದೀಯತೇ ಕ್ಷೀಯತೇ ಯಸ್ಮಾತ್ತಾಸ್ಮಾದೀಕ್ಷೇತಿ ನಿಗದ್ಯತೇ ॥

ಲಿಂಗಸಂಬಂಧವನ್ನು ಕೊಟ್ಟು ಮಲತ್ರಯಗಳನ್ನು (ಕಾಯಕ, ವಾಚಕ, ಮಾನಸಿಕ) ನಾಶಮಾಡುವಂಥಾದ್ದರಿಂದಲೇ ಇದಕ್ಕೆ ದೀಕ್ಷೆಯೆಂದು ಹೆಸರು. ಶಿವದೀಕ್ಷೆಯು ಮೂರು ಪ್ರಕಾರವಾಗಿರುವುದು. ವೇಧಾ, ಮಂತ್ರ, ಕ್ರಿಯಾ. ಗುರುಗಳು ಶಿಷ್ಯನ ಮಸ್ತಕದ ಮೇಲೆ ಹಸ್ತವನ್ನಿಟ್ಟು ದೀಕ್ಷೆಯನ್ನು ಕೊಟ್ಟರೆ ಅದಕ್ಕೆ ವೇಧಾದೀಕ್ಷೆಯೆಂದು ಹೆಸರು. ಗುರುಗಳು ಶಿಷ್ಯನ ಕಿವಿಯಲ್ಲಿ ಮಂತ್ರೋಪದೇಶ ಮಾಡುವುದಕ್ಕೆ ಮಂತ್ರ ದೀಕ್ಷೆಯೆಂದೂ, ಶಿಷ್ಯನ ಕೈಯ್ಯಲ್ಲಿ ಲಿಂಗವನ್ನು ಕೊಟ್ಟು ಉಪದೇಶ ಮಾಡುವುದಕ್ಕೆ ಕ್ರಿಯಾದೀಕ್ಷೆಯೆಂದೂ ಹೆಸರು.

ಶ್ರೇಷ್ಠವಾದ ಈ ಶಿವದೀಕ್ಷೆಯನ್ನು ಕೊಟ್ಟು ಶಿವವಿದ್ಯೆಯ ಉಪದೇಶವನ್ನು ಮಾಡಿ ಅವಿದ್ಯಾರೂಪ ಪಾಶವನ್ನು ಛೇದಿಸಿ ಕಲಾಧ್ವಗಳ ಚಿಂತನೆಯನ್ನು ಮಾಡಬೇಕು. ಕಲೆ ಯಂತೆ ಭಾವವೂ, ಭಾವದಂತೆ ಮನವೂ, ಮನಸ್ಸಿನಂತೆ ದೃಷ್ಟಿಯೂ, ದೃಷ್ಟಿಯಂತೆ ಸ್ಥಲವೂ ಇರತಕ್ಕದ್ದು. ಕಲೆಯು ಸೂಕ್ಷ್ಮವಾಗಿದ್ದು ತತ್ವದ ಬೋಧನೆಯನ್ನು ಮಾಡು ತ್ತದೆ. ಆ ಕಲೆಯನ್ನು ಆಕರ್ಷಿಸಿ ಶಾಸ್ತ್ರಪ್ರಮಾಣದಂತೆ ಲಿಂಗಸ್ಥಲದಲ್ಲಿ ಅದನ್ನು ಸಂಯೋಜನೆ ಮಾಡಬೇಕು. ತಿಲದೊಳಗೆ ತೈಲ, ಕಟ್ಟಿಗೆಯಲ್ಲಿ ಅಗ್ನಿ, ಹಾಲಿನಲ್ಲಿ ತುಪ್ಪ, ಪ್ರವಾಹದೊಳಗೆ ನೀರು ಹೇಗೆ ಅಂತರ್ಬಾಹ್ಯದಲ್ಲಿ ವ್ಯಾಪಿಸಿಕೊಂಡಿರುತ್ತದೆಯೋ ಹಾಗೆಯೇ ಪರಂಜ್ಯೋತಿಸ್ವರೂಪವಾದ ಕಲೆಯು ಪರಮಾತ್ಮ ರೂಪಶಿವಲಿಂಗ ಸ್ಥಳದಲ್ಲಿ ಒಳಗೂ, ಹೊರಗೂ ವ್ಯಾಪಿಸಿಕೊಂಡಿರುತ್ತದೆ. ಅನಂತರ ಗುರುವು ಶಿಷ್ಯನಿಗೆ ಅತಿ ಸೂಕ್ಷ್ಮವಾದ ಭಕ್ತಿಯನ್ನು ಬೋಧಿಸುತ್ತಾನೆ. ಶಿಷ್ಯನ ಅವಿದ್ಯಾರೂಪ ಹೃದಯ ಗ್ರಂಥಿಯು ನಷ್ಟವಾಗುತ್ತದೆ. ಅಗ್ನಿ ಕರ್ಪೂರ ಸಂಯೋಗದಂತೆ ಈ ಲಿಂಗಾಂಗ ಸಂಯೋಗವಿರುತ್ತದೆ. ಕರ್ಪೂರಕ್ಕೆ ಅಗ್ನಿಯ ಸಂಯೋಗವಾದರೆ ಕರ್ಪೂರದ ಸ್ವರೂಪವೂ, ಗಂಧವೂ ಲುಪ್ತವಾಗಿ ತೇಜಸ್ಸು ಮಾತ್ರ ಅಗ್ನಿಯಲ್ಲಿ ಕೂಡಿಹೋಗುತ್ತದೆ. ಹಾಗೆಯೇ ಲಿಂಗಾಂಗಗಳ ಸಂಯೋಗವಾದ ಜೀವಭಾವವು ನಷ್ಟವಾಗಿ ಶಿವಭಾವವು ಉಂಟಾಗುತ್ತದೆ. ಇದಕ್ಕೇನೇ ಲಿಂಗಾಂಗ ಸಂಯೋಗವೆನ್ನುತ್ತಾರೆ. ಗುರುವು ಶಿಷ್ಯನ ಮೂರು ಅಂಗಗಳಲ್ಲಿ ಮೂರು ಲಿಂಗಗಳನ್ನು ಮೂರು ಪ್ರಕಾರ ದೀಕ್ಷೆಯಿಂದ ಯೋಜನೆ ಮಾಡುತ್ತಾನೆ.

ವೇಧಾದೀಕ್ಷೆಯ ಪ್ರಭಾವದಿಂದ ಯೋಗಾಂಗದಲ್ಲಿ (ಕಾರಣಶರೀರ) ಭಾವ ಲಿಂಗವು, ಮಂತ್ರದೀಕ್ಷೆಯ ಪ್ರಭಾವದಿಂದ ಭೋಗಾಂಗದಲ್ಲಿ (ಸೂಕ್ಷ್ಮಶರೀರ) ಪ್ರಾಣ ಲಿಂಗವು, ಕ್ರಿಯಾದೀಕ್ಷೆಯ ಸಾಮರ್ಥ್ಯದಿಂದ ತ್ಯಾಗಾಂಗದಲ್ಲಿ (ಸ್ಥೂಲಶರೀರ) ಚಿದ್ರೂಪ ಇಷ್ಟಲಿಂಗವನ್ನು ಗುರುವು ಯೋಜನೆ ಮಾಡುತ್ತಾನೆ. ಇಲ್ಲಿ ಜೀವಾತ್ಮನು ವಿಶ್ವನಾಗಿಯೂ, ಅಂತರಾತ್ಮನು ತೈಜಸನಾಗಿಯೂ, ಪರಮಾತ್ಮನು ಪ್ರಾಜ್ಞನಾಗಿಯೂ ಇರುತ್ತಾನೆ. ವಿಶ್ವ ಜಾಗ್ರದವಸ್ಥೆಯಲ್ಲಿ ಇಷ್ಟಲಿಂಗೋಪಾಸನೆಯನ್ನು ಮಾಡುತ್ತಾನೆ. ತೈಜಸ ಸ್ವಪ್ನಾವಸ್ಥೆಯ ಮಧ್ಯದಲ್ಲಿ ಪ್ರಾಣಲಿಂಗೋಪಾಸನೆ ಮಾಡುತ್ತಾನೆ. ಪ್ರಾಜ್ಞ ನಿದ್ರಾವಸ್ಥೆಯ ಮಧ್ಯದಲ್ಲಿ ಭಾವಲಿಂಗೋಪಾಸನೆ ಮಾಡುತ್ತಾನೆ. ಇಲ್ಲಿ ಅಂಗವೇ

ಜೀವನು. ಲಿಂಗವೇ ಬ್ರಹ್ಮನು. ಅಂಗದ ಹೃದಯವೇ ಲಿಂಗ, ಲಿಂಗದ ಹೃದಯವೇ ಅಂಗವಾಗಿರುತ್ತದೆ. ಈ ಲಿಂಗಾಂಗಗಳ ಸಂಯೋಗವು ಯಾವಾಗಲೂ ಇರುವುದರಿಂದ ಇದರ ಸಂಬಂಧದಿಂದ ಪರಾಭಕ್ತಿಯು ಪ್ರಾಪ್ತವಾಗುತ್ತದೆ. ಪರಾಭಕ್ತಿಯು ಸತ್ಯ ಸ್ವರೂಪವಾಗಿರುವುದರಿಂದ ಇದಕ್ಕೆ ಸದ್ಭಕ್ತಿಯೆಂದು ಹೇಳುತ್ತಾರೆ. ಈ ಭಕ್ತಿಯ ಸಂಬಂಧದಿಂದಲೇ ಜೀವಾತ್ಮನಿಗೆ ಭಕ್ತಸ್ಥಲದ ಪ್ರಾಪ್ತಿಯಾಗುತ್ತದೆ. ಆಚಾರಾದಿ ಷಡ್ ಲಿಂಗಗಳು ಸಾಧ್ಯವಾಗಿಯೂ ಭಕ್ತಸ್ಥಲ ಮೊದಲಾದ ಆರು ಸ್ಥಲಗಳು ಸಾಧಕ ವಾಗಿಯೂ, ಈ ಆರು ಲಿಂಗಗಳಲ್ಲಿ ಸಾಕ್ಷಾತ್ ಶಿವನು ಸಾಧ್ಯನಾಗಿದ್ದಾನೆ. ಭಕ್ತಸ್ಥಲ ವಗೈರೆ ಆರು ಸ್ಥಲಗಳಲ್ಲಿ ಜೀವನು ಸಾಧಕನಾಗಿದ್ದಾನೆ. ಆಚಾರಾದಿ ಆರು ಲಿಂಗಗಳು ಪ್ರವೃತ್ತಿ ಮಾರ್ಗವನ್ನು ಬೋಧಿಸುತ್ತವೆ. ಭಕ್ತಾದಿ ಆರು ಸ್ಥಲಗಳು ನಿವೃತ್ತಿ ಮಾರ್ಗ ವನ್ನು ಬೋಧಿಸುತ್ತವೆ.

ಷಟ್‌ಸ್ಥಲಗಳ ವಿವರಣೆಯನ್ನು ಮುಂದೆ ಮಾಡುವುದರಿಂದ ಅವುಗಳ ಇಂಗಿತ ವನ್ನು ತಿಳಿಯಲಿಕ್ಕೆ ಇಲ್ಲಿಯವರೆಗೆ ಬರೆದ ತತ್ವ ಕೋಷ್ಟಕವು ಅವುಗಳನ್ನು ತಿಳಿದು ಕೊಳ್ಳಲಿಕ್ಕೆ ಬಹಳ ಅನುಕೂಲ ಆಗುತ್ತದೆ. ಓದಲಿಕ್ಕೆ ಕೊಂಚ ಕ್ಲಿಷ್ಟ ವಿಷಯವಾದರೂ ಅನಿವಾರ್ಯವಾಗಿ ಇವೆಲ್ಲಾ ಷಟ್‌ಸ್ಥಲಗಳ ಜ್ಞಾನಾರ್ಜನೆಗೆ ಬಹಳ ಸಹಾಯಕ ವಾಗಿರುತ್ತವಾದುದರಿಂದ ದೀರ್ಘವಾಗಿ ವಿವರಿಸಿದ್ದೇನೆ. ಇನ್ನೂ ಎಷ್ಟೋ ವಿಷಯ ಗಳನ್ನು ಬಿಟ್ಟಿದ್ದೇನೆ. ಸಂದರ್ಭಾನುಸಾರವಾಗಿ ಅವುಗಳನ್ನೂ ವಿವರಿಸುತ್ತೇನೆ.

ಮೇಲೆ ಶಿವನೇ ಪರಬ್ರಹ್ಮ. ವೀರಶೈವರ ಅಧಿಷ್ಠಾನ ದೇವನು ಎಂಬುವುದನ್ನು ವಿವರಿಸಿದ್ದೇನೆ. ಅನೇಕ ಜನ ಆಚಾರ್ಯರೂ, ಬಸವಾದಿ ಪ್ರಮಥರೂ ಈ ಬಗ್ಗೆ ಅತ್ಯುತ್ಕೃಷ್ಟವಾದ ಕಾರ್ಯವನ್ನು ಮಾಡಿ ಲೋಕದಲ್ಲಿ ಕೃತಿಯಲ್ಲಿ ತಂದರು. ಅನೇಕ ಜನ ಶಿವಶರಣೆಯರೂ ಕೂಡ ಶಿವನೇ ಸರ್ವೋತ್ತಮನೆಂಬುವುದನ್ನು ಸಾರಿ ಕೃತಿಯ ವೀರಾಗ್ರಣಿಗಳಾಗಿದ್ದಾರೆ. ಇಂತಹ ಸ್ತ್ರೀರತ್ನರು ಅನೇಕರಿದ್ದಾಗ್ಯೂ ಒಬ್ಬ ಶರಣೆಯ ಕೃತಿಯನ್ನು ಇಲ್ಲಿ ವಾಚಕರಿಗಾಗಿ ತೋರಿಸುತ್ತೇನೆ, ಅದು ವಿಷಯಾಂತರವಲ್ಲ. ಪ್ರತಿಯೊಂದು ಧರ್ಮದಲ್ಲಿ ಅವರವರ ಇಷ್ಟದೇವತೆಯು ಅವರವರಿಗೆ ಪರಬ್ರಹ್ಮಸ್ವರೂಪ ವೆಂಬುವುದನ್ನು ಯಾರೂ ಅಲ್ಲಗಳೆಯಲಾರರು. ಅಂತೆಯೇ ವೀರಶೈವ ತತ್ವವು ಶಿವ ಪರಬ್ರಹ್ಮಸ್ವರೂಪವೆಂದೂ, ಅದು ಲಿಂಗರೂಪವೆಂದೂ ಸಿದ್ಧಾಂತಪಡಿಸುತ್ತದೆ.

## ಸತ್ಯಕ್ಕನ ಆಚರಣೆ

ಹರನು ಚರರೂಪಿಂದೆ ಹರಿಯೆಂಬ ನುಡಿ ಪೇಳೆ ।
ಕರದ ಹುಟ್ಟಿಂದ ತಿವಿದೀಶನೊಲಿಸೀದ ಗುರುವೆ ಸತ್ಯಕ್ಕ ಶರಣಾಗು ॥

ಶಿವನು ಜಂಗಮ ರೂಪಿನಿಂದ ಬಂದು ಹರಿಯೆಂಬುವ ಶಬ್ದವನ್ನು ನುಡಿಯಲು ಕೈಯಲ್ಲಿ ರುವ ಹುಟ್ಟಿನಿಂದ ತಿವಿದು ಈಶ್ವರನನ್ನು ಒಲಿಸಿಕೊಂಡ ಗುರುವೇ ಸತ್ಯಕ್ಕ ಶರಣಾಗು (ರಕ್ಷಿತಳಾಗು).

ಮೈಸೂರು ದೇಶದ ಶಿವಮೊಗ್ಗಾ ಡಿಸ್ಟ್ರಿಕ್ಟ್ ಶಿಕಾರಿಪುರ ತಾಲ್ಲೂಕಿನಲ್ಲಿ ಹಿರಿಯ ಜಂಬೂರೆಂಬುವದೊಂದು ಗ್ರಾಮವಿದೆ. ಈ ಗ್ರಾಮದಲ್ಲಿ ಸತ್ಯಕ್ಕ ಎಂಬುವ ಶಿವಶರಣೆ ಇದ್ದಳು. ಈಕೆಯು ಶಿವನಲ್ಲಿ ಅತ್ಯಂತ ನಿಷ್ಠೆಯುಳ್ಳವಳಾಗಿದ್ದಳು. ಆಕೆಯ ಮುಟ್ಟಿಗೆ

ಅದು ಪರಾಕಾಷ್ಠತೆಯನ್ನು ಮುಟ್ಟಿತೆಂದು ಹೇಳಬಹುದು. ಹರಿ ಮೊದಲಾದ ಅರ್ಥಾತ್ ಶಿವೇತರ ದೇವತೆಗಳ ಹೆಸರು ತನ್ನ ಕಿವಿಗೆ ಬೀಳಬಾರದೆಂಬುವ ಪ್ರತಿಜ್ಞೆ ಬದ್ಧಳಾಗಿದ್ದಳು.

ಒಂದು ದಿವಸ ಒಬ್ಬ ಜಂಗಮನು ಈಕೆಯ ಭಕ್ತಿಯನ್ನು ಪರೀಕ್ಷಿಸಬೇಕೆಂದು ಕಂತೆಯ ಭಿಕ್ಷಕ್ಕೆ ಹೋಗಿರಲು ತಾನು ಆಗಲೇ ಸಿದ್ಧಪಡಿಸಿದ್ದ ಅಂಬಲಿಯನ್ನು ಹುಟ್ಟಿನಲ್ಲಿ ತೆಗೆದುಕೊಂಡು ಬಂದು ನೀಡಲಾರಂಭಿಸಿದಳು. ಪಾತ್ರೆಯಿಂದ ಅದು ಕೆಳಗೆ ಬಿದ್ದು ಹರಿಯಿತು. ಆಗ ಹರಿಯಿತು ಹರಿಯಿತು ಎಂದು ಆ ಜಂಗಮನು ಹೇಳಲು ಹರಿಯೆಂಬುವ ಶಬ್ದವು ಕಿವಿಗೆ ಬಿದ್ದಿತೆಂದು ಕೋಪವುಳ್ಳವಳಾಗಿ ತಾನು ತಂದಿದ್ದ ಹುಟ್ಟಿನಿಂದಲೇ ಆ ಜಂಗಮನನ್ನು ತಿವಿದಳು. ಈಕೆಯ ಶಿವಭಕ್ತಿಯನ್ನು ಕಂಡು ಜಂಗಮಸ್ವರೂಪಿಯಾದ ಶಿವನು ಮೆಚ್ಚಿದನು. ಮೇಲೆ ಬರೆದ ಹಿರಿಯ ಜಂಬೂರಲ್ಲಿ ಸತ್ಯಕ್ಕನ ಪ್ರತಿಮೆಯು ಹುಟ್ಟುಸಹಿತವಾಗಿರುತ್ತದೆ. ಈ ದೇವಾಲಯಕ್ಕೆ ಸತ್ಯಕ್ಕನ ಗುಡಿಯೆಂದು ಕರೆಯುತ್ತಾರೆ. ಇಲ್ಲಿ ಮುಖ್ಯವಾಗಿ ಗಮನಿಸತಕ್ಕ ವಿಷಯವೆಂದರೆ ಆಕೆಯ ಶಿವಭಕ್ತಿಯ ನಿಷ್ಠೆಯು ವ್ಯಕ್ತವಾಗಿ ತೋರುತ್ತದೆ. ಇದರಲ್ಲಿ ಅನ್ಯರ ನಿಂದೆಯಾಗಲೀ ಅಥವಾ ಬೇರೆ ವಿಷಯವಾಗಲೀ ಏನೂ ಇರುವುದಿಲ್ಲ. ಮುಪ್ಪಿನ ಷಡಕ್ಷರ ಸ್ವಾಮಿಗಳು ಹೇಳಿದಂತೆ ಅವರವರ ಭಾವಕ್ಕೆ ಅವರವರ ಪೂಜೆಗಂ ದೇವ ನೀನೊಬ್ಬನೇ. ಶ್ರೀ ಬಸವಣ್ಣನವರಾದರೂ ದೇವನೊಬ್ಬ ನಾಮ ಹಲವು ಎಂದು ಹೇಳಿರುತ್ತಾರೆ. ಹೀಗೆಯೇ ಅನೇಕ ಜನ ಶಿವಶರಣೆಯರು ಶಿವನಲ್ಲಿ ನಿಷ್ಠೆಯನ್ನು ತೋರಿಸಿರುತ್ತಾರೆ.

ಈ ಆರು ಸ್ಥಲಗಳಲ್ಲಿ ಲಿಂಗಸ್ಥಲ, ಅಂಗಸ್ಥಲವೆಂಬ ಎರಡು ಭೇದಗಳಾಗುತ್ತವೆ. ಈ ಆರು ಸ್ಥಲಗಳೇ ಕ್ರಿಯಾಭೇದದಿಂದ ೩೬ ಭಾಗಗಳಾಗುತ್ತವೆ. ಅವುಗಳೇ ೪೪ ಅಂಗ ಸ್ಥಲ, ೫೭ ಲಿಂಗಸ್ಥಲಗಳಾಗಿ ೧೦೧ ಸ್ಥಲಗಳಾಗುತ್ತವೆ. ಈ ನೂರೊಂದು ಸಲಗಳೇ ವೀರಶೈವ ಸಿದ್ಧಾಂತವಾಗುತ್ತದೆ. ಇವುಗಳೇ ೨೧೬ ಭಾಗಗಳಾಗಿ ಸಕೀಲಗಳೆನ್ನಿಸಿ ಕೊಳ್ಳುತ್ತಲಿವೆ.

ಸ್ಥಲವು ಸ್ಥಿತಿ ಲಯಾದಿಗಳಿಗೆ ಆಧಾರವಾಗಿರುತ್ತದೆ. ಲಿಂಗವು ಪರಬ್ರಹ್ಮ ವಾಚಕವಾದುದೆಂಬುವುದನ್ನು ಈ ಮೊದಲೇ ವಿವರಿಸಲಾಗಿದೆ. ಕಾಮಿಕಾದಿ ಆಗಮಗಳಲ್ಲಿ ಈ ಷಟ್‌ಸ್ಥಲದ ವಿವರಣೆಯು ಚೆನ್ನಾಗಿ ವಿವರಿಸಲ್ಪಟ್ಟಿರುತ್ತದೆ. ಈ ಸ್ಥಲಗಳಿಂದಲೇ ವೀರಶೈವನಿಗೆ ಮೋಕ್ಷಪ್ರಾಪ್ತಿಯು ದಿವ್ಯಾಗಮದ ಉತ್ತರ ಭಾಗದಲ್ಲಿ ಧುಂಡಿ, ನಂದಿ, ಮಹಾಕಾಲ ಮೊದಲಾದ ಪ್ರಮಥವರ್ಯರು ಜ್ಞಾನಾಪೇಕ್ಷಿಗಳಾಗಿ ಅನೇಕ ಸಂವತ್ಸರಗಳವರೆಗೆ ತಪಸ್ಸನ್ನಾಚರಿಸಿದರು. ಅವರಿಗೆ ಶ್ರೀ ಶಂಕರನು ಷಟ್ ಸ್ಥಲಗಳ ಉಪದೇಶವನ್ನು ಮಾಡಿದನೆಂತಲೂ.

ವಾತುಲೋತ್ತರದಲ್ಲಿ—

ಕೈಲಾಸ ದ್ವಾರದಿಂದ ಹೊರಟಂಥ ಸರಯೂನಾಮಕ ನದಿಯ ತೀರದಲ್ಲಿ ಶ್ರೀ ನಂದಿಕೇಶ್ವರನು ವಿಭೂತಿಯಿಂದಲಂಕರಿಸಲ್ಪಟ್ಟ ಶರೀರವುಳ್ಳವನೂ, ತ್ರಿಪುಂಡ್ರಾಂಕಿತ ಮಸ್ತಕವುಳ್ಳವನೂ, ರುದ್ರಾಕ್ಷಮಾಲಾಭರಣನಾಗಿಯೂ, ಪಂಚಾಕ್ಷರ ಜಪಾನ್ವಿತನಾಗಿಯೂ, ಪಂಚಾಗ್ನಿ ಮಧ್ಯದಲ್ಲಿ ಕುಳಿತುಕೊಂಡು ತಪಸ್ಸನ್ನಾಚರಿಸತಕ್ಕವನೂ ಆಗಿದ್ದನು. ಇಂತಹ ನಂದಿಕೇಶ್ವರನಿಗೆ ಶ್ರೀ ಶಂಕರನು ಕಾಮಿಕಾದಿ ಆಗಮಗಳ ಅಭ್ಯಾಸಮಾಡುವುದರಿಂದ ಈ ಷಟ್‌ಸ್ಥಲದ ಜ್ಞಾನವಾಗಿ ಸಾರೂಪ, ಸಾಯುಜ್ಯಾ

ವಿಮೋಕ್ಷಗಳು ಸ್ವಾಧೀನವಾಗುತ್ತವೆ. ವೀರ ಮಹೇಶ್ವರಾಚಾರದಿಂದ ಪವಿತ್ರವಾಗಿ ಮಾಡಲ್ಪಟ್ಟ ಮನಸ್ಸುಳ್ಳವರೂ, ಕಲಿಯ ಪಾಪವೆಂಬುವ ಕಾಡ್ಗಿಚ್ಚಿಗೆ ಸಮಾನವಾದ ತೇಜಸ್ಸುಳ್ಳವರೂ, ಶಿವಾನಂದವೆಂಬ ಅಮೃತದ ಸ್ವಾದವನ್ನು ಸವಿದು ತೃಪ್ತರಾದ ಮಹಾತ್ಮರುಗಳು ಕಾಲ ನಿಯಮವಿಲ್ಲದೆ ಸದಾ ಧ್ಯಾನತತ್ಪರರಾಗಿರತಕ್ಕದ್ದು. ಜ್ಞಾನಿಗಳು ಪರಮಾತ್ಮನ ಹೃದಯವೇ ಸಜ್ಜಿಕೆಯೆಂದು ನಿರ್ಣಯಿಸುತ್ತಾರೆ. ಆ ಸಜ್ಜಿಕೆಯಲ್ಲಿರತಕ್ಕ ಗುರುಗಳಿಂದ ಕೊಡಲ್ಪಟ್ಟ ಲಿಂಗಕಮಲವನ್ನು ಸದಾ ಹೃದಯದಲ್ಲಿ ಧಾರಣ ಮಾಡುವುದರಿಂದಲೇ ಸದಾ ಧ್ಯಾನವೆಂದು ಹೇಳಲಾಗಿದೆ.

ಹಾಗಾದರೆ ಧ್ಯಾನವೆಲ್ಲಿ? ಪೂಜೆಯು ಏಕೆ? ಸ್ತುತಿಯು ಏಕೆ? ಅಂದರೆ ಲೋಕದ ತುಷ್ಟ್ಯರ್ಥವಾಗಿ ಸೃಷ್ಟಿಯ ನಿಯಮಕ್ಕನುಸರಿಸಿ ಮಾಡಬೇಕೆಂದು ಆಗಮವಿಶಾರದರು ಹೇಳುತ್ತಲಿದ್ದಾರೆ. ಆಗಮ ಪುರಾಣಾದಿಗಳಲ್ಲಿ ಅದರ ಲಕ್ಷಣವು ಹೇಳಲ್ಪಟ್ಟಿರುತ್ತದೆ.

> ಯೋ ಹಸ್ತಪೀಠೇ ನಿಜಲಿಂಗಮಿಷ್ಟಂ ವಿನ್ಯಸ್ಯ ತಲ್ಲೀನ ಮನಪ್ರಚಾರಃ ।
> ಬಾಹ್ಯಕ್ರಿಯಾಸಂಕುಲ ನಿಸ್ಪೃಹಾತ್ಮಾ ಸಂಪೂಜಯೇದಂಗ ಸ ವೀರಶೈವಃ ॥

ಯಾವನು ತನ್ನ ಹಸ್ತಪೀಠದಲ್ಲಿ ಇಷ್ಟಲಿಂಗವನ್ನಿಟ್ಟುಕೊಂಡು ಅದರಲ್ಲಿಯೇ ತಲ್ಲೀನನಾಗಿ ಬಾಹ್ಯ ಕ್ರಿಯಾದಿಗಳಲ್ಲಿ ನಿಸ್ಪೃಹನಾಗಿ ಪೂಜಿಸುವನೋ ಅವನೇ ವೀರಶೈವನು.

ಮತ್ತು

> ಪಾಣಿಪೀಠೇ ಮಹಾಲಿಂಗಂ ಪೂಜಿತಂ ಶಾಸ್ತ್ರವರ್ತ್ಮನಾ ।
> ಸಜ್ಜಿಕಾರೋಪಣಂ ಕೃತ್ವಾ ತದ್ಧ್ಯಾನ ಪರಮೋ ಭವೇತ್ ॥

ಮಹಾ ಲಿಂಗವನ್ನು ಪಾಣಿಪೀಠದಲ್ಲಿ ಶಾಸ್ತ್ರದಲ್ಲಿ ಹೇಳಿದ ವಿಧಿಯಂತೆ ಪೂಜಿಸಿ ಸಜ್ಜಿಕೆಯಲ್ಲಿಟ್ಟು ಅದರ ಧ್ಯಾನದಲ್ಲಿಯೇ ಆಸಕ್ತನಾಗಿರಬೇಕು.

ನಿಷ್ಕಲವೂ, ನಿಷ್ಕ್ರಿಯೆಯೂ, ಶಾಂತವೂ, ನಿರವದ್ಯವೂ ಆದ ಮಹಾಲಿಂಗವನ್ನು ಬಿಟ್ಟು ಜಗತ್ತಿನಲ್ಲಿ ಯಾವದೂ ಇರುವುದಿಲ್ಲವೆಂದು ಲಿಂಗಭಕ್ತನಾದವನು ತಿಳಿಯತಕ್ಕದ್ದು.

ಈ ಮಹಾಲಿಂಗವು

> "ಋತಂ ಸತ್ಯಂ ಪರಬ್ರಹ್ಮ ಸಚ್ಚಿದಾನಂದ ಲಕ್ಷಣಂ"

ಆಗಿರುವುದರಿಂದ ಇದರ ಹೊರತು ವೀರಶೈವನಿಗೆ ಬೇರೆ ಬ್ರಹ್ಮವಿರುವುದಿಲ್ಲ. ಆದ್ದರಿಂದ ಆಸ್ತಿಕರಾದ ಮಹನೀಯರು ಸದಾಕಾಲದಲ್ಲಿ ಈ ಮಹಾಲಿಂಗದ ಚಿಂತನೆಯನ್ನೇ ಮಾಡಬೇಕಲ್ಲದೆ ಮಮಕಾರ, ಅಹಂಕಾರಗಳನ್ನು ದೂರಮಾಡಬೇಕು.

ಇಂತಹ—

> ಘನಲಿಂಗಂ ಮಹಾಭಾಸಂ ಸಚ್ಚಿದಾನಂದ ಲಕ್ಷಣಂ ।
> ನಿಷ್ಕಳಂ ನಿಷ್ಕ್ರಿಯಂ ಶಾಂತಂ ಸ್ವತಂತ್ರಂ ಸ್ವಪ್ರಕಾಶಿತತ್ ॥
> ಸರ್ವೇಷಾಂ ಸ್ಥಾನಭೂತತ್ವಾಲ್ಲಯಭೂಮಿತ್ವ ತಸ್ತಥಾ ।
> ತತ್ವಾನಾಂ ಮಹದಾದೀನಾಂ ಸ್ಥಲಮಿತ್ಯಭಿಧೀಯತೇ ॥

ಸಚ್ಚಿದಾನಂದ ಸ್ವರೂಪನಾದವನೂ, ಸಕಲಕ್ಕೂ ಆಶ್ರಯದಾತನೂ ಆಗಿರುವ ಶಿವನಲ್ಲಿ ಅಂತ ದಲ್ಲಿ ಪ್ರಪಂಚವು ಲೀನವಾಗುತ್ತದೆಯೋ ಅದಕ್ಕೆ ಸ್ಥಲವೆಂದು ಹೆಸರು. ತನ್ನ

ಶಕ್ತಿಯು ಕ್ಷೋಭೆ ಮಾತ್ರದಿಂದ ಅದು ಎರಡು ಪ್ರಕಾರವಾಗಿ ಆಗುತ್ತದೆಂದು ಹಿಂದೆಯೇ ವಿವರಿಸಿರುತ್ತೇವೆ.

ಇಂತಹ ಷಟ್‌ಸ್ಥಲಗಳ ಬಗ್ಗೆ ಶರಣರು ಸಾವಿರಾರು ವಚನಗಳನ್ನು ಹೇಳಿದ್ದಾರೆ. ಅವರಲ್ಲಿ ಒಬ್ಬೊಬ್ಬರು ಒಂದೊಂದು ಸ್ಥಲಗಳಲ್ಲಿ ಪ್ರವೀಣರಾಗಿರುತ್ತಾರೆ.

ತ್ರಿವಿಧ ಪದಾರ್ಥವ ಗುರು, ಲಿಂಗ, ಜಂಗಮಕ್ಕೆ ನಿರ್ವಂಚಕತ್ವದಿಂದ ಸಮರ್ಪಿಸುವ ಭಕ್ತಸ್ಥಲವುಳ್ಳವನೇ ಬಸವೇಶ್ವರನು. ಪಂಚ ಮಹಾಪಾತಕಂಗಳಂ ಬಿಟ್ಟು ಪಂಚಾಚಾರವ ನೋಡಲು ಮಾಡಿಕೊಂಡು ಏಕಲಿಂಗ ನಿಷ್ಠೆಯಿಂದಾಚರಿಸುವ ಮಹೇಶ್ವರಸ್ಥಲವುಳ್ಳವರೇ ಜಗದೇವಮಲ್ಲಿ ಬೊಮ್ಮಣ್ಣಗಳು, ತ್ರಿವಿಧ ಪದಾರ್ಥವ ತ್ರಿವಿಧ ಲಿಂಗಕ್ಕರ್ಪಿಸಿ ತ್ರಿವಿಧ ಪ್ರಸಾದವ ಸ್ವೀಕರಿಸುವ ಪ್ರಸಾದಿಸ್ಥಲವುಳ್ಳವನೇ ಚನ್ನಬಸವಣ್ಣನು. ಅಂಗ ಪ್ರಾಣಂಗಳಲ್ಲಿ ಇಷ್ಟಪ್ರಾಣಲಿಂಗವ ಸಂಬಂಧಮಾಡಿಕೊಂಡು ಜ್ಞಾನಕ್ರಿಯಾಯುಕ್ತವಾಗಿ ಆಚರಿಸುವ ಪ್ರಾಣಲಿಂಗಿ ಸ್ಥಲವುಳ್ಳವನೇ ಸಿದ್ಧರಾಮಯ್ಯ, ನಿಜಗುಣದೇವರು, ಘಟ್ಟಿವಾಳಯ್ಯಗಳು. ಶರಣಸತಿ, ಲಿಂಗಪತಿತ್ವ ಪಿಡಿದಾಚರಿಸುವ ಶರಣಸ್ಥಲವುಳ್ಳವರೇ ಪ್ರಭುದೇವರು, ಅಕ್ಕಗಳು, ಗಜೇಶ, ಮಸಣಯ್ಯಗಳು, ಉರಿಲಿಂಗಯ್ಯಗಳು. ಉರಿ ಕರ್ಪೂರ ಸಂಯೋಗದ ಹಾಗೆ ಮಹಾಲಿಂಗದಲ್ಲಿ ಕೂಡುವ ಐಕ್ಯಸ್ಥಲವುಳ್ಳವರೇ ಅಜಗಣ್ಣಯ್ಯಗಳು. ಈ ಕುರುಹಿಟ್ಟು ಹೇಳುವ ಷಟ್‌ಸ್ಥಲಬಹ್ಮಿಗಳ ಆಚರಣೆಯ ತಿಳಿದು ಷಟ್‌ಸ್ಥಲದಾಚರಣೆಯುಳ್ಳವರ ತನ್ನಾಚಾರಕ್ಕೊಳಗುಮಾಡಿಕೊಂಡು ಷಟ್‌ಸ್ಥಲದಾಚರಣೆ ಇಲ್ಲದವರ ತನ್ನಾಚರಣೆಯಿಂದ ಬೇರ್ಪಡಿಸುತ್ತಿಹನು.

ಷಟ್‌ಸ್ಥಲದವರು ಹೇಗೆ ಇರಬೇಕೆಂಬುವ ಬಗ್ಗೆ ಒಬ್ಬ ಶರಣರು—

"ಭಕ್ತನಾದಡೆ ತನುಮನಧನದಾಸೆಯಳಿದಿರಬೇಕು. ಮಹೇಶ್ವರನಾದಡೆ ಪರಧನ ಪರಚಿಂತೆ ಪರಾಂಗನೆಯರ ಎಡೆಯುಳಿದುಳಿದಿರಬೇಕು. ಪ್ರಸಾದಿಯಾದಡೆ ಸುಖರುಚಿಯುಮಗ್ರಹವಂ ಮರೆದು ಪ್ರಸಾದ ಘಟವಳಿಯದುಳಿದಿರಬೇಕು. ಪ್ರಾಣಲಿಂಗಿಯಾದಡೆ ಘಟದಾಶೆಯ ತೊರೆದು, ಪ್ರಾಣಲಿಂಗದೊಳಗೆ ಬೆರಸಿ ಬೇರಿಲ್ಲದಿರಬೇಕು. ಶರಣನಾದರೆ ಸತಿರತಿಯ ಸಂಗವಳಿದು ಲಿಂಗಕ್ಕೆ ತಾ ಸತಿಯಾಗಿರಬೇಕು. ಲಿಂಗೈಕ್ಯನಾದಡೆ ಆಪ್ಯಾಯದೆಡೆಯಡಗಿ ಸುಖದುಃಖಮಂ ತಾಳದೆ ನಿರ್ಭ್ರಾಂತನಾಗಿರಬೇಕು. ಮಾತಿನ ಮಾಲೆಯಲ್ಲಿ ಸಿಲುಕುವುದೇ ಶಿವಾಚಾರ? ಇಂತೀ ಷಟ್‌ಸ್ಥಲವಾರಿನಿಯೂ ಅಳವಡದು ಸೊಡ್ಡಳದೇವನು ಷಟ್‌ಸ್ಥಲದ ಭಕ್ತಿಯನು ಬಸವಣ್ಣಂಗೆ ಮೂರ್ತಿಯಮಾಡಿದನು."

ಮತ್ತೊಬ್ಬ ಶರಣರು—

"ಭಕ್ತಂಗೆ ವಿಶ್ವಾಸ, ಮಹೇಶ್ವರಂಗೆ ನೈಷ್ಠೆ, ಪ್ರಸಾದಿಗೆ ಅವಧಾನ, ಪ್ರಾಣಲಿಂಗಿಗೆ ಯೋಗ, ಶರಣಂಗೆ ಮುನ್ನವೇ ಬಿಡುಗಡೆ, ಐಕ್ಯಂಗೆ ಕುರುಹುಗೊಂಬುವುದಕ್ಕೆ ಮುನ್ನವೇ ನಿರಾಳ ಇಂತೀ ಷಟ್‌ಸ್ಥಲಭೇದ ಎನ್ನಯ್ಯ ಪ್ರಿಯ ನಿಷ್ಕಳಂಕ ಮಲ್ಲಿಕಾರ್ಜುನಾ."

ಒಬ್ಬೊಬ್ಬ ಶರಣರು ಒಂದೊಂದು ಸ್ಥಲವನ್ನು ಆಶ್ರಯಿಸಿ ಅದರಲ್ಲಿ ಸಂಪೂರ್ಣ ಅನುಭವಿಗಳಾಗಿ, ಜನಗಳಿಗೆ ಬೋಧಿಸಿ ಷಟ್‌ಸ್ಥಲ ಧ್ವಜವು ಎಲ್ಲೆಡೆಯಲ್ಲಿಯೂ ಬೆಳಗುವಂತೆ

ಮಾಡಿದರು. ಶ್ರೀ ಬಸವಣ್ಣನವರ ಒಂದು ಸಾವಿರ ವಚನಗಳು ಷಟ್‌ಸ್ಥಲಗಳಿಗಾಗಿ ವಿಂಗಡಿಸಲಾಗಿರುತ್ತವೆ. ಆ ವಚನಗಳಲ್ಲಿ ಮುಕ್ಕಾಲುಪಾಲು ವಚನಗಳು ಈ ಗ್ರಂಥದ ಬೇರೆ ಬೇರೆ ಪ್ರಕರಣಗಳಲ್ಲಿ ಹಲವಾರು ಸಾರೆ ಬರುತ್ತವೆ. ಷಟ್‌ಸ್ಥಲಗಳೇ ವೀರಶೈವ ಸಿದ್ಧಾಂತವಾದುದರಿಂದ ಅದರ ವರ್ಣನೆ ಇದಕ್ಕಿಂತಲೂ ಹೆಚ್ಚಿಗೆ ಅನವಶ್ಯಕವಾದುದು. ಶ್ರೀ ಬಸವಣ್ಣನವರು ತಮ್ಮ ಸಾವಿರಾರು ಜನ ಅನುಯಾಯಿಗಳ ಬೆಂಬಲದಿಂದ ಪ್ರಚಂಡ ತರವಾಗಿ ಪ್ರಚಾರವಮಾಡಿರುತ್ತಾರೆ.

ಶ್ರೀ ಬಸವಣ್ಣನವರ ಐಕ್ಯಸ್ಥಲದ ಒಂದು ವಚನವನ್ನು ಇಲ್ಲಿ ಕೊಟ್ಟು ಈ ಪ್ರಕರಣವನ್ನು ಮುಗಿಸುತ್ತೇನೆ.

> “ದೆಶೆ ದಿಕ್ಕು ಧರೆ ಗಗನವೆಂಬುದ ನಾನರಿಯೆನಯ್ಯಾ. ಲಿಂಗಮಧ್ಯೇ ಜಗತ್ಸರ್ವಂ ಎಂಬುದ ನಾನರಿಯೆನಯ್ಯಾ. ಲಿಂಗ ಸೋಂಕಿನ ಸುಖದೊಳಗೆ ಶಿವಶಿವಾ ಎನುತಿರ್ದೆನಯ್ಯಾ. ಅಂಬುಧಿಯೊಳಗೆ ಬಿದ್ದ ವಾರಿಕಲ್ಲಿನಂತೆ ಭಿನ್ನಭಾವವಿಲ್ಲದೆ ಶಿವಶಿವಾ ಎನುತಿರ್ದೆನು ಕಾಣಾ ಕೂಡಲಸಂಗಮದೇವಾ.”

ಅವರ ಮೇಲಿನ ವಚನವು ಎಂತಹ ಶಿವಾದ್ವೈತವನ್ನು ಬೋಧಿಸುತ್ತದೆಂಬುವುದು ತಿಳಿಯುವುದು. ಆದ್ದರಿಂದಲೇ ಷಟ್‌ಸ್ಥಲದ ಬ್ರಹ್ಮರೂಪು ಬಸವಣ್ಣನೆಂದು ಒಬ್ಬ ಶರಣರು ವರ್ಣಿಸಿರುತ್ತಾರೆ.

## ಇಪ್ಪತ್ತಮೂರನೆಯ ಪ್ರಕರಣ

### ಶ್ರೀ ಬಸವೇಶ್ವರರೂ— ಲಿಂಗಧಾರಣ ದೀಕ್ಷೆಯೂ

ಬಸವಣ್ಣನವರಿಗೆ ಎಂಟು ವರ್ಷಗಳಾದ ಕೂಡಲೇ ತಂದೆಯುವರಾದ ಮಾದಿ ರಾಜರು ಅವರಿಗೆ ಉಪನಯನವನ್ನು ಮಾಡಿಸಬೇಕೆಂದು ಅನೇಕ ಜನ ಪಂಡಿತರನ್ನು ಕೂಡ ಕರೆಯಿಸಿ ಹೇಳಿದರು. ತಂದೆಯ ಮಾತನ್ನು ಕೇಳಿ ಬಾಲಕನಾದ ಬಸವನು ತಂದೆಯವರೇ ನನಗೆ ನನ್ನ ಸಾಕ್ಷಾತ್ ಗುರುವಾದ ಸಂಗಮೇಶ್ವರನು ಲಿಂಗಧಾರಣ ದೀಕ್ಷೆಯನ್ನು ಮಾಡಿದ್ದಾನೆ. ಕರ್ಮೋಪನಯನವನ್ನು ಮಾಡಿಸಿಕೊಳ್ಳಲು ನಾನು ಒಪ್ಪುವುದಿಲ್ಲ. ನಾನು ಶಿವಸ್ವರೂಪನಿದ್ದೇನೆ. ಕರ್ಮದಿಂದ ತುಂಬಿದ ಜೀವನು ನಾನಲ್ಲ. ನನಗೂ ಶಿವನಿಗೂ ಭೇದವಿರುವುದಿಲ್ಲ. ಶ್ರೇಷ್ಠರಾದ ಋಷಿಗಳು ಶಿವನಿಗೆ ಮಹಾ ಬ್ರಹ್ಮನೆಂದು ಕರೆಯುತ್ತಾರೆ. ಬ್ರಹ್ಮನಾದವನು ಬ್ರಹ್ಮನನ್ನು ಹೊಂದುತ್ತಾನೆ. ದೇವತೆಗಳ ಮಧ್ಯದಲ್ಲಿ ಶಿವನು ಶ್ರೇಷ್ಠನಾಗಿದ್ದಾನೆ. ಆದ್ದರಿಂದ ಈಶ್ವರನನ್ನು ಆಶ್ರಯಿಸಿದ್ದೇನೆ. ನಾನು ಎರಡನೆಯ ದೇವತೆಗಳನ್ನು ಬಯಸುವುದಿಲ್ಲ. ಈಶ್ವರನ ಬ್ರಹ್ಮತ್ವವು ಸ್ವತಃ ಸಿದ್ಧವಿರುವುದರಿಂದ ಕರ್ಮದಿಂದ ಉತ್ಪನ್ನವಾಗುವುದಿಲ್ಲ.

ಕರ್ಮವು ಆತ್ಮವನ್ನು ಶುದ್ಧಿಮಾಡುವುದೋ ಅಥವಾ ಶರೀರವನ್ನೋ? ಆತ್ಮನನ್ನು ಶುದ್ಧಿಮಾಡುವುದೆಂದರೆ ಆತ್ಮನು ಸ್ವಭಾವದಿಂದ ಶುದ್ಧನಾಗಿರುತ್ತಾನೆ. ದೋಷಯುಕ್ತವಾದ ದೇಹದ ಶುದ್ಧಿಯಾದರೂ ಹೇಗೆ ಆಗುವುದು? ದೇಹದಲ್ಲಿ ಪಂಚಕೋಶಗಳಿರುತ್ತವೆ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಈ ಐದರಲ್ಲಿ ಯಾವ ಕೋಶವನ್ನು ಕರ್ಮವು ಶುದ್ಧಿಗೊಳಿಸುವುದು? ಈ ಪಂಚಕೋಶಗಳನ್ನು ಬಿಟ್ಟು ಶಾಶ್ವತನಾದಂಥ ಈಶ್ವರನ ಚಿಂತೆಯನ್ನು ಮಾಡಬೇಕಾಗಿರುತ್ತದೆ. ಬ್ರಹ್ಮಸ್ವರೂಪನಾಗಿ ಸರ್ವರಿಗೂ ಕಾರಣನಾಗಿರುವ ಶಂಕರನನ್ನು ಯಾರು ಧ್ಯಾನಿಸುವರೋ ಅವರು ಪಂಚಕೋಶವನ್ನು ಮೀರಿದವರಾಗುವರು. ಅವರಿಗೆ ಶಿವಸ್ವರೂಪರೆಂದು ಹೇಳುವರು.

ತಂದೆಯುವರೇ, ತಮಗೊಂದು ಪುರಾಣಪ್ರಸಿದ್ಧವಾದ ಕಥೆಯನ್ನು ಹೇಳುತ್ತೇನೆ ಕೇಳಿರಿ. ಕಾಶೀಕ್ಷೇತ್ರದ ಉತ್ತರಕ್ಕೆ ಬದರಿಕಾಶ್ರಮವುಂಟು. ಅಲ್ಲಿ ವರುಣನೆಂಬ ಶ್ರೇಷ್ಠ ತಪಸ್ವಿಯು ವಾಸವಾಗಿದ್ದನು. ಅವರಿಗೆ ಭೃಗು ಎಂಬುವ ಮಗನಿದ್ದನು. ಈ ಭೃಗುವಾದರೋ ತಪಸ್ಸಿಗೆ ನಿಕ್ಷೇಪಸ್ವರೂಪನಾಗಿದ್ದನು. ಅವನು ಒಂದು ದಿನ ತನ್ನ ತಂದೆಯ ಹತ್ತಿರ ಹೋಗಿ ಪ್ರದಕ್ಷಿಣೆ ನಮಸ್ಕಾರಾದಿಗಳನ್ನು ಮಾಡಿ ಗಂಭೀರನಾಗಿ ತಂದೆಯನ್ನು ಪ್ರಶ್ನೆಮಾಡಿದನು. ತಂದೆಯುವರೇ, ಶ್ರೇಷ್ಠರಾದ ಮುನಿಗಳು ಯಾರ ಉಪಾಸನೆಯನ್ನು ಮಾಡಬೇಕು? ಅಂತಹ ಬ್ರಹ್ಮ ಯಾವುದು? ಅದನ್ನು ನನಗೆ ಹೇಳಿರಿ. ಸತ್ಯಶ್ರೇಷ್ಠನಾದ ವರುಣನು ಮಗನಿಗೆ— ವಿಚಾರಪೂರ್ವಕವಾಗಿ— ತಪಸ್ಸಿನಿಂದ ನಡೆದರೆ ಬ್ರಹ್ಮಜ್ಞಾನವಾಗುವುದು. ಅದೇ ಪರಬ್ರಹ್ಮವೆಂದು ಲೋಕಾದಿ ಲೋಕಗಳಲ್ಲಿ ಪ್ರಸಿದ್ಧಿಯಾಗಿರುತ್ತದೆ ಎಂದು ಹೇಳಿದನು. ತಂದೆಯ ಅಪ್ಪಣೆಯಂತೆ ತಪಸ್ಸನ್ನು ಮಾಡಿ ಭೃಗು ಋಷಿಯು ಆನಂದದಿಂದ ವಿಚಾರಮಾಡಿ ನೋಡಿದನು. ಜ್ಞಾನವಾದ ಮೇಲೆ ಅವನಿಗೆ ತಿಳಿದುಬಂದದ್ದೇನೆಂದರೆ— ಪರಬ್ರಹ್ಮ ಶಬ್ದದಿಂದ ಅನ್ನವೇ ಎಂದು

ತಿಳಿಯುತ್ತಲಿದೆ. ಅನ್ನದಿಂದಲೇ ಎಲ್ಲಾ ಪ್ರಾಣಿಗಳು ಹುಟ್ಟುತ್ತವೆ. ಹುಟ್ಟಿದ ಪ್ರಾಣಿಗಳು ಬದುಕುತ್ತವೆ. ಎಲ್ಲಾ ಪ್ರಾಣಿಗಳಿಗೂ ಅನ್ನವೇ ಆಧಾರವಾದುದು. ಆದ್ದರಿಂದ ಮುನಿಗಳು ಅನ್ನವೇ ಮುಖ್ಯವೆಂದು ಹೇಳಿದರು. ಏತಕ್ಕೆಂದರೆ "ಅನ್ನ ಮಯಂ ಜಗತ್"—

ಹೀಗೆ ಅನ ಮಯ ಕೋಶವನ್ನು ಬ್ರಹ್ಮವೆಂದು ತಿಳಿದು ಭೃಗುವು ಇದರಲ್ಲಿ ಸಂತೋಷವನ್ನು ಹೊಂದದೆ ಪುನಃ ತಂದೆಯನ್ನು ಕೇಳಿದನು. ಆಗ ಅವನು ತಪಸ್ಸಿನಿಂದ ಪ್ರಾಣವೇ ಬ್ರಹ್ಮವೆಂದು ತಿಳಿಎಂದು ಹೇಳಿದನು. ಆದರಂತೆ ಭೃಗುವು ತಪಸ್ಸನ್ನು ಮಾಡಿದನು. ಪ್ರಾಣವೇ ಬ್ರಹ್ಮವೆಂದು ತಿಳಿದನು. ಪೂರ್ವದಂತೆ ಪುನಃ ತಪಸ್ಸನ್ನು ಮಾಡಿ ಮನೋಬ್ರಹ್ಮವೆಂದು ತಿಳಿದು ಅದರಿಂದಲೂ ತೃಪ್ತನಾಗದೆ ತಪಸ್ಸನ್ನಾಚರಿಸಿ ವಿಜ್ಞಾನಬ್ರಹ್ಮವೆಂದು ತಿಳಿದನು. ಇದರಿಂದಲೂ ಕೂಡ ಅವನಿಗೆ ಸ್ಥಿರತ್ವ ಬುದ್ಧಿ ಹುಟ್ಟಲಿಲ್ಲ. ಆದ್ದರಿಂದ ತಂದೆಯು ಆನಂದವೇ ಬ್ರಹ್ಮವೆಂದು ಹೇಳಿದನು. ಆನಂದ ರೂಪ ಸಮುದ್ರದ ಘನಸ್ವರೂಪವೇ ಪರಮಾತ್ಮನ ಶರೀರವಿರುತ್ತದೆ. ಜಗತ್ತಿನ ಕಾರಣ ಸ್ವರೂಪನಾದ ಶಿವನ ಶರೀರವೇ ಆನಂದಮಯವಾಗಿರುತ್ತದೆ.

ಈಶ್ವರನ ಅರ್ಧ ಶರೀರವು ಶಕ್ತಿಯಿಂದ ವ್ಯಾಪಿಸಿರುತ್ತದೆ. ಆ ಶಕ್ತಿಯು ಸ್ವಾಭಾವಿಕವಾಗಿ ಜ್ಞಾನಶಕ್ತಿ, ಕ್ರಿಯಾಶಕ್ತಿ, ಇಚ್ಛಾಶಕ್ತಿ ರೂಪವಾಗಿದೆ. ಸರ್ವರ ಅಂತರಾತ್ಮನಲ್ಲಿರತಕ್ಕ ಪ್ರಭು ಮತ್ತು ಪರಮೇಶ್ವರೀ ಶಕ್ತಿ ತನ್ನ ಕಲ್ಯಾಣಪ್ರದವಾದ ದಿವ್ಯಗುಣದೊಡನೆ ಮಧ್ಯದಲ್ಲಿ ಗುಪ್ತವಾಗಿರುತ್ತದೆ. ಸೃಷ್ಟಿಯ ರೂಪದಿಂದ ಪರಿಣಾಮಕ್ಕೆ ಬಂದ ಪ್ರಕೃತಿಯಾದರೂ ಆ ಶಕ್ತಿಯ ಅಂಶದಿಂದಿರುತ್ತದೆ. ಈ ಶಕ್ತಿದೇವಿಯು ಆಕಾಶ ಶಬ್ದದಿಂದ ವಾಚ್ಯಳಾಗಿರುತ್ತಾಳೆ. ಆನಂದಮಯ ಬ್ರಹ್ಮನ ಲಕ್ಷಣ ತದ್ರೂಪ ಆಕಾಶವೇ ಪ್ರಕೃತಿ ಇದೆ. ಈ ಕಾರಣವಿಲ್ಲದಿದ್ದರೆ ಯಾರಿಗೂ ಶ್ವಾಸೋಚ್ಛ್ವಾಸವನ್ನು ಮಾಡಲಿಕ್ಕೆ ಬರುವುದಿಲ್ಲ. ಯಾರು ಪ್ರಾಣಧಾರಣ ಮಾಡಿಕೊಂಡಿರುತ್ತಿದ್ದರು? ಇತ್ಯಾದಿ ಶೃತಿಗಳ ವಚನಾನುಸಾರವಾಗಿ ಆಕಾಶ ಶಬ್ದದ ಉತ್ಪತ್ತಿಯಿಂದ ಭಗವತಿಯಾದ ಶಕ್ತಿದೇವಿ ಯೆಂದೇ ಅರ್ಥವಾಗುತ್ತದೆ.

"ಆಸಮಂತಾತ್ ಕಾಶ್ಯತೇ ಇತಿ ಆಕಾಶಃ"

ಅಂದರೆ ಸರ್ವತ್ರ ವ್ಯಾಪಿಸಿ ಇರತಕ್ಕದ್ದೇ ಆಕಾಶ. ಇದೇ ವ್ಯಾಖ್ಯಾನವು ಪ್ರಕೃತಿಗಾದರೂ ಆಗುತ್ತದೆ. ಶಿವ, ಈಶಾನ ಶಬ್ದಗಳ ವಾಚ್ಯವೇ ಬ್ರಹ್ಮಾಕಾಶ ಶರೀರವೆಂದು ಹೇಳಲಾಗುವುದು. ಇಂತಿಷ್ಟು ಹೇಳಿದ ವರುಣನು ಪುತ್ರನನ್ನು ಸಂತೋಷಪಡಿಸಿದನು.

ಆದ್ದರಿಂದ ಪಂಚಕೋಶಗಳಲ್ಲಿ ಅನ್ನಮಯ ಕೋಶ (ಸ್ಥೂಲದೇಹ) ಇದೇ ಬಾಹ್ಯ ಕೋಶ ಅರ್ಥಾತ್ ಆವರಣವು ಆಗುತ್ತದೆ. ಇದು ಸಂಸ್ಕಾರದಿಂದ ಹೇಗೆ ತಾನೇ ಶುದ್ಧಿಯಾಗುತ್ತದೆ? ಮದ್ಯದಿಂದ ತುಂಬಿದ ಪಾತ್ರೆಯನ್ನು ಹೊರಗೆ ತೊಳೆದರೆ ಹೇಗೆ ಶುದ್ಧವಾಗುತ್ತದೆ? ಬುದ್ಧಿವಂತರಾದವರು ಒಳಗಿರತಕ್ಕ ಜೀವನ ಶುದ್ಧಿಯನ್ನು ಮಾಡಬೇಕು.

"ಸಿದ್ಧಾಹಿ ಸಾ ವಿಶುದ್ಧಿರ್ಮೇ ಲಿಂಗಧಾರಣ ದೀಕ್ಷಯಾ"

ಂದರೆ ಲಿಂಗಧಾರಣ ದೀಕ್ಷೆಯಿಂದ ನನ್ನ ಜೀವನದ ಶುದ್ಧಿಯಾಗಿರುತ್ತದೆ.

ಗುರುಣಾ ಮಸ್ತಕೇ ಹಸ್ತೇ ಜ್ಞಾನರೂಪಿಣಾ ।

ಜ್ಞಾನಮೂರ್ತಿಯಾದ ಗುರುವು ನನ್ನ ಮಸ್ತಕದ ಮೇಲೆ ಕೈಯನ್ನು ಇಟ್ಟ ಕಾರಣ ಅತ್ಯಂತ ಅಜ್ಞಾನಮಯವಾದ ನನ್ನ ಕಾರಣಶರೀರವು ಸುಟ್ಟುಹೋಗಿರುತ್ತದೆ. ಅಲ್ಲಿರುವ ಶಿವಕಲೆಯು ಶ್ರದ್ಧಾಮಯ ಆಗಿರುತ್ತದೆ. ಶ್ರದ್ಧೆಯು ಮನಃಪೂರ್ವಕ ಆಗುವುದರಿಂದ ಆ ಶ್ರೇಷ್ಠ ಶಿವಕಲೆಯು ಮನಸ್ಸಿನಲ್ಲಿ ಐಕ್ಯತೆಯನ್ನು ಹೊಂದುವುದು. ನನ್ನ ಮನಸ್ಸು ಎಲ್ಲಾ ಪ್ರಾಣಸಹಿತ ಇಂದ್ರಿಯಗಳೊಡನೆ ಕೂಡಿರುವುದರಿಂದ ಇಂದ್ರಿಯಗಳು ನಷ್ಟಪ್ರಾಯವಾಗಿರುತ್ತವೆ. ಮನಸ್ಸು ನಷ್ಟವಾದ ಮೇಲೆ ವಾಯುರೂಪ ಪ್ರಾಣವು ನಷ್ಟವಾಗಿದೆ. ಪ್ರಾಣವರ್ಗವು ನಷ್ಟವಾಗಲಾಗಿ ಸ್ಥೂಲಶರೀರದ ಸ್ಥಿತಿಯೂ ಕೂಡ ಹಾಗೆಯೇ ಇರುತ್ತದೆ. ಸ್ಥೂಲ ಮತ್ತು ಸೂಕ್ಷ್ಮ ಈ ಎರಡೂ ದೇಹಗಳಿಗೆ ಕಾರಣವಾಗಿವೆ. ಪಂಚಭೂತಗಳು ಗಾಳಿ ಇಲ್ಲದೆ ಇರತಕ್ಕ ಸ್ಥಲದಲ್ಲಿದ್ದ ಸುಟ್ಟ ಬಟ್ಟೆಯಂತೆ ಹೊಳೆಯುತ್ತಲಿವೆ. ರಕ್ತ ಮತ್ತು ವೀರ್ಯದಿಂದ ಕೂಡಿದ ನನ್ನ ಶರೀರವು ಪಂಚಭೂತಾತ್ಮಕವಾಗಿರುತ್ತದೆ. ಆದ್ದರಿಂದ ಮಹಾಯೋಗಿಯಾದ ನನ್ನ ಗುರುವು ಪೃಥ್ವಿಯ ಸ್ಥಾನದಲ್ಲಿ ನಕಾರ, ಆಚಾರಲಿಂಗ ಜಲಸ್ಥಾನದಲ್ಲಿ ಮಕಾರ, ಪ್ರಣವ ಗುರುಲಿಂಗ ತೇಜಸ್ಥಾನದಲ್ಲಿ ಶಿಕಾರ, ಶಿವಲಿಂಗ ವಾಯುಸ್ಥಾನದಲ್ಲಿ ವಕಾರ, ಶಿವಸ್ವರೂಪಿ ಚರಲಿಂಗ ಆಕಾಶಸ್ಥಾನದಲ್ಲಿ ಯಕಾರ, ಪ್ರಸಾದಲಿಂಗ ಮತ್ತು ಮನಸ್ಸಿನ ಸ್ಥಾನದಲ್ಲಿ ಪ್ರಣವ ಚೈತನ್ಯರೂಪ ಮಹಾಲಿಂಗ ಇವುಗಳ ಸ್ಥಾಪನೆಯನ್ನು ಮಾಡಿ ಮಂತ್ರಮಯವಾದ ಎರಡನೆಯ ಶರೀರವನ್ನು ತನ್ನ ಶಕ್ತಿಯಿಂದ ಉತ್ಪನ್ನಮಾಡಿರುತ್ತಾನೆ. ಈ ಮಂತ್ರಮಯವಾದ ಶರೀರಕ್ಕೆ ಇತರರಂತೆ ಉಪನಯನ ಸಂಸ್ಕಾರಮಾಡಲಿಕ್ಕೆ ನಾನು ಒಪ್ಪುವುದಿಲ್ಲವೆಂದು ಹೇಳಿದನು.

"ಇತ್ಯುಕ್ತ್ವಾ ಬಸವೇಶ್ವರಸ್ತು ಮುನಿಭಿಃ ಶ್ಲಾಘ್ಯಮಾನಃ ಪರಂ ।
ವಾಕ್ಯಂ ವಾಕ್ಯವಿದಗ್ರಣೀಃ ಸುರುಚಿರಂ ಶೈವ ಪ್ರಮೋದಾವಹಂ ।
ಪ್ರಾಲೇಯಾಚಲತುಲ್ಯ ಧೈರ್ಯ ಕಲಿತಸ್ತಸ್ಮಿನ್ ಸ್ಥಿತಃ ಸ ಸ್ಮಿತಃ
ದಂತಾಭ್ಯುದ್ಗತಕಾಂತಿ ಸಂಚಯ ಪರಿಭ್ರಾಜದ್ದಿಗಂತಃ ಕ್ಷಣಮ್ ॥

ಈ ಪ್ರಕಾರವಾಗಿ ಹೇಳಿದ ಬಸವೇಶ್ವರನ ಮಾತುಗಳನ್ನು ಅಲ್ಲಿದ್ದ ಪಂಡಿತವರೇಣ್ಯರೆಲ್ಲರೂ ಸ್ತುತಿಸಲಾಗಿ ಶ್ರೀ ಬಾಲಕನಾದ ಬಸವೇಶ್ವರನು ಮುಗುಳುನಗೆ ನಗುತ್ತಲಿದ್ದ ಸಮಯದಲ್ಲಿ ಆತನ ದಂತಗಳಿಂದ ಉತ್ಪನ್ನವಾದ ಕಾಂತಿಯು ಸಭೆಯನ್ನು ಕ್ಷಣಕಾಲ ಪ್ರಕಾಶಮಯವನ್ನಾಗಿ ಮಾಡಿತು.

ಮೊದಲು ತನ್ನ ತಂದೆಯನ್ನು ಕುರಿತು ಹೇಳಿದ ಬಸವನು ಈಗ ಪಂಡಿತಮಂಡಲಿಯ ಕಡೆಗೆ ಹೊರಳಿ— ಇನ್ನೊಂದು ಇತಿವೃತ್ತವನ್ನು ನಿಮ್ಮಗಳಿಗೆ ಹೇಳುತ್ತೇನೆ.

ಪೂರ್ವಕಾಲದಲ್ಲಿ ಅಶ್ವಲಾಯನನೆಂಬುವ ಮುನಿಯು ವೇದವೇದಾಂಗಗಳ ಅಧ್ಯಯನವನ್ನು ಮಾಡಿ ಅವುಗಳಲ್ಲಿ ಪರಸ್ಪರ ವಿರುದ್ಧಗಳಾದ ಅನೇಕ ವಾಕ್ಯಗಳನ್ನು ನೋಡಿ ಚಿಂತಿಸಿ ನನ್ನ ಸಂಶಯ ನಿವಾರಣೆ ಮಾಡತಕ್ಕವರು ಯಾರಿರಬಹುದೆಂದು ಆಲೋಚಿಸಿ ಬ್ರಹ್ಮಲೋಕಕ್ಕೆ ಹೋದನು. ಅಲ್ಲಿ ಮುನಿಗಳಿಂದ ಕೂಡಿದ ಬ್ರಹ್ಮನನ್ನು ನೋಡಿ ಮನಸ್ಸಿನಲ್ಲಿದ್ದ ಸಂಶಯವನ್ನು ಬ್ರಹ್ಮನಿಗೆ ನಿವೇದಿಸಿದನು.

ಪೂಜ್ಯರೇ, ಸತ್ಪುರುಷರು ಯಾವಾಗಲೂ ಯಾವ ವಸ್ತುವನ್ನು ಆಶ್ರಯಿಸುತ್ತಾರೆ? ಶೃತಿರೂಪ ಪಂಜರದಲ್ಲಿ ಯಾವದು ಗುಪ್ತವಾಗಿ ಇಡಲ್ಪಟ್ಟಿರುತ್ತದೆ? ಮತ್ತು ಯಾವುದರ

ಆಶ್ರಯದಿಂದ ಎಲ್ಲಾ ಪಾಪಗಳನ್ನು ನಾಶಮಾಡಿ ಅದನ್ನು ತಿಳಿಯತಕ್ಕ ಮನುಷ್ಯನು ಪರಾತ್ಪರನಾದ ಪುರುಷನನ್ನು ಹೊಂದುತ್ತಾನೆ? ಅಂತಹ ಪರಮಪುರುಷನ ವಿಷಯವನ್ನು ಹೇಳು. ಅದಕ್ಕೆ ಬ್ರಹ್ಮನು—

ಶ್ರದ್ಧಾ, ಭಕ್ತಿ, ಜ್ಞಾನ, ಧ್ಯಾನಾದಿಗಳಿಂದಲೇ ಆ ಶ್ರೇಷ್ಠ ವಸ್ತುವು ಸಿಗುವುದು. ಜ್ಯೋತಿಷ್ಟೋಮ ಮೊದಲಾದ ಕರ್ಮಗಳಿಂದಲೂ, ಧನದಿಂದಲೂ ಅಥವಾ ಸಂಸಾರ ತ್ಯಾಗದಿಂದಲೂ ಬ್ರಹ್ಮವಿದ್ಯೆಯು ಸಿಗಲಾರದು. ಎಲೌ ಮುನಿಯೇ, ಪೂರ್ವದಲ್ಲಿ ಬ್ರಹ್ಮವಾದಿಗಳಾದ ಅನೇಕ ಜನ ಋಷಿವರ್ಯರು ಸರ್ವ ಕರ್ಮದ ತ್ಯಾಗವನ್ನು ಮಾಡಿ ಕೇವಲ ಪರಮಾತ್ಮ ಧ್ಯಾನದಲ್ಲಿ ಮಗ್ನರಾಗಿ ಶಾಶ್ವತ ಪದವಿಯನ್ನು ಪಡೆದಿರುತ್ತಾರೆ. ಸ್ವರ್ಗವನ್ನು ಧಿಃಕರಿಸಿ ವೇದ ವೇದಾಂತಾದಿಗಳಿಂದ ಜ್ಞಾನವನ್ನು ಪಡೆದು ತಮ್ಮ ಉದ್ದೇಶವನ್ನು ನಿಶ್ಚಿತಗೊಳಿಸಿ ಶ್ರೇಷ್ಠ ಮುನಿಗಳು ತಮ್ಮ ಹೃದಯರೂಪಿ ಗುಹೆಯಲ್ಲಿ ಇರತಕ್ಕ ಕೋಟಿ ಸೂರ್ಯರಂತೆ ಹೊಳೆಯುತಕ್ಕ ಇಂತಹ ವಸ್ತುವಿನಲ್ಲಿ ಐಕ್ಯವನ್ನು ಹೊಂದಿರುತ್ತಾರೆ. ಕಾಮ್ಯಕರ್ಮದ ತ್ಯಾಗಕ್ಕೆ ಸನ್ಯಾಸವೆಂದು ಹೇಳುತ್ತಾರೆ. ಅದರ ಯೋಗದಿಂದ ಯತಿಗಳು ಶುದ್ಧ ಸಾತ್ವಿಕ ಕಾರ್ಯದಿಂದ ಕೂಡಿದವರಾಗಿರುತ್ತಾರೆ.

"ಬೃಹತ್ವಾದ್ಬ್ರಹ್ಮಣತ್ವಾಚ್ಚ ಶಿವೋ ಬ್ರಹ್ಮೇತಿ ಕಥ್ಯತೇ"

ಎಲ್ಲಾ ಕಡೆಗೂ ವ್ಯಾಪಿಸಿರುವುದರಿಂದ ಅಂದರೆ ಬ್ರಹ್ಮಸ್ವರೂಪನಾಗಿರುವುದರಿಂದಲೂ, ಬ್ರಹ್ಮತತ್ವದಿಂದ ಕೂಡಿರುವುದರಿಂದಲೂ ಶಿವನಿಗೆ ಬ್ರಹ್ಮನೆಂದು ಹೇಳಲಾಗುತ್ತದೆ. ಕೋಟಿ ಸೂರ್ಯರಷ್ಟು ತೇಜಸ್ವಿಯೂ, ಕೋಟಿ ಚಂದ್ರರಷ್ಟು ತಂಪಾಗಿಯೂ ಇರತಕ್ಕ ಸೋಮಲೋಕವು ಅರ್ಧಮಾತ್ರಾತ್ಮಕವಾಗಿರುತ್ತದೆ. ಬ್ರಹ್ಮಾಂಡದ ಊರ್ಧ್ವಭಾಗದಲ್ಲಿ ಪ್ರಕಾಶಿಸತಕ್ಕಂಥ ಯಾವ ಲೋಕವಿದೆಯೋ ಅದಕ್ಕೆ ಬ್ರಹ್ಮಲೋಕವೆಂದು ಹೆಸರು. ಎಲೌ ಮಹಾಮುನಿಯೇ, ಅದೇ ಈ ಲೋಕವಿದೆ.

ವಿಶ್ವದ ಆಕಾರದಿಂದ ಯಾವ ಶಕ್ತಿಯು ಪರಿಣಾಮವನ್ನು ಹೊಂದುತ್ತದೆಯೋ ಅದಕ್ಕೆ ಮುನಿಶ್ರೇಷ್ಠರು ಪರಾಪ್ರಕೃತಿಯೆಂದು ಹೇಳುತ್ತಾರೆ. ಪರಶಬ್ದದಿಂದ ಬ್ರಹ್ಮವೆಂತಲೂ ತಿಳಿಯತಕ್ಕದ್ದು. ಆ ಪ್ರಕೃತಿಯ ಅಂತ್ಯಕಾಲವು ಪ್ರಾಪ್ತವಾಗದಾಗ ಎಲ್ಲ ಜ್ಞಾನಿಗಳೂ ಬಂಧನದಿಂದ ಮುಕ್ತರಾಗುತ್ತಾರೆ. ಅಂದರೆ ಶಾಶ್ವತನಾದ ಪರಮಾತ್ಮನ ಮಧ್ಯದಲ್ಲಿ ವಿಲೀನರಾಗುತ್ತಾರೆ.

ಏಕಾಂತವೂ ಮನಸ್ಸಿಗೆ ಆನಂದವನ್ನು ಕೊಡತಕ್ಕ ಸ್ಥಲದಲ್ಲಿ ಸುಖಾಸನವನ್ನು ಹಾಕಿಕೊಂಡು ಸಿದ್ಧಪುರುಷನು ವಿರಜಾನಲ ಭಸ್ಮವನ್ನು ಧರಿಸಿ "ಅಗ್ನಿರಿತಿ ಭಸ್ಮ, ವಾಯುರಿತಿ ಭಸ್ಮ, ಜಲಮಿತಿ ಭಸ್ಮ, ಸ್ಥಲಮಿತಿ ಭಸ್ಮ" ಎಂಬುವ ಮಂತ್ರದಿಂದ ಏಳು ಸಾರೆ ಮಂತ್ರಿಸಿ ಎಲ್ಲ ಅವಯವಗಳಿಗೆ ಧರಿಸಿ ರುದ್ರಾಕ್ಷಮಾಲಾಭರಣಭೂಷಿತನಾಗಿ ಷಡಕ್ಷರ ಜಪಯುಕ್ತನಾಗಿ ಇಷ್ಟಲಿಂಗ ಪೂಜಾದಿಗಳಲ್ಲಿ ತೊಡಗಿದರೆ ಇದು ಒಂದು ಸಂಸ್ಕಾರವಾಗುತ್ತದೆ. ತತ್ವವೇತ್ತರಾದ ಮುನಿಗಳು ಇದಕ್ಕೆ ಅತ್ಯಾಶ್ರಮ ಸಂಸ್ಕಾರವೆಂದು ಹೇಳುತ್ತಾರೆ. ಈ ಅತ್ಯಾಶ್ರಮದಲ್ಲಿರತಕ್ಕವನು ಇಂದ್ರಿಯಗಳನ್ನೆಲ್ಲ ನಿಗ್ರಹ ಮಾಡಿಕೊಂಡಿರಬೇಕು. ರಜೋಗುಣ ಶೂನ್ಯವಾಗಿಯೂ ಇದ್ದು ಮತ್ತು ಪವಿತ್ರತಮನೂ, ಪಾಪರಹಿತನೂ, ಅತಿ ನಿರ್ಮಲನೂ ಆಗಿ ತನ್ನ ಹೃದಯ ಪುಂಡರೀಕ ಕಮಲವನ್ನು ಯಾವಾಗಲೂ ಧ್ಯಾನಿಸತಕ್ಕದ್ದು. ಆ ಹೃದಯದ ಮಧ್ಯದಲ್ಲಿ ಶಂಕರನನ್ನು ಧ್ಯಾನಿಸತಕ್ಕದ್ದು. ಇದಕ್ಕೆ ದಹರಾಕಾಶವೆಂದು ಹೆಸರು.

ಈ ಪರಮಾತ್ಮ ಶಕ್ತಿಯು ಅತರ್ಕ್ಯವೂ, ಅವ್ಯಕ್ತವೂ ಆಗಿರುತ್ತದಲ್ಲದೆ ಅದ್ಭುತಾನಂತವೂ ಆಗಿರುತ್ತದೆ. ಭಗವಾನ್ ಶಂಕರನು ಶ್ರೇಷ್ಠರಲ್ಲಿ ಶ್ರೇಷ್ಠನೂ, ದೊಡ್ಡವರಲ್ಲಿ ಅತಿ ದೊಡ್ಡವನೂ, ಅಣುವಿಗಿಂತಲೂ ಅಣುವೂ ಆಗಿ ಶುಭ್ರವಾದ ಕಾಂತಿಯಿಂದ ಕೂಡಿರುತ್ತಾನೆ. ಅವನು ಮೃತ್ಯುಂಜಯ, ಕಾಲಕೂಟ ವಿಷವನ್ನು ಪಾನಮಾಡಿದವನೂ ಆಗಿ ಅನಂತರೂಪಧಾರಿಯಾದರೂ ಸ್ಪಷ್ಟ ಕಾಣಿಸುವುದಿಲ್ಲ. ಅವನು ಕಲ್ಯಾಣಕಾರಕನಾಗಿದ್ದು ಎಲ್ಲರಿಗೂ ಮೂಲಕಾರಣನಾಗಿರುತ್ತಾನೆ. ಆತನು ಅತೀತನೂ, ಮೃತ್ಯುರಹಿತನೂ ಇದ್ದು ವೇದಕ್ಕೆ ಮೂಲಕಾರಣನಾಗಿರುತ್ತಾನೆ. ಇವನಿಗೆ ಆಕಾರವಿಲ್ಲ, ಭೇದವಿಲ್ಲ. ನಿತ್ಯನೂ, ಶಾಶ್ವತನೂ ಆಗಿರುತ್ತಾನೆ. ಶಕ್ತಿಯು ಸಹಾಯಕಳಾಗಿದ್ದಾಳೆ. ಆ ಪರಮಾತ್ಮನು ವಿಶ್ವದ ಪ್ರಭು. ತ್ರಿನೇತ್ರಧಾರಿ, ತೇಜಸ್ವಿ, ಪರಿಪೂರ್ಣ ನೀಲಕಂಠನಿದ್ದು ಅವನಿಗಿಂತ ಶ್ರೇಷ್ಠರು ಯಾರೂ ಇರುವುದಿಲ್ಲ. ಪಂಚ ಮಹಾಭೂತಗಳಿಗೆ ಆದಿಕಾರಣನೂ, ಸುಷುಪ್ತಾವಸ್ಥೆಗೆ ಸಾಕ್ಷಿಭೂತನೂ ಆದ ಇವನನ್ನು ಧ್ಯಾನಿಸಿ ಯೋಗಿಯು ಈತನನ್ನು ಕೂಡುತ್ತಾನೆ. ಅವನೇ ಬ್ರಹ್ಮ, ಶಿವನು, ವಿಷ್ಣು—

"ಸ ಯೇವ ಸರ್ವಂ ಯದ್ಭೂತಂ ಯಚ್ಚ ಭವ್ಯಂ"

ಇಂತಹ ದೇವರನ್ನು ಧ್ಯಾನಿಸಿದರೆ ಮನುಷ್ಯನು ಮೃತ್ಯುವಿನಿಂದ ಪಾರಾಗುತ್ತಾನೆ. ಆನಂದ ಮತ್ತು ನಿತ್ಯ ಇವುಗಳು ಪರಮಾತ್ಮನ ಶರೀರವಾಗಿರುತ್ತವೆ. ಅಖಂಡ ಜ್ಞಾನಸ್ವರೂಪ ಎಲ್ಲರಿಗೂ ಪ್ರಭು. ಇಂತಹ ಪರಮಾತ್ಮನಿಗಿಂತಲೂ ನಾನು ಭಿನ್ನನಲ್ಲವೆಂದು ಯಾವಾತನು ತಿಳಿಯುತ್ತಾನೆಯೋ ಆತನಲ್ಲಿ ಮೂರೂ ಅವಸ್ಥೆಗಳು ಲಯವನ್ನು ಹೊಂದುತ್ತವೆ.

ಜಾಗ್ರತ್, ಸ್ವಪ್ನ, ಸುಷುಪ್ತ್ಯಾದಿ ವಿಶ್ವವು ಯಾವಾತನಲ್ಲಿ ಪ್ರಕಾಶಿಸುತ್ತದೆಯೋ ಅದೇ ಬ್ರಹ್ಮವೆಂದು ತಿಳಿಯಬೇಕು. ಈ ಬ್ರಹ್ಮವಿದ್ಯೆಯನ್ನು ತಿಳಿಯಬೇಕಾದರೆ ಶತರುದ್ರೀಯದ ಅಧ್ಯಯನ ಮಾಡಬೇಕು. ಅಂತಹ ಪುರುಷನು ಅಗ್ನಿಪೂತನಾಗುತ್ತಾನೆ. ಪಂಚಮಹಾಪಾತಕಗಳಿಂದ ಪುನೀತನಾಗುತ್ತಾನೆ. ಯಾವನು ವಿಭೂತಿಯನ್ನು ಧರಿಸಿಕೊಂಡು ಪ್ರಣವ ಪಂಚಾಕ್ಷರಿಯನ್ನು ಜಪಿಸುತ್ತ ಶಿವಲಿಂಗಪೂಜೆಯಲ್ಲಿ ಮಗ್ನನಾಗಿರುತ್ತಾನೆಯೋ ಅವನಿಗೆ ಮೋಕ್ಷವು ಲಭಿಸುತ್ತದೆ. ಕರ್ಮತ್ಯಾಗದಿಂದಲೇ ಮುಕ್ತಿಯಾಗುವದು.

ಈ ಪ್ರಕಾರವಾಗಿ ಬಾಲಕನಾದ ಬಸವನು ಆಳವಾಗಿ ಅಧ್ಯಯನಮಾಡಿ ವೇದವೇದಾಂಗಗಳನ್ನು ತಿಳಿದ ಪಂಡಿತರು ಬೆರಗಾಗುವಂತೆ ಶಾಸ್ತ್ರೀಯವಾಗಿ ಹೇಳಿದ ವಿಷಯಗಳು ಕ್ರಮಬದ್ಧವಾಗಿದ್ದುವು. ಇದನ್ನೆಲ್ಲ ಕೇಳಿದ ಪಂಡಿತರು ಪುನಃ ಪ್ರಶ್ನೆಯನ್ನು ಮಾಡಿದರು.

ಭಾಗ್ಯಶಾಲಿಯಾದ ಬಸವೇಶನೇ, ಎಲ್ಲ ಶಾಸ್ತ್ರಗಳ ವಿಷಯವು ನಿನ್ನಲ್ಲಿ ಚನ್ನಾಗಿ ಅಳವಡಿಸಿದೆ. ಆದರೆ ಅನಾದಿಕಾಲದಿಂದಲೂ ಜಗತ್ತು ಹೀಗೆಯೇ ನಡೆದಿರುತ್ತದೆ. ಇವರಲ್ಲಿ ವೇದವ್ಯಾಸರಂತಹ ಮಹಾಮುನಿಗಳೂ ಕೂಡ ಇರುತ್ತಾರೆ. ನೀನು ಈಗ ಹೇಳತಕ್ಕ ವಿಷಯವನ್ನು ಅವರು ಏಕೆ ಪ್ರತಿಪಾದಿಸಲಿಲ್ಲ? ವೇದವಾಕ್ಯಗಳು ನೀನು ಹೇಳಿದುದಕ್ಕೆ ವಿರೋಧವಾದವುಗಳಾಗಿರುತ್ತವೆ. ಎಂಟು ವರ್ಷದ ಬಾಲಕನಿಗೆ ಉಪನಯನ ಸಂಸ್ಕಾರವನ್ನು ಮಾಡಿ ಆಮೇಲೆ ವೇದಾಧ್ಯಯನ ಮಾಡಬೇಕು. ಈ ಪದ್ಧತಿಯು ಪುರಾತನ ಕಾಲದಿಂದ ನಡೆದುಬಂದುದಾಗಿರುತ್ತದೆ. ಶೃತಿಯೂ ಕೂಡ ಇದನ್ನೇ ಪ್ರತಿಪಾದಿಸುತ್ತಲಿದೆ.

ಉಪನಯನ ಸಂಸ್ಕಾರವು ಜಾತಕರ್ಮ ಮೊದಲಾದವುಗಳಿಗಿಂತಲೂ ಶ್ರೇಷ್ಠ ವಾದುದು. ಇದನ್ನು ಮಾಡಿಸಿಕೊಳ್ಳದಿದ್ದರೆ ಬ್ರಾಹ್ಮಣನು ಭ್ರಷ್ಟನಾಗುತ್ತಾನೆ. ಉಪನಯನ ಸಂಸ್ಕಾರದಿಂದ ಅವನು ಶುದ್ಧನಾಗುತ್ತಾನೆ. ಮತ್ತು ಪ್ರತಿಯಾಗಿ ಬ್ರಹ್ಮ ಚರ್ಯಾಶ್ರಮ ಪಾಲಿಸಬೇಕಾಗುತ್ತದೆ. ವೇದ ವೇದಾಂಗಗಳನ್ನು ಕಲಿತು ಗುರುಗಳ ಅಪ್ಪಣೆಯಿಂದ ಗೃಹಸ್ಥಾಶ್ರಮವನ್ನು ಹೊಂದಬೇಕಾಗುತ್ತದೆ. ಆಮೇಲೆ ವಾನಪ್ರಸ್ಥಾ ಶ್ರಮವಿದೆ.

ಸಭೆಯಲ್ಲಿಯ ಬ್ರಾಹ್ಮಣ ಪಂಡಿತರ ಈ ಮಾತುಗಳನ್ನು ಕೇಳಿ ಮುಗುಳುನಗೆ ನಗುತ್ತ ಬಸವೇಶನು ಉತ್ತರ ಕೊಡುತ್ತಾನೆ.

ಸನ್ಯಾಸಾಶ್ರಮ ಸ್ವೀಕಾರಮಾಡುವುದಕ್ಕಿಂತಲೂ ಕರ್ಮತ್ಯಾಗವೇ ಶ್ರೇಷ್ಠ ವಾದುದು. ಸನ್ಯಾಸಾಶ್ರಮ ಸ್ವೀಕಾರಮಾಡಿ ಅದರಲ್ಲಿ ಒಂದು ನಿಯಮವನ್ನು ಬಿಟ್ಟರೂ ಅವನು ಪತಿತನಾಗುತ್ತಾನೆ. ವೇದದಲ್ಲಿ ಹೇಳಿದ ಕರ್ಮಗಳು ಮೂರು ಪ್ರಕಾರ ಇರುತ್ತವೆ. ನಿತ್ಯ, ನೈಮಿತ್ತಿಕ, ಕಾಮ್ಯ ಆಯಾಯ ಫಲೇಚ್ಛೆಯಿಂದ ಮಾಡಿದ ಕರ್ಮ ಕಾಮ್ಯಕರ್ಮವೆಂದು ಹೇಳಲ್ಪಡುವುದು. ಗ್ರಹಣ ಕಾಲದಲ್ಲಿ ಸ್ನಾನಾದಿಗಳನ್ನು ಮಾಡು ವುದು ನೈಮಿತ್ತಿಕ, ನಿತ್ಯಕರ್ಮವು ಪ್ರತಿಯೊಬ್ಬರಿಗೂ ಇದ್ದೇ ಇರುತ್ತದೆ.

ಬದುಕಿರುವವರೆಗೆ ಅಗ್ನಿಹೋತ್ರಿಯಾಗಿರಬೇಕು, ಇಂತಹ ಒಂದು ವಾಕ್ಯವು ಇದೆ. ಯಾವಜ್ಜೀವ ಎಂಬುವ ಪದದಿಂದ ನಿತ್ಯಕರ್ಮವಾಗುತ್ತದೆ. ''ಅಹರಹಃ ಸಂಧ್ಯಾಮುಪಾ ಸೀತ'' ಸಂಧ್ಯಾವಂದನೆ ಮಾಡಬೇಕು. ಮೀಮಾಂಸಕರೂ, ನೈಯಾಯಿಕರೂ ಕೂಡ ಇದಕ್ಕೆ ನಿತ್ಯಶಾಸ್ತ್ರವೆಂದು ಹೇಳುತ್ತಾರೆ. ಇವೆಲ್ಲ ನಿತ್ಯಕರ್ಮಗಳನ್ನು ಪ್ರಾಣ ಇರುವ ಪರ್ಯಂತರ ಮಾಡಬೇಕಾಗುತ್ತದೆ ಎಂದೇ ಅರ್ಥವಾಗುತ್ತಲಿದೆ. ಜೀವ ಇರುವವರೆಗೆ ನಾನು ಈ ಕರ್ಮವನ್ನು ಮಾಡುತ್ತೇನೆಂದು ಪ್ರತಿಜ್ಞೆಮಾಡಿ ಕದಾಚಿತ್ ಆ ಕರ್ಮ ಮಾಡದೆ ಇದ್ದು, ಸನ್ಯಾಸಾಶ್ರಮ ಸ್ವೀಕಾರಮಾಡಿದರೆ ಆ ಕರ್ಮತ್ಯಾಗದಿಂದ ತಾನು ಹಿಡಿದ ವ್ರತಕ್ಕೆ ಭಂಗಮಾಡಿದಂತಾಗುತ್ತದೆ.

ವಿಧಿ ಪ್ರಕಾರವಾಗಿ ಸ್ವೀಕರಿಸಿದ ಕರ್ಮವನ್ನು ವಿಧಿ ಪ್ರಕಾರವಾಗಿ ತ್ಯಾಗವನ್ನು ಮಾಡಿದರೆ ದೋಷವಿಲ್ಲೆಂದು ಹೇಳುವ ಮಾತಿನಲ್ಲಿ ಅರ್ಥವಿರುವುದಿಲ್ಲ. ಅತಿರಾತ್ರ ಎಂಬುವ ಯಜ್ಞದಲ್ಲಿ ಇದನ್ನೇ ಹೇಳಲಾಗಿದೆ. ಮೊದಲು ಯಾವುದಾದರೊಂದು ಕರ್ಮದ ಅಂಗೀಕಾರಮಾಡಿ ಅನಂತರ ಮಧ್ಯದಲ್ಲಿ ಅದನ್ನು ಬಿಟ್ಟರೆ ಅವನು ಭ್ರಷ್ಟ ನಾಗುತ್ತಾನೆ. ಅಂಗೀಕಾರಮಾಡಿ ಬಿಡುವುದಕ್ಕಿಂತ ಅನಂಗೀಕಾರವೇ ಶ್ರೇಷ್ಠವಾದುದು. ಇದನ್ನೆಲ್ಲ ತಿಳಿದ ವ್ಯಾಸಾದಿ ಮಹರ್ಷಿಗಳು ಮೌಂಜೀವ್ರತವನ್ನು ಬಿಟ್ಟು ಸನ್ಯಾಸ ಸ್ವೀಕರಿಸಿದರು.

ವ್ಯಾಸರಿಗೆ ಯಾರು ಮುಂಜಿಯನ್ನು ಮಾಡಿದರು? ನೀವು ವ್ಯಾಸರ ಹೆಸರನ್ನೆತ್ತಿದ ಕಾರಣ ನಾನು ವ್ಯಾಸರ ಬಗ್ಗೆ ಉತ್ತರ ಕೊಡಬೇಕಾಗುತ್ತದೆ. ಇಲ್ಲಿ ವ್ಯಾಸರ ಜನ್ಮದ ಬಗ್ಗೆ ನಾನು ತಮ್ಮಗಳಿಗೆ ಕೆಲವು ವಿಷಯ ಹೇಳುತ್ತೇನೆ.

ವಸಿಷ್ಠನ ಮಗನು ಶಕ್ತಿಯೆಂಬುವನು ಇದ್ದನು. ಅವನ ಹೊಟ್ಟೆಯಲ್ಲಿ ಸುಪ್ರಸಿದ್ಧ ನಾದ ಪರಾಶರನೆಂಬುವನು ಜನ್ಮವನ್ನು ತಾಳಿದನು. ಪರಾಶರನು ತನ್ನ ಆಶ್ರಮದ ಸಮೀಪದಲ್ಲಿ ಸಂಚರಿಸುವ ಕಾಲಕ್ಕೆ ಓರ್ವ ಕುಮಾರಿಯನ್ನು ನೋಡಿದನು. ಅವಳು

ಸುಂದರಿಯೂ, ಕಾಂಚನಾಂಗಿಯೂ, ಪದ್ಮಪತ್ರದಂತೆ ನೇತ್ರಗಳುಳ್ಳವಳೂ ಆಗಿದ್ದಳು. ಕುಚಗಳಿಂದ ಬಗ್ಗಿದವಳಾಗಿ ಅಡ್ಡಾಡುವ ಬಳ್ಳಿಯೋ ಏನೋ ಎಂಬುವ ಹಾಗೆ ಮನೋಹರಳಾಗಿದ್ದಳು. ಅವಳನ್ನು ನೋಡಿದ ಕೂಡಲೇ ಪರಾಶರನ ಮನಸ್ಸು ಚಂಚಲವಾಗಿ ಆ ಅಂಬಿಗರ ತರುಣಿಯಲ್ಲಿ ಆಸಕ್ತವಾಯಿತು.

ಏಕಾಂತದಲ್ಲಿರತಕ್ಕ ಆ ಕನ್ನಿಕೆಯನ್ನು ಕುರಿತು ಒಂದು ದಿನ ಪರಾಶರನು ಮಾತನಾಡಿಸಿದನು. ಎಲೌ ಕನ್ನಿಕೆಯೇ, ಈ ದ್ವೀಪದಲ್ಲಿ ನಿನ್ನಕೂಡ ಕ್ರೀಡಿಸಲಿಕ್ಕೆ ಇಚ್ಛೆಯುಳ್ಳವನಾಗಿರುತ್ತೇನೆ.

ಋಷಿವರ್ಯರ ಈ ಮಾತುಗಳನ್ನು ಕೇಳಿ ಆ ಕನ್ನಿಕೆಯು ನಾಚಿಕೆಯಿಂದ ತಲೆಯನ್ನು ತಗ್ಗಿಸಿದಳು. ಪರಾಶರ ಮುನಿವರ್ಯರಿಗೆ ಪ್ರಾರ್ಥಿಸಿದಳು.

ಕೈವರ್ತ ತನಯಾ ಚಾಹಂ ಕನ್ಯಾದುರ್ಗಂಧ ಸಂಕುಲಾ ।
ದಿವಾಭೋಗೋ ಹ್ಯಸೌ । ದೋಷಃ ಪಥಿಕಾಶ್ಚ ಸಹಸ್ರಶಃ ॥

ನಾನು ಅಂಬಿಗರವನ ಮಗಳು. ದುರ್ಗಂಧದಿಂದ ಕೂಡಿದವಳು. ಹಗಲಿನಲ್ಲಿ ಸ್ತ್ರೀಭೋಗವು ನಿಷಿದ್ಧವಾದುದು. ಈ ಮಾರ್ಗದಲ್ಲಿ ಸಾವಿರಾರು ಜನರು ಅಡ್ಡಾಡುತ್ತಲಿದ್ದಾರೆ. ಇದು ಏಕಾಂತ ಸ್ಥಾನವಲ್ಲ. ಮಹರ್ಷಿಗಳಾದ ತಮಗೆ ಹೆಚ್ಚಿಗೆ ಹೇಳಲಾರೆ ಎಂದಳು.

ಅವಳು ಹೀಗೆ ಹೇಳಿದ ಕೂಡಲೇ ಮಹರ್ಷಿಗಳು ತಮ್ಮ ತಪೋಮಹಿಮೆಯಿಂದ ಆ ದ್ವೀಪವನ್ನು ಅಂಧಕಾರಮಯ ಮಾಡಿದರು. ಅವಳು ದುರ್ಗಂಧಿಯಾದರೂ ಸುಗಂಧಿಯಾದಳು. ಎಲೌ ಕನ್ನಿಕೆಯೇ, ನಿನಗೆ ಕನ್ಯಾದೋಷವು ಪ್ರಾಪ್ತವಾಗದಂತೆ ಮಾಡುತ್ತೇನೆ. ಅಂದರೆ ನಿನಗೆ ವರವನ್ನು ಕೊಡುತ್ತೇನೆಂದರು. ಹೀಗೆ ಹೇಳಿ ಆ ಮುನಿ ಶಾರ್ದೂಲರು ಅವಳ ಸಂಗವನ್ನು ಮಾಡಿದರು.

ತದಾ ಜಜ್ಞೇ ಮಹಾಭಾಗಃ ಕೃಷ್ಣದ್ವೈಪಾಯನೋ ಮುನಿಃ ।
ಕಮಂಡಲುಧರಃ ಶ್ರೀಮಾನ್ ಅನ್ವಿತೋ ಮೃಗಚರ್ಮಣಾ ॥

ಆಗ ಮಹಾನುಭಾವರಾದ ಕೃಷ್ಣದ್ವೈಪಾಯನರು ಜನಿಸಿದರು. ಜನಿಸಿದ ಕೂಡಲೇ ತಂದೆತಾಯಿಗಳಿಗೆ ನಮಸ್ಕರಿಸಿದರು. ತಪಸ್ಸನ್ನು ಮಾಡಲಿಕ್ಕೆ ಪವಿತ್ರ ಸ್ಥಳಗಳಿಗೆ ಹೊರಟುಹೋದರು. ಇವರಿಗೆ ಯಾರು ಮುಂಜಿಯನ್ನು ಮಾಡಿದರು?

ಆದ್ದರಿಂದಲೇ ವ್ಯಾಸ ಮತ್ತು ಕರ್ಣನು ಕಾನೀನಿಕರೆಂದು ಪಾಣಿನಿ ಮಹರ್ಷಿಗಳು ತಮ್ಮ ವ್ಯಾಕರಣ ಸೂತ್ರದಲ್ಲಿ ಸಿದ್ಧ ಮಾಡಿರುತ್ತಾರೆ. "ಕನ್ಯಾಯಾಃ ಕನೀನ ಚ" ಎಂಬುವ ಸೂತ್ರದಲ್ಲಿ "ಕಾನೀನೋ ವ್ಯಾಸಃ ಕರ್ಣಶ್ಚ" ಎಂದು ನಿರ್ಧರಿಸಿರುತ್ತಾರೆ. ಲೋಕದಲ್ಲಿ ಕರ್ಣನು ಮತ್ತು ವ್ಯಾಸರು ಕನ್ನಿಕೆಯಲ್ಲಿ ಜನಿಸಿದವರೆಂಬುವುದು ಪ್ರಸಿದ್ಧವೇ ಆಗಿರುತ್ತದೆ.

ಪಂಡಿತವರ್ಯರುಗಳಿರಾ, ಇನ್ನೊಂದು ಕಥೆಯನ್ನು ನಾನು ತಮಗೆ ಹೇಳುತ್ತೇನೆ.

ಹಿಮಾಲಯ ಪ್ರಾಂತ್ಯದಲ್ಲಿ ವ್ಯಾಧನೂ, ಕಳ್ಳ ಶಿರೋಮಣಿಯೂ, ಧನದ ಆಸೆಯಿಂದ ಅನೇಕ ಜನ ಬ್ರಾಹ್ಮಣರನ್ನು ಕೊಂದವನೂ ಆದ ಒಬ್ಬನಿದ್ದನು. ದೈವಯೋಗದಿಂದ ಒಂದು ದಿನ ಆ ಕಳ್ಳನ ಸ್ಥಾನಕ್ಕೆ ಸಪ್ತಋಷಿಗಳು—

"ಕಶ್ಯಪಾತ್ರಿ ಭರದ್ವಾಜ ವಿಶ್ವಾಮಿತ್ರಶ್ಚ ಗೌತಮಃ ಜಮದಗ್ನಿರ್ವಸಿಷ್ಠಶ್ಚ"
ಇವರೇ ಏಳು ಜನ ಋಷಿಗಳು. ಈ ಸಪ್ತರ್ಷಿಗಳನ್ನು ನೋಡಿದ ಕೂಡಲೇ ಕ್ರೂರನೂ, ಕಳ್ಳನೂ ಆದ ಅವನು ಧನುಸ್ಸನ್ನು ತೆಗೆದುಕೊಂಡು ಗರ್ಜನೆ ಮಾಡುತ್ತ ಅವರ ಮಾರ್ಗಕ್ಕೆ ಅಡ್ಡಿಮಾಡಿದನು. ಆಗ ಋಷಿಗಳ ಸಾಮರ್ಥ್ಯದಿಂದ ಅವನಿಗೆ ಕೂಡಲೇ ಪೂಜ್ಯ ಬುದ್ಧಿಯು ಹುಟ್ಟಿತು. ನಾನು ಈಗ ತಮ್ಮ ಶಿಷ್ಯನಾಗಲು ಬಯುಸುತ್ತೇನೆ. ನಾನು ವ್ಯಾಧಜಾತಿಯಲ್ಲಿ ಹುಟ್ಟಿದವನು. ದಯಾ, ಸತ್ಯಾದಿಗಳಿಂದ ದೂರನಾದವನು. ನನಗೆ ಇಂದು ತಮ್ಮಗಳ ದರ್ಶನದಿಂದ ಜ್ಞಾನೋದಯವಾಗಿರುತ್ತದೆ. ನನ್ನ ದುಷ್ಕೃತ್ಯಗಳನ್ನು ನಾನು ವಿವರಿಸಲಾರೆ. ನೀವೇ ನನ್ನ ಗುರುಗಳು, ಭಾಗ್ಯವಿಧಾತರರು. ಈ ಸಂಸಾರ ದಿಂದ ಪಾರಾಗುವ ಉಪಾಯಗಳನ್ನು ಹೇಳಿರಿ ಎನ್ನಲು—

ದಯಾಶಾಲಿಗಳಾದ ಆ ಋಷಿಶ್ರೇಷ್ಠರುಗಳ ಮನಸ್ಸು ಕರಗಿ ಅವನಿಗೆ ಅನುಗ್ರಹ ವನ್ನು ಮಾಡಿದರು. ಅವನೇ ವಾಲ್ಮೀಕಿ ಋಷಿಯೆಂದು ಈ ಜಗತ್ತಿನಲ್ಲಿ ಪ್ರಸಿದ್ಧನಾದನು. ಇವನ ಮುಂಜಿಯನ್ನು ಯಾರು ಮಾಡಿದರು?

ಹೀಗೆಯೇ ಅಸಂಖ್ಯಾತರಾದ ಮಹಾನುಭಾವರುಗಳು ಉಪನಯನವನ್ನು ಬಿಟ್ಟು ತಪಸ್ವಿಗಳಾಗಿದ್ದಾರೆ. ಅವರ ತೇಜೋ ವಿಶೇಷದಿಂದಲೇ ಅವರಿಗೆ ಬ್ರಾಹ್ಮಣ್ಯವು ದೊರೆತಿರು ತ್ತದೆ. ಆದ್ದರಿಂದ ಈ ಕರ್ಮೋಪನಯನವನ್ನು ನಾನು ಖಂಡಿತವಾಗಿ ಸ್ವೀಕರಿಸುವುದಿಲ್ಲ ವೆಂದು ತಂದೆಯವರ ಕಡೆಗೆ ನೋಡಿ ಶ್ರೀ ಬಸವ ಬಾಲಕನು ಸಭೆಯಿಂದ ಎದ್ದು ಹೊರಟು ಹೋದನು. ಅಂದಿನಿಂದ ಶಿವಭಕ್ತರ ಸಮೂಹದಲ್ಲಿ ವಾಸಮಾಡಿದನು.

ಇಲ್ಲಿಯವರೆಗೆ ಶ್ರೀ ಬಾಲಕನಾದ ಬಸವನು ಉಪನಯನವನ್ನು ಹೇಗೆ ತಿರಸ್ಕರಿಸಿದ ನೆಂಬುವುದನ್ನು ಸಂಕ್ಷೇಪಿಸಿ ಹೇಳಿದುದಾಗಿದೆ. ಬಸವಣ್ಣನವರ ವಾದಸರಣಿಯು ಅತ್ಯದ್ಭುತವಾದುದಾಗಿದ್ದು ವಿಸ್ತಾರವಾಗಿರುತ್ತದೆ. ಇಲ್ಲಿ ಕೆಲವೇ ಉದಾಹರಣೆಗಳಿಂದ ಅವರ ಲಿಂಗಧಾರಣ ದೀಕ್ಷೆಯ ವಿವೇಚನಾ ಪದ್ಧತಿಯು ವಾಚಕರಿಗೆ ಮನದಟ್ಟಾಗ ಬಹುದಾಗಿದೆ.

ಶ್ರೀ ಬಸವೇಶ್ವರರು ಲಿಂಗಧಾರಣ ದೀಕ್ಷೆಯಾದವನಿಗೆ ಉಪನಯನ ಕರ್ಮವಿಲ್ಲ ವೆಂದು ಹೇಳಿದ್ದಾರೆಯಷ್ಟೆ? ಅವರು ಉಪಯೋಗಿಸಿದ ದೀಕ್ಷಾ ಶಬ್ದದ ಅರ್ಥವೇನು ಎಂಬುದನ್ನು ಇಲ್ಲಿ ವಿವರಿಸಬೇಕಾಗಿರುತ್ತದೆ.

ಸಿದ್ಧಾಂತಕೌಮುದಿ ಬಾಲಮನೋರಮಾ, ಭಾಗ ೨, ಪುಟ ೧೦೪, ಧಾತುಸಂಖ್ಯೆ ೬೦೯ ರಲ್ಲಿ ದೀಕ್ಷ ಧಾತುವಿಗೆ ಭಟೋಜಿ ದೀಕ್ಷಿತರು ಅರ್ಥವನ್ನು ಬರೆಯುವ ಕಾಲಕ್ಕೆ ದೀಕ್ಷ— ಮೌಂಡ್ಯ ಇಜ್ಯ, ಉಪನಯನ, ವ್ರತಾ ದೇಶೇಷು ಹೀಗೆ ಐದು ಅರ್ಥಗಳನ್ನು ಬರೆದಿರುತ್ತಾರೆ. ಉಪನಯನವೂ ಒಂದು ಅರ್ಥವಿರುತ್ತದೆ. ದೀಕ್ಷೆಯೆಂಬುವ ಮೂಲ ಧಾತುವಿಗೆ ಉಪನಯನಾರ್ಥವೂ ಇರುತ್ತದೆ. ದೀಕ್ಷೆಗೆ ವೀರಶೈವ ಧರ್ಮದ ಕ್ರಿಯೆ ಗಳಲ್ಲಿ ಬಹಳ ಮಹತ್ವವಿರುತ್ತದೆ. ದೀಕ್ಷೆ ಅಂದರೆ ಏನು?

**ಪರಮೇಶ್ವರಾಗಮ—ಪುಟ ೧೨೫**

ಲಿಂಗಧಾರಣ ಮಾತ್ರೇಣ ಕುತೋಽಸೌ ಮಾನುಷಃ ಶಿವೇ ।
ಸದಾ ವಿಭೂತಿ ಸಂಪರ್ಕಾತ್ ಸದಾ ರುದ್ರಾಕ್ಷ ಧಾರಣಾತ್ ।
ಧಾರಣಾನ್ಮಮಲಿಂಗಸ್ಯ ಸೋಹಮೇವ ನ ಸಂಶಯಃ ॥

ಶಿವಾಗಮಗಳಲ್ಲಿ ಶಿವದೀಕ್ಷೆಯ ವಿಷಯದಲ್ಲಿ ವಿಸ್ತಾರವಾಗಿ ವಿವೇಚಿಸಲ್ಪಟ್ಟಿರುತ್ತದೆ.

**ಕಾರಣಾಗಮ**

ದೀಯತೇ ಲಿಂಗಸಂಬಂಧಃ ಕ್ಷೀಯತೇ ಚ ಮಲತ್ರಯಂ ।
ದೀಯತೇ ಕ್ಷೀಯತೇ ಯಸ್ಮಾತ್ ಸಾದೀಕ್ಷೇತಿ ನಿಗದ್ಯತೇ ॥

ಮಲತ್ರಯಗಳಾದ ಆಣವ, ಮಾಯಾ, ಕಾರ್ಮಿಕ ಇವುಗಳನ್ನು ನಾಶಮಾಡಿ ಲಿಂಗ ಸಂಬಂಧವನ್ನುಂಟುಮಾಡಿ ಒಂದನ್ನು ನಾಶಮಾಡಿ ಒಂದನ್ನು ಕೊಡತಕ್ಕದ್ದಾದುದರಿಂದ ಇದಕ್ಕೆ ದೀಕ್ಷೆಯೆಂದು ಹೆಸರು.

ಈ ದೀಕ್ಷೆಯು ವೇಧಾ, ಮಂತ್ರ, ಕ್ರಿಯಾತ್ಮಕವಾಗಿ ಮೂರು ಪ್ರಕಾರ ಇರುತ್ತದೆ.

ಏಕವೇಧಾತ್ಮಿಕಾ ಸಾಕ್ಷಾತ್ ಅನ್ಯಾಮಂತ್ರಾತ್ಮಿಕಾ ಪರಾ ।
ಕ್ರಿಯಾತ್ಮಕಾ ಪರಾಕಾಚಿದೇವಮೇವ ತ್ರಿಧಾಭವೇತ್ ॥

ಹೀಗೆ ಮೂರು ಪ್ರಕಾರಗಳಾಗಿರುವ ದೀಕ್ಷೆಗಳಲ್ಲಿ ಗುರುವು ಶಿಷ್ಯನ ಮಸ್ತಕದ ಮೇಲೆ ಹಸ್ತವನ್ನಿರಿಸುವುದಕ್ಕೆ ವೇಧಾದೀಕ್ಷೆಯೆಂತಲೂ, ಶಿಷ್ಯನ ಕರ್ಣದಲ್ಲಿ ಗುರುವು ಮಂತ್ರೋಪದೇಶ ಮಾಡುವುದಕ್ಕೆ ಮಂತ್ರದೀಕ್ಷೆಯೆಂತಲೂ, ಕ್ರಿಯಾತ್ಮಕವಾದುದಕ್ಕೆ ಕ್ರಿಯಾದೀಕ್ಷೆಯೆಂತಲೂ ಹೆಸರು. ಅಂದರೆ ಶಿಷ್ಯನ ಹಸ್ತಗಳಲ್ಲಿ ಕೊಡಲ್ಪಟ್ಟದುದಕ್ಕೆ ಕ್ರಿಯಾದೀಕ್ಷೆ.

**ಸಿದ್ಧಾಂತಶೇಖರ**

ರಸವಿದ್ಧಂ ಯಥಾ ತಾಮ್ರಂ ತಾಮ್ರಭಾವಾದ್ವಿಮುಚ್ಯತೇ
ಸುವರ್ಣೇನ ಸಹೈಕತ್ವಂ ಗತಂ ತದ್ಯಾತಿ ಹೇಮತಾಂ ॥
ನವನೀತಂ ಯಥಾ ತಪ್ತಂ ತತ್ಸ್ವಭಾವಂ ಪರಿತ್ಯಜೇತ್ ।
ಘೃತಸ್ವಭಾವಮಾಪನ್ನೇ ನಪುನರ್ನವನೀತತಾಂ ॥
ಯಥಾ ಶುಕ್ತಿಗತಂ ತೋಯಂ ಮೌಕ್ತಿಕಂ ಜಾಯತೇ ಧೃವಂ ।
ನಪುನಸ್ತೋಯತಾಂ ಯಾತಿ ಮೌಕ್ತಿಕತ್ವಂ ನ ಮುಂಚತಿ ॥
ಏವಂ ಸ ಶಿವತಾಂ ಪ್ರಾಪ್ತೋ ನಪುನರ್ಜೀವತಾಂ ವ್ರಜೇತ್ ।
ಶಿವತ್ವಾನ್ನಚಹೀಯೇತ ವಿಮುಕ್ತೋ ದೀಕ್ಷಯಾ ಭವೇತ್ ॥

**ಸಾದೀಕ್ಷಾ ಗುರುಣಾಕಾರ್ಯಾ**

ರಸಬದ್ಧವಾದ ತಾಮ್ರವು ತಾಮ್ರಭಾವವನ್ನು ಬಿಟ್ಟು ಸುವರ್ಣವಾಗುತ್ತದೆ. ಸುವರ್ಣವಾದ ಮೇಲೆ ಪುನಃ ತಾಮ್ರವಾಗಲಾರದು, ಸುವರ್ಣವೇ ಆಗಿರುತ್ತದೆ. ಕಾಯಿಸಿದ ಬೆಣ್ಣೆಯು ತುಪ್ಪವಾಗಿ ಪುನಃ ಬೆಣ್ಣೆಯಾಗಲಾರದು. ಕಪ್ಪೇಚಿಪ್ಪಿನಲ್ಲಿ ಬಿದ್ದ ನೀರಿನ ಹನಿಯು ಮುತ್ತಾಗಿ ಪುನಃ ಜಲದ ಭಾವವನ್ನು ಹೊಂದಲಾರದು. ಇವುಗಳಂತೆ ಶಿವತ್ವವನ್ನು ಹೊಂದಿದ ಮನುಷ್ಯನು ಜೀವನಾಗಲಾರನು. ಅರ್ಥಾತ್ ಶಿವದೀಕ್ಷೆಯನ್ನು ಹೊಂದಿದ ಮನುಷ್ಯನಿಗೆ ಪುನಃ ಯಾವ ಕರ್ಮಗಳ ಆವಶ್ಯಕತೆ ಇರುವುದಿಲ್ಲ.

**ವೇದಾಂತಸಾರ ವೀರಶೈವಚಿಂತಾಮಣಿ–ಪುಟ ೧೪೪**

ಶಿಷ್ಯಸ್ಯ ಪ್ರಾಣಮಾದಾಯ ಲಿಂಗೇ ತತ್ರ ನಿಧಾಪಯೇತ್ ।
ತಲ್ಲಿಂಗಂ ತಸ್ಯತು ಪ್ರಾಣೇ ಸ್ಥಾಪಯೇದೇಕಭಾವತಃ ॥
ಏವಂ ಕೃತ್ವಾ ಗುರುರ್ಲಿಂಗಂ ಶಿಷ್ಯಹಸ್ತೇ ನಿಧಾಪಯೇತ್ ।
ಪ್ರಾಣವದ್ಧಾರಣೀಯಂತು ಪ್ರಾಣಲಿಂಗಮಿದಂ ತವ ॥

ಕದಾಚಿತ್ ಕುತ್ರಚಿದ್ವಾಪಿ ವಿಯೋಜಯದೇಹತಃ ।
ಯದಿ ಪ್ರಮಾದಾತ್ಪತಿತೇ ಲಿಂಗೇ ದೇಹಾನ್ಮಹೀತಲೇ ।
ಪ್ರಾಣಾನ್ ವಿಮುಂಚಸಹಸಾ ಪ್ರಾಪ್ತಯೇ ಮೋಕ್ಷಸಂಪದಃ ।
ಇತಿ ಸಂಬೋಧಿತಶ್ಶಿಷ್ಯೋ ಗುರುಣಾಶಾಸ್ತ್ರವೇದಿನಾ ।
ಧಾರಯೇತ್ ಶಾಂಕರಂ ಲಿಂಗಂ ಶರೀರೇ ಪ್ರಾಣಯೋಗತಃ ॥

ಶಿಷ್ಯನ ಪ್ರಾಣವನ್ನು ಲಿಂಗದಲ್ಲಿಯೂ ಲಿಂಗವನ್ನು ಶಿಷ್ಯನ ಪ್ರಾಣದಲ್ಲಿಯೂ ಏಕ ಭಾವನೆಯಿಂದ ಗುರುವು ಸ್ಥಾಪಿಸತಕ್ಕದ್ದು. ಎಲೈ ಶಿಷ್ಯನೇ, ಇದು ನಿನ್ನ ಪ್ರಾಣಲಿಂಗವು. ಇದನ್ನು ಯಾವಾಗಲೂ ಶರೀರದಿಂದ ಅಗಲಿಸಕೂಡದು. ಕದಾಚಿತ್ ಶರೀರದಿಂದ ಅಗಲಿಸಿದರೆ ಪ್ರಾಣವನ್ನು ಬಿಟ್ಟು ಮೋಕ್ಷವನ್ನು ಪಡೆಯಬೇಕು. ಹೀಗೆ ಗುರುವಿನಿಂದ ಬೋಧಿಸಲ್ಪಟ್ಟ ಶಿಷ್ಯನು ಶಂಕರ ಸಂಬಂಧವಾದ ಲಿಂಗವನ್ನು ಶರೀರ ಪಾತದ ಪರ್ಯಂತರ ಅವಿಚ್ಛಿನ್ನವಾಗಿ ಧರಿಸಲೇಬೇಕು. ವೀರಶೈವ ದೀಕ್ಷೆಯು ಬಹಳ ಮಹತ್ವ ದ್ದಾಗಿರುತ್ತದೆ.

ಶ್ರೀ ಬಸವಣ್ಣನವರು ತಮ್ಮದೊಂದು ವಚನದಲ್ಲಿ—

"ಮಣ್ಣು ಮಡಕೆಯಾಗಿ ಮರಳಿ ಮಣ್ಣಾಯಿತೇ ಕ್ರಿಯೆಯುಳಿದು, ಬೆಣ್ಣೆ ತುಪ್ಪವಾಗಿ ಮರಳಿ ಬೆಣ್ಣೆಯಾಯಿತೇ ಕ್ರಿಯೆಯುಳಿದು, ನೀರು ಮುತ್ತಾಗಿ ಮರಳಿ ನೀರಾಯಿತೇ ಕ್ರಿಯೆಯುಳಿದು, ಕಬ್ಬುನ ಹೊನ್ನಾಗಿ ಮರಳಿ ಕಬ್ಬುನವಾಯಿತೇ ಕ್ರಿಯೆಯುಳಿದು, ನಮ್ಮ ಕೂಡಲಸಂಗನ ಶರಣರಾಗಿ ಮರಳಿ ಮಾನವರೇ ಕ್ರಿಯೆಯುಳಿದು, ಕುಂಡಲಿಗನೊಂದು ಕೀಡೆಯ ತಂದು ತನ್ನಂತೆ ಮಾಡಿತಲ್ಲಾ ಎಲೆಮಾನವ ಕೇಳಿ ನಂಬಯ್ಯ ನೋಡಿ ನಂಬಯ್ಯ."

ತ್ವಚ್ಚಿಂತಯಾ ಮಹಾದೇವ ತ್ವಮೇವಾಸ್ಮಿ ನ ಸಂಶಯಃ ।
ಭ್ರಮದ್ಭ್ರಮರ ಚಿಂತಾಯಾಂ ಕೀಟೋಽಪಿ ಭ್ರಮರಾಯತೇ ॥

ಎಲೈ ಮಹಾದೇವನೇ, ನಿನ್ನ ಚಿಂತನೆಯಿಂದ ನೀನೇ ಆಗುತ್ತೇನೆ, ಇದರಲ್ಲಿ ಸಂಶಯವಿಲ್ಲ. ಭ್ರಮರವು ಯಾವುದೋ ಒಂದು ಹುಳವನ್ನು (ಕೀಟ) ತಂದು ಅದನು ತನ್ನಂತೆ ಮಾಡುತ್ತದೆ. ಶಿವಚಿಂತನೆ ಮಾಡುವವನು ಶಿವನೇ ಆಗುತ್ತಾನೆ. ಹೀಗೆಯೇ ದೀಕ್ಷೆಯ ಮಹತ್ವವನ್ನು ಆಗಮಾದಿಗಳಲ್ಲಿ ವಿಶೇಷ ರೀತಿಯಿಂದ ನಿರೂಪಿಸಲಾಗಿದೆ.

ಇಲ್ಲಿ ಸಂಕ್ಷಿಪ್ತವಾಗಿ ಬಸವಣ್ಣನವರು ಉಪನಯನ ತಿರಸ್ಕಾರ ಮಾಡಿದ ವಿಷಯ ವನ್ನು ವಿವೇಚಿಸಿರುತ್ತೇವೆ. ಇದನ್ನು ಓದಿದರೆ ಅವರ ವಿವೇಚನಾ ಪದ್ಧತಿಯು ವಾಚಕರಿಗೆ ಸ್ಪಷ್ಟ ತಿಳಿಯುತ್ತದೆ. ಹೆಚ್ಚಿನ ವಿಷಯಗಳು ಈ ಗ್ರಂಥದ ಬೇರೆ ಬೇರೆ ಪ್ರಕರಣಗಳಲ್ಲಿ ಒಂದಿಲ್ಲೊಂದು ರೀತಿಯಿಂದ ಬಂದಿರುತ್ತವೆ. ಆದ್ದರಿಂದ ಈ ಪ್ರಕರಣ ವನ್ನು ಸಂಕ್ಷೇಪವಾಗಿ ಬರೆದಿದೆ. ಲಿಂಗಧಾರಣ ದೀಕ್ಷೆಯಾದ ಮೇಲೆ ಅವನಿಗೆ ಪ್ರಾಕೃತ ಯಾವ ಕರ್ಮವೂ ಇರುವುದಿಲ್ಲ. ಸಚ್ಚಿದಾನಂದ ಲಕ್ಷಣಸ್ವರೂಪವಾದ ಪರಬ್ರಹ್ಮ ಲಿಂಗ ವನ್ನು ಅವಿಚ್ಛಿನ್ನವಾಗಿ ಧರಿಸಿಕೊಂಡಿರತಕ್ಕವನು ಪವಿತ್ರಾತ್ಮನಾಗಿ ಸರ್ವಾಂಗಲಿಂಗ ಮಯನಾಗಿ ಪರಬ್ರಹ್ಮ ಸ್ವರೂಪವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಬೇಕಾದಷ್ಟು ಪ್ರಮಾಣಗಳಿದರೂ ಸ್ಥಾಲೀಪುಲಾಕನ್ಯಾಯದಂತೆ ಸಂಕ್ಷೇಪವಾಗಿ ವಿವೇಚಿಸಿದ್ದೇವೆ.

## ಇಪ್ಪತ್ತನಾಲ್ಕನೆಯ ಪ್ರಕರಣ

### ರಾಜಕಾರಣವೂ ಬಸವಣ್ಣನವರೂ

ಧರ್ಮ ಮತ್ತು ರಾಜಕಾರಣಗಳೆರಡರಲ್ಲಿ ಪಾರಂಗತರಾಗಿ ಕೀರ್ತಿಶಾಲಿಗಳಾಗಿರ ತಕ್ಕವರು ನಮ್ಮ ದೇಶದಲ್ಲಿ ವಿರಳರೆಂಬುವುದು ಸಾವಿರಾರು ವರ್ಷಗಳ ಇತಿಹಾಸವನ್ನು ಓದಿದವರಿಗೆ ಸುಸ್ಪಷ್ಟವಾಗಿ ತಿಳಿಯುತ್ತದೆ. ಧರ್ಮದಲ್ಲಿ ನಿಪುಣರಾಗಿದ್ದರೆ ರಾಜ ಕಾರಣವು ಅವರಿಗೆ ಹಿಡಿಸುವುದಿಲ್ಲ. ರಾಜಕೀಯದಲ್ಲಿ ತಜ್ಞರಾದವರಿಗೆ ಧಾರ್ಮಿಕ ವಿಷಯ ದಲ್ಲಿ ಮನಸ್ಸೇ ಆಗುವುದಿಲ್ಲ. ಎಲ್ಲರೂ ಹೀಗೆಯೇ ಇರುತ್ತಾರೆಂದು ಹೇಳಲಿಕ್ಕಾಗದು. ಕೆಲವರು ಮಾತ್ರ ಈ ಎರಡೂ ವಿಷಯಗಳಲ್ಲಿ ಪಾರಂಗತರಾಗಿ ಕೀರ್ತಿಕಾಯರಾಗು ತ್ತಾರೆ. ಇಂಥವರ ಸಂಖ್ಯೆ ಸಾಕಷ್ಟಿರುವುದಿಲ್ಲ. ಅಶೋಕ ಚಕ್ರವರ್ತಿಗಳು ರಾಜಕೀಯ ದಲ್ಲಿ ದಿಗ್ವಿಜಯಿಗಳಾದಂತೆ ಪ್ರಚಂಡತರವಾಗಿ ಬೌದ್ಧ ಧರ್ಮವನ್ನೂ ಪ್ರಚಾರ ಮಾಡಿದರು. ಶ್ರೀ ವಿದ್ಯಾರಣ್ಯರು ತಮ್ಮ ಪಂಚದಶಿಯಲ್ಲಿ ಜಾಣನಾದವನು ಧರ್ಮ ಮತ್ತು ರಾಜಕಾರಣಗಳೆರಡರಲ್ಲಿಯೂ ಬಲ್ಲಿದನಾಗಲು ಶಕ್ಯವಾಗಿರುತ್ತದೆಂದು ಹೇಳಿರು ತ್ತಾರೆ. ನಮ್ಮ ದೇಶದಲ್ಲಿ ತುಕಾರಾಮ, ನಾನಕ್, ಕನಕದಾಸ, ಕಬೀರದಾಸ, ಮೊದಲಾದ ನೂರಾರು ಜನರು ಕೇವಲ ಧರ್ಮದಲ್ಲಿಯೇ ಪ್ರಚಾರವನ್ನು ಮಾಡಿದ ರಲ್ಲದೆ ರಾಜಕೀಯವನ್ನು ಅಪ್ಪಿಕೊಳ್ಳಲಿಲ್ಲ. ಇದು ಅವರವರ ರುಚಿಗನುಸಾರವಾಗಿ ಮಾಡತಕ್ಕ ಕಾರ್ಯವಾಗಿರುತ್ತದೆ.

ಶ್ರೀ ಬಸವಣ್ಣನವರು ಧಾರ್ಮಿಕ ಪ್ರಚಾರದಲ್ಲಿ ಅತ್ಯದ್ಭುತ ಕಾರ್ಯವನ್ನು ಮಾಡಿ ಶಿವಭಕ್ತಿಯನ್ನು ಪ್ರಚಂಡತರವಾಗಿ ಪ್ರಸಾರಮಾಡಿ ಧರ್ಮಮೂರ್ತಿಗಳೂ, ದ್ವಿತೀಯ ಶಂಭುವೆನ್ನಿಸಿಕೊಂಡರೂ ರಾಜಕಾರಣದಲ್ಲಿ ಅವರು ಮೇಲ್ಮೆಯನ್ನು ಪಡೆದ ಮಹಾ ಪುರುಷರಾಗಿರುತ್ತಾರೆ. ಅವರು ಮಂತ್ರಿಗಳಾಗಬೇಕೆಂಬುವ ಹಂಬಲದಿಂದ ಬಿಜ್ಜಳನ ರಾಜ್ಯದಲ್ಲಿ ಪ್ರವೇಶಿಸಲಿಲ್ಲ. ಧರ್ಮಪ್ರಚಾರ ಮಾಡಬೇಕೆಂಬುವುದು ಅವರ ಮುಖ್ಯ ಗುರಿಯಾಗಿದ್ದಿತು. ಆದರೆ ರಾಜಕಾರಣವು ಅವರಿಗೆ ಆನುಷಂಗಿಕ ಫಲವನ್ನು ಕೊಟ್ಟಿತು. ಮೊದಲು ಬಿಜ್ಜಳರಾಜನಲ್ಲಿ ಕರಣಿಕರಾಗಿ ಸೇರಿದರು. ಆದರೆ ಅವರು ದಕ್ಷತೆ, ವಿಚಾರ ಧುರಂಧರತೆ, ಸತ್ಯತನ ಮೊದಲಾದ ಶ್ರೇಷ್ಠ ಗುಣಗಳ ಮೂರ್ತಿಯಾಗಿದ್ದ ಕಾರಣ ಎಲ್ಲರಿಗಿಂತಲೂ ಬಹುಬೇಗನೆ ರಾಜಕೀಯದಲ್ಲಿ ಧುರಂಧರರಾಗಿ ಬಿಜ್ಜಳನ ಹದಿನೆಂಟು ಮಂತ್ರಿಗಳಲ್ಲಿ ಪ್ರಧಾನವಾದ ಸ್ಥಾನವನ್ನು ಪಡೆದರು. ಇದಕ್ಕೆ ಅವರ ರಾಜಕಾರಣ ಪಟುತ್ವವೇ ಮೂಲಕಾರಣವಾಗಿರುತ್ತದೆ. ಅಂತಹ ಅದ್ವಿತೀಯವಾದ ರಾಜಕೀಯ ಜ್ಞಾನವಿಲ್ಲದೆ, ಕರಣಿಕರಾಗಿದ್ದವರು ರಾಜ್ಯದ ಸೂತ್ರಗಳನ್ನೇ ತಮ್ಮ ಕೈಯಲ್ಲಿ ತೆಗೆದು ಕೊಳ್ಳಲು ಶಕ್ಯವಾಗುವುದು ಅಸಂಭವವೇ ಸರಿ. ಅವರು ಮಾಡಿದ ಕಾರ್ಯಗಳನ್ನು ಅವಲೋಕಿಸಿದರೆ ಪ್ರಜಾಪ್ರಭುತ್ವವಾದಿಗಳಾದ ಈಗಿನ ಜನರು ಆವರಿಂದ ಬಹಳ ಕಲಿಯಬೇಕಾಗುತ್ತದೆ. ಪ್ರಜಾಪ್ರಭುತ್ವದ ತತ್ವಗಳನ್ನು ಆ ಕಾಲದಲ್ಲಿ ಅವರು ಆಚರಿಸಿ ಕೃತಿಯಲ್ಲಿ ತಂದಿರುತ್ತಾರೆ.

ಪ್ರಜಾಪ ಭುತ್ವದ ಮುಖ್ಯ ಲಕ್ಷಣಗಳೆಂದರೆ ಜನರಿಗೆ ಹೊಟ್ಟೆಯ ತುಂಬ ಅನ್ನ, ಬಟ್ಟೆ ಸಿಕ್ಕಮೇಲೆ ನೆಮ್ಮದಿಯಾಗಿ ವಾಸಮಾಡಲಿಕ್ಕೆ ವಸತಿಸ್ಥಾನಗಳಿದ್ದು ಎಲ್ಲರೂ

ಶಾಂತಿಯಿಂದ ಬಾಳಬೇಕು, ಎಲ್ಲರೂ ದುಡಿದೇ ಉಣ್ಣಬೇಕು, ಮೇಲುಕೀಳುಗಳೆಂಬ ಭೇದ ಭಾವನೆಗಂತೂ ಅಲ್ಲಿ ಸ್ಥಳವೇ ಇರಕೂಡದು. ಇಂತಹ ಲಕ್ಷಣಗಳೆಲ್ಲ ಶ್ರೀ ಬಸವಣ್ಣ ನವರ ಕಾಲದಲ್ಲಿ ಬಿಜ್ಜಳನ ರಾಜ್ಯದಲ್ಲಿದ್ದವು. ದುಡ್ಡನ್ನು ಕೂಡಿಡುವ ಪ್ರಶ್ನೆಯೇ ಅವರ ರಾಜ್ಯದಲ್ಲಿರಲಿಲ್ಲ. ಇತಿಹಾಸಕಾರರು ಬಿಜ್ಜಳ ರಾಜ್ಯದ ಸುವ್ಯವಸ್ಥೆಯನ್ನು ಬಹಳ ಚೆನ್ನಾಗಿ ವರ್ಣಿಸಿರುತ್ತಾರೆ.

ರಾಮರಾಜ್ಯವೆಂದು ಹೇಳುವ ರೂಢಿ ನಮ್ಮಲ್ಲಿ ಉಂಟು. ರಾಮರಾಜ್ಯದಲ್ಲಿ ಯಾರಿಗೂ ಹಿಂಸೆಯಾಗದೆ ಎಲ್ಲರೂ ಪರಸ್ಪರ ಸಹಬಾಳ್ವೆ ಮಾಡಿಕೊಂಡು ಹೊಟ್ಟೆ ಬಟ್ಟೆಗಳ ಚಿಂತೆಯಿಲ್ಲದೆ ಸುಖದಿಂದ ಕಾಲಕಳೆಯುವುದೇ ರಾಮರಾಜ್ಯ. ಅನ್ನವಸತಿ ಗಳ ಕೊರತೆ ಇಲ್ಲದಿದ್ದರೆ ಮನುಷ್ಯನಿಗೆ ಏನೂ ಹೆಚ್ಚಿಗೆ ಬೇಕಾಗಲಾರದು.

ಶ್ರೀ ಬಸವಣ್ಣನವರು ಜನರಲ್ಲಿ ಸತ್ಯತನ ಬೆಳೆದು ಅಹಿಂಸಾ ಪ್ರವರ್ತಕರಾಗಿ ಶಿವಭಕ್ತಿ ಧುರೀಣರಾಗಿ ಎಲ್ಲರೂ ಒಂದೊಂದು ಉದ್ಯೋಗವನ್ನು ಕೈಕೊಂಡು ದುಡಿಯ ಬೇಕು. ಪರಧನ, ಪರಸ್ತ್ರೀ ಪರನಿಂದೆಗಳನಾಡಕೂಡದೆಂಬುವ ತತ್ವವನ್ನು ತಮ್ಮ ಆಡಳಿತ ಕಾಲದಲ್ಲಿ ರೂಢಿಯಲ್ಲಿ ತಂದು ಅನೇಕ ಸುಧಾರಣೆಗಳನ್ನು ಮಾಡಿದರು. ರಾಜಕೀಯ ಧುರೀಣರಾಗಬೇಕಾದರೆ ಮೇಲೆ ಬರೆದ ಶ್ರೇಷ್ಠ ಗುಣಗಳ ಆವಶ್ಯಕತೆಯು ಬೇಕಾಗುತ್ತದೆಂಬುವ ತತ್ವವನ್ನು ಎಲ್ಲರೂ ಅರಿಯುವಂತೆ ಮಾಡಿ ಸತ್ಯದ ದಾರಿಯನ್ನು ಜನಗಳಿಗೆ ಬೋಧಿಸಿದರಲ್ಲದೆ ತಾವು ನಡೆದುಕೊಂಡು ಮುಖ್ಯ ಮಂತ್ರಿಗಳಾಗಿದ್ದಾಗ್ಯೂ ಕೂಡ ಎಲ್ಲರಿಗಿಂತಲೂ ಕಿರಿಯರೆಂಬುವುದನ್ನು ಹೇಳುತ್ತ ತಮ್ಮ ಶ್ರೇಷ್ಠ ಗುಣಗಳಿಂದ ಎಲ್ಲರಿಗೂ ವಂದ್ಯರಾದರು. ರಾಜಕೀಯ ಕ್ಷೇತ್ರದಲ್ಲಿ ಮಹಾತ್ಮಾ ಗಾಂಧೀಜಿಯಂತಹ ಕೆಲವೇ ವ್ಯಕ್ತಿಗಳಲ್ಲಿ ಮಾತ್ರ ಈ ಗುಣವು ಕಂಡುಬರುವುದು. ಧರ್ಮ ಮತ್ತು ರಾಜ ಕಾರಣಗಳೆರಡನ್ನೂ ಸಮನ್ವಯ ಮಾಡಿಕೊಂಡು ಹೋಗುವವರ ಉದಾಹರಣೆ ಲೋಕದ ಇತಿಹಾಸದಲ್ಲಿಯೇ ವಿರಳವಾಗಿ ಸಿಗುತ್ತದೆ.

ರಾಜಕಾರಣದಲ್ಲಿ ಸತ್ಯಕ್ಕೂ, ಅಹಿಂಸೆಗೂ, ತಾಳಮೇಳಗಳಾಗುವುದಿಲ್ಲವೆಂದು ಈಗಿನ ಜನರು ಹೇಳುವುದುಂಟು. ಆದರೆ ಬಸವೇಶ್ವರರು ಸತ್ಯದಿಂದ ಕದಲದೆ ಅಹಿಂಸೆ ಯನ್ನು ಬಿಡದೆ ರಾಜಕಾರಣದಲ್ಲಿ ಯಶಸ್ವಿಯಾಗಬೇಕೆಂಬುವುದನ್ನು ಜಗತ್ತಿನಲ್ಲಿ ಪ್ರಚಾರ ಮಾಡಿದರು.

"ಸರ್ವಂ ಸತ್ಯೇ ಪ್ರತಿಷ್ಠಿತಂ" ಅಂದರೆ ಸತ್ಯದಲ್ಲಿ ಎಲ್ಲವೂ ಇದೆ ಎಂಬುವುದು ಅವರ ದೃಢವಾದ ವಿಶ್ವಾಸವಾಗಿದ್ದಿತು. ಅವರು ತಮ್ಮದೊಂದು ವಚನದಲ್ಲಿ,

> "ಆನೆಯನೇರಿಕೊಂಡು ಹೋದಿರಿ ನೀವು ಕುದುರೆಯನೇರಿಕೊಂಡು ಹೋದಿರಿ ನೀವು ಆದರೆ ಸತ್ಯವೆಂಬುವ ಸತ್ಪಥವನ್ನು ಅರಿಯದೆ ಹೋದಿರಲ್ಲಾ"

ಎಂದು ರಾಜಕಾರಣಿಗಳಿಗೂ, ಇತರರಿಗೂ ಬುದ್ಧಿವಾದವನ್ನು ಹೇಳಿರುತ್ತಾರೆ. ಅವರು ಕೇವಲ ಉಪದೇಶಮಾಡತಕ್ಕವರಲ್ಲ. ಮೊದಲು ತಾವು ಆಚರಣೆಯಲ್ಲಿ ತಂದು ಇತರರಿಗೆ ಆ ಮಾರ್ಗದಲ್ಲಿ ನಡೆಯುವಂತೆ ಬೋಧಿಸುತ್ತಿದ್ದರು. ತಾವು ಮಾತ್ರ ಬೇಕಾದಂತೆ ನಡೆದುಕೊಂಡು ಉಳಿದವರಿಗೆ ಸತ್ಪಥವನ್ನು ಬೋಧಿಸುವ ಜನಗಳನ್ನು ನಾವು ನೋಡು ತ್ತೇವೆ. ಆ ಮಾರ್ಗವು ಯಾವಾಗಲೂ ಅಪಾಯಕರವಾದುದು. ತಾನು ನಡೆಯದೆ

ಎರಡನೆಯವರಿಗೆ ಉಪದೇಶಮಾಡುವ ಮಾತಿನಲ್ಲಿ ಅರ್ಥವೇ ಇರುವುದಿಲ್ಲ. ಅಂಥವರಿಗೆ ಕೊನೆಯಲ್ಲಿ ಬೆಲೆಯೇ ಇರುವುದಿಲ್ಲ.

ರಾಜಕೀಯ ಕ್ಷೇತ್ರದಲ್ಲಿ ಅನೇಕರು ಪ್ರಾಚೀನ ಕಾಲದಿಂದಲೂ ಕೆಲವು ಗ್ರಂಥಗಳನ್ನು ಬರೆದಿರುತ್ತಾರೆ. ಅದರಲ್ಲಿ ಚಾಣಿಕ್ಯ ನೀತಿಯು ಬಹು ಪ್ರಸಿದ್ಧವಾಗಿರುತ್ತದೆ. ಅವರ ನೀತಿಯಲ್ಲಿಯೂ ಕೌಟಿಲ್ಯತನವು ಮಿಶ್ರವಾಗಿದ್ದಿತು. ಸರಳವಾಗಿರಲಿಲ್ಲವೆಂಬುವುದನ್ನು ನಾವು ಅವರ ಅನೇಕ ಉದಾಹರಣೆಗಳಿಂದ ಕಾಣಬಹುದಾಗಿರುತ್ತದೆ.

ಸಂಸ್ಕೃತ ನಾಟಕ ಪ್ರಪಂಚದಲ್ಲಿ ಬಹು ಪ್ರಸಿದ್ಧಿಯನ್ನು ಪಡೆದ ಮುದ್ರಾರಾಕ್ಷಸ ಎಂಬುವ ನಾಟಕದಲ್ಲಿ ಚೆನ್ನಾಗಿ ಅವರ ನೀತಿಯು ವ್ಯಕ್ತವಾಗುತ್ತದೆ. ತಮಗೆ ಅಗ್ರಾಸನವು ಸಿಗದೇ ಇದ್ದುದಕ್ಕೆ ನವನಂದನರ ವಂಶವನ್ನೇ ಹಾಳುಮಾಡಿಬಿಟ್ಟರಲ್ಲದೆ ಅನೇಕ ಯುಕ್ತಿ–ಕುಯುಕ್ತಿಗಳಿಂದ ತಮ್ಮ ಕಾರ್ಯವನ್ನು ಸಾಧಿಸಿಕೊಂಡರು. ಅದರಲ್ಲಿ ಅನೇಕ ಮೇಧಾವಿಗಳೂ ಕೂಡ ಆಹುತಿಯಾಗಬೇಕಾಯಿತು. ಶ್ರೀ ಬಸವೇಶ್ವರರ ರಾಜನೀತಿಯು ಬಹು ಮೇಲಾದುದು. ಯಾರಿಗೂ ಹಿಂಸೆಯಾಗದೆ ಆರ್ಥಿಕ ತೊಂದರೆಯನ್ನನುಭವಿಸದೆ ಮೇಲುಕೀಳುಗಳೆಂಬ ತೊಂದರೆಗೊಳಗಾಗದೆ ಎಲ್ಲರೂ ಯಾವುದಾದರೊಂದು ಉದ್ಯೋಗ ಮಾಡಬೇಕು, ಭಿಕ್ಷೆಯಿಂದ ಉದರಪೋಷಣೆ ಮಾಡಕೂಡದೆಂಬುವ ಕಟ್ಟಪ್ಪಣೆ ಮಾಡಿ ರಾಜ್ಯದಲ್ಲಿ ಕೃತಿಗೆ ತರುವ ಸಾಹಸಮಾಡಿ ಜನಗಳಲ್ಲಿ ನೆಮ್ಮದಿಗೆ ಮಾರ್ಗವನ್ನು ತೋರಿಸಿಕೊಟ್ಟರು. ಎಲ್ಲರೂ ದುಡಿದರೆ ಯಾವ ರಾಜ್ಯದಲ್ಲಿಯೇ ಆಗಲಿ ಆರ್ಥಿಕ ತೊಂದರೆ ಬರಲಾರದು. ಜನಗಳು ದುಡಿಯಲಾರದ ಹೇಡಿಗಳಾದರೆ ಆ ದೇಶವು ಆರ್ಥಿಕ ಮುಗ್ಗಟ್ಟಿನಿಂದ ಬಳಲಬೇಕಾಗುತ್ತದೆ. ಇದನ್ನು ಈಗಿನ ಪ್ರಜಾಪ್ರಭುತ್ವವಾದಿಗಳೂ ಹೇಳುತ್ತಾರೆ. ಉದ್ಯೋಗದಲ್ಲಿ ಮೇಲು ಕೀಳುಗಳ ಗುಣವೇ ಇಲ್ಲದಮೇಲೆ ಎಲ್ಲರೂ ಸರಿಸಮಾನರು ಎಂಬುವ ಭಾವನೆ ಬೆಳೆದು ಪರಸ್ಪರರಲ್ಲಿ ಪ್ರೀತಿಯು ಹುಟ್ಟುತ್ತದೆ. ರಾಜನಿಂದ ಪ್ರಜೆಗಳಿಗೆ ಅನ್ಯಾಯವಾಗಬಾರದು. ಪ್ರಜಾಸಮ್ಮತಿಯಿಂದಲೇ ರಾಜ್ಯದ ಆಡಳಿತೆ ನಡೆಯಬೇಕು. ಇದರಿಂದ ಉಭಯರಿಗೂ ಕ್ಷೇಮವಾಗಬೇಕೆಂಬುವುದೇ ಶ್ರೀ ಬಸವೇಶ್ವರರ ತತ್ವದ ತಿರುಳಾಗಿದ್ದಿತು. ಯಾವದಾದರೊಂದು ಉದ್ಯೋಗದಲ್ಲಿ ಎಲ್ಲರೂ ತೊಡಗಿದರೆ ಆ ದೇಶದ ಹಣವು ಎರಡನೆಯ ದೇಶಕ್ಕೆ ಹೋಗದೆ ದೇಶದ ಸಾಂಪತ್ತಿಕ ಸ್ಥಿತಿಯು ಅಭಿವೃದ್ಧಿಯಾಗುವುದರಲ್ಲಿ ಸಂಶಯವೇ ಇರುವುದಿಲ್ಲ. ಎಷ್ಟೇ ರಾಜಕೀಯ ಉನ್ನತಿಯಾದರೂ ಧರ್ಮವನ್ನು ಬಿಡಲಿಕ್ಕಾಗುವುದಿಲ್ಲ. "ಸರ್ವಂ ಧರ್ಮ ಮೂಲಂ" ಎಂಬುವ ನೀತಿಯ ವಾಕ್ಯದಂತೆ ಸರ್ವವೂ ಧರ್ಮೋನ್ನತಿಯಿಂದಲೇ ಅಭಿವೃದ್ಧಿಯನ್ನು ಹೊಂದುವುದು ಎಂಬುವುದನ್ನು ಮನಗಂಡು ಅತ್ಯಂತ ಸ್ಫೂರ್ತಿಯಿಂದ ಪ್ರೇರಿತರಾಗಿ ಸಾತ್ವಿಕತನದಿಂದಲೇ ಎಲ್ಲವನ್ನೂ ಸಾಧಿಸಿದರು.

ಸುಳ್ಳುಹೇಳುವುದು, ಕಳ್ಳತನ ಮಾಡುವುದು ಸಾಮಾನ್ಯವಾಗಿ ಜನಗಳಿಗೆ ಅದೊಂದು ಸುಲಭ ಮಾರ್ಗವಾಗಿಬಿಟ್ಟಿರುತ್ತದೆ. ಕೊಲೆ ಸುಲಿಗೆಗಳೂ ಕೂಡ ಜನರಲ್ಲಿ ಇರಬಾರದು. ಇಂತಹ ದುರ್ಗುಣಗಳು ದೂರಾಗಲಿಕ್ಕೆ ಎಲ್ಲರಿಗೂ ದೈವಭಕ್ತಿ ಆವಶ್ಯವಾಗಿರಬೇಕು. ದೈವಭಕ್ತಿಯಿದ್ದರೆ ಸಾತ್ವಿಕತನವು ಬೆರೆಯುತ್ತದೆ. ಸಾತ್ವಿಕತನವಿದ್ದರೆ ದುರ್ಗುಣಗಳೆಲ್ಲ ದೂರಾಗಿ ಅವನು ಶಾಂತಪುರುಷನಾಗುತ್ತಾನೆ. ಉತ್ತಮ

ಕಾರ್ಯದಲ್ಲಿಯೇ ಪ್ರಜೆಗಳೆಲ್ಲರೂ ತೊಡಗುವಂತೆ ಮಾಡುವ ಕಾರ್ಯದಲ್ಲಿ ಬಸವರಸರು ಅತ್ಯಂತ ಸಾಹಸವನ್ನು ತೋರ್ಪಡಿಸಿದರು.

ರಾಷ್ಟ್ರೋನ್ನತಿಗೆ ಯಾವುದರಿಂದ ಹಿತವೋ ಆ ಕಾರ್ಯ ಉಚ್ಚವಿರಲಿ ನೀಚವಿರಲಿ ಎಲ್ಲರೂ ಮಾಡಬೇಕು. ಈ ಭಾವನೆಯು ಪ್ರತಿಯೊಬ್ಬರಲ್ಲಿ ಬೆಳೆದು ಕಾರ್ಯಪ್ರವೃತ್ತ ರಾಗಬೇಕೆಂದು ಬಿಜ್ಜಳರಾಜನ ರಾಜ್ಯದಲ್ಲಿ ಮೂಲಸೂತ್ರವಾಗಿದ್ದಿತು. ಇದರ ಪ್ರವರ್ತಕರು ಶ್ರೀ ಬಸವೇಶ್ವರರು.

ಬಸವಣ್ಣನವರ ರಾಜಕಾರಣ ಪಟುತ್ವದ ಮೂಲಕ ಬಿಜ್ಜಳ ರಾಜ್ಯಕ್ಕೆ ಶತ್ರುಗಳ ಭಯವೇ ಇರಲಿಲ್ಲ. ಇದನು ಎಲ್ಲ ಇತಿಹಾಸಕಾರರು ಒಪ್ಪಿ ಬರೆದಿರುತ್ತಾರೆ. ಇಂತಹ ಸಚಿವರು ಸಿಗುವುದು ರಾಜ್ಯದ ಪುಣ್ಯದ ಫಲವೆಂದು ಹೇಳಬಹುದು. ಆದರೆ ಇಂತಹ ಉತ್ಕೃಷ್ಟಸ್ಥಿತಿಯಲ್ಲಿದ್ದ ರಾಜ್ಯದ ಉಪಭೋಗವನ್ನು ಬಹುಕಾಲದವರೆಗೆ ಅನುಭವಿಸು ವುದೂ ಒಂದು ಸುದೈವವೆಂದು ಹೇಳಬಹುದು. ಆದರೆ ಬಿಜ್ಜಳ ಮಹಾರಾಜನ ದೈವವು ಮಾತ್ರ ಪ್ರತಿಕೂಲ ಪರಿಸ್ಥಿತಿಯಲ್ಲಿದ್ದಿತು. ಸ್ವಾರ್ಥಿಗಳು ಯಾವ ರಾಜ್ಯದಲ್ಲಿಯೇ ಆಗಲಿ ಎಲ್ಲ ಕಾಲಕ್ಕೂ ಇದ್ದೇ ಇರುತ್ತಾರೆ. ಅಂತೆಯೇ ಬಿಜ್ಜಳನ ಕಾಲದಲ್ಲಿಯೂ ಅವರಿಗೆ ಕೊರತೆಯೇನೂ ಇರಲಿಲ್ಲ. ತಮ್ಮ ಸ್ವಾರ್ಥದ ಸಲುವಾಗಿ ಅವರು ಯಾವದಾದ ರೊಂದು ಆಟವನ್ನು ಹೂಡದೆ ಬಿಡುವುದಿಲ್ಲ. ಬೇಕಾದವರು ಬೇಕಾದುದನ್ನು ಹೇಳಲಿ, ಅದರ ಸತ್ಯಾಸತ್ಯತೆಯನ್ನು ಕಂಡುಹಿಡಿಯುವುದು ಮುಖ್ಯ ಮನುಷ್ಯನ ಪ್ರಧಾನ ಲಕ್ಷಣವು. ಸ್ವಾರ್ಥಸಾಧನೆಗಾಗಿ ಪ್ರತಿಯೊಂದು ರಾಷ್ಟ್ರದಲ್ಲಿಯೂ ಭಯಂಕರ ಕ್ರೂರ ಕೃತ್ಯಗಳು ನಡದೇ ಇರುತ್ತವೆ. ಇದನ್ನು ರಾಜಕೀಯ ದೃಷ್ಟಿಯಿಂದ ಇತಿಹಾಸವನ್ನು ಓದತಕ್ಕವರಿಗೆ ಹೇಳುವ ಕಾರಣವೇ ಇರುವುದಿಲ್ಲ. ರಾಜಕೀಯ ಕ್ಷೇತ್ರದಲ್ಲಿ ತಂದೆಯು ಮಕ್ಕಳನ್ನು ಕೊಲ್ಲಿಸಿದ್ದುದು, ಮಕ್ಕಳು ತಂದೆಯನ್ನು ಕೊಂದಿರುವುದೂ, ಅಣ್ಣನನ್ನು ತಮ್ಮನೂ, ತಮ್ಮನನ್ನು ಅಣ್ಣನೂ ಕೊಲ್ಲಿಸಿದ ಉದಾಹರಣೆಗಳು ಸಾಕಷ್ಟು ಸಿಗುತ್ತಲಿವೆ. ಇಂತಹ ಸ್ವಾರ್ಥಿಗಳ ಪ್ರಚಾರಕ್ಕೆ ರಾಜನಿರಲಿ, ಪ್ರಜಾಪ್ರಮುಖನಿರಲಿ ಲಕ್ಷ್ಯಕೊಟ್ಟರೆ ಅವನ ಅವನತಿಯಾಗುವುದು ಸಿದ್ಧವಾದ ಮಾತಾಗಿರುತ್ತದೆ.

ಲೋಕೋತ್ತರ ಶ್ರೇಷ್ಠಪುರುಷ, ವಿಶ್ವಕುಟುಂಬಿ, "ಯತ್ರ ಜೀವಃ ತತ್ರ ಶಿವಃ" ಎಂದು ಹೇಳುವ ಬಸವಣ್ಣನವರಂತಹ ದಿವ್ಯಪುರುಷರು ದೊರೆತಾಗ ಅದರ ಉಪಯೋಗ ಮಾಡಿಕೊಳ್ಳದೆ ಇರುವುದು ಬಿಜ್ಜಳರಾಜನ ಅವನತಿಗೆ ಮೂಲಕಾರಣವಾಗಿ ಪರಿಣಮಿ ಸಿತು. "ಬಿಜ್ಜಳನ ಭಂಡಾರವೆನಗೇತಕಯ್ಯ" ಎಂದು ಹೇಳಿ ಸ್ವಾರ್ಥದ ಲವಲೇಶ ವಾದರೂ ಇಲ್ಲದೆ ಧರ್ಮ, ರಾಜಕಾರಣಗಳೆರಡನ್ನೂ ತಮ್ಮ ಜೀವಿತಕಾಲದಲ್ಲಿ ಸಮನಾಗಿ ನಡೆಯಿಸಿಕೊಂಡು ಹೋದದ್ದು ಇತಿಹಾಸದಲ್ಲಿ ಮಹತ್ವವಾದುದಾಗಿರುತ್ತದೆ.

ಶ್ರೀ ಬಸವಣ್ಣನವರು ಮಂತ್ರಿಗಳಾಗಿದ್ದ ಕಾಲದಲ್ಲಿ ಪ್ರಜೆಗಳಿಗೆ ಯಾವ ಅಹಿತವನ್ನೂ ಮಾಡಲಿಲ್ಲ. ಅಂಥವರಿಂದ ಮಾಡಲೂ ಶಕ್ಯವಿಲ್ಲ. ಮಾಡಿದ ಬಗ್ಗೆ ಯಾವ ಇತಿಹಾಸ ಕಾರರೂ ಉಲ್ಲೇಖ ಮಾಡಿರುವುದಿಲ್ಲ. ರಾಜಕೀಯ ಕ್ಷೇತ್ರದಲ್ಲಿ ಇದು ಬಸವಣ್ಣನವರ ದೊಡ್ಡ ವಿಜಯವೇ ಸರಿ.

ಶಿವಾಜಿಯ ಮಗನಾದ ಸಂಭಾಜಿಯು ಸತ್ತನಂತರ ಗಾದಿಯ ಮಾಲೀಕರು ನಾವೇ ಎಂದು ಹೇಳಿ ರಾಜ್ಯವನ್ನು ಸ್ವಾಧೀನಪಡಿಸಿಕೊಂಡು ಆಳಿದ ಪೇಶ್ವೆಯವರಂತೆ

ಶ್ರೀ ಬಸವಣ್ಣನವರು ಬಿಜ್ಜಳನ ರಾಜ್ಯಕ್ಕೆ ಆಶೆಪಡಲಿಲ್ಲ. ಧರ್ಮಕ್ಕೆ ಸರಕಾರವು ಬಾಧ್ಯವಲ್ಲವೆಂಬುವ ಕಾಯದೆಯನ್ನು ತೋರಿಸಿದವರಲ್ಲಿ ಬಸವಣ್ಣನವರೇ ಮೊದಲಿಗರು. ಶುಕ್ರನೀತಿಯಲ್ಲಿ ಹೇಳಿದಂತೆ "ಯಾವನಾದರೊಬ್ಬ ರಾಜನಾಗಲೀ ಪ್ರಜಾಪ್ರಭುತ್ವದ ಮುಖ್ಯಸ್ಥನಾಗಲಿ ತನ್ನ ಮಂತ್ರಿಗೆ ಅಂಜಬೇಕು, ಅಂಜದೆ ಇದ್ದರೆ ಅವನು ರಾಜನೇ ಅಲ್ಲ. ಅರ್ಥಾತ್ ರಾಜನಲ್ಲಿ ಮಂತ್ರಿಯಾದವನು ತನ್ನ ಗಾಂಭೀರ್ಯವನ್ನಿಟ್ಟುಕೊಂಡಿರಲಿಕ್ಕೇಬೇಕು". ಬಿಜ್ಜಳನು ತಲೆದೂಗುವಂತೆ ಬಸವಣ್ಣನವರು ತಮ್ಮ ರಾಜಕಾರಣವನ್ನು ನಡೆಸುತ್ತಿದ್ದರು. ಬಸವಣ್ಣನವರ ಗುಣಗಳನ್ನು ಎಷ್ಟು ಬಣ್ಣಿಸಿದರೂ ಅಲ್ಪವೇ ಆಗುತ್ತದೆ. ಅವರ ಅಂದಿನ ದುಡಿಮೆಯ ಉತ್ಪನ್ನವು ಅಂದೇ ಖರ್ಚಾಗಬೇಕು. ಉಳಿದರೆ ಅದು ತಂಗಳವೆಂದು ಅವರು ಭಾವಿಸುತ್ತಿದ್ದರು. ಹೀಗೆ ಕೂಡಿಹಾಕಿಕೊಳ್ಳುತ್ತ ಹೋದರೆ ಅವನಲ್ಲಿ ಆಲಸ್ಯವುಂಟಾಗಿ ಸ್ವತಃ ಶ್ರಮಪಟ್ಟು ದುಡಿಯಬೇಕೆಂಬುವ ಕಲ್ಪನೆಯೇ ಅಳಿದು ಹೋಗುತ್ತದೆಂದು ಅವರು ತಿಳಿಯುತ್ತಿದ್ದರು. ಹೀಗೆ ದುಡಿತವಿದ್ದು ಖರ್ಚುಮಾಡಿದರೆ ಬಂಡವಾಳಶಾಹಿ ಆಗಲಿಕ್ಕೆ ಶಕ್ಯವೇ ಇರುವುದಿಲ್ಲ. ಇದು ಆರ್ಥಿಕ ಸುವ್ಯವಸ್ಥೆಯ ತಳಹದಿಯಾಗಿದೆ.

ವೇಶ್ಯಾಸ್ತ್ರೀಯಳು ಕ್ಷಣಕ್ಷಣಕ್ಕೆ ವೇಷವನ್ನು ಬದಲಾಯಿಸುವಂತೆ ರಾಜಕಾರಣಿಯಾದವನು "ರಾಜನೀತಿರನೇಕಧಾ" ಎಂಬುವ ಹಾಗೆ ಕ್ಷಣಕ್ಷಣಕ್ಕೆ ತನ್ನ ನೀತಿಯನ್ನು ಬದಲಾಯಿಸಬೇಕೆಂದು ಕೆಲವರ ತಿಳುವಳಿಕೆಯು ಇರುತ್ತದೆ. ಇದು ಸಾಮಾನ್ಯ ಜನಗಳ ತಿಳುವಳಿಕೆ. ಅಂದರೆ ಚಿಲ್ಲರೆ ರಾಜಕಾರಣಿಗಳಿವರು. ಎಲ್ಲವೂ ನೀತಿಯುಕ್ತವಾಗಿಯೇ ನಡೆಯಬೇಕೆಂಬುವುದು ಅವರ ರಾಜಕಾರಣದ ಮೂಲವು. ಯಾವ ಜನಗಳ ಮನಸ್ಸನ್ನೂ ನೋಯಿಸದಂತೆ ರಾಜ್ಯ ಸೂತ್ರವನ್ನು ನಡೆಯಿಸಬೇಕೆಂಬುವುದು ಕಷ್ಟಕರವಾದುದಾದರೂ ಬಸವಣ್ಣನವರು ಅದೇ ಧೋರಣದಿಂದ ಸಾಧ್ಯವಾದಮಟ್ಟಿಗೆ ನಡೆದುಕೊಳ್ಳುತ್ತಿದ್ದರು. ಬಿಜ್ಜಳರಾಜನು ತುಟಿಯನ್ನು ಮಿಸುಕದೆ ಬಸವಣ್ಣನವರ ರಾಜನೀತಿಗೆ ಯಾವಾಗಲೂ ಅಡ್ಡಬರುತ್ತಿರಲಿಲ್ಲ. ಹೀಗೆ ಕೆಲವು ವರ್ಷಗಳವರೆಗೆ ನಡೆದು ರಾಜ್ಯದ ಸುವ್ಯವಸ್ಥೆಯ ಕೀರ್ತಿಯು ಎಲ್ಲೆಡೆಯಲ್ಲಿಯೂ ಹಬ್ಬಿತು. ಹೀಗೆ ಸುವ್ಯವಸ್ಥೆಯಿಂದ ಕೆಲವು ದಿನಗಳು ಕಳೆದುಹೋದವು. ಬಸವಣ್ಣನವರ ಕೀರ್ತಿಯು ಅತ್ತ ಧಾರ್ಮಿಕದಲ್ಲಿಯೂ, ಇತ್ತ ರಾಜಕಾರಣದಲ್ಲಿಯೂ ಪರಿಪೂರ್ಣತೆಯನ್ನು ಹೊಂದುತ್ತ ಎತ್ತನೋಡಿದಡತ್ತ ನಿನಾದಗೊಳ್ಳುತ್ತಲಿತ್ತು.

ಆದರೆ ಅವರಿಗೆ ಹೆಚ್ಚು ಗೌರವವಾದಂತೆ ಕೆಲವರು ತಮಗೆ ಮಾನಭಂಗವೆಂದು ತಿಳಿದುಕೊಂಡು ಬಿಜ್ಜಳ ಮಹಾರಾಜನಲ್ಲಿ ಚಾಡಿಯನ್ನು ಹೇಳಲಿಕ್ಕೆ ಪ್ರಾರಂಭಿಸಿದರು. ಬಿಜ್ಜಳನಾದರೂ ಇವರ ವಿಷಯದಲ್ಲಿ ಭಿನ್ನಾಭಿಪ್ರಾಯ ಹೊಂದಲು ಪ್ರಾರಂಭಿಸಿದನು. ಇದರಿಂದ ರಾಜ್ಯದಲ್ಲಿ ಅನೈಕ್ಯತೆಯಾಗಿ ಅನೇಕ ಕ್ರೂರಕೃತ್ಯಗಳು ಅನ್ಯಾಯದಿಂದ ನಡೆಯಲಿಕ್ಕೆ ಹತ್ತಿದವು. ಬಸವಣ್ಣನವರ ಸುವ್ಯವಸ್ಥೆಯಿಂದ ಕಟ್ಟಿದ ಈ ಮಾದರಿ ರಾಜ್ಯದ ಅಡಿಗಲ್ಲು ಸಡಿಲಾಗಲಿಕ್ಕೆ ಹತ್ತಿತು. ಹಾಗಾದರೆ ಬಸವಣ್ಣನವರು ಮಹಾಪುರುಷರು, ಇದನ್ನೇಕೆ ತಡೆಯಲಿಲ್ಲ, ಹೀಗೇಕಾಯಿತು, ಎಂದು ಕೇಳತಕ್ಕವರೂ ಇರುತ್ತಾರೆ. ಇವರಿಗೆ ಉತ್ತರವೂ ಸುಲಭವಾಗಿಯೇ ಇರುತ್ತದೆ.

ಧರ್ಮರಾಜನು ಸತ್ಯಸಂಧನನೂ, ಮಹಾ ಧಾರ್ಮಿಕ ಪುರುಷನಲ್ಲದೆ ಲೋಕದಲ್ಲಿ "ಅಜಾತ ಶತ್ರು" ಎಂಬುವ ಬಿರುದನ್ನು ಪಡೆದವನಾಗಿದ್ದರೂ ಕೌರವನ ಕೂಡ ಯುದ್ಧವನ್ನೇ ಹೂಡಿ ಗುರುಗಳೂ, ಅಜ್ಜಂದಿರೂ ಮೊದಲಾದವರನ್ನು ಕೊಲ್ಲಬೇಕಾಯಿತಲ್ಲ? ಇತಿಹಾಸದಲ್ಲಿ ಇಂತಹ ಅನೇಕ ಉದಾಹರಣೆಗಳನ್ನು ನಾವು ಕೊಡಬಹುದು. ಬಿಜ್ಜಳನ ರಾಜ್ಯದ ಅಂತ್ಯವಾಗಬೇಕಾಗಿದ್ದಿತು. ಶ್ರೀ ಬಸವಣ್ಣನವರೂ ತಮ್ಮ ಬೇರೆ ಕಾರ್ಯಗಳಿಗೆ ತೆರಳಬೇಕಾಗಿದ್ದಿತು. "ಕಾಲಾಯ ತಸ್ಮೈ ನಮಃ" ಎಂಬುವಂತೆ ಯಾವ ಸಮಯದಲ್ಲಿ ಏನು ಆಗಬೇಕೋ ಅದು ಆಗಿಯೇ ತೀರುವುದು—"ಭವಿತವ್ಯಂ ಭವತ್ಯೇವ".

ಆದರೆ ಇದರಿಂದ ಶ್ರೀ ಬಸವೇಶ್ವರರ ರಾಜಕಾರಣ ಪಟುತ್ವವು ಸ್ಫುಟವಾಗಿ ಕಾಣುತ್ತಲಿದೆ. ಧರ್ಮದಲ್ಲಿಯೂ, ರಾಜಕಾರಣದಲ್ಲಿಯೂ ಅದ್ವಿತೀಯ ವ್ಯಕ್ತಿಗಳಾದ ಶ್ರೀ ಬಸವಣ್ಣನವರ ಕೀರ್ತಿಧ್ವಜವು ಪ್ರಕಾಶಮಾನವಾಗುತ್ತಲಿದೆ.

# ಇಪ್ಪತ್ತೈದನೆಯ ಪ್ರಕರಣ

## ಬಸವೇಶ್ವರರೂ ಶಿಲಾಶಾಸನಗಳೂ

ನಮ್ಮ ದೇಶದಲ್ಲಿ ಶಿಲಾಶಾಸನಗಳು ಐತಿಹಾಸಿಕ ಸಂಗತಿಗಳ ಕಾಲ ನಿರ್ಣಯವನ್ನು ಸಿದ್ಧಾಂತಪಡಿಸುವ ಕಾರ್ಯದಲ್ಲಿ ಮುಖ್ಯಸಾಧನಗಳಾಗಿವೆ. ಇಂತಹ ಶಾಸನಗಳಲ್ಲಿ ಬಂದ ಹೆಸರುಗಳಿಗೆ ಪ್ರಾಧಾನ್ಯವಾಗಿ ಇತಿಹಾಸದಲ್ಲಿ ಪ್ರಮುಖ ಸ್ಥಾನವಿರುತ್ತದೆ. ಸರಕಾರದವರೂ ಕೂಡ (ಪುರಾತನ ಸಂಶೋಧನಾ ಇಲಾಖೆ) ಆರ್ಕಿಲಾಜಿಕಲ್ ಡಿಪಾರ್ಟ್‌ಮೆಂಟನ್ನು ಸ್ಥಾಪಿಸಿ ದೇಶಗಳಲ್ಲಿಯ ಶಾಸನಗಳನ್ನು ಹುಡುಕಿ ಅಚ್ಚುಮಾಡಿಸುತ್ತ ಬಂದಿರುತ್ತಾರೆ. ಇಂತಹ ಕಾರ್ಯವು ಕಳೆದ ೫೦ ವರ್ಷಗಳಿಂದ ಅವ್ಯಾಹತವಾಗಿ ನಡೆಯುತ್ತ ಬಂದಿದ್ದು ಅನೇಕ ಶಾಸನಗಳು ಬಯಲಿಗೆ ಬಂದು ಮಹತ್ತರವಾದ ಕಾರ್ಯಸಾಧನೆಯನ್ನು ಮಾಡುವುದಕ್ಕೆ ಸಹಾಯಕಗಳಾಗಿವೆ. ಈ ಇಲಾಖೆಯು ನಮ್ಮ ದೇಶದಲ್ಲಿ ಲಾರ್ಡ್ ಹಾರ್ಡಿಂಜರು ವೈಸರಾಯರಾಗಿದ್ದಾಗ ಮೂರ್ತಸ್ವರೂಪಕ್ಕೆ ಬಂದಿತು.

೬೦ ವರ್ಷಗಳ ಹಿಂದೆ ಶ್ರೀ ಬಸವೇಶ್ವರರ ಹೆಸರು ಸಾಹಿತ್ಯದಲ್ಲಿ ಮಾತ್ರ ಸಿಗುತ್ತಿದ್ದಿತಲ್ಲದೆ ಶಾಸನಗಳಲ್ಲಿ ದೊರೆಯದೆ ಅಥವಾ ಶಾಸನಗಳಲ್ಲಿದ್ದರೂ ಅದನ್ನು ಗೊತ್ತುಹಚ್ಚದೆ ಇರುವುದರಿಂದ ಆ ಸಾಹಿತ್ಯವಾದರೋ ಅವರ ಸಮಸಾಮಯಿಕವಾಗಿರದೆ ಅವರ ಐತಿಹಾಸಿಕತೆಯನ್ನು ಕುರಿತು ಸಹಜವಾಗಿ ಇದ್ದ ತುಸುವಾದರೂ ಶಂಕೆಯು ಈಗೇನೂ ಹಾಗೆಯೇ ಉಳಿದಿರುವುದಿಲ್ಲ. ಅವರ ಕಿರಿಯ ಸಮಕಾಲಿಕನಾದ ಹರಿಹರ ಮಹಾಕವಿಯ ಬಸವರಾಜ ದೇವರ ರಗಳೆಯೂ ಕೆಲವೇ ಆದರೂ ನಿರ್ವಿವಾದವಾದ ಶಾಸನಗಳೂ ಅವರ ಐತಿಹಾಸಿಕ ಸತ್ಯಸಂಗತಿಗಳನ್ನು ಚೆನ್ನಾಗಿ ಮನವರಿಕೆ ಮಾಡಿಕೊಡುತ್ತವೆ. ಈಗ ಸಿಕ್ಕಿರುವ ಕೆಲವು ಶಾಸನಗಳನ್ನು ಮಾತ್ರ ಇಲ್ಲಿ ಕೊಡುತ್ತೇವೆ. ಹುಡುಕುತ್ತ ಹೋದರೆ ಇನ್ನೂ ಅವರ ಬಗ್ಗೆ ಹಲವಾರು ಶಾಸನಗಳು ಸಿಗುವುದಸಂಭವವೆಂದು ಹೇಳಲಿಕ್ಕಾಗದು.

ಶಾಸನ ೧.—ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕಿನ ಗುಡಿಹಾಳ ಮತ್ತು ಕುಂಟೋಜಿ ಗ್ರಾಮಗಳ ನಡುವಣ ಗುಡಿಕಲ್ಲಿನಲ್ಲಿ—[1] "ಇದು **ಬಸವರಾಜ ದೇವರ ಮಾನ್ಯ,** ಇದನ್ನಾರೂ ಅಳುಪಬಾರದು" ಎಂದಿರುವಲ್ಲಿ ಬಸವರಾಜದೇವರೆಂದರೆ ಸ್ವಯಂ ಬಸವೇಶ್ವರರೇ ಹೊರತು ಬೇರೆಯವರಲ್ಲ ಎಂದು ಬೇಕಾದಷ್ಟು ಪ್ರಮಾಣಗಳಿಂದ ಸಿದ್ಧವಾಗುತ್ತದೆ. ಆ ಮಾನ್ಯ ಅವರದೇ ಅತ ಏವ ಅವರು ಐತಿಹಾಸಿಕ ವ್ಯಕ್ತಿ ತಾನೆ ಎಂದು ಖಂಡಿತವಾಗಿ ಸಿದ್ಧವಾಗುತ್ತದೆ. ಆದರೂ ಅದಕ್ಕೆ ತೇದಿ ಅಥವಾ ಸಂವತ್ಸರ ಮೊದಲಾದುವುಗಳಿಲ್ಲದೆ ಇರುವುದರಿಂದ ಅದು ಅವರ ವಾಸ್ತವಿಕೆಗೆ ಸಾಲುವಂತೆ ಕಾಲ ನಿರ್ಣಯಕ್ಕೆ ಸಾಲದು.

ಶಾಸನ ೨.—ಧಾರವಾಡ ಜಿಲ್ಲೆಯ ಸೊರಟೂರಿನ ಮಲ್ಲೇಶ್ವರ ದೇವಾಲಯದೊಂದು ಸ್ತಂಭದಲ್ಲಿ ದುರ್ಮುಖಿ ಸಂವತ್ಸರದ ಆಶ್ವಯುಜ ಶುದ್ಧ ೧೦ ಮಂಗಳವಾರದಂದು

---

[1] Annual Report on South Indian Epigraphy, 1930. Appendix E. ಪುಟ ೬೦., ನಂ. ೧೪.

ಹಂದಿಗನೂರಿನ ಮಹಾನಾಯಕಾಚಾರ್ಯ ಸಿದ್ದೇನಾಯಕನ ಕೆಳಗಣ ಗಬ್ಬಿನಾಯಕ ನೆಂಬುವನು ಅದೋ ಅಥವಾ ಬೇರೆಯಾವದೋ ದೇವಸ್ಥಾನವನ್ನು ಜೀರ್ಣೋದ್ಧಾರಮಾಡಿ ಅಲ್ಲಿ **ಬಸವೇಶ್ವರನ ಮೂರ್ತಿಯನ್ನು** ಪ್ರತಿಷ್ಠಾಪಿಸಿದನೆಂದಿದೆ.[2]

ಈ ಶಾಸನಕ್ಕೆ ಹಿಂದಿನಿಂದಲೇ ಅಲ್ಲಿ ಶ್ರೀ ಬಸವೇಶ್ವರನ ಮೂರ್ತಿಯನ್ನು ವಿಗ್ರಹ ಮಾಡಿ ಪೂಜಿಸುತ್ತಿದ್ದರೆಂದು ಇದರಲ್ಲಿ ಸ್ಪಷ್ಟವಾಗಿ ತಿಳಿಯುವುದಾದರೂ ಇದರಲ್ಲಿ ಶಕವರ್ಷ ಸಂಖ್ಯೆಯಾಗಲೀ ಆ ಕಾಲದ ಆಳರಸರ ಹೆಸರಾಗಲೀ ಇಲ್ಲದುದರಿಂದ ಇದು ಎಷ್ಟು ವರ್ಷ ಹಿಂದಿನದೆಂದು ನಿರ್ಣಯಮಾಡಲಿಕ್ಕಾಗುವುದಿಲ್ಲ.

ಶಾಸನ ೩.—[3] ಶ್ರೀ ಬಸವಣ್ಣನವರ ಪ್ರತ್ಯೇಕ ವಚನದ ಕೊನೆಯ "ಕೂಡಲ ಸಂಗ" ಕೂಡಲಸಂಗಮದೇವ ಎಂಬ ಅಂಕಿತದಿಂದಲೇ ಅಲ್ಲ ಕೂಡಲಸಂಗಮದೇವಾ ನೀವು ಮಾಡಲಾದೆನು. (೨೪) ಮಮಕರ್ತಾ ಕೂಡಲಸಂಗ. (೫೨೬) ಕೂಡಲಸಂಗಮ ದೇವ ನೀವೆನ್ನ ಪ್ರಾಣನಾಥ. (೭೨೩) ಕೂಡಲಸಂಗಮದೇವ ತನಗೆ ಬೇಕೆಂದೆತ್ತಿಕೊಂಡ. (೮೧೭) ಮುಂತಾದ ಈ ಕೆಲವು ಮಾತುಗಳಿಂದಲೂ, ಹರಿಹರನ ಕ್ರಿ. ಶ. ಸುಮಾರು ೧೧೫೦–೧೨೩೦ ಬಸವರಾಜ ದೇವರ ರಗಳೆಯಲ್ಲಿ ಬಸವೇಶ್ವರನನ್ನು 'ವೃಡನ ಸುತ' I. ಪಂಕ್ತಿ ೧೫೬ ಸಂಗನ ಬಸವಂ ಬಸವಿದೇವಂ. II. ೭೦ ಅಂಬಕತ್ರಯನ ಪುತ್ರ. III. ೧೫೬ ಎಂದೂ ಶ್ರೀ ಶಿವನು ಆತನಿಗೆ ಅಂಜದಿರಂಜದಿರ್ ಮಗನೇ. II. ೬೦ ಎಲೇ ಮಗನೆ, ಬಸವ, ಬಸವಣ್ಣ, ಬಸವಿದೇವ. (IV. ೨೨) ಎಲೆ ಮಗನೆ, ಎಲೆ ಕಂದ, ಎಲೆ ಬಸವ, IV. ೪೭, ೪೮ ಎಂದು ನುಡಿದನೆಂದೂ, ಬಸವ ಪುರಾಣದಲ್ಲಿ (ಕ್ರಿ. ಶ. ೧೩೬೯) ಶಿವನು ಆತನನ್ನು ಎತ್ತಿಕೊಳ್ಳುವಲ್ಲಿ ಮಗನೆತ್ತಿದನೆಂದೂ, (IV. ೫೬) ಮೈದಡವಿ ಮಗನಂ ತಕ್ಕೈಸಿದನೆಂದೂ (IV. ೩೦) ಆತನು

ಭಾಪುರೇ ಶಿವನಣುಗನಲ್ಲೋ ।
ಪಾಪನಾಶನ ಬಸವನಲ್ಲೋ ॥ (IV. ೭೧)

ಎಂದೂ ಹೇಳುವುದರಿಂದಲೂ ಶ್ರೀ ಶಿವನ ಅರ್ಥಾತ್ ಶಿವನ ಅರ್ಚಾಮೂರ್ತಿಯಾದ ಕಪ್ಪಡಿಯ ಸಂಗಮೇಶ್ವರನ ಮಗನೆಂದು ತನ್ನನ್ನು ಭಾವಿಸಿದ್ದಂತೆಯೂ, ಇತರರಿಂದಲೂ ಹಾಗೆಯೇ ಭಾವಿಸಲ್ಪಟ್ಟಂತೆಯೂ, ತಿಳಿಯುವ ಬಸವೇಶ್ವರನನ್ನು ಕುರಿತು ಶಾ. ಶ. ೧೧೮೪ = ಕ್ರಿ. ಶ. ೧೨೬೨ರ [4] ಚೌಡದಾನಪುರದ ಶಾಸನದಲ್ಲಿ— ನೆಗಪ್ದದ್ರಿಜೆ ಬಿನ್ನಪಂ ಶಿವಜಗಕ್ಕೀ ಮಾರ್ಗಮಂ ತೋರಬೇಕೆನಲಾಗ ಪ್ರಭು ನಂದಿನಾಥನ ಮೊಗಂ ನೋಡಲ್ಕೆ ಸಂಗಮೇಶನ ಪುತ್ರಂ ಬಸವಯ್ಯ ಬಂದನೆಂದಿರುವಲ್ಲಿ ಸಂಗಮೇಶನ ಪುತ್ರನೆಂಬ ಬಸವೇಶ್ವರನು ಆ ಶಾಸನ ಕಾಲದಲ್ಲಿ ಅಥವಾ ಅದಕ್ಕೆ ಸಾಕಷ್ಟು ಹಿಂದಿನಿಂದಲೇ ನಂದೀಶ್ವರನ ಅವತಾರವೆಂದು ಬಗೆಯಲ್ಪಡುತ್ತಿದ್ದನೆಂದು ವ್ಯಕ್ತವಾಗುತ್ತದೆ.

ಶಾಸನ ೪.—ಹೊಯ್ಸಳ ಸೋಮೇಶ್ವರನು (ಕ್ರಿ. ಶ. ೧೨೩೩–೧೨೫೪) ಕರ್ಣಾನೂರಿ ನಲ್ಲಿದ್ದಾಗ ಕೊಟ್ಟ ಕ್ರಿ. ಶ. ೧೨೫೧ನೆಯ ಮಾರ್ಚಿ ೨೮ನೆಯ ತಾರೀಖಿನ ಶಾಸನದಲ್ಲಿ

---

[2] See Supplement, ಪುಟ ೬, ನಂ. ೭೭.

ಹೊಸಪದ್ಧತಿಯ ಬಸವೇಶ್ವರನ ವಚನಗಳು, ಶಿವಾನುಭವ ಗ್ರಂಥಮಾಲಾ, ನಂ. ೧.

[4] ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕಾ, ಬಹುಧಾನ್ಯ ಸಂವತ್ಸರ, ಪುಟ ೨೭೭.

ಬಸವೇಶ್ವರನ ಹೆಸರಿದೆ. [3]"ಕರಸ್ಥಳ **ಬಸವಿದೇವ** ಉತ್ತಮಾಂಗದ ಮಲ್ಲಿದೇವ, ತಾನೇಶ್ವರ ಚಾಮಯ್ಯ, ಜಡೆಮಲ್ಲಯ್ಯ, ಪಾಡುವ ಮಲ್ಲಯ್ಯನಾಯಕ".

ಶಾಸನ ೫.—ಕ್ರಿ.ಶ. ೧೨೮೦ರ ಮರಡೀಪುರ ಶಾಸನದಲ್ಲಿ—ಸಿರಿಯಾಳ, ದಾಸವರ್ಮ, ಓಹಿಲ, ಉದ್ಭಟ, ನಂಬಿ, ಕುಂಬಾರಗುಂಡ, ಅಂಡವಲ, ಕರಿಕಾಲಚೋಳ, ಚೋಳ, ಬೊಗ(ಜ) ದೇವಬಾಣ, ಮಯೂರ, ಕಾಳಿದಾಸ, ಕೇಶಿರಾಜ, ದಣ್ಣಾಯಕಸುರಿಗೆ, ಬೆಲ್ಪಡರಾಯ, **ಸಂಗನಬಸವಯ್ಯ,** ಲಿನಿಮಿತಿಕೇಶವರಾಜ, ಜಗದೇವದಣ್ಣಾಯಕ. ಏಕಾಂತದ ರಾಮಯ್ಯ, ಸೊನ್ನಲಿಗೆಯ ಸಿದ್ಧರಾಮಯ್ಯ, ಹುಲಿಗೆರೆಯ ಪೊನ್ನಯ್ಯ. ನೆಲುವಿಗೆಯ ಸಾಂತಯ್ಯ. ಪಂಕ್ತಿ—ಅನೇಕ ಜನರ ಹೆಸರುಗಳು ಮೇಲಿನ ಶಾಸನದಲ್ಲಿ ಉಲ್ಲೇಖವಾಗಿದ್ದು ಶ್ರೀ ಬಸವಣ್ಣನವರ ಪರ್ಯಾಯ ನಾಮವಾದ—ಸಂಗನಬಸವಯ್ಯ ಎಂಬುವ ಶಬ್ದವನ್ನು ಉಪಯೋಗಿಸಿರುತ್ತಾರೆ.

ಶಾಸನ ೬.—[5]ಶಾ. ಶ. ೧೨೦೧, ಪ್ರಮಾಥಿ ಸಂವತ್ಸರದ ಆಶ್ವಯುಜ ಶುದ್ಧ ಹುಣ್ಣಿಮೆ ಸೋಮವಾರ ಚಂದ್ರಗ್ರಹಣ, ಅಂದರೆ ಇಲ್ಲಿ ಹೇಳಿದ ತಿಂಗಳು ಸರಿಯಾದರೆ ಕ್ರಿ. ಶ. ೧೨೭೯ ಸೆಪ್ಟೆಂಬರ್ ೨೧ ಗುರುವಾರದ ಆಶ್ವಯುಜ ಶುದ್ಧ ಹುಣ್ಣಿಮೆಯ ಚಂದ್ರ ಗ್ರಹಣದಂದಿನ ಅಥವಾ ಇಲ್ಲಿ ಹೇಳಿರುವ ವಾರ ಸರಿಯಾದರೆ ಕ್ರಿ. ಶ. ೧೨೮೦ ಸೆಪ್ಟೆಂಬರ್ ೧೦ ಸೋಮವಾರದ ಭಾದ್ರಪದ ಶುದ್ಧ ಹುಣ್ಣಿಮೆಯ ಚಂದ್ರಗ್ರಹಣದಂದಿನ ದೇವಗಿರಿಯ ಯಾದವ ವಂಶದ ರಾಮಚಂದ್ರನ ಆಳೊತ್ತಿನ ಕ್ರಿ. ಶ. ೧೨೭೧–೧೩೦೯, ಕಲ್ಲೇದೇವರ ಪುರದ ಕಲ್ಲೇಶ್ವರ ದೇವಸ್ಥಾನದ ಶಿಲಾಶಾಸನದಲ್ಲಿ—[6]ಚೇರ, ಚೋಳ, ನಂಬಿ–ನಂಬಿ, ಚಿಕ್ಕ ಚಿಕ್ಕ, ಚೆನ್ನಹೊನ್ನ, ಬಂಕ, **ಬಸವರಾಜ,** ಭೋಜಾದಿ ಮರ್ತ್ಯಲೋಕದ ಮಹಾಗಣಾಚಾರ—ಪಂಕ್ತಿ ೧೦–೧೨.

ಶಾಸನ ೭.—ಹೊಯ್ಸಳ ವೀರನಾರಸಿಂಹನ ಅಂದರೆ ಮೂರನೇ ನರಸಿಂಹನ ಆಳ್ವಿಕೆಯ ಕ್ರಿ.ಶ. ೧೨೫೪–೧೨೯೧, ಶಾ.ಶ. ೧೧೮೧, ಕಾಳಯುಕ್ತಿ ಸಂವತ್ಸರದ ಭಾದ್ರಪದ ಶುಕ್ಲ ೧೪ ಮಂಗಳವಾರ ಕ್ರಿ.ಶ. ೧೨೫೯ ಸೆಪ್ಟೆಂಬರ್ ೨ನೇ ತಾರೀಖು ಮಂಗಳವಾರದಂದಿನ ಹಿರಿಯೂರು ಕುಂಜೇಶ್ವರ ದೇವಾಲಯದ ಶಿಲಾಶಾಸನದಲ್ಲಿ—ಸಿರಿಯಾಳಂ–**ಬಸವಯ್ಯ**[7] ನೋಳ್ಪೆಸೆವ. . . . ಮಂಬಾಣನುಂ ಭೋಗ (ಜಂ) ಸಲೆ ಚೋಳನುದ್ಭಟನ ತರ್ಕ್ಯಂಸಿಂಧು ಬಲ್ಲಾಳನಿಂ। ಧರೆ ಕೊಂಡಾಡುವ ದಾಸಿಮಯ್ಯ ನೆನಿಸಿದೀಶ ಭಕ್ತಸಂದೋಹ ॥ ಮೇಲೆ ಬರೆದ ಮೂರು ಶಾಸನಗಳಲ್ಲಿ ಬಸವಣ್ಣನವರ ಹೆಸರುಗಳು ಬೇರೆ ಬೇರೆ ರೀತಿಯಿಂದ—ಅಂದರೆ ಸಂಗನಬಸವಯ್ಯ, ಬಸವಯ್ಯ, ಬಸವರಾಜ ಎಂದು ಬಂದಿರುತ್ತವೆ. ಹರಿಹರನ ಬಸವರಾಜ ದೇವರ ರಗಳೆಯಲ್ಲಿ—(ಪುಟ ೫೦) ಬಸವ, ಬಸವಣ್ಣ, ಬಸವಯ್ಯ. ಬಸವರಸ, ಬಸವರಾಜ, ಬಸವಿದೇವಎಂದೂ, (ಪುಟ ೭೦) ಸಂಗನಬಸವಎಂದೂ ಉಲ್ಲೇಖಿಸಲ್ಪಟ್ಟಿರುವ **ಆ ಬಸವೇಶ್ವರನ ವಚನಗಳಲ್ಲಿ**[8] ಪರಮ ಶಿವಶರಣರೆಂದಿರುವ

---

[5] *Epigraphia Carmalica*, EC III, ಮಂಡ್ಯ ೩೩.

[6] EC X, ಜಗಳೂರು ೩೦.

[7] EC V, ಅರಸೀಕೆರೆ ೧೦೯.

[8] ಹೊಸಪದ್ಧತಿಯ ಬಸವೇಶ್ವರ ವಚನಗಳು, ನಂ. ೧೬೩, ೨೦೪, ೨೭೩, ೨೮೭, ೩೧೨, ೩೩೯, ೩೫೨, ೩೬೪, ೩೬೬, ೩೭೨, ೪೨೭, ೪೪೬, ೫೬೭, ೫೭೦, ೫೭೧, ೫೭೯, ೫೮೯, ೫೯೦, ೫೯೨, ೬೮೪, ೬೮೬, ೭೦೪, ೭೧೬.

ಬಾಣ, ಮಯೂರ, ಕಾಳಿದಾಸ, ಸಿರಿಯಾಳ, ಚೋಳ, ದಾಸಿಮಯ್ಯ, ಜೊಮ್ಮಯ್ಯ, ಸಿಂಧುಬಲ್ಲಾಳ, ನಂಬಿ, ಚಿಕ್ಕ, ಕಕ್ಕ, ಚನ್ನ, ಓಹಿಲರೊಂದಿಗೆ **ಬಸವೇಶ್ವರನೂ** ಅವರ ಓರಗೆಯ ಶಿವಭಕ್ತನೆಂದು ಗಣಿಸಲ್ಪಡುತ್ತಿದ್ದನೆಂಬುವುದು ಸ್ಪಷ್ಟವಾಗುತ್ತದೆ.

ಶಾಸನ ೮.—ಮೇಲೆ ಬರೆದ ಎಲ್ಲಾ ಶಾಸನಗಳಿಗಿಂತಲೂ ಮಿಗಿಲಾದ ಮತ್ತೊಂದು ಶಾಸನವಿರುತ್ತದೆ. ಅದು "**ಅರ್ಜುನವಾಡ ಶಿಲಾಶಾಸನ**"[9] ಬೆಳಗಾಂವ ಜಿಲ್ಲೆಯಲ್ಲಿರುವ ಹುಕ್ಕೇರಿಯಿಂದ ಸುಮಾರು ೧೫ ಮೈಲಿ ದೂರದಲ್ಲಿರುವ ಅರ್ಜುನವಾಡ ಎಂಬುವ ಗ್ರಾಮದಲ್ಲಿಯ ಹಾಲಶಂಕರಲಿಂಗ ದೇವಾಲಯದಲ್ಲಿ ಇದ್ದಿತು. ಅದನ್ನೀಗ ವಿಜಾಪುರ ಜಿಲ್ಲೆಯ ಬಾಗೇವಾಡಿಯ ತಾಲ್ಲೂಕಿನ ಕಚೇರಿಯಲ್ಲಿ ಇಟ್ಟಿರುತ್ತಾರೆ. ಅದಕ್ಕೇನೇ 'ಅರ್ಜುನವಾಡ ಶಿಲಾಶಾಸನ'ವೆಂದು ಅನ್ನುತ್ತಾರೆ. ಅದರ ತೇದಿ ದೇವಗಿರಿಯ ಯಾದವ ವಂಶದ ಕನ್ನಡ ಅಥವಾ (ಕಂಧರನೂ) ಎಂಬ ಕೃಷ್ಣನ ಆಳೊತ್ತಿನ ಕ್ರಿ. ಶ. ೧೨೪೭–೧೨೬೦, ಶಾ. ಶ. ೧೧೮೨ ಸಿದ್ಧಾರ್ಥಿ ಸಂವತ್ಸರದ ಚೈತ್ರ ಬಹುಳ ಅಮಾವಾಸ್ಯೆ ಸೋಮವಾರ ಸೂರ್ಯಗ್ರಹಣ = ಕ್ರಿ. ಶ. ೧೨೬೦ ಏಪ್ರಿಲ್ ೧೨ನೆಯ ತಾರೀಖಿನಂದು ಸೂರ್ಯಗ್ರಹಣವಿದ್ದ ಸೋಮವಾರ ಅದರಲ್ಲಿ ಬಸವೇಶ್ವರನ ತಂದೆಯಾದ ಮಾದಿರಾಜನಿಂದ ಪಂ। ೮ ಮೊದಲಾಗಿ ಬಸವೇಶ್ವರನ ಅಣ್ಣನಾದ ದೇವರಾಜಮುನಿಪನ ಪಂ। ೩೭ ಮರಿಮಗನೂ, ಅತ ಏವ ಬಸವರಾಜನೆಂಬ ಬಸವೇಶ್ವರನ ಅನ್ವಯನೂ ಪಂ । ೪೩ ಆದ ಆ ಶಾಸನೋಕ್ತದತ್ತಿಯ ಪ್ರತಿಗ್ರಾಹಿ ಹಾಲಬಸವಿದೇವ ಮುನೀಶನ ಪಂ। ೩೯ ರವರೆಗೆ ಅವರ ಕುಟುಂಬದ ೫ ತಲೆಯಂತರಗಳ ಪೀಳಿಗೆಯನ್ನು ವಿಸ್ತರಿಸಿದೆ.

ಆ ಶಾಸನದ ಕಲ್ಲು ಕೆಲವು ಮರ್ಮಸ್ಥಾನಗಳಲ್ಲಿ ತೃಟಿತವಾಗಿರುವ ಕಾರಣ ಅದರ ಹತ್ತನೆಯ ಕಂದಪದ್ಯದಲ್ಲಿ

**ಪಂ. ೩೫–೩೭**

ಸಂಗನ ಬಸವನ ಅಗ್ರ····
ಕಂ ದೇವರಾಜ ಮುನಿಪನ ತನಯಂ ।
ಜಂಗಮ ಪರುಸಂ····ರ
ಸಂಗಂ ಪ್ರಿಯ ಸುತನೆನಿಪ್ಪ ಕಲಿದೇವರಸಂ ॥ ೧೦ ॥

ಸಂಗಮ ಬಸವ ಎಂದಿರುವ ಬಸವೇಶ್ವರನಿಗೂ, ದೇವರಾಜಮುನಿಪನಿಗೂ ಕಲಿದೇವರಸರಿಗೂ ಇರುವ ಆಯಾ ವಾಪಿ (ಸಂಬಂಧ) ನೇರಾಗಿ ತಿಳಿಯುವುದಿಲ್ಲ. ಆ ಶಾಸನ ಪ್ರಕಟವಾಗಿರುವ—*Epigraphia India* ಎಂಬ ಶಾಸನ ಪತ್ರಿಕೆಯಲ್ಲಿ ಅದನ್ನು ಸಂಪಾದಿಸಿರುವ ಎಸ್. ಶ್ರೀಕಂಠಶಾಸ್ತ್ರಿಯವರು ಆ ಸವೆದುಹೋದ ಅಕ್ಷರಗಳು ಪ್ರಾಯಶಃ ಹೀಗಿರಬಹುದೆಂದು ಅಲ್ಲಿ[10] ಸೂಚಿಸಿರುತ್ತಾರೆ.

ಸಂಗನ ಬಸವನ ಅಗ್ರಜ
ಸಂಗಾಂಕಂ ದೇವರಾಜ ಮುನಿಪನ ತನಯಂ ।
ಜಂಗಮ ಪರುಸಂ ಶರಣರ
ಸಂಗಂ ಪ್ರಿಯಸುತನೆನಿಪ್ಪ ಕಲಿದೇವರಸಂ ॥

---

[9] *Epigraphia India*, **XXI**, **ಪುಟ ೧೨–೧೪.**

[10] ಅದೇ ಪುಟ ೧೩, ಅಡಿಬರಹ ೭ ಮತ್ತು ೮.

ಆದರೆ ಈ ಕಂದಕ್ಕೆ ಅಲ್ಲಿಯೇ ಮುಂದೆ ಅವರು ಕೊಟ್ಟಿರುವ ಆಂಗ್ಲ ಗದ್ಯಾನುವಾದ[11] ದಲ್ಲಿ ತಾವು ಊಹಿಸಿರುವ ಈ ಅಕ್ಷರಗಳನ್ನು ಅವರು ಅನುವಾದಿಸಲೂ ಇಲ್ಲ, ಅವರ ಊಹೆಯ ಮೇಲೆ ಈ ಕಂದಕ್ಕೆ ನೇರವಾಗಿ ಅರ್ಥವಾಗುವಂತೆಯೂ ಇಲ್ಲ.

ಅವರ ಊಹೆಯನ್ನು ಒಪ್ಪದೆ ಶ್ರೀ ಎನ್. ಲಕ್ಷ್ಮೀನಾರಾಯಣರಾಯರು[12] ಅದೇ ಪತ್ರಿಕೆಯಲ್ಲಿ ಆ ಮುಂದೆಯೇ ಆ ಸವೆದುಹೋದ ಎಡೆಗಳಲ್ಲಿ ೩೫ನೆಯ ಪಂಕ್ತಿಯಲ್ಲಿ ಒಂದೇ ಅಕ್ಷರ ತೀರಾ ನಷ್ಟವಾಗಿದೆ. ಅದೇ ಪಂಕ್ತಿಯಲ್ಲಿ ಬೇರೊಂದು ಅಕ್ಷರವು ಆ ಮೇಲಣ ೩೬ನೆಯ ಪಂಕ್ತಿಯಲ್ಲಿ ಒಂದು ಅಕ್ಷರವೂ ಸ್ವಲ್ಪಮಟ್ಟಿಗೆ ಒಡೆದು ಹೋಗಿದೆ. ಅವುಗಳನ್ನು ತಕ್ಕಮಟ್ಟಿಗೆ ಸುಲಭವಾಗಿ ಮರುಸಲಿಸಬಹುದು. ಅಂದರೆ ಗುರ್ತಿಸಬಹುದು. ೩೫ನೆಯ ಪಂಕ್ತಿಯಲ್ಲಿ ಒಡೆದುಹೋದ ಇಕಾರದ ಗುಡಿಸೂ ಆಮೇಲಣ ೦ಂಗೈಕಂ ಎಂಬ ಅಕ್ಷರಗಳೂ ಸ್ಪಷ್ಟವಾಗಿ ಕಾಣಬರುವುದರಿಂದ ಆ ಇಕಾರದ ಗುಡಿಸುವುಳ್ಳ ಅಕ್ಷರವನ್ನು ಧೈರ್ಯವಾಗಿ 'ಲಿ' ಎಂದು ಓದಬಹುದೆಂದೂ ಅದೇ ೩೫ನೆಯ ಪಂಕ್ತಿಯಲ್ಲಿ ಅಗ್ರ ಎಂಬುದರ ಬಳಿಕವೇ ನಷ್ಟವಾದ ಹಾಗೂ ಕಂದಪದ್ಯದ ಪ್ರಸ್ತಾರಕ್ಕೆ ಸರಿಯಾಗಿ ಒಂದೇ ಲಘು ಆಗಿರಬೇಕಾದ ಅಕ್ಷರ 'ಜ' ಎಂದೇ ಇರಬೇಕು. ಆದ್ದರಿಂದ ಆ ಶಬ್ದ ಅಗ್ರಜ ಎಂದು ಇರಬೇಕು ಎಂದೂ, ೩೬ನೆಯ ಪಂಕ್ತಿಯಲ್ಲಿ ಒಡೆದು ಹೋದ ಅಕ್ಷರದ ಕೆಳಭಾಗವನ್ನೂ, ಅದರ ಆಕಾರದ ಇಳಿಯನ್ನೂ ಲಕ್ಷಿಸಿದ್ದೇ ಆದರೆ ಅದು ಪ್ರಾಯಶಃ 'ಕಾ' ಆಗಿರಬೇಕೆಂದೂ ಆ ಬಳಿಕಣ 'ವಾ' ಹೀಗೆ ಸಕಾರಣವಾಗಿ ತೋರ್ಪಡಿಸಿ ಆ ನಿಮಿತ್ತ ಆ ಕಂದಪದ್ಯದ ಪಾಠ ಹೀಗಿರಬೇಕೆಂದು ಹೇಳಿರುತ್ತಾರೆ.

> ಸಂಗನ ಬಸವನ ಅಗ್ರಜ
> ಲಿಂಗೈಕಂ ದೇವರಾಜ ಮುನಿಪನ ತನಯಂ ।
> ಜಂಗಮ ಪರುಸಂ ಕಾವರ
> ಸಂಗಂ ಪ್ರಿಯಸುತನೆನಿಪ್ಪ ಕಲಿದೇವರಸಂ ॥

ಅಂದರೆ ಲಿಂಗದಲ್ಲಿ ಐಕ್ಯನಾದ ದೇವರಾಜ ಮುನಿಪನು ಸಂಗನ ಬಸವನ (ಅಂದರೆ ಬಸವೇಶ್ವರನ) ಹಿರಿಯಣ್ಣ ಜಂಗಮರಿಗೆ ಸ್ಪರ್ಶ ಮಣಿಯಂತಿದ್ದ ಕಾವರಸನು ದೇವರಾಜ ಮುನಿಪನ ಮಗ, ಕಲಿದೇವರಸನು ಕಾವರಸನ ಮುದ್ದು ಮಗ ಎಂದು ಅದಕ್ಕೆ ಆಂಗ್ಲ ಗದ್ಯಾನುವಾದವನ್ನು ಕೊಟ್ಟಿರುತ್ತಾರೆ.

ಇದು ಸಾಕಷ್ಟು ಪ್ರಮಾಣಯುಕ್ತವೆಂದು ಕಾಣುತ್ತದೆ. ಆದ್ದರಿಂದ ಈ ಪಾಠ ಸೂಕ್ತವೆಂದು ತೋರುವುದರಿಂದ ಇದನ್ನು ಒಪ್ಪಿಕೊಂಡದ್ದೇ ಆದರೆ ಆ ಶಾಸನದಲ್ಲಿ ವಿಸ್ತರಿಸುವ ವಂಶಾವಳಿ ಕೆಳಗೆ ಬರೆದಂತೆ ಇರುತ್ತದೆ.

ಮಾದಿರಾಜ ಪಂ. ೭

| | |
|---|---|
| ದೇವರಾಜ ಮುನಿಪ ಪಂ. ೩೬ | ಸಂಗನ ಬಸವ ಪಂ. ೧೦ ; ೩೫ |
| ಕಾವರಸ ಪಂ. ೩೬–೩೭ | ಬಸವರಾಜ ಪಂ. ೯, ೪೩ |
| | ಅಂದರೆ ಬಸವೇಶ್ವರ |
| ಕಲಿದೇವರಸ ಪಂ. ೩೭ | |
| ಹಾಲಬಸವಿದೇವ, ಮುನೀಶ ಪಂ. ೩೯ | |

[11] *Epigraphia India*, XXI, ಪುಟ ೧೫.

[12] ಅದೇ ಪುಟ ೧೬.

ಈ ಶಾಸನದಲ್ಲಿ ಮೇಲೆ ಕಂಡಿರುವಂತೆ ಹರಿಹರನ ಬಸವರಾಜದೇವರ ರಗಳೆಯಿಂದ ಬಸವರಾಜನೆಂದೂ, ಸಂಗನ ಬಸವನೆಂದೂ, ತಿಳಿವ ಬಸವೇಶ್ವರನ ತಂದೆಯಾದ ಮಾದಿರಾಜನನ್ನು ಆ ರಗಳೆಯಲ್ಲಿ (I, ಪಂ. ೯೭–೯೯) ಅಗ್ರಹಾರಂ ಬಾಗೆವಾಡಿಯೊಳಗೆಸೆದಿರ್ಪ ಅಗ್ರೇಶ್ವರಂ····ಮಾದಿರಾಜ ಎಂದಿರುವುದಕ್ಕೂ ಬಸವ ಪುರಾಣದಲ್ಲಿ (II, ೪೫–೪೬) ಇಂಗಳೇಶ್ವರ ಬಾಗೆವಾಡಿಯಲಿ ಆ ಮಹಾ ಬಹುಳಾಗ್ರಹಾರ ಗ್ರಾಮಣೀಮಣಿ····ಮಾದಿರಾಜ ಎಂದಿರುವುದಕ್ಕೂ ಸರಿಯಾಗಿ "ತರ್ದವಾಡಿ ಮಧ್ಯಗ್ರಾಮ ಬಾಗವಾಡಿ ಪುರವರಾಧೀಶ್ವರ ಮಾದಿರಾಜ (ಪಂ. ೮) ಅಂದರೆ ಬಾಗೆವಾಡಿಯ ಊರೊಡೆಯನೆಂದೂ ಅವನ ತನೂಜಂ ಬಸವರಾಜನನ್ನು (ಪಂ. ೮–೯)

ಮಂಗಳಕೀರ್ತಿ ಪುರಾತನ
ಜಂಗಮಲಿಂಗೈಕ ಭಕ್ತಿನಿರ್ಭರಲೀಲಾ ।
ಸಂಗಂ ಸಂಗನ ಬಸವಂ ॥ ೩ ॥

ಎಂದೂ ಆ ಸಂಗನ ಬಸವನ ಅಗ್ರಜನಾದ ದೇವರಾಜ ಮುನಿಪನ (ಪಂ. ೩೬) ಮರಿಮಗನಾದ ಹಾಲಬಸವಿದೇವ (ಪಂ. ೪೪–೬೫) ಮುನೀಶನನ್ನು (ಪಂ. ೩೯) "ತೇಷಷ್ಟಿ ಪುರಾತನ ಪಾದಾರ್ಚಕರುಂ, ಮಹಾಲಿಂಗ ಪ್ರಸಾದ ನಿಯತರುಂ ಸಮಯಭಕ್ತಿ ಸಂಪನ್ನ ಶ್ರೀ ಬಸವರಾಜಾನ್ವಯರುಂ (ಪಂ. ೪೧–೪೩)" ಎಂದು ಇಷ್ಟು ಸ್ಪಷ್ಟವಾಗಿ ಹೇಳಿರುವುದರಿಂದ ಈ ಬಸವರಾಜನೂ, ಸಂಗನ ಬಸವನೂ, ಎಂಬಾತನು ನಿಸ್ಸಂಶಯವಾಗಿ ಬಸವೇಶ್ವರನೇ ಆಗಿರುತ್ತಾನೆ. ಆದ್ದರಿಂದ ಈ ಶಾಸನದಲ್ಲಿ ವಿಸ್ತರಿಸಿರುವ ಪೀಳಿಗೆಯೂ ಆತನದೇ ಎಂದು ಬೇರೆ ಹೇಳಬೇಕಾಗಿಲ್ಲ.

ಈ ಶಾಸನವು ಬಸವೇಶ್ವರನ ಬಗ್ಗೆ ಇಷ್ಟು ಸ್ಪಷ್ಟವಾಗಿ ಹೇಳುವುದರಿಂದ ಇದು ಅಮೂಲ್ಯವೆನಿಸುವುದು. ಆದ್ದರಿಂದ ಮುಂದೆ ಸಂಪೂರ್ಣ ಶಾಸನ ಕೊಟ್ಟಿರುತ್ತೇವೆ.

ಮೇಲಿನ ಶಾಸನದಲ್ಲಿ ಬಸವರಾಜ, ಸಂಗನ ಬಸವ ಈ ಎರಡು ಹೆಸರುಗಳು ಶ್ರೀ ಬಸವೇಶ್ವರರಿಗೆ ಪರ್ಯಾಯನಾಮಗಳಾಗಿರುತ್ತವೆ. ಅಗದೀ ಸ್ಪಷ್ಟವಿರುವುದರಿಂದ ಹೆಚ್ಚಿನ ವಿವರಣೆ ಅನವಶ್ಯಕವಾದುದು. ಶ್ರೀ ಪ್ರಭುದೇವರು ಶೂನ್ಯಸಂಪಾದನೆಯಲ್ಲಿ ಶ್ರೀ ಬಸವಣ್ಣನವರಿಗೆ ಹಲವಾರು ಸಾರೆ—ನೋಡಾ ಸಂಗನಬಸವಣ್ಣನೆಂತಲೂ, ಬಸವರಾಜನೆಂತಲೂ ಬೇಕಾದಷ್ಟು ಸಾರೆ ಕೊಂಡಾಡಿರುತ್ತಾರೆ.

## ೮. ಎಂಟನೆಯ ಶಾಸನ
## ಅನುಬಂಧ
### ಅರ್ಜುನವಾಡ ಶಿಲಾಶಾಸನ

೧. ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರ
೨. ವೇ । ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂ
೩. ಭವೇ ॥ ೧ ॥ ಶ್ರಿಯಂ ಶ್ರೀ ಕಲ್ಲಿನಾಥಂ ಕುಡು
೪. ಗೆ ಭವಹರಂ ಭಕ್ತವೃಂದಕ್ಕೆ ಗೌರೀಜಾಯಾ ಕಾಯಾ
೫. ನು ಷಂಗಾಕಳಿತ ಲಳಿತತಾ ಪ್ರೋಲ್ಲಸದ್ವಾಮಭಾಗಂ (1) ಸ್ವೀಯಸ್ವಾ
೬. ಯತ್ತ ಶಕ್ತಿ ತ್ರಯಮಯ ಮಹಿಮಂ ದೇವದಾಯಾದ ಮಾ
೭. ಯಾಪಾಯಾಭಿಪ್ರಾಯಲೀಲಂ ಪ್ರಣತಜನ ದುರಂತೌಘ ಸಂಘಟ್ಟಶೀಲಂ ॥ ೨ ॥

೮. ಮತ್ತಂ ತರ್ದವಾಡಿ ಮಧ್ಯಗ್ರಾಮ * **ಬಾಗವಾಡಿ ಪುರವರಾಧೀಶ್ವರ** **ಮಾದಿರಾಜತನೂ**
೯. * **ಜಂ ಬಸವರಾಜನ** ಮಹಿಮೆಯೆಂತೆಂದಡೆ ॥ ಮಂಗಳಕೀರ್ತಿ ಪುರಾತನ ಜಂಗಮ ಲಿಂ
೧೦. ಗೈಕ ಭಕ್ತಿ ನಿರ್ಭರಲೀಲಾ ॥ ಸಂಗಂ * **ಸಂಗನ ಬಸವಂ** ಸಂಗತಿಯಂ ಮಾಳ್ಕೆ ಭಕ್ತಿಯೊಳ
೧೧. ಗನವರತಂ ॥ ೩ ॥ ಯಾದವ ಭೂಮಿಪಾಲರಿಳೆಯಂ ಚತುರಬ್ಧಿ ಪರೀ
೧೨. ತೆಯಂ ನಿಸರ್ಗೋದಯರಾಳ ವಿವರಂ ತವರೊಳಶ್ವಚಮೂಚಯ ಪಾರ್ಥಿ ಸಿಂಹಣ (೧)
೧೩. ಕ್ಷ್ಮಾದಯಿತಂ ತದಗ್ರತನಯ ಪ್ರಭವಂ ನೃಪಕನ್ನರಂ ಸಮುಸ್ತೋದಧಿ
೧೪. ವೇಳೆಯಿಂ ಪೊಱಗೆ ಬೆಳ್ಗೊಡೆಯೋಳ್ನೆಳಲಂ ನಿಮಿರ್ಚಿದಂ ॥ ೪ ॥ ಸಲೆಭೂದೇವ
೧೫. ರ್ಕ್ಕಳಿತ್ತಲಸದೆ ಗೋಭೂಮಿ ಹೇಮವಸ್ತ್ರಾದಿಗಳಂ । ಮಲೆವರಸುಗಳೊ
೧೬. ಳ್ಕೊಂಬಂ ಬಲವಂತಂ ಕನ್ನರಂ ಪ್ರತಾಪ ಸಹಾಯಂ ॥ ೫ ॥ ಸ್ವಸ್ತಿ ಸಮಸ್ತ
೧೭. ಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇ
೧೮. ಶ್ವರ ಪರಮಭಟ್ಟಾಕರ ದ್ವಾರಾವತೀ ಪುರವರಾಧೀಶ್ವರ ಯಾ
೧೯. ದವಕುಳ ಕಮಳ ಕಳಿಕಾ ವಿಕಾಸ ಭಾಸ್ಕರ ಅರಿರಾಯ
೨೦. ಜಗಜ್ಝಂಪ ಮಾಳವರಾಯ ಮದನ ತ್ರಿಣೇತ್ರಗೂರ್ಜ್ಜರ ರಾಯಭಯಂಕರ
೨೧. ತೆಲುಂಗರಾಯ ಸ್ಥಾಪನಾಚಾರ್ಯ ಇತ್ಯಾದಿ ನಾಮಾವಳೀ ಸಮಾಲಂಕೃತ
೨೨. ಶ್ರೀಮತ್ಪ್ರೌಢ ಪ್ರತಾಪ ಚಕ್ರವರ್ತಿ ಶ್ರೀಕನ್ನರದೇವಂ ದೇವಗಿ
೨೩. ರಿಯ ನೆಲೆವೀಡಿನೊಳು ಸುಖಸಂಕಥಾ ವಿನೋದದಿ ನನವರತಂ ರಾ
೨೪. ಜ್ಯಂ ಗೆಯುತ್ತುಮಿರೆ ತತ್ಪಾದಪದ್ಮೋಪಜೀವಿ ॥ ಚಿಕ್ಕನ ಚಿಕ್ಕಮಾಗಂ ವಿಭವಕ್ಕೆ
೨೫. ಕುಬೇರಂಗೆ ಸೆಣಸುವಂ ರಾಯರುಮಂ (೧) ಮಿಕ್ಕಂಬೀಚುಗಿಯೌ
೨೬. ದಾರ್ಯಕ್ಕಾರಿಂ ಪಿರಿಯನಾತನಣ್ಣಂ ಮಲ್ಲಂ ॥ ೬ ॥ ಆತನತನೂಭವಂ
೨೭. ಚಾವುಂಡಂ ಪಾರ್ವತೀವಲ್ಲಭ ಚರಣ ಸರೋಜದ್ವಯಾಮೋದಭೃಂಗಂ ಚಾವುಂ
೨೮. ಡಂ ತ್ಯಾಗಭೋಗಾನುಭವ ಭವಸುಖ ಶ್ರೀವಧೂ ನೃತ್ಯರಂಗಂ । ಚಾವುಂಡಂ ಸಾಮ
೨೯. ಭೇದ ಪ್ರಭೃತಿ ಸರಳ ಮಂತ್ರಾಂಗ ವಿದ್ಯಾಸಮುದ್ರಂ ಚಾವುಂಡಂ ವೀರವೈರಿ ಪ್ರ
೩೦. ಕರ ಸಮರ ಸಂಘಟ್ಟ ಕಾಳಾಗ್ನಿ ರುದ್ರಂ ॥ ೭ ॥ ಎನೆ ನೆಗಱ್ದಾ ಚಾವುಂಡ ನ ಮನದನ್ನಂ
೩೧. ನಾಗರಾಜನಖಿಳ ನಿಯೋಗ । ಜ್ಞನೆನಿಪ್ಪ ದಿವಾಕಸ ದೇವನ ಪುತ್ರಂ ವಾಣಸಾನ್ವ
೩೨. ಯಾಂಬರ ಮಿತ್ರಂ ॥ ೮ ॥ ತ್ಯಾಗಗುಣಕ್ಕೆ ತಾಯ್ವನೆ ಸಮಸ್ತ ನೃಪಾಳ ನಿಯೋಗವ
೩೩. ರ್ತನಾಶ್ರೀಗೆ ನಿವಾಸಮಿಪ್ಪರ ವಿಶಿಷ್ಟರ ತೋಷನೂ ಪೋಷಣಂಗಳೊಳ್ಪಾಗ
೩೪. ರಮೆಂದು ಬಣ್ಣಿಸುವುದೀ ಧರೆ ಪಂಡಿತಪಾರಿಜಾತನಂ ನಾಗನನಾ ಜನಾರ್ದನನ ಭ
೩೫. ಕ್ತಿ ಭರ ಪ್ರಭವಾನುರಾಗನಂ ॥ ೯ ॥ ಸಂಗನ ಬಸವನ ಅಗ್ರ . . . . ಕಂ

---

* *Epigraphia India*, XXI, ಪುಟ ೧೨–೧೪.

೩೬. ದೇವರಾಜ ಮುನಿಪನ ತನಯಂ । ಜಂಗಮ ಪರುಸಂ....ರ
೩೭. ಸಂಗಂ ಪ್ರಿಯಸುತನೆನಿಪ್ಪ ಕಲಿದೇವರಸಂ ॥ ೧೦ ॥ ಕಲಿದೇವ ಮುನಿ
೩೮. ಪನಾತ್ಮಜ ಸಲೆ ಮೂಜಗದೊಳಗೆ ಮೆರೆವ ಮಾನವ ದೇವಂ ।
೩೯. ಬೆಸನವಂ ಛಲರಧಿಕಂ ಹಾಲಬಸವಿದೇವ ಮುನೀಶಂ ॥ ೧೧ ॥ ಸ್ವಸ್ತಿ ಸಮಸ್ತ
೪೦. ಭುವನಾಶ್ರಯಂ ಮಹಾಮಹೇಶ್ವರಂ ಕವಿಳಾಸಪುರವ
೪೧. ರಾಧೀಶ್ವರರುಂ ಸುವರ್ಣ ವೃಷಭಧ್ವಜಂ ತೇಸಷ್ಠಿ ಪುರಾತಪಾದಾರ್ಚಕ
೪೨. ರುಂ ಮಹಾಲಿಂಗ ಜಂಗಮ ಪ್ರಸಾದನಿಯತರುಂ ಸಮ
೪೩. ಯ ಭಕ್ತಿ ಸಂಪನ್ನ ಶ್ರೀ ಬಸವರಾಜನಾನ್ವಯರುಮಪ್ಪ ತಪಶ್ಚಕ್ರ
೪೪. ವರ್ತಿ ವೀರಬ್ರತಿ ಹಾಲಬಸವಿ ದೇವಂಗೆ ಆ ಮಹಾಪ್ರಧಾನಂಱ
೪೫. ಟ್ಟರಾಜ್ಯ ಪ್ರತಿಷ್ಠಾಚಾರ್ಯನುಮಪ್ಪ ನಾಗರಸರು ಶಕವರುಷಂ ಸಾಸಿರ
೪೬. ದ ನೂಱ ಯೆಂಭತ್ತ ಯೆರಡನೆಯ ಸಿದ್ಧಾರ್ಥಿ ಸಂವತ್ಸರದ ಚೈ
೪೭. ತ್ರ ಬಹುಳ ಅಮಾಸೆ ಸೋಮವಾರ ಸೂರ್ಯಗ್ರಹಣದಲ್ಲಿ ಹುಲಿಗೆ
೪೮. ಱಿಯ ಸೋಮನಾಥದೇವರ ಸನ್ನಿಧಿಯಲ್ಲಿ ಆ ಚೌಡಿಸೆಟ್ಟಿಯರಾ
೪೯. ತೀರ್ಥ ವಿಶೇಷಮಂ ಬೆಸಗೊಳಲು ನೂಲೆನಾಡೊಳಗಿನ (ಮನಿತನದಿ?)

ಕವಿಳಾಸ ತೀರ್ಥಂ

೫೦. ನಾಲ್ಕುಯುಗದ ಪುರಾಣೋಕ್ತದಿಂ ಬಂದ ಕ್ಷೇತ್ರವದೆಂತೆಂದಡೆ ಕೃತಯು
೫೧. ಗದಲ್ಲಿ ಕವಿಳಾಸಮುನಿ ಕವಿಳಾಸನಾಥ ತ್ರೈತೇಯಲಿ ಅಂಕರಾಜಮುನಿ ಅಂಕ
೫೨. ನಾಥ ದ್ವಾಪರದಲ್ಲಿ ಮಹಾರಾಜಮುನಿ ಮಹಾಲಿಂಗದೇವ ಕಲಿಯುಗದಲ್ಲಿ
೫೩. ಕಲಿರಾಜಮುನಿ ಕಲಿದೇವನಾಮ ॥ ಈ ಮುನಿಗಳು ಮುಖ್ಯ ಸಮಸ್ತ ಗಣೇಶ್ವ
೫೪. ರರು ಆರಾಧಿಸಿ ಸಾಲೋಕ್ಯ ಸಾರೂಪ್ಯ ಸಾಮಿಪ್ಯ ಸಾಯುಜ್ಯವಂ ಪಡೆ
೫೫. ದ ಮಹಾದೇವರಿಗೆ ಅಂಕನಾಥ ಪೆಸರಿಂ ಅಂಕವಲ ತಳವೃತ್ತಿಕೊ
೫೬. ತ್ತಸಿ ಕುಱುವನಿಗೆ ಈ ಹಳ್ಳಿ ಮಾಂಧಾತ ಚಕ್ರವರ್ತಿ ಬಿಟ್ಟ ಧರ್ಮ ಆ
೫೭. ತೀರ್ಥಕ್ಕದು ಶಾಸನಸ್ಥವೆಂಬುದಂ ಚವುಡಿ ಸೆಟ್ಟಿಯರು ಕೇಳ್ದು ನಾಗ
೫೮. ರಸರು ತಾವು ಏಕಸ್ಥರಾಗಿ ಕವಿಳಾಸಪುರದೊಳಗೆ ಸ್ವಯಂಭು ಮ
೫೯. ಲ್ಲಿಕಾರ್ಜುನ ಸಂಗಮೇಶ್ವರ ನಾಗೇಶ್ವರ ಯಿಾ ಮೂಱುಲಿಂಗಕಂ ಅಂಗ
೬೦. ಭೋಗ ರಂಗಭೋಗ ಜೀರ್ಣೋದ್ಧಾರಕ್ಕಂ ಪಾರಣೆಯ ಜಂಗಮಾ
೬೧. ರಾಧನೆಗಂ ಕೊತ್ತಸಿ ಕುಱುದವನಿಗೆ ತಳವೃತ್ತಿ ಅಂಕವಲಕುಂಡಿ
೬೨. ನಾಡೊಳು ಸಲುವಂತೆ ಹೆಜ್ಜುಗ್ಗಿಯ ಹಬ್ಬವೊಂಭತ್ತು ದಿನಸುಂಕ
೬೩. ನೂರೆತ್ತಿನ ಪರಿಹಾರ ಯಿಂತಿನಿತುಮಂ ಸರ್ವಾಬಾಧ
೬೪. ಸರ್ವನಮಸ್ಯವಂಮಾಡಿ ಚವುಡಿ ಸೆಟ್ಟಿಯರು ನಾಗರಸರು
೬೫. ಯತಿರಾಯ ಹಾಲಬಸವಿದೇವಂಗೆ ಪೂರ್ವದತ್ತವೆಂದು
೬೬. ಧಾರಾಪೂರ್ವಕಂ ಮಾಡಿಕೊಟ್ಟರು (೧೧) ಆ ಚವುಡಿ ಸೆಟ್ಟಿಯರ ನಿ
೬೭. ಯಾಮದಿಂ ನಾಗರಸರು ಪುರದಿಂ ಪಡುವಲು ತೊಱಿಯ ಕೂ
೬೮. ಡಿದ ಹಳ್ಳ ನೀರುವರಿಯೆ ಮೇರೆಯಾಗಿ ಮೇಗೆ ಕಲುಕಟಿಗಗೆರೆ
೬೯. ಬಸವಗೋಡಿ ಬಡಗಲು ಮೊಸರುಗುತ್ತಿಯೆ ರಾರವಿಡಿದು ಮೂಡಲು

೨೦. ಜಂಚಿಗಲ್ಲ ಕಣೆಕುಚ್ಚಗೋಡಿಯಿಂ ಬಂದ ಹಳ್ಳ ಸೀರುವರಿಯೆ ತೆಂಕ
೨೧. ಲು ತೊಱೆಯ ಕೂಡಲು ಯಿಾ ಚತುಸ್ಸೀಮಾಭ್ಯಂತರ ಕವಿಳಾಸ
೨೨. ಪುರದಲ್ಲಿ ಸುಂಕ ಸಾದ ತಳಸಾರಿಗೆ ಬಟ್ಟಿ? ಯಬಾಧೆ ಗ್ರಾಮಬ್ರಯ ನಿ
೨೩. ಧಿ ನಿಕ್ಷೇಪ ಅಂಕೆಟಂಕ ಆಣೆಗೋಸನೆ ಮುದ್ರೆ ನಾಗೇಶ್ವರಕೆ ಮಲ್ಲೇಶ್ವರ
೨೪. ಕೆ ಕುಱುವನಿಗೆ ಸಂಗಮೇಶ್ವರಕೆ ಪಾರಣೆಯ ಜಂಗಮಾರಾಧ
೨೫. ನೆಗೆ ಕೊತ್ತಸಿಗೆ ಈ ಧರ್ಮಕ್ಕೆ ಇದು ವಿವರವೆಂದು ನಾಗರಸರು ಕೊಟ್ಟ
೨೬. ಶಾಸನ (೧೧) ನಾಲ್ಕು ಪಟ್ಟಣಂಗಳು ನೂಲೆನಾಡೊಳಗೆ ಸಂತೆಗಳ
೨೭. ಆಯದಾಯ ಇಪಂತು ಕೋಣನ ಮೆಯಿದೆಱೆ ಸುಂಕ ಹದಿನೆಂ
೨೮. ಟು ಸಮಯವು ಅಱುವತ್ತು ಮೂವರು ಬಣಜುಭಕುತಿ ಭೇದವಿ
೨೯. ಲ್ಲ ಕವಿಳಾಸ ಪುರದೆ ಶಾಸನದ ವ(ಮ)ನೆ ಬಸವರಾಜನೆ ಶಾಸಸಿಗನೆ
೩೦. ನ್ದು ವುಭಯ ನಾನಾದೇಶಿ ಮುಂದುಮುರಿ ದಂಡಂಗಳು ಕೊಟ್ಟ ಶಾಸನ

ನಾವು ಮೇಲೆ ಬರೆದಂತೆ ಶ್ರೀ ಬಸವಣ್ಣನವರ ಬಗ್ಗೆ ಈ ಶಾಸನವು ಬಹಳ ಚೆನ್ನಾಗಿಯೂ, ಸ್ಪಷ್ಟವಾಗಿಯೂ ಉಲ್ಲೇಖಿಸುತ್ತಿರುವುದರಿಂದ ಯಾವ ತರಹದ ಸಂಶಯಕ್ಕೆ ಆಸ್ಪದವಿರುವುದಿಲ್ಲ. ಇದೊಂದೇ ಶಾಸನವು ಶ್ರೀ ಬಸವೇಶ್ವರರ ಐತಿಹಾಸಿಕತೆಯ ಸತ್ಯತೆಯನ್ನು ಬೋಧಿಸುತ್ತದೆ.

ಇದರಲ್ಲಿ ಯಾದವ ವಂಶದ ದೇವಗಿರಿಯ ಕನ್ನರನೆಂಬುವ ರಾಜನ ಕಾಲದಲ್ಲಿ ಕೊಟ್ಟಿರುವುದೂ ಶಾಸನದಿಂದ ಸ್ಪಷ್ಟ ತಿಳಿಯುತ್ತದೆ. ಶ್ರೀ ಬಸವೇಶ್ವರರ ಅಣ್ಣನ ಮರಿಮಕ್ಕಳಾದ ಶ್ರೀ ಹಾಲಬಸವಿ ದೇವರಿಗೆ ಈ ದತ್ತಿಯು ಸಿಕ್ಕಿದ್ದು ಶಾಸನದಲ್ಲಿ ಅವರ ಬಗ್ಗೆ ಬಹಳ ಗೌರವದಾಯಕ ಶಬ್ದಗಳನ್ನು ಉಲ್ಲೇಖಮಾಡಿ "ಮುನೀಶ್ವರ"ನೆಂಬುವುದನ್ನು ಎರಡು ಸಾರೆ ಉಚ್ಚರಿಸಿದ್ದಾರೆ. ಶ್ರೀ ಬಸವಣ್ಣನವರ ಮರಿಯಮಗನಿಗೆ ಈ ಶಾಸನವು ದೊರೆತಿದ್ದರೂ ಆರಂಭದಲ್ಲಿಯೂ ಅಂತ್ಯದಲ್ಲಿಯೂ ಬಸವಣ್ಣನವರ ಬಗ್ಗೆ ಬಹಳ ಗೌರವಯುತಗಳಾದಶಬ್ದಗಳನ್ನು ಉಪಯೋಗಿಸಿದ್ದಾರೆ.

ಮಂಗಳವಾದ ಕೀರ್ತಿಯುಳ್ಳವನೂ, ಜಂಗಮ ಲಿಂಗೈಕ ಭಕ್ತಿ ನಿರ್ಭರನೂ ಆದ ಬಸವೇಶ್ವರನು ನಾವು ಯಾವಾಗಲೂ ಭಕ್ತಿಯಲ್ಲಿರುವಂತೆ ಮಾಡಲೆಂದು ಶಾಸನದಲ್ಲಿ ಬರೆದಿರುವ ಶಬ್ದಗಳು ಉಲ್ಲೇಖನೀಯವಾಗಿರುತ್ತವೆ. ೪ ಗ್ರಾಮಗಳನ್ನು ದಾನಕೊಟ್ಟು ಮಲ್ಲಿಕಾರ್ಜುನ, ಸಂಗಮೇಶ್ವರ, ನಾಗೇಶ್ವರ ಈ ಮೂರು ಲಿಂಗಗಳ ರಂಗಭೋಗ, ಅಂಗಭೋಗ, ಜೀರ್ಣೋದ್ಧಾರಕ್ಕೂ, ಜಂಗಮಾರಾಧನೆ ನಡೆಯುವುದಕ್ಕೆಂತಲೂ ಹೇಳಿದೆ.

ದಾನವನ್ನು ಕೊಟ್ಟಿರುವ ರಾಜನಿಗೆ— ಯಾದವಕುಲ ಕಮಲಕಳಿಕಾ ಭಾಸ್ಕರನೆಂತಲೂ, ಅರಿರಾಯ ಜಗಜ್ಝಂಪನೆಂತಲೂ, ಗೂರ್ಜರರಾಯ ಭಯಂಕರನೆಂತಲೂ ಬಿರುದುಗಳ ಉಲ್ಲೇಖವಿರುತ್ತದೆ. ಪ್ರತಾಪ ಚಕ್ರವರ್ತಿಯಾದಂಥ ರಾಜನು ವೀರವ್ರತಿಯಾದ ಹಾಲಬಸವಿ ಮುನೀಶ್ವರನಿಗೆ ದಾನಕೊಟ್ಟು ಭಕ್ತಿಭಂಡಾರಿಗಳಾದ ಬಸವಣ್ಣನವರ ಗುಣಗಾನವನ್ನು ಆದಿಯಲ್ಲಿಯೂ, ಅಂತ್ಯದಲ್ಲಿಯೂ ಮಾಡಿರುವುದು ಈ ದಾನ ಶಾಸನದ ವೈಶಿಷ್ಟ್ಯವಾಗಿರುತ್ತದೆ.

ಇಲ್ಲಿ ನಾವು ಒಟ್ಟು ೮ ಶಾಸನಗಳನ್ನು ಕೊಟ್ಟಿರುತ್ತೇವೆ. ಇನ್ನೂ ಕಣ್ಣಿಗೆ
ಬೀಳದ ಶಾಸನಗಳೆಷ್ಟು ಇರುತ್ತವೆಂಬುವುದನ್ನು ಹೇಳಲಿಕ್ಕೆ ಬರುವುದಿಲ್ಲ. ಮೇಲೆ ಬರೆದ
ಈ ಶಾಸನಗಳಿಂದಲೇ ಶ್ರೀ ಬಸವೇಶ್ವರರು ಇತಿಹಾಸ ಪುರುಷರೆಂಬುವುದು ಸಿದ್ಧವಾಗುತ್ತ
ದೆಂದು ಹೇಳಿ ಈ ಪ್ರಕರಣವನ್ನು ಇಲ್ಲಿಗೆ ಸಮಾಪ್ತಿಗೊಳಿಸುತ್ತೇನೆ. ಇತಿಹಾಸಕಾರರು
ಇಂತಹ ಇನ್ನೂ ಅನೇಕ ಶಾಸನಗಳನ್ನು ಹುಡುಕಿ ಬೆಳಕಿಗೆ ತರಬೇಕೆಂಬುವುದೇ ನಮ್ಮ
ಹೆಬ್ಬಯಕೆ. ಸಿಕ್ಕಷ್ಟು ಶಾಸನಗಳನ್ನು ಕೊಟ್ಟಿರುತ್ತೇವೆ. ಇವುಗಳಿಂದ ವಾಚಕರಿಗೆ
ತೃಪ್ತಿಯಾಗುವುದರಲ್ಲಿ ಯಾವ ಸಂಶಯವೂ ಇರುವುದಿಲ್ಲ.

ಶಿಲಾಶಾಸನದಲ್ಲಿ ಹೆಸರು ಉಲ್ಲೇಖಿಸಲ್ಪಟ್ಟಿದ್ದರೆ ಮಾತ್ರ ಇತಿಹಾಸವು ಸಿದ
ವಾಗುತ್ತದೆಂಬುವುದೂ ಅಷ್ಟೇನು ಪ್ರಮಾಣವೆನಿಸಲಾರದು. ಶ್ರೀ ಜಗದ್ಗುರು ಶಂಕರಾ
ಚಾರ್ಯರೇ ಮೊದಲಾದ ಜಗತ್ಪ್ರಸಿದ್ಧರಾದ ಅನೇಕ ಆಚಾರ್ಯರ ಹೆಸರುಗಳು ಶಾಸನಗಳಲ್ಲಿ
ಸಿಗುವುದೇ ಇಲ್ಲ. ಅಂದಮೇಲೆ ಅವರು ಐತಿಹಾಸಿಕ ಪುರುಷರಾಗುವುದಿಲ್ಲವೇ?

ಅದು ಏನೇ ಇರಲಿ ಅನೇಕ ಶಾಸನಗಳಲ್ಲಿ ಶ್ರೀ ಬಸವೇಶ್ವರರ ನಾಮೋಲ್ಲೇಖವಿರು
ವುದರಿಂದ ಇವರೊಬ್ಬ ಮಹಾ ಐತಿಹಾಸಿಕ ಪುರುಷರಾಗಿರುತ್ತಾರೆ.

# ಇಪ್ಪತ್ತಾರನೆಯ ಪ್ರಕರಣ

## ಶ್ರೀ ಬಸವಣ್ಣನವರೂ ಕವಿಗಳ ಕಾಣಿಕೆಯೂ

ಶ್ರೀ ಬಸವಣ್ಣನವರ ಸಮಕಾಲದಿಂದ ಇಲ್ಲಿಯವರೆಗೆ ಶರಣರೂ, ಕವಿಗಳೂ, ಪಂಡಿತರೂ, ಪದವೀಧರರೂ, ಅಧಿಕಾರಿಗಳೂ, ಪ್ರಾಚೀನರೂ, ನವೀನರೂ, ಸ್ವಮತದವರೂ, ಪರಮತದವರೂ, ಸ್ವದೇಶದವರೂ, ವಿದೇಶಿಗಳೂ, ಕನ್ನಡ, ಸಂಸ್ಕೃತ, ತೆಲುಗು, ಇಂಗ್ಲೀಷ್, ದ್ರಾವಿಡ, ಮಹಾರಾಷ್ಟ್ರ ಭಾಷೆಗಳಲ್ಲಿ ಬಸವಣ್ಣನವರ ಬಗೆ ಕೊಟ್ಟ ಕಾಣಿಕೆಗಳನ್ನು ಸಾಧ್ಯವಾದಮಟ್ಟಿಗೆ ಸಂಗ್ರಹಮಾಡಿ ಇಲ್ಲಿ ಕೊಟ್ಟಿರುತ್ತೇನೆ. ೮೦೦ ವರ್ಷಗಳಿಂದ ಬಸವಣ್ಣನವರ ವಿಷಯದಲ್ಲಿ ವೀರಶೈವ ಕವಿಗಳು ತಾವು ಯಾವ ಗ್ರಂಥವನ್ನು ಬರೆದರೂ ಆರಂಭದಲ್ಲಿ ಬಸವಣ್ಣನವರ ಸ್ತೋತ್ರಮಾಡದೆ ಮುಂದಕ್ಕೆ ಸಾಗಿರುವದಿಲ್ಲ. ಬಸವಣ್ಣನವರ ಪ್ರಚಾರವು ಆರಂಭದಿಂದಲೂ ಅತ್ಯದ್ಭುತವಾದುದು. ಇದಕ್ಕೊಂದು ಉದಾಹರಣೆಯನ್ನು ಸಾಮಾನ್ಯವಾಗಿ ಕೊಡಬಹುದು. ಪ್ರಾಚೀನಕಾಲದ ವೀರಶೈವ ಧರ್ಮಗ್ರಂಥಗಳೆಲ್ಲ ಪ್ರಾಯಃ ತಾಳಗರಿಯ ಪುಸ್ತಕಗಳಲ್ಲಿಯೇ ಬರೆದಿರುತ್ತವೆ. ಆ ಪುಸ್ತಕಗಳಲ್ಲಿ "ಶ್ರೀ ಗುರು ಬಸವಲಿಂಗಾಯ ನಮಃ" ಎನ್ನದೆ ಮುಂದಕ್ಕೆ ಹೋಗಿರುವದಿಲ್ಲ. ನಾನು ಹುಬ್ಬಳ್ಳಿಯ ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜಿನ ಮುಖ್ಯಾಧ್ಯಾಪಕನಾಗಿ ಏಳುವರ್ಷ ೧೯೩೧ರಿಂದ ೧೯೩೮ರ ರವರೆಗೆ ಇದ್ದಾಗ ಮಠಗಳಲ್ಲಿಯ ತಾಳಗರಿಯ ಪುಸ್ತಕಗಳ ಸಂಶೋಧನಕ್ಕಾಗಿ ೧೫ ದಿನಗಳಿಗೊಮ್ಮೆ ಬೇರೆಬೇರೆ ಕಡೆಗೆ ಹೋಗಿ ಅಲ್ಲಿಯ ಗ್ರಂಥಗಳ ಯಾದಿಯನ್ನು ಸಿದ್ಧಪಡಿಸಿ ಸ್ಥಲದವರಿಗೊಂದು ಪಟ್ಟಿಯನ್ನು ಕೊಟ್ಟು ನಾನೊಂದು ತೆಗೆದುಕೊಂಡು ಬರುತ್ತಿದ್ದೆ. ನಾನು ಹೀಗೆ ಶೋಧಿಸಿದ ಗ್ರಂಥಗಳ ಪಟ್ಟಿ ೧,೫೦೦ ಆಗಿದ್ದಿತು. ಆ ಕಾಲದಲ್ಲಿ ನನಗೆ ಇದರ ಅನುಭವವು ಚೆನ್ನಾಗಿ ಆಯಿತು. ಕವಿಚರಿತೆಯಲ್ಲಿ ಪ್ರಕಟವಾಗದೆ ಇರತಕ್ಕ ಕೆಲವು ಗ್ರಂಥಗಳ ಉದಾಹರಣೆಗಳನ್ನು ಇಲ್ಲಿ ಕೊಡಲಾಗಿದೆ. ಅಚ್ಚಾಗದೇ ಇರತಕ್ಕ ಇನ್ನೂ ಎಷ್ಟೋ ಗ್ರಂಥಗಳು ದೊರೆಯದೆ ಇರುವದರಿಂದ ಈ ಪ್ರಕರಣವು ಅಪೂರ್ತಿಯಾಗಿರುವದೆಂದೇ ನನ್ನ ಭಾವನೆಯು. ಶ್ರೀ ಬಸವಣ್ಣನವರ ವಿಷಯಕ್ಕೆ ಎಷ್ಟು ಸಂಶೋಧನೆಯನ್ನು ಮಾಡಿದರೂ ಅದು ಅತ್ಯಲ್ಪವೆಂದೇ ಹೇಳಬೇಕಾಗಿರುತ್ತದೆ. ಈ ಕವಿಗಳನ್ನು ೧೨ನೆಯ ಶತಮಾನದಿಂದ ೨೦ನೆಯ ಶತಮಾನದವರೆಗೆ ವಿಂಗಡಿಸಿ ಆಯಾಯ ಶತಮಾನಗಳ ಕವಿಗಳನ್ನು ಆಯಾಯ ಶತಮಾನದಲ್ಲಿ ಪ್ರತ್ಯೇಕವಾಗಿ ಕೊಡಲಾಗಿರುತ್ತದೆ. ಹನ್ನೆರಡನೆಯ ಶತಮಾನದ ಕವಿಗಳ ಕಾಣಿಕೆಯನ್ನು ಇಲ್ಲಿ ಪ್ರಾರಂಭಿಸುತ್ತೇನೆ. ಹನ್ನೆರಡನೆಯ ಶತಮಾನದಲ್ಲಿ ಕವಿಗಳಿಗಿಂತಲೂ ಶರಣರೇ ಹೆಚ್ಚಾಗಿದ್ದಾರೆ. ಇವರು ಬಸವಣ್ಣನವರ ಕೂಡ ಇದ್ದವರು ಮತ್ತು ಅವರ ಕಾರ್ಯದಲ್ಲಿ ಸಹಕರಿಸಿದನರು. ಸಮಕಾಲದವರ ಅಭಿಪ್ರಾಯಗಳು ಬಹಳ ಬೆಲೆಯುಳ್ಳವುಗಳಾಗಿರುತ್ತವೆ. ಹೀಗೆ ಸಮಕಾಲದವರಲ್ಲಿ ಮೊದಲನೆಯ ಹೆಸರು ಪ್ರಭುದೇವರದು ಬರುತ್ತದೆ. ಕವಿಗಳ ಅಭಿಪ್ರಾಯವನ್ನು ಹೇಳುವ ಕಾಲಕ್ಕೆ ಅವರ ಯೋಗ್ಯತೆ ಮೊದಲಾದವುಗಳನ್ನು ಸಂಕ್ಷೇಪವಾಗಿ ವಿವರಿಸುತ್ತ ಹೋಗುವೆನು.

## ಶ್ರೀ ಅಲ್ಲಮಪ್ರಭುಗಳವರು

ಶ್ರೀಮನ್ನಿರಂಜನ ಜಗದ್ಗುರುಗಳಾದ ಅಲ್ಲಮಪ್ರಭುವರೇಣ್ಯರು ಶೂನ್ಯಸಿಂಹಾಸನಾಧೀಶ್ವರರು, ಶಿವಾನುಭವ ಮಂಟಪದ ಅಧ್ಯಕ್ಷರು. ಷಟ್‌ಸ್ಥಲ ಜ್ಞಾನಚಾರಿತ್ರ, ಶೂನ್ಯಸಂಪಾದನೆ, ಮಂತ್ರಗೋಪ್ಯ, ಸೃಷ್ಟಿಯ ವಚನ, ಬೆಡಗಿನ ವಚನ, ಮಂತ್ರ ಮಹಾತ್ಮ್ಯ, ಕಾಲಜ್ಞಾನ ವಚನ ಹೀಗೆ ಏಳು ಗ್ರಂಥಗಳನ್ನು ಬರೆದಿರುತ್ತಾರೆ. ಇವರು ಹಿಂದೂಸ್ಥಾನದಲ್ಲಿ ಸುಪ್ರಸಿದ್ಧರಾದ ಕೆಲವು ಯೋಗಿಗಳ ಮಾಲಿಕೆಯಲ್ಲಿರುತ್ತಾರೆ. ಇವರ ಬಗ್ಗೆ ಹಠಯೋಗ ಪ್ರದೀಪಿಕೆಯಲ್ಲಿ ಯೋಗಿಗಳ ಮಾಲಿಕೆಯನ್ನು ಮಾಡಿದ್ದೂ, ಅದರಲ್ಲಿ ಪ್ರಭುಗಳ ಹೆಸರೂ ಇದ್ದು ಸ್ವಾತ್ಮಾರಾಮ ಯೋಗೀಂದ್ರರಿಂದ ರಚಿಸಲ್ಪಟ್ಟಿರುತ್ತದೆ. ಇದಕ್ಕೆ ಹಿಂದೀ ಟೀಕೆ ಇದ್ದು, ಮಥುರಾದಲ್ಲಿ ಅಚ್ಚಾಗಿರುತ್ತದೆ.

ವೀರಶೈವ ಕವಿಗಳೆಲ್ಲ ಇವರನ್ನು ಪರಮ ಹರ್ಷದಿಂದ ಕೊಂಡಾಡಿರುತ್ತಾರೆ. ಇವರು ಮಾಯಾ ಕೋಲಾಹಲರೂ, ವಿರಕ್ತ ಶಿಖಾಮಣಿಗಳೂ ಆಗಿರುತ್ತಾರೆ. ಇವರ ಬಗ್ಗೆ ಅನೇಕ ಗ್ರಂಥಗಳನ್ನೂ ಬರೆದಿರುತ್ತಾರೆ. ಪ್ರಭುಲಿಂಗಲೀಲಾ ಈ ಗ್ರಂಥವು ಕನ್ನಡ, ಸಂಸ್ಕೃತ, ತೆಲುಗು, ಮರಾಠಿ, ದ್ರಾವಿಡ ಹೀಗೆ ಐದು ಭಾಷೆಗಳಲ್ಲಿರುತ್ತದೆ. ಇದೂ ಅಲ್ಲದೆ ಪ್ರಭುದೇವರ ಪುರಾಣ, ಪ್ರಭುನಟನ ತಾರಾವಳಿ, ಪ್ರಭುಚರಿತ್ರೆ, ಪ್ರಭುಗೀತೆ, ಪ್ರಭುಲಿಂಗ ಕಂದ, ಅಲ್ಲಮವ್ಯೋಮ ಮೊದಲಾದವುಗಳು ಮುಖ್ಯವಾಗಿವೆ. ಇವರು ಸುಪ್ರಸಿದ್ಧ ಯೋಗಿಗಳಿದ್ದಂತೆ ಒಳ್ಳೇ ಜ್ಞಾನಿಗಳೂ ಆಗಿದ್ದರು. ಇವರು ಬರೆದ ವಚನಗಳು ಬಹಳ ಶ್ರೇಷ್ಠ ತರಗತಿಗಳಾಗಿರುತ್ತವಲ್ಲದೆ, ಉಕ್ಕಿನ ಕಡಲೆಯಂತಿರುತ್ತವೆ. ಅಂದರೆ ಅವುಗಳ ಭಾವವು ಬಹು ಕ್ಲಿಷ್ಟವಾಗಿರುತ್ತವೆ. ಇವರ ಬಗ್ಗೆ ಗುಮ್ಮಳಾಪುರದ ಸಿದ್ಧಲಿಂಗದೇವರು—ನಿತ್ಯನಿರ್ಮಲಸ್ವರೂಪ, ಶಿವಶರಣ ಹೃತ್ಕಮಲ ಕರ್ಣಿಕಾವಾಸ, ಮತ್ತಮಧುಕುಲಾಯಮಾನ, ಇಷ್ಟಲಿಂಗ, ಪ್ರಾಣಲಿಂಗ, ತೃಪ್ತಿಲಿಂಗಾಂಗಲೇಪ, ಗುರುಲಿಂಗಜಂಗಮ ಪ್ರಸಾದ ಪಾದೋದಕಾದಿ ಅಷ್ಟಾವರಣ ಪ್ರತಿಷ್ಠಾಪನಾಚಾರ್ಯ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣೈಕ್ಯಾದಿ ಷಟ್‌ಸ್ಥಲ ಚಕ್ರವರ್ತಿ, ಬಸವ ಚನ್ನಬಸವರಾಜ ಪ್ರಾಣನಾಯಕ, ಪರಮ ಶ್ರೀ ವೀರಶೈವಾಚಾರ ಶಿರೋರತ್ನ, ಶ್ರೀ ವೀರಶೈವಾಚಾರ ಪ್ರಮಥನಾಯಕ, ಶ್ರೀ ವೀರಶೈವಾಚಾರ್ಯ ದೀಕ್ಷಾಚಾರ್ಯ, ಮರ್ತ್ಯಲೋಕಾಪಾವನಕಾರಣಾವತಾರ, ಅನುಮಿಷ ಶ್ರೀ ಶರಣಾಂಭೋಜ ಕರ್ಣಿಕಾವಾಸ, ಗುಹೇಶ್ವರನಾಮಾಮೃತ ಸ್ವೀಕಾರಸಂತುಷ್ಟ ಶ್ರೀಮತ್ಸಕಲ ಜಗದಾಚಾರ್ಯರುಮಪ್ಪ ಅಲ್ಲಮಪ್ರಭುದೇವರು, ಹೀಗೆಯೇ ಇವರ ಬಗ್ಗೆ ಅನೇಕ ಜನ ಕವಿಗಳು ವಿವಿಧ ರೀತಿಯಿಂದ ಸನ್ಮಾನಿಸಿರುತ್ತಾರೆ. ಇಂತಹ ಮಹಾಯೋಗಿಗಳೂ, ಜ್ಞಾನಿಗಳೂ ಆದ ಪ್ರಭುದೇವರು ಬಸವಣ್ಣನವರ ಬಗ್ಗೆ ಏನು ಕಾಣಿಕೆ ಕೊಟ್ಟಿರುತ್ತಾರೆಂಬುವದನ್ನು ನೋಡೋಣ—

> "ಕಲ್ಯಾಣ ಎಂಬುವ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು ಆಚಾರವೆಂಬುವ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತ್ತಿರ್ದಿತಯ್ಯಾ ಶಿವನ ಪ್ರತಾಪ. ಆ ಬೆಳಗಿನೊಳು ಒಪ್ಪುತ್ತಿರ್ದರಯ್ಯಾ ಅಸಂಖ್ಯಾತ ಭಕ್ತ ಮಹಾಗಣಂಗಳು. ಶಿವಭಕ್ತರಿರ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೇ? ಶಿವಭಕ್ತರಿರ್ದ ದೇಶ

ಪಾವನ ಎಂಬುದು ಹುಸಿಯೇ? ಗುಹೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯರು ಸಂಗನ ಬಸವಣ್ಣನ ಮಹಿಮೆಯ ನೋಡಾ ಸಿದ್ಧರಾಮಯ್ಯ."

ಮತ್ತೊಂದು ಕಡೆಯಲ್ಲಿ "ನಿತ್ಯ ಬಸವಣ್ಣ, ನಿರಂಜನ ಬಸವಣ್ಣ, ಸಚ್ಚಿದಾನಂದ ನಿತ್ಯ ಪರಿಪೂರ್ಣ ಬಸವಣ್ಣ, ಅಖಂಡಪಿಂಡ ಬಸವಣ್ಣ, ಶಿವಾಚಾರ ಚಕ್ರವರ್ತಿ ಬಸವಣ್ಣ, ಸರ್ವಾಚಾರಸಂಪನ್ನ ಬಸವಣ್ಣ, ಷಟ್‌ಸ್ಥಲ ಬ್ರಹ್ಮರೂಪು ಬಸವಣ್ಣ, ಸರ್ವಾಂಗ ಲಿಂಗಮೂರ್ತಿ ಬಸವಣ್ಣ, ಸ್ವಾನುಭವಸಾರೋದ್ಧಾರ ಬಸವಣ್ಣ, ಜಂಗಮ ಪ್ರಾಣಿ ಲಿಂಗೈಕ್ಯ ಬಸವಣ್ಣ, ಆರೂಢದಾಸೋಹಿ ಬಸವಣ್ಣ, ನಿಸ್ಸಂಗ ನಿಜರೂಪು ಬಸವಣ್ಣ, ಶಿವಸಮಯ ಪ್ರತಿಷ್ಠಾಚಾರ್ಯ ಬಸವಣ್ಣನೆಂತಲೂ ಸ್ತುತಿಸಿ

"ಆಯತದಲ್ಲಿ ಪೂರ್ವಾಚಾರಿಯ ಕಂಡೆ, ಸ್ವಾಯುತದಲ್ಲಿ ಪೂರ್ವಾಚಾರಿಯ ಕಂಡೆ, ಸನ್ನಿಹಿತದಲ್ಲಿ ಪೂರ್ವಾಚಾರಿಯ ಕಂಡೆ, ಗುಹೇಶ್ವರ ಲಿಂಗದಲ್ಲಿ ಪರಮ ಪೂರ್ವಾಚಾರಿ ಸಂಗನ ಬಸವಣ್ಣನ ಶ್ರೀ ಪಾದಕ್ಕೆ ನಮೋನಮಃ ಎಂಬೆನಯ್ಯಾ."

ಮತ್ತು

"ತನುವ ಗೆಲಲರಿಯದೆ, ಮನವ ಗೆಲಲರಿಯದೆ, ಧನವ ಗೆಲಲರಿಯದೆ ಭ್ರಮೆಗೊಂಡಿತ್ತು ಲೋಕವೆಲ್ಲವು. ತನು ದಾಸೋಹಕ್ಕೆ ಸವಿಸಿ ಮನವ ಲಿಂಗಧ್ಯಾನದಲ್ಲಿ ಸವಿಸಿ, ಧನವ ಜಂಗಮದಲ್ಲಿ ಸವಿಸಿ ಗೆಲಬಲ್ಲರೆ ಸಂಗನ ಬಸವಣ್ಣನಲ್ಲದೆ ಮತ್ತಾರನು ಕಾಣೆ ಗುಹೇಶ್ವರಾ, ನಿಮ್ಮ ಶರಣ ಸಂಗನ ಬಸವಣ್ಣಂಗೆ ನಮೋನಮೋ ಎನುತಿರ್ದೆನು."

ಮತ್ತು

"ತನು ಶುದ್ಧವಾಯಿತು ಬಸವಣ್ಣ ಇಂದೆನ್ನ, ಮನ ಶುದ್ಧವಾಯಿತು ಬಸವಣ್ಣ ಇಂದೆನ್ನ, ಭಕ್ತಿ, ಯುಕ್ತಿ, ಮುಕ್ತಿ ಶುದ್ಧವಾಯಿತು ಬಸವಣ್ಣ ಇಂದೆನ್ನ, ಇವೆಲ್ಲವು ಶುದ್ಧವಾದವು ಬಸವಣ್ಣ ಇಂದೆನ್ನ ನಮ್ಮ ಗುಹೇಶ್ವರ ಲಿಂಗಕ್ಕೆ ಆದಿ ಆಧಾರವಾದೆಯಲ್ಲ ಬಸವಣ್ಣ."

ಶ್ರೀ ಬಸವಣ್ಣನವರ ಮನೆಯ ಮುಂದೆ ಸಾವಿರಾರು ಗಣಂಗಳು ಇರುವದನ್ನು ನೋಡಿ ಪ್ರಭುವರೇಣ್ಯರು—

"ಮರ್ತ್ಯಲೋಕದ ಮಹಾ ಮನೆ ಹಾಳಾಗಿ ಹೋಗಬಾರದೆಂದು ಕರ್ತನಟ್ಟಿದನಯ್ಯ ಒಬ್ಬ ಶಿವಶರಣನ. ಆ ಶರಣ ಬಂದು ಕಲ್ಯಾಣವೆಂಬ ಶಿವಪುರವ ಕೈಲಾಸವಮಾಡಿ ರುದ್ರಗಣ ಪ್ರಮಥ ಗಣಂಗಳೆಲ್ಲರ ಹಿಡಿತಂದು ಅಸಂಖ್ಯಾತರೆಂದು ಹೆಸರಿಟ್ಟು ಕರೆದು ಭಕ್ತಿಯ ಕುಳಸ್ಥಳವ ಶೃತದೃಷ್ಟ ಪವಾಡದಿಂ ಮೆರೆದು ತೋರಿ, ಜಗವರಿಯಲು ಶಿವಾಚಾರದ ಧ್ವಜವನೆತ್ತಿಸಿ ಮರ್ತ್ಯಲೋಕ ಶಿವಲೋಕವೆರಡಕ್ಕೆ ನಿಚ್ಚಣಿಕೆಯಾದನು. ಶಿವಶರಣರ ಮನೆಯೊಳಗಿಪ್ಪ ಶಿವಗಣಂಗಳ ತಿಂಥಿಣಿಯಂ ಕಂಡು ಎನ್ನ ಮನವು ಉಬ್ಬಿ ಕೊಬ್ಬಿ ಓಲಾಡುತ್ತಿರ್ದೆನಯ್ಯಾ, ನಮ್ಮ ಗುಹೇಶ್ವರನ ಶರಣ ಸಂಗನ ಬಸವಣ್ಣನ ದಾಸೋಹದ ಘನವನೇನೆಂದೆನ್ನಬಹುದು."

ಮತ್ತೊಂದು ಕಡೆಯಲ್ಲಿ—

"ಬೀದಿಯಲ್ಲಿ ಕೊಡನ ಒಡೆದು ಬಯಲ ನಡುಗಿದರೆ ಕೊಡವುಂಟೆ? ಗುಹೇಶ್ವರ ಲಿಂಗವ ತನ್ನಿಂದ ಬೇರೆ ಮಾಡಿ ಮಾತಿನಿಂದ ಅರಸಲುಂಟೆ? ಸಂಗನ ಬಸವಣ್ಣನೇ ಎನ್ನ ಪ್ರಾಣಲಿಂಗವೆಂದರಿದು ದೃಷ್ಟಿನಟ್ಟು ಸೈವೆರಗಾದುದ ಕಂಡೆ, ನೀನೆನ್ನೊಳಕೊಂಡು ಗುರುವೆಂದೆನಯ್ಯಾ ಎತ್ತತ್ತ ನೋಡಿದಡತ್ತತ್ತ ಬಸವನೆಂಬ ಬಳ್ಳಿ. ಆ ಬಳ್ಳಿಯ ಹಿಡಿದೆತ್ತಿದರೆ ಲಿಂಗವೆಂಬುವ ಗೊಂಚಲು. ಆ ಗೊಂಚಲು ಹಿಡಿದೆತ್ತಿದರೆ ಭಕ್ತಿರಸವಾಯಿತ್ತಯ್ಯಾ, ಬಸವಗುರುವು ಎನ್ನ ಕರಸ್ಥಲದ ಲಿಂಗದ ಆದಿಯನರುಹಿ ತೋರಿದ ಕಾರಣ ಗುಹೇಶ್ವರ ಲಿಂಗದ ನಿಲವ ನಿನ್ನಿಂದಲರಿದೆನು. ಬ ಎಂಬಲ್ಲಿ ಭವ ಹರಿಯಿತ್ತು, ಸ ಎಂಬಲ್ಲಿ ಸರ್ವಜ್ಞಾನಿಯಾದೆನು, ವ ಎಂದು ವಚಿಸುವ ಚೈತನ್ಯಾತ್ಮಕನಾದೆನು. ಇಂತೀ ಬಸವಾಕ್ಷರತ್ರಯವು ಎನ್ನ ಸರ್ವಾಂಗದಲ್ಲಿ ತೊಳಗಿ ಬೆಳಗುವ ಭೇದವನರಿದು ಆನು ಬಸವ ಬಸವ ಎನುತಿರ್ದೆನು. ಕೈಲಾಸಕ್ಕೆ ಹೋದವರೆಲ್ಲ ಕೈಸೆರೆಯಾದರು. ಲಿಂಗದಲ್ಲಿ ಲಯವಾದವರೆಲ್ಲ ಬಂಧನಕ್ಕೊಳಗಾದರು. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯದವರೆಲ್ಲರೂ ಎಡೆಯಾಡುತಿರ್ದರು. ಗುಹೇಶ್ವರ ನಿಮ್ಮ ಶರಣ ಸಂಗನ ಬಸವಣ್ಣನು ಜಂಗಮ ಪ್ರಸಾದಿಯಾಗಿ ಸ್ವಯಂಭು ಲಿಂಗವಾದನು."

## ಶ್ರೀ ಚನ್ನಬಸವಣ್ಣನವರು

ಶ್ರೀ ಚನ್ನಬಸವಣ್ಣನವರ ಹೆಸರು ಶರಣರಲ್ಲಿ ಮೂರನೆಯದಾಗಿರುತ್ತದೆ. ಇವರು ಶಿವಾನುಭವಮಂಟಪದ ಕಾರ್ಯದರ್ಶಿಗಳು. ಶರಣರ ಗುಂಪಿನಲ್ಲಿ ಇವರನ್ನು ಸರಿಗಟ್ಟುವ ಷಟ್‌ಸ್ಥಲಜ್ಞಾನಿಗಳಿರಲಿಲ್ಲ. ಬಸವಣ್ಣನವರಿಗಿಂತ ಚಿಕ್ಕವರಾದಾಗ್ಯೂ ಚುರುಕು ಬುದ್ಧಿಯುಳ್ಳವರು. ೧೨ನೆಯ ಶತಮಾನದ ಧಾರ್ಮಿಕ ಕ್ರಾಂತಿಯಲ್ಲಿ ಪ್ರಧಾನ ಪಾತ್ರವನ್ನು ವಹಿಸಿ ಬಸವಣ್ಣನವರ ಬಲಗೈಯಂತಿದ್ದರು. ಲಿಂಗಾಂಗ ಸಾಮರಸ್ಯಜ್ಞಾನದಲ್ಲಿ ಮಹಾ ಬಲ್ಲಿದರಾದ ಕಾರಣ ಇವರಿಗೆ ಷಟ್‌ಸ್ಥಲಸ್ಥಾಪನಾಚಾರ್ಯವರ್ಯರೆಂಬುವ ಉಕ್ತಿಗಳು ಅಲ್ಲಲ್ಲಿ ಸಿಗುತ್ತಲಿವೆ. ಇವರು ಷಟ್‌ಸ್ಥಲವಚನ, ಕರಣ ಹಸುಗೆ, ಮಿಶ್ರಾರ್ಪಣ, ಪದಗೋಪ್ಯ ಮತ್ತು ಮಂತ್ರಗೋಪ್ಯ, ಕಾಲಜ್ಞಾನ, ರುದ್ರ ಭಾರತದ ಸೃಷ್ಟಿ ಹೀಗೆ ಏಳು ಗ್ರಂಥಗಳನ್ನು ಬರೆದಿರುತ್ತಾರೆ. ಅತ್ತ ಬಸವಣ್ಣನವರು ರಾಜಕಾರಣದಲ್ಲಿ ತೊಡಗಿದಾಗ ಇತ್ತ ಚನ್ನಬಸವಣ್ಣನವರು ವೀರಶೈವ ಧಾರ್ಮಿಕ ಸೂತ್ರಗಳನ್ನೆಲ್ಲ ನಡೆಯಿಸುತ್ತಲಿದ್ದರು. ಚನ್ನಬಸವಣ್ಣನವರ ವಿಷಯಕ್ಕೆ ಚನ್ನಬಸವ ಪುರಾಣ, ಚನ್ನಬಸವ ಸ್ತೋತ್ರದ ರಗಳೆ, ಚನ್ನಬಸವ ತೈಜಸ ಮೊದಲಾದ ಗ್ರಂಥಗಳನ್ನು ವೀರಶೈವ ಪಂಡಿತರು ಬರೆದಿರುತ್ತಾರೆ. ಶ್ರೀ ಚನ್ನಬಸವಣ್ಣನವರನ್ನು ವೀರಶೈವರು ಷಣ್ಮುಖನ ಅವತಾರವೆಂದು ಭಾವಿಸುತ್ತಾರೆ. ವೀರಮಾಹೇಶ್ವರಾಚಾರ ಸಂಗ್ರಹ ಗ್ರಂಥಕಾರನು ಚನ್ನಬಸವಣ್ಣನವರ ಬಗ್ಗೆ

ಶಿವತತ್ವಾಮೃತಾಸ್ವಾದ । ಚೇತಸೇ ಯೋಗಿನೇ ನಮಃ ।
ಶ್ರೀ ಚನ್ನಬಸವೇಶಾಯ ಷಟ್ಸ್ಥಲಬ್ರಹ್ಮವಾದಿನೇ ॥

ಅಂದರೆ ಶಿವತತ್ವಾಮೃತಾಸ್ವಾದನೆಯು ಮನಸ್ಸುಳ್ಳ ಷಟ್‌ಸ್ಥಲ ಬ್ರಹ್ಮವಾದಿಯಾದ ಚನ್ನ ಬಸವೇಶ್ವರನಿಗೆ ನಮಸ್ಕಾರವೆಂದು ಹೇಳಿರುತ್ತಾನೆ. ಬಸವಣ್ಣನವರ ತರುವಾಯ ಬಿಜ್ಜಳನ ಮಗನಾದ ರಾಯಮುರಾರಿಯ ಆಳಿಕೆಯಲ್ಲಿ ಶ್ರೀ ಚನ್ನಬಸವಣ್ಣನವರೂ ಕೆಲವು ಕಾಲದವರೆಗೆ ಮಂತ್ರಿಗಳಾಗಿ ಧಾರ್ಮಿಕದಲ್ಲಿ ಬಲ್ಲಿದರಾಗಿದ್ದಂತೆ ರಾಜಕಾರಣ ದಲ್ಲಿಯೂ ದಕ್ಷತೆಯಿಂದ ಕೆಲಸಮಾಡಿದರೆಂದು ತಿಳಿದು ಬರುತ್ತಲಿದೆ. ಇಂತಹ ಪರಮ ಶಿವಯೋಗಿಗಳಾದ ಚನ್ನಬಸವಣ್ಣನವರು ಬಸವಣ್ಣನವರ ವಿಷಯದಲ್ಲಿ—

> “ಮರ್ತ್ಯಲೋಕ ಶಿವಲೋಕ ಎಂಬುವದೊಂದು ನಿಚ್ಚಣಿಕೆಯಾದವು ನೋಡಾ ದೇವ. ನೀವೀ ಕಲ್ಯಾಣಕ್ಕೆ ಬಂದವತರಿಸಿದಲ್ಲಿ ಸತ್ಯಶರಣರೆಲ್ಲರನು ಪಾವನವಮಾಡಲೆಂದು ಬಂದರೆ ಜನ್ಮದಲ್ಲಿ ಬಂದನೆಂದು ನುಡಿಯ ಬಹುದೇ? ಕರ್ತೃ ರೂಪ ಭೃತ್ಯಂಗೆ ಬಂದಲ್ಲಿ ಆ ಭೃತ್ಯ ಕರ್ತನನರಿಸಿ ಕೊಂಡು ಬಂದವನಲ್ಲ. ಸತ್ಯ ಸದಾಚಾರವ ಹರಹಿ ಮರ್ತ್ಯರ ಪಾವನವ ಮಾಡಿ ನಿಜಲಿಂಗ ಸಮಾಧಿಯೊಳು ನಿಲ್ಲುವರಿನ್ನಾರು ಹೇಳಾ ನೀನಲ್ಲದೆ? ಕೂಡಲ ಚನ್ನಸಂಗಮದೇವರು ಸಾಕ್ಷಿಯಾಗಿ ನಿಮಗೆ ಭವ ಉಂಟೆಂದು ಮನದಲ್ಲಿ ಹಿಡಿದರೆ ಸಂಗನ ಬಸವಣ್ಣ ನಿಮ್ಮ ಶ್ರೀಪಾದದಾಣೆ.”

ಚನ್ನಬಸವಣ್ಣನವರು ಕಲ್ಯಾಣಪಟ್ಟಣದ ಮಾಹಾತ್ಮ್ಯೆಯನ್ನು ಬಹಳ ವಿಸ್ತಾರವಾಗಿ ಬರೆದಿರುತ್ತಾರೆ. ಅದರ ಕೊನೆಯ ಭಾಗದಲ್ಲಿ ಈ ವಿಷಯವಿರುತ್ತದೆ—

> “ಇಂತೀ ಮಹಾಪ್ರಮಥರಿಗೆ ಪುರಾತನರಿಗೆ ಅಸಂಖ್ಯಾತ ಮಹಾ ಗಣಂಗಳಿಗೆ ಪ್ರಮಥನಾಯಕನಾಗಿ, ಭಕ್ತರಿಗೆ ಒಡನಾಡಿಯಾಗಿಪ್ಪನು ಸಂಗನ ಬಸವಣ್ಣನು, ಜಗದಾರಾಧ್ಯ ಬಸವಣ್ಣನು, ಪ್ರಮಥಗುರು ಬಸವಣ್ಣನು, ಶರಣಸನ್ನಿಹಿತ ಬಸವಣ್ಣ, ಸತ್ಯಸಾತ್ವಿಕ ಬಸವಣ್ಣ, ನಿತ್ಯ ನಿಜೈಕ್ಯ ಬಸವಣ್ಣ, ಷಡುಸ್ಥಲಸಂಪನ್ನ ಬಸವಣ್ಣ, ಸರ್ವಾಚಾರಸಂಪನ್ನ ಬಸವಣ್ಣ, ಸರ್ವಾಂಗಲಿಂಗಿ ಬಸವಣ್ಣ, ಸುಜ್ಞಾನಭರಿತ ಬಸವಣ್ಣ, ನಿತ್ಯ ಪ್ರಸಾದಿ ಬಸವಣ್ಣ, ಸಚ್ಚಿದಾನಂದ ಮೂರ್ತಿ ಬಸವಣ್ಣ, ಸದ್ಯೋನ್ಮುಕ್ತಿ ರೂಪು ಬಸವಣ್ಣ, ಅಖಂಡಪರಿಪೂರ್ಣ ಬಸವಣ್ಣ, ಅಕಾಯಚಾರಿತ್ರ ಬಸವಣ್ಣ, ಅಸಾಧ್ಯ ಸಾಧಕ ಬಸವಣ್ಣ, ಅಭೇದ್ಯ ಭೇದಕ ಬಸವಣ್ಣ, ಅನಾಮಯಮೂರ್ತಿ ಬಸವಣ, ಮಹಾಮನೆಯಮಾಡಿದಾತ ಬಸವಣ್ಣ, ರುದ್ರಲೋಕವ ಮರ್ತ್ಯಲೋಕಕ್ಕೆ ತಂದಾತ ಬಸವಣ್ಣ, ಶಿವಾಚಾರದ ಘನವ ಮೆರೆಸಿದಾತ ಬಸವಣ, ಇಂತಹ ಬಸವಣ್ಣನ ಭಕ್ತಿಯನು ಒರೆದೊರೆದು ನೋಡಿ ಪ್ರಬಲ ಮಾಡುವ ಅಶ್ವಪತಿ, ಗಜಪತಿ, ನರಪತಿ ರಾಯ, ರಾಜಾಧಿರಾಜ ಬಿಜ್ಜಳರಾಜನು ಆ ಬಸವಣ್ಣನು ಕಲ್ಯಾಣಪಟ್ಟಣ ದೊಳಗೆ ಸುಖಸಂಕಥಾ ವಿನೋದದಿಂದ ರಾಜ್ಯಂ ಗೈವುತ್ತಿರಲು ಆ ಕಲ್ಯಾಣದ ನಾಮವ ಪಿಡಿದು ವಿವಾಹಕ್ಕೆ ಕಲ್ಯಾಣ ಎಂಬುವ ನಾಮವಾಯಿತ್ತು ಲೋಕದೊಳಗೆ ಕಲ್ಯಾಣವೇ ಕೈಲಾಸವೆನಿಸಿತ್ತು. ಇಂತಪ್ಪ ಕಲ್ಯಾಣದ ದರುಶನವ ಮಾಡಿದರೆ ಭವಂ ನಾಸ್ತಿ, ಇಂತಪ್ಪ ಕಲ್ಯಾಣವ ನೆನೆದರೆ ಪಾಪ ಕ್ಷಯ, ಇಂತಪ್ಪ ಕಲ್ಯಾಣದ ಮಹತ್ವ ಕೇಳಿದರೆ ಕರ್ಮ ಕ್ಷಯ

ವಹುದು. ಮೋಕ್ಷ ಸಾಧ್ಯವಹುದು. ಇದು ಕಾರಣ ಕೂಡಲ ಚನ್ನ ಸಂಗಮದೇವ ನಿಮ್ಮ ಭಕ್ತ ಬಸವಣ್ಣನಿದ್ದ ಠಾವೆ ಮಹಾ ಕಲ್ಯಾಣವೆಂದರಿದು ದಿವ್ಯ ಶಾಸನವ ಬರೆದು ಪಠಿಸಿದ ಕಾರಣ ಎನ್ನ ಭವಂ ನಾಸ್ತಿಯಾಯಿ ತ್ತಯ್ಯ."

ಮತ್ತೊಂದು ಪ್ರಸಂಗದಲ್ಲಿ ಶ್ರೀ ಚನ್ನಬಸವಣ್ಣನವರು—

"ಹರನಟ್ಟಿದಾಗ್ರದ ಬೆಸನ ಗುರುನಿರೂಪವೆಂದು ಕೈಕೊಂಡು ಕರುಣಿ ಬಸವಣ್ಣ ಕೈಲಾಸದಿಂದ ಗುರುಲಿಂಗ ಜಂಗಮಕ್ಕೆ ಭಕ್ತಿಯ ಮಾಡಬೇಕೆಂದು ಏಳುನೂರೆಪ್ಪತ್ತು ಅಮರಗಣಂಗಳು ಸಹಿತ ಮರ್ತ್ಯಲೋಕಕ್ಕೆ ತಂದನಯ್ಯ, ಶಿವಸಮಯಕ್ಕಾಧಾರನಾದನಯ್ಯ, ಲೋಕಾದಿ ಲೋಕಂಗಳಿಗೆ ಪರಮ ಗುರುವಾದನಯ್ಯ ಬಸವಣ್ಣನು. ಜಡರುಗಳ ಮನದ ಕತ್ತಲೆಯ ಕಳೆಯ ಬೇಕೆಂದು ಕಟ್ಟಿತ್ತು ಕಲ್ಯಾಣ ಪಟ್ಟಣದಲ್ಲಿ ಮಹಾ ಮಂಟಪವು. ಪರಮ ನಟ್ಟಿದ ಓಲೆ ಬಂದಿಳಿಯಿತ್ತು. ಬಿಜ್ಜಳನ ಸಿಂಹಾಸನದಲ್ಲಿ ಅದನು ತಂದು ಓದಿಸಿದರೆ ಸೃಷ್ಟಿಯ ಸೇನ ಬೋವರಿಗೆ ತಿಳಿಯದು ಛಪ್ಪನ್ನ ದೇಶಭಾಷೆಯ ಲಿಪಿಯು ಮುನ್ನವೇ ಅಲ್ಲ ಇದನೋದಿದವರಿಗೆ ಆನೆ, ಸೇನೆ, ಕುದುರೆ ಭಾಂಡಾರ ಅರವತ್ತಾರು ಕರಣಿಕರಿಗೆ ಮುಖ್ಯನ ಮಾಡುವೆನೆಂದು ಬಿಜ್ಜಳ ಭಾಷೆಗೊಡುತ್ತಿರಲು ಹರನಿರೂಪವ ಶಿರದ ಮೇಲಿಟ್ಟು ಶಿವಶರಣೆಂದು ಬಸವಣ್ಣ ಮುಟ್ಟಿ ನೋಡಿ ತೆಗೆಸಿದನಯ್ಯಾ, ಎಂಭತ್ತೆಂಟು ಕೋಟಿ ದ್ರವ್ಯವ ಅರಮನೆಗೆ ರಾಜ್ಯಕ್ಕೆ ಒಡೆಯನಾಗಿ, ಹರಗಣಂಗಳಿಗೆ ಗತಿಮತಿ ಚೈತನ್ಯ ನಾಗಿ, ಕೂಡಲ ಚನ್ನಸಂಗಯ್ಯನಲ್ಲಿ ಅಂಡಜದೊಳಗಿರ್ದು ಶಿವನ ಭಂಡಾರಿಯಾದನಯ್ಯ ಎನ್ನ ತಂದೆ ಪೂರ್ವಾಚಾರಿ ಸಂಗನ ಬಸವಣ್ಣನು."

ಇನ್ನೊಂದು ವಚನದಲ್ಲಿ—

"ಅಪ್ಪುವನಪ್ಪಿದವಾರಿಕಲ್ಲಿನಂತೆ, ವಾಯುವನಪ್ಪಿದ ಪರಿಮಳದಂತೆ, ಲಿಂಗವನಪ್ಪಿದ ಶರಣಂಗೆ ದೇಹಿ ಎನಬಹುದೆ? ಅನಲನಪ್ಪಿದ ಕರ್ಪುರ ಗಿರಿಯಂತೆ, ಕೂಡಲ ಚನ್ನಸಂಗಯ್ಯ ನಿಮ್ಮ ಶರಣ ಬಸವಣ್ಣನ ನಿಲವು. ವೇದ ವೇದಾರ್ಥಸಾರದಿಂದ ಹದಿನಾರು ಶಾಸ್ತ್ರ ಪುರಾಣಂಗಳಾದವು. ಆ ಪುರಾಣಂಗಳ ಸಾರವನರಿಯುವುದರಿಂದ ಜ್ಯೋತಿ ಜ್ಞಾನವಾಯಿತು. ಆ ಜ್ಯೋತಿಜ್ಞಾನದಿಂದ ಮತಿಜ್ಞಾನ, ಶೃತಿಜ್ಞಾನ, ಮನಃ ಪರಿಪೂರ್ಣ ಜ್ಞಾನ, ಅವಧಿಜ್ಞಾನ, ಕೇವಲಜ್ಞಾನ ಇಂತೀ ಪಂಚಜ್ಞಾನ ಉಂಟಾ ಯಿತು. ಮತಿಜ್ಞಾನವುಳ್ಳಾತನೇ ಭಕ್ತ, ಶೃತಿಜ್ಞಾನವುಳ್ಳಾತನೇ ಮಹೇಶ್ವರ, ಪರಿಪೂರ್ಣಜ್ಞಾನವುಳ್ಳಾತನೇ ಪ್ರಸಾದಿ, ಅವಧಿಜ್ಞಾನ ವುಳ್ಳಾತನೇ ಪ್ರಾಣಲಿಂಗಿ, ಕೇವಲ ಜ್ಞಾನವುಳ್ಳಾತನೇ ಶರಣ ಶರಣ, ಸ್ಥಲಕ್ಕೆ ಭವಂ ನಾಸ್ತಿ ಈ ಪಂಚಜ್ಞಾನಕ್ಕೆ ಮೂಲವಾದ ಜ್ಯೋತಿಜ್ಞಾನವೇ ಪಂಚ ಸ್ಥಲದಲ್ಲಿ ಐಕ್ಯವಾಗಲು ಆತನೇ ಐಕ್ಯ ಇಂತೆಂಬುವದಾಗಿ ಪಂಚಸ್ಥಲದಲ್ಲಿ ನೆಲೆಯಬಲ್ಲ ಐಕ್ಯ ಬಸವಣ್ಣಂಗೆ ನಮೋ ನಮೋ ಎಂಬೆನು. ಸ್ನೇಹದ ಸುಖವ

ನೋಟ ನುಂಗಿತ್ತು. ನೋಟದ ಸುಖವ ಕೂಟ ನುಂಗಿತ್ತು. ಈ ಕೂಟದ ಸುಖವ ಆಲಿಂಗನ ನುಂಗಿತ್ತು. ಆಲಿಂಗನದ ಸುಖವ ಸಂಗ ನುಂಗಿತ್ತು. ಸಂಗಸುಖವ ಸಮರಸ ನುಂಗಿತ್ತು. ಸಮರಸ ಸುಖವ ಪರವಶ ನುಂಗಿತ್ತು. ಬಸವಣ್ಣನ ಪರವಶದ ಸುಖವ ಕೂಡಲ ಚನ್ನಸಂಗಯ್ಯ ತಾನೇ ಬಲ್ಲ. ಐಕ್ಯಂಗೆ ಆನೆಂಬುದಿಲ್ಲ, ನೀನೆಂಬುದಿಲ್ಲ, ಪರನೆಂಬುದಿಲ್ಲ, ಅರಿವೆಂಬುದಿಲ್ಲ, ಮರವೆಂಬುದಿಲ್ಲ, ಒಳಗೆಂಬುದಿಲ್ಲ, ಹೊರಗೆಂಬುದಿಲ್ಲ ಕೂಡಲ ಚನ್ನಸಂಗಯ್ಯನೆಂಬ ಶಬ್ದಮುನ್ನಿಲ್ಲ.''

## ಶ್ರೀ ಸಿದ್ಧರಾಮ ಶಿವಯೋಗಿಗಳು

ಹನ್ನೆರಡನೆಯ ಶತಮಾನದ ವೀರಶೈವ ಧರ್ಮಕ್ರಾಂತಿಯನ್ನು ಮಾಡಿದ ಶರಣರಲ್ಲಿ ಶ್ರೀ ಸಿದ್ಧರಾಮ ಶಿವಯೋಗಿಗಳು ಸುಪ್ರಸಿದ್ಧರು. ಶರಣರಲ್ಲಿ ಇವರಿಗೆ ನಾಲ್ಕನೆಯ ಸ್ಥಾನವಿದೆ. ಇವರು ಶಿವಾನುಭವ ಮಂಟಪದ ಕಾರ್ಯಕಾರಿ ಮಂಡಲ ಸದಸ್ಯರು. ಮಹಾ ಶಿವಯೋಗಿಗಳು—

೧. ಷಟ್‌ಸ್ಥಲವಚನ, ೨. ಮಿಶ್ರ ಸ್ತೋತ್ರದ ತ್ರಿವಿಧಿ, ೩. ಬಸವ ಸ್ತೋತ್ರದ ತ್ರಿವಿಧಿ, ೪. ಅಷ್ಟಾವರಣ ಸ್ತೋತ್ರದ ತ್ರಿವಿಧಿ, ೫. ಕಾಲಜ್ಞಾನ, ೬. ಮಂತ್ರಗೋಪ್ಯ ಹೀಗೆ ಆರು ಗ್ರಂಥಗಳನ್ನು ಬರೆದಿರುತ್ತಾರೆ. ವೀರಶೈವ ಕವಿಗಳೆಲ್ಲ ಇವರನ್ನು ಕೊಂಡಾಡಿರುತ್ತಾರೆ. ರಾಘವಾಂಕ ಕವಿಯು ಸಿದ್ಧರಾಮೇಶ ಪುರಾಣವನ್ನೂ, ಹರಿಹರನು ಸಿದ್ಧರಾಮ ರಗಳೆಯನ್ನೂ ಬರೆದಿರುತ್ತಾರೆ. ಇವರು ಸೊಲ್ಲಾಪುರದ ಗ್ರಾಮಾಧಿಪತಿಗಳು. ಶ್ರೀ ಚನ್ನಬಸವಣ್ಣನವರಿಂದ ಲಿಂಗದೀಕ್ಷೆಯನ್ನು ಹೊಂದಿದವರೂ, ಸುಪ್ರಸಿದ್ಧರೂ ಆಗಿರುತ್ತಾರೆ. ತಾವು ಬರೆದ ಗ್ರಂಥಗಳಲ್ಲಿ ಶ್ರೀ ಬಸವಣ್ಣನವರ ಬಗ್ಗೆ

''ಪರಮಗುರು ಬಸವಣ್ಣ ಜಗವ ಪಾಲಿಸಬರಲು ಎನ್ನ ಪರಿಭವದ ದಂದುಗ ಹರಿಯಿತಯ್ಯ. ಆ ಸುದ್ದಿಯನರಿಯದೆ ಬೇಕಾದ ಪರಿಯಲ್ಲಿ ಅನೇಕ ಜಡರೆಲ್ಲರೂ ನುಡಿಯುತಿಹರು. ಸತ್ತಪ್ರಾಣವನೆತ್ತಿ ಒಪ್ಪಿಪ್ಪ ನಿಶ್ಚಯವು ಮರ್ತ್ಯದವರಿಗುಂಟೆ ಶಿವಂಗಲ್ಲದೆ? ಶಿವಗುರು ಬಸವಣ್ಣ ಬಸವಗುರು ಶಿವವಾಗಿ ದೆಸೆಗೆಟ್ಟ ದೇವ ತಾ ಪಶುಗಳಿಗೆ ಪತಿಯಾದನು. ಬಸವಣ್ಣನ ನೆನಹು ಸುಖಸಮುದ್ರವಯ್ಯ. ಕಪಿಲಸಿದ್ಧ ಮಲ್ಲಿನಾಥ ಬಸವಣ್ಣನ ತೋರಿದರಾಗಿ ನಾನು ಬದುಕಿದೆನು.''

ಮತ್ತು ಇವರಿಂದ ರಚಿತವಾದ ಬಸವಸ್ತೋತ್ರ ತ್ರಿವಿಧಿಯಲ್ಲಿ—

ಬಸವ ಬಸವಾ ಬಸವ ಬಸವೇಶ ಬಸವರಸ ಬಸವಯ್ಯ ನಿಮ್ಮಡಿಗೆ ಶರಣು ಶರಣು ॥ ೧ ॥

ಬಸವ ಬಸವಾಲಿಂಗ ಬಸವಪ್ಪ ಬಸವೇಶ ಬಸವಯ್ಯ ಶರಣೆಂಬೆ ಯೋಗಿನಾಥ ।
ಬಸವಭಕ್ತಿಯ ಬೀಜ ಬಸವಯುಕ್ತಿಯ ಬೀಜ ಬಸವಪ್ಪ ನಿಮ್ಮಡಿಗೆ ಶರಣು ಶರಣು ॥ ೨ ॥

ಬಸವ ಗುರುಪದ ಧ್ಯಾನ ಬಸವ ಶಿವಪದ ಧ್ಯಾನ ಬಸವ ಧ್ಯಾನವೇ ಧ್ಯಾನ ಯೋಗಿನಾಥ ॥ ೩ ॥

ಆ ಬಸವನಾನಂದ ಆ ಬಸವನತ್ಯಂತ ಆ ಬಸವ ಸಕಲಕ್ಕೆ ಆದಿಸಿದ್ಧ ।
ಆ ಬಸವನಾದಿಪದವ ಮಸ್ತಕದಿ ಹೊದ್ದಿರಲು ಆನು ನೀನಾದನೈ ಯೋಗಿನಾಥ ॥ ೪ ॥

ಗುರುಲಿಂಗೆ ಗುರುಬಸವ ಚರಕೆ ಚರಬಸವನು ಪರಕೆ ಪರತತ್ವಾತ್ಮಕ ಬಸವಲಿಂಗಾ ।
ಪರಗುರು ಲಿಂಗ ಜಂಗಮಕೆಲ್ಲಕಧಿಕನು ಗುರುಬಸವ ಶರಣಯ್ಯ ಯೋಗಿನಾಥ ॥ ೫ ॥

ಗುರುವೆ ಸಂಗನಬಸವ ಚರವೆಸಂಗನ ಬಸವ ಪರಮಚಿದ್ಘನ ಲಿಂಗ ಬಸವಣ್ಣನು ।
ಪರಕೆ ಪರಾತತ್ವನು ಬಸವಣ್ಣನ ಪಾದಕ್ಕೆ ಶರಣೆಂದು ಬದುಕಿದೆನು ಯೋಗಿನಾಥ ॥ ೬ ॥

ನಿತ್ಯನಿರ್ಮಲ ಬಸವ ಸತ್ಯಸಾಧ್ಯನು ಬಸವ ನಿತ್ಯನಿಶ್ಚಿಂತನು ಬಸವಣ್ಣನು ।
ಅತ್ಯಧಿಕವೆಂದೆನಿಪ ಸಂಗನಬಸವಣ್ಣ ತತ್ವಪದದೊಳಗಿರಿಸು ಯೋಗಿನಾಥ ॥ ೭ ॥

ಮಂಗಲಮಯರೂಪು ಸಂಗನ ಬಸಣ್ಣ ಲಿಂಗ ನಿಜಭಕ್ತಿತನು ಬಸವಣ್ಣನು ।
ಜಂಗಮ ಲಿಂಗವೆ ಪ್ರಾಣ ಬಸವಣ್ಣನಾ ಸಂಗದ ನಿರಳ ಬಸವನ್ನೆ ಯೋಗಿನಾಥ ॥ ೮ ॥

ಶ್ರೀ ಬಸವಣ್ಣನವರು ಲಿಂಗೈಕ್ಯರಾದ ಸುದ್ದಿಯನ್ನು ಕೇಳಿ ಶ್ರೀ ಸಿದ್ಧರಾಮದೇವರು—

"ನಿರಾಕಾರದ ಮೂರ್ತಿಯು ಆಕಾರಕ್ಕೆ ತಂದೆಯಲ್ಲ ಬಸವ. ಆಕಾರದ ಮೂರ್ತಿಯು ಹೃದಯಕಂಜದಲ್ಲಿ ವಾಸಗೊಂಡು ತೋರಿದೆಯಲ್ಲ ಬಸವ. ಈ ಆಕಾರಕ್ಕೆ ತಂದು ಭಕ್ತಿಯನನುಗೈದು ದಿಕ್‌ದಶದಲ್ಲಿ ಬೆಳೆದೆಯಲ್ಲ. ಇನ್ನಾರವ ನಿರಾಕಾರದಲ್ಲನುಗೊಳಿಸಬೇಕೆಂದು ಕಪಿಲಸಿದ್ಧ ಮಲ್ಲಿಕಾರ್ಜುನನ ಹೃದಯದಲ್ಲಿ ಮರೆಯಾದೆಯಲ್ಲ ಬಸವ."

ಮತ್ತೊಂದು ಪ್ರಸಂಗದಲ್ಲಿ—

"ಅಣ್ಣನ ನೋಡಿರೆ ಲೋಕಕ್ಕೆ ಜಗದ ಕಣ್ಣಮದವ ಕಳೆದನು ಮುಕ್ಕಣ್ಣನಿಪ್ಪೆಡೆಯ ತೋರಿದ ಅಣ್ಣ ಬಸವಣ್ಣ. ವಾಙ್ಮನಕ್ಕಗೋಚರ ಮುಕ್ಕಣ್ಣನವತಾರಗಳನು ನಾಟಕವೆಂದರಿದು ಮೆರೆದ ಸತ್ಯಶುದ್ಧ ನಿಮ್ಮಗಳ ಕೈವಲ್ಯ ವಾಙ್ಮನಕ್ಕಗೋಚರ ಸತ್ಯ ಶುದ್ಧ ಬಸವಣ್ಣ. ಅಣ್ಣ ನಿಮ್ಮಿಂದ ಶುದ್ಧವ ಕಂಡೆ, ಸಿದ್ಧವ ಕಂಡೆ, ಪ್ರಸಿದ್ಧವ ಕಂಡೆ, ಆಧಾರದಲ್ಲಿ ಆಂದೋಳವಾದೆ, ಆರು ವ್ರತದಲ್ಲಿ ನಿಪುಣನಾದೆ. ನೀನೊಂದು ಮೂರಾದೆ, ಮೂರೊಂದಾಗಿ ತೋರಿದ ಗುಣ ಎಂತುಟಯ್ಯ ಬಸವಣ್ಣ. ಇನ್ನೆನಗಾಧಿಕ್ಯ ಒಪ್ಪುದೊಂದಿಲ್ಲ. ನಾ ನಿಮ್ಮ ಉರವಣಿಸಿ ಹರಿವೆ, ಹರಿದು ಭರದಿಂದ ಗೆಲಿವೆ. ತತ್ವಮೂವತ್ತಾರರಿಂಮೇಲೆ ಒಪ್ಪಿಪ್ಪ ತತ್ವಮಸಿಯನೈದುವೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಎನಗಿದಿರಿಪ್ಪುದಿಲ್ಲ ಕಾಣಾ ಪ್ರಭುವೆ ಬಸವ ಪ್ರಸಾದದಿಂದ."

ಬೇರೊಂದು ಪ್ರಸಂಗದಲ್ಲಿ—

"ಲೋಕ ಲೌಕಿಕಂಗಳೆಲ್ಲವು ನೀವು ಕೇಳಿರೆ ಏಕೈಕ ರುದ್ರನ ಅವತಾರವನರಿದೆವೆಂಬಿರಿ ನೋಡಿ ನಚ್ಚಿರೆ ಶಿವನು ಬಸವಣ್ಣನಾದ, ನೋಡಿರೆ ಬಸವಣ್ಣ ಗುರುವಾದ, ಬಸವಣ್ಣ ಚರವಾದ, ಬಸವಣ್ಣ ಪರಿಣಾಮ ಪ್ರಸಾದವಾದ, ಬಸವಣ್ಣ ಮೂಲಮಂತ್ರವಾದ, ಬಸವಣ್ಣ ಭಕ್ತಿ ಎರಡು ತ್ರಯವಾದ, ಬಸವಣ್ಣ ಆದರಿಂ ಮೇಲೆ ತೋರಿದ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಬಸವಣ್ಣನ ಪ್ರಸಾದವ ಕೊಂಡು ಭವಂ ನಾಸ್ತಿಯಾದೆ."

ಮತ್ತು

"ಗುರುವಾಗಿ ಬಂದೆನ್ನ ದೀಕ್ಷೆಯ ಮಾಡಿದಿರಿ. ಲಿಂಗವಾಗಿ ಬಂದೆನ್ನ ಮನದ ಮಲಿನವ ತೊಳೆದಿರಿ. ಜಂಗಮವಾಗಿ ಬಂದು ಪ್ರಪಂಚಿಕ ತನುವ ಕಳೆದು ಪರಮ ಸೀಮೆಯ ಮಾಡಿದಿರಿ. ಇಂತೀ ಇವೆಲ್ಲವು ಬಸವಣ್ಣನಾಗಿ ಎನಗೆ ಪ್ರಸಾದವ ನೀಡಿ ಸಲಹಿದ ಕಪಿಲಸಿದ್ಧ ಮಲ್ಲಿಕಾರ್ಜುನ ಇನ್ನೆನಗತಿಶಯವೇನೂ ಇಲ್ಲ."

ಶ್ರೀ ಸಿದ್ಧರಾಮ ಶಿವಯೋಗಿಗಳು ಅನೇಕ ಪ್ರಸಂಗದಲ್ಲಿ ಬಸವಣ್ಣನವರ ಗುಣಗಾನವನ್ನು ಮಾಡಿರುತ್ತಾರೆ.

## ಶ್ರೀ ಅಕ್ಕಮಹಾದೇವಿಯವರು

ಇವರು ಬಸವಣ್ಣನವರ ಸಮಕಾಲದವರು. ಶ್ರೀ ಅಕ್ಕಮಹಾದೇವಿಯವರು ಬಸವಣ್ಣನವರ ಶಿವಾನುಭವಮಂಟಪದಲ್ಲಿ ಭಾಗವನ್ನು ವಹಿಸಿದವರು. ಘನವೈರಾಗ್ಯಶಾಲಿಗಳು. ಕಲ್ಯಾಣಕ್ಕೆ ಬಂದು ಶಿವಾನುಭವಮಂಟಪದಲ್ಲಿ ಪ್ರಧಾನ ಪಾತ್ರವನ್ನು ವಹಿಸಿ ತಮ್ಮ ಯೋಗ್ಯತೆಯನ್ನು ಅಲ್ಲಿ ಚೆನ್ನಾಗಿ ತೋರಿಸಿ ಕರ್ನಾಟಕದಲ್ಲಿ ಸುಪ್ರಸಿದ್ಧ ಮಹಿಳೆಯರಾದರು. ವೈರಾಗ್ಯಮೂರ್ತಿಗಳಿದ್ದಂತೆ ವಿದ್ಯಾವತಿಯರೂ ಆಗಿದ್ದರು. ಇವರ ವಚನಗಳು ವಚನವಾಙ್ಮಯದಲ್ಲಿ ಶ್ರೇಷ್ಠ ಸ್ಥಾನವನ್ನು ದೊರಕಿಸಿರುತ್ತವೆ. ಇವರ ಯೋಗ್ಯತೆಗೆ ಹೋಲುವ ಹೆಣ್ಣುಮಕ್ಕಳು ಹಿಂದಿನ ಇತಿಹಾಸದಲ್ಲಿ ಕೈಬೆರಳಿನಿಂದ ಎಣಿಸುವಷ್ಟು ಸಿಗುತ್ತಾರೆ. ಇವರು ವಚನಗಳನ್ನು ಬರೆದಿರುತ್ತಾರೆ ಮತ್ತು ಯೋಗಾಂಗ ತ್ರಿವಿಧಿ ಸೃಷ್ಟಿಯ ವಚನ, ಅಕ್ಕಗಳ ಪೀಠಿಕೆ ಮೊದಲಾದ ಗ್ರಂಥಗಳನ್ನು ಬರೆದಿರುತ್ತಾರೆ. ಹರಿಹರ ಮಹಾಕವಿಯು ಅಕ್ಕನವರ ಚರಿತ್ರೆಯನ್ನು ರಗಳೆಯಲ್ಲಿ ಬರೆದಿರುತ್ತಾನೆ. ಚನ್ನಬಸವಾಂಕನು ಅಕ್ಕಮಹಾದೇವಿಯ ಪುರಾಣವನ್ನು ಬರೆದಿದ್ದಾನೆ. ಇತ್ತೀಚೆಗೆ ಅನೇಕ ಆಧುನಿಕ ಪಂಡಿತರು ಈಕೆಯ ವಿಷಯದಲ್ಲಿ ಗ್ರಂಥಗಳನ್ನು ಬರೆದು ಪ್ರಕಟಿಸಿರುತ್ತಾರೆ. ಇವರು ತಮ್ಮ ವಚನಗಳಲ್ಲಿ ಬಸವಣ್ಣನವರ ವಿಷಯದಲ್ಲಿ ಮತ್ತಂ। ಅನಾದಿ ಪರಶಿವನು ತಾನೆ, ಜಗದ್ಧಿತಾರ್ಥವಾಗಿ ಮರ್ತ್ಯಕ್ಕವತರಿಸಿ ಬಸವನೆಂಬ ನಾಮಕರಣವ ಧರಿಸಿ ವೀರಶೈವ ಮಾರ್ಗವನ್ನರುಹುವದಕ್ಕೆ ಬಾವನ್ನ ವಿವರವನೊಳಗೊಂಡು ಚರಿಸಿದನೆಂದು ಬಸವೇಶ್ವರ ದೇವರ ಮಾಹಾತ್ಮೆಯಂ ಕೊಂಡಾಡುವ ವಚನವು—

"ಶಿವ ಶಿವ ಆದಿ ಅನಾದಿಗಳೆಂಬವೆರಡಿಲ್ಲದ ನಿರವಯವಾಗಿಪ್ಪ ಶಿವ ನಿಮ್ಮ ನಿಜವನಾರಯ್ಯ ಬಲ್ಲರು. ವೇದಂಗಳಿಗಭೇದ್ಯನು, ಶಾಸ್ತ್ರಕಸಾಧ್ಯನು, ಪುರಾಣಕ್ಕೆ ಪುಣ್ಯನು, ಆಗಮಕ್ಕಗೋಚರನು. ತರ್ಕಕ್ಕೆ ಅತರ್ಕ್ಯನು, ವಾಙ್ಮನಾತೀತನೆಂಬ ಪರಶಿವಲಿಂಗವನ್ನು ಕೆಲಬರು ಸಕಲನೆಂಬರು, ಕೆಲಬರು ನಿಃಕಲನೆಂಬರು, ಕೆಲಬರು ಸೂಕ್ಷ್ಮನೆಂಬರು, ಕೆಲಬರು ಸ್ಥೂಲನೆಂಬರು, ಈ ಬಗೆಯ ಭಾವದಿಂದ ಹರಿಬ್ರಹ್ಮರು, ಇಂದ್ರ, ಚಂದ್ರ, ರವಿ, ಕಾಲ, ಕಾಮ, ದಕ್ಷ, ದಾನವ, ಮಾನವರೊಳಗಾದವರೆಲ್ಲರು ಕಾಣಲರಿಯದೆ ಅಜ್ಞಾನದಿಂದ ಭವಭಾರಿಗಳಾಗಿ ಹೋದರು. ಈ ಪರಿಯಲ್ಲಿ ಬರಿದೆ ಬಂದು ಹೋಗಬಾರದೆಂದು ನಮ್ಮ ಬಸವಣ್ಣನು ಜಗಹಿತಾರ್ಥವಾಗಿ ಮರ್ತ್ಯಕ್ಕವತರಿಸಿ ವೀರಶೈವ ಮಾರ್ಗವನರುಪುವುದಕ್ಕೆ ಬಾವನ್ನ ವಿವರವನೊಳಗೊಂಡು

ಚರಿಸಿದನೆಂತೆಂದೊಡೆ, ಗುರು ಕಾರುಣ್ಯವೇದ್ಯನು. ವಿಭೂತಿ ರುದ್ರಾಕ್ಷ ಧಾರಕನು, ಪಂಚಾಕ್ಷರೀ ಭಾಷಾ ಸಮೇತನು, ಲಿಂಗಾಂಗಸಂಬಂಧಿ, ನಿತ್ಯಲಿಂಗಾರ್ಚಕನು, ಅರ್ಪಿತದಲ್ಲಿ ಅವಧಾನಿ, ಪಾದೋದಕ ಪ್ರಸಾದ ಗ್ರಾಹಕನು, ಗುರುಭಕ್ತಿಸಂಪನ್ನನು, ಏಕಲಿಂಗ ನಿಷ್ಠಾಪರನು, ಚರಲಿಂಗ ಲೋಲುಪ್ತನು, ಶರಣ ಸಂಗಮೇಶ್ವರನು, ತ್ರಿವಿಧಕ್ಕಾಯತನು, ತ್ರಿಕರಣ ಶುದ್ಧನು. ತ್ರಿವಿಧ ಲಿಂಗಾಂಗಸಂಬಂಧಿ, ಅನ್ಯದೈವಸ್ಮರಣೆಯ ಹೊದ್ದ, ಭವಿಯ ಸಂಗವ ಮಾಡ, ಭವಿ ಪಾಕವ ಮುಟ್ಟ, ಪರಸ್ತ್ರೀಯರ ಬೆರಸ, ಪರಧನವನೊಲ್ಲ, ಪರನಿಂದೆಯನಾಡ, ಅನೃತವ ನುಡಿಯ, ತಾಮಸಭಕ್ತರ ಸಂಗವ ಮಾಡ, ಗುರುಲಿಂಗ ಜಂಗಮಕ್ಕೆ ಅರ್ಥ ಪ್ರಾಣಾಭಿಮಾನ ಮುಂತಾದ ವೆಲ್ಲವ ಸಮರ್ಪಿಸಿ ಪ್ರಸಾದ ಮುಂತಾಗಿ ಭೋಗಿಸುವ, ಜಂಗಮ ನಿಂದೆಯ ಸೈರಿಸ, ಪ್ರಸಾದ ನಿಂದೆಯ ಕೇಳ, ಅನ್ಯರ ನಾಶಗೆಯ್ಯ, ಪಾತ್ರಾಪಾತ್ರವ ನರಿವ, ಚತುರ್ವಿಧ ಪದವಿಯ ಹಾರ, ಅರಿಷಡ್ವರ್ಗಕ್ಕೆ ಅಳುಕ, ಕುಲಾದಿ ಮದಂಗಳ ಬಗೆಗೊಳ್ಳ, ದ್ವೈತಾದ್ವೈತವ ನುಡಿವನಲ್ಲ, ಸಂಕಲ್ಪವಿಕಲ್ಪವ ಮಾಡುವವನಲ್ಲ, ಕಾಲೋಚಿತವ ಬಲ್ಲ, ಕ್ರಮಯುಕ್ತನಾಗಿ ಷಟ್‌ಸ್ಥಲ ಭರಿತ, ಸರ್ವಾಂಗಲಿಂಗಿ, ದಾಸೋಹ ಸಂಪನ್ನ, ಇಂತೀ ಐವತ್ತೆರಡು ವಿಧ ದಲ್ಲಿ ನಿಪುಣನಾಗಿ ಮೆರೆವ ನಮ್ಮ ಬಸವಣ್ಣನು. ಆ ಬಸವಣ್ಣನ ಶ್ರೀಪಾದಕ್ಕೆ ಅಹೋರಾತ್ರಿಯಲ್ಲಿ ನಮೋ ನಮೋ ಎಂದು ಬದುಕಿದೆನು ಕಾಣಾ ಚನ್ನ ಮಲ್ಲಿಕಾರ್ಜುನಾ.''

ಈ ವಚನವನ್ನು ವಿಮರ್ಶಾತ್ಮಕ ದೃಷ್ಟಿಯಿಂದ ವಿಚಾರಿಸಿದರೆ ಬಸವಣ್ಣನವರ ಸರ್ವ ಗುಣಗಳೂ ಇದೊಂದೇ ವಚನದಲ್ಲಿ ಸರಿಯಾಗಿ ಬಂದಿರುತ್ತವೆ. ಇಷ್ಟು ತೂಕದಿಂದ ಹೇಳಬೇಕಾದರೆ ಅಕ್ಕನವರ ಯೋಗ್ಯತೆಯು ಎಷ್ಟು ದೊಡ್ಡದಿರಬೇಕೆಂಬುವದು ಸ್ಪಷ್ಟವಾಗಿ ತಿಳಿಯುತ್ತಲಿದೆ.

## ಶ್ರೀ ಮಡಿವಾಳ ಮಾಚಿದೇವರು

ಇವರು ವಚನಗಳನ್ನು ರಚಿಸಿರುತ್ತಾರೆ. ಇವರು ಶರಣರ ಸಂಘದಲ್ಲಿ ಬಹಳ ವೀರಾವೇಶದಿಂದ ಕಾರ್ಯಮಾಡತಕ್ಕವರಾಗಿದ್ದು ಕಲ್ಯಾಣಪಟ್ಟಣದಲ್ಲಿ ಆ ಕಾಲ ದೊಳಗೆ ನಡೆದ ಕಾರ್ಯಗಳಲ್ಲೆಲ್ಲ ಇವರ ಅಂಗವಿಲ್ಲದೆ ಇರುವದಿಲ್ಲ. ಇವರು ತಮ್ಮ ಕಾಯಕದಲ್ಲಿ ಅತ್ಯಂತ ನಿಷ್ಠರಾಗಿ ಕೊನೆಯವರೆಗೂ ಅದನ್ನು ನಡೆಯಿಸಿ ಕೀರ್ತಿಶಾಲಿ ಗಳಾಗಿರುತ್ತಾರೆ.

"ಶಿವತಾನೀತ ಮರ್ತ್ಯಲೋಕ ಪಾವನಮಾಡಲು, ಗುರುತಾನೀತ ಎನ್ನ ಭವರೋಗ ಭೇದಿಸಲು, ಭಕ್ತತಾನೀತನೆನಗೆ ವಿಸ್ತಾರವಾಗಿ ಭಕ್ತಿಯ ಭೇದವ ತೋರಲು, ಜಂಗಮತಾನೀತ ಅನಾದಿ ಸಿದ್ಧ ಘನಮಹಿಮನಾಗಿ; ಲಿಂಗವು ತಾನೀತನೆನಗೆ ಪ್ರಾಣಲಿಂಗವು ತಾನಾಗಿ, ಎನಗೆ ಸರ್ವಸ್ವಾಯತವ ಮಾಡಿದ ಮಹಿಮನೀತ ಕಾಣಾ ಕಲಿದೇವರ ದೇವಯ್ಯ ನಿಮ್ಮ ಶರಣ ಬಸವಣ್ಣನು.''

ಶ್ರೀ ಮಡಿವಾಳ ಮಾಚಿದೇವರು ಬಸವಣ್ಣನವರಲ್ಲಿ ಅತ್ಯಂತ ಭಕ್ತಿಯುಳ್ಳವರಾಗಿದ್ದರು. ಲಿಂಗಾಂಗಗಳ ಸಂಬಂಧವು ಬಸವಣ್ಣನವರಲ್ಲಿ ಹೇಗೆ ಸಂಬಂಧವಿತ್ತೆಂಬುವದನ್ನು ವಿಸ್ತಾರವಾದ ಕೆಳಗಿನ ವಚನದಲ್ಲಿ ಹೇಳುತ್ತಾರೆ.

"ಎನ್ನ ಸ್ಥೂಲ ತನುವಿಂಗೆ ಇಷ್ಟಲಿಂಗವಾದಾತ ಬಸವಣ್ಣ, ಎನ್ನ ಸೂಕ್ಷ್ಮ ತನುವಿಂಗೆ ಪ್ರಾಣಲಿಂಗವಾದಾತ ಬಸವಣ್ಣ, ಎನ್ನ ಕಾರಣ ತನುವಿಂಗೆ ಭಾವಲಿಂಗವಾದಾತ ಬಸವಣ್ಣ, ಎನ್ನದೃಕ್ಕಿಂಗೆ ಇಷ್ಟಲಿಂಗವಾದಾತ ಬಸವಣ್ಣ, ಎನ್ನ ಮನಕ್ಕೆ ಪ್ರಾಣಲಿಂಗವಾದಾತ ಬಸವಣ್ಣ, ಎನ್ನ ಭಾವಕ್ಕೆ ತೃಪ್ತಿಲಿಂಗವಾದಾತ ಬಸವಣ್ಣ, ಎನ್ನ ನಾಶಿಕಕ್ಕೆ ಆಚಾರಲಿಂಗವಾದಾತ ಬಸವಣ್ಣ, ಎನ್ನ ಜಿಹ್ವೆಗೆ ಗುರುಲಿಂಗವಾದಾತ ಬಸವಣ್ಣ, ಎನ್ನ ನೇತ್ರಕ್ಕೆ ಶಿವಲಿಂಗವಾದಾತ ಬಸವಣ್ಣ, ಎನ್ನತ್ವಕ್ಕಿಂಗೆ ಜಂಗಮಲಿಂಗವಾದಾತ ಬಸವಣ್ಣ, ಎನ್ನ ಶ್ರೋತ್ರಕ್ಕೆ ಪ್ರಸಾದಲಿಂಗವಾದಾತ ಬಸವಣ್ಣ, ಎನ್ನ ಹೃದಯಕ್ಕೆ ಮಹಾಲಿಂಗವಾದಾತ ಬಸವಣ್ಣ, ಎನ್ನ ಸುಚಿತ್ತೆಂಬ ಹಸ್ತಕ್ಕೆ ಆಚಾರಲಿಂಗವಾದಾತ ಬಸವಣ, ಎನ್ನ ಸುಬುದ್ಧಿ ಎಂಬ ಹಸ್ತಕ್ಕೆ ಗುರುಲಿಂಗವಾದಾತ ಬಸವಣ್ಣ, ಎನ್ನ ನಿರಹಂಕಾರ ಎಂಬ ಹಸ್ತಕ್ಕೆ ಶಿವಲಿಂಗವಾದಾತ ಬಸವಣ್ಣ, ಎನ್ನ ಸುಮನ ಎಂಬ ಹಸ್ತಕ್ಕೆ ಜಂಗಮಲಿಂಗವಾದಾತ ಬಸವಣ್ಣ, ಎನ್ನ ಸುಜ್ಞಾನವೆಂಬ ಹಸ್ತಕ್ಕೆ ಪ್ರಸಾದಲಿಂಗವಾದಾತ ಬಸವಣ್ಣ, ಎನ್ನ ಸದ್ಭಾವವೆಂಬ ಹಸ್ತಕ್ಕೆ ಮಹಾಲಿಂಗವಾದಾತ ಬಸವಣ್ಣ, ಎನ್ನ ಆಧಾರ ಚಕ್ರದಲ್ಲಿ ಆಧಾರಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ, ಎನ್ನ ಸ್ವಾಧಿಷ್ಠಾನ ಚಕ್ರದಲ್ಲಿ ಗುರುಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ, ಎನ್ನ ಮಣಿಪೂರಕ ಚಕ್ರದಲ್ಲಿ ಶಿವಲಿಂಗವಾಗಿ ಮೂರ್ತಿಗೊಂಡಾತ ಬಸವಣ, ಎನ್ನ ಅನಾಹತ ಚಕ್ರದಲ್ಲಿ ಜಂಗಮಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ, ಎನ್ನ ವಿಶುದ್ಧಿ ಚಕ್ರದಲ್ಲಿ ಪ್ರಸಾದಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ, ಎನ್ನ ಅಜ್ಞಾನ ಚಕ್ರದಲ್ಲಿ ಮಹಾಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ, ಎನ್ನ ಬ್ರಹ್ಮರಂಧ್ರದಲ್ಲಿ ನಿಷ್ಕಲಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ, ಎನ್ನ ಶಿಖಾಚಕ್ರದಲ್ಲಿ ಶೂನ್ಯಲಿಂಗವಾಗಿ ಮೂರ್ತಿಗೊಂಡಾತ ಬಸವಣ, ಎನ್ನ ಪಶ್ಚಿಮ ಚಕ್ರದಲ್ಲಿ ನಿರಂಜನಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ, ಎನ್ನ ವದನಕ್ಕೆ ಓಂಕಾರವಾದಾತ ಬಸವಣ, ಎನ್ನ ಬಲದ ಭುಜಕ್ಕೆ ನಕಾರವಾದಾತ ಬಸವಣ್ಣ, ಎನ್ನ ಎಡದ ಭುಜಕ್ಕೆ ಮಕಾರವಾದಾತ ಬಸವಣ್ಣ, ಎನ್ನ ಒಡಲಿಂಗೆ ಶಿಕಾರವಾದಾತ ಬಸವಣ್ಣ, ಎನ್ನ ಬಲದ ಪಾದಕ್ಕೆ ಏಕಾರವಾದಾತ ಬಸವಣ್ಣ, ಎನ್ನ ಎಡದ ಪಾದಕ್ಕೆ ಯಕಾರವಾದಾತ ಬಸವಣ್ಣ, ಎನ್ನ ಆಪಾದಮಸ್ತಕ ಪರಿಯಂತರ ಮಂತ್ರರೂಪ ಸಂಬಂಧವಾದಾತ ಬಸವಣ್ಣ, ಎನ್ನ ನಾದಕ್ಕೆ ಅಕಾರವಾದಾತ ಬಸವಣ್ಣ, ಎನ್ನ ಬಿಂದುವಿಗೆ ಉಕಾರವಾದಾತ ಬಸವಣ್ಣ, ಎನ್ನ ಕಳೆಗೆ ಮಕಾರವಾದಾತ ಬಸವಣ್ಣ, ಎನ್ನರುಧಿರಕ್ಕೆ ನಕಾರವಾದಾತ ಬಸವಣ್ಣ, ಎನ್ನ ಮಾಂಸಕ್ಕೆ ಮಕಾರ

ವಾದಾತ ಬಸವಣ್ಣ, ಎನ್ನ ಮೇದಸ್ಸಿಂಗೆ ಶಿಕಾರವಾದಾತ ಬಸವಣ್ಣ. ಎನ್ನ ಅಸ್ಥಿಗೆ ವಕಾರವಾದಾತ ಬಸವಣ್ಣ, ಎನ್ನ ಮಜ್ಜೆಗೆ ಯಕಾರವಾದಾತ ಬಸವಣ್ಣ, ಎನ್ನ ಸರ್ವಾಂಗಕ್ಕೆ ಓಂಕಾರವಾದಾತ ಬಸವಣ್ಣ, ಇಂತು ಬಸವಣ್ಣನೇ ಪರಿಪೂರ್ಣನಾಗಿ, ಬಸವಣ್ಣನೇ ಪ್ರಾಣವಾಗಿ, ಬಸವಣ್ಣನೇ ಅಂಗವಾಗಿ, ಬಸವಣ್ಣನೇ ಲಿಂಗವಾಗಿದ್ದ ಕಾರಣ ನಾನು ಬಸವಣ್ಣ, ಬಸವಣ್ಣ, ಬಸವಣ್ಣ ಎಂದು ಬಯಲಾದೆನು ಕಾಣಾ ಕಲಿದೇವರ ದೇವಾ."

ಇನ್ನೊಂದು ವಚನದಲ್ಲಿ—ಮತ್ತಂ

"ಬಸವಣ್ಣನ ನಡೆಪರುಷ, ಬಸವಣ್ಣನ ನುಡಿಪರುಷ, ಬಸವಣ್ಣನ ದೃಷ್ಟಿಪರುಷ, ಬಸವಣ್ಣನ ಹಸ್ತಪರುಷ, ಬಸವಣ್ಣನ ಭಾವಪರುಷ, ಬಸವಣ್ಣನ ಮನಪರುಷ, ತನು ಮನ ಧನವ ವೇಧಿಸಿದಾತ ಬಸವಣ್ಣನು, ಬಸವಣ್ಣನ ನೆನೆವುದೇ ಲಿಂಗಾರ್ಚನೆ, ಬಸವಣ್ಣನ ನೆನೆವುದೇ ದೇವರತತ್ವ, ಬಸವಣ್ಣನ ನೆನೆವುದೇ ಕಲ್ಯಾಣವೆನಗೆ, ಕಲಿದೇವರ ದೇವಯ್ಯ ನಿಮ್ಮ ಶರಣ ಬಸವಣ್ಣ ಇಂತಹ ಮಹಿಮ ನೋಡಯ್ಯ."

## ಶ್ರೀ ಹಡಪದ ಅಪ್ಪಣ್ಣನವರು

ಇವರು ಬಸವಣ್ಣನವರ ಕೂಡ ಕಲ್ಯಾಣದಲ್ಲಿದ್ದು ಅವರ ಎಲ್ಲ ಕಾರ್ಯಗಳಲ್ಲಿ ಸಹಾನುಭೂತಿಯನ್ನು ತೋರಿಸಿದವರಾಗಿರುತ್ತಾರೆ. ಇವರು ವಚನಗಳನ್ನೂ ಬರೆದಿರುತ್ತಾರೆ. ಶಿವಾನುಭವಮಂಟಪದ ಕಾರ್ಯಕಾರಿ ಮಂಡಲದಲ್ಲಿ ಇವರೂ ಒಬ್ಬ ಸದಸ್ಯರಾಗಿದ್ದು ಅಲ್ಲಿ ಉತ್ಕೃಷ್ಟ ಕಾರ್ಯಗಳನ್ನು ಮಾಡಿದವರೂ, ಬಸವಣ್ಣನವರಲ್ಲಿ ಅತ್ಯಂತ ನಿಷ್ಠೆಯುಳ್ಳವರೂ ಆಗಿರುತ್ತಾರೆ. ಇವರು ತಮ್ಮದೊಂದು ವಚನದಲ್ಲಿ—

"ಲಿಂಗಜಂಗಮ ಜಂಗಮಲಿಂಗವೆಂಬುದನಾರು ಬಲ್ಲರಯ್ಯ? ಮರ್ತ್ಯಲೋಕ ಶಿವಲೋಕದಲ್ಲಿ ಬಸವಣ್ಣನಲ್ಲದೆ ಲಿಂಗಕ್ಕಾಧಾರವಿಲ್ಲೆಂದು ಮರ್ತ್ಯಲೋಕದಲ್ಲಿ ಬಂದವತರಿಸಿದನಯ್ಯ ಬಸವಣ್ಣನು. ಜಂಗಮುಖ ಲಿಂಗವೆಂಬುದನರಿದು ತನ್ನನರ್ಪಿಸಿ ಇದಿರ ತಪ್ಪಿಸಿ ಇರಬಲ್ಲನಯ್ಯ ಬಸವಣ್ಣನು. ಅಂಗಮುಖವೆಲ್ಲ ನಷ್ಟವಾಗಿ ಭೃತ್ಯಾಚಾರವೇ ತನುವಾಗಿರ ಬಲ್ಲನಯ್ಯ ಬಸವಣ್ಣನು. ಪ್ರಾಣಕಳೆಯರತು ಅಂತೂ ಜಂಗಮವೇ ಪ್ರಾಣವಾಗಿ ಹಂಗುಹರಿಯದಿರಬಲ್ಲನಯ್ಯ ಬಸವಣ್ಣನು. ಉಪಾಧಿ ಎಂಬ ಕೀರ್ತಿ ವಾರ್ತೆಯನು ಜರಿದು ನಿರುಪಾಧಿತವೆಂಬ ವಿದೇಶಕ್ಕೆ ಅತೀತನಾಗಿ ಸಹಜ ದಾಸೋಹಿಯಾಗಿರಬಲ್ಲನಯ್ಯ ಬಸವಣ್ಣನು. ಬಸವಪ್ರಿಯ ಕೂಡಲಸಂಗನ ಶರಣ ಬಸವಣ್ಣನೇ ನಿಮಗೆ (ಪ್ರಭುವಿಗೆ) ಭಕ್ತನಲ್ಲದೆ ಮತ್ತಾರನು ಕಾಣೆನಯ್ಯ."

## ಶ್ರೀ ಮರುಳುಶಂಕರ ದೇವರು

ಇವರು ಬಸವಣ್ಣನವರ ಸಮಕಾಲೀನರು. ಮರುಳು ದೇವರ ವಚನ, ಮರುಳು ದೇವರ ಕಂದಗಳನ್ನು ಬರೆದಿರುತ್ತಾರೆ. ಶ್ರೀ ಬಸವಣ್ಣನವರ ಕಾರ್ಯಕ್ಕೆ ಇವರು

ಸಹಾಯ ಮಾಡಿದವರೂ, ಶಿವಾನುಭವಮಂಟಪದ ಕಾರ್ಯಕರ್ತರಲ್ಲೊಬ್ಬರೂ ಆಗಿರುತ್ತಾರೆ. ಇವರು ಅನೇಕ ವಚನಗಳಲ್ಲಿ ಬಸವಣ್ಣನವರನ್ನು ಪ್ರಶಂಸಿಸಿರುತ್ತಾರೆ. ಇಲ್ಲಿ ಎರಡು ವಚನಗಳನ್ನು ಮಾತ್ರ ತೋರಿಸಿದ್ದೇವೆ.

"ಶರಣ ಬಸವಣ್ಣನು ಲೋಕದ ಮರ್ತ್ಯನೆಂದರೆ ಅಘೋರ ನರಕ ಕಾಣಾ, ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತ ಮಲ್ಲಿಕಾರ್ಜುನ ದೇವಯ್ಯ ನಿಮ್ಮ ಶರಣ ಬಸವಣ್ಣನ ನಿಲವಿನ ಪರಿಯ ನೀವೇ ಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯ."

ಇವರು ತಮ್ಮ ಐಕ್ಯದ ಸ್ಥಿತಿಯಲ್ಲಿದಾಗ್ಗೆ—

"ಮಹಾಲಿಂಗಂ ತ್ರಯೋರ್ಲಿಂಗಂ। ತ್ರಿವಿಧಂ ಷಡ್ವಿಧೋರ್ಮುಖಂ। ತ್ರಿವಿಧೇಕಮುಖೋರ್ಲಿಂಗಂ ಮಹಾಲಿಂಗಂತು ದರ್ಶನಂ। ಇಂತೆಂದುದಾಗಿ ಒಂದು ಮೂರು ಮಾಡಿಕೊಂಡನಯ್ಯ ನಮ್ಮ ಬಸವಣ್ಣನು, ಮೂರ ಆರ ಮಾಡಿಕೊಂಡನಯ್ಯ ನಮ್ಮ ಬಸವಣ್ಣನು, ಆರ ಮೂರ ಮಾಡಿಕೊಂಡ ನಯ್ಯ ನಮ್ಮ ಬಸವಣ್ಣನು, ಮೂರ ಒಂದ ಮಾಡಿಕೊಂಡನಯ್ಯ ನಮ್ಮ ಬಸವಣ್ಣ, ಇಂತಪ್ಪ ಸರ್ವಾವಧಾನಿಯಯ್ಯ ನಮ್ಮ ಬಸವಣ್ಣನು, ಇಂತಪ್ಪ ಸರ್ವಸಂಗಪರಿತ್ಯಾಗಿಯಯ್ಯ ನಮ್ಮ ಬಸವಣ್ಣನು, ಇಂತಪ್ಪ ಸರ್ವಕರಣ ನಿರ್ಮೂಲನಯ್ಯ ನಮ್ಮ ಬಸವಣ್ಣನು, ಇಂತಪ್ಪ ಕಾರುಣ್ಯ ಪ್ರಸಾದಿ ಯಯ್ಯ ನಮ್ಮ ಬಸವಣ್ಣನು, ಇಂತಪ್ಪ ಸರ್ವಾಂಗಲಿಂಗಿಯಯ್ಯ ನಮ್ಮ ಬಸವಣ್ಣನು, ಇಂತಪ್ಪ ಸರ್ವ ನಿರ್ವಾಣಿಯಯ್ಯ ನಮ್ಮ ಬಸವಣ್ಣನು, ಇಂತಪ್ಪ ಬಸವಣ್ಣನ ಮಹಿಮೆಯನ್ನು ನೀವೇ ಬಲ್ಲಿರಿ. ಅಸಂಖ್ಯಾತ ಮಹಾ ಪುರಾತನರು ಪ್ರಭುದೇವರು ಮುಖ್ಯವಾದ ನಿಲವಿನ ಶ್ರೀ ಚರಣಕೆ ನಾನು ಶರಣಾರ್ಥಿ ಶರಣಾರ್ಥಿಯೆಂದು ಶಬ್ದಮುಗ್ಧವಾಗಿ ಉರಿವುಂಡ ಕರ್ಪೂರ ದಂತೆ ನಿಮ್ಮ ಶ್ರೀ ಚರಣವನೈದಿದೆನಯ್ಯ ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತ ಮಲ್ಲಿಕಾರ್ಜುನ ದೇವಯ್ಯ ನಿಮ್ಮ ಬಸವಣ್ಣನ ಪ್ರಸಾದವ ಕೊಂಡು ನಾನು ಬದುಕಿದೆನು. ಬಸವಣ್ಣನ ಮುಂದೆ ಬಯಲಾಗಿ ಹೋದೆ ನಯ್ಯ ನಿಮ್ಮ ಧರ್ಮ ನಿಮ್ಮ ಧರ್ಮ."

ಹೀಗೆ ಬಸವಣ್ಣನವರ ಮಹಿಮೆಯನು ಕೊಂಡಾಡುತ್ತ ಬಯಲಾಗಿರುತ್ತಾರೆ.

### ಶ್ರೀ ಬಹುರೂಪಿ ಚೌಡಯ್ಯನವರು

ಇವರು ಬಸವಣ್ಣನವರ ಸಮಕಾಲದವರು. ಅವರ ಕೂಡ ಶಿವಾನುಭವಮಂಟಪ ದಲ್ಲಿ ಕೆಲಸವನ್ನು ಮಾಡಿದವರು. ಇವರು ತಮ್ಮದೊಂದು ವಚನದಲ್ಲಿ—

"ಷಡುಚಕ್ರವಳಯದೊಳಗೆ ನಾನಾಡುವೆ, ಬಹುರೂಪ ಭ್ರೂಮಧ್ಯ ಮಂಡಲ ಹೃದಯಕಮಲ ಮಧ್ಯದ ಅಜ್ಜಸ್ವರದ ಮಣಿಪೂರಕದ ಮೇಲೆ ನಾನಾಡುವೆ, ಬಹುರೂಪನುರಿಯುಂಡಕರ್ಪುರದಂತೆ ನಾನಾಡುವೆ, ಬಹು ರೂಪ ಬಯಲ ಬೆರಸಿದ ಮರೀಚಿಯಂತೆ ನಾನಾಡುವೆ, ಬಹುರೂಪರೇಕಣ್ಣ

ಪ್ರಿಯನಾಗಿನಾಥಾ, ಬಸವಣ್ಣನಿಂದೆ ಬದುಕಿದೆನು, ಶೂನ್ಯ ಸನ್ನಿಹಿತ ನಾದಲ್ಲಿ ಶೂನ್ಯಪದಾರ್ಥವಾದವೆಂದು ಬಸವನ ಕೂಡ ಆಡುತಿರ್ದರೇಕಣ್ಣ ಪ್ರಿಯನಾಗಿನಾಥಾ ಬಸವಣ್ಣನಿಂದ ಬದುಕಿತ್ತೀ ಲೋಕವೆಲ್ಲ.''

## ಶ್ರೀ ಸೊಡ್ಡಳ ಬಾಚರಸರು

ಇವರೂ ಶಿವಾನುಭವಮಂಟಪದ ಕಾರ್ಯಕಾರಿ ಸಭಾಸದರು ಮತ್ತು ಬಸವಣ್ಣ ನವರು ಇವರಿಗೆ ಬಹಳ ಬೆಲೆಯನ್ನು ಕೊಡುತ್ತಿದ್ದರು. ಇವರು ವಚನ ಮತ್ತು ಕಾಲ ಜ್ಞಾನವನ್ನು ಬರೆದಿರುತ್ತಾರೆ. ಇವರು ಬಿಜ್ಜಳನಲ್ಲಿ ಕರಣಿಕರಾಗಿದ್ದರು.

"ಎನ್ನ ಕಾಯಕವೆಂಬ ಸಿಂಹಾಸನದಲ್ಲಿ ಪ್ರಾಣಲಿಂಗವ ಮೂರ್ತಿ ಗೊಳಿಸಿ ಧ್ಯಾನವೆಂಬ ಹಸ್ತದಲ್ಲಿ ಮುಟ್ಟಿ ಪೂಜಿಸುತ್ತಿರಲು ಮೆಲ್ಲಮೆಲ್ಲನೆ ಸುತ್ತಿ ಮುತ್ತಿದ ಸಂಸಾರ ಬಯಲ ಜರಿಸಿ ನಾನೆಂಬ ಭೇದವಳಿದು ಮಹಾ ದಾನಿ ಸೊಡ್ಡಳನಲ್ಲಿ ನಿಜಲಿಂಗೈಕ್ಯವಾಯಿತ್ತು. ಎನ್ನಕುಲಸೂತಕವನಳಿದ ಬಸವಣ್ಣ, ಎನ್ನ ಛಲಸೂತಕವನಳಿದ ಬಸವಣ್ಣ, ಎನ್ನ ತನುಸೂತಕ ವನಳಿದ ಬಸವಣ್ಣ, ಎನ್ನ ಮನಸೂತಕವನಳಿದ ಬಸವಣ್ಣ, ಎನ್ನ ಪ್ರಾಣ ಭಾವಸೂತಕವನಳಿದ ಬಸವಣ್ಣ, ಎನ್ನ ಅರಿವು ಮರಹಿನ ಸಂದ ಬಿಡಿಸಿ ಎನ್ನ ತನ್ನಲ್ಲಿಂಬಿಟ್ಟುಕೊಂಡ ಬಸವಣ್ಣ, ನಿಜನಿರ್ವಾಣದ ಸಮಾಧಿಯ ಬಾಗಿಲ ತೋರಿದ ಬಸವಣ್ಣನು.''

## ಶ್ರೀ ಡೋಹರ ಕಕ್ಕಯ್ಯನವರು

ಇವರು ಬಸವಣ್ಣನವರ ಕಾಲದಲ್ಲಿದ್ದವರು. ಪ್ರಸಿದ್ಧ ಶಿವಶರಣರಾಗಿಹೋಗಿರು ತ್ತಾರೆ. ಬಸವಣ್ಣನವರು ತಮ್ಮ ವಚನಗಳಲ್ಲಿ ಅನೇಕ ಸಾರೆ ಇವರ ಹೆಸರನ್ನು ತೆಗೆದು ಕೊಂಡಿರುತ್ತಾರೆ. ಇವರು—

"ಎನ್ನ ಕಷ್ಟಕುಲಸೂತಕ ನಿಮ್ಮ ಹಸ್ತ ಮುಟ್ಟಿದಲ್ಲಿ ಬಯಲಾ ಯಿತ್ತು, ಬಸವಣ್ಣ ಶುಕ್ಲಶೋಣಿತದಿಂದಾದ ಸೂತಕ ಲಿಂಗ ಮುಟ್ಟಿದೊಡನೆ ಬಯಲಾಯಿತ್ತು, ತಟ್ಟಿದ ಮುಟ್ಟಿದ ಸುಖಂಗಳ ಲಿಂಗಮುಖಕ್ಕೆ ಅರ್ಪಿಸಿದೆ ನಾಗಿ ಎನ್ನ ಪಂಚೇಂದ್ರಿಯಂಗಳು ಬಯಲಾದವು. ಎನ್ನಂತರಂಗದಲ್ಲಿ ಜ್ಞಾನಜ್ಯೋತಿಯು ಎಡೆಗೊಂಡಿತಾಗಿ ಒಳಗು ಬಯಲಾಯಿತ್ತು, ಸಂಸಾರ ಸಂಗದ ಅವಸ್ಥೆ ವಿಾರಿತ್ತಾಗಿ ಬಹಿರಂಗ ಬಯಲಾಯಿತ್ತು, ಅಭಿನವ ಮಲ್ಲಿ ಕಾರ್ಜುನಾ ನಿಮ್ಮ ಮುಟ್ಟಿದ ಕಾರಣ ನಾನು ಬಯಲಾದೆನು.''

## ಶ್ರೀ ಮೋದಾರ ಕೇತಯ್ಯನವರು

ಇವರೂ ಬಸವಣ್ಣನವರ ಸಮಕಾಲದವರು. ವಚನಗಳನ್ನು ಬರೆದಿರುತ್ತಾರೆ.

"ಎನ್ನ ಕಾಯದ ಕಳವಳವ ನಿಲಿಸಿ ಗುರುಲಿಂಗವ ತೋರಿದ ಎನ್ನ ಮನದ ವ್ಯಾಕುಳವ ನಿಲಿಸಿ ಜಂಗಮವ ತೋರಿದ ಅಂತು ಅಂತರಂಗ ಬಹಿರಂಗದಲ್ಲಿ ತಾನೆಯಾಗಿ ಎನ್ನ ಪಾವನವ ಮಾಡಿದನು. ಅಮರ

ಗಣಂಗಳ ಮುನಿದು ಎನ್ನ ಕೈಲಾಸಕ್ಕೊಯ್ದರೆ ಸದ್ಯೋನ್ಮುಕ್ತಿಯು ತೋರ ಲೆಂದು ಮರ್ತ್ಯಕ್ಕೆ ಮರಳಿ ತಂದ ಸಂಗನ ಬಸವಣ್ಣನೇ ಗುರು ಎನಗೆ, ಸಂಗನ ಬಸವಣ್ಣನೇ ಪರ ಎನಗೆ, ಸಂಗನ ಬಸವಣ್ಣನ ಕರುಣದಿಂದೆ ಘನಕ್ಕೆ ಘನಮಹಿಮ ಅಲ್ಲಮಪ್ರಭುವಿನ ಶ್ರೀಪಾದವ ಕಂಡು ಬದುಕಿದೆನು ಕಾಣಾ ಗೌರೀಶ್ವರಾ.''

## ಶ್ರೀ ಶಂಕರದಾಸೀಮಾರ್ಯರು

ಇವರು ಬಸವಣ್ಣನವರಿಗಿಂತ ಕೊಂಚ ಹಿರಿಯರು. ವಚನಗಳನ್ನು ಬರೆದಿರು ತಾರೆ. ಕಾಯಕದಿಂದ ಬಹಳ ಶ್ರೇಷ್ಠತೆಯನ್ನು ಹೊಂದಿರುತ್ತಾರೆ. ಶಂಕರದಾಸೀ ಮಾರ್ಯ ಪುರಾಣವೆಂಬುವದು ಇವರ ಚರಿತ್ರೆಯನ್ನು ಚೆನ್ನಾಗಿ ಬೋಧಿಸುತ್ತದೆ. ತಮ್ಮದೊಂದು ವಚನದಲ್ಲಿ—

"ಹರನಿರೂಪದಿಂದೆ ಬಸವಣ್ಣ ಧರಣಿಗೆ ಅವತರಿಸಿದ ಕಾರಣ ಶಿವಾ ಚಾರ ಸದಾಚಾರ ಎಂಬುವದು ಧರೆಗೆ ವಿಖ್ಯಾತವಾಯಿತ್ತು. ಶಿವಗಣ ಪ್ರಮಥ ಗಣಂಗಳೆಂಬ ಮಹಾಮಹಿಮರ ಸುಳುಹು ಧರೆಯಮೇಲೆ ಕಾಣ ಬಂದಿತ್ತು ನೋಡಯ್ಯ, ಪರುಷವ ಸಾಧಿಸಿ ತಂದಂತಾಯಿತ್ತು ನಿಮ್ಮ ಶರಣರ ಸಂಗದಿಂದೆ ಎನ್ನ ನಂದಿಯ ಮೊಗವಾಡ ನೊಸಲ ಕಣ್ಣೆಂಬ ಅಹಂಕಾರವ ಮುಂದುಗೊಂಡಿದ್ದೆನಯ್ಯಾ ಎನ್ನ ಮದ ಉಡುಗಿ ಸಂಗನ ಬಸವಣ್ಣನ ಕರುಣದಿಂದೆ ಪ್ರಭುದೇವರ ನಿರಾಳವ ಕಂಡು ಬದುಕಿದೆನು ಕಾಣಾ ನಿಜಗುರು ಶಂಕರದೇವಾ.''

## ಶ್ರೀ ನೋಳಿಗೆಯ ಮಾರಯ್ಯನವರು

ಇವರು ಬಸವಣ್ಣನವರ ಕೀರ್ತಿ ವಾರ್ತೆಗಳನ್ನು ಕೇಳಿ ಕಾಶ್ಮೀರದಲ್ಲಿದ್ದ ತಮ್ಮ ರಾಜ್ಯವನ್ನು ತೊರೆದು ತಾವು ಅರಸರಾದರೂ ಭಕ್ತಿಯ ಕೈಂಕರ್ಯಗಳಿಂದ ಕಟ್ಟಿಗೆ ಗಳನ್ನು ಮಾರುವ ಕಾಯಕವನ್ನು ಮಾಡುತ್ತ ಸುಪ್ರಸಿದ್ಧ ಶಿವಶರಣರಲ್ಲಿ ಇವರೊಬ್ಬ ವರಾಗಿರುತ್ತಾರೆ. ಇವರ ಗುರುಲಿಂಗ ಜಂಗಮ ಭಕ್ತಿಯು ಅಸಾಧಾರಣವಾದುದಾಗಿ ಇದ್ದಿತು. ಇವರು ನಿರಾಶಾವಾದಿಗಳಾಗಿದ್ದರು. ಶ್ರೀ ಬಸವಣ್ಣನವರು ಇವರು ನಿಸ್ಪೃಹತೆ ಯಿಂದ ಕಾಯಕ ಮಾಡುತ್ತಿದ್ದುದನ್ನು ನೋಡಿ ಮಾರಯ್ಯನವರಿಗೆ ಒಳ್ಳೇ ಮನ್ನಣೆ ಯನ್ನು ಮಾಡುತ್ತಿದ್ದರು. ಇವರು ಬಸವಣ್ಣನವರ ಬಗ್ಗೆ,

"ಎನ್ನ ಚಿತ್ತಕ್ಕೆ ನಕಾರವಾಗಿ ಬಂದೆಯಯ್ಯ ಬಸವಣ್ಣ, ಎನ್ನ ಬುದ್ಧಿಗೆ ಮಕಾರವಾಗಿ ಬಂದೆಯಯ್ಯ ಬಸವಣ್ಣ, ಎನ್ನ ಅಹಂಕಾರಕ್ಕೆ ಶಿಕಾರವಾಗಿ ಬಂದೆಯಯ್ಯಾ ಬಸವಣ್ಣ, ಎನ್ನ ಮನಕ್ಕೆ ವಕಾರವಾಗಿ ಬಂದೆಯಯ್ಯ ಬಸವಣ್ಣ, ಎನ್ನ ಜ್ಞಾನಕ್ಕೆ ಯಕಾರವಾಗಿ ಬಂದೆಯಯ್ಯ ಬಸವಣ್ಣ, ಎನ್ನ ಮತಿಗೆ ಓಂಕಾರವಾಗಿ ಬಂದೆಯಯ್ಯ ಬಸವಣ್ಣ, ಎನ್ನ ನಾದಕ್ಕೆ ಅಕಾರವಾಗಿ ಬಂದೆಯಯ್ಯ ಬಸವಣ್ಣ, ಎನ್ನ ಬಿಂದುವಿಗೆ ಉಕಾರವಾಗಿ ಬಂದೆಯಯ್ಯ ಬಸವಣ್ಣ, ಎನ್ನ ಕಳೆಗೆ ಮಕಾರವಾಗಿ

ಬಂದೆಯಯ್ಯ ಬಸವಣ್ಣ, ಎನ್ನ ಭವವ ಕೊಂದಿಹೆನೆಂದು ಬಂದೆಯಯ್ಯ ಬಸವಣ್ಣ, ಎನ್ನ ವಚಸ್ಸಿಂಗೆ ವಕಾರವಾಗಿ ಬಂದೆಯಯ್ಯ ಬಸವಣ್ಣ, ಇಂತಪ್ಪ ಮಹಾ ಪ್ರಣಮಂಗಳೇ ಬಸವಣ್ಣನಾಗಿ ಆ ಬಸವಣ್ಣನೇ ಮಹಾ ಪ್ರಣಮಂಗಳಾಗಿ ತನ್ನ ಮಠಕ್ಕೆ ತಾನೇ ಬಂದು ಭಕ್ತಿವಸ್ತುವ ನ್ನಿತ್ತೊಡೆ ಇವನಾನೂ ನಿಃಕಳಂಕ ಮಲ್ಲಿಕಾರ್ಜುನ ಭಕ್ತರಿಗಿತ್ತು ಬದುಕಿದೆ ನಯ್ಯ.''

ಮತ್ತೊಂದು ವಚನದಲ್ಲಿ—

''ಎನ್ನರಿವು ಮರಹು ಬಸವಣ್ಣಂಗರ್ಪಿತ, ಎನ್ನ ಆಚಾರ ವಿಚಾರ ಬಸವಣ್ಣಂಗರ್ಪಿತ, ಎನ್ನ ಭಾವ ನಿರ್ಭಾವ ಬಸವಣ್ಣಂಗರ್ಪಿತ, ಎನ್ನಂತ ರಂಗ ಬಹಿರಂಗ ಬಸವಣ್ಣಂಗರ್ಪಿತ, ನೀ ನಾನೆಂಬುದು ಬಸವಣ್ಣಂ ಗರ್ಪಿತ ಇಂತು ಎನ್ನನೆ ಬಸವಣ್ಣಂಗೆ ನಿವೇದಿಸಿ ಆವಾವ ಅವಲಂಬನವಿಲ್ಲದೆ ನಿರಾಲಂಬದಲ್ಲಿ ನಿಜವಾಸಿಯಾದೆನು ಕಾಣಾ ನಿಃಕಳಂಕ ಮಲ್ಲಿಕಾರ್ಜುನಾ.''

ಮತ್ತು

''ಬ ಎಂಬಲ್ಲಿ ಬಳಿಸಂದೆನು, ಸ ಎಂಬಲ್ಲಿ ಸಯವಾದೆನು, ವ ಎಂಬಲ್ಲಿ ನಿರವಯನಾದೆನು, ನಿಃಕಳಂಕ ಮಲ್ಲಿಕಾರ್ಜುನ ಬಸವಣ್ಣನ ನಿಜಪದದಲ್ಲಿ ಸಂದಿಲ್ಲದೆ ಬೆರಸಿ ನಮೋ ನಮೋ ಎಂಬ ಹಂಗಳಿದುಳಿದೆನು.''

## ಶ್ರೀ ಉರಿಲಿಂಗಪೆದ್ದಿಗಳು

ಇವರು ಬಸವಣ್ಣನವರ ಸಮಕಾಲದವರು. ತೆಲುಗು ದೇಶದಿಂದ ಶ್ರೀ ಬಸವಣ್ಣ ನವರ ಪ್ರಭಾವಕ್ಕೊಳಗಾಗಿ ಕಲ್ಯಾಣಕ್ಕೆ ಬಂದಿರುವವರಲ್ಲಿ ಒಬ್ಬರಾಗಿದ್ದರು. ಇವರು ವಚನಗಳನ್ನು ಬರೆದಿರುತ್ತಾರೆ.

''ಗುರುಲಿಂಗದಲ್ಲಿ ಬಸವಣ್ಣನ ಕಂಡೆನು, ಬಸವಣ್ಣನವರಲ್ಲಿ ಶ್ರೀ ಗುರುಲಿಂಗವ ಕಂಡೆನು, ಶಿವಲಿಂಗದಲ್ಲಿ ಬಸವಣ್ಣನ ಕಂಡೆನು, ಬಸವಣ್ಣನಲ್ಲಿ ಶಿವಲಿಂಗವ ಕಂಡೆನು. ಜಂಗಮಲಿಂಗದಲ್ಲಿ ಬಸವಣ್ಣನ ಕಂಡೆನು, ಬಸವಣ್ಣನಲ್ಲಿ ಜಂಗಮಲಿಂಗವ ಕಂಡೆನು. ಪ್ರಸಾದದಲ್ಲಿ ಬಸವಣ್ಣನ ಕಂಡೆನು, ಬಸವಣ್ಣನಲ್ಲಿ ಪ್ರಸಾದವ ಕಂಡೆನು. ಈ ಚತು ರ್ವಿಧದಲ್ಲಿ ಬಸವಣ್ಣನ ಕಂಡೆನು, ಬಸವಣ್ಣನಲ್ಲಿ ಚತುರ್ವಿಧವ ಕಂಡೆನು. ಇಂತಹ ಮಹಾಮಹಿಮರುಂಟೆ? ಶಿವ ಶಿವಾ ಮಹಾದೇವಾ, ಇಂತಹ ಸದ್ಭಕ್ತರುಂಟೆ? ಇದು ಕಾರಣ ಶ್ರೀ ಗುರುಲಿಂಗವೂ ಬಸವಣ್ಣನೇ, ಶಿವ ಲಿಂಗವೂ ಬಸವಣ್ಣನೇ, ಜಂಗಮಲಿಂಗವೂ ಬಸವಣ್ಣನೇ, ಪ್ರಸಾದ ಲಿಂಗವೂ ಬಸವಣ್ಣನೇ, ಇಷ್ಟಲಿಂಗವೂ ಬಸವಣ್ಣನೇ, ಪ್ರಾಣಲಿಂಗವೂ ಬಸವಣ್ಣನೇ, ಭಾವಲಿಂಗವೂ ಬಸವಣ್ಣನೇ, ಆಚಾರಲಿಂಗವೂ ಬಸವಣ್ಣನೇ, ಮಹಾಲಿಂಗವೂ ಎನಗೆ ಬಸವಣ್ಣನಯ್ಯ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ.''

ಮತ್ತೊಂದು ವಚನದಲ್ಲಿ—

"ಶಿವ ಶಿವ ಬಸವಣ್ಣನೇ ಗುರುತತ್ತ್ವವುಳ್ಳ ಮಹಾವಸ್ತುವಾಗಿ ಶ್ರೀ ಗುರುಲಿಂಗವೂ ಬಸವಣ್ಣನೇ, ಶಿವಸುಖಸಂಪನ್ನನಾಗಿ ಶಿವಲಿಂಗವೂ ಬಸವಣ್ಣನೇ, ಜಂಗಮ ಪ್ರಾಣಿಯಾಗಿ ಜಂಗಮಲಿಂಗವೂ ಬಸವಣ್ಣನೇ. ಪ್ರಸಾದ ಗ್ರಾಹಕನಾಗಿ ಪ್ರಸಾದಲಿಂಗವೂ ಬಸವಣ್ಣನೇ, ಭಾವಶುದ್ಧವುಳ್ಳ ಮಹಾನುಭಾವಿಯಾಗಿ ಭಾವಲಿಂಗವೂ ಬಸವಣ್ಣನೇ. ಪಂಚಾಚಾರ ನಿಯತಾತ್ಮನಾಗಿ ಆಚಾರಲಿಂಗವೂ ಬಸವಣ್ಣನೇ, ಗುರುಲಿಂಗ ಜಂಗಮಕ್ಕೆ ಎನಗೆ ಇಷ್ಟವಾಗಿ ಇಷ್ಟಲಿಂಗವೂ ಬಸವಣ್ಣನೇ, ಇಂತೀ ಚತುರ್ವಿಧ ಪ್ರಾಣವಾಗಿ ಪ್ರಾಣಲಿಂಗವೂ ಬಸವಣ್ಣನೇ, ಮಹಾಮಹಿಮನೂ ಬಸವಣ್ಣನೇ, ಮಹಾವಸ್ತುವ ಗರ್ಭೀಕರಿಸಿಕೊಂಡಿಪ್ಪಾತನೂ ಬಸವಣ್ಣನೇ, ಮಹಾಸತ್ಯನೂ ಬಸವಣ್ಣನೇ, ಮಹಾನಿತ್ಯನೂ ಬಸವಣ್ಣನೇ, ಮಹಾಶಾಂತನೂ ಬಸವಣ್ಣನೇ, ಮಹಾಸುಖಿಯೂ ಬಸವಣ್ಣನೇ, ಮಹಾಪರಿಣಾಮಿಯೂ ಬಸವಣ್ಣನೇ, ಮಹಾಲಿಂಗವೂ ಬಸವಣ್ಣನೇ, ಇಂತೀ ನವವಿಧಲಿಂಗವೂ ಬಸವಣ್ಣನೇ, ಇಂತಿವನೆಲ್ಲವನೊಳಕೊಂಡು ಎನ್ನ ಕರಸ್ಥಲಕ್ಕೆ ಬಂದು ಎನಗೆ ಪ್ರಸಾದವನಿಕ್ಕಿ ಸಲಹಿದನಯ್ಯ ಬಸವಣ್ಣನು. ಇದು ಕಾರಣ ಅನವರತ ನಾನು ಬಸವಾ ಬಸವಾ ಬಸವಯ್ಯ, ಬಸವಗುರುವೇ, ಬಸವಲಿಂಗವೇ, ಬಸವತಂದೆಯೇ, ಬಸವಪ್ರಭುವೇ, ನಮೋ ನಮೋ ಎನುತಿರ್ದೆನಯ್ಯ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ."

## ಶ್ರೀ ಅಕ್ಕನಾಗಾಯಿಯವರು

ಇವರು ಬಸವಣ್ಣನವರ ಅಕ್ಕಂದಿರು. ಶ್ರೀ ಬಸವಣ್ಣನವರು ಕಲ್ಯಾಣಪಟ್ಟಣಕ್ಕೆ ಹೋಗುವಾಗ್ಗೆ ಕೂಡಲಸಂಗಮದಿಂದ ಅಕ್ಕನಾಗಾಯಿಯವರು ಅವರ ಕೂಡ ಕಲ್ಯಾಣಕ್ಕೆ ಹೋದರು. ಶ್ರೀ ಚನ್ನಬಸವಣ್ಣನವರ ತಾಯಂದಿರು. ಇವರು ಆಗಿನ ಕಾಲದಲ್ಲಿಯ ಶಿವಶರಣೆಯರಲ್ಲಿ ಬಹು ಪ್ರಸಿದ್ಧರು. ಶ್ರೀ ಬಸವಣ್ಣನವರು ಲಿಂಗೈಕ್ಯರಾದ ಸುದ್ದಿಯನ್ನು ಕೇಳಿ,—

"ಎನ್ನ ಕುಲಸೂತಕವಳಿದ ಬಸವಣ್ಣ, ಎನ್ನ ಛಲಸೂತಕವಳಿದ ಬಸವಣ್ಣ, ಎನ್ನ ತನುಸೂತಕವಳಿದ ಬಸವಣ್ಣ, ಎನ್ನ ಮನಸೂತಕವಳಿದ ಬಸವಣ್ಣ, ಎನ್ನ ಪ್ರಾಣಸೂತಕವ ಕಳೆದ ಬಸವಣ್ಣ, ಎನ್ನ ಭಾವಸೂತಕವ ಕಳೆದ ಬಸವಣ್ಣ, ಎನ್ನ ಅರಿವು ಮರಹಿನ ಸಂದ ಬಿಡಿಸಿದ ಬಸವಣ್ಣ, ಎನ್ನ ತನ್ನಲ್ಲಿ ಇಂಬಿಟ್ಟುಕೊಂಡ ಬಸವಣ್ಣ, ತನ್ನ ಎನ್ನಲ್ಲಿ ಇಂಬಿಟ್ಟುಕೊಂಡ ಬಸವಣ್ಣ, ನಿಜ ನಿರ್ವಲಯ ಸಮಾಧಿಯ ನಿಜ ನಿವಾಸದ ಬಾಗಿಲ ತೋರಿದ ಬಸವಣ್ಣ, ಪ್ರಿಯ ಕೂಡಲ ಚನ್ನಸಂಗಯ್ಯನ ಹೃದಯ ಕಮಲದಲ್ಲಿ ಸಮವಾಗಿರಿಸಿದ ಎನ್ನ ತಂದೆ ಸಂಗಯ್ಯನ ಹೃದಯಕಮಲದಲ್ಲಿ ಸಮವಾಗಿರಿಸಿದ ಎನ್ನ ತಂದೆ ಸಂಗನ ಬಸವಣ್ಣನು."

ಅವರು ಹೀಗೆಯೇ ಪ್ರಳಾಪಿಸುತ್ತ—

"ಭಕ್ತಿಯತವನಿಧಿಯೆ, ಮುಕ್ತಿಯ ಮೂರುತಿಯೇ, ಲಿಂಗಜಂಗಮದ ಚೈತನ್ಯವೇ ನಿಮ್ಮನಗಲಿ ಎಂತು ಸೈರಿಸುವೆನು. ಎಲೆ ಅಯ್ಯ ಪರಮ ಗುರುವೆ, ಆಹಾ ಎನ್ನ ಅಂತರಂಗದ ಜ್ಯೋತಿಯೇ, ನಿಮ್ಮ ಒಕ್ಕಶೇಷ ಪ್ರಸಾದವನಿಕ್ಕಿ ಎನ್ನ ಪಾವನಮಾಡಿ ಉಳುಹಿದೆಯಯ್ಯ ಲಿಂಗವೇ ಎನಗಿನ್ನಾರು ಹೇಳಯ್ಯ ನೀವಲ್ಲದೆ ಬಸವಣ್ಣಪ್ರಿಯ ಚನ್ನಸಂಗಯ್ಯ ನೀವಲಿದರೆ ಎನ್ನ ಪ್ರಾಣ ನಿಮ್ಮೊಳಗೆ ಅಗಲುಬಲ್ಲುದೆ."

ಮತ್ತು

"ಬಸವಣ್ಣ ನೀವು ಮರ್ತ್ಯಕ್ಕೆ ಬಂದು ನಿಂದರೆ ಭಕ್ತಿಯ ಬೆಳವಿಗೆ ದೆಶೆದೆಶೆಗೆಲ್ಲ ಪಸರಿಸಿತ್ತೈಯ್ಯ, ಸ್ವರ್ಗ ಮರ್ತ್ಯ ಪಾತಾಳದೊಳಗೆಲ್ಲ ನಿಮ್ಮ ಭಕ್ತಿಯ ಬೆಳುವಗೆಯ ಘನವನಾರು ಬಲ್ಲರು? ಅಣ್ಣ ಶಶಿಧರನಟ್ಟಿದ ಮಣಿಹವು ಪೂರೈಸಿತ್ತೆಂದು ನೀವು ಲಿಂಗೈಕ್ಯರಾದರೆ ನಿಮ್ಮೊಡನೆ ಭಕ್ತಿ ಹೋಯಿತ್ತಯ್ಯ, ನಿಮ್ಮೊಡನೆ ಸದಾಚಾರ ಹೋಯಿತ್ತಯ್ಯ, ನಿಮ್ಮೊಡನೆ ಅಸಂಖ್ಯಾತರು ಹೋದರು. ಅಣ್ಣ ಮರ್ತ್ಯಲೋಕದ ಮಹಾಮನೆಯು ಶೂನ್ಯವಾಯಿತ್ತು. ಅಯ್ಯ ಬಸವಣ್ಣ ಎನ್ನನೊಯ್ಯದೇ ಹೋದೆಯಲ್ಲ ಪಂಚಪರುಷ ಮೂರುತಿ ಬಸವಣ್ಣ ಬಸವಣ್ಣಪ್ರಿಯ ಚನ್ನಸಂಗಯ್ಯಂಗೆ ಪ್ರಾಣಲಿಂಗವಾಗಿ ಹೋದೆಯಲ್ಲ ಸಂಗನ ಬಸವಣ್ಣ."

## ಶ್ರೀ ಗಣದಾಸಿ ವೀರಣ್ಣನವರು

ಇವರು ಬಸವೇಶ್ವರ ದೇವರ ಸಮಕಾಲದವರು. ವಚನಗಳನ್ನು ಬರೆದಿರುತ್ತಾರೆ.

"ಬಸವನೀಲಲೋಚನೆ ಇಬ್ಬರ ನಾಮಕೂಡಲು ಎಂಟಕ್ಷರಗಳಾದುವು. ಆ ಎಂಟಕ್ಷರಗಳೇ ಮಾಯಾಖ್ಯ ಪಂಚಾಕ್ಷರವಾದವು. ಮಾಯಾಖ್ಯ ಪಂಚಾಕ್ಷರ ಎಂತೆಂದೊಡೆ ಓಂ ಹ್ರಾಂ ಹ್ರೀಂ ನಮಃ ಶಿವಾಯ ಬಕಾರಂ ಗುರು ರೂಪಂಚ, ಸಕಾರಂ ಲಿಂಗಮೇವಚ, ವಕಾರಂ ಪರಮಖ್ಯಾತಂ। ತ್ರಿವಿಧಂ ತತ್ವ ನಿರ್ಣಯಂ। ನೀಲಲೋಚನೆ ವಸ್ತುನಾಮಾಕ್ಷರ ಪಂಚಕಂ। ಸ್ತ್ರೋತ್ರವೇತ್ತಿತ್ರಿಸಂಧ್ಯಾಂಚ ಭಕ್ತಸ್ಸರ್ವಕಾಮಮೋಕ್ಷದಂ ಎಂದುದಾಗಿ ಈ ಎಂಟಕ್ಷರವೇ ಎನ್ನ ಅಷ್ಟದಳ ಕಮಲದೊಳಗೆ ಇಷ್ಟಲಿಂಗವಾಗಿ ನಿಂದ ನಿಲವ ತೋರಿದಾತ ಕೂಡಲಸಂಗಮದೇವಾ."

ಮತ್ತು

"ಎನ್ನ ಪಶ್ಚಿಮದಲ್ಲಿ ನಿರಂಜನ ಪ್ರಣಮವಾಗಿ ನಿಂದಾತ ನಮ್ಮ ಬಸವಣ್ಣ, ಎನ್ನ ಶಿಖೆಯಲ್ಲಿ ಬಸವಾಕ್ಷರ ತ್ರಯವಾಗಿ ನಿಂದಾತ ನಮ್ಮ ಬಸವಣ್ಣ, ಎನ್ನ ಬ್ರಹ್ಮರಂಧ್ರದಲ್ಲಿ ಅ-ಉ-ಮ ಅಕ್ಷರತ್ರಯವಾಗಿ ಪ್ರಸಾದ ಪಂಚಾಕ್ಷರಿಯಾಗಿ ನಿಂದಾತ ನಮ್ಮ ಬಸವಣ್ಣ, ಎನ ಆಜ್ಞೆಯಲ್ಲಿ ಓಂಕಾರವಾಗಿ ನಿಂದಾತ ನಮ್ಮ ಬಸವಣ್ಣ, ಎನ್ನ ವಿಶುದ್ಧಿಯಲ್ಲಿ ಯಕಾರವಾಗಿ ನಿಂದಾತ ನಮ್ಮ ಬಸವಣ್ಣ, ಎನ್ನ ಅನಾಹತದಲ್ಲಿ ವಕಾರವಾಗಿ ನಿಂದಾತ

ನಮ್ಮ ಬಸವಣ್ಣ, ಎನ್ನ ಮಣಿಪೂರಕದಲ್ಲಿ ಶಿಕಾರವಾಗಿ ನಿಂದಾತ ನಮ್ಮ ಬಸವಣ್ಣ, ಎನ್ನ ಸ್ವಾಧಿಷ್ಠಾನದಲ್ಲಿ ಮಕಾರವಾಗಿ ನಿಂದಾತ ನಮ್ಮ ಬಸವಣ್ಣ, ಎನ್ನ ಆಧಾರದಲ್ಲಿ ನಕಾರವಾಗಿ ನಿಂದಾತ ನಮ್ಮ ಬಸವಣ್ಣ, ಮತ್ತೆ ಮಸ್ತಕದಲ್ಲಿ ಹಕಾರವಾಗಿ ನಿಂದಾತ ನಮ್ಮ ಬಸವಣ್ಣ, ಎನ್ನ ಬಲದ ಬದಿಯಲ್ಲಿ ಓಂಕಾರವಾಗಿ ನಿಂದಾತ ನಮ್ಮ ಬಸವಣ್ಣ, ಎನ್ನ ಎಡದ ಬದಿಯಲ್ಲಿ ಅಕಾರವಾಗಿ ನಿಂದಾತ ನಮ್ಮ ಬಸವಣ್ಣ, ಎನ್ನ ಹೃದಯದಲ್ಲಿ ಉಕಾರವಾಗಿ ನಿಂದಾತ ನಮ್ಮ ಬಸವಣ್ಣ, ಸಾಕಾರಂ ವಾಮಭಾಗಂಚ। ಉಕಾರಂ ಪೂರ್ವಮೇವಚ । ಮಕಾರಂ ಪಶ್ಚಿಮಶ್ಚೈವ । ಓಂಕಾರಂ ದಕ್ಷಿಣಸ್ತಥಾ । ಹಕಾರಂ ಊರ್ಧ್ವಭಾಗಂಚ । ಪಂಚಪ್ರಣವ ಪ್ರಕೀರ್ತಿತಃ। ಎಂದುದಾಗಿ ಎನ್ನ ಲಲಾಟದಲ್ಲಿ ಓಂಕಾರವಾದಾತ ನಮ್ಮ ಬಸವಣ್ಣ, ಎನ್ನ ಬಲಭುಜದಲ್ಲಿ ನಕಾರವಾಗಿ ನಿಂದಾತ ನಮ್ಮ ಬಸವಣ್ಣ, ಎನ್ನ ಎಡಭುಜದಲ್ಲಿ ಮಕಾರವಾಗಿ ನಿಂದಾತ ನಮ್ಮ ಬಸವಣ್ಣ, ಎನ್ನ ನಾಭಿಯಲ್ಲಿ ಶಿಕಾರವಾಗಿ ನಿಂದಾತ ನಮ್ಮ ಬಸವಣ್ಣ, ಎನ್ನ ಬಲದೊಡೆಯಲ್ಲಿ ವಕಾರವಾಗಿ ನಿಂದಾತ ನಮ್ಮ ಬಸವಣ್ಣ, ಎನ್ನ ಎಡದೊಡೆಯಲ್ಲಿ ಯಕಾರವಾಗಿ ನಿಂದಾತ ನಮ್ಮ ಬಸವಣ್ಣ, 'ಓಂಕಾರಂ ವದನಂ ದೇವಿ। ನಮಾಕ್ಷರಂ ಭುಜದ್ವಯಂ। ಶಿಕಾರಂ ದೇಹಮಧ್ಯಸ್ತು ವಯಕಾರಂ ಪಾದದ್ವಯಂ॥' ಎಂದುದಾಗಿ ಎನ್ನ ಪಂಚಭೂತಾತ್ಮದಲ್ಲಿ ಓಂಕಾರವಾಗಿ ನಿಂದಾತ ಬಸವಣ್ಣ, ಎನ್ನ ದಶವಿಧೇಂದ್ರಿಯಗಳಲ್ಲಿ ನಕಾರವಾಗಿ ನಿಂದಾತ ಬಸವಣ್ಣನು, ಎನ್ನ ಮನಪಂಚಕದಲ್ಲಿ ಮಕಾರವಾಗಿ ನಿಂದಾತ ಬಸವಣ್ಣ, ಎನ್ನ ಪ್ರಾಣದಲ್ಲಿ ಶಿಕಾರವಾಗಿ ನಿಂದಾತ ಬಸವಣ್ಣ, ಎನ್ನ ದಶವಾಯುಗಳಲ್ಲಿ ವಕಾರವಾಗಿ ನಿಂದಾತ ಬಸವಣ್ಣ, ಎನ್ನ ತ್ರಿಗುಣದಲ್ಲಿ ವಯಕಾರವಾಗಿ ನಿಂದಾತ ಬಸವಣ್ಣ, 'ಓಂಕಾರಂ ಪಂಚಭೂತಾತ್ಮಕಂ। ನಕಾರಂ ದಶಇಂದ್ರಿಯಂ। ಮಕಾರಂ ಮನಪಂಚಕಂ। ಶಿಕಾರಂ ಪ್ರಾಣನಾಯಕಂ। ವಕಾರಂ ದಶವಾಯೂನಾಂ। ಯಕಾರಂ ತ್ರಿಗುಣಂ ಭವೇತ್॥' ಎಂದುದಾಗಿ ಶಿವನ ಆರು ಮುಖಗಳಲ್ಲಿ ಆರು ಪ್ರಣಮಂಗಳು ಪುಟ್ಟಿದವು. ಈ ಆರು ಪ್ರಣಮಂಗಳನರಿಯದೆ ಪೂಜೆಯಮಾಡಿದೊಡೆ ಆ ಪೂಜೆ ನಿಷ್ಫಲ. 'ಷಡಕ್ಷರಂ ಸಮಾಖ್ಯಾತಂ। ಷಡಾನನ ಸಮನ್ವಿತಂ। ಷಡ್ಭೇದಂ ಯೋ ನ ಜಾನಾತಿ ಪೂಜಾ ನಿಷ್ಫಲಂ ಭವೇತ್॥' ಎಂದುದಾಗಿ ತನ್ನ ಸರ್ವಾಂಗದಲ್ಲಿ ಸರ್ವಮಂತ್ರನಾಗಿ ನಿಂದಾತ ನಮ್ಮ ಬಸವಣ್ಣನೆಂದು ಎನ್ನೊಳಗೆ ತೋರಿದಾತ ನಮ್ಮ ಶಾಂತ ಕೂಡಲಸಂಗಮದೇವಾ ॥ ೫ ॥"

## ಶ್ರೀ ಶೀಲವಂತಯ್ಯನವರು

ಇವರು ಶ್ರೀ ಬಸವಣ್ಣನವರ ಸಮಕಾಲದವರು. ಒಳ್ಳೇ ಶಿವಾನುಭವಿಗಳು. ವಚನಗಳನ್ನೂ, ತ್ರಿವಿಧಿಯನ್ನೂ ಬರೆದಿರುತ್ತಾರೆ. ತಮ್ಮ ತ್ರಿವಿಧಿಯ ಆತ್ಮಲಿಂಗ ಪ್ರಣವ ಸಂಯೋಗಸ್ಥಲದಲ್ಲಿ ಬಸವರಾಜದೇವರ ವಿಷಯದಲ್ಲಿ—

"ವೃತ್ತಗೋಳಕ ಗೋಮುಖ ನಿತ್ಯ ಬಸವಾಕ್ಷರವು । ಮತ್ತೆ ಗುರು ಲಿಂಗ ಚರ ತ್ರಿವಿಧ ಬಸವನ ಹಸ್ತದಲ್ಲಿ ಕಂಡು ಸುಖಿಯಾದೆ ॥ ಆವಾತನ ಮುಖದಲ್ಲಿ ತೀವಿ ಬಸವಾಕ್ಷರವು ಸಾವಧಾನದೊಳು ವಚಿಸುತ್ತಿರಲದುವೆ ಗುರುದೇವ ನಿಹತಾಣವಿದನರಿ । ಬಸವನ ನೆನೆ ಮನವೆ ಬಸವಾ ಎನು ನಾಲಗೆಯೆ । ಬಸವನ ಪದವ ಪೂಜೆ ಮಾಡೈ ಕರವೆ. ಬಸವ ಗುರುಲಿಂಗ ಚರವೆಂದು ॥ ನಿತ್ಯ ನಿಷ್ಕಲದಿಂದ ಚಿತ್ತು ಬಸವಾಕ್ಷರವು. ಮತ್ತೆ ಚಿತ್ ಪ್ರಣವ ಪರಶಕ್ತಿ ತ್ರೈಮಾತ್ರೆವೆತ್ತಾದಿ ಪ್ರಣವ ಗುರುಲಿಂಗ ॥ ಮೂರು ಮಾತ್ರೆಯೆ ಅಂಗ, ಆರು ತನುಗಳೆ ಲಿಂಗ । ಮೂರಾತ್ಮ ಬಸವ ಜ್ಞಾನ ಶೂನ್ಯದ ನಿಜವ ತೋರೆ ಸಾಕಾರ ಗುರುಲಿಂಗ ॥"

## ಶ್ರೀ ಆಯದಕ್ಕಿ ಮಾರಯ್ಯನವರು

ಇವರು ಬಸವಣ್ಣನವರ ಸಮಕಾಲದ ಶರಣರು. ಶರಣರ ಅಂಗಳಗಳಲ್ಲಿ ಅಕ್ಕಿಯನ್ನು ಆಯ್ದುಕೊಂಡು ಬಂದು ನಿತ್ಯದಲ್ಲಿಯೂ ಗುರುಲಿಂಗ ಜಂಗಮರಿಗೆ ತೃಪ್ತಿಯನ್ನು ಪಡಿಸುತ್ತಿದ್ದರು. ಇವರು ತಮ್ಮ ಕಾಯಕದಿಂದ ಸುಪ್ರಸಿದ್ಧರು. ವಚನಗಳನ್ನು ಬರೆದಿರುತ್ತಾರೆ. ಒಂದು ಸಂದರ್ಭದಲ್ಲಿ ಬಸವಣ್ಣನವರು "ಆಯದಕ್ಕಿ ಮಾರಯ್ಯನ ಮನೆಯ ಮಗ ನಾನು" ಎಂದಿರುವರು.

"ಹಮ್ಮು ಬಿಮ್ಮುಗಳಿದ ಅನುವರಿತ ಶಿವ ನೀನು, ಎನ್ನ ಕರಸ್ಥಲದ ಕಳೆ ನೀನು, ಎನ್ನ ಮನೋಮಧ್ಯದ ಸ್ವಯಂ ಜ್ಯೋತಿ ನೀನು, ಅಮಲೇಶ್ವರಲಿಂಗದ ಅನುವಿನ ಕಳೆ ನೀನು ಸಂಗನ ಬಸವಣ್ಣ."

"ಭಕ್ತರ ಭಾವದಲ್ಲಿ ಸುಳಿವ ಸುಳುಹು, ವಿರಕ್ತರ ಜ್ಞಾನದಲ್ಲಿ ಹೊಳೆವ ಕಳೆಯು ನೀನಯ್ಯ. ಸೂರ್ಯನ ಬೆಳಗಿನೊಳಗೆ ಸಚರಾಚರ ಪ್ರಾಣಿಗಳು ಸುಳಿವಂತೆ ನಮ್ಮ ಕಟ್ಟಿದ ನೇಮನಿಷ್ಠೆ ನೀನೆ ಅಯ್ಯ. ಅಮಲೇಶ್ವರ ಲಿಂಗದ ಒಡಲು ಸಂಗನ ಬಸವಣ್ಣನೆಂಬುದನು ಮಡಿವಾಳ ಮಾಚಿತಂದೆಗಳೇ ಬಲ್ಲರು ಕಾಣಾ ಸಂಗನ ಬಸವಣ್ಣ."

"ಮನದಲ್ಲಿ ಹುಟ್ಟಿದ ಅರಿಹು ಮಾಡುವ ಮಾಟದಲ್ಲಿ ಕಾಣಬಹುದು ಶರಣರ ಸಂಗಕ್ಕೆಳಸಿದ ಚಿತ್ತವ ಅನುಭಾವದಲ್ಲಿ ಕಾಣಬಹುದು ಒಳಹೊರಗೆ ತೆರಹಿಲ್ಲದ ಕೂಟ ನಿನ್ನದು. ಅಮಲೇಶ್ವರ ಲಿಂಗದಲ್ಲಿ ಸಂಗನ ಬಸವಣ್ಣ ನಿಮ್ಮ ಪಾದಕ್ಕೆ ನಮೋ ನಮೋ ಎಂಬೆನು."

"ಅಮೃತ ಸವಿ ಸ್ವಾದಿಸುವರಿಗಲ್ಲದೆ ಅಮೃತ ತನ್ನ ತಾ ಸ್ವಾದಿಸಿದ ಪರಿಯಂತೆ ನಿತ್ಯ ತೃಪ್ತಂಗೆ ಆಪ್ಯಾಯನ ಉಂಟೆ? ಏಳುನೂರೆಪ್ಪತ್ತು ಅಮರಗಣಂಗಳು ಕಟ್ಟಳೆಯ ನೇಮದ ಕಟ್ಟು ನಿನ್ನದು. ನಿನಗೆ ಭಾವ ನಿರ್ಭಾವವೆಂಬುದುಂಟೆ? ಅಮಲೇಶ್ವರ ಲಿಂಗದಲ್ಲಿ ಸಂಗನ ಬಸವಣ್ಣ ನಿಮ್ಮ ಪಾದಕ್ಕೆ ನಮೋ ನಮೋ ಎಂಬೆನು."

## ಶ್ರೀ ನೂಲಿಯ ಚಂದಯ್ಯನವರು

ಇವರು ಬಸವಣ್ಣನವರ ಸಮಕಾಲದವರು. ವಚನಗಳನ್ನು ಬರೆದಿರುತ್ತಾರೆ ಲಿಂಗದಲ್ಲಿ ಒಳ್ಳೇ ನಿಷ್ಠಾವಂತರಾಗಿ ಕಾಯಕವನ್ನು ಮಾಡಿದ ಸುಪ್ರಸಿದ್ಧ ಶಿವಶರಣರಲ್ಲಿ ಇವರೊಬ್ಬರಾಗಿರುತ್ತಾರೆ. ಇವರು ತಮ್ಮದೊಂದು ವಚನದಲ್ಲಿ—

"ಎನ್ನ ಸತ್ಕ್ರಿಯೆ ಬಸವಣ್ಣನು, ಎನ್ನ ಸುಜ್ಞಾನವೇ ಚನ್ನಬಸವಣ್ಣನು, ಈ ಎರಡರ ಏಕಭಾವದ ಪ್ರಭೆಯೇ ನೀವು, ನಿಮ್ಮೆಲ್ಲರ ನಿಷ್ಠೆಯ ನಿಜವೆ ಮಡಿವಾಳಯ್ಯನು, ಇಂತೀ ಚತುರ್ವಿಧ ಎನಗೆ ಬೇಕಾದ ಕಾರಣ ಸಂಗನ ಬಸವಣ್ಣ ಪ್ರಿಯ ಚಂದೇಶ್ವರ ಲಿಂಗದಲ್ಲಿ ಇಷ್ಟಲಿಂಗದ ನಿಜವೆ ದಾಸೋಹವೆಂಬುದ ಚನ್ನಬಸವಣ್ಣನಿಂದ ತಿಳಿಹಿಕೊಡಾ ಪ್ರಭುವೇ."

## ಶ್ರೀ ನೀಲಲೋಚನೆಯುವರು

ಇವರು ಬಸವಣ್ಣನವರ ಪತ್ನಿಯುವರು. ಬಸವಣ್ಣನವರು ಲಿಂಗೈಕ್ಯರಾಗುವ ಕಾಲಕ್ಕೆ ಇವರನ್ನು ಕರೆಕಳುಹಿಸಲು ಅವರು ಅದಕ್ಕೊಪ್ಪದೆ ತಮ್ಮ ಇಷ್ಟಲಿಂಗದಲ್ಲಿಯೇ ಬಯಲಾದ ಸುಪ್ರಸಿದ್ಧ ಶಿವಶರಣೆಯುರಾಗಿರುತ್ತಾರೆ. ಆ ಕಾಲಕ್ಕೆ ಬಸವಣ್ಣನವರು ಐಕ ವಾದ ಸುದ್ದಿಯನ್ನು ಕೇಳಿ—

"ಆದಿ ಅನಾದಿಯ ತತ್ವವ ಭೇದಿಸಿಕೊಟ್ಟ ಗುರುವೇ, ಅಪ್ರಮಾಣದ ಬೆಳಗ ಭೇದಿಸಿಕೊಟ್ಟ ಗುರುವೇ, ಅಕಾರ ಉಕಾರ ಮಕಾರ ತಾಳೆಯುನರುಹಿಕೊಟ್ಟ ಗುರುವೇ, ಇಷ್ಟಪ್ರಾಣ ಭಾವವಿದೆಂದು ತೋರಿದ ಗುರುವೇ, ನಿಜದರುಹನರುಹಿಕೊಟ್ಟ ಗುರುವೇ, ನಿರ್ಮಳ ಪ್ರಭೆಯ ತೋರಿದ ಗುರುವೇ, ನಿಜವನನುಭವಕ್ಕೆ ತಂದ ಗುರುವೇ, ನಿಮ್ಮ ಘನವ ಕಾಂಬ ಕಣ್ಣು ಕ್ರಮುಗೆಟ್ಟಿತ್ತು ಸಂಗಯ್ಯ, ಬಸವಯ್ಯನ ಪ್ರಭೆಯುಲ್ಲಿ ಅಡಗಿತ್ತು ಕಾಮಿತ ಸುಖವ ಕಂಗೊಳಿಸಿದ ಗುರುವೇ, ಕಲ್ಪಿತವ ನಷ್ಟಮಾಡಿದ ಗುರುವೇ, ಎತ್ತಲಡಗಿದೆಯಯ್ಯ? ಸುಖದುಃಖವನೊಂದು ರೂಪುಮಾಡಿದ ಗುರುವೇ, ಎತ್ತಲಡಗಿದೆಯಯ್ಯ? ಸಂಗಯ್ಯನ ಗುರು ಬಸವಾ."

## ಶ್ರೀ ಮರುಳದೇವರು

ಇವರು ಬಸವಣ್ಣನವರ ಸಮಕಾಲದವರು. ಇವರು (೧) ಮರುಳದೇವರ ಕಂದ, (೨) ಮರುಳದೇವರ ವಚನಗಳನ್ನು ಬರೆದಿರುತ್ತಾರೆ. ಇವರಿಗೆ ಮರುಳಶಂಕರದೇವ, ಉಜ್ಜನಿಯ ಮರುಳುದೇವ ಎಂಬ ಹೆಸರುಗಳೂ ಉಂಟು. ಕಾಳಿಂಗದೇಶದಿಂದ ಬಂದು ಕಲ್ಯಾಣದಲ್ಲಿ ೧೨ ವರ್ಷ ವಾಸವಾಗಿದ್ದರಂತೆ. (ಕಾಳಿಂಗದೇಶವೆಂದರೆ ಈಗಿನ ಬಳ್ಳಾರಿಯ ಪ್ರಾಂತ.)

ಮರುಳುದೇವರ ವಚನದಲ್ಲಿ ಬಸವಣ್ಣನವರನ್ನು ಕೆಳಗೆ ಬರೆದ ವಚನಗಳಿಂದ ಸ್ತುತಿಸಿರುತ್ತಾರೆ.

"ಅಯ್ಯಾ ಅಷ್ಟತನುಮೂರ್ತಿಗಳಿಲ್ಲದಲ್ಲಿಂವತ್ತತ್ತ ಅನಿರ್ವಾಚ್ಯವಾಗಿದ್ದಿರಯ್ಯ, ಅಯ್ಯಾ ನಿಮ್ಮ ವಿನೋದದಿಂದ ನೀವೇ ವಾಚಸ್ವರೂಪದಿಂದ

ಜಂಗಮವಾದಿರಿ ದೇವಾ । ನಿಮ್ಮ ಮಹಾತ್ಮೆಯ ನೀವೇ ಬಲ್ಲಿರಿ ನಿಮ್ಮ ಮುಖ ಐದರಿಂದ ಉದಿಸಿದ ಪಂಚಭೂತಾದಿ ಸಕಲ ತತ್ವಂಗಳೆ ಪದಾರ್ಥಗಳೆಂದು ನಿಮಗರ್ಪಿಸಲು ಪಂಚಾಕ್ಷರೀ ಪ್ರಾಣಾತ್ಮಕನಾಗಿ ಬಂದಾತ ಬಸವಣ್ಣ, ಪಾದತೀರ್ಥದಲ್ಲಿ ಬೆಳಸಬಿತ್ತಿ ಕ್ರಿಯದಿಂದಾದ ಬೆಳಸಿಬಂತನಾಗಿ ಗುರುವಿಂಗಿತ್ತ ಲಿಂಗಕ್ಕಿತ್ತ ಜಂಗಮಕ್ಕಿತ್ತಾತ ಬಸವಣ್ಣ, ಬಸವಣ್ಣ ನಿಂಥಾ ಕ್ರಿಯಾವಂತನೆಂದರಿತು ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತ ಮಲ್ಲಿಕಾರ್ಜುನದೇವಯ್ಯ ನಿಮ್ಮ ಶರಣ ಸಂಗನ ಬಸವಣ್ಣನ ಪ್ರಸಾದವ ಹಾಸಿಹೊದ್ದುಕೊಂಡಿರ್ದೆನಯ್ಯ ನಿಮ್ಮ ಧರ್ಮ ನಿಮ್ಮ ಧರ್ಮ."

ಮತ್ತೊಂದು ವಚನದಲ್ಲಿ—

"ಭಕ್ತಿಯ ಕುಳವನು ಬಸವಣ್ಣನೇ ಬಲ್ಲನು । ಪ್ರಸಾದದ ನೆಲೆಯನು ಬಸವಣ್ಣನೇ ಬಲ್ಲನು । ಬಸವಣ್ಣ ನಡೆದುದೇ ಮಾರ್ಗ । ಅಖಿಳ ಗಣಂಗಳಿಗೆ ಬಸವಣ್ಣ ನುಡಿದುದೇ ವೇದ । ಮಹಾಪುರುಷರಿಗೆ ನಾನನಾದಿಲಿಂಗವೆಂದರಿದೆನಾಗಿ ಬಸವಣ್ಣನ ನಾ ನೆನೆಯುತ್ತಿರ್ದೆನಯ್ಯಾ । ಬಸವಣ್ಣನ ಪಾದವಿಡಿದೆನಾಗಿ ಲಿಂಗವೇದಿಯಾದೆನು । ಬಸವಣ್ಣನ ಬಾಗಿಲ ಕಾಯ್ದೆನಾಗಿ ಪ್ರಸಾದ ಸಾಧ್ಯವಾಯಿತ್ತು । ಬಸವಣ್ಣನ ಕರುಣದಿಂದ ಪ್ರಭುದೇವರ ನಿಲವ ಕಂಡೆನು । ಬಸವಣ್ಣನ ಬೋಧೆಯಿಂದ ಜಂಗಮವೇ ಲಿಂಗವೆಂದರಿದೆನು । ಆ ಜಂಗಮ ಮುಖದಿಂದಲ್ಲದೆ ಲಿಂಗತೃಪ್ತಿಯಾಗದು । ಲಿಂಗತೃಪ್ತಿಯಾದಲ್ಲದೆ ನಿರ್ಮಲಾತ್ಮತೆಯಾಗದು । ನಿರ್ಮಲಾತ್ಮಂಗಲ್ಲದೆ ಪ್ರಸಾದ ಸಿದ್ಧಿಯಾಗದು । ಪ್ರಸಾದ ಸಿದ್ಧಿಯಾದಲ್ಲಡೆ ಭವಂ ನಾಸ್ತಿಯಾಗದು । ಇದು ಕಾರಣ ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತಮಲ್ಲಿಕಾರ್ಜುನಯ್ಯಾ ನಿಮ್ಮ ಶರಣ ಬಸವಣ್ಣನ ನಂಬಿ ನಾನು ಕೆಟ್ಟು ಬಟ್ಟಬಯಲಾಗಿ ಹೋದೆನಯ್ಯ ನಿಮ್ಮ ಧರ್ಮ ನಿಮ್ಮ ಧರ್ಮ."

ಇನ್ನೊಂದು ವಚನದಲ್ಲಿ—

"ಮಹಾಲಿಂಗಂ ತ್ರಯೋರ್ಲಿಂಗಂ ತ್ರಿವಿಧಂ ಷಡ್ವಿಧೋಮುಖಂ । ತ್ರಿವಿಧೇಕ ಮುಖೋರ್ಲಿಂಗಂ ಮಹಾಲಿಂಗಂ ತು ದರ್ಶನಮ್ ॥ ಇಂತೆಂದುದಾಗಿ—ಒಂದು ಮೂರ ಮಾಡಿಕೊಂಡನಯ್ಯಾ ನಮ್ಮ ಬಸವಣ್ಣನು, ಆ ಮೂರ ಆರ ಮಾಡಿಕೊಂಡನಯ್ಯಾ ನಮ್ಮ ಬಸವಣ್ಣನು, ಆ ಆರು ಮೂವತ್ತಾರು ಮಾಡಿಕೊಂಡನಯ್ಯಾ ನಮ್ಮ ಬಸವಣ್ಣನು, ಆ ಮೂರು ಒಂದು ಮಾಡಿಕೊಂಡನಯ್ಯಾ ನಮ್ಮ ಬಸವಣ್ಣನು, ಆ ಒಂದು ತಾನೇಯಾಗಿಪ್ಪನಯ್ಯಾ ನಮ್ಮ ಬಸವಣ್ಣನು, ಇಂತಪ್ಪ ಸರ್ವಾವಧಾನಿಯಯ್ಯಾ ನಮ್ಮ ಬಸವಣ್ಣನು, ಇಂತಪ್ಪ ಕಾರುಣ್ಯ ಪ್ರಸಾದಿಯಯ್ಯಾ ನಮ್ಮ ಬಸವಣ್ಣನು, ಇಂತಪ್ಪ ಸರ್ವಕರಣ ನಿರ್ಮುಕ್ತನಯ್ಯಾ ನಮ್ಮ ಬಸವಣ್ಣನು, ಇಂತಪ್ಪ ಸರ್ವಾಂಗ ಲಿಂಗಿಯಯ್ಯ ನಮ್ಮ ಬಸವಣ್ಣನು,

ಇಂತಪ್ಪ ಸರ್ವ ನಿರ್ವಾಣಿಯಯ್ಯಾ ನಮ್ಮ ಬಸವಣ್ಣನು, ಇಂತಪ್ಪ ಬಸವಣ್ಣನ ಮಹಿಮೆಯ ನೀವೇ ಬಲ್ಲಿರಿ, ಅಸಂಖ್ಯಾತ ಮಹಾಪುರುಷರು ಪ್ರಭುದೇವರು ಮುಖ್ಯವಾದ ನಿಲವಿನ ಶ್ರೀ ಚರಣಕ್ಕೆ ನಾನು ಶರಣಾರ್ಥಿ ಶರಣಾರ್ಥಿ ಶರಣಾರ್ಥಿಯೆಂದು ಶಬ್ದ ಮುಗ್ಧನಾಗಿ ಉರಿವುಂಡ ಕರ್ಪುರದಂತೆ ನಿಮ್ಮ ಶರಣವ ಬೆರೆಸಿದೆನು ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತ ಮಲ್ಲಿಕಾರ್ಜುನಯ್ಯ ನಿಮ್ಮ ಶರಣ ಬಸವಣ್ಣನ ಪ್ರಸಾದವ ಕೊಂಡು ನಾನು ಬಸವಣ್ಣನ ಮುಂದೆ ಬಯಲಾಗಿ ಹೋದೆನಯ್ಯಾ ನಿಮ್ಮ ಧರ್ಮ ನಿಮ್ಮ ಧರ್ಮ."

## ಶ್ರೀ ಹಾವಿನಹಾಳ ಕಲ್ಲಯ್ಯನವರು

ಇವರು ವಚನಗಳನ್ನು ಬರೆದಿರುತ್ತಾರೆ. ಇವರ ಕಾಲ ೧೧೫೦. ಕಲ್ಲಯ್ಯನವರು ವೀರಶೈವ ಶರಣರಲ್ಲಿ ಸುಪ್ರಸಿದ್ಧರು. ಇವರ ಹೆಸರು ಅನೇಕ ಕಡೆಗೆ ಬರುತ್ತದೆ. ಬಸವಣ್ಣನವರ ವಿಷಯಕ್ಕೆ—

"ತನು ಗುರುವಿಗಿತ್ತು ಮನ ಲಿಂಗಕ್ಕಿತ್ತು ಧನವ ಜಂಗಮಕ್ಕಿತ್ತು ಎನ್ನ ಬಸವರಾಜಯ್ಯ ಗುರುವಿನಲ್ಲಿ ಶುದ್ಧಲಿಂಗದಲ್ಲಿ ಸಿದ್ಧ ಜಂಗಮದಲ್ಲಿ ಪ್ರಸಿದ್ಧ ಪ್ರಸಾದಿಯಯ್ಯ ಎನ್ನ ಬಸವರಾಜಯ್ಯನು ಲಿಂಗದಲ್ಲಿ ದೀಕ್ಷೆ, ಶಿಕ್ಷೆ ಸ್ವಾನುಭವ ಆಯತ ಸ್ವಾಯತ ಸನ್ನಿಹಿತ ಎನ್ನ ಬಸವರಾಜಯ್ಯ ಮಹಾಲಿಂಗ ಕಲ್ಲೇಶ್ವರಾ ನಿಮ್ಮ ಶರಣ ಬಸವರಾಜಯ್ಯ."

## ಶ್ರೀ ಬಹುರೂಪಿ ಚೌಡಯ್ಯನವರು

ಇವರು ಬಸವಣ್ಣನವರ ಸಮಕಾಲದವರು. ವಚನಗಳನ್ನು ಬರೆದಿರುತ್ತಾರೆ. ಇವರ ಕಾಲ ೧೧೮೦.

"ಸಂಗಸಮನಿಸದಂದು ಲಿಂಗದಲ್ಲಿ ನಾನು ಉತ್ಪತ್ತಿಯಾಗದಂದು ಸಂಗಾ ಬಸವವೆಂಬ ಶಬ್ದವೆಲ್ಲಿಹದೊ ಸಂಗಾ ಬಸವಾ ಎಂಬ ಶಬ್ದವ ಲಿಂಗಿಗಳೆತ್ತ ಬಲ್ಲರು ರೇಕಣ್ಣಪ್ರಿಯ ನಾಗಿನಾಥ ಬಸವಣ್ಣನಿಂದ ಬದುಕಿದೆನು."

"ಶೂನ್ಯ ಸನ್ನಿಹಿತವಾದಲ್ಲಿ, ಶೂನ್ಯ ಪದಾರ್ಥವಾದಲ್ಲಿ, ಶೂನ್ಯ ಪ್ರಸಾದವಾದಲ್ಲಿ ಅದು ಬಸವಣ್ಣನ ಪ್ರಸಾದವೆಂದು । ಆನು ಬಸವಣ್ಣನ ಕೂಡ ಆಡುತ್ತಿದ್ದೆನು, ರೇಕಣ್ಣಪ್ರಿಯ ನಾಗಿನಾಥ ಬಸವಣ್ಣನಿಂದ ಬದುಕಿದೆನು."

ಮತ್ತೊಂದು ಕಡೆಗೆ—

"ಸರದೊಳಗೆ ಸರಗಟ್ಟಿ ಸರಹರಿದವ ನಾನಯ್ಯ, ಮಹದೊಳಗೆ ಮನೆಗಟ್ಟಿ ಮನೆ ಬೆಂದವ ನಾನಯ್ಯ, ಕಿಚ್ಚಿನೊಳಗೆ ಕಿಚ್ಚನೊಟ್ಟಿ ಕಾದವ ನಾನಯ್ಯ, ಆ ಕಿಚ್ಚಿನೊಳಗೆ ಬಿದ್ದು ಉರಿದವನಾನಯ್ಯ, ಬಸವಣ್ಣ ನೀನೆನ್ನ ಬಹುರೂಪಕ್ಕೆ ಸೂತ್ರಧಾರಿಯಾಗಿ ಹೋದನಾ ಬಸವಣ್ಣನಿಂದ ಕೆಟ್ಟೆ ಕಾಣಾ ರೇಕಣ್ಣಪ್ರಿಯ ನಾಗಿನಾಥ ಬಸವಣ್ಣನಿಂದ ಬದುಕಿತ್ತು ತ್ರೈಲೋಕ್ಯವೆಲ್ಲಾ."

## ಶ್ರೀ ಹರೀಶ್ವರದೇವರು

**ಈ**ತನು ವೀರಶೈವರಲ್ಲಿ ಆದಿಕವಿಯು. ಬಸವಣ್ಣನವರ ತರುವಾಯ ಕೆಲವು ದಿವಸಗಳಲ್ಲಿದ್ದನು. ಹರೀಶ್ವರನು ಸುಪ್ರಸಿದ್ಧ ಕವಿಯಾಗಿರುವನು. ವೀರಶೈವ ಕವಿಗಳೆಲ್ಲ ಈತನನ್ನು ಕೊಂಡಾಡಿರುತ್ತಾರೆ. ಗಿರಿಜಾ ಕಲ್ಯಾಣ, ಪಂಪಾಶತಕ, ರಕ್ಷಾಶತಕ, ಶಿವಾಕ್ಷರಮಾಲೆ, ೧೨೦ ರಗಳೆಗಳು ಮೊದಲಾದ ಗ್ರಂಥಗಳನ್ನು ಬರೆದಿರುತ್ತಾರೆ. ಬಸವರಾಜದೇವನ ರಗಳೆಯು ಭಕ್ತಿರಸಪ್ರಧಾನವಾಗಿಯೂ, ಓತಪ್ರೋತವಾಗಿಯೂ ಹರಿಯುತ್ತದೆ. ಇದರಲ್ಲಿ—

"ಬಸವನ ಪುಣ್ಯಕೀರ್ತಿಲತೆ ಬೇರ್ವರೆಯಿತ್ತುರಗೇಂದ್ರಲೋಕದೋಳ್ ।
ದೆಶೆಗಳನಗ್ಗಳಂ ಮುಸುಕಿಪರ್ವಿಗೆಯಾಯ್ತು ನರೇಂದ್ರಲೋಕದೋಳ್ ।
ಕುಸುಮಿತವಾಗಿ ಸೌರಭದಿಹೊಂಪುಳಿಯಾಯ್ತು ಮರೇಂದ್ರಲೋಕದೋಳ್ ।
ಪಸರಿಸಿ ಪೂರಿತಾನುಳ ಸುಧಾಫಲಮಾದುದು ರುದ್ರಲೋಕದೋಳ್ ॥

ಎಲೆ ಬಸವ, ಬಸವಣ್ಣ, ಬಸವಯ್ಯ, ಬಸವರಸ, ಬಸವರಾಜ, ಬಸವಿದೇವ, ಕೇಳಯ್ಯ ನಿಮ್ಮ ನೇಮವಿದಾಗುರ್ಣಂಟು, ಗುರುಲಿಂಗದೊಳೆರಡಿಲ್ಲದಿಪ್ಪೆ, ಶರಣರಂ ಸಂಗನೆಂದೆ ಕಾಣ್ಬೆ, ಬಂದ ಭಕ್ತರನತ್ಯಾದರಿಪೆ, ಬಪ್ಪ ಭಕ್ತರಂ ಹರುಷದೊಳಿದಿರ್ಗೊಂಬೆ, ಬೇಡಿದುದ ಶರಣರರ್ಗಿಲ್ಲೆನ್ನದೀವೆ, ಬೇಡಲೊಲ್ಲದವರ್ಗೆ ಮಿಗಿಲಾಗಿ ಆರಾಧಿಪೆ, ಜಾಗ್ರತ್ಸ್ವಪ್ನಸುಷುಪ್ತಿಯವಸ್ಥಾತ್ರಯಗಳೊಳು ಶರಣರಂ ಸಂಗನೆಂದಲ್ಲದೆ ಕಾಣೆ, ನಿಚ್ಚಶಿವರಾತ್ರಿಯನಚ್ಚರಿಯಿಂ ಮಾಳ್ಪೆ, ಜಂಗಮಪ್ರಾಣಿಯಾಗಿಪ್ಪೆ, ಶಿವಲಿಂಗಾರ್ಪಿತವಲ್ಲದುದನಾಘ್ರಾಣಿಸೆ, ನೋಡೆ, ನುಡಿಯೆ, ಮುಟ್ಟೆ, ಕೇಳೆ, ಶಿವಸಮಯಮನುದ್ಧರಿಸುವೆ, ಪರಸಮಯಮಂ ಸಂಹರಿಸುವೆ, ಲಿಂಗದಲ್ಲಿ ಕಠಿಣಮಂ ಕೇಳೆ, ಜಂಗಮದಲ್ಲಿ ಜಾತಿಯನರಸೆ, ಪ್ರಸಾದದಲ್ಲಿ ಅಪವಿತ್ರತೆಯಂನರಿಯೆ, ಪರಾಂಗನೆಯರ ಹೆತ್ತತಾಯ್ಗಳೆಂಬೆ, ಪರದ್ರವ್ಯಮಂ ಕಿಲ್ಬಿಷವೆಂದು ಮುಟ್ಟೆ, ನಡೆದು ತಪ್ಪೆ, ನುಡಿದು ಹುಸಿಯೆ, ಹಿಡಿದು ಬಿಡೆ, ಬಿಟ್ಟು ಹಿಂಗಲೀಯೆ, ಕೊಟ್ಟು ನೆನೆಯೆ, ನಟ್ಟು ಕೀಳೆ, ಮುಟ್ಟಿ ಪೆರಪಿಂಗೆ, ಕೂಡಿ ತಪ್ಪೆ, ನೋಡಿ ನಿರಾಕರಿಸೆ, ನೆನೆದು ಮರೆಯೆ, ಮನದೊಳೋವರಿಯಿಲ್ಲ, ಬುದ್ಧಿಯೊಳು ಪಿವಂಚನೆಯಿಲ್ಲ, ಅಹಂಕಾರದೊಳು ಗರ್ವವಿಲ್ಲ, ಚಿತ್ತದೊಳು ಹೊರೆಯಿಲ್ಲ, ಕಾಮವಿಲ್ಲ, ಕೋಪದ ಮಾತೇಕೆ, ಲೋಭದ ಗಾಳಿ ತೀಡದು, ಮೋಹಕೆ ತೆರಹಿಲ್ಲ, ಮದದ ಸೊಗಡು ಹೊದ್ದದು, ಮತ್ಸರಕ್ಕೆಂಬಿಲ್ಲ, ಬಸವರಾಜ ನಿಮ್ಮ ಗುಣಂಗಳಂ ಬಣ್ಣಿಸಳೆಮ್ಮಳವಲ್ಲ, ಈಶನ ಮೀಸಲಪ್ಪ ಭಕ್ತ, ನಿನಗೆಣೆಯಿಲ್ಲ, ಪಡಿಯಿಲ್ಲ, ಪಾಸಾಟಿ ಯಾವಂ, ಪಾಷಂಡಿ ಭೂಮಿಯೊಳು ಶಿವಭಕ್ತಿಯನಾರಂಭಿಸಿ, ಸಾಮರ್ಥ್ಯವಂ ಬಿತ್ತಿ, ಪ್ರತ್ಯಕ್ಷಗಳಂ ಬೆಳೆದು, ಗಣಪರ್ವಂಗಳಂ ಸುಫಲಂ ಮಾಡಲೆಂದು ಬಂದ ಕಾರಣಿಕ ಬಸವ ನಿಮ್ಮ ಭಕ್ತಿಯಿಂದೆಮ್ಮ ಭಕ್ತಿ ಬಣ್ಣವೇರಿತು."

ಎಂಟನೆಯ ಸ್ಥಲದ ಆರಂಭದಲ್ಲಿ—

ಬಸವನ ಮಾತೇ ಮಾತು ಬಸವಣ್ಣನ ಭಕ್ತಿಯ ಓಜೆಯೋಜೆ ಕೇಳ್ ।
ಬಸವನ ರೀತಿ ರೀತಿ ಬಸವಣ್ಣನ ಕಿಂಕರವೃತ್ತಿ ವೃತ್ತಿ ಮೇಣ್ ॥
ಬಸವನ ಬಟ್ಟೆ ಬಟ್ಟೆ ಬಸವಣ್ಣನ ಜಿಂಕದ ಭಾಷೆ ಭಾಷೆ ಹೋ ।
ಬಸವನ ನಿಷ್ಠೆ ನಿಷ್ಠೆ ಬಸವಣ್ಣನ ನೇಮವೆ ನೇಮ ಪುರ್ವಿಯೊಳ್ ॥ ೧ ॥

ಬಸವನ ಗೀತೆ ಗೀತೆ ಬಸವಣ್ಣನ ನಿರ್ಮಲರೂಪು ರೂಪು ಕೇಳ್ ।
ಬಸವನ ಗಾಡಿ ಗಾಡಿ ಬಸವಣ್ಣನ ನಿರ್ಮಲಕೀರ್ತಿ ಕೀರ್ತಿ ನೋಡ್ ॥
ಬಸವನ ಬುದ್ಧಿ ಬುದ್ಧಿ ಬಸವಣ್ಣನ ಪುಣ್ಯದ ಲೀಲೆ ಲೀಲೆ ಹೋ ।
ಬಸವನ ರಕ್ಷೆ ರಕ್ಷೆ ಬಸವಣ್ಣನ ಶಿಕ್ಷೆಯೆ ಶಿಕ್ಷೆ ಲೋಕದೊಳು ॥ ೨ ॥

ಬಸವನ ಪೆರ್ಮೆ ಪೆರ್ಮೆ ಬಸವಣ್ಣನ ನಚ್ಚಿನ ಕೂರ್ಮೆ ಕೂರ್ಮೆ ಕೇಳ್ ।
ಬಸವನ ಸೀಮೆ ಸೀಮೆ ಬಸವಣ್ಣನ ಶೀತಳ ಶಾಂತಿ ಶಾಂತಿ ನೋಡ್ ॥
ಬಸವನ ಜಾಣು ಜಾಣ್ ಬಸವಿದೇವನ ಭಾವದ ಕಾಣ್ಕೆ ಕಾಣ್ಕೆ ಹೋ ।
ಬಸವನ ಭಕ್ತಿ ಭಕ್ತಿ ಬಸವಣ್ಣನ ಯುಕ್ತಿಯೆ ಯುಕ್ತಿ ಲೋಕದೊಳ್ ॥ ೩ ॥

ಹರೀಶ್ವರ ಮಹಾಕವಿಯು ಬಸವಣ್ಣನವರ ಗುಣಾತಿಶಯಂಗಳನ್ನು ನಾನಾ ರೀತಿಯಿಂದ ಭಕ್ತಿರಸ ಪ್ರಪೂರಿತನಾಗಿ ಕೊಂಡಾಡಿರುವನು.

## ಶ್ರೀ ಪಾಲ್ಕುರಿಕೆಯ ಸೋಮನಾಥರು

ಇವರು ವೀರಶೈವ ಕವಿಗಳಲ್ಲಿ ಪ್ರಾಮುಖ್ಯರು. ಕನ್ನಡ, ಸಂಸ್ಕೃತ, ತೆಲುಗು, ತಮಿಳು, ಮರಾಠಿ ಮೊದಲಾದ ಭಾಷೆಗಳು ಅವರಿಗೆ ಬರುತ್ತಿದ್ದವಲ್ಲದೆ ಸಂಸ್ಕೃತ, ಕನ್ನಡ, ತೆಲುಗು ಭಾಷೆಗಳಲ್ಲಿ ಇವರಿಗೆ ಅಪಾರ ಪಾಂಡಿತ್ಯವಿದ್ದಂತೆ ಇವರು ಬರೆದ ತೆಲುಗು, ಕನ್ನಡ, ಸಂಸ್ಕೃತ ಗ್ರಂಥಗಳಿಂದ ತಿಳಿದುಬರುತ್ತದೆ. ತೆಲುಗು ಸಾಹಿತ್ಯದಲ್ಲಿ ಇವರಿಗೆ ಇಂದಿಗೂ ಅಗ್ರಸ್ಥಾನವಿರುತ್ತದೆ. ಅದನ್ನು ತೆಲುಗು ಕವಿಗಳ ಕಾಣಿಕೆಯಲ್ಲಿ ವಿಸ್ತಾರವಾಗಿ ಬರೆಯುತ್ತೇನೆ. ಇವರು ತೆಲುಗು ಬಸವಪುರಾಣವು, ಆರಾಧ್ಯಚಾರಿತ್ರ್ಯ, ಅನ್ಯವಾದ ಕೋಲಾಹಲ, ಬಸವಣ್ಣನ ಪಂಚಗದ್ಯ, ಸದ್ಗುರು ರಗಳೆ, ಚನ್ನಬಸವ ರಗಳೆ, ಶರಣು ಬಸವ ರಗಳೆ, ಸೋಮನಾಥ ಭಾಷ್ಯ, ಬಸವೇಶ್ವರ ಸಹಸ್ರನಾಮಾವಳಿ, ಪಂಚರತ್ನ ಮೊದಲಾದ ೨೧ ಗ್ರಂಥಗಳನ್ನು ಬರೆದಿರುವದು ತಿಳಿದುಬಂದಿದೆ. ಈ ಗ್ರಂಥಗಳಲ್ಲಿ ಬಸವಪುರಾಣ, ಆರಾಧ್ಯ ಚರಿತ್ರೆ, ಚತುರ್ವೇದ ಸಾರಸಂಗ್ರಹ ಮೊದಲಾದವುಗಳು ತೆಲುಗು ಭಾಷೆಯಲ್ಲಿಯೂ, ಅನ್ಯವಾದ ಕೋಲಾಹಲ, ಸೋಮನಾಥ ಭಾಷ್ಯ, ಬಸವಣ್ಣನ ಪಂಚಗದ್ಯ, ಗಂಗೋದಯ ಕಾವ್ಯ ಮೊದಲಾದವುಗಳು ಸಂಸ್ಕೃತದಲ್ಲಿಯೂ ಇರುತ್ತವೆ. ರಗಳೆಗಳೂ, ವಚನಗಳೂ, ಸಹಸ್ರನಾಮಾವಳಿ ಮೊದಲಾದ ಗ್ರಂಥಗಳು ಕನ್ನಡದಲ್ಲಿರುತ್ತವೆ. ಸದ್ಯಕ್ಕೆ ಸಿಗತಕ್ಕ ಅವರ ಗ್ರಂಥಗಳು ಕೆಳಗೆ ಬರೆದಂತಿರುತ್ತವೆ:—(೧) ಅನುಭವಸಾರ, (೨) ಸೋಮನಾಥಸ್ತವನ, (೩) ಪಂಚಪ್ರಕಾರ ಗದ್ಯ, (೪) ನಮಸ್ಕಾರ ಗದ್ಯ, (೫) ಅಕ್ಷರಾಂಕನ ಗದ್ಯ, (೬) ಬಸವೋದಾಹರಣ ಯುಗ್ಮ, (೭) ಬಸವ ರಗಡ, (೮) ಬಸವಪುರಾಣ ದ್ವಿಪದಿ, (೯) ಅಕ್ಷರಾಂಕ ಪದ್ಯ, (೧೦) ಚತುರ್ವೇದಸಾರ, (೧೧) ಸೋಮನಾಥ ಭಾಷ್ಯ, (೧೨) ವೃಷಾಧಿಪಶತಕ, (೧೩) ಪಂಡಿತಾರಾಧ್ಯ ಚರಿತ್ರೆ, (೧೪) ಚನ್ನಮಲ್ಲನ ಸೀಸಪದ್ಯಗಳು, ಸಿಗದೇ ಇರತಕ್ಕ ಗ್ರಂಥಗಳು—(೧೫) ಬಸವಾರಾಧ್ಯ ರಗಡ, (೧೬) ಬಸವಾಷ್ಟಕ, (೧೭) ತ್ರಿವಿಧ ಲಿಂಗಾಷ್ಟಕ, (೧೮) ಸದ್ಗುರು ರಗಡ, (೧೯) ಗಂಗೋತ್ಪತ್ತಿ ರಗಡ, (೨೦) ರುದ್ರಭಾಷ್ಯ, (೨೧) ಅಲ್ಲಮದೇವ ಪುರಾಣ ಇವೇ ಮೊದಲಾದವುಗಳಿರುತ್ತವೆ. ವೀರಶೈವ ಸಂಸ್ಕೃತಿಗೆ ಇವರಿಂದ ಆದಷ್ಟು ಸಹಾಯವು ಮೂರು ಭಾಷೆಗಳಲ್ಲಿಯೂ ಯಾವ ಕವಿಗಳಿಂದಲೂ ಆಗಿರುವದಿಲ್ಲ. ಇವರು ಪಂಡಿತರಿದ್ದಂತೆ ಆಚಾರನಿಷ್ಠರೂ, ಮಹಾಶಿವಯೋಗಿಗಳೂ

ಆಗಿದ್ದರಲ್ಲದೆ ೬೪ ಶೀಲಗಳನ್ನು ಸ್ವತಃ ಆಚರಿಸಿ ಉಳಿದವರಿಗೆ ಮೇಲ್ಪಂಕ್ತಿಯಾಗಿದ್ದರು. ಇವರು ಶ್ರೀ ಬಸವಣ್ಣನವರಲ್ಲಿ ಅತ್ಯಂತ ನಿಷ್ಠಾವಂತರಾಗಿದ್ದುದು ಅವರ ಗ್ರಂಥಗಳಿಂದಲೇ ವ್ಯಕ್ತವಾಗುತ್ತದೆ. ಇವರ ಹುಟ್ಟೂರು ಗೋದಾವರಿ ಜಿಲ್ಲೆಯಲ್ಲಿರುವ ಪಾಲ್ಕುರಿಕೆ. ಇವರು ಮಹಾ ಶಿವಭಕ್ತರಾದುದರಿಂದ ಅನೇಕ ಪಂಡಿತರ ಕೂಡ ಶಾಸ್ತ್ರಾರ್ಥವನ್ನು ಮಾಡಿ ಜಯಶಾಲಿಗಳಾದುದು ತಿಳಿದುಬರುತ್ತದೆ. ವೈಷ್ಣವನಾಥ ಚಕ್ರಪಾಣಿ ರಂಗನಾಥನನ್ನು ವಾದದಲ್ಲಿ ಸೋಲಿಸಿ ತನ್ನ ಮಗನಾದ ಚತುರ್ಮುಖ ಬಸವನಿಂದ ವೀರಶೈವ ದೀಕ್ಷೆಯನ್ನು ಕೊಡಿಸಿದ್ದುದು ಅನೇಕ ವೀರಶೈವ ಗ್ರಂಥಗಳಿಂದ ಗೊತ್ತಾಗುತ್ತದೆ. ಈ ಕವಿಯನ್ನು ಕೊಂಡಾಡದ ವೀರಶೈವ ಕವಿಗಳು ಕಡಿಮೆ ಎಂದು ಹೇಳಬಹುದು. ಇವರು ತಮ್ಮ ಹುಟ್ಟೂರನ್ನು ಕೆಲವು ಕಾರಣಗಳ ಮೂಲಕ ಬಿಟ್ಟು ಕನ್ನಡ ನಾಡಿನಲ್ಲಿರುವ ಕಳ್ಳೆಯಕ್ಕಿಯೆಂಬುವ ಊರಿನಲ್ಲಿ ಬಸವೇಶ್ವರ ಸ್ತೋತ್ರ ಮಾಡುತ್ತ ಸಮಾಧಿಗತರಾದರು. ಇವರಿಗೆ ತತ್ವವಿದ್ಯಾ ಕಲಾಪ, ಕವಿತಾಸಾರ, ಅನ್ಯದೈವ ಕೋಲಾಹಲ, ಪ್ರತ್ಯಕ್ಷ ಭೃಂಗೀಶನ ಅವತಾರ ಮೊದಲಾದ ಬಿರುದುಗಳಿದ್ದುವು ಎಂದು ಗೊತ್ತಾಗುತ್ತದೆ. ಇವರು ಬಸವಣ್ಣನವರ ಬಗ್ಗೆ ಅನೇಕ ಗ್ರಂಥಗಳನ್ನು ಬರೆದಿರುತ್ತಾರೆ. ಅವುಗಳನ್ನೆಲ್ಲ ಓದುವುದರಿಂದ ವಾಚಕರಿಗೆ ಸಹಜವಾಗಿ ಇವರು ಬಸವಣ್ಣನವರಲ್ಲಿ ಎಂತಹ ನಿಷ್ಠಾವಂತರಾಗಿದ್ದರೆಂಬುವದು ತಿಳಿದುಬರುತ್ತದೆ. ಇವರು ತೆಲುಗಿನಲ್ಲಿ ಎಲ್ಲರಿಗಿಂತ ಮೊದಲು ಬಸವಪುರಾಣ ಬರೆದಿದ್ದಾರೆ. ಅದನ್ನು ಭೀಮಕವಿ ಕನ್ನಡಿಸಿದ್ದಾನೆ. ಇಲ್ಲಿ ಕೆಲವು ಉದಾಹರಣೆಗಳನ್ನು ಮಾತ್ರ ನೋಡುವದವಶ್ಯವಿರುತ್ತದೆ. ಶರಣ ಬಸವ ರಗಳೆಯ ಅಂತ್ಯದಲ್ಲಿ—

> ಶರಣಸ್ತವಕಲ್ಪ ಕುಜಾಂ । ಕುರಪದಶಾಖಾಭಿಜಾತನವಕುಸುಮಾಷ್ಟೋ ।
> ತ್ತರ ಶತನಾಮಂಗಳ ಬಸ । ವರ ಸಂಗರ್ಪಿಸಿದೆ ಪಾಲ್ಕುರಿಕೆ ಸೋಮಾಂಕಂ ॥
> “ ಅಚಲಶೈವ ಧರ್ಮನಿರ್ಣಯಾವತಾರ ಶರಣು ಬಸವ ।
> ವಿಕಟಭವಸಮಿತ್ಸಮೂಹ ವೀತಿಹೋತ್ರ ಶರಣು ಬಸವ ॥”

ಹೀಗೆಯೇ ಉಳಿದ ರಗಳೆಗಳೂ ಇರುತ್ತವೆ—

> ಬಸುರೊಳ್ ಬರಲೀಯದು ಬ । ಶಶಿಧರನಂ ಸಾರಿಸುವುದು ಸ ಸಾವಿರಪದನುಂ ॥
> ವಶವರ್ತಿಯ ಮಾಡುವದುವ । ಬಸವಾ ಶರಣೆಂಬುದಕ್ಕೆ ಫಲವಿದು ಬಸವಾ ॥ ೨ ॥
>
> ಬಾಗುರು ಬಹುಳ ಬ್ರಹ್ಮ । ಸಾಗುರು ಸಾಕಾರ ತತ್ವಸಂಘದ ಫಲವೈ ॥
> ವಾಗುರು ವಚನ ಮಹತ್ವ । ಕ್ಕಾಗರ ಬಸವಾಕ್ಷರತ್ರಯಂ ಬಸವೇಶಾ ॥ ೩ ॥
>
> ಬಾ ಎನೆ ಬಂಧನವಳಿವುದು । ಸಾಯೆನೆ ಸಕಲ ಸಾಯುಜ್ಯ ಸಂಪದಮುಕ್ಕುಂ ॥
> ವಾ ಎನೆ ನಿರವಯ ಪದಮುಂ । ಮಾಯೆಯ ರಹಿತಂ ಬಸವನೆ ನಿಮ್ಮಯ ನಾಮಂ ॥ ೪ ॥
>
> ಪ್ರಣವದ ಬಳ್ಳಿ ಬಕಾರಂ । ಪ್ರಣವದ ನಾದಾನುಸಾರಿ ಸಾರ ಸಕಾರಂ ॥
> ಪ್ರಣವದ ಬಿಂದು ವಕಾರಂ । ಪ್ರಣವಂ ಬಸವಾಕ್ಷರ ತ್ರಯಂ ಬಸವೇಶಾ ॥ ೫ ॥
>
> ಮಧುರಂ ಶ್ರುತಿಗಳು ಮಿಗೆ ಮಿಗೆ । ಮಧುರಂ ಮಂತ್ರಗಳವಕೆ ಪಂಚಾಕ್ಷರಿ ತಾಂ ।
> ಮಧುರಂ ಪಂಚಾಕ್ಷರಿಗಂ । ಮಧುರಂ ಬಸವಾಕ್ಷರ ತ್ರಯಂ ಬಸವೇಶ ॥ ೬ ॥
>
> ಮರೆದೊಮ್ಮೆ ಬಸವ ಎಂದೊಡೆ । ಮರುಜನ್ಮಗಳಿಲ್ಲ ದುರಿತ ವಿಘ್ನಗಳಿಲ್ಲೈ ।
> ಕರಿಗೊರಲನೊಲಿದು ಸಲಹುವ । ಬರಿಜಿಹ್ವೆಯೊಳಿರದೆ ಬಸವನಾಮವ ಜಪಿಸಿಂ ॥ ೭ ॥

ಬಸವಾ ಎಂಬ ತ್ರ್ಯಕ್ಷರ । ಪೊಸತೆನಿಸುವರಜತಗಿರಿಯ ಮಹಿಮೆಯ ತೋರ್ಕುಂ ॥
ಶಶಿಧರನ ಶರಣಸಂಕುಳ । ದೊಸಗೆಯ ನಡುವಿರಿಸಿ ತೋರ್ಕು ಬಸವನ ನಾಮಂ ॥ ೮ ॥

ಒಮ್ಮೆ ಕಳವಳಿಸಿಯರಿಯದೆ । ಸುಮ್ಮನೆಯುಪ್ರಿಯದಿ ನೊಂದು ಬಸವನ ನೆನೆಯಲ್ ।
ಹೊಮ್ಮವು ದುರಿತವದಿರ್ದೊಡೆ । ಕರ್ಮವು ಶನಿ ಹರಿದುಹೋಹುದೈ ನಿಶ್ಚಯದಿಂ ॥ ೯ ॥

ಅಘವನದಾಹಂ ಬಸವಾ । ಅಘಕುಲನಿಸ್ಸೀಮ ಭೀಮನಾಮಂ ಬಸವಾ ।
ಅಘಜಲವಡವಂ ಬಸವಾ । ಅಘತಿಮಿರದ್ಯುಮಣಿ ಬಸವ ಅಮಮಾ ಬಸವಾ ॥ ೧೦ ॥

ಭಕ್ತಿಗೆ ವದನ ಕಲಾಬ್ಜಕೆ । ಶಕ್ತಿಗೆ ಮಂತ್ರಗಳವಕೆ ಪಂಚಾಕ್ಷರಿ ತಾಂ ॥
ಶಕ್ತಿಗೆ ಭಕ್ತಿಗೆ ಯುಕ್ತಿಗೆ । ಮುಕ್ತಿಗೆ ಬಸವಾಕ್ಷರ ತ್ರಯಂ ಬಸವೇಶಾ ॥ ೧೧ ॥

ಬಸವಾ ಯೆಂದೊಡೆ ಪಾಪಂ । ದೆಶೆಗೆಟ್ಟೋಡುವದು ಕರ್ಮ ನಿರ್ಮಲವಹುದೈ ॥
ಶಶಿಧರನೇರುವ ವಾಹನ । ದಶದಿಕ್ಕಿನ ಪ್ರಮಥರೊಡೆಯ ಸಂಗನ ಬಸವ ॥ ೧೨ ॥

ಬಸವನ ನಾಮಾಮೃತವಂ । ರಸ ಪರವಶನಾಗಿ ಸವಿದು ತುದಿ ಮೊದಲಿನಿದಂ ॥
ಬಸವಾ ಬಸವಾ ಬಸವಾ ಬಸವಾ ಎನುತಿರ್ದೆನಯ್ಯ ಶಿವ ಬಸವೇಶಾ ॥ ೧೩ ॥

ಗುರುಬಸವಲಿಂಗ ಬಸವಂ । ಚರಬಸವಂ ತೀರ್ಥ ಬಸವನ ಗಣಿತ ಮಹಿಮೋ ॥
ತ್ಕರ ಸುಪ್ರಸಾದ ಬಸವಂ । ಶರಣಯ್ಯ ಶರಣು ಶರಣು ಸಂಗನ ಬಸವಾ ॥ ೧೪ ॥

ಸದ್ಯೋಜಾತನೆ ಬಸವಂ । ಸಿದ್ಧಂ ತತ್ಪುರುಷ ವಾಮದೇವನೆ ಬಸವಂ ॥
ಹೊದ್ದೀಶಾನ್ಯಾಘೋರಂ । ರುದ್ರಮಯಭುವನ । ಸುವಿನುತಭರ್ಗಂ ಬಸವಂ ॥ ೧೫ ॥

ಈ ಮಹಿಮರಿಂದಲೇ ರಚಿತವಾದ ಬಸವಣ್ಣನವರ ಪಂಚರತ್ನದಲ್ಲಿ—

ನರವರ ಸುರಧೀರಾ । ನಂದಿಕೇಶಾವತಾರ ॥
ವಿಷಮ ವಿಷಯದೂರಾ । ವಿಶ್ವಲೋಕೈಕಸಾರಾ ॥
ಹತಕಲಿಮಲಸಂಗಾ । ಖ್ಯಾತಿಗೋಷ್ಠಿ ಪ್ರಸಂಗಾ ॥
ಶರಣು ಬಸವಲಿಂಗಾ । ಸಜ್ಜನಾಂಭೋಜಭೃಂಗಾ ॥ ೧ ॥

ಸುಲಭಗುಣ ವಿಶೇಷಾ । ಸೂನೃತೋದಾರಭಾಷಾ ॥
ಶುಭಚರಿತ ವಿಭೂಷಾ । ಶುದ್ಧ ಸುಜ್ಞಾನವೇಷಾ ॥
ಸಕಲ ಸುಖನಿವಾಸಾ । ಸರ್ವಲೋಕಪ್ರಕಾಶಾ ॥
ಜಯಜಯ ಬಸವೇಶಾ । ಜಂಗಮ ಸ್ಥಾವರೇಶಾ ॥ ೨ ॥

ಅನುಪಮ ಸಮಯುಕ್ತಾ । ಆದಿಭಕ್ತಾ ಸವಿರಕ್ತಾ ॥
ಶಿವಪದವಿಗಭಕ್ತಾ । ಸಿದ್ಧಮಂತ್ರಾನುಶಕ್ತಾ ॥
ಪರಸಮಯಸರೌದ್ರಾ । ಭಕ್ತಿಸಂಪತ್ಸಮುದ್ರಾ ॥
ಶರಣು ಬಸವಭದ್ರಾ । ಜಂಗಮಾಕಾರ ರುದ್ರಾ ॥ ೩ ॥

ಸದಯಗುರು ಕಟಾಕ್ಷಾ । ಸಾರದಾಂಭೋರುಹಾಕ್ಷಾ ॥
ಸಮುಚಿತ ಭವಿತಾಕ್ಷಾ । ಶಂಕರಾಚಾರ ಪಕ್ಷಾ ॥
ದಳಿತಘನಮನೋಜಾ । ದಾನಕಲ್ಪಾವನೀಜಾ ॥
ಶರಣು ಬಸವರಾಜಾ । ಶಾಂತತೇಜಃ ಪ್ರಯೋಜಾ ॥ ೪ ॥

ಪರಿಹೃದಪದವಾಷಾ । ಭಕ್ತಿಯೋಗಾನುಮೋದಾ ॥
ಭರಿತನಿಖಿಳವೇದಾ । ಭರ್ಗಸೇವಾ ವಿನೋದಾ ॥
ತ್ರಿಭುವನ ರಮಣೀಯಾ । ದೇವಸಂಭಾವನೀಯಾ ॥
ಜಯಜಯ ಬಸವೀಯಾ । ಸಂತತಶ್ಲಾಘನೀಯಾ ॥ ೫ ॥

## ಶ್ರೀ ಕವಿ ಶಿಂಗಿರಾಜರು

ಇವನು ಬಸವೇಶ್ವರನ ಸಮಕಾಲದವನು. ಅರ್ವಾಚೀನನೆಂದು ಕೆಲವರ ಮತ. ವೀರವೈಷ್ಣವನಾಗಿದ್ದನು. ಬಿಜ್ಜಳ ಭೂಪಾಲನ ಮಾಂಡಲಿಕ ರಾಜರಲ್ಲಿ ಒಬ್ಬವನಾಗಿದ್ದು ಬಿಜ್ಜಳನಿಗೆ ಪ್ರತಿವರ್ಷ ಕಾಣಿಕೆಯನ್ನು ಸಲ್ಲಿಸುತ್ತಿದ್ದನು. ಬಸವಣ್ಣನವರು ಮುಖ್ಯಮಂತ್ರಿಗಳಾಗಿ ಅವರ ಕೀರ್ತಿಯು ಪ್ರಬಲವಾಗಲು ಈ ವೀರಶೈವ ಮುಖ್ಯಮಂತ್ರಿ ಇರುವ ರಾಜನಿಗೆ ನಾನು ಕಾಣಿಕೆಯನ್ನು ಏಕೆ ಕೊಡಬೇಕೆಂದು ಉದ್ಧಟತನದಿಂದ ವರ್ತಿಸಲು ಬಿಜ್ಜಳನ ಸೈನಿಕರು ಸೆರೆಹಿಡಿದು ಬಂಧನದಲ್ಲಿಟ್ಟರು. ಇವನು ಬಸವೇಶ್ವರನ ಸ್ತೋತ್ರಮಾಡುವುದನ್ನು ಕೇಳಬಾರದೆಂದು ಕಿವಿಯಲ್ಲಿ ಬೆರಳುಗಳನ್ನಿಟ್ಟುಕೊಳ್ಳಲು ಕಿವುಡನೇ ಆದನು. ಬಸವಣ್ಣನವರು ಅಡ್ಡಾಡುವ ದಾರಿಯಲ್ಲಿಯೇ ಇವನನ್ನು ಇಟ್ಟಿದ್ದರು. ಬಸವನನ್ನು ನೋಡಬಾರದೆಂದು ಕಣ್ಣುಗಳನ್ನು ಮುಚ್ಚಿಕೊಳ್ಳಲು ಪುನಃ ತೆರೆಯಲಿಕ್ಕೆ ಬರಲೇ ಇಲ್ಲ. ಹಿಂದಿನಿಂದ ಬಹಳ ಪಶ್ಚಾತ್ತಾಪವನ್ನು ಬಿಟ್ಟು ಬಸವಣ್ಣನವರ ೮೮ ಪವಾಡಗಳಲ್ಲಿ ತನಗೆ ದೊರೆತ ೬೪ ಪವಾಡಗಳಿಂದ ಕೂಡಿದ ಶಿಂಗಿರಾಜ ಎಂಬುವ ಪುರಾಣವನ್ನು ಬಹು ಭಕ್ತಿಯುಕ್ತಗಳಾದ ಪದ್ಯಗಳಿಂದ ರಚಿಸಿ ಬಸವಣ್ಣನವರು ಕಲ್ಯಾಣವನ್ನು ಬಿಟ್ಟುಹೋದಮೇಲೆ ರಾಮಿದೇವನೆಂಬುವ ಶಿವಯೋಗಿಗಳಿಂದ ಲಿಂಗಧಾರಣ ದೀಕ್ಷೆಯನ್ನು ಹೊಂದಿ ವೀರಶೈವ ಮತವನ್ನವಲಂಬಿಸಿದನು. ಇವನು ತನ್ನ ಪುರಾಣದಲ್ಲಿ ಅನೇಕ ಸಂದರ್ಭಗಳಲ್ಲಿ ಬಸವಣ್ಣನವರನ್ನು ಹೃದಯಂಗಮವಾಗಿ ವರ್ಣಿಸಿರುತ್ತಾನೆ. ಮತ್ತು ಈ ಕವಿಯು ಸಂಸ್ಕೃತದಲ್ಲಿ ವೃಷಭಾಂಕಮಾಲೆಯನ್ನು ರಚಿಸಿರುತ್ತಾನೆ. ಅದನ್ನು ಸಂಸ್ಕೃತ ಕವಿಗಳ ವಿಷಯದಲ್ಲಿ ಬರೆಯುವಾಗ ವಿವರಿಸಿರುತ್ತೇವೆ. ಈ ಕವಿಗಳ ಪುರಾಣವನ್ನು ಎಂ. ಬಸವಲಿಂಗ ಶಾಸ್ತ್ರಿಗಳೆಂಬುವ ಪಂಡಿತರು ಕನ್ನಡಕ್ಕೆ ಪರಿವರ್ತಿಸಿ ಅದಕ್ಕೆ ಶಿಂಗಿರಾಜ ವಿಜಯವೆಂದು ಹೆಸರಿಟ್ಟಿರುತ್ತಾರೆ. ಪುರಾಣದಲ್ಲಿದ್ದಂತೆ ಇದನ್ನು ಬರೆದಿರುತ್ತಾರೆ.—ಶಿಂಗಿರಾಜ ವಿಜಯ ಪುಟ ೮೮ ರಲ್ಲಿ—ಕೆಲವರು ಸೀಮಂತಿನಿಯರು ಉಳಿದ ಮುತ್ತೈದೆಯರುಗಳನ್ನು ನೋಡಿ ಎಲೈ ಮಂಗಳಾಂಗಿಗಳಿರಾ, ಕೇಳಿರಿ. ಈ ಶಿಶುವಿನ ಮಾತಾಪಿತೃಗಳು ಧನ್ಯರು, ಧನ್ಯರು. ಈ ಶಿಶುವು ಪೂರ್ವದಲ್ಲಿ ನಂದಿಗಣೇಶಾವತಾರವನ್ನೂ, ಅನಂತರ ನೀಲಲೋಹಿತ ಗಣೇಶಾವತಾರವನ್ನೂ, ಆಮೇಲೆ ಸ್ಕಂದಗಣೇಶಾವತಾರವನ್ನೂ, ಅನಂತರ ಕಾಲಗಣೇಶಾವತಾರವನ್ನೂ, ಆಮೇಲೆ ಮನೋಹರಗಣೇಶಾವತಾರವನ್ನೂ, ಅನಂತರ ವೃಷಭಗಣೇಶಾವತಾರವನ್ನೂ, ಈಗ ಬಸವಗಣಾಧೀಶಾವತಾರವನ್ನೂ ಮಾಡಿರುವನು ಎಂದು ಜಾತವೇದ ಮುನಿಗಳು ಅಪ್ಪಣೆ ಕೊಡಿಸಲಿಲ್ಲವೇ! ಆದುದರಿಂದ ಬಸವನೆಂಬುವ ನಾಮವು ಆ ಹಿಂದಣ ಆರು ಅವತಾರಗಳ ನಾಮಗಳನ್ನೂ ಒಳಗೊಂಡಿರುವ ಕಾರಣ ಬಸವನಾಮವನ್ನೇ ಸ್ವರವೆತ್ತಿ ಎಲ್ಲ ಮುತ್ತೈದೆಯರು ಜೋಗುಳವನ್ನು ಹಾಡಬೇಕೆನ್ನಲು ಆಗ ಸಮಸ್ತ ಸುವಾಸಿನಿಯರು ಭಕ್ತಿಯುಕ್ತೆಯರಾಗಿ ಬಸವನಾಮರಸರಸಾಯನವನ್ನು ತಮ್ಮ ತಮ್ಮ ನಾಲಿಗೆಗೆ ತಂದು ಬ್ರಹ್ಮನ ರಾಣಿಯಾದ ಸರಸ್ವತಿಯು ವಾಗ್ವಿಲಾಸದಿಂದ ಈ ಸಮಸ್ತ ಮಂಗಳಾಂಗಿಯರುಗಳ ನಾಲಿಗೆ ಎಂಬುವ ಪೀಠದಲ್ಲಿ ನಿಂತಳೊ ಎಂಬುವಂತೆ ಸರ್ವರೂ ರಾಗರಸಭರಿತ ಸ್ವರವನ್ನೆತ್ತಿ ಬಸವ ಜೋ (ಬಸವ ಜಯ), ಬಸವಣ್ಣ ಜೋ, ಬಸವಲಿಂಗ ಜೋ, ಬಸವೇಶ ಜೋ, ಬಸವರಾಜ ಜೋ, ಬಸವರಸ ಜೋ, ಬಸವಾಂಕ ಜೋ, ಬಸವ

ಪ್ರಭುವೇ ಜೋ, ಜೋ, ಜೋ, ಬಸವಗುರುವೇ ಜೋ ಎಂದು ಜೋಗುಳಂ ಪಾಡಿದರು. ಮತ್ತು ಮುಕ್ತಿಕಾಂತಿಯು ಭೂಮಿಯಲ್ಲಿರುವ ಸಮಸ್ತ ಮಹಾಶಿವಭಕ್ತರಿಗೆ ಎಲೈ ಭಕ್ತರಿರಾ, ಭಕ್ತಾಂಗನ ಅಂಗವೇ ಭೂಮಿಯು. ಮಹೇಶ್ವರ ಸುತತ್ವವೇ ಕ್ಷೇತ್ರವು, ಪ್ರಸಾದಿಸ್ಥಲದ ವೃತ್ತಿರೂಪ ಪ್ರಸಾದವೇ ಅಷ್ಟಬಂಧವು, ಪ್ರಾಣಲಿಂಗಿ ಸ್ಥಲದಿಂದ ಪ್ರಬದ್ಧವಾದ ಅಂಗವೇ ಪೀಠವು ಆಗಲಾಗಿ ಸತ್ಯಶರಣರ ಪ್ರಭಾವದಿಂದ ಕೂಡಿಕೊಂಡಿರುವ ಬಸವನ ಉತ್ತುಂಗ ನಾಮವೆಂಬ ಲಿಂಗವು ಪ್ರತಿಷ್ಠೆಯಾಯಿತೆಂದು ದೂರಿದಳೋ ಎಂಬುವಂತೆ ಕಾಂತೆಯರು ಬಸವನನ್ನು ಹಾಡಿ ತೂಗಿದರು. ಮತ್ತು ಅನಾದಿಶಕ್ತಿಯರೇ ಮೊದಲಾದ ಶಕ್ತಿಯರು ಬಕಾರವೇ ಆಣವಮಲ, ಮಾಯಾಮಲ, ಕಾರ್ಮಿಕಮಲ ರೂಪವಾದ ಭವವನ್ನು ಪರಿಹರಿಸುವ ಸಕಲರೂಪನಾದ ಗುರುವು; ಸಕಾರವೇ ಸಕಲ ಸಿದ್ಧಿಗಳನ್ನು ಕೊಡುವ ಸಕಲ ನಿಷ್ಕಲರೂಪವಾದ ಲಿಂಗವು; ವಕಾರವೇ ಸಕಲ ಚೈತನ್ಯಾತ್ಮಕ ಬಪ್ಪ ನಿಷ್ಕಲರೂಪ ಜಂಗಮವು । ಎನಿಸಿ ಶೋಭಿಸುವ ಬಸವ ಮುದ್ರಾಂಕಮಾಲೆಯನ್ನು ಮತ್ತು ಶುದ್ಧ ಸಿದ್ಧ ಪ್ರಸಿದ್ಧಗಳೆಂಬ ಪ್ರಸಾದಿಸ್ಥಲದ ಶಾಸನದಿಂದ ಉದ್ಧರಿಸಿದ ನಾಮವೊ । ಎಂಬೊಪ್ಪುವ ಬಸವಾಕ್ಷರ ತ್ರಯದ ಮುದ್ರಾಂಕಮಾಲೆಯನ್ನು ಹಾಡುವರೋ ಎಂಬುವಂತೆ ಒಪ್ಪುವ ಬಸವನಾಮವನ್ನು ಕಾಂತೆಯರು ಹಾಡಿ ಉತ್ಸಾಹದಿಂದ ತೂಗಿದರು. ಮತ್ತು ಆ ಕಾಲದಲ್ಲಿ ಸಂತೋಷಸೂಚಕಂಗಳಾದ ಕೊಂಬುಗಳ ಧ್ವನಿಯು. ಕಹಳೆಗಳ ಧ್ವನಿಯು ಕೂಡ ಎಲೈ ಭೂಲೋಕದ ಮಾನವರೇ ನಾಮವಿಲ್ಲದ ವಸ್ತುವಿಗೆ ಬಸವನೆಂಬ ನಾಮಕರಣವಾಯಿತು. ಎಲ್ಲಿಯೇ ಇಲ್ಲದಿರುವ ಶಿವಭಕ್ತಿಗೆ ಶಿವಭಕ್ತಿ ಸೀಮೆ ಎನಿಸಿರುವ ಬಸವನೆಂಬ ಶಿಲಾಸ್ತಂಭವು ನೆಡಲ್ಪಟ್ಟಿತು. ಭಕ್ತಮಹೇಶ ಪ್ರಸಾದಿಗಳೇ ಮೊದಲಾದ ವೀರಶೈವರಿಗೆ ಆಶ್ರಯವಾಗಿ ದಾಸೋಹವೆಂಬ ಮೇರುಪರ್ವತವು ಪ್ರತಿಷ್ಠಿಸಲ್ಪಟ್ಟಿತು. ಆದುದರಿಂದ ಬಸವನೆಂಬ ಈ ದ್ವಿತೀಯ ಶಂಭುವಿನಿಂದ ಭೋಗ ಮೋಕ್ಷಂಗಳಂ ಕೊಡುವ ಸಿದ್ಧಾಂತಮಾರ್ಗವನ್ನು ಉಪದೇಶಮಾಡಿಕೊಂಡು ಧನ್ಯರಾಗಿರಿ; ಧನ್ಯರಾಗಿರಿ; ಬರೀ ಮೋಕ್ಷವನ್ನೇ ಕೊಡುವ ಸಿದ್ಧಾಂತಮಾರ್ಗವನ್ನು ಬಿಡಿರಿ. ನಿಮ್ಮ ನಿಮ್ಮ ಇಷ್ಟದೈವಂಗಳನ್ನು ನಂಬಿ ಕರ್ಮಬದ್ಧರಾಗಿರಿ. ವ್ಯರ್ಥವಾಗಿ ಕೆಡಬೇಡಿರಿ, ಕೆಡಬೇಡಿರಿ ಎಂಬುದಾಗಿ ಗಜರಿ ಗರ್ಜರಿ ಹುಯ್ಯಲನ್ನು ಕೊಡುವ ಸಾಮವಾಕ್ಯಗಳೋ ಎಂಬಂತೆ ಶೋಭಿಸಿದ್ದವು. ಮತ್ತು ವಿಸ್ತಾರವಾದ ಮಹೇಶ್ವರ ತತ್ವವೆನಿಸಿದ ಶಬ್ದಮೂರ್ತಿಯಾದ ಬಸವಾಕ್ಷರಕ್ಕೆ ಪರವೇ ಶಿರಸ್ಸು, ಬ್ರಹ್ಮನೇ ಲಲಾಟ, ಜ್ಞಾನವೇ ನೇತ್ರ, ಮುಕ್ತಿಯೇ ನಾಶಿಕ, ಮಹಾಮಂತ್ರಗಳೇ ಕರ್ಮ, ಪರತತ್ವವೇ ಮುಖ, ನಾದವೇ ಕಂಠ. ವೇದಗಳೇ ಭುಜಂಗಳು, ನಿರ್ಮಲಧ್ಯಾನವೇ ಶಾಶ್ವತಹೃದಯ, ಅಭಯವೇ ಹಸ್ತ, ಆಗಮವೇ ಕುಕ್ಷಿ, ಪರಿಶುದ್ಧತ್ವವೇ ಜಾನುಕ್ರಮ, ವಾದವಿಧಿಯೇ ಜಂಘೆ, ಸದ್ಗತಿಯೇ ಪಾದಗಳಾಗಿರಲು ಬಸವಾಕ್ಷರತ್ರಯದ ಮಹತ್ವವನ್ನು ಎಷ್ಟೆಂದು ಹೇಳಲಿ. ಮತ್ತು ಈ ಪ್ರಪಂಚದ ಮಾನವರು ಬಸವೇಶಂಗೆ ಬಾಲ್ಯತೆಯನ್ನೂ, ಪರಶಿವಂಗೆ ವೃದ್ಧತ್ವವನ್ನೂ ಹೇಳುತ್ತಾರೆ. ನಾವಾದರೋ ಈ ರೀತಿಯಾಗಿ ಹೇಳಲು ಭಯಪಡುವೆವು. ಏತಕ್ಕೆಂದೊಡೆ ಶ್ರೀ ಗುರುವನ್ನು ಮನುಷ್ಯ ಭಾವನೆಯಿಂದಲೂ, ಲಿಂಗವನ್ನು ಶಿಲಾಭಾವದಿಂದಲೂ, ತಿಳಿದವರು ಹೇಗೆ ಭೂಲೋಕದಲ್ಲಿ ಸದ್ಗತಿಯನ್ನು ಹೊಂದಲು ಅರ್ಹರಾಗುವುದಿಲ್ಲವೋ, ಹಾಗೆ ನಾವು ಮುಕ್ತಿಗೆ ಪಾತ್ರರಾಗುವದಿಲ್ಲ. ಆದುದರಿಂದ ನಾವು ಆ ರೀತಿ

ಯಾಗಿ ಹೇಳುವದಿಲ್ಲ. ಎಲೈ ಶಿವಕವಿಗಳಿರಾ, ಕೇಳಿರಿ. ಶ್ರೀ ಬಸವೇಶನ ಬಾಲಲೀಲೆಯು ಮತ್ತು ಯೋಗನಿದ್ರಾಸಿದ್ಧನ ಬೆಳವಣಿಗೆಯೂ ಕೂಡ ಮತ್ತೆ ಹೇಗೆ ಇತ್ತೆಂದೊಡೆ? ಈ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರ ತಿರೋಭಾವ ಅನುಗ್ರಹಗಳೆಂಬ ಪಂಚಕೃತ್ಯಗಳ ಘನತೆಯನ್ನು ಹೊಂದಿದ ಈ ಬ್ರಹ್ಮಾಂಡವೆಂಬ ಒಂದು ಕುಂಭದಲ್ಲಿ ಬಸವ ಎಂಬ ಹೆಸರಿನ ಎಳೆಯದಾದ ಒಂದು ಕಲ್ಪವೃಕ್ಷವು ಆಧಾರ ಚಕ್ರ, ಸ್ವಾಧಿಷ್ಠಾನ ಚಕ್ರ, ಮಣಿಪೂರಕ ಚಕ್ರ, ಅನಾಹತ ಚಕ್ರ, ವಿಶುದ್ಧಿ ಚಕ್ರ, ಆಜ್ಞೇಯ ಚಕ್ರ, ಬ್ರಹ್ಮ ಚಕ್ರ, ಶಿಖಾ ಚಕ್ರ, ಪಶ್ಚಿಮ ಚಕ್ರಂಗಳೆಂಬ ಒಂಬತ್ತು ಶಾಖೆಗಳನ್ನು ಹೊಂದಿ, ಪ್ರತಿಯೊಂದು ಶಾಖೆಗಳಲ್ಲಿಯೂ ನಾಲ್ಕು ದಳ, ಆರು ದಳ, ಹತ್ತು ದಳ, ಹದಿನಾರು ದಳ, ದ್ವಿದಳ, ಸಹಸ್ರ ದಳ, ತ್ರಿದಳ, ಏಕ ದಳಗಳನ್ನು ಹೊಂದಿ ಆಯಾಯ ಶಾಖೆಗಳಲ್ಲಿ ಐವತ್ತೆರಡಕ್ಷರ ಗಳೆಂಬ ಪುಷ್ಪಗಳನ್ನು ಕ್ರಮವಾಗಿ ಬಿಟ್ಟು ಮೋಕ್ಷವೆಂಬ ಅಮೃತ ಫಲವು ವೃದ್ಧಿಯಾಗಿ ಪರವಶವಾಗಿರುವದೋ ಎಂಬಂತೆ ಆ ಬಸವೇಶಸ್ವಾಮಿಯ ಬೆಳವಣಿಗೆಯು ಶೋಭಿಸಿತ್ತು.

## ಸೋಮರಾಜ

ಕವಿಯ ಕಾಲ ೧೨೨೨. ಈ ಕವಿಯು ಶೃಂಗಾರಸಾರವೆಂಬುವ ಗ್ರಂಥವನ್ನು ಬರದಿರುತ್ತಾನೆ. ಉದ್ಭಟ ಕಾವ್ಯವೆಂದು ಇದಕ್ಕೆ ಬೇರೊಂದು ಹೆಸರುಂಟು. ಇವನು ರಾಜನಾಗಿಯೂ, ಕವಿಯಾಗಿಯೂ ಇದ್ದನು. ಇವನ ಗುರುಗಳು ಅಲ್ಲಮಪ್ರಭುದೇವರು. ಪ್ರತಿಯೊಂದು ಆಶ್ವಾಸದ ಕೊನೆಯಲ್ಲಿ ತನ್ನ ಗುರುಗಳಾದ ಅಲ್ಲಮಪ್ರಭುಗಳ ನೆನಪನ್ನು ತಂದುಕೊಂಡು ಅಲ್ಲಮಪ್ರಿಯನೆಂದು ಈಶ್ವರನನ್ನು ಸಂಬೋಧಿಸಿ ಮುಗಿಸಿರುತ್ತಾನೆ.

ಈ ಕವಿಯು ಗ್ರಂಥದ ಆರಂಭದಲ್ಲಿ—

"ಸಸಿದಲೆಯಂಗೆ ತೆತ್ತು ಧನವಂ ಮನಮುಂ ತನುವಂ ವಿಲಾಸದಿಂ ।
ದಸಮುಸ ಭಕ್ತಿಯೊಳ್ಪರದು ಕಪ್ಪುರದೊಳ್ಜಡರಂತೆ ನಾಡೆ ರಂ ॥
ಜಿಸುವ ಚಿದಂಬುರಾಶಿ ಬಸವೇಶ್ವರ ಮುಖ್ಯ ಮಹೇಶಪೂಜಕ ।
ಪ್ರಸರ ಪದಂಗಳೆನ್ನ ಬಗೆದಾವರೆಯೊಳ್ನೆಲಸಿರ್ಕೆ ಸಂತತಂ ॥ ೧ ॥

## ಭೀಮಕವಿ

ಕವಿಯ ಕಾಲ ೧೩೬೯. ಭೀಮಕವಿಯು ಕನ್ನಡ ಬಸವಪುರಾಣವನ್ನು ಬರೆದಿರುತ್ತಾನೆ. ಇವನು ಉದ್ದಾಮ ಕವಿಯಾಗಿದ್ದು ಭಾಷಾ ಶೈಲಿಯು ಧಾರಾಪ್ರವಾಹದಂತೆ ಅವಿಚ್ಛಿನ್ನವಾಗಿ ಮುಂದಕ್ಕೆ ಸಾಗಿರುತ್ತದೆ. ವೀರಶೈವ ಕವಿಗಳಲ್ಲಿ ಭೀಮಕವಿಯು ಸುಪ್ರಸಿದ್ಧನು. ಪಾಲ್ಕುರಿಕೆಯ ಶ್ರೀ ಸೋಮನಾಥನ ತೆಲುಗು ಬಸವಪುರಾಣವನ್ನೇ ಈತನು ಕನ್ನಡ ಭಾಮಿನಿ ಷಟ್ಪದಿಯಲ್ಲಿ ರಚಿಸಿರುವನು. ಮತ್ತು ಈತನು ಭೀಮ ಕವೀಶ್ವರ ರಗಳೆ, ಭೃಂಗಿದಂಡಕಗಳೆಂಬ ಬೇರೆ ಗ್ರಂಥಗಳನ್ನು ಬರೆದಿರುತ್ತಾನೆ.

ತನ್ನ ಬಸವಪುರಾಣದಲ್ಲಿ—

ಶ್ರೀ ಗುರುವೆ ದೀಕ್ಷಾಗುರುವೆ ।
ಶಿಕ್ಷಾಗುರುವೆ ರಕ್ಷಾಗುರುವೆ ।
ಸರ್ವಾಗಮೋಕ್ತ ಕಲಾಗುರುವೆ ಶಿವಯೋಗ ಧರ್ಮಾರ್ಥ ॥
ಭೋಗಗುರುವೇ ತ್ಯಾಗಗುರುವೆ ।
ಸುಧೀಗುರುವೆ ವಾಚಾಗುರುವೆ ಭವ ।
ರೋಗಹರಶರಣಾಗು ಬಸವ ಮಹಾಗುರುವೆ ಎಮಗೆ ॥ ೧ ॥

ಅಸಮ ಲಿಂಗೈಕ್ಯ ಭಾವದ ।
ಬಸವನಂ ಬೇರೊಂದು ಭಾವದೊ ।
ಳೆಸೆದು ಕೀರ್ತಿ ಸಲಹುದೆ ಇದು ತಪ್ಪೆಂದು ನುಡಿಯದಿರಿ ॥
ವಸುಮತಿಗೆ ಶಿವಭಕ್ತಿಯಂ ಪಸ ।
ರಿಸುವವಂ ತಾನಾಗಿಯಾತನ ।
ದೆಶೆಯೊಳೆಲ್ಲಾ ಧನ್ಯರಾದಪರೆಂದು ನುತಿಸುವೆನು ॥ ೨ ॥

ಬಸವ ಶರಣೆನೆ ಪಾಪವಳಿವುದು ।
ಬಸವ ಶರಣೆನೆ ತಾಪವಾರುಗು ।
ಬಸವ ಶರಣೆನೆ ಪರಮಪಾವನ ಭೂತಿ ಸಂಧಿಪುಗು ॥
ಬಸವ ಶರಣೆನೆ ಭಕ್ತಿ ದೊರಕುಗು ।
ಬಸವ ಶರಣೆನೆ ಸಾಗ್ರ್ಯ ಸುಸ್ಥಿತಿ ।
ಬಸವ ಶರಣೆನೆ ವಚನ ರಚನಾಸಿದ್ಧಿ ವರ್ಧಿಪುಗು ॥ ೩ ॥

ಬಸವರಾಜನ ನಾಮಗಂಕೀ ।
ರ್ತಿಸುವವಂ ಬವಬಂಧಮುಂ ಛೇ ।
ದಿಸುವುದರಿದೇ ಬಸವನೇಂ ಚಾವಳನೆ ಭಕ್ತರೊಳು ॥
ಅಸಮನೇತ್ರನೆ ಬಸವರೂಪಡಿ ।
ಎಸೆವನಲ್ಲದೆ ಬಸವನಿಳೆಗುದ ।
ಯಿಸಿದ ಮಾತ್ರದೊಳವನ ನೀನರಜಾತನೆನಲಹುದೇ ॥ ೪ ॥

ಇನ್ನೊಂದು ಸಂದರ್ಭದಲ್ಲಿ—

"ಅಚ್ಚ ಶಿವನೊಂದಚ್ಚು ಭಕ್ತಿಯ । ನಚ್ಚು ಶರಣರ ಮೆಚ್ಚು ಹಿರಿಯರ ।
ಮೆಚ್ಚು ಸತ್ಯದ ಕೆಚ್ಚು ಪರವಾದಿಗಳೆದೆಯ ಕಿಚ್ಚು ॥
ಮುಚ್ಚರಿಸುವವರ ಬಿಚ್ಚು ಕುಜನರ । ಬೆಚ್ಚು ಶಾಂತಿಯ ಹೆಚ್ಚು ಧೂರ್ತರ ।
ಕೊಚ್ಚು ಕಲಿತನದಚ್ಚು ಸುಖಕಣಿ ಮುಚ್ಚುಮರೆಯಿಲ್ಲ ॥"

## ಪದ್ಮಣಾಂಕ

ಕವಿಯ ಕಾಲ ೧೩೭೫. ಈ ಕವಿಯು ಪದ್ಮಣಾಂಕ ಪುರಾಣವನ್ನು ಬರೆದಿರುತ್ತಾನೆ. ಇವನು ಕೆರೆಯ ಪದ್ಮರಸರ ವಂಶದವನು. ಇವನು ದೊಡ್ಡ ಕವಿಯಾಗಿದ್ದನು.

ತನ್ನ ಪದ್ಮಣಾಂಕ ಪುರಾಣದಲ್ಲಿ—

ಐರಾವಣ ಮರಾಳ ಮಾರುತಾ ಹಾರವರ ।
ಶಾರದಾ ಮುತ್ತ್ಯದು ಘನಸಾರ ಸ್ಫಟಿಕಕುಂ ।
ದೋರು ಮಂದಾಕಿನೀ ಕ್ಷೀರವಾರಾಕರ ಪಟೀರ ಶಾರದ ನೀರದಾ ॥
ಹಾರ ನೀ ಹಾರ ಕರ್ಪೂರ ಡಿಂಡೀರಮುಂ ।
ದಾರ ಶಶಿತಾರ ಸುಸ್ಮೇರ ನವಹೀರ ಸ ।
ತ್ತಾರಾದಿ ಗೌರಧಿಕ್ಕಾರ ಕೀರ್ತಿಪ್ರಭಾಪೂರ ಮಾಂ ತ್ರಾಹಿ ಬಸವ ॥

## ಮಹಾಲಿಂಗದೇವ

ಇವರ ಕಾಲ ೧೪೩೫. ಇವರು ಏಕೋತ್ತರ ಶತಸ್ಥಲ, ಪ್ರಭುದೇವರ ಷಟ್‌ಸ್ಥಲ, ಜ್ಞಾನ ಚಾರಿತ್ರ್ಯದ ಟೀಕೆ—ಹೀಗೆ ಎರಡು ಗ್ರಂಥಗಳನ್ನು ಬರೆದಿರುತ್ತಾರೆ. ಇವರು ದೊಡ್ಡ ಶಿವಾನುಭವಿಗಳಿದ್ದು ಪುಲಿಗೆರೆಯ ಪುರವರಾಧೀಶ್ವರ, ಪರಮ ವೀರಶೈವಾಗಮಾಚಾರ್ಯ ಮೊದಲಾದ ಬಿರುದುಗಳು ಇವರಿಗಿದ್ದಂತೆ ತಿಳಿದುಬಂದಿದೆ.

ಏಕೋತ್ತರ ಶತಸ್ಥಲದಲ್ಲಿ—

"ಜಂಗಮಗುರುಲಿಂಗಾಖ್ಯೈಃ, ತ್ರಿಭಿರೇತೈಃ, ಪ್ರಭು, ವೃಷಾಂಕ, ದಂಡೇಶೈಃ, ಉದಿತೈಕಸ್ಥಲಮುಶೃತಮೇತದ್ವೀರಶೈವಮಾಭಾತಿ"

ಗುರುಲಿಂಗಜಂಗಮ ಸ್ವರೂಪನಾದ ಪ್ರಭು, ವೃಷಭ, ಚನ್ನಬಸವೇಶ್ವರರಿಂದ ವೀರಶೈವ ಮತವು ಶೋಭಿಸುತ್ತದೆ.

## ಲಕ್ಕಣ್ಣದಂಡೇಶ

ಈತನು ಶಿವತತ್ವ ಚಿಂತಾಮಣಿಯನ್ನು ಬರೆದಿರುತ್ತಾನೆ. ಇವನ ಕಾಲ ೧೪೨೮ ಇರುತ್ತದೆ. ಈತನಿಗೆ ಮೂರುರಾಯರ ಗಂಡ, ಗಜವೇಂಟೆಕಾರ ಎಂಬುವ ಬಿರುದುಗಳಿದ್ದಂತೆಯೂ ಅನೇಕರು ಬರೆದಿರುತ್ತಾರೆ. ಈ ಕವಿಯು ವಿಜಯನಗರದ ಪ್ರೌಢದೇವರಾಯನಿಗೆ ಮುಖ್ಯಮಂತ್ರಿಯೂ, ಸೇನಾಪತಿಯೂ ಆಗಿದ್ದನೆಂದು ತಿಳಿದುಬರುತ್ತದೆ. ಇವನ ಬಗ್ಗೆ — ವಿಜಯನಗರ ಸಾಮ್ರಾಜ್ಯ ಪುಟ ೬೧–೬೨ರಲ್ಲಿ ಲಕ್ಕಣ್ಣದಂಡೇಶನು ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿಯಾದ ಪ್ರೌಢದೇವರಾಯನಿಗೆ ಮುಖ್ಯಮಂತ್ರಿಯೂ, ಕವಿಯೂ ಆಗಿದ್ದನು. ಈತನೇ ಲಂಕೆಗೆ ಎರಡು ಸಾರಿ ದಂಡೆತ್ತಿಹೋಗಿ ವಿಜಯನಗರ ಸಾಮ್ರಾಜ್ಯಕ್ಕೆ ಲಂಕೆಯನ್ನು ಕೂಡಿಸಿ ೧೪೪೩ರಲ್ಲಿ ಅಲ್ಲಿಯ ರಾಜನಾದ ಆರ್ವಡಿ ಪರಾಕ್ರಮ ಬಾಹುವಿನ ಮೇಲೆ ಕಪ್ಪನ್ನು ಕೂಡ್ರಿಸಿದನು. ಸಿಂಹಳೀ ಭಾಷೆಯ ಕವನಗಳಲ್ಲಿ ಕನ್ನಡಿಗರ ಈ ದಿಗ್ವಿಜಯದ ನಿರ್ದೇಶನವು ಬರುತ್ತದೆ. ಲಕ್ಕಣ್ಣದಂಡೇಶನಿಗೆ ಸಮುದ್ರಾಧಿಪತಿ ಎಂಬುವ ಬಿರುದಿತ್ತು. ಈತನು ವೀರಶೈವ ಮತೀಯನೂ, ಕನ್ನಡ ಕವಿಯೂ ಆಗಿದ್ದನು. ಈತನು ತನ್ನ ಶಿವತತ್ವ ಚಿಂತಾಮಣಿಯಲ್ಲಿ—

"ನಿರುಪಮ, ನಿರಂಜನ, ನಿರಾಧಾರ, ನಿಃಶೂನ್ಯ, ನಿರವಯವ, ನಿರಘ, ನಿರ್ಭಯ, ನಿರಾವರಣ, ನಿರಪೇಕ್ಷ, ನಿರ್ದ್ವಂದ್ವ, ನಿರಹಂಕಾರ, ನಿರ್ಬೈಲ, ನಿತ್ಯತೃಪ್ತ, ನಿರಸೂಯ, ನಿರ್ಮಲಿನ, ನಿರ್ಲೇಪ, ನಿಃಶಬ್ದ, ನಿರವೇದ್ಯ, ತಾತ್ವಿಕ ಮಹಾಲಿಂಗದಂಗದಿಂ। ಧರೆಗೆ ಅವತರಸಿದ ವೃಷಭ ಬಸವೇಶ್ವರನ ಚರಣಾಂಬುಜಕ್ಕೆ ಶರಣು ॥"

ಇದೇ ಗ್ರಂಥದಲ್ಲಿ ಮತ್ತೊಂದು ಕಡೆಗೆ—

"ಆದಿಯಿಂದತ್ತತ್ತಲಾದ ಚಿದ್ರೂಪ ಜೋ ।
ನಾದಬಿಂದು ಕಳಾಸ್ವರೂಪ ಜೋ ಜೋ ।
ವೇದವೇದಾಂತ ಸಾರೋದ್ಧಾರ ತತ್ವಪ್ರಕಾಶ ಪರಮಾನಂದ ಜೋ ॥
ವಾದಕ್ಕತರ್ಕ್ಯ ಮಹಿಮಾವಾರ್ಧಿ ಜೋ ಜೋ ।
ವಿನೋದಾರ್ಥ ಬಾಲಲೀಲೆಯ ನಟಿಸಿದ ಭವ ಜೋ ।
ಮಾದೇವನೊಡೆಯ ಜೋ ।
ಎಂಬ ನಾಗಾಂಬಿಕೆಯ ಚರಣಾಂಬುಜಕ್ಕೆ ಶರಣೂ ॥ ೧ ॥

ಸರ್ವಜ್ಞ ಜೋ ಸದಾಚಾರ ಸಂಪನ್ನ ಜೋ ।
ನಿರ್ವಿಕಾರನೆ ಜೋ ನಿರಾಧಾರ ಮೂರ್ತಿ ಜೋ ।
ದುರ್ವಿಷಯ ದೂರ ಜೋ ।
ದುರ್ಮಾದವಿದಾರ ಜೋ ದುಸ್ಸಂಗರಹಿತ ಜೋ ಜೋ ।
ಗರ್ವಾಂಧಕಾರ ವಿದುಳನ ಚಂಡಭಾನು ಜೋ ।
ದುರ್ವೈರಿಮದರದನಿವಿದಳ ಪಾಂಚಾಸ್ಯ ಜೋ ।
ನಿರ್ವಿಘ್ನ ಜೋ ಎಂದು ಪೊಗಳುವ ನಾಗಾಂಬಿಕೆಯ ಚರಣಾಂಬುಜಕ್ಕೆ ಶರಣೂ ॥ ೨॥

ನಿತ್ಯ ಜೋ ಸತ್ಯ ಜೋ ಸದ್ಭಕ್ತಲೋಲ ಜೋ ।
ಅತ್ಯಧಿಕ ಜೋ ಅಸಾದೃಶ್ಯ ಜೋ ಅನಘ ಜೋ ।
ಶೃತ್ಯನುಮತಾಚಾರ ನಿರತ ಜೋ ನಿಃಪ್ರಪಂಚಕನೆ ಜೋ ನಿರಜ ಜೋ ಜೋ ॥
ಜ್ಯೋತಿರ್ವಿರಹಿತ ಜೋ ಮಾಯಾವಿದೂರ ಜೋ ಮೃತ್ಯುಹರ ಜೋ ।
ಭಕ್ತಿಯುಕ್ತಿ ಪದಾರ್ಥ ಜೋ ।
ಅತ್ಯಂತ ಶುದ್ಧ ಜೋ ಎಂಬ ನಾಗಾಂಬಿಕೆಯ ಚರಣಾಂಬುಜಕ್ಕೆ ಶರಣೂ ॥ ೩ ॥

ಕುಣಿ ಬಸವ ಸಂಗನುಂನತ ಮಹಾಪೂಜೆಗಂ ।
ಕುಣಿ ಬಸವ ಶಿವಧರ್ಮ ಶೀಲವಂತರ ಗತಿಗೆ ।
ಕುಣಿ ಬಸವ ದೇವಗಣ ನಮಿಸುತ್ತಿಪ್ಪಂಘ್ರಿಯಂ ಧಾತ್ರಿಕೃತಕೃತ್ಯರಹಲು ॥
ಕುಣಿ ಬಸವ ಭಕುತಿರಸ ತಾಳೆ ಮದ್ದಳೆಗಳಿಂ ।
ಕುಣಿ ಬಸವ ಚರಲಿಂಗದಿಷ್ಟ ಸಂಕೀರ್ತನೆಗೆ ।
ಕುಣಿ ಬಸವ ಸತ್ಯನಿಧಿ ಎಂಬ ನಾಗಾಂಬಿಕೆಯ ಚರಣಾಂಬುಜಕ್ಕೆ ಶರಣೂ ॥ ೪ ॥

ಈತನೇ ಬಸವ ದಿಟನೀತ ಜಗದಾರಾಧ್ಯ ।
ನೀತನೇ ಬಸವ ದಿಟನೀತ ಶಶಿಧರನ ಕಳೆ ॥
ಈತನೇ ಬಸವ ದಿಟ ಸರ್ವಜ್ಞ ಪರಶಿವಂ ಶಿವಭಕ್ತಿಸಾರ ಹೃದಯಾ ॥
ಈತನೇ ಶಿವಲಿಂಗ ಗುರುಜಾತ ಸಂರಕ್ಷಕಂ ।
ಈತ ಜ್ಯೋತಿರ್ಮಯ ಸದಾನಂದ ವಿಖ್ಯಾತ ।
ಭೂತಳಾಧಿಪಗಧಿಪ ಹಿತನೆಂದು ಪೊಗಳುವವನ ಚರಣಾಂಬುಜಕ್ಕೆ ಶರಣೂ ॥ ೫ ॥

ಸರ್ವಜ್ಞನೀತ ಸರ್ವಕಲೆಯೊಳ್ ನಿಪುಣ ।
ಸರ್ವಸಾಧಕನೀತ ಸರ್ವಕರಣೇಕನು ।
ಸರ್ವಗುಣನಾಯಕಂ ಸರ್ವಲಕ್ಷಣಭರಿತ ಸರ್ವಜಗಕುಲಪಾಲಕ ॥
ಸರ್ವಲಿಂಗೈಕ್ಯಮನ ಸರ್ವಸಜ್ಜನರಿಚ್ಛಾ ।
ಸರ್ವಜೀವದಯಾಪರನ ಭವಮೂರ್ತಿಯಂ ।
ಸರ್ವಸಭೆವಾಗಳರಿದರಸು ಕೈವಿಡಿದವನ ಚರಣಾಂಬುಜಕ್ಕೆ ಶರಣೂ ॥ ೬ ॥

ಮುದ್ದುಮುದ್ದಪ್ಪಪ್ಪ ಭಕ್ತರಿಚ್ಛೆಯನೀವ ।
ಮುದ್ದುಮುದ್ದೆನ್ನ ಗುರುಸಂಗಯ್ಯನರ್ಚನೆಯ ।
ಮುದ್ದುಮುದ್ದೈಸುಳಿವೆ ಜಂಗಮಾರಾಧನೆಗೆ ಸಿದ್ಧಗುರುಪೂಜೆಗಳಿಗೆ ॥
ಮುದ್ದುಮುದ್ದೈಶೈವಭಕ್ತರಂಗೈಕ್ಯದ ।
ಮುದ್ದುಮುದ್ದೀಶನ ಪ್ರಮಥಗಣತಿಂಥಿಣಿಗೆ ।
ಮುದ್ದುಮುದ್ದೀವುದೆನಗೆಂಬ ನಾಗಾಂಬಿಕೆಯ ಚರಣಾಂಬುಜಕ್ಕೆ ಶರಣೂ ॥ ೭ ॥

ಇಲ್ಲಿ ಕವಿಯು ನಾಗಾಂಬಿಕೆಯ ಮುಖದಿಂದ ಬಾಲಕನಾದ ಬಸವಣ್ಣನ ಜೋಗುಳವನ್ನು ಹಾಡಿರುತ್ತಾರೆ.

## ಕವಿ ಚಾಮರಸ

**ಕಾಲ ೧೪೩೦.** ಈ ಕವಿಯು ಪ್ರಭುಲಿಂಗಲೀಲೆಯೆಂಬುವ ಶ್ರೇಷ್ಠ ತರಗತಿಯ ಕನ್ನಡ ಕಾವ್ಯವನ್ನು ರಚಿಸಿರುತ್ತಾರೆ. ಈತನ ಕಾವ್ಯಕ್ಕೆ ಚ್ಯುತಿಯಿಲ್ಲದೆ ಎಂದೆಂದಿಗೂ ಕನ್ನಡ ಸಾಹಿತ್ಯದಲ್ಲಿ ಉತ್ತಮಸ್ಥಾನ ಸಿಗುವದರಲ್ಲಿ ಸಂಶಯವಿಲ್ಲ. ಈತನು ಪ್ರಭುಲಿಂಗ ಲೀಲೆಯಲ್ಲಿ—

ಕಾಯದೊಳು ಗುರುಲಿಂಗ ಜಂಗಮ ।
ದಾಯತವನರಿಯಲ್ಕೆ ಸುಲಭೋ ।
ಪಾಯದಿಂದಿರಿಟ್ಟು ಬಾಹ್ಯಸ್ಥಲಕೆ ಕುರುಹಾಗಿ ॥
ದಾಯ ತೋರಿ ಸಮಸ್ತ ಭಕ್ತನಿ ।
ಕಾಯವನು ಪಾವನವ ಮಾಡಿದ ।
ರಾಯಪೂರ್ವಾಚಾರ್ಯ ಸಂಗನ ಬಸವ ಶರಣಾರ್ತಿ ॥

## ಪ್ರಥಮದಲ್ಲಿ ಕಲ್ಯಾಣಕ್ಕೆ ಬಂದ ಗತಿ—

ಪರಮಶಿಲಾ ಪಶುದೇಹ ಗೇಹದೊ ।
ಳಿರಲು ನಾವಿನ್ನಾರೆವೆನುತಲಿ ।
ಸುರತರುವೆ ಕೆಯ್ಯಾಗಿ ಚಿಂತಾಮಣಿಯೆ ಮನವಾಗಿ ॥
ಸುರರ ಧೇನುವೆ ಶಬುದವಾಗಿಯೆ ।
ನೆರೆದು ನೆಲಸಿದವೆನಲು ಬಸವನ ।
ಕರಮನೋವಚನಂಗಳಿತ್ತವು ಸುಖವನಖಿಳರಿಗೆ ॥

ಸೋಕು ಸುಯಿನುಡಿ ನೋಟ ಮನವೇ ।
ಕೈಕ ಪರುಷಗಳಾಗಿ ವೇಧಿಸಿ ।
ಬೇಕುಬೇಕೆಂಬುದ ನಿರಂತರ ಲಿಂಗ ಜಂಗಮಕೆ ॥
ಸಾಕುಸಾಕೆನೆ ದಣಿಯೆ ನೀಡುತ ।
ನೇಕ ವಸ್ತುವ ನಿಚ್ಚನಿಚ್ಚಲಿ ।
ಲೋಕವನು ಪಾವನವ ಮಾಡಿದ ಬಸವ ಭಕ್ತಿಯಲಿ ॥

ಮಲಯಜದಮರ ಗಾಳಿ ಸೋಂಕಿನ ।
ಉಳಿದ ಮರ ಪರಿಮಳಿಸುವಂತಿರೆ ।
ತಿಳಿಯಲೆಂದಲ್ಲ ಮನಕಾರಣ ಬಸವನುದಯಿಸಲೂ ॥
ಇಳೆಯೊಳಾ ಮಹಿಮನ ಪದಾಂಬುಜ ।
ಗಳ ರಜಸ್ಸಿನ ರೇಣುಸಂಗದ ।
ಬಲುಹಿನಲಿ ಶಿವಭಕ್ತರಾದರು ನರರು ತಮತಮಗೆ ॥

ಭಕ್ತರಿಲ್ಲದ ರಾಜ್ಯವಿಲ್ಲೆನೆ ।
ಭಕ್ತರಿಲ್ಲದ ದೇಶವಿಲ್ಲೆನೆ ।
ಭಕ್ತರಿಲ್ಲದ ಗ್ರಾಮ ಗೃಹವೊಂದಿಲ್ಲವೆಂದೆನಲು ।
ಭಕ್ತಿ ಮಿಗೆ ಪೂರೈಸಿ ಭಾವಿಸೆ ।
ಭಕ್ತಿಯುಗವಾಗಿರ್ದುದಿಳೆ ಶಿವ ।
ಭಕ್ತಿ ಸೃಷ್ಟಿಯದೆನಲು ಬಸವನ ಘನದ ಮಹಿಮೆಯಲಿ ॥

## ಮನೋಲಯದ ಗತಿ—

ಬಸವ ಮಾಡಿದೊಡಾಯ್ತು ಗುರುನೆಲೆ ।
ಬಸವ ಮಾಡಿದೊಡಾಯ್ತು ಲಿಂಗವು ।
ಬಸವ ಮಾಡಿದೊಡಾಯ್ತು ಜಂಗಮವರಿವ ಮಹಿಮಂಗೆ ॥
ಬಸವನಿಂದಧ್ಯಾತ್ಮಭಾವದ ।
ಬೆಸುಗೆಯನು ಮರ್ಝುಭಾವು ನೀನಹುದೈ ಸಮಾಧಿಯಲಿ ॥

ಹಸನಮಾಡಿದೆ ತನುಮನಂಗಳ ।
ದೆಶೆಯನಲ್ಲದೊಡೀ ತೆರವನಾ ।
ದುಸುರಬಲ್ಲರು ಚಾಗೆನುತ ಮೆಚ್ಚಿದನು ಗುರುರಾಯ ।
ಧರೆಯ ಕಠಿಣವ ಕೆಡಿಸಿ ನೀರಿನ ।
ಸಿರಿಯ ರಸವನೆ ದಹಿಸಿ ಪಾವಕ ।
ನುರಿಯ ನಂದಿಸಿ ಮಾರುತನ ಸಂಚಲವ ಗತಿಗೆಡಿಸಿ ॥
ಹಿರಿಯ ಗಗವ ನಿಂಬುಗೊಂಡಿಹ ।
ಶರಣತನದ ಮಹಾತ್ಮೆ ನಿನ್ನನು ।
ಶರಣವೊಕ್ಕುದು ಬಸವ ಮರ್ಘಭಾಪಂದ ಗುರುರಾಯ ॥

## ಮುಗ್ಗಿಯ ಮಾಯಿದೇವಾಚಾರ್ಯರು

ಇವರ ಕಾಲ ೧೪೩೦. ಇವರು ವೀರಶೈವ ಗುರುಗಳಲ್ಲಿ ಸುಪ್ರಸಿದ್ಧರು. ಉಭಯ ಭಾಷೆಗಳಲ್ಲಿ ಪಂಡಿತರಿದ್ದಂತೆ ಧರ್ಮಶಾಸ್ತ್ರದಲ್ಲಿ ಅತ್ಯಂತ ನಿಷ್ಣಾತರು. ವೀರಶೈವ ಸಿದ್ಧಾಂತದ ವಾದದಲ್ಲಿ ಇವರ ಕಾಲಕ್ಕೆ ಇವರೊಬ್ಬರೇ ಆಗಿದ್ದರು. ಅಂದರೆ ಇವರಿಗೆ ಸಮಾನರಾದವರು ಬೇರೊಬ್ಬರಿದ್ದಿಲ್ಲ. ಇವರು ಅನುಭವ ಸೂತ್ರ, ಪ್ರಭುಗೀತೆ, ಏಕೋತ್ತರ ಶತಸ್ಥಲದ ಷಟ್ಪದಿ, ಷಟ್‌ಸ್ಥಲ ಗದ್ಯ, ಶತಕ ತ್ರಯ, ಮುಗ್ಗಿ ಮಾಯಿದೇವನ ವಚನ, ಹೀಗೆ ಆರು ಗ್ರಂಥಗಳನ್ನು ಬರೆದಿರುತ್ತಾರೆ. ಇವುಗಳಲ್ಲಿ ಅನುಭವ ಸೂತ್ರ ಸಂಸ್ಕೃತದಲ್ಲಿರುತ್ತದೆ. ಇವರ ಶತಕ ತ್ರಯವು ಬಹಳ ಸುಪ್ರಸಿದ್ಧ ಗ್ರಂಥವಾಗಿರುತ್ತದೆ.

ಶತಕ ತ್ರಯದಲ್ಲಿ—ಶಿವಾಧವ ಶತಕದೊಳಗೆ—

ಜಯ ಬಸವೇಶ ಭಕ್ತಜನಭಾಗ್ಯ ಶುಭೋದಯ ವೀರಶೈವ ನಿ ॥
ರ್ಣಯ ಪರಮಾವತಾರ ಶರಣಾಗತರಕ್ಷಕ ಚಿದ್ಘನ ಪ್ರಭಾ ॥
ಮಯ ಜಗದಾದಿ ದೇಶಿಕ ಪುರಾತನ ಪುಂಗವ ಶಾಂಭವೈಪುರಾ ।
ತ್ರಯ ಜಯ ಸೋಮನಾಥ ಜಯದೇವ ಜಯಾವಿರತಂ ಶಿವಾಧವಾ ॥

## ಸಪ್ತಕಾವ್ಯದ ಗುರುಬಸವ ದೇವರು

ಇವರ ಕಾಲ ೧೪೩೦. ಇವರು ಯೋಗಾಂಗಭೂಷಣ, ಸದ್ಗುರು ರಹಸ್ಯ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭಗೀತೆ, ಅವಧೂತ ಗೀತೆ, ಮನೋವಿಜಯ ಮೊದಲಾದ ಏಳು ಗ್ರಂಥಗಳನ್ನು ಬರೆದಿರುತ್ತಾರೆ. ಇವರ ಎಲ್ಲ ಗ್ರಂಥಗಳ ಆದಿಯಲ್ಲಿ ಬಸವಣ್ಣನವರ ಸ್ತೋತ್ರವಿದ್ದು ವೃಷಭಗೀತೆಯೆಂಬುವದು ಕೇವಲ ಬಸವೇಶ್ವರನ ಸ್ತುತಿಪರವಾಗಿರುತ್ತದೆ. ಇವರ ಗ್ರಂಥಗಳೆಲ್ಲ ಪ್ರೌಢವಾಗಿದ್ದು ವೀರಶೈವ ವೇದಾಂತ ವನ್ನು ಬಹಳ ಚೆನ್ನಾಗಿ ಬೋಧಿಸುತ್ತವೆ.

ಯೋಗಾಂಗ ಭೂಷಣದಲ್ಲಿ—

ವೆಸನಮದೊರ್ಮಿಗುಣಭ್ರಮೆ ಬಲದಿಂ ।
ದೆಸದಿಹ ಷಡುಮಿತ್ರರ ಸಂತಾನವ ।
ಕುಸುರಿದರಿವ ಭರದಿಂ ಷಟ್‌ಸ್ಥಲ ಕಳನೊಳು ॥
ಮರ್ತ್ಯಕ್ಕಿಳಿದು ಬಸವಾಹ್ವಯದಿಂದವತರಿಸಿದ ।
ವಸುಧೆಯ ಭಕ್ತರ ಸಲಹಿ ಮಹತ್ವದಿ ।
ಮಸುಳಿಸದೆನ್ನೊಳು ಬೆಳಗುವ ವೃಷಭೇಂದ್ರಂಗೆ ನಮಸ್ಕಾರ ॥ ೧ ॥

ಕಲ್ಯಾಣೇಶ್ವರ ಕಾವ್ಯ—

ಹರಹರ ಗುರುಬಸವೇಶ್ವರ ಕರುಣಾಕರ ।
ನಿಮ್ಮಡಿಗಳನರಿಯದ ಮನದಿಂ ।
ಮರುಳಾಗಿಯೆ ಬಹುವಿಧವಹ ।
ಯೋನಿಗಳೊಳಗಿಳಿದುಚ್ಚಳಿಸಿ ।
ನರನಾದೆನು ಕಿರಿಕಿರಿದಾದೆನು ವರ ।
ಕರ ನೀವೆನ್ನ ಮನ ಸಂಕಲ್ಪವನುರುಹಿ ತವಾಂಘ್ರಿ ಸ್ಮರಣೆ ।
ಯೊಳಿಹುದೊಂದನೆ ಬೆಸಸೆನಗೆಂದ ॥ ೨ ॥

ಸ್ವರೂಪಾಮೃತ—

ಶ್ರೀ ಸಕಲಬೋಧನು ವಿಶುದ್ಧನದ್ವೇಷನಖಿಳ ।
ಜಗನ್ನಟನ ನಿಶ್ಶೇಷನೆ ಘನಸಾರಮಹಿಮಾಂಬೋಧಿರೂಪಕನು ॥
ವಾಸನಕ್ಷಯನಖಿಲ ವಿಶ್ವಾವಾಸನಕ್ಷಯನೆನಿಪ ಗುರುಬಸವೇಶ ।
ನಿರಲಿ ಮದೀಯ ಸುಮನಃ ಕಮಲಮಧ್ಯದೊಳು ॥ ೩ ॥

ಸದ್ಗುರು ರಹಸ್ಯ—

ಪರಮಪದ ಪರತತ್ವ ಪರಶಿವ
ಪರಮಸುಖ ಪರಬೊಮ್ಮ ಪರಮೇ ।
ಶ್ವರ ಪರಾಂತ ಪರಾಪರಾನ್ವಯ ಪಾರಪರಮಾರ್ಥಾ ॥
ಪರಮಚರಿತ ಪರೇಶಪಾರಗ ।
ಪರಮಪಾವನ ಪರಮಕಾರಣ ।
ಪರಮಸಂವಿತ್ ಪರಮ ಗುರುಬಸವಂಗೆ ಶರಣೆಂಬೇ ॥ ೪ ॥

ಮತ್ತು

ಘಟವನರಿದಾಕಾಶದಂತುಟು ।
ಪಟವನರಿದಿಹ ಚಿತ್ರದಂತುಟು ।
ಸಟಿಯನುರುದುರುಸತ್ಯದಂತುಟುಪಾಧಿಯಂ ಹರಿದು ॥
ನಟಿಸಿ ತೋರುವದೀಪದಂತುಟು ।
ಕುಟಿಲಮಾಯೆಯನರಿದು ನಿಜದೊಳ್ ।
ಘಟಿಸಿದಮಲಬ್ರಹ್ಮ ಗುರುಬಸವಂಗೆ ಶರಣೆಂಬೆ ॥

ವೃಷಭಗೀತೆ—

ಬಸವನೆಂದು ಕಂಡು ಪಿರಿಯ ।
ಬಸವನೆಂದು ಲೋಕಬಂಧು ।
ಬಸವನೆಂದು ಷಟ್‌ಸ್ಥಲ ಸಮಗ್ರಸಾರದ ॥
ಬಸವನೆಂದು ಮತ್ಸಮಸ್ತ ।
ಬಸವನೆಂದು ಧರ್ಮರೂಪಾ ಬಸವನೆಂದು ।
ಭಜಿಸಿ ಭಜಿಸಿ ಬಾಳ್ವನವಕೃತಾರ್ಥನೂ ॥ ೫ ॥

ಅವಧೂತಗೀತೆ—

ಸ್ವಸ್ತಿಸಮಸ್ತ ಜಗಂ ನಿಜಂ ರೂಪ ।
ಭಕ್ತಮನೋಮಂದಿರ ಚಿದ್ದೀಪ ॥
ನಿತ್ಯಂ ಗುರುಬಸವೇಶಪರಾಪ ।
ಘೂರ್ತೆನ್ನೊಳು ನೆಲಸಿರು ನಿರ್ಲೇಪ ॥

ಗುರುಬಸವೇಶ ಸಮುಗ್ರಪರೇಶ ।
ಶರಣಸುಮನಸ್ಸರಸಿರುಹನಿವಾಸ ॥
ಪರಮನಿರಂತರ ಸುಖಪರಿತೋಷ ।
ವರಕರ ಸಲಹೆನ್ನನು ಭವನಾಶ ॥ ೬ ॥

ಮನೋವಿಜಯ ಕಾವ್ಯ, ಆದಿಯ ಪದ್ಯ—

ಶ್ರೀಮದಮಲಾತ್ಮಾಭಿರಾಮನಾನಂದಾಬ್ಧಿ ।
ಸೋಮಸದನುಲ ಭವಭರಿತನೆನ್ನ ।
ಸ್ವಾಮಿಸದ್ಭಕ್ತ ಸುಪ್ರೇಮಿ ರಕ್ಷಿಸು ಮುದದೊಳೆ ।
ಮಹಾಭದ್ರ ಗುರುಬಸವಲಿಂಗಾ ॥ ೭ ॥

ಅಂತ್ಯಪದ್ಯ—

ಜಯ ಷಡಧ್ವವಿಶುದ್ಧ ।
ಜಯ ಷಟಸ್ಥಲಬ್ರಹ್ಮ ।
ಜಯ ಸಚ್ಚಿದಾನಂದ ಜನ್ಮದೂರ ॥
ಜಯ ಸುಖಾಶ್ರಯರೂಪ ।
ಜಯ ಸದಾನಂದಮಯ ।
ಜಯ ಮಹಾಭದ್ರ ಗುರುಬಸವಶರಣ ॥

ಇದೇ ಕಾವ್ಯದಲ್ಲಿ—

ಶ್ರೀಮತ್ ಪರಮಪರಮಾನಂದ ನಿತ್ಯ ನಿರ್ಮಳ ನಿರಘ ನಿರ್ಗುಣ ನಿರಾವರಣ ಸಕಲ ಜಗದ್ಭರಿತ ಭಕ್ತಜನ ಮನೋಭೂಜ ಶಿವಯೋಗಿ ಜನಸೇವಿತ ಚರಣಾರವಿಂದ ಷಟ್‌ಸ್ಥಲ ಜ್ಞಾನಪ್ರಭಾ ಪುಂಜರಂಜಿತಾಂತರಂಗ ವೀರಶೈವ ಮತ ಸ್ಥಾಪನಾಚಾರ್ಯನಪ್ಪ ಮದ್ಗುರುಬಸವೇಶ್ವರಂ ॥

## ಬೊಮ್ಮರಸ

ಈತನ ಕಾಲ ೧೪೫೦. ಈತನು ಸೌಂದರ ಪುರಾಣವನ್ನು ಬರೆದಿರುತ್ತಾನೆ.

ಸೌಂದರ ಪುರಾಣದಲ್ಲಿ—

ಆದಿಯೊಳು ಶಿವನ ವಾಹನವಾಗಿ ಮುನಿಪತಿ ।
ಶಿಲಾದಸಂಭವನಾಗಿ ಪರಮಶಿವಧರ್ಮವನು ।
ಮೇದಿನಿಯ ಮೇಲುಂಟುಮಾಡಿ ಬಳಿಕಿಳಿಯೊಳಗೆ ಮಂಡಿಗೆಯ ಮಾದರಸರಾ ॥
ಮಾದಲಾಂಬಿಕೆಗಳ ಪವಿತ್ರಗರ್ಭದೊಳುದಯ ।
ವಾದಧಿಕ ವೀರಶೈವಾಚಾರ್ಯ ಬಸವ ದಂಡಾಧೀಶನೆನ್ನ ನೆನಹಿನ ।
ಕೊನೆಯೊಳಿಂಬುಗೊಂಡೀಗೆ ಸತತಾನಂದವಾ ॥

## ತೋಂಟದ ಸಿದ್ಧೇಶ್ವರ

ಇವರ ಕಾಲ ೧೪೭೦. ಇವರು ದೊಡ್ಡ ತಪಸ್ವಿಗಳು. ಷಟ್‌ಸ್ಥಲ ಜ್ಞಾನಾಮೃತ ಸಾರವನ್ನು ಬರೆದಿರುತ್ತಾರೆ. ಇವರಿಗೆ ತೋಂಟದ ಸಿದ್ಧಲಿಂಗ ಯತಿ ಎಂತಲೂ ಅನ್ನುತ್ತಾರೆ. ಇವರ ತರುವಾಯ ಆಗಿಹೋದ ಕವಿಗಳೆಲ್ಲ ಇವರನ್ನು ಕೊಂಡಾಡಿರುತ್ತಾರೆ. ಈ ಮಹಾನುಭಾವಿಗಳು ಹರದನಹಳ್ಳಿಯ ಗೋಸಲ ಚನ್ನಬಸವೇಶ್ವರನ ಶಿಷ್ಯರು. ೧೨ ವರ್ಷಗಳವರೆಗೆ ಕಗ್ಗೆರೆಯ ಸಮೀಪದಲ್ಲಿರುವ ನಾಗಿಣೀ ನದಿಯ ತೀರದಲ್ಲಿ ತೋಂಟ

ದೊಳಗೆ ಶಿವಯೋಗದಲ್ಲಿ ತೊಡಗಿದ ಕಾರಣ ಇವರಿಗೆ ತೋಂಟದ ಸಿದ್ಧಲಿಂಗ ಎಂಬುವ ಹೆಸರು ರೂಢಿಯಾಗಿರುತ್ತದೆ. ಇವರು ಯೋಗಿಗಳಿದ್ದಂತೆ ಐತಿಹಾಸಿಕ ಪುರುಷರೂ ಆಗಿರುತ್ತಾರೆ. ಶಿಲಾಶಾಸನದಲ್ಲಿ ಇವರ ಬಗ್ಗೆ "ಇಂತಪ್ಪ ಅನಾದಿ ಜಂಗಮವೇ ಜಗದ್ಧಿತಾರ್ಥವಾಗಿ ಚರಿಸಿದ ಕ್ರಮವೆಂತೆಂದೊಡೆಜ್ಞಾನ ಕ್ರಿಯಾ ಸ್ವರೂಪನುಂ ಸರ್ವಾಂಗ ಲಿಂಗಿ ಷಟ್‌ಸ್ಥಲಜ್ಞಾನಿ ಸರ್ವಾಚಾರಸಂಪನ್ನ ಪಾದೋದಕಪ್ರಸಾದ ಪ್ರತಿಷ್ಠಾಪನಾ ಚಾರ್ಯನುಂ ಅಷ್ಟಾವರಣಾಲಂಕರಣ ದ್ವೈತಾದ್ವೈತತಿಮಿರಮಾರ್ತಂಡನುಂ ಇಂತಪ್ಪ ದಿವ್ಯಯೋಗಿ ಸಿದ್ಧಲಿಂಗೇಶ್ವರಂಗೆ ಸಮ್ಯ ಜ್ಞಾನೋದಯವಾಗಿ" ಹೀಗೆಯೇ ಅವರ ವರ್ಣನೆಯು ಇರುತ್ತದೆ. ಇವರ ವಿಷಯವಾಗಿ ವಿರಕ್ತ ತೋಂಟದಾರ್ಯನು ಸಿದ್ಧೇಶ್ವರ ಪುರಾಣವನ್ನೂ, ಶಾಂತೇಶ ಕವಿಯು ತೋಂಟದ ಸಿದ್ಧೇಶ್ವರ ಪುರಾಣವನ್ನೂ ಬರೆದಿರುತ್ತಾರೆ. ಷಡಕ್ಷರ ಕವಿಯು ತನ್ನ ರಾಜಶೇಖರ ವಿಲಾಸದಲ್ಲಿ ಇವರಿಗೆ "ಯತಿತತಿ ಚಕ್ರವರ್ತಿ" ಯೆಂದು ಸಂಬೋಧಿಸಿದ್ದಾನೆ. ಇಂತಹ ಮಹಾಜ್ಞಾನಿಗಳು ತಮ್ಮ ಷಟ್‌ಸ್ಥಲ ಜ್ಞಾನಾಮೃತಸಾರದಲ್ಲಿ ಶ್ರೀ ಬಸವಣ್ಣನವರ ಬಗ್ಗೆ—

> "ಅನಾದಿಪರಶಿವ ತತ್ವದಿಂದ ಚಿತ್ತು ಉದಯವಾಯಿತ್ತು ಆ ನಿರ್ಮಲ ಮಹಾಜ್ಞಾನ ಚಿತ್ಸ್ವರೂಪವೇ ಬಸವಣ್ಣನೋಡಾ, ಆ ಬಸವಣ್ಣನಿಂದ ನಾದಬಿಂದುಕಳೆ ಸಮರಸವಾಗಿ ಅಖಂಡಪರಿಪೂರ್ಣ ಗೋಳಕಾಕಾರ ತೇಜೋಮೂರ್ತಿ ಲಿಂಗಸ್ವರೂಪವಾಯಿತ್ತುನೋಡಾ, ಆ ಮಹಾಲಿಂಗದಿಂದ ಪಂಚಸಾದಾಖ್ಯಮೂರ್ತಿಯಾಯಿತ್ತು ನೋಡಾ, ಇದು ಕಾರಣ ಅನಾದಿ ಶರಣ ಆದಿಲಿಂಗವೆಂದೆ ಬಸವಣ್ಣನಿಂದ ಲಿಂಗವಾದ ಕಾರಣ ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ"

ಮತ್ತು

**ಸಿದ್ಧೇಶ್ವರವಚನ, ಪುಟ ೧೫೨**

> "ಸಪ್ತ ಕಮಲ ಮಧ್ಯದಲ್ಲಿ ಉತ್ಪತ್ತಿಯಾದ ಪರಂಜ್ಯೋತಿ ತತ್ವ ಬ್ರಹ್ಮಾಂಡದಿಂದತ್ತತ್ತಲಾದ ಘನತೆ ಘನಪರಕೆಪರವಾದ ಪರಾಪರವು ತಾನೆ ನೋಡಾ, ಆ ಪರಾಪರವು ತಾನೆ ತತ್ವ ಬ್ರಹ್ಮಾಂಡ ಒಳ ಹೊರಗೆ ಸರ್ವವ್ಯಾಪಕನಾಗಿ ಪರಿಪೂರ್ಣನಾಗಿ ಸರ್ವವನೂ ಹೊದ್ದಿಯೂ ಹೊದ್ದದ ಮುಟ್ಟಿಯೂ ಮುಟ್ಟದ ಅಕಳಂಕನು ನೋಡಾ, ಸಮಸ್ತ ಕಮಲದ ಎಸಳು ಗಳೊಳಗೆ ಅಕ್ಷರಾತ್ಮಕ ಲಿಂಗವಾಗಿ ಅದ್ವಯನು ನೋಡಾ, ನವಚಕ್ರಾಂಬು ಜಂಗಳ ದಳಕುಳ ವರ್ಣಾದಿದೇವತೆಗಳ ತೋರಿಕೆ ಏನೇನೂ ಇಲ್ಲದ ನಿತ್ಯ ನಿರಂಜನ ನಿರಾಮಯನಾದ ಶರಣಂಗೆ ನಮೋ ನಮೋ ಎಂಬೆನು. ಆ ನಿರಾಮಯ ವಸ್ತುವೇ ಸಂಗನ ಬಸವಣ್ಣನು ನೋಡಾ, ಆ ಚಿದದ್ವಯ ನಾದ ಬಸವಣ್ಣನೇ ಎನ್ನ ಅಂಗಲಿಂಗ, ಎನ್ನ ಪ್ರಾಣಲಿಂಗ, ಎನ್ನ ಭಾವಲಿಂಗ, ಎನ್ನ ಸರ್ವಾಂಗಲಿಂಗವು ಕಾಣಾ, ಎನ್ನ ಷಡಾಧಾರದಲ್ಲಿ ಸಂಬಂಧವಾದ ಷಡಕ್ಷರಮಂತ್ರವು ಬಸವಣ್ಣನಾದಕಾರಣ ಬಸವಲಿಂಗ ಬಸವಲಿಂಗ ಬಸವಲಿಂಗ ಎಂದು ಜಪಿಸಿ ಭವಾರ್ಣವ ದಾಟಿದೆನು ಕಾಣಾ,

ಬಸವಣ್ಣನೇ ಪತಿಯಾಗಿ ನಾನೇ ಸತಿಯಾಗಿ ಶರಣನಾದೆನು ಕಾಣಾ, ಬಸವನೇ ಲಿಂಗವಾದ ಕಾರಣ ನಾನು ಅಂಗವಾದೆನು ಕರ್ತೃವೇ ಬಸವಣ್ಣ ಭೃತ್ಯನೇ ನಾನು ಒಡೆಯನೇ ಬಸವಣ್ಣ ಬಂಟನೇ ನಾನಾದಕಾರಣ ದೇಹವೇ ನಾನು ದೇಹಿಯೇ ಬಸವಣ್ಣನಯ್ಯ ಇದುಕಾರಣ ಎನ್ನ ನಡೆವ ಚೇತನ, ಎನ್ನ ನುಡಿವ ಚೇತನ, ಎನ್ನ ನಡೆನುಡಿಯೊಳಗಿಪ್ಪ ಸರ್ವಚೈತನ್ಯಾತ್ಮಕನು ಬಸವಣ್ಣನಯ್ಯಾ ಇಂತಪ್ಪ ಬಸವಣ್ಣನ ಶ್ರೀಪಾದದಲ್ಲಿ ಅಡಗಿ ನಾನು ಶರಣನಾದೆನು ಕಾಣಾ, ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ''

ಮತ್ತು

**ಸಿದ್ಧೇಶ್ವರವಚನ, ಪುಟ ೧೫೦**

''ಹೆಣ್ಣಿನ ರೂಪು ಕಣ್ಣಿಗೆ ರಮ್ಯವಾಗಿ ತೋರುವದಿದು ಕರಣಂಗಳ ಗುಣಕಾಣಿರಣ್ಣ ಕರಣದ ಕತ್ತಲೆಯ ಲಿಂಗ ಬೆಳಗನುಟ್ಟು ಕಳೆದು ಮುಕ್ಕಣ್ಣನೇ ಕಣ್ಣಾಗಿಪ್ಪ ಶರಣ ಬಸವಣ್ಣನ ಪಾದವ ತೋರಿಸಯ್ಯ ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ''

ಮತ್ತು

**೧೬೧ ನೆಯ ಪುಟದಲ್ಲಿ**

''ಕಾಯಕ್ಕಾಧಾರ ಭಕ್ತ, ಜೀವಕ್ಕಾಧಾರ ಭಕ್ತ, ಕರಣಕ್ಕಾಧಾರ ಭಕ್ತ, ಲಿಂಗಕ್ಕಾಧಾರ ಭಕ್ತ, ಜಂಗಮಕ್ಕಾಧಾರ ಭಕ್ತ, ಪ್ರಸಾದಕ್ಕಾಧಾರ ಭಕ್ತ, ಶಕ್ತಿಗಾಧಾರ ಭಕ್ತ, ಭಕ್ತಿಗಾಧಾರ ಭಕ್ತ, ಎನಗಾಧಾರ ಭಕ್ತ, ನಿನಗಾಧಾರ ಭಕ್ತ, ನಾನು ನೀನು ಎನ್ನದ ನಿರವಯ ನಿರ್ಮಾಯನಯ್ಯ ಭಕ್ತನು ಇಂತಿಪ್ಪ ಭಕ್ತ ಸಂಗನ ಬಸವಣ್ಣನ ಶ್ರೀ ಪಾದಪದ್ಮದಲ್ಲಿ ಭ್ರಮರ ನಾಗಿರಿಸಯ್ಯ ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ.''

## ಗುಮ್ಮಳಾಪುರದ ಸಿದ್ಧಲಿಂಗ

ಈತನ ಕಾಲ ೧೪೪೦. ಈತನು ತೋಂಟದ ಸಿದ್ಧಲಿಂಗ ಯತಿಯ ಶಿಷ್ಯನು. ಈತನು ಷಟ್‌ಸ್ಥಲದ ಲಿಂಗಾಂಗಸಂಬಂಧದ ನಿರ್ವಚನವನ್ನು ಬರೆದಿರುತ್ತಾನೆ. ಅದರಲ್ಲಿ—

ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳ ಕಳೆದು ಎನ್ನಂತರಂಗ ಬಹಿರಂಗ ಶುದ್ಧಾತ್ಮನ ಮಾಡಿದ ಮಡಿವಾಳಯ್ಯ ಸಾಕಾರ ಮೂರು ಮೂರು ಹದಿನೆಂಟು ಪ್ರಕಾರವನೊಳಗೊಂಡು ಎನ್ನ ಬಹಿರಂಗದಲ್ಲಿ ಆಯತವಾದನಯ್ಯ ಬಸವಣ್ಣ, ಎನ್ನ ನಿರಾಕಾರ ಮೂರು ಮೂರು ಹದಿನೆಂಟು ಪ್ರಕಾರವನೊಳಗೊಂಡು ಎನ್ನಂತರಂಗದಲ್ಲಿ ಸ್ವಾಯತನಾದನಯ್ಯ ಚನ್ನಬಸವಣ್ಣ, ನಿರಾಳ ನಿರ್ಮಾಯ ನಿಶ್ಶೂನ್ಯ ಬ್ರಹ್ಮವೇ ಉಭಯಸಂಗದಲ್ಲಿ ಸನ್ನಿಹಿತವಾದನಯ್ಯ ಪ್ರಭುದೇವರು. ಇಂತೀ

ಅಂತರಂಗ ಬಹಿರಂಗ ಆತ್ಮಸಂಗವನರುಹಿ ಬೋಳ ಬಸವೇಶ್ವರನು ಸಿದ್ಧೇಶ್ವರನ ನಿಜಪದವನೊರೆದೊರೆದು ತೋರಿದಕಾರಣ ಎನ್ನ ತನು ಬಯಲಾಯಿತ್ತು.

ಹೀಗೆಯೇ ಇನ್ನೂ ಈ ವಚನ ದೊಡ್ಡದಿರುತ್ತದೆ.

## ಆರಾಧ್ಯ ಚರಿತ್ರೆ – ಕವಿ ನೀಲಕಂಠಾಚಾರ್ಯ

ಈತನ ಕಾಲ ೧೪೮೫. ಕನ್ನಡ ಸಾಹಿತ್ಯದಲ್ಲಿ ಇದು ಮಹಾಗ್ರಂಥವಾಗಿದ್ದು ೬೫ ಸಂಧಿ, ಪದ ೩೦೬೯ ಇವೆ. ಬಸವಣ್ಣನವರ ಸ್ತೋತ್ರವು ಅನೇಕ ಪದ್ಯಗಳಲ್ಲಿರುತ್ತದೆ. ಮೂರು ಪದ್ಯಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ.

ಆದೌ ಪ್ರಳಯದಲ್ಲಿ ಪರಮೇಶನ ಪರತನು ।
ವಾದ ಧರ್ಮಂ ವೃಷಾಕಾರ ವಾಹನಮಾಗಿ ।
ಸಾದರದಿ ನೆರೆ ಶಿವಂ ಬೆಸಸಲು ಶಿಲಾದಂಗಯೋನಿಜ ತನೂಜನಾಗಿ ॥
ಮಾದೇವನಂ ನಂದಿನಾಮದಿಂ ಭಜಿಸಿರ್ದು ।
ಮೇದಿನಿಗೆ ಶಿವಭಕ್ತಿ ವರ್ಧನಾರ್ಥಂ ಬಂದು ।
ಮಾದಿರಾಜಂಗೊಗೆದು ಕಲ್ಯಾಣದೊಳಗೆಸೆವ ಬಸವೇಶನಂ ಬಣ್ಣಿಪೇಂ ॥ ೧೦ ॥

ಶೋಣಿಮಾಚಿತವರದ ಪಾಣಿ ಶಿವಲೋಕ ನಿ ।
ಶ್ರೇಣಿ ಜವನಲ್ಲೀಕೃಪಾಣಿ ಭಕ್ತ್ಯಂಕುರ ।
ಕ್ಷೋಣಿ ಸತ್ಯಸಮೇತವಾಣಿ ಬಿಜ್ಜಳಸಮುಕ್ಷಾ ॥
ಕ್ಷೋಣಿತಬಲಾನನಶ್ರೇಣಿ ಚಿದ್ರಸನದೀ ।
ವೇಣಿ ನಿಶ್ಶ್ರೀಮಗೀರ್ವಾಣಿ ನಿಜಜಂಗಮ ।
ಪ್ರಾಣಿ ಬಸವೇಶ್ವರಂ ಕೇಣಿಗೊಂಡೆನ್ನ ಹೃನ್ಮಾಣಿಕ್ಯ ಗೃಹದೊಳಿರ್ಕೆ ॥ ೧೧ ॥

ಮತ್ತೊಂದು ಕಡೆಗೆ—

ಭರದಿಂದೆ ಕೇಳ್ದು ಮಡಿವಳ್ಳ ಮಾಚಯ್ಯ ನುರು ।
ತರಹರ್ಷದಿಂದೆ ಪೊಗಳ್ದಂ ಭಾಪುರೇ ಬಸವ ।
ವರ ಜಂಗಮಪ್ರಾಣಿ ಸಂಧಾನ ಬಸವಣ್ಣ ಜಂಗಮಪ್ರಾಣಿಲೀನ ॥
ಚರಲಿಂಗ ಸಂತತಪ್ರಾಣ ಭಾಪುರೇ ಭಾಪು ।
ಚರಲಿಂಗ ಮಂಗಳಪ್ರಾಣ ಭಾಪುರೇ ಭಾಪು ।
ಚರಲಿಂಗ ಸುಪ್ರಸಂತಾಣ ಮಝಭಾಪು ಭಾಪುರೇ ಭಾಪು ಬಸವೇಶ ॥

## ಎಳಂದೂರ ಹರೀಶ್ವರ

ಈತನ ಕಾಲ ೧೪೮೬. ಈತನು ಪ್ರಭುದೇವರ ಪುರಾಣವನ್ನು ಬರೆದಿರುತ್ತಾನೆ. ವಿವಿಧ ವೃತ್ತಗಳಿಂದ ಕೂಡಿರುತ್ತದೆ. ಕವಿಯು ಶಬ್ದಗಳ ಜೋಡಣೆಯನ್ನು ಚೆನ್ನಾಗಿ ಮಾಡಿರುತ್ತಾನೆ.

ಪ್ರಭುದೇವರ ಪುರಾಣದಲ್ಲಿ—

ಷಡ್ಭಕ್ತಿಯುಕ್ತಾಘ ಷಡ್ಭವವಿದೂರಫಣೀರಾಡ್ಭೂಷಣಾಂಚಿತಶ್ವಿಡ್ಭಾವಜಂ ವಿಜಿತ ।
ರುಡ್ಭಯವಿಕೃಂತನದಿಂ ಮುರಾಡ್ಭಾರತಿ ಕುಂದತ್ವಿಡ್ಭಾದರನ್ಮಿತಸುರ ।
ದ್ವಿಡ್ಭಂಜನಂ ವಿಶ್ವಸ್ವಡ್ಭೂದ್ರಧರನತನ ಜೇಡ್ಭಾಳನೇತ್ರಹಿತಬ್ರಾಡ್ಭುವನ ಪಾಲಮುನಿ ।
ರಾಡ್ಭೂರಿವರಫಲ ಸುರೇಡ್ಭುಂಜ ಜಯತು ಯಮರಾಡ್ಭಂಗ ಪುತ್ರ ಬಸವಾ ॥

## ಗೂಳೂರು ಸಿದ್ಧವೀರಣ್ಣನವರು

ಇವರ ಕಾಲ ೧೫೫೦. ಇವರು ಅನೇಕ ಪುರಾತನರ ವಚನಗಳಿಂದ ಶೂನ್ಯ ಸಂಪಾದನೆ ಗ್ರಂಥವನ್ನು ರಚಿಸಿರುತ್ತಾರೆ. ಇವರು ಶ್ರೇಷ್ಠರಾದ ಶಿವಾನುಭವಿಗಳಿದ್ದ ರೆಂಬುವದು ಇವರ ಗ್ರಂಥರಚನಾ ಚಾತುರ್ಯದಿಂದಲೇ ತಿಳಿದುಬರುತ್ತದೆ. ಶೂನ್ಯ ಸಂಪಾದನೆಯು ಬಹಳ ಉತ್ತಮ ಗ್ರಂಥವಾಗಿದ್ದು ಕನ್ನಡದಲ್ಲಿ ಹೀಗೆ ವಾದ ವಿವಾದ ದಿಂದ ನಿರ್ಣಯಮಾಡಿದ ಧರ್ಮಗ್ರಂಥವೆಂದರೆ ಇದೊಂದೇ ಆಗಿರುತ್ತದೆ. ಅಂತೂ ಕನ್ನಡಿಗರು ಹೆಮ್ಮೆಪಡತಕ್ಕ ಗ್ರಂಥವಾಗಿರುತ್ತದೆ.

ಇವರು ಬಸವಣ್ಣನವರ ಬಗ್ಗೆ—

"ಅದೆಂತೆಂದೊಡೆ ಪ್ರಭುದೇವರು ಸಿದ್ಧರಾಮಯ್ಯ ದೇವರು ಬಸವ ರಾಜ ದೇವರ ಮಹಾತ್ಮೆಯಂ ಕೊಂಡಾಡುತ್ತ ಪರಮಾನಂದದೊಳೋಲಾ ಡುತ್ತ ಬರುತಿರಲತ್ತ ಅಖಂಡಾದ್ವಯನಿತ್ಯ ನಿರವಯ ನಿಶ್ಶೂನ್ಯವಪ್ಪ ನಿಃಕಲ ಪರಶಿವನ ಸ್ಥೂಲತತ್ವವೇ ಮರ್ತ್ಯಲೋಕದಲ್ಲಿ ಜಗಹಿತಾರ್ಥವಾಗಿ ಬಸವೇಶ್ವರನಾಮದಿಂದವತರಿಸಿ ಷಡುದರುಶನ, ಷಣ್ಮತ, ಷಟ್‍ಸಮಯ ಗಳಿಂದ ವೀರಶೈವ ಸದ್ಭಕ್ತಿ ಮಸುಳಿಸಿರಲಾ ಶಿವಭಕ್ತಿಯನುದ್ಧರಿಸಿ ಸರ್ವಾ ಚಾರವನಿಂಬುಗೊಂಡು ಕಲ್ಯಾಣಪಟ್ಟಣದಲ್ಲಿ ಗುರುಲಿಂಗ ಜಂಗಮ ಭಕ್ತಿಯ ಮಾಡುತ್ತ ನಿತ್ಯವೆಂಭತ್ತೆಂಟು ಪವಾಡಂಗಳಂ ಜಯಿಸುತ್ತಿರ್ಪ ಬಸವೇಶನೆಂತಾತನೆಂದೊಡೆ"

"ಶೈವಂಗೆದೆಗೊಂತ, ವೈಷ್ಣವಜೀಮೂತ ಜಂಝಾಮಾರುತ, ಚಾರ್ವಾಕಚೌದಂತಶೃಣಿ, ಬೌದ್ಧದರ್ದುರ ಫಣಿ, ಕ್ಷಪಣವನದಾವಾನಲ, ನೈಯ್ಯಾಯಿಕಹರಿಣ ಶಾರ್ದೂಲ, ಭಾಟಗೋಮತ ಶರಧಿ ಕುಂಭಜ, ಪ್ರಭಾಕರಕದಳೀ ಮತ್ತಗಜ, ಮೀಮಾಂಸ ಹಿಮಚೈತ್ರ, ವೈಶೇಷ ಲತಾ ಲವಿತ್ರ, ಕಪಾಲಿಕುಮುದ ಮಾರ್ತಂಡ, ಸಾಂಖ್ಯ ಮತಶರಭ ಭೇರುಂಡ, ಕರ್ಮವಾದ ಕುಧರ ಕುಲಿಶ, ಕಾಲವಾಡ ಕಮಲತಾರೇಶ, ಮಂತ್ರವಾದ ಮಸ್ತಕಶೂಲ, ಮಾಯಾವಾದ, ಮೂಲಕುದ್ದಾಲ, ಕೌಳಮತ ತರುಪರಶು, ಕಾಳಾಮುಖಕಂಠಪಾಶ, ಶಾಕ್ತೇಯತಿಮಿರದೀಪ, ಸೌರಮತಪನ್ನಗ ಖಗಾಧಿಪನೆನಿಸಿ, ವೀರಶೈವ ಸದ್ಭಕ್ತಿಯ ವರ್ಧನಂಗೈವುತ್ತ ಶಿವಶರಣ ಸಾಗರಕ್ಕೆ ಪೂರ್ಣೇಂದುವಾಗಿ ಸುಖಮಿರುತ್ತಲೊಂದು ದಿನ ಶಿವಲಿಂಗಾ ರ್ಚನೆಯಂ ಮಾಡುತ್ತ ಲಿಂಗದೋಳ್ತಿಳಿದು ಆ ಲಿಂಗಕಳೆ ಏಕವಾಗಿ ವಾರಿವಾರಿ ಕೂಡಿದಂತೆ ಕ್ಷೀರಕ್ಷೀರ ಬೆರೆದಂತೆ ರತ್ನದೋಳ್ಕಳೆ ಬೆರಸಿಪ್ಪಂತೆ ಅಂತರಂಗದ ಜ್ಞಾನ ಬಹಿರಂಗದಕ್ರಿ ಒಂದಾಗಿ ಇಷ್ಟಲಿಂಗದ ಕಳೆ ಪ್ರಾಣ ಲಿಂಗಕ್ಕೆ ವೇಧಿಸಿ, ಪ್ರಾಣಲಿಂಗ ಸಂಬಂಧವಪ್ಪ ಭೇದವು ಶರಣಸಂಗ ದಿಂದಲ್ಲದೆ ದೊರಕೊಳ್ಳದೆಂದು ಜ್ಞಾನಮುಖದೊಳು ನಿರೀಕ್ಷಿಸುತ್ತಿರಲು ನಿಃಕಲ ಪರಶಿವನ ಸೂಕ್ಷ್ಮತತ್ವವೆ ಚನ್ನಬಸವೇಶ್ವರನೆಂಬ ನಾಮದಿಂದ ಮರ್ತ್ಯಕ್ಕವತರಿಸಿ ಸಕಲ ಪ್ರಮಥರ್ಗೆ ಷಟುಸ್ಥಲವಂ ಬೋಧಿಸುವದಕ್ಕೆ

ತಾನೇ ಕಾರಣವಾಗಿ ಅಲ್ಲಮಪ್ರಭುದೇವರ ಬರವಿಂಗೆ ತಾನೇ ಮೂಲಿಗನಾಗಿ
ಬಂದು ಆ ಬಸವೇಶ್ವರ ಸ್ತೋತ್ರಮಂ ಮಾಡಿ ಅನುಗ್ರಹವಂ ಪಡೆದರು.''

## ಗುರುಬೋಧೆ

ಕವಿಯ ಕಾಲ ೧೪೫೦. ಕವಿಯ ಹೆಸರು ವಿರತಮಹಾಲಿಂಗ. ಈ ಗ್ರಂಥದಲ್ಲಿ ೧೨೫ ವೃತ್ತಗಳಿರುತ್ತವೆ.

ವಿಶ್ವತೋಮುಖ ವಿಶ್ವತೋಬಾಹು ।
ವಿಶ್ವತೋಚಕ್ಷು ಪಾದಂಗಳು ।
ಸಸ್ವದಲಿ ಸ್ವರ್ಗಾದಿ ಸ್ವರ್ಗವು ಕಾಂಬುದೀ ತೆರನು ॥
ಶಿಷ್ಯ ಗುರುಕರಜಾತನಾದನು ।
ಬಸವ ಪರಮನ ಖಾಡವಿಡಿಯಲು ।
ಗುರು ಗುಹೇಶ್ವರ ಲಿಂಗಕಾಣ್ಯೆ ಬಸವ ಕೇಳೆಂದ ॥

ಈ ಗ್ರಂಥದ ಪ್ರತಿಯೊಂದು ಪದ್ಯದ ಕೊನೆಯಲ್ಲಿ—ಬಸವ ಕೇಳೆಂದಾ ಎಂದು ಮುಗಿದಿರುತ್ತದೆ. ಆದರೆ ಕಡೆಯ ಪದ್ಯದಲ್ಲಿ—

ಇಹದ ಮುಚ್ಚಿಕೆ ಇಷ್ಟಲಿಂಗವು ।
ಪರದ ಮುಚ್ಚಿಕೆ ಪ್ರಾಣಲಿಂಗವು ।
ಗುರುವು ಮುಚ್ಚಿಕೆ ಭಾವಲಿಂಗವು ಮೂರು ಲೋಕದಲಿ ॥
ಇರವು ಪರವು ಅರಿವು ಮೂರನು ।
ಅರಿವಿನೊಳಗೆ ಅರಿತನಾದರೆ ।
ಇಹಕ ಪರತರವಸ್ತು ಸಂಗನ ಬಸವ ಕೇಳೆಂದಾ ॥

ಎಂದು ಮುಗಿಸಿರುತ್ತಾನೆ. ಈ ಗ್ರಂಥವನ್ನು ರಚಿಸಿದವರ ಹೆಸರು ಗ್ರಂಥದಲ್ಲಿ ಇರುವದಿಲ್ಲ.

## ಸುರಂಗಕವಿ

ಈತನ ಕಾಲವು ೧೫೦೦. ಈ ಕವಿಗೆ ''ಕರ್ಣಾಟಕ ಕವಿ ಚಕ್ರವರ್ತಿ'' ಎಂಬುವ ಬಿರುದಿತ್ತೆಂದು ಗೊತ್ತಾಗುತ್ತದೆ. ಈತನು ನರರನ್ನು ಸ್ತುತಿಸುವದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿದಂತೆ ತೋರುತ್ತದೆ.

ತ್ರಿಷಷ್ಠಿ ಪುರಾತನರ ವಿಲಾಸ—

ಪರಸಮಯಂ ವಿವರ್ಧಿಸಿ ಶಿವಾಗಮ ಧರ್ಮವಡಂಗಿ ಪೋದುದಂ ।
ಹರನೆರಿದೆಯ್ದಿದಲ್ಧರೆಗೆ ಬಂದು ಪವಾಡಮನಂದನೇಕಮಂ ।
ವಿರಚಿಸಿ ಯಾವನುದ್ಧರಿಸಿದಂ ಶಿವಭಕ್ತಿಯನಾತ್ಮ ಮುಕ್ತಿಯಂ ವರಗುರುವಾತನಾದಿ
ವೃಷಭಂ ಬಸವೇಶ್ವರನೀಗೆ ಭಕ್ತಿಯಂ ॥

## ಗುಬ್ಬಿಯ ಮಲ್ಲಣಾರ್ಯರು

ಇವರು ವೀರಶೈವಾಮೃತ ಮಹಾಪುರಾಣ ಗಣಭಾಷ್ಯರತ್ನಮಾಲಾ ಬರೆದಿರುತ್ತಾರೆ. ಇವರ ಕಾಲ ೧೫೬೯. ಇವರು ಸಂಸ್ಕೃತ, ಕನ್ನಡ ಭಾಷಾದ್ವಯದಲ್ಲಿಯೂ ಪಂಡಿತರಿದ್ದರೆಂದು ಇವರ ಗ್ರಂಥಗಳಿಂದ ತಿಳಿಯುತ್ತದೆ. ಮತ್ತು ಇವರು ಬೇರೆಬೇರೆ ಶಾಸ್ತ್ರಗಳಲ್ಲಿಯೂ ಪಾರಂಗತರಿದ್ದರೆಂದು ಬೇರೆ ಬೇರೆ ಕವಿಗಳ ವರ್ಣನೆಯಿಂದ ಗೊತ್ತಾಗುತ್ತದೆ. ಬಸವ

ಪುರಾಣವನ್ನು ಹೇಳುವದರಲ್ಲಿ ಇವರು ಒಳ್ಳೇ ಬಲ್ಲಿದರಾದುದರಿಂದ ಇವರಿಗೆ ಬಸವ ಪುರಾಣದ ಮಲ್ಲಣಾರ್ಯರೆಂತಲೂ ಹೆಸರು ಇರುತ್ತದೆ. ಇವರ ಭಾವಚಿಂತಾರತ್ನವು ಶ್ರೇಷ್ಠ ತರಗತಿಯ ಗ್ರಂಥವಾಗಿರುತ್ತದೆ. ವೀರಶೈವಾಮೃತ ಮಹಾಪುರಾಣವು ಬಹಳ ದೊಡ್ಡ ಗ್ರಂಥವಿದ್ದು ವೀರಶೈವ ಧರ್ಮದ ತತ್ವಗಳನ್ನು ಚೆನ್ನಾಗಿ ವಿವರಿಸುತ್ತದೆ. ಕವಿಗಳು ವಾರ್ಧಿಕ ಷಟ್ಪದಿಯಲ್ಲಿ ಈ ಗ್ರಂಥವನ್ನು ಬರೆದಿರುತ್ತಾರೆ. ಏಳು ಸಾವಿರಕ್ಕಿಂತ ಹೆಚ್ಚಾಗಿ ಪದ್ಯಗಳಿರುತ್ತವೆಂದಮೇಲೆ ಇವರ ಯೋಗ್ಯತೆಯು ಬಹಳ ದೊಡ್ಡದೆಂದು ಸಹಜವಾಗಿ ವ್ಯಕ್ತವಾಗುತ್ತದೆ.

ವೀರಶೈವಾಮೃತ ಮಹಾಪುರಾಣ—೭ನೇ ಖಂಡ, ೨ನೆಯ ಅಧ್ಯಾಯದಲ್ಲಿ—

ಶಿವನೇಶಿಲಾದಂಗೆ ಮಗನ ಯೋನಿಜನಪ್ಪೆ ।
ಭುವನಕ್ಕೆ ಮಾಂಪಿತಂ ತತ್ಪಿತಂ ನೀನೆಂದ ।
ನಾನವನಿಯೊಳು ತತ್ಪುರಾಣ ಶ್ರೀಗಿರಿಯ ಮಹತ್ವದೊಳಿವಂ ॥
ತಾ ಶಿಲಾದಾಕುವರಂ ಮಹಾಯೋಗಿ ಕಾಮರೂಪಪ್ಪನೆ ।
ಮ್ಮವಯವದ ಸೋಂಕಿಗೆ ಪಾತ್ರಮದ್ವಾಹನಂ ।
ತವೆಭಕ್ತಿಯುದ್ಧರಿಪಕಾರಣಂ ಕಲ್ಯಾಣದಲ್ಲಿ ಬಸವೇಶನಾದಂ ॥

ಸಾಕ್ಷಿ—

ಶಿಲಾದಸ್ಯ ಸುತಶ್ಚಾಯಂ । ಕಾಮರೂಪೀ ಮಹಾಜವಃ ॥
ಮಮಾಂಗಸ್ಪರ್ಶ ಯೋಗ್ಯಶ್ಚ । ಮಮ ವಾಹನತಾಂಗತಃ ॥

ಶ್ರೀ ಭಕ್ತಿ ಯುದ್ಧರಿಪಕಾರಣಂ ಬಸವೇಶ ।
ನೇ ಭುವನದೊಳ್ ಪುಟ್ಟಿದನನಾಮವಾದ ವನ ।
ಶೋಭನ ಮುಖಾಬ್ಜದೊಳಗಿರ್ಪುದಂತಲ್ಲಿ ನಾಂ ನೆಲಸಿರ್ಪೆನೆಂದು ನುಡಿದಂ ॥
ಆ ಭವಾನೀಶನಾಶೃತಿ ಪುರಾಣ ಸ್ಮೃತಿಯ ।
ವೈಭವ ಪ್ರಖ್ಯಾತ ಬಸವೇಶ್ವರಾದಿಯ ಮ ।
ಹಾ ಭವ್ಯಗಣನಿಕರದಾಚರಣೆ ವೀರಶೈವಂ ಕೇಳು ಮಗನೆಂದಂ ॥

ಸಾಕ್ಷಿ—

ಯಸ್ಯವಕ್ತ್ರೇಸ್ಥಿತಂದೇವಿ । ಬಸವೇತ್ಯಕ್ಷರತ್ರಯಂ ।
ವಸಾಮಿಸತತಂ ತತ್ರಸತ್ಯಂ ಸತ್ಯಂ ನ ಚಾನ್ಯಥಾ ॥

ಅಂದರೆ ಶಿಲಾದ ಋಷಿಯ ತಪಸ್ಸಿಗೆ ಮೆಚ್ಚಿ ನಾನು ನಿನಗೆ ಅಯೋನಿಜನಾದ ಮಗನೆನಿಸುವೆನು. ಲೋಕಕ್ಕೆ ನಾನು ತಂದೆಯು. ನನಗೆ ನೀನು ತಂದೆಯು. ಅದೇ ಪುರಾಣದ ಶ್ರೀಗಿರಿಯ ಮಹತ್ವದಲ್ಲಿ ಕಾಮರೂಪನಾದ ಮಹಾಯೋಗಿಯೆನಿಸಿದ ಶಿಲಾದ ಪುತ್ರನು ನಮ್ಮ ಅವಯವ ಸ್ಪರ್ಶಕ್ಕೆ ಯೋಗ್ಯನು. ನನಗೆ ವಾಹನನು ಭಕ್ತಿಯನ್ನುದ್ಧರಿಸುವ ಕಾರಣ ಭುವನದಲ್ಲಿ ಅವತರಿಸಿ ಬಸವೇಶನೆಂಬುವ ನಾಮವು ಯಾರ ಮುಖದಲ್ಲಿರುವದೋ ಅಲ್ಲಿ ನಾನು ನೆಲೆಸಿರುವೆನೆಂದು ಶಿವನೇ ಹೇಳಿರುವನು. ಆ ಸ್ಮೃತಿ, ಶೃತಿ ಪುರಾಣದಲ್ಲಿ ಪ್ರಖ್ಯಾತವೆನಿಸಿದ ಬಸವೇಶ್ವರ ಮೊದಲಾದ ಗಣನಿಕರದಾಚರಣೆಯೇ ವೀರಶೈವವು.

ಭಾವಚಿಂತಾ ರತ್ನದಲ್ಲಿ—

ನಿರುಪಮ ನಿರಂಗ ನೆನಿಪಲ್ಲಮಪ್ರಭುರಾಯ । ಹರಭಕ್ತರೇ ಸಂಗ
ಮೇಶರೆಂದೆಂಬ ಬಸವರಸ ವಿಮಲ ಪ್ರಸಾದಾಂಗಿಯಹ ಚನ್ನಬಸವೇಶರಿವ

ರಂಘ್ರಿ ಕಮಲ । ಪರಮ ಷಟ್‌ಸ್ಥಳವಾದುವವನುತಿಸುವೆಂ ನುತಿಸಿ ನಿರುತ
ಷಟ್ಪದಿಯಾದುವಿವು ಕಮಲಜಾಂಡದೋಳ್ । ಪರಿಕಲಿಸಿ ಪಸರಿಸುಗೆ
ಚರಗುರು ಶಿವಾರ್ಚಕರಮನಕುತ್ಸವಂಬೀರುತೇ ॥

## ವೀರಭದ್ರರಾಜ

ಈತನ ಕಾಲವು ೧೫೩೦. ಇವನು ರಾಜವಂಶಕ್ಕೆ ಸೇರಿದ ಉದ್ದಾಮ ಕವಿಯಾಗಿರುತ್ತಾನೆ. ಈತನು "ವೀರಭದ್ರ ವಿಜಯ", ಪಾರ್ವತೀವಲ್ಲಭ ಶತಕ, ಉಮಾಮಹೇಶ್ವರ ಶತಕ, ಪ್ರಾಣನಾಥ ಶತಕ, ಶ್ರೀಕಂಠಸೋಮೇಶ್ವರ ಶತಕ, ಕಂದ ಶತಕ ಹೀಗೆ ಆರು ಗ್ರಂಥಗಳನ್ನು ಬರೆದಿರುತ್ತಾನೆ. ಈ ಕವಿಗೆ ಉಭಯ ಕವಿ, ಬುಧನುತ, ಸತ್ಕವೀಶ್ವರ ಮೊದಲಾದ ಬಿರುದುಗಳಿರುತ್ತವೆ.

ವೀರಭದ್ರ ವಿಜಯ ಕಾವ್ಯದಲ್ಲಿ—

ಮರಣಂ ಪೊರ್ದದ ಮೈಮೆಯಿಂದಮಳ ಸರ್ವಜ್ಞತ್ವದಿಂದ ಗಣೇ ।
ಶ್ವರ ನಾನಿರ್ಪುದರಿಂದ ಯೋಜನ ನಿನಿಪ್ಪೀ ದಿವ್ಯ ಸಾಮರ್ಥ್ಯದಿಂ । ಹರನಂ
ತಿರ್ದುದರಿಂ ದ್ವಿತೀಯ ಶಿವನೆಂಬೀ ನಾಮದಿಂದೊಪ್ಪುವಾ । ವರನಂದೀಶ್ವರ
ನೀವನಕ್ಕೆಮಗೆ ಚಿತ್ತಾನಂದ ಸಂದೋಹಮಂ ॥

## ಚನ್ನಬಸವಾಂಕ

ಈತನ ಕಾಲ ೧೫೫೦. ಇವನು ಮಹಾದೇವಿಯಕ್ಕನ ಪುರಾಣವನ್ನು ಬರೆದಿರುತ್ತಾನೆ. ಮಹಾದೇವಿಯಕ್ಕನ ಪುರಾಣದಲ್ಲಿ ೩೩ ಸ್ಥಲಗಳಿದ್ದು ೧೬೦೦ಳ ಪದ್ಯಗಳಿರುತ್ತವೆ.

ಚಾರ್ವಾಕ ಜೈನ ಜಲಧಿ ಬಾಡಬ ವಿಷ್ಣು ।
ಚಾರ್ವಾಕ ಪಟು ತಿಮಿರ ಮಹಿರವಿನಾಶ ।
ಚಾರ್ವಾಕ ವಿಪ್ರ ಮತ್ತೇಭ ಪಂಚಾಸ್ಯ ನೆರೆನಿಂದಕಾಚಲ ವಿಕುಲಿಶ ॥
ಚಾರ್ವಾಕಲಾವ ಕೋರಗ ವೈನತೀಯಸ್ಯ ।
ಚಾರ್ವಾಕ ಸಮಯ ಕಮಲೇಂದು ಬಂಧುರಭಕ್ತ ।
ಸಾರ್ವಭೌಮಿಶ ಕುಲವಾರ್ಧಿ ವರ್ಧನಚಂದ್ರ ಬಸವಕೊಡು ನಿರ್ವಿಘ್ನವಾ ॥

## ಗುರುಲಿಂಗವಿಭು

ಈತನು ಭಿಕ್ಷಾಟನ ಚರಿತ್ರೆಯನ್ನು ಬರೆದಿರುತ್ತಾನೆ. ಈತನ ಕಾಲ ೧೫೫೦. ಭಿಕ್ಷಾಟನ ಚರಿತ್ರೆಯ ಎರಡನೆಯ ಶ್ಲೋಕದಲ್ಲಿ—

ನಿರತ ನಿರ್ಮಳ ಚಿತ್ತವಡೆದೀಶ್ವರ ಧ್ಯಾನಿ ।
ಹರಶಾಂತನೇಕೈಕ ಲಿಂಗಾನು ಸಂಧಾನಿ ।
ಭರಿತ ಪರಮಾನಂದ ಮೋಕ್ಷಸಂಪದ್ದಾನಿ ವೀರಶೈವಾಭಿಮಾನಿ ।
ಅರಿವಿಕಾರಗುಣಂಗಳಂಟದ ಸಮಾಧಾನಿ ।
ಶರಣ ಸನ್ನಿಹಿತ ಸ್ಥಲದ ಸಹಜ ಸುಮ್ಮಾನಿ ।
ಕರುಣಿಮುದ್ಗುರು ಶಿವಜ್ಞಾನಿ ಬಸವೇಶ್ವರನ ಚರಣಕಭಿವಂದಿಸುವೆನು ।

ಗ್ರಂಥದ ಕೊನೆಯಲ್ಲಿ—

ಗುರುವೆ ಜಯ ಜಯ । ವೇದಶಾಸ್ತ್ರ ಸನ್ನುತಿ-ಪಾತ್ರ
ಗುರುವೆ ಜಯ ಜಯ । ನಿಜಾನಂದ ನಿರ್ಮಲಗಾತ್ರ
ಗುರುವೆ ಜಯ ಜಯ । ವಿಶ್ವತೋರೂಪ ವಿಮಲ ಪ್ರತಾಪ ಮಾಯಾವಿಲೋಪ ॥
ಗುರುವೆ ಜಯ ಜಯ । ಪರಮ ಪಾವನ ಗುಣೋಲ್ಲಾಸ ।
ಗುರುವೆ ಜಯ ಜಯ । ನಿರಂಜನ ನಿತ್ಯ ಪರಿತೋಷ ।
ಗುರುವೆ ಜಯ ಜಯ । ಶಿವಜ್ಞಾನಿ ಬಸವೇಶಮಪು ಹೃದಯಾಬ್ಜ ಸನ್ನಿವಾಸ ॥

## ಕಿಕ್ಕಿರಿಯಾರಾಧ್ಯ ನಂಜುಂಡ

ಇವನ ಕಾಲ ೧೫೫೦. ಇವನು ಭೈರವೇಶ್ವರ ಕಾವ್ಯವನ್ನು ಸಾಂಗತ್ಯದಲ್ಲಿ ಬರೆದಿರುತ್ತಾನೆ. ಇದರಲ್ಲಿ ಅನೇಕ ಪದ್ಯಗಳಿಂದ ಬಸವೇಶ್ವರನ ಸ್ತೋತ್ರ ಮಾಡಿದ್ದಾನೆ.

## ವಿರಕ್ತ ತೋಂಟದಾರ್ಯ

ಇವರ ಕಾಲ ೧೫೬೦. ಇವರು ಸಿದ್ಧೇಶ್ವರ ಪುರಾಣ, ಪಾಲ್ಕುರಿಕೆಯ ಸೋಮೇಶ್ವರ ಪುರಾಣ, ಕರ್ಣಾಟಕ ಶಬ್ದಮಂಜರಿ, ಮನೋವಿಜಯ ತಾತ್ಪರ್ಯ, ಮೊಗ್ಗೆಯ ಮಾಯಿದೇವನ ಶತಕತ್ರಯದ ಟೀಕೆ, ವೀರಶೈವಾನಂದ ಚಂದ್ರಿಕಾ ಮೊದಲಾದ ಗ್ರಂಥಗಳನ್ನು ಬರೆದಿರುತ್ತಾರೆ. ಉಭಯ ಭಾಷೆಗಳಲ್ಲಿಯೂ ಇವರು ಪ್ರಕಾಂಡ ಪಂಡಿತರಿದ್ದಂತೆ ತಿಳಿಯುತ್ತದೆ. ಇವರು ಮೇಲೆ ಬರೆದ ಗ್ರಂಥಗಳಲ್ಲದೆ ಸಿದ್ಧಲಿಂಗೇಶ್ವರ ಶತಕ, ಪಾಲ್ಕುರಿಕೆಯ ಸೋಮನಾಥನ ಪಂಚಗದ್ಯ, ಟೀಕೆ, ಚಿದಾನಂದು ಎಂಬುವ ಚಂಪೂಗಳನ್ನು ಬರೆದಿರುವಂತೆ ಕಾಣುತ್ತದೆ. ವೀರಶೈವ ಸಮಾಜದ ಪಂಡಿತರಲ್ಲಿ ಇವರಿಗೆ ದೊಡ್ಡ ಸ್ಥಾನವಿರುತ್ತದೆ.

ಪಾಲ್ಕುರಿಕೆಯ ಸೋಮೇಶ್ವರ ಪುರಾಣದಲ್ಲಿ—

ಲಲಿತ ಸದ್ಧರ್ಮವೇರೂಪಾಗಿ ಪರಶಿವಂ ।
ಗೆಲಘು ವಾಹನಮಾಗಿ ನಂದೀಶರಾಹ್ವಯು ।
ದಳೆದುರೆ ಶಿಲಾದಂಗೊಗೆದು ಮಂಡಿಗೆಯ ಮಾದಿರಾಜಮಾದಾಂಬೆಯರೊಳಂ ॥
ಬಳಿಕವತರಿಸಿ ಕೃತಯುಗದ ಧರ್ಮ ಮಾರ್ಗಮಂ ।
ಕಲಿಯುಗದೊಳಾಚರಿಸಿ ಮೆರೆದು ಶಿವ ಸತ್ವವ ।
ನಿಳೆಗೆ ಪಕಟಿಸಿದ ಬಸವ ದಂಡನಾಯಕಂ ॥

ಸಿದ್ಧೇಶ್ವರ ಪುರಾಣದಲ್ಲಿ—

ಪರತರ ಬ್ರಹ್ಮಸ್ವರೂಪನೆಂದೆನಿಸಿ ಶಂ ।
ಕರ ವಾಹನವಾಗಿ ಮುನಿಪತಿ ಶಿಲಾದ ನುರು ।
ತರ ಗರ್ಭದೋಳ್ ಜನಿಸಿ ಕೃತಯುಗದೆ ವರ್ತಿಸುವ ನಾಲ್ಕು ಪಾದದ ಧರ್ಮವಂ ॥
ಧರೆಯರಿಯೆ ಕಲಿಯುಗದೊಳಾಚರಿಸಿ ಲೋಕಮಂ ।
ಪೊರೆದು ವರವೀರಶೈವ ನೆಲೆಗೊಳಿಸಿದ ಬಸ ।
ವರಸನೆ ಮಗನವರತ ಶಿವಭಕ್ತಿಯಂ ಕೊಟ್ಟು ರಕ್ಷಿಸುವಗೆ ಕರುಣದಿಂದಂ ॥

ಇದೇ ಪುರಾಣದಲ್ಲಿ ಬೇರೊಂದು ಕಡೆಗೆ—

ಪರಮ ಸಚ್ಚಿತ್ಸುಖಾಕಾರ ಗುರುಬಸವ ಸು ।
ಸ್ಥಿರ ಮಹಾ ಸರ್ವತತ್ವಾಧಾರ ಗುರುಬಸವ ।
ನಿರುಪಮ ಸದಾಚಾರಯುಕ್ತ ವರವೀರಶೈವ ಸಾರೋದ್ಧಾರ ಗುರುಬಸವ ॥

## ಮುರಿಗೆದೇಶಿಕೇಂದ್ರ

ಇವರ ಕಾಲ ೧೫೬೦. ಇವರು ರಾಜೇಂದ್ರವಿಜಯವನ್ನು ಬರೆದಿರುತ್ತಾರೆ. ಇದಕ್ಕೆ ಹವಿನ್ಮಾರ ಕಾವ್ಯವೆಂತಲೂ ಅನ್ನುತ್ತಾರೆ. ಇದರಲ್ಲಿ ಹವಿನ್ಮಾರನ ಚರಿತ್ರೆಯು ಇರುತ್ತದೆ.

"ಚಿದ್ರಾವೈದಾರ ಧೀರಂ ಪರತರಮಹಿಮಾಕ್ರಾಂತ ಕೈವಲ್ಯಕಾಂತಂ ।
ಸದ್ರೂಪಾಕಾರ ಸಾರಾಸುಗುಣ ಮಣಿಕಲಾ ಪುಂಜತಾಪಾರ ಪಾರಂ ॥
ಮುದ್ರಾಮಂ ಭವ್ಯಧಾಮಂ ಮದಹರ ಕರುಣಾಪಾಂಗತುಂಗ ಮೃಡಾಂಗಂ ।
ವಿದ್ರಾಢ್ಯಂ ಜಾಡ್ಯದೂರಂ ಜಯತು ಬಸವರಾಜಂ ಮಹದ್ಧರ್ಮ ತೇಜಂ ॥"

## ಅದೃಶ್ಯಕವಿ

ಪ್ರೌಢರಾಯನ ಕಾವ್ಯವನ್ನು ಬರೆದಿರುತ್ತಾನೆ. ಕವಿಯ ಕಾಲ ೧೫೮೦. ಈತನು ತನ್ನ ಕಾವ್ಯದ ಆರಂಭದಲ್ಲಿ—

ಬಸವನೆಂದರೆ ಪಾಪದೆಶೆಗೆಟ್ಟುಹೋಗುವದು ।
ಬಸವನೆಂದೆಂಬ ಮೂರಕ್ಕರದ ಘನತೆಯನು ।
ಉಸುರಲೆನ್ನಳವಲ್ಲ ಫಣಿರಾಜಗರಿದರಿದು ಬಸವ ಭವ ಭಯ ನಾಶವೂ ॥
ಪುಸಿಯಲ್ಲಸಾ ಎನಲು ಸರ್ವಸಂಪತ್ತಕ್ಕು ।
ಜಸವಕ್ಕುವಾಯೆನಲು ವಾಂಙ್ಮನಕ್ಕತೀತನೆ ।
ವೃಷಭೇಶ ನಿಮ್ಮ ಮಹಿಮೆಯ ಪೊಗಳಲೆನ್ನಳವೆ ಶಿಶುವೆಂದು ಪೊರೆವುದೆನ್ನಾ ॥

ಮೃಡನ ನೇಮದಿ ಬಸವ ದಂಡನಾಯಕನು ।
ತನ್ನೊಡನೆ ಏಳ್ನೂರು ಎಪ್ಪತ್ತು ಗಣ ಸಹಿತಾ ತಾಂ ।
ಪೊಡವಿಗೈತಂದು ಮಂಡಗಿಯ ಮಾದರಸರಿಗೆ ಬಾಲಪ್ರೀತಿಯುದಕ್ಕಿಸಿ ।
ಸಡಗರದಲಿಂದ ವೋಲಗದಲ್ಲಿ ಲಿಪಿ ಬೀಳೆ ।
ಗಡಣದಿಂದಲೋದಲರಸಂ ಮಂತ್ರಿತನವೀಯೆ ।
ದೃಢದಿ ಅಗಣಿತ ಸವಾಡವ ತೋರಿ ವಾದಿಗಳ ಗೆದ್ದ ವೃಷಭೇಶ ಸಲಹೂ ॥

## ಕವಿ ವಿರೂಪಾಕ್ಷಪಂಡಿತ

ಈತನು ಚನ್ನಬಸವ ಪುರಾಣವನ್ನು ಬರೆದಿರುತ್ತಾನೆ. ಈತನ ಕಾಲ ೧೫೮೪. ಈತನು ಒಳ್ಳೆಯ ಪಂಡಿತನಾಗಿದ್ದು ಈತನ ಚನ್ನಬಸವ ಪುರಾಣವು ಕನ್ನಡ ಸಾಹಿತ್ಯದಲ್ಲಿ ಸುಪ್ರಸಿದವೂ, ಮೃದುಮಧುರವೂ ಆಗಿರುತ್ತದೆ. ವಿರೂಪಾಕ್ಷ ಪಂಡಿತನು ವಿಜಯ ನಗರದ ಹಿರಿಯ ಮಠದ ವಂಶಕ್ಕೆ ಸೇರಿದವನಾಗಿರುತ್ತಾನೆ.

ಚನ್ನಬಸವ ಪುರಾಣದಲ್ಲಿ—

ಪಶುವೆನಿಸದವುಲ ಸುರಧೇನು ಮರವೆಂದೆನಿಸ ।
ದಸಮು ಕಲ್ಪದೃಮಂ ಕಲ್ಲೆನಿಸಿಕೊಳ್ಳದಿಹ ।
ಮಿಸುಪ ಚಿಂತಾರತ್ನ ಖಣಿಯೆನಿಸದಿಹ ಮಹಾಪುರುಷ ತೃಣವೆನಿಸಿಕೊಳದ ।
ಪೊಸಮರು ಜವಣಿಮನಂ ನುಡಿನೋಟ ನಡೆಕೈಗ ।
ಳೆಸೆವುತಿಹ ಪಂಚಪರುಷಮವಾಗಿ ರಂಜಿಸುವ ।
ಬಸವ ದಂಡಾಧೀಶ ಶರಣು ಮತ್ಪ್ರಾಣೇಶ ಭವನಾಶ ಭಕ್ತಿಕೋಶ ॥

ಮತ್ತೊಂದು ಪ್ರಕರಣದಲ್ಲಿ—

ಅಲಿಸಲೆ ಬಸವನೀಂ ಪರಶಿವನ ನೇಮದಿಂ ।
ದೇಳು ನೂರೆಪ್ಪತ್ತಮರ ಗಣಂಗಳ್ವೆರಸಿ ।
ಲೀಲೆಯಿಂ ವೀರಶೈವಾಚಾರಮಂ ಪ್ರತಿಷ್ಠಿಸಲೆಂದು ಕರುಣದಿಂದೆ ॥
ಭೂಲೋಕಕ್ಕೈತಂದೆ ನಿನ್ನ ಮಹಿಮೆಯನೊಲ್ದು ।
ಪೇಳಲೆನ್ನಳವೆ ನೀನನಿಮಿಷಂಗೊಲಿದಿತ್ತ ।
ಮೇಲೆ ತಲ್ಲಿಂಗದೋಳ್ ಬೆರಗಾಗಿ ನಿಜ ಸುಖ ಸಮಾಧಿಯೊಳಗಿರುತಿರ್ದನೂ ॥

ಎಸೆವ ಮಾದರಸ ಮಾದಾಂಬೆಯರ ಗರ್ಭದಿಂ ।
ಬಸವನೆಂದೆಂಬ ನಾಮದೆ ಜನಿಸಿ ವಿಪ್ರಸುತ
ನಸಮು ಕೂಪದೊಳೆಯ್ದೆ ಬಿದ್ದುಸಾಯಲ್ಕವನ ತಾಯ್ತಂದೆಗಳ್ ಭರದೊಳು ॥
ಬಸವನಂ ಬೆಂಬತ್ತಲೋಡಿ ನದಿಯಂ ಕಾಣು ।
ತೆಸಕದಿಂ ದ್ವಿಭಾಗಮಂ ಮಾಡಿ ಪೋಗಿಸಂ ।
ತಸದೆ ಸಂಗಮನಾಥ ನಿಂದೆ ತಾಂ ಕೊಂದುದಿಲ್ಲೆನಿಸಿದಂ ಚೋದ್ಯಮೆನಲು ॥

## ಸಂಗನ ಬಸವೇಶ್ವರ

ಇವರು ವಚನಗಳನ್ನು ಬರೆದಿರುತ್ತಾರೆ. ಇವರ ಕಾಲವು ೧೬೦೦.

ಹರಹರ ಶಿವಶಿವ ಮತ್ಪ್ರಾಣನಾಥಾ ಅನಾದಿ ಮಹಾಪ್ರಭು ಶ್ರೀ ಗುರುಲಿಂಗ ಜಂಗಮದ ಚರಣೋದ್ಧೂಳನವೆ ಚಿದ್ಬ್ರಹ್ಮ ಚಿದೈಶ್ವರ್ಯ ನೋಡಾ, ಶ್ರೀ ಗುರುಲಿಂಗ ಜಂಗಮದ ಕ್ರಿಯಾಚಕ್ಷುವಿನ ಕ್ರಿಯಾಪ್ರಕಾಶವೇ ಕ್ರಿಯಾಭಸ್ಸಿತವಾಗಿಪ್ಪುದಯ್ಯ, ಶ್ರೀ ಗುರುಲಿಂಗ ಜಂಗಮದ ಜ್ಞಾನ ಚಕ್ಷುವಿನ ಜ್ಞಾನಪ್ರಕಾಶವೇ ಮಹಾ ಜ್ಞಾನಭಸಿತವಾಗಿರ್ಪುದಯ್ಯಾ, ಇಂತಹ ಚಿತ್ಪ್ರಕಾಶ ಸ್ವರೂಪವಾದ ಚಿದ್ಭಸಿತವ ಅನಾದಿ ಬಸವದಂಡ ಪ್ರಮಥರು ತಮ್ಮ ಗೋಪ್ಯಮುಖದಲ್ಲಿ ಸಕಲ ಕ್ರಿಯಂಗಳನಾಚರಿಸುತ್ತಿರಲು ಆಗ ಶಿವನು ತನ್ನ ಪಂಚಮುಖದಿಂದ ಪಂಚವರ್ಣದ ಗೋವ ನಿರ್ಮಿಸಿ ಎಲೈ ಎನ್ನ ಚಿಚ್ಚೈತನ್ಯ ಮೂರುತಿ ಬಸವದಂಡನಾಯಕರೇ ಈ ಪಂಚ ಗೋವುಗಳ ಈ ಕೀಳು ಲೋಕಕ್ಕೆ ಪಾವನ ಸ್ವರೂಪವ ಮಾಡಿ ನಿಮ್ಮ ಶರಣಗಣಂಗಳಿಗೆ ಅರ್ಪಿತವಾಗುವಂತೆ ಮಾಡಿರಯ್ಯ ಎಂದು ಅಭಿವಂದಿಸಲು ಆಗ ಬಸವದಂಡ ಪ್ರಮಥರು ಆ ಗೋವಿನ ಸಗಣವ ಕ್ರಿಯಾಗ್ನಿಯಿಂದ ಶ್ರೀ ಗುರುಲಿಂಗ ಜಂಗಮದ ಚಿತ್ಪ್ರಭೆಯು ವೇಧಿಸಿ ಸಕಲ ಲೋಕಂಗಳಿಗೆ ಸಕಲ ಮುನಿಜನಕ್ಕೆಲ್ಲ ಕಾಲಹರಭಸಿತ ಕರ್ಮಹರಭಸಿತ ಪಾಪಹರಭಸಿತ

ವೆನಿಸಿ ಕೊಟ್ಟರು ನೋಡಾ, ಆ ಗೋವಿನ ಜಲಮಲ ವೀರ್ಯದಿಂದೇ ಭೂಮಿಗೆ ಸಮ್ಮಾರ್ಜನೆಗೆ ಯೋಗ್ಯವೆನಿಸಿದರಯ್ಯ, ಆ ಗೋವಿನ ಕುಚಕ್ಷೀರವ ಸರ್ವಲೋಕಂಗಳಿಗೆ ಪಂಚಾಮೃತವೆನಿಸಿದರಯ್ಯ, ಆ ಗೋವಿನ ಪುತ್ರನಿಂದ ಸಕಲ ಪ್ರಾಣಿಗಳು ಬದುಕುವಂತೆ ಮಾಡಿದರಯ್ಯ, ಆ ಗೋವಿನ ಮಾಂಸವ ದುರಾಚಾರಿಗಳು ಭುಂಜಿಸುವಂತೆ ಮಾಡಿದರಯ್ಯ, ಆ ಗೋವಿನ ಚರ್ಮವ ಶಿವಗಣಂಗಳ ಪಾದರಕ್ಷೆ ಎನಿಸಿದರಯ್ಯ, ಇತ್ತಲಾಗಿ ಸಕಲ ಪ್ರಮಥ ಗಣಂಗಳೆಲ್ಲ ಶ್ರೀ ಗುರುಬಸವೇಶ್ವರ ಸ್ವಾಮಿಗಳ ಚಿತ್ಪ್ರಕಾಶಭಸಿತವ ಬೆಸಗೊಂಡು ಆ ವಿಭೂತಿಯ ಶ್ರೀ ಗುರುಲಿಂಗ ಜಂಗಮದ ದೀಕ್ಷಾಜಲ ಶಿಕ್ಷಾಜಲದಿಂದ ಸಮ್ಮಿಶ್ರವಮಾಡಿ ೨೧ ದೀಕ್ಷಾಸ್ವರೂಪವಾದ ಮಹಾ ಪ್ರಣವ ಸ್ಥಾಪಿಸಿ ಸಕಲಾಚಾರ ಕ್ರಿಯೆಗಳಿಗೆ ಶುಭತಿಲಕ ಇದೇ ಚಿದ್ವಿಭೂತಿ ಯೆಂದು ನಿರಂತರ ಸ್ನಾನ, ಉದ್ಧೂಳನ ಮಾಡಿದರು ನೋಡಾ, ಅದರಿಂ ಮೇಲೆ ಆ ಗೋವಿನ ಕುಚಕ್ಷೀರವ ಈ ಭಸಿತದಿಂದ ಪಾವನವಮಾಡಿ ಪರಮಾಮೃತವೆನಿಸಿ ಶ್ರೀ ಗುರುಲಿಂಗ ಜಂಗಮಕ್ಕೆ ಸಮರ್ಪಿಸಿ ಅವರು ಒಕ್ಕುಮಿಕ್ಕ ಪ್ರಸಾದ ಪರಮಾಮೃತ ಶೇಷವ ನಿಜನೈಷ್ಠ್ಯೆಯಿಂದ ಲಿಂಗಾರ್ಪಿತವ ಮಾಡಿದರು ನೋಡಾ, ಅದೆಂತೆಂದೊಡೆ "ವಿಭೂತಿ ರ್ವಿಭವ ಶ್ಚೈವ ವಿಧಿಕರ್ಮವಿನಾಶನಂ। ಯಮಲೋಕ ಭಯಂ ನಾಸ್ತಿ ಶಿವಲೋಕಂ ಮಹೀಯತೇ ॥ ಇಂತೆಂದುದಾಗಿ ಶ್ರೀ ಗುರುಲಿಂಗ ಜಂಗಮದ ಚಿತ್ಪ್ರಕಾಶ ಭಸಿತವ ಪರಿಷ್ಕರಿಸಿ ಸಕಲ ಪ್ರಮಥ ಗಣಂಗಳಿಗೆ ಪರಮಪದ ಮೋಕ್ಷದರಣಿ ಎಂದು ಬೋಧಿಸಿದಂಥ ಬಸವದಂಡನಾಥನ ಚರಣಕ್ಕೆ ನಮೋ ನಮೋ ಎಂಬೆನು ಸಂಗನ ಬಸವೇಶ್ವರಾ ॥

## ಕವಿ ಬಸವಲಿಂಗ

ಈತನ ಕಾಲ ೧೬೧೧. ಈತನು ಶಿವಾಧಿಕ್ಯ ಪುರಾಣವನ್ನು ಬರೆದಿರುತ್ತಾನೆ. ಇದಕ್ಕೆ ಬಳ್ಳಿಗಾವಿಯ ಮಹಾತ್ಮೆಯೆಂತಲೂ ಇನ್ನೊಂದು ಹೆಸರಿರುತ್ತದೆ.

ಕವಿಯು ತನ್ನ ಪುರಾಣದಲ್ಲಿ—

ಹರ ರೂಪವನೊಲ್ದು ಮೂರ್ಧ್ನಿಯೊಳಾನುತಾ ।
ತುರದಿಂದೇಳ ನೂರೆಪ್ಪತ್ತು ಗಣಸಹಿತ ಧರೆಯೊಳವ ।
ತರಿಸಿ ಗುರು ಚರಪರವನರ್ಚಿಸುವ ಚರಣಾಂಬು ತತ್ಶೇಷವ ॥
ಚಿರಕಾಲ ಸೇವಿಸುತ ಶಿವಯುತರು ಭಕ್ತರಿಗೆ ।
ಉರುತರದ ಮುಕ್ತಿ ಮಾರ್ಗವ ತೋರುತ ತವೆಪೊರೆವ ।
ಕರುಣಾರ್ಣಕಂತು ಕಾಲಾರಿ ಸಂಗನ ಬಸವದಂಡೇಶ ಗಾನೆರಗುವೆನು ॥ ೧೧ ॥

ಧರ್ಮಗುರು ತಾನಾಗಿ ಧರೆಯೊಳಲೆವನರವರ ।
ಕರ್ಮವನು ಕಡೆಗಾಣಿಸುತ ಸರ್ವಹಿತಮಾಗಿ ।
ಮರ್ಮವರಿದಚಲಭಕ್ತಿಯು ಜ್ಞಾನ ವೈರಾಗ್ಯ ಪದದ ಘನತೆಯನರಹುತೇ ॥
ಹಮ್ಮಳಿದು ತ್ರಿವಿಧಕ್ಕೆ ತ್ರಿವಿಧವನು ಸವೆಸುತ್ತ ಕೂರ್ಮೆ (ಊರ್ಮೆ) ಯಿಂ ಶೂನ್ಯ ಸಿಂಹಾಸನವ ರಚಿಸುತ್ತ ।
ನಿರ್ಮಾಯ ಗುರುವಿನಂಘ್ರಿಯನು ಹಾರೈಸುತಿಹ ಬಸವಂಗೆನೆತನಪ್ಪೆನು ॥ ೧೨ ॥

ಜಯ ಬಸವರಾಜ ಭಕ್ತಿಯ ಪ್ರಚುರತರ ಬೀಜ ।
ಜಯ ಬಸವ ಗುರುವೆ ಭಕ್ತರ ಪೊರೆವ ಸುರತರುವೆ ।
ಜಯ ಬಸವಬಂಧು ಭವರಹಿತ ಸದ್ಗುಣ ಸಿಂಧು ಜಯ ಬಸವ ನಿತ್ಯನಿರಘ ।
ಜಯ ಬಸವ ತಂದೆ ಜಗತ್ರಯವ ಪಾಲಿಸಬಂದೆ ।
ಜಯ ಬಸವ ಕಾಮಿತವನೀವ ಸಲೆಸಂಜೀವ ಜಯ ಬಸವ ಕರುಣಪರುಷ ॥

## ಕವಿ ಸಿದ್ಧನಂಜೇಶ

ಈತನಿಗೆ ಚಿಕ್ಕನಂಜೇಶನೆಂಬುವ ಹೆಸರು ಕೂಡ ಇರುತ್ತದೆ. ಈತನ ಕಾಲ ೧೬೫೦. ಈತನು ರಾಘವಾಂಕ ಚರಿತೆ ಮತ್ತು ಗುರುರಾಜ ಚಾರಿತ್ರ ಹೀಗೆ ಎರಡು ಪ್ರೌಢಗಳಾದ ಗ್ರಂಥಗಳನ್ನು ರಚಿಸಿರುತ್ತಾನೆ.

ತನ್ನ ರಾಘವಾಂಕ ಕಾವ್ಯದಲ್ಲಿ—

ಬಸವನಾಮಂ ದೋಷತಿಮಿರಾತುಳಾರ್ಯಮಂ ಬಸವನಾಮಂ ದುರಿತವನಧಿ ಬಡಬಾನಲಂ ।
ಬಸವನಾಮ ಕಾಲಭೂಹಲಂ ।
ಭವಕದಳಿ ಮತ್ತೇಭ ಪರತತ್ವವು ।
ಬಸವನಾಮಂ ಕಾಮುಕಾಂತಾರ ಪ್ರಳಯಾಗ್ನಿ ।
ಬಸವನಾಮಂ ಶರಣಜನದ ಮನದಭಿರಾಮ ।
ಬಸವನಾಮಂ ಮಂತ್ರಪಟಲದ ಲಲಾಮವೆಂದಾನು ಬಸವನನುಲೆಸುವೆಂ ॥

ಗುರುರಾಜ ಚಾರಿತ್ರದಲ್ಲಿ—

ಎಂಭತ್ತೆರೆಂಟು ಪ್ರಖ್ಯಾತ ಸುಪವಾಡಗಳ ।
ಕುಂಭಿನೀಪತಿ ಬಿಜ್ಜಳಗೆ ತೋರಿಸಿ ಗಣಾಡಂಬರಕೆ ಚಕ್ರೇಶನೆನಿಸಿ ಕೈಲಾಸದೊಳು
ಶಂಭುವಿನ ಕುಕ್ಷಿಯಲ್ಲಿ ಶಾಂಭವಯೋಗದೊಳಿರ್ದು ಸಕಲ ಸದ್ಭಕ್ತ ಹೃ ।
ದಯಾಂಭೋಜದಲ್ಲಿ ಬೆಳಗುವ ಪರಂಜ್ಯೋತಿಯಮಂ ಬಿಡದೆ ಪಾಲಿಪುದು
ಬಸವರಾಜೇಂದ್ರ ಕರುಣಾಂಬುವಾರಾಶಿ ಚಂದ್ರ ॥ ೬ ॥

ರಾಘವಾಂಕ ಚರಿತ್ರೆಯ ಕೊನೆಯಲ್ಲಿ—

ಕನಕರತ್ನಾಂಶುಕಾಶ್ವಾಭರಣ ಮೃಷ್ಟಾನ್ನ ।
ವನಿತೆಯರು ಮುಂತಾದ ಸಕಲ ವಸ್ತುಗಳನುರೆ ।
ಮನವೊಲಿದು ಜಂಗಮಂ ಬೇಡೆ ಮರುನಾತಿಲ್ಲದಿತ್ತು ಜಸಪಡೆದು ಮುದದಿ ॥
ಮನುಜೇಶ ಬೆರಗಾಗಲಗಣಿತ ಪವಾಡಗಳ ।
ನನುದಿನಂ ಮೆರೆಯಿಸುತ ಶಿವಭಕ್ತಿಲತೆಯ ಮೇ ।
ದಿನಿಯೊಳಗೆ ಬೆಳಸಿದನನುಪಮ ಬಸವದಂಡೇಶ ಮನದಿಷ್ಟವಿತ್ತು ಸಲಹಾ ॥

## ಷಡಕ್ಷರಿ ಶೆಟ್ಟಿ

ಈತನ ಕಾಲ ೧೬೫೦. ಈತನು ಗುರುಭಕ್ತಾಂಡಾರನ ಚರಿತ್ರೆಯನ್ನು ಉದ್ದಂಡ ಷಟ್ಪದಿಯಲ್ಲಿ ಬರೆದಿರುತ್ತಾನೆ. ಪಾಲ್ಕುರಿಕೆಯ ಸೋಮನಾರಾಧ್ಯರು ಆಂಧ್ರಭಾಷೆಯಲ್ಲಿ ದ್ವಿಪದಿಯೊಳಗೆ ಬರೆದಿದ್ದುದನ್ನು "ಬಸವಣ್ಣ ನೆನಹಿನೊಳ್ ಬಂದು ಭಸಿತವನಿಟ್ಟು ಮತಿಗೊಡಲು" ತಾನು ಈ ಗ್ರಂಥವನ್ನು ಬರೆದಿರುವೆನೆಂದು ಹೇಳಿರುತ್ತಾನೆ. ಇವನು ಶ್ರೀ ಮರಳುಸಿದ್ಧೇಶ್ವರನ ಶಿಷ್ಯ. ಇವನಿಗೆ ಪ್ರಾಸಭೂಷಣನೆಂಬುವ ಇನ್ನೊಂದು ಹೆಸರೂ ಇರುತ್ತದೆ.

"ಬಸವನ ಮಹತ್ವವನು ಬಣ್ಣಿಸುವರಳವಲ್ಲ ಒಸೆದು ಬಣ್ಣಿಸಿದ ಪಾಲ್ಕುರಿಕೆ ಸೋಮೇಶ್ವರನ ಶಿಶುವಾಗಿ ಬಸವಾಕ್ಷರವೆ ಅಸವು ಪಂಚಾಕ್ಷರ ಗಳೆಂದು ನೆರೆನಂಬುತೆ। ಬಸವಯ್ಯ ಬಸವಯ್ಯ ಬಸವಯ್ಯ ಬಸವಯ್ಯ ಬಸವಯ್ಯ ತಂದೆ ಸಲಹೆಂದೈದು ಬಾರಿ ತೊದ। ಲಿಸಿ ನುಡಿದರಿಗಿಂತು ಅವನ ಕುಲಕೋಟಿ ಪಾವನವಹುದು ಕ್ಷಣಮಾತ್ರಕೆ॥ ಬಸವಂ ಪರವು ಪಂಚಾಕ್ಷರಿಯ ಪರತರದ। ಬಸವಂ ಪರಮಾರ್ಥ ನಿತ್ಯವೆಲ್ಲವನರಿವ। ಬಸವಂ ಪರಮಾತ್ಮ ಕಲ್ಪತರು ಕಾಮಧೇನುವೆಂದೆನಿಸಿ ಮೆರೆಯುತಿರ್ಪಾ। ಬಸವನಂ ಪರತತ್ವ ಬಸವನಂ ಪರಿಪೂರ್ಣ। ಬಸವನಂ ಪರಿತೋಷ ಬಸವನಂ ಪರಬೊಮ್ಮ ಬಸವನಂ ಪರಶಿವನ ಬಸವನಂ ಮುದದಿಂದಲನವರತ ಬಲಗೊಂಬೆನಾಂ॥"

## ತಿಲಕೂರು ಬಸವಲಿಂಗ ಕವಿ

ತನ್ನ ಪ್ರಲಾಪದಲ್ಲಿ ಬಸವಣ್ಣನವರನ್ನು ಸ್ತುತಿಸಿರುತ್ತಾನೆ. ಇವನ ಕಾಲ ೧೬೫೦.

"ಬೇಡದಲೆ ಜನಕೀವ। ರೂಢಿಯಾ ಬಸವನು। ಕೂಡಿಕೊಂಬರೆ ಲಿಂಗ। ಕೂಡಲಸಂಗ। ತಪ್ಪದಲೆ ನುಡಿದುದನು। ಒಪ್ಪದಿಂ ಮಾಳ್ಪನನು। ಒಪ್ಪಿಕೊಂಬರೆ ಲಿಂಗ। ಕಪ್ಪಡೆಯ ಸಂಗ। ನಾಡಭಕ್ತರ್ಗೆ ಹಿತಮಾಡುವಾ ಬಸವನನು। ಕೂಡಿಕೊಂಡರೆ ಕಪ್ಪಡಿಯ ಸಂಗ। ಅಡಿಗಡಿಗೆ ನಿನ್ನ ಗುಣ ಜಡಿದು ನೋಡಿದೆವು ನಿ। ನ್ನೊಡಲ ಗುಣ ತಿಳಿಯದಲೆ ಬಡವಾಯ್ತು ಜಗವು। ಕೋಪದಿಂ ನಿಷ್ಠುರಾಲಾಪ ಮಾಡಿದೆವು ನೀಂ। ಪೋಷನೆಂಬುದು ತಿಳಿಯದಾಯ್ತು ಜಗಕೆ॥"

## ಬಸವಲಿಂಗನಾಮ ಅಷ್ಟೋತ್ತರ ನುಡಿ

೧೬೫೦ ರಲ್ಲಿ ರಚಿತವಾದುದು. ಕವಿಯ ಹೆಸರು ಸ್ಪಷ್ಟವಾಗಿ ತಿಳಿದಿಲ್ಲ.

"ಘೋರಪಾಪ ದೋಷ ಪುಂಜಕುಠಾರ ಬಸವಲಿಂಗ। ಸಾರ ವೀರಶೈವ ಸಮಯ ಚಕ್ರವರ್ತಿ ಬಸವಲಿಂಗ। ಮಾಯೆಯೆಂಬ ಬಲೆಗೆ ಶಿಲುಕಿ ಮರುಳನಾದೆ ಬಸವಲಿಂಗ। ಕಾಯೊ ಎನ್ನ ಕರ್ಮಗಳನು ಕಡೆಗೆ ಮೆಟ್ಟಿ ಬಸವಲಿಂಗ॥" ಹೀಗೆಯೇ ೧೦೮ ನುಡಿಗಳಿರುತ್ತವೆ.

## ಬಸವ ಸ್ತುತಿ ನುಡಿ ೩೧

೧೬೫೦ ರಲ್ಲಿ ರಚಿಸಲ್ಪಟ್ಟಿರುತ್ತವೆ. ಕವಿಯು ಯಾರೆಂಬುದು ತಿಳಿದಿರುವದಿಲ್ಲ

ಧರಣಿಪತಿಯ ಓಲಗದೊಳು। ಶರಣನಾಗಮಯ್ಯ ಬರಲು ಬೆರಳಿನಲ್ಲಿ ಹಾಲು ಕರೆದ ಬಸವ ಪಾಹಿಮಾಂ। ವಿಷವು ರೂಪುತಾಳಿ ಬಂದ। ವಿಷವು ಧಾರಿ ಜಂಗಮಕ್ಕೆ ಲೇಸಿನಿಂದ ಬಸವನೆದ್ದು ಶರಣುಮಾಡಿದ। ಚಿತ್ರರೂಪು ಜಂಗಮರ ಪ್ರತಿಮೆಗಳಿಗೆ ಪ್ರಾಣವಿತ್ತು। ಅರ್ತಿಯಿಂದ ಬಸವ ಮನೆಗೆ ಕರೆದುತಂದನು॥

ಹೀಗೆಯೇ ೩೧ ನುಡಿಗಳಿರುತ್ತವೆ.

## ಷಡಕ್ಷರ ದೇವ

ಕಾಲ ೧೬೫೫. ಈತನು ರಾಜಶೇಖರ ವಿಲಾಸ, ವೃಷಭೇಂದ್ರ ವಿಜಯ, ಶಬರ ಶಂಕರ ವಿಲಾಸ, ಶಿವಾಧಿಕ್ಯ, ಭಕ್ತಾಧಿಕ್ಯ, ಕವಿಕರ್ಣ ರಸಾಯನ, ಸ್ತೋತ್ರಮಂಜರಿ, ವೀರಭದ್ರದಂಡಕ ಹೀಗೆ ಏಳು ಗ್ರಂಥಗಳನ್ನು ಬರೆದಿರುತ್ತಾನೆ. ಉಭಯ ಭಾಷೆಗಳಲ್ಲಿಯೂ ಅದ್ವಿತೀಯವಾದ ಪಾಂಡಿತ್ಯವುಳ್ಳವನೂ, ದನುಗೂರು ಹಿರಿಯ ಮಠದ ಪಟ್ಟದ ಸ್ವಾಮಿಯೂ ಆಗಿದ್ದನು. ಕನ್ನಡ ಸಾಹಿತ್ಯದಲ್ಲಿ ಈತನು ಸುಪ್ರಸಿದ್ಧ ಕವಿಯೆನಿಸಿಕೊಂಡವನಾಗಿರುತ್ತಾನೆ. ಈತನು ಶ್ರೀ ಬಸಣ್ಣನವರ ವಿಷಯದಲ್ಲಿ ಅತ್ಯಂತ ನಿಷ್ಠೆಯುಳ್ಳವನಾಗಿದ್ದನೆಂಬುವದು ಆತನ ಗ್ರಂಥಗಳಿಂದಲೇ ತಿಳಿಯುತ್ತದೆ. ವೃಷಭೇಂದ್ರ ವಿಜಯವು ಸಂಪೂರ್ಣವಾಗಿ ಬಸವಣ್ಣನವರ ಚರಿತ್ರೆಯಿಂದ ಕೂಡಿರುವುದಲ್ಲದೆ ಆತನ ಹಿರಿಮೆಯನ್ನು ಹೇಳತಕ್ಕ ಅನೇಕ ಶ್ಲೋಕಗಳನ್ನು ಕವಿಯು ರಸಯುಕ್ತವಾಗಿ ಮಂಡಿಸಿರುತ್ತಾನೆ. ಸಂಸ್ಕೃತದಲ್ಲಿ ಸ್ತೋತ್ರಗಳನ್ನು ಬರೆದಿರುತ್ತಾನೆ. ಸಂಸ್ಕೃತ ಕವಿಗಳ ವಿಷಯವನ್ನು ಬರೆಯುವಾಗ ಈ ಅಷ್ಟಕವನ್ನು ಹಾಕುತ್ತೇವೆ.

ರಾಜಶೇಖರ ವಿಲಾಸ—

ಸದಮಳ ಧರ್ಮರೂಪನ ಭವಾಗಮಸಾರಕಳಾಪಕಳಾಪನು ।
ನ್ಮದ ಮದನ ಪ್ರಲೋಪನ ಕಳಂಕನನದ್ವಯ ತತ್ವ ದೀಪನ ।
ಭ್ಯುದಯ ವಹ ಪ್ರತಾಪನತಿ ಭಕ್ತಿವಶೀಕೃತ ಶೈಲ ಚಾಪನಾ ।
ತ್ತದಯ ಜಿತಶ್ರೀತಾಪ ಬಸವೇಶ್ವರನೀಗೆಮಗೀಶ ಭಕ್ತಿಯಂ ॥

ವೃಷಭೇಂದ್ರ ವಿಜಯ—

ಬಸವನಾದಿ ಮೂರ್ತಿಯೆನಿಪಂ ಬಸವಂ ಜಗದಾದಿ ಕಾರಣಂ ।
ಬಸವನನಂತ ಕೀರ್ತಿ ಬಸವಂ ಭವಮೇಘ ಮಹಾಸಮೀರಣಂ ॥
ಬಸವನ ಶೇಷಬಂಧು ಬಸವಂ ಶಿವಭಕ್ತ ಮುಖಾಂಬುಜಾರುಣಂ ।
ಬಸವನ ಖರ್ವ ಗರ್ವ ಪರವಾದಿ ಜನಾಂಬುಜ ಮತ್ತವಾರಣಂ ॥

ಪ್ರಮಥ ಪ್ರಮುಖಾಚಾರ್ಯಂ ।
ಕುಮತತಮಸ್ಸೂರ್ಯನಾರ್ಯನ ತುಳಿತ ಕಾರ್ಯಂ ।
ನಮದಮರವದ್ಯನಭವಾ ।
ಗಮಧುರ್ಯಂ ಬಸವರಾಜನನುಪಮ ಶೌರ್ಯಂ ।

ಬಸವನ ನಾಮಂ ಸ್ಮರಿಸುತುಂ ಬಸವೇಶನ ಕೀರ್ತನಂಗಳಂ ।
ಪಸರಿಸಿ ಪಾಡುತುಂ ಬಸವನುಜ್ವಲ ಮೂರ್ತಿಯನೊಲ್ದು ಜಾಸಿಸು ।
ತ್ತೆಸೆವ ನರಂಗೆ ಜನ್ಮತತಿಯುಂಟೆ ಜಡಸ್ಥಿತಿಯುಂಟೆ ಪಾತಕ ।
ಪ್ರಸರಮದುಂಟೆ ಮೃತ್ಯುಭಯಮುಂಟೆ ಮದಾಂಧತೆಯುಂಟೆ ಧಾತ್ರಿಯೋಳ್ ॥

ಶರಣರ ಕೈಪಿಡಿ ಸ್ಫುರದನಾದಿಯ ಜಂಗಮಭಕ್ತನೀಶಭ ।
ಕ್ತರ ಸುರಧೇನು ಶಂಕರನ ನಚ್ಚಿನ ವಾಹನ ಮನ್ಯವಾದಿ ।
ವಾರ್ಧರಚಯ ಚಂಡಮಾರುತ ನಿಳಾತಳ ಪಾವನ ರುದ್ರಮೂರ್ತಿ ವಿ ।
ಸ್ಫುರಿತ ಕಳಾಪ್ರಪೂರ್ತಿ ಬಸವಂ ಭವಸಾಗರ ಕುಂಭ ಸಂಭವಂ ॥

ಕಂದ—

ನೀನೆ ಗುರು ನೀನೆ ಲಿಂಗಂ ।
ನೀನೆ ಚರಂ ನೀನೆ ಮಾತೆ ನೀನೆ ಪಿತಂ ಕೇಳ್ ।
ನೀನೆ ಗತಿ ನೀನೆ ಮತಿ ಪತಿ ।
ನೀನೆ ಸೆವಮುಂತೆನಗೆ ಬಸವ ಪಾಲಿಪುದೆನ್ನಂ ॥

ಮಾಡದ ಪಾಪವಿಲ್ಲ ಮನಮುಂಟಪಡ ಕಾಮ ವಿಕಾರವಿಲ್ಲ ಕೂ ।
ರ್ತಾಡದ ನಿಂದೆಯಿಲ್ಲ ಕೊರಚಾಡದ ಸಜ್ಜನರಿಲ್ಲ ವಾಂಛೆಯಿಂ ॥
ಬೇಡದ ವಸ್ತುವಿಲ್ಲ ಬರಿದಾಗದ ಮಾನವರಿಲ್ಲ ದೇವ ನೀಂ ।
ನೋಡದಿರೆನ್ನ ದುರ್ಗುಣ ಶತಂಗಳನಯ್ಯ ವೃಷಾಧಿನಾಯಕಾ ॥

ನಿನ್ನಯ ದಿವ್ಯಮೂರ್ತಿ ಬಿಡದೆನ್ನ ಮನೋಂಬುಜ ಮಧ್ಯದೋಳ್ ಕರಂ ।
ನಿನ್ನಯ ದಿವ್ಯನಾಮವ ಮದೆನ್ನಯ ಸದ್ರಸನಾಗ್ರದಲ್ಲಿ ಕೇಳ್ ॥
ನಿನ್ನಯ ಭಕ್ತರಂಘ್ರಿಯುಗಮೆನ್ನಯ ಮಸ್ತಕದಲ್ಲಿ ಮಾಣದೆಂದುಂ ।
ನೆಲಸಿರ್ಪುದೊಂದು ವರಮುಂ ಬೇಳ್ಪೆನಿದಂ ವೃಷಾಧಿಪಾ ।

ಗುರುರೂಪಂ ಲಿಂಗರೂಪಂ ಪರತರ ಚರರೂಪಂ ಪ್ರಸಾದ ಸ್ವರೂಪಂ ।
ಹರಪಾದಾಂಭಃ ಸ್ವರೂಪಂ ಭಸಿತಲಸಿತ ರೂಪಂ ಸುರುದ್ರಾಕ್ಷರೂಪಂ ।
ವರಷಡ್ವರ್ಣ ಸ್ವರೂಪಂ ಪರಮ ಶಿವಮಯಾನಾದಿ ಭಕ್ತ ಸ್ವರೂಪಂ ।
ಪರಚಿಚ್ಛಕ್ತಿ ಸ್ವರೂಪಂ ಬಸವನ ಸದೃಶಾನಂದ ಸತ್ಯಸ್ವರೂಪಂ ॥

**೪೨ನೇ ಆಶ್ವಾಸ ೫೫ನೇ ಶ್ಲೋಕ.**

ಶಬರ ಶಂಕರ ವಿಲಾಸ—

ಹರಭಕ್ತಿ ಪ್ರಮದಾ ಮುಖೈಕ ಮುಕುರಂ ಶೈವಾಗಮಾಂಭೋ ।
ಜ ಭಾಸ್ಕರ ಬಿಂಬಂ ಗುಣರತ್ನ ಭೂಷಣನುಮೇಶಧ್ಯಾನ ಸಂಪನ್ನನ ।
ಕ್ಷರಸದ್ಧರ್ಮ ಕಳೇಬರಂ ಮೃಡಮುತಾಂಭೋರಾಶಿ ರಾಕಾ ಸುಧಾ ।
ಕರನಾದ್ಯಂ ವೃಷಭೇಶ್ವರಂ ಸಲಹುಗೆಮ್ಮಂ ಭಕ್ತಕಲ್ಪದ್ರುಮಂ ॥

## ಶಾಂತಲಿಂಗದೇಶಿಕ

ಈತನ ಕಾಲ ೧೬೭೨. ಈತನು ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ ಎಂಬುವ ಗ್ರಂಥವನ್ನು ಬರೆದಿರುತ್ತಾನೆ.

ತನ್ನ ಗ್ರಂಥದ ಆದಿಯಲ್ಲಿ—

"ಬಸವಾದಿಗಳು ೭೭೭ ಪುರಾತನರಾಗಿ ಮರ್ತ್ಯಕ್ಕವತರಿಸಿ ವೀರ ಶೈವಾಚಾರದಿಂದ ಅಷ್ಟಾವರಣ ಮೊದಲಾದ ಶಿವಾಚಾರವನುದ್ಧರಿಸಿ ಮರ್ತ್ಯದಲ್ಲಿ ನಿತ್ಯಾನಂದ ನಿಜಲಿಂಗೈಕ್ಯರಾಗಿರುತ್ತುಂ ಮರ್ತ್ಯಲೋಕದ ಮಣಿಹಂಪೂರೈಸಿ ಕೈಲಾಸಕ್ಕೈದಿದರ್—ಪರಶಿವತಾನೇ ನಂದೀಶ್ವರ, ಭೃಂಗೀಶ್ವರ, ಸ್ಕಂದ, ಗಣಪ, ವೀರೇಶ್ವರ ಮೊದಲಾದನೇಕಾದ್ಯರ ರೂಪಂ ಧರಿಸಿರುತುಂ ಮತ್ತುಂ ಆದರೆ ಶಿವನಿರೂಪದಿಂ ವೀರಶೈವಾಚಾರ ದಿಂದ ಲೋಕವನುದ್ಧರಿಸಲೆಂದು ಬಸವಣ್ಣ, ಚನ್ನಬಸವಣ್ಣ, ಅಲ್ಲಮ ಪ್ರಭುದೇವರು, ಮಡಿವಾಳ ಮಾಚಯ್ಯ, ಕಿನ್ನರಿ ಬ್ರಹ್ಮಯ್ಯ, ಕನ್ನದ

ಬ್ರಹ್ಮಯ್ಯಗಳೆಂಬೇಳ್ನೂರು ಎಪ್ಪತ್ತೇಳು ಪುರಾತನರಾಗಿ ಮರ್ತ್ಯಲೋಕ ಕ್ಕವತರಿಸಿ ವೀರಶೈವಾಚಾರದಿಂದಷ್ಟಾವರಣ ಮೊದಲಾದ ಶಿವಾಚಾರವನು ದ್ಧರಿಸಿ ಮರ್ತ್ಯದಲ್ಲಿ ನಿಜಲಿಂಗೈಕ್ಯರಾಗಿರುತ್ತಿರ್ಪ"

ಹೀಗೆಯೇ ವರ್ಣನೆಮಾಡಿ ಬಸವಣ್ಣನವರನ್ನು ಸ್ತುತಿಸಿದ್ದಾನೆ.

## ಬಸವಲಿಂಗ ಕವಿ

ಕಾಲ ೧೬೭೯. ಈತನು ಕೊಟ್ಟೂರು ಬಸವೇಶ್ವರ ಪುರಾಣವನ್ನು ಬರೆದಿರುತ್ತಾನೆ. ಪುರಾಣದ ಆದಿಯಲ್ಲಿ—

ಕ್ರೂರಪಶುಜನ್ಮದಿಂದಳಲ್ವಬ್ಜಸಂಭವಕು ।
ಮಾರನಂಕಾರುಣ್ಯದಿಂ ಪೊರೆದು ಮೋದದಿಂ ।
ದೋರುತೆ ಮುನಿಪತಿ ಶಿಲಾದ ನಾನಂದವಾರಾಶಿಯುಪೆರ್ಚಿಸುತ್ತೆ ॥
ವೀರಭದ್ರಪ್ರಮುಖಗಣಕಾಪ್ತನೆನಿಸಿಮುದ ।
ನಾರಿವಿಮುಖದ್ರೋಹಿದಕ್ಷನನುಪೇಕ್ಷಿಸಿದ ।
ಕಾರಣ ಮಹಿಗೆ ಬಂದ ಬಸವೇಶ ಸುಗುಣಮಣಿಕೋಶ ಪಾಲಿಸೆಮ್ಮಂ ॥

## ಪಂಡಿತ ಮಲ್ಲಿಕಾರ್ಜುನ

ಕಾಲ ೧೬೮೫. ಈತನು ಶಂಕರದಾಸೀಮಯ್ಯನ (ಪುರಾಣ) ಚರಿತ್ರೆಯನ್ನು ಬರೆದಿರುತ್ತಾನೆ.

ಪುರಾಣದ ಆದಿಯಲ್ಲಿ—

ಇಳೆಗೊಡೆಯ ಬಿಜ್ಜಳ ನೃಪನ ಸಭೆಯೊಳಗೆ ಬಂದೊಡ್ಡಿಪವಾಡಂ ।
ಗಳಂ ಜೈಸಿಗುರುಲಿಂಗ ಜಂಗಮದೆಡೆಗೆ ಕಾಯ್ವನೂ ॥
ಗಳಿಸಿದರ್ಥವ ಮನವನಿತ್ತುಜ್ವಳ ಮಹಾ ಶಿವಭಕ್ತಿಭಾವವತಳೆ ।
ದ ಕಲ್ಯಾಣ ಬಸವ ದಂಡೇಶ ಶರಣಾಗು ॥

## ಸಂಪಾದನೆಯ ಪರ್ವತೇಶ್ವರ (ಸಿದ್ಧವೀರ)

ಕಾಲ ೧೬೯೮. ಈತನು ಚತುರಾಚಾರ್ಯರ ಪುರಾಣವನ್ನು ಬರೆದಿರುತ್ತಾನೆ. ಈ ಕವಿಯು ದೊಡ್ಡ ಪಂಡಿತನಾಗಿದ್ದು ಮೂರುಸಾವಿರಕ್ಕಿಂತ ಹೆಚ್ಚಾಗಿರುವ ವಾರ್ಧಿಕ ಷಟ್ಪದಿಗಳಿಂದ ಈ ಪುರಾಣವನ್ನು ಬರೆದಿರುತ್ತಾನೆ. ಇವನು ತೋಂಟದ ಸಿದ್ಧಲಿಂಗ ಶಿವಯೋಗಿಯ ಶಿಷ್ಯಪರಂಪರೆಗೆ ಸೇರಿದವನಾಗಿರುತ್ತಾನೆ.

ಕವಿಯು ತನ್ನ ಪುರಾಣದ ಆದಿಯಲ್ಲಿ—

ಚಂದದಶಿಲಾದಮುನಿ ನಂದಿ ಮಂಡಲದಲ್ಲಿ ಕಂದರಿಲ್ಲೆಂದುತಪಮಂ ಮಾಡಲಾಗ ವೃಷಭೇಂದ್ರ।
ನಂದದಿ ಸ್ವರ್ಣಲಾಂಗೂಲ ದುದ್ಧರೆಯ ನಂದೀಶ ತೋರಿಪೊರೆದಂ ।
ಕುಂದುತಾನೂದರಸ ಮಾದಲಾಂಬೆಯರೀರ್ವರಂದು ನಂದಿಯ ಪೂಜೆಯಿಂ
ನೆಗಳ್ದೊಡವರಿಂಗೊಲಿ ।
ದಿಂದುಧರಮಹಿಮಾಂಬುನಿಧಿ ಚಂದ್ರವೃಷಭೇಂದ್ರಸಾರಮತೆಯಿಂ ಪಾಲಿಸೂ ॥

## ಕವಿ ಮರುಳ ಸಿದ್ಧ

ಈತನ ಕಾಲ ೧೭೦೦. ಈತನು ಬಸವರಾಜ ಪವಾಡಗಳನ್ನು ಬರೆದಿರುತ್ತಾನೆ. ತನ್ನ ಗ್ರಂಥದ ಆರಂಭದಲ್ಲಿ—

"ಶ್ರೀಮದನುಪಮ ಕಲ್ಯಾಣಪುರವರಾಧೀಶ ಮಹಾಮಹಿಮ ಬಸವರಾಜದೇವರು ಶಿವನ ಆಜ್ಞೆಯಿಂದ ನಂದಿಕೇಶ್ವರರೆ ಭೂಲೋಕದಲ್ಲಿ ಮಾದರಸ ಮಾದಲಾಂಬೆಯರ ಗರ್ಭದಲ್ಲಿ ಬಸವನಾಮದಲ್ಲವತರಿಸಿ ೩೬೦ ಪವಾಡಂಗಳನಡಸಿ ಕಪ್ಪಡಿ ಸಂಗಮನಾಥನಲ್ಲಿ ಐಕ್ಯರಾದರು."

## ತಾಂಡೂರು ಹೊಸಪೇಟೆಯ ನಿಜಮಠಾಂಕ ಸಿದ್ದರಾಮ ಶಿವಯೋಗಿಗಳು

ಕವಿಗಳ ಕಾಲ ೧೭೦೦. ಇವರು ಚನ್ನಬಸವಾಭ್ಯುದಯ ಕಾವ್ಯ ರಚಿಸಿರುತ್ತಾರೆ. ಇದು ಚನ್ನಬಸವ ಪುರಾಣವಿರುತ್ತದೆ. ಕವಿಗಳು ಗ್ರಂಥಾರಂಭದಲ್ಲಿ—

ಗುರುಬಸವ ಚರವರ ಬಸವ ಸು ।
ಸ್ಥಿರ ಬಸವ ಪುರಹರ ಬಸವ ಶಿವ ।
ಕರ ಬಸವ ಶರಣರ ಬಸವ ಶಾಂತರ ಬಸವರಾಜ ॥
ಪರಮಪಾವನ ನಿಮ್ಮ ಕರಸರ ।
ಸಿರುಹದೊಳ್ಜನಿಸಿರುವ ಮೂರ್ತಿಯ ।
ಚರಿತವನು ಪೇಳುವೆನು ನಿಮ್ಮಯ ಚರಣವನು ಪಿಡಿದು ॥

ಈ ಪುರಾಣದಲ್ಲಿ ೨೪೯೮ ಪದಗಳಿರುತ್ತವೆ.

೧. ಗಾನಲೋಲನಾದ ಸಂಗಮನನ್ನು ಜಂಗಮಾಕಾರದಿಂದ ಕಂಡು ಆತನಿಂದ ಷಟ್‌ಸ್ಥಲ ಶಾಸ್ತ್ರವ ತಿಳಿದು ಅಭ್ಯಾಸಿಸಿದ ಪ್ರಸ್ತಾಪ (ವಾಕ್‌ಸಂಬಂಧ).

೨. ಲಿಂಗಧಾರಿಯಾದ ಕಾರಣ ಮುಂಜಿಯ ಮಾಡುವೆನೆಂಬ ಬಂಧುಗಳ ತಿರಸ್ಕರಿಸಿ ಅಕ್ಕ ನಾಗಮ್ಮನವರಿಂದ ಕೂಡಿ ಸಂಗಮಕ್ಕೆ ಬಂದುದು (ವಾಕ್‌ಸಂಬಂಧ).

೩. ಹರುಷದಿಂದ ಅಲ್ಲಮಪ್ರಭುದೇವರು ಬರುವರೆಂದು ತಾನೇ ತಿಳಿದು ಶೂನ್ಯ ಸಿಂಹಾಸನ ನಿರ್ಮಾಣ ಮಾಡಿದುದು (ಕಾಯಸಂಬಂಧ).

೪. ಈಶನ ಜಂಗಮ ಬೇಡಿದುದಕ್ಕೆ ೧೦ ಖಂಡಗ ಜೋಳವ ಮುತ್ತುಮಾಡಿ ಸಮರ್ಪಣಮಾಡಿ ಮೆರೆದಿರ್ದುದು (ಮನಸ್ಸಂಬಂಧ).

ಹೀಗೆಯೇ ಕವಿಯು ಬರೆದಿರುತ್ತಾನೆ.

## ಸರ್ವಜ್ಞ ಕವಿ

ಈತನ ಕಾಲ ೧೭೦೦. ಈತನು ಸರ್ವಜ್ಞನ ವಚನಗಳನ್ನು ಬರೆದಿರುತ್ತಾನೆ. ಕರ್ಣಾಟಕದಲ್ಲಿ ಈತನು ಸುಪ್ರಸಿದ್ಧನು. ಅಕ್ಷರವಂತರಾದ ಪ್ರತಿಯೊಬ್ಬರಿಗೂ ಈತನ ಒಂದಾದರೂ ವಚನ ಬರದಿರುವುದಿಲ್ಲ. ಈ ಕವಿಯು ಬಹಳ ನಿಷ್ಠುರವಾದಿ. ಅಂತೂ ತನ್ನ ನಾಡಿನಲ್ಲಿ ಸರ್ವಜ್ಞನೆಂದರೆ ಎಲ್ಲರಿಗೂ ಬಹಳ ಪ್ರೀತಿ. ಸಾವಿರಾರು ಪದ್ಯಗಳನ್ನು ಬರೆದಿರುತ್ತಾನೆ. "ಬಸವ ನೀವು ನಿರೂಪಿಸಿದ ಕಾಲಜ್ಞಾನವ। ಭಸಿತ ವಿಟ್ಟು ಮರ್ತ್ಯದಿರವನು ನಾ ನಿಮ್ಮ ಶಿಶುವೆಂದು ಪೇಳ್ವೆ ಸರ್ವಜ್ಞ" ಎಂದು ಮೊದಲೇ ಹೇಳಿರುತ್ತಾನೆ.

ಬಸವಪೀಠವು ಎದ್ದು ಒಸೆದು ಸಾಣ್ಯವು ಹುಟ್ಟಿ
ಬಸವನಾ ಮುದ್ರೆ ಮೆರೆದಾವು ।
ಧರೆಯವಗೆ ವಶವಾಗದಿಹುದೆ ಸರ್ವಜ್ಞ ॥

ಬಸವನೆಂದರೆ ಪಾಪ ದೆಶೆಗೆಟ್ಟು ಹೋಗುವದು
ಬಿಸಿಲಿಗೆ ಹಸರೊಳೆಸೆದಿರ್ಪ ಹನಿಯಾರಿ ।
ಹುಸಿದು ಹೋದಂತೆ ಸರ್ವಜ್ಞ ॥

ಹೆಣ್ಣುಬಿಟ್ಟವ ದೈವ ಮಣ್ಣುಬಿಟ್ಟವ ದೈವ ।
ಕಣ್ಣುಮೂರುಳ್ಳ ಶಿವ ದೈವ ।
ಜಗಕೆ ಬಸವಣ್ಣನೇ ದೈವ ಸರ್ವಜ್ಞ ॥

ಬಸವ ಗುರುವಿನ ಹೆಸರ ।
ಬಲ್ಲವರು ಆರಿಲ್ಲ ಹುಸಿಮಾತನಾಡಿ ಕೆಡದಿರಿ ।
ಮೂಲೋಕಕ್ಕೆ ಬಸವಣ್ಣಕರ್ತಾ ಸರ್ವಜ್ಞ ॥

ಹಸಿದಡಂಬಲಿ ಮುದ್ದು ।
ಬಿಸಿಲಿಗೇ ಕೊಡೆ ಮುದ್ದು ಬಸಿರಲ್ಲಿ ಬಂದ ಶಿಶು ಮುದ್ದು ।
ಲೋಕಕ್ಕೆ ಬಸವಣ್ಣನೇ ಮುದ್ದು ಸರ್ವಜ್ಞ ॥

ಬಸವರಾಜನ ಚರಣ ।
ಬಿಸುರುಹವ ಅನವರತ ಒಸೆದು ನೆನೆಯಲಾ ಬಸವೇಶ ।
ಸಮರಸದ ದೆಶೆಯನೊಲ್ದೀವ ಸರ್ವಜ್ಞ ॥

ಜಲ್ಲಿಯಾ ಬಿಲ್ಲವರು ।
ಸಲ್ಲಿಸುತರೆಲ್ಲವನು ಕಲ್ಯಾಣದರಸ ಬಸವಣ್ಣ ಬರುವಾಗ ।
ಅಲ್ಲಿ ಚಲ್ಲಾಟ ಸರ್ವಜ್ಞ ॥

ಎಸೆವುತಿಹ ಪಾಪಕ್ಕೆ ।
ಬಸವ ಶರಣೆಂದಡೇ ಸಸಿನೆ ಕತ್ತಲೆಯು ಹರಿದಂತೆ ।
ಕರ್ಮಗಳು ಹಸಗೆಟ್ಟು ಹೋಗುವವು ಸರ್ವಜ್ಞ ॥

## ಷಣ್ಮುಖ ಸ್ವಾಮಿಗಳು

ಇವರು ಅಖಂಡೇಶ್ವರ ವಚನವನ್ನು ಬರೆದಿರುತ್ತಾರೆ. ಇವರು ಪರಮಶಿವಯೋಗಿಗಳು. ರಟಗಲ್ (ಕಲ್ಬುರ್ಗಿ ಜಿಲ್ಲೆ) ಮಠದ ಶಾಖಾಮಠವಾದ ಜೇವರಿಗೆಯಲ್ಲಿಯೇ ಇವರ ಸಮಾಧಿಯು ಇರುತ್ತದೆ. ಇವರು ಯೋಗಶಾಸ್ತ್ರದಲ್ಲಿಯೂ ಪಾರಂಗತರಾಗಿದ್ದರೆಂದು ಇವರ ವಚನಗಳಿಂದ ತಿಳಿದುಬರುತ್ತದೆ. ಇವರು ಶ್ರೀ ಬಸವಣ್ಣನವರ ಬಗ್ಗೆ ಬಹಳ ಉತ್ಕೃಷ್ಟ ವಚನಗಳನ್ನು ರಚಿಸಿರುತ್ತಾರೆ.

ಇಂತೀ ನೂರೊಂದು ಸ್ಥಲಗಳ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಅಗ್ನಿ ಎಂಬ ಆರು ಚಕ್ರಂಗಳಲ್ಲಿ ಸಂಬಂಧಿಸಿ, ಆರು ಚಕ್ರಂಗಳನ್ನು ಕೇವಲ ನಿಶ್ಶೂನ್ಯ ನಿರಂಜನವೆಂಬ ಮೂರು ಚಕ್ರಗಳೆಂಬ ಮಂಟಪದಲ್ಲಿ ಗುರುಲಿಂಗ ಜಂಗಮನ ಕುಳ್ಳಿರಿಸಿ ಕೇವಲ ನಿಶ್ಶೂನ್ಯ ನಿರಂಜನ ಭಕ್ತಿಯಿಂದರ್ಚಿಸಿ ಆ ಗುರುಲಿಂಗ ಜಂಗಮರ ಒಂದಾದ ಮಹಾ ಘನಪದ ಬ್ರಹ್ಮದಲ್ಲಿ ಮನವಡಗಿ ಭಾವ ನಿಷ್ಪತ್ತಿಯಾಗಿ ಶರಧಿಯಲ್ಲಿ ಮುಳುಗಿರ್ದ

ಕುಂಭದಂತಿರ್ದ ಮಹಾಶರಣ ಪರಮಗುರು ಬಸವರಾಜ ದೇವರ ದಿವ್ಯ ಪಾದಕ್ಕೆ ನಮೋ ನಮೋ ಎಂಬೆನಯ್ಯ ॥

ಆದಿ ಆಧಾರವಿಲ್ಲದ ಮುನ್ನ, ನಾದಬಿಂದು ಕಳೆಗಳಿಲ್ಲದ ಮುನ್ನ, ಭೇದಾಭೇದ ಬ್ರಹ್ಮಾಂಡ ಕೋಟಿಗಳಿಲ್ಲದ ಮುನ್ನ, ಬಸವನೆಂಬ ಬೀಜ ಮಧ್ಯದಲ್ಲಿ ಲಿಂಗವೆಂಬ ಅಂಕುರವು ಉದಯವಾಗಿ ಆ ಲಿಂಗಾಂಕುರವೇ ಸಕಲ ತತ್ವ ತೋರಿಕೆಯೆಂಬ ಶಾಖೆ ಪರ್ಣಂಗಳಂ ಪಸರಿಸಿ ವೃಕ್ಷಪಲ್ಲವಿಸಿತ್ತು ಇಂತೀ ಚಿದ್ಬ್ರಹ್ಮಾಂಡವೆಂಬ ವೃಕ್ಷವೆಂಬ ಪರಮಗುರು ಸಂಗನ ಬಸವಣ್ಣನ ಶ್ರೀಪಾದ ಕಮಲದಲ್ಲಿ ಭ್ರಮರನಾಗಿರಿಸಯ್ಯ ॥

ನಿರುಪಮ ಬಸವಣ್ಣನ ನಿರಾಳ ಬೆಳಗಿನೊಳಗೆ ನಿರಂತರ ಬೆಳಗುತಿರ್ದೆನಯ್ಯ. ಅದೆಂತೆಂದೊಡೆ ಬಕಾರ ಸ್ಥೂಲತನು, ಸಕಾರ ಸೂಕ್ಷ್ಮತನು, ವಕಾರವೇ ಎನ್ನ ಕಾರಣತನು, ಬಕಾರವೇ ಎನ್ನ ಜೀವಾತ್ಮನು, ಸಕಾರವೇ ಎನ್ನಂತರಾತ್ಮನು, ವಕಾರವೇ ಎನ್ನ ಪರಮಾತ್ಮನು ಮತ್ತು ಬಕಾರವೇ ಎನ್ನ ಗುರುವಾಗಿ ಬಂದೆನ್ನ ಪ್ರಾಣವನೊಳಕೊಂಡಿತು. ಸಕಾರವೇ ಲಿಂಗವಾಗಿ ಬಂದೆನ್ನ ಮನವನೊಳಕೊಂಡಿತು. ವಕಾರವೇ ಜಂಗಮವಾಗಿ ಬಂದೆನ್ನ ಧನವನೊಳಕೊಂಡಿತು ಮತ್ತು ಬಕಾರವೇ ಇಷ್ಟಲಿಂಗವಾಗಿ ಬಂದೆನ್ನ ಸ್ಥೂಲತನುವನೊಳಕೊಂಡಿತು. ವಕಾರವೇ ಭಾವಲಿಂಗವಾಗಿ ಬಂದೆನ್ನ ಕಾರಣ ತನುವನೊಳಕೊಂಡಿತು ಮತ್ತು ಬಕಾರವೇ ಶುದ್ಧ ಪ್ರಸಾದವಾಗಿ ಬಂದೆನ್ನ ಜೀವಾತ್ಮ ತನುವನೊಳಕೊಂಡಿತು. ಸಕಾರವೇ ಸಿದ್ಧಪ್ರಸಾದವಾಗಿ ಬಂದೆನ್ನ ಪರಮಾತ್ಮನನೊಳಕೊಂಡಿತು. ಬಕಾರವೇ ಸತ್ಕ್ರಿಯವಾಗಿ ಬಂದೆನ್ನ ಬಹಿರಂಗವ ಗ್ರಹಿಸುತಿರ್ಪುದು ಸಕಾರವೇ ಸದ್ಭಕ್ತಿಯಾಗಿ ಎನ್ನಂತರಂಗವ ಗ್ರಹಿಸುತಿರ್ಪುದು. ವಕಾರವೇ ಮಹಾಜ್ಞಾನಿಯಾಗಿ ಬಂದೆನ್ನ ಒಳಹೊರಗೆಲ್ಲವೂ ಗ್ರಹಿಸುತಿರ್ಪುದು ಇಂತೀ ಬಸವಕ್ಷರತ್ರಯಂಗಳಲ್ಲಿ ನಾನು ನಿಕ್ಷೇಪವಾಗಿರ್ದು ಬಸವ ಬಸವ ಬಸವಾ ಎಂದು ಬಸವ ನಾಮಾಮೃತವ ಎನ್ನ ಮನದಣಿಯಲುಂಡು ಭವಸೂತ್ರವ ಹರಿದು ಶಿವ ಸ್ವರೂಪವಾಗಿರ್ದನಯ್ಯ ಅಖಂಡೇಶ್ವರ ॥

ಬೀಜದೊಳಗಂಕುರವಿರ್ಪುದು, ಅಂಕುರದೊಳಗೆ ಬೀಜವಿರ್ಪುದು, ಅಂಕುರ ಬೀಜವೆಂದು ಹೆಸರು ಎರಡಾದರೇನು? ಅಖಂಡವಸ್ತು ಒಂದೇ ಆದಕಾರಣ ನಿಮ್ಮ ಅಖಂಡೇಶ್ವರನೆಂದು ಕರೆದೆನಯ್ಯ ॥

## ಚನ್ನಪ್ಪ ಕವಿ

ಕಾಲ ೧೭೫೦. ಈ ಕವಿಯು ಶರಣಲೀಲಾಮೃತವನ್ನು ಬರೆದಿರುತ್ತಾನೆ.

ಬಸವನೇ ಗುರು ಬಸವನೇ ಇರು । ಬಸವನೇ ಪರತಂದೆ ತಾಯೆನೆ ।
ಬಸವನಲ್ಲದೆ ಬೇರೆ ದೈವವನುಸುರಲಿನ್ನುಂಟೇ ॥
ಅಖಿಳಜಗ ಚೈತನ್ಯರೂಪನು । ಅಖಿಳಜೀವಕಾಧಾರ ಒಡೆಯನು ।
ಸಫಲಕರ್ತನು ಬಸವನಲ್ಲದೆ ಬೇರೆ ಇಲ್ಲೆಂದ ॥

ಶ್ರೀ ಗುರುವೆ ಶಿವನಾಗಿ ಮೋಕ್ಷವ । ನೀವ ಸಂಗನ ಬಸವರಾಜನ ।
ರಾಗದಲಿ ಭಜಿಸುವೆನು । ಎನ್ನಯ ಭವವು ಹಿಂಗುವಡೆ ॥ ೧ ॥

ಇಂದುಧರ ಇನಕೋಟಿ ತೇಜನ । ಮುಂದೆ ತೊಲಗದ ಮುಕ್ತಿಗೊಡೆಯನ ।
ನಂದಿನಾಥನ ನಮಿಸಿ ಬದುಕುವೆ । ನೆಲ್ಲ ಕಾಲದೊಳು ॥ ೨ ॥

ಆವ ಮುಖದಲಿ ಬಂದು ಬೇಡಲು । ಈವನಾಕ್ಷಣ ಇಷ್ಟಬಯಕೆಯ ।
ದೇವಸಂಗನ ಬಸವನಂಘ್ರಿಗೆ । ಶರಣು ಶರಣೆಂಬೆ ॥ ೩ ॥

ಶರಣುಪುರುಷದಕಣಿ ಕುಲಾಗ್ರಣಿ । ಶರಣು ಗಣಮಣಿ ಭಕ್ತಚಿಂತಾ ।
ಮಣಿ ಮಹೋನ್ನತ ದೇವ ಸಂಗನ । ಬಸವ ಶರಣಾರ್ಥಿ ॥ ೪ ॥

ತ್ರಾಹಿ ಶರಣರ ಜನತೆ ಬಂಧುವೆ । ತ್ರಾಹಿ ಕರುಣ ಕೃಪೈಕ ಸಿಂಧುವೆ ।
ತ್ರಾಹಿ ಎನ್ನಯ ಗುರುವೆ ಸಂಗನ । ಬಸವ ಶರಣಾರ್ಥಿ ॥ ೫ ॥

ನಿಮ್ಮ ಭಜಿಸುವೆ ನಿಮ್ಮ ಸ್ತುತಿಸುವೆ । ನಿಮ್ಮ ನೆನೆವೆನು ಎಲ್ಲ ಕಾಲವು ।
ನಿಮ್ಮ ಬಾಲನ ಕೃತಿಗೆ ಮಂಗಳ । ವೀವುದನುದಿನವೂ ॥ ೬ ॥

ದೇವಶುಭಕರ ದುರಿತಸಂಹರ । ಪಾವನಾತ್ಮಕ ಬಸವರಾಜನೆ ।
ದೇವ ದೇವೋತ್ತಮನೆ ಸಂಗನ । ಬಸವ ಶರಣಾರ್ಥಿ ॥ ೭ ॥

## ಕವಿ ಯೋಗಾನಂದ

ಈತನು ವಿರೂಪಾಕ್ಷ ಶತಕ, ಬಸವ ಶತಕಗಳನ್ನು ಬರೆದಿರುತ್ತಾನೆ. ಈತನ ಕಾಲ ೧೭೫೦. ಬಸವ ಶತಕದ ಆದಿಯಲ್ಲಿ ಶ್ರೀ ಬಸವಣ್ಣನವರ ಸ್ತೋತ್ರವಿರುತ್ತದೆ. ಬಸವ ಶತಕದಲ್ಲಿ—

ಉರ್ವಿಯಲ್ಲಿ ಜನಿಸಿ ಉತ್ತಮರನು ಸೇರಿ । ಸತ್ಕಥೆಗಳ ಕೇಳಿ ಸಾಧುಗಳಲಿ ।
ಭಕ್ತಿ ಇಡದೆ ನಿಮ್ಮ ಪದಕೆ ಬಾಹಿರನಾದೆ । ಪರಮಗುರುವೆ ಸಲಹು ಬಸವ ಪ್ರಭುವೇ ॥
ಬಲವು ಇದ್ದು ತನಗೆ ಪರರು ಮಾಡುವ ಕ್ರೋಧ । ಗಳನು ಸೈರಿಸುವುದೇಕೆಂದ ಇದನು ।
ವರತಿ ಶಿಕ್ಷೆಯೆಂದು ಬರೆವರಾರು ಎಂಬ । ಪರಮಗುರುವೆ ಸಲಹು ಬಸವ ಪ್ರಭುವೇ ॥

ಪ್ರತಿಯೊಂದು ಪದ್ಯವೂ ಪರಮಗುರುವೆ ಸಲಹು ಬಸವ ಪ್ರಭುವೇ ಎಂದು ಮುಗಿದಿದೆ.

## ಶ್ರೀಮನ್ಮಹಾಮೂರ್ತಿ (ಸುರಪುರದೆರೆಯಪ್ಪ) ವಿರಚಿತ ಅಷ್ಟಾವರಣ ತಿಲಕ

ಇದು ವಾರ್ಧಿಕ ಷಟ್ಪದಿಯಲ್ಲಿರುತ್ತದೆ. ಇವರ ಕಾಲ ೧೭೨೫ ಇರುತ್ತದೆ. ಇವರು ತಮ್ಮ ಗ್ರಂಥದ ಆದಿಯಲ್ಲಿ ಶ್ರೀ ಬಸವಣ್ಣನವರ ಬಗ್ಗೆ—

ಬಸವನೆಂದರೆ ದುರಿತ ದೆಶೆಗೆಟ್ಟು ಓಡುವದು ।
ಬಸವನೆಂದರೆ ಕರ್ಮ ಕಸವಾಗಿ ನುಸುಳುವುದು ।
ಬಸವಾಕ್ಷರವು ಭವಾಬ್ಧಿಗೆ ಛೈತ್ರವೆನಿಸುವುದು ಬಸವ ಭುವನಾಧಾರನೂ ॥
ಬಸವನಘುಂದಾರಣ್ಯ ಸುಡುವನಂ ಝಡುವನಂ ।
ಬಸವ ತಾಪತ್ರಯವ ಛೇದಿಸುವ ಭೇದಿಸುವ ।
ಬಸವತ್ರಿಯಕ್ಷರವೆ ಮನದಿಷ್ಟವನು ಕೊಟ್ಟು ಸಸಿನೆಯನ್ನಂ ಪೊರೆವುದು ॥

## ಶ್ರೀ ಮಡಿವಾಳಯ್ಯನವರ ಚರಿತ್ರೆ

ಇದನ್ನು ಬರೆದವರು ಕಟ್ಟಿಗೆ ಹಳ್ಳಿಯ ಸಿದ್ಧಲಿಂಗ. ಇವನ ಕಾಲ ೧೭೨೫. ಇದು ಯಕ್ಷಗಾನದಲ್ಲಿರುತ್ತದೆ. ತ್ರಿಪುಡಿ, ಜಂಪೆ, ಏಕತಾಳ ಮೊದಲಾದ ಪದ್ಯಗಳಿರುತ್ತವೆ. ನಮಗೆ ಸಿಕ್ಕಿದ ಪ್ರತಿಯಲ್ಲಿ ಮೊದಲನೆಯ ನಾಲ್ಕು ಪಾನುಗಳಿರುವದಿಲ್ಲ. ಆದ್ದರಿಂದ ಕವಿಯು ತನ್ನ ಗ್ರಂಥದ ಆದಿಯಲ್ಲಿ ಶ್ರೀ ಬಸವಣ್ಣನವರ ಬಗ್ಗೆ ಮಾಡಿದ ಸ್ತೋತ್ರ ನಮಗೆ ದೊರೆತಿಲ್ಲವಾದರೂ ಕವಿಯು ತನ್ನ ಗ್ರಂಥದ ಮಧ್ಯಮಧ್ಯದಲ್ಲಿ ಸಂದರ್ಭಾನುಸಾರವಾಗಿ ಬಸವಣ್ಣನವರ ಬಗ್ಗೆ ಉಲ್ಲೇಖಮಾಡಿರುತ್ತಾನೆ. ಅದರಲ್ಲಿ ಒಂದೆರಡು ಸಂದರ್ಭಗಳಲ್ಲಿಯ ಪದ್ಯಗಳನ್ನು ಇಲ್ಲಿ ಕೊಡುತ್ತೇವೆ.

ದ್ವಿಪದಿ—

ಪ್ರಳಯಕಾಲದ ಗಂಡ ಪರಮಪ್ರಚಂಡ। ಇಳೆಯೊಳು ನಿಂದಕರ ಗಂಡಭೇರುಂಡ। ಮಾದೀರಾಜನ ಸುತನು ಮಹಾಮಹಿಮ ಲಿಂಗಾ। ಭೇದ್ಯಾಂತರಂಗನೆ ಶರಣು ಕೃಪಾಂಗ ॥ ಸನ್ಮಹಾಲಿಂಗಾಂಗ ಬಸವ ದಂಡೇಶ। ಅನಾದಿ ಸಮಶುದ್ಧ ಆದೀ ಬಸವೇಶಾ। ಹಿಮಕೇಶ ಭಾಸ್ಕರನು ದಯವಾದಾ ತೆರದಿಂದ। ಪ್ರಮಥ ಶೃಂಗಾರವಾಗಿ ಪಲ್ಲಕ್ಕಿಯೊಳಗೆ ಚಂದದಿಂದಲಿ ಕುಳಿತ ಹರಹರಾ ಎನಲೂ ಮುಂದಕ್ಕೆ ಅಡಿಯಿಡಲು ಭಟ್ಟರು ಘಡೀಸೆ ಜಯಜೇಯ ವೃಷಾಧೀಶ ಜಯತು ಕಲ್ಯಾಣ ಮಂತ್ರಿ ಬಸವೇಶ ॥

ಮತ್ತೊಂದು ಪ್ರಸಂಗದಲ್ಲಿ—

**ಜಂಪೆ**

ಶರಣು ಬಸವಾಧೀಶ, ಶರಣು ಪಾಪವಿನಾಶ, ಶರಣು ವೃಷಭಾಧೀಶ ಬಸವ ದಂಡೇಶ। ಕಾಯಜನ ಮದಭಂಗ ಕರುಣಿ ಶರಣರ ಸಂಗವ್ಯೋಮಲೋಚನ ಭೃಂಗ ಬಸವ ದಂಡೇಶ। ಮುನ್ನ ಭವಗಳ ತೋರದೆ ನಿಮ್ಮ ಪಾದವ ಕಂಡೆ ಎನ್ನ ರಕ್ಷಿಪುದೆಂದು ಎರಗಿದನು ವೀರಾ ॥

## ಶಂಕರ ಕವಿ

ಈತನ ಕಾಲವು ೧೭೬೩ ಇರುತ್ತದೆ. ಈತನು ಚೋರಬಸವ ಚರಿತ್ರೆಯನ್ನು ವಾರ್ಧಕ ಷಟ್ಪದಿಯಲ್ಲಿ ಬರೆದಿರುತ್ತಾನೆ. ತನ್ನ ಕಾವ್ಯದ ಪ್ರಾರಂಭದಲ್ಲಿ—

ಎಲೆ ಬಸವ ನಿನ್ನ ನಾಮವೆ ದುರಿತವನವಹ್ನಿ। ಎಲೆ ಬಸವ ನಿನ್ನ ದರುಶನವಖಿಲ ತೀರ್ಥಫಲ। ಎಲೆ ಬಸವ ನಿನ್ನಯಂಗಣ ಕಾಶಿ ಶ್ರೀಶೈಲ ಮುಖ್ಯ ಕ್ಷೇತ್ರಕ್ಕಧಿಕವೂ ॥ ಎಲೆ ಬಸವ ನಿನ್ನೊಡನೆ ಸಂಪ್ರಸಂಗವಮಾಡೆ। ಲಘುತರದಿಷ್ಟಸಿದ್ಧಿಯ ಮಂತ್ರ ಪುರಶ್ಚರಣೆ। ಎಲೆ ಬಸವ ನಿನ್ನಂಗದಿಂದ ಮೋಕ್ಷಧರೆಗುಭಯ ಶಂಭು ನೀನೇ ॥ ೧ ॥

## ನೂಾವನೂರ ಚನ್ನಬಸವ

ಕಾಲ ೧೬೪೦. ಈತನು ಶರಣ ಬಸವೇಶ್ವರ ಪುರಾಣವನ್ನು ಬರೆದಿರುತ್ತಾನೆ.

ಧರೆಗೆ ಭಕ್ತಿ ನಿಮಿತ್ತದಿಂದವ। ತರಿಸಿ ಶಂಕರನಾಜ್ಞೆಯಿಂ ಮಾ। ದರಸರುದರದೆ ಗಣಸಹಿತ ಗುರುಲಿಂಗ ಜಂಗಮವಾ॥ ಮೆರೆ ಭಜಿಸಿ ಮಹಿಮೆ ಯೊಳು ನಿತ್ಯದಿ। ಮೆರೆವುತಂತ್ಯದಿ ಸಂಗಮೇಶನ। ಬೆರೆದ ಬಸವನೆ ಸಲಹು ಕರುಣಾಮೃತವನೆಮಗಿತ್ತು॥

ಭಕ್ತಿವಂತನು। ಭಕ್ತಿಪಂಥನು ಭಕ್ತಿ ಕಾಂತನು। ಭಕ್ತಿ ನಿತ್ಯನು ಭಕ್ತಿ ಸತ್ಯನು ಭಕ್ತಿ ಗುಣನಿಧಿಯು॥ ಭಕ್ತಿ ಪುಣ್ಯನು ಭಕ್ತಿ ಗಣ್ಯನು। ಭಕ್ತಿ ಯುಕ್ತನು ಭಕ್ತಿ ಮುಕ್ತನು। ಭಕ್ತಿ ಸಾಮ್ರಾಜಕ್ಕೊಡೆಯ ತಾನೆನಿಸಿ ಮೆರೆದಿಹನು॥ ಭಕ್ತಿ ಬೀಜಂ ಭಕ್ತಿ ತೇಜಂ। ಭಕ್ತಿ ರಾಜಂ ಭಕ್ತಿ ಭಾಜಂ। ಭಕ್ತಿ ಚಿತ್ತಂ ಭಕ್ತಿ ಸತ್ತಂ ಭಕ್ತಿ ಗುಣಯುಕ್ತಂ॥ ಭಕ್ತಿ ರಂಗಂ ಭಕ್ತಿ ಸಂಗಂ। ಭಕ್ತಿ ಕೂಟಂ ಭಕ್ತಿ ಬೇಟಂ। ಭಕ್ತಿವಂತನೆನಕ್ಕಿ ಮೆರೆದಂ ಭಕ್ತಿಭಂಡಾರಿ॥

ಜಂಗಮದ ಸಖ ಜಂಗಮದ ಸುಖ। ಜಂಗಮದ ರತಿ ಜಂಗಮದ ನುಡಿ। ಜಂಗಮದ ಫಲ ಜಂಗಮದ ಬಲ ಜಂಗಮದ ಕೂಟ॥ ಜಂಗಮದ ನಿಧಿ ಜಂಗಮದ ಸುಧಿ। ಜಂಗಮದ ಮುದ ಜಂಗಮದ ಪದ। ಜಂಗಮವೆ ಸರ್ವಾರ್ಥವೆನುತೊಪ್ಪಿದನು ಬಸವೇಶ॥ ಜಂಗಮದ ಸೇವಾರತಿಯು ಘನ। ಜಂಗಮದ ಪೂಜಾರತಿಯು ಶಿವ। ಜಂಗಮವ ನೋಡುವ ರತಿಯು ಮಾದ್ಯಂತವಿಲ್ಲದಿಹ॥ ಜಂಗಮದ ಶೇಷಾಭಿರತಿ ಗುರು। ಜಂಗಮದ ಭೋಗೋರುರತಿಪರ। ಜಂಗಮದ ತ್ಯಾಗೈಕರತಿ ವಿನಿತಲ್ಲದೊಂದುಂಟೆ॥

## ಮೈಲಾರದ ಬಸಪ್ಪನವರು

ಕಾಲ ೧೬೪೦. ಇವರು ಕರ್ಣಾಟಕದಲ್ಲಿ ದೊಡ್ಡ ಶಿವಾನುಭವಿಗಳು. ಶಿವಾನುಭವ ದೀಪಿಕೆ, ಗುರುಕರುಣತ್ರಿವಿಧಿ ಮೊದಲಾದ ಅನೇಕ ಗ್ರಂಥಗಳನ್ನು ಬರೆದಿರುತ್ತಾರೆ.

ಇವರು ಲಿಂಗನಾಯಕನ ಹಳ್ಳಿಯ ಶ್ರೀ ಚನ್ನವೀರಸ್ವಾಮಿಗಳವರ ಶಿಷ್ಯರು.

### ಶಿವಾನುಭವ ದೀಪಿಕೆಯಲ್ಲಿ

ಬಸವನ ಅನುಭಾವವು ಬರೆ ಬರೆ ವಸುಧೆಯ ಸೂತಕಮದೆಲ್ಲ ಪರಿಹರವಹುದೈ।
ಬಸವನ ನಾಮವ ನೆನೆವನ ರಸನೆಯೆ ಗುರುವೆಂದೆಂಜೆನು ಬಸವ ಪ್ರಭುವೇ ॥ ೧ ॥

ಬಸವನೆ ಘ್ರಾಣನಕಾರಂ ಬಸವನೆ ವರ ಜಿಹ್ವೆ ನೇತ್ರ ಮಕಾರ ಶಿಕಾರಂ।
ಬಸವನೆತ್ವಕ್ಕುವಕಾರಂ ಬಸವನೆ ಶ್ರೋತ್ರಯಕಾರಂ ಬಸವ ಪ್ರಭುವೇ ॥ ೨ ॥

ಬಸವನೆ ಸುಮೂಲ ಮಂತ್ರಂ ಬಸವನೆ ಎಡ ಎದೆ ಇವೆರಡಕಾರ ಉಕಾರಂ।
ಬಸವನೆ ಬೆನ್ನುಮಕಾರಂ ಬಸವನೆ ಬಲಮೂಲಮಂತ್ರ ಬಸವ ಪ್ರಭುವೇ ॥ ೩ ॥

ಬಸವನ ಅರಿವು ಕ್ರಿಯೆಕೋಡು, ಅಸಮಗುರುಶಬ್ದ ಕೊಂಬುಂಟದರಿಂ।
ಒಸೆದು ವಿಚಾರಿಸಿ ನೋಡಲು ಬಸವನೆ ಗುರು ಗುರುವೆ ಬಸವ ಬಸವ ಪ್ರಭುವೇ ॥ ೪ ॥

ಶಿವಮಾಡಲಹುದು ಮೂಜಗ ವಿವುಗಳ ಭಕ್ತಿಯ ಬೆಳೆಯಿಂ (ಬೀಜದಿಂ)
ಸಲಹುವವ ಬಸವಂ ।
ಶಿವನಧಿಕ ಮೂರುಲೋಕಕೆ ಶಿವನಿಂದಧಿಕಂ ಬಸವಂ ಬಸವ ಪ್ರಭುವೇ ॥ ೫ ॥

ವಸುಧೆಯ ದೈವಂಗಳೊಳಂ ಅಸಮಾಕ್ಷನಧಿಕ ಪೆರ್ಚಿನ ಸತ್ತ್ವಮಥರೊಳಂ ।
ಬಸವನೆರೆಯಧಿಕನೆನುತಲಿ ಒಸೆದು ಜಗ (ಜನ) ಸಾರುತಿಹುದೈ ಬಸವ ಪ್ರಭುವೇ ॥ ೬ ॥

ಮತ್ತೊಂದು ಸ್ತೋತ್ರದಲ್ಲಿ—

ಬಸವಲಿಂಗವೆಂಬೈದಕ್ಷರಗಳು । ರಸನೆಯೊಳಿರಬೇಕು ಶಶಿಕಾಂತದೊಳಿಹ
ರಸವ ಪರಿಯೊಳೀವಸುಧೆಯೊಳಿರಬೇಕು ಅರುಹಿನ ಕುರುಹಿಡಿದವನೀ
ತಳದೊಳವತರಿಸಿದ ಗಣಪಾಲಾ ॥

ವರಗುರುಲಿಂಗ ಸುಜಂಗಮ ಸೌಖ್ಯಾಕರಪಾಲನ ಲೀಲಾ ।
ಪರಮ ಷಡಕ್ಷರ ಪಂಚಾಕ್ಷರವೆಂಬೆರಡರಾದಿ ಮೂಲಾ ।
ಶರಣರ ಕರಗುನಭಾವದಿಂದುಪಚರಿಸಿ ಕೊಂಬಲೋಲಾ ॥

ವೇದಶಾಸ್ತ್ರ ಪೌರಾಣದಧಿ ಮಥನದನವನೀತ ।
ಸಾವಾಖ್ಯದೊಳಿಹ ನಾದಬಿಂದು ಕಳೆಗತ್ತಲತ್ತೀತ ।
ಮೂದೇವರ ಮುತ್ತಯ್ಯನ ಪೊತ್ತು ಸಲಹಿದನ್ನದಾತಾ ।
ಭೇದಿಸಲಗಣಿತ ಬ್ರಹ್ಮಾಂಡಂಗಳ ಧರಿಸಿದ ಪ್ರಖ್ಯಾತಾ ॥

## ಕವಿ ನಂದಪ್ಪ

ಕಾಲ ೧೮೫೦. ಇವರು ಪ್ರಭುಚರಿತ್ರೆ ಯಕ್ಷಗಾನದಲ್ಲಿ ಬರೆದಿರುತ್ತಾರೆ. ಇವರು ಬರೆದ ಪ್ರಭುದೇವರ ಯಕ್ಷಗಾನವು ವಿಚಾರದರ್ಪಣ ಮುದ್ರಣಾಲಯದಲ್ಲಿ ಅಚ್ಚಾಗಿದೆ.

**ರಾಗ—ಆದಿತಾಳ**

ಈಶ ಪಾಲಯಮಾಂ । ಸದಾ ಬಸವೇಶ ಪಾಲಯಮಾಂ ।
ಪಾಪನೋಚನ ಪಾಪ । ನಾಶಬಿಜ್ಜಳಧರಾ । ಧೀಶ ರಕ್ಷಿತದಂಡದೀಶ ಮಹೇಶ ॥ ಪ ॥

ಲೋಲ ಸುಗುಣಮಣಿ । ಜಾಲಭೂಷಣ ಗಣ ।
ಪಾಲಸಂಗಮದೇವ ಬಾಲಾ ಭಾಸುರಕೀರ್ತಿ । ಲೀಲ ಸದ್ಧರ್ಮಾನು ।
ಕೂಲರಕ್ಷಾಮಣಿ । ಮಾಲಾಭಸಿತಪುಂಡ್ರಫಾಲಾ ಪಂಚಾಕ್ಷರಿ ।
ಮೂಲಸ್ಮರಣ ನೀಲಲೋಚನೆ ಮನೋಹರಾ ॥ ೧ ॥

ಅಂಗಜಗುಣವಿಭಂಗ ಗಂಗಾದೇವಿ । ಸಂಗನಿರತ ಪ್ರಸಾದಾಂಗ ।
ಶ್ರೀಗುರು ಚರಲಿಂಗ ಪೂಜಿತ ನಿತ್ಯೋತ್ಸಂಗ ಸದ್ಭಕ್ತಾಂತರಂಗ ।
ಪರಾತ್ಪರ ಪುಂಗ ಕೃ । ಪಾಂಗ ಚಿಲ್ಲಿಂಗ ಚಿದಾನಂದ ॥ ೨ ॥

ವೀರಶೈವಾಚಾರ । ಸಾರಸಂಗ್ರಹಮಾಯಾ । ದೂರಷಟ್‌ಸ್ಥಲ ವಿಚಾರ
ಲಿಂಗಾಂಗ ಸಂ । ಚಾರ ಕರಣ ಜಯಶೂರ । ಕಾರುಣ್ಯ ಸಂ ।
ಪೂರ ಶ್ರವಣಮುದಹಾರ ನಿಜಾನಂದ । ಕ್ರೂರಕೊಂಡೆಯ ಶೂಲಭೇದಿ ಬಸವಲಿಂಗಾ ॥

## ಶ್ರೀ ಮುಪ್ಪಿನ ಷಡಕ್ಷರಸ್ವಾಮಿಗಳು

ಇವರ ಕಾಲ ಸುಮಾರು ೧೭ನೆಯ ಕ್ರಿಸ್ತಶಕೆಯು. ಇವರು ವೀರಶೈವ ವೇದಾಂತಿಗಳಲ್ಲಿ ಸುಪ್ರಸಿದ್ಧರು. ವಿವಿಧ ವೃತ್ತಗಳಲ್ಲಿ ಜನಪ್ರಿಯಗಳಾದ ಅನೇಕ ಹಾಡು

ಗಳನ್ನು ಹಾಡಿದ್ದಾರೆ. ವೀರಶೈವ ಶಿವಯೋಗಿ ವೃಂದದಲ್ಲಿ ಇವರು ಗಣ್ಯರೂ, ಮಾನ್ಯರೂ ಆಗಿರುತ್ತಾರೆ. ಇವರು ಬಸವಣ್ಣನವರ ಬಗ್ಗೆ—

ರಾಗ—ಕುಸುಮ

"ಎಲ್ಲ ಶರಣರ ನೆನೆದು ಇಲ್ಲಿ ಉನ್ನತನಾದೆ ಎಲ್ಲರಲ್ಲೊಂದು ಬೇಡಿಕೊಂಬೆ
ಭಕ್ತಿ ಇಲ್ಲದ ಧರೆಯು ವ್ಯರ್ಥವಾಗಿರುತಿಹುದು ಭಕ್ತಿತ್ರಯುವ ಕಲಿಸಿ
ಮುಕ್ತರೆನಿಸಿ ಮುಕ್ತಿಪದವಿಗೆ ತಂದ ಕರ್ತೃರ್ಯ ಬಸವೇಶ್ವರನೆ ಭಕ್ತಿಭಿಕ್ಷವ
ನೀಡಿ ಸಲಹೋ ಎಮ್ಮ ॥"

## ಶ್ರೀ ಘನಮಠಾರ್ಯರು

ಇವರ ಜನನ ಕಾಲ ೧೮೨೮. ಇವರು ಪರಮ ವೈರಾಗ್ಯಮೂರ್ತಿಗಳು. ಇವರ ಗೃಹಜೀವನದ ಬಹುಭಾಗವು ಬಸವಭಕ್ತಿಗೆ ಅರ್ಪಿತವಾಗಿದೆ. ಬಸವಭಕ್ತಿಯೇ ನಿಜ ಮುಕ್ತಿಗೆ ಹೆದ್ದಾರಿಯೆಂದು ಘನಮಠರ ಬಲವಂತವಾದ ನಂಬಿಕೆ. ಬಸವನಿಗೆ ಸರಿದೊರೆ ಯಿಲ್ಲವೆಂದು ಇವರು ಪದಗಳನ್ನು ಹಾಡಿದ್ದಾರೆ. ಇವರು ತತ್ವಪದಗಳನ್ನು ರಚಿಸಿರು ತ್ತಾರೆ. ಅದಕ್ಕೆ ಭಕ್ತಿಸುಧಾಸಾರವೆಂದು ಹೆಸರನ್ನಿಡಲಾಗಿದೆ. ಭಕ್ತಿಸುಧಾಸಾರವೆಂಬುವ ಗ್ರಂಥದಲ್ಲಿ—ಬಸವಣ್ಣನವರ ಬಗ್ಗೆ ಅನೇಕ ಪದಗಳನ್ನು ಹಾಡಿರುವರಲ್ಲದೆ ಬಸವ ನಾಮಾವಳಿ ಮತ್ತು ಬಸವ ಮಹಿಮಾ ತ್ರಿವಿಧಿಗಳನ್ನು ರಚಿಸಿರುತ್ತಾರೆ. ಈ ತ್ರಿವಿಧಿ ಯಲ್ಲಿ ೧೦೦ ಪದ್ಯಗಳಿವೆ.

ಸಮಾನ ದೈವವದಾರೋ ಬಸವ ನಿನ್ನ ।
ಸಮಾನ ದೈವವದಾರೋ ಬಸವ ನಿನ್ನ ॥ ಪ ॥

ಸಮಾನ ಶಿವಮತಾಭಿಮಾನ ನಿಧೆ ನಿನ್ನ ।
ಸದಾ ಸುಕವಿನುತ ಪದಾಬ್ಜವರದ ಸ ।
ದುದಾರ ಪರಮ ಸುಚಿದಾಂಬುನಿಧೆ ನಿನ್ನ ।
ಗಣಾಧಿಪತೆ ಸುರ ಗಣಾಳಿ ವರಸುತ ।

ಪ್ರಣಾಮ ನಿಜವಾಹನ ಮಹಿಮ ನಿನ್ನ ।
ಪುರಾರಿ ಹೃದಯದಿ ವಿರಾಜಿಸುತಲೀ ।
ಧರಾತಲದೊಳಿರುವರ ಪೋಷಿಸುವೆ ನಿನ್ನ ।
ಪ್ರಸಾದತನು ಗುರುಪ್ರಸಾದ ಮನಶಿವ ।

ಪ್ರಸಾದಚರ ನಿಜಪ್ರಸಾದಮಯ ನಿನ್ನ ।
ಘಟಾದಿ ಗುಣವನ ಕುಠಾರ ವರಘನ ।
ಮಠಾಧಿಪತೆ ನಿಶ್ಚಟಾದಿ ಬಸವ ನಿನ್ನ ।

ಬಸವ ಮಹಿಮಾ ತ್ರಿವಿಧಿಯಲ್ಲಿ—

ಶ್ರೀ ಗುರುವೆ ಕರುಣಾರಸ ಸಾಗರವೆ ನಿಜಮೋಕ್ಷ ।
ದಾಗರವೆ ನಿನ್ನ ಪದಪದ್ಮವತಿ ಸುಖವ ।
ನೀಗೆ ಸುಜನಾವಳಿಗನುದಿವಸ ॥ ೧ ॥

ಶಿವನೇ ಬಸವಂ ಬಸವನವನೇ ಶಿವನೆಂದು ಶೃತಿ ।
ನಿವಹವೆಡೆವಿಡದೆ ಪೊಗಳುತಿಹುದಾಗಿ ನಾ ।
ನವಿರತಂ ಬಿಡದೆ ನುತಿಸುವೆನು ॥ ೨ ॥

ಗುರುಲಿಂಗ ಚರರೂಪವೆರೆದಕ್ಷರವೆ ನಾಮ ।
ಕರುಣವಾಗಿರ್ಪ ಬಸವಾಕ್ಷರದೊಳೊಂದ ।
ಸ್ಮರಿಸಲವ ಮುಕ್ತನೆನೆ ಪೊಗಳ್ವೆ ॥ ೩ ॥

ಹರನಿಂದಲಧಿಕ ಸದ್ಗುರು ಬಸವನೆಂದನಿಶ ।
ವರ ರಹಸ್ಯ ವಚನವಿಹುದರಿಂದುರೆ ಪೊಗಳಿ ।
ದುರಿತವನು ಗೆಲಿವೆ ನಿಹದಲ್ಲಿ ॥ ೪ ॥

ಬಸವಯೆಂಬುವನ ಮುಖಬಿಸಜ ಮತ್ ಸದನವೆಂ ।
ದಸಮಾಕ್ಷ ದೇವಿಯುಗೊರ್ರೆದನಾಗಿ ನಾ ।
ನುಸುರಿ ಪರಮಾರ್ಥ ಪಡೆದಪೆನು ॥ ೫ ॥

ಒರೆದಾ ಪ್ರಭುವಿಂತು ಮಚ್ಚರಣವರ್ಚಿಸಿ ಮೋಕ್ಷ ।
ದೊರೆಯದೀ ಬಸವಾಕ್ಷರವ ಸ್ಮರಿಸಲು ಮುಕ್ತಿ ।
ವರನಪ್ಪೆ ನೆನಲಾನುರೆನುತಿಪೆ ॥ ೬ ॥

ಶರಣಾಗತತ್ರಾಣ ಬಿರುದಾಂಕನೆಂದು ಶಿವ ।
ಶರಣದೊಳ್ ಕೀರ್ತಿವೆತ್ತ ಕಾರಣದಿ ಬಸ ।
ವರಸ ನಾ ನಿಮ್ಮಂಘ್ರಿಯ ಭಜಿಪೆ ॥ ೭ ॥

ನಿಮ್ಮ ಹೊಗಳಲ್ಕೆ ಹರಿಬ್ರಹ್ಮರಳವಲ್ಲವೆನ ।
ಲು ಮರ್ತ್ಯರೊಳಗೆ ಕಿರಿಯರೋಳ್ ಕಿರಿಯ ನಾ ।
ನಿಮ್ಮ ಪೊಗಳಲ್ಕೇ ತರವನಯ್ಯಾ ॥ ೮ ॥

ಬಾಲಕನ ತೊದಲನುಡಿಗೇಳಿ ಪಿತಸಂತೈಸು ।
ವೋಲೆನ್ನ ನುಡಿಯನಾಲಿಸೈ ಸದ್ಭಕ್ತ ।
ಲೋಲ ಬಸವೇಶ ಬಿಡದೆನ್ನ ॥ ೯ ॥

ಶ್ರೀದಾಪ್ತನಾಜ್ಞೆಯಿಂ ಮಾದಾಂಬೆ ಸುತನೆನಿಸು ।
ತೈದೆ ಬಸವಾಹ್ವಯದಿ ಜಗದೊಳಗೆ ತೋರಿ ।
ದಾದಿ ಪವಾಡಗಳನುಸುರ್ವೆ ॥ ೧೦ ॥

ಮತ್ತೊಂದು ಪದ್ಯದಲ್ಲಿ—

ಬಸವ ಗಣಾಧಿಪತೆ ನಮೋ ಗುರು ।
ಬಸವ ಗಣಾಧಿಪತೆ ॥
ಅಸಮನಯನ ಸಮಯಶರಧಿವಿಧು ಗುರು ॥ ಪ ॥

ನಿತ್ಯನಿರಾಮಯ ನಿರುಪಮ ನಿರ್ಗುಣ ।
ಮೃತ್ಯುವಿಜಯ ಪರಮಾರ್ಥ ಚರಿತಗುರು ॥ ೧ ॥

ಚರಲಿಂಗಾರ್ಪಿತ ಶರೀರ ಕರಣಭವ ।
ಹರ ಕರುಣಾಕರ ಶರಣಸಮೇಳ ॥ ೨ ॥

ಭಕ್ತಿನಿಧಾನ ವಿರಕ್ತ ಸುಪೂಜಿತ ।
ಮುಕ್ತಿದ ಘನಮಠಕರ್ತ ಪರಮಗುರು ॥ ೩ ॥

## ಮುಳಗುಂದ ಬಾಲಲೀಲಾ ಮಹಾಂತ ಶಿವಯೋಗಿಗಳು

ಇವರು ಕೈವಲ್ಯದರ್ಪಣವನ್ನು ರಚಿಸಿರುತ್ತಾರೆ.

ತಮ್ಮ ಕೈವಲ್ಯ ದರ್ಪಣದ ಆದಿಯಲ್ಲಿ—

ಶ್ರೀ ವೇದೋದಿತ ವೀರಶೈವ ಸಮಯಾಚಾರ ವ್ರತಪ್ರಕ್ರಿಯಾ ।
ಚಾರ್ಯಾಗ್ರೇಸರ ಸಾರ್ವಭೌಮ ಮಹಿಮಾ ಭ್ರಾಜಿಷ್ಣವೇ ಜಿಷ್ಣವೇ ॥
ಭಾಂಡಾಗಾರ ದುರಂಧರಾಯ ಬಸವಾಮಾತ್ಯಾಯ ಜೇಷ್ಠಾಯತೇ ।
ಶ್ರೀಮತ್ಕೂಡಲ ಸಂಗಮೇಶ್ವರ ಮಹಾದೇವಾಯ ತಸ್ಮೈ ನಮಃ ॥

ಬಸವೇಶಂ ಶರಣಾಗ್ರಣಿಮಣಿ । ಬಸವೇಶಂ ತ್ರೈಜಗಧಣಿಗುಣಿ ಬಸವೇಶಂ ಪರುಷದಕಣಿ ನಿಜ । ಬಸವೇಶಂ ಗಜ ಹರಿಯರಣಿ । ಝುಣ ಝೇಂಕೃತ ಪ್ರಿಯಗೌರಿ ॥ ಪಲ್ಲವಿ ॥ ಬಸವೇಶಂ ಮುಕ್ತಿಯ ಕೋಶಂ । ಬಸವೇಶಂ ಭಕ್ತಿವಿಲಾಸಂ । ಬಸವೇಶಂ ಪಾಪವಿನಾಶಂ । ಬಸವೇಶಂ ಜ್ಞಾನದಿನೇಶಂ । ಮತ್ಪ್ರಾಣಂ ನಿಜಗೌರೀ । ಬಸವೇಶಂ ಪ್ರಣವಾಕಾರಂ । ಬಸವೇಶಂ ಶಿವಮತಸಾರಂ । ಬಸವೇಶಂ ದುರ್ಜನ ದೂರಂ । ಬಸವೇಶಂ ಶ್ರೀ ಮಹಂತೇಶಂ ಸತ್ಯಂ ತವಶೃತಗೌರಿ ॥

## ಷಟ್‌ಸ್ಥಲ ತಿಲಕ

ಚನ್ನಮಲ್ಲೇಶನ ಕರಕಮಲ ಸಂಭವ ಸಿದ್ಧರಾಮೇಶ ಕಾಲ ೧೧೬೦.

ಪುಷ್ಕರ ಶಿರೋರುಹ ಸುಪುಷ್ಕರ ಜಮೂರ್ಧ್ನಿಕರ । ಪುಷ್ಕರಾಂಬಕ ಚಕ್ಷು ಪುಷ್ಕರ ವಿರಾಜಪದ । ಪುಷ್ಕರ ಸುಯೋಗಿ ಹೃತ್ಪುಷ್ಕರ ನಿವಾಸ ಸ್ವರ್ ಪುಷ್ಕರ ಶಿರೋಧೃತ ಹರ । ಪುಷ್ಕರ ಜ ಜಸವ ಹರ ಪುಷ್ಕರಾಹಿತವಹ್ನಿ ಪುಷ್ಕರೇಶ್ವರಚಕ್ಷು ಪುಷ್ಕರ ಸದಾ ಕಾಲ । ನಿಷ್ಕೀಶ ಬಂಧು ಸುಖದುಃಖ ವನದಾವ ರೋಚಿಷ್ಕು ಜಯ ಬಸವಲಿಂಗಾ ॥

ಈ ಕವಿಯು ಮತ್ತು

ಅಕ್ಷರ ಸ್ತ್ರೀಧವಖಿಳಕ್ಷರೇಶ್ವರ ಪಂಚರಾಕ್ಷರಾತ್ಮಕ ಭಕ್ತಿಪಕ್ಷ ಸರ್ವಾಂಗ ರುದ್ರಾಕ್ಷ । ತಕ್ಷಾಂಶ ಸಕಲಾಕ್ಷ ಲಿಂಗಾಕ್ಷಮಯ ಯಕ್ಷಯ ಘ್ರಣಾಕಟಾಕ್ಷ ಅಕ್ಷರಾಂಘ್ರೀರಕ್ಷಕಾಲಕ್ಷಯಮಪುರಾಕ್ಷಯ । ಭವಕ್ಷಯ ನಿರಕ್ಷರ ಶಿವಾಕ್ಷರ ವಿಚಕ್ಷ ನಿರ್ಲಕ್ಷ ತ್ರಿಯಕ್ಷ ವಿಷಭಕ್ಷ ವೃಷಲಿಂಗೇಶ ರಕ್ಷಿಪುದು ಕ್ಷೇಮದೆಮ್ಮುಮಂ ॥

## ಕವಿ ಚನ್ನವೀರಾಚಾರ್ಯರು

ಇವರು ವಿಶೇಷಾನುಭವ ಷಟ್‌ಸ್ಥಲವನ್ನು ರಚಿಸಿರುತ್ತಾರೆ.

ಏಕ ಏವ ದೇವನೊಬ್ಬನೇ ಶರಣು ಬಸವಯ್ಯ । ಆ ಶರಣ ಬಸವನಿರವೇ ಪರಮ ಪ್ರಸಾದ ರೂಪವಾಯಿತ್ತು. ಆ ಪರಮಪ್ರಸಾದ ರೂಪು ಮೂರ್ತಿಯಾದನಯ್ಯ ನಮ್ಮ ಸಂಗಯ್ಯನಲ್ಲಿ ಸದ್ಗುರು ಬಸವಯ್ಯ ॥

ಅದ್ವಿತೀಯ ಸ್ವರೂಪವಾದ ಪರವಸ್ತು ತನ್ನ ಸ್ವಲೀಲೆಯಿಂದ ಬಸವೇಶ್ವರನೆಂಬ ನಾಮಮಂ ಧರಿಸಿ ಶರಣನಾದನೆಂಬುದೀಗ ಏಕ ಏವ ದೇವನೊಬ್ಬ ಎಂಬುವ ಪದದ ಅರ್ಥವು, ಆ ಶರಣ ಬಸವಣ್ಣನ ನಿಲವು ಮಹಾಜ್ಞಾನ ಚಿತ್ಸ್ವರೂಪವಾಗಿರ್ಪುದೆಂಬುದೀಗ ಆ ಶರಣ ಬಸವಯ್ಯ ನಿರವೇ ಪರಮಪ್ರಸಾದ ರೂಪವಾಯಿತ್ತು ಎಂಬುವ ಶಬ್ದಕ್ಕರ್ಥ. ಆ ಮಹಾ ಜ್ಞಾನ ಚಿತ್‌ಸ್ವರೂಪವೇ ತಾನಾಗಿ ದೇವ ದೇಹಿತನಾದ ಬಸವಣ್ಣನೇ ಪ್ರಥಮಾಚಾರ್ಯನೆಂಬುದೀಗ ಆ ಪರಮಪ್ರಸಾದ ರೂಪು ಮೂರ್ತಿಯಾದ ನಯ್ಯ ನಮ್ಮ ಸಂಗಯ್ಯನಲ್ಲಿ ಸದ್ಗುರು ಬಸವಯ್ಯನು.

ಅಯ್ಯ ಅನಾಹತ ಲೋಕದಲ್ಲಿ ಪ್ರವೇಶಿಸುವಾಗ ಅಕ್ಷರ ಎರಡಕ್ಷರ ತದ್ರೂಪವಾಗಿರ್ದೆಯಯ್ಯ ನೀನಾದಿ ಬ್ರಹ್ಮಾಂಡವನಿರಿವಾಗ ಶಕ್ತಿತ್ರಯದ ಶಾಖೆಯಾಗಿರ್ದೆಯಯ್ಯ ನೀನು ಸಕಲದಲ್ಲಿ ನಿಷ್ಕಲದಲ್ಲಿ ಸ್ವಾನುಭಾವ ಸಂಬಂಧದಲ್ಲಿ ಅಕ್ಷರ ಎರಡರಲ್ಲಿ ಆಂದೊಳನಾಗಿ ಪ್ರವೇಶಿಸುವಾಗ ಶುದ್ಧ ನೀನಾಗಿ ಪ್ರಸಿದ್ಧ ನೀನಾಗಿ ಪಂಚವಾಕ್ಯಂಗಳೇ ನಿನ್ನ ಮನೆಯಾಗಿ ಆ ಎಂಬುದೇ ನಿನ್ನ ತನುವಾಗಿ ಆನಂದ ಎಂಬುದೇ ನಿನ್ನ ಮೂರ್ತಿಯಾಗಿ ಪರಾಪರ ರೂಪೇ ನಿನ್ನವಯವವಾಗಿ ನೀನಿಪ್ಪೆಯಯ್ಯ ನಿತ್ಯಮಂಗಳ ರೂಪನಾಗಿ ಸ್ವತಂತ್ರನಾಗಿ ಪರಮಸೀಮೆಯ ಮೀರಿಪ್ಪ ಕಪಿಲ ಸಿದ್ಧ ಮಲ್ಲಿಕಾರ್ಜುನನಲ್ಲಿ ಏಕಾರ್ಥವ ಮಾಡಿದ ಬಸವಣ್ಣ ಗುರುವೇ ಶರಣಾಗು ॥

## ನಂದಿ ಆಗಮ

ಕವಿಯ ಹೆಸರು ವೀರಸಂಗಯ್ಯ

ಬಸವನ ನಾಮವ ನುಡಿದು ಬದುಕಿದೆ ಬಸವನ ನಾಮವ ಕೇಳಿ ಜೀವಿಪೆ। ಬಸವನ ನಾಮವ ಬರೆದು ಭವದಾಬಂಧನವ ವಿಧಿಪೆನು ॥ ಬಸವ ನಾಮವ ನೋಡಿ ಸುಖಿಸುವೆ ಬಸವ ನಾಮವ ನುಡಿದು ಧನ್ಯನು । ಬಸವ ನಾಮವ ಹೃದಯದಲ್ಲಿಟ್ಟು ನೆನವನರ್ಪಿಸುವೆ ॥ ಸಂಧಿ ೨, ಪ. ೧

ಗರುಡಗಾಂಧರ್ವ ಕಿನ್ನರಕ್ಷರು ಸಿದ್ಧವಿದ್ಯಾಧರರು ಅಸುರರು । ಹರಿಯು ಅಜರುದ್ರ ಇಂದ್ರರಮರರು ಮುಣುಗಿ ತೇಲುತಿರೆ। ಪರಮ ವೃಷಭಾವತಾರದಲಿ ಬಂದು ಶರಧಿಗಾಜ್ಞೆಯ ಮಾಡಿ ಪಾದದೀ ಧರಣಿ ನಿರ್ಮಿತಮಾಡಿದಾತನ ಚರಣಕೆರಗುವೆನೊ ॥ ಸಂಧಿ ೫, ಪ. ೧

ಲಿಂಗಾಂಗ ಸಂಗ ಸಂಯೋಗ ಹಿಂಸಿತಾರ್ಥವು ಮನವು ಮಯವಾಗಿ। ಬಂಗಾರದೊಳು ಬಣ್ಣವಡಗಿದಾಪರಿಯಂತೆ । ಅಂಗ ಗುರುವು ಲಿಂಗ ಪ್ರಾಣವು ಜಂಗಮವು ಸತ್ಸಂಗವಾದೊಲು ಸಂಗನಾ ಬಸವಣ್ಣ ಲಿಂಗನ ಸ್ತುತಿಯ ಮಾಡುವೆನು ॥ ಸಂಧಿ ೭, ಪ. ೨

ನಡೆಯ ಪರುಷವು ಪಾದಪೀಠವು ನುಡಿಯ ಪರುಷವು ವಾಕ್ಕು ಜಂಹೆಲಿ । ವಿಡಿದ ಕರದಲಿ ಹಸ್ತ ಪರುಷವು ಘನವ ತೋರುತಲೀ । ವಡನೆ

ನಯನದಿ ನೋಟ ಪರುಷವು । ಕೊಡುವದಿಷ್ಟಾರ್ಥ ಭಾವ ಪರುಷದಿ
ಒಡೆಯ ಬಸವನ ತವನಿಧಿಯ ಚರಣಕೆರಗುವೆನು ॥ ಸಂಧಿ ೯, ಪ. ೨

ಆದಿ ಬಸವನ ಪಾದ ಸೋಂಕಲು ಮೇದಿನಿಯ ಉತ್ಪತ್ತಿ ಪ್ಪೈದಿ
ಮದು । ವೇದ ನಾಲ್ಕು ವಿರಾಟಪುರುಷನು ಯೆಂದು ಸ್ತುತಿಸುವೆನು ॥
ಬೋಧ ಗುರುವಿನ ಚರಣದಿಂದಲಿ ಆದುದೂ ಸರ್ವರಿಗೆ ಮೋಕ್ಷವು ।
ಈ ಧರೆಗೆ ವೃಷಭ ಆಧಾರಯೆನುತ ನಮಸ್ಕರಿಸುವೆ ॥ ಸಂಧಿ ೧೨, ಪ. ೨

## ಶ್ರೀ ಉದ್ಧರಣಿಯ ವಾರ್ಧಿಕ

ಲೇಖಕರು: ಶ್ರೀ ಮಜತ್ಪುರದ ನಿರಂಜನ ಸ್ವಾಮಿಗಳು ಯಕ್ಕುಂಡಿ.

ಬಸವನೆ ತತ್ವತ್ರಯ ಬಸವನೆ ಲಕ್ಷಣತ್ರಯವು ।
ಬಸವನೆ ಮೂರ್ತಿತ್ರಯ ಬಸವನೆ ಶಕ್ತಿತ್ರಯ ।
ಬಸವತ್ರಯ ವಯತ್ರಯವು ಬಸವನೆ ತನುತ್ರಯ ।
ಬಸವನೆ ಜೀವತ್ರಯವೂ । ಬಸವನೆ ಆತ್ಮತ್ರಯ ।
ಬಸವನಾವಸ್ಥತ್ರಯ । ಬಸವನೆ ಮನತ್ರಯವೂ ।
ಬಸವ ಭಾವತ್ರಯವು ಬಸವನೆ ಸೃಷ್ಠಿಮಯ ।
ವೆಂದು ತೋರಿಸಿದಂತ ಬಸವ ಗುರುರಾಯ ಶರಣು ॥

ಬಸವನೇ ಗುರುತ್ರಯವು । ಬಸವನೆ ಲಿಂಗತ್ರಯ ।
ಬಸವನೆ ಚರತ್ರಯ ಬಸವ ಶೇಷತ್ರಯವೂ ।
ಬಸವನೆ ಉದುಕತ್ರಯ । ಬಸವನೆ ಭಕ್ತಿತ್ರಯ ।
ಬಸವನೆ ಅಂಗತ್ರಯವು । ಬಸವನೆ ಲಿಂಗತ್ರಯ ।
ಬಸವನವದಾನತ್ರಯ । ಬಸವನೆ ಕರಣತ್ರಯ ।
ಬಸವನೆ ಮುಖತ್ರಯವು ಬಸವನರ್ಪಿತತ್ರಯವು ।
ಬಸವನಾಮವ ತಿಳಿದು ಜಪಿಸೆಂದ ಗುರುವೆ ಶರಣು ॥

## ಸೋಮೇಶ್ವರನ ಶಿಶು

ಕಾಲ ಗೊತ್ತಾಗಿಲ್ಲ.

ಮಡಿವಾಳಯ್ಯನೆ ದೇಹ ಕಿನ್ನರಯ್ಯನೆ ಪ್ರಾಣ ಹಡದಪ್ಪಣಗಳೇ ಬಾಹು ಬಾಚರಸರೇ ।
ನುಡಿದ ನಾಲಿಗೆ ಪ್ರಭುವೆ ಕಳೆ ಮರುಳಶಂಕರ ಸಿದ್ಧರಾಮರೆ ಕಣ್ಗಳೂ ॥
ಒಡನೆ ಬಂದೇಳ್ನೂರು ಎಪ್ಪತ್ತು ಗಣಸಹಿತ ಮೃಡಶರಣರೆಲ್ಲರುಂ ಕೂಡಿದೊಂದೊಡಲಾಗಿ ।
ನಡೆವ ಬಸವನ ಭಕ್ತಿಯ ಹೊಂಬಣ್ಣವಿಡಿಯಲು ಬಿಜ್ಜಳನೆ ಒರೆಗಲ್ಲಾದನು ॥

## ಕವಿ ಬಸವಲಿಂಗ (ರಗಳೆ)

ಬಸವನ ಪವಾಡ ರಗಳೆಯ
ನಸಮಾಕ್ಷನ ಕೃಪೆಗೆ ಶಿವನ ಭಕ್ತರ ಕೃಪೆಗಂ ।
ವಶನಾಗಿ ಬದುಕಲೋಸುಗ
ನುಸಿರ್ದಂ ವರಬಸವಲಿಂಗನತಿ ಭಕ್ತಿಯೊಳಂ ॥

ಶ್ರೀಮದಭವಧರ್ಮರೂಪನಾಗಿ ಶಿವನ ಪೊತ್ತೆ ಬಸವನ ।
ವ್ಯೋಮಕೇಶನಾಜ್ಞೆಯಿಂ ಶೈಲಾದಿಯಾಗಿ ಮೆರೆದೆ ಬಸವ ॥ ೧ ॥

ಸ್ಕಂದನಾಗಿ ಮೆರೆದೆ ಬಸವ ನೀಲಲೋಹಿತನಾದೆ ಬಸವ ।
ಅಂದು ಮುನೋಹರನುಮುಗ್ರ ಪ್ರಮುಥನಾಗಿ ಮೆರೆದೆ ಬಸವ ॥ ೨ ॥

ಪರಮು ವೃಷಭನಾಗಿ ಅನಿಮಿಷಂಗೆ ಲಿಂಗವಿತ್ತೆ ಬಸವ ।
ಭರದೆ ಬಸವನಾಗಿ ಬಂದು ಮಹಿಮೆಗಳನೆ ತೋರ್ದೆ ಬಸವ ॥

ಹೀಗೆಯೇ ಈ ರಗಳೆಯು ೨೭ ನುಡಿ ಇರುತ್ತದೆ. ಕವಿಯು ಅಂತ್ಯದಲ್ಲಿ—

ಬಸವನ ನಾಮುವೆ ಸುಖದಂ ।
ನಿಸದಂ ಪುಸಿಯಲ್ತಿದೆಂಬುದಕ್ಕೆ ನಾನೇ ಹವಣಂ ॥
ರಸೆಯೊಳ್ ರೋಗಿ ಎನಿಸಿದಾಂ ।
ಬಸವನೀನತಿ ಸುಖಮುನಾಂತು ಸುಖಿಯಾಗಿರ್ಪೆಂ ॥ ೧ ॥

## ಗಾಜುಲ ಬ್ರಹ್ಮಯ್ಯನವರ ಪುರಾಣ ಅಥವಾ ಶಿವಮುಹಾತ್ಮ್ಯ ಸಿಂಧು
## ಕವಿ ನಂಜುಂಡ ಕಾಲ

ಬಾಗುರುವು ಸಾಲಿಂಗವಾಜಂಗಮಾಗಿ ವೇದಾಗಮಾತೀತ ಬಾನಾದ ಸಾಬಿಂದುವಾ । ಆಗಲಾ ಕಳೆಯಾಗಿ ಬಾ ಇಷ್ಟಸಾಪ್ರಾಣವಾಭಾ ಭಕ್ತಿಯೂ ॥ ಮಾನಿ ಸಾಜ್ಞಾನ ವಾವೈರಾಗ್ಯ ಎನಿಪದಂ ರಾಗದಿಂ ಬಾ ಪ್ರಣಮುಭವವಾರಿಧಿಯ ಬಾಗ । ಬಾಗಿಪುದುಸಾ ಸರ್ವಕೆಲ್ಲ ಆದರ ಮಾಗಿ ವಾಸುಮುನಕಭೇದ್ಯಂ ॥

ಈ ಕಾವ್ಯವು ದೊಡ್ಡದಾಗಿದ್ದು ೧೩೭೦ ಪದ್ಯಗಳುಂಟು.

## ಕವಿ ಗಣೇಕಲ್ ಸಂಗಪ್ಪ

ಈತನು ಹದಿನೆಂಟನೆಯ ಶತಮಾನದ ಆದಿಯಲ್ಲಿದ್ದಂತೆ ತೋರುತ್ತದೆ. ಈತನು ದೊಡ್ಡ ಪಂಡಿತನೂ ಶಿವಾನುಭವಿಯೂ ಆಗಿದ್ದನೆಂದು ತಿಳಿದುಬಂದಿದೆ. ಗಣೇಕಲ್ ಗ್ರಾಮವು ರಾಯಚೂರು ಜಿಲ್ಲೆ ಮಾನವಿ ತಾಲ್ಲೂಕಿನಲ್ಲಿದೆ. ಈ ಕವಿಯು ಕುಮಾರ ವಿಜಯ, ಬಸವಶತಕ ಮೊದಲಾದ ಗ್ರಂಥಗಳನ್ನು ಬರೆದಿರುತ್ತಾನೆ. ಈ ಕವಿಯ ಕವಿತೆ ಬಂಧುರವಾಗಿರುತ್ತದೆ. ಈಗ ಕುಮಾರ ವಿಜಯ, ಬಸವಶತಕ ಈ ಎರಡು ಗ್ರಂಥಗಳು ಮಾತ್ರ ಸಿಕ್ಕಿರುತ್ತವೆ. ಈತನು ತನ್ನ ಗ್ರಂಥಗಳ ಆದಿಯಲ್ಲಿ ಬಸವಣ್ಣನವರನ್ನು ಸ್ತುತಿಸಿರುತ್ತಾನೆ.

ಬಸವಶತಕದಲ್ಲಿ—

ನಿರುಪಮ ನಿರ್ವಿಕಲ್ಪ ನಿಗಮಾಗಮುಸೇವಿತ ನಿತ್ಯನಿಸ್ಪೃಹಾಕ್ಷರ ನಿಜ ಮುಕ್ತ ಭಕ್ತ ನಿರುಪಾಧಿಕ ನಿರ್ಮಲ ನಿಸ್ಸಹಾಯ ನಿರ್ಜರ ಜಯಶೀಲ ಜನ್ಮ ಮರಣಾದಿಕವರ್ಜಿತ ಜಂಗಮಾರ್ಜನ ದ್ಯುರುತರನೇಮ ಪೂಜ್ಯಶರಣಾ ಶರಣಾಗತ ವಜ್ರಪಂಜರಾ ॥ ೧ ॥ ಭವಿಗಳು ಭಕ್ತರಾಗಿ ಗುರುಲಿಂಗ ಚರಾರ್ಚನೆಯಲ್ಲಿ ನಿಷ್ಠೆಯಿಂ । ತವೆ ಬಲಿವಾತ್ಮಸಿದ್ಧಿಗೆ ಕೃತಾಂತಸುಮಾಸ್ತ್ರ ಜಯಕ್ಕೆ ಕಾರಣಂ । ಭವದವತಾರವೆತ್ತಿ ಬಸವಾ ನೆರೆಯಾಲಿಸಿ ನಿಮ್ಮವ ನೆಂಬೆ ಪಾಲಿಸೈ ಶಿವಮುತಸಿಂಧು ಶೀತಕಿರಣಾ ಶರಣಾಗತ ವಜ್ರಪಂಜರಾ ॥ ೨ ॥

ಸಾಕ್ಷರ ಸಿದ್ಧಿಯುಂ ಸಕಲಲೋಕ ವಶೀಕರಣಾದಿ ಸತ್ಕಳಾ। ದೀಕ್ಷಿತರೆಮ್ಮ ನಿಮ್ಮನುವಿನಿಂ ಶಿವಭಕ್ತಿಗೆ ಮುಖ್ಯರಾಗಿ ತಾಪಕ್ಷಯ ಮುಕ್ತಿಯ ಪಡಿಯೆ । ಶುದ್ಧಸುರತ್ವಪದಾರ್ಹರೀವು । ನೀಲಾಕ್ಷಯ ದಿವ್ಯ ಚಿತ್ತ ಶರಣಾಗತವಜ್ರಪಂಜರಾ ॥ ೩ ॥

ಕುಮಾರ ವಿಜಯದಲ್ಲಿ—

ಶ್ರೀಕರಸೋಮನಾಮಸಮುದಂಚಿತ ಮಾನಸಜನ್ಮನಂಗಿಲಿಂಗೈಕ ಮಹೋದಯಂ ಪದಪರಾಜಿತಪಂಕಜ ಕಾಂತಿಕಾಂತನ। ಸ್ತೋತ್ರಕಲಾಪ ನಭಶ್ಶೈವ ಶಿರೋಮಣಿಯಾತ್ತಸೌಖ್ಯ ರ । ತ್ನಾಕರ ವೃದ್ಧಿಯಿಂ ಮಿಗೆ ಯೊಡರ್ಚುವನೀ ವೃಷಭೇಶ ನನ್ನೆಗಂ ॥ ೧ ॥

## ದೇವಾಂಗಪುರಾಣ—ಕವಿ ವಿರೂಪಾಕ್ಷ ದೇಶಿಕ

ಇವನ ಕಾಲ ೧೬೦೦

ಕವಿಯು ತನ್ನ ಗ್ರಂಥಾರಂಭದಲ್ಲಿ—

ಪರಮತಂಗಳಂ ಗೆಲಿದು ಮಂಗಳ ।
ಪುರದಿ ಬಹುಮಹಿಮೆಗಳ ಮೆರೆವುತ ।
ಹರಮತವನುದ್ಧರಿಸಿ ಗುರುಚರಲಿಂಗವನು ಭಜಿಸಿ ॥
ಗುರುವರೋತ್ತಮ ಸಂಗಮೇಶನೊ ।
ಳಿರದೆ ಪೊಕ್ಕೈಕ್ಯ ಪಡೆದ ಮ ।
ದ್ಗುರು ಬಸವರಾಜೇಂದ್ರ ಕೊಡುವುದು ಭಕ್ತಿಸತ್ಪಥವಾ ॥

ಈ ಗ್ರಂಥದಲ್ಲಿ ೧೭ ಸಂಧಿಗಳಿದ್ದು ೧೧೩೪ ಪದ್ಯಗಳಿರುತ್ತವೆ.

## ಕೊಲ್ಲಿಸಾಕಿ ಮಹಾತ್ಮೆ

ಕವಿಯ ಕಾಲ ತಿಳಿದಿಲ್ಲ.

ಅಸಮಲೋಚನನಿಲ್ಲಿ ಆದಿಲಿ ।
ಬಸವನಾಗಿಯು ಅಖಿಲ ಸುರರನು ।
ಪಶುಗಳನು ಮಾಡುವರ ಕ್ರೀಡಿಸಿ ಮೆರೆದ ಸ್ಥಾನವಿದು ।

## ಸದಾಶಿವರಾಜ ನೀತಿ

ಕೆಳದಿಯ ಅರಸರಲ್ಲಿ ಸದಾಶಿವರಾಜರು ಸುಪ್ರಸಿದ್ಧರು. ಕೆಳದಿಯ ಅರಸರ ಕಾಲದಲ್ಲಿ ಅನೇಕ ಕನ್ನಡ ಮತ್ತು ಸಂಸ್ಕೃತ ಗ್ರಂಥಗಳು ಬೆಳಕಿಗೆ ಬಂದಿರುತ್ತವೆ. ರಾಜರೂ ಕೂಡ ಕೆಲವು ಗ್ರಂಥಗಳನ್ನು ಬರೆದಿರುತ್ತಾರೆ. ಅವುಗಳಲ್ಲಿ ಶಿವತತ್ತ್ವರತ್ನಾಕರ ಬಹಳ ಪ್ರಾಮುಖ್ಯ ಗ್ರಂಥವಾಗಿರುತ್ತದೆ. ಇವರು ಬರೆದ ಸದಾಶಿವರಾಜ ನೀತಿ ಗ್ರಂಥದಲ್ಲಿ ೫೦೦ ಪದ್ಯಗಳಿರುತ್ತವೆ. ಅದರಲ್ಲಿ—

ಭಕ್ತಿಯಲಿ ಬಸವ ಬಲ್ಲಿದ ಭಕ್ತಿಯಲಿ ಸಿದ್ಧರಾಮ ಪಡದನು ಪಥವಾ ।
ಭಕ್ತಿಯಲಿ ಚೋಳಮುಕ್ತನು ಭಕ್ತಿಗಳಿಂ ವಲಿವ ಶಿವನು ಗುರು ನಂದೀಶ ॥
ಭಕ್ತಿಯಲ್ಲಿ ಬಸವ ನಡದವ ಯುಕ್ತನು ಸುಜ್ಞಾನದಿಂದ ಚನ್ನಬಸವನು ವಿ ।
ರಕ್ತಿಯ ಪ್ರಭು ದೊಡ್ಡನ ಮುಕ್ತರು ಈ ವಿಧದಲ್ಲಿವರು ಗುರು ನಂದೀಶ ॥

## ಭಕ್ತಿರಸದ ಸೋನೆ—ಕವಿ ಮುಂಚಯ್ಯ

ಕಾಲ ೧೮೦೦. ಅನೇಕ ಜನ ಶರಣರನ್ನು ಸ್ತುತಿಸುತ್ತ—

ಬಸವರಾಜನು ಚನ್ನಬಸವನಲ್ಲಮ
ಪ್ರಭು ಎಸೆವಸಂಖ್ಯಾತ ಶರಣರಾ
ವಸುಧೆಯೊಳವರ ಪಾದಕೆ ನಮಿಸುತ್ತ
ಭಕ್ತಿರಸದ ಸೋನೆಯನುಸುರುವೆ ॥ ೨೭ ॥

ಎರಡನೆಯ ಸಂಧಿಯ ೧೧೭ ನೇ ಪದ್ಯದಲ್ಲಿ—

ಬಸವಣ್ಣ ಬಸವಯ್ಯ ಬಸವಪ್ಪ ಬಸವೇಶ ಬಸವರಾಜೇಂದ್ರನೆಂದೆನುತ ।
ಬಸವ ನಿನ್ನಯ ಶೃಂಗದೆಶೆವ ಶೂಲವ ತೆಗಸುವ ಪಾಲಿಸು ಬಸವರಸಾ ॥

ಈ ಗ್ರಂಥದ ಮಧ್ಯಮಧ್ಯದಲ್ಲಿ ಬಸವಣ್ಣನವರ ಘನತೆಯನ್ನು ಕವಿಯು ವರ್ಣಿಸಿರುತ್ತಾನೆ.

ಈ ಗ್ರಂಥದಲ್ಲಿ ೯ ಸಂಧಿಗಳಿದ್ದು ಒಂದು ಸಾವಿರಕ್ಕಿಂತ ಹೆಚ್ಚು ಪದ್ಯಗಳಿರುತ್ತವೆ.

## ದೇವರ ದಾಸೀಮಾರ್ಯ ಪುರಾಣ—ಕವಿ ರಾಘವಾಂಕ

ಕಾಲ ೧೨೮೦. ಕವಿ ರಾಘವಾಂಕನು ವೀರಶೈವ ಕವಿಗಳಲ್ಲಿ ಮೊದಲನೆಯ ಶ್ರೇಣಿಗೆ ಸೇರಿದವನು. ಈತನು ಹರಿಶ್ಚಂದ್ರ ಕಾವ್ಯ, ಸಿದ್ಧರಾಮೇಶ ಪುರಾಣ, ದೇವಾಂಗ ಪುರಾಣ, ವೀರೇಶಚರಿತೆ ಮೊದಲಾದ ಪ್ರೌಢ ಗ್ರಂಥಗಳನ್ನು ಬರೆದಿದ್ದಾನೆ. ಈ ಕವಿಯು ಷಟ್ಪದಿಯಲ್ಲಿ ಆದ್ಯಕವಿಯಾಗಿರುತ್ತಾನೆ. ಈತನು ತನ್ನ ದೇವಾಂಗ ಪುರಾಣದ ಒಂದು ಸಂದರ್ಭದಲ್ಲಿ—

ಸಂಗನ ಬಸವಗೆ ಬಿಜ್ಜಳ ರಾಯಗೆ
ಸಂಗವಿರೋಧವನಿಕ್ಕಿ
ಸಂಗದಿ ಕೊಂಡೆಯ ಮುಂಚಣ್ಣ ಗದ್ದುಗೆ
ಸಂಗದಿಂದುರುಹಿದನರಿಯಾ ॥ ೧೩೦ ॥

ಮತ್ತೊಂದು ಸಂದರ್ಭದಲ್ಲಿ

ಮೂರು ಸ್ಥಲದ ಗಣಕೆರಗಿ
ಮೂವರುಗಳು
ವೀರಬಸವ ಚನ್ನಬಸವ
ವೀರಘಂಟೆಯ ಮಡಿವಾಳ ತ್ರಿಗುಣರಿಗೆ
ಹಾರೈಸಿ ದಾಸ್ಯೆಯ ವಂದಿಸಲೂ ॥

ದೇವಾಂಗನು ಕಲ್ಯಾಣದಲಿ ಹುಟ್ಟಿದಂ ।
ಬಸವಣ್ಣನು ಪೆಸರಿಟ್ಟಂ ।
ಕಲಿಕಾಲ ದಂಡ ಕಾಮಯ್ಯ ಶಂಕರಗಳೂ ॥
ಹೊಳೆವ ಗರ್ಭದಿ ಜನಿತನಿಗೆ
ಮಲಹರ ಬಸವ ದಂಡೇಶ ಗೃಹಕೆ ಬಂದು
ತಿಳಿದಿಟ್ಟ ಪೆಸರ ದಾಸಯ್ಯಗೆ ॥

ವಿವರಣೆ—

ದೇವರ ದಾಸೀಮಾರ್ಯರೂ ಮತ್ತು ಶಂಕರದಾಸೀಮಾರ್ಯರೂ ಬಸವಣ್ಣನವರಿಗಿಂತ ಹಿರಿಯರೆಂದು ಐತಿಹಾಸಿಕರೆಲ್ಲರೂ ಹೇಳುತ್ತಾರೆ. ಆದರೆ ಈ ಗ್ರಂಥದಲ್ಲಿ ದಾಸೀಮಾರ್ಯರಿಗೆ ಬಸವಣ್ಣನವರು ಹೆಸರಿಟ್ಟರೆಂದು ಕವಿಯು ವರ್ಣಿಸಿರುತ್ತಾನೆ. ಇಲ್ಲಿ ಇತಿಹಾಸಕ್ಕೆ ವಿರೋಧವಾದಂತಾಯಿತು. ಆದ್ದರಿಂದ ದಾಸೀಮಾರ್ಯರ ಕಾಲ ನಿರ್ಣಯವು ಸಂಶಯಾಸ್ಪದವಾದುದರಿಂದ ಇದು ವಿಚಾರಣೀಯ ವಿಷಯವಾಗಿರುತ್ತದೆ. ವಾಚಕರಾದ ವಿದ್ವನ್ಮಣಿಗಳು ಈ ವಿಷಯದಲ್ಲಿ ವಿಮರ್ಶಿಸುವುದಗತ್ಯವಾಗಿರುತ್ತದೆ.

## ನಿಃಕಲರ ವಚನ—ಕವಿ ನಿಷ್ಕಲಂಕ ಶಿವಾನಂದಯೋಗಿ

ಈ ಗ್ರಂಥವು ೧೮೮೫ರಲ್ಲಿ ಮದ್ರಾಸಿನಲ್ಲಿ ಅಚ್ಚಾಗಿದೆ. ಈ ಗ್ರಂಥದ ಕೊನೆಯಲ್ಲಿ ಕವಿಯು ಬಸವಣ್ಣನವರ ಬಗ್ಗೆ—

ಸರ್ವಾಂಗ ಲಿಂಗಿಯು । ಸರ್ವೇಂದ್ರಿಸನುಮತನು । ಸರ್ವಾಚಾರ
ಸಂಪತ್ತು ಸರ್ವನಿರ್ವಹಕನು ಬಸವಣ್ಣ ಸರ್ವಕ್ಕೆ ಅಧಿಕ ನಿಃಕಲನೇ ॥ ೬॥
ಶಿವತಾನು ಬಸವಾನು। ತವೆರೂಪ ಎತ್ತಿಹನು ಅವಿರಳಾತತ್ವದಿರವಾಗಿ।
ವಿವರವುಂಟಯ್ಯ ಆಗಮದಿ ಭಕ್ತ । ಶಿವಭಕ್ತನೆಂದು ನಿಃಕಲನೇ ॥ ೭॥

## ಜಮಾಲ ಸಾಹೇಬರವರ ಕಾಲಜ್ಞಾನ

ಕಲಿಯುಗದ ಬಸವಣ್ಣ ಕಾಲಿಲೆಳವುತಾನೆ ಸಲೆವಂದು ಯುಗವನು ।
ಕರವುತಲೈದಾನೆ. ಕಲಿ ಕಲಿಯೆಂದರೆ ಕಲಿಯದ ಕೆಟ್ಟೇತು ಕಲಿಯುಗದ
ಭೋಗವು ಕಡೆಯಾಟವಾದೀತು ॥

## ವೀರಶೈವಾನ್ವಯ ಚಂದ್ರಿಕಾ—ಆರಾಧ್ಯ ವೀರೇಶ್ವರ ಶಾಸ್ತ್ರಿಗಳು

ನಂದಿಕೇಶ್ವರ ರೂಪಾಯ ನಾನಾಸುಖ ಪ್ರದಾಯಿನೇ ।
ನಮೋಸ್ತು ವೃಷಭೇಶಾಯ ಶಬ್ದಬ್ರಹ್ಮ ಸ್ವರೂಪಿಣೇ ॥

## ವೀರಶೈವ ಪ್ರದೀಪಿಕೆ—ಕವಿ ಮರಿತೋಂಟದಾರ್ಯರು

ನಮೋ ಬಸವರಾಜಾಯ ವೃಷೆಂದ್ರಾಪರಮೂರ್ತಯೇ ।
ಚರಾರ್ಚನೈಕನಿಷ್ಠಾಯ । ಶಿವಾಚಾರ ಪ್ರವರ್ತಿನೇ ॥

## ಗುರು ಬಸವಾರ್ಯರ ವಚನ

ಕವಿಯ ಕಾಲ ಗೊತ್ತಾಗಿಲ್ಲ. ಇದರಲ್ಲಿ ಶ್ರೀ ಬಸವಣ್ಣನವರ ವಿಷಯದಲ್ಲಿ—

ಎಲ್ಲರೊಳು ಬಸವನೆ ಶಿವನು ಎಲ್ಲರೊಳು ಶಿವ ಬಸವನೆ ಶಿವನು
ಎಲ್ಲರು ಮಂಗಳ ಬಸವನ ನೆನೆದ ಸ್ತ್ರೀಯರೆಲ್ಲರು ನಿಲ್ಲದೆ ಬಸವನ ಹಾಡಿರೆ॥
ಬಸವ ಜಯ ಜಯ ಎನ್ನ ಪುಣ್ಯವೆ। ಬಸವ ಜಯ ಜಯ ಎನ್ನ
ಜ್ಞಾನವೆ । ಬಸವ ಜಯ ಜಯ ಎನ್ನ ಭಕ್ತಿಯ ಸಾರ ಗುರುಬಸವ ॥ ೨೨॥

ಈ ಗ್ರಂಥದಲ್ಲಿ ನೂರಾರು ಪದ್ಯಗಳು ಬಸವಣ್ಣನವರ ಪ್ರಶಂಸೆಪರ ಇರುತ್ತವೆ. ಕೊನೆಗೆ ಕವಿಯು ಬಸವಣ್ಣನವರ ಮಂಗಳವನ್ನು ಹಾಡಿ ಗ್ರಂಥ ಸಮಾಪ್ತಿಗೊಳಿಸುತ್ತಾನೆ.

## ಚನ್ನಬಸವ ಪುರಾಣ (ಪುರಾತನ ಚರಿತ್ರೆ)
## ಕವಿ ಕುಮಾರ ಚನ್ನಬಸವೇಶ

ಇದರಲ್ಲಿ ಸಂಧಿ ೫, ಪದ್ಯ ೩೫೦ ಇರುತ್ತವೆ. ಈ ಗ್ರಂಥದ ಮಧ್ಯಭಾಗದಲ್ಲಿಯ ಒಂದು ಸಂದರ್ಭದಲ್ಲಿ—

ಆರಾದೊಡಂ ಜಂಗಮಾಕೃತಿಯೊಳಿರ್ದೊಡೆ ವಿಚಾರಿಸದೆ ಬಸವೇಶನವರ ಭಜಿಸುತ್ತಿರ್ಪ ವಾರಾಂತೆಯು ಕೇಳಿ ಬಿಜ್ಜಳನೃಪಂ ತನ್ನಂಗನೆಯುರೀರ್ವರುಂ ಜಂಗಮಾಕಾರದಿಂ ಚಾವಡಿಯೊಳಿರಿಸಿ ಬಸವೇಶನಂ ಚರರಿಂ ಕರಸಿ ತೋರಿಸಿದೊಡೆ ಚಿತ್ತೈಸಿಯೆನೆ ನಾರಿಯರ್ನಿಜ ಜಂಗಮರಾಗಿಯೆ ವೃಷಭೇಶ್ವರನೊಡನೆ ಬಂದರೊಲವಿಂ ॥

## ರೇಣುಕ ವಿಜಯ—ಕವಿ ಸಿದ್ಧಲಿಂಗ ದೇಶಿಕ

ಕಾಲ ೧೭೦೦. ಗ್ರಂಥಾರಂಭದಲ್ಲಿ ಚಂಪಕಮಾಲಾವೃತ್ತಃ—

ಬಸವನ ನಾಮವೆನ್ನರಸನಾಗ್ರನೊಳೋದುತ ಲಾತನಂಗಮಂ ।
ಮುಸಗಿದ ಕಾಂತಿಯುಂದಮುಮನಿಕ್ಕಿಸುತಂತರ ದೃಷ್ಟಿಯಿಂದಲುಂ ।
ಸಖನಡಿ ರೇಣುಕೇಶ್ವರನ ಸತ್ಕಲೆವೆಳೆದ್ವಿತೀಶನಾದವಂ ।
ರಸಿಕರ ಚಿತ್ತಕೋರ್ಮುಡಿ ಯಿದಾಗಲಿಕಿರ್ಮುಡಿಯುಂದಲಾಗಿಪಂ ॥

ಈ ಗ್ರಂಥದಲ್ಲಿ ಎಂಟು ಆಶ್ವಾಸಗಳಿದ್ದು ೯೧೨ ಪದ್ಯಗಳಿರುತ್ತವೆ. ಈ ಗ್ರಂಥಕಾರನ ಕವಿತೆಯು ಪ್ರೌಢಿಮೆಯುಳ್ಳದ್ದಾಗಿರುವದಲ್ಲದೆ ಕವಿತಾ ಶೈಲಿಯು ಹೃದಯಂಗಮವಾಗಿರುತ್ತದೆ.

## ಮುಳಿಯರಾಜ ಕಾವ್ಯ—ಕವಿ ಸಜ್ಜೆಯ ಸಿದ್ಧಲಿಂಗ

ಕಾಲ ೧೬೬೫.

ಎಸೆವ ಭಕ್ತಿಜ್ಞಾನ ವೈರಾಗ್ಯದಿಂದರಂ ।
ಜಿಸುವ ಗುರುಲಿಂಗ ಜಂಗಮರೂಪನಾಂತು ಶೋ ।
ಭಿಸುವಿಷ್ಟ ಸುಪ್ರಾಣಭಾವಲಿಂಗಂ ।
ಗಳೆ ಮಿಸುಪಮುಂ ಮೈಗಳಾದಾ ಬಸವೇಶ ।
ಚನ್ನಬಸವೇಶ್ವರ ಪ್ರಭುರಾಯರೊಸದು ಮತ್ಕಾಯ ।
ತ್ರಯಂಗಳೊಳ್ ನೆಲಸಿ ಏಳಿಸಿ ಶರಣ ಚರಿತ್ರೆ ।
ಯ ಮೂರು ಲೋಕಂಗಳೊಳ್ ಪಸರಿಪಂದದಿ ಮಾಡುಗೆ ॥

## ಗುರುಬೋಧಾಮೃತ

ಸ್ಥಲ ೫, ಪದ್ಯಗಳ ಸಂಖ್ಯೆ ೧೦೨೧ ಇರುತ್ತವೆ. ವೃತ್ತ—

ಇದು ಬಸವಾದಿ ಪ್ರಮಥರ ಪಾದಾಂಬುಜದಿಂದೊದಗಿರ್ದ ಸಾರ ಮ। ತ್ತಿದು ಬಸವಾದಿ ಪ್ರಮಥರುಗಳುಂಡುಳಿದ ಮಹಾ ಪ್ರಸಾದ ಮ । ತ್ತಿದು ಬಸವಾದಿ ಪ್ರಮಥರುಗಳಾಚರಿಸುತ್ತಿಹ ದಿವ್ಯಯೋಗ ಮ । ತ್ತಿದನತಿ ಮೋಹದಿಂದ ಸ್ತುತಿಗೈವುತ್ತಲಿರ್ದನನೇ ಸೌಭಾಗ್ಯನೋ ಯೋಗ್ಯನೊ ॥

ಮಲಹರನ ಭಕ್ತರ್ಗೆ ಸಲೆ ಕಿಂಕರನು ನಾನು ।
ಎಲೆ ಬಸವ ನಿನ್ನ ಕೃಪೆಯ ಕಾರುಣ್ಯದ ಸಲುಗೆಯಲಿ ರಾಯನೆನಿಸಿದೆ ॥

ಹಲವು ಬಳ್ಳುಗಳೆಲ್ಲ ನೆಲೆಯನರಿಯದೆ ಸಿಂಹದೊಳು ಹೋರಿ ।
ಹಲ್ಲ ಕಿರಿವಂತೆ ಕೊಂಡೆಯರಿ । ಗಲಗಾದ ಬಸವಗಿದಿರುಂಟೇ ॥ ೭ ॥

ಇನ್ನಾವನಾದೊಡಂ ಯನ್ನಾಳ್ದ ಬಸವನೊಳು । ಚುನ್ನವಾಡಿದಡೆ ಮಿಗೆಕರುಳು
ಗಳ ನಿಮ್ಮ । ಬೆನ್ನಿನೊಳು ತೆಗೆವೆನರಿದಿರಿ ॥ ೭೨ ॥

ಈ ಹೋದ ಜಂಗಮವು ಆಹಾ ಬಸವಾ ನಿಮ್ಮ ಸಾಹಸಕ್ಕಾರು ಸರಿಯಿಲ್ಲ ।
ಶಿವನು ನಿರ್ದೇಹಿ ನಿರುಪಮನೆ ಬಸವಣ್ಣ ॥ ೭೩ ॥

ಹೀಗೆಯೇ ಈ ಗ್ರಂಥದಲ್ಲಿ ಅನೇಕ ಪದ್ಯಗಳು ಬಹು ರಸಯುಕ್ತವಾಗಿ ಬಸವಣ್ಣನವರ ಹೃದಯಂಗಮವಾದ ವರ್ಣನೆಯಿಂದ ಕೂಡಿರುತ್ತವೆ.

## ಶಿವಲಿಂಗ ಚಾರಿತ್ರ್ಯ

ಇದು ಚಂಪೂಗ್ರಂಥ. ಶ್ರೀ ಬಸವಣ್ಣನವರ ೮೮ ಪವಾಡಗಳಿಗೆ ಕವಿಯು ೮೮ ಪದ್ಯಗಳನ್ನು ರಚಿಸಿರುತ್ತಾನೆ.

ವೀರಶೈವ ಭಕ್ತಿಮಾರ್ಗದಿರವ ಮರ್ತ್ಯದೊಳಗೆ ಹರಹಿ ।
ಸಾರವಹ ಶಿವಪ್ರಸಾದವನ್ನು ತೋರಿ ಮೆರೆದ ಬಸವ ॥
ಕಾರುಣಿಕ ಮಹೇಶ ಭಕ್ತನು ಪ್ರಸಾದಿ ಪ್ರಾಣಲಿಂಗಿ ।
ಚಾರುಚರಿತ ಶರಣರೈಕ್ಯದಿರವ ತೋರಿ ಮೆರೆದ ಬಸವ ॥
ಪರಮಪುರುಷ ಪ್ರಭುವು ಬರಲು ತನ್ನ ಹೃದಯಕಮಲದೊಳಗೆ ।
ಸುರುಚಿರ ಪ್ರಸಾದವಿತ್ತು ನಲಿವುತೊಪ್ಪಿ ಮೆರೆದ ಬಸವ ॥

## ಸಂಗಮೇಶ್ವರ ಪುರಾಣ – ಶಿವಕವಿ – ಬಸವರಾಜ

ಕಾಲ ೧೫೦೦, ಸಂಧಿ ೩೫, ಪದ್ಯ ೨೧೫೧. ಕವಿಯು ಗ್ರಂಥಾರಂಭದಲ್ಲಿ—

ಬಸವ ನಿಮ್ಮಯ ಕೀರ್ತಿ ಪೊಗಳುವೆ ।
ಬಸವ ನಿಮ್ಮಯ ಜಪವು ಮನದಲಿ ।
ಬಸವ ನಿಮ್ಮಯ ಸ್ತುತಿಯ ಮಾಡಿದ ಕವಿಗೆ ಕೊರತಿಲ್ಲ ॥
ಬಸವ ನಿಮ್ಮಯ ಮಹಿಮೆ ಜಗದೊಳು ।
ಪಸರಿಸಿದ ಪಾಲ್ಕುರಿಕೆ ಸೋಮನು ।
ಬಸವ ನಿಮ್ಮಯ ಕರುಣದಿಂದಲೀ ಕೇಳ್ವ ಸಂತಸದಿ ॥ ೧೦ ॥

## ಕುಮಾರೇಶ್ವರ ಪುರಾಣ–ಕವಿ ಮಾಚ್ಯದ ಕುಮಾರಾರ್ಯ

ಕಾಲ ೧೮೪೧, ಸಂಧಿ ೯, ಪದ್ಯ ೧೭೫೫.

ಬಸವನಿಂ ಶಿವಭಕ್ತಿ ಪಸರಿಸಿತು ರಸೆಯಲ್ಲಿ ।
ಬಸವನಿಂ ಶಿವಮಹಿಮೆ ಪ್ರಕಟಿಸಿತು ಲೋಕದೊಳ್ ।
ಬಸವನಿಂದೆಸೆದಷ್ಟಾವರಣ ಸಿದ್ಧಿಗಳ್ ಬಸವನಧಿಕಂ ಜಗದೊಳು ॥
ಬಸವನಾಮವನಾಂತು ರಸನಾಗ್ರದಲಿ ನೆರೆ ।
ಬಸವನುಜ್ವಳಮೂರ್ತಿಯಂ ತಾಳ್ದು ಹೃದಯದೊಳು
ಬಸವನುರು ಮಹಿಮೆಗಳ ಕೇಳ್ದು ಕರ್ಣಂಗಳಿಂ ಬರ್ದುಕುವೇಂ ಭೂತಲದೊಳು ॥

## ಚತುರಾಚಾರ್ಯರ ಪ್ರಬಂಧ—ಕವಿ ತಿಲಕೂರು ಪುರವರ ಸೋಮ

ಸ್ಥಲ ೨೮, ಪದ್ಯ ೧೪೧೩.

ಘನಶಿಲಾದಗೆ ತನಯನಾಗುತ ।
ನೆನೆಯೆಲೆದೆಗುದಿವಂತ ತಪವನು ।
ವಿನಯದಿಂದಲಿ ಮಾಡಿ ಶಂಕರನೊಲಿಸಿಕೊಂಡಾ ॥
ವನಿತೆಯಾಮಾದಾಂಬೆ ಗರ್ಭದಿ ।
ಜನಿಸಿ ಕಲ್ಯಾಣದಿ ಮಹಾತ್ವವ ।
ನನುನಯದಿಗೆಲಿದ ನಘ ಶ್ರೀ ಗುರುಬಸವ ಸಲಹೆಮ್ಮಾ ॥

## ಬಸವೇಶ್ವರನ ಕಾವ್ಯ—ಕವಿ ಗರುಣಿಯ ಬಸವಲಿಂಗ

ಕಾಲ ೧೩೬೯. ಸಂಧಿ ೧೯, ಪದ್ಯ ೩೦೮೬.

ಶರಣಾರ್ತಿ ಬಸವ ಬಸವೇ ।
ಶ್ವರ ಬಸವಾರಾಧ್ಯ ಬಸವದಂಡಾಧೀಶ್ವರ ।
ಶರಣಾರ್ಥಿ ನಿಮ್ಮ ಚರಣಕೆ ।
ಕರುಣಿಸು ಸನ್ಮತಿಯ ಕೃತಿಯ ಪೇಳಿಸು ಕೃಪೆಯಿಂ ॥

ಗರ್ವ ಬೇಡೈ ಮಗನೆ ಗುರುಲಿಂಗಜಂಗಮದೊ ।
ಳೋರ್ವರಂ ಕೆಡೆ ನುಡಿಯದಿರು ನಿಂದೆಗೆಯ್ಯದಿರು ।
ಸರ್ವಜೀವಂಗಳೊಳ್ಕರುಣವಾಗಿರು ಪಕ್ಷಪಾತವಿರಹಿತನಾಗಿರು ॥
ನಿರ್ವಿಘ್ನ ವಿಘ್ನಗಳ್ಬರೆ ಪೆರ್ಚಿ ಕುಂದದಿರು ।
ನಿರ್ವಿಕಾರತ್ವದೊಳಗಿರು ಶಿವಾರ್ಚನೆಯಲ್ಲಿ ।
ಸರ್ವವೂ ಖಲ್ವಿದಂ ಬ್ರಹ್ಮವೆಂದೆಂಬ ಶಾಸ್ತ್ರಂಗಳಿಗೆ ಕಿವಿಗೊಡದಿರೂ ॥

ಈ ಕಾವ್ಯವು ಬಹಳ ದೊಡ್ಡದಿದ್ದು ಅನೇಕ ಪದ್ಯಗಳಲ್ಲಿ ಬಸವಣ್ಣನವರ ಮೇಲ್ಮೆಯನ್ನು ಕಾಣಬಹುದಾಗಿದೆ.

## ಏಕೋರಾಮೇಶ್ವರ ಪುರಾಣ—ಕವಿ ಹರದಿ ಹಳ್ಳಿಯ ಸಂಜಣಾಚಾರ್ಯ

ಈ ಕವಿಯ ಕಾಲ ೧೬೫೦. ಸಂಧಿ ೧೬, ಪದ್ಯ ೧೪೬೩.

ಎಸೆವ ತ್ರಿಷಷ್ಟಿಯಾದ್ಯರ ಪಾದಾಂಬುಜಗಳ್ಗೆ ।
ಮಿಸುಪ ಷೋಡಶತೇರಸರ್ವಶ ಗಣಂಗಳ್ಗೆ ।
ಬಸವಾದಿ ಏಳನೂರೆಪ್ಪತ್ತು ಶಿವಗಣಾವಳಿಗಳಡಚಿ ಚಿಂದಳಿರಿಗೆ ॥
ಕುಸುಮ ಕೋದಂಡ ಹರವಿಗ್ರಹ ಹರೀಶ್ವರರಿಗೆ ।
ಜಸವೆತ್ತ ಕೆರೆಯಪದ್ಮರಸ ಸೋಮೇಶರ್ಗೆ ।
ವಸುಧಾತಳದೊಳೆಸೆವ ನೂತನ ಶಿವೈಕ್ಯರ್ಗೆ ಪೊಸಗೆವೆತ್ತಾನೆರಗುವೇಂ ॥ ೧೭ ॥

ಈ ಪುರಾಣದ ಸರಣಿಯು ಬಹಳ ರಮ್ಯವಾಗಿರುತ್ತದೆ.

## ವೀರಶೈವ ಸಿದ್ಧಾಂತ ದೀಪಿಕಾ—ಕವಿ ವೀರಭದ್ರ

ಈ ಗ್ರಂಥವು ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸುತ್ತದೆ. ಸಂಸ್ಕೃತ ಭಾಷಾ ಸರಣಿಯು ಚೆನ್ನಾಗಿದೆ. ಕವಿಯು ತನ್ನ ಕಾಲವನ್ನು—

"ವ್ಯಯಾಬ್ದೇ ಫಾಲ್ಗುಣೇಮಾಸಿ ಶುಕ್ಲಪಕ್ಷ ತ್ರಯೋದಶೀ ಸಮಾಪ್ತೇಯಂತಿಥೌ ವೀರಶೈವ ಸಿದ್ಧಾಂತ ದೀಪಿಕಾ" ಎಂದು ಹೇಳಿಕೊಂಡಿರುತ್ತಾನೆ.

ಈತನು ತನ್ನ ಗ್ರಂಥಾರಂಭದಲ್ಲಿ ಬಸವಣ್ಣನವರನ್ನು ಕೆಳಗಿನ ಶ್ಲೋಕದಿಂದ ಸ್ತುತಿಸಿರುತ್ತಾನೆ.

ಭೀಷಜ್ಜೈನ ಮತಾಂಧಕಾರ ತರಣಿಃ ಬೌದ್ಧಾಬ್ಧಿ ಝಂಝಾನಿಲಃ ।
ಚರ್ವಾಕಾದ್ರಿಪವಿಃ ಕುವೈಷ್ಣವ ಮತಾರಣ್ಯೋರುದಾವಾನಲಃ ॥
ಕ್ರೂರಾಸತ್ಪಥವಾದಿ ಭೂಜಪರಶುಃ ಸ್ವಾಂಗಮ್ಮತಸ್ಥಾಪನಾ ।
ಚಾರ್ಯ ಶ್ರೀ ಬಸವೇಶ್ವರೊ ಗಣವರಃ ಪಾತು ದ್ವಿತೀಯಃ ಶಿವಃ ॥

ಈ ಕವಿಯು ಶ್ರೀ ಬಸವೇಶ್ವರರಿಗೆ ಮತಸ್ಥಾಪನಾಚಾರ್ಯರೆಂದು ಸಂಬೋಧಿಸಿರುತ್ತಾನೆ.

## ಚೇರಮ ಕಾವ್ಯ—ಕವಿ ಚೇರಮಾಂಕ

ಸಂಧಿ ೧೧, ಪದ್ಯ ೫೫೫ ಇರುತ್ತವೆ.

ಕವಿಯು ತನ್ನ ಕೃತಿಯ ಆರಂಭದಲ್ಲಿ ಬಸವಣ್ಣನವರ ಬಗ್ಗೆ ಸೊಗಸಾದ ಪದ್ಯವನ್ನು ಹೇಳಿರುತ್ತಾನೆ. ಈತನು ಗುಬ್ಬಿಯ ಮಲ್ಲಣಾರ್ಯರ ಶಿಷ್ಯನೆಂದು ಹೇಳಿಕೊಂಡಿರುತ್ತಾನೆ.

ಇಂದುಮೌಲಿಯ ಧರ್ಮವೆ ವೃಷಭನಾಗಿ ಯತಿ
ವೃಂದದಗ್ಗಳ ಶಿಲಾದಂಗೊಗೆದು ಬಳಿಕ ನಾರದಂಮುನಿ
ಬಿನ್ನವಿಸೆ ಶಿವನಿರೂಪದೊಳು ಧರೆಯಂ ಸಲಹಿದಧಿಕವಿನುತಾ ।
ವಂದಿಯಂ ದುರ್ಜನರ ಮಂದಿಯಂ ದೆಶೆದೆಶೆಯಗೊಂದಿಯಂ
ಹೋಗಿಸಿ ಬಲುಬಂದಿಯಂ ಮಾಡಿ ಜಯಹೊಂದಿರ್ದ ಶರಣಾನು
ಕಂದಿಯಂ ಶಿವನಡರ್ದ ನಂದಿಯಂ ಬಲುಗೊಂಬೆನೂ ॥

## ಷಟ್‌ಸ್ಥಲತಿಲಕ—ಕವಿ ಸಿದ್ಧರಾಮ

ಕಾಲ ೧೧೬೦. ಪಲ್ಲವಿ—

ವಲ್ಲಕಿ ಮೃದಂಗಾದಿ ವಾದ್ಯಭೇದಂಗಳಂ ।
ಬಲ್ಲ ಜಾಣರ್ ನುಡಿಸೆ ನುಡಿವಂತೆ ಮನ್ಮನೋವಲ್ಲಭಂ ।
ವೃಷಲಿಂಗನುಡಿಸಲೀಕೃತಿಯ ಮಾಡುವೆ ಕೇಳಿ ಶರಣಜನರೂ ॥
ಶ್ರೀಗುರುವೆ ವಿಪುಲಾಮೃತಾಗರವೆ ಜ್ಞಾನಕ್ರಿಯಾ ।
ಗುರುವೆ ಭೋಗಪ್ರದಾ ಗುರುವೆ ಮನ್ಮಾನಸ ರಕ್ಷಾ ಗುರುವೆ ।
ದುರಿತ ಶಿಕ್ಷಾ ಗುರುವೆ ಶಿಷ್ಯದೀಕ್ಷಾ ಗುರುವೆ ನೈಜಮುಕ್ತಿ ॥
ತ್ಯಾಗ ಗುರುವೆ ಲಿಂಗಯೋಗ ಗುರುವೆ ಭವವಿಯೋಗ ಗುರುವೆ ।
ಶಿವಶಿವ ಏಕಸಮರಸಪೀಠಾ ಗುರುವೆ ಪರಿಪೂರ್ಣಾಧೀ ಗುರುವ ।
ವೃಕಲಿಂಗ ಭೋ ಗುರುವೆ ಶರಣು ನಿಮಗೆ ॥

## ಷಟ್‌ಸ್ಥಲ ವಲ್ಲಭಕಾವ್ಯ—ಕವಿ ಚನ್ನವೀರಜಂಗಮದೇವ

ಕವಿಯ ಕಾಲ ೧೫೦೦.

ಬಸವಣ್ಣ ರೇವಣೇಶ ನುಲಿಯ ಚಂದಯ್ಯನಲ್ಲಮುವಿಂಡ ಸಂಗಯ್ಯಾ ।
ಮುಸುಡಿಯಾ ಚೌಡನುದ್ಭಟ ಹಲಾಯುಧನೊಣೆಲ ಸಿದ್ಧರಾಮಯಂ ।
ಬಿಸಿಗೆಲಸಯ್ಯ ನಿರ್ವಿಘ್ನದ ಸಂಗಯ್ಯ ನಾಗಯ್ಯ ಸಿದ್ಧಬುಧಯಂ ।
ಹಸ್ತಿಯಸ್ಥಿರಸಯ್ಯರ್ಕಳೆಮಗೀಗೆ ಸುಕಾವ್ಯವಚೋವಿಲಾಸಮಂ ॥

## ಬಸವಶಿಖಾಮಣಿ—ಕವಿ ರತ್ನಕವಿಕಂಠ

ಕಾಲ ೧೭೦೦. ಈ ಗ್ರಂಥವು ಸಮಗ್ರ ಬಸವಣ್ಣನವರ ಚರಿತ್ರೆಯಿಂದ ರಚಿಸಲ್ಪಟ್ಟಿರುತ್ತವೆ. ಇದರಲ್ಲಿ ಸಂಧಿ ಏಳು, ೧೨೮೯ ಪದ್ಯಗಳಿರುತ್ತವೆ.

ಏಳನೆಯ ಸಂಧಿಯಲ್ಲಿ—

ಕರುಣಾಬ್ಧಿ ಮರಣರಹಿತದೇವ ಜಯಜಯ ।
ಶರಣಸಂಜೀವನೇ ಜಯತು ।
ಹರಿಸುರಬ್ರಹ್ಮಾದಿಗಳೊಡೆಯನೆ ಜಯ ।
ಹರಭಕ್ತ ಬಸವೇಶ ಜಯತು ॥ ೧೯೨ ॥

ಅಸಮಾಕ್ಷ ಜಯಭಕ್ತಿರಸದ ಸಾಗರ ಜಯ ।
ಶಶಿಧರ ಶರಣಗೆ ಜಯತು ।
ವಸುಧಾರಕ್ಷಾಮಣಿ ಜಯವೆಂದು ಸಂಗನ ।
ಬಸವನ ಕೊಂಡಾಡಿದರೂ ॥ ೧೯೪ ॥

ಈಶನ ಭಕ್ತ ಬಸವೇಶನ ಘನತೆಯ ।
ಸಾಸಿರಜಿಹ್ವೆಯನುಳ್ಳ ಶೇಷನಿಗಳ ।
ವಲ್ಲ ಬಣ್ಣಿಸುವರೆ ಗಿರಿ ।
ಜೇಶನೆ ತಾ ಬಲ್ಲನದನೂ ॥ ೧೯೫ ॥

## ಮಹಾಲಿಂಗೇಂದ್ರವಿಜಯ—ಕವಿ ಮಹಾದೇವ

ಇದು ಮಹಾಪುರಾಣವಿದ್ದು ಸಂಧಿ ೩೨, ಪದ್ಯ ೨೦೬೪ ಇರುತ್ತವೆ.

ಶ್ರೀಮಚ್ಛೈವ ಮತೇತರಾನ್ ಜಿತ್ವಾಯಥೇಷ್ಟಾಂಭುವಿ ।
ಹೃತ್ವಾ ಬಿಜ್ಜಳ ಭೂಮಿಪಾಲ ಕುಟಿಲಂ ಭಿತ್ವಾಚ ಬೌದ್ಧಾವಳಿಂ ॥
ನತ್ವಾಹಾಟಕಗೋತ್ರಹಾಸವಿಭವಾನ್ ಕೃತ್ವಾ ಸಮುಚ್ಛಾರ್ಯಂ ವಿಭೋಃ ।
ಸೋಽಯಂ ಯೋ ವೃಷಭೇಶ್ವರೋ ವಿಜಯತೇಪಾಯಾದಪಾಯಾಜ್ಜಗತ್ ॥

ಮತ್ತೊಂದು ಸಂದರ್ಭದಲ್ಲಿ—

ಪರಶಿವಾನುಜ್ಞೆಯಿಂ ಮಾದಾಂಬಿಕಾತನಯ ।
ವರಮನುರುಸಂಗಮಾಕಾರ ಮಂಗಂ ಗಂಗಾಂಬೆ ।
ಯರ ವಿವಾಹಮನುಕ್ಷ್ಣಯ ದ್ರವ್ಯದಾನ ಮಂತ್ರಿತನಮಂ ವಹಿಸುತಂ ॥
ಗುರುಚನ್ನಬಸವೇಶ ಚಾರಿತ್ರಮಂ ಪ್ರಭುಸ್ಫುರದರ್ಪಣ ಮನುಧ್ವನೀಲಾಂಬಿಕಾಸಾ
ಪರಿಣಯಮನನ್ವಹಂ ಭೂಮದಿಂದಂ ಪ್ರವರ್ಧಿಸಿದ ಬಸವೇಶ ಸಲಹೂ ॥

## ಸಿದ್ಧಲಿಂಗ ಕಾವ್ಯ—ಕವಿ ಬಸವ

ಕಾಲ ೧೮೮೭.

ಆದಿ ವೃಷಭಂಗೆ ಪರಮ ಭೃಂಗೀಶಂಗೆ । ಕ್ರೋಧರಹಿತಮಲ್ಲಮಗೆ । ಬಸವಾದಿ ಪ್ರಮಥರಿಗೆ । ಸಾಧುವರ ಗುರು ಚನ್ನಬಸವ ದಂಡೇಶಂಗೆ ಯತಿ ಸಿದ್ಧರಾಮೇಶಗೆ ॥ ಮಾದೇವಿಯಕ್ಕಂಗೆ ಅಕ್ಕನಾಗಮ್ಮನಿಗೆ । ಮಾದಿ ರಾಜಯ್ಯಗೆ । ಮರುಳ ಶಂಕರನಿಗೆ । ಮೇದಾರ ಕೇತಯ್ಯಗೆರಗಿ ನಾಂ ಭಕ್ತಿಯಿಂ ಬಲಗೊಂಬೆನುತ್ಸವದೊಳು ॥ ೮ ॥

## ನಂಜುಂಡೇಶ್ವರ ಚರಿತ್ರೆ

ಸಂಧಿ ೫, ಪದ್ಯ ೨೦೦.

ಹರಭಕ್ತಿಗೆ ಸಂದು ದೃಢದಿಂ ಹರಗೆ ವಾಹನವಾಗಿ ಚರಿಸುತ ಹರ ಗಣಂಗಳಿಗಧಿಕ ಸಂತೋಷಾಂಬುಧಿಯ ಸಾರೀ ॥ ಹರನ ನಿಜರೂಪವೆನಿಪ ಲಿಂಗವ ಧರಿಪ ಪೆರ್ಮೆಯನಿತ್ತೆ ಜನರಿಗೆ । ಧರಿತ್ರೆಗೆ ಮುನ್ನುದಯಿಸಿದಧೀಶ ಬಸವ ದಂಡೇಶಾ ॥

## ತ್ರಿಭುವನ ತಿಲಕ—ಕವಿ ವಿರುಪರಾಜ

ಇವನ ಕಾಲ ೧೫೧೯.

ಭಕ್ತಿಭೂಷಣನಾ ಬಸವೇಶನಾ । ಭಸಿತ ಸಂಯುಕ್ತಭಾಳನಾ ಮಡಿ ವಾಳನಾ ಮುಕ್ತಿಯಗ್ರದೊಳೆಸೆವ ಚನ್ನಬಸವನ ಲತಾಂಘ್ರಿಕಮಲನ ಕಾನತನಪ್ಪೆ ॥

## ಮಾದೇಶ್ವರ ಸಾಂಗತ್ಯ—ಕವಿ ಗುರುಸಿದ್ಧಪ್ಪ

ಸಂಧಿ ೩, ಪದ್ಯ ೩೬೩.

ಈಶನ ವಾಹನ ದೇಶಕಧಿಕವೆಂದು । ಆಶೆವಿಡಿದು ನಾನು ನಿಮ್ಮ। ಬೇಸರದೆ ಭಜಿಸುವೆ ಮತಿಗೊಡು ಬಸವೇಶನಂಘ್ರಿಗೆರಗುವೆನು.

ಇದು ಸಾಂಗತ್ಯದಿಂದಲೇ ಮುಗಿದಿದೆ.

## ಸಿದ್ಧಲಿಂಗ ಚಾರಿತ್ರೆ—ಹೆರಂಬ ಕವಿ (ಅಪರನಾಮ ನಾರಾಯಣ)

ಇದು ಸಾಂಗತ್ಯದಲ್ಲಿದೆ. ಸಂಧಿ ೨೫ ಪದ್ಯ ೧೯೫೫ ಇರುತ್ತವೆ.

ದಿನಕೆ ಮುನ್ನೂರು ಮೂವತ್ತು ಪವಾಡಗಳನು ಗೆದ್ದು ಕಲ್ಯಾಣದೊಳಗೆ ಘನಮಹಿಮೆಯ ತೋರಿದ ನೀಲಲೋಚನೆ ಇನಯ ಶ್ರೀ ಬಸವೇಶ ಶರಣೂ ॥

## ಉದ್ಭಟ ಕಾವ್ಯ—ಕವಿ ಬಸವಾಂಕ

ಆಶ್ವಾಸ ೭, ಪದ್ಯ ೩೫೫. ಈ ಗ್ರಂಥವು ವಿವಿಧ ವೃತ್ತಗಳಿಂದ ಕೂಡಿರುತ್ತದೆ.

ಸನ್ನುತಿಗೈವೇಂ ಸಂವಿದ್ರೂಪನ ಚೆನ್ನಬಸವರಾಜನ ವಿಭವಂ। ಪ್ರಭುವಂಗಿಷ್ಟಾತ್ಮನ ಮಡಿವಳದೇವನನಘನ ನಿಜಗುಣನಾ । ಬಿನ್ನಣದಿಂ ಚರಲಿಂಗ ಪ್ರಾಣಾಸನ್ನನ ಬಸವೇಶನ ನಿವರೊಳಗಾದುನ್ನತ ಚರಿತರ ನಿರ್ಮಳ ಕರಣರ ಶರ್ಮಾವರಣರನೂ ॥ ೧೫ ॥

## ರಾಜೇಂದ್ರವಿಜಯ ಪುರಾಣ—ಕವಿ ಸಿದ್ಧಲಿಂಗ

ಕನ್ನಡ ಚಂಪೂಗ್ರಂಥ. ಇದರಲ್ಲಿ ೨೧ ಆಶ್ವಾಸಗಳಿವೆ. ಇದು ಉದ್ದಾಮ ಗ್ರಂಥವಾಗಿರುತ್ತದೆ. ಇದರಲ್ಲಿ ೧೩೫೦ ಪದ್ಯಗಳಿವೆ.

ಭಕ್ತಿ ಜ್ಞಾನ ವಿರಾಗ ವೈಭವಯುತಂ ಮಾಂಗಲ್ಯಮಂತ್ರೋದಯಂ ।
ತ್ಯಕ್ತಾಶಾಂ ಗಣಪುಂಗವಂ ಗುಣಯುತಂ ಕಲ್ಯಾಣ ಕಲ್ಪದ್ರುಮಂ ॥
ಮೋಕ್ಷಾಪೇಕ್ಷ ಜನೇಷ್ಟದಂ ಗುರುಕುಲಾಂ ಬೋಧೀಂದುಮುದ್ದೇಶಿಕಂ ।
ರಕ್ಷೋದ್ಧೂಳಿತಮೂರ್ತಿ ಕೀರ್ತಿ ಬಸವೇಶಂ ಪಾಲಿಸಾನಂದದಿಂ ॥

## ಉದ್ಭಟಕಾವ್ಯ ಅಥವಾ ಶೃಂಗಾರಸಾರ—ಕವಿ ಸೋಮರಾಜ

ಉದ್ಗ್ರಂಥವಿದು. ಚಂಪಕಮಾಲಾವೃತ್ತ.

ಸಸಿದಲೆಯಂಗೆ ತೆತ್ತು ಧನವಂ ಮನವಂ ತನುವಂ ವಿಲಾಸದಿಂದ
ಸಮಭಕ್ತಿಯೋಳ್ಬೆರದು ಕಪ್ಪುರದೋಳ್ಜೊಡರಂತೆ ನಾಡೆ ರಂಜಿಸುವ ।
ಚಿದಂಬುರಾಶಿ ಬಸವೇಶ್ವರ ಮುಖ್ಯಮಹೇಶಸೂಚಕ
ಪ್ರಸರಪದಂಗಳೆನ್ನ ಬಗೆದಾವರೆಯೋಳ್ನೆಲಸಿರ್ಕೆ ಸಂತತಂ ।

## ಚತುರಾಚಾರ್ಯರ ಪುರಾಣ—ಕವಿ ಚನ್ನಮಲ್ಲಿಕಾರ್ಜುನ

ಈ ಗ್ರಂಥದಲ್ಲಿ ೫೪ ಸಂಧಿಗಳಿದ್ದು ೩೨೨೬ ಪದ್ಯಗಳಿವೆ.

ಶ್ರೀಗುರುವೆ ಭಕ್ತಹೃತ್ಸರಸಿಜಾಮಲಶೃಂಗ ।
ಯೋಗನಿಗಮಾದಿ ಪರಶೃತಿ ತತಿ ಶಿರೋತ್ಸಂಗ ।
ಭೋಗಮೋಕ್ಷಾದಿ ದಾಯಕ ಚರಾಚರಜೀವ ಸರ್ವಾಂತರಾತ್ಮ ಲಿಂಗಾ ॥
ರಾಗಾದಿ ದೋಷ ದುರ್ಗುಣದೂರ ಯತಿತುಂಗ ।
ನಾಗಾಮರಾಸುರ ಪ್ರಮುಖ ರಕ್ಷಾಪಾಂಗ ।
ಸಾಗರ ಚಿದಾಸಾರ ಪರಮಾಮೃತದಪೂರ ಶರಣು ಗುರುಬಸವಲಿಂಗ ॥

ಚಂದದ ಶಿಲಾದಮುನಿ ನಂದಿಮಂಡಲದಲ್ಲಿ ।
ಕಂದರಿಲ್ಲೆಂದು ತಪಮಂ ಮಾಡಲಾಗ ವೃಷಭೇಂದ್ರಾ ।
ನಂದದಿ ಸ್ವರ್ಣಲಾಂಗೂಲಪದ್ಧತಿಯ ನಂದೀಶ ತೋರಿ ಮೆರೆದಂ ॥
ಕುಂದು ತಾ ಮಾದರಸ ಮಾದಲಾಂಬೆಯರೀರ್ವರಂದು ।
ನಂದಿಯ ಪೂಜೆಯಂ ನೆಗಳ್ದೊಡವರಿಗೊಲಿ ।
ದಿಂದುಧರ ಮಹಿಮಾಂಬುನಿಧಿ ಚಂದ್ರ ವೃಷಭೇಂದ್ರ ಸಾರಮತಿಯಂ ಪಾಲಿಸೂ ॥೧೩॥

## ರೇವಣಸಿದ್ಧೇಶ್ವರ ಕಾವ್ಯ—ಕವಿ ಮಲ್ಲಣ್ಣ

ಸಂಧಿ ೭, ಪದ್ಯ ೩೨೬

ಹರನ ಒಡ್ಡೋಲಗದಿ ಕುಳಿತಿರಲು ಹರಿಬ್ರಹ್ಮದಿಕ್ಪಾಲಕರು
ಪರುಷ ಬಸವನು ಕಲ್ಪತರು ತುಂಬರರು ।
ಪರಿಪರಿಯುಲನೇಕ ಭಕ್ತರು ಮೆರದ ಸುರತಿಂಥಿಣಿಯ ಮಧ್ಯದಿ
ಕರೆದು ನ್ನಾರದನ ಕೇಳಿದ ಮತ್ತಾಗಣಂಗಳನೂ ॥ ೬ ॥

## ನಂಜುಂಡೇಶ್ವರ ಚರಿತ್ರೆ

ಹರನ ಭಕ್ತಿಗೆ ಸಂದು. ದೃಢದಿಂ ಹರಗೆ ವಾಹನವಾಗಿ ಚರಿಸುತ
ಹರಗಣಂಗಳಿಗಧಿಕ ಸಂತೋಷಾಂಬುಧಿಯ ಸಾರೀ ।
ಹರನ ನಿಜರೂಪವೆನಿಪ ಲಿಂಗವ ಧರಿಪ ಪೆರ್ಮೆಯನಿತ್ತೆ
ಜನರಿಗೆ ಧರಿತ್ರೆಗೆ ಮುನ್ನುದಯಿಸಿದಧೀಶ ಬಸವ ದಂಡೇಶ ॥

## ಗುರುಭಕ್ತನ ಕಾವ್ಯ—ಕವಿ ಪ್ರಾಸಭೂಷಣ

ಧರೆಯೊಳೀಕೃತಿ ಪೆಸರು ಗುರುಭಕ್ತಭಂಡಾರಿಚರಿತೆ
ಇದ ಪೇಳಿದ ಕರ್ತೃ ಶಿವನಾರೆನಲು
ಉರುತರದ ಮುಂಡಿಗೆಯ ಮಾದರಸ ಮಾದಲಾಂಬಿಕೆಯ ಗರ್ಭನಿಧಿ ।
ಪರಿಪೂರ್ಣ ಚಂದ್ರಮನು ಶಿವಕವಿಗಳಿಂಗೆ ಕಲ್ಪತರು
ಕಾಮಧೇನು ಚಿಂತಾರತ್ನ ಬಸವೇಶ್ವರನು
ಮತಿಯ ಕೊಟ್ಟು ಪೇಳೆನಲು ಮಗೆ ಪ್ರಾಸಭೂಷಣ ಪೇಳ್ದ ಸತ್ಕೃತಿಯಿದೂ

## ಶಿವಾಧಿಕ್ಯ ಪುರಾಣ—ಕವಿ ಬಸವಲಿಂಗ

ಕಾಲ ೧೬೧೧.

ಹರನಿರೂಪವನೊಲ್ದು ಮಾರ್ದನಿಯೊಳಾನುತೆ ತ್ವರಿತದಿಂದೇಳ್ನೂರು
ಎಪ್ಪತ್ತು ಗಣಸಹಿತ ಧರೆಯೊಳವತರಿಸಿ ಗುರುಚರಪರನನರ್ಚಿಸುತ
ಚರಣಾಮೃತ ಶೇಷಮುಂ ಚಿರಕಾಲ ಸೇವಿಸುತ ಶಿವಭಕ್ತಿ
ಯುಕ್ತರಿಗೆ ಉರುತರದ ಮುಕ್ತಿಮಾರ್ಗವ ತೋರಿತವೆ
ಮೆರದ ಕರುಣಾರ್ಣ ಕಂತುಕಾಲನ ಬಸವದಂಡೇಶಗಾನೆರಗುವೇ ॥ ೧೩ ॥

ಜಯ ಬಸವರಾಜ ಭಕ್ತಿಯ ಪ್ರಚುರತರಬೀಜ ಜಯ ಬಸವ ಗುರುವೇ ।
ಭಕ್ತರ ಪೊರೆವ ಸುರತರುವೆ ಜಯಬಸವಬಂಧು ಭವರಹಿತಸದ್ಗುಣ
ಸಿಂಧು ಜಯ ಬಸವ ನಿತ್ಯನಿರಘ ॥
ಜಯ ಬಸವತಂದೆ ಜಗತ್ರಯವ ಪಾಲಿಸೆ ಬಂದೆ ಜಯಬಸವಮೂರ್ತಿ
ಧ್ಯಾನಿಪರತನು ಮನಮೂರ್ತಿ ಜಯ ಬಸವ ಕಾಮಿತವನೀವ ಸತಿಸಂಜೀವ
ಜಯ ಬಸವ ಕರುಣವರುಣಾ ॥

## ನನ್ನಯ್ಯಗಳ ಚಾರಿತ್ರ—ಕವಿ ಮಾದಣ್ಣ

ಇವನ ಕಾಲ ೧೬೫೦. ಈ ಗ್ರಂಥವು ಸಂಪೂರ್ಣವಾಗಿ ವೇದಾಂತಮಯವಾಗಿದೆ. ಒಂದು ಕಡೆಗೆ ಇರುವ ಕವಿಯ ಕೆಳಗಿನ ಉಕ್ತಿಯನ್ನು ನೋಡಿದರೆ ಗೊತ್ತಾಗುತ್ತದೆ.

ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಯೆಂಬ ಶಕ್ತಿತ್ರಯದಿಂ ।
ಜ್ಞಾತೃಜ್ಞಾನಜ್ಞೇಯವೆಂಬ ಪಟ್ಟದರಸಿಯರಿಂ ।
ಸತ್ತುಚಿತ್ತು ಆನಂದಪರಿಪೂರ್ಣಮೆಂಬ ಸುಪುತ್ರರಿಂ ।
ಇಂತು ಸಮಸ್ತ ರಾಜಲಕ್ಷಣಂ ಸಂಪೂರ್ಣದಿಂ ।
ಪುನರ್ಭವದ ನೆಲೆಯಪ್ಪ ಹೃತ್ಕಮಲಮಧ್ಯದ ಕರ್ಣಿಕಾಪುರಮೆಂಬ ।
ರಾಜ್ಯವನೀಗ ವಿಪತ್ತಿಯಾಗಿ ಸುಜ್ಞಾನಮೆಂಬ ಚಕ್ರೇಶ್ವರಂ ।
ನಿಷ್ಕಳ ನಿಶ್ರೇಯಸಮೆಂಬ ಸಮ್ಯಜ್ಞಾನ ಸಾಮ್ರಾಜ್ಯಮನಾಳುತ್ತ ।
ವಿರಲ್ ಕಲ್ಯಾಣವೆಂಬ ಕೈಲಾಸದಲ್ಲಿಪ ದ್ವಿತೀಯ ।
ಶಂಭುನಾಮಧೇಯ ನೆನಿಪ ಬಸವರಾಜ ನೆನಿಪ ಪರಮೇಶ್ವರಂ ॥

ಮತ್ತೊಂದು ಕಡೆಗೆ ಕವಿಯು—

ನಿಲ್ಲದೆ ಕೃತಿ ಜಡನಾಗದೆ ಸಲ್ಲಲಿತರು ಕೇಳಿ ಕೃತಿಯದಹುದೆಂಬೆತ್ತಿರೆ ।
ಬೆಲ್ಲವತ್ತದೊಳು ನೆಲಸಿಹ ವಲ್ಲಭ ಬಸವಣ್ಣ ನಡಸುವನು ಮತ್ಕೃತಿಯಂ ।

## ನನ್ನಯ್ಯಗಳ ಕಾವ್ಯ—ಕವಿ ಪರ್ವತದೇವ

ಸಂಧಿ ೧೪, ಪದ್ಯ ೧೭೩೫.

ಅಲ್ಲಿ ಭಕ್ತಿಯ ದೃಢಮಾಳ್ಪ ಬಿಜ್ಜಳರಾಯ ।
ಸೊಲ್ಲುವಕೊಂಡ್ಯ ಮಂಚಣ್ಣ ॥
ನಿಲ್ಲದೆ ಪವಾಡಗಳ ತೋರಿ ಮೆರೆಯುತ ।
ಬಲ್ಲಿದ ಬಸವೇಶನಿಹನೂ ॥ ೧ ॥

ಪರಸಮಯಂತಕ ಪಂಚಪರುಷಮೂರ್ತಿ ।
ಹರಕೀರ್ತಿ ಶರಣ ಜಂಗಮಕೆ ॥
ಸುರತರುವೆರಡನೆಯ ಮೃಡಮೂರ್ತಿ ಬಸವೇಶ ।
ನಿರುತಿರ್ದ ಕಲ್ಯಾಣಪುರದಿ ॥

## ಭೈರವೇಶ್ವರಕಾವ್ಯ ಸಾಂಗತ್ಯ—ಕವಿ ಸಾಸಲಸಂಜುಂಡ

ಬಸವರಾಜನಿಗೆ ಸಂ । ತಸ ದೀಕ್ಷೆಯನಿತ್ತ ಅಸಮಕೂಡಲ ಸಂಗನಂತೆ ।
ಮಿಸುಪಾನುಗ್ರಹವ ತಾ । ಪಸ ಸಿದ್ಧರಾಮನಿಗಿತ್ತೆಸೆವ ಶ್ರೀಗಿರಿನಾಥನಂತೆ ॥

## ಗಣಸಹಸ್ರನಾಮಾವಳಿ—ಕವಿ ಪಾಲ್ಕುರಿಕೆ ಸೋಮನಾರಾಧ್ಯರು

ತನುಮನ ಧನವನು ಸವಸಿಯೆ ।
ಮನಸಿಜ ವೈರಿಯನೆ ವಲಿಸಿ ॥
ಶಿವನಂಬೆರಸಿದ ಸನುಮತದಿ ನೆನದು ದುರಿತವ ।
ಕ್ಷಣಮಾತ್ರದಿ ಕಳೆವೆ ರಕ್ಷಿಸು ಶಿವಬಸವೇಶ ॥

## ವೃಷಭೇಂದ್ರವಿಜಯ—ಕವಿ ಶಂಕರಾರಾಧ್ಯರು

ಇದು ಸಂಸ್ಕೃತ. ಚಂಪೂ ಗ್ರಂಥವು ವಿವಿಧ ವೃತ್ತಗಳಿಂದ ಕೂಡಿದೆ.

ದೈವತಂ ಶಿವ ಏವೇತಿ ತದ್ಭಕ್ತಾಃ ಕುಲಜಾ ಇತಿ ।
ವಿಜಿತಂ ಏನ ನಿರ್ಣೀಯತಂ ಭಜೇಂ ವೃಷಭೇಶ್ವರಂ ॥

## ಅರವತ್ತುಮೂರು ಪುರಾತನರ ಸಾಂಗತ್ಯ—ಕವಿ ಶಿವಯೋಗಿ ಸೋಮೇಶ್ವರ

ಕಾಲ ೧೭೦೦.

ಬಸವೇಶ್ವರನೆಂಬ ವರ್ಣತ್ರಯವನೊಮ್ಮೆ ।
ಉಸುರಿದ ಮುಖದಲ್ಲಿ ॥
ಪಶುಪತಿ ವಾಸವಾಗಿಹ ಮಹತ್ವವನುಳ್ಳ ।
ವೃಷಭೇಶ ಶರಣಾಗೆನಗೆ ॥

ಗ್ರಂಥದಲ್ಲಿ ಒಂದು ಸಾವಿರ ಸಾಂಗತ್ಯಗಳಿರುತ್ತವೆ.

## ಶಿವಲಿಂಗಮಾಹೇಶ್ವರ ಚಾರಿತ್ರ್ಯ—ಕವಿ ಪಾಳ್ಯದ ಮಡಿವಾಳಯ್ಯ

ಇದು ಶರಷಟ್ಪದಿಯಲ್ಲಿದೆ. ಗತಿ ೯, ಪದ ೧೪೯.

ಬಸವನಲ್ಲಮ ಚನ್ನಬಸವಣ್ಣ ಮಡಿವಾಳ ।
ಮಸಣಯ್ಯ ಮುಗ್ಧಸಂಗಯ್ಯ ಪೊಸಭಕ್ತಿಕಲಾತ ದೂರ್ವಸನಳಿದ ಜಗಣ್ಣನ ।
ಬಿಸರುಹನಡಿಗೆರಗುವೆನು ॥ ೮ ॥

## ಬಸವ ಪವಾಡ

ಸಂಧಿ ೫, ಪದ ೧೬೭೫.

ಧಾರುಣಿಗೆ ಭಕ್ತಿಮಾರ್ಗವ ವೀರಶೈವವನು ತೋರಿ ಕರುಣಿಪುದೆಂದೂ ।
ಮಾರಹರಮರ್ತ್ಯ ಭೋರನೆ ಬಸವೇಶ ಬಂದು ಅರುಹಿದನುಸುರ್ವೆಂ ॥

ಅದ್ಭುತಾದಾರೋಗಣೆಯ ಮಾಡಿ ಪ್ರಭುವಿಗೆ ।
ಅದ್ಭುತವರುಂಡು ದಣಿಯೆ ॥
ಮದ್ಭಕ್ತಗೆಣೆಯಿಲ್ಲೆನಿಸಿದು ನಮ್ಮ ।
ಸದ್ಭಕ್ತರ ನಿಧಿ ಬಸವಣ್ಣ ॥
ನಿತ್ಯನಿರ್ಮಳಕಾಯ ನಿಷ್ಕಳಪರವಸ್ತು ।
ಚಿನ್ಮಯ ಬಸವೇಶ್ವರನೂ ॥
ಚಿತ್ತೈಸುತ ನಿಮ್ಮ ಬರಹೇಳಿದರು ಜಗ ।
ತ್ಕರ್ತ ಸಂಗಮನೀಕ್ಷಣಕೆ ॥

ಬಸವ ಸ್ತೋತ್ರದ ತ್ರಿವಿಧಿಯು ೧೨೮ ನುಡಿ ಇರುತ್ತದೆ.

ಬಸವನೇ ಜಗದಾದಿ ತತ್ವಕಾತೀತನು ।
ಬಸವನೇ ಪರಬ್ರಹ್ಮ ಸ್ವರೂಪನು ।
ಬಸವನನಾದಿ ಲಿಂಗ ಬಸವನನಾದಿ ಚರ ।
ಬಸವನಿಂದಧಿಕ ಉಂಟೆ ಯೋಗಿನಾಥ ॥ ೭ ॥

ಆದಿಗುರು ಬಸವಣ್ಣನಾದಿಗುರು ಬಸವಣ್ಣ ।
ಭೇದಕ್ಕಭೇದ್ಯನೂ ಬಸವಣ್ಣನೂ ॥
ನಾದಬಿಂದು ಕಲಾತೀತ ಬಸವಯ್ಯ ।
ಯನ್ನಾರಾಧ್ಯ ಗುರುಬಸವ ಯೋಗಿನಾಥ ॥ ೧೧ ॥

ಬಸವಣ್ಣ ಬಸವಯ್ಯ ಬಸವಪ್ಪ ಬಸವರಸ ।
ಬಸವಲಿಂಗವೇ ಎನ್ನ ಬಸವ ತಂದೆ ।
ಬಸವ ಚರಪರ ತತ್ವಕಾದಿ ಮೂಲಲಿಂಗ
ಬಸವಪ್ಪ ಶರಣೆಂಬೆ ಯೋಗಿನಾಥ ॥ ೧೨ ॥

ಲಿಂಗರೂಪನು ಬಸವ ಜಂಗಮರೂಪನು ಬಸವ ।
ಸಂಗನ ಗುರುಮೂರ್ತಿ ಶ್ರೀ ಬಸವಲಿಂಗಾ ।
ಲಿಂಗ ಜಂಗಮವನು ಒಂದೊಂದು ಮಾಡಿಯೆ ।
ತೋರಿದ ಸಂಗನ ಬಸವಣ್ಣನೈ ಯೋಗಿನಾಥ ॥ ೧೩ ॥

## ವೇಣುಗೋಪಾಲ ಶತಕ—ಕವಿ ವಿದ್ವಾನ್ ಕೆ. ರಾಮರಾಯರು

ಕಾಲ ೧೯೫೪. ಕನ್ನಡ ಪಂಡಿತರು, ಹಡಗಲಿ ಹೈಸ್ಕೂಲ್. ಇವರು ಕುಮಾರ ಷಣ್ಮುಖ (ಸಿಕ್ಕಿದ್ದು), ಕುಮಾರ ಶತಕ ವೇಣುಗೋಪಾಲ ಶತಕಗಳನ್ನು ಬರೆದಿದ್ದಾರೆ.

ವೇಣುಗೋಪಾಲ ಶತಕದಲ್ಲಿ—

ವರಕುಮಾರವ್ಯಾಸ ಕುಣಿಸಿದ ।
ಸುರಪುರದ ಲಕ್ಷ್ಮೀಶ ತಣಿಸಿದ ।
ಗುರು ಪುರಂದರದಾಸ ನಾನಾರಾಗ ಹಾಡಿಸಿದ ॥
ಸ್ಥಿರಮತಿ ಜಗನ್ನಾಥ ರುದ್ರರು ।
ಹರಿಹರನು ಬಸವಾದಿ ಮುಖ್ಯರು ।
ಮೆರೆಸಿದರು ಸಿರಿಗನ್ನಡಮ್ಮನ ನುತಿಪೆ ನಾನವರ ॥

ಇದರಲ್ಲಿ ಬಸವಣ್ಣನವರ ಹೆಸರನ್ನು ಮಾತ್ರ ಉಲ್ಲೇಖಿಸಿರುತ್ತಾರೆ.

## ಬಸವ ಚರಿತ್ರೆ

ಕವಿ ಮತ್ತು ಕಾಲ ಗೊತ್ತಾಗಿಲ್ಲ. ಪಾರ್ವತೀ ಪರಮೇಶ್ವರರ ಸಂವಾದ ರೂಪದಲ್ಲಿದೆ.

ಧರ್ಮದಿಂದಲೆ ಲೋಕದುತ್ಪತ್ತಿ । ಧರ್ಮರೂಪನು ಬಸವರಾಜನು ।
ಧರ್ಮದಿಂದಲೆ ಲೋಕದುತ್ಪತ್ತಿ । ಧರ್ಮದಿಂದಲೆ ಲೋಕರಕ್ಷೆಯೂ ।
ಧರ್ಮದಿಂದಲೆ ಸಕಲ ಚರಾಚರದ ಚೈತನ್ಯಾ । ಧರ್ಮರೂಪನು ಬಸವರಾಜನು ।
ಧರ್ಮದಿಂದಲೆ ನೆನೆದಡಾತನು । ಧರ್ಮರೂಪಾಗಿಹನು ಇಹಪರಕೆ ನಾಲ್ಕು ಲೋಕದಲಿ ॥ ೩೨ ॥

ಬಸವನೇ ಗುರು ಸಕಲ ಲೋಕಕೆ । ಬಸವನೇ ಪಿತ ಸಕಲದೈವಕೆ ।
ಬಸವನಲ್ಲದೆ ಬೇರೆ ದೈವ ಉಂಟೇನೆಲೆ ಗಿರಿಜೆ ॥
ಬಸವ ಭಾಗ್ಯದ ನಿಧಿಯೆಯೆನ್ನದೆ । ಬಸವ ಭಕ್ತಿಯೆ ಶರಧಿಯೆನ್ನದೆ ।
ಮುಸುಕಿಹೋಹರು ಭವದ ಕೊಳಿಯೊಳು ಗಿರಿಜೆ ಕೇಳೆಂದ ॥ ೩೭ ॥

ಬಸವ ಭಸಿತದಿ ಶಿವನ ಪದವಿಯು । ಬಸವ ಭಸಿತದಿ ರುದ್ರ ಪದವಿಯು ।
ಬಸವ ಭಸಿತದಿ ಪ್ರಮಥ ಗಣಪದ । ದೇವಪದ ಸಹಿತ ।
ಬಸವ ಭಸಿತದಿ ಪೂಜ್ಯನೆನಿಸುವ ಬಸವ ಭಸಿತದಿ ನಿತ್ಯನೆನಿಸುವ ।
ಬಸವ ಭಸಿತವ ಧರಿಸಿದಾತನು ಬಸವನೆಲೆ ಗಿರಿಜೆ ॥ ೪೨ ॥

ಬಸವನೆಂಬುದು ಪರಮ ಮಂತ್ರವು ।
ಬಸವನೆಂಬುದು ಪರಮ ಯೋಗವು ।
ಬಸವನೆಂಬುದೇ ಪರತತ್ವವು ಬಸವ ಪರಕೆ ॥
ಬಸವನೆಂಬುದೆ ನಿಗಮ ಶಾಸ್ತ್ರವು ।
ಬಸವನೆಂಬುದೆ ನಿಗಮ ಶೃತಿಗಳು ।
ಬಸವನೆಂಬುದೆ ನನ್ನ ಪ್ರಾಣವು ಗಿರಿಜೆ ಕೇಳೆಂದ ॥ ೪೩ ॥

## ಬಿಜ್ಜಳ ಚರಿತ್ರೆ—ಕವಿ ಧರಣೀಧರ ಪಂಡಿತ

ಈ ಕವಿಯು ಬಸವಣ್ಣನವರ ಟೀಕಾಕಾರರಲ್ಲಿ ಪ್ರಥಮ ಸ್ಥಾನವನ್ನು ಪಡೆದಿದ್ದಾನೆ. ಆದರೂ ಸುಗಂಧವನ್ನು ಮುಚ್ಚಿಡುವದು ಯಾರಿಂದಲೂ ಸಾಧ್ಯವಾಗದ ಮಾತು. ಟೀಕಿಸುತ್ತ ಬಸವಣ್ಣನವರ ಬಗ್ಗೆ ಅವನು ಬರೆದ ಎರಡು ಪದ್ಯಗಳನ್ನು ಕೆಳಗೆ ಕೊಟ್ಟಿರುತ್ತದೆ.

ಒಡೆಯನ ಮುದ್ರೆಯ ಒಡೆಯನ ಅಜ್ಞೆಯ ತಡೆಯದೆಳೆನಿತು ಮೀರದೆ ।
ಕಡುಗಲಿ ಬಸವಣ್ಣ ನಡೆಸಿ ರಾಜ್ಯವನಾಳ್ದು ಪೊಡವೀಶನೊಪ್ಪುವಂತಿಹನೂ ॥
ಮಂಡಿಗೆಯ ಮಾದಿರಾಜನ ಹಿರಿಯಮಗ । ಚಂಡ ವಿಕ್ರಮ ಬಸವಣ್ಣಂಗೆ ।
ಮಂಡಲಪತಿ ಬಿಜ್ಜಣಾಂಕ ಕೊಟ್ಟನು ಸೇನಾ । ದಂಡಾಧಿನಾಯಕ ಪಟ್ಟವನು ॥

ಕಡುವಿರೋಧಿಗಳಾದ ಧರಣೀಧರ ಪಂಡಿತರೂ ಕೂಡ ಬಸವಣ್ಣನವರ ಗುಣಗಳನ್ನು ಮರೆಮಾಚಲಿಕ್ಕೆ ಶಕ್ಯವಾಗಲಿಲ್ಲ. ಆಗುವುದೂ ಇಲ್ಲ. ಈ ಕವಿಯು ಬಸವಣ್ಣನವರ ಬಗ್ಗೆ ಮಾಡಿದಷ್ಟು ಟೀಕೆಯನ್ನು ಯಾರೂ ಮಾಡಿರುವುದಿಲ್ಲ. ಆದರೆ ಸಹಜವಾಗಿ ಬಸವಣ್ಣನವರ ಗುಣಗಾನ ಅದರಲ್ಲಿ ಬಂದಿದೆ.

## ಶ್ರೀ ಮಹಲಿಂಗ ಲೀಲೆ—ಕವಿ ಬಸವ

ಕಾಲ ೧೭೬೨. ಈ ಕವಿಯು ತನ್ನ ಗ್ರಂಥದಲ್ಲಿ ಶ್ರೀ ಬಸವರಾಜದೇವರ ಬಗ್ಗೆ—

ಶರಣಜನದುರಿತ ಜಲದಾಳಿ ಝಂಝಾನಿಲನ ।
ಪರಸಮಯ ಮತ್ತೇಭ ಕುಂಭ ಕಂಠೀರವನ ।
ಪರಮ ಪ್ರಮಥಾಳಿ ಹರ್ಷಾಬ್ಧಿ ವರ್ಧನ ಸುಧಾಕರನೆಂದೆನಿಸುವವನ ॥
ಮರಣಹರ ಮಾಯಾವಿಲೋಪ ಧರ್ಮಾಕರನ ।
ಗುರುಲಿಂಗ ಜಂಗಮದ ಭಕ್ತಿ ಸಂಪತ್ಕರನ ।
ಶರಣ ವೃಷಭೇಶ್ವರನ ಪಾದಮಂ ಕೀರ್ತಿಸುತ ಪರಮಾರ್ಥಮಂ ಪಡೆವೆನು ॥

## ಅಮರೇಶ್ವರ ಪುರಾಣ—ಕವಿ ವೈಶ್ಯಕುಲ ಭೂಷಣ ವೆಂಕಯ್ಯ

ಕವಿಯ ಕಾಲ ೧೯೧೦. ಸಂಧಿ ೯, ಪದ್ಯ ೫೭೫. ಹುಟ್ಟಿದ ಸ್ಥಳ ದಿನ್ನಿ, ರಾಯಚೂರು ಜಿಲ್ಲೆ. ಈ ಪುರಾಣದಲ್ಲಿ ಕವಿಗಳು ಅಲ್ಲಲ್ಲಿ ಶ್ರೀ ಬಸವೇಶ್ವರರ ಉಲ್ಲೇಖ ಮಾಡಿರುತ್ತಾರೆ. ಈ ಕವಿಗಳು ಶಾಲೆಗೆ ಹೋಗಿ ವಿದ್ಯೆಯನ್ನು ಕಲಿತವರಲ್ಲ. ಸ್ವಯಂ ಸ್ಫೂರ್ತಿಯಿಂದ ಈ ಗ್ರಂಥದ ರಚನೆ ಮಾಡಿರುತ್ತಾರೆ.

ಅಸಮ ಶಿವಶರಣರ ಸಮೇತದಿ ।
ಬಸವ ಕಲ್ಯಾಣಕ್ಕೆ ಬರುತಂ ।
ಎಸೆವ ಮಹಾಪ್ರಭೆಯಿಂದ ಪ್ರತ್ಯಕ್ಷ ಪ್ರಮಾಣದೊಳು ॥
ಮಿಸುಪ ಮಹಿಮೆಯ ತೋರಿ ಜನರಂ ।
ಸಸಿನೆ ವೊಲಿಸುತ ಭಕ್ತಿ ಸ್ಥಾಪಿಸಿ ।
ವಸುಧೆ ಸಲಹಿದನೆಂಬುದನು ನೀಂ ಕೇಳಿರುವಿಯಷ್ಟೆ ॥

## ಇಪ್ಪತ್ತನೆಯ ಶತಮಾನದ ಕವಿಗಳು

ಇಪ್ಪತ್ತನೆಯ ಶತಮಾನದಲ್ಲಿ ನೂರಾರು ಜನ ಪಂಡಿತರೂ, ಕವಿಗಳೂ, ಸುಪ್ರಸಿದ್ಧ ಪತ್ರಿಕಾಕಾರರೂ, ಲೇಖಕರೂ, ಗ್ರಂಥಕಾರರೂ, ಶ್ರೀ ಬಸವಣ್ಣನವರ ಬಗ್ಗೆ ತಮ್ಮ ಕಾಣಿಕೆಯನ್ನು ಅನಂತ ರೀತಿಯಿಂದ ಸಲ್ಲಿಸಿರುತ್ತಾರೆ. ಗಣ್ಯರಾದ ಕೆಲವರ ಅಭಿಪ್ರಾಯ ಗಳನ್ನು ಮಾತ್ರ ಇಲ್ಲಿ ಸಂಗ್ರಹಮಾಡಲಾಗಿರುತ್ತದೆ.

ಬೆನಗಲ್ ರಾಮರಾಯರು, ಎಂ.ಎ., ಎಲ್ಎಲ್.ಬಿ.—ಇವರು ಸುಪ್ರಸಿದ್ಧ ಕನ್ನಡ ನಾಡಿನ ವಿದ್ವಾಂಸರು ಮದ್ರಾಸ್ ಗವರ್ನಮೆಂಟಿನ ಕನ್ನಡ ಟ್ರಾನ್ಸ್ಲೇಟರಾಗಿದ್ದರು. ಕೆಳದಿ ಬಸವರಾಜರಿಂದ ರಚಿತವಾದ "ಶಿವತತ್ವ ರತ್ನಾಕರ ಎಂಬುವ ಗ್ರಂಥವನ್ನು ಪ್ರಕಟಿಸಿರುತ್ತಾರೆ. ಅಖಿಲ ಕರ್ನಾಟಕ ಏಕೀಕರಣ ಪರಿಷತ್ತುಗಳಿಗೆ ಅಧ್ಯಕ್ಷರಾಗಿದ್ದರು.

ಇವರು ಬಸವಣ್ಣನವರ ಬಗ್ಗೆ ತಮ್ಮದೊಂದು ಲೇಖನದಲ್ಲಿ—

ತಮ್ಮ ತಾಯಿನಾಡಿನಲ್ಲಿ ಧಾರ್ಮಿಕ ಮತ್ತು ನೈತಿಕಕ್ಕಾಗಿ ದುಡಿದ ಸರ್ವದೃಷ್ಟಿಯಿಂದಲೂ ಅಚ್ಚಕನ್ನಡಿಗನೆಂದರೆ ಅಂದಿನಿಂದ ಇಂದಿನವರೆಗೆ ಬಸವೇಶ್ವರನೊಬ್ಬನೇ. ಆತನನ್ನು ಮೀರಿಸಿದ ಕೊನೆಗೆ ಆತನಿಗೆ ಸರಿಸಮಾನರಾದರೂ ಆದ ಮಹಾ ವಿಭೂತಿಯು ಬೇರೆ ಯಾರಾದರೂ ಇರುವರೆಂದು ನಾನು ಧೈರ್ಯವಾಗಿ ಹೇಳಲಾರೆ. ಇತರ ವೈದಿಕ

ತ್ರಿಮತಸ್ಥಾಪನಾಚಾರ್ಯರುಗಳಿಂದ ಕೂಡಿ ಕರ್ಣಾಟಕದಲ್ಲಿ ಒಂದಲ್ಲ ಒಂದು ರೀತಿಯಿಂದ ಸೇವೆಯು ಸಲ್ಲಿರುತ್ತದೆ. ಮತ್ತು ಶಾಶ್ವತವಾದ ಕೀರ್ತಿಯೂ ಪ್ರಾಪ್ತವಾಗಿರುತ್ತದೆ. ಶ್ರೀಮಚ್ಛಂಕರಾಚಾರ್ಯರು ನಂಬೂದರಿ (ಮಲೆಯಾಳ) ಬ್ರಾಹ್ಮಣ. ಶ್ರೀಮನ್ ಮಾಧ್ವಾಚಾರ್ಯರು ಶಿವಳ್ಳಿ ತುಳು ಬ್ರಾಹ್ಮಣ. ಶ್ರೀಮದ್ರಾಮಾನುಜಾಚಾರ್ಯರು ದ್ರಾವಿಡ (ತಮಿಳು) ಬ್ರಾಹ್ಮಣ ಕುಲಕ್ಕೆ ಸೇರಿದವರಾದುದರಿಂದ ಇವರಾರೂ ಬಸವಣ್ಣನವರಂತೆ ಹದಿನಾರಾಣೆ ಕನ್ನಡಿಗರೆಂದು ಹೇಳಲು ಸಾಧ್ಯವಿಲ್ಲ.

ಟೈಮ್ಸ್ ಆಫ್ ಇಂಡಿಯಾ, ಮುಂಬಯಿ, ತಾ॥ ೧೭-೫-೧೯೧೮—ಇದು ಇಂಗ್ಲೀಷ್ ದಿನಪತ್ರಿಕೆಯು; ಮುಂಬಯಿ ನಗರದಿಂದ ಪ್ರಕಟವಾಗುತ್ತದೆ. ಹಿಂದೂಸ್ಥಾನದ ತುಂಬ ಇದರ ಪ್ರಚಾರವು ಇರುತ್ತದೆ. ನಮ್ಮ ದೇಶದಲ್ಲಿ ಬಹುಕಾಲದಿಂದ ನಡೆದುಬಂದ ಪ್ರಭಾವಶಾಲಿ ಪತ್ರಿಕೆಗಳಲ್ಲಿ ಇದಕ್ಕೊಂದು ಗಣ್ಯಸ್ಥಾನವಿದೆ.

ಭರತಖಂಡದಲ್ಲಿ ಬಸವನ ಮುಂಚೆ ಪ್ರಸಿದ್ಧರಾದ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಕರು ಆಯಾಯ ವಿಷಯುಗಳಿಗೆ ಸಂಬಂಧಿಸಿದ ಯಾವದಾದರೊಂದು ಸಂಗತಿಗೇನೇ ಹೆಚ್ಚು ಮಹತ್ವವನ್ನು ಕೊಟ್ಟು ಅನ್ಯ ವಿಷಯುಗಳನ್ನು ಉಪೇಕ್ಷಿಸಿದ್ದರು. ಅಥವಾ ಅವುಗಳಿಗೆ ಗೌಣತ್ವವನ್ನು ಕೊಟ್ಟದ್ದರು. ಆದರೆ ಬಸವನು ಸ್ತ್ರೀಯರ ಸ್ವಾತಂತ್ರ್ಯ ಮತ್ತು ಅಭಿವೃದ್ಧಿಗಳನ್ನೇ ಮುಖ್ಯವಾಗಿಟ್ಟುಕೊಂಡು ಸಮಾಜ ಸುಧಾರಣೆಯ ಸರ್ವಾಂಗ ವಿಶಿಷ್ಟವಾದ ಒಂದು ದೊಡ್ಡ ಕಾರ್ಯಕ್ರಮವನ್ನು ಗೊತ್ತುಪಡಿಸಿ ಅತಿ ಧೈರ್ಯದಿಂದ ಅದನ್ನು ಸಾಗಿಸಿದನು. ಭರತಖಂಡದ ಎಲ್ಲಾ ಭಾಗಗಳಲ್ಲಿಯೂ ಈ ಕಾಲದಲ್ಲಿ ಪ್ರತಿ ವರ್ಷ ಸೇರುತ್ತಿರುವ ಸಾಮಾಜಿಕ ಪರಿಷತ್ತುಗಳಾಗಲೀ ಅಥವಾ ಈ ದೇಶದ ಸಮಾಜ ಸುಧಾರಕರಾಗಲೀ, ಬಸವನ ಕಾರ್ಯಕ್ಕಿಂತ ಹೆಚ್ಚಿನದಾವುದನ್ನೂ ಮಾಡರು. ಭರತಖಂಡದ ಚರಿತ್ರೆ ಮತ್ತು ಭಾರತೀಯರ ಆಚಾರ ಚರಿತ್ರೆಗಳನ್ನು ಬಹು ಚೆನ್ನಾಗಿ ತಿಳಿದಿದ್ದ ಸರ್ ಜೇಮ್ಸ್ ಕ್ಯಾಂಬೆಲ್ಲರವರು ಹೇಳಿದಂತೆ ಭರತಖಂಡದ ಈಗಿನ ಸಮಾಜ ಸುಧಾರಕರು ಬಸವನ ನುಡಿಯನ್ನೇ ನುಡಿಯುತ್ತಲೂ ಆತನ ಅಭಿಪ್ರಾಯವನ್ನೇ ಬೋಧಿಸುತ್ತಲೂ ಇರುತ್ತಾರೆ.

ಮೈಸೂರು ಸಂಸ್ಥಾನದ ಘನಹೊಂದಿದ ಶ್ರೀಮದ್ಯುವರಾಜ ಸರ್ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ.ಸಿ.ಐ.ಇ. ಇವರು ೧೯೨೭ ನೆಯ ಇಸ್ವಿಯಲ್ಲಿ ಬೆಂಗಳೂರಿನಲ್ಲಿ ನಡೆದ ವೀರಶೈವ ಮಹಾ ಸಭೆಗೆ ತಮ್ಮ ಶುಭಸಂದೇಶವನ್ನು ಕಳಿಸುವ ಕಾಲಕ್ಕೆ ಕೆಳಗೆ ಬರೆದಂತೆ ಉದ್ಗಾರ ತೆಗೆದಿದ್ದಾರೆ.

"ಗೌರವೀಯ ರಾವ್‌ಬಹದ್ದೂರ್ ಎಸ್. ಟಿ. ಕಂಬಳಿಯವರ ಅಧ್ಯಕ್ಷತೆಯಲ್ಲಿ ಈ ದಿವಸ ನಡೆಯುವ ಯಾವದ್ಭಾರತ ವೀರಶೈವ ಮಹಾಸಭೆಯ ಆರಂಭೋತ್ಸವವನ್ನು ನೆರವೇರಿಸಲು ನಾವು ಪರಸ್ಥಳದಲ್ಲಿರುವುದರಿಂದ ಅವಕಾಶವಿಲ್ಲವಾಗಿ ಬಹಳ ವಿಷಾದಿಸುತ್ತೇವೆ. ಪ್ರಶಸ್ತವೂ, ಪ್ರಮುಖವೂ ಆದ ವೀರಶೈವ ಸಮಾಜವು ಶ್ರೀ ಬಸವೇಶ್ವರ ಸ್ವಾಮಿಯವರ ಉದಾತ್ತ ಧೈರ್ಯೋತ್ಸಾಹಗಳಿಂದ ಕೂಡಿ ಸರ್ವತೋಮುಖವಾಗಿ ವೃದ್ಧಿಹೊಂದಲೆಂದೂ, ಜಯಶೀಲವಾಗಿ ನಡೆಯಲೆಂದೂ ಆಶಿಸುತ್ತೇವೆ."

ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ.ಎ.—ಇವರು ಭಕ್ತಿಭಂಡಾರಿ ಬಸವೇಶ್ವರ, ವಚನಧರ್ಮಸಾರ, ನಾಗರಿಕ, ಅಕ್ಕಮಹಾದೇವಿ, ಪ್ರಭುದೇವ

ಮೊದಲಾದ ಅನೇಕ ಗ್ರಂಥಗಳನ್ನು ಬರೆದಿರುತ್ತಾರೆ. ಮತ್ತು ಕನ್ನಡ ಇಂಗ್ಲೀಷ್ ಡಿಕ್ಸನರಿಯ ಪ್ರಧಾನ ಸಂಪಾದಕರೂ ಆಗಿದ್ದರು. ಇವರು ಸುಪ್ರಸಿದ್ಧ ಕನ್ನಡ ಹಿರಿಯ ಸಾಹಿತಿಗಳಲ್ಲಿ ಅಗ್ರಗಣ್ಯರಾಗಿಯೂ, ವೀರಶೈವ ಸಾಹಿತ್ಯವನ್ನು ಕೂಲಂಕುಷವಾಗಿ ಅಧ್ಯಯನ ಮಾಡಿದವರೂ, ಶರಣರ ವಚನಗಳಲ್ಲಿ ವಿಶ್ವಾಸವುಳ್ಳವರೂ, ಕಳೆದ ೧೫–೨೦ ವರ್ಷಗಳಿಂದ ವೀರಶೈವ ಸಾಹಿತ್ಯದ ಪ್ರಚಂಡ ಪ್ರಚಾರಕರೂ ಆಗಿದ್ದರು. ಸೊಲ್ಲಾಪುರ ದಲ್ಲಿ ಕೂಡಿದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ ಆಗಿದ್ದರು.

ಇವರು ತಮ್ಮ ಭಕ್ತಿಭಂಡಾರಿ ಎಂಬುವ ಗ್ರಂಥದ ಕೊನೆಯ ಭಾಗದಲ್ಲಿ ಬಸವಣ್ಣ ನವರ ಬಗ್ಗೆ ಕೆಳಗೆ ಬರೆದ ವಿಷಯವನ್ನು ಬರೆದಿರುತ್ತಾರೆ. ಬಸವಣ್ಣನವರ ಜೀವನ ಚರಿತೆಯು ಇಂತಹುದು. ಅಭಿಮಾನಶಾಲಿಗಳಾದ ವೀರಶೈವ ಮಹಾಜನಗಳು ಬಸವಣ್ಣ ನವರನ್ನು ಕೇವಲ ನಂದೀಶ್ವರಾವತಾರವೆಂದು ಭಾವಿಸಲಿ. ಅಭಿಜ್ಞರು ಅವರನ್ನು ಮಾನವ ರಾಗಿ ಜನಿಸಿ ದೈವತ್ವಕ್ಕೆ ಏರಿದ ಮಹಿಮಾಪುರುಷರೆಂದೇ ಭಾವಿಸಲಿ. ಬಸವಣ್ಣನವರು ಮಾಡಿದ ಕಾರ್ಯನಿರ್ವಾಹದಿಂದ ಅವರನ್ನು ನಾವು ಕಾರಣಪುರುಷರೆಂದು ಹೇಳಲೇಬೇಕು. ಪ್ರಪಂಚದ ಇತಿಹಾಸದಲ್ಲಿ ಮತಸ್ಥಾಪಕರೂ, ಮತೋದ್ಧಾರಕರೂ, ಯಾವದೊಂದು ಚಿತ್ಕಳೆಯನ್ನು ಪಡೆದು ಭಗವಂತನ ಸಂಕಲ್ಪಕ್ಕಾಗಿ ಅವತರಿಸಿದರೊ, ಅದೇ ಚಿತ್ಕಳೆ ಯನ್ನು ಪಡೆದು ಬಸವಣ್ಣನವರೂ ಅವತರಿಸಿದರು. ಮತಪ್ರಚಾರಕರಾಗಿ ಅವರ ಸ್ಥಾನವು ಉನ್ನತವಾಗಿದೆ. ತತ್ವಬೋಧಕರಾಗಿ ಅವರ ಸ್ಥಾನವು ಇನ್ನೂ ಉನ್ನತ ವಾಗಿರುತ್ತದೆ. ಭಕ್ತರಾಗಿ ಅವರ ಸ್ಥಾನವು ಅತ್ಯುನ್ನತವಾಗಿದೆ. ಇಂತಹ ಮಹಾತ್ಮರು ಕರ್ಣಾಟಕ ದೇಶದಲ್ಲಿ ಅವತರಿಸಿದರು. ಕರ್ಣಾಟಕದ ಕೀರ್ತಿಯು ಅವರಿಂದಲೂ ಹೆಚ್ಚಿರುವುದು ಸಮಾಜ ಸುಧಾರಣೆಗಾಗಲಿ, ರಾಷ್ಟ್ರಸುಧಾರಣೆಗಾಗಲಿ ಅವರು ಹಾಕಿರುವ ಮೇಲ್ಪಂಕ್ತಿಯನ್ನು ಇಂದಿಗೂ ನಾವು ಅನುಸರಿಸಬೇಕಾಗಿದೆ. ಅವರ ವಚನಗಳಿಂದ ಅವರ ಮೂರ್ತಿಸ್ವರೂಪವನ್ನು ಚಿತ್ರಿಸಿ, ಅವರ ಕಾರ್ಯಕಲಾಪಗಳಿಂದ ಅವರ ಮಹಿಮೆಯನ್ನು ರೂಪಿಸಿ, ಲೋಕದ ಮುಂದೆ ನಿಜವಾದ ಬಸವಣ್ಣನವರನ್ನು ಸ್ಥಾಪಿಸು ವುದೇ ಅವರಿಗೆ ನಾವು ನ್ಯಾಯವಾಗಿ ಸಲ್ಲಿಸುವ ಭಕ್ತಿಯ ಕಾಣಿಕೆಯಾಗಿರುತ್ತದೆ. ಬಸವಣ್ಣನವರು ವೀರಶೈವರಿಗೆ ಮಾತ್ರ ಸಂಬಂಧಪಟ್ಟವರಲ್ಲ. ಕರ್ಣಾಟಕಕ್ಕೆ ಮಾತ್ರ ಸಂಬಂಧಪಟ್ಟವರೂ ಅಲ್ಲ, ಅವರು ಇಡೀ ಭರತಖಂಡಕ್ಕೆ, ಇಡೀ ಪ್ರಪಂಚಕ್ಕೆ ಸಂಬಂಧ ಪಟ್ಟ ಮಹಾಪುರುಷರು.

ಶ್ರೀಮಾನ್ ಡಿ. ಆರ್. ಚನ್ನೇಗೌಡ, ಬಿ.ಎ., ಶಾಂತಿನಿವಾಸ, ಗವೀಪುರ, ಬೆಂಗಳೂರು—ಇವರು ಸುಪ್ರಸಿದ್ಧ ಲೇಖಕರೂ, ಅನೇಕ ಗ್ರಂಥಕಾರರೂ ಆಗಿರುತ್ತಾರೆ. "ಹಿಂದೂದೇಶದ ಬಸವನ ಸಂದೇಶ" ಎಂಬುವ ಲೇಖನದಲ್ಲಿ "ಕ್ರಾಂತಿ ಪುರುಷನಾದರೂ ಆದರ್ಶ ಮಾನವ. ಬಸವಣ್ಣನವರು ನಮ್ಮವರು ಯಾವ ಮತವನ್ನಾದರೂ ಅವರು ಅವಲಂಬಿಸಿರಲಿ ಅವರ ನಡೆ ನುಡಿ, ಆಚಾರ ವ್ಯವಹಾರ, ಶೀಲ, ಸೌಜನ್ಯ, ಕರುಣೆ, ಅವರ ಹೃದಯ ಮಾರ್ದವ ಇವೆಲ್ಲ ಎಂತು ಎಂತು ಸೊಬಸಾಗಿದ್ದವು? ಅವರನ್ನು ಕ್ರೈಸ್ತನಿಗೇಕೆ ಹೋಲಿಸಬೇಕು? ಅವರ ಸಂದೇಶವು ಬುದ್ಧದೇವರ ಸಂದೇಶಕ್ಕೆ ಸರಿಯೇ ಎಂದೇಕೆ ತೂಗಿನೋಡುತ್ತ ಕಾಲಕಳೆಯಬೇಕು? ಕ್ಲೈಬ್ಯ ಹೃದಯ ದೌರ್ಬಲ್ಯಗಳಿಂದ ನರಳುತ್ತಿರುವ ಕನ್ನಡಿಗರಿಗೆ ಬಸವೇಶ್ವರನ ಜೀವನವು ಆದರ್ಶವಾಗಿದೆಯೆಂದು ನನ್ನ

ನಂಬಿಗೆ. ಆತನೊಬ್ಬ ಧೀರ ವೀರ ಮಾನವ ಕ್ರಾಂತಿಪುರುಷ. ಸುಖ ದುಃಖಗಳನ್ನು ಅನುಭವಿಸಿದವ. ಸತ್ಯಾನ್ವೇಷಣದಲ್ಲಿ ತೊಡಗಿ ನಡೆನುಡಿಯನ್ನು ತಿದ್ದಿ ಆತ್ಮಸ್ವರೂಪ ಪರಿಚಯುವನ್ನು ಮಾಡಿಸಿದವ. ತನ್ನ ಜನ್ಮಭೂಮಿಯಾದ ಈ ನಾಡನ್ನೂ ನುಡಿಯನ್ನೂ ತನ್ನ ಯೋಗಸಾಧನೆಯಿಂದ ಉತ್ತಮಪಡಿಸಲು ದುಡಿದನು. ಆತನಿಗೆ ಸಲ್ಲಬೇಕಾಗಿರುವ ಕಾಣಿಕೆಯನ್ನು ನಾಡಿನವರೆಲ್ಲರೂ ಸಂತೋಷದಿಂದ ಸಲ್ಲಿಸಬೇಕಾಗಿರುತ್ತದೆ. ತಮ್ಮ ಬಾಳುವೆಯನ್ನು ಸರಿಪಡಿಸಿ ಕರ್ಣಾಟಕವನ್ನು ಮೇಲೆತ್ತಿ ಮತ್ತೊಮ್ಮೆ ಇಡೀ ಹಿಂದುಸ್ಥಾನದಲ್ಲಿ, ಅಖಿಲ ಜಗತ್ತಿನಲ್ಲಿ ನಮ್ಮ ಸ್ಥಾನಮಾನಗಳನ್ನು ಗಳಿಸಿ ಬಾಳುವ ಜಗತ್ತಿಗೆಲ್ಲ ಆ ಮಹಾನುಭಾವನ ದಿವ್ಯಸಂದೇಶವನ್ನು ಬೀರಿ ಧನ್ಯರಾಗುವ.''

ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ., ಮೈಸೂರು ಗವರ್ನಮೆಂಟ್ ನಿವೃತ್ತ ಟ್ರಾನ್ಸ್‌ಲೇಟರ್, ಸುಪ್ರಸಿದ್ಧ ವಾಙ್ಮಿಗಳು, ಲೇಖಕರು ಮತ್ತು ಹರಪನ ಹಳ್ಳಿಯಲ್ಲಿ ಕೂಡಿದ ಸಾಹಿತ್ಯ ಸಮ್ಮೇಳನಾಧ್ಯಕ್ಷರು. ಇವರು ಅನೇಕ ಗ್ರಂಥಗಳನ್ನೂ ಬರೆದಿರುತ್ತಾರೆ. ಇವರು ಶರಣಸಾಹಿತ್ಯದ ಬಸವ ಜಯಂತಿಯ ವಿಶೇಷ ಸಂಚಿಕೆಯಲ್ಲಿ ಬಸವಣ್ಣನವರ ಭಕ್ತಿಭಂಡಾರ ಎಂಬುವ ಲೇಖನದಲ್ಲಿ—

ಶ್ರೀ ಬಸವಣ್ಣನವರು ತಮ್ಮ ದೇಹವೇ ಶಿವನು ನುಡಿಸುವ ವೀಣೆಯಾಗಬೇಕೆಂದು ಬಯಸಿ, "ಎನ್ನ ಕಾಯವ ದಂಡಿಗೆಯ ಮಾಡಯ್ಯ, ಎನ್ನ ಶಿರವ ಸೋರೆಯ ಮಾಡಯ್ಯ, ಎನ್ನ ನರವ ತಂತಿಯ ಮಾಡಯ್ಯ, ಎನ್ನ ಬೆರಲ ಕಡ್ಡಿಯ ಮಾಡಯ್ಯ, ಬತ್ತೀ ಸರಾಗವ ಹಾಡಯ್ಯ, ಉರದಲೊತ್ತಿ ಬಾರಿಸು ಕೂಡಲಸಂಗಮದೇವ'' ಎಂದು ಬೇಡಿದರು. "ದೇವಲೋಕ ಮರ್ತ್ಯಲೋಕ ಎಂಬುದು ಬೇರಿಲ್ಲ ಕಾಣಿರೊ ಸತ್ಯವ ನುಡಿವುದೇ ದೇವಲೋಕ ಮಿಥ್ಯವ ನುಡಿಯುವುದೇ ಮರ್ತ್ಯಲೋಕ ಆಚಾರವೇ ಸ್ವರ್ಗ ಅನಾಚಾರವೇ ನರಕ, ಕೂಡಲಸಂಗಮದೇವ ನೀವೇ ಪ್ರಮಾಣ,'' "ದಯವಿಲ್ಲದ ಧರ್ಮವಾವುದಯ್ಯ ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ ದಯವೇ ಧರ್ಮದ ಮೂಲವಯ್ಯ ಕೂಡಲ ಸಂಗಯ್ಯ ನಂತಲ್ಲದೊಲ್ಲನಯ್ಯ'' ಎಂಬಿವೇ ಮುಂತಾದ ಉದಾತ್ತ ಸಂದೇಶಗಳನ್ನು ಕರುಣಿಸಿ ಶಿವೋಪಾಸನೆಯ ಸನ್ಮಾರ್ಗವನ್ನು ಹೊಸಹುರುಪಿನಿಂದುಪದೇಶಿಸಿ ನಮ್ಮ ಜನಾಂಗವನ್ನು ಉದ್ಧರಿಸಿದರು. ಶ್ರೀ ಬಸವಣ್ಣನವರ ಸಾಧನೆಯೂ, ಅನುಷ್ಠಾನವೂ, ಸದ್ಭಕ್ತಿಯೂ ಎಷ್ಟು ಶ್ರೇಷ್ಠವರ್ಗದವುಗಳೆಂಬುವದನ್ನು ಅತಿಸಂಕ್ಷೇಪವಾಗಿ ಇಲ್ಲಿ ಸೂಚಿಸುತ್ತೇನೆ. ಭಕ್ತಿಭಂಡಾರಿ ಬಸವಣ್ಣನವರೆಂಬ ನಾಮಧ್ಯೇಯದಿಂದ ಅಮರರಾದವರು ಶ್ರೀ ಬಸವಣ್ಣನವರು ವಚನಗಳ ರೂಪದ ಹೊಸ ಹೂಗಿಡವೊಂದನ್ನು ಕನ್ನಡ ಸಾಹಿತ್ಯದ ಉದ್ಯಾನದಲ್ಲಿ ನೆಡುವ ಬೆಳೆಯಿಸಿದ ಪರಮೋಪಕಾರ್ಯವು ಶ್ರೀ ಬಸವಣ್ಣನವರದು. ಮಾನವ ಜನ್ಮವು ಸಾರ್ಥಕವಾಗಲು ಸಾಧಕವಾದ ಉದಾತ್ತ ತತ್ವಗಳನ್ನು ತಿಳಿಗನ್ನಡದಲ್ಲಿ ಸಾಮಾನ್ಯ ಜನರಿಗೂ ತಿಳಿಯುವಂತೆ ಉಪದೇಶಿಸಿದ ಪುಣ್ಯವು ಶ್ರೀ ಬಸವಣ್ಣನವರದು.

ಹೆಚ್ಚೇಕೆ? ಶ್ರೀ ಬುದ್ಧಗುರುಗಳು, ಶ್ರೀ ಮಹಾವೀರರು, ಶ್ರೀ ಶಂಕರಾಚಾರ್ಯರು, ಶ್ರೀ ಮಧ್ವಾಚಾರ್ಯರು, ಶ್ರೀ ನಾನಕರು, ಶ್ರೀ ಕಬೀರರು, ಶ್ರೀ ಬಸವಣ್ಣನವರು ಮುಂತಾದ ಮಹಾಪುರುಷರೆಲ್ಲರೂ ತಪಸ್ವಿನಿಯಾದ ಭಾರತಮಾತೆಯ ಪುತ್ರರಾದ ಚಿರಂಜೀವಿಗಳು. ಅವರು ಅವತರಿಸಿದುದರಿಂದಲೇ, ಭಾರತಭೂಮಿಯು ಪುಣ್ಯಭೂಮಿಯು. ಅವರನ್ನು ನೆನೆದ ದಿನವೇ ಮಂಗಳಕರವಾದ ಶುಭದಿನವು.

ಶ್ರೀಮಾನ್ ಎ. ಲಕ್ಷ್ಮಣರಾವ್ ಹೊಯಿಸಳ, ರವೀಂದ್ರರ ಶಾಂತಿನಿಕೇತನದ ಗುರುಗಳು.

## ಬಸವತತ್ವ ಪರಿಮಳ

ಆಗ್ಗೆ ಬಿಜ್ಜಳ ಭೂಪಾಲನ ಮಂತ್ರಿಯಾದ ಬಸವಣ್ಣನವರು ಆಗಿನ ಕಷ್ಟವನ್ನು ಕಂಡು ಅರಿಯದಿದ್ದರೆ ಹೀಗೆ ಕಾಯಕದ ವಿಚಾರದಲ್ಲಿ ಕಟ್ಟುಮಾಡುತ್ತಲಿದ್ದರೆ? ಲಕ್ಷಾಂತರ ಶರಣರಿಗೆ ಉದರಭರಣ ಮಾಡಿಸುತ್ತಲಿದ್ದರೆ? ಉಣಲಿಕ್ಕೆ, ಇರಲಿಕ್ಕೆ, ಶರಣರ ಸಹವಾಸ ಮಾಡಲಿಕ್ಕೆ ಕಾಯಕ ಹತ್ತಿಹೋಗಲಿಕ್ಕೆ ಷಟ್‌ಸ್ಥಲಗಳು, ರಕ್ಷಣೆಗಾಗಿ ಅಷ್ಟಾವರಣಗಳು, ಆಚರಿಸಲಿಕ್ಕೆ ಪಂಚಾಚಾರಗಳು ಇವುಗಳನ್ನು ತಪ್ಪಿಸಕೊಟ್ಟ ಮಹಿಮನಿಗೆ ಮನುಷ್ಯ ಸಂಬಂಧವಾದ ಸುಖ ದುಃಖಗಳು ಬಲಾಬಲಗಳು ಚೆನ್ನಾಗಿ ಮನಗಂಡಿರಬೇಕು. ಸರ್ವಸಮತಾಭಾವವೂ, ಧೈರ್ಯ, ದಯಾ ಮುಂತಾದುವೂ ಸಹ ಲಿಂಗಸಂಗೀ, ವಿಶ್ವಸಂಗೀ, ಶಿವಸಮಯಕಾರೀ ಮತ್ತು ರುದ್ರಮಯ ಸುವಿನುತ ಭರ್ಗರಾದ ಕಲಚೂರ್ಯ ಜನರ ನಾಯಕರಾದ ಕಡೆಗೆ ಇಡೀ ಭಾರತಕ್ಕೆ ಧರ್ಮನಾಯಕ ರಾದ ಬಸವಣ್ಣನವರಲ್ಲಿದ್ದ ಗುಣಗಳು.

## ವಚನ ಶಾಸ್ತ್ರ ರಹಸ್ಯ

ಗ್ರಂಥಕಾರರು ಶ್ರೀಮಾನ್ ರಂಗನಾಥ ದಿವಾಕರ, ಎಂ.ಎ., ಎಲ್‌ಎಲ್.ಬಿ.— ಇವರು ಕರ್ಣಾಟಕದಲ್ಲಿ ಸುಪ್ರಸಿದ್ಧ ವಿದ್ವಾಂಸರು. ಇವರು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಇವರು ಸಾಹಿತ್ಯ ರಾಜಕಾರಣಗಳೆರಡರಲ್ಲಿಯೂ ಬಲ್ಲಿದರು. ಕಾಂಗ್ರೆಸ್ಸಿನಲ್ಲಿ ಇವರು ಮಾಡಿರುವ ಸ್ವಾರ್ಥತ್ಯಾಗಕ್ಕಾಗಿ ಇವರ ಹೆಸರು ಭರತಖಂಡದ ತುಂಬ ಇರುತ್ತದೆ. ಇವರು ಮಿಗಿಲಾದ ಗ್ರಂಥಕಾರರೂ ಆಗಿರುತ್ತಾರೆ. ಇವರು ಕೇಂದ್ರ ಸರ್ಕಾರದ ಮಂತ್ರಿಗಳಾಗಿದ್ದರು. ಇವರಿಂದ ಕನ್ನಡ ನಾಡಿಗೆ ಉಜ್ವಲ ಕೀರ್ತಿ ಬಂದಿರುತ್ತದೆ. ಹಿಂದಿನ ಬಿಹಾರಿನ ಗೌವರ್ನರರು. (೧) ವಚನ ಶಾಸ್ತ್ರ ರಹಸ್ಯ, (೨) ಹರಿಭಕ್ತಿಸುಧೆ, (೩) ಉಪನಿಷತ್ ಪ್ರಕಾಶ, (೪) ಅಂತರಾತ್ಮನಿಗೆ, (೫) ಗೀತೆಯ ಗುಟ್ಟು, (೬) ಜೇಲಿನಲ್ಲಿ ಮೊದಲಾದ ಅನೇಕ ಗ್ರಂಥಗಳನ್ನು ಬರೆದಿರು ತ್ತಾರೆ ಮತ್ತು ಯುನೈಟೆಡ್ ಕರ್ಣಾಟಕ ಎಂಬುವ ಇಂಗ್ಲೀಷ್ ಗ್ರಂಥ ಒಂದನ್ನು ಬರೆದಿರುತ್ತಾರೆ. ರಾಷ್ಟ್ರೀಯ ವಾಙ್ಮಯ ಮಂಡಲದ ಮುಖ್ಯ ಟ್ರಸ್ಟಿಗಳೂ ಆಗಿರುತ್ತಾರೆ. ಈ ಮಂಡಲದವತಿಯಿಂದಲೇ 'ಸಂಯುಕ್ತ ಕರ್ಣಾಟಕ'ವೆಂಬುವ ದಿನಪತ್ರಿಕೆಯು ಹೊರಡುತ್ತದೆ. ಇವರು ಬರೆದ ವಚನ ಶಾಸ್ತ್ರ ರಹಸ್ಯವೆಂಬುವ ಶ್ರೇಷ್ಠ ಗ್ರಂಥದಲ್ಲಿ ಬಸವಣ್ಣನವರ ಬಗ್ಗೆ ಕೆಳಗೆ ಬರೆದಂತೆ ಪುಟ ೨೫೧ ರಲ್ಲಿ ವಿವರಿಸಿರುತ್ತಾರೆ.

ಬಸವನ ಕಾರ್ಯಕ್ಷೇತ್ರವು ಬಹಳೇ ವಿಸ್ತೃತವಿತ್ತು. ಬರಿಯ ಆಧ್ಯಾತ್ಮಿಕ ಮತ್ತು ನೀತಿಯ ತತ್ವಗಳನ್ನು ಬಾಯಿಂದ ಪ್ರತಿಪಾದಿಸಿ ಉಪದೇಶಿಸಿ ಸುಮ್ಮನಿರದೆ ಅವನು ವೀರಶೈವ ಭಕ್ತಿಮಾರ್ಗವನ್ನು ಚೆನ್ನಾಗಿ ಪ್ರಸ್ಥಾಪಿಸಿ ಸಮತೆ, ಬಂಧುಭಾವ, ನೀತಿಗಳೇ ಆಧಾರವಾದ ಒಂದು ಉಚ್ಚತರವಾದ ಸಮಾಜವನ್ನು ಏರ್ಪಡಿಸಿದನು. ಕುಲ ಮತ್ತು ಉದ್ಯೋಗ ಇವುಗಳ ಬಗ್ಗೆ ಸಮಾಜದಲ್ಲಿ ರೂಢವಿದ್ದ ಕೃತಕ ಉಚ್ಚ ನೀಚ ಭಾವನೆಗಳನ್ನು ತೊಡೆದುಬಿಟ್ಟನು. ಸ್ತ್ರೀ, ಶೂದ್ರಾದಿಗಳ ಬಗ್ಗೆ ಇದ್ದ ತಿರಸ್ಕಾರ

ಭಾವವನ್ನು ಅಳಿಸಿಬಿಟ್ಟು ಎಲ್ಲರಿಗೂ ಸಾಮಾನ್ಯವಾಗಿರುವ ಧರ್ಮದ್ವಾರವನ್ನು ಅವರಿಗೆ ಕರೆದುಕೊಟ್ಟನು. ತತ್ವಜ್ಞಾನಕ್ಕಿಂತ ಧರ್ಮಾಚಾರದಲ್ಲಿ, ಧರ್ಮಾಚಾರಕ್ಕಿಂತ ನೀತಿಮಾರ್ಗದ ಪ್ರಸ್ಥಾಪನೆಯಲ್ಲಿ, ನೀತಿಮಾರ್ಗಕ್ಕಿಂತ ಸಮಾಜ ಸುಧಾರಣೆಯಲ್ಲಿ ಬಸವಣ್ಣನು ಹೆಚ್ಚಿನ ಕರ್ತೃತ್ವವನ್ನೂ, ಆತ್ಮವಿಶ್ವಾಸವನ್ನೂ, ದೂರದೃಷ್ಟಿಯನ್ನೂ ತೋರಿಸಿದನು. ಇದು ಅವನ ವ್ಯಾವಹಾರಿಕ ದೃಷ್ಟಿಯನ್ನೂ, ಜ್ಞಾನ, ಭಕ್ತಿ, ಕರ್ಮಗಳ ಸಮ್ಮೇಳನ ಮಾಡುವ ಶೈಲಿಯನ್ನೂ ವ್ಯಕ್ತಗೊಳಿಸುವುದು. ಈ ಅವನ ಮಹತ್ಕಾರ್ಯ ದಲ್ಲಿ ಮಿಕ್ಕ ಶರಣರೆಲ್ಲರೂ ಸಹಾಯಭೂತರಾದರು. ಆದರೆ ಅವನೇ ಇವೆಲ್ಲವುಗಳಿಗೆ ಮೂಲನು, ಮುಖ್ಯನು, ಚಾಲಕನು, ಮಧ್ಯಬಿಂದುವು. ಈ ಮಹಾಮಹಿಮನ ಗುಣಗಳನ್ನು ಅನೇಕ ವಚನಕಾರರು ಬಗೆಬಗೆಯಿಂದ ಬಣ್ಣಿಸಿರುವರು. ಅಥವಾ ಅವನ ಸಮಕಾಲೀನರಲ್ಲಿ ಆಗಲಿ, ಅವನ ಹಿಂದಿನಿಂದ ಬಂದವರಲ್ಲಿ ಆಗಲಿ ಅವನನ್ನು ಒಳ್ಳೇ ಶ್ರೇಷ್ಠನೆಂದು ಬಣ್ಣಿಸದೆ ಇದ್ದವರು ಒಬ್ಬರೂ ಇಲ್ಲವೆಂದರೂ ಸಲ್ಲುವುದು. ಅವನು ಅಪರ ಶಿವನ ಸ್ಥೂಲತತ್ವವೆಂದು, ಭಕ್ತಿಭಂಡಾರಿಯೆಂದು, ಭಕ್ತಿಗೆ ಶೃಂಗಾರವೆಂದು, ಶಿವಾಚಾರ ಚಕ್ರವರ್ತಿಯೆಂದು, ಸರ್ವಾಚಾರ ಸಂಪನ್ನನೆಂದು, ಆರೂಢದಾಸೋಹಿ ಯೆಂದು, ಐವತ್ತೆರಡು ಶರಣ ಲಕ್ಷಣಗಳುಳ್ಳ ಆದರ್ಶ ಶರಣನೆಂದು ವಿಧವಿಧವಾಗಿ ವರ್ಣಿಸಲ್ಪಟ್ಟಿರುವನು. ಬಸವಣ್ಣನ ಕೀರ್ತಿ ಪ್ರಭಾವಗಳು ಅಂದಿನಿಂದ ಇಂದಿನವರೆಗೆ ಬೆಳೆಯುತ್ತ ಬಂದಂತೆ ಇನ್ನಾವ ಶರಣನ ಹೆಸರೂ ಹೆಚ್ಚುತ್ತ ಬಂದಿಲ್ಲ. ಬಸವಣ್ಣನ ಅನುಪಮ ಗುಣಶೀಲಗಳೂ, ಅವನ ಅದ್ವಿತೀಯ ಕರ್ತೃತ್ವ ಶಕ್ತಿಯೂ, ಇವೇ ಹಾಗೆ ಆಗುವ ಕಾರಣಗಳು. ಅವನಲ್ಲಿ ಅತ್ಯುತ್ಕಟ, ಏಕಾಂತಿಕ, ನಿರ್ಹೇತುಕ, 'ಭಕ್ತಿತತ್ವವ ಹಿಡಿದವರಿಗೆ ತೊತ್ತಾಗಿ ನಡೆವೆನು, ಶ್ರೀ ಮಹಾದೇವನ ನೆನೆವನ ಪಾದರಕ್ಷೆಯ ಕಾಯ್ದು ಬದುಕುವೆ' ಎಂಬ ಅವನ ವಿನಯಾತಿಶಯ ಮತ್ತು ತತ್ವನಿಷ್ಠೆ, ಪ್ರತ್ಯಕ್ಷ ಧರ್ಮಾಚರಣೆ ಯಲ್ಲಿಯ ಮತ್ತು ದಾಸೋಹದಲ್ಲಿಯ ಅವನ ದಕ್ಷತೆ, ಅವನಲ್ಲಿರುವ ನಡೆ ನುಡಿಗಳ ಮೇಳ, ಕಳ್ಳನು ಹೆಂಡತಿಯ ಒಡವೆಗಳನ್ನು ಬಿಚ್ಚತೊಡಗಿರಲು, 'ಅವನ ಕೈ ನೊಂದೀತು ಎಲೆ ಚಾಂಡಾಲಗಿತ್ತೀ ಬೇಗ ತೆಗೆದುಕೊಡು ಅವನು ಕೂಡಲಸಂಗಮ ದೇವನಲ್ಲವೇ' ಎಂದು ಹೇಳುವಲ್ಲಿ ಒಡೆದು ಕಾಣುವ ಅವನ ಅಹಿಂಸೆ ಆಸ್ತೇಯ ವೃತ್ತಿ, ಸರ್ವಾತ್ಮತ್ವ ಪ್ರತೀತಿ ಮತ್ತು ಸೈರಣೆ, 'ಕೂಡಲಸಂಗಯ್ಯ ದೇವನುಳ್ಳಕ್ಕರ ಬಿಜ್ಜಳನ ಭಂಡಾರ ನನ ಗೇಕಯ್ಯ' ಎನ್ನುವ ಅವನ ನಿಸ್ಪೃಹತೆ, 'ನಿಮಗಂಜುವೆನಲ್ಲದೆ ಆ ನೀ ಬಿಜ್ಜಳಂಗಂಜುವೆನೆ' ಎಂಬುವ ಅಭಯ ಮತ್ತು ಪಾಪಭೀರುತ್ವ ಈ ಮುಂತಾದ ಗುಣರಾಶಿಯೆಲ್ಲ ಯಾವನಲ್ಲಿ ಒಟ್ಟುಗೂಡಿತ್ತೋ ಅವನ ಮಹಿಮೆಯು ಅಷ್ಟಿಷ್ಟೆಂದು ವರ್ಣಿಸಲಿಕ್ಕೆ ಬರುವಂತಿಲ್ಲ. ವಚನ ಲೇಖಕ ಎಂಬ ದೃಷ್ಟಿಯಿಂದ ಸಹ ಬಸವಣ್ಣನು ಬಹಳ ಉಚ್ಚ ತರಗತಿಯವನಿರುವನು. ಅವನ ವಚನಗಳೆಂದರೆ ಅವನ ಅಂತರ್ಹೃದಯದಲ್ಲಿ ಭಕ್ತಿ, ಆರ್ತಭಾವ, ಉಚ್ಚವಾದ, ಧ್ಯೇಯವಾದ ಪರಮಾತ್ಮನನ್ನು ಸಾಕ್ಷಾತ್ಕರಿಸಬೇಕೆಂಬ ಅವನ ತವಕ, ಆಯಾ ಪ್ರಸಂಗ ಗಳಲ್ಲಿ ಅವನಲ್ಲಿ ಇದ್ದ ಶ್ರೇಷ್ಠಭಾವಗಳ ಊರ್ಮಿಗಳು, ಇವೆಲ್ಲವುಗಳಿಗೆ ಹಿಡಿದ ಕೈಗನ್ನಡಿಯೇ ಇರುವುವು. ಅವನ ಸ್ವಂತಭಾವನೇತಿಹಾಸವೂ, ಚಾರಿತ್ರ್ಯವೂ, ಅವನ ವಚನಗಳಲ್ಲಿ ಎಷ್ಟು ಸ್ಪಷ್ಟವಾಗಿ ಮತ್ತು ನಿರ್ವಂಚಕ ರೀತಿಯಿಂದ ಪ್ರತಿಬಿಂಬಿತ ವಾಗಿದೆಯೋ ಅಷ್ಟು ಇನ್ನಾವ ವಚನಕಾರನ ಇತಿಹಾಸವೂ ಆಯಾ ವಚನಗಳಲ್ಲಿ ಎದ್ದು ಕಾಣಿಸುವುದಿಲ್ಲ.

ಟಿ. ಎಸ್. ವೆಂಕಣ್ಣಯ್ಯ, ಎಂ.ಎ., ಪ್ರೊಫೆಸರ್, ಮಹಾರಾಜಾ ಕಾಲೇಜ್, ಮೈಸೂರು—ಇವರು ಹರೀಶ್ವರ ಮಹಾಕವಿಯ ಶ್ರೀ ಬಸವರಾಜದೇವರ ರಗಳೆಯನ್ನು ಶುದ್ಧವಾಗಿ ಅಚ್ಚುಮಾಡಿಸಿ ಒಂದು ದೊಡ್ಡ ಮುನ್ನುಡಿಯನ್ನು ಬರೆದಿರುತ್ತಾರೆ. ಅದರಲ್ಲಿ—

ಪ್ರಖ್ಯಾತರಾದ ಕರ್ಣಾಟಕ ಧರ್ಮವೀರರಲ್ಲಿ ಬಸವಣ್ಣನೂ ಒಬ್ಬನು. ಆತನು ಮೊದಲು ಬ್ರಾಹ್ಮಣನಾಗಿದ್ದು ಆಮೇಲೆ ಬ್ರಾಹ್ಮಣ್ಯವನ್ನು ನಿರಾಕರಣಮಾಡಿ ವೀರಶೈವ ಮತವನ್ನವಲಂಬಿಸಿ ತನ್ನ ಜೀವನವನ್ನೆಲ್ಲ ಆ ಮತದ ಉದ್ಧಾರಕ್ಕೆ ಧಾರೆಯೆರೆದನು. ತಾನು ಸ್ವತಃ ಪರಮನಿಷ್ಠಾಯುಕ್ತನಾದವನಾಗಿದ್ದು ಅನೇಕ ಪವಾಡಗಳಿಂದ ಮೆರೆದದ್ದಲ್ಲದೆ ಬಿಜ್ಜಳರಾಯನ ಹತ್ತಿರ ಉನ್ನತ ಪದವಿಯಲ್ಲಿದ್ದು ತನ್ನ ತನು ಮನ ಧನಗಳನ್ನೆಲ್ಲ ಜಂಗಮಾರಾಧನೆಗಾಗಿಯೂ, ಮತಪ್ರಚಾರ ಕಾರ್ಯಕ್ಕಾಗಿಯೂ ಸವೆಸಿ, ವೀರಶೈವ ಮತೋದ್ಧಾರಕರಲ್ಲಿ ಅಗ್ರಗಣ್ಯನಾದನು. ಆತನ ಜೀವಿತ ಕಾಲದಲ್ಲಿಯೇ ಆತನ ಕೀರ್ತಿ ನಾಲ್ಕೂ ಕಡೆಗೆ ಹಬ್ಬಿ ಅನೇಕ ಶಿವಭಕ್ತರು ಆತನ ಸಂದರ್ಶನಕ್ಕಾಗಿ ದೇಶ ವಿದೇಶಗಳಿಂದ ಬರುತ್ತಿದ್ದರೆಂದು ತಿಳಿದುಬರುತ್ತದೆ. ದೈವಭಕ್ತಿಯುಳ್ಳವರೂ, ಮಹಿಮಾಸಂಪನ್ನರೂ ಅವರನ್ನು ಅವತಾರಪುರುಷರೆಂದು ಪರಿಗಣಿಸುವದು ನಮ್ಮ ಜನರಲ್ಲಿ ಬಹು ಕಾಲದಿಂದ ವಾಡಿಕೆಯಾಗಿ ಬಂದಿರುವುದರಿಂದ ಆ ಕಾಲದಲ್ಲಿಯೇ ಶಿವಭಕ್ತರು ಬಸವಣ್ಣನನ್ನು ಅವತಾರಪುರುಷನೆಂದು ಭಾವಿಸಿದ್ದರೆಂಬುವದರಲ್ಲಿ ಸಂದೇಹವಿಲ್ಲ. ಬಸವಣ್ಣನು ಕಾಲವಾದ ಮೇಲೆ ವೀರಶೈವ ಮತವು ಹುಟ್ಟದ ಹಾಗೆಲ್ಲ ಆತನ ಕೀರ್ತಿಯೂ, ಆತನ ಸಂಬಂಧವಾದ ಕಥೆಗಳೂ ಜನರಲ್ಲಿ ಬೆಳೆಯುತ್ತ ಹೋದವು.

ಕೆ. ಆರ್. ಸುಬ್ರಹ್ಮಣ್ಯಂ ಪಿಳ್ಳೆ, ಎಂ.ಎ., ಎಂ.ಎಲ್., ಇವರು ಮದ್ರಾಸ್ ಹೈಕೋರ್ಟಿನ ಅಡ್ವೋಕೇಟರೂ, ಠಾಗೋರ್ ಲಾ ಪ್ರೊಫೆಸರ್. ಇವರು—

ಸಂಕುಚಿತವಾದ ಸ್ಮೃತಿಗಳೇ ಆಧಾರವುಳ್ಳ ಬ್ರಾಹ್ಮಣ್ಯದ ದಾಳಿಗೆ ಎಡೆಗೊಡದೆ ಕಲ್ಯಾಣದ ಶ್ರೀ ಬಸವೇಶ್ವರರು ಹನ್ನೆರಡನೆಯ ಶತಮಾನದಲ್ಲಿ ಈ ಪ್ರಾಚೀನ ಶೈವ ಧರ್ಮವನ್ನು ಜೀರ್ಣೋದ್ಧಾರಮಾಡಿ ಸರ್ವಜನ ಸ್ವಾತಂತ್ರ್ಯದ ತಳಹದಿಯಲ್ಲಿ ಉದಾತ್ತವಾದ ಧರ್ಮಸ್ಥಾಪನೆಯನ್ನು ಮಾಡಿದರು.

In the 12th century this ancient creed was revised and established on a sound cosmopolitan basis by the Basaveswara of Kalyana against the inroads of the parochial smritic Brahminism.

ಬ್ಯಾರಿಸ್ಟರ್ ಎ. ಆರ್. ವಾಡಿಯಾ—ಇವರು ಮೈಸೂರು ವಿದ್ಯಾಖಾತೆಯ ಡೈರೆಕ್ಟರರಾಗಿದ್ದು ಸುಪ್ರಸಿದ್ಧ ವಿದ್ವಾಂಸರಾಗಿರುತ್ತಾರೆ. ಇವರು ಒಂದು ಪ್ರಸಂಗದಲ್ಲಿ—

Back to Basava ಅಂದರೆ ಬಸವಣ್ಣನನ್ನು ಹಿಂಬಾಲಿಸಿರಿ ಎಂದು ಹೇಳಿರುತ್ತಾರೆ.

ಡಾಕ್ಟರ್ ಈಶ್ವರನಾಥ ಟೋಪಾ, ಎಂ.ಎ., ಪಿಹೆಚ್.ಡಿ., ಪ್ರೊಫೆಸರ್, ಉಸ್ಮಾನಿಯಾ ಯೂನಿವರ್ಸಿಟಿ—ಇವರು ಉತ್ತರ ಹಿಂದೂಸ್ಥಾನದ ಸುಪ್ರಸಿದ್ಧ ವಿದ್ವಾಂಸರಾಗಿರುತ್ತಾರೆ. ಹೈದರಾಬಾದಿನಲ್ಲಿರುವ ವೀರಶೈವ ತರುಣ ಸಂಘದವರು ಉಪನ್ಯಾಸ ಮಾಡಲಿಕ್ಕೆ ಆಮಂತ್ರಣ ಕೊಟ್ಟಿದ್ದರು. ಆ ಕಾಲಕ್ಕೆ ಶ್ರೀಮಾನ್ ಡಾಕ್ಟರವರು

"ಮಧ್ಯಯುಗದ ಮಹಾತ್ಮರು" ಎಂಬ ವಿಷಯದಲ್ಲಿ ಭಾಷಣಮಾಡುತ್ತಾ—ನಾನು ಯಾವ ಜಾತೀಯ ಸಂಘದಲ್ಲಿ ಭಾಗವಹಿಸಲು ಸಿದ್ಧನಿಲ್ಲದಿದ್ದರೂ ಲಿಂಗವಂತ ಸಮಾಜದ ಪ್ರವರ್ತಕರಾದ ಬಸವಣ್ಣನವರ ಬಗ್ಗೆ ನನಗಿರುವ ಅಪಾರವಾದ ಅಭಿಮಾನದಿಂದಲೇ ನಾನು ಈ ಸಂಘದ ಆಮಂತ್ರಣ ಸ್ವೀಕರಿಸಿದೆ. ಶ್ರೀ ಬಸವಣ್ಣನವರು ಇದೇ ಜಗತ್ತಿನ ಅತಿ ದೊಡ್ಡ ವಿಭೂತಿಗಳಲ್ಲಿ ಒಬ್ಬರು. ಭಾರತೀಯ ಜನಾಂಗ ಜೀವನವನ್ನು ಆದ್ಯಂತ ವಾಗಿ ಪರಿವರ್ತಿಸಿ ಪ್ರಬಲಗೊಳಿಸಿದರು. ಮತ್ತು ಮಧ್ಯಯುಗದ ಮಹಾತ್ಮರಲ್ಲಿ ಇವರು ಮುಖ್ಯರು. ಇವರಂತೆ ಏಕನಾಥ, ವೇಮಣ್ಣ, ಕಬೀರ, ನಾನಕರ ವಿಷಯಗಳನ್ನು ಹೇಳುತ್ತ ಶ್ರೀಷ್ಮವರ್ಣಿಗಳು ಸ್ವಾರ್ಥದ ಪರಾಕಾಷ್ಠತೆಯಿಂದಾಗಿ ಸಹಸ್ರಾವಧಿ ವರ್ಷಗಳ ವರೆಗೆ ಅಜ್ಞಾನ ಹಾಗೂ ದಾಸ್ಯಗಳಲ್ಲಿ ನರಳುತ್ತಿದ್ದ ಸಾಮಾನ್ಯ ಜನತೆಯನ್ನು ಇವರೇ ಮೇಲೆತ್ತಿದವರೆಂದೂ, ಹಿಂದೂಸ್ಥಾನದ ಭಾವೀ ಅಭ್ಯುದಯಕ್ಕೆ ಈ ಜನತೆಯ ಉದ್ಧಾರವೇ ಅಡಿಗಲ್ಲೆಂದೂ ಆ ಕಾರ್ಯವನ್ನು ೮೦೦ ವರ್ಷಗಳ ಹಿಂದೆಯೇ ಆರಂಭಿಸಿ ಯಶಸ್ವಿಯಾಗಿ ಕೊನೆಗಾಣಿಸಿದ ಈ ಮಧ್ಯಯುಗದ ಮಹಾತ್ಮರ ಮಾರ್ಗವನ್ನು ನಾವು ಅನುಸರಿಸಿದಾಗಲೇ ನಮ್ಮ ಮುಕ್ತಿ ಎಂದು ಹೇಳುತ್ತ ತಮ್ಮ ಉಪನ್ಯಾಸ ಮುಗಿಸಿದರು. ಅವರು ಇಂಗ್ಲೀಷಿ ನಲ್ಲಿ ಮಾಡಿದ ಭಾಷಣದ ಸಾರಾಂಶವು ಹೈದರಾಬಾದಿನ ಪ್ರಜಾಪತ್ರಿಕೆಯಲ್ಲಿ ಪ್ರಕಟ ವಾಗಿದ್ದಿತು.

ಡಿ. ಕೆ. ಭೀಮಸೇನರಾವ್, ಎಂ.ಎ., ಕನ್ನಡ ಆಚಾರ್ಯರು, ಉಸ್ಮಾನಿಯಾ ಯೂನಿವರ್ಸಿಟಿ, ಹೈದರಾಬಾದ್—ಇವರು ರಾಯಚೂರಿನಲ್ಲಿ ನಡೆದ ಹೈದರಾಬಾದ್ ಪ್ರಾಂತ್ಯದ ಮೊದಲನೆಯ ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷ ಸ್ಥಾನದಿಂದ ಮಾಡಿದ ಭಾಷಣದಲ್ಲಿ ಶ್ರೀ ಬಸವರಾಜದೇವರ ವಿಷಯವಾಗಿ—

ಬಸವಣ್ಣನವರ ಕ್ರಾಂತಿ ಹೀಗೆ ಪಂಪ, ಪೊನ್ನ, ರನ್ನ ಈ ಮೂವರು ಕವಿಗಳು ಒಂದೇ ಶತಮಾನದಲ್ಲಿ ಹೈದರಾಬಾದ್ ಪ್ರಾಂತ್ಯದಲ್ಲಿ ಕಾವ್ಯಗಳನ್ನು ಬರೆದದ್ದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸಂಸ್ಮರಣೀಯವಾದ ಅಂಶವಾಗಿರುತ್ತದೆ. ನೃಪತುಂಗನ ತರುವಾಯ ಕನ್ನಡ ಕವಿಗಳು ನೂರು ವರ್ಷಗಳವರೆಗೆ ಹೈದರಾಬಾದ್ ಪ್ರಾಂತ್ಯದಲ್ಲಿ ಮಾಡಿರುವ ಸಾಹಿತ್ಯ ಸೃಷ್ಟಿಯ ಸ್ವರೂಪ ಅದೀಗ ಎದ್ದು ಕಾಣಬರುತ್ತದೆ. ಕನ್ನಡ ಸಾಹಿತ್ಯ ಸ್ವರ್ಣಯುಗವು ಈ ನಾಡಿನದೆಂದೇ ಹೇಳಬೇಕಲ್ಲವೆ? ಇವರಲ್ಲದೆ ಇನ್ನೂ ಕೆಲವು ಜನ ಉತ್ತಮ ಕವಿಗಳು ಇಲ್ಲಿ ಆಗಿರುತ್ತಾರೆ. ಅವರ ಕೃತಿಗಳನ್ನೂ, ಹೆಚ್ಚಿನ ವಿವರಗಳನ್ನೂ ಸಾಹಿತ್ಯ ಚರಿತ್ರೆಯಲ್ಲಿ ನೋಡಬಹುದು. ಮೇಲಿನ ಮೂವರು ಕವಿಗಳು ಹಾಕಿಕೊಟ್ಟ ಹೆದ್ದಾರಿಯಲ್ಲಿ ಹನ್ನೆರಡನೆಯ ಶತಮಾನದ ಮಧ್ಯದವರೆಗೆ ಕನ್ನಡ ಸಾಹಿತ್ಯ ಅಭಿವೃದ್ಧಿ ಹೊಂದಿತು. ಅದೀಗ ಮತ್ತೊಂದು ಸಂಧಿಕಾಲ ಒದಗಿತು. ಹಳಗನ್ನಡದ ಬಿಗಿ ಸಡಿಲಿಸಿತು. ಚಂಪೂರೂಪ ಅದಕ್ಕೆ ಹೊಂದಿಕೆಯಾಗಲಿಲ್ಲ. ವಿಚಾರದಲ್ಲಿ ಮಾರ್ಪಾಟಾ ದಂತೆ ಭಾಷೆಯಲ್ಲಿ ಮಾರ್ಪಾಟಾಗುವದು ಸಹಜವಷ್ಟೆ? ಈಗಲೂ ಹಾಗೇ ಆಯಿತು. ಸಾಹಿತ್ಯದಲ್ಲಿ ಒಂದು ದೊಡ್ಡ ಕ್ರಾಂತಿಯಾಯಿತು. ಅದಕ್ಕೆ ಕಾರಣಪುರುಷರು ಶ್ರೀ ಬಸವಣ್ಣನವರು. ಧೈರ್ಯ, ಕಾರ್ಯಶಕ್ತಿ, ಮನೋದಾರ್ಢ್ಯ, ಸಂಕಲ್ಪ, ನಿಷ್ಕಾಪಟ್ಯ, ಸರಳ ಜೀವನ, ಅಧಿಕಾರಬಲ, ಸದ್ವಿನಯ, ಭಕ್ತಿ ಇವುಗಳು ಅವರನ್ನು ದೊಡ್ಡ ಸಾನಕ್ಕೆ ಏರಿಸಿದವು. ರಾಜ್ಯದಲ್ಲಿ, ಸಮಾಜದಲ್ಲಿ, ಸಾಹಿತ್ಯದಲ್ಲಿ, ಜನಜೀವನ

ದಲ್ಲಿ, ವಿಚಾರದಲ್ಲಿ, ಆಚರಣೆಯಲ್ಲಿ ಸ್ಥಿತ್ಯಂತರವಾಗುವಂತೆ ಮಾಡಿದವರು ಬಸವಣ್ಣನವರು. ಬಸವಣ್ಣನವರ ಮನಸ್ಸು ಎಷ್ಟು ನಿರ್ಮಲವಾಗಿದ್ದಿತೋ ಅವರ ವಿಚಾರಗಳೂ ಅಷ್ಟೇ ನಿರ್ಮಲಗಳಾಗಿದ್ದವು. ಹಾಗೇ ಅವರ ಮಾತುಗಳು, ಅವರ ವಚನಗಳು ಆ ವಚನಗಳೇ ಕನ್ನಡದ ತಿರುಳು. ಚಂಪೂಕಾವ್ಯಗಳ ದುರ್ಗಮ ಶ್ರೇಣಿಯನ್ನು ಹತ್ತಿಳಿದವರಿಗೆ ಈಗ ರುಚಿಕರವಾದ, ಮಂಜುಳವಾದ ನಿರ್ಝರ ಪ್ರವಾಹ ಸಿಕ್ಕಿತು. ಎಲ್ಲರೂ ಈ ಪ್ರವಾಹದತ್ತ ಸಾಗಿದರು. ಅಷ್ಟು ಮನೋಜ್ಞವಾದದ್ದದು. ಆಪ್ಯಾನಕರವಾದದ್ದದು. ಬಸವಣ್ಣನವರ ಮೇಲುಪಂಕ್ತಿಯಲ್ಲಿ, ಅವರ ಧಾಟಿಯಲ್ಲಿ ನೂರಾರು ಜನ ಕವಿಗಳು ವಚನಗಳನ್ನು ರಚಿಸಿದರು. ಕನ್ನಡ ಉಪನಿಷತ್ತುಗಳೆನಿಸಿದವು ವಚನಗಳು. ಇವುಗಳನ್ನನುಸರಿಸಿ ಷಟ್ಪದಿಗಳು ಝೇಂಕರಿಸಿದವು. ಸಾಂಗತ್ಯಗಳು ಹಾಡಿದವು. ಬಸವಣ್ಣನವರು ನಿರ್ಮಿಸಿದ ಪಡೆ ಅಪಾರವಾಗಿತ್ತು. ಇವರು ಎಲ್ಲೆಲ್ಲಿಯೂ ಹರಡಿದರು. ವಾರ್ತೆಗಳೇನು ? ಗೋಷ್ಠಿಗಳೇನು ? ಊರು ಊರುಗಳಲ್ಲಿ, ಕೇರಿ ಕೇರಿಗಳಲ್ಲಿ ನಡೆದವು. ಇದಕ್ಕೆಲ್ಲ ಮೂಲಸ್ಥಳವಾವುದು ? ಕಾರ್ಯಭೂಮಿ ಆವುದು ? ಅದು ನಿಜಾಂ ಪ್ರಾಂತ್ಯದಲ್ಲಿರುವ ಕಲ್ಯಾಣ. ಆಗ ಅದು ದೊಡ್ಡ ಕಲ್ಯಾಣಪಟ್ಟಣ ; ಭೂಲೋಕದ ಕೈಲಾಸವದು.

ತುಕಾರಾಮಪ್ಪ ರತ್ನಪ್ಪ ಖೋರ್ಪಡೆ, ಜಮುಖಂಡಿ—ಇವರು ಇನಿಯನನೊಂಪಿ, ಮಡದಿಯನೊಂಪಿ, ಅಸ್ಪೃಶ್ಯೋದ್ಧಾರ, ಬಸವಣ್ಣನವರ ಚರಿತ್ರೆ (ಷಟ್ಪದಿ) ಚಿಟ್ಟ, ಮಾಮಲೇದಾರರ ಚರಿತ್ರೆ ಮೊದಲಾದ ಸಣ್ಣ ಸಣ್ಣ ಅನೇಕ ಗ್ರಂಥಗಳನ್ನು ಬರೆದಿರುತ್ತಾರೆ. ಇವರ ಕವಿತೆಯು ಮಧುರವಾಗಿರುತ್ತದೆ. ಬಸವಣ್ಣನವರ ಚರಿತ್ರೆಯಲ್ಲಿ—

ಹರನು ನರನಾಗಿ ಬಸವಣ್ಣನೆಂದೆನಿಸಿ ತಾಂ ।
ನರಜಾತಿ ಸದ್ಧಿತವ ಮಾಡಿ ಮಾಡುದನಕ್ಕೆ ।
ಪರಿ ಪರಿಯ ಬೋಧಮಂ ಮಾಡಿದಂ ಶ್ರೀ ವೀರಶೈವ ಜನಕ ದೇವನು ॥
ವರಪುರುಷ ಬಸವನನು ಹಡೆದು ಭೂಲೋಕದೊಳು ।
ಪರಮ ಕೀರ್ತಿಯ ಪಡೆದಳೀ ಭರತಮಾತೆ ।
ನರಜನ್ಮದೊಳು ಕೂಡ ಸಂಗಮೇಶ್ವರನಂತೆ ಪೂಜ್ಯನಾದನು ಬಸವನು ॥ ೧ ॥

ನಂದಿಯ ಅವತಾರವೆಂಬುವರು ಹಲವು ಜನ ।
ಇಂದುಧರ ಸಾಂಬನವತಾರವೆಂಬರು ಕೆಲರು ।
ಕುಂದಿರದ ಕರ್ತೃತ್ವ ಶಕ್ತಿಯುತನಾಗಿದ್ದ ಬಸವನಿಗೆ ಲೋಕದಲ್ಲಿ ॥
ಬಂದಿದ್ದನೈ ಜಗದಿ ಜನಹಿತವ ಮಾಡಲಿಕೆ ।
ಬಂಧುರನು ಕಡೆತನಕ ತನ್ನ ಕಾರ್ಯವನೆಸಗಿ ।
ಹೊಂದಿದನು ಪೂಜ್ಯತ್ವ ಸಂಗಮೇಶ್ವರನಂತೆ ಭುವನದೊಳ್ ಶ್ರೀ ಬಸವನು ॥ ೨ ॥

ಬಸವಣ್ಣನವರ ಕರ್ಣಾಟಕವಿದು ಎಲ್ಲೆಲ್ಲ ।
ಬಸವನ ಸುಕೀರ್ತಿ ಪರಿಮಳವು ತಾಂ ತುಂಬಿಹುದು ।
ಬಸವಣ್ಣನಿಂದಾಯ್ತು ಲಿಂಗವಂತರ ನಾಡು ಕರ್ಣಾಟಕವಿದು ಭರದಿ ॥
ಬಸವನೆಂಬ ಧರ್ಮರವಿ ಇಲ್ಲಿ ಬೆಳಗಿಹನು ।
ಹಸನವಾಗೆಲ್ಲರಿಗೆ ಕಾಣಲಿಕೆ ಸತ್ಪಥವು ।
ಬಸವನೀ ಸದ್ಧರ್ಮ ಧರ್ಮಶಬ್ದದ ಸಾರ್ಥಗೊಳಿಸಿಹುದು ಸತ್ಯವಾಗಿ ॥ ೩ ॥

ಉಳಿಸಿಹನು ಬಸವಣ್ಣ ಶಿವಮತದ ಬೀಜವನು ।
ಉಳಿಸಿ ತಾಂ ಬಿತ್ತಿ ಸಸಿಯನ್ನು ಮಾಡಿರುವನು ।
ಬೆಳಿಸಿರೈ ನೀವದನು ಘನವೃಕ್ಷವಾಗುವೋಲ್ ಬಸವನಭಿಮಾನವಿಡಿದು ॥
ನಮಿಸುವೆನು ಭಕ್ತಿಯಿಂ ಶ್ರೀ ವೀರಶೈವ ಮತ ।
ಕಮಲದಿನಮಣಿಯಾದ ಬಸವಣ್ಣನ ವರಪದ ।
ಕಮಲವುಂ ನಾಂ ಧರ್ಮಕಾರ್ಯದೊಳವರು ಗೈದ ವೀರತ್ವವನ್ನು ನೆನೆದು ॥

ಕವಿ ಬಸವಭಕ್ತ ಮಲ್ಲಿನಾಥ—"ಬಸವೇಶ್ವರನೂ, ಅಸ್ಪೃಶ್ಯೋದ್ಧಾರವೂ' ಎಂಬುವ ಹೊತ್ತಿಗೆಯಿಂದ ಆರಿಸಿ ತೆಗೆದಿರುತ್ತದೆ.

ವೇದಶಾಸ್ತ್ರದ ಸಾರವೆಲ್ಲವ ಬೋಧಿಸಲು ಕನ್ನಡದ ನುಡಿಯೊಳು ।
ಸಾದರದಿ ವಚನಗಳ ಬರಿದೈ ಬಸವ ಭವ ದೂರಾ ॥
ಈ ಧರೆಯೊಳೆಲ್ಲಲ್ಲು ಕಾಣೆನು ಚೋದ್ಯಗೊಳಿಸುವ ನಿನ್ನ ವಚನವು ।
ವೇದ್ಯವಾಗಿಹುದೆಲ್ಲ ಮತಿಕರ ಮನವ ರಂಜಿಸುತ ॥ ೧ ॥

ಶ್ವಪಚ ಮೊದಲಾದೆಲ್ಲ ಜನರು ಅಪರಿಮಿತ ಬಾಂಧವರ ಭಾವದು ।
ಉಪಚರಿಸಿ ನಡೆ ನುಡಿಯೊಳೊಂದೇ ಬಗೆಯದೋರುತಲಿ ।
ವಿಫಲವಾಗದ ತತ್ವ ಸಾರುತ ಸಫಲಗೊಳಿಸಿದ ನಿನ್ನ ನಾಮುವ
ತ್ರಿಪುರನಾಶಕ ಶಂಕರ ಸದ್ಭಕ್ತ ಬಸವೇಂದ್ರಾ ॥ ೨ ॥

ಮರುಳುತನವದು ಹೆಚ್ಚಿ ನಮ್ಮೊಳು ಕೊರಗುತಿರುವೆವು ಕಲಹಮಾಡುತ ।
ಮರೆತುಬಿಟ್ಟೆವು ನಿನ್ನ ನಿಜತತ್ವವನೂ ಗುರುದೇವಾ ॥
ಬೆರಗುಗೊಂಡಿತು ಧರಣಿ ಎಲ್ಲವು ಪರಮಜ್ಞಾನಿಯೆ ನಿನ್ನ ತತ್ವಕೆ ।
ಕರುಣಿ ಬಸವನೆ ಹುಟ್ಟಿಸೆಮ್ಮೊಳಗೈಕ್ಯಭಾವನೆಯಾ ॥ ೩ ॥

"ಬಸವೇಶ್ವರನೂ, ಕರ್ಣಾಟಕದ ಅಭ್ಯುದಯವೂ" ಎಂಬ ಗ್ರಂಥದೊಳಗಿನ ಪದ್ಯಗಳು :—

ಶ್ರೀಮದನುಪಮ ಬಸವರಾಜಗೆ ।
ಭೂಮಿಪತಿ ಬಿಜ್ಜಳನ ಮಂತ್ರಿಗೆ ।
ಆ ಮಹಾಶಿವ ಶರಣರಿಂ ನುತಿಗೊಂಡ ಭಕ್ತನಿಗೆ ॥
ಸೋಮಧರನ ಪರಾವತಾರಿಗೆ ॥
ಕಾಮಿತಾರ್ಥವನೀವ ದೇವಗೆ ॥
ತಾಮಸವ ಹೊಡೆದೋಡಿಪಗೆ ಜಯ ಜಯತು ಮಂಗಲವು ॥ ೧ ॥

ಬಸವ ನಿನ್ನಯ ನಾಮವ ನೆನೆಯಲು ।
ನಶಿಸಿಹೋಗುವದೆಲ್ಲ ಪಾಪವು ।
ಅಸಮ ಮಹಿಮಾಶಾಲಿ ಶೂಲಿಯಮೇಲೆನಿಪ ಭಕ್ತಾ ॥
ಹೊಸಬಗೆಯ ಚೈತನ್ಯ ಹುಟ್ಟಿಸಿ ವಸುಧಿಯೊಳು ನಿಜತತ್ವ ಬೋಧಿಸಿ ।
ಕುಸುಮಶರಸಂಹರನ ಭಕ್ತರಲಿ ಶ್ರೇಷ್ಠರೆನ್ನಿಸಿದಿ ॥ ೨ ॥

ಸಮತೆಯನು ಸರ್ವರೊಳು ತಾಳ್ದನೆ ।
ಶಮನಹರ ಭಕ್ತಾಗ್ರಗಣ್ಯನೆ ।
ಸುಮಹದಮಳಾಚಾರ ಗಣ್ಯನೆ ಶಾಂತಿದಾಯಕನೆ ॥
ಅಮಿತ ಕರುಣಾಮೂರ್ತಿ ಬಸವನೆ ।
ಸುಮನ ಸದೃಶ ಚರಣಯುಗಲಕೆ ।
ನಮಿಸುವೆನು ಮನದೊಳಗೆ ಮೂಡಲು ಮಮತೆಯೆಂಬುವದು ॥ ೩ ॥

ಅಯ್ಯನಮ್ಮಯ ಪಾಪವೆಲ್ಲವ ।
ಅಯ್ಯನೀ ಪರಿಹಾರಮಾಡುತ ।
ಕಯ್ಯಗೊಡುತಲಿ ಕಾಯೊ ನೀ ಕಲ್ಯಾಣ ಪುರದೀಶ ॥
ಅಯ್ಯ ನಡೆನುಡಿ ನೀತಿ ನಮ್ಮಯ ।
ಕೈಯಬಿಟ್ಟವು ಕೊರಗುತಲಿ ೞಸು ।
ಸುಯ್ಯುತಿರುವೆವು ರಕ್ಷಿಸೆಮ್ಮನು ಬಸವರಾಜೇಂದ್ರಾ ॥ ೪ ॥

ಹಾಡಿ ಹರಸುತ ನಿನ್ನ ಸ್ತೋತ್ರವ ।
ಮಾಡಿ ಜಗದೊಳು ಧನ್ಯರಾದರು ।
ಜೋಡು ಇಲ್ಲದ ಕಬ್ಬಿಗರು ಶಿವಶರಣಗಣನಿಕರ ॥
ನೋಡು ದೇವನೆ ನಮ್ಮ ಸ್ಥಿತಿಯನು ।
ದೂಡು ಬೇಗನೆ ಮಲಿನ ಬುದ್ಧಿಯ ।
ನೀಡು ನಿಜ ಜ್ಞಾನವನು ಬೇಡುವೆ ಬಸವರಾಜೇಂದ್ರಾ ॥ ೫ ॥

ರಾಜಪೂಜ್ಯನೆ ಬಸವರಾಜನೆ ।
ಪೂಜ್ಯರೂಪನೆ ನಿನ್ನ ಕೀರ್ತಿಯು
ಮೂಜಗದಿ ಮೆರೆಯುವದು ಮಹಿಮಾನಂತ ಮಹನೀಯಾ ॥
ತೇಜವಂತನೆ ತಾರಿಸೆಮ್ಮನು ಓಜೆಯಿಂದಲಿ ।
ಭವದ ಕಡಲೊಳು ರಾಜಿಸುವ ಸುಜ್ಞಾನವೆಂಬುವ ನೌಕೆಯನ್ನಿತ್ತು ॥ ೬ ॥

ಜನುಮ ಜನುಮಕೆ ನಿನ್ನ ನಾಮವು ।
ಮನದಿ ನೆಲಿಸಲಿ ಬಸವರಾಜನೆ ।
ಎನಗೆ ಕರುಣಿಪುದಿದನು ಬೇಡೆನು ಹೆಚ್ಚಿಗಿನ್ನೇನು ॥
ಮನದಿ ವಚನದಿ ಶಿವನ ಶರಣರ ।
ಫಲತರದ ಮಹಿಮೆಗಳ ಪಾಡುತ ॥
ಬನದಗೊಳ್ಳುವ ಸಮಯ ಒದಗಿಸು ಬಸವರಾಜೇಂದ್ರಾ ॥ ೭ ॥

ಕೀರ್ತಿ ಕಾಂತೆಯನೊರಸಿ ಪರಶಿವ ।
ಮೂರ್ತಿ ಎನಿಸುತ ಜಗದ ಜನಕೆ ಸು ।
ವಾರ್ತೆಯನು ಬೀರುತಲಿ ನಿನ್ನಯ ವಚನ ಶಾಸ್ತ್ರದೊಳು ॥
ಧೂರ್ತತನದಿಂ ನಡೆದು ಜನ್ಮವ ।
ಸಾರ್ಥಕವ ಮಾಡಿದೆಯೊ ನೀ ಪರಮಾರ್ಥ
ಸುಖವನು ತೋರಿ ಮಾಯಾಮೋಹಭರಿತರಿಗೆ ॥ ೮ ॥

ಜನನ ಮರಣಗಳನ್ನು ಮೀರಿದ ।
ಜನಹಿತಕೆ ಜನ್ಮವನು ತಾಳಿದ ಚಿ ।
ನುಮಯಾತ್ಮನೆ ಚಿತ್ತಶುದ್ಧಿಯನಿತ್ತು ಪೊರೆಯುವದೈ ॥
ವಿನಯದಿಂದೆರಗುವೆವು ಚರಣಕೆ ।
ಜನಿತ ಸಾನಂದಾಶ್ರುಪೂರ್ಣದಿ ತನುನೊಳು ।
ಪುಳಕಾಂಕುರುಗಳು ಪ್ರಸರಿಸುತ್ತಿರಲು ॥ ೯ ॥

ಯಜ್ಞ ಯಾಗಾದಿಗಳ ।
ನರೆಗಳೆದಜ್ಞತನುವನು ಹೋಗಲಾಡಿಸಿ ।
ಪ್ರಜ್ಞೆಯನು ಪುಟ್ಟಿಸುತಾಹಿಂಸಾತತ್ವ ಬೋಧಿಸಿದಿ ॥
ಸುಜ್ಞರಿಂ ನುತಿಗೊಂಡ ನೀನಿದು ।
ಅಜ್ಞಜನರಿಗೆ ತಿಳಿಯುವುದೆ ಸ ।
ರ್ವಜ್ಞ ಶಿವನ ಪರಾವತಾರಿಯೆ ನಿನಗೆ ಮಂಗಲವು ॥ ೧೦ ॥

ಶ್ರೀ ವಿರೂಪಾಕ್ಷ ವಡೆಯರ್ ವೇದತೀರ್ಥ—ಚೌಡಯ್ಯ ದಾನಪುರ ಸಂಸ್ಥಾನ ಮಠ ಇವರು ಒಳ್ಳೇ ವಿದ್ಯಾವಂತರೂ, ವಾಙ್ಮಿಗಳೂ ಆಗಿರುತ್ತಾರೆ. ಕೆಲವು ದಿನಗಳ ವರೆಗೆ ಇಂದೂರ ಸಂಸ್ಥಾನದ ಸಂಸ್ಕೃತ ಕಾಲೇಜಿನಲ್ಲಿ ವೇದಾಧ್ಯಾಪಕರಾಗಿದ್ದರು. ವೀರಶೈವ ಕರದರ್ಪಣದೊಳಗೆ ಒಂದು ಲೇಖನವನ್ನು ಬಸವಣ್ಣನವರ ವಿಷಯಕ್ಕೆ ಬರೆದಿರುತ್ತಾರೆ. ಅದರಲ್ಲಿಯ ಕೆಲ ಭಾಗವನ್ನು ಇಲ್ಲಿ ಕೊಡುತ್ತೇನೆ.

ಶ್ರೀ ಶ್ರೀಕರಾದ್ಯಾಚಾರ್ಯರಾಗಿಹೋದ ೨೦೦ ವರ್ಷಗಳ ಸುಮಾರಕ್ಕೆ ರಾಜಕೀಯ ಸತ್ವದಿಂದ ಕೂಡಿದ ಬಸವೇಶ್ವರನೆಂಬ ಮಹಾಪುರುಷನ ಉದಯವಾಯಿತು. ಲಿಂಗಾಂಗಿ ಧರ್ಮದ ಶ್ರೇಷ್ಠತ್ವವನ್ನು ತೋರಿಸುವದಕ್ಕಾಗಿಯೇ ಈತನು ಅಲಿಂಗೀ ಬ್ರಾಹ್ಮಣರಲ್ಲಿ ಜನ್ಮವಂ ತಾಳಿ ಮುಂದೆ ಲಿಂಗಧಾರಿಯಾದನೆಂಬ ಐತಿಹಾಸಿಕ ವೃತ್ತಾಂತವು ಲಿಂಗಾಂಗಿಗಳ ಗೌರವವನ್ನು ದ್ಯೋತಿಸುತ್ತದೆ. ಉಚ್ಚ ಕುಲಶೀಲಂಗಳಿಂದ ಕೂಡಿದ ಈ ಬಸವೇಶ್ವರನು ತನ್ನ ಪ್ರಭಾವದಿಂದಲೂ, ಉತ್ಸಾಹ, ದೂರದರ್ಶಿತ್ವ, ಸಹನಶೀಲತ್ವ, ಶುದ್ಧಾಚಾರ ವಿಚಾರಗಳಿಂದಲೂ, ರಾಜನೀತಿ, ಧರ್ಮನೀತಿ, ವ್ಯವಹಾರ, ಬುದ್ಧಿಕುಶಲತೆಯಿಂದಲೂ, ಸ್ವದೇಶಾಭಿಮಾನದಿಂದಲೂ, ಆತನ ಕಾಲದ ಬಿಜ್ಜಳ ರಾಜನ ಮಂತ್ರಿಪದವಂ ಸಂಪಾದಿಸಿ ಲಿಂಗಾಂಗಿ ಧರ್ಮವನ್ನು ವಿಶೇಷ ಪ್ರಚಾರ ಮಾಡಿ ಬಹು ಉನ್ನತಿಗೆ ತಂದನೆಂದು ನಿಸ್ಸಂದೇಹವಾಗಿ ಹೇಳಬಹುದು.

ಬಸವೇಶ್ವರನು ರಾಷ್ಟ್ರದ ಐಕ್ಯಕ್ಕೆ ಧರ್ಮವೇ ಮೂಲವೆಂದು ತಿಳಿದು ಧರ್ಮದ ಚಳುವಳಿ ಮಾಡಿದನು. ಇತ್ತಲಾಗಿ ದೇಶಾಭಿಮಾನದಿಂದ ರಾಷ್ಟ್ರದಲ್ಲಿ ಒಂದೇ ಧರ್ಮವಾಗಿ ಆ ರಾಷ್ಟ್ರದ ದ್ರವ್ಯವು ಎರಡನೆಯ ರಾಷ್ಟ್ರಕ್ಕೆ ಹೋಗಕೂಡದೆಂತಲೂ, ಅರ್ಥಾತ್ ಕರ್ಣಾಟಕ ಪ್ರಾಂತ್ಯದ ದ್ರವ್ಯವು ಮತ್ತೊಂದು ಪ್ರಾಂತ್ಯಕ್ಕೆ ಹೋಗಬಾರದೆಂದು ಭಾವಿಸಿದಲ್ಲಿ ಆ ಕರ್ಣಾಟಕವಾಸಿಗಳಿಗೆ ಬೇಕಾದ ಪದಾರ್ಥಗಳನ್ನು ತನ್ನ ರಾಷ್ಟ್ರದಲ್ಲಿಯೇ ತಯಾರಿಸಲಿಕ್ಕೆ ಜನರಿಗೆ ಉದ್ಯುಕ್ತರಾಗಿರೆಂದು ಹೇಳಿ ಅವರಿಗೆ ಬೇಕಾದ ಪ್ರೋತ್ಸಾಹ ಕೊಡಲು ಸಿದ್ಧನಾದನು. ಇದರಿಂದ ಪರರಾಷ್ಟ್ರದ ಅಪೇಕ್ಷೆಯು ಉಳಿಯದೆ ಹೋಗಿ, ರಾಷ್ಟ್ರದಲ್ಲೆಲ್ಲರೂ ಸಮಯಾನುಸಾರ ಪದಾರ್ಥಗಳ ಅನುಕೂಲತೆಯ ದೆಶೆಯಿಂದ ಚಂಡಾಲನನ್ನೂ ಸಹ ಬಂಧುವಿನಂತೆ ಭಾವಿಸಲಾರಂಭಮಾಡಬೇಕಾಯಿತು. ಇದಕ್ಕಾಗಿ ಬಸವೇಶನು ಮೊದಲು ಚಂಡಾಲನೂ ಸಹ ನನ್ನ ಬಂಧುವೆಂದು ತೋರಿಸಲಿಕ್ಕೆ ಲಿಂಗಧಾರಣವೆಂಬ ಧರ್ಮನಿಮಿತ್ತವಂ ಬಾಹ್ಯದಲ್ಲಿ ತೋರಿಸಿ ಅವನನ್ನು ತನ್ನಲ್ಲಾವರಿಸಿಕೊಂಡನು. ಆ ಲಿಂಗಧಾರಣ ಮತ್ತು ಸದ್ಬೋಧದಿಂದವನನ್ನು ಪವಿತ್ರಾಚರಣೆಗೆ ಹಚ್ಚಿ ಈ ಚಂಡಾಲನು ಈಶ್ವರಪುತ್ರನಾಗಿ, ದೇಶಬಾಂಧವನಾಗಿದ್ದರಿಂದ ಇವನ ಬಂಧುತ್ವವು ಚಿರಕಾಲ ಉಳಿಯಬೇಕೆಂಬುದಾಹರಣೆಗಾಗಿ ಶ್ರೇಷ್ಠಬ್ರಾಹ್ಮಣರೆಂದೆನಿಸಿಕೊಳ್ಳುವವರಲ್ಲಿಯೇ ಶರೀರಸಂಬಂಧ ಮಾಡಿಸಿದನು. ಇವನೇ ಹರಳಯ್ಯನೆಂಬುವ ಪಂಚಮನು. ಇವನ ಮಗನಿಗೆ ಮಧುವಯ್ಯನೆಂಬ ಬ್ರಾಹ್ಮಣನ ಮಗಳನ್ನು ಕೊಡಿಸಿದನು. ಅಹಹಾ! ಬಸವೇಶನ ವಿಶ್ವಾತ್ಮ, ವಿಶ್ವಸ್ವರೂಪ, ವಿಶ್ವ ಕುಟುಂಬಕ್ಕೆ ಬೆಲೆಯಿಲ್ಲ. ಯಾವ ಈಶ್ವರನ ಪುತ್ರರಿಗೆ ಚಂಡಾಲರೆಂದು ಹೆಸರಿಟ್ಟು, ಸ್ವಾರ್ಥಿಗಳು ಅವರನ್ನು ಕಂಡಾಕ್ಷಣಕ್ಕೆ ಸಚೇಲಸ್ನಾನವನ್ನು ಮಾಡುತ್ತಿದ್ದರೋ, ಅಂಥಾ ಸ್ವಾರ್ಥವಿಚಾರವನ್ನು ನಿರ್ಮೂಲಿಸಿ ಜಗತ್‌ಕಲ್ಯಾಣವನ್ನು ಮಾಡಿದ ಬಸವೇಶನಿಗೆ ಎಷ್ಟು ಧನ್ಯವಾದಗಳನ್ನರ್ಪಿಸಿದರೂ

ಅಲ್ಪವೇ ಸರಿ. ಇವತ್ತಿಗೆ ೮೦೦ ವರ್ಷಗಳ ಹಿಂದೆಯೇ ಬಸವೇಶನು ರಾಷ್ಟ್ರೈಕ್ಯ ಹಿತಕರ ಕೃತಿಗಳನ್ನು ಸಹಜರೀತಿಯಿಂದ ಕೃತಿಯಲ್ಲಿ ತಂದು ತೋರಿಸಿ ಜಗತ್ತಿಗುದಾಹರಣೆ ಮಾಡಿಟ್ಟಿರುವನು.

ಇನ್ನು ಬಸವೇಶನು ಕಂಡಕಂಡವರಿಗೆ ಲಿಂಗಧಾರಣ ಮಾಡಿಸಿದ್ದು ಬಹಳ ತಪ್ಪು ಮಾಡಿದನೆಂದು ಕೆಲವು ಅಜ್ಞರು ನಿಂದಿಸುತ್ತಿರುವರು. ಆದರೆ ಅದು ಅವರ ತಪ್ಪು ತಿಳುವಳಿಕೆಯು. ಯಾಕಂದರೆ ಬಸವೇಶನು ಲಿಂಗಧಾರಣವನ್ನು ಸರ್ವರಿಗೂ ಮಾಡಿಸಿದ್ದು ಎಂಥ ಮಹತ್ಕಾರ್ಯವೆಂಬುದು ಎಷ್ಟು ಹೇಳಿದರೂ ತೀರದು. ಹಾಗೂ ಲಿಂಗಧಾರಣ ವಿಧಾನವು ಶಾಸ್ತ್ರಮರ್ಯಾದೆಗೂ ಮೀರಿಲ್ಲ. ಹ್ಯಾಗಂದರೆ,

ಸ್ತ್ರೀಯೋ ಬಾಲಾಸ್ತಥಾ ವೃದ್ಧಾಃ ಖಂಜಾಃಕುಬ್ಜಾಂಧಪಂಗವಃ ।
ಮಲ್ಲಿಂಗಧಾರಣಾದೇವ ಮದ್ರೂಪಾ ಏವ ತೇ ಶಿವೇ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಶೂದ್ರಾ ಏಚಾನ್ಯ ಜಾತಯಃ ।
ಲಿಂಗಧಾರಣಮಾತ್ರೇಣ ಶಿವ ಏವ ನ ಸಂಶಯಃ ॥

ಯಸ್ಯಾಸ್ತಿ ಭಕ್ತಿರೀಶಾನಿ ವೀರಶೈವ ಮತಾಶ್ರಯೇ ।
ಭಕ್ತಿಮಾತ್ರ ಪವಿತ್ರಾಹಿ ಸರ್ವಯೇವಾಧಿಕಾರಿಣಃ ॥

ಎಂದು ಸಮಸ್ತರಿಗೆ ಲಿಂಗಧಾರಣದಧಿಕಾರವುಂಟೆಂಬ ಪಾರಮೇಶ್ವರಾಗಮದ ವಚನ ದಂತೆ ಬಸವೇಶನು ಲಿಂಗಧಾರಣ ಮಾಡಿಸಿಕೊಳ್ಳಲಿಕ್ಕೆ ಸರ್ವರಿಗೂ ಮುಕ್ತದ್ವಾರ ಮಾಡಿದನು. ಇದರಲ್ಲಿ ಅವನಿಗೆ ಆಂತರಿಕ ದೇಶಾಭಿಮಾನದ ಕಳಕಳಿ ಇದ್ದು ಅದ ರಿಂದಲೇ ಲಿಂಗಾಂಗಿ ಧರ್ಮವು ಸಾರ್ವಭೌಮವಾಗುವದೆಂದು ನಂಬಿದ್ದನು. ಎಲ್ಲಿ ಕಂಡಲ್ಲಿಯೂ ಲಿಂಗವನ್ನೇ ಕಾಣಬೇಕೆಂಬೀ ಈಶ್ವರಾಸ್ತಿಕ ಬುದ್ಧಿಯು ಅವನ ಮೊದಲನೆಯ ದ್ಯೋತನೆಯು. ಈ ಧರ್ಮದಂಥ ಉದಾತ್ತ ತತ್ವವು ಮತ್ತಿನ್ನಾವ ಧರ್ಮದಲ್ಲಿಯೂ ಇಲ್ಲದ್ದರಿಂದ ಐಹಿಕಾಮುಷ್ಮಿಕ ಸುಖಗಳೆರಡನ್ನೂ ಬಹು ಸುಲಭವಾಗಿ ಸಾಧಿಸಬಹುದೆಂಬ ವಿಚಾರಮಾಡಿ ಸರ್ವತ್ರ ಒಂದೇ ಲಿಂಗಾಂಗಿ ಧರ್ಮವಾದಲ್ಲಿ ರಾಷ್ಟ್ರದ ಐಕ್ಯವು ಉಳಿಯುವದೆಂಬ ಎರಡನೇ ಹೇತುವು. ಸರ್ವವೂ ಲಿಂಗಮಯ ವಾದುದೆಂದು ಆಧ್ಯಾತ್ಮ ವಿಚಾರ ತೋರಿಸುವುದು ಮೂರನೇ ಹೇತುವು. ಇನ್ನು ಸರ್ವ ಸಾಮಾನ್ಯವಾಗಿ ಲಿಂಗಾಂಗಿ ಧರ್ಮವನ್ನು ಅಭಿವೃದ್ಧಿಮಾಡುವ ಅಭಿಮಾನವಂತೂ ಬಾಹ್ಯಾಂತರದಲ್ಲಿಯೂ ಇದ್ದದ್ದೇ. ಒಬ್ಬ ಲಿಂಗಾಂಗಿಯು ದುಡ್ಡು ಸಾಂಸಾರಿಕ ಪದಾರ್ಥಗಳನ್ನು ತೆಗೆದುಕೊಳ್ಳುವ ಉದ್ದೇಶದಿಂದಲೇ ಆಗಲಿ, ಅಥವಾ ಕೂಲಿ, ಕುಂಬಳಿ, ನೌಕರಿ ಮೊದಲಾದ ನಿಮಿತ್ತದಿಂದಲೇ ಆಗಲಿ, ಎರಡನೇ ಲಿಂಗಿಯವರ ಕಡೆಗೆ ಹೋಗಬಾರದೆಂಬ ಮುಖ್ಯ ಸ್ವದೇಶೀ ಭಾವನೆಯಿಂದ ಲಿಂಗಾಂಗಿ ಧರ್ಮಾಭಿ ಮಾನ ಉಳಿಯಬೇಕೆಂತಲೂ ಸರ್ವರಿಗೂ ಅಂದರೆ ಅಗಸರು, ಕುಂಬಾರರು, ಕ್ಷೌರಿಕರು ಮೊದಲಾದವರಿಗೂ ಲಿಂಗಧಾರಣೆ ಮಾಡಿದನು. ಇವನೇ ಸ್ವದೇಶಾಭಿಮಾನದ ಸ್ವದೇಶೀ ಚಳುವಳಿಯ ಮೊದಲನೇ ಶಿಕ್ಷಕನು. ಇವನು ಸರ್ವಪ್ರಾಣಿಮಾತ್ರಕ್ಕೂ ನಿಷ್ಪಕ್ಷಪಾತ ದಿಂದ ಹಿತಚಿಂತಕನಾಗಿದ್ದರಿಂದಲೇ ಇವನಿಗೆ ನಂದಿ, ವೃಷಭಾದಿ ಅವತಾರವೆಂದು ಹೊಗಳಿದರು. ಆದರೆ ಲೋಕಾನಂದಯತೀತಿ ನಂದಿಃ ವೃಷಂ ಧರ್ಮಂಭಾತೀತಿ ವೃಷಭಃ

ಇತ್ಯಾದಿ ಶಬ್ದಗಳು ಲೋಕೋನ್ನತಿ, ದೇಶೋನ್ನತಿ, ಧರ್ಮೋನ್ನತಿಗಳನ್ನೇ ಬೋಧಿಸುತ್ತಿದ್ದು ಅದರಂತೆ ಅವನು ಕೃತಿಗಳನ್ನೇ ಮಾಡಿದ್ದರಿಂದ ಅವನಿಗೆ ಈ ನಾಮಗಳು ಸರ್ವಥಾ ಸಾರ್ಥಕಗಳಾಗಿರುವವು.

ಬಸವೇಶನ ರಾಜನೀತಿಯು ಚಾಣಕ್ಯನ ರಾಜನೀತಿಗಿಂತಲೂ ಬಹು ಉಚ್ಚದರ್ಜೆಯುಳ್ಳದ್ದು. ಯಾಕಂದರೆ ಇವನು ಚಾಣಕ್ಯನಂತೆ ಸ್ವಾರ್ಥಿಯಲ್ಲ, ಸ್ವಾರ್ಥಾಪಮಾನಗಳಿಂದ ಪ್ರೇರಿತನೂ ಅಲ್ಲ. ಪೇಷ್ವಾದಿಗಳಂತೆ ಒಬ್ಬರ ರಾಜ್ಯ ಕಸುಕೊಳ್ಳಬೇಕೆಂಬ ದುರಾಶೆಯುಳ್ಳ ಕುಟಿಲನೂ ಅಲ್ಲ. ಆದರೆ ಲೋಕದಲ್ಲಿ ರಾಜನಿಂದ ಅನ್ಯಾಯವಾಗದಂತೆ ಪ್ರಜಾಸಮ್ಮತಿಪೂರ್ವಕ ರಾಜ್ಯದಾಡಳತೆ ನಡೆದು ರಾಜಪ್ರಜೆಗಳೀರ್ವರೂ ಸುಖದಿಂದಿರಬೇಕೆಂಬುವದೇ ಬಸವೇಶನ ಮುಖ್ಯ ರಾಜನೀತಿಯ ತತ್ವವು. ಚಾಣಕ್ಯನು ಮಹಾ ಕ್ರೂರನು ಮತ್ತು ತನ್ನಪಮಾನದುದ್ದಿಶ್ಯ ನವನಂದಾದಿಗಳನ್ನು ಕೊಲ್ಲುವ ಆತ್ಮಹಿಂಸಾ ಪ್ರೇರಿತ ರಾಕ್ಷಸೀಕೃತಿಯುಳ್ಳವನು ಮತ್ತು ಧರ್ಮಾಧರ್ಮ ಪಾಪಪುಣ್ಯಾದಿಗಳ ವಿಚಾರರಹಿತನು. ಆದರೆ ಯಾರಾದರೊಂದುವೇಳೆ ತಪ್ಪು ತಿಳುವಳಿಕೆಯಿಂದ ಬಸವೇಶನು ಬಿಜ್ಜಳನನ್ನು ಕೊಲ್ಲಿಸಿದನೆಂದು ರಾಜದ್ರೋಹವನ್ನು ಅವನ ಮೇಲೆ ಆರೋಪಿಸಬಹುದು. ಈ ಹಿಂಸಾವೃತ್ತಾಂತವು ಬಸವೇಶನಿಗೆ ಸ್ವಪ್ನದಲ್ಲಿಯೂ ಗೊತ್ತಿರಲಿಲ್ಲ. ಯಾರೋ ಧರ್ಮದ ಮರಭಿಮಾನದಿಂದ ಪ್ರೇರಿತರಾಗಿ ಕೊಂದರು. ಅಂತೂ ಕೊಂದವರು ಮಾತ್ರ ವೀರಶೈವರು. ಆದರೆ ಇಷ್ಟರಿಂದಲೇ ಬಸವೇಶನಿಗೆ ಆ ಕಲಂಕವು ಹತ್ತಲಾರದು. ರಾಜ್ಯದಾಶೆಯಿಂದ ಬಸವೇಶನು ತಾನಾಗಿಯೇ ಬಿಜ್ಜಳನನ್ನು ಕೊಲ್ಲಿಸಿದ್ದರೆ ಬಿಜ್ಜಳನು ಸತ್ತನೆಂದು ಕೇಳಿದಾಕ್ಷಣಕ್ಕೆ ತನ್ನಲ್ಲಿ ಗುಪ್ತದಿಂದ ಕಾದಿರುವ ಒಂದು ಲಕ್ಷ ತೊಂಭತ್ತಾರು ಸಾವಿರ ಮಹಾಸೈನಿಕರೊಂದಿಗೆ ಮುತ್ತಿಗೆ ಹಾಕಿ ತಾನು ರಾಜನೆಂಬ ಜಯಭೇರಿಯನ್ನು ಹೊಡೆಯಿಸುತ್ತಿದ್ದನು. ಆದರೆ ಹಾಗೆ ಮಾಡದೆ ಅವನು ಸತ್ತಾಕ್ಷಣಕ್ಕೆ ನಿರಪೇಕ್ಷ ಬುದ್ಧಿಯಿಂದ ದುಃಖಿತನಾಗಿ ಮಂತ್ರಿಪದವನ್ನು ಸಹ ತ್ಯಾಗಮಾಡಿ ಆ ಸ್ಥಳವನ್ನೇ ಬಿಟ್ಟು ಹೊರಟುಹೋದನೆಂಬ ವಾರ್ತೆಯೇ ಔದಾರ್ಯದ್ಯೋತಕವು.

ಇನ್ನು ಲಿಂಗಾಂಗಿ ಧರ್ಮಪ್ರಚಾರ ಮಾಡಿದನೆಂದಾಕ್ಷಣ ಇವನು ದುಷ್ಟನೆನ್ನಬಹುದೇ? ಹಾಗಲ್ಲ. ಅಶೋಕ, ಅಕ್ಬರಾದಿಗಳು ಸ್ವಧರ್ಮಪ್ರಚಾರವನ್ನು ಮಾಡುತ್ತ ರಾಜ್ಯವನ್ನಾಳಿದರು. ಅವರು ಮಹಾ ಶ್ರೇಷ್ಠಪುರುಷರೆಂದು ಇತಿಹಾಸಕಾರರಿಂದ ಹೇಗೆ ವರ್ಣಿಸಲ್ಪಟ್ಟಿರುವರೋ ಅದರಂತೆ ಬಸವೇಶನು ವಿಶ್ವಾತ್ಮಾ, ವಿಶ್ವಕುಟುಂಬಿಯಾದ್ದರಿಂದ ಮಹಾ ಶ್ರೇಷ್ಠಪುರುಷನೆಂತಲೇ ಹೇಳಬಹುದು.

ರಾಷ್ಟ್ರೋನ್ನತಾದಿಗಳಿಗೆ ಮುಖ್ಯ ಕಾರಣವು "ಸರ್ವಂ ಧರ್ಮಮೂಲಂ" ಎಂಬುವ ನೀತಿವಾಕ್ಯದಂತೆ ಸರ್ವವೂ ಧರ್ಮೋನ್ನತಿಯಿಂದಲೇ ಆಗುವದೆಂದು ಕಂಡುಹಿಡಿದು ಆ ಧರ್ಮಸ್ಫೂರ್ತಿಯಿಂದ ಪ್ರೇರಿತನಾಗಿ ಮಹಾ ಸೌಮ್ಯವರ್ತನದಿಂದಲೇ ಸರ್ವವನ್ನೂ ಸಾಧಿಸಿದನು. ಇಂತಹ ಲೋಕೋತ್ತರ ರಾಜನೀತಿಜ್ಞನೂ, ಧರ್ಮವೀರನೂ ಆದ ಬಸವೇಶನನ್ನು ತನ್ನ ಗರ್ಭದಿಂದ ಕೊಟ್ಟ ಭರತ ಭೂಮಾತೆಯೇ ಧನ್ಯಳು. ಅಂಥ ಧರ್ಮವೀರ ಪುರುಷನಿಂದ ಅಲಂಕೃತವಾದ ಲಿಂಗಾಂಗಿ ಧರ್ಮವೇ ಮಹಾಧನ್ಯ, ಮಹಾಧನ್ಯ.

ಶ್ರೀ ಶಾಂತವೀರ ಶಿವಾಚಾರ್ಯರು—ಕಲ್ಬುರ್ಗಿ ಚೌದಾಪುರಿ ಹಿರಿಯ ಮಠದವರು. ಇವರು ಕವಿಗಳು. ಕುಷ್ಟಗಿ ಹಿರಿಯಮಠದ ಚನ್ನಬಸವಸ್ವಾಮಿಗಳ ಪುರಾಣವನ್ನು ರಚಿಸಿರುತ್ತಾರೆ. ಪುರಾಣದಾದಿಯಲ್ಲಿ—

ಬಸವನಾಮುವ ನೆನೆದು ಹೃದಯದೆ । ವೆಸನದೂರರು ಬೊಮ್ಮ ನೊದ ।
ಲಾದ ಸಮ ಶರಣರು । ಸುಖವ ಪಡೆದಾ ಬಸವ ಪೆಸರನ್ನೇ ।
ವಸುಧೆಯೋಳ್ ಧರಿಸಿಪ್ಪ ಶುಭಪುರಿ । ಬಸವರಾಜನ ದಿವ್ಯನಾಮುವ ।
ರಸವನೆ ದಣಿವೊಲು ನುತಿಪೆ ಕೇಳ್ವೈ ಮನದೊಳನವರತ ॥

ಪಂಡಿತ ಬಸವಪ್ಪಶಾಸ್ತ್ರಿಗಳು, ಮುಸ್ಕಿ—ಇವರು ಉಭಯ ಭಾಷೆಗಳಲ್ಲಿಯೂ ಕವಿತೆಗಳನ್ನು ಬರೆದಿದ್ದಾರೆ. ಕರಿಬಸವ ಪುರಾಣ, ನಂದೂರು ಹಿರಿಯಮಠದ ಪಟ್ಟದ ಸ್ವಾಮಿಗಳ ಪುರಾಣ, ಘನಮಠಾಚಾರ್ಯರ ಪುರಾಣ, ನೀತಿಶತಕ ಮೊದಲಾದ ಗ್ರಂಥಗಳನ್ನು ಬರೆದಿರುತ್ತಾರೆ. ಇವರು ಯಾದಗಿರಿಯಲ್ಲಿ ಹೊರಡುತ್ತಿದ್ದ ಧರ್ಮಸಂಜೀವಿನೀ ಎಂಬ ಮಾಸಿಕ ಪುಸ್ತಕಕ್ಕೆ ಕೆಲವು ದಿನಗಳವರೆಗೆ ಸಂಪಾದಕರೂ ಆಗಿದ್ದರು. ಇವರ ಕನ್ನಡ ಕವಿತ್ವವು ಮನೋಹರವಾಗಿದೆ. ಇವರಿಗೆ ಕವಿತಾ ಶಕ್ತಿಯು ಚೆನ್ನಾಗಿದ್ದು, ಇವರ ಶೈಲಿ ಧಾರಾಪ್ರವಾಹದಂತೆ ನಿರರ್ಗಳವಾಗಿರುತ್ತದೆ.

ಕರಿಬಸವ ಪುರಾಣದಲ್ಲಿ—

ಮಾದರಸ ಮಾದಲಾಂಬೆಯರ ಸುತನಾಗಿ ಗುರು ।
ಬೋಧಾಮೃತವ ಪಾನಮಾಡಿ ಗಂಗಾವಧುವ ।
ಸಾದರದಿ ಕೈವಿಡಿದು ಕಲ್ಯಾಣದರಸ ಬಿಜ್ಜಳಗೆ ।
ವರಮಂತ್ರಿಯೆನಿಸಿ ಮಾದೇವನಿಂ ಬಂದ ಲಿಪಿಯನೋದುವದಾದಿ ।
ಯಾದ ಮಹಿಮೆಗಳ ತೋರ್ದಮಿತ ಚರಸೇವೆಯ ।
ಮೇದಿನಿಗೆ ಮಿಗಿಲೆನಿಸಿ ಮೆರೆದ ಬಸವೇಶನಡಿದಾವರೆಗೆ ಶರಣೆಂಬೆನು ॥

ಶ್ರೀ ಚನ್ನಕವಿಗಳು ಕವಿರತ್ನ ಕೊಪ್ಪಳ ಜಿಲ್ಲೆಯಲ್ಲಿರುವ ದ್ಯಾಂಪುರದವರು—ಇವರು ಸುಪ್ರಸಿದ್ಧ ಕವಿಗಳು. ಅನೇಕ ಪುರಾಣಗಳನ್ನು ಬರೆದಿರುತ್ತಾರೆ.

### ಇವರು ಬರೆದ ಗ್ರಂಥಗಳು :

೧. ಹೇಮರೆಡ್ಡಿ ಮಲ್ಲಮ್ಮನ ಪುರಾಣ
೨. ಹಾಲಕೇರಿ ಅನ್ನದಾನಮಹಾಸ್ವಾಮಿಗಳ ಪುರಾಣ
೩. ನಾಲ್ವತವಾಡದ ವೀರೇಶ ಪುರಾಣ
೪. ಶ್ರೀ ಹುಚ್ಚೇಶ್ವರ ಪುರಾಣ
೫. ಕಂಬಳಿಹಾಳ ದೊಡ್ಡಬಸವೇಶ್ವರ ಪುರಾಣ
೬. ಇಳಕಲ್ಲ ಮಹಾಂತಸ್ವಾಮಿಗಳ ಪುರಾಣ
೭. ಮುಳಗುಂದಬಾಲಲೀಲಾಮಹಂತೇಶ್ವರ ಪುರಾಣ
೮. ಹಾನಗಲ್ಲ ಕುಮಾರೇಶ್ವರ ಪುರಾಣ
೯. ಶಿರಹಟ್ಟಿಯ ಫಕೀರಸ್ವಾಮಿಗಳ ಚರಿತ್ರೆ

### ಕೆಲವು ಸಣ್ಣ ಗ್ರಂಥಗಳನ್ನೂ ರಚಿಸಿರುತ್ತಾರೆ

೧೦. ಕಾಲಕಾಲೇಶ್ವರ ಶತಕ
೧೧. ಕೊಟ್ಟೂರೇಶ್ವರ ವಚನ
೧೨. ಅನ್ನದಾನೀಶ್ವರ ಜೋಗುಳ ಪದ
೧೩. ಗವಿಸಿದ್ಧೇಶ್ವರ ಮಂಗಲಗೀತೆಗಳು
೧೪. ನಲ್ನುಡಿ
೧೫. ಕುಮಾರೇಶ್ವರ ಶತಕ
೧೬. ಕಲ್ಲಿನಾಥ ಶತಕ
೧೭. ಬಸವ ತ್ರಿವಿಧಿ
೧೮. ಬೀಗತಿಯರ ಹಾಡು
೧೯. ಮಂತ್ರರಹಸ್ಯ
೨೦. ಮನೋಬೋಧೆ
೨೧. ಸದಾಶಿವ ಲೀಲೆ

ಹೇಮರೆಡ್ಡಿ ಮಲ್ಲಮ್ಮನ ಪುರಾಣದಲ್ಲಿ—

ಪರಶಿವನ ಚಿದ್ಧರ್ಮವೇ ಮೂರ್ತಿಗೊಂಡು ಶಿವ ।
ಶರಣರಾಳ್ತನವಾಂತು ಮೃಡಭಕ್ತಿಯಂ ತೋರಿ ।
ಧರೆಯನುದ್ಧರಿಸಿ ಮೆರೆದಾದಿ ಬಸವನ ಚರಣಮಿರಲಿ ಮನ್ಮಾನಸದೊಳು ॥

ಮಹಂತೇಶ ಪುರಾಣದಲ್ಲಿ—

ಶಿವಭಕ್ತಿ ಪಥವನಾಚರಿಸಿ ತೋರ್ದವನಿಯೊಳು
ಶಿವತತ್ವದನುವನೆಲ್ಲರಿಗರುಹಿ ಮಹಿಮೆಯಿಂ ।
ಶಿವಮತವನುದ್ಧರಿಸಿದೆರಡನೆಯ ಶಂಭುವೆನಿಸಿದ ಬಸವ ದಂಡೇಶನೇ ॥
ವಿವರಿಸಲು ನೀನೆ ಜಗದಾದಿ ದೇಶಿಕನಿರುವೆ ।
ತ್ರಿವಿಧ ವಸ್ತುವನೊಪ್ಪಿ ತ್ರಿವಿಧ ಪ್ರಸಾದಮಂ ।
ಸವಿವ ಸೌಖ್ಯವನುಗ್ರಹಿಸು ನಿನ್ನಡಿಗಳಂ ಮರೆಹೊಕ್ಕೆನಮರವಂದ್ಯ ॥

ಬಾಲಲೀಲಾ ಮಹಂತೇಶ್ವರ ಪುರಾಣದಲ್ಲಿ—

ಹರನಾಜ್ಞೆಯಿಂ ಪೊತ್ತು ಭೂತಲದೊಳವತರಿಸಿ ।
ಪರಮ ಭಕ್ತಿ ಜ್ಞಾನವಿರತಿಗಳನಾಚರಿಸಿ
ಹಿರಿದೆನಿಪನಂತ ಮಹಿಮೆಗಳನುರೆ ಬಿತ್ತರಿಸಿ ಷಟ್‌ಸ್ಥಲಾಮಲಶಾಸ್ತ್ರದ ॥
ತಿರುಳನೆಲ್ಲವನಚ್ಚಗನ್ನಡದ ತಿಳಿನುಡಿಯೊ ।
ಳೊಡೆದು ಶಿವಮತವನುದ್ಧರಿಸಿ ಸಲಹಿದ ಬಸವ
ಗುರುಚನ್ನಬಸವೇಶ್ವರಾಲ್ಲಮಾದಿ ಪ್ರಮಥರಡಿಗಳಿಗೆರ್ಕೆನ್ನ ಶಿರದೆ ॥

ವೀರಪ್ಪ ಯಗಟಿ, ಬಿ.ಎ., ಎಲ್‌ಎಲ್.ಬಿ., ಹಾವೇರಿ—ಇವರು ವೀರಶೈವ ತತ್ವವನ್ನು ಬಲ್ಲಂತಹ ವಕೀಲರು. ವಿವಿಧ ಮಾಸಿಕ ಪುಸ್ತಕಗಳಲ್ಲಿ ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ವೀರಶೈವ ಧರ್ಮದ ಬಗ್ಗೆ ಅನೇಕ ಲೇಖನಗಳನ್ನು ಬರೆದಿರುತ್ತಾರೆ.

ಜಗತ್ತಿನ ಜೀವಜ್ಯೋತಿಗಳ ಮಣಿಮಾಲಿಕೆಯಲ್ಲಿ ಬಸವೇಶ್ವರನು ಮಧ್ಯದಲ್ಲಿರುವ ದಿವ್ಯರತ್ನದಂತೆ ಉಜ್ವಲಿಸುತ್ತಿರುವನು. ಪ್ರಸಿದ್ಧ ಧರ್ಮಪ್ರಕಾಶರಾದ ಏಸುಕ್ರಿಸ್ತ, ಬುದ್ಧ, ಮಹಮ್ಮದ್ ಪೈಗಂಬರ್, ಝೋರೋಷ್ಟರ, ಶಂಕರ, ರಾಮಾನುಜ, ಮಾಧ್ವ ಮೊದಲಾದವರ ಪಂಕ್ತಿಯಲ್ಲಿಯೇ ಬಸವೇಶ್ವರನು ಬರುವನು. ಆದರೆ ಬಸವೇಶ್ವರನ ವಿಶಿಷ್ಟತ್ವವೇನೆಂದರೆ ಈತನು ಧರ್ಮಪ್ರಕಾಶಕನಾಗಿದ್ದಂತೆಯೇ ಸಮಾಜ ಸುಧಾರಕನೂ, ಅಂತ್ಯಜೋದ್ಧಾರಕನೂ, ನೀತಿಯನ್ನು ನೆಲೆಗೊಳಿಸಿದವನೂ, ಶೀಲಾಚಾರಗಳನ್ನು ಬಿತ್ತಿ ಬೀರಿದವನೂ, ಅಸತ್ಯವನ್ನು ನಿರ್ವಂಚನೆಯಿಂದ ಖಂಡಿಸಿದವನೂ, ಸತ್ಯವನ್ನು ಎತ್ತಿ ಹಿಡಿದವನೂ, ಸ್ತ್ರೀಯರಿಗೆ ಸಮಾನತ್ವವನ್ನು ಕಲ್ಪಿಸಿದವನೂ, ನಿಷ್ಕಲ ಹೃದಯಿಯೂ, ನಿಸ್ವಾರ್ಥಿಯೂ, ಅನಾಥ ರಕ್ಷಕನೂ, ಸಾಧುಜನರ ಸಹಕಾರಿಯೂ, ಶಿವಶರಣರ ಸೇವಕನೂ, ಗುರುಲಿಂಗ ಜಂಗಮದಲ್ಲಿ ನಿಶ್ಚಲವಾದ ನಿಷ್ಠೆಯುಳ್ಳವನೂ, ಶಿವಭಕ್ತರ ಸಲುವಾಗಿ ಪ್ರಾಣವನ್ನು ಸಹ ತೊರೆಯಲು ಸಿದ್ಧನಾದವನೂ, ಅನನ್ಯವಾದ ಭಕ್ತಿಯಲ್ಲಿ ಬಲಾಢ್ಯನೂ, ಕರ್ತವ್ಯಶಾಲಿಯೂ, ಮಹಾಮಹಿಮನೂ, ಕೈಗಾರಿಕೆ, ಉದ್ಯೋಗ

ಮೊದಲಾದ ಕಾಯಕಗಳಿಗೆ ಯೋಗ್ಯವಾದ ಮರ್ಯಾದೆ ಕೊಟ್ಟವನೂ, ಅತ್ಯಂತ ಕುಶಲನಾದ ರಾಜಕಾರಣ ಪಟುವೂ ಆಗಿದ್ದನು. ಬಸವೇಶ್ವರನು ವೀರಶೈವ ಮತೋದ್ಧಾರ ಮಾಡಿದನೆಂಬ ಅಭಿಮಾನದಿಂದ ಇಂತಹ ವಿಶಿಷ್ಟ ಗುಣಗಳನ್ನು ಆತನಿಗೆ ಅರ್ಪಿಸಿರ ಬಹುದೆಂದು ವಾಚಕರು ತಿಳಿಯಬೇಕಾದುದಿಲ್ಲ. ಬಸವೇಶ್ವರನ ವಚನ ಗ್ರಂಥವನ್ನು ಓದುವವರು ಪರಮತೀಯರಾದರೂ, ಸಿಡಿಲಿನಂತೆ ಘುಡು ಘುಡಿಸುತ್ತಿರುವ ಆತನ ವಚನಗಳಿಂದ ಆತನ ಮಹಿಮೆಯನ್ನು ಸಹಜವಾಗಿ ನಿರ್ಧರಿಸಬಹುದು. ಆತನ ಘನತೆಗೆ ಆತನ ವಚನವೇ ಸಾಕ್ಷಿ. ಇನ್ನುಳಿದ ಶಿವಶರಣರು ಬಸವಣ್ಣನನ್ನು ತಮ್ಮ ವಚನಗಳಿಂದ ಹಾಡಿ ಹರಿಸಿರುವರು. ಬಸವನ ನಾಮವು ವಸುಧೆಗೆ ಪ್ರೇಮಮಯವಾಗಿರುವದಲ್ಲಿ ಬಸವಣ್ಣನು ವೀರಶೈವರಿಗೆ ಮುದ್ದಿನ ಕಾಣಿಕೆಯಾಗಿರುವನು. ಭಕ್ತಿಯೋಗಿಗಳಿಗೆ ಭಾಗ್ಯದೇವತೆಯಾಗಿರುವನು. ನೀತಿಯ ನುಡಿಯನ್ನು ಬಯಸುವವರಿಗೆ ಕಬ್ಬಿನ ಕಣಿಯಾಗಿರುವನು. ಸಮಾಜ ಸುಧಾರಕರಿಗೆ ಸಲಹೆಗಾರನಾಗಿರುವನು. ತತ್ವಸಾಧಕರಿಗೆ ಕಲ್ಪವೃಕ್ಷವಾಗಿರುವನು.

ಬಸವಣ್ಣನವರು ಭಾಷಾಪಂಡಿತರಲ್ಲ, ಭಾಷಾಜನಕರು. ಅವರ ವಚನಗಳ ಕನ್ನಡ ನುಡಿಯು ಎಷ್ಟು ವೀರ್ಯವತ್ತಾಗಿರುವದೆಂಬುದನ್ನು ತೋರಿಸುತ್ತದೆ. ಅವರ ಹೃದಯವು ಕರಗಿ ನೀರಾಗಿ ಅದು ವಚನಗಳ ರೂಪದಲ್ಲಿ ಹರಿದಿದೆ. ಆ ಪ್ರವಾಹದಲ್ಲಿ ಅವರ ವಿಚಾರಗಳು ಭೋರ್ಗರೆಯುತ್ತವೆ. ತತ್ವರತ್ನಗಳು ಥಳಥಳಿಸುತ್ತವೆ. ಆ ವಚನಗಳಲ್ಲಿ ನಾವಿನ್ಯವು ಮಿನುಗುತ್ತಿದೆ. ತೇಜವು ತುಳುಕುತ್ತಿದೆ. ಅವು ಅವರ ಮಿದುವಾದ ಒಳ ಎದೆಯ ಒಡನುಡಿಗಳು. ನಂಜಿನ ನಾಲಿಗೆಯ ಬಿರುನುಡಿಗಳಲ್ಲ. ಈ ವಚನಗಳಲ್ಲಿ ಅವರ ಅಂತಃಕರಣವು ಹೆಪ್ಪುಗಟ್ಟಿರುತ್ತದೆ. ಸಾಧುವೃತ್ತಿಯ ಸೋನೆಯು ಸುರಿಯು ತ್ತಿದೆ. ಅನುಭವದ ಕಾಠಿಣ್ಯವು ಕಂಗೊಳಿಸುತ್ತಿದೆ. ಅವರ ಆಚಾರದ ಕೆಚ್ಚು ಅಲ್ಲಿ ಕಾಣುತ್ತದೆ. ವಿಚಾರದ ಅಚ್ಚು ಅಲ್ಲಿ ಅಚಲವಾಗಿದೆ. ಈಗ ಹಿಂದೂದೇಶದಲ್ಲಿ ಪ್ರತಿ ವರ್ಷವೂ ಸೇರುತ್ತಿರುವ ಸಾಮಾಜಿಕ ಸಭೆಗಳೂ, ಹಿಂದೂ ಸಮಾಜ ಸುಧಾರಕರೂ, ಬಸವನು ಮಾಡಿದ ಸುಧಾರಣೆಗಳಿಗಿಂತ ಹೆಚ್ಚಿನ ಕಾರ್ಯವನ್ನು ಮಾಡಲಾರರು. ಹಿಂದೂದೇಶದ ಇತಿಹಾಸ ಹಿಂದುಗಳ ನಡಾವಳಿ, ಅವರ ಸಂಸ್ಕಾರ ಮೊದಲಾದವುಗಳಲ್ಲಿ ಬಹು ಪರಿಚಯವುಳ್ಳ ಸರ್ ಜೇಮ್ಸ್ ಕ್ಯಾಂಬೆಲ್ಲರು ಹೇಳಿರುವ ಹಾಗೆ ಹಿಂದೂದೇಶದಲ್ಲಿ ಸದ್ಯದ ಸಮಾಜ ಸುಧಾರಕರು ಬಸವನು ಪೇಳಿರುವದನ್ನೇ ಪುನಃ ಹೇಳುತ್ತಲೂ ಮತ್ತು ಬಸವನ ವಿಚಾರವನ್ನೇ ಬೀರುತ್ತಲೂ ಇರುವರು.

ಗುರುಲಿಂಗಸಿದ್ಧ ಕವಿಗಳು—ಇವರು ಶರಣು ಬಸವೇಶ್ವರ ಪುರಾಣವನ್ನು ಬರೆದಿರು ತ್ತಾರೆ.

> ಮೇದಿನಿಗೆ ಭಕ್ತಿಯಂ ಬೋಧಿಸಲ್ಕೆಂದು ವರ ।
> ಮಾದರಸ ಮಾದಲಾಂಬೆಯರಿಂದ ಜನಿಸಂ ।
> ಪಾದಿಸುತ ವರವೀರಶೈವಮಂ ಪರಸಮಯ ಭೇದಿಸುತೆ ಸದ್ಭಾವದಿಂ ।
> ಮೋದುವಂಬೀರುತಂತಗಣಿತ ಪವಾಡಮಂ ।
> ಸಾಧಿಸುತ ಕಪ್ಪಡಿಯ ಸಂಗಮೇಶನೊಳೈಕ್ಯ ।
> ಮಾದ ಗುರು ಬಸವರಾಜರ ಪಾದಮಿರಲೆನ್ನ ಹೃದಯಪದ್ಮದೊಳು ನಿರುತಾ ॥

ಮಲ್ಲಿಕಾರ್ಜುನಪ್ಪ ರೈನಾಪುರ, ಬಿ.ಎ.—ಇವರು ಮೇಘದೂತ, ಶಾಕುಂತಲಾ, ಲಿಂಗರಾಜ ವಿಜಯ ಈ ಮೂರು ಗ್ರಂಥಗಳನ್ನು ಉತ್ತಮ ರೀತಿಯಿಂದ ಬರೆದು ಕನ್ನಡಿಗರ ಮೆಚ್ಚುಗೆಗೆ ಪಾತ್ರರಾಗಿರುತ್ತಾರೆ. ಸರ್ಕಾರಿಯ ನೌಕರಿಯಲ್ಲಿದ್ದು ನಿವೃತ್ತಿ ಹೊಂದಿದವರಾದರೂ ಸಾಹಿತ್ಯದಲ್ಲಿ ಇಷ್ಟು ಅಭಿರುಚಿಯಿಂದ ಕಾರ್ಯ ಮಾಡು ತ್ತಿರುವದು ಪ್ರಶಂಶನೀಯವಾಗಿರುತ್ತದೆ.

ಲಿಂಗರಾಜ ವಿಜಯದಲ್ಲಿ—

ನಿರುಪಮ ವೀರಶೈವಮತಕಂಟಿದ ಕುಂದುಕೊರತೆಯೆಲ್ಲಮಂ ।
ಸರಿಪಡಿಸುತ್ತೆ ಮತ್ತಮದಕೀಯುತುದಾತ್ತ ವಿನೂತ್ನ ಪುಷ್ಟಿಯಂ ।
ಸರಸತಿವೆಣ್ಗೆಯುಂತುಡಿಸುತುಂ ವಚನಾಭರಣಂಗಳಂ ವಸುಂ ।
ಧರೆಪೊಗಳ್ವಂತೆ ಬಾಳ್ದ ಬಸವೇಶ್ವರನೀಗೆಮಗೀಶಭಕ್ತಿಯಂ ॥

ಹಳಪೇಟಿ ಚಿಂತಾಮಣಿಯವರು—ಇವರು 'ಯುಗಪ್ರವರ್ತಕ ಬಸವಣ್ಣನವರು' ಎಂಬುವ ಗ್ರಂಥ ಬರೆದಿರುತ್ತಾರೆ. ಬಸವಣ್ಣನವರ ಬಗ್ಗೆ ಹೊಸ ದೃಷ್ಟಿಯಿಂದ ಲಪ್ರಬಂಧ ಗಳನ್ನು ಬರೆದು ಅದಕ್ಕೆ 'ಯುಗಪ್ರವರ್ತಕ ಬಸವಣ್ಣ' ನವರೆಂದು ಹೆಸರಿಟ್ಟಿರುತ್ತಾರೆ. ಸಫಲ ಜೀವನ ರಹಸ್ಯ ಎಂಬುವ ಲೇಖನದಲ್ಲಿ—

ಜೀವನ ಸಾಫಲ್ಯಕ್ಕಾಗಿ ಉಪಯೋಗವಾಗುವ ಅನೇಕ ಸಾಧನಗಳಲ್ಲಿ ತಮತಮ ಗುಚಿತವಾದ ಸ್ಥಾನಗಳನ್ನೆತ್ತಿ ಅನೇಕರು ತೋರಿಸುತ್ತಿದ್ದರೂ ಬಸವಣ್ಣನವರು ತೋರಿಸಿದ ಸಾಧನದಷ್ಟು ಗಟ್ಟಿಮುಟ್ಟಾದ ಸಾಧನ ಈವರೆಗೆ ಸಿಕ್ಕಿಲ್ಲ; ಮುಂದೆ ಸಿಕ್ಕುವ ಲಕ್ಷಣವಿಲ್ಲ. ಸಾಧ್ಯ ಮುಖ್ಯವಾಗಿರುವಾಗ ಸಾಧನಕ್ಕೆ ಚಿಂತೆಯೇಕೆ? ನಿಜ, ಎಷ್ಟೋಸಲ ಬರಬಹು ದಾದ ಕಲ್ಪನೆ ಸಾಧ್ಯವು ಸಾಧಿಸಿದಾಗ ಅದರ ಸಂಗಡ ಸಾಧನವೂ ಮಹತ್ವದ್ದಾಗಿ ಎಣಿಕೆಯಾಗುತ್ತಿರುವಾಗ ಸಾಧನಕ್ಕಾಗಿ ಹಟವೇಕೆ? ಅದೂ ನಿಜ, ಆದರೆ ಒಂದು ಮುಖ್ಯವಾದ ಮಾತನ್ನು ಮರೆತು ನಡೆಯುವ ದುರ್ಧರ ಪ್ರಸಂಗ ಇಲ್ಲಿದೆ. ಒಳ್ಳೆಯದನ್ನು ಪಡೆಯುವದಕ್ಕಾಗಿ ಒಳ್ಳೆಯದನ್ನೇ ಸಾಧನವನ್ನಾಗಿ ಉಪಯೋಗಿಸಬೇಕಲ್ಲವೇ? ಒಂದು ವೇಳೆ ಒಳ್ಳೆಯದಕ್ಕೆ ಕೆಟ್ಟಸಾಧನವನ್ನು ಉಪಯೋಗಿಸಿದಾಕ್ಷಣಕ್ಕೆ ಆ ಸಾಧನ ಒಳ್ಳೆಯ ದಾಗಬಹುದೇ? ಅಂದಮೇಲೆ ಸಾಧ್ಯ ಮುಖ್ಯವೆಂಬ ಮಾತು ಎಲ್ಲಿ ಬಂತು? ನಿಜವಾದ ಮಾತೆಂದರೆ ಸಾಧ್ಯ ಮುಖ್ಯವಲ್ಲ; ಸಾಧನ ಮುಖ್ಯವೆಂಬ ಬಸವಣ್ಣನವರ ತತ್ವವೇ ಹೆಚ್ಚು ಸಯುಕ್ತಿಕವಾದದ್ದು. ಒಳ್ಳೆಯ ಕಾರ್ಯದ ಫಲ ಕೆಟ್ಟದೆಂದಾದರೂ ಆಗಬಹುದೇ? ಗೋದಿಯನ್ನು ಬಿತ್ತಿದರೆ ಮುಳ್ಳುಗಳ್ಳಿ ಬೆಳೆದು ಬರಬಹುದೇ? ಕಾರ್ಯದ ಫಲ ಬರ ಬೇಕಾದಲ್ಲಿ ವೇಳೆ ಹಿಡಿಯಬಹುದು. ಒಂದುಸಲ ಕೆಟ್ಟ ಸಾಧನದಿಂದ ಒಳ್ಳೆಯದರ ಫಲಾಭಾಸವು ತೀವ್ರ ಸಾಧಿಸಿತೆಂದಿಟು ಕೊಂಡರೂ ಅದು ಒಳ್ಳೆಯದರಲ್ಲಿ ಎಣಿಕೆ ಸಲ್ಲದು. ಯಜ್ಞದಂತಹ ಪವಿತ್ರಕ್ಕಾಗಿ ಹೋತಿನ ಬಲಿ ಕೊಡುವಂತಹ ಅಧಮ ಸಾಧನವು ಉತ್ತಮವಾಗಬಲ್ಲದೆ? ಅಂತೆಯೇ ಅದರ ವಿರುದ್ಧ ಬಸವಣ್ಣನವರು ಬಂಡನ್ನೆಬ್ಬಿಸಿದರು. 'ಶಾಸ್ತ್ರವನ್ನೋದಿದವರ ಮುಂದೆ ಅಳು ಕಂಡೆಯಾ ಹೋತೆ?' ಎಂದು ಅನುತಾಪ ವೃತ್ತ ಗೊಳಿಸಿದರು. 'ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ' ಕರ್ಮ ಫಲ ಬಿಟ್ಟು ಕರ್ಮ ಮಾಡು ಅಂದರೆ ಕರ್ಮಫಲ ಮುಖ್ಯವಲ್ಲ; ಕರ್ಮ ಮುಖ್ಯವೆಂದು ಎಂದೋ ಹೇಳಿರುವಾಗ ಬಸವಣ್ಣನವರು ಹೊಸದೇನನ್ನು ಹೇಳಿದರು? ಎಂದು ಕೇಳಬಹುದು. ಹಾಗೆ ಕೇಳುವಲ್ಲಿ ಒಂದಂಶವಿದೆ. ನಿಷ್ಕಾಮ ಕರ್ಮ ಮಾಡು; ಅದರಿಂದ ನಿನಗೆ

ಮುಕ್ತಿಯೆಂದು ಹೇಳಿದಂತೆ ಈವರೆಗಿನ ತಿಳಿವಳಿಕೆ ಇರುವಾಗ ಅದರಲ್ಲಿ ನಿಷ್ಕಾಮವೆಲ್ಲಿ ಬಂತು? ಮುಕ್ತಿಯ ಕಾಮನೆ ಇಲ್ಲಿಯೂ ಇದ್ದಂತಿಲ್ಲವೇ? ಬಸವಣ್ಣನವರು ನಿಷ್ಕಾಮ ಕರ್ಮದಿಂದ ಮುಕ್ತಿಯೆಂದು ಹೇಳದೆ ನಿಷ್ಕಾಮ ಕರ್ಮವೇ ಮುಕ್ತಿಯೆಂದು ಹೇಳಿದರು. ಕಾಯಕದಿಂದ ಕೈಲಾಸವೆಂದು ಹೇಳದೆ, ಕಾಯಕವೇ ಕೈಲಾಸವೆಂದು ಹೇಳಿರುತ್ತಾರೆ. ಈರೀತಿ ಸಾಧನವೇ ಮುಖ್ಯವೆಂದು ಒಪ್ಪಿದಾಗಲೂ ಕೂಡ ಕರ್ಮ ಒಂದೇ ಸಾಧನವೇಕೆ? ಇನ್ನುಳಿದ ಸಾಧನಗಳು ಹೆಚ್ಚಿನವುಗಳಾಗಿಲ್ಲವೇ? ಎಂಬ ವಾದವು ಎಷ್ಟೋ ಕಾಲದವರೆಗೆ ಇದ್ದಿರಬೇಕು. ಕರ್ಮಮಾರ್ಗಕ್ಕಿಂತಲೂ ಜ್ಞಾನಮಾರ್ಗ ಶ್ರೇಷ್ಠ, ಜ್ಞಾನಮಾರ್ಗಕ್ಕಿಂತಲೂ ಭಕ್ತಿಮಾರ್ಗ ಶ್ರೇಷ್ಠ ಎನ್ನುವ ತೀವ್ರ ವಾದಕ್ಕೂ ಕೊರತೆ ಇರಲಿಲ್ಲವೆನ್ನಿಸುತ್ತದೆ. ಜಾಣರೆಂಬುವರು ಜ್ಞಾನ-ಕರ್ಮಸಮುಚ್ಚಯದಿಂದಾದ ಆದರ್ಶ ಸಿದ್ಧಾಂತವನ್ನು ಭಕ್ತಿಯಿಂದ, ಅಚಲ ಶ್ರದ್ಧೆಯಿಂದ ಜೀವನ ರಂಗದಲ್ಲಿ ಆಚರಣೆಗೆ ತರುತ್ತಿದ್ದುದರಿಂದ ಮತಭೇದಗಳು ಬಹುಮಟ್ಟಿಗೆ ಶಕ್ತಿಗುಂದಿದವೆಂದು ಹೇಳಬಹುದು. ಮಹಾತ್ಮಾ ಬಸವಣ್ಣನವರಾದರೂ ಜ್ಞಾನಿಗಳಾಗಿದ್ದರು. ಅವರ ಜ್ಞಾನವೆಂದರೆ ಪುಸ್ತಕದ ಜ್ಞಾನವಾಗಿರಲಿಲ್ಲ. ವ್ಯಾವಹಾರಿಕ ಜಾಣತನದ ರೂಪ ಪಡೆದಿರಲಿಲ್ಲ. ಚತುರತೆಯ ಪರಾಸೀಮೆಯಾಗಿರಲಿಲ್ಲ. ಬಸವಣ್ಣನವರು ಭಕ್ತಿಭಾಂಡಾರಿಗಳಾಗಿದ್ದರು. ಆದರೆ ಅವರ ಭಕ್ತಿಗೆ ರೂಢಿಜನ್ಯ ಸಂಸ್ಕಾರಗಳ ಕಟುಕವಚವಿರಲಿಲ್ಲ. ಮನವನ್ನು ಆತ್ಮದಲ್ಲಿಟ್ಟು, ವಚನವನ್ನು ಆದರ್ಶ ಸಿದ್ಧಾಂತಗಳಲ್ಲಿಟ್ಟು, ಕಾಯಕವನ್ನು ಲೋಕಕಲ್ಯಾಣದಲ್ಲಿಟ್ಟು ಬಸವಣ್ಣನವರ ಕಾಯಕವೇ ಕೈಲಾಸವಾಗಿತ್ತು. ಲಿಂಗನಿಷ್ಠೆ ಪೂಜೆಯಲ್ಲಿ ಬಿಯ್ಯವಾಗಿತ್ತು. ಭಕ್ತಿ, ನಿಷ್ಠೆ, ಆಚರಣೆಯಲ್ಲಿ ಬಿಯ್ಯವಾಗಿತ್ತು. ಪ್ರಸಾದ ನಿಷ್ಠೆ ಬೆರಿಕೆಯಲ್ಲಿ ಬಿಯ್ಯವಾಗಿತ್ತು. ಒಂದೊಂದರ ನಿಷ್ಠೆ ಅಂದಂದಿಗೆ ಬಿಯ್ಯವಾಗಿತ್ತು. ಕೂಡಲಸಂಗಮದೇವ ತ್ರಿಜಗವನಾಳಿಕೊಂಡಿತ್ತು. ಸಾಧ್ಯದ ಸಿದ್ಧಿಗಿಂತಲೂ ಸಾಧನದ ಶುದ್ಧಿಯ ಕಡೆಗೇ ಹೆಚ್ಚು ಗಮನವಿತ್ತ ಬಸವಣ್ಣನವರು ಆರಿಸಿಕೊಂಡ ತತ್ವಗಳಾದರೂ ಸನಾತನವಾದವುಗಳು. ಸತ್ಯ, ದಯೆ, ಅಹಿಂಸೆ, ವಿಶ್ವ ಬಂಧುತ್ವ ಮೊದಲಾದ ಅವರ ತತ್ವಗಳನ್ನು ಯಾರೂ ತಮ್ಮವೆಂದು ಅಪ್ಪಬಹುದು. ಆದರೆ ಸದಿಚ್ಛೆಯಿಲ್ಲದ ಸಾಧನಗಳಂತೆಯೇ ಶೂನ್ಯ ಸದಿಚ್ಛೆಗಳು ಬೆಲೆ ಕಾಣದೆ ಹೋಗಬಹುದು. ಮುಖ್ಯ ಕಾರ್ಯವೆಂದರೆ ಅವುಗಳನ್ನು ಕಾರ್ಯರಂಗಕ್ಕೆ ಸುವ್ಯವಸ್ಥಿತವಾಗಿ ಇಳಿಸುವದು. ಅದರಲ್ಲಿಯೇ ನಿಜವಾದ ಜಾಣ್ಮೆ ಇದೆ. ಆ ಜಾಣ್ಮೆಯೇ ಬಸವಣ್ಣನವರನ್ನು ಅವತಾರಪುರುಷರನ್ನಾಗಿ ಮಾಡಿತ್ತು. ಅಥವಾ ಅವರು ಅವತಾರ ಪುರುಷರಿದ್ದರೆಂತಲೇ ಆ ಜಾಣ್ಮೆ ಅವರಲ್ಲಿ ಮನೆಮಾಡಿತ್ತೆಂದು ಹೇಳಿದರೂ ಸಲ್ಲುವದು.

ಶ್ರೀ ಎಂ. ಎಸ್. ಸರದಾರರು, ಬಾರ್-ಅಟ್-ಲಾ, ಬಿ.ಎ., ಆಕ್ಸ್‌ಫರ್ಡ್—ಇವರು ಅಖಿಲ ಭರತ ಖಂಡದ ವೀರಶೈವ ಮಹಾಸಭಾಧ್ಯಕ್ಷರಾಗಿದ್ದರಲ್ಲದೆ ಅಕ್ಕಲಕೋಟೆ, ಮುಧೋಳ ಮತ್ತು ಸವನೂರು ಹೈಕೋರ್ಟುಗಳ ನ್ಯಾಯಾಧೀಶರೂ ಆಗಿದ್ದು ವೀರಶೈವ ಸಮಾಜದ ಗಣ್ಯವ್ಯಕ್ತಿಗಳಲ್ಲಿ ಒಬ್ಬರಾಗಿರುತ್ತಾರೆ. ಲಿಂಗಾಯತ ಗೆಜೆಟ್ಟಿನ ಸಂಪಾದಕರೂ ಆಗಿದ್ದರು.

ಬಸವೇಶನ ಕಾಲದಲ್ಲಿ ಹಿಂದೂ ಸಮಾಜವು ಜಾತಿಭೇದದ ವಿಕೃತ ಸ್ವರೂಪದಿಂದ ಸ್ವಾರ್ಥಾಂಧತೆ, ಮೇಲುಕೀಳು ರೂಢಿಯ ಪ್ರಾಬಲ್ಯ ಮೊದಲಾದವುಗಳ ಮೂಲಕ ಶೋಚನೀಯ ಸ್ಥಿತಿಗೀಡಾಗಿದ್ದಿತು. ವೈದಿಕ ಶಾಸ್ತ್ರಗಳನ್ನು ಬ್ರಾಹ್ಮಣರು ಅತ್ತಿತ್ತ

ಎಳದಾಡಿ ಸಮಾಜದಲ್ಲಿ ತಮ್ಮ ಜಾತಿಯ ಶ್ರೇಷ್ಠತ್ವವನ್ನೇ ಸ್ಥಾಪಿಸಿದ್ದರು. ಧರ್ಮ ಶಾಸ್ತ್ರಗಳ ಹೆಸರಿನಿಂದ ಸುಳ್ಳು ಸಂಗತಿಗಳನ್ನು ಬರೆದು ಕರ್ಮಮಾರ್ಗವನ್ನೇ ಪ್ರಾಬಲ್ಯ ಗೊಳಿಸಿದರು. ಸಮಾಜದ ಕೆಳಗಿನ ಜನಸಮೂಹ ಮತ್ತು ಅಸ್ಪೃಶ್ಯರೇ ಮೊದಲಾದವರು ಭಯಂಕರವಾದ ಧಾರ್ಮಿಕ ನಿಯಮ ನಿರ್ಬಂಧಗಳಿಂದ ಗುಲಾಮರಂತೆ ಕಷ್ಟಜೀವಿ ಗಳಾಗಿದ್ದರು. ಅವರಿಗೆ ಜ್ಞಾನಾರ್ಜನೆಯ ಯಾವ ಸಾಧನೋಪಾಯಗಳನ್ನೂ ಉಂಟು ಮಾಡಿಕೊಡದೆ ಅವರು ಅಜ್ಞಾನಾಂಧಕಾರದಲ್ಲಿಯೂ, ದಾಸ್ಯವೃತ್ತಿಯಲ್ಲಿಯೂ ನಿರಂತರ ಬಳಲುವಂತೆ ಮಾಡಿದ್ದರು.

ಮತೋದ್ಧಾರಕ, ಸಮಾಜ ಸುಧಾರಕ, ದೀನರಕ್ಷಕ, ಮಾನವೀ ಸ್ವಾತಂತ್ರ್ಯ ಸಂರಕ್ಷಕನಾದ ಬಸವೇಶನ ಸ್ಥಾನವು ವೀರಶೈವ ಸಮಾಜದಲ್ಲಿಯೇ ಅಲ್ಲ, ಹಿಂದೂ ಸಮಾಜದಲ್ಲಿಯೇ ಅತ್ಯಂತ ಶ್ರೇಷ್ಠವಾದುದಾಗಿದೆ.

ಶ್ರೀಮನ್ನಿರಂಜನ ಸಂಗನ ಬಸವ ಶಿವಯೋಗಿಗಳು, ಬಂಥನಾಳ—ಶ್ರೀಗಳವರು ಉತ್ತಮ ಲೇಖಕರೂ, ಭಾಷಣಕಾರರೂ ಇರುವರಲ್ಲದೆ ಶಿವಯೋಗಿಗಳೂ ಆಗಿರುತ್ತಾರೆ. ಪುರಾಣವನ್ನು ಹೇಳಿ ಜನರನ್ನು ಆಶ್ಚರ್ಯಗೊಳಿಸುತ್ತಾರೆ. ವಿಜಾಪುರದ ವಿಜಯ ಕಾಲೇಜಿನ ಟ್ರಸ್ಟ್ ಕಮಿಟಿಗೆ ಶ್ರೀಗಳವರೇ ಅಧ್ಯಕ್ಷರಿದ್ದು ೩ ಲಕ್ಷ ರೂಪಾಯಿಗಳನ್ನು ಕೂಡಿಸಿರುವರೆಂದ ಮೇಲೆ ಶ್ರೀಗಳ ಯೋಗ್ಯತೆಯು ಎಂತಹ ದೊಡ್ಡದಿರುತ್ತದೆಂಬುವದು ಇದೊಂದೇ ಉದಾಹರಣೆಯಿಂದ ತಿಳಿದುಬರುತ್ತದೆ. ಕಲಾ ಣದಲ್ಲಿ ಕೂಡಿದ ವೀರಶೈವ ಮಹಾಸಭೆಯ ಅಧ್ಯಕ್ಷರಾಗಿದ್ದರು.

ನಿರಂಜನ ನಿರಾಕಾರನಾದ ಅವ್ಯಕ್ತ ಪರಮಾತ್ಮನೇ ಜಗದಾಕಾರನಾಗಿ ಪ್ರಪಂಚ ಕಾರನಾಗಿ ವ್ಯಕ್ತನಾಗಿರುತ್ತಾನೆ. ಸರ್ವವೂ ನಿರ್ವಿಷಯ ಪರಮಾತ್ಮನೇ ಇರೋಣದ ರಿಂದಲೇ ಸಂಸಾರವು ಇವರಿಗೆ ಇಷ್ಟು ಪ್ರಿಯವಾಗಿರುತ್ತದೆ. ಆದರೆ ಪದಾರ್ಥಗಳಲ್ಲಿರುವ ವೈಷಯಿಕ ಆಸಕ್ತಿಯನ್ನು ತೆಗೆದುಹಾಕಿ ಈಶಾರ್ಪಣ ಬುದ್ಧಿಯಿಂದ "ಮಾಡುವಾತ ನಾನಲ್ಲವಯ್ಯಾ, ನೀಡುವಾತ ನಾನಲ್ಲವಯ್ಯಾ, ಬೇಡುವಾತ ನಾನಲ್ಲವಯ್ಯಾ, ನಿಮ್ಮ ಕಾರುಣ್ಯವಲ್ಲಮ್ಮೆ ಎಲೆ ದೇವಾ" ಎಂಬ ಬಸವಗೀತೆಯಂತೆ, "ನಿಮಿತ್ಯಮಾತ್ರಂ ಭವ ಸವ್ಯಸಾಚಿನ್" ಎಂಬ ಭಗವದ್ಗೀತೋಕ್ತಿಯಂತೆ ಸರ್ವ ಕರ್ಮಗಳನ್ನೂ ಅನಾಸಕ್ತಿ ಯಿಂದ ಮಾಡುವದೇ ಹಿಂದೂಧರ್ಮದ ಸತ್ಯ ಸಿದ್ಧಾಂತವು. ಇದನ್ನೇ ನುಡಿದು ಭಗವದ್ಗೀತೆ ಯಾಯಿತು. ಅದರಂತೆ ತಾನು ನಡೆದು ಸಮಾಜಕ್ಕೆ ನಡೆಗಲಿಸಿ ಬಸವ ಮಹಾತ್ಮನು ಭಗವಂತನಾದನು. ಕನ್ನಡನಾಡಿನ ಮೂಲೆಮೂಲೆಗಳಲ್ಲಿಯೂ 'ಶಿವನೇ ಬಸವಾ, ಬಸವಾ ಶಿವನೇ' ಎಂದು ಉಳಿಯುತ್ತಿರುವದೇ ಇದಕ್ಕೆ ಸಾಕ್ಷಿ.

ಎಸ್. ಬಿ. ಹಿರೇಮಠ ಹಾವೇರಿ, ಬಿ.ಎ., ಎಲ್ಎಲ್.ಬಿ.—ಇವರು ಸುಪ್ರಸಿದ್ಧ ಲೇಖಕರು. ಲೋಕಮತ ದಿನಪತ್ರಿಕೆಯ ಟ್ರಸ್ಟ್ ಬೋರ್ಡ್ ಛೇರ್‌ಮನ್ನರೂ, ಜಿಲ್ಲಾ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರೂ ಆಗಿ ಕಾರ್ಯಮಾಡಿರುವರಲ್ಲದೆ ಸಾರ್ವಜನಿಕ ಕಾರ್ಯಗಳನ್ನು ಮಾಡಬೇಕೆಂಬುವ ಹಂಬಲವುಳ್ಳವರು. ಹಾವೇರಿಯಲ್ಲಿ ಸುಪ್ರಸಿದ್ಧ ವಕೀಲರಾಗಿದ್ದು ಐಡಿಯಲ್ ಬ್ಯಾಂಕಿನ ವ್ಯವಸ್ಥಾಪಕರೂ ಆಗಿದ್ದರು. ಇವರು "ಕ್ರಾಂತಿಕಾರಕ ಬಸವ" ಎಂಬುವ ಲೇಖನ ಬರೆದಿದ್ದಾರೆ. ಅದರಲ್ಲಿಯ ಕೊಂಚ ಭಾಗವನ್ನು ಇಲ್ಲಿ ಕೊಡಲಾಗಿದೆ.

ಶ್ರೀ ಬಸವೇಶ್ವರನು ವೀರಶೈವ ಮತಸ್ಥಾಪಕನು ಅಹುದೋ ಅಲ್ಲವೋ ಎಂಬುದು ಈ ಲೇಖನದ ಮುಖ್ಯ ವಿಷಯವಲ್ಲ. ಆತನು ಧರ್ಮಸ್ಥಾಪಕನೆಂದು ಒಂದು ವರ್ಗದ ಮಂಡನವಿರುವದು. ಆದರೆ ಬಸವನು ಕ್ರಾಂತಿಕಾರಕನೆಂಬುವ ಮಾತಿಗೆ ಯಾರ ವಿವಾದವಾಗಲೀ, ಆತಂಕವಾಗಲೀ ಇರುವದಿಲ್ಲ ಮತ್ತು ಇರಲಾರದು. ಹೀಗಿದ್ದಮೇಲೆ ಕ್ರಾಂತಿಕಾರಣವು ಮಹತ್ವವಾದುದೋ, ಧರ್ಮಸ್ಥಾಪನವು ಮಹತ್ವವಾದುದೋ ಎಂಬುದು ಉಪಸ್ಥಿತವಾಗುವದು. ಸಮಾಜ ಇಲ್ಲವೆ ಜನಾಂಗದ ಉದ್ಧಾರದ ದೃಷ್ಟಿಯಿಂದ ಇದನ್ನು ಪರಿಶೀಲಿಸಿದರೆ ಧರ್ಮಸ್ಥಾಪನಕ್ಕಿಂತಲೂ ಕ್ರಾಂತಿಕಾರ್ಯವು ಮಹತ್ತರವಾಗುವದು. ಧರ್ಮಸ್ಥಾಪನೆಯಿಂದ ಒಂದು ಸಿದ್ಧಾಂತ ಇಲ್ಲವೆ ವೇದಾಂತ ಮಾರ್ಗದ ಸ್ಥಾಪನೆಯು ಇರಬಹುದು. ಆದರೆ ಸಮಾಜೋದ್ಧಾರ ಕಾರ್ಯವು ಯಾವಾಗಲೂ ಧರ್ಮಸ್ಥಾಪನೆಯಲ್ಲಿ ಅಡಕವಾಗಿರುವದೆಂದು ಹೇಳಲಿಕ್ಕೆ ಬರಲಾರದು. ಆದರೆ ಬುದ್ಧನಾಗಲಿ, ಬಸವನಾಗಲಿ, ಮಾಡಿದಂತಹ ಸಾಮಾಜಿಕ ಕ್ರಾಂತಿಯು ಯಾವಾಗ್ಯೂ ಮಾನವ ಜನಾಂಗದ ಉದ್ಧಾರಕಾರ್ಯವಾಗಿರುವದು. ವರ್ಣಭೇದದ ವೈಶಿಷ್ಟ್ಯದಿಂದಾಗಲಿ, ಸ್ಪೃಶ್ಯಾಸ್ಪೃಶ್ಯ ಭಾವನೆಯ ಪರಿಣಾಮದಿಂದಾಗಲಿ ಕೊಳೆಯುತ್ತಿರುವ ಜನಾಂಗದ ಕೆಲವೊಂದು ಭಾಗವನ್ನು ಸರ್ವಸಮಾನತೆ, ಭ್ರಾತೃಭಾವನೆ (Equality, Fraternity and Brotherhood) ಗಳ ಯೋಜನೆಯ ದ್ವಾರ ಸಮಾಜೋದ್ಧಾರವನ್ನು ಮಾಡುವದು ಹೇಗೆ? ಶೈವಮತಸ್ಥಾಪಕರಾಗಲೀ, ಶಂಕರಾಚಾರ್ಯರಾಗಲೀ, ದ್ವೈತ ಮತ ಸ್ಥಾಪಕರಾಗಲೀ ಮಾಡಿದ ಕಾರ್ಯವು ಹೇಗೆ? ಯಾವ ಸಿದ್ಧಾಂತ ಮಾರ್ಗವಾದರೇನು? ಸಮಾಜ ಕಲ್ಯಾಣ, ಸಮಾಜ ಸೇವೆ, ಮಾನವ ಕಲ್ಯಾಣ, ಮಾನವ ಸೇವೆಗಳನ್ನು ಮಾಡಿದಂತಾಗುವುದೋ? ಆದುದರಿಂದ ಬಸವನು ಧರ್ಮಸ್ಥಾಪಕನೋ ಅಲ್ಲವೋ ಎಂಬುವದನ್ನು ಬದಿಗಿಟ್ಟು ಕ್ರಾಂತಿಕಾರಕ ಬಸವನೆಂದು ಶ್ರೀ ಬಸವನನ್ನು ಸಮರ್ಥಿಸುವದು ಹೆಚ್ಚು ಹೆಮ್ಮೆಯ ಮಾತೆನ್ನಬಹುದು.

ವೀರಶೈವ ಸಮಾಜವು ನಡೆನುಡಿಯಲ್ಲಿ ಸರಿಯಾಗಿರದೆ ಅಸ್ತವ್ಯಸ್ತವಾಗಿ ಹೋಗಿತ್ತು. ಆಚಾರ ವಿಚಾರದಲ್ಲಿ ಕೊಳೆಯು ಸೇರಿ ಸಮಾಜವು ಅಚ್ಚುಕಟ್ಟುತನದಲ್ಲಿರಲಿಲ್ಲ. ಧರ್ಮಪ್ರಸಾರವೂ, ಧರ್ಮಸ್ವೀಕರಣವೂ (Conversion) ಸರಿಯಾಗಿ ನಡೆಯುತ್ತಿರಲಿಲ್ಲ. ಅರೆಭಕ್ತಿ ಡಾಂಭಿಕಾಚಾರಗಳು ಹೆಚ್ಚಾಗಿದ್ದವು. ಈ ಮುಂತಾದ ಕೊಳೆ ದೋಷಗಳನ್ನೆಲ್ಲ ಹೋಗಲಾಡಿಸಿ ಗುರುಲಿಂಗ ಜಂಗಮ ಭಕ್ತಿಯನ್ನೂ, ಶರಣರ ವೈಶಿಷ್ಟ್ಯವನ್ನೂ ಹೆಚ್ಚಿಸಿ ಸಾಮಾಜಿಕ, ಸಾಂಪತ್ತಿಕ, ನೈತಿಕ ನಿರ್ಬಂಧನೆಗಳನ್ನು ಹಾಕಿ ಲಿಂಗಾಯತ ಸಮಾಜವು ಅದೊಂದು ಸ್ವರೂಪಕ (Self-sufficient) ವಾದುದೊಂದು ಮತವನ್ನು ಮಾಡುವ ಅಗಾಧ ಕ್ರಾಂತಿಯನ್ನು ಬಸವೇಶ್ವರನು ಮಾಡಿದನು.

ಕವಿ ಷಡಕ್ಷರಿ ಗುಂಜಿಹಳ್ಳಿ ಚಿಕ್ಕಮಠೀಯರು, ರಾಯಚೂರು ಜಿಲ್ಲೆಯವರು—ಇವರು ಆಶುಕವಿಗಳು. ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ರಸವತ್ತಾದ ಕವಿತೆಗಳನ್ನು ಮಾಡಬಲ್ಲರು. ಇವರು ಅಮರೇಶ್ವರ ಶತಕ, ಬಸವ ಸ್ತೋತ್ರ ಮಂಜರಿ ಮೊದಲಾದ ಗ್ರಂಥಗಳನ್ನು ಬರೆದಿರುತ್ತಾರೆ.

## ಬಸವಸ್ತೋತ್ರ ಮಂಜರಿಯಲ್ಲಿ

ಶ್ರೀ ಕಲ್ಯಾಣ ನಿವಾಸಂ ।
ಶ್ರೀ ಕಲಿತ ಪ್ರಮಥವರ್ಯನನುಪಮಶೀಲಂ ।
ಶ್ರೀಕರನಾಶ್ರಿತ ಜನಕಂ ।
ಶ್ರೀಕೋವಿದ ವರ ವೃಷಂ ಶಿವಂ ಪೊರೆಗೆಮ್ಮಂ ॥ ೧ ॥

ಬಸವಂ ಭಕ್ತಿ ವಿಶೇಷಂ ।
ಬಸವಂ ಭಾಸುರ ಶಿವಾಭಿಮಾನಿಯುಂ ಬಗೆಯಲ್ ।
ಬಸವಂ ಭೀತಿ ಧ್ವಂಸಂ ।
ಬಸವಂ ಭುವಿಗವತರಿಸಿದ ಶಂಕರನಲ್ತೆ ॥ ೨ ॥

ಬಸವಂ ಭೂನುತಗಾತ್ರಂ ।
ಬಸವಂ ನಿಗಮಾದ್ಯಭೇದ್ಯ ನ ।
ನಘ ಚರಿತ್ರಂ । ಬಸವಂ ಭವಾಬ್ಧಿ ಭೈತ್ರಂ ।
ಬಸವಂ ತಾನಿರ್ಕೆ ಮದ್ ಹೃದಂಭೋರುಹದೊಳ್ ॥ ೩ ॥

ಭೌತಿಕ ವಿಶ್ವ ನಿರಾಶಂ ।
ಭೂತೇಶಂ ಭಂಗಿತಾಂಗಜೋನ್ಮದನನಿಶಂ ।
ಪೂತಂ ನಭಸ್ಸಕಾಶಂ ।
ತಾ ತವಕದಿ ಪೊರೆಯಲೆಮ್ಮ ಬಸವ ಮಹೇಶಂ ॥ ೪ ॥

ವೃ ॥ ಗಂಗಾಮೋದ ಸದನಸುರ್ವಿಪಾ ।
ಲಂಗಾಶ್ಚರ್ಯಕರನು ನಿತ್ಯಂ ಸ ।
ತ್ಸಂಗಂ ಶ್ರೀ ಬಸವ ಮಹಾತ್ಮಂ ಚಿ ।
ಲ್ಲಿಂಗಂ ತಾಂ ಸಲಹುದೆ ಬಂದೆಮ್ಮಂ ॥ ೫ ॥

ಅಭಿನವ ಸರ್ವಜ್ಞ—ಸದ್ಧರ್ಮ ದೀಪಿಕೆ, ಸಂಚಿಕೆ ೪೯–೫೦ :

ದೀಕ್ಷಾಗುರು ಬಸವಣ್ಣ । ಮೋಕ್ಷಗುರು ಬಸವಣ್ಣ ।
ಶಾಂತ ಸದ್ಗುರುವು । ಬಸವಣ್ಣನಾಪಾದ । ಭಜಿಸಿ ಬಲ್ಲವರು ಸರ್ವಜ್ಞ ॥ ೧ ॥

ವರಗುರುವೆ ಶರಣಯ್ಯ । ಗುರುಲಿಂಗ ಶರಣಯ್ಯ ।
ಪರಿಭವ ಕಳೆದ ಪ್ರಮಥ ಗುರು ಬಸವಣ್ಣ । ಶರಣು ಶರಣಾರ್ಥಿ ಸರ್ವಜ್ಞ ॥ ೨ ॥

ಪ್ರಮಥ ಲಿಂಗವು ಬಸವ । ಪ್ರಮಥ ರಂಗವು ಬಸವ ।
ಪ್ರಮಥ ಪ್ರಭುರಾಯ । ಶಾಂತನಿರ್ಮಲ ಬಸವ ಪ್ರಮಥ ಗುರುಲಿಂಗ
ಸರ್ವಜ್ಞ ॥ ೩ ॥

ಆದಿಗುರುರಾಯ ತಾ । ಭೇದಿಸಿ ಲಿಂಗವ ಕೊಟ್ಟ ।
ಮೂದೇವರೊಡೆಯ । ಮೂಜಗದ ಕರ್ತ । ಎನ್ನಾದಿಗುರು ಬಸವ ಸರ್ವಜ್ಞ ॥ ೪ ॥

ತಂದೆತಾಯಿಯು ಬಸವ । ಬಂಧುಬಳಗವು ಬಸವ ।
ಬಂದ ದುಃಕರ್ಮ ಹಿಂದೆಮಾಡಿದ ಗುರುವೆ ತಂದೆ ಬಸವಣ್ಣ ಸರ್ವಜ್ಞ ॥ ೫ ॥

ಕಾಮಧೇನುವೆ ಬಸವ । ಕಲ್ಪವೃಕ್ಷವೆ ಬಸವ ।
ಹೇಮಗಿರಿವಾಸ । ಬಸವಣ್ಣನಾಪದಕೆ ನಾನು ಶರಣೆಂಬೆ ಸರ್ವಜ್ಞ ॥ ೬ ॥

ಶಿವಗುರುವೆ ಬಸವಣ್ಣ । ಭವಹರನೆ ಬಸವಣ್ಣ ।
ಶಿವಸಿದ್ಧ ಪ್ರಭುವೆ ಬಸವಣ್ಣ । ನಾ ಪದಕೆ ಶಿವನೆ ಶರಣೆನ್ನಿ ಸರ್ವಜ್ಞ ॥ ೭ ॥

ಆದಿಲಿಂಗವು ಬಸವ । ಆದಿಜಂಗಮವು ಬಸವ ।
ಆದಿಗುರುರಾಯ । ಬಸವಣ್ಣನೆಂಬುವದ ಶೋಧಿಸುತ ಬಲ್ಲೆ ಸರ್ವಜ್ಞ ॥ ೮ ॥

ಬಸವಣ್ಣ ಜಗದಾದಿ । ಬಸವಣ್ಣ ಜಗದೀಶ ।
ಬಸವಣ್ಣ ಜಗದ ಗುರುವೆಂದು ನಂಬುತ್ತ ಬಸವನನು ಜಪಿಸಿ ಸರ್ವಜ್ಞ ॥ ೯ ॥

ಲಿಂಗಪೂಜೆಯ ಮರೆದು । ಅಂಗಭೋಗಕೆ ಮೆಚ್ಚಿ ।
ಭಂಗಗೊಳಲಾರೆ ಭವದೂರ ಮಾಡಯ್ಯ ಸಂಗನ ಬಸವ ಸರ್ವಜ್ಞ ॥ ೧೦ ॥

ಮಾ. ನ. ನಂಜಪ್ಪನವರು—ಇವರು ಬೆಂಗಳೂರಿನ ಶಿವಪ್ಪ ಸಹೋದರರಲ್ಲಿ ಒಬ್ಬರು. ಬಸವಾದಿ ಪ್ರಮಥರಲ್ಲಿ ಭಕ್ತಿಸಂಪನ್ನರು. ಬಸವ ಚರಿತ್ರೆ, ಬಸವ ಲಾವಣಿ ಮೊದಲಾದ ಪುಸ್ತಕಗಳನ್ನು ಬರೆದಿರುತ್ತಾರೆ. ಇವರು ಬಸವಯುಗದ ಹಿನ್ನೆಲೆ ಮತ್ತು ಅಂದಿನ ಪರಿಸ್ಥಿತಿ ಎಂಬುವ ಲೇಖನದಲ್ಲಿ—

ಮಹಾನುಭಾವರಾದ ಶ್ರೀ ಬಸವೇಶ್ವರರ ಉದಯಕಾಲದಲ್ಲಿ ಜಗನ್ಮಂಗಳದಾಯಕ ನಾದ ಪರಶಿವನ ಹೆಸರಿನಲ್ಲಿಯೂ, ಲೋಕೋತ್ತರ ತ್ಯಾಗಮೂರ್ತಿಯಾದ ಬುದ್ಧದೇವನ ಹೆಸರಿನಲ್ಲಿಯೂ, ಅಹಿಂಸೆಯ ಮೂರ್ತಿಮಂತವೆನಿಸಿದ ಜಿನಧರ್ಮದ ಹೆಸರಿನಲ್ಲಿಯೂ, ಹೇಳಲಾಗದ, ಕೇಳಲಾಗದ, ವಿವರಿಸಲಾಗದ ಭಯಂಕರವೂ, ಬೀಭತ್ಸವೂ ಆದ ದುರಾಚರಣೆ, ದುರಾಕ್ರಮಗಳಿಂದ ಜನತೆಯು ತಲ್ಲಣಿಸಿ ತತ್ತರಿಸಿಹೋಗಿದ್ದಿತು.

ಹೀಗೆ ಕಳವಳಗೊಂಡ ಜನರು ದಿಕ್ಕೆಟ್ಟ ನಾವಿಕನಂತಾಗಿ ಕಂಡ ಕಂಡದ್ದನ್ನೆಲ್ಲ ದೇವರೆಂದು ಪೂಜಿಸಲಾರಂಭಿಸಿದರು. ಇಷ್ಟಾದರೂ ವರ್ಣವ್ಯವಸ್ಥೆಯು ನಾಮಮಾತ್ರ ಕ್ಕಾದರೂ ಉಳಿದೇ ಇದ್ದಿತು. ಈ ವರ್ಣವ್ಯವಸ್ಥೆ ಇದ್ದರೂ ಸಹ ಎಲ್ಲ ವರ್ಣದ ಜನರೂ ದಾರಿಗೆಟ್ಟು ಗಿಡ, ಮರ, ದಾರಿಗಳೊಂದನ್ನೂ ಬಿಡದೆ, ಒಂದನ್ನೂ ನಂಬದೆ ಮನಬಂದಂತೆ ಪೂಜಿಸಲಾರಂಭಿಸಿದ್ದರು. ಇವೆಲ್ಲದರ ಫಲವಾಗಿ ನಮ್ಮ ನಾಡಿನ ಜನತೆಯಲ್ಲಿ ನಿರುದ್ಯೋಗ, ನಿಬುದ್ಧಿಗಳ ತಾಂಡವಲೀಲೆಯಾಗತೊಡಗಿ, ದೇಶದಲ್ಲಿ ಕ್ಷಾಮವೂ, ದುರ್ಭಿಕ್ಷವೂ ಹಬ್ಬಿಕೊಂಡಿದ್ದುದಲ್ಲದೆ ಚಾಲುಕ್ಯರ ಮತ್ತು ಕಲಚೂರ್ಯರೇ ಮೊದ ಲಾದವರ ರಾಜಕೀಯ ಕಲಹಂಗಳಿಂದಲೂ ಜನರು ಕಂಗಾಲಾಗಿಹೋಗಿದ್ದರು.

ದೇಶದ ಈ ದುರ್ದಶೆಯನ್ನು ಕಂಡು ಮರುಗಿದ ಸಾತ್ವಿಕರೂ, ಧರ್ಮಾಭಿಮಾನಿ ಗಳೂ ಆದ ಕೆಲ ಹಿರಿಯರು ನಾನಾ ಶೈವಪಂಥಗಳಲ್ಲಿಯೂ ತುಂಬಿಕೊಂಡಿದ್ದ ಕ್ರೌರ್ಯ ಮಯವಾದ ದುರಾಚಾರಗಳ ಕೊಳೆಯನ್ನು ತೊಳೆದು ಶೈವಧರ್ಮವನ್ನು ಶುದ್ಧ ಸಾತ್ವಿಕ ವನ್ನಾಗಿ ಮಾಡಿ ತನ್ಮೂಲಕ ಜನಾಂಗದ ಉನ್ನತಿಯನ್ನು ಸಾಧಿಸಬೇಕೆಂಬ ಹಂಬಲಿಕೆ ಯಿಂದ ಕೂಡಿದವರಾಗಿ ತಮಗೊಬ್ಬ ಯೋಗ್ಯ ನಾಯಕನನ್ನು ಅರಸುತ್ತ ಕಾಲ ನಿರೀಕ್ಷೆ ಯಲ್ಲಿದ್ದರು. ಹೀಗೆ ದೇಶವೂ, ಧರ್ಮವೂ ಒಬ್ಬ ನಾಯಕನನ್ನು ಅರಸುತ್ತ ಕಾತುರ ಗೊಂಡಿದ್ದಾಗಲೇ ಮಹಾತ್ಮರಾದ ಬಸವೇಶ್ವರರು ಉದಯಿಸಿದರು.

ಪರಮ ಪೂಜ್ಯ ಶ್ರೀ ಬಸವೇಶ್ವರರ ದಿವ್ಯ ತತ್ವಗಳು ಸದಾ ಕಾಲವೂ ರಸೆಯಲ್ಲಿ ಪಸರಿಸಲಿ. ಬಸವ ಮಹಾನುಭಾವರ ದಿವ್ಯ ವಾಣಿಯು ಜನತೆಯ ಕರ್ಣಕುಹರದಲ್ಲಿ ಮಾರ್ದನಿಗೊಡುತ್ತಿರಲಿ. ಶ್ರೀಮದ್ಬಸವಾದಿ ಪ್ರಮಥರ ದಿವ್ಯಜ್ಞಾನ ಗಂಗಾವಾಹಿನಿಯು ಸುಧಾಮಧುರ ಮಂಜುಳಗಾನವಾಗಿ ಸದಾ ಮೊಳಗುತ್ತಿರಲಿ.

ಶ್ರೀಮಾನ್ ಮಂಜಪ್ಪನವರು ಹರ್ಡೇಕರ್—'ಶರಣ ಸಂದೇಶ' ಎಂಬುವ ವಾರ ಪತ್ರಿಕೆಯ ಸಂಪಾದಕರು. ಇವರು ವಾಙ್ಮಿಗಳಾಗಿದ್ದು ಕನ್ನಡ ನಾಡಿನಲ್ಲೆಲ್ಲ ಹೆಸರು ವಾಸಿಗಳಾಗಿದ್ದರು. ಇವರ ಲೇಖನ ಮತ್ತು ಭಾಷಣ ಎರಡೂ ಜನಪ್ರಿಯಗಳಾಗಿದ್ದವು. ಇವರು ಅನೇಕ ಸಣ್ಣ ಸಣ್ಣ ಗ್ರಂಥಗಳನ್ನು ರಚಿಸಿರುತ್ತಾರೆ.

ಒಂದು ವ್ಯಕ್ತಿಯಿಂದ ರಾಷ್ಟ್ರದಲ್ಲಿ ಉಂಟಾಗತಕ್ಕ ಲೋಕ ಜಾಗ್ರತೆಗೆ ಲೋಕ ಶಿಕ್ಷಣ ಮತ್ತು ಲೋಕ ಸಂಘಟನೆಗಳ ಮೇಲಿಂದಲೇ ಆ ವ್ಯಕ್ತಿಯ ಮಹತ್ವವು ವ್ಯಕ್ತ ವಾಗುತ್ತದೆ. ಈ ದೃಷ್ಟಿಯಿಂದ ನೋಡಿದರೆ ಈ ನಮ್ಮ ಕರ್ಣಾಟಕದಲ್ಲಿ ಈವರೆಗೆ ಆಗಿ ಹೋಗಿರುವ ಮಹಾಪುರುಷರಲ್ಲಿ ಮಹಾನುಭಾವರಾದ ಬಸವಣ್ಣನವರೇ ಶ್ರೇಷ್ಠರೆಂದು ತೋರುತ್ತದೆ. ಏಕೆಂದರೆ ಇವರ ಅವತಾರ ಕೃತ್ಯದಿಂದ ಜನಸಾಮಾನ್ಯರಲ್ಲಿ ಉಂಟಾದಷ್ಟು ಧಾರ್ಮಿಕ ಜಾಗೃತಿ, ನೈತಿಕ ಶಿಕ್ಷಣ ಮತ್ತು ಪ್ರೇಮದ ಸಂಘಟನೆಗಳು ಇನ್ನಾವ ಮತೋದ್ಧಾರಕರ ಕೃತ್ಯದಿಂದಲೂ ಉಂಟಾಗಲಿಲ್ಲ. ಈ ಮಹಾನುಭಾವರು ತಮ್ಮ ಧಾರ್ಮಿಕ ಜಾಗ್ರತೆಗೆ ಜ್ಞಾನ, ಕ್ರಿಯೆ, ಯೋಗಗಳೆಂಬ ಕಠಿಣ ಮಾರ್ಗಗಳನ್ನು ಮೂಲವಾಗಿಟ್ಟುಕೊಳ್ಳದೆ ಜನಸಾಮಾನ್ಯರಿಗೂ ಕೂಡ ಸಾಧಿಸಬಹುದಾದ ಭಕ್ತಿಮಾರ್ಗವನ್ನೇ ಮುಖ್ಯವಾಗಿಟ್ಟುಕೊಂಡಿದ್ದರೆಂಬುದಕ್ಕೆ ಅವರ ವಚನಗಳಿಂದಲೇ ತಿಳಿದುಬರುತ್ತದೆ.

ಶ್ರೀ ಬಸವಣ್ಣನವರು ಕೇವಲ ನುಡಿದವರಲ್ಲ, ಅದರಂತೆ ನಡೆದು ತೋರಿಸಿದ್ದಾರೆ. ಅನ್ಯರಿಗೂ ಇವರಿಗೂ ಇರತಕ್ಕ ವ್ಯತ್ಯಾಸವು ಇದೇ ಸರಿ. ಶ್ರೀ ಬಸವಣ್ಣನವರಿಗಿಂತಲೂ ಬುದ್ಧಿಶಾಲಿಗಳೂ, ತರ್ಕ ವ್ಯಾಕರಣಾದಿ ಶಾಸ್ತ್ರಜ್ಞರೂ, ಭಾಷ್ಯಕಾರರೂ ಅನೇಕರು ಆಗಿ ಹೋದರು. ಆದರೆ ಇವರಂತೆ ನುಡಿಗೆ ಸರಿಯಾಗಿಯೇ ನಡೆದು ತೋರಿಸಿ ಜನಾಂಗದಲ್ಲಿ ಅತ್ಯದ್ಭುತವಾದ ವಿಚಾರಕ್ರಾಂತಿಯನ್ನುಂಟುಮಾಡಿದವರು ಮಾತ್ರ ಬುದ್ಧನ ತರುವಾಯ ಈವರೆಗೆ ಯಾರೂ ಜನ್ಮವೆತ್ತಿರಲಿಲ್ಲ. ಈ ಮಹಾತ್ಮನ ಮಹತ್ಕಾರ್ಯದಿಂದ ದೇಶದ ಸಾಮಾಜಿಕ, ಸಾಂಪತ್ತಿಕ ಉನ್ನತಿಗಳಾದಂತೆಯೇ ಭೌತಿಕ ಅಭಿವೃದ್ಧಿಯೂ ಆಯಿತು. ಏಕೆಂದರೆ ಮಾತೃಭಾಷೆಯಾದ ಕನ್ನಡದಲ್ಲಿಯೇ ಧಾರ್ಮಿಕ, ಸಾಮಾಜಿಕ. ನೈತಿಕ ವಿಷಯಗಳನ್ನು ಬೋಧಿಸಲು ಉಪಕ್ರಮಿಸಿದರು. ಆದರಿಂದ ಜನ ಸಾಮಾನ್ಯರಲ್ಲಿಯೂ ಕೂಡ ವಿಶೇಷವಾದ ವಿಚಾರ ಕ್ರಾಂತಿಯಾಗಿ ಲೋಕಶಿಕ್ಷಣಕ್ಕೆ ಬಹು ಸಹಾಯವಾಯಿತು. ಅಸಂಖ್ಯ ಜನರು ಸುಶಿಕ್ಷಿತರಾದುದಕ್ಕೆ ಹನ್ನೆರಡನೇ ಶತಮಾನದಿಂದ ಕನ್ನಡ ಭಾಷೆಯಲ್ಲಿ ವೀರಶೈವರಿಂದ ಅತ್ಯಧಿಕವಾಗಿ ಗ್ರಂಥ ರಚಿಸಲ್ಪಡುತ್ತ ಬಂದುದೇ ದೃಷ್ಟಾಂತವಾಗಿದೆ.

ಎಂ. ಎಸ್. ಬಸವಲಿಂಗಯ್ಯ, ಎಂ.ಎ., ಬಿ.ಎ., ಎಲ್‌ಎಲ್.ಬಿ. ಮೈಸೂರಿನ ಓರಿಯಂಟಲ್ ಲೈಬ್ರರಿಯ ಕ್ಯುರೇಟರು—ಇವರು ದೊಡ್ಡ ಪಂಡಿತರಾಗಿದ್ದು ಒಳ್ಳೆಯ ಲೇಖಕರಾಗಿದ್ದರು.

ಶ್ರೀ ಬಸವೇಶ್ವರನ ಅವತಾರದಿಂದ ಮಾನವ ಕುಲದ ಉದ್ಧಾರಕ್ಕೆ ಆದ ಸಹಾಯವು ಅಪಾರವಾದುದು. ಈಗ ೮೦೦ ವರ್ಷಗಳ ಬಹು ದೀರ್ಘಕಾಲದ ಹಿಂದೆ ಅಂದರೆ ಪಾಶ್ಚಾತ್ಯ ದೇಶಗಳ ವಿಜ್ಞಾನ, ಸಮಾಜ ಶಾಸ್ತ್ರ, ಕಲಾ ಮುಂತಾದುವುಗಳ ಸಂಸ್ಕಾರ ಲೇಶವೂ ಇಲ್ಲದ ಕಾಲದಲ್ಲಿ ಬಸವೇಶ್ವರನು ಕರ್ಣಾಟಕದಲ್ಲಿ ಜನಿಸಿ ಅಖಿಲ ಕರ್ಣಾಟಕದ

ಉದ್ಧಾರಕರ್ಕ್ನೋಸ್ಕರ ಶಿವಾನುಭವ ಎಂಬುವ ಜನತಾ ಸೇವಾ ಸಮಿತಿಯನ್ನು ಸ್ಥಾಪಿಸಿ, ಹಿಂದೂ ಸಮಾಜದವರಲ್ಲಿ ಕೇವಲ ಹೀನರೆಂದು ಗಣಿಸಲ್ಪಟ್ಟ ವೇದಬಾಹಿರರಾಗಿದ್ದ ಸ್ತ್ರೀ ಶೂದ್ರಾದಿಗಳಿಗೆ ಶೈವದೀಕ್ಷಾದಿ ಸಂಸ್ಕಾರಗಳ ಮೂಲಕ ಸ್ವಾತಂತ್ರ್ಯವನ್ನೂ, ಸಮತಾ ಭಾವನೆಯ ವೃತ್ತಿಗಳನ್ನೂ ಆಚರಣೆಗೆ ತಂದು ಸಮಾಜದಲ್ಲಿ ನಿರುದ್ಯೋಗ ಸಮಸ್ಯೆಯು ಬಾರದಂತೆಯೂ, ಎಲ್ಲರೂ ಸ್ವತಂತ್ರರಾಗಿ, ಶೀಲವಂತರಾಗಿ, ಸಿರಿವಂತರಾಗಿ ಬಾಳು ವಂತೆಯೂ ಮಾಡಿದನು.

ಶ್ರೀ ಬಸವೇಶ್ವರನು ಯಾವ ಉದಾರ, ಉನ್ನತ, ಅಮೋಘ ತತ್ವಗಳ ಮೇಲೆ ಧರ್ಮ ಸ್ಥಾಪನೆಯನ್ನೂ, ಸಮಾಜ ಸ್ಥಾಪನೆಯನ್ನೂ ಮಾಡಿದನೋ ಆ ತತ್ವಗಳು ಈಗಿನ ಇಪ್ಪತ್ತನೆಯ ಶತಮಾನದಲ್ಲಿರುವ ಧರ್ಮ ಸ್ಥಾಪಕರಿಗೂ, ಅಖಿಲ ಭಾರತ ರಾಷ್ಟ್ರದ ಸುಧಾರಣಾ ಕರ್ತರಿಗೂ ಆದರ್ಶರೂಪವಾಗಿಯೂ, ಅನುಕರಣೀಯವಾಗಿಯೂ ಇರುವದೆಂದು ನಿಸ್ಸಂಶಯವಾಗಿ ಹೇಳಬಹುದಾಗಿದೆ. ಇದುವರೆಗೆ ಹೇಳಿದ ವಿಚಾರ ಗಳಿಂದ "ಬಸವೇಶ್ವರನ ಅವತಾರ ಮಾನವ ಕುಲದ ಉದ್ಧಾರ" ಎಂಬ ನಾಣ್ಣುಡಿಯು ಎಷ್ಟು ಅರ್ಥಪೂರ್ಣವಾದುದೆಂಬುವದು ವಾಚಕರಿಗೆ ಅರ್ಥವಾದೀತೆಂದು ಭಾವಿಸಬಹು ದಲ್ಲವೇ?

ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರು, ಅಧ್ಯಾಪಕರು, ಸಂಸ್ಕೃತ ಕಾಲೇಜ್, ಮೈಸೂರು—ಇವರು ಪತ್ರಿಕೆಗಳಲ್ಲಿ ಅನೇಕ ಲೇಖನಗಳನ್ನು ಬರೆಯುತ್ತಲಿದ್ದಾರೆ. ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಭಾರತದ ಭಾಗ್ಯವಿಧಾತರಲ್ಲೊಬ್ಬರಾದ ಮಹಾತ್ಮಾ ಬಸವಣ್ಣನವರು ಇಂದಿಗೆ ಸುಮಾರು ೮೦೦ ವರ್ಷಗಳ ಹಿಂದೆ ಅವತರಿಸಿ ಸಾಮಾನ್ಯ ಜನತೆಯನ್ನು ಉದ್ಧಾರಮಾಡಲು ಪ್ರಾರಂಭಿಸಿದ ಕಾರ್ಯಕ್ರಮಗಳು ಇಂದಿನ ರಾಷ್ಟ್ರ ನಿರ್ಮಾಣ ಚತುರರಿಂದಲೂ ಅಭಿನಂದನೀಯವಾಗಿರುತ್ತದೆ. ಮಾನವ ಲೋಕದ ಪ್ರಗತಿಯಲ್ಲಿ ಪ್ರವೃತ್ತರಾದೀ ಮಹಾ ವಿಭೂತಿಗಳು ಜನತೆಯನ್ನುದ್ಧಾರಮಾಡಲು ಅನೇಕ ಮಾರ್ಗಗಳನ್ನು ಅನುಸರಿಸಿದ್ದಾರೆ. ಅವುಗಳ ಉದ್ದೇಶ ಹಾಗೂ ಫಲಗಳು ಒಂದೇ ಆದರೂ ಮಾರ್ಗವು ವಿಭಿನ್ನವಾಗಿದೆ. ಕೆಲವರು ತಮ್ಮ ಅತ್ಯದ್ಭುತ ಬುದ್ಧಿ ವೈಭವದಿಂದ ಅತರ್ಕ್ಯವಾದ ಗಹನತತ್ವ ರಹಸ್ಯಗಳನ್ನು ಕಂಡುಹಿಡಿದು ತನ್ಮೂಲಕ ಆತ್ಮೋದ್ಧಾರದ ಸಮಸ್ಯೆಗಳನ್ನು ಬಿಡಿಸಲು ಪ್ರಯತ್ನಿಸಿದ್ದಾರೆ. ಇವರ ಮಾರ್ಗವು ಸಾಮಾನ್ಯ ಜನತೆಗೆ ದುರೂಹವಾದುದರಿಂದ ಅದು ಅಜ್ಞರನ್ನು ವಿಜ್ಞರನ್ನಾಗಿ ಮಾಡಲು ಸಮರ್ಥವಾಯಿತೆನ್ನಬಹುದು. ಉಳಿದವರ ಮಾರ್ಗವಾದರೂ ಜನ ಸಾಮಾನ್ಯದ ಭಾಷೆ ಭಾವಗಳನ್ನು ಬಳಸಿಕೊಂಡು ಅಂತಹ ತತ್ವರಹಸ್ಯಗಳನ್ನು ಪ್ರಬೋಧಿಸಲು ತೊಡಗಿದೆ. ಇದರಿಂದ ಜನತೆಯಲ್ಲಿಯ ಅನೀತಿ ಮಾಯವಾಗಿ ಅವರ ಜೀವನವು ಉದಾತ್ತತೆಯ ಹಾದಿಯನ್ನು ಹಿಡಿಯಲು ಅನುಕೂಲವಾಯಿತು. ಇದು ಅಜ್ಞರನ್ನು ವಿಜ್ಞರನ್ನಾಗಿ ಮಾಡುವ ಸ್ವಭಾವದ್ದೆನ್ನಲು ಅಡ್ಡಿಯಿಲ್ಲ.

ನಾಗಭೂಷಣ ಶಾಸ್ತ್ರಿಗಳು, ಅಧ್ಯಾಪಕರು, ಕಾವ್ಯತೀರ್ಥ ಅನ್ನದಾನೀಶ್ವರ ಸಂಸ್ಕೃತ ಪಾಠಶಾಲಾ, ಗದಗ—ಇವರು ಶಿವಾನುಭವದಲ್ಲಿ ಪಂಡಿತರಿದ್ದು ವೀರಶೈವ ಸಂಸ್ಕೃತಿ ಪ್ರಕಾಶನ ಸಮಿತಿಯ ಕಾರ್ಯಾಧ್ಯಕ್ಷರಿರುತ್ತಾರೆ. 'ಸಾವಧಾನ' ಎಂಬುವ ಪಾಕ್ಷಿಕ ಪತ್ರದ ಸಂಪಾದಕರೂ ಇರುತ್ತಾರೆ.

ವೀರಶೈವ ಧರ್ಮವೂ–ಬಸವಣ್ಣನವರೂ ಎಂಬುವ ಲೇಖನವನ್ನು 'ವೀರಶೈವ ತತ್ವ ಪ್ರಕಾಶಿಕೆ' ಯಲ್ಲಿ ಬರೆದಿರುತ್ತಾರೆ. ಅದರ ಕೆಲ ಭಾಗವನ್ನು ಇಲ್ಲಿ ಕೊಡಲಾಗುವದು.

ಮಾನವರ ಮನೋವೃತ್ತಿ ಪ್ರವಾಹವು ಸ್ವಾಭಾವಿಕವಾಗಿ ಸತ್ಯಸಾಗರದ ಕಡೆಗೆ ಹೋಗುವಂತಹುದಾಗಿರುವದು. ಒಂದು ವೇಳೆ ಆ ಮನೋವೃತ್ತಿ ಪ್ರವಾಹವು ಯಾವ ದಾದರೊಂದು ನಿಮಿತ್ತವಾಗಿ ತಡೆದು ನಿಂತಲ್ಲಿ ಮುಂದುವರೆಯದೆ ಒಂದೇ ಕಡೆ ನಿಂತ ಜಲಪ್ರವಾಹವು ಕಾಲಾಂತರದಲ್ಲಿ ಮಲಿತು ಕೆಟ್ಟುಹೋಗುವಂತೆ ಮಾನವರ ಜೀವನವು ಹಸಗೆಟ್ಟು ವೈಯಕ್ತಿಕ ಹಾಗೂ ಸಾಮಾಜಿಕ ಪತನಕ್ಕೆ ಕಾರಣವಾಗುವದು. ಆಗ ಒಬ್ಬ ಮಹಾಪುರುಷನು ಜನ್ಮವೆತ್ತಿ ಸ್ವಭಾವವನ್ನು ಉಪೇಕ್ಷಿಸಿ ನಿಂತ ಮಾನವರ ಮನೋವೃತ್ತಿ ಪ್ರವಾಹವು ಸರಿಯಾಗಿ ಮುಂದೆ ಸಾಗುವಂತೆ ಜನರ ಜೀವನದಲ್ಲಿ ವಿಲಕ್ಷಣ ಕ್ರಾಂತಿ ಯನ್ನು ಮಾಡಲೇಬೇಕಾದುದು ಅನಿವಾರ್ಯ. ಹೀಗೆ ತೀವ್ರ ಬದಲಾವಣೆಯನ್ನು ಮಾಡಲು ಸಮರ್ಥನಾದವನೇ ಕ್ರಾಂತಿಕಾರಕನೆನಿಸಿಕೊಳ್ಳುವನು. ಪವಿತ್ರವಾದೀ ನಮ್ಮ ಭರತಖಂಡದಲ್ಲಿ ಆಗಾಗ ಎಷ್ಟೋ ಕ್ರಾಂತಿಕಾರಕ ಮಹಾಪುರುಷರು ಜನ್ಮತಾಳಿ ಆಯಾ ದೇಶದ ಕಾಲಪರಿಸ್ಥಿತಿಯನ್ನು ಅನುಸರಿಸಿ ಜನತೆಯ ಜೀವನದ ಬೆಳವಣಿಗೆಗೆ ತಕ್ಕ ಕ್ರಾಂತಿಯನ್ನು ಮಾಡಿರುವರು. ಇತಿಹಾಸಜ್ಞರಿಗೆ ಸುಪರಿಚಿತವಾದ ವಿಷಯ ಬುದ್ಧ, ಶಂಕರ, ರೇಣುಕ ಮುಂತಾದವರು ಕ್ರಾಂತಿಕಾರಕ ಮಹಾಗುಂಪಿಗೆ ಸೇರಿದವರು. ಭಾರತ ಇತಿಹಾಸ ನಭೋಂಗಣದಲ್ಲಿ ಮಿಂಚುವ ಅಂಥ ಕ್ರಾಂತಿಕಾರಕ ಮಹಾಪುರುಷ ನಕ್ಷತ್ರ ಮಂಡಲದಲ್ಲಿ ೧೨ನೆಯ ಶತಮಾನದ ಬಸವಣ್ಣನು ಉದಯಕಾಲದ ಬೆಳ್ಳಿಯ ಚುಕ್ಕೆಯಂತೆ ಹೊಳೆಯುತ್ತಿರುವನು.

ಟಿ. ಎಸ್. ಮಹಾದೇವಯ್ಯ, ಬಿ.ಎ.—ಇವರು 'ವೀರಶೈವ ತತ್ವ ಪ್ರಕಾಶ' ದಲ್ಲಿ ಅನುಭವ ಮಂಟಪ ಎಂಬುವ ಲೇಖನವನ್ನು ಬರೆದಿದ್ದು ಆ ಲೇಖನದಲ್ಲಿ ಬಸವಣ್ಣನವರ ವಿಷಯ ಬರೆದಿರುವುದನ್ನು ಇಲ್ಲಿ ಕೊಡೋಣವಾಗಿದೆ.

ಶ್ರೀ ಬಸವಣ್ಣನವರು ತಮ್ಮ ತಾರುಣ್ಯದಲ್ಲಿಯೇ ಧರ್ಮದ ಬೆಳವಣಿಗೆಗೆ ಬೇಕಾಗುವ ಎಲ್ಲ ಸಹಾಯ ಸಂಪತ್ತುಗಳನ್ನು ಯೋಚಿಸತೊಡಗಿದರು. ಅದಕ್ಕೆ ತಕ್ಕ ಸಿದ್ಧತೆಗಳನ್ನು ಮನಸ್ಸಿನಲ್ಲಿ ಸಿದ್ಧಮಾಡಿಟ್ಟುಕೊಂಡರು. ಅನಂತರ ಕಾರ್ಯದಲ್ಲಿ ಪ್ರಯೋಗಿಸಿದರು. ಶಾಸ್ತ್ರ ಪುರಾಣಾದಿ ನಿರ್ಜೀವ ಗ್ರಂಥದ ತತ್ವಗಳಿಗಿಂತಲೂ ಹಿರಿದಾಗಿ ಪರಿಶುದ್ಧನಾದ ಸಜೀವ ವ್ಯಕ್ತಿಯ ಹೃದಯಾನುಭವವೇ ಮುಖ್ಯವೆಂದು ತಿಳಿದರು. ಅನುಭಾವಿಗಳಾದ ಮಹಾಪುರುಷರನ್ನು ಒಂದು ಕಡೆ ಸೇರಿಸಿದರು. ಹಾಗೆ ನೆರೆದ ಪ್ರತಿಯೊಬ್ಬರೂ ತಮ್ಮ ತಮ್ಮ ಅನುಭವಗಳನ್ನು ಮುಚ್ಚುಮರೆಯಿಲ್ಲದಂತೆ ತೆರೆದಿಡುತ್ತಿದ್ದರು. ಪ್ರತಿಯೊಬ್ಬರಿಗೂ ಪರಿಶುದ್ಧವಾದ ಅವರವರ ಹೃದಯವೇ ಆಧಾರವಾಗಿದ್ದಿತು. ಅನುಭವದಿಂದ ಸಂಭವಿಸಿದ ಪ್ರಗತಿಯೇ ಪುರೋಭಿವೃದ್ಧಿಯ ಕುರು ಆಯಿತು. ಈ ಪ್ರಗತಿಪರ ವಿಕಾಸವನ್ನನುಸರಿಸಿ ಆಚಾರ ವಿಚಾರಗಳು ನಿರ್ಧರಿಸಲ್ಪಟ್ಟವು. ಯಾವ ರೀತಿಯ ಆಚರಣೆಯನ್ನು ಕೈಕೊಂಡರೆ ಮಾರ್ಗವು ಸುಲಭವಾಗುವದೋ ಅಂತಹ ಆಚರಣೆಗಳನ್ನೇ ಜನರಿಗೂ ತಿಳಿಯಹೇಳಲಾಯಿತು. 'ನಡೆದಂತೆ ನುಡಿ ನುಡಿದಂತೆ ನಡೆ' ಎನ್ನುವದೇ ಅನುಭವ ಮಂಟಪದ ಕಟ್ಟಳೆ. ಕ್ರಿಯೆಯಂತೆ ಜ್ಞಾನವೂ, ಜ್ಞಾನದಂತೆ ಕ್ರಿಯೆಯೂ ಪರಸ್ಪರ ಸಮಾನ ಗುಣವುಳ್ಳವುಗಳೆಂದು ಅನುಭಾವಿಗಳು ನಿರ್ಣಯಿಸಿದ್ದರಿಂದ ಧರ್ಮವು ಕ್ರಿಯಾ

ಜ್ಞಾನ ಸಮರಸಾತ್ಮಕವಾಯಿತು. ಜೀವನ ಒಳಗಣದ ಅನುಭವವು ಹೊರಕ್ಕೂ, ಹೊರಗಿನ ಅನುಭವವು ಒಳಕ್ಕೂ ವ್ಯಾಪಿಸಿರುವದರಿಂದ ಅದರಲ್ಲಿ ಒಂದು ಸ್ಥಾಯೀಭಾವವು ನೆಲೆಗೊಂಡಿತು. ಭಾವದಲ್ಲಿ ಉದಯವಾದುದು ಮನಸ್ಸಿಗೂ, ಮನಸ್ಸಿನಲ್ಲಿ ಮೂಡಿದುದು ಕ್ರಿಯೆಯಲ್ಲೂ ರೂಪುಗೊಳ್ಳುತ್ತದೆ. ಹಾಗೆಯೇ ಕ್ರಿಯೆಯ ತತ್ವಗಳು ಮನಸ್ಸಿಗೆ ಮುಟ್ಟುವಂತೆಯೂ ಆಚಾರ ವಿಧಿಸಲ್ಪಟ್ಟುವು. ಅದಕ್ಕೆ ತಕ್ಕಹಾಗೆ ಅಷ್ಟಾವರಣಗಳೂ, ಷಟ್‌ಸ್ಥಲಗಳೂ ಪರಿಶೀಲಿಸಲ್ಪಟ್ಟುವು. ಇವು ಹಿಂದಿದ್ದವುಗಳಾದರೂ ಹನ್ನೆರಡನೆಯ ಶತಮಾನದ ನಂತರ ಇವುಗಳಿಗೊಂದು ವಿಶೇಷಾರ್ಥ ಉಂಟಾಯಿತು.

ಶ್ರೀ ಲಕ್ಷ್ಮಣರಾವ್, ಬಿ.ಎ., ಚಿತ್ರದುರ್ಗ—ಇವರು "ಬಸವಣ್ಣನ ನೆನಹು" ಎಂಬುವ ಕವಿತೆಯನ್ನು ಬರೆದಿರುತ್ತಾರೆ. ಅದರಲ್ಲಿಯ ಕೆಲವು ನುಡಿಗಳನ್ನು ಇಲ್ಲಿ ಕೊಡಲಾಗಿದೆ.

ಶಿವ ಪರಾಪರ ವಸ್ತು ಬಸವನು । ಶಿವನೆ ಚಿದ್ಧರ್ಮನವತಾರನು ।
ಶಿವನೆ ಈ ಜಗಲಿಂಗ ರೂಪನು । ಶಿವನೆ ಸಂಗನ ಬಸವನು ॥ ೧ ॥

ಜಗದವಸುವೀ ಬಸವನಾಗಿಹ । ಯುಗದ ಶಿವನೀ ಬಸವನಾಗಿಹ ।
ಸೊಗಸು ಜಂಗಮಲಿಂಗ ಸಮರಸ । ಮಿಗಿಲು ಶರಣ ಕುಟುಂಬಿಯು ॥ ೨ ॥

ಬಸವ ನಾಮವೆ ಕಲ್ಪವೃಕ್ಷವು । ಬಸವ ದೇಹವೆ ಪರುಷ ಶಿಲೆಯು ।
ಬಸವ ಹೃದಯವೆ ಕಾಮಧೇನುವು । ಬಸವ ಜನ್ಮವೆ ಸಫಲವು । ॥ ೩ ॥

ಕವಿಯು ಬಸವನು ರವಿಯು ಬಸವನು । ಶಿವನು ಬಸವನು ಸಿದ್ಧ ಬಸವನು ।
ದಿವಸ ಸವಿಯನು ಭವದಿ ತೋರಿದ । ಶಿವನು ಸುಧಾಮಯ ಬಸವನು ॥ ೪ ॥

ಬಸವ ಮತವೇ ಶಿವನ ಮತವು । ಬಸವ ಮತವೇ ಶ್ರೇಷ್ಠ ಮತವು ।
ಬಸವ ತತ್ವವು ಮನವನಾಳಲು । ಅಸಮನೆನಿಸುವನಾ ನರ ॥ ೫ ॥

ವಚನ ಬಸವನ ಮೊಲ್ಲೆಸುರಗಿಯು । ಶುಚಿಯು ಸುರಭಿಯು ಸುಲಭ ಮೋಹಕ ।
ವಚನ ಜ್ಞಾನದ ಸುರಭಿ ಕ್ಷೀರವು । ವಚನ ಚೇತನ ಜ್ಯೋತಿಯು ॥ ೬ ॥

ಶರಣಕವಿ, ಕಲ್‌ಬುರ್ಗಿ—ಇವರು 'ಬಸವಭೂಮಿ' ಎಂಬುವ ಗ್ರಂಥವನ್ನು ಬರೆದಿರುತ್ತಾರೆ.

ಬಸವಭೂಮಿ ಎಂಬುವ ಗ್ರಂಥದಲ್ಲಿ—

(ಧಾಟಿ: ಮಾತೃಭೂಮಿ ಜನನಿ ನಿನ್ನ ಚರಣಸೇವೆ ಮಾಡುವಾ)

ಬಸವಭೂಮಿ ನಿನ್ನ ಸೇವೆ ಹರುಷದಿಂದ ಮಾಡುವ ।
ಹಸುಳರೆಲ್ಲ ನಿನ್ನ ಚರಣದಲ್ಲಿ ಕೊರಳ ನೀಡುವಾ ।
ಕಳೆದುಹೋದ ಘನತೆಯನ್ನು ಮರಳಿ ಜಗಕೆ ತೋರುವಾ ।
ಹೊಳೆವ ಬಾಲಸೂರ್ಯನಂತೆ ಧರೆಯನೆಲ್ಲ ಬೆಳಗುವಾ ।
ವೀರಶೈವ ಧರ್ಮ ಕ್ರಾಂತಿಗಾಗಿ ರಕುತ ಹರಿಸುವಾ ।
ವೀರ ತರುಣ ವೃದ್ಧರೆಲ್ಲ ರಣಕೆ ಬೇಗ ಸಾಗುವಾ ।
ಗುರು ವಿರಕ್ತರೆಲ್ಲ ಭೇದಬುದ್ಧಿಯನ್ನು ತಾಳದೆ ।
ನಿರುತ ನಿನ್ನ ಸೇವೆಗೈದು ಶಾಂತಿ ನೆಲಸಬಾರದೆ ।

ವೀರಶೈವ ಬಂಟರೆಲ್ಲ ಶೂರತನವ ತೋರುತ ।
ವೀರಮರಣವನ್ನು ಬೇಗ ಬನ್ನಿ ಅಪ್ಪಿಕೊಳ್ಳಲು ।
ಮಾನಹೀನರಾಗಿ ಬಳಲುತಿಹರು ನಿನ್ನ ಮಕ್ಕಳು ।
ಜ್ಞಾನ ತೋರಲೀಗ ಚನ್ನಬಸವ ಜನಿಸಬಾರದೆ ॥

ಶ್ರೀ ಆನಂದಕವಿ ಕುರುಗುಂದ—ಸರಸ ಕವಿತೆಗಳನ್ನು ಬರೆಯುತ್ತಾರೆ. ದರುಶನ ಕೊಡಬಾರದೇ ಎಂಬುವ ಕವಿತೆಯಲ್ಲಿ—

ಕನ್ನಡದ ಕುಲದೀಪ ಕುಶಲಮತಿ ಬಸವಣ್ಣ ।
ಉನ್ನತದ ಕ್ರಾಂತಿಯನು ವಿಶ್ವದಲಿ ಹಬ್ಬಿಸಿದ ।
ನಿನ್ನ ವಚನಗಳ ಹೊಳೆ ಹೊನ್ನಾಗಿ, ರನ್ನಾಗಿ, ಹೊಸತಾಗಿ ಹರಿಯುತಿಹುದು ॥
ಕಲ್ಯಾಣ ಬಸವಣ್ಣ ಕಲಿಯುಗದ ಮುಕ್ಕಣ್ಣ ।
ನಲ್ಮೆಯಿಂ ನೋಡಲ್ಕೆ ಬೇಗನೇ ಬಾರಣ್ಣ ।
ಸಲ್ಲಲಿತ ಭಕ್ತಿಯಿಂ ಕೊಂಡಾಡಿ ನಿನ್ನನ್ನು ಪ್ರೇಮದಿಂ ನಮಿಸುತಿಹೆವು ॥ ೧ ॥

ಹೊಸತರದ ಕ್ರಾಂತಿಯನು ಹಬ್ಬಿಸಿದ ಬಸವೇಶ ।
ನಸುನಗುತೆ ನಲಿನಲಿದು ನಮಿಸುತ್ತೆ ಬೇಡುವೆನು ।
ರಸನೆಯೊಳು ಸಂತತಂ ತವನಾಮ ಸುಧೆಯಿರಲಿ ಬೇರೊಂದು ವರವನೊಲ್ಲೆ ।
ಹಸನಾದ ಮನಸಿನೋಳ್ ಕನಸಿನೋಳ್ ನಿದ್ದೆಯೋಳ್ ।
ಜಸವೆತ್ತ ನಿನ್ನ ಸುಂದರ ವಚನದರುಹಿರಲಿ ।
ಬಸವೇಶ, ಬಸವರಸ, ಬಸವಣ್ಣ, ಶ್ರೀ ಬಸವರಾಜೇಂದ್ರ ಪಾಹಿ ॥ ೨ ॥

ಅನುಭವ ಮಂಟಪವ ಸಾನುರಾಗದಿ ರಚಿಸಿ ।
ಜನಹಿತಕೆ ಘನತರದ ಆತ್ಮವನ್ನರ್ಪಿಸಿದ ।
ಪುಣ್ಯಾತ್ಮ ಬಸವಣ್ಣ ಅನುದಿನದಿ ನಿನ್ನನ್ನು ಜಗವೆಲ್ಲ ನೆನಸುತಿಹುದು ॥
ಕನ್ನಡದ ನಾಡಿಂದು ಕನವರಿಸುತಿರುತಿಹುದು ।
ಜಿನದದಿಂದಿನ್ನೊಮ್ಮೆ ಬೇಗನೇ ದಯಮಾಡು ।
ಮುನ್ನಿನಾ ಮಾದೇವಿ ಮಡಿವಾಳ ಮಾಚಯ್ಯ ಮೊದಲಾದ ಶರಣರೊಡನೆ ॥ ೩ ॥

ಬೆಳ್ಳಿಯೂ ಹಬ್ಬದಾ ಮಲ್ಲಿಗೆಯ ಮಕರಂದ ।
ಎಲ್ಲೆಡೆಗೆ ಸೂಸುತಿದೆ ಮಾಮರವು ಚಿಗಿಯುತಿದೆ ।
ಉಲ್ಲಾಸದಿಂದೀಗ ಕಳಕಂಠ ಕೂಗುತಿವೆ ಬಾರಯ್ಯ ಬಸವಣ್ಣನೇ ॥
ಅಕ್ಕನಾ ಗೀತೆಗಳು ಉಕ್ಕುಕ್ಕಿ ಹರಿಯುತಿವೆ ।
ದಿಕ್ಕು ದಿಕ್ಕಿಗೆ ನಿನ್ನ ನಾಡಗುಡಿ ಮೆರೆಯುತಿದೆ ।
ಅಕ್ಕರದಿ ನೋಡಲ್ಕೆ ಅಳಿಯನಂ ಕರಕೊಂಡು ಬೇಗ ಬಾ ಬಸವಣ್ಣನೇ ॥ ೪ ॥

ಕಲ್ಯಾಣ ಕರೆಯುತಿದೆ ಕನ್ನಡವು ಕುಣಿಯುತಿದೆ ।
ಬಲ್ಲಿದನೆ ಬಸವಣ್ಣ ಬಾ ಎನ್ನ ಬಂಧುವೇ ।
ಎಲ್ಲಿ ನೋಡಿದಡಲ್ಲಿ ನಿನ್ನ ವಚನದ ಸೊಲ್ಲು ಎಡೆಬಿಡದೆ ಕೇಳುತಿಹುದೂ ॥
ಕಣ್ಣುಗಳು ನಿನ್ನನ್ನು ನೋಡಲ್ಕೆ ಬಯಸುವವು ।
ಧನ್ಯತಮ ಕರ್ಣಮುಂ ಕೊಂಡಾಡಿ ನಲಿಯುತಿಹವು ।
ಮುನ್ನಿನಾ ಹನ್ನೆರಡು ಶತಮಾನ ನೆನೆ ನೆನೆದು ಶೋಕವಂ ಗೆಯ್ಯುತಿಹವೂ ॥ ೫ ॥

ಕರಣಕ್ಕೆ ಆನಂದ ಕಂಗಳಿಗೆ ದುಃಖವೈ ।
ಧರೆಗೆಲ್ಲ ಸುಖವೀವ ಧರ್ಮಾತ್ಮ ಬಸವಣ್ಣ ।
ಕರುಣಾಳು ದೇವನೇ ಕರ್ಣಾಟಕಿನ್ನೊಮ್ಮೆ ದರುಶನವ ಕೊಡಬಾರದೇ ॥
ಬಾರಯ್ಯ ಬಸವಣ್ಣ ಬಾ ಎನ್ನ ಶ್ರೀಗುರುವೆ ।
ಭಾರತವು ಅಲ್ಲಲ್ಲಿ ವಿಶ್ವವೇ ನಿನ್ನನ್ನೆ ।
ಹಾರೈಸಿ ಹಂಬಲಿಸಿ ಹಾತೊರೆದು ಕರೆಯುವದು ಬೇಗ ಬಾ ಬಸವಣ್ಣ ॥ ೬ ॥

ಶ್ರೀಮನ್ನಿರಂಜನ ಮಹಾದೇವ ಸ್ವಾಮಿಗಳು, ಸರ್ಪಭೂಷಣ ಶಿವಯೋಗಿಮಠ, ಬೆಂಗಳೂರು—ಇವರು ಶಿವಾನುಭವ ಪಂಡಿತರಿದ್ದು ಒಳ್ಳೇ ವಾಙ್ಮಿಗಳಾಗಿರುತ್ತಾರೆ.

ಭಗವಾನ್ ಬುದ್ಧದೇವನು ಜನರಾಡುವ ನುಡಿಯಲ್ಲಿ ಧರ್ಮದ ರಹಸ್ಯವನ್ನು ಬೋಧಿಸಿ ಹಿಂದೂ ಧರ್ಮದಲ್ಲಿ ದೊಡ್ಡ ಪ್ರಕಾಶವನ್ನುಂಟುಮಾಡಿದನು. ಕಾಲಾನುಗುಣವಾಗಿ ಜನತೆಯು ಅನಾಚಾರದಿಂದಲೂ, ಅನಾದರದಿಂದಲೂ ಧರ್ಮವು ಖಿಲವಾಗುತ್ತಿರುವಾಗ ಕಾಲ ಕಾಲಕ್ಕೆ ಮಹಾತ್ಮರು ಉದ್ಭವಿಸಿ ಧರ್ಮೋದ್ಧಾರಮಾಡಿದಂತೆ ಕರ್ಣಾಟಕದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಭಗವಾನ್ ಬಸವೇಶ್ವರನು ಉದಯವಾಗಿ ಅಸ್ತವ್ಯಸ್ತವಾಗಿದ್ದ ಹಿಂದೂ ಧರ್ಮದಲ್ಲಿ ಹೊಸದೊಂದು ಕ್ರಾಂತಿಯನ್ನುಂಟುಮಾಡಿದನು. ನಿಜವಾದ ಧರ್ಮದ ನೆಲೆಯನ್ನು ಕಂಡುಹಿಡಿದು ಸ್ತ್ರೀ ಪುರುಷರೆಲ್ಲರಿಗೂ ಎಲ್ಲ ಅವಸ್ಥೆಯಲ್ಲಿ ಆಹಾರದ ಅವಶ್ಯಕತೆ ಇರುವಂತೆ ಧರ್ಮದ ಅವಶ್ಯಕತೆ ಇರುವದೆಂದು ಸಾರಿದನು. ಮೇಲು ಕೀಳೆಂಬ ಸ್ಮೃತಿಕಾರರ ವರ್ಣವಾದದ ಸೆಳೆತಕ್ಕೆ ಸಿಕ್ಕು ಜೀವನದ ಮೇಲ್ಮೆಯನ್ನರಿಯದೆ ನಾನಾ ಬಗೆಯ ಸಂಕಷ್ಟಕ್ಕೆ ಗುರಿಯಾಗಿ ಬಳಲುತ್ತಿರುವ ಜನಾಂಗದಲ್ಲಿ ಸದಾಚಾರ, ಸುನೀತಿ, ಭಕ್ತಿ ಜ್ಞಾನಗಳ ಆಂತರಿಕವಾಗುವಂತೆ ಮಾಡಿ ಒಂದೇ ಜನ್ಮದಲ್ಲಿ ಮೋಕ್ಷವನ್ನು ಎಲ್ಲರೂ ಹೊಂದಲು ಶಕ್ಯವೆಂದು ಮನವರಿಕೆ ಮಾಡಿಕೊಟ್ಟನು. ನಾವು ಅರಿಯುವ ಆರಾಧಿಸುವ ದೇವರು ಹೊರಗಿಲ್ಲ. ಯಾವ ಕಾಡಿನಲ್ಲಿ ದೇವರನ್ನು ಹುಡುಕಲಿಕ್ಕೆ ಹೋದರೂ ನಮ್ಮ ಭಾವನೆಯಲ್ಲಿರುವ ದೇವನೇ ನಮ್ಮ ಮುಂದೆ ಬಂದು ನಿಲ್ಲುವನು. ನಮ್ಮ ಭಾವನೆಯೇ ನಮಗೆ ಸಂಸಾರವಾಗಿದೆ. ದೇವರೂ ಆಗುವದು, ಎಲ್ಲವೂ ಆಗುವದು.

ತಾಯಿಯ ಗರ್ಭದಲ್ಲಿ ಪಿಂಡವಾಗಿ ಬೆಳೆದು ಶಿಶುವಾಗಿ ಹುಟ್ಟಿ ಬಾಳಿ ಸಾಯುವವರೆಗೂ ಎಲ್ಲ ಅವಸ್ಥೆಯೊಳಗೆ ಎಲ್ಲರಲ್ಲಿಯೂ ಒಂದೇ ಬಗೆಯ ಆತ್ಮಭಾವನೆಯು ಇದ್ದೇ ಇರುತ್ತದೆ.

"ಅಂಕ ಓಡಿದರೆ ತೆತ್ತಿಗಂಗೆ ಭಂಗವಯ್ಯ ಕಾದಿ ಗೆಲಿಸಯ್ಯ ಎನ್ನನು ಕಾದಿ ಗೆಲಿಸಯ್ಯ ಎನ್ನ ತನು-ಮನ-ಧನಗಳಲ್ಲಿ ವಂಚನೆಯಿಲ್ಲದೆ."

"ಹೇಡಿ ಬಿರುದು ಕಟ್ಟಿದಂತಾಯಿತು ಎನ್ನ ವೇಷ. ಕಾದಬೇಕು ಕಾದುವರೆ ಮನವಿಲ್ಲ ಅಚ್ಚ ಶರಣರು ನಿಮ್ಮ ನಿಚ್ಚ ನೆನೆವರು ಬಚ್ಚ ಬರಿಯ ಮಾತಾಡುವೆನು. ಒಡೆಯರಿಗೆ ಒಡವೆಯನೊಪ್ಪಿಸಲಾರದೆ ಮೋರೆ ಇಡುವ ಮಾನವ ನಾನೇನೆಂಬೆ? ನೆತ್ತಿಯಲ್ಲಿ ಅಲಗು ತಿರುಹುವಂತಪ್ಪ ವೇದನೆಯಹುದೆನಗೆ ಕೊಯ್ದ ಮೂಗಿಂಗೆ ಕನ್ನಡಿಯ ತೋರುವಂತಪ್ಪ ವೇದನೆಯಹುದೆನಗೆ ಬೆಂದಹುಣ್ಣ ಕಂಬಿಯಲ್ಲಿ ಕೀಸುವಂತಪ್ಪ ವೇದನೆಯಹುದೆನಗೆ ಕೂಡಲಸಂಗಮದೇವ ನೋಡಿನೋಡುವ ಹಗರಣವ ನಾ ಮಾಡಿಹನೆಂದರೆ ಮನಕ್ಕೆ ಮನ ನಾಚದೇ?"

ಮೇಲಿನ ವಚನಗಳಲ್ಲಿ ಮನುಷ್ಯನು ತನ್ನ ಜೀವಿತದಲ್ಲೆಲ್ಲ ಹೋರಾಡಿ ತನ್ನ ತನು ಮನ ಭಾವಗಳನ್ನು ಪರಮಾತ್ಮನಿಗೆ ಅರ್ಪಿಸಿ ಶುದ್ಧನಾಗುವ ವಿಧಾನವನ್ನು ವಿವರಿಸಿರುವರು. ಇವೆಲ್ಲವುಗಳಿಗೆ ಒಡೆಯನಾದ ಪರಮಾತ್ಮನಿಗೆ ಅರ್ಪಿಸದೆ ಗೋಳಾಡುವವರಿಗೆ ಎಂತಹ ಕನಿಕರ ಭಾವವನ್ನು ತೋರಿಸಿ ಕಲ್ಲಿನಂತಹ ಮನವು ಕರಗಿ ನೀರಾಗುವಂತೆ ನುಡಿದಿದ್ದಾರೆ. ಸಹಜವಾದ ತ್ಯಾಗವನ್ನು ಕಲಿಸಿದ್ದಾರೆ. ತ್ಯಾಗವಿಲ್ಲದೆ ಬಿಡುಗಡೆ ಇಲ್ಲವೆಂಬುದನ್ನು ಸಿದ್ಧಮಾಡಿಕೊಟ್ಟಿರುತ್ತಾರೆ. ತ್ಯಾಗ ಮತ್ತು ಆತ್ಮವಿಶ್ವಾಸ ಸಮತ್ವವಿಲ್ಲದ ಜನಾಂಗವು ಪ್ರಪಂಚದಲ್ಲಿ ಚಿರಕಾಲ ಬಾಳಲಾರದು. ಅದಕ್ಕಾಗಿ "ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ" ಎಂಬ ಭಗವದುಕ್ತಿಗನುಸಾರವಾಗಿ ಎಲ್ಲರ ಚಿತ್ತ ಭೂಮಿಯಲ್ಲಿ ತ್ಯಾಗ, ಆತ್ಮವಿಶ್ವಾಸ, ಸಮತ್ವ ಬೀಜವನ್ನು ಬಿತ್ತಿರುತ್ತಾರೆ.

ಶ್ರೀ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳು, ಶ್ರೀಮನ್ನಿಡು ಮಾಮಿಡಿಮಠ, ಶ್ರೀಶೈಲ ಸಂಸ್ಥಾನ—ಭಕ್ತಿಭಂಡಾರಿ ಬಸವಣ್ಣನ ಬೆಳಗು ವೀರಶೈವ ಸಮಾಜವೊಂದನ್ನೇ ಅಲ್ಲ, ವಿಶ್ವವನ್ನೇ ಹರಡಿ ಹೊಂಪುಳಿಯಾಗಿರುತ್ತದೆ. ಆತನ ಜೀವನ ವ್ಯಕ್ತಿಜೀವನವಲ್ಲ, ಭಾರತದ ಸಂಜೀವನ. ಆತನ ವಚನ ಹರಟೆಯ ಮಾತಲ್ಲ, ಆಧ್ಯಾತ್ಮದ ನಂದನವನ, ಕನ್ನಡದ ಚಂದನವನ.

ಭಾರತ ಬಾಂದಳದಲ್ಲಿ ಮಿಣುಗುವ ನಕ್ಷತ್ರಗಳಿಗೆ ಮಹಾಪುರುಷ ಬಸವನೇ ಹುಣ್ಣಿಮೆಯ ಚಂದ್ರನು. ಆತನ ಜೀವನವು ಪರಿಪೂರ್ಣವೂ, ಅಮೃತ ಶ್ರಾವಿಯೂ ಆಗಿರುತ್ತದೆ. ಬಸವಣ್ಣನ ದಯಾಮಯ ಜೀವನವು ಭಾರತಕ್ಕೆ ಲೌಕಿಕ ಆಧ್ಯಾತ್ಮಿಕ ಇಹಪರ ಸುಖಗಳೆರಡನ್ನೂ ಸೂರೆಗೊಳಿಸಿದೆ. ಉಳಿದ ಮಹಾಪುರುಷರಂತೆ ಬಸವನು ಬರಿ ವೇದಾಂತದ ತಿರುಳನ್ನೇ ತೋರಲಿಲ್ಲ. ಜಗತ್ತಿಗೆ ಮೂಲಕಾರಣವಾವುದು ? ಅನ್ನ ಅನ್ನವನಿಕ್ಕದೆ ಬರಿ ವೇದಾಂತವ ಬೋಧಿಸಿ ಪ್ರಯೋಜನವಿಲ್ಲವೆಂದು ಬಸವಣ್ಣನು ಮೊದಲು ವೃಷಭ (ಎತ್ತು) ನಾಗಿ ಜನಿಸಿ ಭಾರತಕ್ಕೆಲ್ಲ ಅನ್ನಸಮೃದಿಯನ್ನುಂಟು ಮಾಡಿದನು. ಭಾರತದ ಕೃಷಿಗೆ ಮೂಲ ಜೀವಾಳನಾದನು. ಭಾರತದ ಬಡವ ಬಲ್ಲಿದರೆಲ್ಲರನ್ನೂ ಉದ್ಧರಿಸಿದನು. ಇಂದಿಗೂ ಉದ್ಧರಿಸುತ್ತಿರುವನು. ಮುಂದೆಯೂ ಉದ್ಧರಿಸುವನು. "ಅನ್ನಂ ಬ್ರಹ್ಮೇತಿ ವಿಜಾನೀಯಾತ್" ಎಂದು ಶೃತಿ ಸಾರುವ ಅನ್ನ ಬ್ರಹ್ಮದ ಸೃಷ್ಟಿಕರ್ತನು ಬಸವನು. ಬಸವನಿಲ್ಲದೆ ನಮಗೆ ಅನ್ನವಿಲ್ಲ. ಚೈತನ್ಯವಿಲ್ಲ. ಚೈತನ್ಯವಿಲ್ಲದೆ ಹಣ ಸಂಪಾದಿಸಲಾರೆವು, ಗುಣ ಗಳಿಸಲಾರೆವು. ಗುಣ ಗಳಿಸದೆ ಗೌರವ ಕಾಸ್ಪದವಿಲ್ಲ, ಸುಖಕ್ಕೆಡೆಯಿಲ್ಲ. ಜಗತ್ತಿನ ರಾಷ್ಟ್ರಗಳಲ್ಲಿ ಹೆಮ್ಮೆಯನ್ನು ಗಳಿಸಿದ್ದು ಬಸವನಿಂದ. ಒಟ್ಟಿನಲ್ಲಿ ಭಾರತದ ಅನ್ನ, ಚೈತನ್ಯ, ಸಂಪತ್ತು, ಕೀರ್ತಿ ಮೊದಲಾದವು ಗಳಿಗೆಲ್ಲ ಬಸವನೇ ಮೂಲಿಗನು. ಈ ಕಾರಣಗಳಿಂದ ಬಸವನು ತನ್ನ ವೃಷಭಾವತಾರ ದಿಂದ ಭಾರತದ ಪ್ರತಿಯೊಂದು ಮನೆಯಲ್ಲಿಯೂ ಪೂಜ್ಯತೆಯನ್ನು ಪಡೆಯುತ್ತಿದ್ದಾನೆ. ಭಾರತದ ಜೀವಕಳೆಯಾಗಿದ್ದಾನೆ.

ದಿವಾನ್ ಬಹದ್ದೂರ್ ರಾಜಸಭಾಭೂಷಣ ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟರು, ಬೆಂಗಳೂರು—ಇವರು ವೀರಶೈವ ಮಹಾಸಭೆಗೆ ಎರಡು ಸಾರಿ ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದರು. ಮೈಸೂರು ಬ್ಯಾಂಕ್, ಬೆಂಗಳೂರು ಕಾರ್ಪೊರೇಷನ್, ಮೈಸೂರು ಲಿಂಗಾಯತ

ವಿದ್ಯಾಭಿವೃದ್ಧಿ ಸಂಘ, ರಾ॥ ಬ॥ ತೋಟದಪ್ಪನವರ ಛತ್ರ, ಬೆಂಗಳೂರು ಪ್ರೆಸ್ ಲಿಮಿಟೆಡ್ ಮೊದಲಾದ ಅನೇಕ ಸಂಸ್ಥೆಗಳಿಗೆ ತಮ್ಮ ಜೀವಮಾನದವರೆಗೂ ಅಧ್ಯಕ್ಷರಾಗಿದ್ದರು. ತೀಕ್ಷ್ಣ ಮೇಧಾವಿಗಳೂ, ಮೈಸೂರು ಸಂಸ್ಥಾನದಲ್ಲಿ ಮೊದಲನೆಯ ವರ್ಗದ ಗೌರವವುಳ್ಳವರೂ ಆಗಿದ್ದರು. ಇವರು ದಾವಣಗೆರೆಯಲ್ಲಿ ೧೯೧೮ನೆಯ ಇಸ್ವಿಯಲ್ಲಿ ನಡೆದ ಒಂಭತ್ತನೆಯ ವೀರಶೈವ ಮಹಾಸಭೆಗೆ ಅಧ್ಯಕ್ಷರಾಗಿದ್ದಾಗ ತಮ್ಮ ಅಧ್ಯಕ್ಷ ಭಾಷಣದಲ್ಲಿ ಶ್ರೀ ಬಸವಣ್ಣನವರ ಬಗ್ಗೆ—

ನಮ್ಮ ಆಚಾರ್ಯವರ್ಯರಾದ ಶ್ರೀ ಬಸವೇಶ್ವರ ಸ್ವಾಮಿಗಳವರು ಈ ಮತವನ್ನು ಉಜ್ಜೀವಿಸಿ ಬೇಕಾದಷ್ಟು ಉತ್ತೇಜನವನ್ನು ಕೊಟ್ಟು ಸರ್ವವ್ಯಾಪಕವಾಗುವಂತೆ ಮಾಡಿದುದಲ್ಲದೆ ಈ ಮತಸಂಬಂಧವಾದ ಆಚಾರ ವ್ಯವಹಾರಗಳನ್ನೆಲ್ಲ ಸಂಸ್ಕರಿಸಿ ಸರಿಯಾದ ವಿಧಿಗಳನ್ನೇರ್ಪಡಿಸಿ ಇತರ ಪಂಗಡಗಳವರೂ ಸಹ ಈ ಶೈವಮತವನ್ನವಲಂಬಿಸಿ ಶ್ರೇಷ್ಠತೆಯನ್ನು ಹೊಂದಿ ಧನ್ಯರೂ, ಕೃತಕೃತ್ಯರೂ ಆಗುವಂತೆ ಮಾಡಿದರು. ಶ್ರೀ ಬಸವೇಶ್ವರ ಸ್ವಾಮಿಗಳವರು ನಮ್ಮ ಪಂಚಾಚಾರ್ಯರ ಮತವ್ಯಾಪಕತೆಗಾಗಿ ಅತ್ಯುತ್ಸಾಹಕರಾದ ಬೋಧಕರಾಗಿದ್ದರು. ಶ್ರೀ ಬಸವೇಶ್ವರ ಸ್ವಾಮಿಗಳು ಮತೋದ್ಧಾರಕರಾಗಿದ್ದುದೂ ಅಲ್ಲದೆ ಪ್ರಜೆಗಳ ಅಭ್ಯುದಯ ವಿಚಾರದಲ್ಲಿ ಅತ್ಯಂತ ಆಸಕ್ತರಾಗಿಯೂ ಇದ್ದರು. ಇದಕ್ಕೆ ಇವರು ನಿಮ್ನಜಾತ್ಯುದ್ಧರಣದಲ್ಲಿಯೂ ನಿರತರಾಗಿ ಕೀಳುಜಾತಿಯವರನ್ನೆಲ್ಲ ಲಿಂಗಧಾರಿಗಳನ್ನಾಗಿಯೂ, ದೈವಭಕ್ತಿಪರಾಯಣರಾಗುವಂತೆಯೂ ಮಾಡಿದುದೇ ದೃಷ್ಟಾಂತವಾಗಿರುತ್ತದೆ.

ಸಂಗಪ್ಪ ಮಾಳವಾಡ, ಎಂ.ಎ.—ಇವರು ಧಾರವಾಡದಲ್ಲಿರುವ ಕರ್ಣಾಟಕ ಕಾಲೇಜಿನ ಪ್ರೊಫೆಸರರು. ಗ್ರಂಥಗಳನ್ನು ಬರೆದಿರುತ್ತಾರೆ.

ಸಂಪ್ರದಾಯದ ಮನೆತನದಲ್ಲಿ ಹುಟ್ಟಿ ಬೆಳೆದು ೮೦೦ ವರ್ಷಗಳ ಹಿಂದೆಯೇ ತನ್ನ ಸಂಸ್ಕಾರದ ಕುರುಹನ್ನು ಕರ್ಮಲತೆಯೆಂದು ಬಿಸಾಡುವುದರ ಮೂಲಕವೇ ಬಸವಣ್ಣನ ಜೀವನದ ಕ್ರಾಂತಿ ಆರಂಭವಾಗುತ್ತಿದೆ. ಕರ್ಮಕಾಂಡದ ಬಾಹ್ಯ ಚಿಹ್ನೆಗಳು ಬಹುಕಾಲದಿಂದಲೂ ಪ್ರಚಾರದಲ್ಲಿದ್ದವು. ಆದರೆ ಕಾಲಕ್ರಮೇಣ ಅವು ಕೇವಲ ಗುರುತುಗಳೇ ಆಗಿ ಉಳಿದು ಅವುಗಳ ನಿಜವಾದ ಅರ್ಥ ಜನತೆಯಿಂದ ಕಣ್ಮರೆಯಾಗುತ್ತಿತ್ತು. ಸಂಸ್ಕಾರ, ಬಾಹ್ಯ ಆಚಾರ, ಲಾಂಛನ ಇವುಗಳಿಗೇ ಅವಾಸ್ತವ ಪ್ರಾಧಾನ್ಯ ಬಂದಿತ್ತು. ಸರಳ ಅಂತಃಕರಣ, ಸದಾಚಾರ ನೀತಿ ಇವುಗಳಿಗೆ ಲಾಂಛನದ ಹೊರತು ಬೆಲೆಯೇ ಇಲ್ಲದಂತಾಗಿತ್ತು. ಅಥವಾ ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ಆಚಾರಕ್ಕಿಂತ ಲಾಂಛನಕ್ಕೇ ಹೆಚ್ಚು ಪ್ರಾಧಾನ್ಯ ಬಂದಿತು. ಇಂತಹ ಸ್ಥಿತಿಯಲ್ಲಿ ಸಹಜವಾದ ವಿಕಾಸ ನಡೆದು ಪರಿವರ್ತನ ತೋರಬೇಕಾಗಿತ್ತು. ಹವಣಿ ಮೀರಿ ಬೆಳೆದಿದ್ದ ಈ ಲಾಂಛನದ ಪ್ರಾಧಾನ್ಯ ತಾನಾಗಿ ಅಳಿಯಬೇಕಾಗಿತ್ತು. ಆದರೆ ಸಾವಿರಾರು ವರ್ಷಗಳಿಂದ ಬೆಳೆದು ಬಂದಿದ್ದ ಈ ಸಂಪ್ರದಾಯವು ಬಲವತ್ತರವೂ ಆಗಿತ್ತು. ಸಹಜವಾದ ವಿಕಾಸ ನಡೆದಿದ್ದರೆ ಎಲ್ಲರೂ ಆ ಹಾದಿಯನ್ನು ಸ್ವಾಭಾವಿಕವಾಗಿ ಅನುಸರಿಸಬೇಕಾಗಿತ್ತು. ತೀರ ಪ್ರಬಲವಾಗಿ ಬೆಳೆದ ಸಂಪ್ರದಾಯವನ್ನು ಅಂದರೆ ಸದಾಚಾರಕ್ಕಿಂತ ಲಾಂಛನಕ್ಕೆಯೇ ಬಂದ ಪ್ರಾಧಾನ್ಯವನ್ನು ಅಲ್ಲಗಳೆಯಲು ಅಸಾಮಾನ್ಯ ಧೈರ್ಯದ ಓರ್ವ ವ್ಯಕ್ತಿ ಮುಂದೆ ಬಂದಾಗ ಆ ಕ್ರಾಂತಿ ತಲೆದೋರಿತು. ಸಹಜವಾಗಿ ನಡೆಯದುದನ್ನು, ಸಂಪ್ರದಾಯಗಳ ಮೂಲಕ

ಬಲವತ್ತರವಾಗಿರುವದನ್ನು, ಸಾಮಾನ್ಯ ಜನತೆ ವಿರೋಧಿಸಲಾರದುದನ್ನು ಎದುರಿಸುವ ವಿಲಕ್ಷಣ ಸಾಹಸವನ್ನೇ ನಾವು ಬಸವಣ್ಣನ ಜೀವನದಲ್ಲಿಯ ಕ್ರಾಂತಿಯ ಆರಂಭವೆಂದು ಹೇಳಬೇಕಾಗುತ್ತಿದೆ. ಕರ್ಮನಿಷ್ಠ ಮನೆತನದಲ್ಲಿ ಬಸವಣ್ಣನು ಹುಟ್ಟಿದನು, ಬೆಳೆದನು. ಆದರೆ ಕರ್ಮದ ಅತಿರೇಕವನ್ನು ತನ್ನಲ್ಲಿ ಬೆಳೆಯಗೊಡಲಿಲ್ಲ. ತೀರ ಚಿಕ್ಕವಯಸ್ಸಿನಲ್ಲಿ ತಂದೆ ತಾಯಿಗಳನ್ನು, ಅದ್ಭುತ ಶಕ್ತಿಯ ಸಮಾಜವನ್ನು ಪ್ರತಿಭಟಿಸಿ ಕರ್ಮಲತೆಯನ್ನು ಕಿತ್ತೊಗೆಯುವ ಅಸಮಸಾಹಸದಿಂದ ಆರಂಭವಾದ ಬಸವಣ್ಣನ ಕ್ರಾಂತಿಕಾರಕ ಜೀವನವು ಬೆಳೆದು ಫಲ ಕೊಟ್ಟಾಗಲೂ ಆ ಜೀವನ ಕ್ರಾಂತಿಯಿಂದಲೇ ತುಂಬಿರುವದು ಸಹಜವಾಗಿದೆ. ಆದರೆ ಬಸವಣ್ಣನ ಜೀವನದಲ್ಲಿಯ ಕ್ರಾಂತಿ ಕುಶಲ ವೈದ್ಯನು ನಡೆಯಿಸಿದ ಶಸ್ತ್ರಕ್ರಿಯೇ ಹೊರತು ವಿಕಾರವಶವಾಗಿ ನಡೆಯಿಸಿದ ಗಾಯವಲ್ಲ, ರಕ್ತಪಾತವಲ್ಲ. ಸಮಾಜದಲ್ಲಿಯ ಅವಾಸ್ತವವಾದ ಕರ್ಮನಿಷ್ಠೆಯು ಅಂದಿನ ಸಮಾಜದ ವೈಶಿಷ್ಟ್ಯವಾಗಿತ್ತು. ವೇದಗಳು ಅಪೌರುಷೇಯವೆಂಬ ಸಾವಿರಾರು ವರ್ಷಗಳ ನಂಬಿಕೆಯಿಂದ, ಹೇಳಿಕೆಯಿಂದ, ಕೇಳಿಕೆಯಿಂದ ವೇದಗಳಿಗೆ ಒಂದು ವಿಶೇಷವಾದ ಪ್ರಾಧಾನ್ಯವಿದ್ದ ಕಾಲದಲ್ಲಿ ವೈದಿಕ ಸಂಪ್ರದಾಯ ಮನೆತನದ ಓರ್ವ ಬಾಲಕನು ಆ ಸಂಪ್ರದಾಯವನ್ನು ಪ್ರತಿಭಟಿಸಲು ಆರಂಭಿಸಿದನು. ಮುಂದೆ ಪ್ರಬುದ್ಧನಾದಾಗ "ಶಾಸ್ತ್ರ ಘನವೆಂಬೆನೆ ಕರ್ಮವ ಭಜಿಸುತ್ತಿಹುದು. ವೇದ ಘನವೆಂಬೆನೆ ಪ್ರಾಣಿವಧೆಯ ಹೇಳುತ್ತಿದೆ. ಸ್ಮೃತಿಯ ಘನವೆಂಬೆನೆ ಮುಂದಿಟ್ಟು ಅರಸುತ್ತಿದೆ. ಅಲ್ಲೆಲ್ಲಿಯೂ ನೀನಿಲ್ಲ. ವೇದಕ್ಕೆ ಒರೆಯ ಕಟ್ಟುವೆ. ಶಾಸ್ತ್ರಕ್ಕೆ ನಿಗಳನಿಕ್ಕುವೆ. ತರ್ಕದ ಬೆನ್ನ ಬಾರನೆತ್ತುವೆ. ಆಗಮದ ಮೂಗ ಕೊಯ್ವೆ" ಎಂದು ಘಂಟಾಘೋಷವಾಗಿ ಹೇಳುವ ಎದೆಗಾರಿಕೆಯನ್ನು ತೋರಿದನು. ಹಾಗೂ ವೇದಶಾಸ್ತ್ರವ ಬಲ್ಲವರ ಹಿರಿಯರೆಂಬೆನೇ ಮಾಯಾಭ್ರಾಂತಿ. ಇವರು ಹಿರಿಯರೇ ಯಾಗವಟ್ಟುವಿಗೆ ಪ್ರಾಣರು. ಇವರಿಂದಧಿಕ ಸಾಧಿಸುವರೇನು ಕಿರಿಯರೇನು ಎಂದು ಆಹ್ವಾನ ಕೊಟ್ಟನು. ಆಹ್ವಾನವನ್ನು ಆಗ ಯಾರೂ ಸ್ವೀಕರಿಸ ದಂತಿಲ್ಲ. ಆದುದರಿಂದ ಈ ರೀತಿಯ ಪ್ರತಿಭಟನೆ ಈ ಮೊದಲೇ ಸಹಜವಾಗಿ ಬೆಳೆಯ ಬೇಕಾಗಿತ್ತು. ಅದು ಬೆಳೆಯದ್ದರಿಂದ ಬಸವಣ್ಣನ ಕ್ರಾಂತಿ ಆ ಕಾರ್ಯವನ್ನು ಮಾಡ ಬೇಕಾಯಿತು. ಸಹಜವಾಗಿ ಹರಿಯುವ ಪ್ರವಾಹವನ್ನು ಅಡ್ಡಗಟ್ಟಿದರೆ ಆ ಪ್ರವಾಹ ರಭಸದಿಂದ ಒಡ್ಡನ್ನು ಕೊಚ್ಚಿಕೊಂಡು ಹೋಗಬೇಕಾಗುತ್ತದೆ. ಸಹಜ ಪರಿವರ್ತನಕ್ಕೆ ತಡೆಯುಂಟಾದರೆ ಕ್ರಾಂತಿ ಬರಬೇಕಾಗುತ್ತದೆ. ಆದರೆ ಆ ಕ್ರಾಂತಿಯನ್ನು ಆರಂಭಿಸುವ ವರೆಗೆ ಅಸಾಮಾನ್ಯ ಸಾಹಸ ಬೇಕು. ಅಂತಹ ಸಾಹಸ ಬಸವಣ್ಣನಲ್ಲಿತ್ತು.

ರೆ. ಗೋ. ಗೋಖಲೆ, ಬಿ.ಎ., ಎಲ್‌ಎಲ್.ಬಿ., ಎಂ.ಎಲ್.ಸಿ., ಬೆಳಗಾವಿ— ಇವರು ಮುಂಬಯಿಯಲ್ಲಿ ಹೊರಡುವ "ನವಯುಗ" ಎಂಬುವ ದಿನಪತ್ರಿಕೆಯಲ್ಲಿ ೧೯೪೫ನೆಯ ಡಿಸೆಂಬರ್ ತಿಂಗಳಿನಲ್ಲಿ ಬಸವಣ್ಣನವರ ಬಗ್ಗೆ ಒಂದು ಲೇಖನವನ್ನು ಬರೆದಿರುತ್ತಾರೆ. ಅದರಲ್ಲಿ—

ರಾಮರಾಜ್ಯವನ್ನು ಹೇಗೆ ನಡೆಯಿಸಬೇಕು ಎಂಬುವದಕ್ಕೆ ಉತ್ಕೃಷ್ಟವಾದ ಉದಾಹರಣೆಯಾಗಿ ಲಿಂಗಾಯತ ಧರ್ಮಸುಧಾರಕ ಪುಣ್ಯಶ್ಲೋಕ ಬಸವೇಶ್ವರರೇ ಇರುತ್ತಾರೆ. ಜಾತಿಭೇದದ ಉಚ್ಚಾಟನೆಯನ್ನು ಮಾಡಿಸಿ, ಉಚ್ಚ-ನೀಚ ಭೇದಗಳನ್ನು ನಾಶಮಾಡಿಸಿ, ಅಸ್ಪೃಶ್ಯತೆಯನ್ನು ಹೋಗಲಾಡಿಸಿ ಸರ್ವರಿಗೂ ಲಿಂಗಾಯತ ಧರ್ಮದ ದೀಕ್ಷೆಯನ್ನು

ಕೊಡಿಸಿ, ಸ್ವದೇಶೀ ತತ್ವವನ್ನು ಪ್ರಚಾರ ಮಾಡಿಸಿ, ಅಂದರೆ ಸರ್ವರೂ ಸ್ವದೇಶವ್ರತ ತೆಗೆದುಕೊಳ್ಳುವಂತೆ ಮಾಡಿ, ರೊಟ್ಟಿಯ ವ್ಯವಹಾರವನ್ನು ಪ್ರಸ್ಥಾಪಿಸಿ, ಬ್ರಾಹ್ಮಣ ಅಸ್ಪೃಶ್ಯರಿಗೆ ಲಗ್ನವನ್ನು ಮಾಡಿಸಿ, ನ್ಯಾಯ, ನೀತಿ ಮತ್ತು ಸಮತಾ ಇವುಗಳ ಸಾಮ್ರಾಜ್ಯವನ್ನು ಬಸವೇಶ್ವರನು ಸ್ಥಾಪಿಸಿದನು ಮತ್ತು ಸುಧಾರಣವೇ ಪ್ರಧಾನವಾಗಿರ ತಕ್ಕ ಧರ್ಮದ ಪ್ರಚಾರ ಮಾಡಿದನು.

ಶ್ರೀಮಾನ್ ಬಿ. ಜಿ. ಖೇರ, ಎಂ.ಎ., ಎಲ್‌ಎಲ್.ಬಿ., ಎಂ.ಎಲ್.ಸಿ. — ಇವರು ಮುಂಬಯಿ ಇಲಾಖೆಯ ಕಾಂಗ್ರೆಸ್ ಸರ್ಕಾರದ ಮುಖ್ಯಮಂತ್ರಿಗಳಾಗಿದ್ದರು. ಲಂಡನ್ನಿನಲ್ಲಿ ಹಿಂದೂಸ್ಥಾನದ ಹೈಕಮಿಷನರಾಗಿದ್ದರು ಮತ್ತು ಕಾಂಗ್ರೆಸ್ ವರ್ಕಿಂಗ್ ಕಮಿಟಿ ಮೆಂಬರರೂ ಆಗಿದ್ದರು. ಮುಂಬಯಿಯಲ್ಲಿ ೧೯೪೬ನೆಯ ಜನವರಿ ತಿಂಗಳಿನಲ್ಲಿ ಕೂಡಿದ ಕರ್ಣಾಟಕದ ೧೦ನೆಯ ಏಕೀಕರಣ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಬಸವಣ್ಣ ನವರ ಬಗ್ಗೆ ಮಾತನಾಡಿದುದು—

ಕರ್ಣಾಟಕದ ಶ್ರೇಷ್ಠತೆಯನ್ನು ಪ್ರಶಂಸಿಸುತ್ತ, ಮುಖ್ಯ ಮುಖ್ಯ ಧರ್ಮಗಳ ಸಂಸ್ಥಾಪಕರೆಲ್ಲ ಕರ್ಣಾಟಕದವರೇ ಆಗಿರುತ್ತಾರೆ. ಶ್ರೀ ಬಸವೇಶ್ವರರ ವಿಷಯಕ್ಕೆ ನಾನು ಹೆಚ್ಚಿಗೆ ಹೇಳುವದು ಏನಿರುವದು? ಜಗತ್ತಿನ ಯಾವ ಭಾಷೆಗಳಲ್ಲಿಯೂ ಇಲ್ಲ ದಂತಹ ಶ್ರೇಷ್ಠತರವಾದ ವಚನಗಳನ್ನು ಕನ್ನಡದಲ್ಲಿಯೇ ರಚಿಸಿ ಧರ್ಮಬೋಧೆ ಮಾಡಿರುತ್ತಾರೆ. ಇದು ಇತಿಹಾಸದಲ್ಲಿ ಅತ್ಯಂತ ಮಹತ್ವದ್ದಾಗಿರುತ್ತದೆ. ಇದರಿಂದ ಕನ್ನಡ ಭಾಷೆಗೆ ಮಹತ್ವವಾದ ಗೌರವವಿದೆ ಎಂದು ಹೇಳಿದರು ಮತ್ತು ಬಸವಣ್ಣನವರ ವಿಷಯದಲ್ಲಿ ಅತ್ಯಂತ ಗೌರವಯುಕ್ತ ಮಾತುಗಳನ್ನಾಡಿದರು. ಬಸವಣ್ಣನವರ ತತ್ವ ಗಳನ್ನೆಲ್ಲ ಓದಿದ್ದೇನೆ. ಅವರ ಬಗ್ಗೆ ಹೆಚ್ಚಿಗೆ ಹೇಳಲು ಶಕ್ತನಲ್ಲ ಎಂದರು.

ಸಿದ್ಧರಾಮಪ್ಪ ಪಾವಟೆ, ಬಿ.ಎ., ಎಲ್‌ಎಲ್.ಬಿ., ಹುಬ್ಬಳ್ಳಿ — ಇವರು (೧) ವೃಷೇಂದ್ರಪದಭೂಷಣ, (೨) ಸುಪ್ರಭೇದ ಪ್ರಭಂಜನ, (೩) ಹರಿಹರನ ಲಿಂಗ ವಂತಿಕೆ, (೪) ಬಸವಭಾನು, (೫) ಚನ್ನಬಸವತೈಜಸ, (೬) ಅಲ್ಲಮವ್ಯೋಮ ಮೊದಲಾದ ಗ್ರಂಥಗಳನ್ನು ಬರೆದಿರುತ್ತಾರೆ. ಇವರು ಕನ್ನಡ ಮತ್ತು ಸಂಸ್ಕೃತ ಈ ಎರಡೂ ಭಾಷೆಗಳಲ್ಲಿ ಅಸಾಧಾರಣ ಪಂಡಿತರಿದ್ದರು. ಎರಡೂ ಭಾಷೆಗಳಲ್ಲಿ ಹೃದ ಯಂಗಮವಾಗಿ ಜನ ತಲೆದೂಗುವಂತೆ ಲೇಖನಗಳನ್ನು ಬರೆಯುವುದರಲ್ಲಿಯೂ, ಕವಿತೆ ಮಾಡುವುದರಲ್ಲಿಯೂ ಸಮರ್ಥರು. ಬಸವಾದಿ ಪ್ರಮಥರ ತತ್ವಗಳನ್ನು ಇವರಷ್ಟು ಆಳವಾಗಿ ಅಭ್ಯಾಸ ಮಾಡಿದವರು ಇವರ ಕಾಲಕ್ಕೆ ವೀರಶೈವರಲ್ಲಿ ಯಾರೂ ಇದ್ದಿಲ್ಲವೆಂದು ಧಾರಾಳವಾಗಿ ಹೇಳಬಹುದು. ಮೇಲೆ ಬರೆದ ಗ್ರಂಥಗಳಲ್ಲದೆ ಬಸವಾದಿ ಪ್ರಮಥರ ತತ್ವಪ್ರಚಾರದ ಸಲುವಾಗಿ ಇವರು ಅನೇಕ ಲೇಖನಗಳನ್ನೂ ಬರೆದಿರುತ್ತಾರೆ. ಅದರ ಸಲುವಾಗಿ ಇವರು ಬಹಳ ಕಳಕಳಿಯಿಂದ ಕಾರ್ಯವನ್ನು ಮಾಡಿದವರಾಗಿರುತ್ತಾರೆ. ಮುಂಬಯಿ ಇಲಾಖೆಯ ವೀರಶೈವರಲ್ಲಿ ಇವರು ಎಲ್ಲರಿಗಿಂತಲೂ ಮೊದಲು ಎಲ್‌ಎಲ್.ಬಿ. ಪರೀಕ್ಷೆಯಲ್ಲಿ ಪಾಸಾದ ಕಾರಣ ಇವರಿಗೆ ೧೫ ತೊಲ ಬಂಗಾರದ ವಿಕ್ಟೋರಿಯಾ ಜ್ಯೂಬಿಲಿ ಪದಕವು ದೊರೆತಿದ್ದಿತು. ಹುಬ್ಬಳ್ಳಿಯಲ್ಲಿ ಕೂಡಿದ ೧೯ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತಾಧ್ಯಕ್ಷರಾಗಿದ್ದರು. ಇವರು ಹೆಸರಾದ ಸಾಹಿತಿಗಳೂ,

ಮಿಗಿಲಾದ ಶಿವಾನುಭವಿಗಳೂ, ಶ್ರೇಷ್ಠತರಗತಿಯ ವಿದ್ಯಾವಂತರೂ, ಉತ್ಕೃಷ್ಟ ಆಚಾರ ಶೀಲರೂ, ಪಾಪಭೀರುಗಳೂ, ನೀತಿಯ ನೆಲೆಗಟ್ಟನ್ನು ಬಲ್ಲವರೂ, ಶಾಂತಪ್ರಿಯರೂ ಆಗಿದ್ದರು. ಇವರು ಬಸವಣ್ಣನವರ ಬಗ್ಗೆ "ಬಸವಭಾನು" ಎಂಬುವ ಗ್ರಂಥವನ್ನೇ ಬರೆದಿರುವರಲ್ಲದೆ, ಅವರ ಬಗ್ಗೆ ಕನ್ನಡ ಮತ್ತು ಸಂಸ್ಕೃತದಲ್ಲಿ ಅನೇಕ ಪದ್ಯಗಳನ್ನು ಮಾಡಿರುತ್ತಾರೆ. ಅವರ ಕೊನೆಯ ಲೇಖನವೆಂದರೆ "ವೀರಶೈವ ಧರ್ಮ ಮತ". ಇದು ಬಹಳ ದೊಡ್ಡ ಲೇಖನವಿದ್ದು ವೀರಶೈವ ತತ್ವಪ್ರಕಾಶಿಕೆಯಲ್ಲಿ ಪ್ರಕಟವಾಗಿರುತ್ತದೆ. ಅದರಲ್ಲಿಯ ಬಸವಣ್ಣನವರ ವಿಷಯಕ್ಕೆ ಇರುವ ಒಂದಂಶವನ್ನು ಇಲ್ಲಿ ಬರೆಯಲಾಗಿದೆ.

ವೀರಶೈವವು ಶೈವದ ಫಲವಾಗಿದೆ. ಭಕ್ತಿಯು ಅತ್ಯಂತ ಪರಿಪಾಕವಾಗಿದೆ. ಆದುದರಿಂದಲೇ ವೀರಶೈವ ಧರ್ಮಶಿರೋಮಣಿಕಾರನು ಉದಾಹರಿಸಿದ ಯೋಗ ಜಾಗಮವು—"ಅನಾದಿ ಭಕ್ತರೂಪೇಣ ಭಗವಾನ್ ಪರಮಶ್ಶಿವಃ । ಪಂಚಾಚಾರಾಂಶ್ಚ ಷಡ್ರೂಪಾಣ್ಯಷ್ಟಾವರಣಾನಿ ಚ । ಲಿಂಗಾಂಗ ಸಾಮರಸ್ಯಂ ಚ ಮುಕ್ತಿಮಾಹ ಜಗದ್ಗುರುಃ ॥" ಷಡ್ಗುಣೈಶ್ವರ್ಯ ಸಂಪನ್ನನಾದ ಪರಶಿವನು ಅನಾದಿ ಭಕ್ತಸ್ವರೂಪದಿಂದ ಪಂಚಾಚಾರಗಳನ್ನೂ, ಆರು ರೂಪುಗಳನ್ನೂ, ಎಂಟು ಆವರಣಗಳನ್ನೂ, ಲಿಂಗಾಂಗ ಸಾಮರಸ್ಯವನ್ನೂ, ಇಂತೆಂಬ ಮುಕ್ತಿಮಾರ್ಗವನ್ನೂ ಉಪದೇಶಿಸಿದನು ಎಂದು ಹೇಳಿದೆ. ಆಗಮಗಳಲ್ಲಿ ಅನಾದಿ ಭಕ್ತನ ಲಕ್ಷಣ ಹೇಳಲ್ಪಟ್ಟ ವಿವರವಿದು. ಶಿವತತ್ವರತ್ನಾಕರ ಒಂದನೆಯ ಕಲ್ಲೋಲ ೩ನೆಯ ತರಂಗದಿಂದ ನಾವು ಈ ವಿಷಯವನ್ನು ಎತ್ತುವೆವು.

"ಅಧಾವನಾದಿ ಭಕ್ತಸ್ಯ ಲಕ್ಷಣಂ ವಚ್ಮಿ ತೇ ಕ್ರಮಾತ್ ।
ಯದಸ್ತಿ ತತ್ಪರಂ ಬ್ರಹ್ಮ ತದನಾದಿ ಭವೇದ್ಯತಃ ।
ತಸ್ಮಾದನಾದಿ ಭಕ್ತೋಽಯ ಮಿತ್ಯುಕ್ತಸ್ತತ್ವವೇದಿಭಿಃ ॥"

ಮೊದಲು ನಿನಗೆ ಅನಾದಿ ಭಕ್ತನ ಲಕ್ಷಣವನ್ನು ಪರಿಪಿಡಿಯಿಂದ ಹೇಳುವೆನು. ಆವುದೊಂದು ಪರಬ್ರಹ್ಮವೆಂಬ ಅನಾದಿ ತತ್ವವುಂಟೋ ಆ ಅನಾದಿ ತತ್ವವನ್ನು ಹೊಂದುವುದರಿಂದ ಇವನು ಅನಾದಿ ಭಕ್ತನೆಂದು ತತ್ವವನ್ನು ಬಲ್ಲವರಿಂದ ಹೇಳವಡೆದನು.

"ಲಿಂಗಜಂಗಮ ಆದಿಸ್ಯಾತ್ ಭಕ್ತಶ್ಚಾನಾದಿ ರೂಪಕಃ ॥
ಅಂಗಂ ಲಿಂಗಮಿತಿ ಪ್ರೋಕ್ತಂ ಪ್ರಾಣೋ ಜಂಗಮ ಉಚ್ಯತೇ ॥ ೧೨ ॥

ಲಿಂಗಜಂಗಮಯೋರೈಕ್ಯಂ ಸ್ವರೂಪೋ ಭಕ್ತ ಉಚ್ಯತೇ ।
ಜಂಗಮೋಲಿಂಗರೂಪಸ್ಯಾಲ್ಲಿಂಗಂ ಜಂಗಮರೂಪಕಂ ॥ ೧೩ ॥

ಲಿಂಗಜಂಗಮ ಸಂಯೋಗೋಽನಾದಿ ಭಕ್ತಸ್ಯ ಲಕ್ಷಣಂ ।
ಲಿಂಗಜಂಗಮ ಭಕ್ತಾಶ್ಚತ್ರಯಸ್ತ್ವೇಕ ಸ್ವರೂಪಕಾಃ ॥ ೧೪ ॥

ದೇಹಃಪ್ರಾಣಸ್ತಥಾತ್ಮಾಚೇತ್ಯಾಗಮಾನ್ವಯ ನಿರ್ಣಯಃ ॥"

ಲಿಂಗಜಂಗಮವು ಆದಿಯೆನಿಸಿತು. ಅನಾದಿ ರೂಪನು ಭಕ್ತನು. ಆ ಭಕ್ತನ ಅಂಗವೇ ಲಿಂಗನು, ಅವನ ಪ್ರಾಣವೇ ಜಂಗಮವು. ಲಿಂಗಜಂಗಮ ತತ್ವಗಳ ಐಕ್ಯವೇ ಭಕ್ತನು. ಜಂಗಮವು ಲಿಂಗರೂಪವಾಗಿದೆ. ಲಿಂಗವು ಜಂಗಮರೂಪವಾಗಿದೆ. ಲಿಂಗಜಂಗಮಗಳ ಸಂಯೋಗವು ಅನಾದಿಭಕ್ತನ ಲಕ್ಷಣವಾಗಿದೆ. ಲಿಂಗಜಂಗಮ ಭಕ್ತರೆಂಬ ತ್ರಿಪದಾರ್ಥಗಳು ಒಂದೇ ಸ್ವರೂಪವಾಗಿವೆ. ದೇಹವು, ಪ್ರಾಣವು, ಆತ್ಮವು ಹೇಗೋ ಹಾಗೆ

ಈ ಮೂರೆಂಬುದು ಆಗಮತಾತ್ಪರ್ಯ ನಿರ್ಣಯವಾಗಿದೆ. ಭಕ್ತನಿಗೆ ಆದಿಯಿಲ್ಲ, ಲಿಂಗಜಂಗಮಕ್ಕೆ ಆದಿಯುಂಟು ಎಂಬುದರ ಅರ್ಥವೇನು? ಲಿಂಗವೆಂಬುವ ಪರಮಾತ್ಮನು ಭಕ್ತಿಯ ಮಹಿಮೆಯಿಂದಲ್ಲದೆ ತೋರನು. ಆ ಭಕ್ತಿಗೆ ಭಕ್ತನ ಸ್ವವಿಮರ್ಶವೇ ಮೊದಲು. ಸ್ವವಿಮರ್ಶವೆಂದರೆ ತನ್ನ ಭಾನವು. ದೇಹಾದಿ ಕ್ಲೇಶಗಳಿಂದಾವರಿಸಿದ ಅಜ್ಞಾನವನ್ನು ದಾಂಟಿ ತನ್ನ ಭಾನವು ತೋರಿದಲ್ಲದೆ ತನ್ನಲ್ಲಿ ಒಡಗೂಡಿದ ಭಕ್ತಿಯು ತೋರಲಾರದು. ಈ ಭಕ್ತಿಯಿಂದಲೇ ಹಂಗವು ತೋರುವದು. ಆದರಿಂದ ಲಿಂಗಕ್ಕೆ ಭಕ್ತನ ಭಾನವೇ ಆದಿಯು. ಆ ಭಕ್ತನು ಮತ್ತೊಂದು ಭಾನವನ್ನು ಅಪೇಕ್ಷಿಸಿದುದರಿಂದ ಅನಾದಿಯು. ಆತ್ಮನ ಒಳದಿರುಳು ಲಿಂಗವಾಗಿದೆ. ಶ್ರೀಮದಲ್ಲಮಪ್ರಭುವಿನ ಈ ವಚನವು ಇಲ್ಲಿ ಸಾಕ್ಷಿಯಾಗಿದೆ.

> ಆದಿಯಾಧಾರವಿಲ್ಲದಂದು । ಹಮ್ಮು ಬಿಮ್ಮುಗಳಿಲ್ಲದಂದು ।
> ಸುರಾಳ ನಿರಾಳವಿಲ್ಲದಂದು ।
> ಸಚರಾಚರವೆಲ್ಲ ರಚನೆಗೆ ಬಾರದಂದು ।
> ಗುಹೇಶ್ವರಾ ನಿಮ್ಮ ಶರಣನುದಯಿಸಿದನಂದು ಪ್ರ। ದೇ। ವ। ॥ ೫ ॥

> ಪಿಂಡಜ್ಞಾನಸ್ಥಲನಾದ ಬಿಂದುಗಳಿಲ್ಲದಂದು ।
> ನಿರ್ಭಯನೆಂಬ ಗಣೇಶ್ವರನು ಉತ್ಪತ್ತಿಸ್ಥಿತಿಲಯವಿಲ್ಲದಂದು ।
> ಅಕ್ಷಯನೆಂಬ ಗಣೇಶ್ವರನು । ಓದುವೇದಂಗಳಿಲ್ಲದಂದು ।
> ಓಂಕಾರನೆಂಬ ಗಣೇಶ್ವರನು । ಯುಗಜುಗವಿಲ್ಲದಂದು ।
> ಊರ್ಧ್ವಮುಖನೆಂಬ ಗಣೇಶ್ವರನು । ಗುಹೇಶ್ವರನೆಂಬ ಲಿಂಗವಿಲ್ಲದಂದು ।
> ನಿರ್ಮಾಯನೆಂಬ ಗಣೇಶ್ವರನು ಪ್ರ। ದೇ। ವ। ॥ ೬ ॥

ಪಿಂಡಜ್ಞಾನಸ್ಥಲಂ—ಇಲ್ಲಿ ಒಂದು ಕ್ಷಣ ನಾವು ವಿಚಾರವಿಮುಖರಾಗೋಣ. ಅನಾದಿ ಭಕ್ತನು ಈ ವೀರಶೈವವನ್ನು ಪ್ರಕಟಿಸಿದನೆಂದು ಹೇಳುವ ಅರ್ಥವೇನು? ಈ ಧರ್ಮವು ವೈದಿಕ ವಿಧಿವಾಕ್ಯಗಳಿಂದ ಹೇಳಪಡೆದುದಲ್ಲ. ಆದರೆ ಶಿವನಲ್ಲಿ ತನ್ನನ್ನು ಸಮರಸೀಕರಿಸಿದ (ಭಜೇದ್ಯತಃ) ಭಕ್ತನು ಆಚರಿಸಿದ ಆಚರಣದಿಂದಲೇ ಈ ಧರ್ಮ ಪ್ರಕಟವಾಯಿತೆಂಬರ್ಥ. ಆದರಿಂದಲೇ "ಪಂಚಾಚಾರಾನ್ ಆಹ" ಎಂದು ಯೋಗಜಾಗಮ ವಾಕ್ಯವಿದೆ. ವೀರಶೈವ ಶಾಸ್ತ್ರಗಳಲ್ಲಿ ಈ ಅನಾದಿ ಭಕ್ತನೆಂದರೆ ಶ್ರೀ ಬಸವೇಶನೆಂದು ಪ್ರಸಿದ್ಧಿಯಿದೆ. —ವೃಷಭೇಂದ್ರ ವಿಜಯ, ೭೨ನೇ ಆಶ್ವಾಸ, ೫೩ನೇ ಶ್ಲೋಕ.

> "ಗುರುರೂಪಂ ಲಿಂಗರೂಪಂ ಪರತರಚರರೂಪಂ ಪ್ರಸಾದಸ್ವರೂಪಂ ।
> ಹರಪಾದಾಂಭಃಸ್ವರೂಪಂ ಭಸಿತಲಸಿತರೂಪಂ ಸುರುದ್ರಾಕ್ಷರೂಪಂ ॥
> ವರಷಡ್ವರ್ಣಸ್ವರೂಪಂ ಪರಮಶಿವಮಯಾನಾದಿ ಭಕ್ತಸ್ವರೂಪಂ ।
> ಪರಚಿಚ್ಛಕ್ತಿಸ್ವರೂಪಂ ಬಸವಸದೃಶಾನಂದ ಸತ್ಯಸ್ವರೂಪಂ ॥"

ಈ ಶ್ಲೋಕದಲ್ಲಿ ಚಿಚ್ಛಕ್ತಿಸ್ವರೂಪನೆಂದೂ, ಅನಾದಿ ಭಕ್ತರೂಪನೆಂದೂ ಶ್ರೀ ಬಸವೇಶನನ್ನು ಹೇಳುವದು ಲಕ್ಷಿಸತಕ್ಕದಾಗಿದೆ. ಪರಶಿವಶಕ್ತಿಯು ಪರಶಿವನೊಡನೆ ಅವಿನಾಭಾವಸಂಬಂಧದಿಂದಿರುವಂತೆ ಅನಾದಿ ಭಕ್ತನಾದ ಬಸವನು ಅವಿನಾಭಾವ ಸಂಬಂಧದಿಂದ ಶಿವನೊಳು ಸಮವೇತನಾಗಿಹನೆಂಬುವುದು ತಾತ್ಪರ್ಯವು.

ಶ್ರೀ ಚಿಂತಾಮಣಿ ವಿನಾಯಕ ವೈದ್ಯ, ಎಂ.ಎ., ಎಲ್‌ಎಲ್.ಬಿ., ಆನರರಿ ಫೆಲೋ, ಮುಂಬಯಿ ವಿಶ್ವವಿದ್ಯಾನಿಲಯ—ಇವರು "ಮಹಾಭಾರತ ಕ್ರಿಟಿಸಿಜಮ್, ರಿಡಿಲ್

ಆಫ್ ದಿ ರಾಮಾಯಣ, ಎಪಿಕ್ ಇಂಡಿಯಾ, ಹಿಸ್ಟ್ರಿ ಆಫ್ ಮಿಡೀಯಲ್ ಇಂಡಿಯಾ, ಮಹಾಭಾರತ ಉಪಸಂಹಾರ, ಶ್ರೀ ರಾಮಚರಿತ್ರೆ, ಶ್ರೀ ಕೃಷ್ಣಚರಿತ್ರೆ, ಮಹಾಭಾರತ ಮೀಮಾಂಸ" ಮೊದಲಾದ ಗ್ರಂಥಗಳನ್ನು ಬರೆದಿರುವರಲ್ಲದೆ ಇವರು ಮಹಾರಾಷ್ಟ್ರೀಯರಾದರೂ ಹಿಂದೂಸ್ಥಾನದ ತುಂಬ ಪ್ರಸಿದ್ಧರು. "Downfall of Hindu India" ಎಂಬುವ ಇಂಗ್ಲೀಷ್ ಗ್ರಂಥವನ್ನೆ ಹಿಂದೀ ಭಾಷೆಯಲ್ಲಿಯೂ ಬರೆದಿರುತ್ತಾರೆ. "ಹಿಂದೂ ಭಾರತ್ ಕಾ ಅಂತ" ಎಂಬುವ ಗ್ರಂಥದ ೬೪೩ ನೇ ಪುಟದಲ್ಲಿ—

ಬಸವನು ಸ್ವಯಂ ಒಳ್ಳೇ ದರ್ಶನಶಾಸ್ತ್ರಜ್ಞನೂ, ಬಹಳ ಸುಧಾರಕನೂ ಇದ್ದನು. ಆದರೆ ಡಾಕ್ಟರ್ ಭಂಡಾರಕರರು ಬಸವಣ್ಣನವರಿಗಿಂತಲೂ ಮೊದಲು ಇದ್ದ ಆರಾಧ್ಯ ಧರ್ಮದ ಪುರಸ್ಕರ್ತರಿದ್ದರೆಂಬುವರನ್ನು ನಾನು ನಂಬುವದಿಲ್ಲ. ಬಸವನ ಸಿದ್ಧಾಂತವು ನವೀನವಾದುದೂ, ಭಿನ್ನವಾದುದೂ ಇದೆ. ಆದ್ದರಿಂದ ಇವನನ್ನು ಈ ನವೀನ ಮತ ಸ್ಥಾಪಕನೆಂದೇ ಹೇಳಬೇಕಾಗುತ್ತದೆ. ಬಸವಪುರಾಣದಲ್ಲಿ ಒಂದು ಕಥೆಯೂ ಇದೆ. ನಾರದನು ಶಂಕರನಿಗೆ ಭೂಲೋಕದಲ್ಲಿ ಶೈವಮತವು ನಷ್ಟವಾಗಿದೆ ಎಂದನು. ಆಗ ಭಗವಾನ್ ಶಂಕರನು ತಮ್ಮ ನಂದಿಯನ್ನು ಶೈವಮತದ ಸಾಪ್ಥನೆಯನ್ನು ಮಾಡಲಿಕ್ಕೆ ಕಳುಹಿಸಿದನು.

ಬಸವಣ್ಣನು ನಂದಿಯ ಅವತಾರವನ್ನು ತಾಳಿದವನಿದ್ದನು. ಹೀಗೆಯೇ ಇನ್ನೂ ಕೆಲವು ವಿಷಯಗಳನ್ನು ಬರೆಯುತ್ತ ವೈದ್ಯರು—ಬಸವನು ವರ್ಣಗಳ ಮರ್ಮವನ್ನು ಪಾಲಿಸುತ್ತಿದ್ದಿಲ್ಲ. ಬಸವನು ಪ್ರಾಚೀನ ಪರಂಪರೆಗಳನ್ನು ಬಿಡಲಿಕ್ಕೆ ಪೂರ್ಣ ತಯಾರಿ ಇದ್ದನು. ಮಹತ್ವಪೂರ್ಣ ಧಾರ್ಮಿಕ ವಿಷಯಗಳಲ್ಲಿ ಬಿಜ್ಜಳನಿಗೂ, ಈತನಿಗೂ ಮತ ಭೇದವಾಯಿತು. ಕರ್ಣಾಟಕದಲ್ಲಿ ಲಿಂಗವಂತಮತವು ಬಹಳ ಬೆಳೆಯಿತು. ಅವರು ಜೈನಧರ್ಮವನ್ನು ಸದಾವಕಾಲಕ್ಕೆ ಕರ್ಣಾಟಕದಿಂದ ಹೊರಹಾಕಿದರು.

ಹೀಗೆ ನವೀನ ವೀರಶೈವ ಪಂಥವು ಜೈನಧರ್ಮವನ್ನು ಓಡಿಸಿದಮೇಲೆ ಬಸವನು ಜೈನರಿಗಿಂತಲೂ ಮುಂದೆ ಹೋಗಿ ಅಹಿಂಸಾತತ್ವಕ್ಕೆ ಮುಖ್ಯಸ್ಥಾನ ಕೊಟ್ಟನು. ಆ ಕಾಲದಲ್ಲಿ ಜನತೆಯೊಳಗೆ ಹಿಂಸೆಯ ವಿರುದ್ಧ ಲೋಕಮತವು ಹೆಚ್ಚಾಗುತ್ತಾ ನಡೆದಿತ್ತು. ಅದಕ್ಕೆ ಸನ್ಮಾನ ಮಾಡಿದನು. ಅರ್ಥಾತ್ ಹಿಂದೂಧರ್ಮದ ಛಿದ್ರಗಳನ್ನು ನೋಡಿ ಜೈನಧರ್ಮದವರು ಅದರಮೇಲೆ ಅಭಿಯೋಗ ಮಾಡುತ್ತಿದ್ದರು. ಬ್ರಾಹ್ಮಣಶ್ರೇಷ್ಠತ್ವವನ್ನು ಕೂಡ ಒಪ್ಪಲಿಲ್ಲ. ಪ್ರತಿಯೊಬ್ಬರಿಗೂ ಪರಮಾತ್ಮನನ್ನು ಹೊಂದಲಿಕ್ಕೆ ಅಧಿಕಾರವಿರುತ್ತದೆ. ಬಸವನು ಧೈರ್ಯಪೂರ್ವಕವಾಗಿ ಜಾತಿಯ ತೊಡಕನ್ನು ಹೊಡೆದು ಬ್ರಾಹ್ಮಣ ಮತ್ತು ಅಂತ್ಯಜರೊಳಗೆ ಲಗ್ನವನ್ನು ಮಾಡಿಸಿದನು. ಒಂದು ಮಾತನ್ನು ಎಲ್ಲರಿಗೂ ಕಲಿಸಿದನು. ಯಾರೂ ಭಿಕ್ಷೆಯನ್ನು ಮಾಡಬಾರದು. ಎಲ್ಲರೂ ಪರಿಶ್ರಮವನ್ನು ಹೊಂದಿಯೇ ಉದರಪೋಷಣೆ ಮಾಡಿಕೊಳ್ಳಬೇಕು. ಧಾರ್ಮಿಕ ಗುರು ಜಂಗಮರೂ ಕೂಡ ಭಿಕ್ಷೆಯನ್ನು ಮಾಡಬಾರದು ಎಂಬ ಉದ್ಯಮದ ಶ್ರೇಷ್ಠತೆಯನ್ನು ಪ್ರತಿಪಾದನೆ ಮಾಡಿದನು. ಭಿಕ್ಷಾವೃತ್ತಿಯನ್ನು ಬಂದುಮಾಡಿದ ಬಸವನೇ ಭರತ ಖಂಡದಲ್ಲಿ ಮೊದಲನೆಯ ಸುಧಾರಕನಾಗಿರುತ್ತಾನೆ. ಬಸವನು ಇಂತಹ ಪುರುಷ ಸಿದ್ಧನಲ್ಲದೆ ಕಾಯಕಗಳಿಂದಲೇ ಮೋಕ್ಷವಾಗುತ್ತದೆಂದು ಸ್ಪಷ್ಟವಾಗಿ ಹೇಳುತ್ತಿದ್ದನು. ಈ ಮಾತಿನಲ್ಲಿ ಎಲ್ಲರಿಗಿಂತಲೂ ಹೆಚ್ಚಿಗೆ ಆಗ್ರಹದಿಂದ ಹೇಳಿದನು. ತನ್ನ ನಿತ್ಯಕರ್ಮ

ವನ್ನು ನಿಯಮಪೂರ್ವಕವಾಗಿ ತಪ್ಪದೆ ಮಾಡಲೇಬೇಕು. ಈ ನೀತಿನಲ್ಲಿ ಇವನು ಜೈನ ಮತ್ತು ಬೌದ್ಧರಿಗಿಂತಲೂ ಪೂರ್ಣ ವಿಜಯಶಾಲಿಯಾದನು. ಆದ್ದರಿಂದಲೇ ಸಮಸ್ತ ಲಿಂಗವಂತ ಸಮಾಜವು ಆಡಂಬರಹೀನವೂ, ಸದಾಚಾರಿಯೂ ಆಗಿದೆ.

ಬ್ರಾಹ್ಮಣ ಮತ್ತು ಜಾತೀಯತೆಯ ವ್ಯವಸ್ಥೆಗಳನ್ನು ಬಿಟ್ಟಕಾರಣ ಬಸವಣ್ಣನವರು ಸ್ವಾಭಾವಿಕವಾಗಿ ತತ್ಕಾಲದ ಜನರಾಡುವ ಭಾಷೆಯಲ್ಲಿ ಉಪದೇಶ ಮಾಡುವ ಮಾರ್ಗವನ್ನವಲಂಬಿಸಬೇಕಾಯಿತು. ಜೈನಪಂಡಿತರು ಆ ಕಾಲದಲ್ಲಿ ಸಂಸ್ಕೃತದಲ್ಲಿಯೇ ವಾದವಿವಾದ ಮಾಡುತ್ತಿದ್ದರು. ಆದರೆ ಬಸವಣ್ಣನವರು ಆದರ ಬಗ್ಗೆ ಲಕ್ಷ್ಯ ಕೊಡಲಿಲ್ಲ. ಅವರು ಸರಳ ಸುಬೋಧ ಕನ್ನಡ ಭಾಷೆಯಲ್ಲಿಯೇ ಉಪದೇಶ ಮಾಡುವದನ್ನು ಪ್ರಾರಂಭಿಸಿದರು. ಅವರ ಆಗಿನ ಉಪದೇಶವನ್ನೇ ಈಗಿನ ಕಾಲದ ಲಿಂಗವಂತರು ಪರಮ ಪವಿತ್ರವೆಂದು ತಿಳಿಯುತ್ತಾರೆ. ಹೀಗೆ ಅವರು ಜನಸಾಮಾನ್ಯರ ದೃಷ್ಟಿಯಿಂದ ಜೈನ ಮತ್ತು ಪುರಾಣ ಧರ್ಮಾಭಿಮಾನಿಗಳಾದ ಪಂಡಿತರ ಮೇಲೆ ವಿಜಯವನ್ನು ಸಂಪಾದಿಸಿದರು.

ಶ್ರೀಮಾನ್ ಜೆ. ರುದ್ರಪ್ಪ, ಎಂ.ಎ., ಎಲ್‌ಎಲ್.ಬಿ., ಸೆಷನ್ಸ್ ಜಡ್ಜರು—ಇವರು ಶ್ರೀ ಬಸವೇಶ್ವರರನ್ನು ಕುರಿತು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

ತ್ರಿಮತಸ್ಥ ಆಚಾರ್ಯರುಗಳಂತೆ ಶ್ರೀ ಬಸವೇಶ್ವರರು ವೀರಶೈವಮತವನ್ನು ಸ್ಥಾಪಿಸದಿದ್ದರೂ ಜೀವನ್ಮುಕ್ತಿಯನ್ನು ಪಡೆಯಲಿಕ್ಕೆ ತಮ್ಮದೇ ಆದ ಒಂದು ಅನುಭಾವಿಕ ಸಾಧನಮಾರ್ಗವನ್ನು ಜನಗಳಿಗೆ ತಿಳಿಯಪಡಿಸಿಕೊಟ್ಟು ಅನೇಕ ಜನರನ್ನು ಉದ್ಧಾರ ಮಾಡಿರುವದರಿಂದ ಅವರನ್ನು ದಾರ್ಶನಿಕ ಗುಂಪಿಗೆ ಸೇರಿಸುವುದರಲ್ಲಿ ಔಚಿತ್ಯವಿದೆ.

ಬಸವೇಶ್ವರರು ಮೊದಲು ಬ್ರಾಹ್ಮಣ ಕುಲದಲ್ಲಿ ಹುಟ್ಟಿದವರು. ತಮ್ಮ ಸುತ್ತ ಮುತ್ತ ಸಮಾಜದಲ್ಲಿ ಇದ್ದ ಕುಂದುಕೊರತೆಗಳನ್ನೂ, ಮೂಢನಂಬಿಕೆಯನ್ನೂ, ದುಷ್ಟ ಪದ್ಧತಿಯನ್ನೂ, ಅನಾಚಾರ ದುರಾಚಾರಗಳನ್ನೂ ನೋಡಿ, ಜಿಗುಪ್ಸೆಹೊಂದಿ ಆಗ ಪ್ರಚಾರದಲ್ಲಿದ್ದ ವೀರಶೈವ ದೀಕ್ಷೆಯನ್ನು ಪಡೆದು, ಜನರಲ್ಲಿ ಸದಾಚಾರವೂ, ಸತ್ಸಂಪ್ರದಾಯಗಳೂ, ಭಗವದ್ಭಕ್ತಿಯೂ, ಮುಕ್ತಿಪ್ರೇಮವೂ ಹುಟ್ಟಲು ತಮ್ಮ ಆತ್ಮಶಕ್ತಿಯನ್ನು ವಿನಿಯೋಗಿಸಿದರು. ಗಂಡಸರೆನ್ನದೆ, ಹೆಂಗಸರೆನ್ನದೆ, ಮೇಲುಜಾತಿ, ಕೀಳು ಜಾತಿಗಳೆನ್ನದೆ ಎಲ್ಲರಿಗೂ ಶಿವದೀಕ್ಷೆಯನ್ನು ಕೊಟ್ಟು, ಮುಕ್ತಿಪಥವನ್ನು ತೋರಿಸಿಕೊಟ್ಟು ಉಪಕಾರ ಮಾಡಿದರು. ಇದರ ಪರಿಣಾಮವಾಗಿ ಜನರ ನೈತಿಕ ಮಟ್ಟ ಏರಿತು. ಅನೇಕ ಸುಶಿಕ್ಷಿತ ಜಂಗಮರು ಶ್ರೀ ಬಸವೇಶ್ವರರ ಕೈಕೆಳಗೆ ಧರ್ಮಶಿಕ್ಷಣ ಪಡೆದು ನಾಡಿನ ಮೂಲೆಮೂಲೆಗೂ ಹೋಗಿ ಧರ್ಮಪ್ರಚಾರ ಮಾಡಿದರು.

ಆಧ್ಯಾತ್ಮಿಕ ವಿಚಾರದಲ್ಲಿ ಬಸವಣ್ಣನವರು ಮಾಡಿದ ಮಹತ್ತರವಾದ ಕಾರ್ಯವೆಂದರೆ ಅನುಭವಮಂಟಪದ ಸ್ಥಾಪನೆ. ವೀರಶೈವಮತ ತತ್ವಗಳಿಗೆ ಒಲಿದ ಮುಮುಕ್ಷುಗಳೆಲ್ಲರೂ ಸೇರಿ ಮೋಕ್ಷಸಾಧನೆಯಲ್ಲಿ ತಮ್ಮ ತಮ್ಮ ಅನುಭವಗಳನ್ನು ಬೆಳೆಸತಕ್ಕ ಒಂದು ಪ್ರಯೋಗಸಂಸ್ಥೆ ಇದು. ಈ ಸಂಸ್ಥೆ ಹಿಂದೂದೇಶದ ನಾನಾ ಭಾಗಗಳಿಂದ ಅನೇಕ ಮಹನೀಯರನ್ನು ಆಕರ್ಷಿಸಿತ್ತು. ಈ ಅನುಭವಮಂಟಪದಲ್ಲಿ ಎಲ್ಲ ಜಾತಿಯವರೂ, ವೃತ್ತಿಯವರೂ, ಹೆಂಗಸರೂ, ಗಂಡಸರೂ, ಅಂತ್ಯಜರೂ ಇದ್ದು ತಮ್ಮ ಆಧ್ಯಾತ್ಮಿಕ

ಜೀವನವನ್ನು ಉತ್ತಮಪಡಿಸಿಕೊಂಡು ನಾಡಿನ ಸೌಭಾಗ್ಯವನ್ನು ಹೆಚ್ಚಿಸಿದರು. ಬಸವೇಶ್ವರರು ಪ್ರಸಾರಮಾಡಿದ ವೀರಶೈವದರ್ಶನ ಅಥವಾ ಸಿದ್ಧಾಂತವನ್ನು ಹೀಗೆ ಸಂಗ್ರಹಿಸಬಹುದು. ಶಿವ, ಜೀವ, ಜಗತ್ತುಗಳನ್ನು ಸತ್ಯವಸ್ತುಗಳೆಂದು ನಂಬುತ್ತಾರೆ. ಜೀವ ಮತ್ತು ಜಗತ್ತುಗಳು ಪೃಥಕ್ಕಾಗಿದ್ದರೂ ಶಿವನನ್ನು ಬಿಟ್ಟು ಪ್ರತ್ಯೇಕವಾಗಿಲ್ಲ. ಪರಬ್ರಹ್ಮ ಅಥವಾ ಪರಶಿವನು ಸಚ್ಚಿದಾನಂದ ನಿತ್ಯಪರಿಪೂರ್ಣನಾಗಿ ಅವಿನಾಭಾವ ಸಂಬಂಧದಿಂದ ಶಕ್ತಿಯೊಡನೆ ಕೂಡಿದ್ದಾನೆ. ಇದೇ ನಿಃಕಲತತ್ವ. ಇದು ತನ್ನಲ್ಲಿ ಹುಟ್ಟಿದ ಶಕ್ತಿಯು ಚಲನವಲನ ಮಾರ್ಗದಿಂದ ಪ್ರವೃತ್ತಿ, ನಿವೃತ್ತಿಗಳಾಗಿ ಎರಡು ತೆರನಾಯಿತು. ವಿಶ್ವನಿರ್ಮಾಣ ಕಾರ್ಯ ಪ್ರವೃತ್ತಿಮುಖದಿಂದಲೂ ಆಯಿತು.

ಗದಿಗೆಯ್ಯ ಹುಚ್ಚಯ್ಯ, ಹೊನ್ನಾಪುರಮಠ, ವಕೀಲರು, ಧಾರವಾಡ—ಇವರು ಶ್ರೀ ಬಸವೇಶ್ವರ ಚರಿತ್ರೆಯನ್ನು ಬಾಲಕರಿಗೆ ಉಪಯೋಗವಾಗುವಂತೆ ಬರೆದಿರುತ್ತಾರೆ. ಇವರು ಅಭಿಮಾನಶಾಲಿಗಳಾದಕನ್ನಡಿಗರಾಗಿದ್ದರು. "ಚಂದ್ರೋದಯ" ವಾರಪತ್ರಿಕೆಯ ಸಂಪಾದಕರೂ ಆಗಿದ್ದರಲ್ಲದೆ ಆಧುನಿಕ ಕರ್ಣಾಟಕದ ಕಟ್ಟಾ ಅಭಿಮಾನವಂತರಾಗಿದ್ದು, ಅನೇಕ ಚಿಕ್ಕ ಚಿಕ್ಕ ಗ್ರಂಥಗಳನ್ನು ಬರೆದಿರುತ್ತಾರೆ.

ಇವರು ಬರೆದ ಗ್ರಂಥಗಳು—(೧) ಶ್ರೀ ರಾಮದಾಸಸ್ವಾಮಿಗಳ ಚರಿತ್ರೆ, (೨) ನೀತಿಮಂಜರಿ, (೩) ಬಾಲಭಾರತ, (೪) ಬಾಲರಾಮಾಯಣ, (೫) ಬಾಲಭಾಗವತ, (೬) ಅದ್ಭುತಪ್ರೇಮ (ಕಾದಂಬರಿ), (೭) ತ್ರಾಟಕನಾಟಕ (ಮೊಂಡ ಗಂಡ, ತುಂಟ ಹೆಂಡತಿ), (೮) ನಿಂದಾಪ್ರಭಾವ ನಾಟಕ (ಮುದುಕ ಗಂಡ, ಚಿಕ್ಕ ಹೆಂಡತಿ), (೯) ಶ್ರೀ ರಾಮಕೃಷ್ಣ ಪರಮಹಂಸರ ಕಥೆಗಳು, (೧೦) ಸಾವಿತ್ರಿ ಚರಿತ್ರೆ, (೧೧) ಪ್ರಹ್ಲಾದ ಚರಿತ್ರೆ, (೧೨) ಸುಧಾಮಚರಿತ್ರೆ, (೧೩) ಧೃವಚರಿತ್ರೆ, (೧೪) ಚಿಲ್ಲಾಳ ಚರಿತ್ರೆ, (೧೫) ಶಿವಲೀಲಾಮೃತ ಕಥೆಗಳು, (೧೬) ಶ್ರೀ ಬಸವೇಶ್ವರ ಚರಿತ್ರೆ, (೧೭) ವೀರಶೈವ ಶಿವಪೂಜಾವಿಧಿ, (೧೮) ಶ್ರೀ ಕೃಷ್ಣಚರಿತ್ರೆ—ಹೀಗೆ ಹದಿನೆಂಟು ಗ್ರಂಥಗಳನ್ನು ಬರೆದು ಕನ್ನಡ ಭಾಷೆಗೆ ಬಹಳ ಉಪಕಾರ ಮಾಡಿರುತ್ತಾರೆ.

ಇವರು ತಮ್ಮ ಬಸವೇಶ್ವರ ಚರಿತ್ರೆಯ ಕೊನೆಯಲ್ಲಿ—

ಶ್ರೀ ಬಸವೇಶ್ವರನ ಚರಿತ್ರೆಯ ಮೇಲಿನಿಂದ ಅವನು ಎಷ್ಟು ಉದಾತ್ತ ಭಾವನೆಯುಳ್ಳವನೂ, ಉದಾರಮಹಿಮನೂ ಆಗಿದ್ದನೆಂಬುದು ಒಡೆದು ಕಾಣುತ್ತದೆ. ಇವನು ಜನಸಾಮಾನ್ಯರಲ್ಲಿ ಹುಟ್ಟಿ, ಬೆಳೆದು, ಜನಸಾಮಾನ್ಯರ ಕಲ್ಯಾಣಕ್ಕೋಸ್ಕರ ಅವರಿಗೆ ತಿಳಿಯುವಂತೆ ತಾಯಿನುಡಿಯಿಂದಲೇ ಧರ್ಮಬೋಧನೆಯನ್ನು ಉತ್ಕೃಷ್ಟವಾಗಿ ಮಾಡಿ, ಕರ್ಣಾಟಕದೊಳಗೆ ಧರ್ಮಜಾಗ್ರತೆಯನ್ನು ಮಾಡಿದನು. ಇವನಲ್ಲಿ ತನ್ನ ವಿದ್ಯೆಯ ಅಥವಾ ಮಂತ್ರಿಪದದ ಗರ್ವವು ಲವಲೇಶವಾದರೂ ಇದ್ದಿಲ್ಲ. ಇವನು ಸುಮಾರು ಹತ್ತು ವರ್ಷ ಮಂತ್ರಿಪದದಲ್ಲಿದ್ದರೂ ಜನರಿಗೆ ಸತ್ಯ, ಅಹಿಂಸಾ, ಪರೋಪಕಾರ, ಈಶ್ವರ ಭಕ್ತಿ ಮುಂತಾದುವುಗಳನ್ನು ಬೋಧಿಸಿ ದುರಾಚಾರಿಗಳನ್ನು ಸದಾಚಾರಿಗಳನ್ನಾಗಿ ಮಾಡಿದ್ದನಲ್ಲದೆ ತಾನೂ ಸ್ವತಃ ಈಶ್ವರ ಭಕ್ತಿ, ಸತ್ಕಥಾ ಶ್ರವಣ, ಶಿವಶರಣರ ಸೇವೆ, ಗಣಾರಾಧನೆ, ಅನ್ನಸಂತರ್ಪಣೆ ಮುಂತಾದ ಪುಣ್ಯಕರ್ಮಗಳನ್ನು ನೆರವೇರಿಸಿದನು. ಇವನು ಈ ಪ್ರಕಾರ ತನ್ನ ಸದ್ಬೋಧೆಯಿಂದಲೂ, ಸದಾಚರಣದಿಂದಲೂ ಯಾವತ್ತೂ ಉತ್ತಮ ಮತ್ತು ಕೀಳುಜಾತಿಯ ಜನರ ಮನಸ್ಸನ್ನು ತನ್ನ ಕಡೆಗೆ ಆಕರ್ಷಣೆ

ಮಾಡಿಕೊಂಡು ಅವರನ್ನು ವೀರಶೈವ ಮತದೊಳಗೆ ಸೇರಿಸಿಕೊಂಡು ವೀರಶೈವ ಮತವನ್ನು ಪ್ರಚಾರಗೊಳಿಸಿದನು.

## ಹಿಂದೂಸ್ಥಾನದ ಇತಿಹಾಸ

ಬರೆದವರು: ಶಿ. ಶಿ. ಬಸವನಾಳರು, ಎಂ.ಎ. ಮತ್ತು ಹ. ಚ. ಗಲಗಲಿ, ಬಿ.ಎ., ಬಿ.ಟಿ.

ಈ ಇತಿಹಾಸದಲ್ಲಿ ಪ್ರಾಚೀನ ಕಾಲದಿಂದ ೧೯೩೮ರ ವರೆಗೆ ಆದ ಸಂಗತಿಗಳಿರುತ್ತವೆ. ಇದರಲ್ಲಿ ಕರ್ನಾಟಕದ ರಾಜ್ಯಗಳು ಎಂಬುವ ಭಾಗದಲ್ಲಿ ಶ್ರೀ ಬಸವಣ್ಣನವರ ವಿಷಯಕ್ಕೆ—

ಕರ್ನಾಟಕದ ಸುಪ್ರಸಿದ್ಧ ವಿಭೂತಿಗಳಲ್ಲಿ ಬಸವೇಶ್ವರನು ಒಬ್ಬನಾಗಿರುತ್ತಾನೆ. ಈತನು ಬಿಜ್ಜಳನ ಮಂತ್ರಿಯಾಗಿ ರಾಜಕಾರಣ ಪಟುವಾಗಿದ್ದಂತೆ ಧರ್ಮೋದ್ಧಾರಕನೂ, ಸಮಾಜಸುಧಾರಕನೂ ಆಗಿರುತ್ತಾನೆ. ಇವನು ವೀರಶೈವ ಮತವನ್ನು ಪುನರುಜ್ಜೀವನ ಮಾಡಿ ಪ್ರಸಾರಗೊಳಿಸಿದನು. ಅಷ್ಟಾವರಣಗಳಿಂದೊಡಗೂಡಿದ ಪ್ರತಿಯೊಬ್ಬನೂ ವೀರಶೈವನಾಗುವನೆಂದು ಪ್ರತಿಪಾದಿಸಿ ಜಾತಿಕಟ್ಟುಗಳನ್ನು ಹೋಗಲಾಡಿಸಿದನು. ಧರ್ಮದಲ್ಲಿಯೂ ಸ್ತ್ರೀಯರಿಗೆ ಪುರುಷರಂತೆ ಹಕ್ಕು ಇರುವದೆಂಬದನ್ನು ಬಳಕೆಯಲ್ಲಿ ತಂದನು. ಸ್ವಂತ ಕಾಯಕವನ್ನು ಮಾಡಿಯೇ ಪ್ರತಿಯೊಬ್ಬ ವೀರಶೈವನೂ ಉಪಜೀವಿಸ ಬೇಕೆಂಬ ನಿರ್ಬಂಧವನ್ನು ಕಲ್ಪಿಸಿದ್ದರಿಂದ ಆರ್ಥಿಕ ಸುಧಾರಣೆಗೆ ಬಲವಾದ ಸಾಧನ ವಾಯಿತು. ವೀರಶೈವನಿಗೆ ಬೇಕಾಗುವ ಸಾಮಗ್ರಿಗಳೆಲ್ಲವೂ ವೀರಶೈವನಿಂದಲೇ ಪೂರೈಸಿಕೊಳ್ಳಬೇಕೆಂದು ವಿಧಿಸಿದ್ದರಿಂದ ಮತಪ್ರಸಾರವಾಗಲು ಮಾರ್ಗವಾಗಿ, ವೀರ ಶೈವರಲ್ಲಿ ಎಲ್ಲ ಬಗೆಯ ಹೊರೆಗಳನ್ನು ಮಾಡುವವರು ಸಮಾವೇಶವಾದುದರಿಂದ ಆ ಸಮಾಜವು ಸರ್ವಾಂಗ ಪರಿಪೂರ್ಣವಾಯಿತು. ಇದರಿಂದ ಯಾವ ತರಹದ ಹೊರೆಯಾದರೂ ಹೀನವಾದುದಲ್ಲವೆಂಬ ಕಲ್ಪನೆಯು ಜನರಲ್ಲಿ ತಾನೇ ತಲೆದೋರಿತು. ಜನ್ಮದಿಂದ ಬಂದ ಜಾತಿಹೀನತ್ವವೂ ಸಹ ಲಿಂಗಸಂಸ್ಕಾರದಿಂದ ಮಾಜುವದೆಂಬ ಉದಾತ್ತ ತತ್ವವನ್ನು ಕಾರ್ಯಕ್ಷೇತ್ರದಲ್ಲಿ ತಂದು ಬಸವೇಶ್ವರನು ಅಸ್ಪೃಶ್ಯೋದ್ಧಾರ ವನ್ನು ಮಾಡಿದನು. ಈ ಜನ್ಮದಲ್ಲಿಯ ಸುಖಾಸುಖಗಳು ಪೂರ್ವಕರ್ಮದ ಫಲಿತಾಂಶ ಗಳೆಂದೂ, ಹಿಂದಿನ ಜನ್ಮಗಳಲ್ಲಿಯ ಕುಕರ್ಮದ ಫಲವನ್ನು ಅನುಭೋಗಿಸುವವರೆಗೆ ಈ ಜನ್ಮದ ಪುಣ್ಯವೂ ಕೂಡ ಮೋಕ್ಷದಾಯಕವಾಗಲಾರದೆಂದೂ ಬೋಧಿಸುವ ನಿರಾಶಾ ಜನಕವಾದ ಕರ್ಮತತ್ವದ ಬದಲು ಲಿಂಗದೀಕ್ಷೆಯಾದಂದಿನಿಂದ ಹಿಂದಿನ ಕರ್ಮಗಳೆಲ್ಲ ಅಳಿದುಹೋಗುವವೆಂಬ ನಂಬುಗೆಯು ಜನರಲ್ಲಿ ಉಂಟಾದುದರಿಂದ ಇಹಜನ್ಮದಲ್ಲಿ ತಾನು ಮಾಡಿದ ಸತ್ಕರ್ಮಗಳಿಂದಲೂ, ವೀರಶೈವ ಧರ್ಮವನ್ನು ಅನುಸರಿಸುವದರಿಂದಲೂ ಮೋಕ್ಷವು ಲಭಿಸುವುದೆಂಬುವ ಆಶೆಯು ಇವರಲ್ಲಿ ಉತ್ಪನ್ನವಾಯಿತು. ಮತತತ್ವಗಳು ಸಾಮಾನ್ಯ ಜನತೆಯಲ್ಲಿ ಬೇರೂರಬೇಕಾದರೆ ದೇವ (ಗೀರ್ವಾಣ) ಭಾಷೆಗಿಂತಲೂ ಜನರ ಭಾಷೆಯೇ ತಕ್ಕುದೆಂದು ತಿಳಿದು ಬಸವೇಶ್ವರನು ಕನ್ನಡ ವಚನಗ್ರಂಥಗಳಿಗೆ ಪ್ರೋತ್ಸಾಹ ವನ್ನಿತ್ತನು. ಈ ಗ್ರಂಥಗಳಲ್ಲಿ ವೀರಶೈವತತ್ವ ಮೊದಲಾದವುಗಳು ಸರಳವಾದ, ಸರಸ ವಾದ, ಮೃದುಮಧುರವಾದ ಕನ್ನಡದ ಗದ್ಯದಲ್ಲಿ ಬರೆಯಲ್ಪಟ್ಟಿದ್ದರಿಂದ ವಚನನೆಂಬ ನೂತನವಾದ, ಅಲೌಕಿಕವಾದ, ಲಲಿತವಾದ ಭಾಷಾಸರಣಿಯೇ ಉದ್ಭವವಾಗಿ

ಕರ್ಣಾಟಕ ಸಾಹಿತ್ಯಕ್ಕೆ ಅಪೂರ್ವವಾದ ಕಳೆಯೇರಲು ಮಾರ್ಗವಾಯಿತು. ಬಸವೇಶ್ವರನು ತನ್ನ ಅನುಯಾಯಿಗಳೊಡನೆ ಈ ಎಲ್ಲ ಸುಧಾರಣೆಗಳಿಗೆ ಕಾರಣನಾದರೂ ಸ್ವತಃ ನಿಸ್ಪೃಹಿಯೂ, ಭಕ್ತಪುಂಗವನೂ, ಲೋಕಸೇವಾನಿರತನೂ ಆಗಿದ್ದನೆಂಬುದು ಆತನ ವಚನಗಳಿಂದಲೇ ಕಂಡುಬರುತ್ತದೆ.

ಶ್ರೀಮಾನ್ ಕೆ. ಜಿ. ಕುಂದಣಗಾರರು, ಎಂ. ಎ., ಪ್ರೊಫೆಸರ್, ರಾಜಾರಾಮ ಕಾಲೇಜ್, ಕೊಲ್ಹಾಪುರ—ಇವರು ಶ್ರೀ ಬಸವಣ್ಣನವರ ಕಾರ್ಯದ ಗುಟ್ಟು ಎಂಬುವ ಲೇಖನದಲ್ಲಿ—

ಬಸವಣ್ಣನವರು ಧರ್ಮಸಂಸ್ಥಾಪಕರೋ ಅಥವಾ ಧರ್ಮಸುಧಾರಕರೋ? ಅವರು ಸಮಾಜದಲ್ಲಿ ಸಂಘಟನೆಯನ್ನುಂಟುಮಾಡಿದರೋ ಅಥವಾ ಕ್ರಾಂತಿಯನ್ನು ಮಾಡಿದರೋ ಮುಂತಾದ ತೊಡಕುಗಳನ್ನು ಬಿಡಿಸಲು ಇತಿಹಾಸಕಾರರೂ, ಸಾಹಿತಿಗಳೂ, ಸಂಶೋಧಕರೂ ಒಂದೆಡೆ ತೊಡಗಿದ್ದರೆ ಮತ್ತೊಂದೆಡೆ ಸಾಲದಿಂದ ನರಳುತ್ತಿರುವ ಒಕ್ಕಲಿಗರೂ, ಸಹಕಾರ ಸಂಘಟನೆಗಳಿಲ್ಲದೆ ಕೈಯೊಳಗಿನ ವ್ಯವಹಾರವನ್ನು ಕಳೆದುಕೊಂಡು ಗುಜರಾತಿಗಳ ಅಥವಾ ಮಾರವಾಡಿಗಳ ಸಹಾಯ ದೊರೆಯಬಹುದೇ ಎಂದು ಅವರ ಮುಖವನ್ನೇ ದೈನ್ಯಭಾವದಿಂದ ನೋಡುತ್ತ ಕುಳಿತುಕೊಳ್ಳುವ ವರ್ತಕರೂ ಬಸವ ಜಯಂತಿಯ ದಿನ ಮೆರವಣಿಗೆಯಲ್ಲಿ ಬಸವಣ್ಣನವರಿಗೆ ಜಯವಾಗಲಿ ಎಂದು ಕೂಗುವುದರಲ್ಲಿಯೇ ತಮ್ಮ ಉತ್ಸಾಹವನ್ನು ತೋರಿಸುತ್ತಾರೆ. ಈ ಕೂಗಿನಲ್ಲಿಯೇ ತಮ್ಮದು ಬಸವಣ್ಣನವರ ಮೇಲಿನ ಭಕ್ತಿಯೆಂದು ಅವರು ಭಾವಿಸಿರಬಹುದು. ಆದರೆ ಅದು ಸ್ಮಶಾನ ವೈರಾಗ್ಯದಂತೆ ಕ್ಷಣಿಕ. ಆ ದಿನ ಕಳೆದುಹೋಯಿತೆಂದರೆ ಮುಂದಿನ ವರುಷ ಬರುವ ಬಸವ ಜಯಂತಿಯವರೆಗೆ ಬಸವಣ್ಣನವರ ನೆನಹು ಸಹ ಇರುವದಿಲ್ಲ. ಅವರಿಗೆ ಮಾತ್ರ ಬಸವಣ್ಣನವರ ಜಯ ಜಯಕಾರದಲ್ಲಿ ತಮ್ಮ ಸುಖದ ಮತ್ತು ತಮ್ಮ ಧರ್ಮದ ಬೀಜಮಂತ್ರವಿದೆಯೆಂದು ಅವರ ದೃಢವಿಶ್ವಾಸ. ಇಲ್ಲದಿದ್ದರೆ ಅವರು ಬಸವಣ್ಣನವರ ಅನುಯಾಯಿಗಳಾಗಿ ಉಳಿಯುತ್ತಿರಲಿಲ್ಲ. ಪ್ರಬಲವಾಗಿ ನಡೆಯುತ್ತಿರುವ ಧರ್ಮಾಂತರ ಕ್ರಮದಲ್ಲಿ ಅವರು ಮುಸಲ್ಮಾನರೋ ಕ್ರೈಸ್ತರೋ ಆಗಿಹೋಗಬಹುದಾಗಿದ್ದಿತು.

ಜನಸಾಮಾನ್ಯದ ಇಂತಹ ಗಟ್ಟಿ ನಂಬಿಕೆಯು ಹೇಗೆ ದೃಢಮೂಲವಾಯಿತು? ಎಂಬ ಪ್ರಶ್ನೆಗೆ ಮೂರು ಉತ್ತರಗಳು ಮುಂದೆ ಬರುತ್ತವೆ. (೧) ಬಸವಣ್ಣನವರು ವೀರಶೈವ ಧರ್ಮವನ್ನು ಪುನರುಜ್ಜೀವನಗೊಳಿಸಿದರು. (೨) ಅವರು ಸಮಾಜಘಟನೆ ಮಾಡಿದರು. (೩) ಅವರು ನಿರಪೇಕ್ಷಬುದ್ಧಿಯಿಂದ ಜಂಗಮಸೇವೆ ಮಾಡಿದರು. ಹಿಂದೂ ಜನರಲ್ಲಿ ಧಾರ್ಮಿಕ ಭಾವನೆಗಳು ಪ್ರಬಲವಾಗಿರುವುದರಿಂದ ಧರ್ಮಸ್ಥಾಪಕರ ಅಥವಾ ಧರ್ಮಸುಧಾರಕರ ಬಗ್ಗೆ ಅವರಲ್ಲಿ ಸ್ವಾಭಾವಿಕವಾಗಿ ಪೂಜ್ಯಬುದ್ಧಿ ಮಿತಿಯಿಲ್ಲದೆ ನೆಲೆಗೊಂಡಿರುತ್ತದೆ. ಈ ತತ್ವವನ್ನು ಮುಂದಿಟ್ಟುಕೊಂಡು ಬಸವಣ್ಣನವರ ಧಾರ್ಮಿಕ ಕಾರ್ಯವನ್ನು ವಿವೇಚಿಸಬೇಕಾಗುತ್ತದೆ. ಅವರು ವೀರಶೈವ ಧರ್ಮವನ್ನು ಪ್ರತಿಪಾದಿಸಿದರು, ಸಂಸ್ಥಾಪಿಸಿದರು ಅಥವಾ ಪುನರುಜ್ಜೀವನಗೊಳಿಸಿದರೆಂದು ಒಪ್ಪಿಕೊಳ್ಳಬಹುದು. (ಈ ಮೂರು ಪದಗಳು ಒಂದಕ್ಕಿಂತಲೂ ಒಂದು ಕ್ರಮವಾಗಿ ಉತ್ಕರ್ಷವುಳ್ಳವುಗಳು.) ಅದು ಅವರು ಮಾಡಿದ ಪಾಪ. ಆ ಪಾಪಕ್ಕಾಗಿ ಅವರು ಪ್ರಾಯಶ್ಚಿತ್ತ ತೆಗೆದುಕೊಳ್ಳಬೇಕಾಯಿತು. ಇಂತಹ ಪಾಪಕ್ಕಾಗಿಯೇ ಏಸುಕ್ರಿಸ್ತನು ಶೂಲದ ಮೇಲೆ ತೂಗಾಡ

ಬೇಕಾಯಿತು. ಇಂತಹ ಪಾಪಕ್ಕಾಗಿಯೇ ಮುಹಮ್ಮದನು ಓಡಿಹೋಗಿ ಅಡವಿಯಲ್ಲಿಯೋ ಗುಡ್ಡಗಳಲ್ಲಿಯೋ ಅಡಗಿಕೊಂತು ರಾತ್ರಿ ಮಾತ್ರ ಊಟಮಾಡಬೇಕಾಗುತ್ತಿತ್ತು. ಅದರ ಸ್ಮರಣೆಗೆಂದು ಆತನ ಅನುಯಾಯಿಗಳು ಈಗಲೂ ರೋಜಾ ತಿಂಗಳಿನಲ್ಲಿ ಹಗಲು ಉಪವಾಸವಿದ್ದು, ರಾತ್ರಿ ಊಟಮಾಡುವ ವ್ರತವನ್ನು ಪಾಲಿಸುತ್ತಾರೆ. ಇಂತಹ ಪಾಪಕ್ಕಾಗಿಯೇ ರಾಮಾನುಜಾಚಾರ್ಯರು ಚೋಳರಾಜ್ಯವನ್ನು ಬಿಟ್ಟು ಓಡಿಬಂದು ಹೊಯ್ಸಳ ಬಿಟ್ಟಿದೇವನಲ್ಲಿ ಆಶ್ರಯಪಡೆಯಬೇಕಾಯಿತು. ಆ ಆಚಾರ್ಯರ ತರುವಾಯ ತುಸುದಿನಗಳಲ್ಲಿಯೇ ಬಸವಣ್ಣನವರು ಇಂತಹ ಪಾಪವನ್ನೇ ಆಚರಿಸಿ ಕೂಡಲ ಸಂಗಮ ನಲ್ಲಿಗೆ ಹೋಗಿ ಆ ದೇವನಲ್ಲಿ ಐಕ್ಯವಾಗಬೇಕಾಯಿತು. ಏಸುಕ್ರಿಸ್ತನ ಧರ್ಮವು ಎಲ್ಲೆಲ್ಲಿಯೂ ಇದೆ. ಮುಹಮ್ಮದನ ಧರ್ಮ ಏಷ್ಯಾ ಖಂಡದೊಳಗಿನ ಪಶ್ಚಿಮ ರಾಷ್ಟ್ರಗಳನ್ನು ವ್ಯಾಪಿಸಿ ಆಫ್ರಿಕಾ ಖಂಡದ ಉತ್ತರ ಭಾಗದಲ್ಲೆಲ್ಲಾ ಹರಡಿದೆ. ರಾಮಾನುಜಾಚಾರ್ಯರ ಶ್ರೀವೈಷ್ಣವವು ತುಂಗಭದ್ರೆಯಿಂದ ದಕ್ಷಿಣದಲ್ಲಿ ಮಾತ್ರ. ಬಸವಣ್ಣನವರ ವೀರಶೈವವು ಇಂಡಿಯದಾದ ಕರ್ಣಾಟಕದಲ್ಲಿದೆ. ಈ ಧರ್ಮದ ವ್ಯಾಪ್ತಿಯ ಕ್ರಮವನ್ನು ನೋಡಿದರೆ ಇದು ಇಳಿಕೆಯ ಕ್ರಮದಲ್ಲಿದೆ. ಅದಕ್ಕೆ ಕಾರಣವೇನು? ಬಸವಣ್ಣನವರು ಉಳಿದ ಮತಸ್ಥಾಪಕರಿಗಿಂತ ಕಡಿಮೆಯೇ? ಅವರಲ್ಲಿ ಬಸವಣ್ಣನವರ ಸ್ಥಾನವಾವುದು?

ಈ ಮಹಾನುಭಾವರು ಹೀಗೆ ೮೦೦ ವರ್ಷಗಳ ಪೂರ್ವದಲ್ಲಿಯೇ ಕರ್ಣಾಟಕಕ್ಕೆ ರಾಷ್ಟ್ರೀಯ ಭಾವನೆಯನ್ನು ತಂದುಕೊಡಲು ಹೆಣಗಿದರು. ಅವರ ಆ ಕಲ್ಪನೆಯು ಅವರ ರಾಜನೀತಿ ತತ್ವದ ಹೆಗ್ಗುರುತಾಗಿ ಅವರನ್ನು ಶಾಸನ ತತ್ವಜ್ಞರ ಮಾಲಿಕೆಗೆ ಸೇರಿಸುತ್ತದೆ. ಅವರ ದೂರದೃಷ್ಟಿಯು ಅಸಾಮಾನ್ಯವಾಗಿತ್ತಾದುದರಿಂದ ಆ ದೃಷ್ಟಿ ಯಿಲ್ಲದ ಸಾಮಾನ್ಯ ಜನರಿಗೆ ಅದು ಗೋಚರಿಸದೆ ಹೋಯಿತು. ಈವರೆಗೂ ಗೋಚರಿಸುತ್ತಿಲ್ಲ ಅದು. ಅವರು ಆ ಕಾಲದಲ್ಲಿರದೆ ಈಗಿನ ಕಾಲದಲ್ಲಿ ಜನಿಸಿದ್ದರೂ ಅದೇ ರೀತಿಯಾಗಿ ತಮ್ಮ ವಿಚಾರಗಳನ್ನು ಪ್ರಚಾರಗೊಳಿಸಬಹುದಿತ್ತು. ಅವರು ದಣ್ಣಾಯಕರಾಗಿರದೆ ಅರಸರಾಗಿದ್ದರೆ ಅವರ ಕಾರ್ಯವು ತೀರ ಸುಲಭವಾಗ ಬಹುದಾಗಿದ್ದಿತು.

ಮೇಲಿನ ವಿವೇಚನೆಯಿಂದ ಹಿಂದೂಸ್ಥಾನದಲ್ಲಿ ೧೨ನೇ ಶತಮಾನಕ್ಕೆ ಪೂರ್ವದಲ್ಲಿ ಆಗಿಹೋದ ಧರ್ಮಸ್ಥಾಪಕ ಧರ್ಮಸುಧಾರಕರಿಗಿಂತ ಬಸವಣ್ಣನವರು ಹೆಚ್ಚಿನ ಕಾರ್ಯ ಜರುಗಿಸಿದ್ದಾರೆ. ಅವರು ಕೇವಲ ತತ್ವಶೋಧಕರಲ್ಲ. ತಾವು ಕಂಡುಹಿಡಿದ ತತ್ವಗಳನ್ನು ಆಚರಣೆಯಲ್ಲಿ ತರಲು, ಪ್ರಚಾರಗೊಳಿಸಲು ವಿಶ್ವಪ್ರಯತ್ನಮಾಡಿದ ಮಹಾನುಭಾವರು. ಆದುದರಿಂದ ಅವರ ಸ್ಥಾನವು ಯಾವುದೆಂಬುದನ್ನು ನಿರ್ದೇಶಿಸುವ ಕಾರಣವೇ ಉಳಿಯುವುದಿಲ್ಲ.

## ಭೀಮಕವಿಯ ಬಸವಣ್ಣ

ಬರೆದವರು: ವೀರಭದ್ರಪ್ಪ ಕೊಪ್ಪಳ, ಎಂ.ಎ., ಬಿ.ಟಿ., ಹೆಡ್ಮಾಸ್ಟರ್, ಲಿಂಗವಂತ ಹೈಸ್ಕೂಲ್, ಧಾರವಾಡ.—ಇವರು ಸುಪ್ರಸಿದ್ಧ ಲೇಖಕರಿದ್ದು ಶರಣರ ತತ್ವಾಚರಣೆಗಳಲ್ಲಿ ನಿಷ್ಠಾವಂತರಾದ ವಿದ್ವಾಂಸರು. ಅನೇಕ ಲೇಖನಗಳನ್ನು ಬರೆದಿರುತ್ತಾರೆ. ಭೀಮ

ಕವಿಯು ಬಸವಣ್ಣ ಎಂಬುವ ತಮ್ಮದೊಂದು ಲೇಖನದಲ್ಲಿ ಬಸವಣ್ಣನವರ ಬಗ್ಗೆ ಅನೇಕ ವಿಷಯಗಳನ್ನು ಬರೆದಿರುತ್ತಾರೆ. ಅದರಲ್ಲಿಯ ಕೊಂಚ ಭಾಗವನ್ನು ಇಲ್ಲಿ ಕೊಡುತ್ತೇವೆ.

ಬಸವಣ್ಣನವರ ಚರಿತ್ರೆಗೆ ಸಹಾಯವಾದ ಅಂಶಗಳು ಸಿಕ್ಕುವುದು ಸಾಮಾನ್ಯವಾಗಿ ಶಿವಶರಣರ ವಚನ ಗ್ರಂಥಗಳಲ್ಲಿ. ಆ ತರುವಾಯ ಆಗಿಹೋದ ಕವಿಕೃತಿಗಳಲ್ಲಿ ಹಾಗೂ ಅಲ್ಲೊಂದು ಇಲ್ಲೊಂದಾಗಿ ದೊರೆಯುವ ಶಾಸನಗಳಲ್ಲಿ, ವಚನ ಗ್ರಂಥಗಳಲ್ಲಿ ದೊರೆಯುವದು ಬಸವಣ್ಣನವರ ಆಧ್ಯಾತ್ಮಿಕ ಜೀವನದ ಐತಿಹ್ಯ. ಬಸವಣ್ಣನವರು ತಾವು ಹಾಡಿಕೊಂಡ ವಚನಗಳಲ್ಲಾಗಲೀ ಇಲ್ಲವೆ ಇನ್ನುಳಿದ ವಚನಕಾರರು ನುಡಿದ ವಚನಗಳಲ್ಲಾಗಲೀ ದೊರೆಯುವ ಈ ಜೀವನದ ತಿರುಳು ಆಧ್ಯಾತ್ಮಿಕ ಕ್ಷೇತ್ರದಲ್ಲಿ ಮುನ್ನಡೆಯುಳ್ಳವರಿಗೆ ತುಂಬಾ ಸಹಾಯಕಾರಿಯಾದುದು. ಪುರಾಣಗಳಲ್ಲಿ ಅವು ಸ್ವಮತೀಯ ಬಾಂಧವರಿಂದ ರಚಿತವಾಗಿರಲಿ ಇಲ್ಲವೆ ಪರಮತೀಯ ಬಾಂಧವರಿಂದ ರಚಿತವಾಗಿರಲಿ ಅಲ್ಲಿ ಸಿಕ್ಕುವುದು ಪವಾಡಪುರುಷ ಬಸವಣ್ಣನ ಜೀವನ ಚರಿತ್ರೆ. ಭಕ್ತಿಯ ಅತಿರೇಕದಿಂದ ವೀರಶೈವ ಕವಿಗಳು ಬಸವಣ್ಣನನ್ನು ಹೊಗಳಿದಷ್ಟೂ ಅನ್ಯಮತೀಯ ಕವಿಗಳು ತೆಗಳಿರುವರು. ಐತಿಹಾಸಿಕ ದೃಷ್ಟಿಗೆ ಇವೆರಡೂ ದೃಷ್ಟಿಕೋನಗಳು ವಿಪರೀತವಾದವುಗಳೇ.

ಬಸವಣ್ಣನಿಗೆ ರಾಜಸೇವೆ ಎಂಬುದು ಮುಳ್ಳುಮೇಲಿನ ಬಾಳುವೆ ಎಂದು ತಿಳಿದಿತ್ತು. ದಿವ್ಯದೃಷ್ಟಿ ಪ್ರಸಾದದಿಂದ ದೊರೆತ ನಿಯೋಗವನ್ನು ಪಾಲಿಸುವಾಗ್ಗೆ ಅನ್ಯರ ಸಂದುಸಂಶಯಗಳಿಗಿಂಬು ಉಂಟಾಗದಂತೆ ನಡೆದುಕೊಳ್ಳುವ ಬುದ್ಧಿಯೂ ಅವನಿಗಿತ್ತು. ಆ ದೆಶೆಯಿಂದ ಕಾಯಾ, ವಾಚಾ, ಮನಸಾ ತಾನು ಪರಿಶುದ್ಧನಾಗಿರ್ಪೆನೆಂಬುದ ಬೀರಲು ೩೬ ಭಾಷೆಗಳನ್ನು ನಡೆಸುವೆನೆಂದು ವ್ರತವನಂಗೀಕರಿಸಿದನು. ಬಿಜ್ಜಳನ ನಂಬುಗೆಗೆ ನಲಿವೇರುವಂತೆ ಎಲ್ಲಾ ವ್ಯವಸ್ಥೆಗೊಳಿಸಿದನು. ಎಳೆತನದಲ್ಲಿ ತಾನು ತಾಳಿದ ನಿಷ್ಠೆಯನ್ನು ಬಲಿಸಿ, ವರ್ಣಭೇದವನ್ನು ಅಳಿಸಿ, ಸಮತೆ ಸಮರಸವನ್ನು ತಿಳಿಸಿ, ಭಕ್ತ ಬಾಂಧವ್ಯವನ್ನುಳಿಸಿ, ಇಷ್ಟಲಿಂಗ ಶ್ರೇಷ್ಠತೆಯನ್ನು ಬೆಳೆಸಿ ತೋರುವ ಹೊಸದೊಂದು ಪ್ರಯೋಗಕ್ಕೆ ಆತಂಕಗಳು ಬಾರದಂತೆ ನೋಡಿಕೊಳ್ಳುವುದೇ ಅವನ ಈಗಿನ ಘನವಾದ ಉದ್ದೇಶ. ಇದಕ್ಕಾಗಿ ತನು-ಮನ-ಧನಗಳನ್ನು ಸೂರೆಗಯ್ಯಲುಪಕ್ರಮಿಸಿದನು. ಇದಕ್ಕಾಗಿ ಅಸಮವೀರದ ಪೆಂಪು, ಧೈರ್ಯರಸದ ಸೊಂಪು, ವಿವೇಕದ ಇಂಪು, ವಿಕಸಿತಸುಮತಿಯರಲ ಕಂಪು, ಶಾಂತಿಯುರಳ ತಂಪು ಅವನಲ್ಲಿ ಸೇರುವೆಗೊಂಡವು. ವಸುಧೆಯೊಳು ಸಾಮಾನ್ಯ ಭಕ್ತನೇ ಬಸವನು? ಎಂದೆಲ್ಲರೂ ಆತನನ್ನು ಕೀರ್ತಿಸುತ್ತಿರಲು ಒಂದೊಂದು ನಿಯಮಾಚರಣೆ ಕುರುಹಾಗಿ ಆತನು ತನ್ನನ್ನು ದರ್ಶಿಸುವ ತವಕದಿ ಒಪ್ಪುವರಿಗೆಲ್ಲ ಆಶ್ರಯವನ್ನಿತ್ತನು. ಅವರವರ ನೇಮನಿತ್ಯಗಳು ಕೊರತೆಯಿಲ್ಲದೆ ನಿರಂತರವಾಗಿ ನಡೆಯುವ ವ್ಯವಸ್ಥೆ ಮಾಡಿಕೊಟ್ಟನು. ಶರಣರ ಸಂಗವು ಬೆಳೆಯಹತ್ತಿತು. ಲಿಂಗಕ್ಷೇತ್ರವು ಹೊಳೆಯಹತ್ತಿತು. ಭವಬಂಧ ಭವಪಾಶವಾದ ಕಾರಣವೇನಯ್ಯಾ ಹಿಂದಣ ಜನ್ಮದಲ್ಲಿ ಲಿಂಗವ ಮರೆದೆನಾಗಿ ಹಿಂದಣಶಿರಿಯಲ್ಲಿ ಜಂಗಮವ ಜರಿದೆನಾಗಿ ಅರಿವಡೆ ಈ ಸಂಸಾರವ ಹೊದ್ದಲೀವೆನೆ? ಎಂದು ಹಂಬಲಿಸುವ ಅವಕಾಶವು ಅವನಿಗೆ ಈಗ ಉಳಿಯದಾಯಿತು. ಹೂವಿನ ಕಂಪು ಹುಳುಗಳನ್ನು ತನ್ನತ್ತ ಸೆಳೆಯುವಂತೆ ಬಸವಣ್ಣನ ಭಕ್ತಿಯ ಪೆಂಪು ಭಕ್ತರನ್ನು ತನ್ನತ್ತ ಸೆಳೆಯಹತ್ತಿತು. ಭಕ್ತಿಯು ಪಸರಿಸಹತ್ತಿತು.

ಶ್ರೀಮಾನ್ ಎಸ್. ಜಿ. ಸಾಖರಪೆಸರ್, ಬಡೋದೆ—ಇವರು ಆಗಮೋಕ್ತ ವೀರಶೈವ ಧರ್ಮ ಎಂಬುವ ತಮ್ಮದೊಂದು ಲೇಖನದಲ್ಲಿ—

ಶ್ರೀ ಬಸವೇಶ್ವರನು ಆಗಮೋಕ್ತ ವೀರಶೈವ ಮತದ ಪುನರುದ್ಧಾರ ಮಾಡಿದನು. ವೀರಶೈವ ಮತದ ಚರಿತ್ರೆಯಲ್ಲಿ ಬಸವಯುಗವು ಸುವರ್ಣಯುಗ. ಬಸವೇಶ್ವರನು ಶಂಕರಾಚಾರ್ಯರಂತೆಯೇ ಸುಪ್ರಸಿದ್ಧನಾದ ಮತಪ್ರವಾದಿ. ಹಿಂದೆ ಸಂಸ್ಕೃತದಲ್ಲಿ ನಡೆಯುತ್ತಿದ್ದ ಮತಪ್ರಚಾರವನ್ನು ತಪ್ಪಿಸಿ, ತಿಳಿಗನ್ನಡದಲ್ಲಿ ಜನರಿಗೆ ವೀರಶೈವ ಮತವನ್ನು ಬೋಧಿಸಿದನು. ಕೇವಲ ಹೇಳಿಕೆಗಳಿಂದ ತೃಪ್ತನಾಗದೆ ಮತಾಚರಣೆಯನ್ನು ಕಾರ್ಯರೂಪದಲ್ಲಿ ಮಾಡಿ ತೋರಿಸಿದನು. ೧೨ನೇ ಶತಮಾನದಲ್ಲಿ ಸುಪ್ರಸಿದ್ಧ ರಾಜ ಕಾರಣ ಪುರುಷನೂ, ಮತಪ್ರವಾದಿಯೂ ಆದ ಆತನ ಸಹಾಯದಿಂದ ವೀರಶೈವ ಮತವು ಉತ್ಕೃಷ್ಟರೂಪವನ್ನು ಪಡೆಯಿತು. ಆದಕಾರಣವೇ ಭರತಖಂಡದ ರಾಜಕೀಯ, ಸಾಮಾಜಿಕ, ಸಾಹಿತ್ಯ ಮತ್ತು ಮತಸಂಬಂಧವಾದ ಚರಿತ್ರೆಯಲ್ಲಿ ಆತನ ಹೆಸರು ಧೃವತಾರೆಯಂತೆ ಬೆಳಗುತ್ತಿದೆ.

ಶಿ. ಶಿ. ಬಸವನಾಳರು, ಎಂ.ಎ., ನಿವೃತ್ತ ಪ್ರೊಫೆಸರರು, ಲಿಂಗರಾಜ ಕಾಲೇಜು, ಸಂಪಾದಕರು: "ಜಯಕರ್ಣಾಟಕ" ಮತ್ತು "ಲಿಂಗಾಯತ ಸಾಹಿತ್ಯ ಸಮಿತಿ ಪತ್ರಿಕಾ", ಹಿಂದಿನ ವೀರಶೈವ ಮಹಾ ಸಭಾಧ್ಯಕ್ಷರು ಮತ್ತು ಅಖಿಲ ಕರ್ಣಾಟಕ ಸಾಹಿತ್ಯ ಸಮ್ಮೇಳನಾಧ್ಯಕ್ಷರು. ಕನ್ನಡ ನಾಡಿನ ಹಿರಿಯ ಸಾಹಿತಿಗಳಲ್ಲಿ ಅಗ್ರಗಣ್ಯರು. ಅನೇಕ ಗ್ರಂಥಗಳನ್ನು ಬರೆದವರು. ಧಾರವಾಡದ ಲಿಂಗಾಯತ ಲಿಟರರಿ ಕಮಿಟಿಯವರು ಹೊರಡಿಸಿರುವ ಗ್ರಂಥಗಳಿಗೆಲ್ಲಾ ಸ್ವಾರಸ್ಯ ಮುನ್ನುಡಿಯನ್ನು ಬರೆದವರು—ಇವರು ಯುಗಪ್ರವರ್ತಕ ಬಸವಣ್ಣ ಎಂಬುವ ಗ್ರಂಥದ ಮುನ್ನುಡಿಯನ್ನು ಬರೆಯುವ ಕಾಲಕ್ಕೆ ಶ್ರೀ ಬಸವಣ್ಣನವರ ವಿಷಯಕ್ಕೆ ಕೆಳಗೆ ಬರೆದ ಕಾಣಿಕೆ ಸಲ್ಲಿಸಿರುತ್ತಾರೆ—

ಕರ್ಣಾಟಕದ ಶ್ರೇಷ್ಠ ವಿಭೂತಿಗಳಲ್ಲಿ ಬಸವಣ್ಣನವರೊಬ್ಬರೆಂಬುವದು ಎಲ್ಲರೂ ಒಪ್ಪುವಂತಹ ಮಾತಾಗಿರುತ್ತದೆ. ವೀರಶೈವವು ಪುರಾತನ ಕಾಲದಿಂದಲೂ ಅಸ್ತಿತ್ವ ದಲ್ಲಿದೆ ಎಂದು ವಾದಿಸುವ, ಸಾಧಿಸುವ ಜನರು ಹಲವರಿರುವರಾದರೂ ಅದು ಒಂದು ಸುವ್ಯವಸ್ಥಿತವಾದ, ಸುಸಂಘಟಿತವಾದ, ಸ್ವತಂತ್ರವಾದ ಸಮಾಜವಾಗಿ ಏರ್ಪಟ್ಟಿದು ಬಸವಣ್ಣನವರ ಕಾಲದಲ್ಲಿಯೇ ಎಂಬುವುದಕ್ಕೆ ಸಾಕಷ್ಟು ಆಧಾರಗಳನ್ನು ಕೊಡಬಹುದು. ಈ ಸಮಾಜಸಂಘಟನೆಗೆ ಬಸವಣ್ಣನವರೇ ಮೂಲಕಾರಣರು, ಮುಖ್ಯ ಕಾರಣರು ಎಂಬುದಕ್ಕೆ ಅವರ ಕಾಲದ ಹಾಗೂ ಅವರ ತರುವಾಯದ ಶರಣರ, ವಚನಕಾರರ, ಕವಿಗಳ ಮಾತುಗಳನ್ನು ಬೇಕಾದಷ್ಟು ಉದಾಹರಿಸಬಹುದು—"ಶಿವಸಮಯ ಪ್ರತಿಷ್ಠಾಚಾರ್ಯ" ಎಂದು ಅಲ್ಲಮಪ್ರಭುಗಳು, "ಪ್ರಥಮಗುರು" ಎಂದು ಚೆನ್ನಬಸವಣ್ಣ ನವರು, "ಬಸವಗುರು ಶಿವನಾಗಿ ದಿಶೆಗೆಟ್ಟ ದೇವತಾಪಶುಗಳಿಗೆ ಪತಿಯಾದ" ಎಂದು ಸಿದ್ಧರಾಮ ಶಿವಯೋಗಿಗಳು, "ಎತ್ತೆತ್ತ ನೋಡಿದಡತ್ತತ್ತ ಬಸವನೆಂಬ ಬಳ್ಳಿ ಎತ್ತಿ ನೋಡಿದೊಡೆ, ಲಿಂಗವೆಂಬ ಗೊಂಚಲು ಒತ್ತಿ ಹಿಂಡಿದೊಡೆ ಭಕ್ತಿಯೆಂಬ ರಸವಯ್ಯ" ಎಂದು ಮಡಿವಳ ಮಾಚಿದೇವರು, "ಅನಾದಿ ಪರಶಿವನು ತಾನೇ ಜಗದ್ಧಿತಾರ್ಥವಾಗಿ ಮರ್ತ್ಯಕ್ಕವತರಿಸಿ ಬಸವನೆಂಬ ನಾಮವನ್ನು ಧರಿಸಿ ವೀರಶೈವವನರುಹಿದಂ" ಎಂದು

ಅಕ್ಕಮಹಾದೇವಿಯುವರು — ಈ ಮುಂತಾದ ಬಸವಣ್ಣನವರ ಒಡನಾಡಿಗಳೇ ತಮ್ಮ ಕೃತಿಗಳಲ್ಲಿ ಮುಕ್ತಕಂಠರಾಗಿ ಬಸವಣ್ಣನವರನ್ನು ಪ್ರಶಂಸಿಸಿರುತ್ತಾರೆ. ಅವರ ಕಾರ್ಯದ ಬಗೆಗೆ ತಮ್ಮ ನಿರ್ಣೀತವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಬಸವಣ್ಣನವರ ತರುವಾಯದಲ್ಲಿ ಅವರನ್ನು "ಪಾಷಂಡಿ ಭೂಮಿಯೊಳ್ ಶಿವಭಕ್ತಿಯನಾರಂಭಿಸಿ ಸಾಮರ್ಥ್ಯಮಂ ಬಿತ್ತರಿಸಿ ಪ್ರತ್ಯಕ್ಷಂಗಳ ಬೆಳೆದು, ಗಣಪರ್ವಂಗಳಂ ಸುಫಲಂ ಮಾಡಲೆಂದು ಬಂದ ಕಾರಣಿಕ" ಎಂದು ಹರಿಹರ ದೇವರೂ, "ವೀರಶೈವನಿರ್ಣಯ ಪ್ರಮಾವತಾರ– ಜಗದಾದಿದೇಶಿತ ಪುರಾತನ ಪುಂಗವ" ಎಂದು ಮಗ್ಗೆಯ ಮಾಯಿ ದೇವರೂ ಕೊಂಡಾಡಿದ್ದಾರೆ. "ಬಸವ ಮಾಡಿದೊಡಾಯ್ತು ಗುರುನೆಲೆ, ಬಸವ ಮಾಡಿ ದೊಡಾಯ್ತು ಲಿಂಗವು, ಬಸವ ಮಾಡಿದೊಡಾಯ್ತು ಜಂಗಮ" ಎಂದು ಚಾಮರಸರು ಬಣ್ಣಿಸಿದರೆ "ಗುರುಬಸವಂ, ಲಿಂಗಬಸವಂ, ಚರಬಸವಂ, ತೀರ್ಥಬಸವಂ, ಅಗಣಿತ ಮಹಿಮೋತ್ಕರ ಪ್ರಸಾದಬಸವಂ" ಎಂದು ಪಾಲ್ಕುರಿಕೆಯ ಸೋಮೇಶ್ವರರು ಬಸವಣ್ಣ ನವರನ್ನು ಅಷ್ಟಾವರಣಗಳ ಅಧಿದೇವತೆಯೆಂಬರ್ಥದಲ್ಲಿ ಹೊಗಳಿದ್ದಾರೆ. ಯಾವ ಗ್ರಂಥವನ್ನು ಬರೆಯಹೊರಟರೂ 'ಶ್ರೀಗುರುಬಸವಲಿಂಗಾಯನಮಃ' ಎಂದೇ ಆರಂಭ ಮಾಡುವ ಸಂಪ್ರದಾಯ ವೀರಶೈವ ಬರಹಗಾರರಲ್ಲೆಲ್ಲ ಅವ್ಯಾಹತವಾಗಿ ಸಾಗಿಬಂದಿದೆ ಎನ್ನುವದಕ್ಕೆ ತಾಳೆಯೋಲೆಯ ಕೈಬರಹದ ಪ್ರತಿಗಳು ಸಾಕ್ಷಿಯಾಗಿವೆ. ಬಹಳವೇಕೆ? ಆವ ಆಚಾರ್ಯರಿಗೂ ಲಭಿಸದ ಪದವಿ ಬಸವಣ್ಣನವರದು. ಅವರು ವೀರಶೈವರಲ್ಲಿ ಮಂತ್ರಸ್ಥಾನಾಪನ್ನರಾಗಿದ್ದಾರೆ. ಮಂತ್ರದಲ್ಲಿ ಪ್ರಣವಸ್ಥಾನವನ್ನೇ ಪಡೆದಿದ್ದಾರೆ.

ಕನ್ನಡ ಸಮಾಜದ ಪ್ರಧಾನಭಾಗ ವೀರಶೈವ ಸಮಾಜ; ವೀರಶೈವ ಸಮಾಜದ ಬಹುಭಾಗ ಕನ್ನಡ ಸಮಾಜ. ಆದುದರಿಂದ ಬಸವಣ್ಣನವರು ವೀರಶೈವರಿಗಷ್ಟೇ ಪೂಜ್ಯರೆಂತಲ್ಲ, ಕನ್ನಡಿಗರೆಲ್ಲರಿಗೂ ವಂದ್ಯರಾಗಿದ್ದಾರೆ. ಮೇಲಾಗಿ ಕನ್ನಡಸಾಹಿತ್ಯವೆಂದರೆ ಹೆಚ್ಚಾಗಿ, ಮುಖ್ಯವಾಗಿ ವೀರಶೈವ ಸಾಹಿತ್ಯ. ವೀರಶೈವ ಸಾಹಿತ್ಯದ ವಿಶಿಷ್ಟ ಬಗೆ ವಚನಸಾಹಿತ್ಯ. ಈ ವಚನಸಾಹಿತ್ಯವೇ ಕನ್ನಡವು ವಿಶ್ವಸಾಹಿತ್ಯಕ್ಕೆ ಕೊಟ್ಟ ಅಮೋಘ ಕಾಣಿಕೆಯೆಂದು ಕನ್ನಡಿಗರೆಲ್ಲರೂ ಹೆಮ್ಮೆಪಡಬಹುದಾಗಿದೆ. ಸಂಸ್ಕೃತದ ಹಿರಿಮೆ ಸಡಲಿ ಕನ್ನಡದ ಹೆಚ್ಚಳ ಬೆಳೆದುದು ಈ ವಚನಸಾಹಿತ್ಯದಿಂದ. ಪದ್ಯದ ವ್ಯಾಮೋಹ ಸರಿದು ಗದ್ಯಕ್ಕೆ ಪುರಸ್ಕಾರ ದೊರೆತುದುದು ಈ ವಚನಸಾಹಿತ್ಯದಿಂದ. ಬಹು ಕಾಲದಿಂದಲೂ ಪಂಡಿತರ ತುತ್ತಾಗಿದ್ದ, ವಿಶಿಷ್ಟವರ್ಗದವರ ಸೊತ್ತಾಗಿದ್ದ, ರಾಜಲಕ್ಷ್ಮಿಯ ತೊತ್ತಾಗಿದ್ದ ಸರಸ್ವತಿಯ ಸಂಸ್ಕೃತ ಭಂಡಾರವನ್ನು ಕಡೆಗಣಿಸಿ, ತಮ್ಮ "ಅನುಭವದ ಕಮ್ಮಟ" ದಲ್ಲಿಯೇ ಅಚ್ಚೊತ್ತಿದ್ದ ವಚನ ನಾಣ್ಯಗಳನ್ನು ಜನಸಾಮಾನ್ಯರೆಲ್ಲರಲ್ಲಿ ಸಲ್ಲುವಂತೆ ಹರಡಿಸಿದವರು ವಚನಕಾರರು. ದೇವವಾಣಿಗೆ ಜನವಾಣಿಯಾಗುವುದು ಅಸಾಧ್ಯವಾದಾಗ ಜನವಾಣಿಯನ್ನೇ ದೇವವಾಣಿಯ ಮಟ್ಟಕ್ಕೇರಿಸಿದ ಪವಾಡ ವೀರಶೈವ ವಚನಕಾರರದು. ಈ ವಚನಸಾಹಿತ್ಯವಾಹಿನಿಯ ಮೂಲವನ್ನು ಸಂಶೋಧಿಸಲು ಹೊರಟ ಪಂಡಿತರಲ್ಲಿ ಕೆಲವರಿಗೆ ಅದರ ಉಗಮವು ಬಸವಣ್ಣನವರಿಗಿಂತಲೂ ಕಿಂಚಿತ್ ಪೂರ್ವವಾಗಿರಬಹುದೆಂಬ ಸಂದೇಹ ಉಂಟಾಗಿದ್ದರೂ ಆ ವಾಹಿನಿ ಕಣ್ಣಿಗೆ ಕಾಣುವನಿತು ಹೆಸರುಪಡೆಯುವನಿತು ವಿಶಾಲವಾದುದು ಬಸವಣ್ಣನವರ ಕಾಲದಲ್ಲಿಯೇ, ಅವರ ದೆಸೆಯಿಂದಲೇ ಎನ್ನುವಲ್ಲಿ ಆವ ಸಂದೇಹವೂ ಇಲ್ಲ. ಇಡೀ ವಚನಸಾಹಿತ್ಯಕ್ಕೆ

ಎಲ್ಲಿಂದದಿಂದಲೂ ಏಕಮೇವ ಪ್ರತಿನಿಧಿಯೆಂದರೆ ಬಸವಣ್ಣನವರ ವಚನಗಳು. ಅವು ಗಳಲ್ಲಿ ಮಿಡಿಯುವ ಅವರ ವಾಣಿ ಅಮೃತವಾಣಿ, ಅಧರಕ್ಕೂ ಸಿಹಿ, ಉದರಕ್ಕೂ ಸಿಹಿ, ರಸಪರಿಪಾಕವೆಂದು ಅಮೃತ, ಶಾಶ್ವತ ಸಾಹಿತ್ಯವೆಂದು ಅಮೃತ.

ಬಸವಣ್ಣನವರ ಈ ಕಾರ್ಯ, ಈ ಸೇವೆ, ಈ ಸ್ಥಾನಮಾನಗಳನ್ನು ಸಹೃದಯ ರಾದ ಕನ್ನಡ ಚರಿತ್ರಕಾರರಲ್ಲಿ ಹಲವರು ಕಂಡುಕೊಂಡಿರುವರಾದರೂ ಜಗತ್ತಿನ ಜೀವ ಜ್ಯೋತಿಗಳಲ್ಲಿಯೂ ಬಸವಣ್ಣನವರು ಗಣ್ಯರೆಂಬ ಅರಿವು ನಮ್ಮವರಲ್ಲಿಯೂ, ಇತರ ರಲ್ಲಿಯೂ ಬಲಪಟ್ಟು ನೆಲೆಗೊಳ್ಳಬೇಕಾಗಿದೆ. ಆತ್ಮೋದ್ಧಾರದ ಸಮಾಜ ಸಂಸ್ಕರಣದ ತಳಹದಿಯೆಂದು ಬಸವಣ್ಣನವರು ಇಟ್ಟುಕೊಂಡು ಆಚರಿಸಿದ, ಪ್ರಚಾರಮಾಡಿದ ತತ್ವಗಳು ಬಹು ವಿಶಾಲವಾದುವೂ, ಕಾಲ ದೇಶಗಳ ಮರ್ಯಾದೆಯನ್ನು ಮೀರದುವೂ ಆಗಿರುವುದರಿಂದ ಶಾಂತಿಯನ್ನು ಕಳೆದುಕೊಂಡು ಅರಸುತ್ತಿರುವ ಈಗಿನ ಜಗತ್ತಿಗೆ ಅವುಗಳ ಅಗತ್ಯ ಬಹಳವಾಗಿದೆ. ಬುದ್ಧ, ಮಹಾವೀರರು ಬಹುಕಾಲದ ಹಿಂದೆಯೇ ಪ್ರಚುರಪಡಿಸಿದ ಅಹಿಂಸಾತತ್ವವು ಕಾಲಕ್ರಮದಲ್ಲಿ ಮನುಷ್ಯಸ್ವಭಾವಕ್ಕನುಗುಣವಾಗಿ ಸಂಕುಚಿತವಾಗುತ್ತ, ಶುಷ್ಕವಾಗುತ್ತ ಕೇವಲ ಶಾಬ್ದಿಕವಾಗಿ ಪರಿಣಮಿಸಿದಾಗ ಅದನ್ನು ಪುನರುಜ್ಜೀವನಗೊಳಿಸಿ ವಿಸ್ತರಿಸಿದವರು ಬಸವಣ್ಣನವರು.

ಶ್ರೀ ಬುದ್ದಯ್ಯನವರು, ಪುರಾಣಿಕರು, ಧಾರವಾಡ—ಇವರು ಕನ್ನಡ, ಮರಾಠಿ ಎರಡೂ ಭಾಷೆಗಳಲ್ಲಿ ಅನೇಕ ಲೇಖನಗಳನ್ನು ಬರೆದಿದ್ದಾರೆ. ಪ್ರಭುದೇವರ ಅನೇಕ ಗ್ರಂಥಗಳನ್ನು ಅಚ್ಚುಮಾಡಿಸಿ ಬೆಳಕಿಗೆ ತಂದಿರುತ್ತಾರೆ. ಇವರು "ಜಯಕರ್ಣಾಟಕ" ಮಾಸಿಕದಲ್ಲಿ "ಸಂತರ ಬಸವಣ್ಣ" ಎಂಬುವ ಲೇಖನವನ್ನು ಬರೆದಿರುತ್ತಾರೆ. ಅದರಲ್ಲಿಯ ಕೆಲವು ಭಾಗವನ್ನು ಇಲ್ಲಿ ಕೊಡುತ್ತೇವೆ—

ಶ್ರೀಮನ್ನಿರಂಜನ ಜಗದ್ಗುರು ಶ್ರೀಮದನಾದಿ ಅಲ್ಲಮಪ್ರಭುವು ಸುಮತಿನಿರ್ಮಲ ಶೆಟ್ಟಿ ಎಂಬುವರ ಗರ್ಭದಿಂದೊಗೆದ ಮಹಾದೇವಿಯು ವಯಸ್ಸಿನಲ್ಲಿ ಚಿಕ್ಕವಳಾದರೂ ಜ್ಞಾನದಿಂದ ಎಲ್ಲರಿಗೂ ಹಿರಿಯಳಾದ್ದರಿಂದ ಆಕೆಯನ್ನು ಅಕ್ಕನೆಂದು ಕರೆದನು. ಅದರಿಂದ ಆಕೆಯು ಶರಣಸಂತತಿಗೆಲ್ಲ ಅಕ್ಕನಾಗಿ ಲೋಕಕ್ಕೆ ಆದರ್ಶಭೂತಳಾದಳು. ಅದರಂತೆ ಬಸವೇಶ್ವರನನ್ನು ಬಸವಣ್ಣ, ಸಂಗನ ಬಸವಣ್ಣ ಎಂದು ಕರೆದದ್ದರಿಂದ ಬಸವಣ್ಣನಾದರೂ ಜಗತ್ತಿಗೇ ಆದರ್ಶಭೂತನಾದನು. ಮುಕ್ತಿಯ ಕೋಟೆಯೊಳಗಣ ಮಹಾತ್ಮರು ಜಗತ್ಕಲ್ಯಾಣದ ಬಹು ಸೂಕ್ಷ್ಮವಾದ ವಿಮಲವಾಸನೆಯನ್ನು ಮನಸ್ಸಿನಲ್ಲಿ ತಂದು ಮೇಲಿಂದ ಮೇಲೆ ಭೂಲೋಕದಲ್ಲಿ ಅವತಾರ ತಾಳಿ ಕೆಲವು ಭಾಗ್ಯವಂತ ಸದ್ಭಕ್ತರಿಗೆ ತಮ್ಮ ಸಂಗದ ಲಾಭವನ್ನು ಕೊಟ್ಟು ವಿರಾಮಹೊಂದುವರು. ಇದರಂತೆ ಹಿಂದೆ ಅನೇಕ ವಿಭೂತಿಗಳು ಜಗತ್ತಿನಲ್ಲಿ ಆಗಿಹೋಗಿರುವರು. ಇವರಲ್ಲಿ ಪರಮಪೂಜ್ಯರೂ, ಶ್ರೇಷ್ಠರೂ ಎಂದು ಎನಿಸಿ ತಮ್ಮ ಅನುಯಾಯಿಗಳಿಂದ ಈ ಹೊತ್ತಿಗೂ ಪೂಜಿಸಿ ಕೊಳ್ಳುತ್ತಾ ಕೀರ್ತಿಶೇಷರಾಗಿ ಉಳಿದವರೇ ಬಹಳ ಜನರು. ಆದರೆ ಈ ಪೂಜ್ಯತ್ವ ಮತ್ತು ಶ್ರೇಷ್ಠತ್ವಗಳೊಡನೆ ಮಹಾದೇವಿ ಮತ್ತು ಬಸವಣ್ಣನವರ ಹಾಗೆ ಅಕ್ಕ ಮತ್ತು ಅಣ್ಣ ಎಂಬ ನಾಮಾಂಕಿತಗಳನ್ನು ಪಡೆದು ಕಳ್ಳುಬಳ್ಳಿಯೊಳಗಿನ ಬಳಗದವರಂತೆ ಏಕ ರಸವಾಗಿ ಭಕ್ತರಲ್ಲಿ ಬೆರೆತುಕೊಂಡು ಪೂಜೆಗೊಳ್ಳುತ್ತ ಯಶಃಕಾಯರಾಗಿ ಉಳಿದವರು ಬಹಳೇ ಕಡಿಮೆ.

ಇಷ್ಟೇ ಅಲ್ಲದೆ ಬಸವಣ್ಣನು ಹರಗುರುಪರ ಜಂಗಮ ಮೂರ್ತಿಗಳ ನವಲಿಂಗ ಜಪದಲ್ಲಿಯೂ ಸೇರಿದನು. ಜಗತ್ತಿನ ಧಾರ್ಮಿಕ ಇತಿಹಾಸಗಳಲ್ಲಿ ಇಂತಹ ಉದಾಹರಣೆಗಳು ಸಿಗುವದು ಬಹಳೇ ಅಪರೂಪ; ಇಲ್ಲವೆಂದರೂ ಅತಿಶಯೋಕ್ತಿಯಾಗಲಾರದು. ಜೀವಾತ್ಮಾ, ಅಂತರಾತ್ಮಾ ಮತ್ತು ಪರಮಾತ್ಮಾ ಎಂಬುವ ಜೀವದ ಮೂರು ಮೆಟ್ಟಲುಗಳೊಳಗಣ ಜೀವದ ಕಡೆಯ ಅವಸ್ಥೆಯೇ ಇದು. ಇದಕ್ಕೆ ಪೂರ್ಣ ಪರಬ್ರಹ್ಮವೆಂದೆನ್ನುವನು. ಆದುದರಿಂದ ದ್ವಿತೀಯ ಶಂಭುವಿನ ಅವತಾರಿಯಾದ ಬಸವಣ್ಣನಿಗೆ "ಶಿವನೇ ಬಸವ, ಬಸವ ಶಿವನೇ" ಎಂದು ಕಾಯಕದ ಜಂಗಮರು ಬೀದಿಗಂಟೆ ಹಾಡುತ್ತಾ ತಿರುಗುವರು. ಇದು ಅನಾದಿ ಭಕ್ತಮಹೇಶ್ವರರ ಅಭೇದರೂಪವಾದ ಸಂಯೋಗ (ಸಾಮರಸ್ಯ–ಐಕ್ಯ) ದ ದ್ಯೋತಕವೆಂದು ಭೀಮಕವಿಯು ಬಸವಪುರಾಣದಲ್ಲಿ ಬಸವ + ದೇವ = ಬಸವದೇವ, ಬಸವ+ಈಶ್ವರ = ಬಸವೇಶ್ವರ, ಬಸವ + ಈಶ = ಬಸವೇಶ—ಎಂದು ಹೇಳಿರುವನು. ಶಿವ, ಬಸವ ಹೆಸರಾದರೂ ಇದೇ ಮಾದರಿಯದಾಗಿರುವುದು.

ಇನ್ನೂ ಬಸವ ಶಬ್ದದ ನಿಜವಾದ ಅರ್ಥವನ್ನು ನೋಡುವ ಶಬ್ದಮಣಿದರ್ಪಣಕಾರನು ಮತ್ತು ಚತುರಾಸ್ಯ ನಿಘಂಟುಕಾರನು ಬಸವ ಶಬ್ದವು ವೃಷಭದ ತದ್ಭವವೆಂದು ಹೇಳುವರು. ಋಗ್ವೇದದಲ್ಲಿ ಅದು ಶಿವನಿಗೆ ವೃಷಭ ಎಂದು ಬಹಳ ಸಾರಿ ಹೇಳಿದ್ದಾಗಿದೆ. ಸಾಯಣನು ವೃಷಭ ಎಂದರೆ ದಾತಾರನು ಎಂದು ಹೇಳಿದ್ದಾನೆ. ಮ್ಯಾಕ್‌ಡೊನೆಲ್ ಮತ್ತು ಮೋನಿಯರ ವಿಲಿಯಂರು ತಮ್ಮ ಕೋಶಗಳಲ್ಲಿ ವೃಷಭಗೆ ಲಾರ್ಡ ಎಂದು ಹೇಳಿರುವರು. ೯ ನೇ ಶತಮಾನದ ಜೈನಕವಿಯಾದ ನೃಪತುಂಗನು ಕವಿರಾಜಮಾರ್ಗದಲ್ಲಿ ವೃಷಭಕ್ಕೆ ಇದೇ ಮೂಲಾರ್ಥವನ್ನು ಹೇಳಿರುವನು. ಅಂದಮೇಲೆ ವೃಷಭದ ತದ್ಭವವಾದ ಬಸವ ಇದರ ಅರ್ಥವಾದರೂ ಶಿವನೆಂದೇ ಆಗುವದು. ಇನ್ನೊಂದು ರೀತಿಯಾಗಿ ನೋಡಿದರೆ ಪಶು ಎಂದರೆ ಅಲ್ಪಜ್ಞ; ಅಜ್ಞನೆಂದಿರುವದು. ಪಶುಪತಿ– ಇದರ ಅರ್ಥವು ಸರ್ವಜ್ಞನಾದ ಶಿವನೆಂದು ಆಗುವದು. ಭೀಮಕವಿಯು ಪಶುಪತಿಯ ಬದಲು ಪಶುಪನೆಂದು ಬಸವಪುರಾಣದಲ್ಲಿ ಹೇಳಿರುವನು. ಅದೇ ಭೀಮಕವಿಯು ಬಸವಪುರಾಣದಲ್ಲಿ ಪಶುಪತಿ ಅಂದರೆ ಶಿವ ಅಥವಾ ನಂದಿ ಎಂದೂ ಹೇಳಿರುವನು. ಪಸು ಎಂಬುದು ಪಶುವಿನ ತದ್ಭವವೆಂದು ಶಬ್ಧಮಣಿದರ್ಪಣಕಾರನು ಹೇಳಿರುವನು. ಒಟ್ಟಿನಲ್ಲಿ ನೋಡಿದರೆ, ಪಸುಪ ಎಂಬುದರ ಅರ್ಥವಾದರೂ ಶಿವ ಅಥವಾ ನಂದಿಯೆಂದೇ ಆಗುವುದು. ಗುರುಬಸವನ (೧೪೩೦) ಮನೋವಿಜಯಕ್ಕೆ ತಾತ್ಪರ್ಯ ಬರೆದ ವಿರಕ್ತ ತೋಂಟದಾರ್ಯನು (೧೫೬೦) ಬಸವ ಶಬ್ದದ ಉತ್ಪತ್ತಿಯನ್ನು ಹೀಗೆ ಹೇಳಿರುವನು. ಅಪ್ಪಯ್ಯದೀಕ್ಷಿತರು ಶಿವ ಸರ್ವೋತ್ತಮನೆಂದು ಸಿದ್ಧಮಾಡುವ ಕಾಲಕ್ಕೆ ತಮ್ಮ ಗ್ರಂಥದಲ್ಲಿ ಈ ಎರಡಕ್ಷರಗಳ ಮಹತ್ವವನ್ನು ಬಹಳವಾಗಿ ಹೇಳಿರುವರು. ಹೇಳ ಹೇಳುತ್ತ ಶಿವ ಎಂಬ ಎರಡಕ್ಷರದೊಳಗಿನ 'ಶಿ' ಅಕ್ಷರ ಒಂದನ್ನೇ ಉಚ್ಚರಿಸಿದರೂ ಸರ್ವ ಪಾಪಗಳು ನಾಶವಾಗುವವು ಎಂದು ಹೇಳಲು, 'ವ' ಅಕ್ಷರವು ಅನಾಥವಾಯಿತು ಎಂದು ಪರವಾದಿಗಳು ವಾದಿಸಿದರು. 'ವ' ಅಕ್ಷರವು ಅನಾಥವಾಗದೆ 'ಶಿ' ಅಕ್ಷರದ ಉಚ್ಚಾರದಿಂದ ಹೊರಗೆ ಹೋಗುವ ಪಾಪಗಳು ಮರಳಿ ಬಾಯೊಳಗೆ ಸೇರಬಾರದೆಂದು 'ವ' ಎಂಬುದನ್ನು ಬಾಯಿಗೆ ಅಗಳಿಯಂತೆ ಉಪಯೋಗಿಸುವರು ಎಂದು ಅದಕ್ಕೆ ಬಹು

ಸ್ವಾರಸ್ಯವಾಗಿ ಸಮಾಧಾನ ಹೇಳಿರುವರು. ಬಸವಾಕ್ಷರದ ಮಹಿಮೆಯಾದರೂ ಇದರಂತೆಯೇ ಇರುವದು. ಇದರ ಮಹತ್ವವನ್ನು ಚನ್ನಬಸವಣ್ಣನವರು "ಬಸವಾ ಎಂಬ ಮೂರಕ್ಷರ ಹೃದಯದಲ್ಲಿ ನೆಲೆಗೊಂಡರೆ ಅಭೇದ್ಯ ಭೇದ್ಯವಾಗಿತ್ತು; ಅಸಾಧ್ಯ ಸಾಧ್ಯವಾಗಿತ್ತು. ಇಂತು ಬಸವಣ್ಣನಿಂದ ಲೋಕ ಲೌಕಿಕದ ಕುಭಾಷೆಯು ಕಳೆದು. ಲೋಕಾಚರಣೆಯನತಿಗಳೆದು ಭಕ್ತಿ ಒರ ಬಪ್ಪುದು. ಕೂಡಲಚನ್ನಸಂಗಯ್ಯನಲ್ಲಿ ಬಸವಣ್ಣನ ಕಾರುಣ್ಯದಿಂದ" ಎಂದು ಹೇಳಿರುವರು. "ಬಸವಗುರುವಿನ ಪ್ರಸರ। ಬಲ್ಲವರು ಆರಿಲ್ಲ। ಪುಸಿಮಾತನಾಡಿ ಕೆಡದಿರಿ। ಮೂಲೋಕಕ್ಕೆ ಬಸವಣ್ಣ ಕರ್ತ ಸರ್ವಜ್ಞ" ಎಂದು ಸರ್ವಜ್ಞಮೂರ್ತಿಯು ಅಂದಿರುವನು. ಹಾಗೂ "ಬಸವರಾಜಪಾಲಿಸೈ । ಶಶಿಧರನವತಾರ।" ಎಂದು ಘನ ಮಠಾರ್ಯರು ಹಾಡಿರುವರು.

ಶ್ರೀಮಾನ್ ಉಪಾಧ್ಯಾಯ ಮಲ್ಲಪ್ಪ, "ಜನತಾಜ್ಞಾನ ಪ್ರಸಾರಕ", ದಾಸೋಹ ಮಠ, ಹಲಗೂರು—ಇವರು ಶಿವಾನುಭವದಲ್ಲಿ ಮಹಾತ್ಮಾ ಬಸವೇಶ್ವರ ಎಂಬುವ ಲೇಖನದಲ್ಲಿ—

ಜೀವನಾಗಲು ಜನಿಸಿ ಶಿವನಾಗಲು ಜನವಾಗಿ ಜನ್ಮತಾಳಿ ಜನಾರ್ದನನಾಗಲು ಭವರೋಗಿಯಾಗಿ ಬಂದು ಭವರೋಗ ವೈದ್ಯನಾಗಲು ಯತ್ನಿಸಿ ಮಾನವೀಯತೆಯಿಂದ ದೈವಿಕೆಗೆ ಸೇರಿ ಅವರೀಯ ಗುಣಗಳಿಂದ ಜ್ವಲಿತನಾಗಿ ಜನಾಂಗವನ್ನು ಸುಧಾರಿಸಿದ ವ್ಯಕ್ತಿಯೇ ಮಹಾತ್ಮನು. ಈಗ್ಗೆ ೮೦೦ ವರ್ಷಗಳ ಹಿಂದೆ ಎಂದರೆ ೧೨ನೆಯ ಶತಮಾನದಲ್ಲಿ ಕನ್ನಡನಾಡು ಗೊಂದಲೆ ಕೋಟಲೆಗಳಿಗೆ ಸಿಕ್ಕಿತ್ತು. ಜನತೆಯನ್ನು ಉದ್ಧರಿಸಲು ಜನರ ರೀತಿನೀತಿಗಳನ್ನೂ, ಧರ್ಮಕರ್ಮಗಳನ್ನೂ ತಿದ್ದಿ, ತಿರುಪಿ ಉನ್ನತಗತಿಗೆ ತರಲು ವೇದಾಗಮೋಪನಿಷತ್ತುಗಳ ಸಾರಸಿದ್ಧಾಂತವನ್ನು ಕನ್ನಡನುಡಿಯಲ್ಲಿ ಪ್ರಸರಿಸಿದ ಮಹಾವಿಭೂತಿ ಬಸವೇಶ್ವರರು.

ಕರ್ನಾಟಕದಲ್ಲಿ ಧಾರ್ಮಿಕರ ಕ್ರಾಂತಿಪುರುಷನಾಗಿ ಮೆರೆದು ಇಡೀ ಜಗತ್ತಿನ ಇತಿಹಾಸದಲ್ಲಿ ಅಜರಾಮರನಾಗಿ, ಮಾನವಕುಲೋದ್ಧಾರಕನಾಗಿ ಯಶವೆತ್ತ ಮಹಾತ್ಮನು ಬಸವೇಶ್ವರನು. ಕನ್ನಡನಾಡು ನುಡಿಗಳಲ್ಲಿ ವೈಶಿಷ್ಟ್ಯಕ್ರಾಂತಿಯನ್ನು ಮಾಡಿ, ಜನತೆಯನ್ನು ತೀಡಿ, ತಾವು ತತ್ವಜೀವಿಗಳಾಗಿ ಜೀವಿಸಿ, ತಮ್ಮಂತೆಯೇ ಜನಾಂಗವು ನಡೆಯಲಿ ಎಂಬ ಅಭಿಮಾನ, ಆಕಾಂಕ್ಷೆಯಿಂದ ಸಮಾಜಸೇವೆ ಮಾಡಿದ ಅಣಿಮುತ್ತು ಬಸವೇಶ್ವರನು. ಸಕಲ ಲೋಕಗಳಲ್ಲಿಯೂ, ಸರ್ವದೇಶಗಳಲ್ಲಿಯೂ ಮತಬೋಧಕರು ಭಗವಂತನೆಂಬ ದೀವಟಿಗೆಯಿಂದ ಬೆಳಕನ್ನು ಪಡೆದುಕೊಂಡು ಅದರ ಪ್ರಭೆಯನ್ನು ಪ್ರಪಂಚದಲ್ಲೆಲ್ಲಾ ಹರಡುವಂತೆ ಮಾಡುವರು. ಇಂತಹ ಬೆಳಕನ್ನು ಪಡೆದ ಬಸವೇಶ್ವರರು ಪ್ರಪಂಚದಲ್ಲಿ ಅವತರಿಸಿದ ಧರ್ಮಾತ್ಮರ ಸಾಲಿನಲ್ಲಿ ಧ್ರುವತಾರೆಯಂತೆ ಬೆಳಗುತ್ತಿದ್ದಾರೆ. ಭರತಖಂಡದ ಜೀವಜ್ಯೋತಿ. ಕರ್ನಾಟಕದ ಭಕ್ತಿಯ ಬೆಳಗು. ಜಗತ್ತಿನ ಧರ್ಮತತ್ವಜ್ಞಾನಿಯು. ಮಾನವಕುಲದ ಮೂಲಭೂತದ ಮುಖ್ಯ ತತ್ವಗಳನ್ನು ಪ್ರಪಂಚವು ಮರೆತು ಮೆರೆಯುತ್ತಿತ್ತು. ಭರತಖಂಡದ ಹಿಂದೂಧರ್ಮದಲ್ಲಿ ಹಿಂದೆ ಎಂದೂ ಇಲ್ಲದ ಹಲವು ಮತಾಂತರಗಳ ಗಲಭೆಗಳೂ, ಹೋರಾಟಗಳೂ ಜನಿಸಿ ಹಿಂದೂ ಧರ್ಮದ ಸ್ವರೂಪವು ಹಾಳಾಗಿ ಹೋಗುವ ಸಂಭವವು ಒದಗಿತ್ತು. ಹೊರಜಗತ್ತಿನಲ್ಲಿ ಶಾಂತಿ ಸಮಾಧಾನಗಳಿಲ್ಲದೆ ಭೀಕರ ವಾತಾವರಣವು ಕಾಣುತ್ತಿತ್ತು. ರಾಜಕೀಯ

ಗೊಂದಲವಲ್ಲದೆ ಧರ್ಮದ ಜಿಜ್ಞಾಸವು ನಡೆಯುತ್ತಲಿತ್ತು. ಒಕ್ಕಡೆ ಶಂಕರಾಚಾರ್ಯರ ಅದ್ವೈತದ ಕಾವುನೋವೂ, ಮತ್ತೊಂದು ಕಡೆ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತದ ಬಿಸಿದಸಿಯೂ, ಮಗದೊಂದು ಕಡೆ ಜಿನಧರ್ಮದ ಉರಿಚುರುಕೂ ಇದ್ದಿತು. ಅಂದಿನ ಸಮಾಜದಲ್ಲಿ ಓಜರಾಯನ ಪದ್ಧತಿಗಳೂ, ದುರಾಚಾರಗಳೂ, ವಾಮಾಚಾರಗಳೂ, ಕುರುಡುನಂಬಿಗೆಯೂ, ಶುಷ್ಕಸಿದ್ಧಾಂತಗಳೂ, ಅರ್ಥವಿಲ್ಲದ ವಾದಪ್ರವಾದಗಳೂ, ಜಾತಿಮತದ್ವೇಷಗಳೂ ತಲೆಹಾಕಿ ಸಮಾಜಮುನ್ನಣೆಯಲ್ಲಿ, ಸಮಾಜನೀತಿಯಲ್ಲಿ ಇಳಿವಾರು ಕಾಣಬರುತ್ತಿತ್ತು. ಈ ತೆರನ ಪರಿಸ್ಥಿತಿಯಿಂದ ಸಮಾಜದ ಚೆನ್ನು ಅಳಿಸಿಹೋಗುತ್ತಲಿತ್ತು. ನಮ್ಮ ನಾಡು ಮಹತ್ವಪೂರಿತವಾದ ಕಾರ್ಮೋಡದಿಂದ ಕೂಡಿಕೊಂಡಿತ್ತು. ಇಂತಹ ದಗ್ಧಪ್ರಸಂಗದಲ್ಲಿ ಧರ್ಮದ ಸಾರಸರ್ವಸ್ವವಾದ ಭಾನುವೊಂದು ವೀರಶೈವ ತಾರಾಮಂಡಲದಲ್ಲಿ ಉದಯವಾಯಿತು. ಈ ಭಾನೇ ಬಸವೇಶ್ವರರು.

ಬಸವಣ್ಣನವರು ಸುಧಾರಿಸಿದ ಸಮಾಜವು ಒಂದು ಉಚ್ಚತಮ ಸಮಾಜವಾಯಿತು. ಬರೀ ತತ್ವಗಳನ್ನು ಹೇಳಿ, ಉಪದೇಶಿಸಿ ತೆಪ್ಪನಿರದೆ ವೀರಶೈವ ಭಕ್ತಿಮಾರ್ಗವನ್ನು ಚೆನ್ನಾಗಿ ವಿಚಾರಿಸಿ ನೋಡಿ ಸಮಾನತೆ ಬಾಂಧವ್ಯವನ್ನೇ ಆಧಾರವಾಗಿರುವಂತೆ ಮಾಡಿದರು. ಹಿಂದೂ ಧರ್ಮವನ್ನು ಚೇತನಗೊಳಿಸಿ ಭದ್ರವಾದ ತಳಹದಿಯ ಮೇಲೆ ಸರ್ವಾಂಗ ನೂತನ ಸಮಾಜಮಂದಿರವನ್ನು ನಿರ್ಮಿಸಿದರು. ಶಿವಧೊ! ಶಿವಧೊ ಎಂದು ಸಾರಿದವರಿಗೆ ಮೋಕ್ಷ ಸಿಕ್ಕುತ್ತದೆಂದು ಘೋಷಿಸಿದರು. ಉಪನಿಷತ್ ಕಾಲದಲ್ಲಿ ಸ್ತ್ರೀಯರಿಗಿದ್ದ ಗೌರವಪದ್ಧತಿಯು ಇಂದು ಸಿಕ್ಕಿತು. ಈ ಭವ್ಯ ಸಮಾಜದಲ್ಲಿ ಸತ್ಯ, ಅಹಿಂಸೆ, ಅಸ್ತೇಯಗಳೆಂಬ ವ್ರತತ್ರಯಗಳು ಉಂಟಾದವು. ಉದರಪೋಷಣೆಗಾಗಿ ಭಿಕ್ಷೆ ಬೇಡುವದನ್ನು ಖಂಡಿಸಿದರು. ಭಗವದ್ಗೀತೆಯಲ್ಲಿ ಸಾರುತ್ತಿರುವ ಗಹನ ಗಂಭೀರ ತತ್ವಗಳು ಜನತೆಯ ಅನುಷ್ಠಾನಕ್ಕೆ ಬಾರದಿದ್ದುದರಿಂದ ಸಕಲ ಕಡೆಗಳಲ್ಲಿಯೂ ಅವ್ಯವಸ್ಥೆಯು ನಿಂತು ಮಾನವ ಜೀವನವು ನೀತಿಯ ಹಾದಿಯನ್ನೂ, ಸತ್ಯದ ದಾರಿಯನ್ನೂ ಬಿಟ್ಟದ್ದ ಸಮಯದಲ್ಲಿ ಅಜ್ಞಾನ ಲತೆಯನ್ನು ಕಿತ್ತು ಬಿಸಾಡಿ ಜ್ಞಾನಾಂಕುರವನ್ನು ಒಡಮೂಡಿಸಿದ ಮಹಾವ್ಯಕ್ತಿ ಬಸವಣ್ಣನೇ ಧನ್ಯನು. ಇವರ ಭಕ್ತಿತತ್ವವು ಪ್ರೇಮಪೂರಿತ ಮತ್ತು ನಿಷ್ಕಾಮವಾದುದು. ಅದರ ಧ್ಯೇಯವು ಆತ್ಮಾರ್ಪಣೆಯೇ ಹೊರತು ಆತ್ಮಸಾಧನೆಯಲ್ಲವು. ತತ್ವಜ್ಞಾನ, ಧರ್ಮಾಚಾರ, ನೀತಿಮಾರ್ಗ ಇವುಗಳಿಗಿಂತ ಮಿಗಿಲಾಗಿ ಸಮಾಜಸುಧಾರಣೆಯಲ್ಲ ಆತ್ಮವಿಶ್ವಾಸವನ್ನೂ, ದೂರದೃಷ್ಟಿಯನ್ನೂ ಇಟ್ಟದ್ದರು. ಜ್ಞಾನ, ಭಕ್ತಿ, ಕರ್ಮಗಳ ತ್ರಿವೇಣಿಸಂಗಮವನ್ನು ವ್ಯಕ್ತಗೊಳಿಸಿದರು. "ಈ ಮನುಷ್ಯನ ದೇಹದಲ್ಲಿ ಅಡಗಿರುವ ಹಲವು ಕರ್ಮಬಂಧನಗಳಿಂದ ಬಿಗಿದಿರುವ ಹಲವು ನಿಶ್ಶಕ್ತಿಗಳಿಂದ ತಗ್ಗಿಹೋಗಿರುವ ಅಂತರಾತ್ಮನನ್ನು ಬಿಡುಗಡೆ ಮಾಡಿ, ಅಂತರಾತ್ಮನು ಸ್ವಯಂ ಪ್ರಕಾಶಕನು ಎಂಬುದನ್ನು ಜನಗಳಿಗೆ ಗೋಚರವಾಗುವಂತೆ ಮಾಡಿದರು. ವೀರಶೈವನಾದವನು ಆಗಮೋಕ್ತ ಧರ್ಮದಂತೆ, ಪುರಾತನರ ನುಡಿಯಂತೆ ತ್ರಿಕರಣ ಪರಿಶುದ್ಧನಾಗಿ ಶಿವಾರ್ಪಿತ ಭಾವವುಳ್ಳವನಾಗಿರಬೇಕು. ಜಗದೀಶ್ವರನನ್ನು ಲಿಂಗರೂಪಿಯನ್ನಾಗಿ ಭಾವಿಸಿ ಪೂಜಿಸಿ ಧನ್ಯರಾಗಬೇಕು. ಪ್ರಾಣಿಹಿಂಸೆಯು ಕೂಡದು. ಧರ್ಮಪ್ರಚಾರವನ್ನು ಜನರಿಗೆ ತಿಳಿಯುವ ಭಾಷೆಯಲ್ಲಿ ಮಾಡಬೇಕು" ಎಂಬುವದೇ ಬಸವೇಶ್ವರರ ಉಪದೇಶಸುಧಾಬಿಂದು. ಬಸವಣ ನವರ ಸಂದೇಶವು ವಿಶ್ವಸಂದೇಶವು.

ಬಸವಸಾಹಿತ್ಯವು ಆಂಧ್ರ, ಕರ್ಣಾಟಕ ಸಂಸ್ಕೃತಿಮಹಾಸಾಗರಗಳ ಸೇತುಬಂಧನವು. ಪ್ರಾಪಂಚಿಕ ಜೀವನದಿಂದಲೇ ದಿವ್ಯಾನುಭವವನ್ನು ಪಡೆದು ಪರಿಪಕ್ವವಾದ ಹೃದಯಿಯು ಬಸವೇಶ್ವರರು. ಆಧ್ಯಾತ್ಮಿಕ ಸಂಸ್ಥೆಯಾದ ಅನುಭವಮಂಟಪದ ಸಂಸ್ಥಾಪಕರು ಬಸವಣ್ಣನವರು. ಇವರು ಧರ್ಮಯಜ್ಞದ ಮಹಾಪುರುಷರು. ಇವರು ನವನವ್ಯ ಕನ್ನಡ ಧವಳಗಿರಿಯಲ್ಲಿನ ಮಂದಿರದ ಭವ್ಯನಿರ್ಮಾಪಕರು. ನೂತನ ಮತಪ್ರವಾದಿಯು, ದಾರ್ಶನಿಕ, ಮಹಾಕವಿ, ರಾಜನೀತಿಜ್ಞ. ಧರ್ಮವನ್ನು ಸಮಾಜದ ದಿನಚರ್ಯೆಗಳ ಸಂಗಡ ಮಿಲನಮಾಡಿ ಬೆಳೆಸಿದ ಮಹಾ ವಿಭೂತಿಯು. ಬಸವಣ್ಣನವರು ಎಲ್ಲರ ಹೃದಯಮಂದಿರದಲ್ಲಿ ಓಡಾಡಲಿ. ಅದ್ಭುತ ಮೂರ್ತಿಸ್ವರೂಪಿಗಳೂ, ದಿವ್ಯ ತೇಜಸ್ವಿಗಳೂ, ಘನಶಿವಾನುಭವಿಗಳೂ ಆದ ಜಗಜ್ಯೋತಿ ಬಸವಣ್ಣನವರಿಂದ ಪುನೀತವಾದ ಜನಾಂಗವೇ ಧನ್ಯ ಜನಾಂಗವು. ಈ ಮಹಾತ್ಮರು ಜನಿಸಿದ ನಾಡಿನಲ್ಲಿ ಉದಯಿಸಿದ ನಾವೇ ಪುಣ್ಯವಂತರು. ಈ ಮಹಾವಿಭೂತಿಯು ಮಾತನಾಡುತ್ತಿದ್ದ ನವಿಗನ್ನಡವೇ ನಮ್ಮ ತಾಯಿಭಾಷೆಯಾಗಿರುವುದು ನಮ್ಮ ಪುರಾಕೃತ ಪುಣ್ಯವು. ಈ ಪ್ರಭಾವಶಾಲಿಯು ಆಚರಿಸಿದ ಧರ್ಮವನ್ನೇ ಆಚರಿಸುತ್ತಿರುವ ಜನರು ಪಾವನಾತ್ಮರು. ಇಂತಹ ಮಹಾನುಭಾವನನ್ನು ಪಡೆದ ಕನ್ನಡ ನಾಡು ನಿಜವಾಗಿಯೂ ಧನ್ಯ ಹಾಗೂ ಮಾನ್ಯ.

## ಶ್ರೀಮನ್ಮಧ್ವಾಚಾರ್ಯರ ಚರಿತ್ರೆ

ಲೇಖಕರು: ನಾರಾಯಣಾಚಾರ್ಯ ಶ್ರೀನಿವಾಸಾಚಾರ್ಯ, ರಾಜಪುರೋಹಿತರು, ಧಾರವಾಡ—ಶ್ರೀಮಾನ್ ರಾಜಪುರೋಹಿತರು ಕನ್ನಡ ನಾಡಿನಲ್ಲಿ ಹೆಸರುವಾಸಿಗಳಾದ ಸಂಶೋಧಕರು. ಇವರು ತಾವು ರಚಿಸಿರುವ ಶ್ರೀಮನ್ಮಧ್ವಾಚಾರ್ಯರ ಚರಿತ್ರೆ, ೬ ಮತ್ತು ೭ನೆಯ ಪುಟದಲ್ಲಿ—

ಹತ್ತನೆಯ ಶತಮಾನದ ಕೊನೆಯವರೆಗೂ ಅಖಿಲ ಭರತಖಂಡದಲ್ಲಿ ಶಿವಭಕ್ತಿಯೇ ಅತಿಶಯ ಪ್ರಬಲವಾಗಿತ್ತು. ವಿಷ್ಣುಭಕ್ತಿಯು ಅಡಗಿಹೋಗಿತ್ತು. ಮುಂದೆ ಹನ್ನೊಂದನೆಯ ಶತಮಾನದಲ್ಲಿ ಶ್ರೀ ರಾಮಾನುಜಾಚಾರ್ಯರು ಅವತರಿಸಿ ಶಿವಭಕ್ತಿಯ ಪ್ರಾಬಲ್ಯವನ್ನು ಕಡಿಮೆಮಾಡಿ ವಿಷ್ಣುಭಕ್ತಿಯ ಪುನರುಜ್ಜೀವನವನ್ನು ಮಾಡಿದರು. ಆದರೇನು? ಕ್ರಿ. ವ. ೧೧೩೭ರಲ್ಲಿ ನಿರ್ಯಾಣ ಹೊಂದಿದ ಕೂಡಲೆ ಶ್ರೀ ಬಸವೇಶ್ವರರು ಪ್ರಬಲರಾಗಿ ಪುನಃ ವಿಷ್ಣುಭಕ್ತಿಯನ್ನು ಅಡಗಿಸಿ ಎಲ್ಲ ಕಡೆಗೂ ಶಿವಭಕ್ತಿಯ ಪ್ರಸಾರವನ್ನು ಮಾಡಿದರು. ಈ ವೀರಶೈವ ಮತೋದ್ಧಾರಕರು ಕ್ರಿ. ವ. ೧೧೬೬ರಲ್ಲಿ ಬಯಲಾದರು.

## ಅನಾದಿ ವೀರಶೈವ ಸಂಗ್ರಹ

ಗ್ರಂಥಕಾರರು: ವಿರಕ್ತ ತೋಂಟದಾರ್ಯರು—ಈ ಗ್ರಂಥವನ್ನು ಡಾಕ್ಟರ್ ಎಂ. ಅಣ್ಣಾಜಪ್ಪ, ಮಾಡರ್ನ್ ಫಾರ್ಮಸಿ, ಮೈಸೂರು, ಇವರು ಪ್ರಕಾಶಗೊಳಿಸಿರುತ್ತಾರೆ. ಈ ಗ್ರಂಥದ ೧೬ನೆಯ ಪುಟದಲ್ಲಿ ಬಸವಣ್ಣನವರ ವಿಷಯಕ್ಕೆ—

> ಶ್ರೀ ವೃಷಭೇಶ್ವರ ದೇವರೇ ಪ್ರಥಮಾಚಾರ್ಯ ಧರ್ಮಗುರುವಾಗಿಯೂ, ದ್ವಿತೀಯ ಲೀಲೆ ಶ್ರೀ ನಂದಿಕೇಶ್ವರನು, ತೃತೀಯ ಲೀಲೆ ಸಾಕ್ಷಾತ್ಪಶುಪತಿ. ಬ್ರಹ್ಮ ವಿಷ್ಣ್ವಾದಿ ದೇವತೆಗಳೆಂಬ ಪಶುಗಳಿಗೆ ಪತಿ

ಒಡೆಯರೆಂಬುದರ್ಥ. ಗಾಯತ್ರೀವಲ್ಲಭ ಶ್ರೀ ವೃಷಭೇಶ್ವರನೆಂಬುದೇ ಚತುರ್ಥ ಲೀಲೆ. ಪಂಚಮ ಲೀಲೆಯೇ ಜಗಪದಾರಾಧ್ಯನು. ಷಷ್ಠಮ ಲೀಲೆಯೇ ಶ್ರೀ ಬಸವೇಶ್ವರನು.

ಪ್ರಥಮಂ ಧರ್ಮರೂಪಂಚ ದ್ವಿತೀಯಂ ನಂದಿಕೇಶ್ವರಃ ।
ತೃತೀಯಂ ಪಶುಪಃ ಸಾಕ್ಷಾತ್ ಚತುರ್ಥಂ ವೃಷಭೇಶ್ವರಃ ।
ಪಂಚಮಂ ಜಗದಾರಾಧ್ಯಃ ಷಷ್ಠಮಂ ಬಸವೇಶ್ವರಃ ॥
ಸಪ್ತಮಂ ಸರ್ವತೋಭದ್ರಃ ಅಷ್ಟಮಂ ಭಕ್ತವತ್ಸಲಃ ।
ನವಮಂ ಪ್ರಮಥಾಧೀಶಃ ದಶಮಂ ಮುಕ್ತಿದಾಯಕಃ ।
ಏಕಾದಶ ಸ್ವಲೀಲಾಂಗಃ ದ್ವಾದಶಂಚ ವರಪ್ರದಃ ॥

ಎಂಬ ಅನಂತಲೀಲೆ ಮಹಿಮಾಪುರುಷ ಶ್ರೀ ವೃಷಭೇಶ್ವರನೇ ಘನಲಿಂಗ ಚಕ್ರವರ್ತಿ ದೇಶಾಧೀಶ್ವರ ಮಣಿಪಾದ ಪಟ್ಟವರ್ಧನ ಶ್ರೀ ಬಸವೇಶ್ವರ ಸಾಂಪ್ರದಾಯಕರಾದ ಶಿವ ಭಕ್ತರೇ ಕುಲಾಗ್ರಗಣ್ಯರು, ದೇವಕುಲದೀಪ ಶ್ರೀ ರುದ್ರರುದ್ರಾಣಿ ಸ್ವರೂಪರು.

ಶ್ರೀ ಗುರು ಬಸವಲಿಂಗಾಯನಮಃ ಎಂಬುದಕ್ಕೆ ಅರ್ಥ ಹೀಗೆ—

(ಷಟ್ಪದಿ)

ಶ್ರೀ ಷಡ್ಗುಣೈಶ್ವರ್ಯಂ ಗುರುಸ್ವಯಂ ಜ್ಯೋತಿ
ದೋಷವಿಲ್ಲದ ಬಸವ ಸತ್ತುಚಿತ್ತಾನಂದ
ನಾಶ ಜನನ ಸ್ಥಿತಿಗೆ ಕಾರಣಾಲಯ ಲಿಂಗವೆಂದು ಮತ್ತಂ ಪೇಳ್ವರು ।
ಪಾಶರಹಿತಂ ಮುಕ್ತಿದಾಯಕಂ ಭವದೂರ
ಭೂಷಣನು ಶಿವತತ್ವ ಸರ್ವಚೈತನ್ಯನುಂ
ಈಶ ಶ್ರೀಗುರು ಬಸವಲಿಂಗ ಪ್ರಥಮಾಚಾರ್ಯರೆಂದು ವಂದಿಸಿಸುತಿಸುವೆಂ ॥

ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು— ಇವರ ಕಾಲ ೧೮೪೩. ಇವರು ಉಭಯ ಭಾಷಾ ಪಂಡಿತರು, ಸುಪ್ರಸಿದ್ಧ ಗಮಕಿಗಳು. ಮೈಸೂರರಮನೆಯಲ್ಲಿ ಹೆಚ್ಚಿನ ಗೌರವವನ್ನು ಪಡೆದವರಾಗಿದ್ದು ಆ ಕಾಲದ ಶ್ರೀ ಚಾಮರಾಜ ಒಡೆಯರ್ ಬಹದ್ದೂರ್‌ರವರು ಇವರಿಗೆ ಒಳ್ಳೇ ಗೌರವ ಕೊಟ್ಟಿದ್ದರು.

ಇವರು ಒಟ್ಟು ೨೮ ಗ್ರಂಥಗಳನ್ನು ಬರೆದಿರುತ್ತಾರೆ. ಇವುಗಳಲ್ಲಿ ೧೧ ಭಾಷಾಂತರಗಳು, ೧೭ ಸ್ವತಂತ್ರ ಗ್ರಂಥಗಳು. ಇವುಗಳಲ್ಲಿ ೫ ಕನ್ನಡ, ೧೧ ಸ್ವತಂತ್ರ ಗ್ರಂಥಗಳು. ಅವರ ಕೃತಿಗಳು ಕೆಳಗೆ ಬರೆದಂತಿರುತ್ತವೆ—

(೧) ಅಭಿಜ್ಞಾನ ಶಾಕುಂತಲ, (೨) ವಿಕ್ರಮೋರ್ವಶೀಯ, (೩) ರತ್ನಾವಳೀ, (೪) ಉತ್ತರರಾಮ ಚರಿತೆ, (೫) ಮಾಲತೀ ಮಾಧವ, (೬) ಚಂಡಕೌಶಿಕ ನಾಟಕ, (೭) ಹರ್ಷ ಚರಿತೆ, (೮, ೯, ೧೦) ನೀತಿ, ಶೃಂಗಾರ, ವೈರಾಗ್ಯ ಶತಕಗಳು, (೧೧) ದಮಯಂತಿ ಸ್ವಯಂವರಾ, (೧೨) ಶಿವಾಷ್ಟಕ, (೧೩) ಶಿವಭಕ್ತಿ ಸುಧಾತರಂಗಿಣಿ, (೧೪) ತ್ರಿಷಷ್ಟಿ ಪುರಾತನಸ್ತವಃ, (೧೫) ಅಂಬಾ ಷೋಡಶಮಂಜರಿ, (೧೬) ಆರ್ಯಾ ಶತಕ, (೧೭) ಶಾರದಾ ದಂಡಕ, (೧೮) ಬಿಲ್ವವೃಕ್ಷ ಪೂಜಾವಿಧಿ, (೧೯) ಶಂಕರೀ ನಕ್ಷತ್ರಮಾಲಾ, (೨೦) ಬಸವೇಶಾಷ್ಟಕ, (೨೧) ಶಂಕರ ಶತಕ, (೨೨) ರೇಣುಕ ವಿಜಯ, (೨೩) ಕೃಷ್ಣರಾಜಾಭ್ಯುದಯ ಮೊದಲಾದವುಗಳಿರುತ್ತವೆ.

ಶ್ರೀ ಬಸವಪ್ಪ ಶಾಸ್ತ್ರಿಗಳವರು ಬಸವಣ್ಣನವರಲ್ಲಿ ಅತ್ಯಂತ ನಿಷ್ಠೆಯಿಂದ ಬಸವಾಷ್ಟಕ ರಚಿಸಿರುತ್ತಾರೆಂದು ತಿಳಿದುಬಂದಿದೆ. ಆದರೆ ಆ ಅಷ್ಟಕ ಅಚ್ಚಾಗಿರುವುದಿಲ್ಲ.

ಇವರು ತಮ್ಮ ರೇಣುಕ ವಿಜಯದಲ್ಲಿ ಬಸವಣ್ಣನವರ ಬಗ್ಗೆ—

ಅಸಮಾಕ್ಷ ಸ್ವಾಂತಪದ್ಮಂ ತ್ರಿಭುವನ ಜನತಾ ವಂದನೀಯಾಂಘ್ರಿ ಪದ್ಮಂ ।
ವಸುಧಾಭೃದ್ರಾಜ ಧೈರ್ಯಂ ಪ್ರಣತ ಜನಮನೋಭೀಷ್ಟದಾನೈಕಧುರ್ಯಂ ॥
ಕುಸುಮಾಸ್ತ್ರ ಧ್ವಾಂತಸೂರಂ ಕುಮತ ಜಲಧರ ವ್ರಾತ ಜಂಝಾಸಮೀರಂ ।
ಬಸವೇಶಂ ಚಿತ್ಪ್ರಕಾಶಂ ಸಲಹುಗೆ ಸತತಂ ಶೈವ ಸದ್ಭಕ್ತಿಕೋಶಂ ॥ ಮ ॥ ಸ್ರ ॥

## ದ್ವಾದಶ ಜ್ಯೋತಿರ್ಲಿಂಗ ಪುರಾಣ

ಪದ ೨೨೮. ಈ ಪುರಾಣವನ್ನು ದೇವನಗಾಂವ ದೊಡ್ಡೇಶ ಅಥವಾ ದೊಡ್ಡಪ್ಪಯ್ಯ ಎಂಬುವರು ಬರೆದಿರುವರು.

"ಮಂಡಿಗೆಯ ಮಾದರಸ ನಿಂದಲುದಯಿಸಿ ಚಂದ್ರ। ಮಂಡಲವ ನನುಕರಿಸಿದ ಪ್ರತಿಮ ಭೂಮಂಡಲದಿ ಕಪ್ಪಡಿಯ ಸಂಗಮೇಶನನೊಲಿಸಿ ತತ್ಸ್ಥಲದಿ ಸಂಪ್ರೀತಿಯಿಂ। ಕೊಂಡು ಶಿವಧರ್ಮವಂ ಬಂದು ಕಲ್ಯಾಣ ಪುರ। ಕಂಡಲಿವ ಜೈನಮತಗಳ ಗೆಲ್ದು ಸುಖಮಿರ್ದು। ಕಂಡ ಜಂಗಮಕೆ ಶಿವನೆಂದಾಚರಿಸಿದ ಬಸವೇಶನೀಂ ಸಲಹೆಮ್ಮನೂ॥"

ಕವಿ ವಿರೂಪಾಕ್ಷ — ಈತನು ವೀರಭದ್ರಕಲ್ಯಾಣವನ್ನು ಬರೆದಿರುತ್ತಾನೆ. ಕಾಲ ೧೮೭೦.

ಅಂದು ಹರಿಬ್ರಹ್ಮಾದಿ ರುದ್ರ। ರಿಂದ ಮೊದಲೇಯಾದಿ ಮೂರ್ತಿಯು। ಬಂದು ಧರ್ಮಸ್ವರೂಪದಲಿ। ಕಲ್ಯಾಣದಲಿ ನಿಂದೂ। ಛಂದ ಛಂದದಿ ಭಕ್ತ ಜನರಾ। ಮಂದಮತಿಗಳ ಬಿಡಿಸಿ ಜ್ಞಾನವ ತಂದು ಲಿಂಗಾರ್ಚನೆಯ ನಂದೀಶ್ವರನೆ ಕೊಡು ಮತಿಯಾ ॥

ದಿಕ್ಕು ದಿಕ್ಕಿನ ರಾಯರೋಲಗವ ಕೈಕೊಳುತ। ತರ್ಕಿಸುವ ಸರ್ವ ಸಮಯಂಗಳಂ ಮುರಿದಿಡುತ। ಲೆಖ್ಖವಿಲ್ಲದ ಪವಾಡಂಗಳಂ। ಬಿಜ್ಜಳಗೆ ದಿನ ದಿನಕೆ ತೋರುತಿಹನೂ ॥ ೪೭ ॥

ನಿಚ್ಚಲಕ್ಷವು ತೊಂಭತ್ತಾರು ಸಾವಿರ ಜಂಗ। ಮಾರ್ಚನೆಯ ಮಾಡುತ್ತ ನೇಮದ ಮಹಾತ್ಮರಿಗೆ ಇಚ್ಛಭೋಜನವನೀಡುತ। ಮಿಂಡ ಜಂಗಮಕೆ ಬೇಡಿದರ್ಥಂಗಳ ಕೊಡುತ। ಮೆಚ್ಚಿ ಮೂವತ್ತಾರು ಸಾವಿರ ಚರಕೆ ತನ್ನ। ನೊಚ್ಚತಂಗೊಟ್ಟು ಸಮಯಾಚಾರಕೆಂದೆನುತ। ನಿಶ್ಚಿಂತ ನಿಜಲಿಂಗ ಸುಖ ಮುಖ। ದೊಳಾಡುತಿಹ ಬಸವನೇ ಶರಣೆಂಜೆನು ॥ ೪೮ ॥

ಮೂರು ಮುಖವಾಗಿ ನಾನಾ ಚಿತ್ರದಲಿಮಾಡಿ। ಲಾರು ಚಕ್ರವ ಹೂಡಿ ವಂಭತ್ತು ಬಾಗಿಲೊಳು। ನೂರೊಂದು ಸ್ಥಳಗಳಂ ನೋಡಿ ಸಾಸಿರ ದಳದ। ಮೇಲುಪ್ಪರಿಗೆಯ ಕೂಡಿ ಮೀರಿ ತೋರುವ ನಯಂಜ್ಯೋತಿ ॥

ಬೆಳಗಿನ ಮುವ್ವತ್ತಾರು ತತ್ವದ ಶೂನ್ಯಸಿಂಹಾಸನ ತೋರುವ ನಯಂಜೋತಿ
ಗುರುಬಸವ ಹರಿಯುಕಂಡ ಬಸವಂಗೆ ಶರಣೆಂಬೆನೂ ॥ ೪೯ ॥

ಬಸವನಂ ಹೊಸಭಸಿತ ಸಿಂಗರದೊಳಾಡುತಿಹ। ಬಸವನಂ ದೆಸೆ ದೆಸೆಯ ಜಂಗಮುವ ಕೂಡುತಿಹ। ಬಸವನಂ ವಸುಧೆ ಜಂಗನು ಧ್ಯಾನದೊಳಗೆಡೆಬಿಡದೆ ನೋಡುತಲಿಹ ॥ ಬಸವನಂ ಪಶುಪತಿಯ ಬಸವನಂ ವಿಷಧರನ। ಬಸವನಂ ಅಸಮಾನ ಬಸವನಂ ಬಿಸಿಗಣ್ಣ। ಬಸವನಂ ವಸುಧೀಶ ಬಸವನಂ ಶಶಿಭೂಷ। ಬಸವನಂ ಭಜಿಸುತಿಹೆನು ॥ ೫೦ ॥

ಬಸವನಂ ಪರಮಗುರು ಪಂಚಾಕ್ಷರಿಯುಳರುವ। ಬಸವ ಪರಮಾರ್ತ ನಿತ್ಯವೆಲ್ಲವನರಿವ। ಬಸವನಂ ಪರಮಭಕ್ತರ ಕಲ್ಪತರು ಕಾಮಧೇನುವೆಂದೆಸಿಸಿ ಮೆರೆವಾ ॥ ಬಸವನಂ ಪರತತ್ವ ಪರಿಪೂರ್ಣ ಬಸವನಂ। ಪರಮಾತ್ಮ ಬಸವನಂ ಪರಿತೋಷ ಬಸವನಂ ಪರಬ್ರಹ್ಮ ಬಸವನಂ। ಪರಶಿವನ ಬಸವನಂ ಬಲಗೊಂಬೆನೂ ॥ ೫೧ ॥

ಬಸವನಂ ಯೆಂಬವರ ಕುಲಕೋಟಿ ಪಾವನವಹುದು। ಬಸವನಂ ಯೆಂಬವರ ಚಲಪದಗಳುನ್ನತವಹುದು। ಬಸವಯೆಂಬವರ ಬಲುಮೆಗೆ ಮಲವಮುಖೋಕ್ತಿಗಳೆಲ್ಲ ದಹನವಹುದೂ ॥ ೫೨ ॥

## ಬಸವೇಶ್ವರ ಸ್ತೋತ್ರಕಂದ

ಕವಿಯ ಕಾಲ ೧೬೦೦. ಕವಿಯ ಹೆಸರು ಗೊತ್ತಾಗಿರುವದಿಲ್ಲ.

ಪ್ರಣವದ ಬಳ್ಳಿ ಬಕಾರಂ। ಪ್ರಣವದ ನಾದಾನುಸಾರ ಸಕಾರಂ।
ಪ್ರಣವದ ಬಿಂದು ವಕಾರಂ। ಪ್ರಣವಂ ಬಸವಾಕ್ಷರತ್ರಯಂ ಬಸವೇಶ ॥
ಬಸವಂ ಭಕ್ತಿಗೆ ಮೂಲಂ। ಬಸವಂ ಕಾಲಂಗೆ ಕಾಲನನುಪಮ ಶೀಲಂ।
ಬಸವಂ ಜಂಗಮ ಲೋಲಂ। ಬಸವಾ ರಕ್ಷಿಸುವುದೆನ್ನ ಸಂಗನ ಬಸವಾ ॥

## ಬಸವ ಪವಾಡದ ರಗಳೆ

ಕವಿಯ ಕಾಲ ೧೬೦೦. ಕವಿಯ ಹೆಸರು ಗೊತ್ತಾಗಿಲ್ಲ. ೧೧೨ ನುಡಿಗಳಿವೆ.

ಮೃಡನ ಶರಣ ಬೊಮ್ಮ ತಂದೆ ಕನ್ನವಿಕ್ಕಿ ನೃಪನು ಕೆಣಕೆ।
ಒಡನೆ ಮಣ್ಣ ರಾಶಿಗಳನು ಚಿನ್ನಮಾಡಿ ಮೆರೆದ ಬಸವಾ ॥

## ಬಸವೇಶ್ವರನ ತಾರಾವಳಿ

ಕವಿಯ ಕಾಲ ೧೬೦೦. ಕವಿಯ ಹೆಸರು ಗೊತ್ತಾಗಿಲ್ಲ. ಇದು ವಾರ್ಧಿಕ ಷಟ್ಪದಿಯಲ್ಲಿರುತ್ತದೆ.

ರವಿಯುದಯ ವಂ ಬಯಸಿ ಬರಲು ವಂಬುಜದಂತೆ।
ಶಿವಪದದ ಮಾರ್ಗದಲಿ ಯೆಡೆಬಿಡದೆ ಸಂಚರಿಪ।
ರವರ ದರುಶನವೆಂದಿಗೆನಗೆ ದೊರಕುವುದೆಂದು ಮನದೊಳಗೆ ತೊಳಲಿ ಬಳಲಿ।
ದಿವಂರಾತ್ರಿ ಹಲುಬಿ ಹಂಬಲಿಸುವವನಾವನನ।
ನವನ ಪದಕಮಲಕೆರಗುವ ಸುಖಕೆನ್ನ ಮಾಡು।
ಶಿವನಿಮ್ಮ ಬೇಡುತಿಹೆನೆಂಬ ಬಸವೇಶ್ವರನ ಚರಣಾಂಬುಜಕ್ಕೆ ಶರಣು ॥ ೧ ॥

ಆರ್. ಆರ್. ದಿವಾಕರರು—೧೯೫೮ ನೆಯ ಇಸ್ವಿಯ ಬಸವ ಜಯಂತಿಯ ದಿನ ಬಸವ ಕಲ್ಯಾಣದಲ್ಲಿ ಶ್ರೀ ಬಸವಣ್ಣನವರ ಬಗ್ಗೆ ಮಾಡಿದ ಭಾಷಣದ ಸಾರಾಂಶ—

ಬಸವೇಶ್ವರರು ಕೇವಲ ವೀರಶೈವರ ಇಲ್ಲವೇ ಕರ್ಣಾಟಕದವರ ಸ್ವತ್ತಲ್ಲ. ಅವರು ಸಮಗ್ರ ಮಾನವಕೋಟಿಗೆ ಸಂಬಂಧಪಟ್ಟವರು. ಅವರು ಬೋಧಿಸಿದ ತತ್ವಗಳಿಗೆ ಜಾಗತಿಕ ಮಹತ್ವವಿದೆ. ಆದ್ದರಿಂದ ನಾವಿಂದು ಇಂಥ ಮಹಾನ್ ವ್ಯಕ್ತಿಗಳ ಬಗ್ಗೆ ಜಾಗತಿಕ ದೃಷ್ಟಿಯನ್ನಿಟ್ಟುಕೊಳ್ಳಬೇಕು. ಬಸವೇಶ್ವರರ ಮಹತಿಯು ಕೇವಲ ಆಧ್ಯಾತ್ಮಿಕ ರಂಗಕ್ಕೆ ಮರ್ಯಾದಿತವಾಗಿರಲಿಲ್ಲ. ಜೀವನದ ಪ್ರತಿಯೊಂದು ಚಟುವಟಿಕೆಗೂ ಅವರು ಆಧ್ಯಾತ್ಮಿಕತೆಯ ಮೆರುಗನ್ನು ಕೊಟ್ಟು ಆಧ್ಯಾತ್ಮ ವಾದವೆಂದರೆ ದೈನಂದಿನ ಜೀವನದ ಚಟುವಟಿಕೆಗಳಿಂದ ಬೇರೆಯಾದ ವಿಷಯವಲ್ಲವೆಂಬುವುದನ್ನು ಸಿದ್ಧಪಡಿಸಿದರು. ಅವರು ಒಳ್ಳೆಯ ಪುತ್ರ, ಆದರ್ಶ ಪತಿ, ಅರಸನ ಪ್ರಾಮಾಣಿಕ ಮತ್ತು ನಿಷ್ಠಸೇವಕ ಹಾಗೂ ರಾಜ್ಯದ ಸಮರ್ಥ ಪ್ರಧಾನ ಮಂತ್ರಿಯಾಗಿದ್ದರು. ಇದಲ್ಲದೆ ಅವರು ಪ್ರಥಮ ದರ್ಜೆಯ ಶಿವಭಕ್ತರು. ಭಕ್ತಿಪಥದ ಸಂಘಟಕರು. ಹಾಗೂ ಹಿರಿಯ ದೃಷ್ಟಿಯಿಂದೊಡಗೂಡಿದ ಧಾರ್ಮಿಕ ಸುಧಾರಕರು ಎನಿಸಿದರು. ಅವರ ವಚನಗಳು ಸರಳ ಹಾಗೂ ಸವಿಯಾದ ಭಾಷೆಯಲ್ಲಿ ಅರ್ಥಪೂರ್ಣವಾಗಿ ಬರೆಯಲ್ಪಟ್ಟು ಕನ್ನಡದ ವೈಶಿಷ್ಟ್ಯವೆನಿಸಿವೆ. ಯಾವನೊಬ್ಬನು ಈ ಸ್ಥಳವನ್ನು ಸಂದರ್ಶಿಸಿದನೆಂದರೆ ಮೊಹೆಂಜೋದಾರೊ ಕಾಲದಿಂದ ಬೆಳೆದುಬಂದ ಭಾರತೀಯ ವಿಚಾರ ಹಾಗೂ ಸಂಸ್ಕೃತಿಯ ಬೆಳವಣಿಗೆ ಮತ್ತು ಅದರಲ್ಲಿ ಕರ್ಣಾಟಕವು ವಹಿಸಿದ ಮಹತ್ವದ ಪಾತ್ರದ ಸಮ್ಯಕ್ ದರ್ಶನವು ದೊರೆಯುತ್ತದೆ. ಸಾಮ್ರಾಜ್ಯ, ಅರಮನೆ, ಮಂದಿರ ಮೊದಲಾದ ಭೌತಿಕ ಸ್ವರೂಪದ ವೈಭವಗಳು ಉಳಿದು ಅಳಿದುಹೋಗಿವೆ. ವಿದ್ವತ್ತಿನಿಂದ ಕೂಡಿದ ಹಾಗೂ ಆಧ್ಯಾತ್ಮಿಕ ಶಕ್ತಿಯನ್ನೊಳಗೊಂಡ ಹಿರಿಯ ಮಾತುಗಳು ಮಾತ್ರ ಇಂದಿಗೂ ಉಳಿದುಬಂದಿವೆ. ಭೌತಿಕವಾದ ಹಾಗೂ ವೈಭವಕ್ಕೆ ನಾವು ಮಾರು ಹೋಗಬಾರದು. ಯಾಕೆಂದರೆ ಅವು ಬೇಗನೆ ನಾಶಹೊಂದುತ್ತವೆ. ಆತ್ಮವೊಂದೇ ಅವಿನಾಶಿ ಹಾಗೂ ಅಮರ ವಸ್ತುವೆನಿಸಿದೆ. ಅಣುಶಕ್ತಿಯು ಸಹ ಯಾಂತ್ರಿಕವಾಗಿದ್ದು ತನ್ನಷ್ಟಕ್ಕೆ ತಾನೇ ಚಲಿಸಲಾರದು. ಮಾನವೀಯ ಶಕ್ತಿಯ ಸ್ವರೂಪಗಳಾದ ಮಾನವೀಯ ಮನಸು ಹಾಗೂ ಬುದ್ಧಿಯಿಂದಲೇ ಅಣುಶಕ್ತಿಯು ನಿರ್ದೇಶಿಸಲ್ಪಡುತ್ತದೆ. ಆದ್ದರಿಂದ ಪ್ರತಿಯೊಬ್ಬನೂ ಈ ಹಿಂದೆ ಬಸವೇಶ್ವರ ಹಾಗೂ ಗಾಂಧಿಯವರು ಮಾಡಿದಂತೆ ಆತ್ಮಶಕ್ತಿಯನ್ನು ಬೆಳೆಸಿಕೊಳ್ಳಲು ಯತ್ನಿಸಬೇಕು.

ಶ್ರೀ ಕುಮಾರಸ್ವಾಮಿಗಳು, ನವಕಲ್ಯಾಣ ಮಠ, ಧಾರವಾಡ—

ಸೃಷ್ಟಿಯು ಆನಂದರೂಪವಾಗಿದೆ. "ಕೋಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ । ಯದೇಶ ಆಕಾಶ ಆನಂದೋ ನ ಸ್ಯಾತ್ ॥" ಎಂದು ತೈತ್ತಿರೀಯ ಉಪನಿಷತ್ತು ಕೇಳುತ್ತಿದೆ. (ಈ ಆಕಾಶವು ಆನಂದಸ್ವರೂಪವಾಗಿರದಿದ್ದರೆ ಯಾರು ಉಸಿರಾಡಿಸುತ್ತಿದ್ದರು, ಯಾರು ಜೀವಿಸುತ್ತಿದ್ದರು?)

ಆದರೆ ಇದು ಅನುಭವಗವ್ಯವಾದ ವಿಷಯ. ಶರಣರು, ಅನುಭಾವಿಗಳು ಇದನ್ನೇ ಸಾರುತ್ತಾರೆ. ದಿವ್ಯಾನುಭವದಲ್ಲಿ ಸೃಷ್ಟಿಯು ಆನಂದದ ತರಂಗವಾಗಿ ತೋರುತ್ತದೆ.

ಪರಮಾತ್ಮನು ಸಚ್ಚಿದಾನಂದಘನನು. ಸತ್ತು ಮೂಲಸ್ವರೂಪ, ಚಿತ್ತು ವಿಧಾಯಕ ಸ್ವರೂಪ, ಆನಂದವು ಪರಿಣಾಮ ಸ್ವರೂಪ. ಸತ್ತು ಚಿತ್ತಿನ ಮೂಲಕವೇ ಆನಂದದಲ್ಲಿ ಪರಿಣಮಿಸುವುದು. ತಿರುವುಮುರುವಾಗಿ, ಆನಂದ ಚಿತ್ತಿನ ಮೂಲವೇ ಸತ್-ಸ್ವರೂಪವನ್ನು ಮರಳಿ ಹೊಂದುವುದು. ಅಂತೂ ಸತ್ತು-ಆನಂದಗಳಿಗೆ ಚಿತ್ತು ಕೊಂಡಿಯಾಗಿದೆ.

ಮಾಧ್ವಮತದಲ್ಲಿ ಮುಖ್ಯ ಪ್ರಾಣತತ್ತ್ವಕ್ಕೆ ಸ್ಥಾನವಿದ್ದುದೇ ಶಾಕ್ತ ಮತದಲ್ಲಿ ಚಿಚ್ಛಕ್ತಿಗೂ, ವೀರಶೈವ ಮತದಲ್ಲಿ ಬಸವತತ್ವಕ್ಕೂ ಇದೆ.

ಬಸವನು ಶಿವನಿಗೆ ಪ್ರಾಣಸ್ವರೂಪನಾಗಿದ್ದಾನೆ. ಶಿವನ ಎದುರಿಗೆ ನಂದಿ ಇರುವುದನ್ನು ನಾವು ಎಲ್ಲೆಡೆಯಲ್ಲಿಯೂ ನೋಡುತ್ತೇವೆ. ಶಿವನ ವಾಹನವು ನಂದಿ, ವೃಷಭ.* ವೃಷಭದ ತದ್ಭವವೇ ಬಸವ. ವೃಷೇಂದ್ರಃ ಪುರ ಏತು ನಃ ॥ (ವೃಷಭನು ನಮಗೆ ಮಾರ್ಗದರ್ಶಕನಾಗಲಿ) ಎಂದು ಆಗಮವು ಹೇಳುತ್ತದೆ.

ನಂದಿ ಎಂದರೆ ಧರ್ಮಮೂರ್ತಿ. ದೇವಾಲಯದಲ್ಲಿಯ ಶಿವಲಿಂಗವನ್ನು ನಂದಿಯ ಎರಡು ಕೊಂಬುಗಳೊಳಗಿಂದ ನೋಡುವ ರೂಢಿಯಿರುತ್ತದೆ. ಶಿವನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕಾದರೆ ಬಸವನ ಮುಖಾಂತರವೇ ಸಾಧ್ಯ. ಶಿವನು ಜಗದುದ್ಧಾರ ಮಾಡಲು ವೃಷಭವಾಹನನಾಗಿಯೇ ಹೊರಡುವನು. ಶಿವತತ್ವದ ವಾಹಕವು ಬಸವ.

ಶಿವನು ಸತ್–ಸ್ವರೂಪನು. ಸತ್ ಎಂದರೆ ಕೊನೆತನಕ ಅಬಾಧಿತವಾಗಿ ಇರುವಂತಹುದು; ಅದು ಎಲ್ಲರಿಗೂ ಒಳ್ಳಿತು ಆಗಿರುವುದು. ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ ॥ ಎಂದು ಗೀತೆ ಹೇಳುತ್ತಿದೆ. ಶಿವನು ಸದ್ಭಾವ–ಸಾಧುಭಾವಗಳ ಸಂಜ್ಞೆ. ಸದ್ಭಾವವು ಸಾಧುಭಾವವಾಗಿ ಪ್ರಕಟವಾಗಲು ಬಸವನೇ ಸಾಧನ.

GOD is the short form of GOOD. ಶಿವ ಎಂದರೆ ಕಲ್ಯಾಣ. ಶಿವನ ಧ್ಯಾನವೆಂದರೆ ಮಾನವಕೋಟಿಯ (ಅದೇಕೆ, ಮಾನವೇತರ ಪ್ರಾಣಿಗಳದು ಕೂಡ) ಕಲ್ಯಾಣ ಚಿಂತಿಸುವುದು. ಇದುವೇ ನಿಜವಾದ ಶಿವಪೂಜೆ. ಸದ್ಭಾವನೆಯೆಂದರೆ ಭೂತಮಾತ್ರರನ್ನು ಪ್ರೇಮಿಸುವ ಭಾವನೆ. ಪರಮಾತ್ಮನ ಸ್ವರೂಪವನ್ನು ಅರಿತವನು ಪ್ರೇಮಿಯಾಗುವನು. ಬಸವನು ಭಕ್ತಾಗ್ರಣಿಯಾಗಿದ್ದನು. ಬಸವನು ಪ್ರೇಮಿಗಳ ಸಾರ್ವಭೌಮನಾಗಿದ್ದನು. ಧರ್ಮದ ಅಂತಃಸತ್ತ್ವವೇ ಪ್ರೇಮ.

ಧಾರಣಾತ್ ಧರ್ಮ ಇತ್ಯಾಹುಃ ॥ ವಿಶ್ವವನ್ನು ಸುಭದ್ರವಾಗಿಟ್ಟು, ಅದನ್ನು ನಡೆಯಿಸುವ ಶಕ್ತಿಯೇ ಧರ್ಮ. ಧರ್ಮವೆಂದರೆ ಸಂಯಮ. ಧರ್ಮವೆಂದರೆ ಹಿತ ಹಾಗೂ ಮಿತ. ಚತುರ್ವಿಧ ಪುರುಷಾರ್ಥಗಳಲ್ಲಿ ಧರ್ಮಕ್ಕೆ ಅಗ್ರಮರ್ಯಾದೆ ಕೊಟ್ಟರುವರು ನಮ್ಮ ಪುರಾತನರು. ಧರ್ಮದಿಂದ (ಎಂದರೆ ಸಂಯಮದಿಂದ) ಅರ್ಥ–ಕಾಮಗಳನ್ನು ಉಪಭೋಗಿಸಿದರೆ ಅದು ಮೋಕ್ಷಕ್ಕೆ ಸಾಧನವಾಗಬಲ್ಲುದು. ಮೋಕ್ಷಕ್ಕಾಗಿ ಉಗ್ರ ದೇಹದಂಡನೆಯು ತರವಲ್ಲ; ಅರ್ಥ–ಕಾಮಗಳಲ್ಲಿ ಲೋಲುಪ್ತಿಯಂತೂ ನರಕದ ಸಾಧನ. ಅಂತೆಯೇ ಆದಿಭೌತಿಕ–ಆಧ್ಯಾತ್ಮಿಕ ಸಾಧನೆಗಳೆರಡರಲ್ಲಿಯೂ ಸಂಯಮ ವಿರಲಿ ಎಂದೇ ಧರ್ಮವು ಬೋಧಿಸುತ್ತದೆ.

ಬಸವಣ್ಣನವರು ಗೃಹಸ್ಥರಾಗಿದ್ದುಕೊಂಡೇ ಪರಮೋಚ್ಚ ಪರಮಾರ್ಥವನ್ನು ಸಾಧಿಸಿದರು. ಅವರು ಧರ್ಮದ ತತ್ವವನ್ನು ಅಳವಡಿಸಿಕೊಂಡಿದ್ದರು. ಅವರು ಧರ್ಮಸ್ವರೂಪರೇ ಆಗಿದ್ದರು.

ಶಿವಯೋಗವು ಜೀವನವನ್ನು ಹೀಗಳೆಯುವುದಿಲ್ಲ. ಜೀವನದ ಸಕಲಾಂಗಗಳೂ ಶಿವಸಂಪರ್ಕದಿಂದ ಪುನೀತವಾಗಲಿ ಎಂದು ಅದು ಹೇಳುತ್ತದೆ. ಜೀವನವು ಶಿವನ ಪ್ರಸಾದ ಎಂದು ಅದು ಭಾವಿಸುತ್ತದೆ. ಎಲ್ಲರಂತೆ ಬಾಳುವೆ ಸಾಗಿಸುತ್ತಲೇ ಬಸವಣ್ಣನವರು ಶ್ರೇಷ್ಠ ಶಿವಾನುಭವವನ್ನು ಆಚರಿಸಿ ತೋರಿಸಿದರು.

ಯೋಗವೆಂದರೇನೇ ಸಮಂಜಸ ಸಂಯಮ. "ಅತಿ ಉಣ್ಣುವವನಿಗೆ ಯೋಗವಿಲ್ಲ, ತೀರ ಉಣ್ಣದಿರುವವನಿಗೂ ಯೋಗವಿಲ್ಲ. ತುಂಬಾ ನಿದ್ರೆ ಮಾಡುವವನಿಗಾಗಲಿ, ತೀರಾ ಜಾಗರಣೆ ಮಾಡುವವನಿಗಾಗಲಿ ಯೋಗವಿಲ್ಲ. ಯುಕ್ತ (ಸಂಯಮಶೀಲ) ಆಹಾರ ವಿಹಾರವಿರುವವನಿಗೆ, ಯುಕ್ತಚೇಷ್ಟೆ (ಕೆಲಸಬೊಗಸೆ) ಗಳು ಇರುವವನಿಗೆ, ಯುಕ್ತ ನಿದ್ದೆ–ಎಚ್ಚರಿಕೆ ಇರುವವನಿಗೆ ಯೋಗವು ದುಃಖಹಾರಕ (ಎಂದರೆ ಸುಖಕರ) ವಾಗುವುದು." ಹವಣರಿತು ಬಾಳುವೆ ಸಾಗಿಸುವವರೇ "ಇಲ್ಲಿಯೂ ಸಲ್ಲುವರು, ಅಲ್ಲಿಯೂ ಸಲ್ಲುವರು".

* * *

ಬಸವಣ್ಣನವರ ಪ್ರೇರಣೆಯಿಂದ ಕಲ್ಯಾಣದಲ್ಲಿ ಸ್ಥಾಪಿತವಾದ ಅನುಭವಮಂಟಪದ ಯೋಜನೆಯಲ್ಲಿ ಷಟ್–ಸ್ಥಳಗಳಲ್ಲಿ ಒಂದೊಂದು ಸ್ಥಳಕ್ಕೆ ಒಬ್ಬೊಬ್ಬ ಅಧಿಕಾರಿಗಳನ್ನು ನಿಯಮಿಸಲಾಗಿದ್ದಿತು. ಅವುಗಳಲ್ಲಿ ಅನುಕ್ರಮವಾಗಿ ಭಕ್ತ ಸ್ಥಳಕ್ಕೆ ಬಸವಣ್ಣ, ಮಹೇಶ ಸ್ಥಳಕ್ಕೆ ಮಡಿವಾಳ ಮಾಚಯ್ಯ, ಪ್ರಸಾದಿ ಸ್ಥಳಕ್ಕೆ ಚೆನ್ನಬಸವಣ್ಣ, ಪ್ರಾಣಲಿಂಗಿ ಸ್ಥಳಕ್ಕೆ ಸಿದ್ಧರಾಮ, ಶರಣ ಸ್ಥಳಕ್ಕೆ ಅಲ್ಲಮಪ್ರಭು, ಐಕ್ಯ ಸ್ಥಳಕ್ಕೆ ಅಜಗಣ್ಣ—ಈ ರೀತಿಯಾಗಿ ಯೋಜಿಸಲ್ಪಟ್ಟಿದ್ದರು. ಆಯಾ ಸ್ಥಳಕ್ಕೆ ವಿಶೇಷ ಅಧಿಕಾರ, ಉಳಿದೆಲ್ಲ ಸ್ಥಳಗಳಿಗೆ ಉಳಿದವರೆಲ್ಲರ ಅನುಭವ ಎಂಬುದು ಇದರ ವಿಶೇಷವಾಗಿದ್ದಿತು. ಬಸವಣ್ಣನವರು ಭಕ್ತಸ್ಥಳದಲ್ಲಿದ್ದುಕೊಂಡು, ಉಳಿದೆಲ್ಲ ಸ್ಥಳಗಳ ಅಧಿಕಾರವುಳ್ಳವರಾಗಿದ್ದರು. ಲೀನತೆ, ನಮ್ರತೆ, ನಿರಹಂಕಾರ ಇವು ಬಸವಣ್ಣನವರ ಬಿರುದುಗಳು.

ಷಟ್–ಸ್ಥಲಗಳ ಅನುಭವಗಳನ್ನೆಲ್ಲ ಶೇಖರಿಸಿಕೊಂಡವರಾದರೂ ಬಸವಣ್ಣನವರು ಭಕ್ತರಾಗಿಯೇ ಉಳಿಯಲಪೇಕ್ಷಿಸಿದರು!

ವೀರಶೈವರಿಗೆ ಬಸವಣ್ಣ–ಪ್ರಭುದೇವರು–ಚೆನ್ನಬಸವಣ್ಣ ಎಂಬೀ ತ್ರಿಕೂಟವು ವಂದನೀಯವು. ಇವರಲ್ಲಿಯೂ ಬಸವಣ್ಣನವರು ಪರಮವಂದ್ಯರು. ವೀರಶೈವ ಸಮಾಜವು ಬಸವಣ್ಣನವರ ಹೆಸರನ್ನೇ ಪ್ರಪ್ರಥಮವಾಗಿ ಸ್ಮರಿಸುತ್ತದೆ. ಮಾನವರಲ್ಲಿ ಅತಿ ಅಪರೂಪವಾದ ಸದ್ಗುಣ **ಕ್ಷಮೆ.** ಎಲ್ಲ ಗುಣಗಳಲ್ಲಿ ಕ್ಷಮಾಗುಣಕ್ಕೆ ಅಗ್ರಸ್ಥಾನ. God forgives. ಈಶ್ವರನು ಪರಮ ಕ್ಷಮಾಶೀಲ. ಈ ಕ್ಷಮಾಗುಣವು ಬಸವಣ್ಣನವರಲ್ಲಿ ಪರಾಕಾಷ್ಠೆಯನ್ನು ಮುಟ್ಟಿತ್ತು. ಸಹನೆ, ಸಹಾನುಭೂತಿ, ಸ್ನೇಹ, ಸೌಜನ್ಯ, ಸದ್ಭಕ್ತಿಗಳ ಆಗರವೇ ಆಗಿದ್ದರು ಬಸವಣ್ಣನವರು.

"ಪ್ರದೀಪ" ಮಾಸಪತ್ರಿಕೆಯ ಸಂಪಾದಕರಾದ ವಿನೀತ ರಾಮಚಂದ್ರರಾಯರು ತಮ್ಮ "ಪ್ರಬೋಧ" ಮಾಸಪತ್ರಿಕೆಯ ೧೯೫೬ ನೇ ಜೂನ್ ತಿಂಗಳ ಸಂಚಿಕೆಯಲ್ಲಿ "ನನ್ನ ಮಾತು" ಎನ್ನುವ ಬರೆಹದಲ್ಲಿ ಶ್ರೀ ಬಸವಣ್ಣನವರ ಬಗ್ಗೆ—

ಬುದ್ಧನು ಮಾನವತೆಯ ದಿವ್ಯ ಸಂದೇಶವನ್ನರುಹಿದನಾದರೂ ಭಾರತೀಯರ ಆಧ್ಯಾತ್ಮಿಕ, ವೇದಾಂತಿಕ ಪರಂಪರೆಯ ಸತ್ಯತೆಯನ್ನು ಕುರಿತು ಮೌನ ತಾಳಿದ್ದನು. ಬಸವಣ್ಣನವರು ಆಧ್ಯಾತ್ಮಿಕತೆ-ಮಾನವತೆಗಳ ಸಮನ್ವಯವನ್ನು ಸಾಧಿಸಿದ ಮಹಾ ಪುರುಷರು. ಬುದ್ಧನಂತೆ ಬಸವಣ್ಣನವರೂ ಜಾತಿ, ಲಿಂಗಭೇದಗಳನ್ನು ಜರಿದು ಸಮಾಜದ ನಿಖಿಲ ಜೀವನವನ್ನು ನೈತಿಕ, ಸಾಂಸ್ಕೃತಿಕ ರೀತಿಯಲ್ಲಿ ಸಂಘಟಿಸಿದರು. ಅಲ್ಲದೆ ಅದಕ್ಕೆ ಆಧ್ಯಾತ್ಮಿಕತೆಯ, ಪಾರಮಾರ್ಥಿಕತೆಯ ಅಸ್ತಿಭಾರವನ್ನು ಹಾಕಿದುದು ಅವರ ವೈಶಿಷ್ಟ್ಯ ವಾಗಿದೆ. ಈ ಕರ್ನಾಟಕವು ಈ ಸುಪುತ್ರನನ್ನು ಪಡೆದುದು ನಮಗೆಲ್ಲ ಹೆಮ್ಮೆಯ ಸಂಗತಿ. ಬಸವಣ್ಣನವರ ಹಾಗೂ ಅವರ ಸಹಯೋಗಿಗಳ ಆಧ್ಯಾತ್ಮಿಕ ಮಾನವತೆಯ ಪರಿಚಯವು ತಕ್ಕರೀತಿಯಲ್ಲಿ ಭಾರತದ ಪರಪ್ರಾಂತೀಯರಿಗೆ ಹಾಗೂ ವಿದೇಶೀಯರಿಗೆ ಇನ್ನೂ ಆಗದಿದ್ದುದು ದೊಡ್ಡ ಕೊರತೆ. ಇದನು ಹೋಗಲಾಡಿಸುವುದು ಕನ್ನಡಿಗರ ಕರ್ತವ್ಯ.

ಬಳವಂತರಾವ್ ದಾತಾರ, ಎಂ.ಎ., ಕೇಂದ್ರ ಗೃಹಶಾಖೆಯ ಮಂತ್ರಿಗಳು— ದಿಲ್ಲಿಯಲ್ಲಿ ನಡೆದ ೧೯೫೬ ನೆಯ ಇಸವಿಯ ಬಸವ ಜಯಂತಿಯ ಕಾಲದಲ್ಲಿ ಮಾಡಿದ ಭಾಷಣದ ಸಾರಾಂಶ—

ಬಸವಣ್ಣನವರು ಧಾರ್ಮಿಕ ಹಾಗೂ ಸಾಮಾಜಿಕ ಚಟುವಟಿಕೆಗಳಿಗೆ ಕೇಂದ್ರ ಸ್ಥಾನವಾಗಿದ್ದ ಕರ್ನಾಟಕದಲ್ಲಿ ಮೊದಲಿನಿಂದಲೂ ಬಸವ ಜಯಂತಿ ದೊಡ್ಡ ಘಟನೆ ಯಾಗಿದೆ. ಈ ವರ್ಷ ಆ ಜಯಂತಿ ರಾಷ್ಟ್ರದ ರಾಜಧಾನಿಯಾದ ದೆಹಲಿಯಲ್ಲೂ ನಡೆಯುತ್ತಿರುವುದು ಬಹಳ ಸಂತೋಷದ ಸಂಗತಿ. ಸ್ವಾತಂತ್ರ್ಯಾನಂತರ ದೇಶದ ಎಲ್ಲಾ ಕಡೆಗಳಲ್ಲೂ ಹೊಸ ನವೋದಯದ ಹೊಂಗಿರಣ ಬೀಳುತ್ತಿರುವುದರ ಸೂಚನೆ ಇದು. ನಮ್ಮ ಧರ್ಮ ಹಾಗೂ ಸಂಸ್ಕೃತಿಗಳಲ್ಲಿರುವ ಎಲ್ಲ ಉತ್ಕೃಷ್ಟ ಅಂಶಗಳೂ ದೇಶದ ಪ್ರತಿ ಪ್ರಜೆಗೂ ತಿಳಿಯುವಂತೆ ಮಾಡುವುದು ನಮ್ಮ ಮಹಾನ್ ಕರ್ತವ್ಯಗಳಲ್ಲಿ ಒಂದಾಗಿರುತ್ತದೆ. ಉತ್ತರದ ಆಧುನಿಕ ವಿಚಾರಗಳಿಗೆ ವೀರಶೈವ ಸಿದ್ಧಾಂತದ ಬಗೆಗೆ ಹೆಚ್ಚಾಗಿ ತಿಳಿದಿಲ್ಲ. ಹಾಗೆ ಅವರು ಅದನ್ನು ತಿಳಿದು ಮೆಚ್ಚುವ ಅಗತ್ಯ ಅಪಾರವಾಗಿದೆ. ಹಿಂದೂ ಸಮಾಜಕ್ಕೆ ವಿಶ್ವದೃಷ್ಟಿಯನ್ನು ನೀಡಿ ಅದರ ಸಂಘಟನೆಗಾಗಿ ತಮ್ಮದೇ ಆದ ವಿಶಿಷ್ಟರೀತಿಯಲ್ಲಿ ದುಡಿದ "ಸಮಾಜ ಸುಧಾರಕ", ಧರ್ಮಪ್ರಚಾರ ಬಸವಣ್ಣನವರ ಸ್ಫೂರ್ತಿಪ್ರದ ಉಪದೇಶಗಳನ್ನು ಹೆಚ್ಚಾಗಿ ಪ್ರಸಾರಮಾಡಲು ದೆಹಲಿಯ ಬಸವ ಜಯಂತ್ಯುತ್ಸವದ ಕಾರ್ಯಕರ್ತರು ತಮ್ಮ ಚಟುವಟಿಕೆಗಳನ್ನು ಇನ್ನೂ ಹೆಚ್ಚು ತ್ವರಿತ ಗೊಳಿಸಬೇಕಾಗಿದೆ

ಪ್ರಾಚೀನಕಾಲದ ಎಲ್ಲ ಮಹಾನ್ ವ್ಯಕ್ತಿಗಳಂತೆಯೇ ಬಸವಣ್ಣನವರ ಜೀವನದ ಬಗ್ಗೆಯೂ ನಮಗೆ ತಿಳಿದಿರುವುದು ಅಲ್ಪ. ಅವರ ಮೇಲೆ ಕಟ್ಟಲಾಗಿರುವ ಅಸಂಖ್ಯಾತ ಕಥೆಗಳಿಂದಲೂ, ಸಂಪ್ರದಾಯಗಳಿಂದಲೂ, ವಿವಿಧ ಬರವಣಿಗೆಗಳಿಂದಲೂ ನಾವು ಅವರ ಜೀವನ ಚರಿತ್ರೆಯನ್ನು ಹೆಕ್ಕಿ ತೆಗೆಯಬೇಕಾಗಿದೆ. ಅಲ್ಲಲ್ಲಿ ಅವರ ಜೀವನದ ಮೇಲೆ ಬೆಳಕು ಬೀಳುವ ಕೆಲ ಮೂಲವಸ್ತುಗಳು ದೊರೆಯುತ್ತವೆ. ಈ ಎಲ್ಲ ಎಳೆಗಳಿಂದ ಸತ್ಯ ಹಾಗೂ ಸಮಂಜಸವಾದುದನ್ನು ಆಯ್ದು ಹಾಸುಹೊಕ್ಕಾಗಿ ಸೇರಿಸಿ ಬಸವಣ್ಣನವರ ಬದುಕಿನ ಪೀತಾಂಬರವನ್ನು ಹೆಣೆಯಬೇಕಾಗಿದೆ.

ಬಸವೇಶ್ವರರು ಅಥವಾ ಬಸವರು ೧೨ನೇ ಶತಮಾನದ ಆದಿಕಾಲದಲ್ಲಿ ಮುಂಬಯಿ ರಾಜ್ಯದ ಬಿಜಾಪುರ ಜಿಲ್ಲೆಯ ಬಾಗೇವಾಡಿಯಲ್ಲಿ ಜನಿಸಿದರು. ಅವರ ತಂದೆಯವರ ಹೆಸರು ಮಾದರಸ, ತಾಯಿಯ ಹೆಸರು ಮಾದಲಾಂಬಿಕೆ. ಬಾಲ್ಯದಲ್ಲಿಯೇ ಬಸವರು ತಮ್ಮ ಹರಿತವಾದ ಬುದ್ಧಿಶಕ್ತಿಯಿಂದಲೂ, ಚಿಕಿತ್ಸಕ ಮನಸ್ಸಿನಿಂದಲೂ ತನಗೆ ಮುಂದೆ ಭಾಗ್ಯದ ಭವಿತವ್ಯವಿದೆಯೆಂಬುವದನ್ನು ತೋರಿಸಿ ಕೊಟ್ಟರು. ಬ್ರಾಹ್ಮಣ ಸಂಸಾರದಲ್ಲಿ ಜನಿಸಿದರೂ ಬಸವಣ್ಣನವರು ಬಾಲ್ಯದಲ್ಲಿಯೇ ತಮ್ಮ ಸಹಜ ಬುದ್ಧಿಯಿಂದ ಬ್ರಾಹ್ಮಣ ಆಚಾರ ಅನುಷ್ಠಾನಗಳನ್ನು ಅವುಗಳ ವಿರುದ್ಧ ಬಂಡಾಯವೇಳುವಷ್ಟರಮಟ್ಟಿಗೆ ದ್ವೇಷಿಸುತ್ತಿದ್ದರು. ಬ್ರಾಹ್ಮಣ ಧರ್ಮ ರೀತ್ಯಾ ಆಧ್ಯಾತ್ಮಿಕ ಜೀವನದ ಆರಂಭಕವಾದ ಉಪನಯನವಾದ ಕೆಲವೇ ವರ್ಷಗಳಲ್ಲಿ ಬ್ರಾಹ್ಮಣ ವಟುವಾಗಿ ಪಡೆದಿದ್ದ ಯಜ್ಞೋಪವೀತವನ್ನು ಕರ್ಮಬಂಧನದ ಬಳ್ಳಿಯೆಂದು ಬಗೆದು ಕಿತ್ತೆಸೆದು ಅನಂತರ ಜೀವನದ ಶಾಶ್ವತ ತತ್ವಗಳನ್ನು ಅರಿಯುವದಕ್ಕಾಗಿ ಕೆಲಕಾಲದವರೆಗೆ ಮನೆಬಿಟ್ಟು ಹೊರಟರು.

ಈ ಅವಧಿಯಲ್ಲಿ ಅವರು ಪ್ರಾಚೀನ ವೀರಶೈವ ಸಿದ್ಧಾಂತಗಳನ್ನು ಅಭ್ಯಸಿಸಿದರು. ಈ ಪ್ರಾಚೀನ ವೀರಶೈವದ ಉಗಮು ವೇದೋತ್ತರ ಕಾಲದ ಶಿವಾಗಮ ಸಾಹಿತ್ಯದಲ್ಲೂ, ವೇದಾಂತರ್ಗತವಾದ ರುದ್ರಪೂಜೆಯಲ್ಲೂ ಆಯಿತು. ಈ ವಿಚಾರಪ್ರಣಾಳಿಗೂ, ಶಾಕ್ತಪಂಥದ ಕಾಳಾಮುಖಿ ಹಾಗೂ ಪಾಶುಪತ ಮಾರ್ಗಗಳಿಗೂ ಸ್ವಲ್ಪಮಟ್ಟಿನ ಸಾಮೀಪ್ಯವಿದೆ.

ವಿವಿಧ ಶೈವ ಪಂಥಗಳನ್ನೂ ಅವುಗಳ ತತ್ತ್ವೋಪದೇಶ ಆಚರಣೆಗಳನ್ನೂ ಕ್ರೋಢೀಕರಿಸಿ ಪ್ರಮಾಣಬದ್ಧಗೊಳಿಸಿದ ಕೀರ್ತಿ (ಖ್ಯಾತಿ) ಬಸವರಿಗೇ ಸಲ್ಲಬೇಕು. ಅವರು ಶಿವ ಅಥವಾ ಮಹದೇವನ ಪೂಜೆಯನ್ನು ಉಚ್ಚಮಟ್ಟಕ್ಕೆ ಏರಿಸಿ ಅದರ ಸುತ್ತಲೂ ಇಂದು ವೀರಶೈವ ಮತದ ಕೀರ್ತಿಗೆ ಕಾರಣಭೂತವಾಗಿರುವ ಅನುಭಾವ ಸಿದ್ಧಾಂತವನ್ನು ಹೆಣೆದರು. ತಮ್ಮ ಔಪಯೋಗಿಕತೆಯನ್ನು ಕಳೆದುಕೊಂಡಿದ್ದ ಹಾಗೂ ವೀರಶೈವ ಧರ್ಮದ ಘನತತ್ವಗಳಿಗೆ ಸರಿಹೊಂದದ ಎಷ್ಟೋ ಆಚರಣೆಗಳನ್ನು ದೂರೀಕರಿಸಿದರು. ಬಸವೇಶ್ವರರು ಮತ್ತೊಮ್ಮೆ ಸಂಸಾರಕ್ಕಿಳಿದು ಜನಸೇವೆ ಹಾಗೂ ಆಧ್ಯಾತ್ಮಿಕ ಆದರ್ಶಾನ್ವೇಷಣೆಗಳಿಗೆ ಮೀಸಲಾದ ಐಹಿಕ ಜೀವನವನ್ನು ಬದುಕಿಸಲಾರಂಭಿಸಿದರು.

ಕೊಂಚ ಕಾಲದವರೆಗೆ ಅವರು ಕಲ್ಯಾಣದಲ್ಲಿ ಬಿಜ್ಜಳ ದೊರೆಯ ಆಸ್ಥಾನದಲ್ಲಿ ಮುಖ್ಯಮಂತ್ರಿಯಾಗಿ ರಾಜಕೀಯ ಹಾಗೂ ಆಡಳಿತ ಕಾರ್ಯದಲ್ಲಿ ಆಸಕ್ತಿ ವಹಿಸಿದರು. ಮುಖ್ಯಮಂತ್ರಿಯಾಗಿ ಬಸವರು ಸಾರ್ವಜನಿಕ ಕೆಲಸ ಕಾರ್ಯಗಳಲ್ಲಿ ಮುಂದಾಳುತ್ವ ವಹಿಸಿ ತಮ್ಮ ಹೊಸ ಉಪದೇಶಗಳ ಪ್ರಸಾರ ಹಾಗೂ ಜನಪ್ರಿಯತೆಗಾಗಿ ವಿಪುಲವಾಗಿ ಹಣ ಖರ್ಚುಮಾಡಿದರು. ಕರ್ಣಾಟಕದಾದ್ಯಂತ ಅನೇಕ ಬಾರಿ ಸಂಚರಿಸಿ ಸುತ್ತಮುತ್ತಣ ಪ್ರದೇಶಗಳ ವೀರಶೈವ ಧರ್ಮವನ್ನು ಭದ್ರವಾದ ನೆಲೆಗಟ್ಟಿನ ಮೇಲೆ ನಿಲ್ಲಿಸಿದರು. ಅಸಂಖ್ಯಾತ ಜನರು ಅವರಿಂದ ಮತಾಂತರಗೊಂಡು ಅವರು ಬೋಧಿಸಿದ ವೀರಶೈವ ಧರ್ಮ ಹಾಗೂ ಜೀವನ ವಿಧಾನಗಳನ್ನು ಕಲಿತು ಅವರ ಅನುಯಾಯಿಗಳಾಗಿ ಧರ್ಮ ಪ್ರಸಾರ ಮಾಡಿದರು.

ವೀರಶೈವ ಧರ್ಮ ಜನತೆಯ ಮನಸ್ಸಿನ ಮೇಲೆ ಬಲವಾಗಿ ಅಚ್ಚೊತ್ತಿತು. ಜನತೆಗೆ ಜೀವಭೂತವಾಗಿ ಸಂಬಂಧಿಸಿದ ವಿಷಯಗಳಲ್ಲಿ ಅವರೇ ಶ್ರದ್ಧೆ ವಹಿಸುವಂತೆ

ಮಾಡಿತು. ಹೀಗಾಗಿ ಬಸವರ ನಂತರವೂ ವೀರಶೈವ ಧರ್ಮ ನಾಡಿನ ಉದ್ದಗಲಕ್ಕೂ ಹರಡಿತು.

ಬಸವರು ವರ್ಣಾಶ್ರಮ ಧರ್ಮದ ತತ್ವವನ್ನು ತಿರಸ್ಕರಿಸಿದರು. ಜಾತಿಭೇದ, ಲಿಂಗಭೇದಗಳೆಂಬ ಭಿನ್ನತೆಗಳನ್ನು ತೊರೆದು ಎಲ್ಲರಿಗೂ ಲಿಂಗದೀಕ್ಷೆ ಕೊಟ್ಟು ಎಲ್ಲರನ್ನೂ ತಮ್ಮ ಹೊಸ ಸಮಾಜಕ್ಕೆ ಕರೆದುಕೊಂಡರು. ಆ ಸಮಾಜದ ಸೆರಗಿನಲ್ಲಿ ಪಂಡಿತರು, ಯೋಧರು, ವ್ಯಾಪಾರಿಗಳು, ಒಕ್ಕಲಮಕ್ಕಳು ಮುಂತಾದ ಹಿಂದೂಧರ್ಮಕ್ಕೆ ಸೇರಿದ ವಿವಿಧ ಹಂತದವರು ಕೂಡಿಕೊಂಡರು. ವರ್ಣಾಶ್ರಮದ ಎಲ್ಲೆಕಟ್ಟಿನ ಹೊರಗಿದ್ದ ಹರಿಜನರೂ, ಆದಿವಾಸಿಗಳೂ ವೀರಶೈವರಾದರು. ಅವರ ಪ್ರಮುಖ ಅನುಯಾಯಿಗಳಲ್ಲಿ ಅಗಸರಿದ್ದಾರೆ, ಅಂಬಿಗರಿದ್ದಾರೆ, ನೇಕಾರರಿದ್ದಾರೆ, ಅಸ್ಪೃಶ್ಯರೆನ್ನಿಸಿಕೊಳ್ಳುವ ಮೋಚಿ, ಮಾದಿಗರಿದ್ದಾರೆ.

ಬಸವರ ಸಮಾಜದಲ್ಲಿ ಹೆಂಗಸರೂ ವೀರಶೈವ ಧರ್ಮಾವಲಂಬಿಗಳಾಗುತ್ತಿದ್ದುದಲ್ಲದೆ ಗಂಡಸರೊಡನೆ ಸಂಪೂರ್ಣ ಸಮಾನತೆಯಿಂದ ಆಧ್ಯಾತ್ಮಿಕ ಜಿಜ್ಞಾಸೆಗಳಲ್ಲಿ ಭಾಗವಹಿಸುತ್ತಿದ್ದರು. ವೀರಶೈವ ಧರ್ಮ ಅನೇಕ ಮಹಿಮಾನ್ವಿತ ಸಂತರಿಗೂ, ಅನುಭವಿಗಳಿಗೂ ಜನ್ಮ ಕೊಟ್ಟಿದೆ. ಇವರಲ್ಲಿ ಹಲವರು ಹೆಂಗಸರೂ ಇದ್ದಾರೆ. ನೀಚವೆನಿಸಿಕೊಂಡಿದ್ದ ಕುಲಗಳಲ್ಲಿ ಜನಿಸಿ ಬಂದವರೂ ಇದ್ದಾರೆ.

ಬಸವರು ನಡೆಸುತ್ತಿದ್ದ ಆಧ್ಯಾತ್ಮಿಕ ಜಿಜ್ಞಾಸೆಗಳಿಗೆ ಅನುಭವಮಂಟಪವೆಂದು ಕರೆಯಲಾಗುತ್ತಿತ್ತು. ಆ ಸಂಸ್ಥೆಗಳಲ್ಲಿ ಧರ್ಮೇಚ್ಛುಗಳಿಗೆ ಧರ್ಮದ ಗೂಢ ಹಾಗೂ ಪವಿತ್ರ ಉಪದೇಶಗಳನ್ನು ನೀಡಿ ಅವರಿಗೆ ದೇವತ್ವದೊಡನೆ ಐಕ್ಯಮಾಡಿಸಲಾಗುತ್ತಿತ್ತು. ಶಿವ ಹಾಗೂ ನಂದಿಯರನ್ನು ಈ ಐಕ್ಯದ ಸಂಕೇತವೆಂದು ಪರಿಗಣಿಸಲಾಗಿದೆ. ಈ ಸಂಕೇತದ ಆಧಾರದ ಮೇಲೆಯೇ ಬಸವಣ್ಣನವರನ್ನು ನಂದಿಯ ಅವತಾರವೆಂದು ವೀರಶೈವರು ಮೊದಲಿನಿಂದಲೂ ನಂಬಿಕೆ ಇರಿಸಿಕೊಂಡಿದ್ದಾರೆ.

ಅನುಭವಮಂಟಪದಲ್ಲಿದ್ದ ಮಹಾನ್ ಅನುಭಾವಿಗಳು ತಮ್ಮ ಆಧ್ಯಾತ್ಮಿಕ ಹಾಗೂ ಅನುಭಾವಿಕ ಬರವಣಿಗೆಗಳಿಂದ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಕರ್ಣಾಟಕದ ಇತಿಹಾಸದಲ್ಲಿ ಅನುಭವಮಂಟಪದಂತಹ ಆಧ್ಯಾತ್ಮಿಕ ಜಿಜ್ಞಾಸೆಗಳು ಮಹತ್ವದ ಪಾತ್ರವನ್ನಾಡಿವೆ. ಇವನ್ನು ವೇದಕಾಲೀನ ಆಶ್ರಮಗಳೊಡನೆ ಹೋಲಿಸಿದರೆ ಔಚಿತ್ಯಪೂರ್ಣವಾಗುತ್ತದೆ. ಬಸವಣ್ಣನವರು ಕಲ್ಯಾಣಿಯ ಮಹಾಮಂತ್ರಿಯಾಗಿದ್ದರೂ ಅನುಭವಮಂಟಪದ ಕಾರ್ಯಕಲಾಪಗಳಲ್ಲಿ ಭಾಗವಹಿಸಿ, ಧರ್ಮೋತ್ಸಾಹಿಗಳಿಗೆ ಮಾರ್ಗದರ್ಶನ ಮಾಡುತ್ತಿದ್ದರೆಂಬುದು ನಿಜಕ್ಕೂ ಸ್ವಾರಸ್ಯದ ಸಂಗತಿ.

ಈ ಆಧ್ಯಾತ್ಮಿಕ ಪಂಥದ ಜನಾನುರಾಗಕ್ಕೆ ಕಾರಣವಾದ ಇನ್ನೊಂದು ಸಂಗತಿಯೆಂದರೆ ಅದರ ಭಾಷಾಧೋರಣೆ. ಅಲ್ಲಿ ಉಚ್ಚ ಮೌಲ್ಯದ ತತ್ವೋಪದೇಶಗಳನ್ನು ಸಹ ಪ್ರಾದೇಶಿಕ ಭಾಷೆಗಳಲ್ಲಿ ಅಂದರೆ ಕನ್ನಡ ಹಾಗೂ ಅಲ್ಲಲ್ಲಿ ತೆಲುಗು ಭಾಷೆಗಳಲ್ಲಿ ಮಾಡಲಾಗುತ್ತಿತ್ತು.

ಬಸವರ, ಅವರ ಸಮಕಾಲೀನರ ಹಾಗೂ ಅನುಯಾಯಿಗಳ ಹೇಳಿಕೆಗಳು ವಚನಗಳೆಂಬ ವಿಶೇಷ ಸಾಮರ್ಥ್ಯೆಯದಿಂದ ಕನ್ನಡ ಸಾಹಿತ್ಯದಲ್ಲಿ ಪ್ರಮುಖ ಸ್ಥಾನವನ್ನು ಆಕ್ರಮಿಸಿವೆ.

ಈ ವಚನಗಳು ಗದ್ಯ ಶೈಲಿಯಲ್ಲಿದ್ದರೂ ಅವಕ್ಕೆ ಪದ್ಯದ ಮಾಧುರಿ ಇದೆ. ಆ ಹಿಂದೆ ಬಳಕೆಯಲ್ಲಿಲ್ಲದ ಹೊಸ ಧಾಟಿಯಲ್ಲಿ ಈ ವಚನಗಳ ರಚನೆಯಾಗಿದೆ. ಇವನ್ನು ಉತ್ತರ ಭಾರತದ ಕಬೀರ ಹಾಗೂ ನಾನಕರ ಬರವಣಿಗೆಗಳಿಗೆ ಹೋಲಿಸಬಹುದು.

ವಿಸ್ತೃತ ಸಂಸ್ಕೃತಮಯ ಪ್ರಾಚೀನ ಕನ್ನಡ ಕೃತಿಗಳಿಗೆ ಹೋಲಿಸಿದರೆ ವಚನಗಳ ಭಾಷೆ ಸ್ವಚ್ಛವೂ, ಸರಳವೂ, ನೇರವೂ ಆಗಿದೆಯೆನ್ನಬಹುದು. ಉಚ್ಚವೀಲಿ, ನೀಚ ವಿರಲಿ ಈ ವಚನಗಳು ಎಲ್ಲರಿಗೂ ನೇರವಾಗಿ ಮೆಚ್ಚಿಗೆಯಾಗುತ್ತಿದ್ದವು. ಗಂಡಸರೂ, ಹೆಂಗಸರೂ ಇವನ್ನು ಬಹು ಭಕ್ತಿಯಿಂದಲೂ, ಆನಂದದಿಂದಲೂ ಪಠಿಸುತ್ತಿದ್ದರು. ಕೆಲ ವರ್ಷಗಳ ಹಿಂದೆ ಈ ವಚನಗಳನ್ನು ಅಭ್ಯಸಿಸುವ ಭಾಗ್ಯ ಲಭಿಸಿತ್ತು. ಕರ್ಣಾಟಕದ ವಿಶಿಷ್ಟಾಂಶಗಳಲ್ಲಿ ಒಂದಾದ ಈ ಬಗೆಯ ಧಾರ್ಮಿಕ ಸಾಹಿತ್ಯ ನೈತಿಕವಾಗಿಯೂ, ಆಧ್ಯಾತ್ಮಿಕವಾಗಿಯೂ ಉನ್ನತಮಟ್ಟವಿದೆಯೆಂದು ನಾನು ಅಭಿಪ್ರಾಯಪಡುತ್ತೇನೆ.

ಉಪನಿಷತ್ತಿನ ವಿಚಾರಗಳು ಸಂಸ್ಕೃತದಲ್ಲಿದ್ದ ಕಾರಣ ಅವು ಸಾಮಾನ್ಯ ಮನುಷ್ಯರಿಗೆ ಅಲಭ್ಯವಾಗಿದ್ದುವು. ಎಲ್ಲೋ ಕೆಲವು ಪಂಡಿತರು ಮಾತ್ರ ಅವನ್ನು ಕಲಿತು ಅರ್ಥ ಮಾಡಿಕೊಳ್ಳುತ್ತಿದ್ದರು. ಆದರೆ ವಚನಗಳ ಬಗೆ ಹೀಗಾಗಲಿಲ್ಲ. ಜನಭಾಷೆಯಲ್ಲಿದ್ದುದರಿಂದ ಇವು ತೀರಾ ಸಾಮಾನ್ಯವಾದವರಿಗೂ ಎಟುಕುವಂತಾಯಿತು.

ವಚನಗಳಲ್ಲೂ, ಉಪನಿಷತ್ತುಗಳಲ್ಲೂ ಗಹನವಾದ ವಿಚಾರಗಳು ವ್ಯಕ್ತವಾಗಿವೆ. ಆದರೆ ಅನೇಕ ವೇಳೆ ನೇರವೂ, ಸರಳವೂ ಆದ ವಚನಗಳು ಉಪನಿಷದ್ವಾಕ್ಯಗಳಿಗಿಂತ ಹೆಚ್ಚು ಆತ್ಮೀಯವೂ, ಮನೋಜ್ಞವೂ ಆಗುತ್ತವೆಂದು ನನಗನಿಸುತ್ತದೆ. ಉದಾಹರಣೆಗೆ "ಸತ್ ಏಕಂ ವಿಪ್ರಾ ಬಹುದಾ ವದಂತಿ" ಎಂಬ ಉಪನಿಷತ್ತಿನ ವಿಚಾರವೇ ವಚನದ ದೇವನೊಬ್ಬ ನಾಮ ಹಲವು ಎಂಬ ಮಾತಿನಲ್ಲಿ ಹೆಚ್ಚು ಸರಳವಾಗಿಯೂ, ಪರಿಣಾಮಕಾರಿಯಾಗಿಯೂ ಪ್ರಕಟವಾಗಿದೆ. ಎಲ್ಲರೂ ಬಲ್ಲ "ಸತ್ಯಂ ವದ, ಧರ್ಮಂ ಚರ" ಎಂಬ ಉಪನಿಷತ್ತಿನ ಎಚ್ಚರಿಕೆಯ ನುಡಿಯೇ ಬಸವಣ್ಣನವರ "ಕಳಬೇಡ ಕೊಲಬೇಡ ಹುಸಿಯ ನುಡಿಯಲುಬೇಡ" ಎಂಬ ವಚನದಲ್ಲಿ ಅರ್ಥವತ್ತವಾಗಿ ಮೂಡಿ ಬಂದಿದೆ.

ದೇವರು ಪ್ರತಿಯೊಬ್ಬನ ಹೃದಯದಲ್ಲೂ ಇದ್ದಾನೆ. ಅವನನ್ನು ಅರಸಿಕೊಂಡು ಯಾರೂ ದೇವಾಲಯಗಳಿಗೆ ಹೋಗಬೇಕಾಗಿಲ್ಲವೆಂದು ಬಸವರು ಎತ್ತಿ ತೋರಿಸಿಕೊಟ್ಟರು. ಅವರ ಪ್ರಕಾರ ದೇಗುಲಗಳನ್ನು ಕಟ್ಟಬಲ್ಲ ಆರ್ಥಿಕ ಚೈತನ್ಯವುಳ್ಳವರು ಕಟ್ಟಬಹುದಿತ್ತು. ಬಡವರಿಗೆ ಅವರ ಕೈಕಾಲುಗಳೇ ಕಂಬಗಳು, ಹೃದಯವೇ ಪೂಜಾಂಗಣ, ತಲೆಯೇ ಸುವರ್ಣ ಕಲಶ. ಕಾಲಾಂತರದಲ್ಲಿ ಕಲ್ಲುಮಣ್ಣುಗಳ ಗುಡಿ ಗೋಪುರಗಳು ಉರುಳಿ ಮಣ್ಣುಗೂಡಬಹುದು. ಆದರೆ ದೇವದೇವನ ಈ ಜೀವಂತ ದೇವಾಲಯ ಕೊನೆಯವರೆಗೂ ಉಳಿಯುತ್ತದೆ.

ವ್ಯಕ್ತಿಯ ದೇಹವೇ ದೇಗುಲವೆಂಬ ಘನತತ್ವವನ್ನು ಎಷ್ಟೋ ಜನ ಸಂತರು ವ್ಯಕ್ತಮಾಡಿದ್ದರೂ ಬಸವರಷ್ಟು ಚಿತ್ರಮಯವಾಗಿಯೂ ಹಾಗೂ ಮನೋಜ್ಞವಾಗಿಯೂ ಅವರು ಯಾರೂ ಹೇಳಿಲ್ಲ. ಇಂದಿಗೂ ಭಕ್ತಜನ ವಚನಗಳನ್ನು ಅಪಾರ ಪ್ರೀತಿ ಭಕ್ತಿಗಳಿಂದ ಹಾಡುತ್ತಾರೆ. ನಮ್ಮ ಜನತೆಯ ನೈತಿಕ ಹಾಗೂ ಸಾಮಾಜಿಕ ಜೀವನಕ್ಕೆ ಔನ್ನತ್ಯ ಒದಗಿಸುವುದರಲ್ಲಿ ಈ ವಚನಗಳು ಸಶಕ್ತ ಸಾಧನಗಳಾಗಿವೆ.

ರಾಷ್ಟ್ರಪಿತ ಬಾಪೂಜಿ ಈ ಶತಮಾನದಲ್ಲಿ ಮಾಡಿದುದನ್ನು ಮುಂದಾಲೋಚಿಸಿ ಬಸವರು ಅಹಿಂಸೆಯ ತತ್ವವನ್ನು ಹುರುಪಿನಿಂದ ಬೋಧಿಸಿದರು. ಮೊದಲೇ ಹೇಳಿದಂತೆ ಜಾತಿ ಪದ್ಧತಿಗಳನ್ನು ತಿರಸ್ಕರಿಸಿ ಅಸ್ಪೃಶ್ಯತೆಯ ಅವಮಾನಕರ ವರ್ತನೆಗಳನ್ನು ದೂರೀ ಕರಿಸಲು ಸಾಧ್ಯವಾದುದನ್ನೆಲ್ಲ ಮಾಡಿದರು. ಉಚ್ಚನೀಚರೆಂಬ ಭೇದ ಭಾವನೆಗಳು ಬಲವಾಗಿ ಬೇರೂರಿದ್ದ ಆ ಕಾಲದಲ್ಲಿ ಬಸವರು ಕೈಗೊಂಡ ಸಮನ್ವಯ ಕರಣಕಾರ್ಯ ಸುಲಭವಾದುದಾಗಿರಲಿಲ್ಲ. ಆದರೂ ಬಸವರು ತಪ್ಪುಗೈಯ್ಯುತ್ತಿದ್ದ ಮಾನವತೆಯ ಲೋಪದೋಷಗಳನ್ನು ತಿದ್ದಿ, ವಿಶ್ವಬಂಧುತ್ವ ಹಾಗೂ ಸಮಾನತೆಗಳ ಹೆದ್ದಾರಿಯಲ್ಲಿ ಜನತೆಯನ್ನು ನಡೆಸಿದರು. ಈ ಕಾರಣದಿಂದಲೇ ಇಂದಿಗೂ ೬೦ ಲಕ್ಷ ಜನ ವೀರಶೈವರೂ, ಅಷ್ಟೇ ಅಥವಾ ಅದಕ್ಕೂ ಹೆಚ್ಚಿನ ಸಂಖ್ಯೆಯ ಇತರ ಮತದವರೂ ಬಸವರನ್ನು ದೊಡ್ಡ ಸಮಾಜ ಸುಧಾರಕರೆಂದು ಗೌರವಿಸುತ್ತಾರೆ. ತಮ್ಮ ಧರ್ಮ ಸಂಸ್ಥಾಪನೆ ಪ್ರಸಾರ ಗಳಷ್ಟೇ ಸಮಾಜ ಸುಧಾರಣೆಗಳಿಂದ ಈ ಮಹಾಪ್ರವಾದಿ ಮಾನವತೆಯನ್ನು ಉದ್ಧರಿಸಿ ದ್ದಾರೆಂದು ನಾನು ನಂಬಿದ್ದೇನೆ.

ಇಷ್ಟೇ ಅಲ್ಲದೆ ಬಸವರು ದೈಹಿಕಶ್ರಮಕ್ಕೆ ಅಪಾರ ಮಹತ್ವ ಕೊಡುತ್ತಿದ್ದರು. ಅವರ ಪ್ರಕಾರ ದೈಹಿಕಶ್ರಮ ಅಥವಾ ಕಾರ್ಯವು ಕೈಲಾಸಕ್ಕೆ ಸಮವಾಗಿತ್ತು. ಅವರು ಸಂಪೂರ್ಣ ಐಹಿಕ ತ್ಯಾಗದಲ್ಲಿ ನಂಬಿಕೆ ಇಟ್ಟಿರಲಿಲ್ಲ. ಪ್ರತಿಯೊಬ್ಬನೂ ತನ್ನ ಕರ್ತವ್ಯ ವನ್ನು ಬಿಡದೆ ಮಾಡಬೇಕು. ಆದರೆ ಭಕ್ತಿಭಾವದಿಂದ ಮಾಡಬೇಕೆಂದು ಹೇಳುತ್ತಿದ್ದರು. ಎಲ್ಲ ಕಸುಬುಗಳೂ ಒಂದೇ, ಒಂದಕ್ಕೊಂದು ಸಮಾನ ಎಂದು ಬೋಧಿಸಿ ಕರ್ಮಕ್ಕೆ ಪಾವಿತ್ರತೆ ತಂದುಕೊಟ್ಟರು. ಜಂಗಮರು ಸಹ ಬೇಡಬಾರದು, ತಮ್ಮ ಅನ್ನವನ್ನು ತಾವೇ ಸಂಪಾದಿಸಿಕೊಂಡು ಜಂಗಮರಾಗಿರಬೇಕು ಎಂದೂ ಅವರು ಹೇಳಿದ್ದರು.

ಜಗತ್ತಿನ ಎಲ್ಲ ಮಹಾನ್ ಧರ್ಮಗಳೂ ಮಾನವನ ಬದುಕಿಗಾಗಿ ಉಚ್ಚನೈತಿಕ ಹಾಗೂ ಆಧ್ಯಾತ್ಮಿಕ ತತ್ವಗಳನ್ನು ನಿಯಮಿಸುತ್ತವೆ. ಅಂಥವುಗಳಲ್ಲಿ ವೀರಶೈವ ಧರ್ಮವೂ ಒಂದಾಗಿರುತ್ತದೆ. ಕೇವಲ ಕನ್ನಡ ಮತ್ತು ತೆಲುಗುಗಳಲ್ಲಿ ಮಾತ್ರ ಕಾಣಸಿಗುವ ವೀರಶೈವ ಸಾಹಿತ್ಯ ಹಿಂದಿ ಹಾಗೂ ಇಂಗ್ಲೀಷ್ ಭಾಷೆಗಳಿಗೆ ಅನುವಾದಗೊಳ್ಳಬೇಕು. ಸುಸಂಘಟಿತ ರೀತಿಯಲ್ಲಿ ಅವುಗಳ ಅನುವಾದ ಹಾಗೂ ಪ್ರಕಟನೆಗಳು ಆದರೆ ಕನ್ನಡ, ತೆಲುಗು ಭಾಷೆಗಳಿಗೆ ಹೊರತಾದವರಿಗೂ ಅವು ಸ್ಫೂರ್ತಿದಾಯಕವಾಗುವುದರಲ್ಲಿ ಸಂದೇಹವಿಲ್ಲ. ಈ ಶ್ರೀಮಂತ ಸಾಹಿತ್ಯ ಜಗತ್ತಿನ ಈ ಕೊನೆಯಿಂದ ಆ ಕೊನೆಯ ವರೆಗೂ ಪ್ರಸಾರವಾಗಲಿ.

## ಮುರುಳು ಸಿದ್ಧಾಂತ—ಪುಟ ೬೮

ಲೇಖಕ: ಶ್ರೀಶಿವ ಶ್ರೀಶೈಲ ಎಂಬುವವರು. ಇವರು ತಮ್ಮ ಲೇಖನದ ಅಂತ್ಯದಲ್ಲಿ ಕೆಳಗೆ ಬರೆದ ಪದ್ಯವನ್ನು ಬರೆದಿದ್ದಾರೆ—

ಬೆಳಗು ಪಂಚಾಚಾರ್ಯ ತತ್ವವೆ ।
ಬೆಳಗು ಬಸವನ ಭಕ್ತಿತತ್ವವೆ ।
ಬೆಳಗು ವಿರತರ ಶೂನ್ಯತತ್ವವೆ ॥
ಬೆಳಗು ಭಕ್ತರ ವಂಶದೀಪವೆ ।
ಬೆಳಗು ದ್ವೇಷಾಸೂಯೆಗಳ ಕಡುಕತ್ತಲೆಯ ಕಳೆದು ॥

## ವೀರಭದ್ರದೇವರ ಪುರಾಣ

(ಭಾಮಿನಿ ಷಟ್ಪದಿ)

ನಂದಿನಾಥ ಶಿಲಾದ ಋಷಿಯ ।
ಕಂದ ಬಸವ ನಿಮ್ಮ ಮಹಿಮಾ ।
ನಂದವನು ಪೊಗಳಲಿಕೆ ಫಣಿರಾಜಂಗೆ ವರಿವರಿದು ॥

ತಂದೆ ನಿಮ್ಮಯ ಕೃಪೆಗಳಿಂದಲಿ ।
ಇಂದುಧರಸುತ ವೀರಭದ್ರನ ।
ಛಂದದಾ ಪೌರಾಣ ರಚಿಸುವೆ ವೃಷಭ ಸಲುಹೆನ್ನ ॥

ಪುರಾಣವು ಚೆನ್ನಾಗಿದೆ. ಕವಿಯ ಹೆಸರೂ, ಕಾಲವೂ ಗೊತ್ತಾಗಿರುವುದಿಲ್ಲ.

# ಇಪ್ಪತ್ತೇಳನೆಯ ಪ್ರಕರಣ

## ಶ್ರೀ ಬಸವಣ್ಣನವರೂ ಆಂಧ್ರಕವಿಗಳ ಕಾಣಿಕೆಯೂ

ಶ್ರೀ ಬಸವೇಶ್ವರರು ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣಪಟ್ಟಣದೊಳಗೆ ಎಬ್ಬಿಸಿದ ಧಾರ್ಮಿಕ ವಿಪ್ಲವವು ಕೇವಲ ಕನ್ನಡ ಸಾಹಿತ್ಯದ ಮೇಲೆ ಮಾತ್ರ ಪರಿಣಾಮ ಕಾರಿಯಾಗಿರದೆ ಆಂಧ್ರವಾಙ್ಮಯದ ಮೇಲೆಯೂ ಸಹ ಪ್ರಚಂಡತರವಾದ ಪರಿಣಾಮ ವನ್ನುಂಟುಮಾಡಿತು. ಅದರಿಂದುಂಟಾದ ವಿಚಾರ ಕ್ರಾಂತಿಯ ಪರಿಣಾಮವಾಗಿ ೧೨ನೆಯ ಶತಮಾನದಿಂದ ತೆಲುಗು ಸಾಹಿತ್ಯವು ಹೊಸದೊಂದು ಮಾರ್ಗವನ್ನೇ ಹಿಡಿಯಿತು. ರಾಷ್ಟ್ರೀಯ ಮತ್ತು ಧಾರ್ಮಿಕ ಕವಿತಾ ನಿರ್ಮಾಣಕ್ಕೆ ಕಾರಣವಾಯಿತು. ಬಸವಣ್ಣನವರ ಕಾಲದಿಂದ ಆಧುನಿಕ ಯುಗದ ಅನೇಕ ಕವಿಗಳು ಮತ್ತು ಪಂಡಿತರು ಬಸವಣ್ಣನವರ ಬಗ್ಗೆ ತಮ್ಮ ತಮ್ಮ ಕೃತಿಗಳಲ್ಲಿ ಮಹತ್ತರವಾದ ಗೌರವವನ್ನು ಶ್ರೀ ಬಸವಣ್ಣನವರಿಗೆ ವಿವಿಧ ರೀತಿಯಿಂದ ಸಲ್ಲಿಸಿರುವರು. ಅವರಲ್ಲಿ ಕೆಲವು ಮುಖ್ಯ ಕವಿಗಳ ಪರಿಚಯವನ್ನು ಇಲ್ಲಿ ಕೊಡಲಾಗುವುದು.

### ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯರು

ಇವರು ಬಸವಣ್ಣನವರ ಸಮಕಾಲದಲ್ಲಿದ್ದವರು. ಶಿವನು ವೀರಶೈವದ ಧರ್ಮೋದ್ಧಾರಕ್ಕಾಗಿ ನಂದೀಶ್ವರನನ್ನು ಕನ್ನಡ ನಾಡಿನಲ್ಲಿ ಅವತರಿಸಲು ಕಳುಹಿಸುವುದಕ್ಕೆ ಮುಂಚೆ ಆತನಿಗೆ ಸಹಾಯಕನಾಗಿರಲು ಓರ್ವ ಗಣಾಧಿಪನನ್ನು ಪಂಡಿತಾರಾಧ್ಯ ರೂಪದಿಂದ ತೆಲುಗು ದೇಶದಲ್ಲಿ ಅವತರಿಸಲು ಕಳುಹಿದನೆಂದು ಪಾಲ್ಕುರಿಕೆಯ ಸೋಮನಾರಾಧ್ಯರ ಹೇಳಿಕೆಯು. ಗೋದಾವರಿ ಜಿಲ್ಲೆಯಲ್ಲಿರುವ ದ್ರಾಕ್ಷಾರಾಮ ಭೀಮೇಶ್ವರದ ದೇವಾಲಯದ ಸ್ಥಾನಾಧಿಪತಿಯಾದ ಭೀಮಣ್ಣಪಂಡಿತನೆಂಬ ಶೈವ ಬ್ರಾಹ್ಮಣನು ಪಂಡಿತಾರಾಧ್ಯರ ತಂದೆಯು. ಇವರ ತಾಯಿಯ ಹೆಸರು ಗೌರಾಂಬೆ. ಶ್ರೀಶೈಲ ಮಲ್ಲಿಕಾರ್ಜುನನ ವರದಿಂದ ಹುಟ್ಟಿದ ಇವರಿಗೆ ಮಲ್ಲಿಕಾರ್ಜುನನೆಂಬ ಹೆಸರನ್ನಿಟ್ಟರು. ಇವರು ಪ್ರೌಢವಯಸ್ಕರಾದ ಮೇಲೆ ಅವಾಂತರಯ್ಯನ ಶಿಷ್ಯನಾದ ಕೋಟಿಪಲ್ಲಿ ಆರಾಧ್ಯರಿಂದ ಲಿಂಗಧಾರಣ ದೀಕ್ಷೆಯನ್ನು ಪಡೆದರು. ಶೈವ ಬ್ರಾಹ್ಮಣರು ಇವರ ಲಿಂಗಧಾರಣ ಪದ್ಧತಿಯನ್ನು ಆಕ್ಷೇಪಿಸಲು ಅವರನ್ನು ವಾದದಲ್ಲಿ ಜಯಿಸಿ ವೀರಮಾಹೇಶ್ವರಾಚಾರ ಮಾರ್ಗವನ್ನು ತಿಳುಹಿಸುವ "ಶಿವತತ್ವಸಾರ"ವೆಂಬುವ ಕೃತಿಯನ್ನು ರಚಿಸಿ ತಾವು ನುಡಿದಂತೆ ನಡೆದುಕೊಳ್ಳುತ್ತ ಬಂದರು. ಇವರು ಪೋರಂಡ್ಲ ಸೂರಯ್ಯ ಮತ್ತು ಚೆಲದೇವವೇನನಾರಾಧ್ಯರ ಮುಖದಿಂದ ಬಸವೇಶ್ವರನ ಮತ್ತು ಕಲ್ಯಾಣದ ಶರಣರ ಮಹಿಮಾತಿಶಯಗಳನ್ನು ಅರಿತುಕೊಂಡು ಬಸವೇಶ್ವರನ ದರ್ಶನಾರ್ಥವಾಗಿ ಕಲ್ಯಾಣಪಟ್ಟಣಕ್ಕೆ ಪ್ರಯಾಣ ಬೆಳೆಯಿಸಿದರು. ಬಸವಣ್ಣನವರ ವಚನಗಳ ಸಾರವನ್ನು ಗ್ರಹಿಸಲು ಕನ್ನಡ ಭಾಷೆಯನ್ನು ಕಲಿತುಕೊಂಡರು. ಬಸವಣ್ಣನು ಇವರಿಗೆ ಕಳುಹಿಸಿಕೊಟ್ಟ ವಿಭೂತಿಯ ಮಹಿಮೆಯಿಂದ ಈತನಿಗೆ ಕನ್ನಡ ಭಾಷೆಯಲ್ಲಿ ಜ್ಞಾನವಾಯಿತೆಂದು ಸೋಮನಾರಾಧ್ಯರ ಹೇಳಿಕೆ. ಇವರು ಚಂದವೋಲಿನ ವೆಲನಾಟ

ಚೋಳನ ಆಸ್ಥಾನದಲ್ಲಿ ಬೌದ್ಧ, ಜೈನ, ಚಾರ್ವಾಕ, ಕರ್ಮವಾದ ಮುಂತಾದ ಮತಗಳ ಪಂಡಿತರನ್ನು ವಾದದಲ್ಲಿ ಜಯಿಸಿ ವೀರಶೈವ ಧರ್ಮದ ಶ್ರೇಷ್ಠತೆಯನ್ನು ಪ್ರತಿಷ್ಠಿಸಿ ಅಮರಾವತಿಗೆ ಬಂದರು. ಅಲ್ಲಿಂದ ಕಲ್ಯಾಣಾಭಿಮುಖವಾಗಿ ಹೊರಟು ಸಿಡುಗುಡು ಮುಲು, ಪಾನುಗಲ್ಲು ಮುಂತಾದ ಗ್ರಾಮಗಳಲ್ಲಿ ಶಿಷ್ಯಕೋಟಿಯನ್ನು ಉದ್ಧರಿಸುತ್ತ ವನಿಪುರಕ್ಕೆ ಬಂದು ಅಲ್ಲಿ ಶಂಕರಯ್ಯನೆಂಬ ಭಕ್ತನ ಸಪರ್ಯವನ್ನು ಸ್ವೀಕರಿಸಿ ಕಲ್ಯಾಣಕ್ಕೆ ಹೊರಟರು. ಮಾರ್ಗದಲ್ಲಿ ಅದಕ್ಕೆ ಎಂಟು ದಿನಗಳ ಪೂರ್ವದಲ್ಲಿ ಬಸವೇಶ್ವರನು ಕಪ್ಪಡಿಯ ಸಂಗಮೇಶ್ವರನಲ್ಲಿ ಐಕ್ಯವಾದನೆಂಬ ಸುದ್ದಿಯನ್ನು ಕಲ್ಯಾಣದಿಂದ ಬಂದ ಜಂಗಮರ ಮುಖದಿಂದ ಕೇಳಿ ಬಹಳವಾಗಿ ಪ್ರಳಾಪಿಸಿ ಶ್ರೀಶೈಲ ಪ್ರಾಂತಕ್ಕೆ ಹೋದರು. ತಾವು ವೆಲ್ಲಟೂರಿನಲ್ಲಿದ್ದು ತಮ್ಮ ಶಿಷ್ಯನಾದ ದೋನಮಯ್ಯನನ್ನು ಶಿವರಾತ್ರಿ ವ್ರತಾಚರಣೆ ಗಾಗಿ ಶ್ರೀಶೈಲಕ್ಕೆ ಕಳುಹಿಸಿದರು. ಆತನು ಗಿರಿಪ್ರದಕ್ಷಿಣೆಯನ್ನು ಮಾಡಿಕೊಂಡು ಬಂದನಂತರ ಬಸವೇಶ್ವರನು ಹೋದಮೇಲೆ ತಾವಿನ್ನು ಭೂಮಿಯಲ್ಲಿರಲಾಗದೆಂದು ಸಕುಟುಂಬರಾಗಿ ಲಿಂಗೈಕ್ಯರಾಗುವರು. ಇವರ ಬಗ್ಗೆ ವಿಶೇಷ ಮಾಹಿತಿಗಳು ಚಂದ ವೋಲು ಕೈಫಿಯತ್ತು (Local Records) V. D. 39 ನಲ್ಲಿ ದೊರೆಯುತ್ತವೆ.

ಇವರ ವಿಷಯಕ್ಕೆ ಪಾಲ್ಕುರಿಕೆಯ ಸೋಮನಾರಾಧ್ಯರು ಪಂಡಿತಾರಾಧ್ಯ ಚರಿತ್ರೆ ಎಂಬುವ ದ್ವಿಪದ ಕಾವ್ಯವನ್ನೂ, ೧೫ನೇ ಶತಮಾನದಲ್ಲಿ ಕವಿಸಾರ್ವಭೌಮನಾದ ಶ್ರೀನಾಥನು ಚಂಪೂಕಾವ್ಯವನ್ನೂ, ಗುರುರಾಜನ ಪಂಡಿತಾರಾಧ್ಯ ಚರಿತ್ರೆ ಸಂಸ್ಕೃತ ಕಾವ್ಯವನ್ನೂ, ನೀಲಕಂಠ ಕವಿಯು ಆರಾಧ್ಯಚರಿತ್ರೆಯನ್ನು ಸಂಸ್ಕೃತದಲ್ಲಿಯೂ, ಸಿದ್ಧ ನಂಜೇಶನು ಗುರುರಾಜ ಚಾರಿತ್ರವನ್ನು ಕನ್ನಡದಲ್ಲಿಯೂ ಬರೆದಿರುತ್ತಾರೆ. ಮತ್ತು ರಾಜ ಲಿಂಗಸೂರಿ ಎಂಬ ಆರಾಧ್ಯಬ್ರಾಹ್ಮಣರು "ಚಾರಿತ್ರ ದೀಕ್ಷಾಪ್ರಕರಣಂ" ಎಂಬುವ ಸಂಸ್ಕೃತ ಗ್ರಂಥವನ್ನು ಬರೆದಿರುವರು. ಶ್ರೀ ಪಂಡಿತಾರಾಧ್ಯರಿಗೆ ಲೋಕಾರಾಧ್ಯ, ತ್ರಿಲೋಕಗುರು, ಶ್ರೀ ಶೈವಸಮಯದೇಶಿಕ ಚಕ್ರವರ್ತಿ, ಶೈವಧರ್ಮೋತ್ತಮಾಚಾರ್ಯ, ದೇಶಿಕೋತ್ತಮ, ಮುಂತಾದ ಬಿರುದುಗಳಿದ್ದವೆಂದು ಬೇರೆ ಬೇರೆ ಗ್ರಂಥಗಳಿಂದ ತಿಳಿದುಬಂದಿದೆ. ಆರಾಧ್ಯ ಬ್ರಾಹ್ಮಣರು ಇವರನ್ನು ಕಲಿಯುಗದ ದೇಶಿಕರನ್ನಾಗಿಯೂ, ಪೀಠಾಚಾರ್ಯರನ್ನಾಗಿಯೂ, ತಮ್ಮ ಮೂಲಪುರುಷರನ್ನಾಗಿಯೂ ಭಾವಿಸಿರುವರು. ಕನ್ನಡ ದೇಶದ ವೀರಶೈವರು ಇವರನ್ನು ಪಂಚಾಚಾರ್ಯರಲ್ಲೊಬ್ಬರನ್ನಾಗಿ ಗಣಿಸುತ್ತಲಿದ್ದಾರೆ. ಇತ್ತೀಚೆಗೆ ಕೆಲವರು ಇದನ್ನು ಅಲ್ಲಗಳೆಯುತ್ತಾರೆ. ಇಬ್ಬರು ಪಂಡಿತಾರಾಧ್ಯರೆಂಬುವುದಕ್ಕೆ ಆಧಾರಬೇಕು.

ಮೇಲೆ ಬಸವಣ್ಣನವರ ಸಮಕಾಲೀನರೆಂದು ಬರೆಯಲಾಗಿದೆ. ಬಿಜ್ಜಳ ೧೧೬೦–೧೧೬೭, ಬಸವೇಶ್ವರ ೧೧೩೨–೧೧೬೮, ವೆಲನಾಟ ಚೋಳ ೧೧೬೩–೧೧೮೦, ಉದಯಾ ವನೀಶ ೧೧೬೨, ಬುದ್ಧರಾಜ ೧೧೭೧ ಮೊದಲಾದವರು ಶ್ರೀ ಪಂಡಿತಾರಾಧ್ಯರ ಸಮ ಕಾಲದವರು. ಇವರು ವೃದ್ಧಾಪ್ಯದಲ್ಲಿ ಲಿಂಗೈಕ್ಯರಾದರೆಂದು ಸೋಮನಾಥರ ಗ್ರಂಥಗಳಿಂದ ತಿಳಿದುಬರುತ್ತದೆ. ಇವರು ೧೧೨೦ರಲ್ಲಿ ಜನಿಸಿ ೧೧೭೦ರ ಪ್ರಾರಂಭದಲ್ಲಿ ಲಿಂಗೈಕ್ಯ ರಾಗಿರಬಹುದೆಂದು ತಿಳಿಯಲವಕಾಶವಿರುತ್ತದೆ.

**ಇವರ ಗ್ರಂಥಗಳು—**

ನನ್ನಯ್ಯ ಭಟ್ಟಾರಕನನ್ನು ಬಿಟ್ಟರೆ ಈತನೇ ತೆಲುಗು ಸಾಹಿತ್ಯದಲ್ಲಿ ಪ್ರಥಮ ಕವಿಯೆಂದು ಹೇಳಬಹುದು. ಈತನು ತೆಲುಗು ನಾಡಿನಲ್ಲಿ ಜಾತೀಯ ಕವಿತೆಯನ್ನು

ನಿರ್ಮಿಸಿ ತನ್ನ ಅನಂತರದ ಕವಿಗಳಿಗೆ ಮಾರ್ಗದರ್ಶಕನಾಗಿರುವನು. ಆಂಧ್ರಲಕ್ಷಣ ಗ್ರಂಥಗಳಲ್ಲಿ ಈತನ ಅನೇಕ ಪದ್ಯಗಳು ಉದಾಹರಿಸಲ್ಪಟ್ಟಿವೆ. "ವಿವರಿಂಪ ಶೇಷು ನಿನೇಹಿನಾಲುಕಲು" (ಶಿವಕವಿ ಮಲ್ಲಯ್ಯ) ಜಿಹ್ವರು ಸರಿಯೇ ಎಂದು ಸೋಮನಾಥನು ಈತನ ಕವಿತಾ ಪ್ರಭೆಯನ್ನು ಕೊಂಡಾಡಿರುವನು. ಸೋಮನಾಥನು ಉಲ್ಲೇಖಿಸಿದ ಪ್ರಕಾರ ಪಂಡಿತಾರಾಧ್ಯರು ಕೆಳಗೆ ಬರೆದ ಗ್ರಂಥಗಳನ್ನು ಬರೆದಂತೆ ತೋರುತ್ತದೆ—

(೧) ಶಿವತತ್ವಸಾರಮು, (೨) ಲಿಂಗೋದ್ಭವದೇವಗದ್ಯ, (೩) ರುದ್ರಮಹಿಮಾ, (೪) ಗಣಸಹಸ್ರ ನಾಮಾವಳಿ, (೫) ಅಮರೇಶ್ವರಾಷ್ಟಕ, (೬) ಪರ್ವತ ವರ್ಣನೆ, (೭) ಪಂಚಗದ್ಯಮುಲು, (೮) ಸಂಸಾರ ಮಾಯಾಸ್ತವನ, (೯) ಶಂಕರ ಗೀತೆ, (೧೦) ಆನಂದ ಗೀತೆ, (೧೧) ದಕ್ಷಾಧ್ವರ, (೧೨) ವ್ಯಾಸಾಷ್ಟಕ, (೧೩) ಗಣಾಡಂಬರ, (೧೪) ಶೌರಭ, (೧೫) ತುಮ್ಮೆದ ಪದಮುಲು, (೧೬) ಪ್ರಭಾತ ಪದಮುಲು, (೧೭) ಪರ್ವತ ಪದಮುಲು, (೧೮) ಶಂಕರ ಪದಮುಲು, (೧೯) ಆನಂದ ಪದಮುಲು, (೨೦) ನಿವಾಳೀ ಪದಮುಲು, (೨೧) ವಾಲೇಶು ಪದಮುಲು, (೨೨) ಗೊಬ್ಬಿ ಪದಮುಲು, (೨೩) ವೆನ್ನೆಲಿ ಪದಮುಲು, (೨೪) ಸಾಂಬವರ್ಣನ, (೨೫) ಗಣವರ್ಣನ. ಈ ೨೫ ಗ್ರಂಥಗಳಲ್ಲದೆ ಶತಕಗಳು, ದಂಡಕಗಳು, ದೀಪಕಳಿಕ, ಮಹಾನಾಟಕೋದಾಹರಣ ಮುಂತಾದುವುಗಳನ್ನು ಬರೆದಂತೆ ಕಂಡುಬರುತ್ತದೆ. ಶ್ರೀ ಗಿರಿಮಲ್ಲಿಕಾರ್ಜುನನಿಗೆ ಅಂಕಿತಗೊಳಿಸಲ್ಪಟ್ಟಿರುವ ಶತಕವು ಇವರದೇ ಎಂದು ಆಂಧ್ರಲಕ್ಷಣ ಗ್ರಂಥಗಳಿಂದ ತಿಳಿದುಬರುತ್ತದೆ.

ಶ್ರೀ ಬಸವಣ್ಣನವರ ಬಗ್ಗೆ ಇವರು "ಬಸವಗೀತೆ" ಎಂಬುವ ಕನ್ನಡ ಕಾವ್ಯವನ್ನೂ, "ಬಸವ ಮಹಿಮುಲು" ಎಂಬ ತೆಲುಗು ಕಾವ್ಯವನ್ನೂ ಬರೆದಿರುತ್ತಾರೆ. ಇಷ್ಟಲಿಂಗ ಸ್ತೋತ್ರವೆಂಬ ಕನ್ನಡ ಗ್ರಂಥವು ಈತನದೇ ಆಗಿದೆ. ಶಿವತತ್ವಸಾರವೊಂದನ್ನು ಬಿಟ್ಟು ಇವರ ಗ್ರಂಥಗಳೆಲ್ಲ ಕಾಲಪುರುಷನ ಗರ್ಭದಲ್ಲಿ ಅಡಗಿಹೋಗಿದ್ದರೂ ಇವುಗಳ ಸ್ವರೂಪ ವೆಂತಹುದೆಂಬವದನ್ನು ನಾವು ಸೋಮನಾಥನ ಪಂಡಿತಾರಾಧ್ಯ ಚರಿತ್ರೆಯಿಂದ ಕಂಡು ಕೊಳ್ಳಬಹುದು. ಇವರ ಬಸವಗೀತೆಯು ಆರಾಧ್ಯಚರಿತ್ರೆ ಪಂಡಿತ ಪ್ರಳಾಪಘಟ್ಟದಲ್ಲಿ ಗರ್ಭೀಕೃತವಾಗಿ ಹೋಗಿರುವದು. ಅದರಲ್ಲಿ ಬಸವಣ್ಣನ ಚರಿತ್ರೆಯೂ ಆತನ ಚರಿತ್ರೆಯೂ ಸಂಗ್ರಹವಾಗಿ ವರ್ಣಿಸಲ್ಪಟ್ಟಿದ್ದು ಆ ಕಾವ್ಯದಲ್ಲಿ ಭಕ್ತಿ ಕರುಣಾರಸಗಳು ಉಕ್ಕೇರುತ್ತಿರುವವು. ಶಿವತತ್ವಸಾರದಲ್ಲಿ ಶಿವಶರಣರ ಮಹಿಮೆಗಳು ವರ್ಣಿಸಲ್ಪಟ್ಟಿದ್ದು ಬಸವಣ್ಣನವರ ಬಗ್ಗೆ ಅದರಲ್ಲಿ ಕೆಳಗೆ ಕಂಡ ಮೂರು ಪದ್ಯಗಳಿರುತ್ತವೆ—

ಕಂದ—

ಅಸಮೇಕ್ಷಣ ಶಿವಭಕ್ತುಂ ।
ದಸಮು ಶ್ರೇಷ್ಠುಡನಿ ಪಲಿಕಿಯನ್ಯುಲತೋಡನ್ ।
ಬೊಸಪೋಲ್ಚೆ ಭಂಡಾರುವು ।
ಬಸವಡು ವಿಸಮೆತ್ತಿ ತ್ರಾವಿ ಬ್ರತುಕಡೆ ರುದ್ರಾ ॥ ೪೩೧ ॥

ವಸುಧನುಮೇಶುಡೆ ದೈವಮು ।
ಪ್ರಸಾದಮು ಪವಿತ್ರಮಾಶು ಭಕ್ತುಲೆ ಕುಲಜರ್ ।
ಪೊಸಪೇಠನಿ ಬಂಡಾರುವು ।
ಬಸವನ ವಿಸಮೆತ್ತಿ ತ್ರಾವಿ ಬ್ರತುಕಡೆ ರುದ್ರಾ ॥ ೪೩೨ ॥

ಕುಸುಮ ಶರಾರೀ ಶಿವಲಿಂ ।
ಗ ಸಮೇತುಲುದಕ್ಕ ಬೊಂದಗಾದನಿ ನಿರ್ಮಾ ।
ಲ್ಯ ಸುಖಂಬನಿ ಬಂಡಾರುವು ।
ಬಸವನ ವಿಸಮೆತ್ತಿ ತ್ರಾವಿ ಬ್ರತುಕಡೆ ರುದ್ರಾ ॥ ೪೩೩ ॥

ಇವುಗಳ ಕನ್ನಡ ಭಾಷಾಂತರ—

ಅಸಮೇಕ್ಷಣ ಶಿವಭಕ್ತಂ ।
ರಸೆಯೊಳಸಮಾನನೆಂದು ಪರವಾದಿಗಳಿಹೀಳ್ ।
ಪೊಸಪೋರಂ ಪೂಡಿದನಾ ।
ಬಸವನು ವಿಸವೆತ್ತಿ ಕುಡಿದು ಬದುಕನೆ ರುದ್ರಾ ॥

ವಸುಧಿಯೊಳು ಶಿವನೆ ದೈವವು ।
ಪ್ರಸಾದವು ಪವಿತ್ರವೀಶ ಭಕ್ತರೆ ಕುಲಜರ್ ।
ಪೊಸವೋರೆಂದಾ ಮಹಿಮನು ।
ಬಸವನು ವಿಸವೆತ್ತಿ ಕುಡಿದು ಬದುಕನೆ ರುದ್ರಾ ॥

ಕುಸುಮ ಶರಾರೀ ಶಿವಲಿಂ ।
ಗ ಸಮೇತರು ಮಾತ್ರ ಮೊದಲಹುದೈ ನಿರ್ಮಾ ।
ಲ್ಯ ಸುಖವ ಭುವಿಯೊಳೆಂದಾ ।
ಬಸವನು ವಿಸವೆತ್ತಿ ಕುಡಿದು ಬದುಕನೆ ರುದ್ರಾ ॥

ಪಾಲ್ಕುರಿಕೆಯ ಸೋಮನಾರಾಧ್ಯರು—ಇವರ ಹೆಸರು ಕನ್ನಡ ಮತ್ತು ಸಂಸ್ಕೃತ ಕವಿಗಳಲ್ಲಿಯೂ ಬಂದಿರುತ್ತದೆ. ಕನ್ನಡ ಕವಿಗಳ ವಿಷಯ ಹೇಳಿದಾಗ ಇವರ ಬಗ್ಗೆ ಕೆಲವು ವಿಷಯಗಳನ್ನು ಹೇಳಲಾಗಿದೆ. ಇಲ್ಲಿ ಹೆಚ್ಚಿನ ಸಂಗತಿಗಳನ್ನು ಮಾತ್ರ ಕೊಡಲಾಗುವದು. ಪ್ರತ್ಯಕ್ಷವಾಗಿ ಭೃಂಗೀಶನ ಅವತಾರವೆಂದು ಹೇಳಿಸಿಕೊಳ್ಳುವ ಈ ಮಹಾಕವಿಯು ಪಂಡಿತಾರಾಧ್ಯರ ಅನಂತರ ಆಂಧ್ರದೇಶದಲ್ಲಿ ವೀರಶೈವ ಧರ್ಮ ಪ್ರಚಾರಮಾಡಿದರು.

ನಿಜಾಂ ಇಲಾಖಾ, ನಲ್ಲಗೊಂಡ ಜಿಲ್ಲಾ, ಜನಗಾಂವ್ ತಾಲ್ಲೂಕಿನಲ್ಲಿರುವ ಪಾಲಕುರ್ಕಿ ಎಂಬುವ ಗ್ರಾಮದಲ್ಲಿ ಕ್ರಿ.ಶ. ೧೧೬೦ ರಲ್ಲಿ ಇವರು ಜನ್ಮವೆತ್ತಿ ೧೨೪೦ ರಲ್ಲಿ ಕನ್ನಡ ದೇಶದಲ್ಲಿ ಕಲಿಕೆ ಎಂಬ ಗ್ರಾಮದಲ್ಲಿ ಲಿಂಗೈಕ್ಯರಾದರು. ಬೆಲಿದೇವಿ ಸೋಮನಾರಾಧ್ಯರ ಮೊಮ್ಮಗನು. ಈತನ ಗುರುವು ಕರಸ್ಥಲದ ವಿಶ್ವನಾಥನು. ಕವಿತಾ ಗುರುವು ಕಟ್ಟುಕೂರಿ ಪೋಲಿದೇವರೂ ಎಂಜೊಬ್ಬ ಮಹೇಶ್ವರನ ಸಹ ಈತನ ಗುರುವಾಗಿ ಗಣಿಸಲ್ಪಟ್ಟಿರುತ್ತಾನೆ. ಗೊಡಗಿ ತ್ರಿಪುರಾರಿ, ಗೊಬ್ಬೂರಿ ಸಂಗಯ್ಯ, ಪಾಸೂರ ನಾಮಾತ್ಯ ಚೆನ್ನರಾಮ ಮುಂತಾದ ಆಂಧ್ರದೇಶದ ಶಿವಾನುಭವಿಗಳು ಈತನ ಆಪ್ತಕೋಟಿಯಲ್ಲಿ ಸೇರಿದವರು. ಪಿಡುಪರ್ತಿಯವರು, ಶಿವರಾತ್ರಿಯವರು ಮುಂತಾದವರು ಈತನ ಶಿಷ್ಯವರ್ಗದವರು ಸಾಮಾನ್ಯವಾಗಿ ಕರ್ಣಾಟಕಾಂಧ್ರ ಶಿವಕವಿಗಳೆಲ್ಲರೂ ಸೋಮನಾರಾಧ್ಯರನ್ನು ತಮ್ಮ ಗ್ರಂಥಗಳಲ್ಲಿ ಸ್ತುತಿಸಿರುತ್ತಾರೆ. ಇವನು ಅನನ್ಯ ಸಾಮಾನ್ಯ ಪ್ರತಿಭೆಯುಳ್ಳ ಮಹಾ ವಿಭೂತಿಯು. ವೇದ ವೇದಾಂಗಾದಿ ವೈದುಷ್ಯಗಳನ್ನು ಕರತಲಾಮಲಕ ಮಾಡಿಕೊಂಡ ಅತ್ಯದ್ಭುತ ವ್ಯಕ್ತಿ, ೬೩ ಶೀಲಗಳನ್ನು ಆಚರಣೆಯಲ್ಲಿ ತಂದ ಮಹಾ ಶಿವಾನುಭವಿ. ತಿಕ್ಕನ್ನ, ಶ್ರೀನಾಥ, ಪೋತನ್ನ, ಧೂರ್ಜಿಟಿ ಮೊದಲಾದ ಆಂಧ್ರ ಮಹಾಕವಿಗಳಿಗೆ ಮಾರ್ಗದರ್ಶಿಯಾಗಿದ್ದನು. ಇವನ ವೀರಶೈವಾಚಾರಧೌರೇಯತೆಯು ಅನುಪಮ

ವಾದುದು. ಇವರ ಚರಿತ್ರೆಯ ವಿಶೇಷ ಮಾಹಿತಿಯ ಬಗ್ಗೆ ಪಿಡುಪರ್ತಿ ಕವಿಯ ಗ್ರಂಥಗಳೆಲ್ಲವುಗಳಲ್ಲಿಯೂ, ಪ್ರತಾಪರುದ್ರ ಚರಿತ್ರೆಯಲ್ಲಿಯೂ, ತೋಂಟದಾರ್ಯರಿಂದ ರಚಿತವಾದ ಪಾಲ್ಕುರಿಕೆ ಸೋಮನಾಥನ ಪುರಾಣದಲ್ಲಿಯೂ ನೋಡಬಹುದು. ಇವರಿಗೆ ಸಂಸ್ಕೃತ, ಕನ್ನಡ, ತೆಲುಗು, ತಮಿಳು, ಮರಾಠಿ ಮುಂತಾದ ಭಾಷೆಗಳಲ್ಲಿ ಪರಿಜ್ಞಾನ ವಿದ್ದಿತು. ಮೊದಲಿನ ಮೂರು ಭಾಷೆಗಳಲ್ಲಿ ಗ್ರಂಥಗಳನ್ನು ರಚಿಸಿರುತ್ತಾರೆ. ವೃಷಾಧಿಪ ಶತಕದಲ್ಲಿಯೂ ಮತ್ತು ಆರಾಧ್ಯ ಚರಿತ್ರೆಯಲ್ಲಿಯೂ ತಮಿಳು, ಮರಾಠಿಗಳಲ್ಲಿ ಕವನಗಳನ್ನು ರಚಿಸಿರುವರು. ಈಗ ಸಿಗತಕ್ಕ ಇವರ ಗ್ರಂಥಗಳು ಕೆಳಗೆ ಬರೆದಂತಿರುತ್ತವೆ—

(೧) ಅನುಭವಸಾರ, (೨) ಸೋಮನಾಥಸ್ತವನ, (೩) ಪಂಚಪ್ರಕಾರ ಗದ್ಯ, (೪) ನಮಸ್ಕಾರ ಗದ್ಯ, (೫) ಅಕ್ಷರಾಂಕನ ಗದ್ಯ, (೬) ಅಕ್ಷರಾಂಕನ ಪದ್ಯ, (೭) ಬಸವೋದಾಹರಣ, (೮) ಬಸವ ರಗಡ, (೯) ಬಸವ ಪುರಾಣ ದ್ವಿಪದ. (೧೦) ಚತುರ್ವೇದಸಾರ, (೧೧) ಸೋಮನಾಥ ಭಾಷ್ಯ, (೧೨) ವೃಷಾಧಿಪ ಶತಕ, (೧೩) ಪಂಡಿತಾರಾಧ್ಯ ಚರಿತ್ರೆ, (೧೪) ಚನ್ನಮಲ್ಲನ ಸೀಸಪದ್ಯಗಳು. ದೊರೆಯದೆ ಇರತಕ್ಕ ಗ್ರಂಥಗಳು—(೧) ಬಸವರಾಧ್ಯಾರಗಡ, (೨) ಬಸವಾಷ್ಟಕ, (೩) ತ್ರಿವಿಧ ಲಿಂಗಾಷ್ಟಕ, (೪) ಸದ್ಗುರು ರಗಡ, (೫) ಗಂಗೋತ್ಪತ್ತಿ ರಗಡ, (೬) ರುದ್ರಭಾಷ್ಯ, (೭) ಅಲ್ಲಮ ದೇವ ಪುರಾಣ ಮೊದಲಾದವುಗಳಿವೆ.

ಆಂಧ್ರಭಾಷೆಯನ್ನು ದೇವಭಾಷೆಯನ್ನಾಗಿ ಮಾಡಿದ ಕೀರ್ತಿಯು ಇವರ ಪಾಲಿಗೆ ಇರುತ್ತದೆ. ಬಸವಣ್ಣನವರಲ್ಲಿ ಇವರ ಭಕ್ತಿಯು ಅಸಾಧಾರಣವಾದುದು. ಇವರ ಗ್ರಂಥಗಳಲ್ಲಿ ಮೇಲಿಂದಮೇಲೆ ಬಸವನ ಸ್ತೋತ್ರಗಳು ಹೇರಳವಾಗಿ ಸಿಗುತ್ತವಲ್ಲದೆ ಮಾತು ಮಾತಿಗೂ ಬಸವ ಸಂಸ್ತವನವೇ ಕಂಡುಬರುತ್ತದೆ. ಭಕ್ತಿಯ ಪಾರವಶ್ಯದಲ್ಲಿದ್ದ ಇವರು—

ಬಸವನಿ ಪುತ್ರುಂಡ ಬಸವ ಗೋತ್ರುಂಡ ।
ಬಸವೇಶಂ ಶ್ರೀ ಪಾದಪದ್ಮ ಶೇಖರುಡ ।
ಬಸವನಿಯಿಲು ಪುಟ್ಟು ಬಾನಿಸ ಕೊಡುಕ ॥

ಎಂದು ಮುಂತಾಗಿ ಹೇಳಿಕೊಂಡಿರುತ್ತಾರೆ.

ಇವರು ಶ್ರೀಶೈಲ ಪ್ರಾಂತ್ಯದಲ್ಲಿದ್ದಾಗ ಜಂಗಮರ ಮುಖದಿಂದ ಬಸವಣ್ಣನವರ ಚರಿತ್ರೆಯನ್ನು ತಿಳಿದುಕೊಂಡು ದ್ವಿಪದ ಕಾವ್ಯರೂಪವಾಗಿ ಬರೆದು ವಿಶ್ವವಾಙ್ಮಯಕ್ಕೆ ಮಹದುಪಕಾರ ಮಾಡಿರುತ್ತಾರೆ. ಆ ಗ್ರಂಥದಲ್ಲಿಯೂ ಮತ್ತು ಆರಾಧ್ಯ ಚರಿತ್ರೆಯಲ್ಲಿಯೂ ಬಸವಣ್ಣನವರ ವಚನಗಳನ್ನು ಆಂಧ್ರ ದ್ವಿಪದರೂಪವಾಗಿ ಪರಿವರ್ತಿಸಿರುವರು. ಕನ್ನಡ ವಚನವಾಙ್ಮಯದ ಪ್ರವಾಹವು ಆಂಧ್ರಸಾಹಿತ್ಯ ಕ್ಷೇತ್ರಕ್ಕೆ ಜೀವಕಳೆಯನ್ನು ಕೊಡುವಂತೆ ಮಾಡಿದ ಯಶಸ್ಸು ಇವರಿಗೆ ಸಲ್ಲುತ್ತದೆ. ಇವರು ತಮ್ಮ ಸೋಮನಾಥ ಭಾಷ್ಯೆಯಲ್ಲಿ—

ಜಯತು ಬಸವರಾಜಃ ಸ್ಥೌಲ್ಯನೈರ್ಮಲ್ಯಪೂಜಃ ।
ಪ್ರಮಥಗಣಸಮಾಜಃ ಪ್ರೋಲ್ಲಸದ್ಭಕ್ತಿನೈಜಃ ।
ಪ್ರಹೃತ ವಿನಮದಾರ್ತಿಃ ಸ್ಫಾಯದಾಮ್ನಾಯಮೂರ್ತಿಃ ।
ಸ್ಥಿರದಿಗಮಿತಕೀರ್ತಿಃ ಶ್ರೀ ವೃಷಾಧೀಶಮೂರ್ತಿಃ ॥

ಎಂಬ ಸ್ತೋತ್ರದಿಂದ ಪ್ರಾರಂಭವಾಗುವ ಈ ಭಾಷ್ಯವು ಪ್ರಥಮ ಪ್ರಕರಣದಲ್ಲಿ ಬಸವ ಶಬ್ದ ನಿರ್ವಚನವು ಮಾಡಲ್ಪಟ್ಟಿದೆ. ಕೊನೆಯಲ್ಲಿ "ಇದಾನೀಂ ವೀರಶೈವಾಚಾರಾನು ಗತ ಸದ್ಭಕ್ತಿ ವರ್ಧನಾರ್ಥಂ ಪರಮೇಶ್ವರಾಜ್ಞಯಾ ವೃಷಭಟವ ಕಲಿಯುಗೇ ಬಸವಾಭಿ ಧಾನಸ್ಸಮುಜನಿತದ್ಭಸವರಾಜಸ್ಯ ಸರ್ವಜನ ಸಾಕ್ಷಿಕದೃಷ್ಟಪ್ರತ್ಯಯದರ್ಶಿತ ನಾನಾ ಭಕ್ತಿವಿಶೇಷಸ್ಯ ಪ್ರಸನ್ನತಾಸಮಯೇ—

ಯಸ್ಯ ವಕ್ತ್ರೇ ಸ್ಥಿತಂ ದೇವಿ ಬಸವೇತ್ಯಕ್ಷರತ್ರಯಂ ।
ವಸಾಮಿ ಸತತಂ ತತ್ರ ಸತ್ಯಂ ಸತ್ಯಂ ನ ಚಾನ್ಯಥಾ ॥

ಇತಿ ದೇವ್ಯಾಸಹ ಪರಮೇಶ್ವರೇಣೋಕ್ತಂ ಲೋಕಹಿತಾರ್ಥಂ ಕಂಠಟವಗರಳಂ ಶಿವೇ ನಧೃತಂ ಭಕ್ತಹಿತಾರ್ಥಂ ಬಸವಸ್ತದಿಹಾಗತವುಪಿಬದಿತ್ಯಹೋಮಹಿಮಾ, ಇತಿ ಪ್ರಥಮಗಣಾರೋಪಲಾಲನಾ ವಚನಾತ್ ಸಾಕ್ಷಾತ್ ಶಂಭೋರಪರಾವತಾರಾಯ.

ಶ್ರೀ ವೃಷಭೇಶ್ವರಾಯ ನಮೋನಮಃ । ತಥೈವ ವೃಷಭೇಂದ್ರಾಪರಾವತಾರಾಯ ಶ್ರೀ ಬಸವೇಶ್ವರಾಯ ನಮೋನಮಃ ।" ಈಗಲೂ ಸಹ ತೆಲುಗು ದೇಶದ ಆರಾಧ್ಯ ಬ್ರಾಹ್ಮಣರು ಶಿವಪೂಜಾ ಕಾಲದಲ್ಲಿ—

"ಮುನಿಯಾಚನಾಯಾ ಶಿವಾಜ್ಞಯಾ ।
ಶಿವಭಕ್ತುದ್ಧರಣಾರ್ಥಮಾಗತಂ ।
ವೃಷರಾಟ್ ಪರಾವತಾರತಃ ।
ಮಹಿತಂ ಶ್ರೀ ಬಸವೇಶ್ವರಂ ಭಜೇ ॥"

ಎಂದು ಶ್ರೀ ಬಸವೇಶ್ವರನ ಸ್ತೋತ್ರಮಾಡುವದು ವಿಧಿಯಾಗಿದೆ.

"ವೃಷಾಧಿಪ ಶತಕ" ಆಂಧ್ರಸಾಹಿತ್ಯದಲ್ಲಿ ಅತಿ ವಿಸ್ತಾರವಾಗಿರುವ ಶತಕ ವಾಙ್ಮಯಕ್ಕೆ ಅಸ್ತಿಭಾರವನ್ನು ಹಾಕಿಕೊಟ್ಟಿರುವುದೇ ಈ ಶತಕವು. ಕೃತಿಯು ಭಾವೋದ್ರೇಕದಿಂದ ಬಳಿಸಲ್ಪಟ್ಟಿರುವ ಈ ಕೃತಿಯಲ್ಲಿ ಕಂಡುಬರುವ ಕವಿತಾಪ್ರವಾಹದ ಗತಿಯು ಹಿಮಾಲಯದಿಂದ ಹೊರಬೀಳುವ ಗಂಗೆಯ ಗತಿಯನ್ನು ಹೋಲುತ್ತದೆ. ಶಬ್ದಬಂಧುರತೆಯು ಅಸಮಾನವಾದುದು. ಒಂದು ಕಡೆ ಕವಿಯು "ನೋರಿಕಿ ವಚ್ಚಿನಟ್ಟು ನಿನು ನೂರು ವಿಧಂಬುಲ ಪ್ರಸ್ತುತಿಂತು" ಎಂದು ಹೇಳಿರುವರು. ತಮ್ಮ ಬಾಯಿಗೆ ಬಂದ ಭಾಷೆಗಳಲ್ಲೆಲ್ಲ ಬಸವಣ್ಣನವರನ್ನು ಸ್ತುತಿಸಿರುತ್ತಾರೆ. ಉದಾಹರಣೆಗಾಗಿ ಇಲ್ಲಿ ನೋಡೋಣ:

ತೆಲುಗು ಭಾಷೆ—

ಶ್ರೀಗುರು ಲಿಂಗಮೂರ್ತಿ ಸುವಿಶೇಷ ಮಹೋಜ್ವಲ ಕೀರ್ತಿ ಸತ್ಕ್ರಿಯೋ ।
ದ್ಯೋಗಕಳಾ ಪ್ರಪೂರ್ತಿಯವಧೂತ ಪುನರ್ಭವಜೂರ್ತಿಪಾಲಿತಾ ।
ಭ್ಯಾಗತ ಸಂಶ್ರಿತಾರ್ಥಿ ಕವಿಪಂಡಿತ ಗಾಯಕ ಚಕ್ರವರ್ತಿ ದೇ ।
ವಾಗತಿ ನೀವೇ ಮಾಕು ಬಸವಾ ಬಸವಾ ಬಸವಾ ವೃಷಾಧಿಪಾ ॥ ೧ ॥

ಸಂಸ್ಕೃತ—

ಚೂರ್ಣಿತ ಮನ್ಮಥಾಯ ಪರಿಶೋಭಿತ ಭಸ್ಮ ವಿಲೇಪನಾಯ ಸಂ ।
ಪೂರ್ಣಮನೋರಥಾಯ ಗತಪೂರ್ವಭವಾಶ್ರಿತ ವರ್ತನಾಯ ತೇ ।
ವರ್ಣನಿರಾಸಕಾಯ ಸಶಿವಾಯ ನಮೋಯೆನಿ ಸಂತತಂಬು ನಿನ್ ।
ವರ್ಣನ ಚೇಯುವಾಡು ಬಸವಾ ಬಸವಾ ಬಸವಾ ವೃಷಾಧಿಪಾ ॥ ೨ ॥

ತಮಿಳು—

ಪರಮುನೆಯೆನ್ನೆ ಮೂಂಡವನೆ ಪನ್ನಗತಾನೆ ಯನಾಥನಾಥನೇ ।
ಪೆರಿಯುವನೆ ಪುಳಿಂದವನೆ ಪೇರುಡಯಾನೆ ಪಿರಾನೆಯುಪ್ಪನೇ ।
ತರಿಮುರಿಯಯ್ಯನೆ ಯನುಜು ದ್ರಾವಿಡಭಾಷನುತಿಂತು ಮನ್ಮಸೋ ।
ವರ ಕರುಣಾವಿಧೇಯ ಬಸವಾ ಬಸವಾ ಬಸವಾ ವೃಷಾಧಿಪಾ ॥ ೩ ॥

ಕನ್ನಡ—

ಹಸುಳೆಯನೆನ್ನರಕ್ಷಿಸುವುದಾರಯ ದೆನ್ನವನೀತನೆಂದು ಮ ।
ನ್ನಿಸುವುದು ನಿಮ್ಮಡಿಂಗೆರಗೆ ನಿಮ್ಮ ಪ್ರಸಾದಿಯೆ ನಿಮ್ಮ ತೊತ್ತನೆ ।
ಕಸಿಗಡಿಯಂಚು ಭಕ್ತಿನಿನುಂ ಕನ್ನಡಭಾಷನುತಿಂತು ಷಡ್ಗುಣ ।
ಶ್ವಸನ ಪುರಾತನಾತ್ಮ ಬಸವಾ ಬಸವಾ ಬಸವಾ ವೃಷಾಧಿಪಾ ॥ ೪ ॥

ಮರಾಠಿ—

ದೇವಪರೀ ತುಹ್ಮೀಚ ಗುರುದೇವಮ್ಹಣಾನುತರೀ ತುಮ್ಹೀಚ ಗೋ ।
ಸಾವಿತರೀ ತುಮ್ಹಾಚ ತುಪುಚಾಚ ಪ್ರಸಾದ ತುಮ್ಹಾಚ ಕೃಪಾಕರಾ ।
ಹೇವರದಾಯಟಂಚು ನುತಿಯಿಂಚದ ನಿನ್ನನು ನಾರೆಭಾಸ ದೇ ।
ವಾ ವಿನುತಾರ್ಯ ಲೀಲ ಬಸವಾ ಬಸವಾ ಬಸವಾ ವೃಷಾಧಿಪಾ ॥ ೫ ॥

ಇವರು ರಚಿಸಿದ ಚತುರ್ವೇದಸಾರಕ್ಕೆ ಬಸವಲಿಂಗ ಎಂದು ಅಂಕಿತ ಇರುವದರಿಂದ ಈ ಕಾವ್ಯಕ್ಕೆ ಬಸವಲಿಂಗಶತಕವೆಂಬುವ ಅಂಕಿತವೂ ಇರುತ್ತದೆ. ಈ ಕಾವ್ಯದಲ್ಲಿ ಇವರು ವೀರಶೈವ ಧರ್ಮದ ಪ್ರತಿಷ್ಠಾಪನೆಯನ್ನು ಚೆನ್ನಾಗಿ ಪ್ರತಿಪಾದಿಸಿರುತ್ತಾರೆ. ಈ ಕಾವ್ಯದಲ್ಲಿ ಬಸವಣ್ಣನನ್ನೇ ಮಂತ್ರಾಧಿದೇವತೆಯನ್ನಾಗಿ ವರ್ಣಿಸಿರುತ್ತಾರೆ.

ಪಂಡಿತಾರಾಧ್ಯ ಚರಿತ್ರೆ—ಕವಿಯು ಈ ಪ್ರೌಢಕಾವ್ಯವನ್ನು ಬಸವೇಶ್ವರನಿಗೆ ಅಂಕಿತ ಮಾಡಿರುವರು. ಕಥಾನಾಯಕರಾದ ಪಂಡಿತಾರಾಧ್ಯರನ್ನು ಬಸವಣ್ಣನ ಭಕ್ತರನ್ನಾಗಿ ಹೊಗಳಿರುವರು. ಮಲ್ಲಿಕಾರ್ಜುನನಿಗೂ, ಬಸವೇಶ್ವರನಿಗೂ ಅಭೇದದಿಂದ ವರ್ಣಿಸಿರುತ್ತಾರೆ. ಆದಕಾರಣ ಈ ಕೃತಿಗಳೆಲ್ಲ ಬಸವ ಸಂಸ್ತವವೇ ಆಗಿರುತ್ತವೆ. ಬಸವಣ್ಣನು ಐಕ್ಯವಾದ ಸಮಾಚಾರವನ್ನು ಪಂಡಿತಾರಾಧ್ಯರು ಕೇಳಿ ಪ್ರಲಾಪಿಸಿದ ಘಟ್ಟವು ಹೃದಯಂಗಮವಾಗಿರುತ್ತದೆ.

ಬಸವಣ್ಣ ಮಹಿಮ ಶಂಭುದ್ಭಕ್ತಿಯುಕ್ತಿ ।
ಬಸರಿಂಚೆಲೆವಿ ಗದ್ಯಪದ್ಯಾದಿ ಕೃತುಲ ।
ಸರ್ಗವಾವೃತ ಧಾತ್ರಿಯಂ ಸೊಪ್ಪು ಬಸವಾ ।
ವರ್ಣನಲ್ ಸೇಸಿತಿ ವರುಸನ ।

ಶಿವಭಕ್ತರು ತನ್ನನ್ನುದ್ದೇಶಿಸಿ ಹೇಳಿದಂತೆ ಸೋಮನಾಥರು ಬರೆದುಕೊಂಡಿರುತ್ತಾರೆ. ಆಂಧ್ರ ಬಸವೋದಾಹರಣ ಪಂಚಪ್ರಕಾರಗದ್ಯ, ನಮಸ್ಕಾರಗದ್ಯ, ಅಕ್ಷರಾಂಕಗದ್ಯ, ಅಕ್ಷರಾಂಕಪದ್ಯ (ಬಸವೇಶಃ ಪಾಹಿಮಾಂ ಎನ್ನುವದು), ಅಷ್ಟೋತ್ತರ ಶತನಾಮ ಗದ್ಯ, ವೃಷಭಾಷ್ಟಕ ಪಂಚರತ್ನಗಳು, ಬಸವಾತ್ಮಕ, ಬಸವರಗಡ ಮೊದಲಾದ ಗ್ರಂಥಗಳೆಲ್ಲ ಬಸವಸ್ತವವೇ ಆಗಿರುತ್ತವೆ. ಸೋಮನಾಥರು ಬಸವೇಶ್ವರನಿಗಾಗಿಯೇ ತಮ್ಮ ಜೀವನವನ್ನೆಲ್ಲ ಧಾರೆ ಎರೆದಿದ್ದಂತೆ ಕಾಣುತ್ತದೆ. ಇವರು ಕಾಕತೀಯ ಪ್ರತಾಪರುದ್ರನ ಆಸ್ಥಾನದಲ್ಲಿ ಬಸವಪುರಾಣದ ಪ್ರಾಶಸ್ತ್ಯವನ್ನು ಸ್ಥಾಪಿಸಿ ಆ ರಾಜನಿಂದ ತಮ್ಮ ಶಿಷ್ಯ

ವರ್ಗಕ್ಕೆ ಅಗ್ರಹಾರಗಳನ್ನು ಪಡೆದರು. ಆಂಧ್ರ ವಾಙ್ಮಯದಲ್ಲಿ ಮಾತ್ರವಲ್ಲದೆ ಆಂಧ್ರ ಮತಾಚಾರ್ಯರ ಇತಿಹಾಸದಲ್ಲಿಯೂ ಸಹ ಸೋಮನಾಥರು ಉನ್ನತ ಸ್ಥಾನವನ್ನು ಪಡೆದಿರುತ್ತಾರೆ. ಅವರ ಶಿಷ್ಯಕೋಟಿಯಲ್ಲಿ ಪ್ರಭುಗಳೂ, ಪಂಡಿತರೂ, ಕವಿಗಳೂ, ಶಿವಾನುಭವಿಗಳೂ ಅನೇಕರಿರುವರು. ಚಕ್ರಪಾಣಿ ರಂಗನಾಥನೆಂಬ ವೈಷ್ಣವನನ್ನು ಸೋಮನಾರಾಧ್ಯರು ವಾದದಲ್ಲಿ ಗೆದ್ದು ಆತನನ್ನು ಮುಖ್ಯ ಶಿಷ್ಯನನ್ನಾಗಿ ಮಾಡಿ ಕೊಂಡರು. ಇವರ ತತ್ವಗಳನ್ನು ಆತನೇ ಮುಂದೆ ಪ್ರಚಾರ ಮಾಡಿದನು. ೧೪ನೆಯ ಶತಮಾನದಲ್ಲಿ "ಕೊಲಸಿ ಗಣಪತಿದೇವ"ನೆಂಬ ತೆಲುಗು ಕವಿಯು ತನ್ನ ಶಿವಯೋಗ ಸಾರ ಎಂಬುವ ಗ್ರಂಥದಲ್ಲಿ ಸೋಮನಾಥನನ್ನೂ, ರಂಗನಾಥನನ್ನೂ ಈ ರೀತಿ ಹೊಗಳಿರು ವನು—

ಅಸಮು ಶಿವಭಕ್ತಿ ರಸಮಾ ।
ನಸುಡಗು ಪಾಲ್ಕುರಿಕೆ ಸೋಮನಾಥುನಿ ಕವಿ ರಾ ।
ಜಸುಮುನ್ನ ತಮುಶು ಸದ್ಯಃ ।
ಪ್ರಸಾದಿಮುಗು ಚಕ್ರಪಾಣಿ ರಂಗನ ಗೊಲುತುನ್ ॥

ಸೋಮೇಶ್ವರಾರಾಧ್ಯ — ಈತನು ಪಾಲ್ಕುರಿಕೆಯ ಸೋಮನಾಥನ ಭಕ್ತನು. ಶಿಷ್ಯನಿದ್ದರೂ ಇರಬಹುದೆಂದು ವಂಗೂರು ಸುಬ್ಬರಾವು ಅವರು ತರ್ಕಿಸಿರುತ್ತಾರೆ. ಆ ಊಹೆಯು ನಿಜವಾದರೆ ಈತನು ೧೩ನೆಯ ಶತಮಾನದಲ್ಲಿದ್ದನೆಂದು ಹೇಳಬಹುದು. ಈತನು ಸೋಮನಾಥನ ಅನ್ಯವಾದ ಕೋಲಾಹಲವನ್ನು ಭಾಷಾಂತರಿಸಿರುವನು. ಸೋಮನಾಥಲಿಂಗ ಎಂಬುವ ಅಂಕಿತವುಳ್ಳ ಸೀಸಪದ್ಯಗಳುಳ್ಳ ಈ ಗ್ರಂಥದಲ್ಲಿ ಕವಿಯು ಸೋಮನಾಥನನ್ನು ದೈವಸ್ವರೂಪವಾಗಿ ಭಾವಿಸಿ ಆತನಿಗೆ ತನ್ನ ಕಾವ್ಯವನ್ನು ಅಂಕಿತ ಗೊಳಿಸಿರುವನು. ಕೆಲ ಪ್ರತಿಗಳಲ್ಲಿ ಕವಿಯ ಹೆಸರು ಶಿವಯೋಗೀಂದ್ರನೆಂದು ಹೇಳಲ್ಪಟ್ಟಿರುವದು. ಒಂದು ಪದ್ಯದಲ್ಲಿ ಕವಿಯು ಸೋಮನಾಥನನ್ನು "ಕೀರ್ತಿಂಪ ಬಸವೇಶು ಗೀತ ಪ್ರಬಂಧಮುಲ್ ವಾಯಿಂಪ ನೇರ್ಪರು ಕೈಲಾಸ ವೀಣೆಯನಗೆ" ಅಂದರೆ ಬಸವಣ್ಣನ ಗೀತೆಗಳನ್ನು ಬಾರಿಸುವ ಕೈಲಾಸವೀಣೆ ಎಂದು ಹೊಗಳಿರುವನು. ಮತ್ತು ಅಲ್ಲಲ್ಲಿ ಬಸವಣ್ಣನ ಕೆಲವು ವಚನಗಳನ್ನು ಸೀಸಪದ್ಯಗಳಲ್ಲಿ ಬರೆದಿರುವನು. ಮತ್ತು ಬಸವಾದಿ ಪ್ರಮಥರನ್ನು ಸ್ತುತಿಸಿರುವನು.

ಸೀಸಪದ್ಯ—

ಬಸವಯ್ಯ ನಾ ಚನ್ನಬಸವಯ್ಯ ನಿಜಲಿಂಗ ।
ಚಿಕ್ಕಯ್ಯ ಕಕ್ಕಯ್ಯ ಚಿತ್ತಗಿಂಚಿ ॥
ಮಾಚಯ್ಯ ಸವರದ ನಾಚಯ್ಯ ಕಲಿಕೇತ ।
ಬ್ರಹ್ಮಯ್ಯ ಜೇಮ್ಮಯ್ಯ ಬ್ರಸ್ತುತಿಂಚಿ ॥
ವೇಮಯ್ಯನೇಕಾಂತ ರಾಮಯ್ಯ ಬಲ್ಲೇಶ ।
ಮಲ್ಲಯ್ಯ ನಲ್ಲಯ ವಂದಿಭಜಿಂಚಿ ॥
ಹೊನ್ನಯ್ಯ ಮೇದಾರಚನ್ನಯ್ಯ ಶಿವರಾತ್ರಿ ।
ಸಂಗಯ್ಯ ಬಂಕಯ್ಯ ಸನ್ನುತಿಂಚಿ ॥
ಕೋರಿ ಅನ್ಯವಾದ ಕೋಲಾಹಲಂಬನು ।
ಸೀಸಶತಕಮಿಂಪ್ರಚಿ ಗುರುಲೋತ್ತ ॥
ನೇನುಪಧ್ಯನಿಂತು ನೇಕಾಮ್ರುಗುರುಚಿತ್ತ ।
ನಲಿನಭೃಂಗ ಸೋಮನಾಥಲಿಂಗ ॥

ಮತ್ತು

ಹರುಡೆ ದೈವಂಬನಿ ಹಾಲಾಹಾಲಾಮುವ್ರಿಂಗಿ
ಪ್ರತೀಜೂಪೆ ಭಂಡಾರಿ ಬಸವವಿಭುಡು ।
ಬಸವಯ್ಯ ಕೋಪಾಗ್ನಿ ಭಸ್ಮಮ್ಮೈ ಪೋಪದೇ ಪಾಪಿಬಿಜ್ಜಲು ನರಪಾಲು ಕಲಿಮಿ ॥

—ಮೊದಲಾದ ವಾಕ್ಯಗಳಲ್ಲಿ ಬಸವಣ್ಣನವರ ಪವಾಡಗಳ ವರ್ಣನೆ ಇರುತ್ತದೆ.

ವಿಭೂತಿಪುರದ ಗಂಗಾಧರ ಕವಿ— ಇವನು ಗುರು ಬಸವದೇವನಿಂದ ಲಿಂಗದೀಕ್ಷೆಯನ್ನು ಹೊಂದಿ "ಚನ್ನಮಲ್ಲೇಶ್ವರ ಶತಕ"ವನ್ನು ರಚಿಸಿರುತ್ತಾನೆ. ಈ ಕವಿಯು ಪಾಲ್ಕುರಿಕೆಯ ಸೋಮನಾಥನ ಶಿಷ್ಯಕೋಟಿಯಲ್ಲಿ ಒಬ್ಬನಾಗಿರಬಹುದೆಂದು ತೋರುತ್ತದೆ. ಶ್ರೀ ವಂಗೂರಿ ಸುಬ್ಬರಾಯರು ಈತನು ಸೋಮನಾಥನ ಸಮಕಾಲದವನಿರಬಹುದೆಂದು ಊಹಿಸಿರುವರು. ಈತನು ತನ್ನ ಶತಕದ ಒಂದು ಪದ್ಯದಲ್ಲಿ ಶ್ರೀ ಸೋಮನಾಥನನ್ನು ಗುರುಮೂರ್ತಿ ಮುಂತಾದ ಪದಗಳಿಂದ ವರ್ಣಿಸಿ ಆ ಮಹಾಕವಿಯ ಬಗ್ಗೆ ತನ್ನ ಭಕ್ತಿಭಾವವನ್ನು ಪ್ರಕಟಿಸಿರುವನು. ಆ ಪದ್ಯಭಾಗದ ಕನ್ನಡ ಭಾಷಾಂತರವನ್ನು ಕೆಳಗೆ ಕೊಟ್ಟಿರುತ್ತದೆ.

ಸೀಸಪದ್ಯ—

ಬಸವಪುರಾಣ ಪ್ರಬಂಧಂ ಪೇಳಿದ ।
ಧನ್ಯನು ಪುಣ್ಯ ವ । ರ್ಧನನು ಘನನು ।
ನಿಗಮಪ್ರವೀಣನು ನೀತಿಸಂಪನ್ನನು ।
ಶಿವಕವೀಂದ್ರನು ದಯಾಸಿಂಧು ಮೂರ್ತಿ ।
ಪ್ರತಿವಾದ ಸಂಘಾತ ಭದ್ರೇಭಸಿಂಹನು ।
ಜಯಶಾಲಿ ಶಾಶ್ವತ ಚಕ್ರವರ್ತಿ ।
ಶ್ರೀ ಗುರುಮೂರ್ತಿ ಪಾಲಕುರಿಕಿ ಸೋಮೇಶ್ವರ ।
ನಂಘ್ರಿದ್ವಯಂಗಳ ನೆನೆದು ಮನದಿ ।

ಈತನು ತನ್ನ ಶತಕದ ಒಂದೊಂದು ಪದ್ಯವನ್ನು ಹೇಳಿ ಒಂದೊಂದು ಸೋಪಾನವನ್ನೇರುತ್ತ ಶ್ರೀಗಿರಿಯನ್ನು ಸೇರಿದನಂತೆ. ತನ್ನ ಕಾವ್ಯದಲ್ಲಿ ಬಸವೇಶ್ವರ ಪಂಡಿತಾರಾಧ್ಯ, ಶಿವನಾಗಮಯ್ಯ, ಗುಂಡಯ್ಯ ಮುಂತಾದವರನ್ನು ಅತಿ ಭಕ್ತಿಯಿಂದ ವರ್ಣಿಸಿರುವನು. ಗುರುಬಸವದೇವನಿಗೂ, ಮಲ್ಲಿಕಾರ್ಜುನನಿಗೂ ಅಭೇದವನ್ನು ಹೇಳಿರುವನು.

ವೇಮುಲವಾಡ ಭೀಮಕವಿ—ಇವನ ಕಾಲ ೧೩೫೫. ತೆಲುಗು ಮತ್ತು ಕನ್ನಡ ವಾಙ್ಮಯಗಳಲ್ಲಿ ಸುಪ್ರಸಿದ್ಧನಾಗಿರುವ ಈ ಮಹಾಕವಿಯು ವಿಜಯನಗರದ ವೀರ ಬುಕ್ಕರಾಯನ ಕಾಲದವನು (೧೩೫೫–೧೩೭೭). ಈತನು ದ್ರಾಕ್ಷಾರಾಮ ಭೀಮೇಶ್ವರನ ವರಪ್ರಸಾದದಿಂದ ಆರಾಧ್ಯ ಬ್ರಾಹ್ಮಣವಂಶದಲ್ಲಿ ಜನಿಸಿ ಶಿವಸಾಕ್ಷಾತ್ಕಾರವನ್ನೂ, ನಿಗ್ರಹಾನುಗ್ರಹ ಸಾಮರ್ಥ್ಯವನ್ನೂ ಪಡೆದು ಕನ್ನಡ ಮತ್ತು ತೆಲುಗು ದೇಶಗಳಲ್ಲಿ ಸಂಚರಿಸಿ ಅನಂತಪುರದ ಜಿಲ್ಲೆಯ ಗಡೇಕಲ್ಲು ಗ್ರಾಮದಲ್ಲಿ ಸಮಾಧಿಯನ್ನು ಹೊಂದಿದನು. ಪಾಲ್ಕುರಿಕೆ ಸೋಮನಾಥನ ದ್ವಿಪದ ಬಸವಪುರಾಣವನ್ನು ಕನ್ನಡ ಷಟ್ಪದಿಯಲ್ಲಿ ಬರೆದವನು ಈ ವೇಮುಲವಾಡ ಭೀಮಕವಿಯೇ ಎಂದು ತಿಳಿದುಬಂದಿದೆ. ಶ್ರೀ ವೀರೇಶಲಿಂಗಂ ಪಂತುಲು ಇವರು ಸಹ ಇದೇ ಅಭಿಪ್ರಾಯವನ್ನು ಮಂಡಿಸಿರುವರು. ಈತನು ಭೀಮೇಶ್ವರ ರಗಳೆ ಮತ್ತು ಭೃಂಗಿದಂಡಕಗಳನ್ನು ಬರೆದಿರುತ್ತಾನೆ. ಈತನು ಗುರುವರ

ನೆಂದೂ, ಶರಣಶ್ರೇಷ್ಠನೆಂದೂ, "ಅಂಗಬುದ್ಧಿಯನಳಿದು ಭೃಂಗಕೀಟಕನ್ಯಾಯದಂದದಿ ಸಂಗವಿರಹಿತನಾಗಿ ಚರಿಸುವ ಲಿಂಗ" ವೆಂದೂ ಹೊಗಳಿಸಿಕೊಂಡಿರುತ್ತಾನೆ. ಈತನು ಬಸವಣ್ಣನವರಲ್ಲಿ ಒಳ್ಳೇ ನಿಷ್ಠಾವಂತನಾಗಿದ್ದನು.

ಶ್ರೀನಾಥ—ಈತನು ಪಾಕನಾಟನಿಯೋಗಿ ಬ್ರಾಹ್ಮಣನು. ಭಾರದ್ವಾಜ ಗೋತ್ರನು. ಆಪಸ್ತಂಭಸೂತ್ರನು. ಮಾರಯ್ಯ ಭೀಮಾಂಬ ಪುತ್ರನು. ಕವಿಸಾರ್ವ ಭೌಮನೆಂಬ ಬಿರುದುಳ್ಳವನು. ವಿಜಯನಗರದ ಸಾಮ್ರಾಟನಾದ ಪ್ರೌಢದೇವರಾಯ ನಿಂದ (೧೪೨೩–೧೪೪೭) ಕನಕಾಭಿಷೇಕ ಮಾಡಿಸಿಕೊಂಡ ಮಹಾಕವಿ. ಆಂಧ್ರ ಪ್ರಬಂಧ ಸಾಹಿತ್ಯಪಿತಾಮಹನು. ಉಜ್ವಲ ಶಿವಭಕ್ತನು. ಈತನು ಮರುವ್ರಾಜ ಚರಿತ್ರಮು, ಶಾಲಿವಾಹನ ಸಪ್ತಶತಿ, ಶೃಂಗಾರನೈಷಧಮು, ಭೀಮೇಶ್ವರ ಪುರಾಣಮು, ಕಾಶೀಖಂಡಮು ಮುಂತಾದ ಗ್ರಂಥಗಳನ್ನು ಬರೆದಿರುವನು. ಕೊನೆಯ ಮೂರು ಕಾವ್ಯ ಗಳು ಆಂಧ್ರಸಾಹಿತ್ಯದಲ್ಲಿ ಮಹಾ ಕಾವ್ಯಗಳಾಗಿ ಪರಿಗಣಿಸಲ್ಪಟ್ಟಿವೆ. ಈತನಿಗೆ ವೀರಶೈವ ಧರ್ಮದ ಬಗ್ಗೆ ಅಭಿಮಾನವು ಹೆಚ್ಚು. ಶಿವಭಕ್ತಿ ಮಾರ್ಗವನ್ನು ಪ್ರತಿಪಾದಿಸುವ "ಹರವಿಳಾಸ" ಎಂಬುವ ಕಾವ್ಯವನ್ನು ಬರೆದುದಲ್ಲದೆ, ಪಾಲ್ಕುರಿಕೆ ಸೋಮನಾಥನ ದ್ವಿಪದ ಪಂಡಿತಾರಾಧ್ಯ ಚರಿತ್ರೆಯನ್ನು ಚಂಪೂಕಾವ್ಯವಾಗಿ ರಚಿಸಿ ಅದನ್ನು "ನಿಗಮಾರ್ಥಸಾರ ಸಂಗ್ರಹ" ವೆಂದು ಹೊಗಳಿರುವನು. ಇದಲ್ಲದೆ ತನ್ನ ಅಪರ ವಯಸ್ಸಿ ನಲ್ಲಿ ಶ್ರೀಶೈಲ ಕ್ಷೇತ್ರದಲ್ಲಿ ನೆಲಸಿ ಅಲ್ಲಿ ಶ್ರೀ ಶಾಂತಭಿಕ್ಷಾವೃತ್ತಿ ಶಿವಯೋಗಿಯ ಸನ್ನಿಧಿ ಯಲ್ಲಿ ಜರುಗುತ್ತಿದ್ದ ಶಿವಾನುಭವ ಗೋಷ್ಠಿಯಲ್ಲಿ ಭಾಗವನ್ನು ತೆಗೆದುಕೊಳ್ಳುತ್ತ ಅವರ ಶಿಷ್ಯನಾದ ಮುರ್ಮಡಿ ಶಾಂತಯ್ಯನಿಗೆ ಅಂಕಿತವಾಗಿ "ಸುಕುಮಾರಚರಿತ ಅಥವಾ ಶಿವರಾತ್ರಿ ಮಾಹಾತ್ಮ್ಯ" ವನ್ನು ರಚಿಸಿದನು. ಇವನು ರಚಿಸಿದ ಪಂಡಿತಾರಾಧ್ಯ ಚರಿತ್ರೆಯು ಬಸವನ ಸ್ತೋತ್ರಗಳಿಂದ ತುಂಬಿಹೋಗಿರುತ್ತದೆ. ಹರವಿಳಾಸ ಚರಿತ್ರೆ ಯಲ್ಲಿ ಶ್ರೀನಾಥನು ಚೆರುತೊಂಡನಂಬಿಯ ಚರಿತ್ರೆಯನ್ನು ಹೇಳುವ ಸಂದರ್ಭದಲ್ಲಿ ಆತನನ್ನು ಶಿವನು ಬಸವೇಶ್ವರನಿಗೆ ಹೋಲಿಸಿದುದಾಗಿ ಬರೆದು ಬಸವಣ್ಣನಲ್ಲಿ ತನಗಿರುವ ಭಕ್ತಿಗೌರವಗಳನ್ನು ಪ್ರಕಟಿಸಿರುವನು.

> ಕಲಿಯುಗಂಬುನ ಕಲ್ಯಾಣ ಕಟಕನಗರಿ ।
> ನಾಕುಭಕ್ತುಂಡು ಬಸವನಾಥುಡೊಕಡು ।
> ಕಂಚಿನಗರಂಬುಲೋ ವಣಿಗ್ವಂಶ ವರುಡು ।
> ನಾಕು ಭಕ್ತುಂಡು ಚಿರುತೊಂಡ ನಂಬಿಯೊಕಡು ।

ಎಂದು ಶಿವನು ಪಾರ್ವತಿಗೆ ಹೇಳಿದಂತೆ ಈ ಕೃತಿಯು ಚೆರುತೊಂಡನಂಬಿಯ ವಂಶದವ ನಾದ ಅವಚೆ ತಿಪ್ಪಯ್ಯನಿಗೆ ಅಂಕಿತಗೊಳಿಸಲ್ಪಟ್ಟಿದೆ. ಆಶ್ವಾಸಾಂತ ಪದ್ಯಗಳೊಂದರಲ್ಲಿ ಕವಿಯು ಕೃತಿಪತಿಯು ವೀರಶೈವ ದೀಕ್ಷಾನಿರ್ವಹಣದಲ್ಲಿ ಬಸವೇಶ್ವರನನ್ನು ಹೋಲುವ ನೆಂದು ಈ ರೀತಿ ಹೇಳಿರುವನು—

> ಶ್ರೀಮದ್ದಕ್ಷಿಣಕಾಶಿಕಾಪುರಮಹಾ ಶ್ರೀಕಾಳಹಸ್ತೀಶ್ವರಾ ।
> ಪ್ರೇಮಾತ್ಮೋದ್ಭವ ಕಾಲಭೈರವಕೃಪಾ ಸಂವರ್ಧಿತೈಶ್ವರ್ಯ ನಿ ।
> ಸ್ಸೀಮಪ್ರಾಭವ ಲಕ್ಷ್ಮಣಾಗ್ರಜ ಸುಧಾಸಿಕ್ತಾಕ್ಷರಾಲಾಪಯ ।
> ತ್ಯಾಮುದಾರ್ಜುನ ವೀರಶೈವಸಮಯವ್ಯಾಪಾರ ಪಾರೀಣತಾ ।
> ಸಾಮಾನ್ಯ ಪ್ರತಿಭಾತಿ ನಿರ್ವಹಣ ದೀಕ್ಷಾ ಶಾಕ್ವರಾಧೀಶ್ವರಾ ।

ಬಮ್ಮೆರ ಪೋತನ್ನ.—ಈ ಕವಿಯು ಓರಂಗಲ್ ಪಟ್ಟಣದ ಸಮೀಪದಲ್ಲಿರುವ ಬಮ್ಮೆರ ಗ್ರಾಮದವನು. ಓರಂಗಲ್ಲು ಆ ಕಾಲದಲ್ಲಿ ಕರ್ಣಾಟಕ ರಾಜ್ಯದಲ್ಲಿದ್ದಿತ್ತು. ಈತನು ಶ್ರೀನಾಥನ ಸಮಕಾಲದವನು; ಆತನ ಬಂಧುವೆಂದು ಕೆಲವರ ಹೇಳಿಕೆ. ಈತನ ಕಾಲವು ಕ್ರಿಸ್ತಶಕೆ ೧೪೦೫ರಿಂದ ೧೪೭೦–೭೦ರವರೆಗೆಂದು ನಿರ್ಣಯಿಸಲಾಗಿದೆ. ಈತನು ಕೌಂಡಿನ್ಯ ಗೋತ್ರದವನು. ಶ್ರೀ ಪರಮೇಶ್ವರ ಕರುಣಾಕಲಿತ ಕವಿತಾ ವಿಚಿತ್ರ ನೆಂದು ಹೇಳಿಸಿಕೊಂಡಿರುವುದರಿಂದ ಶಿವನ ಪ್ರಸಾದದಿಂದ ಈತನಿಗೆ ಕವಿತಾಸಂಪತ್ತು ಮತ್ತು ಸಹಜಪಾಂಡಿತ್ಯವು ಲಭಿಸಿರಬೇಕು. ಈತನು ರಾಜಾಶ್ರಯವನ್ನು ನಿರಾಕರಿಸಿ ಕೃಷಿಕಾಯಕದಿಂದ ಜೀವಿಸುತ್ತಿದ್ದ ಶರಣನು. ಈತನು ಪರಮಶೈವನೂ, ಶೈವಶಾಸ್ತ್ರ ಕೋವಿದನು. ಇವಟೂರಿ ಮಠದ ಮಹೇಶ್ವರರೇ ಈತನ ವಂಶಗುರುಗಳು. ಇವಟೂರಿ ಮಠವು ಪಾಲ್ಕುರಿಕಿ ಸೋಮನಾಥನಿಂದ ರಚಿಸಿದ ಮಠಗಳಲ್ಲಿ ಒಂದು. ಸೋಮನಾಥನು ಈತನ ಗುರುಗಳ ಮೂಲಗುರುವಾಗಿದ್ದನು. ಗೋಲಕೊಂಡ ಪ್ರಾಂತ್ಯದಲ್ಲಿ ಈಗಲೂ ವಾಡಿಕೆಯಲ್ಲಿರುವ ಈ ಕೆಳಗೆ ಕಂಡ ಪದವು ಈ ವಿಷಯವನ್ನು ಪುಷ್ಟಿಗೊಳಿಸುತ್ತಲಿದೆ.

> ಪಾಲಕುರ್ತಿನಿಲಯಾ ಸೋಮಯಲಿಂಗಾ ಪಾದಮುಲಕು ಶರಣು
> ಪುರುವುಗ ಬಮೇರ ಪೋತರಾಜುಕು ಮೀರು ಕೋರಿನ ವರಮುಲು ಕೃಪಚೇಸಿನಾರಟ।

ಈತನ ವಂಶೀಯರಾದ ಕೇಸನಮಲ್ಲನ್ನರಿಂದ ರಚಿಸಲ್ಪಟ್ಟ ದಾಕ್ಷಾಯಣೀ ವಿವಾಹದಲ್ಲಿ ಈತನ ವಂಶದವರು ಇವಟೂರಿಮುಕ್ತಿ ನಾಗೇಶ ಸದ್ಗುರು ಭಕ್ತಿನಾದಿಮ ಶೈವರೆಂದು ಹೇಳಲ್ಪಟ್ಟಿರುವರು ಮತ್ತು ಪೇರಯ್ಯಲಿಂಗನೆಂಬ ಈತನ ಮತ್ತೊಬ್ಬ ವಂಶೀಯನೂ, ಒಡೆಯನಂಬಿವಿಲಾಸವೆಂಬ ನಂಬ್ಯಣ್ಣ ಶಿವಶರಣನ ಕಥೆಯನ್ನು ಬರೆದಿರುವನು. ಈತನು ಶೈವನಾಗಿದ್ದರೂ ಒಂದಾನೊಂದು ಕಾಲದಲ್ಲಿ ಶ್ರೀರಾಮ ಭದ್ರನು ಈತನ ಕನಸಿನಲ್ಲಿ ಬಂದು ತನಗೆ ಅಂಕಿತವಾಗಿ ಭಾಗವತವನ್ನು ಬರೆಯಿಸ ಬೇಕೆಂದು ಹೇಳಿದ್ದರಿಂದ ಆಂಧ್ರಭಾಗವತವನ್ನು ಬರೆದುದಾಗಿ ಆತನ ಗ್ರಂಥದಿಂದ ತಿಳಿದುಬರುತ್ತದೆ. ಆ ಗ್ರಂಥದ ಚತುರ್ಥ ಸ್ಕಂಧದಲ್ಲಿ ಶಿವನ ಮತ್ತು ಶಿವಭಕ್ತರ ನಿಂದೆಯು ಹೇರಳವಾಗಿ ಬಂದದ್ದರಿಂದ ತನ್ನಿಮಿತ್ತಾಗಮ ವಕ್ತ್ರದೋಷ ಪರಿಹಾರಕ್ಕಾಗಿ ತನ್ನ ಗುರುವಾದ ಇವಟೂರಿ ಮಠಾಧ್ಯಕ್ಷನ ಆಜ್ಞೆಯ ಮೇರೆಗೆ ವೀರಭದ್ರವಿಜಯ ಕಾವ್ಯವನ್ನು ರಚಿಸಿರುವುದಾಗಿ ಹೇಳಿಕೊಂಡಿರುವನು. ಆ ಕಾವ್ಯದ ಪೀಠಿಕಾ ಪ್ರಕರಣ ದಲ್ಲಿ—ಶ್ರೀ ಬಸವೇಶ್ವರ ದೇವರನ್ನೂ, ಕಲ್ಯಾಣದ ಶಿವಶರಣರನ್ನೂ ಸ್ತುತಿಸಿರುವುದಲ್ಲದೆ ಆ ಶರಣರ ಪ್ರಭಾವಗಳನ್ನು ಹೊಗಳಿರುವನು. ಕೂಚಿಮಂಚಿ ತಿಮ್ಮಕವಿಯು ಈತನನ್ನು ಅಖಿಲ ವೇದಾಂತವಿದ್ಯಾರಹಸ್ಯವಿದ, ಸಹಜಪಾಂಡಿತ್ಯ ವಿಶಾರದ ಮತ್ತು ಕ್ಷಿತೀಶಾಧಮ ಸ್ತೋತ್ರವಿಮುಖ, ಶಂಭುಪದಾಬ್ಜಪೂಜಾರತ, ಪಟುತರಕವಿತಾವಿಭಾಸಿತಪ್ರಮುಖ, ಸಕಲಾಂಧ್ರಲಕ್ಷಣ ಚಕ್ರವರ್ತಿ, ಹೀಗೆ ಹೊಗಳಿಸಿಕೊಂಡಿರುತ್ತಾನೆ.

ಪಿಡುಪರ್ತಿ ಕವಿಗಳು—ಇವರು ಪಾಲ್ಕುರಿಕೆಯ ಸೋಮನಾಥನ ಶಿಷ್ಯ ಪ್ರಶಿಷ್ಯ ಕೋಟಿಗೆ ಸೇರಿದ ಮಾಹೇಶ್ವರರು. ಇವರಲ್ಲಿ ಅನೇಕರು ಪಂಡಿತರೂ ಕವಿಗಳೂ ಆಗಿಹೋಗಿರುತ್ತಾರೆ. ಅವರಲ್ಲಿ ಕೆಲವರ ವಿಷಯ ಇಲ್ಲಿ ಬರೆಯಲಾಗುತ್ತದೆ. ಇವರು ಸೋಮನಾಥನನ್ನು ತಮ್ಮ ಕುಲಗುರುವನ್ನಾಗಿ ಆರಾಧಿಸುತ್ತ ಬಂದಿರುವರು. ೧೩ನೆಯ

ಶತಮಾನದಿಂದ ೧೬ ನೆಯ ಶತಮಾನದ ಅಂತ್ಯದವರೆಗೂ ಆಂಧ್ರವಾಙ್ಮಯೇತಿಹಾಸದಲ್ಲಿ ಮೆರೆದವರು. ಸೋಮನಾಥನ ತರುವಾಯ ತೆಲುಗುನಾಡಿನಲ್ಲಿ ಶ್ರೀ ಬಸವೇಶ್ವರನ ಸಂದೇಶವನ್ನು ಪ್ರಚಾರಗೊಳಿಸಿ ವೀರಶೈವ ವಾಙ್ಮಯವನ್ನು ಅಭಿವೃದ್ಧಿಗೆ ತಂದವರೆಂದರೆ ಈ ಕವಿಗಳೇ. ಪಿಡುಪರ್ತಿ ಶಿವರಾತ್ರಿ ಕೊಪ್ಪಯ್ಯನೆಂಬ ಈ ವಂಶದ ಮೂಲಪುರುಷನು ಒಂದಾನೊಂದು ಕಾಲದಲ್ಲಿ ಓರಂಗಲ್ಲಿನ ಶಿವಭಕ್ತರು ಸ್ವಯಂಭೂದೇವನ ಮಂಟಪದಲ್ಲಿ ಸೋಮನಾಥನ ಬಸವಪುರಾಣ ಪ್ರವಚನವನ್ನು ಜರುಗಿಸುತ್ತಿರುವಾಗ ಆ ದೇವಾಲಯಕ್ಕೆ ಬಂದಿದ್ದ ಕಾಕತೀಯ ಪ್ರತಾಪರುದ್ರನು ಆ ಪುರಾಣ ಯಾವುದೆಂದು ಕೇಳಲು ರಾಜ ನೊಡನಿದ್ದ ಕೆಲವರು ಧೂರ್ತರು ಸೋಮನೆಂಬ ಪತಿತನು ರಚಿಸಿದ ಅಪ್ರಮಾಣ ಕಾವ್ಯವೆಂದು ನುಡಿದರಂತೆ. ಈ ಸುದ್ದಿಯು ಸೋಮನಾಥನಿಗೆ ಮುಟ್ಟಿ ಆಗ ಆತನು ಓರಂಗಲ್ಲಿಗೆ ಬಂದು ರಾಜನ ಆಸ್ಥಾನದಲ್ಲಿ ಪರವಾದಿಗಳನ್ನು ಜಯಿಸಿ ತನ್ನ ಶಿಷ್ಯನಾದ ಪ್ರತಾಪರುದ್ರನ ಮಂತ್ರಿ ಇಂದಟೂರಿ ಅನ್ನಯ್ಯನಿಂದ ತನ್ನ ಶಿಷ್ಯರಿಗಾಗಿ "ದೊಂಕಿಪರ್ತಿ" ಎಂಬುವ ಅಗ್ರಹಾರವನ್ನು ದಾನವಾಗಿ ಪಡೆದು ತಾನು ಕರ್ಣಾಟಕಕ್ಕೆ ಹೋದನಂತೆ. ಅಂದಿನಿಂದ ಆಂಧ್ರದೇಶದ ಶಿವಾನುಭವಿಗಳ ಪರಂಪರೆಯೊಂದು ಪ್ರಾರಂಭವಾಯಿತು. ಆ ಪರಂಪರೆಯಲ್ಲಿ ಪಿಡುಪರ್ತಿ ಶರಣರಿಗೆ ಅಗ್ರಸ್ಥಾನವುಂಟು. ಮುಂದೆ ಕಾಕತೀಯ ರಾಜ್ಯವು ಪತನವಾಗಲು ಮುಸಲ್ಮಾನರು ದೊಂಕಿಪರ್ತಿ ಅಗ್ರಹಾರವನ್ನು ಪಿಡುಪರ್ತಿ ವಂಶದವರಿಂದ ಸೆಳೆದುಕೊಂಡರು. ವಿಜಯನಗರದ ಚಕ್ರವರ್ತಿಯಾದ ಪ್ರೌಢ ದೇವರಾಯನು ಅದನ್ನು ಪುನಃ ದೊಡ್ಡ ಸೋಮಗುರುವಿಗೆ ಉಂಬಳಿಯಾಗಿ ಕೊಟ್ಟನು. ಆತನ ತರುವಾಯ ನಿಮ್ಮಯಾರ್ಯನು ಕ್ರಿಸ್ತ ಶಕೆ ೧೪೭೦ ರಲ್ಲಿ ಆ ಪ್ರಾಂತ್ಯದೊಳಗೆ ಪ್ರಖ್ಯಾತ ಕವಿಯೆಂದು ಪ್ರಸಿದ್ಧನಾದನು. ಈತನು "ನಿಜಲಿಂಗ ಚಿಕ್ಕಯ್ಯ ಕಥೆ", "ಒಡೆಯನಂಬಿಚರಿತೆ" ಗಳನ್ನು ಬರೆದಿರುವನು. ಇವು ಮುದ್ರಿಸಲ್ಪಟ್ಟಿಲ್ಲ. ಈತನ ಚಿಕ್ಕಪ್ಪ ದೇವನಾರ್ಯನ ಕುಮಾರನೇ **ಪಿಡುಪರ್ತಿ ಬಸವಕವಿ.** ಈತನು ಪಾಲ್ಕುರಿಕೆಯ ಸೋಮನಾಥನ ಕೃತಿಗಳನ್ನು ಪ್ರಕಾಶಕ್ಕೆ ತರಲು ಅವತರಿಸಿದ ಪ್ರತ್ಯಕ್ಷ ಬಸವೇಶ್ವರನೆಂದು ವರ್ಣಿಸಲ್ಪಟ್ಟಿರುವನು. ಈತನು ಬ್ರಹ್ಮೋತ್ತರ ಖಂಡ ದೀಕ್ಷಾಬೋಧೆ, ಪಿಲ್ಲನೈನಾರು ಕಥೆ ಮೊದಲಾದವುಗಳನ್ನು ರಚಿಸಿರುವನು. ಈತನ ಮಗನಾದ ಪಿಡುಪರ್ತಿ ಸೋಮನಾಥನು ತನ್ನ ತಂದೆಯ ಆಜ್ಞೆಯ ಮೇರೆಗೆ ಸೋಮನಾಥನ ದ್ವಿಪದ ಬಸವ ಪುರಾಣವನ್ನು ಆಂಧ್ರ ಚಂಪೂಕಾವ್ಯದಲ್ಲಿ ಬರೆದು ಪ್ರಸಿದ್ಧನಾದನು. ಇದಲ್ಲದೆ ಚಾಮರಸನ ಪ್ರಭುಲಿಂಗಲೀಲೆ ಯನ್ನು ಆಂಧ್ರ ದ್ವಿಪದದಲ್ಲಿ ಬರೆದನು. ಈತನ ಕಾಲವು ಹದಿನಾರನೆಯ ಶತಮಾನದ ಮಧ್ಯ ಭಾಗವು. ಈತನ ಕವಿತೆಯು ನಿರ್ದುಷ್ಟವಾಗಿಯೂ, ಸರಸವಾಗಿಯೂ, ಹೃದಯಂಗಮ ವಾಗಿಯೂ ಇರುವದು. ಈತನ ಕಲ್ಪನಾಶಕ್ತಿಯು ಅದ್ಭುತವು. ಚಾಮರಸನ ಕಾವ್ಯದಂತೆ ಈತನ ಪ್ರಭುಲಿಂಗಲೀಲೆಯು ಆಂಧ್ರಸಾಹಿತ್ಯದಲ್ಲಿ ಉನ್ನತ ಸ್ಥಾನವನ್ನು ಪಡೆದಿದೆ. ಸಿ. ಪಿ. ಬ್ರೌನ್ ಸಾಹೇಬರು ಅದನ್ನು ಬಹುವಿಧವಾಗಿ ಕೊಂಡಾಡಿರುವರು. ಸೋಮ ನಾಥನ ಶೈಲಿಯನ್ನು ಥಿಯಾಕ್ರಟೀಸ್, ಸ್ಕಾಟ್ ಮೊದಲಾದ ಪಾಶ್ಚಾತ್ಯದೇಶೀಯ ಕವಿಗಳ ಶೈಲಿಗೆ ಹೋಲಿಸಿರುವನು. ಆಂಧ್ರಭಾಷಾ ಯೋಷಾಮಣಿಗೆ ಈ ಕಾವ್ಯರತ್ನವು ಅನರ್ಘ್ಯಾಭರಣವಾಗಿ ಪ್ರಕಾಶಿಸುತ್ತಿರುವುದು. ಬಸವಪುರಾಣದ ಪೀಠಿಕಾ ಪ್ರಕರಣದಲ್ಲಿ ಬಸವಣ್ಣನನ್ನು ಈತನು—

ಚಂ॥ ಪ್ರಸವ ಶರಾಸನಾಂತಕುನಿ ಪಂಪುಸಮುನ್ನವತಾರಮೊಂದಿ ಶ್ರೀ ।
ಬಸವ ಪುರಾಣ ಸಂಕಥಿತ ಭಕ್ತಮಣಿಗ್ರಥನೈಕ ಸೂತ್ರಮೈ ।
ವಸುಮತಿ ವೀರಶೈವಮಭಿವರ್ಧನ ಮೊಂದಗಜೇಸಿನಟ್ಟಿಮಾ ।
ಬಸವನ ಮಂತ್ರಿ ಗೊಲ್ತು ಭವಬಂಧುರ ಸಿಧುವುದಾಟ ಗೊರಚುನ್ ॥

ಮತ್ತು ತನ್ನ ಪ್ರಭುಲಿಂಗಲೀಲೆಯ ಪ್ರಥಮ ಪ್ರಕರಣದಲ್ಲಿ—

ಘನ ಗುರುಲಿಂಗ ಜಂಗಮ ಸೇವಕೊರಕು ।
ತನು ಮನೋಧನಮುಲುದಾರ್ಚಿ ಸತ್ಕ್ರಿಯುಲು ।
ಸಲುಪುಚು ಭಕ್ತೈಕ ಸ್ಥಲಮುನ ನಿಲ್ಚಿ ।
ಮಲಹರು ಸದ್ಭಕ್ತಿ ಮಾರ್ಗಂಬು ಜೂಪಿ ।
ರಂಗುಗಾ ಭಕ್ತುಲ ರಕ್ಷಿಂಚುನಟ್ಟಿ ।
ಸಂಗನ ಬಸವಣ್ಣ ಶರಣಾರ್ಥಿ ಮಾಕು ॥

ಈ ಕಾವ್ಯಗಳಲ್ಲಿ ಅಲ್ಲಲ್ಲಿ ಕನ್ನಡ ವಚನಗಳು ತೆಲುಗು ಪದ್ಯಗಳಲ್ಲಿ ರೂಪಾಂತರಗೊಳಿಸಲ್ಪಟ್ಟಿರುತ್ತವೆ.

ಪಿಡುಪರ್ತಿ ಸೋಮನಾಥನ ತಮ್ಮನಾದ ಪಾಲನಾರ್ಯನ ಕುಮಾರನಾದ ಪಿಡುಪರ್ತಿ ಬಸವ—ಈ ಕವಿಯು ಪ್ರಭುಲಿಂಗಲೀಲೆಯನ್ನು ಚಂಪೂಕಾವ್ಯವಾಗಿ ಪರಿವರ್ತಿಸಿರುವನು. ಅದಕ್ಕೆ "ಶಿವಜ್ಞಾನ" ಎಂಬುವ ಬೇರೆ ಹೆಸರನ್ನಿಟ್ಟಿರುತ್ತಾನೆ. ಆರಂಭದಲ್ಲಿ ಶ್ರೀ ಬಸವೇಶ್ವರನನ್ನು—

ಘನ ಗುರುಲಿಂಗ ಜಂಗಮುನಿ ಕಾಯಮು ನಿತ್ಯಮು ಬೂಜ ಸೇಮಗಾ ।
ತನುವು ಮನಂಬು ದ್ರವ್ಯಮುನು ದಾಲಿಚಿ ಸತ್ಕ್ರಿಯಲಾಚರಿಂಪುಚೋ ।
ಬನು ಷಡಲಿಂಗನಿಷ್ಠ ಶಿವಭಕ್ತುಲಕೆಲ್ಲನು ಗಲ್ಲಜೇಮು ಸಂ ।
ಗನ ಬಸವನ್ನ ನೀಕು ಗುತುಕಂಬುಗ ಮ್ರೊಕ್ಕೆದ ನಿಷ್ಟಸಿದ್ಧಿಕಿನ್ ।

ಈ ಕವಿಯು ಚತುರ್ಥಾಶ್ವಾಸದಲ್ಲಿ ಬಸವನ ಬಗ್ಗೆ ಪ್ರಭುದೇವರ ಬಾಯಿಂದ ಈ ಕೆಳಗೆ ಬರೆದ ಪದ್ಯಗಳನ್ನು ಹೇಳಿಸಿರುವನು—

ಬಸವ ನೀನಾಮಂಬು ಪ್ರಣುತಿಗಾವಿಂಚಿನ ।
ಬಸವ ನೀ ಗುಣಮುಲ್ ಬೊಸಗವಿನ್ನ ।
ಬಸವನ್ನ ನಿನ್ನನು ಬರಗಗೀರ್ತಿಂಚಿನ ।
ಬಸವ ಮಾ ಪಾದಮೆಪ್ಪಾಟಗನ್ನ ।
ಬಸವ ನೀ ಮಂತ್ರಂಬು ಪಲುಮಾರು ಜಪಿಯಿಂಪ ।
ಬಸವ ನೀ ರೂಪು ಲೋಪಲ ನುತಿಂಪ ।
ಬಸವ ನೀ ಭಕ್ತಿಸಂಪದ ಜಾಲ ಪೊಗಡಿನ ।
ಬಸವನ್ನ ನೋರೂರ ಬಲುಕುಚುನ್ನ ।

ಪ್ರಬಲು ಭಕ್ತಿ ರಹಸ್ಯ ಮಾ ಭಕ್ತುಲೆರಿಗಿ ।
ಯೊನರಜೋಕೊಂದು ಶಿವುಡು ಸಾಯುಜ್ಯ ಪದವಿ ।
ನೀ ಮಹತ್ವಂಬು ಹರುಡು ವರ್ಣಿಂಪ ಗಲಡೇ ।
ಪಟುದಯಾಪಾಂಗ ಸಂಗನ ಬಸವಲಿಂಗ ॥

ತನಚೇತ ಧರಣಿಗೊಟ್ಟೆನ ।
ಘನಗಿರಿ ಗುರಿಜೇಸಿ ವೇಯುಗಾದಪ್ಪಿನಲಾ ॥
ಗುಣ ನಿನ್ನು ಗನ್ನಚೋಟನು ।
ಗನುಮರಗಿಂತ ಮುನುನೆಂದು ಗಲುಗದು ಬಸವಾ ॥

ತೆನಾಲಿ ರಾಮಲಿಂಗ ಕವಿ—ಈತನು ವಿಜಯನಗರ ಸಾಹಿತ್ಯ ಚರಿತ್ರೆಯಲ್ಲಿ ಹೆಸರಾದವನು. ಕೃಷ್ಣದೇವರಾಯನ (೧೫೦೯-೧೫೩೦) ಆಸ್ಥಾನದಲ್ಲಿದ್ದ. ಅಷ್ಟ ದಿಗ್ಗಜಗಳಲ್ಲಿ ಈತನೊಬ್ಬನೆಂದು ಸಾಮಾನ್ಯವಾಗಿ ವಾಡಿಕೆಯಲ್ಲಿ ಬಂದಿರುತ್ತದೆ. ಆದರೆ ಶ್ರೀ ವೀರೇಶಲಿಂಗಪಂತುಲು ಅವರು ಈತನು ನರಪತಿ ವಂಶದ ವೆಂಕಟಪತಿ ದೇವರಾಯನ (೧೫೮೮-೧೬೧೪) ಕಾಲದವನೆಂದು ಹೇಳುವರು. "ಉದ್ಭಟಾರಾಧ್ಯ ಚರಿತ್ರೆ" ಎಂಬುವ ಪ್ರೌಢ ಕಾವ್ಯವನ್ನು ಬರೆದಿದ್ದು ಅದರಲ್ಲಿ ಬಸವಾದಿ ಶಿವಶರಣರನ್ನೂ ನೆನೆದಿರುವನು. ಮುಂಜಭೋಜನು ತನ್ನ ಗುರುವಾದ ಉದ್ಭಟಾರ್ಯನಿಂದ ಶಿವದೀಕ್ಷೆಯನ್ನು ಪಡೆದ ಸಂದರ್ಭದಲ್ಲಿ ಅಲ್ಲಿ ನೆರೆದಿದ್ದ ಶಿವಭಕ್ತರು ಆತನನ್ನು ಈ ರೀತಿ ಆಶೀರ್ವದಿಸಿದರಂತೆ.

ಸೀಸಪದ್ಯ—

> ಸಿಂಧುಬಲ್ಲಹುರೀತಿ ಶ್ರೀಪತಿ ಪಂಡಿತು ।
> ಮರಿಯಾದಧೂಪದ ಮಾಚಿದೇವು ।
> ನಟ್ಲುಮಹಾಕಾಳು ನನುವು ನನಲ್ಲಕ ।
> ಲ್ಕದಬ್ರಹ್ಮದೇವ ಕಕ್ಕಯವಿಧಮುನ ।
> ಶೂಲದಬ್ರಹ್ಮಯ ಚೊಪ್ಪವ ಬಿಬ್ಬಬಾ ।
> ಚನಲೀಲ ವೀರನಾಚಾಂತುಪೋಲ್ಕಿ ।
> ಕದಿರೆರೆಮ್ಮಯಗಾರಿ ಕೈವಡಿದೆಲಗೇಶು ।
> ಮಸಣಯ್ಯ ಚಂದಾನ ಮಾಚಿರಾಜು ॥

ಗೀ॥—

> ಕರಣಿ ಮೌಳಿಗ ಮಾರಯ್ಯ ಗತಿದೆಲುಂಗು ।
> ಜೊಮ್ಮನಾರ್ಯ್ಯನಿ ವಡುವುನ ಸುರಿಯಚೌಡು ।
> ಪಗಿದಿ ಬಸವೇಶ್ವರುನಿ ಮಾಡ್ಕಿ ಭಕ್ತಿ ಮುಕ್ತಿ ।
> ಶಂಭುಭೂಜಿಂಚಿ ಬ್ರದುಕುಂ ರಾಜನ್ಯಚಂದ್ರ ॥

ಅಂದರೆ ಬಸವೇಶ್ವರಾದಿ ಶಿವಶರಣರಂತೆ ಶಿವನನ್ನು ಪೂಜಿಸಿ ಬಾಳೆಂದು ರಾಜನನ್ನು ಆಶೀರ್ವದಿಸಿದಂತೆ ಹೇಳಿರುವನು.

ವೇಮಣ್ಣ ಯೋಗಿಗಳು—ಇವರ ಕಾಲ ೧೫೦೦. ಆಂಧ್ರ ಸಾಹಿತ್ಯದಲ್ಲಿ ಸುಪ್ರಸಿದ್ಧ ಜನಪದ ಕವಿಗಳು. ಕನ್ನಡನಾಡಿನಲ್ಲಿ ಸರ್ವಜ್ಞ ಕವಿಗಿರುವ ಪ್ರಶಸ್ತಿಯೇ ಆಂಧ್ರ ದೇಶದಲ್ಲಿ ವೇಮಣ್ಣನವರಿಗಿರುತ್ತದೆ. ವೇಮಣ್ಣನವರು ಕವಿಗಳಾಗಿರುವಂತೆ ಯೋಗಿಗಳೂ ಆಗಿದ್ದರು. ಇವರು ರೆಡ್ಡಿಯ ವಂಶಕ್ಕೆ ಸೇರಿದವರಾಗಿದ್ದರೂ ವೀರಶೈವ ಸಂಸ್ಕೃತಿಯನ್ನು ಚೆನ್ನಾಗಿ ಅರಿತು ಅಳವಡಿಸಿಕೊಂಡವರಾಗಿರುತ್ತಾರೆ. ಇಂತಹ ಕವಿವರೇಣ್ಯರು ಶ್ರೀ ಬಸವಪುರಾಣದ ವಿಷಯದಲ್ಲಿ ತಮ್ಮ ೧೯೭೨ನೆಯ ಪದ್ಯದಲ್ಲಿ ಮುತ್ತಿನಂತಹ ಮಾತನ್ನು ಹೇಳಿರುತ್ತಾರೆ—

> ರಾಕ್ಷಸ ಹರಣಂಬು ರಾಮಾಯಣಮು ಚೂಡ ।
> ಬಂಧುನಾಶಮು ಗದಾ ಭಾರತಂಬು ।
> ಪಾಪಹರಣಮಯ್ಯೆ ಬಸವ ಪುರಾಣಂಬು ।
> ವಿಶ್ವದಾಭಿರಾಮ ವಿನುರವೇಮ ॥

ವೇಮಣ್ಣನವರ ಮೇಲಿನ ವಚನವನ್ನು ನೋಡಿದರೆ ನಿಜವಾಗಿಯೂ ಅವರ ವೀರಶೈವ ಧರ್ಮದ ಮರ್ಮವನ್ನು ತಿಳಿದವರೆಂದೆನ್ನಲು ಯಾವ ಸಂಶಯವೂ ಇರುವುದಿಲ್ಲ.

ಪೋಶೆಟ್ಟಿ ಲಿಂಗಕವಿ— ಈತನ ಕಾಲ ೧೫ನೆಯ ಶತಮಾನದ ಉತ್ತರಾರ್ಧ. ಕನ್ನರ ಮಠದ ಸದಾಗಾರ ಗುರುವಿನ ಶಿಷ್ಯನಾದ ಚನ್ನಬಸವನು ಈತನ ಕವಿತೆಯ ಗುರು. ಈತನು ಶಂಕರದಾಸೀಮಯ್ಯನ ಚರಿತ್ರೆ, ವೀರಸಂಗಯ್ಯದೇವ ಚರಿತ್ರೆ, ಮಲ್ಲಣ ಚರಿತ್ರೆ, ಶಿಷ್ಯಪ್ರಭೋದ ಮೊದಲಾದ ಗ್ರಂಥಗಳನ್ನು ರಚಿಸಿರುವನಲ್ಲದೆ ಬಗಿರಾಮುಪಲ್ಲಿ ನಿವಾಸಿ ಚಕಿಲಾಲ ಲಿಂಗಪ್ಪನೆಂಬುವವನ ಕೋರಿಕೆಯ ಮೇರೆಗೆ "ನವಚೋಳ ಚರಿತ್ರೆ" ಎಂಬುವ ಸುಂದರವಾದ ದ್ವಿಪದ ಕಾವ್ಯವನ್ನು ರಚಿಸಿ ಆ ಕ್ಷೇತ್ರದ ಮೃತ್ಯುಂಜಯ ಸ್ವಾಮಿಗೆ ಅಂಕಿತ ಮಾಡಿರುವನು. ಈತನು ತನ್ನನ್ನೂ, ತನ್ನ ಕೃತಿಪ್ರೇರಕ ನನ್ನೂ "ಹರಗುರುಭಕ್ತಿನಿಷ್ಠಾಪರಾಯಣರೆಂದು" ವರ್ಣಿಸಿರುವನು. ಕನ್ನಡ ಗ್ರಂಥಗಳ ಆಧಾರದ ಮೇರೆಗೆ ನವಚೋಳ ಚರಿತ್ರೆಯನ್ನು ಬರೆದುದಾಗಿ ಹೇಳಿರು ವನು. ಗ್ರಂಥಾದಿಯಲ್ಲಿ ಸಕಲ ಪುರಾತನ ಸಂಘವನ್ನೂ, ನೂತನ ಭಕ್ತವರರನ್ನೂ ಸ್ತುತಿಸಿರುವನು.

> ಬಸವೇಶು ಶ್ರೀಪಾದಪದ್ಮಷಟ್ಪದುಡು ಅಸದೃಶಭಕ್ತಿ ಯೋಗಾನಂದಮೂರ್ತಿ ।
> ಭವಿಸಮಾಚರಣ ಸಂಭಾವವರ್ಜಿತುಡು । ನವಿರನಿತ್ಯ ಸತ್ಯಾಯತಕೀರ್ತಿ ।
> ಬಸವೇಶ್ವರುನಿ ಗದ್ಯಪದ್ಯ ಸತ್ಕೃತುಲ । ರಸಿಕತ ಗೊನಿಯಾಡು ರಾಜತೈಶ್ವರ್ಯ ॥

ಗುರುಮೂರ್ತಿ ಪಾಲ್ಕುರಿಕಿ ಸೋಮೇಶನನ್ನು ವೆಗ್ಗಳವಾಗಿ ಸ್ತೋತ್ರಮಾಡಿರು ವನು. ಕೃತಿಗೊಡೆಯನಿಗೂ, ಬಸವೇಶ್ವರನಿಗೂ ಅಭೇದವನ್ನು ಹೇಳಿರುವನು.

ಭದ್ರಕವಿ ಲಿಂಗಭೂವಿಭುವು— ಈ ಕವಿ ರಾಮಯ್ಯಪ್ರಭುವಿನ ಮಗನು. ಸಂಗಮೇಶ್ವರನ ಶಿಷ್ಯನು. ಮುದನೂರು ರಾಮನಾಥನಿಗೆ ಅಂಕಿತವಾಗಿ ದೇವಾಂಗ ಪುರಾಣವೆಂಬ ತೆಲುಗು ಕಾವ್ಯವನ್ನು ಬರೆದಿರುತ್ತಾನೆ. ತನ್ನ ಗ್ರಂಥದಲ್ಲಿ ಪಾಲ್ಕುರಿಕೆ ಸೋಮನಾಥ, ಪಿಡುಪರ್ತಿ ಬಸವಕವಿ ಮುಂತಾದವರನ್ನು ಸ್ತುತಿಸಿರುವನು. ೧೬ನೆಯ ಶತಮಾನದಿಂದೀಚಿನವನು. ತನ್ನ ತಂದೆಯನ್ನು ಶಿವಧರ್ಮಶಾಸ್ತ್ರಕೋವಿದನೆಂದೂ, ಪರಮಶಿವಜ್ಞಾನಭರಿತಾತ್ಮನೆಂದೂ ವಿಶೇಷಿಸಿರುವನು. ಈ ಗ್ರಂಥದಲ್ಲಿ ದೇವಾಂಗ ಕುಲದ ಉಗಮ ಹೇಳಲ್ಪಟ್ಟಿದೆ. ಈ ವಂಶದ ಮೂಲಪುರುಷನು ಶ್ರೀ ಬಸವೇಶ್ವರನ ವರದಿಂದ ಜನಿಸಿದನೆಂದೂ ಕವಿಯು ಹೇಳಿರುವನು. ಈತನು ಸಾನಂದಚರಿತ್ರವೆಂಬ ದ್ವಿಪದ ಕಾವ್ಯವನ್ನು ಬರೆದು ಕಾಳಹಸ್ತಿಯ ಚನ್ನವೀರ ಶಿವಯೋಗಿಯ ಶಿಷ್ಯನಾದ ವೀರೇಶ್ವರ ಶಿವಯೋಗಿಗೆ ಅಂಕಿತಗೊಳಿಸಿರುವನು.

ಸೋಮನಾರಾಧ್ಯ— ಈ ಕವಿಯು ಪೂಟ್ಕೋಟ ಸಿದ್ಧರಾಮದೇಶಿಕನ ಶಿಷ್ಯನು. ೧೮ನೆಯ ಶತಮಾನದವನಿರಬಹುದು. "ಬಸವಲಿಂಗಶತಕಮು" ಎಂಬುವ ಗ್ರಂಥ ವನ್ನು ರಚಿಸಿರುತ್ತಾನೆ. ಮೊದಲನೆಯ ಪದ್ಯದಲ್ಲಿ—

ಸೀಸಪದ್ಯ—

> ಶ್ರೀಗುರುಲಿಂಗ ಸಂಚಿತ ಕೃಪಾಯತತೇಜ ।
> ಕಾಮಿತಾಖಿಲಲೋಕ ಕಲ್ಪಭೂಜ ।
> ಮಾನಿತಶಿವಮಂತ್ರ ಮಾನಸಮುನಿದೀಪ ।
> ಸಹಜಪ್ರಸನ್ನ ಪ್ರಸಾದರೂಪ ।

ಸಗುಣನಿರ್ಗುಣ ಲಿಂಗಜಂಗಮು ಸುವಿಧಾನ ।
ಘನವೀರಶೈವ ಮಾರ್ಗಪ್ರವೀಣ ।
ವರಭಕ್ತಿ ಸುಜ್ಞಾನ ವೈರಾಗ್ಯ ಸುಕ್ಷೇಮು ।
ಸಕಲಸನ್ನುತಗುಣ ಸಾರ್ವಭೌಮು ।

ಗೀ.—

ಚೆಲಗಿ ಭವದಾಜ್ಞ ವಿರಚಿಂತು ಶ್ರೀಶತಕ । ಮಿಂಪುಪೆಂಪೊಂದಿವೆಲಯ ಬಾಲಂಪುಸಯ್ಯ ।
ಕಲಿತ ಸಜ್ಜನ ಹೃತ್ಸಂಗ ಕಾರಣಾಂಗ । ಪಟುದಯಾಪಾಂಗ ಶ್ರೀಗುರುಬಸವಲಿಂಗ ॥

ಗದ್ದೆ ರಾಮಲಿಂಗಕವಿ—ಈತನ ಕಾಲ ೧೮ನೆಯ ಶತಮಾನ. ಭೀಮವರ ಪ್ರಾಂತ್ಯದವನು. ಶಿದ್ಧರಾಮಶಿವನು ತನ್ನ ಗುರುವೆಂದು ಹೇಳಿಕೊಂಡಿರುವನು. ಈತನು ಚೋಡಲಿಂಗ ಶತಕ, ಪರವಾದಿ ಗಜಾಂಕುಶಗಳನ್ನು ರಚಿಸಿರುವನು. ನಾಲ್ಕನೆಯ ಪದ್ಯದಲ್ಲಿ ಬಸವೇಶ್ವರನ ಸ್ತುತಿ ಇರುತ್ತದೆ.

ಜಂಗಮುತೀರ್ಥ ಘನಸಾರಸಮುಗ್ನುಡು ಲಿಂಗಮೂರ್ತಿೀತ ।
ಜ್ಜಂಗಮುಮುಂಚು ಗೊಲ್ಚುಚುನು ಸಂಗಮುಧೇವುನಿ ಶಿಷ್ಯರತ್ನಮ್ಯೆ ।
ಜಂಗಮುಕೋರ್ಕುಲನ್ನೊಸಗು ಸನ್ಮತಿ ಶ್ರೀಬಸವೇಶಮೂರ್ತಿ ನಾ ।
ಲಿಂಗಮು ಪೊಂಚು ಗೊಲ್ಚಿ ಕೃತಿಲೀಲ ರಚಿಂಚೆದ ಚೋಡಲಿಂಗಮಾ ॥

ಮುಗ್ಗಿ ಶೆಟ್ಟಿ ಉಳಿವಪ್ಪರೇಡು—ಈತನ ಕಾಲ ೧೮ನೆಯ ಶತಮಾನ. ಈತನು ಅನೇಕ ಕೀರ್ತನೆಗಳನ್ನೂ ಮತ್ತು ಶೈವಚರಿತ್ರೆ, ಕೇದಾರವತೀ ಕಥೆ, ಮಲ್ಲೆಲ ರಾಮಲಿಂಗಶತಕ, ಭಕ್ತಜನಸಂಗ ಭಕ್ತುಲ ಪ್ರಾಣಲಿಂಗ ರತ್ತಿ ಮಲರಂಗ ಮಲ್ಲೆಲ ರಾಮಲಿಂಗವೆಂಬ ಅಂಕಿತವುಳ್ಳದ್ದು. ಇದರ ಭಾವವು ಬಹಳ ಉತ್ಕೃಷ್ಟವಾದುದಾಗಿರುತ್ತದೆ. ಶ್ರೀ ಬಸವಣ್ಣನವರ ಬಗ್ಗೆ ಕೆಳಗೆ ಬರೆದ ನುಡಿಗಳಿರುತ್ತವೆ—

ಭಕ್ತಾಗ್ರಗಣ್ಯುಂಡು ಬಸವೇಶ್ವರುಂಡನಿ ಪಲ್ಕಲು ವೇದಮುಲ್ ಪಾಟಗಾದು ।
ಜಂಗಮಾರ್ಚನ ಚೇಸಿ ಸಂಗನ ಬಸವನ್ನ ಕಲಿಯುಗ ರುದ್ರುಡೈ ಘನತಕೆಕ್ಕೆ ॥

ಸಿದ್ಧರಾಮುಕವಿ— ಈತನ ಕಾಲ ೧೮೦೦. ಸೊನ್ನಲಾಪುರದ ಸಿದ್ಧರಾಮನ ಭಕ್ತನು. ಕೇದಾರದೇವನ ಶಿಷ್ಯನು. ಚಿತ್ಕಳಾಧಾಮು ಶ್ರೀ ಗುರುಸಿದ್ಧರಾಮು ಎಂಬ ಅಂಕಿತವುಳ್ಳ ಸಿದ್ಧರಾಮುಶತಕವನ್ನು ಬರೆದಿರುವನು. ಶತಕದಲ್ಲಿ ತಾನು ಶಿವಶರಣರ ಬಂಟನೆಂದು ಹೇಳಿಕೊಂಡಿರುತ್ತಾನೆ.

ಬಸವಪುರಾಣಾದಿ ಬಹುಶಾಸ್ತ್ರ ತತುವೆಂಚು ।
ಪಾಲ್ಕುರಿಕಿ ಸೋಮೇಶು ಬಂಟುಬಂಟ ।
ವರ್ಣಿತಸುಜ್ಞಾನ ವಚನಾದುವೆರೆಗಿಂಚು ।
ಪ್ರಭು ಮಹಾದೇವನಿ ಬಂಟು ಬಂಟ ।
ಪರಮರಹಸ್ಯ ಪ್ರಬಂಧಾದು ನೊನರಿಂಚು ।
ಬಲು ಚನ್ನಬಸವೇಶ ಬಂಟು ಬಂಟ ।
ದೀಕ್ಷಾವಿಧಾನಕ್ಷಂಬುದೆನಗಿಂಚು ಪಿಡುಪರ್ತಿ ।
ಬಸವೇಶ್ವರಸ್ವಾಮಿ ಬಂಟು ಬಂಟ ।

ಗೀ.॥ ಮರಿಯು ಮರವೀರಶೈವ ಸನ್ಮಾರ್ಗಭವ್ಯ ।
ಕಾವ್ಯಲಕ್ಷಣಗಣ ವಿಚಕ್ಷಣುಲ ಬಂಟ ।
ಗಾನನೇ ನೇರ್ಚು ಪಾಡೇಗಾ ಭೂನಿತಯ್ಯ ।
ಚಿತ್ಕಳಾಧಾಮು ಶ್ರೀ ಗುರುಸಿದ್ಧರಾಮು ।

ಚನ್ನಾಪ್ರೆಗಡ ನಾಗರಾಜು—ಈತನ ಕಾಲ ೧೭೫೦. ಈತನು ಆರುವೇಲ ನಿಯೋಗಿ ಬ್ರಾಹ್ಮಣನು, ಆಪಸ್ತಂಭಸೂತ್ರ, ಗೋದಾವರೀ ಮಂಡಲದವನು. ಈತನ ಚನ್ನಾಪ್ರೆಗಡ ವಂಶವು ಬಹು ಪುರಾತನವಾದರೂ ಈತನ ಪೂರ್ವಜರು ಪ್ರಭುಗಳಲ್ಲಿ ಮಂತ್ರಿಗಳಾಗಿದ್ದು ಆಂಧ್ರಚರಿತ್ರದಲ್ಲಿ ಹೆಸರಾದವರು. ಬ್ರಹ್ಮಲಿಂಗಮು ಎನ್ನುವವನು ಈತನ ಮತಗುರುವು. ಮಲ್ಲಂಮಲ್ಲಿ ರಾಮಲಿಂಗ ಗುರುವು ಈತನಿಗೆ ಲಿಂಗಧಾರಣ ದೀಕ್ಷೆಯನ್ನು ಕೊಟ್ಟವನು. ಈತನು ಗಣಸೌಜನ್ಯಾಖ್ಯಾನಶತಕವನ್ನು ಬರೆದಿರುತ್ತಾನೆ. ಅದರಲ್ಲಿ ಶಿವಭಕ್ತರನ್ನು ಸ್ತುತಿಸಿರುವನು.

"ಅಲ್ಲಮದೇವು ಸತ್ಯಪಯುನಾ ಬಸವೇಶ ಮಹೋನ್ನತತ್ವಮುನ್ ।
ದೆಲ್ಲ ಮಿನಾಗಮಿಾದ ಸರಿದೇವಯ ಪಾಕ್ತಗ ಭೃತ್ಯಭಾವಮುನ್ ॥
ಚೆಲ್ಲುಗ ಸಿದ್ಧರಾಮುನಿ ಗಭೀರ ಶಿವತ್ವಮುನೊಕ್ಕಟೈ ನಮು ।
ದ್ವಲ್ಲಭುಡಾಳ ಮೂನ್ಯಸುತುದಲ್ಚಿ ಭಜಿಂಚಿದ ಬ್ರಹ್ಮಲಿಂಗಮುನ್ ॥"

ಈ ಕವಿಯು ಸಿದ್ಧಾಂತಶಿಖಾಮಣಿಯನ್ನು ಆಂಧ್ರದ್ವಿಪದಕಾವ್ಯವಾಗಿ ಬರೆದಿರುತ್ತಾನೆ. ಅದು ಮದ್ರಾಸ್ ಪ್ರಾಚ್ಯಲಿಖಿತ ಪುಸ್ತಕಭಂಡಾರದಲ್ಲಿರುತ್ತದೆ.

ಅಮಲಾಪುರ ಸನ್ಯಾಸಿಕವಿ—ಈತನ ಕಾಲ ೧೭೬೦. ಈತನು ಅನೇಕ ಶತಕಗಳನ್ನು ಆಂಧ್ರಭಾಷೆಯಲ್ಲಿ ಬರೆದಿರುತ್ತಾನೆ. ಅವುಗಳಲ್ಲಿ ಪಂಚಮುಖೇಶಶತಕ, ಮುಖಲಿಂಗಶತಕ, ಶಿವಶತಕ, ಪಂಚಮುಖೇಶ್ವರ ಪ್ರಭೂತಶತಕ, ವಿಶ್ವನಾಥಶತಕ ಮೊದಲಾದವು ಮುಖ್ಯವಾಗಿರುತ್ತವೆ. ಈತನ ಶತಕಗಳಲ್ಲಿ ಶಿವಶರಣರ ಸ್ತೋತ್ರಗಳು ಹೇರಳವಾಗಿರುತ್ತವೆ.

ಪರಿಮಿ ವೆಂಕಟಾಚಲಕವಿ—ಈತನು ಕೂಡಲ ಸಂಗಮೇಶ್ವರ ಶತಕವನ್ನು ಬರೆದಿದ್ದಾನೆ. ಅದರಲ್ಲಿಯ ಒಂದು ಪದ್ಯದಲ್ಲಿ ತನ್ನ ಇಷ್ಟದೇವತೆಯನ್ನು ಕುರಿತು ಈ ರೀತಿ ಸಂಬೋಧಿಸಿ ಹೇಳಿರುವನು—

"ನೆಯ್ಯುಮ ಮಿಾರದೊಲ್ಲಿ ಕರುಣಿಂಪವೆ ಸತ್ಯಪತೋಡ ।
ಮಾದಿರಾಜಯ್ಯನು ಬಂಡಿತಾರ್ಯು ಬಸವನ್ನನು ಶಾನಿಮಯಾದಿ ।
ಕಾಟಕೋಟಯ್ಯನು ದೇಶಿರಾಜು ಶಿರಿಯಾಳುನಿ ಜೋಳಮಹೀಶುಮಯ್ಯಯು ।
ಚಾಟಿರಾಜು ದರಸಯ್ಯನು ಕೂಡಲಸಂಗಮೇಶ್ವರಾ ॥"

## ಆಂಧ್ರ ಕವಿತೆಗಳು

ಬಸವಣ್ಣನ ಮತ್ತು ಆತನ ತತ್ವಗಳ ಪ್ರಭಾವವನ್ನು ಅಪಾರವಾದ ಆಂಧ್ರಶತಕ ವಾಙ್ಮಯದಲ್ಲಿ ವಿಶೇಷವಾಗಿ ಕಾಣಬಹುದು. ಬಸವಣ್ಣನ ವಚನಗಳ ಪ್ರತಿಧ್ವನಿಯನ್ನು ನಾವು "ಅನ್ನಮಾರ್ಸನ" ಸರ್ವೇಶ್ವರಶತಕ, ಧೂರ್ಜಟಿಯ ಕಾಳಹಸ್ತೀಶ್ವರಶತಕ, ಶ್ರೀಗಿರಿ ವಿರೂಪಾಕ್ಷನ ಕಾಳಹಸ್ತಿಲಿಂಗಶತಕ ಮತ್ತು ಸುಪ್ರಸಿದ್ಧವಾದ ವೇಮನ್ನ ಶತಕ ಮುಂತಾದ ಶತಕರಾಜಗಳಲ್ಲಿ ಕೇಳಬಹುದು. ಇದಲ್ಲದೆ ಕೀರ್ತನೆ, ಯಕ್ಷಗಾನ ಮುಂತಾದ ತೆಲುಗುವಾಙ್ಮಯದಲ್ಲಿ ಬಸವೇಶ್ವರನ ವಿಷಯ ಹೆಚ್ಚಾಗಿ ಕಂಡುಬರುತ್ತದೆ. ಪೂತ್ಕೋಟಿ ಮಠಾಧ್ಯಕ್ಷರು "ಬಸವಲಿಂಗಶತಕಮು" ಎಂಬುವದನ್ನು ರಚಿಸಿರುತ್ತಾರೆ.

ವಟ್ಟಾರುಪಾರೆಂ(ಕೃಷ್ಣಾ ಜಿಲ್ಲ) ಬಸವಯ್ಯನವರು—ಇವರು ಆಧುನಿಕರು–೧೯೦೦. ಬಸವಣ್ಣನವರ ಬಗ್ಗೆ ಕೀರ್ತನೆಗಳನ್ನು ರಚಿಸಿರುತ್ತಾರೆ. ಇವರು ಬರೆದ ಶಿವಶತಕವೆಂಬ ಶತಕದಲ್ಲಿ ಲಿಂಗಾಂಗಸಾಮರಸ್ಯದ ಜ್ಞಾನದ ತಿರುಳನ್ನು ಬಹು ಸುಲಭ ಭಾಷೆಯುಲ್ಲಿ ಪ್ರತಿಪಾದಿಸಿರುವರು. ಇವರ ಬಸವೇಶ್ವರ ಕೀರ್ತನೆಗಳಲ್ಲಿ ಒಂದನ್ನು ಇಲ್ಲಿ ಕೊಡುತ್ತೇವೆ.

ಬಸವನ ನಾಮಮು ಫಲುಮುದು ಭಕ್ತಿನಿ ಪಠಿಯಿಂಚಂಡನ್ನಾ ।
ಪಸಚೆಡಿ ಭವರೋಗಂಬುಲು ತಪ್ಪಕ ಪಾರಿಪೋವುನನ್ನಾ ।
ಬಸವನ ದಲಚೆಡಿ ಮುಖಪದೇಂಬುಬಾಯುುಡು ಶಿವುಡನ್ನಾ ।
ಬಸವಡನ್ನ ದ್ವಿತೀಯ ಶಂಭುಡೇ ಭಕ್ತಿದೆಲಿಯುುಡನ್ನಾ ॥

ಅನುಮೋದ ಸನ್ಯಾಸಿಕವಿ— ಈತನು ಬಸವಕಲ್ಯಾಣ ಎಂಬುವ ಯಕ್ಷಗಾನ ಕಾವ್ಯವನ್ನು ಬರೆದಿರುತ್ತಾನೆ. ಇದರಲ್ಲಿ ಬಸವಣ್ಣನವರ ವರ್ಣನೆಯುನ್ನು ವಿಶೇಷವಾಗಿ ಮಾಡಿರುತ್ತಾನೆ.

## ಬಸವಚರಿತ್ರೆಯ ಬಗ್ಗೆ ಗ್ರಂಥಗಳು

ಪಾಲ್ಕುರಿಕೆಯ ಸೋಮನಾಥ ಮತ್ತು ಪಿಡುಪರ್ತಿ ಕವಿಗಳಾನಂತರ ಆಂಧ್ರ ವಾಙ್ಮಯದಲ್ಲಿ ಬಸವಚರಿತ್ರೆಯ ಬಗ್ಗೆ ಅನೇಕ ಗ್ರಂಥಗಳು ಹುಟ್ಟಿರುತ್ತವೆ. ಅವುಗಳಲ್ಲಿ ಕೆಲವು ಕವಿಗಳ ಪರಿಚಯುವನ್ನು ಇಲ್ಲಿ ಮಾಡಲ್ಪಡುವದು.

ಅತ್ತವಾರಿ ಪಾಪಕವಿ—ಈತನ ಕಾಲ ೧೬೬೦. ಈತನು ಆರಾಧ್ಯಬ್ರಾಹ್ಮಣನು. ಇವನು ಚನ್ನಬಸವಪುರಾಣಮು ಮತ್ತು ಶ್ರೀಶೈಲಖಂಡ ಎಂಬೆರಡು ಆಂಧ್ರಕಾವ್ಯ ಗಳನ್ನು ರಚಿಸಿರುತ್ತಾನೆ. ಚನ್ನಬಸವಪುರಾಣವು ಸ್ವತಂತ್ರವಾದ ಪ್ರೌಢಗ್ರಂಥ. ಇದರಲ್ಲಿ ಚನ್ನಬಸವಣ್ಣನ ಚರಿತ್ರೆಯ ಜೊತೆಗೆ ಬಸವಣ್ಣನ ಚರಿತ್ರೆಯೂ ಸಹ ನಿರೂಪಿ ಸಲ್ಪಟ್ಟಿರುತ್ತದೆ. ಇದು ಕನ್ನಡ ಚನ್ನಬಸವಪುರಾಣದ ಆಂಧ್ರಾನುವಾದವಿರಬಹು ದೆಂದು ಕೆಲವರು ತಿಳಿಯಬಹುದು. ವಿರೂಪಾಕ್ಷ ಪಂಡಿತನ ಚನ್ನಬಸವಪುರಾಣಕ್ಕೂ ಇದಕ್ಕೂ ಯಾವ ಸಂಬಂಧವೂ ಇರುವದಿಲ್ಲ. ಕಲ್ಯಾಣದ ಕ್ರಾಂತಿಯ ಇತಿಹಾಸದ ಮೇಲೆ ಇದು ಹೆಚ್ಚು ಬೆಳಕನ್ನು ಬೀರುವಂತಿರುತ್ತದೆ. ಈ ಪುರಾಣವನ್ನು ಪೂರ್ವದಲ್ಲಿ ರೇಣುಕಾಚಾರ್ಯರು ಅಗಸ್ತ್ಯಮುನಿಗೆ ಬೋಧಿಸಿದಂತೆ ಕವಿಯು ಹೇಳಿರುತ್ತಾನೆ. ಈತನು ತೆಲುಗು ಕವಿಗಳಲ್ಲಿ ಪಾಲ್ಕುರಿಕೆಯ ಸೋಮನಾಥನನ್ನು ಮಾತ್ರ ನೆನೆದಿರುವನು. ಈತನು ತನ್ನ ಅಣ್ಣನಾದ ಬಸವಮಂತ್ರಿಯನ್ನು ವರ್ಣಿಸುವಾಗ ಬಸವೇಶ್ವರನ ಸಾಮ್ಯವನ್ನು ಹೇಳಿರುವನು—

ಚಂ॥ ಅನವುಡು ಮಂದಹಾಸವದನಾಂಬುಲಜುಡ್ಡೆಯ ಪುಡತ್ತಪಾರಿ ಪಾ ।
ವನಕುಲಜಕ್ಕಿ ರಾಜುನಕು ಚೌತ್ರುಡುಂ ಶ್ರೀಗಿರಿ ಮಂತ್ರಿಮೌಳಿಕಿನ್ ।
ಘನಮತಿ ಸುಂದರಾಂಬಿಕಕು ನಂದನು ಡಬ್ಬಸವೇಶಡೇಯುನಂ ।
ಜನು ಬಸವೇಶುಮಂತ್ರಿಕನು ಜನ್ಮನಿಜಾಪಯ ಸತ್ಕವೀಂದ್ರುನಿನ್ ॥

ಬಚ್ಚುಸಿದ್ಧಕವಿ— ಈತನು ಸಿರಿಪುರಿವೀರಸಂಗಯ್ಯನ ಕರಕಮಲಜನಿತನೆಂದೂ, ಚರಲಿಂಗಮರ್ದಲ ಪರ್ವತಾರ್ಯನ ಶಿಷ್ಯನೆಂದೂ ಹೇಳಿಕೊಂಡಿರುವನು. ಸಂಗಯ್ಯ ನೆಂಬುವನನ್ನು ಕಥೆಯ ಶ್ರೋತೃವನ್ನಾಗಿ ಮಾಡಿಕೊಂಡು "ಮರಿಬಸವ ಪುರಾಣಮು"

ಎಂಬ ಪುರಾಣವನ್ನು ಬರೆದಿರುವನು. ಈ ಕಥೆಯನ್ನು ಈತನು ಚಿಕ್ಕವೀರಾಚಾರ್ಯ ನಿಂದ ತಿಳಿದುಕೊಂಡನಂತೆ. ಪಾಲ್ಕುರಿಕೆ ಸೋಮನಾಥನ ಕವಿ ಸಮಯವನ್ನು ಅನುಸರಿಸಿ ಆತನನ್ನೂ, ಬಸವೇಶ್ವರನನ್ನೂ ಭಕ್ತಿಭಾವದಿಂದ ಕೊಂಡಾಡಿರುತ್ತಾನೆ. ಈ ಗ್ರಂಥವು ಅಚ್ಚಾಗಿರುವದಿಲ್ಲ. ಕೆಲವರು ಮರಿಬಸವೇಶ್ವರನು ಬಸವೇಶ್ವರನಂತೆ ಬೇರೊಬ್ಬ ಮತೋದಾರಕನಿದ್ದನೆಂದು ಹೇಳುವರು. ಮತ್ತೆ ಕೆಲವರು ಕನ್ನಡ ಮಲ ಬಸವ ಪುರಾಣದ ಅನುಕರಣವಾಗಿದ್ದು ತೆಲುಗಿನಲ್ಲಿ ಮರಿಬಸವಪುರಾಣವೆಂದಾಯಿ ತೆನ್ನುವರು. ಇನ್ನೂ ಕೆಲವರು ಈ ಗ್ರಂಥದಲ್ಲಿ ಬಸವಣ್ಣನ ಬಗ್ಗೆ ಇನ್ನೂ ಕೆಲ ಹೆಚ್ಚು ಸಂಗತಿಗಳು ಉಲ್ಲೇಖಿಸಲ್ಪಟ್ಟಿರುವದರಿಂದ ಈ ಹೆಸರು ಬಂದಿರುವದೆಂದು ಹೇಳುವರು. ಮೂಲಗ್ರಂಥ ಬೆಳಕಿಗೆ ಬಾರದೆ ಏನೂ ಹೇಳಲಿಕ್ಕೆ ಬರಲಾರದು.

ಜಿ. ಜೆ. ಸೋಮಯಾಜಿಗಳು—ಇವರು ೨೦ನೆಯ ಶತಮಾನದವರು. ಇವರು "ಮತೋದ್ಧಾರಕರು" ಎಂಬುವ ಚಂಪೂ ಕಾವ್ಯವನ್ನು ಬರೆದಿರುತ್ತಾರೆ. ಈ ಚಂಪೂ ಕಾವ್ಯವು ಬಸವಣ್ಣನವರ ಚರಿತ್ರೆಯೇ ಆಗಿರುತ್ತದೆ. ೧೯೨೬ ರಲ್ಲಿ ಈ ಚಂಪೂಕಾವ್ಯವು ಪ್ರಕಟವಾಗಿದೆ.

ಮಹಾಮಹೋಪಾಧ್ಯಾಯ ಮುದಿಗೊಂಡ ನಾಗಲಿಂಗಾರಾಧ್ಯರು— ಇವರು ಆಂಧ್ರದೇಶದ ಆಧುನಿಕ ವಿದ್ವಾಂಸರಲ್ಲಿ ಪ್ರಖ್ಯಾತರಾದ ಪಂಡಿತರು. "ಬಸವಭೂಷಣ" ಎಂಬ ಉತ್ಕೃಷ್ಟ ವಚನಪ್ರಬಂಧವೊಂದನ್ನು ಪ್ರಕಟಿಸಿರುವರು. ಇವರು ಆರಾಧ್ಯ ಬ್ರಾಹ್ಮಣ ಸಮಾಜದ ಪೀಠಾಚಾರ್ಯರು. ಆರಾಧ್ಯರಲ್ಲಿ ಕೆಲವರು ಬಸವಣ್ಣನವರ ಬಗ್ಗೆ ಕುತರ್ಕಗಳನ್ನು ಎಬ್ಬಿಸಿದ್ದರು. ಅವುಗಳನ್ನು ಖಂಡಿಸುವ ಉದ್ದೇಶದಿಂದ 'ಶೈವ ರಹಸ್ಯಬೋಧಿನೀ' ಎಂಬ ಮಾಸಪತ್ರಿಕೆಯನ್ನು ತೆಗೆದುದಲ್ಲದೆ ಮೇಲೆ ಬರೆದ ಬಸವ ಭೂಷಣವೆಂಬುವ ಮನನೀಯ ಲೇಖವನ್ನು ಪ್ರಕಟಿಸಿರುತ್ತಾರೆ.

ಹೀಗೆಯೇ ಇನ್ನೂ ಅನೇಕ ವಿದ್ವಾಂಸರು ಶ್ರೀ ಬಸವಣ್ಣನವರ ಬಗ್ಗೆ ಆಂಧ್ರ ವಾಙ್ಮಯದಲ್ಲಿ ಪ್ರಚಂಡತರವಾಗಿ ಕಾರ್ಯಮಾಡಿ ಬಸವತತ್ವಗಳನ್ನು ಎತ್ತಿ ಹಿಡಿದಿರು ತ್ತಾರೆ. ಆದರೆ ಇನ್ನೂ ಎಷ್ಟೋ ಗ್ರಂಥಗಳು ಅಚ್ಚಿನ ಮನೆಯನ್ನು ಕಾಣದೆ ಇರುವದ ರಿಂದಲೂ, ಕೈಬರಹದ ಪ್ರತಿಗಳು ಸಿಗದೇ ಇರುವದರಿಂದಲೂ ಈ ಕಾರ್ಯ ಪರಿಪೂರ್ಣತೆ ಯಾಗುವದು ಕಷ್ಟದಾಯಕವಾಗಿದೆ. ಸಂಪೂರ್ಣವಾಗಿ ಎಲ್ಲ ಕೃತಿಗಳೂ ಹೊರಬಿದ್ದರೆ ಬಸವಣ್ಣನವರ ಚರಿತ್ರೆಯ ಮೇಲೆ ಅಗಾಧವಾದ ಬೆಳಕು ಬೀಳುವಂತಿರುತ್ತದೆ. ಬಸವಣ್ಣನವರ ಬಗ್ಗೆ ಮದ್ರಾಸ್ ಪ್ರಾಚ್ಯಲಿಖಿತ ಪುಸ್ತಕ ಭಂಡಾರದಲ್ಲಿ ಕೆಳಗೆ ಬರೆದ ಪುಸ್ತಕಗಳು ದೊರೆಯುತ್ತವೆ:—(೧) ಬಸವದಂಡನಾಯಕ ವೃತ್ತಾಂತಮು, (೨) ಬಸವಪುರಾಣಮು ಬೆಜವಾಡ ಮಹಾದೇವ ಕವಿಕೃತ, (೩) ಬಸವಮಹಿಮಾಮೃತಮು, (೪) ಬಸವವಿಜಯಮು, (೫) ಬಸವಶತಕಮು, (೬) ಬಸವಸಂಬೋಧನಮು, (೭) ಬಸವಸ್ತುತಿ, (೮) ಬಸವೇಶಲಿಂಗ ಶತಕಮು.

## ಇಪ್ಪತ್ತೆಂಟನೆಯ ಪ್ರಕರಣ

## ಸಂಸ್ಕೃತ ಕವಿಗಳ ಕಾಣಿಕೆ

ಕವಿ ಗುರುರಾಜ—ಈತನ ಕಾಲ ೧೪೩೦. ಈತನು ಪಂಡಿತಾರಾಧ್ಯ ಚರಿತ್ರೆಯನ್ನು ಬರೆದಿರುತ್ತಾನೆ. ಪಾಲ್ಕುರಿಕೆಯ ಸೋಮನಾಥ ಕವಿಯು ತೆಲುಗಿನಲ್ಲಿ ಬರೆದ ಪಂಡಿತಾರಾಧ್ಯ ಚರಿತ್ರೆಯನ್ನು ಸಂಸ್ಕೃತದಲ್ಲಿ ಬರೆದಿರುತ್ತಾನೆ.

ಕೃಪಯಾ ಶಿವ ಸದ್ಭಕ್ತಿರ್ಭುವಿಯೇನ ಪ್ರಕಾಶಿತಾ ದ್ವಿತೀಯಶಂಭುಂ ಭಕ್ತ್ಯಾ ತಂ ನಮಾಮಿ ಬಸವೇಶ್ವರಂ—ಯಾವಾತನ ಕೃಪೆಯಿಂದ ಭೂಲೋಕದಲ್ಲಿ ಶಿವಭಕ್ತಿಯು ಪ್ರಕಾಶಿಸಲ್ಪಟ್ಟಿತೋ ಆ ದ್ವಿತೀಯ ಶಂಭುವಾದ ಬಸವೇಶ್ವರನನ್ನು ನಮಸ್ಕರಿಸುತ್ತೇನೆ.

ಸಂಪಾದನೆಯ ಸಿದ್ಧವೀರಾಖ್ಯ ಶಿವಯೋಗಿಗಳು—ಇವರು ಅನಾದಿ ವೀರಶೈವ ಸಾರ ಸಂಗ್ರಹವನ್ನು ಬರೆದಿರುತ್ತಾರೆ.

ವೃಷೇಂದ್ರ ಮುಖ್ಯಭಕ್ತ ಪುಂಗವಾಂಘ್ರಿಪಂಕಜಂ ।
ಮುದಾಪ್ರಣಮ್ಯ ಸಿದ್ಧವೀರಣಾಖ್ಯ ವೀರಶೈವ ಯೋಗಿರಾಟ್ ಅ ।
ಹಂಕರೋಮ್ಯನಾದಿ ವೀರಶೈವ ಸಾರಸಂಗ್ರಹಂ ।
ಶೃತಿಸ್ಮೃತಿ ಪ್ರಶಸ್ತಮಾದ್ಯಗೀತಸಾರ ಸಂಗ್ರಹಂ ॥

ಜಯತುಬಸವರಾಜಃ ಸ್ಥೌಲ್ಯನೈರ್ಮಲ್ಯ ಪೂಜಃ ।
ಪ್ರಮಥಗಣಸಮಾಜಪ್ರೋಲ್ಲಸದ್ಭಕ್ತಿನೈಜಃ ।
ಪ್ರಹೃತ ವಿನಮದಾರ್ತಿಃ ಸ್ವಾಯದಾಮ್ನಾಯಪೂರ್ತಿಃ ।
ಸ್ಥಿರದಿಗಮಿತಕೀರ್ತಿಃ ಶ್ರೀ ವೃಷಾಧೀಶ ಮೂರ್ತಿಃ ॥

ಅಂದರೆ ಯಾವಾತನು ಶಿವನ ಬಾಹ್ಯಾಂತರ ಪೂಜೆಗಳನ್ನು ನಿರ್ಮಲ ಮನಸ್ಸಿನಿಂದ ಮಾಡುತ್ತಾನೆಯೋ, ಯಾವಾತನ ಹತ್ತಿರ ವೀರಭದ್ರಾದಿ ಪ್ರಮಥಗಳಿರುತ್ತಾರೆಯೋ, ಯಾವಾತನ ಶಿವಭಕ್ತಿಯು ಶೋಭಿಸುತ್ತಲಿದೆಯೋ, ಯಾವಾತನು ನಮಸ್ಕಾರ ಮಾಡಿದವರ ಪಾಪಗಳನ್ನು ದೂರಮಾಡುತ್ತಾನೆಯೋ, ಶಿವನ ಸಂಪ್ರದಾಯವನ್ನು ಯಾವಾತನು ಚೆನ್ನಾಗಿ ತಿಳಿದಿರುತ್ತಾನೆಯೋ, ಯಾವಾತನ ಕೀರ್ತಿಯು ದಶದಿಕ್ಕುಗಳಲ್ಲಿ ವ್ಯಾಪಿಸಿರುತ್ತದೆಯೋ ಇಂತಹ ವೃಷಾಧೀಶ ಮೂರ್ತಿಯಾದ ಆ ಬಸವೇಶ್ವರನಿಗೆ ಜಯಜಯಕಾರವಾಗಲಿ.

ನಮೋ ಬಸವರಾಜಾಯ ವೃಷೇಂದ್ರಾ ಪರಮೂರ್ತಯೇ ।
ಚರಾರ್ಚನೈಕನಿಷ್ಠಾಯ ಶಿವಾಚಾರಪ್ರವರ್ತಿನೇ ।
ಜಿತ್ವಾ ಬಿಜ್ಜಳ ಭೂಮಿಪಾಲ ಕುಟಿಲವ್ಯಾಪಾರಪಾರಂಪರಮ್ ।
ಸಪ್ತಾಹಾನಿ ರವಿಂ ರುರೋಧತರಸಾ ಯೋ ವೀರಶೈವಾಗ್ರಣೀಃ ।
ಚಿದ್ದೃಷ್ಟ್ಯಾ ತೃಣರೂಪೇಣ ವಿಮುಖೀ ಚಕ್ರೇ ಚ ಮೀಮಾಂಸಕಂ ।
ತಂ ವಂದೇ ಬಸವೇಶ್ವರಂ ಪರಶಿವಾಕಾರಂ ಪರಂದೈವತಂ ॥

ಈಶ್ವರ ಉವಾಚ—

ಬಕಾರೋ ಗುರುರೂಪಂ ಚ ಸಕಾರೋ ಲಿಂಗಮೇವ ಚ ।
ವಕಾರಶ್ಚರರೂಪಂ ಚ ತ್ರಿವಿಧಂ ಬಸವಾಹ್ವಯಂ ।
ಬಕಾರೋನಾದರೂಪಂ ಚ ಸಕಾರೋಬಿಂದುರೂಪಕಃ ।
ಕಲಾರೂಪಂ ವಕಾರಸ್ಯಾತ್ ತ್ರಿವರ್ಣಂ ಬಸವಾಕ್ಷರಮ್ ।

ಭಕ್ತಮುಕ್ತವಿರಕ್ತಾಶ್ಚ ಬಸವೇತ್ಯಕ್ಷರ ತ್ರಯಂ ।
ಸವಾ ಭಕ್ತ್ಯಾ ಜಪೇಯುಸ್ತತ್ಪಾಪತೂಲಾಗ್ನಿ ಸನ್ನಿಭಂ ।
ಯಸ್ಯ ವಕ್ತ್ರೇ ಸ್ಥಿತಂ ದೇವಿ ಬಸವೇತ್ಯಕ್ಷರ ತ್ರಯಮ್ ।
ವಸಾಮಿ ಸತತಂ ತತ್ರ ಸತ್ಯಂ ಸತ್ಯಂ ನ ಚಾನ್ಯಥಾ ॥

ಅಂದರೆ ನಂದಿಕೇಶ್ವರನ ಅಪರಾವತಾರಿಯಾದ ಬಸವೇಶ್ವರನಿಗೆ ನಮುಸ್ಕಾರವು. ಜಂಗಮಾರ್ಚನೆಯಲ್ಲಿ ನಿಷ್ಠನಾದಂಥ ಶಿವಾಚಾರಪ್ರವರ್ತಕನಾದ ಬಸವೇಶ್ವರನಿಗೆ ನಮುಸ್ಕಾರವು.

ಬಿಜ್ಜಳ ಭೂಮಿಪಾಲನ ಅನೇಕ ಕುಟಿಲಗಳಾದ ವ್ಯಾಪಾರಗಳನ್ನೆಲ್ಲ ಜಯಿಸಿ ತನ್ನ ಶಕ್ತಿಯಿಂದ ಏಳುದಿನಗಳವರೆಗೆ ಸೂರ್ಯನನ್ನು ತಡೆದು ತನ್ನ ಜ್ಞಾನಶಕ್ತಿಯಿಂದ ಒಂದು ಹುಲ್ಲಿನ ಮೂರ್ತಿಯನ್ನು ಮಾಡಿ ಅದರಿಂದ ಮೀಮಾಂಸಕ ಪಂಡಿತನನ್ನು ಸೋಲಿಸಿದನೋ ಅಂತಹ ವೀರಶೈವರಲ್ಲಿ ಅಗ್ರೇಸರನಾದ ಮತ್ತು ಶಿವನ ಸ್ವರೂಪನಾದ, ಇಷ್ಟದೇವನಾದ ಬಸವೇಶ್ವರನಿಗೆ ನಮುಸ್ಕಾರವು.

ಶಿವನು ಹೇಳುತ್ತಾನೆ—

ಎಲೌ ಪಾರ್ವತಿಯೇ, ಬಸವ ಶಬ್ದದ ಅರ್ಥವು ಬಹಳ ಗೂಢವಾಗಿರುತ್ತದೆ. ಬಕಾರವು ಗುರುಸ್ವರೂಪವಾಗಿಯೂ, ವಕಾರವು ಜಂಗಮುಸ್ವರೂಪವಾಗಿಯೂ, ಸಕಾರವು ಲಿಂಗಸ್ವರೂಪವಾಗಿಯೂ— ಅರ್ಥಾತ್ ಗುರುಲಿಂಗ ಜಂಗಮುಗಳು ಕೂಡಿ ಬಸವ ಎಂಬುವ ಶಬ್ದವಾಗಿರುತ್ತದೆ. ಬಕಾರವು ನಾದರೂಪವಾಗಿಯೂ, ಸಕಾರವು ಬಿಂದುಸ್ವರೂಪವಾಗಿಯೂ, ವಕಾರವು ಕಲಾಸ್ವರೂಪವಾಗಿಯೂ, ಹೀಗೆ ಈ ಮೂರುಗಳಿಂದ ಬಸವ ಶಬ್ದವು ಸಿದ್ಧವಾಗಿರುತ್ತದೆ. ಬಸವ ಶಬ್ದದ ಜಪವನ್ನು ಭಕ್ತಿಭಾವದಿಂದ ಭಕ್ತ–ಮುಕ್ತ–ವಿರಕ್ತರಾದವರೆಲ್ಲರೂ ಮಾಡುತ್ತಿರುವರು. ಈ ಜಪವು ಅವರ ಪಾತಕರೂಪವಾದ ಅರಳೆಗೆ ಬೆಂಕಿಯಂತಿರುತ್ತದೆ. ಎಲೌ ಪಾರ್ವತಿಯೇ, ಯಾವಾತನ ಬಾಯಿಯಲ್ಲಿ ಬಸವಾಕ್ಷರದ ಜಪವು ನಡೆದಿರುತ್ತದೆಯೋ ಅಂತಹ ಮನುಷ್ಯನ ಹತ್ತಿರ ನಾನು ಯಾವಾಗಲೂ ವಾಸಿಸುತ್ತೇನೆ. ಈ ಮಾತು ನಿಜವಿದೆ, ಸುಳ್ಳಿರುವದಿಲ್ಲ.

ಗುರುದೇವಾಖ್ಯ ಸಿದ್ಧದೇವ—ಈತನು ವೀರಶೈವಾಚಾರ ಪ್ರದೀಪಿಕೆಯನ್ನು ಬರೆದಿರುತ್ತಾನೆ. ಕೆಳದಿ ಅರಸರ ಕಾಲ. ಈ ಗ್ರಂಥ ವೀರಶೈವರ ಆಚರಣೆಗಳನ್ನು ವಿಸ್ತಾರವಾಗಿ ಹೇಳತಕ್ಕಂಥಾದ್ದಾಗಿರುತ್ತದೆ.

ಮಾದಲಾಂಬಾ ಗರ್ಭಸಿಂಧೌ । ಜಾತಂ ಬಸವಧೀಮಣಿಂ ॥
ಧರ್ಮಸ್ವರೂಪಂ ಸ್ಥಾಣುಂ ಚ । ನಮಾಮಿ ಶಿರಸಾನಿಶಂ ॥

ಮಾದಲಾಂಬಿಕೆಯ ಗರ್ಭವೆಂಬುವ ಸಾಗರದೊಳಗೆ ಉತ್ಪನ್ನವಾದ ಬಸವನೆಂಬುವ ರತ್ನವನ್ನು ನಮುಸ್ಕರಿಸುತ್ತೇನೆ. ಧರ್ಮಸ್ವರೂಪನಾದ ಶಿವನನ್ನು ಯಾವಾಗಲೂ ನಮುಸ್ಕರಿಸುತ್ತೇನೆ.

ಪಂಡಿತ ನಾಗನಾಥಾಚಾರ್ಯರು. ಇವರು ವೀರಮಹೇಶ್ವರಾಚಾರ್ಯ ಸಂಗ್ರಹವನ್ನು ಬರೆದಿರುತ್ತಾರೆ.

ನಮೋ ಬಸವರಾಜಾಯ ವೃಷೇಂದ್ರಾ ಪರಮೂರ್ತಯೇ ।
ಚರಾರ್ಚನೈಕನಿಷ್ಠಾಯ ಶಿವಾಚಾರಪ್ರವರ್ತಿನೇ ॥

ಕೆಳದಿಯ ಬಸವರಾಜ ಅರಸರು— ಇವರು ಶಿವತತ್ವರತ್ನಾಕರ ಎಂಬುವ ಗ್ರಂಥವನ್ನು ಬರೆದಿರುತ್ತಾರೆ. ಈ ಗ್ರಂಥವನ್ನು ಜಗತ್ತಿನ ಎಲ್ಲ ಭಾಗದ ಪಂಡಿತರೂ ಮುಕ್ತಕಂಠದಿಂದ ಪ್ರಶಂಸಿಸಿರುತ್ತಾರೆ. ಇದನ್ನು ವಿಶ್ವಕೋಶ ಎಂದೂ ಕೆಲವರು ಕರೆದಿರುತ್ತಾರೆ.

ಅಷ್ಟಮ ತರಂಗ—

ಧರ್ಮಪ್ರವೃತ್ತಿಂ ಶಿಥಿಲಾಂ ವಿಲೋಕ್ಯ ಚ ಸಮಂತತಃ ।
ಅವತೀರ್ಯ ದಯಾವಶ್ಯೋ ಭಗವಾನ್ ಬಸವೇಶ್ವರಃ ।
ಧರ್ಮಂ ಸಂಸ್ಥಾಪಯಾಮಾಸ ಸರ್ವಮೇವ ಧರಾತಲೇ ।
ವೀರಶೈವಮತಂ ಸ್ಥಾಪ್ಯ ಪ್ರಕಾಶನಮಕಾರಯತ್ ॥

ನವಮ ತರಂಗ—

ಆದ್ಯಾವತಾರೇ ವೃಷಭಸ್ಯ ನಾಮ ಭೂಯಾದಮುಷ್ಮಿನ್ ಬಸವಃ ಕಿಲೇತಿ ।
ಯಸ್ಯಾನನಾಬ್ಜೇ ಬಸವೇತಿ ಶಬ್ದಃ ಪ್ರವರ್ತತೇ ತತ್ರ ವಸಾಮಿ ಗೌರೀ ॥

"ಎಲ್ಲಾ ಕಡೆಗೂ ಧರ್ಮದ ಶಿಥಿಲವಾದ ಪ್ರವೃತ್ತಿಯನ್ನು ನೋಡಿ ದಯಾಶಾಲಿಯಾದ ಭಗವಾನ್ ಬಸವೇಶ್ವರನು ಅವತರಿಸಿದನು. ಭೂತಲದಲ್ಲಿ ಧರ್ಮವನ್ನು ಸ್ಥಾಪಿಸಿ, ವೀರಶೈವ ಮತವನ್ನು ಸ್ಥಾಪಿಸಿ ಪ್ರಕಾಶಗೊಳಿಸಿದನು. ವೃಷಭನ ಆದ್ಯಾವತಾರದ ನಾಮವು ಬಸವನೆಂದಾಯಿತು. ಯಾವಾತನ ಮುಖದಲ್ಲಿ ಬಸವನೆಂಬುವ ಶಬ್ದವುಂಟೋ ಅಲ್ಲಿ ಯಾವಾಗಲೂ ನಾನು ವಾಸವಾಗಿರುತ್ತೇನೆ" ಎಂದು ಶಿವನು ಪಾರ್ವತಿಗೆ ಹೇಳಿದನು.

ಈ ಗ್ರಂಥ ವೀರಶೈವರಲ್ಲಿಯು ಎಲ್ಲ ಪಕ್ಷ ಪಂಗಡದವರಿಂದ ಪ್ರಶಂಸೆಯನ್ನು ಹೊಂದಿರುತ್ತದೆ.

ಶ್ರೀ ತೋಂಟದ ಸಿದ್ಧೇಶ್ವರ ಶಿವಾಚಾರ್ಯರು—ಇವರು ಷಟ್‌ಸ್ಥಲ ಕೌಮುದಿಯನ್ನು ಬರೆದಿರುತ್ತಾರೆ.

ನಮಃ ಶ್ರೀ ಬಸವೇಶಾಯ ವೃಷೇಂದ್ರಾ ಪರಮೂರ್ತಯೇ ।
ಚರಾರ್ಚನೈಕನಿಷ್ಠಾಯ ಶಿವಾಚಾರಪ್ರವರ್ತಿನೇ ॥

ನಿಷ್ಠೂರ ನಂಜಣಾಚಾರ್ಯರು— ಇವರು ವೇದಾಂತಸಾರ ವೀರಶೈವ ಚಿಂತಾಮಣಿಯನ್ನು ಬರೆದಿರುತ್ತಾರೆ.

"ಕಲಿಯುಗೇ ನಂದೀಶ್ವರಾದಯಃ ಬಸವೇಶ್ವರಾದಿ ಪುರಾತನ ನೂತನ ಭಕ್ತಾಃ ಭವಂತಿ ರೇವಣಸಿದ್ಧಾಚಾರ್ಯಾಃ ಭವಂತಿ ತೇಷಾಂ ಚರಿತ್ರಾಣಿ ಸೋಮನಾಥಭಾಷ್ಯ ಬಸವಪುರಾಣಾರಾಧ್ಯ ಚರಿತ್ರಾದಿ ವೀರಶೈವ ಶಿವಾಚಾರ್ಯ ಪ್ರಣೀತ ಶಾಸ್ತ್ರಪುರಾಣಾದಿಷು ಸುಪ್ರಸಿದ್ಧಾನಿ."

ಕಂಚಿಯ ಶಂಕರಾರಾಧ್ಯರು— ಈತನು ಸಂಸ್ಕೃತದಲ್ಲಿ ಬಸವ ವಿಜಯವನ್ನು ಬರೆದಿರುತ್ತಾನೆ.

ದೈವತಂ ಶಿವ ಏವೇತಿ ತದ್ಭಕ್ತಾಃ ಕುಲಜಾ ಇತಿ ।
ವಿಜಿತಂ ಏನ ನಿರ್ಣೀತಂ ಭಜೇಹಂ ವೃಷಭೇಶ್ವರಂ ॥

ಷಡಕ್ಷರ ಮಂತ್ರಿಗಳು—ಇವರು ವೀರಶೈವಾಚಾರ ಕೌಸ್ತುಭವನ್ನು ರಚಿಸಿರುತ್ತಾರೆ.

"ಭೂಮೌ ಬಿಜ್ಜಳ ಶಾಂಬರೀ ಮತಿತರಾಂ ಆತ್ಮಪ್ರಭಾವೇಣವೈ । ಯಃ ಕೂಲಂಕುಷಣಂ ನ್ಯವಾರದಥ ಸ್ಫೀತಾನುಕಂಪಾನಿಧಿಃ । ತಂ ಭೂಯೋಽಖಿಲ ವೀರಶೈವಮತ ಭೂಮಂದಾರ ಭೂಮೀರುಹಂ ವಂದೇಽಹಂ ಬಸವೇಶ್ವರಂ ಯಮವತಾಂ ಸದ್ಬ್ರಹ್ಮವಿದ್ಯಾಗುರುಂ ॥"

ಕವಿ ಗುರುಬಸವಾಖ್ಯ ದೇಶಿಕೇಂದ್ರ—ಈತನು ವೀರಶೈವ ಸುಧಾನಿಧಿಯನ್ನು ಬರೆದಿರುತ್ತಾನೆ.

ವಿಜಿತ್ಯಯೋ ಬಿಜ್ಜಳ ಭೂಪಮಾಯಾಂ । ನಿಜಪ್ರಭಾವೈರ್ಬಸವೇಶ್ವರಾಖ್ಯಃ ।
ಸದ್ಭಕ್ತಿ ಮಾಹಾತ್ಮ್ಯ ಮದರ್ಶಯನ್ನಃ । ಸದ್ಭಾವಮಂತಃ ಶರಣೇಸದತ್ತಾತ್ ॥

ಯಾವಾತನು ಬಿಜ್ಜಳನ ಮಾಯೆಯನ್ನು ಗೆದ್ದು ತನ್ನ ಪ್ರಭಾವಗಳಿಂದ ಸದ್ಭಕ್ತಿಯ ಮಾಹಾತ್ಮೆಯನ್ನು ತೋರಿಸಿದನೋ ಇಂಥವನು ನಮ್ಮ ಅಂತಃಕರಣದಲ್ಲಿ ಸದ್ಭಾವವನ್ನುಂಟುಮಾಡಲಿ.

ಕವಿ ಆನಂದಬಸವಲಿಂಗ ಶಿವಯೋಗಿ—ಈತನು ಮಾಚಿದೇವ ಮನೋವಿಲಾಸವನ್ನು ಬರೆದಿರುತ್ತಾನೆ.

ಜಯತು ಬಸವರಾಜಃ ಸೌಧಿಲ್ಯ ನೈರ್ಮಲ್ಯ ಪೂಜಃ ।
ಪ್ರಮಥಗಣಸಮಾಜಃ ಪ್ರೋಲ್ಲಸದ್ಭಕ್ತಿನೈಜಃ ।
ಪ್ರಹೃತವಿನಮದಾರ್ತಿಃ ಸ್ವಾಯದಾಮ್ನಾಯಮೂರ್ತಿಃ ।
ಸ್ಮರದಿಗಮಿತಕೀರ್ತಿಃ ಶ್ರೀ ವೃಷಾಧೀಶಮೂರ್ತಿಃ ॥

ಕವಿ ಮರಿತೋಂಟದಾರ್ಯರು — ಇವರು ವೀರಶೈವಾಚಾರ ಪ್ರದೀಪಿಕೆಯನ್ನು ಬರೆದಿರುತ್ತಾರೆ.

ನಮೋ ಬಸವರಾಜಾಯ ವೃಷೇಂದ್ರಾ ಪರಮೂರ್ತಯೇ ।
ಚರಾರ್ಚನೈಕನಿಷ್ಠಾಯ ಶಿವಾಚಾರಪ್ರವರ್ತಿನೇ ॥

ಸಂಸ್ಕೃತ ಪ್ರಭುಲಿಂಗಲೀಲಾ ಕವಿ—ವ್ಯಾಸನೆಂದು ಕರೆಯಲಾಗಿದೆ. ಯಾವ ವ್ಯಾಸನೆಂಬುವದು ತಿಳಿದುಬರುವದಿಲ್ಲ.

ಪ್ರಭುಲಿಂಗಲೀಲಾ — ಭಾಗ ೨, ಪುಟ ೧೧

ನಿತ್ಯಂ ಚರಾರ್ಚನಪರೋ । ನಿಜಯೋಗನಿಷ್ಠೋ ।
ನಿರ್ವಾಣಮಾರ್ಗನಿರತೋ । ನಿಯಮವ್ರತಸ್ಥಃ ।
ನಿಸ್ಸಂಗ ಭಕ್ತಿಭರಿತೋ । ನಿಗಮಾಂತವೇತ್ತಾ ।
ನಿರ್ಮಾಯಿ ಶಾಂತರಸವೋ । ಬಸವೋರರಾಜ ।
ಭಕ್ತ್ಯಾ ವಿರಕ್ತ್ಯಾ ಬಸವಃ ಸ ಏಕಃ ।
ಪ್ರಸಿದ್ಧ ಇತ್ಯಂಬುಧಿವೇಷ್ಟಿತೋರ್ವ್ಯಾಂ ।
ಶೃತ್ವಾಸ್ಯ ಕೀರ್ತಿಂ ಶಿವಯೋಗಿವರ್ಯಾಃ ।
ಸಂದ್ರಷ್ಟು ಕಾಮಾಃ ಸಮುಪಾಯಯುಸ್ತಂ ।

> ಬಹಿರ್ಜನಕರಸ್ಪೃಷ್ಟಭಾಂಡೇಷ್ವ ಗ್ರಾಹ್ಯತಾಧಿಯಾ ।
> ವಿಶೇಷನಿಯಮೈರ್ಯುಕ್ತಾಃ ವ್ರತಸ್ಥಾಃ ಕೇಚಿದಾಗತಾಃ ।
> ಅದೀಕ್ಷಿತ ಗೃಹದ್ರವ್ಯಪಾಕೇ ವಿಮುಖ ತಾಂ ಗತಾಃ ॥

— ಅಂದರೆ ನಿತ್ಯದಲ್ಲಿಯೂ ಜಂಗಮ ಪೂಜಾನಿರತನಾಗಿಯೂ, ಯೋಗಸಮಾಧಿಯಲ್ಲಿ ನಿಷ್ಠಾವಂತನಾಗಿಯೂ, ಮೋಕ್ಷಮಾರ್ಗದಲ್ಲಿ ನಿರತನಾಗಿಯೂ, ನಿಯಮವ್ರತಗಳನ್ನು ಆಚರಿಸತಕ್ಕವನಾಗಿಯೂ, ನಿಷ್ಕಾಮ ಭಕ್ತಿಯುಕ್ತನಾಗಿಯೂ, ವೇದಾಂತ ವಿಚಾರವನ್ನು ಮಾಡುತ್ತ ನಿಷ್ಕಪಟದಿಂದಿರತಕ್ಕವನಾಗಿಯೂ ಇದ್ದುದರಿಂದ ಬಸವೇಶ್ವರನು ಒಳ್ಳೇ ಪೂಜ್ಯವಂತನಾದನು. ಭಕ್ತಿ ವಿರಕ್ತಿಗಳಲ್ಲಿ ಆ ಬಸವನೇ ಲೋಕದಲ್ಲಿ ಶ್ರೇಷ್ಠನೆಂದು ಕೀರ್ತಿಯು ಹಬ್ಬಿತು. ಈ ವಾರ್ತೆಯನ್ನು ಕೇಳಿ ಅನೇಕ ಜನ ಶಿವಯೋಗಿಗಳು ಆತನನ್ನು ನೋಡಬೇಕೆಂದು ಬಂದರು. ಅವರೆಲ್ಲರೂ ಬೇರೆ ಬೇರೆ ಕಠಿಣವ್ರತಗಳನ್ನು ಹಿಡಿದವರಾಗಿದ್ದರು. ಮತ್ತೆ ಕೆಲವರು ಅದೀಕ್ಷಿತರ ಪಾಕಾದಿಗಳನ್ನು ಮುಟ್ಟದವರಾಗಿಯೂ, ನೀಚ ಜನರು ಒಂದು ಸಾರಿ ಮುಟ್ಟಿದ ಪಾತ್ರೆಗಳನ್ನು ಮುಟ್ಟದವರಾಗಿಯೂ ಹೀಗೆಯೇ ಅನೇಕ ವ್ರತಗಳನ್ನು ಹಿಡಿದ ಶಿವಯೋಗಿಗಳು ಕಲ್ಯಾಣಕ್ಕೆ ಬಂದರು.

ಇನ್ನೊಂದು ಸನ್ನಿವೇಶದಲ್ಲಿ—

> ಲೋಕೇ ಪ್ರಸಿದ್ಧಿಮಭವದ್ವೃಸವೋ ಮಹೇಶಃ ।
> ಪಾಷಾಣ ಪಾದಪ ಪಶುತ್ವ ನಿವೃತ್ತಯೇಸ್ಯ ॥
> ಚಿಂತಾಮಣಿಂ ಮನಸಿ ಕಲ್ಪತರುಂ ಕರಾಬ್ಜೇ ।
> ಗೇಹಾಂಗಣೇ ಸಮವಯತ್ ಸುರಭಿಂ ತಥೇತಿ ॥
> ವಸ್ವಾಖ್ಯಯಾಷ್ಟವಸವೋಷ್ಟ ವಿಭೂತಿನಾಥಾಃ ।
> ಸ್ವರ್ಣಾನಿ ದ್ರವ್ಯಮಣಯಶ್ಚ ಭುವಿ ಪ್ರಸಿದ್ಧಾಃ ॥
> ತಾನ್ವಾತಿ ಗಂಧಯತಿ ಗಚ್ಛತಿ ಚೇತಿ ನಾಮ್ನಾ ।
> ಪ್ಯನ್ವರ್ಥಕೇನ ವಸುವೋ ವಭಯೋರಭೇದಾತ್ ॥
> ತಸ್ಮಾದ್ವಸೂನಿ ಸುಬಹೂನಿ ಚ ಯಸ್ಯ ಸಂತಿ ।
> ಸಂಕಲ್ಪಮಾತ್ರ ವಶಗಾಮಣಯಶ್ಚ ಸರ್ವೇ ॥
> ಭೃತ್ಯಾ ಇವಾಷ್ಟವಸವೋ ನಿಧಿ ದರ್ಶನೇಸ್ಯುಃ ।
> ತಸ್ಯಾರ್ಥ್ಯಭೀಷ್ಟಫಲನಾಯ ಕಿಯಾನ್ ಹಿ ಭಾರಃ ॥
> ಶಂಭುಸ್ಸಮಸ್ತ ಜಗದುದ್ಧರಣಾಯ ತಸ್ಮೈ ।
> ಸಂಪ್ರೇಣಾವಸರ ಏವ ಧನಂ ಪ್ರತಿಸ್ವಂ ॥
> ಐಶ್ವರ್ಯವೀರ್ಯನಿಜಬೋಧ ವಿರಾಗಕೀರ್ತಿ ।
> ಶ್ರೀಷಟ್ಕಮೇವ ಭಗವಾನ್ ಪ್ರದದೌ ಸಮಗ್ರಂ ॥

— ಅಂದರೆ ಲೋಕದಲ್ಲಿ ಶ್ರೀ ಬಸವಮಹೇಶನು ಪ್ರಸಿದ್ಧಿಯನ್ನು ಹೊಂದಿದನು.

**ಭವಿಷ್ಯತ್ ಪುರಾಣಾಂತರ್ಗತ ಸಂಸ್ಕೃತ ಬಸವಪುರಾಣ—ಭಾಗ ೧, ಪುಟ ೧೨೯**

> ವಿಶ್ವಂ ವಸತಿ ಯತ್ರೈತದ್ವ ಸತ್ಯತ್ರ ಮಹೇಶ್ವರೇ ।
> ತನ್ಮೈವ ಬಾಲಕಃ ಶ್ರೀಮಾನ್ ಮನೋವಾಕ್ಕಾಯ ಕರ್ಮಭಿಃ ।
> ಅದೃಸ್ಯ ಚ ವಕಾರಸ್ಯ ಅಭೇದೇನ ಬಕಾರತಃ ।
> ಏಷೋಯಂ ಬಾಲಕಃ ಶ್ರೀಮಾನ್ ಬಸವೇಶ್ವರ ನಾಮಧೃತ್ ।
> ಪರಾತ್ಪರತರೇ ಲಿಂಗೇ ಯೇ ವಸಂತಿ ಮಹೇಶ್ವರಾಃ ।
> ಗಚ್ಛಂತೇತಾನ್ ಸ್ವಯಂ ಭಕ್ತ್ಯಾ ತೇನಾಯಂ ಬಸವೇಶ್ವರಃ ।

ಗತ್ಯರ್ಥಕರ್ತ್ವೇ ವಾಧಾತೋರೇತದರ್ಥದ್ವಯಂ ಸ್ಥಿತಂ ।
ಮಹತ್ಸಂಸಾರ ಚಕ್ರೇಸ್ಮಿನ್ ಯೇ ವಸಂತಿ ಚ ದುರ್ಜನಾಃ ।
ತಾನ್ಗಂಧತೇ ಸದಾ ಬಾಲೋ ವಿಶ್ವರಕ್ಷಣ ತತ್ಪರಃ ।
ಹಿಂಸಾಗಂಧೇನ ಶಬ್ದೇನ ಪ್ರೋಚ್ಯತೇ ವರವರ್ಣಿನೀ ।
ಸರ್ವದಾ ತವ ಬಾಲೋಽಯಂ ಬಸವೇಶ ಇತೀರ್ಯತೇ ।
ಕೂಡಲೀ ಸಂಗಮೇಶೋಽಹಂ ಮಾದಾಂಬೇ ವರವರ್ಣಿನೀ ।
ಕಪ್ಪಡೀ ಸಂಗಮೇಶಾಖ್ಯ ಪಟ್ಟಣೇ ನಿವಸಾಮ್ಯಹಂ ।
ಮತ್ಪುತ್ರೋಽಯಮ್ ಮಹಾಭಾಗೇ ಲೋಕಪಾಲನತತ್ಪರಃ ।
ಶಿವಭಕ್ತಿ ಪರೋನಿತ್ಯಂ ತವ ಪುತ್ರತ್ವಮಾಗತಃ ।
ದಸ್ಮಾದೇನಂ ಮಹಾಭಾಗೇ ದಿದೃಕ್ಷು ರಹಮಾಗತಃ ।
ಗುರುರೂಪಧರೋಹ್ಯತ್ರ ಸರ್ವಕಾಲೇ ವಸಾಮ್ಯಹಂ ।
ಏವಮಾಜ್ಞಾಪ್ಯ ಸಹಸಾ ಸಂಗಮೇಶಸ್ಥಿರೋದಧೇ ॥

ಎಲ್ಲಾ ಜಗತ್ತು ಯಾವಾತನಲ್ಲಿ ವಾಸವಾಡುತ್ತದೆಯೋ ಅಂತಹ ಮಹೇಶ್ವರನ ಸ್ಥಾನದಲ್ಲಿ ನಿನ್ನ ಭಾಗ್ಯಶಾಲಿಯಾದ ಮಗನು ಮನ, ವಚನ, ಕರ್ಮಗಳಿಂದ ವಾಸ ಮಾಡುವನಾದುದರಿಂದ ವಸ್ ಇದರಲ್ಲಿರತಕ್ಕ ಆದ್ಯಕ್ಷರವಾದ ವಕಾರಕ್ಕೂ, ಬಕಾರಕ್ಕೂ ಭೇದವಿಲ್ಲದೆ ಇರುವುದರಿಂದ (ವಭಯೋರಭೇದಃ) ಈ ನಿನ್ನ ಐಶ್ವರ್ಯ ಸಂಪನ್ನನಾದ ಬಾಲಕನು ಬಸವೇಶ್ವರನೆಂಬುವ ಹೆಸರನ್ನು ಧರಿಸಿರುತ್ತಾನೆ. ಪರಾತ್ಪರವಾದ ಲಿಂಗದ ಸಾ ನದಲ್ಲಿ ಯಾವ ಪ್ರಮಥಗಣರು ವಾಸವನ್ನು ಮಾಡುತ್ತಾರೆಯೋ ಅತ್ತಕಡೆಗೆ ಇವನು ಭಕ್ತಿಯ ಭಾವದಿಂದ ಹೋಗುವನಾದುದರಿಂದ ಇವನಿಗೆ ಹೀಗೆ ಹೆಸರು ಬಂದಿದೆ. (ವಸಂತೀತಿ ವಸಾಃ ಗಣಾಃ) ಅಂದರೆ ವಾಸಮಾಡುವರು ತಾನ್ ಪ್ರತಿವಾತಿ ಗಚ್ಛತಿ ಬಸವಃ ಅಂದರೆ ಅವರ ಕಡೆಗೆ (ಪ್ರಮಥರ ಕರೆಗೆ) ಹೋಗುತ್ತಾನೆ. ಅವನೇ ಬಸವ. ಪರಂತು ವ ಮತ್ತು ಬ ಇವುಗಳಲ್ಲಿ ಭೇದವಿಲ್ಲದೆ ಇರುವದರಿಂದ ವಸವ ಇದರ ಬಸವ ಹೀಗೆ ರೂಪವಾಯಿತು. ವಾ ಧಾತುವಿಗೆ ಹೋಗುವದು ಹೀಗೆ ಅರ್ಥವು ಆಗುವುದರಿಂದ ಹೀಗೆ (ಬಸವ ಶಬ್ದದ) ಎರಡು ಅರ್ಥಗಳಾದವು. ವಾ ಗತಿಗಂಧನಯೋಃ ಈ ಆಧಾರ ದಿಂದ ವಾ ಧಾತುವಿನ ಎರಡನೆಯ ಅರ್ಥವು ಗಂಧನವೆಂದರೆ ನಾಶ ಹೀಗಾಗುತ್ತದೆ. ಇದರಿಂದ ಮುಂದಿನ ಅರ್ಥವು ಹೊಂದುವದು. ಹೇ ಶುಭಾಂಗೀ, ಗಂಧನ ಶಬ್ದದಿಂದ ನಾಶದ ಅರ್ಥವು ಆಗುವುದರಿಂದ ಈ ಮಹತ್ತರವಾದ ಸಂಸಾರ ಚಕ್ರದಲ್ಲಿ ಯಾವ ದುರ್ಜನರು ವಾಸವಾಗಿರುತ್ತಾರೆಯೋ ಅವರ ಸ್ಥಾನವನ್ನು ರಕ್ಷಣೆ ಮಾಡುವದರಲ್ಲಿ ತತ್ಪರನಾದ ಈ ಬಾಲಕನು ಯಾವಾಗಲೂ ನಾಶಮಾಡುವವನಾದುದರಿಂದ ಜನಗಳು ಈತನಿಗೆ ಬಸವನೆನ್ನುತ್ತಾರೆ. ಎಲೌ ಸುಂದರಿಯಾದ ಮಾದಾಂಬಿಯೇ, ನನಗೆ ಕೂಡಲ ಸಂಗಮೇಶ್ವರನೆಂದು ಹೇಳುತ್ತಾರೆ. ಕಪ್ಪಡಿಯ ಸಂಗಮೇಶ್ವರನಲ್ಲಿ ನಾನು ವಾಸ ವಾಗಿರುತ್ತೇನೆ. ಜನಗಳ ಸಂರಕ್ಷಣೆಯನ್ನು ಮಾಡುವದರಲ್ಲಿ ಕುಶಲ. ಯಾವಾಗಲೂ ಶಿವನ ಭಕ್ತಿಯಲ್ಲಿ ತೊಡಗಿರುವ ಈ ನನ್ನ ಮಗನು ನಿನ್ನ ಹೊಟ್ಟೆಯೊಳಗೆ ಹುಟ್ಟಿರು ತ್ತಾನೆ. ಆದ್ದರಿಂದ ಅವನನ್ನು ನೋಡಬೇಕೆಂಬುವ ಇಚ್ಛೆಯಿಂದ ನಾನು ಬಂದಿರು ತ್ತೇನೆ. ಗುರುರೂಪ ಧಾರಣ ಮಾಡಿಕೊಂಡು ಯಾವಾಗಲೂ ನಾನು ಇಲ್ಲಿಯೇ ಇರುತ್ತೇನೆ. ಹೀಗೆ ಹೇಳಿ ಈಶ್ವರನು ಅಂತರ್ಧಾನನಾದನು.

ಷಡಕ್ಷರದೇವನು—ಈತನ ಕಾಲ ಮೊದಲಾದವುಗಳನ್ನು ಕನ್ನಡ ಕವಿಗಳ ಕಾಣಿಕೆಯಲ್ಲಿ ಬರೆಯಲಾಗಿದೆ. ಈತನು ಸಂಸ್ಕೃತದಲ್ಲಿ ಭಕ್ತಾಧಿಕ್ಯ, ಶಿವಾಧಿಕ್ಯ, ಕವಿಕರ್ಣರಸಾಯನ ಸ್ತೋತ್ರಮಂಜರಿ ಬಸವಾಷ್ಟಕಗಳನ್ನು ಬರೆದಿರುತ್ತಾನೆ.

**ಇವರ ಬಸವಾಷ್ಟಕವು**

ನಿತ್ಯಾಭೇದ್ಯಂ ನಿರ್ಮಿತವಿದ್ಯಂ ನಿರವದ್ಯಂ ।
ವಿಶ್ವಾಚಾರ್ಯಂ ವಿಶ್ವತಚರ್ಯಂ ಗಣವರ್ಯಂ ॥
ಗೀತವ್ರಾತ ಸ್ಫೀತಸುಧಾ ಪ್ರೀಣಿತಭರ್ಗಂ ।
ವಂದೇಽಹಂ ತ್ವಾಂ ನಿರ್ಜಿತಪಾಶಂ ಬಸವೇಶಂ ॥ ೧ ॥

ಗಂಗಾಕಾಂತಂ ಸಂಗಮನಾಥಾರ್ಪಿತಚಿತ್ತಂ ।
ಮಾಂಗಲ್ಯಾಂಗಂ ಜಂಗಮಲಿಂಗಾರ್ಚನಲೋಲಂ ॥
ಕಲ್ಯಾಣ ಶ್ರೀಸೇವಿತ ಮತ್ಯದ್ಭುತವತ್ತಂ ।
ವಂದೇಽಹಂ ತ್ವಾಂ ನಿರ್ಜಿತಪಾಶಂ ಬಸವೇಶಂ ॥ ೨ ॥

ಮೂಲೋದ್ದಿಷ್ಟಂ ಗಣಪತಿಪದಂ ಮೂರ್ತಿಮದ್ಭರ್ಗಭಾಗ್ಯಂ ।
ಭಕ್ತಿಶ್ರೇಯಃ ಪದಮಧಿಗತಂ ಭವ್ಯಭಕ್ತಾಬ್ಧಿಚಂದ್ರಂ ॥
ವಿಶ್ವಾಧಾರಂ ವಿಮಲವಪುಷ ವೀರಶೈವಾಧ್ವದೀಪಂ ।
ಭಾಸ್ವದ್ರೂಪಂ ಬಸವಮನಿಶಂ ಭದ್ರದಂ ಭಾವಯಾಮಿ ॥ ೩ ॥

ಕರುಣಾರಸಾರ್ದ್ರಮನಸೇ ಮಹೀಯಸೇ ।
ಪರಮಾರ್ಥಸಾರವಚನೇ ಗರೀಯಸೇ ॥
ಶಿವಧರ್ಮಧಾಮಕಮನೀಯ ಮೂರ್ತಯೇ ।
ಬಹುಶೋ ನಮೋಸ್ತು ಬಸವಾಧಿಪಾಯತೇ ॥ ೪ ॥

ಷಡಕ್ಷರಾಖ್ಯೇನ ವಿನಿರ್ಮಿತಂಸ್ತವಂ ।
ಗುಣಾಭಿಯುಕ್ತಂ ಬಸವಸ್ಯ ಯಸ್ಸದಾ ।
ಪಠೇದಿಮಂ ಪ್ರಾಪ್ಯ ನಿಜೇಷ್ಟಸಂಪದಂ ।
ಪರತ್ರಯಾತ್ಯೇವ ಪದಂ ಕಪರ್ದಿನಂ ॥ ೫ ॥

ಶ್ರೀ ಪಾಲ್ಕುರಿಕೆಯ ಸೋಮನಾರಾಧ್ಯರು—ಇವರು ಸಂಸ್ಕೃತದಲ್ಲಿ ಬಸವಣ್ಣನ ಪಂಚಗದ್ಯ, ಬಸವರಾಜೀಯ ಅಥವಾ ಸೋಮನಾಥಭಾಷ್ಯ, ಬಸವೋದಾಹರಣ ಮೊದಲಾದವುಗಳನ್ನು ಬರೆದಿರುತ್ತಾರೆ. ಇವರ ಹೆಚ್ಚಿನ ಸಂಗತಿಗಳನ್ನು ತೆಲುಗು ಮತ್ತು ಕನ್ನಡಗಳ ಕಾಣಿಕೆಯಲ್ಲಿ ಬರೆಯಲಾಗಿದೆ.

ಶ್ರೀ ಬಸವೋದಾಹರಣದಲ್ಲಿ—

ಪ್ರಥಮಾ ವಿಭಕ್ತಿ—

ಜಯತು ಬಸವರಾಜಃ ಪ್ರಾಣಲಿಂಗಾತ್ಮಪೂಜಃ । ಶರಣದಿವಿಜಭೂಜಃ ಸ್ಮೇರಸಂತ್ಸರೋಜಃ ॥ ಗಣಪರಿಷದಧೀನಃ ಖ್ಯಾತದಾನಾವಧಾನಃ ಸರಸಮಹಿಮಗಾನಃ ಸ್ವಾನುಭೂತ್ಯೈಕಮಾನಃ ॥ ೧ ॥

ದ್ವಿತೀಯಾ ವಿಭಕ್ತಿ—

ವೇದಾಂತಾರ್ಥ ರಹಸ್ಯಭೇದ ಪಿಶುನವ್ಯಾಪಾರ ಪಾರಂಗತ। ಪ್ರೌಢ ಪ್ರಕ್ರಿಯವಾಕ್‌ಪ್ರಪಂಚ ರಚನಾಚಾತುರ್ಯ ಧುರ್ಯಾಶ್ರಯಂ। ದೈವಾಸ್ತಿಕ್ಯನಿದರ್ಶನ ಪ್ರತಿಭುವಂ ತಾಪಚ್ಛಿದಾಪಂಡಿತಂ। ಭಾಂಡಾಗಾರ ಧುರೀಣಮತ್ರ ಬಸವಾಮಾತ್ಯಂ ಕಿಮಾಚಕ್ಷ್ಮಹೇ ॥ ೨ ॥

ತೃತೀಯಾ ವಿಭಕ್ತಿ—

ಆಸ್ಥಾನೇ ಶಿವನಾಗಸಂಯಮಿಕರ ದ್ವಂದ್ವಾಂಗುಳಿಶ್ರೇಣಿಕಾ। ಲೀಲಾಲಾಲನ ಮಂಥನಾದ ಜನಯತ್ ಯಃ ಕ್ಷೀರಧಾರಾವಳಿಂ। ತೇನಾತ್ಯದ್ಭುತ ಕರ್ಮಕರ್ಮಠ ಮಹಾಮಹಾತ್ಮ್ಯವರ್ಧಿಷ್ಣುನಾ। ಭಾಂಡಾಗಾರ ದುರಂಧರೇಣ ಬಸವಾಮಾತ್ಯೇನ ಕಃ ಸ್ಪರ್ಧತೇ ॥ ೩ ॥

ಚತುರ್ಥೀ ವಿಭಕ್ತಿ—

ವೇದಾಂತೋದಿತ ವೀರಶೈವ ಸಮಯಾಚಾರ ವ್ರತಪ್ರಕ್ರಿಯಾ। ಚರ್ಯಾದೇಶಿಕ ಸಾರ್ವಭೌಮ ಮಹಿಮ ಭ್ರಾಜಿಷ್ಣವೇ ಜಿಷ್ಣವೇ। ಭಾಂಡಾಗಾರ ದುರಂಧರಾಯ ಬಸವಾಮಾತ್ಯಾಯ ಚೇತಸ್ಸದಾ। ಜಾಗ್ರತ್ಕೂಡಲಸಂಗಮೇಶ್ವರ ಮಹಾದೇವಾಯ ತಸ್ಮೈ ನಮಃ ॥ ೪ ॥

ಪಂಚಮೀ ವಿಭಕ್ತಿ—

ಚೇತಃ ಕೀಲಿತಸಂಗಮೇಶ್ವರ ಮಹಾದೇವಾಲಿಕಪ್ರಸ್ಫುರ। ಜ್ವಾಲಾಜಾಲ ಜಟಾಲವಹ್ನಿ ಶಲಭಾಕಾರ ಪ್ರಸೂನಾಂ ಬಕಾತ್। ಭಾಂಡಾಗಾರ ದುರಂಧರಾದ್ಬಸವಾಮಾತ್ಯಾ (ತ್ಸುಪರ್ವಾವಳೀ)। ಚೂಡಾಘೃಷ್ಟಪದಾರವಿಂದಯುಗಳಾನ್ನೈವಾಪರಂ ದೈವತಂ ॥ ೫ ॥

ಷಷ್ಠೀ ವಿಭಕ್ತಿ—

ಚಿದ್ವ್ಯೋಮಸ್ಮಯಮಾನ ಶೀತಕಿರಣೋ ದ್ಯೋತತ್ಸುಧಾ ಮಾಧುರೀ। ನಿರ್ವೃತ್ತಸ್ನಪನಪ್ರಮೋದ ಭರಿತ ಶ್ರೀ ನೀಲಕಂಠಾತ್ಮನಃ। ಉನ್ಮೀಲದ್ಗುಣ ರತ್ನರೋಹಣ ಮಹಾಶೈಲಸ್ಯ ತಸ್ಯ ಪ್ರಭೋಃ। ಭಾಂಡಾಗಾರ ದುರಂಧರಸ್ಯ ಬಸವಾಮಾತ್ಯಸ್ಯ ದಾಸ್ಯಂ ಭಜೇ ॥ ೬ ॥

ಸಪ್ತಮೀ ವಿಭಕ್ತಿ—

ಓಂಕಾರಾಂಕುರಿ ವೇದಪಲ್ಲವ ಸತ್ಪಂಚಾಕ್ಷರೀ ಮಂಜರೀ। ತತ್ವಾಮೋದ ನಿತಾಂತಲುಬ್ಧ ಶರಣಾನೀಕೇತದ್ಧಪುಷ್ಪಂ ದಯಾ। ಯಾಸೌನಾದಲತಾತದೀಯ ಸುಷಮಾ ರಾಮಾಭಿ ರಾಮಸ್ಥಲೇ। ತಸ್ಮಿನ್ ಶ್ರೀ ಬಸವಾಹ್ವಯೇ ಗುಣನಿಧೌ ಕಿಂ ಮಾನಲೋಕೋತ್ತರಂ ॥ ೭ ॥

ಶಿಂಗಿರಾಜಕವಿ—ಈತನ ವಿಷಯ ಈ ಮೊದಲೇ ಬರೆಯಲಾಗಿದೆ. ಈತನು ಸಂಸ್ಕೃತದಲ್ಲಿಯೂ ಕವಿತೆಗಳನ್ನು ಮಾಡಿರುತ್ತಾನೆ.

ಇನ್ನೂ ಕೆಲವು ಸಂಸ್ಕೃತ ಗ್ರಂಥಗಳಲ್ಲಿ ಬಸವಣ್ಣನವರ ಸ್ತೋತ್ರಗಳು ಸಿಗುತ್ತವೆ. ಸಕಾಲದಲ್ಲಿ ಗ್ರಂಥಗಳು ದೊರೆಯದೆ ಇದ್ದ ಕಾರಣ ಈ ಪ್ರಕರಣವು ಅಪೂರ್ತಿಯಾಗಿರುತ್ತದೆ.

ಇದಲ್ಲದೆ ಅನೇಕ ಆಂಗ್ಲಭಾಷಾ ಪಂಡಿತರೂ ಕೂಡ ಬಸವಣ್ಣನವರ ವಿಷಯಕ್ಕೆ ತಮ್ಮ ತಮ್ಮ ಅಭಿಪ್ರಾಯಗಳನ್ನು ಬರೆದಿರುತ್ತಾರೆ. ಅವುಗಳನ್ನೆಲ್ಲಾ ಸಂಗ್ರಹ ಮಾಡಿದೇನೆ. ಅವುಗಳನ್ನೂ, ಮರಾಠಿ ಭಾಷೆಯ ಕವಿಗಳು ಬಸವಣ್ಣನವರಿಗೆ ಕೊಟ್ಟ ಕಾಣಿಕೆಗಳನ್ನೂ ಇದರಲ್ಲಿ ಸೇರಿಸಲಿಕ್ಕೆ ಆಗಲಿಲ್ಲ. ಮತು ಬಸವಣ್ಣನವರೂ ಜಗತ್ತಿನ ಮಹಾತ್ಮರೂ, ಬಸವಣ್ಣನವರೂ ಉದ್ಧರಣಿಗಳೂ, ಬಸವಣ್ಣನವರೂ ಕಾಲಜ್ಞಾನವೂ, ಬಸವಣ್ಣನವರೂ—ಪಂಚಾಚಾರಗಳೂ ಮೊದಲಾದ ಪ್ರಕರಣಗಳನ್ನು ಅಚ್ಚುಮಾಡಿಸಲಿಕ್ಕಾಗಲಿಲ್ಲ. ಅವುಗಳೆಲ್ಲ ಯೋಗ್ಯ ಸಂದರ್ಭದಲ್ಲಿ ಬಯಲಿಗೆ ಬರುತ್ತವೆಂದು ಆಶ್ವಾಸನ ಕೊಡುತ್ತೇನೆ.

ಭಗವಾನ್ ಬಸವೇಶ್ವರರ ಬಗ್ಗೆ ಇಂತಹ ಇನೂ ೨–೩ ಗ್ರಂಥಗಳನ್ನು ಬರೆಯಲಿಕ್ಕೆ ಶಕ್ಯವಿದೆ. ಅವರ ಸಾವಿರಾರು ವಚನಗಳಿಗೆ ಭಾಷ್ಯವನ್ನು ಬರೆಯಬೇಕೆಂಬುವ ಹಂಬಲವೂ ಇರುತ್ತದೆ. ಎಲ್ಲ ಕಾರ್ಯಗಳಿಗೂ ಪರಮಾತ್ಮನ ಕೃಪೆಯು ಬೇಕಾಗುತ್ತದೆ. ಆದರೆ ಕನ್ನಡನಾಡಿನ ಮಹಾಜನಗಳು ನನ್ನ ಈ ಅಲ್ಪಸೇವೆಯನ್ನು ಆದರದಿಂದ ಸ್ವೀಕರಿಸಿ ಈ ಕಾರ್ಯಕ್ಕೆ ಪ್ರೋತ್ಸಾಹ ಕೊಡುವರೆಂದು ನಂಬಿದ್ದೇನೆ. ಇಲ್ಲಿಗೆ ಶ್ರೀ ಬಸವತತ್ವ ರತ್ನಾಕರವು ಸಂಪೂರ್ಣವಾದ ಬಗ್ಗೆ ಪರಮಾತ್ಮನನ್ನು ಸ್ಮರಿಸಿ ವಿರಮಿಸುತ್ತೇನೆ.

**ಸಂಪೂರ್ಣವಾದುದು**

**ಜಯ ಬಸವೇಶ್ವರ**

1475—49. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಟಿ. ಕೆ. ಬಾಲಕೃಷ್ಣನ್‌ರವರು ಮುದ್ರಿಸಿರುವರು.